A

# HISTORY

OF

# THE CHURCH OF CHRIST

IN CANARESE



ಕ್ರೈಸ್ತ




Motto: Eph. 2, 19—22.



MANGALORE
PUBLISHED BY C. STOLZ
BASEL MISSION BOOK & TRACT DEPOSITORY
1870.

# ಕ್ರೈಸ್ತಸಭಾಚರಿತ್ರ.

## ಪೀಠಿಕೆ.



ಕಲ ಮನುಷ್ಯರು ಪಾಪಿಷ್ಠರಾಗಿದ್ದಾರೆ. ಅವರೆಲ್ಲರೂ ಸತ್ಯದ ತಿಳುವಿಕೆಗೆ ಬಂದು ಸಂರಕ್ಷಣ ಹೊಂದುವ ಹಾಗೆ ದಯಾಲು ದೇವರು ಅವರಿಗೋಸ್ಕರ ಯೇಸು ಕ್ರಿಸ್ತನ ಮುಖಾಂತರವಾಗಿ ನಾನಾ ವಿಚಿತ್ರವಾದ ಶಾಖೆಗಳೆಂಬ ಕೋಣೆಗಳುಳ್ಳಂಥಾದ್ದೊಂದು ದೊಡ್ಡ ರಕ್ಷಣಾಲಯವನ್ನು ನಿರ್ಮಿಸಿದ್ದಾನೆ; ಇದು ಕ್ರೈಸ್ತ ಸಭೆಯೇ. ಪರಿಶುದ್ಧ ಸ್ನಾನ ಹೊಂದಿದ ನಿಮಿತ್ತ ಕ್ರೈಸ್ತರೆಂಬ ಹೆಸರಿರುವವರೆಲ್ಲರು ಕ್ರೈಸ್ತ ಸಭೆಯೊಳಗಿದ್ದಾರೆಂದು, ಹೇಳುವದದೆ.

ಆದರೆ ಸ್ನಾನ ಹೊಂದಿ ಕ್ರೈಸ್ತರೆಂಬ ಹೆಸರು ಪಡಕೊಂಡ ಮೂರು ಅರ್ಬುದಕ್ಕೆ ಮೀರುವ ಅಂಥವರು ಕ್ರೈಸ್ತ ಸಭೆ ಎಂಬ ರಕ್ಷಣಾಲಯದೊಳಗೆ ಬಂದಿದ್ದರೂ ಅವರೆಲ್ಲರು ಸತ್ಕ್ರೈಸ್ತರಲ್ಲ. ಆ ರಕ್ಷಣಾಲಯದ ಗೊತ್ತು ಒದಗಿದವರೇ ಮಾತ್ರ ಕ್ರಿಸ್ತನ ಸಭೆಯ ಅವಯವಗಳಾಗಿದ್ದಾರೆ; ಇಂಥವರು ತಮ್ಮ ಕರ್ತನಾದ ಯೇಸು ಕ್ರಿಸ್ತನ ಮೇಲೆ ಮನಃಪೂರ್ವಕವಾಗಿ ನಂಬಿಕೆ ಇಟ್ಟು, ಅವನಿಗೆ ಹಿಂಬಾಲ ಮಾಡುತ್ತಾರೆ. ಕ್ರೈಸ್ತರೆಂಬ ಹೆಸರುಳ್ಳವರನ್ನು ನಾವು ಎಣಿಸಬಹುದು; ಆದರೆ, ಅವರಲ್ಲಿ ಸತ್ಕ್ರೈಸ್ತರೆಷ್ಟು ಮಂದಿ? ಎಂದು, ಕರ್ತನೊಬ್ಬನೇ ಬಲ್ಲನು. ಆದ್ದರಿಂದ, ಬಹಿರಂಗವಾದ ದೃಶ್ಯ ಸಭೆಯೊಳಗೆ ಅದೃಶ್ಯ ಸತ್ಸಭೆಯು ಅಡಗಿದೆ ಎಂತ, ಹೇಳ ತಕ್ಕದ್ದು.

ಸಭಾಕರ್ತನಾದ ಕ್ರಿಸ್ತನು ಅತ್ಯುತ್ತಮ ಮಮತೆಯಿಂದ ತನ್ನ ಹಿಂಬಾಲದ ನಿಜ ಶಿಷ್ಯರನ್ನು ಬೇರೆ ಬೇರೆ ಆಗಿ ಇರ ಗೊಡದೆ, ಅವರಲ್ಲಿ ಬಿಗಿಯಾದ ಅನ್ಯೋನ್ಯವನ್ನು ನಿರ್ಮಿಸಿಟ್ಟು, ತನ್ನ ಮೇಲಿನ ವಿಶ್ವಾಸ ಪ್ರೀತಿಗಳೆಂಬಿವೆರಡನ್ನು ತಾನು ತಲೆಯೂ ಅವರು ಅವಯವಗಳೂ ಆಗಿರುವಂಥ ಆ ಅನ್ಯೋನ್ಯಕ್ಕೆ ಪಾಯವಾಗಿ ಹಾಕಿದನು. ಆಯಾ ದೇಶಗಳ ಮತ್ತು ಆಯಾ ಪಟ್ಣ ಊರು ಹಳ್ಳಿ ಮನೆಗಳ ಮತ್ತು ಆಯಾ ಶಾಖೆಗಳ ಕ್ರೈಸ್ತರು ಪ್ರತ್ಯೇಕ ಪ್ರತ್ಯೇಕವಾಗಿದ್ದರೆ ಒಳ್ಳೇದನ್ನು ನಡಿಸು

ವದರಲ್ಲಿ ಬೇಗ ತ್ರಾಣ ಗುಂದಿ, ಸತ್ಯ ತಪ್ಪಿ ಹೋಗಿ, ಪಾಪಕ್ಕೂ ಲೌಕಿಕ ನಡಾವಳಿಗೂ ಒಳಗಾದಾರಲ್ಲವೋ? ಅದಲ್ಲದೆ ಮಾನುಷ್ಯ ಸಂಗತಿ ಇಲ್ಲದವನೊಬ್ಬನ ಸ್ಥಿತಿಯ ಹಾಗೆ ಅಂಥವರ ಸ್ಥಿತಿಯು ಆದರವೂ ಆಶ್ರಯವೂ ಇಲ್ಲದಂಥಾದ್ದು ಆದೀತಲ್ಲವೋ? ಹಾಗಾದರೆ ಕ್ರಿಸ್ತನು ಸ್ಥಾಪಿಸಿದ ಸರ್ವಸಾಧಾರಣ ಅನ್ಯೋನ್ಯವು ಒಂದೊಂದು ಅವಯವಕ್ಕೆ ದೊಡ್ಡ ಆಧಾರವುಳ್ಳದ್ದೂ ಆದರಣವುಳ್ಳದ್ದೂ ಆಗಿ ಅದೆ. ಸಭೆಯ ಅವಯವಗಳೆಂಬ ಸತ್ಕ್ರೈಸ್ತರೆಲ್ಲರೂ ಒಬ್ಬರಿಗೊಬ್ಬರು ಪ್ರೀತಿ ಮಾಡಿ, ಬುದ್ಧಿ ಹೇಳಿ, ಒಬ್ಬರನ್ನೊಬ್ಬರು ಭಕ್ತಿಯಲ್ಲಿ ಬಲ ಪಡಿಸಲಿಕ್ಕೆ ಹಂಗಿಗರಾಗಿರುವದಲ್ಲದೆ ಅನ್ಯೋನ್ಯ ಜೀವದಲ್ಲಿ ಅದಕ್ಕೆ ಮಾರ್ಗವುಳ್ಳವರಾಗಿದ್ದು, ಹೀಗೆ ಒಬ್ಬರಿಗೊಬ್ಬರು ತಮ್ಮ ತಮ್ಮ ಶಕ್ತಿಗನುಸಾರವಾಗಿ ಸೇವೆ ಮಾಡ ಬಹುದು. ಇಂಥ ಅನ್ಯೋನ್ಯದಲ್ಲಿ ಮಾತ್ರ ದೇವವಾಕ್ಯಪ್ರಸಂಗ, ಸ್ನಾನ ರಾತ್ರಿಭೋಜನ ಇವೆರಡು ಪರಿಶುದ್ಧ ಸಂಸ್ಕಾರಗಳು, ಸಭ್ಯರ ಆತ್ಮಪಾಲನ ಎಂಬೀ ಆವಶ್ಯಕವಾದ ರಕ್ಷಾಕರಣಗಳು ಚಂದಾಗಿ ನಡಿಯ ಬಹುದು; ಮತ್ತು ಇಂಥ ಅನ್ಯೋನ್ಯದಲ್ಲಿ ಮಾತ್ರ ಕ್ರೈಸ್ತ ವಿದ್ಯಾಶಾಲೆಗಳು, ಧರ್ಮಶಾಲೆಗಳು, ಅನಾಥಶಾಲೆಗಳು ಇತ್ಯಾದಿ ಸುವೃತ್ತಿ ಇರ ಬಹುದು. ದೇವರ ವಾಕ್ಯವೆಂಬ ಪರಿಶುದ್ಧ ಬರಹವು ಈ ಅನ್ಯೋನ್ಯದ ಭಾವವನ್ನೂ ಆಶೀರ್ವಾದವನ್ನೂ ವರ್ಣಿಸುವದಕ್ಕಾಗಿ ಒಮ್ಮೆ, ಕ್ರೈಸ್ತ ಸಭೆಯು ದೇವರ ರಾಜ್ಯವಾಗಿದೆಂದು, ಮತ್ತೊಮ್ಮೆ, ಅದು ಪರಲೋಕದ ರಾಜ್ಯವಾಗಿದೆಂದು, ಇನ್ನೊಮ್ಮೆ, ಅದು ಕ್ರಿಸ್ತನ ಸಭೆಯಾಗಲಿ ಶರೀರವಾಗಲಿ ಮಂದಿರವಾಗಲಿ ಆಗಿದೆಂದು, ಹೇಳುತ್ತದೆ. ಬೇರೆ ಬೇರೆ ಸ್ಥಳಗಳ ಸತ್ಕ್ರೈಸ್ತರ ಚಿಕ್ಕ ದೊಡ್ಡ ಕೂಟವು ತತ್ತತ್ಸ್ಥಳದಲ್ಲಿ ಸಭೆ ಎನ್ನಿಸಿದರೂ ಅಂಥ ಸಭೆಗಳೆಲ್ಲವೂ ಕ್ರೈಸ್ತ ಮಹಾಸಭೆಯ ಅಂಗಗಳೇ.

ಕ್ರೈಸ್ತ ಸಭೆಯು ಮನುಷ್ಯರಲ್ಲಿ ಸ್ಥಾಪನೆಯಾಗಿ ಬಹಳ ವರುಷ ಆಯಿತು. ಅದು ಪಶ್ಚಿಮೋತ್ತರ ದಿಕ್ಕಿನ ಯೆಹೂದ (ಪಲೇಸ್ತೀನ) ಎಂಬ ಶೀಮೆಯಲ್ಲಿ 1835 ವರುಷಗಳ ಹಿಂದೆ[1] ಪಂಚಾಶತ್ತಮದಿನಹಬ್ಬಕ್ಕೆ ಪೂರ್ಣ ಸ್ಥಾಪಿತವಾದಂದಿನಿಂದ ಅದು ವಿವಿಧ ಆಶ್ಚರ್ಯವುಳ್ಳ ಸ್ಥಿತಿ ಗತಿಗಳನ್ನು ಅನುಭವಿಸುತ್ತಾ ಬಂತು. ಅದು ಎಲ್ಲಾ ಕಡೆಯಿಂದಲೂ ಹಗೆಯನ್ನೂ ಇಕ್ಕಟ್ಟನ್ನೂ ಹಿಂಸೆಯನ್ನೂ ಪಡುತ್ತಾ, ಅಂತರಂಗವಾದ ಮತ್ತು ಬಹಿರಂಗವಾದ ಗದ್ದಲದಿಂದ ವಿಘ್ನದೊಳಗೆ ಇರುತ್ತಾ ಇದ್ದರೂ ವಿಸ್ಮಯ ರೀತಿಯಾಗಿ ಉಳಿದು, ರಕ್ಷಣ ಹೊಂದಿ, ಬೆಳೆದು, ತನ್ನ ಕರ್ತನೂ ಅಸ್ತಿವಾರವೂ ತಲೆಯೂ ಆದ ಯೇಸುವು ದೇವರ ಬಲಪಾರ್ಶ್ವದಲ್ಲಿ ಸರ್ವತ್ರಾಣಿಯಾಗಿ ಕೂತು ಕೊಂಡಿದ್ದಾನೆಂತ, ತಿರಿಗಿ ತಿರಿಗಿ ತಿಳು ಕೊಂಡಿತು. ಚಿಕ್ಕ ಸಾಸಿವೇ ಕಾಳಿನಂತೆ ಇದ್ದದ್ದು ಬರ ಬರ ಒಂದು ದೊಡ್ಡ ಮರವಾಯಿತು; ಅದು ಪಲೇಸ್ತೀನ ಶೀ

1) ಈ ಗ್ರಂಥದ ರಚನೆಯು ಕ್ರಿಸ್ತಶಕದ 1868ನೇ ವರುಷದಲ್ಲಿ ತೀರಿತು.

ಮೆಯಿಂದ ಭೂಮಿಯ ಸಕಲ ಖಂಡಗಳಿಗೆ ವಿಸ್ತರಿಸಿ ಹೋಗಿ, ತನಗೆ ದೇವಮು ಖದಿಂದ ಕೊಟ್ಟಿರುವ ವಾಗ್ದತ್ತದ ಪ್ರಕಾರ ಇನ್ನು ಮುಂದೆ ಸರ್ವ ಭೂಮಿಯನ್ನು ತುಂಬಿಸುವದು.

ದೇವರ ದೊಡ್ಡ ರಕ್ಷಣಾಲಯವು 1835 ವರುಷಗಳ ಹಿಂದೆ ಯೇಸು ಕ್ರಿಸ್ತನ ಮುಖಾಂತರದಿಂದಲೇ ಕಟ್ಟಿ ತೀರಿದಂಥಾದ್ದಾಗಿದ್ದರೂ ಅದರ ಆರಂಭವು ಕ್ರೈಸ್ತತ್ವ ಕ್ಕಿಂತ ಅಂದರೆ ಕ್ರಿಸ್ತನ ವಿಶೇಷ ರಕ್ಷಣವೃತ್ತಿಯ ಮತ್ತು ಇದರ ಫಲದ ಸಂಬಂಧ ವುಳ್ಳ ಸಮಸ್ತಕ್ಕಿಂತ ಮುಂಚೆ ಇದ್ದು, ಸುಮಾರು ಮನುಷ್ಯವಂಶದಷ್ಟು ಪೂರ್ವ ಕಾಲದ್ದಾಗಿದೆ. ಹ್ಯಾಗಂದರೆ ಪಾಪೋತ್ಪತ್ತಿಯ ಮೇಲೆಯೇ ಮನುಷ್ಯರ ಮೂಲ ಪಿತೃಗಳಿಗೆ, ಒಬ್ಬ ರಕ್ಷಕನು ರಕ್ಷಣವನ್ನು ತರುವನೆಂತ, ದೇವವಾಗ್ದತ್ತವು ಆಯಿತು. ದೇವರು ಆ ಕಾಲಾರಭ್ಯ ಮನುಷ್ಯವಂಶದ ಶಿಕ್ಷೆಗೆ ಮಾಡಿದ್ದೆಲ್ಲಾ, ವಿಶೇಷ ವಾಗಿ ಅವನು ಪಲೇಸ್ತೀನ ಶೀಮೆಯ ಜನರಾದ ಇಸ್ರಯೇಲ್ಯರನ್ನು ಆಶ್ಚರ್ಯವಾಗಿ ನಡಿಸಿದ್ದು, ಆ ವಾಗ್ದತ್ತದ ದೃಢವಾದ ಸಂಬಂಧದಲ್ಲಿ ಇತ್ತು; ಅವನು ಪ್ರಾಚೀನದಲ್ಲಿ ಮಾಡಿದ್ದೆಲ್ಲಾ ಮನುಷ್ಯರನ್ನು ತನ್ನ ಪುತ್ರನಾದ ಯೇಸುವಿನ ಆಗಮನಕ್ಕೂ ಇವ ನಲ್ಲಿ ಬರುವ ರಕ್ಷಣದ ಕಾಲಕ್ಕೂ ಮುಂದಾಗಿ ಸಿದ್ಧ ಗೈಯಲಿಕ್ಕೆ ಆಯಿತು. ಪರಿ ಶುದ್ಧ ಬರಹದಲ್ಲಿ ಅಬ್ರಹಾಮನನ್ನೂ ಮೋಶೆಯನ್ನೂ ದಾವೀದನನ್ನೂ ಮುಂತಾದ ದೇವಭಕ್ತರನ್ನೂ ಕುರಿತು ಹೇಳಿರುವಂಥಾದ್ದು ಒಂದರಿಂದ ಒಂದು ಪರಿಚ್ಛಿನ್ನವಾದ ಕಾರ್ಯಗಳಲ್ಲ, ಅವೆಲ್ಲಾ ಕೂಡ ಆ ಒಂದೇ ದೊಡ್ಡ ರಕ್ಷಣಚರಿತ್ರದಲ್ಲಿ ಒಂದಕ್ಕೆ ಒಂದು ಸಂಬಂಧವಾದ ಕಾರ್ಯಗಳಾಗಿದ್ದು—ದೇವರು 4000 ವರುಷಗಳ ಮುಂಚೆ ಆ ರಕ್ಷಣಾಲಯದ ನಿರ್ಮಾಣವನ್ನು ಸಂಕಲ್ಪಿಸಿ, ಮುಖ್ಯವಾಗಿ ಇಸ್ರಯೇಲ್ಯ ಜ ನರಲ್ಲಿ ಅದಕ್ಕೆ ಬಹಳ ಸೌರಣೆ ಮಾಡಿ, ಕಾಲಸಂಪೂರ್ಣತೆ ಬಂದಾಗ, ಸಕಲ ಜನಾಂ ಗಗಳ ನಿತ್ಯ ರಕ್ಷಣಕ್ಕಾಗಿ, ಕ್ರೈಸ್ತ ಸಭೆಯನ್ನು ಸ್ಥಾಪಿಸಿದ್ದರಲ್ಲಿ ತನ್ನ ಸಂಕಲ್ಪಾರ್ಥ ವನ್ನು ತೀರಿಸಿದನೆಂತ, ವಿವರಿಸುತ್ತವೆ. ಹಾಗಾದರೆ, ದೇವರು ವಾಗ್ದತ್ತಗಳನ್ನು ಮಾಡಿದನು, ಅವನ ಭಕ್ತರಾದ ವಿಶ್ವಾಸಪಿತೃಗಳು ನಂಬಿ ಪ್ರತೀಕ್ಷಿಸಿದರು ಎಂತ, ವಿವರಿಸುವ ಹಳೇ ಒಡಂಬಡಿಕೆ ಎಂಬ ಪರಿಶುದ್ಧಬರಹಪೂರ್ವಭಾಗದಲ್ಲಿ ಸಹ ಭೂಲೋಕಾದಿಯಿಂದ ದೇವಪುತ್ರನ ಪ್ರತ್ಯಕ್ಷತೆಯ ವರೆಗೆ ಇರುವದೊಂದು ತರದ ದೇವರಾಜ್ಯಚರಿತ್ರವು ಅಂದರೆ ಒಂದು ತರದ ಸಭಾಚರಿತ್ರವು ಉಂಟು. ಬಳಿಕ, ಕರ್ತನಾದ ಕ್ರಿಸ್ತನು ಆ ವಾಗ್ದತ್ತವಾದ ರಕ್ಷಣವನ್ನು ತನ್ನ ಜೀವಿತ ಶ್ರಮ ಮರಣಾ ದಿಗಳಿಂದ ಸತ್ಯ ಮಾಡಿ ನಿರ್ಮಿಸಿ, ನಮ್ಮ ರಕ್ಷಣದ ಏಕವೂ ನಿತ್ಯವೂ ಆದ ಅಸ್ತಿ ವಾರವಾದನೆಂತ, ನಾಲ್ವರು ಸುವಾರ್ತಿಕರು ಹೊಸ ಒಡಂಬಡಿಕೆ ಎಂಬ ಪರಿಶುದ್ಧ ಬರಹೋತ್ತರಭಾಗದಲ್ಲಿ ಹೇಳುತ್ತಾರೆ. ಅದರಲ್ಲಿಯೇ ಸುವಾರ್ತೆಗಳ ಮೇಲೆ ಅಪೊ

ಸ್ತಲರ ಕ್ರಿಯೆಗಳು ಇದ್ದು—ಕ್ರಿಸ್ತನ ಸಭೆ ಎಂಬ ಆಲಯವು ಅಸ್ತಿವಾರದಲ್ಲಿ ಹ್ಯಾಗೆ ಕಟ್ಟಲಾಯಿತು? ಅದು ಮೊದಲು ವಿಸ್ತಾರವಾದ್ದು ಎಲ್ಲಿ? ಯಾವ ಅವಸ್ಥೆಗಳೊಳಗೆ? ಯಾವ ದೇವಭಕ್ತರಿಂದ? ಎಂತ, ವಿವರಿಸುತ್ತವೆ. ಆ ಮೇಲೆ ಸಭಾಚರಿತ್ರವನ್ನು ಕುರಿತು ಕೂಡ ವಿವಿಧ ಮಾತುಗಳಿರುವ ಅಪೊಸ್ತೊಲಿಕ ಪತ್ರಿಕೆಗಳವೆ. ತರುವಾಯ ಪರಿಶುದ್ಧ ಬರಹವು ಪ್ರಕಟಣಗ್ರಂಥದ ಮೂಲವಾಗಿ ದೇವರ ರಾಜ್ಯದ ಕಡೆಯ ದೊಡ್ಡ ಜಯಗಳ ಚರಿತ್ರವನ್ನು ನಮಗೆ ತೋರಿಸಿ ಆದರ ಕೊಡುವಲ್ಲಿ ಸಮಾಪ್ತಿಯಾಯಿತು. ಅದಕ್ಕೀಚೆಯ ಕ್ರೈಸ್ತ ಸಭೆಯ ಸಂಗತಿಗಳನ್ನು ದೇವವಾಕ್ಯವಲ್ಲದ ಬೇರೆ ಗ್ರಂಥಗಳನ್ನು ನೋಡಿ ತಿಳುಕೊಳ್ಳ ಬೇಕು. ಅಪೊಸ್ತಲರೆಂಬವರ ಮರಣಾರಭ್ಯ ಈ ಕಾಲದ ವರೆಗೂ ತಮ್ಮ ತಮ್ಮ ಕಾಲದ ಕ್ರೈಸ್ತ ಸಭೆಯ ಸ್ಥಿತಿಗತಿಯನ್ನು ಬರೆದು ವರ್ಣಿಸುವ ಕ್ರೈಸ್ತರು ಯಾವಾಗಲೂ ಇರುತ್ತಾ ಇದ್ದರು; ಇವರೊಳಗೆ ವಿಶೇಷವಾಗಿ ಹೆಸರು ಬಂದವರು ಅಪೊಸ್ತೊಲಿಕ ಪಿತೃಗಳು ಮತ್ತು ಸಭಾಪಿತೃಗಳು ಎಂಬವರು. ಅಪೊಸ್ತೊಲಿಕ ಪಿತೃಗಳೆಂಬವರು ಅಪೊಸ್ತಲರ ಸಂಗಡ ಇನ್ನು ಕೂಡಿ ಬದುಕಿದರು; ಇವರಿಗೆ ಈಚೆ ಸಭಾಪಿತೃಗಳು. ಸಂಪ್ರದಾಯದ ಮೇಲೆ ಸಭಾಪಿತೃಗಳಲ್ಲಿ ಕಡೆಯವನೆನ್ನಿಸುವ 1ನೇ ಗ್ರೆಗೋರನೆಂಬ ಪಪ್ಪನು (ಪಾಪನು, ಪೋಪನು) ಕ್ರಿಸ್ತಶಕದ 604ನೇ ವರುಷದಲ್ಲಿ ಸತ್ತನು. ಈ ಪಿತೃಗಳಲ್ಲದ ಇತರ ಅನೇಕರು ಸಹ ತಮ್ಮ ತಮ್ಮ ಕಾಲದ ಸಭಾಚರಿತ್ರವನ್ನು ಬರೆದಿಟ್ಟ ಕಾರಣ ಸಭೆಯು ನಿರ್ಮಾಣವಾದಂದಿನಿಂದ ನಮ್ಮ ಕಾಲದ ಮಟ್ಟಿಗೆ ಅದರ ಎಲ್ಲಾ ವಿವರಣವನ್ನು ಪರಿಶೋಧಿಸಿ, ತಿಳುಕೊಂಡು ಬರ ಬಹುದು.

ಯಾವನೊಬ್ಬ ಸತ್‌ಕ್ರೈಸ್ತನು, ತಾನಿರುವ ದೇವರ ರಕ್ಷಣಾಲಯದ ಸ್ಥಿತಿ ಗತಿಗಳು ಬೇರೆ ಬೇರೆ ಕಾಲಾಂತರಗಳಲ್ಲಿ ಎಂಥವುಗಳಾಗಿದ್ದವೆಂತ, ತಿಳುಕೊಳ್ಳಲಿಕ್ಕೆ ಆಶಿಸುವದು ಸಹಜ. ಬೇರೆ ಬೇರೆ ದೇಶಗಳ ಮತ್ತು ಜನಾಂಗಗಳ ಲೌಕಿಕ ವ್ಯವಹಾರದ ಸಂಗತಿಗಳನ್ನೂ ಜನಾಂಗಗಳ ಯುದ್ಧ ಸಂಧಾನಗಳನ್ನೂ ವೃದ್ಧಿ ಕ್ಷಯಗಳನ್ನೂ ತಿಳುಕೊಳ್ಳುವದು ಅವಶ್ಯವಾಗಿದ್ದರೂ—ಬೇರೆ ಬೇರೆ ಕಾಲಗಳಲ್ಲಿಯೂ ಬೇರೆ ಬೇರೆ ಅವಸ್ಥೆಗಳಲ್ಲಿಯೂ ಬೇರೆ ಬೇರೆ ಮನುಷ್ಯಾಂಗಗಳು ತಮ್ಮಲ್ಲಿ ಯತ್ನೈಸ ತೊಡಗಿದ ದೇವರ ಕೃಪೆ ಸತ್ಯಗಳ ಬಲವನ್ನು ಅನುಭವಿಸಿ, ಹ್ಯಾಗೆ ಪ್ರವರ್ತಿಸಿದವು? ದೇವರ ವಾಕ್ಯವು ಸಕಲ ಮನುಷ್ಯಾಂಗಗಳನ್ನು ಸಂರಕ್ಷಿಸುವಂಥ ಬಲವಲ್ಲವೋ? ನಮ್ಮ ಪೂರ್ವಿಕರು ಯಾವಾಗ ಮತ್ತು ಹ್ಯಾಗೆ ಕ್ರೈಸ್ತರಾದರು? ಎಂಬ ಈ ಮುಂತಾದ ದೊಡ್ಡ ಪ್ರಶ್ನೆಗಳಿಗೆ ಉತ್ತರ ಶಿಕ್ಕಿಸಿ ಕೊಳ್ಳುವದು ಹೆಚ್ಚು ಅವಶ್ಯವಾಗಿದೆ, ಅಲ್ಲ? ಹಾಗಾದರೆ ಕ್ರೈಸ್ತ ಸಭೆಯ ಚರಿತ್ರವನ್ನೇ ಅಭ್ಯಾಸಿಸ ಬೇಕು.

ಆದರೆ ಕ್ರೈಸ್ತಸಭಾಚರಿತ್ರದಿಂದ ನಮ್ಮ ಜ್ಞಾನವು ಸುಖಕರವಾದ ಬೆಳವಣಿಗೆ

ಹೊಂದ ಬಹುದಲ್ಲದೆ ಅನೇಕ ವಿಧದ ಹೃದಾಧಾರವು ಸಹ ಅದರಿಂದ ಬರುತ್ತದೆ; ಹ್ಯಾಗಂದರೆ—

1) ಬೇರೆ ಎಲ್ಲ ಚರಿತ್ರಗಳಿಗಿಂತ ಹೆಚ್ಚಾಗಿ ಸಭಾಚರಿತ್ರವು ದೇವರ ಆಶ್ಚರ್ಯಕರವಾದ ಪರಿಪಾಲನದ ವಿಶೇಷವಾದ್ದೊಂದು ಜ್ಞಾಪಕಚಿನ್ಹೆಯು ಆಗಿದ್ದು, ಕೃಪೆ ಸತ್ಯಗಳೆಂಬೆರಡು ವಿಧದ ಅತ್ಯಾವಶ್ಯಕವಾದ ಪರಿಶುದ್ಧ ಆಸ್ತಿಯನ್ನು ಮನುಷ್ಯರಿಗೆ ಕೊಟ್ಟುಳಿಸಲಿಕ್ಕೆ ದೇವರು ಮಹಾಂತ ಪ್ರಯತ್ನ ಮಾಡಿದನೆಂತ, ತೋರಿಸುತ್ತದೆ.

2) ಮತ್ತು ಆ ಚರಿತ್ರವು—ಯೇಸು ಕ್ರಿಸ್ತನು ತನ್ನ ವಿಮೋಚನಾದಿ ಕಾರ್ಯದಿಂದ ಸಭೆಯನ್ನು ಭೂಮಿಯಲ್ಲಿ ಸ್ಥಾಪಿಸಿ, ಅದರ ಸಕಲ ಸ್ಥಿತಿ ಗತಿಗಳನ್ನು ಮುಂತಿಳಿಸಿ[1] ಮಾತು ಕೊಟ್ಟ ಹಾಗೆಯೇ ಅದನ್ನು ಪರಲೋಕದ ಕಡೆಯಲ್ಲಿಂದ ಜೋಕೆಗೈಯುತ್ತಾ, ಕಾಪಾಡುತ್ತಾ, ಆಳುತ್ತಾ ಬಂದನೆಂತ, ಎಡೆ ಬಿಡದೆ ಅವನನ್ನು ಕೊಂಡಾಡಿ, ಅವನಲ್ಲಿ ವಿಶ್ವಾಸವಿಟ್ಟವರನ್ನು ಧೈರ್ಯ ಪಡಿಸುತ್ತದೆ.

3) ಅದಲ್ಲದೆ ಆ ಚರಿತ್ರವು, ಕ್ರೈಸ್ತತ್ವವು ದೇವರ ಕಾರ್ಯವೇ! ಎಂತ, ಸಿದ್ಧಾಂತ ಮಾಡುತ್ತದೆ. ಅದರ ಮೂಲಕ ಗೋಚರಿಸುವದೇನಂದರೆ, ಬಲಿಷ್ಠರ ಬಲದಿಂದಲಾಗಲಿ ವಿದ್ವಾಂಸರ ವಿದ್ಯೆಯಿಂದಲಾಗಲಿ ಕ್ರೈಸ್ತತ್ವವು ಎಂದೂ ಅಪಜಯ ಹೊಂದದೆ, ಸ್ವಲ್ಪವಾದರೂ ಅಡಗಲಿಲ್ಲ; ಮನುಷ್ಯರು ಸ್ಥಾಪಿಸಿದ ಮತಗಳೆಲ್ಲಾ ಕೆಲವು ಕಾಲ ಪ್ರಯಾಸ ಪಟ್ಟು ಇದ್ದರೂ ಹಾಳಾಗುತ್ತವೆ; ಆದರೆ ಯೇಸು ಕ್ರಿಸ್ತನ ಸಭೆಯು, ಲೌಕಿಕ ಸಹಾಯವೂ ಆಯುಧಬಲವೂ ಬೇಕಾಗದೆ, ನಿತ್ಯ ಜಯವನ್ನೂ ವೃದ್ಧಿಯನ್ನೂ ಪಡೆಯುತ್ತಾ ಅದೆ; ಅದು ಸಕಲ ಕಾಲಕ್ಕೂ ಸಕಲ ಜನಾಂಗಕ್ಕೂ ಸಕಲ ವಯಸ್ಸಿಗೂ ಸಕಲ ವಿಧದ ನಾಗರೀಕತನಕ್ಕೂ ಯೋಗ್ಯವಾಗಿದ್ದು, ಪ್ರತಿ ಮನುಷ್ಯನಿಗೆ—ಅವನು ಪಂಡಿತನಾದರೇನು? ಅಪಂಡಿತನಾದರೇನು?—ನಿತ್ಯ ಜೀವದ ಮಾರ್ಗವನ್ನು ತೋರಿಸಿ ಕೊಡುತ್ತದೆ.

4) ಪುನಃ ಕ್ರೈಸ್ತ ಸಭೆಯ ಚರಿತ್ರವು ಅನೇಕ ಮಂದಿ ಮಾನ್ಯ ದೇವಭಕ್ತರ ಸುದ್ದಿ ಹೇಳಿ, ಅವರು ನಡೆದಂಥ ವಿಶ್ವಾಸಬಲದೊಡನೆಯೂ ನಿಷ್ಕಳಂಕ ಜೀವಿತದೊಡನೆಯೂ ಕ್ರಿಸ್ತನಿಗೆ ಹಿಂಬಾಲಿಸಲಿಕ್ಕೆ ನಮ್ಮನ್ನು ಎಚ್ಚರಿಸುತ್ತದೆ. ಬಹಿಃಸಭೆಯನ್ನು ಬಹಳ ಅಂಧಕಾರ ಮುಸುಕಿ ಕೊಂಡ ಯಾವ ಕಾಲಾಂತರದಲ್ಲಿಯೂ ಉತ್ತಮ ಭಕ್ತರು ಇಲ್ಲದೆ ಹೋಗಲಿಲ್ಲ; ಕರ್ತನಿಗೆ ಸದ್ಭಯ ಪಡುವವರ ವಂಶವು ಎಂದಾದರೂ ಅಳಿಯುವದೇ ಇಲ್ಲ!

5) ಅದು ಹೊರ್ತಾಗಿ ಆ ಸಭಾಚರಿತ್ರವು ಸೌವಾರ್ತಿಕವಾದ ಅಂದರೆ ಸುವಾರ್ತೆಗನುಸಾರವಾದ ನಿರ್ಮಲ ಸತ್ಯವನ್ನು ಅಗಲಿದವರ ಸಂಗತಿಗಳನ್ನೂ ಅಗಲಿ

---

1) ಮತ್ತಾಯ. 13; 24; 25.

ದ್ದರಿಂದ ಬಂದ ಅನಿಷ್ಟ ಫಲಗಳನ್ನೂ ವರ್ಣಿಸಿ, ನಾವು ಆ ಪ್ರಕಾರವಾಗಿ ಅಪವಿಶ್ವಾಸದಲ್ಲಿಯೂ ಅವಿಶ್ವಾಸದಲ್ಲಿಯೂ ಬೀಳದ ಹಾಗೆ ನಮ್ಮನ್ನು ಬೆದರಿಸಿ, ದೃಢವಾದ ವಿಧೇಯತ್ವದಿಂದ ದೇವರ ವಾಕ್ಯವನ್ನು ಯಥಾರ್ಥವಾಗಿ ನಂಬಿ ಕೊಂಡಿರುವದಕ್ಕೆ ನಮ್ಮನ್ನು ಪ್ರೇರಿಸುತ್ತದೆ.

ಈ ಪುಸ್ತಕದಲ್ಲಿಯ ಕ್ರೈಸ್ತ ಸಭೆಯ ಸಂಕ್ಷೇಪಚರಿತ್ರದಿಂದ ಹಿಂದೆ ಸೂಚಿಸಿದಂಥ ಆಶೀರ್ವಾದವು ಓದುವವರೆಲ್ಲರ ಹೃದಯಕ್ಕೆ ಆಗಲಿ!



# I. ಅಪೊಸ್ತಲರ ಕಾಲ.

(ಕ್ರಿಸ್ತಶಕದ 100ನೇ ವರುಷದ ವರೆಗೆ.)



## 1. ಕಾಲದ ಸಂಪೂರ್ಣತೆ.

1868 ವರುಷಕ್ಕೆ ಮುಂಚೆ[1] ಹಿಂದು ದೇಶದ ಪಶ್ಚಿಮೋತ್ತರ ದಿಕ್ಕಿನಲ್ಲಿ ಒಂದು ಮಹಾ ಸಾಮ್ರಾಜ್ಯವಿತ್ತು. ಯುರೋಪ ಖಂಡದ ಈತಲಿಯವೆಂಬ ದೇಶದ ತಿಬೆರಿ ಎಂಬ ಹೊಳೆಯ ಧಡದಲ್ಲಿ ಅದರ ರಾಜಧಾನಿಯಾದ ರೋಮಪುರವು ಇತ್ತು. ಯುರೋಪ ಖಂಡದ ಮತ್ತು ಅಸಿಯ ಖಂಡದ ಮತ್ತು ಆಫ್ರಿಕ ಖಂಡದ ದೊಡ್ಡ ಭಾಗಗಳು ಆ ಸಾಮ್ರಾಜ್ಯಕ್ಕೆ ಶೇರಿದ್ದವು. ಅದರ ಮೇರೆಗಳು ಯಾವವಂದರೆ—ಯುರೋಪದಲ್ಲಿ ರೈನ್ ದೋನವು ಎಂಬ ಎರಡು ನದಿಗಳು; ಅಸಿಯದಲ್ಲಿ ಫ್ರಾತೆಂಬ ನದಿಯೂ ಸುರಿಯಕ[2] ಉಸುಬುಬೈಲೂ; ಆಫ್ರಿಕದಲ್ಲಿ ಸಹಾರವೆಂಬ ಉಸುಬುಬೈಲೂ ನೀಲ ನದಿಯ ದೊಡ್ಡ ಜೋಗೂ. ಅದರೊಳಗಿನ ಮುಖ್ಯ ದೇಶಗಳು ಯಾವವಂದರೆ—ಯುರೋಪದಲ್ಲಿ ಈತಲಿಯ, ಗಲ್ಲಿಯ, ಹಿಸ್ಪಾನಿಯ (ಸ್ಪಾನಿಯ), ಗ್ರೀಕಿಯ, ಮಕೆದೊನಿಯ, ಥ್ರಾಕಿಯ ಎಂಬ ಈ ಐದು; ಅಸಿಯದಲ್ಲಿ ಸಣ್ಣ ಅಸಿಯ, ಸುರಿಯ, ಪಲೇಸ್ತೀನ, ಅರಬಿಸ್ಥಾನದ ಉತ್ತರ ಭಾಗ, ಅರ್ಮಿನಿಯದ ಉತ್ತರ ಭಾಗ, ಇಬೇರಿಯ ಎಂಬ ಈ ಏಳು; ಆಫ್ರಿಕದಲ್ಲಿ ಐಗುಪ್ತದ ಶ್ರೇಷ್ಠ ಭಾಗ, ಲಿಬುಯ (ಕೂರೇನೆ), ನುಮಿದಿಯ, ಮೌರೀತಾನಿಯ ಎಂಬ ಈ ಐದು. ಅದರೊಳಗೆ ಸುಮಾರು 16 ಲಕ್ಷ ಚಚ್ಚೌಕ ಮೈಲಿನ ನೆಲವು ಇತ್ತು. ಆ ಸಾಮ್ರಾಜ್ಯವು ಸುಮಾರು 3000 ಮೈಲು ಉದ್ದ, 1500 ಮೈಲು ಅಗಲ; ಅದರ ನಿವಾಸಿಗಳು ಸುಮಾರು 12 ಕೋಟಿ. ಅದಕ್ಕೆ ರೋಮೀಯ (ರೋಮಾನ) ಸಾಮ್ರಾಜ್ಯವೆಂಬ ಹೆಸರು; ಹ್ಯಾಗಂದರೆ ಈತಲಿಯ ದೇಶದ ರೋಮೀಯರೆಂಬ ಜನರು ಅದನ್ನು ಆಳುತ್ತಿದ್ದರು. ಆ ಸಾಮ್ರಾಜ್ಯದ ಏಕಚಕ್ರವರ್ತಿಗೆ ಕೈಸರನೆಂಬ ಬಿರುದುಹೆಸರು. ಆಗಿನ ಮೊದಲಿನ ಏಕಚಕ್ರವರ್ತಿಯು ಒಕ್ತಾವಿಯಾನ ಔಗುಸ್ತ ಕೈಸರನೆಂಬವನು; ಅವನು ಈ ವರುಷಕ್ಕೆ ಮುಂಚಿನ 1898ನೇದರಲ್ಲಿ ರಾಜ್ಯಭಾರ ಮಾಡಲಿಕ್ಕೆ ಹತ್ತಿದ್ದನು. ಅವನ

1) ಕ್ರಿಸ್ತಶಕದ 1868ನೇ ವರುಷ ಈ ಗ್ರಂಥದ ರಚನೆಯು ಸಮಾಪ್ತವಾಯಿತು.

2) ಅಂದರೆ ಸುರಿಯವೆಂಬ ದೇಶದ ಸಂಬಂಧವಾದ.

ರಾಜಧಾನಿಯಾದ ಆ ರೋಮಪುರವು ತಿಬೆರಿ ಎಂಬ ಹೊಳೆಯ ಹತ್ತರ 7 ಬೆಟ್ಟಗಳಲ್ಲಿ ವಿಸ್ತಾರವಾಗಿ ಕಟ್ಟಿತ್ತು[1]. ಅದರೊಳಗಿನ ನಿವಾಸಿಗಳು ಸುಮಾರು 30 ಲಕ್ಷ; ಅದರೊಳಗಿನ ಅಮಿತ ಭೂಷಣವುಳ್ಳ ಅರಮನೆಗಳು ಸುಮಾರು 1780.

ನಿಜ ದೇವರ ಜ್ಞಾನವೂ ಆರಾಧನೆಯೂ ಸರ್ವತ್ರ ನಡೆಯುವ ಒಂದೇ ಚಿಕ್ಕ ಶೀಮೆಯು ಮಾತ್ರ ಆ ಮಹಾ ರೋಮಿಾಯ ಸಾಮ್ರಾಜ್ಯದೊಳಗೆ ಇತ್ತು. ಅದು ಯೆಹೂದ್ಯರೆಂಬವರ ಮೂಲಸ್ಥಾನವಾದ ಪಲೇಸ್ತೀನವೆಂಬದು; ಉಳಿದ ಸಮಸ್ತ ದೇಶಗಳಲ್ಲಿ, ಯೆಹೂದ್ಯ ಮತಸ್ಥರಿಲ್ಲದಂಥ ಸ್ಥಳಗಳಲ್ಲಿ, ಮೂರ್ತಿಪೂಜಕತ್ವವು ನಡೆಯುತ್ತಿತ್ತು. ರೋಮಪುರ ಒಂದರಲ್ಲಿಯೇ ನಾನೂರಿಗಿಂತ ಹೆಚ್ಚು ದೇವಸ್ಥಾನಗಳಿದ್ದವು. ಆ ರೋಮಿಾಯ ಸಾಮ್ರಾಜ್ಯದ ಹೊರಗೆ ಸಹ ಪಾರ್ಶಿ ದೇಶ, ಹಿಂದು ದೇಶ, ಚೀನ ದೇಶ ಮುಂತಾದ ದೇಶಗಳಲ್ಲಿ ನಿಜ ದೇವರ ಜ್ಞಾನವೂ ಆರಾಧನೆಯೂ ಇರಲಿಲ್ಲ. ಯೆಹೂದ್ಯ ಮತದವರು ಹೊರ್ತಾಗಿ ಇತರ ಸರ್ವ ಭೂಮಿಯವರನ್ನು ಅಜ್ಞಾನವೂ ಇದಕ್ಕನುಸಾರವಾದ ಮೂರ್ತಿಪೂಜೆಯೂ ದುಷ್ಕ್ರಿಯೆಗಳೂ ಮುಚ್ಚಿ ಕೊಂಡಿದ್ದವು. ಹಿಂದು ದೇಶದ ಆಗಿನ ಭಾವವನ್ನು ವರ್ಣಿಸುವದು ಅವಶ್ಯವಿಲ್ಲ; ಅದರ ಆಗಿನ ಅಸಹ್ಯ ಮೂರ್ತಿಪೂಜೆಯು ಈಗಲಾದರೂ ಇನ್ನೂ ತೀರಲಿಲ್ಲವಲ್ಲ? ಈಗ ಸಲ್ಲುವ ವರುಷಕ್ಕೆ ಮುಂಚಿನ 1868ನೇದರಲ್ಲಿ ಆ ರೋಮಿಾಯ ಸಾಮ್ರಾಜ್ಯದಲ್ಲಿ ಕವಿದಿರುವ ಅಜ್ಞಾನವೆಂಬ ಅಂಧಕಾರದ ಸಂಕ್ಷೇಪವರ್ಣನೆ ಹೇಳಿದರೆ ಹಿಂದು ಮೂರ್ತಿಪೂಜಕರ ಆಗಿನ ಭಾವವನ್ನು, ಮತ್ತು ಈಗಿನದನ್ನು ಸಹ, ವರ್ಣಿಸುವ ಹಾಗೆಯೇ ಆಗುತ್ತದೆ.

ಆ ರೋಮಿಾಯ ಸಾಮ್ರಾಜ್ಯದವರಿಗೆ ಅನೇಕಾನೇಕ ದೇವತೆಗಳು ಇದ್ದವು; ಅವುಗಳಲ್ಲಿ ನರ, ಪಕ್ಷಿ, ಚತುಷ್ಪಾದ, ಕ್ರಿಮಿಗಳು ಸಹ[2]; ಆಯಾ ದೇವತೆಗಳ ಭಂಗಾರದ ಮತ್ತು ಬೆಳ್ಳಿಯ ಮತ್ತು ಕಲ್ಲಿನ ಮತ್ತು ಮರದ ಪ್ರತಿಮೆಗಳು ಎಲ್ಲೆಲ್ಲಿಯೂ ನಿಲ್ಲಿಸಿದ್ದವು[3]; ಆ ಸಾಮ್ರಾಜ್ಯದವರಿಗೆ ಇದ್ದ ಆ ಆ ಎಲ್ಲಾ ಸುಳ್ಳುದೇವತೆಗಳನ್ನು ಹೇಳುವದು ಅಸಾಧ್ಯವು. ರೋಮಿಾಯರ ಪ್ರಧಾನ ದೇವತೆಯು ಯೂಪಿತೆರ್ ಅಂದರೆ ದ್ಯುಪಿತೃ (ದಿವಪಿತರ್) ಎಂಬದು; ಅದು ಹಿಂದು ವೇದದೊಳಗಣ ಇಂದ್ರನೆಂಬ ದೇವತೆಗೆ ಸರಿಯಾದದ್ದು[4]; ಅದರ ಮುಖ್ಯಸ್ಥಾನಕ್ಕೆ ಕಪಿತೋಲಿಯವೆಂಬ ಹೆಸರು; ಇದು ರಾಜಧಾನಿಯ ಒಂದು ಬೆಟ್ಟದಲ್ಲಿ ಕಟ್ಟಿತ್ತು. ಒಬ್ಬೊಬ್ಬ

---

1) ಪ್ರಕಟಣೆ. 17, 9. 2) ರೋಮಿಾ. 1, 23. 3) ಅಪೊ. ಕ್ರಿ. 17, 29.

4) ಇವನೊಳಗೆ ಮೆರ್ಕುರಿಯುನು ಎಂತಲೂ ಹೆರ್ಮೆನ್ (ಅರ್ಯಮನ್) ಎಂತಲೂ ಹೆಸರಿರುವದೊಂದು ದೇವತೆ ಇರುತ್ತದೆಂದು, ನೆನಸಿದರು; ಇದು ಹಿಂದು ಗಣಪತಿ (ಗಣೇಶ) ಎಂಬದಕ್ಕೆ ಹೋಲುವಂಥಾದ್ದು. ಅಪೊ. ಕ್ರಿ. 14, 12. 13.

ರೋವಿಶಾಯ ಕೈಸರನೇ ಸಾಮ್ರಾಜ್ಯದೊಳಗಿನ ಪ್ರಧಾನ ಯಾಜಿಯು. ಸಾಧಾರಣ ಕಾರ್ಯಗಳಿಗೆ ಪಶುಮೇಧ ನಡೆಯುತ್ತಿದ್ದದ್ದಲ್ಲದೆ[1] ವಿಶೇಷ ಕಾರ್ಯಗಳಿಗೆ ನರಮೇಧ ನಡೆಯದೆ ಇರಲಿಲ್ಲ; ವೇದೋಕ್ತಪ್ರಮಾಣದ ಹಿಂದು ಜನರು ಸಹ ಬಹಿರಂಗವಾಗಿ ನರಮೇಧಗಳನ್ನು ಮಾಡುತ್ತಿದ್ದರಲ್ಲ? ಮತ್ತು ಉತ್ತರೋಕ್ತಪ್ರಮಾಣದ ಲಕ್ಷಾಂತರ ಹಿಂದು ಜನರು ಗಂಗಾರ್ಪಿತರಾಗುವದು ಹೊರ್ತಾಗಿ ತೇರುಗಾಲಿಯಿಂದ ಆಗಲಿ ಚಿತೆಗಳಲ್ಲಿ ಆಗಲಿ, ಬೇಕೆಂತ, ಸತ್ತರಲ್ಲ? ಈಗಲಾದರೂ ಹಿಂದು ದೇಶದೊಳಗೆ ನರಬಲಿಗಳು ಕ್ರೈಸ್ತ ಅಧಿಕಾರಸ್ಥರ ಅಪ್ಪಣೆಯಿಂದ ಪೂರಾಗಿ ನಿಂತು ಹೋಗಿದ್ದಾವೋ? ಇಲ್ಲವೋ? ದೇವರೊಬ್ಬನೇ ಬಲ್ಲ. ರೋವಿಶಾಯರು ವರುಷಕ್ಕೆ ಒಮ್ಮೆ ಯೂಪಿತೆರ್ ಎಂಬ ತಮ್ಮ ದೊಡ್ಡ ದೇವತೆಗೆ ಒಬ್ಬ ಮನುಷ್ಯನನ್ನು ಕೊಲ್ಲುತ್ತಿದ್ದರು; ಆದರೆ, ಹಿಂದೆ ಹೇಳಿರುವಂತೆ, ಮುಖ್ಯವಾಗಿ ವಿಶೇಷ ನೈಮಿತ್ತಕಗಳಲ್ಲಿ, ದೇವತೆಗಳ ಕೋಪವನ್ನು ಇಳಿಸುತ್ತೇವೆ! ಇತ್ಯಾದಿ ಹೇಳಿ, ನರಮೇಧ ಮಾಡುತ್ತಿದ್ದರು. ಕೈಸರನಾದ ಆ ಒಕ್ತಾವಿಯಾನ ಔಗುಸ್ತನು[2] ಒಮ್ಮೆ ಒಂದು ಮಹಾ ಜಯ ಹೊಂದಿದ ಸಮಯದಲ್ಲಿ 300 ಮನುಷ್ಯರನ್ನು ದೇವತೆಗಳಿಗೆ ಹತ ಮಾಡಿ ಅರ್ಪಿಸಿದನು. ಈಗಿನ ಹಿಂದು ಜನರು, ಕಾಳಿ ಎಂಬ ಒಬ್ಬ ದೇವತೆಯು ನರರಕ್ತಕ್ಕೆ ಬಹಳ ಆಶಿಸುತ್ತಾಳೆಂತ, ನೆನಸುತ್ತಾರಲ್ಲ? ಆ ಕಾಳಿಯಂತೆ ನರರಕ್ತಪ್ರೀತಿ ಮುಂತಾದ ನೀಚಭಾವವುಳ್ಳ ಒಂದು ಹೆಣ್ಣು ದೇವತೆಯು ರೋವಿಶಾಯರಲ್ಲಿ ಸಹ ಇತ್ತು; ಅದು ಚಂದ್ರಾಭಿಮಾನಿಯಾದದ್ದು; ಗ್ರೇಕ ಜನರು ಅದಕ್ಕೆ ಅರ್ತೆಮಿಸ್ ಎಂತ, ಸುರಿಯಕರು ಅಸ್ತರ್ತೆ ಎಂತ, ರೋವಿಶಾಯ ಜನರು ದಿಯಾನಳು ಎಂತ, ಹೆಸರಿಕ್ಕಿದ್ದರು. ಆ ದಿಯಾನ ದೇವತೆಗೆ ಸಣ್ಣ ಅಸಿಯದ ಎಫೆಸ ಎಂಬ ಪಟ್ಟದಲ್ಲಿ ಒಂದು ಮಹಾ ದೊಡ್ಡ ಸ್ಥಾನವಿತ್ತು[3]; ಅದನ್ನು ಕಟ್ಟಿ ಅಲಂಕರಿಸುವದಕ್ಕೆ ಅಲ್ಲಿಯ ಹೆಣ್ಣು ನಿವಾಸಿಗಳು ತಮ್ಮ ಆಭರಣಗಳನ್ನೆಲ್ಲಾ ತಂದು ಕೊಟ್ಟಿದ್ದರು. ಸುರಿಯ ದೇಶದಲ್ಲಿ ಆ ಅಸ್ತರ್ತೆಗೆ ಇರುವ ಒಂದು ಸ್ಥಾನದಲ್ಲಿ ಕೆಲವು ನೂರು ಮಂದಿ ಗಂಡು ಮತ್ತು ಕೆಲವು ನೂರು ಮಂದಿ ಹೆಣ್ಣು ಪೂಜಾರಿಗಳು ಅದರ ಸೇವೆ ಮಾಡುತ್ತಿದ್ದರು. ಹಿಂದು ಜನರು ಎಲ್ಲಾ ಲಜ್ಜೆ ತ್ಯಜಿಸಿ ಬಿಟ್ಟು, ಎಲ್ಲಮ್ಮ ಎಂಬದೊಂದು ದೇವತೆಗೂ ಕೃಷ್ಣನೆಂಬದೊಂದು ದೇವತೆಗೂ ಶಿವನೆಂಬದೊಂದಕ್ಕೂ ಕನ್ಯೆಗಳನ್ನೂ ಸ್ತ್ರೀಗಳನ್ನೂ ದಾಸಿಗಳಾಗ ಮಾಡುತ್ತಿರುವ ಹಾಗೆಯೇ ರೋವಿಶಾಯ ಸಾಮ್ರಾಜ್ಯದೊಳಗಿನವರು ಶುಕ್ರಗ್ರಹಕ್ಕೆ ಅಭಿಮಾನಿಯಾದ ವೆನಳೆಂಬ ಅಥವಾ ಅಫ್ರೊದೀತಳೆಂಬ ಒಬ್ಬ ಕಾಮದೇವಿಗೆ, ಮುಖ್ಯವಾಗಿ ವರುಷ ವರುಷದ ಯಾತ್ರೆಗಳಲ್ಲಿ, ತಮ್ಮ ಕನ್ಯೆಗಳ ಮಾನವನ್ನು ಕೆಡಿಸುತ್ತಿದ್ದರು. ಅವರು ಅಂಥ ಸುಳ್ಳುದೇವತೆಗಳ ಸಮೂಹವನ್ನು ಪ್ರತಿ ವರುಷಕ್ಕೆ

1) ಅಪೊ. ಕ್ರಿ. 14, 13. 2) 7ನೇ ಪಾನು. 3) ಅಪೊ. ಕ್ರಿ. 19, 23 ಆದಿ.

ಹೆಚ್ಚಿಸುತ್ತಲೇ ಬಂದರು; ಸತ್ತ ಕೈಸರರನ್ನೂ[1] ಇರುವ ಕೈಸರರನ್ನೂ ಅವರ ಪ್ರತಿನಿಧಿಗಳನ್ನೂ ಸಹ ಅವುಗಳ ಲೆಖ್ಖದಲ್ಲಿ ಶೇರಿಸಲಾಯಿತು. ಅದೇ ಪ್ರಕಾರ ಹಿಂದು ದೇಶದಲ್ಲಿ ಸಂಭವಿಸಿತು; ಆರಂಭದಲ್ಲಿ ಹಿಂದು ಜನರಿಗೆ 33 ದೇವತೆಗಳು ಇದ್ದವು, ಆ ಮೇಲೆ 3339, ಆ ಮೇಲೆ 33 ಕೋಟಿ. ಹಿಂದು ಜನರಲ್ಲಿ ಅಜ್ಞಾನಿಗಳಂತೆ ರೋಮಿಾಯರು ಸಹ ಮಂತ್ರ ಮಾಟಗಳ ಬಲದ ಮೇಲೆಯೂ ಜೋತಿಷ್ಯದ ಮೇಲೆಯೂ ಬಹಳ ವಿಶ್ವಾಸವಿಡುತ್ತಿದ್ದರು; ರೋಮಿಾಯ (ರೋಮಕ) ಸಾಮ್ರಾಜ್ಯದೊಳಗಿನ ಆ ಜೋತಿಷ್ಯವು ಹಿಂದಗಡೆ ಅಲ್ಲಿಂದ ಹಿಂದು ದೇಶದಲ್ಲಿ ಸಹ ಶೇರಿ, ಬಹಳ ಪ್ರಖ್ಯಾತಿ ಪಟ್ಟಿತು. ಅದಲ್ಲದೆ ಹಿಂದು ಜನರಲ್ಲಿ ಅಜ್ಞಾನಿಗಳ ಹಾಗೆ ರೋಮಿಾಯರು ಸಹ ಏನೊಂದೂ ನೈಮಿತ್ತಕಕ್ಕೆ ಶಕುನ ಕೇಳಿ ಕೊಳ್ಳುವರು[2]; ಒಂದು ಉದಾಹರಣವೇನಂದರೆ—ಅವರ ಸೇನಾಧಿಪತಿಗಳ ಬಳಿಯಲ್ಲಿ ಯಾವಾಗಲೂ ಕೋಳಿಗಳಿದ್ದವು; ಒಂದು ಯುದ್ಧಕ್ಕೆ ಮುಂಚೆ ಅವರು ಅವನ್ನು ತಿನ್ನಿಸಿ, ಅವು ಚನ್ನಾಗಿ ತಿಂದರೆ ಜಯ ಬರುವದೆಂತ, ನೆನಸುತ್ತಿದ್ದರು.

ರೋಮಿಾಯ ಸಾಮ್ರಾಜ್ಯದೊಳಗಿನ ಅಂಥ ಮೂರ್ತಿಪೂಜಕತ್ವ ಅಪವಿಶ್ವಾಸಗಳಲ್ಲದೆ ನಿಜ ದೇವರನ್ನರಿಯದ ಬೇರೆ ಬೇರೆ ಜ್ಞಾನಿಕತ್ವದರ್ಶನಗಳು ಸಹ ಅದರೊಳಗೆ ಇದ್ದವು; ಅವು ಬೌದ್ಧ ಮತಕ್ಕೆ ಮತ್ತೆ ಹಿಂದು ಜನರಲ್ಲಿ ಆಗ ನಡೆಯ ಹತ್ತಿದ ಷಡ್ದರ್ಶನಗಳಿಗೆ ಹೋಲುವಂಥವೇ[3]; ಆ ಕಾಲದಲ್ಲಿ ರೋಮಿಾಯರಿಗೂ ಹಿಂದು ಜನರಿಗೂ ಬಹಳ ವ್ಯಾಪಾರಸಂಗತಿ ಇದ್ದದರಿಂದ ಜ್ಞಾನಿಕತ್ವಸಂಗತಿಯೂ ಹುಟ್ಟಿರ ಬಹುದು. ಹಿಂದು ಜನರಲ್ಲಿಯ ನೈಯಾಯಿಕರ ಮತ್ತು ವೈಶೇಷಿಕರ ಹಾಗೆ ರೋಮಿಾಯರಲ್ಲಿಯ ಎಪಿಕೂರೇಯರು, ಈ ವಿಶ್ವವು ಅದೃಷ್ಟಬಲದಿಂದ ಸಂಯೋಗವಾದ ಅಣುವುಗಳಿಂದ ಕಾರಿತವಾದದ್ದು ಎಂತ, ಬೋಧಿಸುತ್ತಿದ್ದರು; ಅದ್ದಲ್ಲದೆ, ಮನುಷ್ಯರು ದೇವತೆಗಳ ಹಂಗಿನಲ್ಲಿರುವದಿಲ್ಲ, ಅವಕ್ಕೆ ಭಯ ಪಡುವದಕ್ಕೆ ಕಾರಣವಿಲ್ಲ, ಹ್ಯಾಗಂದರೆ ಅವಕ್ಕೆ ಮನುಷ್ಯರ ಚಿಂತೆಯು ಇಲ್ಲವೇ ಇಲ್ಲ; ಸುಖವುಳ್ಳದ್ದು ನ್ಯಾಯ, ಅಸುಖವುಳ್ಳದ್ದು ಅನ್ಯಾಯ ಎಂಬದು ಸಹ ಎಪಿಕೂರೇಯ ದರ್ಶನದ ಬೋಧನಾರ್ಥವು[4]. ಹಿಂದು ಜನರಲ್ಲಿಯ ಸಾಂಖ್ಯರ ಮತ್ತು ಯೋಗಿಗಳ ಹಾಗೆ ರೋಮಿಾಯರಲ್ಲಿಯ ಸಾಧಾರಣ ಸ್ತೋಯಿಕರು—ಸಮಸ್ತವೂ ಪ್ರಧಾನವೆಂಬ ಪ್ರಕೃತಿಗೆ ವಶವೂ ಬದ್ಧವೂ ಆದದ್ದು; ಸಮಸ್ತವೂ ದೈವವೆಂಬ ಆ ಪ್ರಕೃತಿಯ ಸಂಯೋಗದಿಂದ ಬಾಧೆ ಪಡುತ್ತದೆ; ಎಲ್ಲಾ ಕರ್ಮಗಳು ಆವಶ್ಯಕವು; ಸ್ವಭಾವವನ್ನು ನಡೆಯ ಗೊಡ ಬೇಕು ಎಂತ, ಸಾರುತ್ತಿದ್ದರು;—ನಿರಾಶಃ ಸುಖೀ ಪಿಂಗಲಾವತ್ ಅಂ

1) 7ನೇ ಪಾನು. 2) 3 ಮೋಶೆ. 19, 26; 5 ಮೋಶೆ. 18, 10. 11.
3) cf. Weber's indische Skizzen pag. 63 seq. 4) ಅಪೊ. ಕ್ರಿ. 17, 18.

ದರೆ (ಸೂಳೆಯಾಗಿದ್ದು, ಒಮ್ಮೆ ಒಬ್ಬ ಮಿಂಡನಿಗೆ ಬಹಳ ಆಶೆ ಪಡುತ್ತಿದ್ದು, ಇವನು ತನಗೆ ಪ್ರಾಪ್ತನಾಗ ಕೂಡದ ವೇಳ್ಯದಲ್ಲಿ ಆ ಆಶೆ ಬಿಟ್ಟು ಸುಖಿಯಾದ) ಪಿಂಗಲೆ ಎಂಬವಳಂತೆ ಯಾರಾದರೂ ನಿರಾಶನೂ ಸುಖಿಯೂ ಇರತಕ್ಕದೆಂಬ ಕಾಪಿಲ ದರ್ಶನದ್ದೊಂದು ಸೂತ್ರದಲ್ಲಿ[1] ಕಾಣುವ ಸಾಂಖ್ಯ ಯೋಗಿಗಳ ಅಂತ್ಯಾರ್ಥವು ಸ್ತೋಯಿಕರಿಗೂ ಇತ್ತು.—ಗ್ರೀಕ ದೇಶದಲ್ಲಿ ಬದುಕಿದ್ದ ಸೋಕ್ರತನ ಮತ್ತು ಇವನ ಶಿಷ್ಯನಾಗಿದ್ದ ಪ್ಲತೋವಿನ ಪಕ್ಷಕರು ಆಗಿನ ರೋಮಾಯ ವಿದ್ವಾಂಸರಲ್ಲಿ ಉತ್ತಮರು; ಅವರ ಗುರುಗಳೂ ಅವರೂ ರಚಿಸಿದ ಗ್ರಂಥಗಳಲ್ಲಿ ಅನೇಕ ನೀತಿವಾಕ್ಯಗಳೇ; ಸಾಧಾರಣ ಪ್ರಜೆಯು ಆರಾಧಿಸಿ ನಡಕೊಳ್ಳುವ ದೇವತೆಗಳು ವಿಶ್ವವನ್ನು ಸೃಷ್ಟಿಸಿದವೆಂತ, ಅವರು ನಂಬಲೇ ಇಲ್ಲ; ಆದರೂ ನಿಜ ದೇವರ ಜ್ಞಾನವು ಅವರಲ್ಲಿ ಸಹ ಇಲ್ಲ, ವೇದಾಂತವೂ ಸಾಂಖ್ಯವೂ ಬೆರಿಕೆಯಾದ ಭಗವದ್ಗೀತೆಯ ದರ್ಶನಕ್ಕೆ ಹೋಲುವಂಥಾದ್ದೊಂದು ಈಶ್ವರವಾದವು ಅವರಲ್ಲಿ ಇತ್ತು; ಅದು ಹೊರ್ತಾಗಿ ವೇದಾಂತಿಗಳೂ ಸಾಂಖ್ಯರೂ ಹ್ಯಾಗೋ, ಹಾಗೆಯೇ ಅವರು ಸಹ ಪ್ರಜೆಯಲ್ಲಿಯ ಮೂರ್ತಿಪೂಜೆಯನ್ನು ಸಾಕುತ್ತಿದ್ದದಲ್ಲದೆ ಜ್ಯೋತಿಷ್ಯಗಾರರಿಗೂ ಮಾಟಗಾರರಿಗೂ ಶಕುನಗಾರರಿಗೂ ಆಸ್ಪದ ಕೊಡುತ್ತಿದ್ದರು.

ಹಿಂದು ಜನರಲ್ಲಿ ಮೀಮಾಂಸೆಯ ದರ್ಶನಕಾರರು ವೇದದ ಕರ್ಮಕಾಂಡವನ್ನೂ ಇದರೊಳಗೆ ಇರುವ ದೇವತೆಗಳ ಅರ್ಚನೆಯನ್ನೂ ಹ್ಯಾಗೆ ವಿಶೇಷವಾಗಿ ಕಾಪಾಡುತ್ತಿದ್ದರೋ, ಹಾಗೆಯೇ ರೋಮಾಯ ವಿದ್ವಾಂಸರಲ್ಲಿ ಸಹ ಹಲವರು ಸಂಪ್ರದಾಯದ ದೇವತಾರ್ಚನೆಯನ್ನು ಕಾಪಾಡಲಿಕ್ಕೆ ವಿಶೇಷ ಪ್ರಯತ್ನ ಗೈಯುತ್ತಿದ್ದರು; ಆದರೂ ಹೆಚ್ಚು ವಿದ್ವಾಂಸರು ಹಿಂದು ಧರ್ಮಶಾಸ್ತ್ರಕಾರನಾದ ವೃಹಸ್ಪತಿಯಂತೆ ಬೋಧಿಸ ತೊಡಗಿದ್ದರು. ಮಾಧವನೆಂಬ ವೇದಭಾಷ್ಯಕಾರನು ರಚಿಸಿದ ಸರ್ವದರ್ಶನಸಂಗ್ರಹವೆಂಬ ಗ್ರಂಥದಲ್ಲಿ ಆ ವೃಹಸ್ಪತಿಯ ಬೋಧನೆಯನ್ನು ಕುಱಿತು ಒಂದು ಶ್ಲೋಕವು ಇರುವದೇನಂದರೆ—ಅಗ್ನಿಹೋತ್ರಂ ತ್ರಯೋ ವೇದಾಸ್ ತ್ರಿದಂಡಂ ಭಸ್ಮಗುಂಠನಂ | ಬುದ್ಧಿಪೌರುಷಹೀನಾನಾಂ ಜೀವಿತೇತಿ ವೃಹಸ್ಪತಿಃ || ಅಂದರೆ, ಅಗ್ನಿಹೋತ್ರವೂ ಮೂರು ವೇದಗಳೂ (ಸನ್ಯಾಸಿಗಳು ಕೂಡಿಸಿ ಕಟ್ಟಿ ಭಿಕ್ಷೆಗೆ ಹಿಡು ಕೊಂಡು ಹೋಗುವ) ಮೂರು ಕೋಲೂ ಬೂದಿಯ ಹೂಸುವಿಕೆಯೂ ಬುದ್ಧಿ ಪೌರುಷಗಳಿಲ್ಲದವರು ಬದುಕುವ ವ್ಯಾಪಾರವೆಂತ, ವೃಹಸ್ಪತಿ ಹೇಳಿದ್ದಾನೆ.—ಆಗಿನ ರೋಮಾಯ ಸಾಮ್ರಾಜ್ಯವು ಸ್ಥಾಪನೆಯಾಗದ್ದಕ್ಕಿಂತ ಮುಂಚೆಯೇ ಹಲವು ಮಂದಿ ಗ್ರೀಕ (ಯವನ) ಪಂಡಿತರು ದೇವತೆಗಳಿಗೆ ವಿರುದ್ಧವಾಗಿ ಮಾತಾಡುವವರಾಗಿದ್ದರು. ಒಬ್ಬನು ಹೇಳಿದ್ದೇನಂದರೆ[2]—ನಿರ್ಜೀವದ ವಸ್ತುಗಳಿಗೆ ಬೇಡಿ

1) Book IV, sutra 11.

2) Heraclitus, 550 B. C.

ಕೊಳ್ಳುವವನು ಒಂದು ಗೋಡೆಯ ಸಂಗಡ ಮಾತಾಡಲಿಕ್ಕೆ ಹೋಗುವವನಿಗಿಂತ ಬುದ್ಧಿವಂತನಲ್ಲ!—ಮತ್ತೊಬ್ಬನು ಅಂದದ್ದೇನು[1]—ದೇವಸ್ಥಾನಗಳನ್ನು ಕಟ್ಟುವದು ಕೆಲಸವಲ್ಲ; ಹ್ಯಾಗಂದರೆ, ಬಡಿಗೆಯರು ಮುಂತಾದ ಪಂಚಾಳರು ಕಟ್ಟಿದ ವಸ್ತುಗಳಲ್ಲಿ ದಿವ್ಯವಾದದ್ದೂ ಅರ್ಚ್ಯವಾದದ್ದೂ ಪರಿಶುದ್ಧವಾದದ್ದೂ ಏನಾದರೂ ಉಂಟೆಂದು, ಯಾರೂ ನೆನಸ ಬಾರದು.—ಇನ್ನೊಬ್ಬನು ಅಂದದ್ದೇನು[2]—ದೇವತೆಗಳಾದರೆ, ಅವು ಇದ್ದಾವೆಯೋ? ಇಲ್ಲವೋ? ಎಂತ, ಸ್ಥಾಪಿಸುವದು ನನ್ನಿಂದ ಆಗುವದೇ ಇಲ್ಲ.—ಬೇರೊಬ್ಬನು ಅಂದದ್ದೇನು[3]—ಮನುಷ್ಯರು ತಮಗೆ ಪ್ರಯೋಜನವುಳ್ಳ ವಸ್ತುಗಳನ್ನೇ, ದೇವತೆಗಳೆಂದು, ನೇಮಿಸಿ ಕೊಂಡಿದ್ದಾರೆ.—ಬೇರೊಬ್ಬ ವಿದ್ವಾಂಸನ[4] ಹತ್ತರ ಒಂದು ದೇವತೆಯ ಕಾಷ್ಟಪ್ರತಿಮೆ ಇತ್ತು; ಈ ದೇವತೆಯು ಬಹಳ ಉಪಕಾರವುಳ್ಳ 12 ಕೆಲಸಗಳನ್ನು ನಡಿಸಿತ್ತಂತೆ; ಒಂದಾನೊಂದು ದಿವಸದಲ್ಲಿ ಆ ವಿದ್ವಾಂಸನು ತನಗೆ ಒಂದು ಜಾತಿಯ ಗೆಣಸುಗಳನ್ನು ಅಡಿಗೆ ಮಾಡಿ ಕೊಳ್ಳುತ್ತಿರುವಾಗ ಅವನು—ಬಾ, ದೇವರೇ! ನನ್ನ ಗೆಣಸುಗಳನ್ನು ಅಟ್ಟು 13ನೇ ಕೆಲಸ ಮಾಡೆಂತ, ಹೇಳಿ, ಆ ಪ್ರತಿಮೆ ತಕ್ಕೊಂಡು, ಬೆಂಕಿಯೊಳಗೆ ಹಾಕಿ ಬಿಟ್ಟನು.—ಬೇರೊಬ್ಬ ವಿದ್ವಾಂಸನು[5] ದೇವತೆಗಳ ಕಥೆಗಳನ್ನು ರಚಿಸಿದ ಕವಿಗಳನ್ನು ಕುರಿತು ನಿರ್ಣಯಿಸಿದ್ದೇನಂದರೆ—ಒಬ್ಬನು ತನ್ನ ಶತ್ರುಗಳ ವಿಷಯವಾಗಿಯೂ ಹೇಳಲಿಕ್ಕೆ ಧೈರ್ಯ ಪಡದಂಥಾ ಕಥೆಗಳನ್ನು ದೇವತೆಗಳ ವಿಷಯವಾಗಿ ಹೇಳಿದ್ದಾರೆ; ಅವರ ಕವಿತ್ವದ ಪ್ರಕಾರ ದೇವತೆಗಳು ಕಳ್ಳರೂ ವ್ಯಭಿಚಾರಿಗಳೂ ಆಗಿದ್ದು, ಕೂಲಿಗೆ ಕೆಲಸ ಮಾಡಿ, ತಮ್ಮ ಮಕ್ಕಳನ್ನು ತಿಂದು, ತಮ್ಮ ತಾಯಿಗಳ ಸಂಗಮ ಮಾಡಿ, ಮುಂತಾದ ದುಷ್ಕ್ರಿಯೆಗಳನ್ನು ನಡಿಸಿದವರಾಗಿದ್ದಾರೆ.—ಈ ರೀತಿಯಾಗಿ ಆ ಗ್ರೇಕ ಪಂಡಿತರು ಹಿಂದು ದೇವತೆಗಳಿಗೂ ಇವುಗಳ ಕಥೆಗಳಿಗೂ ಸರ್ವಥಾ ಹೋಲುವಂಥಾ ದೇವತೆಗಳನ್ನೂ ಕಥೆಗಳನ್ನೂ ಕುರಿತು ನ್ಯಾಯವಾದ ಸಂಶಯ ಪಟ್ಟು, ನ್ಯಾಯವಾದ ಹಾಸ್ಯ ಗೈದಿದ್ದರು. ಕಾಲಕ್ರಮೇಣ ಅದೇ ಭಾವವು ರೋಮಿಾಯ ಸಾಮ್ರಾಜ್ಯದೊಳಗೆ ಸಹ ಪ್ರಬಲವಾಗಿತ್ತು. ಒಂದೆರಡು ದೃಷ್ಟಾಂತಗಳೇನಂದರೆ—ಒಬ್ಬ ರೋಮಿಾಯ ವಿದ್ವಾಂಸನು[6]—ಲೆಖ್ಖವಿಲ್ಲದ ದೇವತೆಗಳನ್ನು ನಂಬಿ ಕೊಂಡಿರುವದು ಒಂದು ಮಹಾ ಹುಚ್ಚುತನವೇ! ಎಂತ, ಬೋಧಿಸಿದನು. ಅದಲ್ಲದೆ ಆ ಒಕ್ತಾವಿಯಾನ ಔಗುಸ್ತ ಕೈಸರನ[7] ಕಾಲದಲ್ಲಿ ಆದದ್ದೊಂದು ಸಂಗತಿ ಏನಂದರೆ—ಆ ಕೈಸರನು ಒಮ್ಮೆ ತನ್ನ ಸೇನಾಧಿಪತಿಗಳೊಳಗೆ ಒಬ್ಬನ ಮನೆಯಲ್ಲಿ ಮೇಜಿಗೆ ಕೂತು

---

1) Zeno, 300 B. C. 2) Protagoras, 420 B. C. 3) Prodicus, 420 B. C.
4) Diagoras, 400 B. C. 5) Isocrates, 436—388 B. C.
6) Plinius secundus who died A. D. 79. 7) 9ನೇ ಪಾನು.

ಕೊಂಡು ಉಣ್ಣುವ ಹೊತ್ತಿನಲ್ಲಿ, ನೀವು ಒಂದು ಪಟ್ಣ ತಕ್ಕೊಂಡಾಗ ನಿಮ್ಮ ದಂಡುಗಾರರಲ್ಲಿ ಒಬ್ಬನು ಅದರೊಳಗಿರುವ ಒಂದು ದೇವತೆಯ ಸುವರ್ಣಪ್ರತಿಮೆಗೆ ಒಂದು ಪೆಟ್ಟು ಹೊಡೆಯುತ್ತಲೇ ಕುರುಡನಾಗಿ ಸತ್ತು ಹೋದನು, ಅಲ್ಲವೋ? ಎಂತ, ಕೇಳಿದನು. ಅದಕ್ಕೆ ಆ ಸೇನಾಧಿಪತಿಯು ನಕ್ಕು, ಉತ್ತರ ಕೊಟ್ಟದ್ದೇನು—ಆ ಮನುಷ್ಯನು ನಾನೇ! ಅದಲ್ಲದೆ ನೀವು ಕೂತು ಕೊಂಡು ಉಣ್ಣುವಂಥ ಮೇಜಿನ ಕಾಲುಗಳು ಆ ದೇವತೆಯ ಪ್ರತಿಮೆಯಿಂದ ರಚಿತವಾದವುಗಳೇ!—ಹೀಗೆ ಆಗಿನ ವಿದ್ವಾಂಸರಲ್ಲಿ ಅನೇಕರು ಆ ಸುಳ್ಳುದೇವತೆಗಳನ್ನು ತುಚ್ಛೀಕರಿಸಿ ಅಣಕಿಸುವಂತೆಯೇ ಅಪವಿಶ್ವಾಸಕ್ಕೆ ಪರಿಹಾಸ್ಯ ಮಾಡುವಂಥವರು ಸಹ ಇದ್ದರು; ಒಬ್ಬ ಶಕುನಗಾರನು ಮತ್ತೊಬ್ಬನನ್ನು ನೋಡಿದರೆ ನಗಾಡುವದನ್ನು ಬಿಡ ಕೂಡದು. ಆದಾಗ್ಯೂ ರೋಮಾಯ ಸಾಮ್ರಾಜ್ಯದೊಳಗಿನ ಪಂಡಿತರೂ ದೊಡ್ಡ ಸ್ಥಿತಿವಂತರೂ ಆದವರಲ್ಲಿ ಬಹಳ ಜನರು ಮೂರ್ತಿಪೂಜಕತ್ವಾದಿಯ ನಿಷ್ಪ್ರಯೋಜನವನ್ನು ತಿಳುಕೊಂಡು, ಅದನ್ನು ಪರಿಮೋಹದಿಂದ ನಡಿಸುತ್ತಿರುವ ದಡ್ಡ ಪ್ರಜೆಗೆ, ವಿಶೇಷವಾಗಿ ಅಂತರಂಗದಲ್ಲಿ, ನಕಲಿ ಹಾಕುತ್ತಿದ್ದರೂ ಅವರಲ್ಲಿ ಅನೇಕರು ಆ ಪ್ರಜೆಯನ್ನು ಮೆಚ್ಚಿಸುವದಕ್ಕೋಸ್ಕರ ಅದರ ಹಾಗೆಯೇ ಮಾಡುತ್ತಾ ಇದ್ದರು. ಪಲೇಸ್ತೀನ ದೇಶದಲ್ಲಿ ದೇವಾಲಯವಿರುವ ಯೆಹೂದ್ಯರೂ ಇವರ ಪಕ್ಷಕರೂ ಹೊರ್ತಾಗಿ ಸರ್ವ ರೋಮಾಯ ಸಾಮ್ರಾಜ್ಯದ ಒಳಗೂ ಹೊರಗೂ ವಿದ್ವಾಂಸರಲ್ಲಿ ಸಹ ಯಾರೂ ನಿಜ ದೇವರನ್ನೂ ಅವನ ಭಕ್ತಿಯನ್ನೂ ಅರಿಯಲಿಲ್ಲ.

ಅಂಥ ಅಜ್ಞಾನವಿರುವ ಆ ರೋಮಾಯ ಸಾಮ್ರಾಜ್ಯದ ಒಳಗೂ ಹೊರಗೂ ದಿವ್ಯ ನೀತಿಯು ನಡೆಯುತ್ತಿದ್ದದ್ದು ಉಂಟೇ? ನಿಜ ದೇವರ ಜ್ಞಾನವಿಲ್ಲದೆ ಅವನ ಮೇಲಿನ ಸುಭಯವೂ ಪ್ರೀತಿಯೂ ಹುಟ್ಟುವದುಂಟೇ? ಸ್ವಲ್ಪ ನೋಡೋಣ! ಆ ಸಾಮ್ರಾಜ್ಯದೊಳಗೆ ಹಿಂದು ಷಡ್ದರ್ಶನಗಳಿಗೆ ಹೋಲುವಂಥ ಆ ವಿದ್ಯೆಯಲ್ಲದೆ ಕಲಾಕುಶಲತ್ವವು ಹೇರಳವಾಗಿರುವದು; ಚಿಕಿತ್ಸಾಶಾಸ್ತ್ರ, ಶಬ್ದಶಾಸ್ತ್ರ, ಛಂದಃಶಾಸ್ತ್ರ, ಗೀತಶಾಸ್ತ್ರ, ವಾದ್ಯಶಾಸ್ತ್ರ, ಅಶ್ವಶಾಸ್ತ್ರ, ಶಿಲ್ಪಶಾಸ್ತ್ರ, ತಕ್ಷಕಶಾಸ್ತ್ರ, ನಾವಿಕಶಾಸ್ತ್ರ, ಮಣಿಕಾರಶಾಸ್ತ್ರ, ಸೂಪಶಾಸ್ತ್ರ, ಪ್ರಜಾಪಾಲನಶಾಸ್ತ್ರ ಇತ್ಯಾದಿ ಲೌಕಿಕ ಪ್ರಯೋಜನವುಳ್ಳ ಶಾಸ್ತ್ರಗಳಿಂದ ರೋಮಾಯರು ಅತಿರೇಕವಾಗಿ ಶೋಭಿಸುತ್ತಿದ್ದರು; ಈ ವಿಷಯದಲ್ಲಿ ಅವರಿಗೆ ಹಿಂದು ಜನರು ಮುಂತಾದ ಅನೇಕರು ಸ್ವಲ್ಪವಾದರೂ ಈಡಾಗಲಿಲ್ಲ. ಆದರೂ ಅಂಥಾ ಕಲಾಕುಶಲತ್ವದಿಂದ ಏನು? ಸರ್ವ ರೋಮಾಯ ಸಾಮ್ರಾಜ್ಯದೊಳಗೆ ಪಾಪವೇ ಆಳುತ್ತಿತ್ತು. ವಿದ್ವಾಂಸರಲ್ಲಿ ಹಲವರು[1] ಸಾರುತ್ತಿದ್ದ ನಾಸ್ತಿಕತ್ವವೇನಂದರೆ—ಸತ್ಯವು ಇಲ್ಲವೇ ಇಲ್ಲ!—ಮತ್ತೊಬ್ಬರು ಸಾರಿದ್ದೇ

1) The followers of Arcesilaus who was born 319 B. C.; ಯೋಹಾ. 18, 38.

ನಂದರೆ[1]—ಮನುಷ್ಯರ ಕಾರ್ಯಗಳೆಲ್ಲಾ ಸ್ವಲಾಭಾರ್ಥದಿಂದಲೇ ನಡಿಯಲಿ! ನೀ
ತಿಯೋ? ಅನೀತಿಯೋ? ಎಂತ, ವಿಚಾರಿಸುವದು ಬೇಡ!—ಸಾಮ್ರಾಜ್ಯದೊಳ
ಗಿನ ಬೇರೆ ಬೇರೆ ಶೀಮೆ ನಾಡುಗಳಲ್ಲಿ ಇರುವ ಉದ್ಯೋಗಸ್ಥರು ಕೈಸರನಿಂದ ನೇ
ಮಿತವಾದ ಕಪ್ಪ ಕಂದಾಯಗಳಿಂದ ಬಹು ಹೆಚ್ಚು ಹಿಡು ಕೊಂಡು ಜನರನ್ನು ಕಾ
ಡಿಸುತ್ತಿದ್ದರು; ರಾಜ್ಯಭಂಡಾರದ ಹಣದ ವಿಷಯದಲ್ಲಿ ಬಹಳ ಮೋಸ ನಡೆಯು
ತ್ತಿತ್ತು; ದೊಡ್ಡ ಸಂಬಳದ ಉದ್ಯೋಗಗಳನ್ನು ಪಡಕೊಳ್ಳಲಿಕ್ಕೆ ಲಂಚವೇ ಉಪಾ
ಯವಾಗುತ್ತಿತ್ತು. ಹೆಚ್ಚು ಮಂದಿ ಸ್ಥಿತಿವಂತರ ಬದುಕು ಅನ್ಯಾಯದಿಂದ ಘಳಿಸಿ
ಕೊಂಡದ್ದೇ. ಆ ಸ್ಥಿತಿವಂತರಲ್ಲಿ ಏನೂ ಮಿತಿ ಇಲ್ಲದಂಥ ಹೊಟ್ಟೆಬಾಕತನ ಇರು
ತ್ತಿತ್ತು; ಬಾಯಿ ಮೆಚ್ಚುವಂಥ ಪದಾರ್ಥಗಳನ್ನು ಹೇರಳ ವೆಚ್ಚ ಮಾಡಿ ಬಹು ದೂ
ರದಿಂದ ತರಿಸುತ್ತಿದ್ದರು; ಕತೊವೆಂಬ ನೀತಿಶಾಸ್ತ್ರಿಯು[2] ಒಮ್ಮೆ ರೋಮಪುರದ ವಿ
ಷಯವಾಗಿ ಹಲುಬಿ ಅಂದದ್ದೇನು—ಒಂದು ಮೀನಿಗೆ ಒಂದು ಎತ್ತಿಗಿಂತ ಹೆಚ್ಚು
ಕ್ರಯ ಬೀಳುವಂಥಾ ಪಟ್ಣಕ್ಕೆ ಇನ್ನು ಮುಂದೆ ಯಾವ ಗತಿ?—ಅನೇಕ ಸರ್ತಿ ಒಂ
ದೇ ಭೋಜನಕ್ಕಾಗಿ ಒಂದು ಶೀಮೆಯ ಕಂದಾಯವೇ ಖರ್ಚಾಯಿತು. ಒಮ್ಮೆ ಅ
ಪ್ಪಿಯನೆಂಬವನೊಬ್ಬ ಹೊಟ್ಟೆಬಾಕನು 6 ಲಕ್ಷ ರೂಪಾಯಿಯನ್ನು ಉಳಿಸಿ ಕೊಂ
ಡು ತನಗಿದ್ದ ಬೇರೆ ಮಹಾ ದೊಡ್ಡ ಬದುಕೆಲ್ಲವನ್ನು ಬಳಿಸಿ ಬಿಟ್ಟು ಇರುವಾಗ, ನ
ನಗುಳಿದದ್ದು ಒಂದೇ ವರುಷಕ್ಕೆ ಮಾತ್ರ ಇನ್ನು ಸಾಕಾದೀತೆಂತ, ತನ್ನನ್ನು ಕೊಂ
ದು ಕೊಂಡನು. ದಿವಸಕ್ಕೆ ಮೂರು ನಾಲ್ಕು ಹೊತ್ತು ಒಂದು ದೊಡ್ಡ ಭೋಜನ
ಮಾಡ ಕೂಡುವ ಹಾಗೆ ವಾಂತಿಯಿಂದ ಹೊಟ್ಟೆಯೊಳಗೆ ಸ್ಥಳ ಮಾಡಿ ಕೊಳ್ಳು
ತ್ತಿದ್ದರು. ಈ ವರುಷಕ್ಕೆ ಮುಂಚಿನ 1799ನೇದರಲ್ಲಿ 8 ತಿಂಗಳು ಮಾತ್ರ ಆಳಿದ ವಿ
ತ್ರೆಲ್ಲಿಯನೆಂಬ 8ನೇ ರೋಮೀಯ ಕೈಸರನು ತನ್ನ ಆಳುವಿಕೆಯ ಆ ಸಮಯದೊ
ಳಗೆ 5 ಕೋಟಿಗಿಂತ ಹೆಚ್ಚು ರೂಪಾಯಿಗಳನ್ನು ಭೋಜನಾದಿ ಸಂಭ್ರಮಕ್ಕೆ ಬಳಿಸಿ
ಬಿಟ್ಟನು. ಸ್ಥಿತಿವಂತರ ಗೃಹಗಳೆಲ್ಲಾ ಅಪೂರ್ವವಾದ ಬಿಳೀ ಶಿಲೆಯಲ್ಲಿ ಕಟ್ಟಿದ್ದವು;
ದಂತ ಬೆಳ್ಳಿ ಭಂಗಾರಗಳಿಂದ ವೆಗ್ಗಳವಾಗಿ ಅಲಂಕರಿಸಿದ್ದವು. ಅಷ್ಟರಲ್ಲಿ ಸಾಧಾರ
ಣ ಪ್ರಜೆಯವರು ಸ್ಥಿತಿವಂತರನುಭೋಗಿಸುವ ವೈಭವಕ್ಕೆ ಬಹಳ ಹೊಟ್ಟೆಕಿಚ್ಚು ಪಡು
ತ್ತಿದ್ದರು; ರೋಮಪುರದ ಸ್ಥಿತಿವಂತರು ಆ ಪುರದ ಕಡು ಮೈಗಳ್ಳರಾದ ಬಡ ನಿವಾ
ಸಿಗಳಿಗೆ ಕಾಲ ಕಾಲಕ್ಕೆ ಹಣ ಧಾನ್ಯ ಎಣ್ಣೆಗಳನ್ನು ಕೊಡುತ್ತಾ, ಕ್ರೌರ್ಯವೂ ನಿ
ರ್ಲಜ್ಜೆಯೂ ಉಳ್ಳ ಜನಮೃಗದ್ವಂದ್ವಯುದ್ಧ ಮೊದಲಾದ ಆಟಗಳನ್ನು ಅವರ ಕ
ಣ್ಣುವಿನೋದಕ್ಕಾಗಿ ಮಾಡಿಸುತ್ತಾ ಇರ ಬೇಕು, ಇಲ್ಲದಿದ್ದರೆ ಆ ಬಡವರು ಕಲಹ

---

1) The followers of Karneades who was born 218 B. C.
2) Born 93 B. C.

ಕ್ಕೆ ಏಳುವರು. ಸ್ತ್ರೀಯರಲ್ಲಿ ಭೂಷಣಾಭರಣಗಳ ಮೇಲೆ ಅಮಿತ ಆಶೆ ಇರುವದು. ವ್ಯಭಿಚಾರ ನಡಿಸುವದೂ ವಿವಾಹವನ್ನು ವ್ಯರ್ಥ ಹೇತುವಿನಿಂದ ಬಿಚ್ಚುವದೂ ತನ್ನ ಸ್ತ್ರೀಯನ್ನು ಮತ್ತೊಬ್ಬನಿಗೆ ಹಲವು ಕಾಲಕ್ಕೆ ವಶ ಮಾಡಿ ಕೊಡುವದೂ ಮುಂತಾದ ಅಸಹ್ಯ ಕ್ರಿಯೆಗಳು ಏನೂ ಅಪರೂಪದವಲ್ಲ. ಈ ವರುಷಕ್ಕೆ ಮುಂಚಿನ 1912ನೇದರಲ್ಲಿ ಸತ್ತ ಕಾಯ ಯೂಲಿಯ ಕೈಸರನೆಂಬ ದೊಡ್ಡ ಪ್ರಜಾಧಿಪತಿಯು ಎಂಥಾ ನೀಚನಾಗಿದ್ದನಂದರೆ, ಅವನ ಸೇನೆಯವರು, ಬೋಳ ತಲೆಯ ಜಾರನೇ! ಎಂತ, ಅವನನ್ನು ಕುರಿತು ಹಾಡಿದರೆ ಅವನು ಬಹಳ ಸಂತೋಷ ಗೊಳ್ಳುವನು. ಸ್ಥಿತಿವಂತರು ತಮ್ಮ ದಾಸರನ್ನು (ಗುಲಾಮರನ್ನು) ಮಿಗೆ ಪೀಡಿಸಿ, ಅವರಲ್ಲಿ ರೋಗಿಷ್ಠರಾದವರನ್ನು ಮನೆಯ ಹೊರಗೆ ಹಾಕುವರು. ಪುರವಾಸಿಗಳೊಳಗೆ ಸಾವಿರಾರು ಜನರು ಹತರಾಗುವ ಪರಸ್ಪರಯುದ್ಧಗಳು ಆಗುತ್ತಿದ್ದವು. ಕಾಲಗತಿಯಲ್ಲಿ ಅನೇಕ ಕೈಸರರು ಸಹ ಕೊಲೆ ಪಡುತ್ತಿದ್ದರು. ಈ ವರುಷಕ್ಕೆ ಮುಂಚಿನ 1868ನೇದರಲ್ಲಿ ಆಳುವ ಒಕ್ತಾವಿಯಾನ ಔಗುಸ್ತನೆಂಬ ಮೊದಲಿನ ಕೈಸರನು[1] ವಿಧ ವಿಧದ ಆಜ್ಞೆಗಳಿಂದ ಅಂಥಾ ಮಹಾ ಅಧರ್ಮಕ್ಕೆ ಅಡ್ಡಿ ಮಾಡಲಿಕ್ಕೆ ಪೇಚಾಡುತ್ತಿದ್ದನು; ಆದರೂ ಅದು ವ್ಯರ್ಥವಾಯಿತು. ಒಳ್ಳೇ ನಡತೆಗೆ ದೇವರಿಂದ ಬಲ ಬರ ಬೇಕಷ್ಟೇ! ನೆರೋನನೆಂಬ 5ನೇ ಕೈಸರನು 1801 ವರುಷಗಳ ಹಿಂದೆ ಕೊಲ್ಲಿಸಿದ ಸೆನೆಕನೆಂಬ ನೀತಿಶಾಸ್ತ್ರಿಯು ರೋಮೀಯ ಸಾಮ್ರಾಜ್ಯದೊಳಗಿನ ಸ್ಥಿತಿಯನ್ನು ವರ್ಣಿಸಿದ್ದು ಹ್ಯಾಗಂದರೆ—ಸರ್ವತ್ರ ದುಷ್ಕರ್ಮವೂ ದುರ್ನಡತೆಯೂ ತುಂಬ ನಡೆಯುತ್ತದೆ; ಬಲಾತ್ಕಾರದಿಂದಲೂ ದಂಡದಿಂದಲೂ ಅದನ್ನು ನಿಲ್ಲಿಸಲಾಗದು; ಅನ್ಯಾಯಕ್ಕೆ ತಮ್ಮತಮ್ಮೊಳಗೆ ಪಂಥಗಾರರಾಗಿ ಒಡ್ಡಾವಡ್ಡಿ ಮಾಡುತ್ತಾರೆ; ಪಾಪದ ಮೇಲಿನ ಆಶೆಯು ದಿನಾಲು ಹೆಚ್ಚುತ್ತಾ, ಸಂಭಾವಿತತ್ವವು ಕುಂದುತ್ತಾ ಅದೆ. ಒಳ್ಳೇತನಕ್ಕೂ ತಕ್ಕತನಕ್ಕೂ ಮಾನ ಕೊಡುವ ಮನಸ್ಸು ಓಡಿ ಹೋಯಿತು; ಎಲ್ಲಾ ಕಡೆಯಲ್ಲಿ ದುರ್ವ್ಯಸನಗಳು ಮುತ್ತಿ ಕೊಂಡವೆ. ಅಂತರಂಗದಲ್ಲಿ ಅಲ್ಲ, ಸರ್ವರ ಕಣ್ಣೆದುರಿನಲ್ಲೇ ದುಷ್ಕರ್ಮಗಳು ಆಗುತ್ತಾ ಅವೆ. ಪುಂಡುತನವು ಪ್ರಜೆಯೊಳಗೆ ಹೊಕ್ಕೊಂಡು, ಸಮಸ್ತರ ಎದೆಯೊಳಗೆ ಬಲಗೊಂಡದೆ; ಆದ್ದರಿಂದ ನಿರ್ದೋಷತ್ವವು ಅಪರೂಪವೆಂಬ ಹಾಗಲ್ಲ, ಅದು ಹ್ಯಾಗೂ ಇಲ್ಲವೆಂಬ ಹಾಗಾಯಿತು. ನ್ಯಾಯಪ್ರಮಾಣವನ್ನು ಮೀರಿ ಬಿಡುವವರು ವಿರಳರೋ? ಸ್ವಲ್ಪ ಜನರೋ? ಅನ್ಯಾಯವನ್ನು ನ್ಯಾಯ ಮಾಡುವದಕ್ಕಾಗಿ ಸರ್ವತ್ರ ಸರ್ವರೂ ಒಂದು ಸನ್ನಾಹಸೌಜ್ಞೆಗೆ ಕೂಡುವ ಹಾಗೆ ಕೂಡಿ ಕೊಳ್ಳುತ್ತಾರಲ್ಲವೋ?—ಪ್ಲತೋವೆಂಬ ಆ ನೀತಿಶಾಸ್ತ್ರಿಯ[2] ಹಲವು ಮಂದಿ ಪಕ್ಷಾವಲಂಬಿಗಳೂ ಬೇರೆ ಹಲವು ಮಂದಿ ಸುಗುಣಿಗಳೂ ಪ್ರಜೆಯನ್ನು ಅಧರ್ಮಕ್ಕೆ

1) 12ನೇ ಪಾನು ನೋಡು. 2) 11ನೇ ಪಾನು.

ಗದರಿಸಿದರೆ ಅದು, ನಾವು ನಮ್ಮ ದೇವತೆಗಳ ಹಾಗೆ ಮಾಡ ಬಾರದೇ? ಎಂತ, ನೆವನ ಹೇಳುತ್ತಿರುವದು. ಅದಲ್ಲದೆ ಆಗ ರೋಮಿಾಯ ಸಾಮ್ರಾಜ್ಯದೊಳಗೆ ಯೆಹೂದ್ಯ ಮತಸ್ಥರಲ್ಲದವರಲ್ಲಿ ಯಾವ ಸ್ಥಿತಿಯು ಇತ್ತೋ, ಅದೇ ಸ್ಥಿತಿಯು ಯೆಹೂದ್ಯ ಮತಸ್ಥರ ವಿನಹ ಇತರರಾದ ಭೂಮಿಯ ಸಕಲ ಜನರಲ್ಲಿ ಇತ್ತು; ಆದರೆ ಯೆಹೂದ್ಯರಲ್ಲಿಯೂ ಧರ್ಮ ನಡತೆಗಳ ದುಃಖಕರ ಶಿಥಿಲತ್ವವು ತೊಡಗಿತ್ತೆಂಬದು ಇನ್ನು ಮುಂದೆ ಗೊತ್ತಾಗುವದು.

ಹಿಂದೆ ವಿವರಿಸಿದ ಅಷ್ಟು ಭೀಕರವಾದ ಮೂರ್ತಿಪೂಜೆಯಲ್ಲಿಯೂ ಅಜ್ಞಾನದಲ್ಲಿಯೂ ದುಷ್ಕರ್ಮಗಳಲ್ಲಿಯೂ ಆತ್ಮವಿಘ್ನದಲ್ಲಿಯೂ ಹೊರಳುತ್ತಿರುವ ಆಗಿನ ಜನಾಂಗಗಳಲ್ಲಿ ಸದ್ಗತಿಯ ಕಾಂಕ್ಷೆಯು ಇರಲಿಲ್ಲವೋ? ಅಂಥ ಕಾಂಕ್ಷೆಯು ಅವರಲ್ಲಿ ಇರುತ್ತಲೇ ಇತ್ತೆಂಬದು ನಿಃಸಂಶಯವಾದದ್ದೇ! ಅವರೊಳಗಿನ ಅನೇಕರು—ನಮಗೆ ರಕ್ಷಣ ಬೇಕು; ಆದರೆ ನಮಗಿರುವ ಅನಿಜ ದೇವತೆಗಳಿಂದಲೂ ಬಗೆ ಬಗೆಯ ಆಚಾರಗಳಿಂದಲೂ ಮಾನುಷ್ಯ ಜ್ಞಾನಿಕತ್ವದಿಂದಲೂ ಅದು ಬರಲಿಕ್ಕಿಲ್ಲ! ಎಂತ, ಅನುಭವಿಸಿ, ತಿಳುಕೊಂಡಿದ್ದರು. ನಿದರ್ಶನಕ್ಕಾಗಿ ಗ್ರೇಕ ದೇಶದ ಅಥೇನೆ ಪಟ್ಣದವರು ತಾವು ಅರಿಯದ ದೇವರಿಗೆ ಒಂದು ಬಲಿಪೀಠವನ್ನು ಕಟ್ಟಿ, ಇವನ ಕಡೆಯಿಂದ ತಮ್ಮ ಶರೀರಾತ್ಮರಕ್ಷಣದ ದಾರಿ ನೋಡುತ್ತಿದ್ದರು[1]. ಅದಲ್ಲದೆ ರೋಮಿಾಯರ ಹತ್ತರ ತಾವು ಸಿಬುಲ್ಲೀನ ಅಂದರೆ ದೇವಚಿತ್ತದ ಸಂಬಂಧವಾದ ಗ್ರಂಥಗಳೆಂತ ಹೆಸರಿಕ್ಕಿದ ಪ್ರಾಚೀನ ಗ್ರಂಥಗಳು ಇದ್ದವು; ಇವುಗಳಲ್ಲಿ ಇರುವ ಒಂದು ಪ್ರಖ್ಯಾತ ಕಾಲಜ್ಞಾನದ ವಾಕ್ಯವೇನಂದರೆ—(ರೋಮಿಾಯರೊಳಗೆ) ಒಬ್ಬ ಸದ್ರಾಜನು ಬರುವನು; ತಮಗೆ ರಕ್ಷಣ ಹೊಂದಲಿಕ್ಕೆ ಮನಸ್ಸಿದ್ದರೆ ಅವನನ್ನೇ, ತಮ್ಮ ರಾಜನೆಂತ, ತಕ್ಕೊಳ್ಳ ಬೇಕು!—ತಾವು ಆ ಅರಸನನ್ನು ಕುರಿತು ನಿಜವಾದ ವಿವರ ಅರಿಯದಿದ್ದರೂ ಸುಗುಣಿಗಳಾಗಿದ್ದಂಥ ರೋಮಿಾಯರೆಲ್ಲರೂ, ಆ ವಾಕ್ಯವು ಸತ್ಯವಾಗಲಿ! ಎಂತ, ಪ್ರತೀಕ್ಷಿಸುತ್ತಿದ್ದರು. ಆ ಪ್ರಾಚೀನ ನುಡಿಯು ಬೇರೆ ಕಡೆಯಲ್ಲಿ ಸ್ವಲ್ಪ ಹೆಚ್ಚು ತೆರೆದು ಹೇಳಿದ್ದಾಗಿ ಉಳಿದದೆ; ಹ್ಯಾಗಂದರೆ 1818 ವರುಷಕ್ಕೆ ಮುಂಚೆ ಹುಟ್ಟಿ ಬಹಳ ಕೀರ್ತಿಗೊಂಡ ತಕಿತನೆಂಬ ರೋಮಿಾಯ ಚರಿತ್ರಗಾರನ ಗ್ರಂಥದಲ್ಲಿ ಇರುವದು ಏನಂದರೆ—(ಈತಲಿಯ ದೇಶಕ್ಕೆ) ಪೂರ್ವ ದಿಕ್ಕಾದದ್ದು ಬಲಗೊಳ್ಳುವದು, ಇದರಲ್ಲಿರುವ (ಪಲೇಸ್ತೀನದಲ್ಲಿಯಣ) ಯೆಹೂದ್ಯ ಶೀಮೆಯಿಂದ ಬರುವಂಥವರು ಲೋಕದ ರಾಜರಾಗುವರು! ಎಂಬ ಈ ವಾಕ್ಯವು ಪೂಜಾರಿಗಳ ಪ್ರಾಚೀನ ಗ್ರಂಥಗಳಲ್ಲಿ ಅದೆ ಎಂದು, ಅನೇಕರಿಗೆ ಪೂರ್ಣ ನಿಶ್ಚಯವಿತ್ತು.—ಸುಮಾರು ಆ ಕಾಲಜ್ಞಾನದ ಅದೇ ರೂಪವು ಸುಮಾರು ಅದೇ ಕಾಲದಲ್ಲಿ ಬದುಕಿದ ಸ್ವೇತೋನಿಯನೆಂಬ

1) ಅಪೊ. ಕ್ರಿ. 17, 23.

ರೋಮಿಾಯ ಚರಿತ್ರಗಾರನ ಗ್ರಂಥದಲ್ಲಿ ಅದೆ; ಏನಂದರೆ—(ಪಲೇಸ್ತೀನದಲ್ಲಿಯಣ)
ಯೆಹೂದ್ಯ ಶೀಮೆಯಿಂದ ಬರುವಂಥವರು ಲೋಕದ ರಾಯರಾಗುವರೆಂಬ ವಿಶ್ವಾಸ
ವು ಸರ್ವ ಪೂರ್ವ ದಿಕ್ಕಿನಲ್ಲಿ ಸರ್ವರಿಗೆ ಪ್ರಾಚೀನದಿಂದಲೇ ನಿತ್ಯದಲ್ಲಿ ಇರುತ್ತಿತ್ತು.—
ಅದಲ್ಲದೆ ಒಕ್ತಾವಿಯಾನ ಔಗುಸ್ತನೆಂಬ ಕೈಸರನ[1] ಕಾಲದವನಾದ ವಿರ್ಗಿಲಿಯ
ನೆಂಬ ಪ್ರಖ್ಯಾತ ಕವಿಯು ಆ ಕಾಲಜ್ಞಾನವನ್ನು ವಿವರಿಸಿ, ಹೇಳಿದ್ದೇನಂದರೆ—
ರೋಮಿಾಯ ಮುಖ್ಯ ದೇವತೆಯಾದ ಯೂಪಿತೆರಿನ ಮಗನು ಭೂರಾಜನಾಗು
ವನು; ಅವನ ಕಾಲದಲ್ಲಿ ವಿಶ್ವದ ಸ್ವಭಾವವು ಬದಲಾಗುವದು; ಸಿಂಹವು ತನ್ನ ಕ್ರೂ
ರತ್ವವನ್ನು ಬಿಡುವದು, ಸರ್ಪಗಳು ಇನ್ನು ಕಚ್ಚುವದಿಲ್ಲ, ವಿಷವು ಇಲ್ಲದೆ ಹೋಗು
ವದು, ಮುಳ್ಳುಗಿಡಗಳು ದ್ರಾಕ್ಷೇ ಹಣ್ಣುಗಳನ್ನು ಫಲಿಸುವವು ಇತ್ಯಾದಿ[2].—ಅದು
ಹೊರ್ತಾಗಿ ಈ ವರುಷಕ್ಕೆ ಮುಂಚಿನ 1868ನೇದರಲ್ಲಿ ರೋಮಿಾಯ ಸಾಮ್ರಾಜ್ಯದ
ಪೂರ್ವ ದಿಕ್ಕಿನ ಆಕಾಶದಲ್ಲಿ ಒಂದು ಅಪೂರ್ವವಾದ ನಕ್ಷತ್ರವು (ಅಂದರೆ ಬೃಹ
ಸ್ಪತಿ ಶನಿ ಮಂಗಳ ಎಂಬ ಈ ಮೂರು ಗ್ರಹಗಳ ಒಂದು ಅತಿ ಪ್ರಕಾಶಮಯ ಸಂ
ಯೋಗವು) ಕಾಣ ಬಂದಾಗ ಬಬೆಲು ಮತ್ತು ಪಾರ್ಶಿಸ್ಥಾನ ಎಂಬ ಎರಡು ದೇಶ
ಗಳಲ್ಲಿ ಮುಖ್ಯವಾಗಿ ಪ್ರಬಲರಾದಂಥ ಮಗರು (ಮೊಗರು[3]) ಎಂಬ ಜ್ಯೋತಿ
ಷರೂ ಮಾಟಗಾರರೂ ಶಕುನಗಾರರೂ ಸೂರ್ಯಪೂಜಾರಿಗಳೂ ಪಂಡಿತರೂ
ಆದವರಲ್ಲಿ ಹಲವರು ಹೊರಟು, ಪಲೇಸ್ತೀನದ ಯೆಹೂದ್ಯ ಶೀಮೆಗೆ ಬಂದು, ನಿ
ಮಗೆ ಹುಟ್ಟಿರುವ ಅರಸನೆಲ್ಲಿ? ಎಂತ, ಯೆಹೂದ್ಯರಲ್ಲಿ ವಿಚಾರಿಸಿದರು; ಹ್ಯಾಗಂ
ದರೆ ಆ ಮಗರಲ್ಲಿಯೂ ರಕ್ಷಣದ ರಾಜನು ಯೆಹೂದ್ಯ ಶೀಮೆಯಿಂದ ಬರುವನೆಂಬ
ಕಾಲಜ್ಞಾನವು ಇರುತ್ತಲೇ ಇತ್ತು[4].

ರೋಮಿಾಯ ಸಾಮ್ರಾಜ್ಯದೊಳಗಿನ ಮೂರ್ತಿಪೂಜಕರಿಗೂ ಅದರ ಹೊರ
ಗಿನ ಬಬೆಲು ಪಾರ್ಶಿಸ್ಥಾನಗಳ ಮೂರ್ತಿಪೂಜಕರಿಗೂ, ಯೆಹೂದ್ಯ ಶೀಮೆಯಿಂದ
ಒಬ್ಬ ದೊಡ್ಡ ರಾಜನು ಬರುವನೆಂದು, ಯಾವ ಕಡೆಯಿಂದ ಗೊತ್ತಾಗಿತ್ತು? ಪಲೇ
ಸ್ತೀನ ದೇಶದ ನಿವಾಸಿಗಳಾದ ಯೆಹೂದ್ಯರೆಂಬವರ ಮತ್ತು ಇವರ ಪಕ್ಷಾವಲಂ
ಬಿಗಳ ಬಾಯಿಯಿಂದಲೇ! ಯೆಹೂದ್ಯರಿಗೆ ದೇವರು ಈ ವರುಷಕ್ಕೆ ಮುಂಚಿನ
3557ನೇದರಲ್ಲಿ ವಾಗ್ದತ್ತ ಮಾಡಿದ್ದದ್ದೇನಂದರೆ—ಯೆಹೂದನು (ಮತ್ತು ಅವನ ವಂಶ
ಸ್ಥರಾದ ಯೆಹೂದ್ಯರು) ಸಿಂಹದ ಮರಿಯೇ (ಅಂದರೆ ಪರಾಕ್ರಮವುಳ್ಳವನೇ)!
ಶೀಲೋ (ಅಂದರೆ ಸಮಾಧಾನದ ಅರಸನು) ಬರುವ ಪರ್ಯಂತ (ರಾಜತ್ವದ)

---

1) 15ನೇ ಪಾನು. 2) ಯೆಶಾ. 11. 3) ಯೆರೆಮಿಾ. 39, 3. 13; ಸಂಸ್ಕೃತ ಗ್ರಂಥ
ಗಳಲ್ಲಿ (ಭವಿಷ್ಯಪುರಾಣ, ವಿಷ್ಣುಪುರಾಣ, ವರಾಹಮಿಹಿರನ ಬೃಹಜ್ಜಾತಕಗಳಲ್ಲಿ) ಸಹ ಮಗಾಃ
(ಮಗರು) ಎನ್ನಿಸುತ್ತಾರೆ. 4) ಮತ್ತಾ. 2.

ಕೋಲು ಯೆಹೂದನಿಂದಲೂ ಮುದ್ರೆಕೋಲು ಅವನ ಕಾಲುಗಳ ನಡುವೆಯಿಂದಲೂ ತೊಲಗದು; ಜನಾಂಗಗಳ ವಿಧೇಯತ್ವವು ಅವನದೇ[1]!—ಬಳಿಕ ದೇವರು ಹೆಚ್ಚು ವಿವರವನ್ನು ತಿಳಿಸಿದ್ದನು; ಏನಂದರೆ—ದಾವೀದನೆಂಬ ಪ್ರಾಚೀನ ಯೆಹೂದ್ಯ ರಾಜನ ಗೋತ್ರದ ಒಬ್ಬ ಕನ್ಯೆಯಿಂದ[2] ಯೆಹೂದ್ಯ ಶೀಮೆಯ ಬೆತ್ಲೆಹೇಮೆಂಬ ಪಟ್ಣದಲ್ಲಿ ಆ ರಾಜನು ಹುಟ್ಟುವನು[3]; ಅದಲ್ಲದೆ ಆ ರಾಜನು ಯೆಹೂದ್ಯರಿಗೆ ಮಾತ್ರವಲ್ಲ ಸರ್ವ ಭೂಲೋಕಕ್ಕೆ ಬೆಳಕೂ ರಕ್ಷಕನೂ ಆಗಿ[4], ಸಕಲ ಮನುಷ್ಯರ ಪಾಪಕ್ಕೆ ಶ್ರಮೆ ಪಟ್ಟು, ಸತ್ತು, ಹೀಗೆ ಅವರಿಗೆ ಸಮಾಧಾನವನ್ನು ಉತ್ಪಾದಿಸಿ ಕೊಡುವನು[5]; ಯೆಹೂದ್ಯರು ಸೋತು ಹೋಗ ಬೇಕಾದ ಬಬೆಲು ದೇಶದ ಅರ್ತಷಷ್ಟನೆಂಬ ಅರಸನು ಇಂದಿಗೆ 2313 ವರುಷ ಮುಂಚೆ ಅವರಿಗೆ, ಯೆರೂಸಲೇಮನ್ನು ತಿರಿಗಿ ಕಟ್ಟರೆಂತ, ಆಜ್ಞಾಪಿಸಿದ[6] ಮೇಲೆ 69ನೇ ವರುಷವಾರವು ಅಂದರೆ 475ನೇ ಸಾಧಾರಣ ವರುಷಕ್ಕೂ 483ನೇದಕ್ಕೂ ನಡುವೆಯಾದ್ದೊಂದು ವರುಷವು ಬಂದು ನಡೆಯುವಾಗಲೂ[7] ಅವರ ವಂಶದಿಂದ ರಾಜತ್ವವು ತಪ್ಪಿ ಹೋಗುತ್ತಲೇ ಇರುವಾಗಲೂ ಆ ರಾಜನು ಬೈಲಿಗಿಳಿದು ಬರುವನು[8].—ಈ ದೇವವಾಗ್ದತ್ತಗಳನ್ನು ಯೆಹೂದ್ಯರೂ ಇವರ ಪಕ್ಷಕರೂ ಮೆಸೊಪೊತಮಿಯ, ಬಬೆಲು, ಅರಬಿಸ್ಥಾನ, ಪಾರ್ಶಿಸ್ಥಾನ, ಮೇದಿಯ, ಪಾರ್ಥಿಯ, ಐಥಿಯೊಪಿಯ, ಹಿಂದು ದೇಶ ಇತ್ಯಾದಿ ರೋಮಿಾಯ ಸಾಮ್ರಾಜ್ಯದ ಹೊರಗಿನ ದೇಶಗಳಲ್ಲಿಯೂ ಐಗುಪ್ತ, ಲಿಬುಯ (ಕೂರೇನೆ), ಸುರಿಯ, ಸಣ್ಣ ಅಸಿಯ, ಗ್ರೇಕಿಯ, ಈತಲಿಯ ಇತ್ಯಾದಿ ರೋಮಿಾಯ ಸಾಮ್ರಾಜ್ಯದೊಳಗಿನ ಎಲ್ಲಾ ದೇಶಗಳಲ್ಲಿಯೂ[9] ಸಾರುತ್ತಾ ಬಂದಿದ್ದರು. ಅದಲ್ಲದೆ ಆ ದೇವವಾಗ್ದತ್ತಗಳು ಯೆಹೂದ್ಯರ ಭಾಷೆಯಾದ ಎಬ್ರೇಯ ಭಾಷೆಯಲ್ಲಿ ಬರದಿರುವ ಪರಿಶುದ್ಧ ಗ್ರಂಥಗಳು ಇಂದಿಗೆ ಸುಮಾರು 2000 ವರುಷಗಳ ಹಿಂದೆ ಗ್ರೇಕ ಭಾಷಾಂತರ ಮಾಡಿದ್ದು, ಈ ಭಾಷೆಯಲ್ಲಿ ಯೆಹೂದ್ಯರಲ್ಲದವರಿಂದ ಸಹ ಅಧೀತವಾಗುತ್ತಾ ಇದ್ದವು; ಹ್ಯಾಗಂದರೆ ಈ ಗ್ರೇಕ ಭಾಷೆಯು ರೋಮಿಾಯ ಸಾಮ್ರಾಜ್ಯದೊಳಗಿನ ಹೆಚ್ಚು ದೇಶದವರಿಗೆ ತಿಳಿದಿತ್ತು; ಆ ಸಾಮ್ರಾಜ್ಯದ ಹೊರಗೂ ಗ್ರೇಕ ಭಾಷೆ ಬಲ್ಲವರಿದ್ದರೆಂಬಂತೆ ಕಾಣಿಸುತ್ತದೆ[10]. ಈ ವಿಧವಾಗಿ ಈ ವರುಷಕ್ಕೆ ಮುಂಚಿನ 1868ನೇದರಲ್ಲಿ ಯೆಹೂದ್ಯರೂ ಅವರ ಪಕ್ಷಾವಲಂಬಿಗಳೂ ಮಾತ್ರವಲ್ಲ

1) 1 ಮೋಶೆ 49, 9—10; ಯೆಶಾ. 9, 6; ಪ್ರಕಟ. 5, 5. 2) ಯೆಶಾ. 7, 14; 11, 1. 10; ಮತ್ತಾ. 1, 22. 23; ಅಪೊ. ಕ್ರಿ· 13, 23. 3) ಮಿಕ. 5, 2; ಮತ್ತಾ. 2, 4—6. 4) ಯೆಶಾ. 49, 6. 5) ಯೆಶಾ. 53. 6) ನೆಹೆ. 2, 5—8. 7) ದನೀಯೇ. 9, 25; (ಒಂದು ವರುಷವಾರಕ್ಕೆ 7 ಸಾಧಾರಣ ವರುಷಗಳು ಬೀಳುತ್ತವೆ). 8) 1 ಮೋಶೆ. 49, 10; ದನೀಯೇ. 9, 25—26. 9) ಅಪೊ. ಕ್ರಿ. 2, 5—11; 15, 21; Lassen IV, 2, pag. 928, note; 7ನೇ ಪಾನು.

10) ಅಪೊ. ಕ್ರಿ. 8, 26—39.

ಅನೇಕ ಮಂದಿ ಮೂರ್ತಿಪೂಜಕರು ಸಹ ಯೆಹೂದ್ಯ ಶೀಮೆಯಿಂದ ಬರುವ ಹಾಗಿರುವ ಒಬ್ಬ ಮಹಾ ಸಂರಕ್ಷಣರಾಜನನ್ನು ಪ್ರತೀಕ್ಷಿಸುವವರಾಗಿದ್ದರು. ಆ ಕಾಲದಲ್ಲಿ ಎಲ್ಲಾ ದಿಕ್ಕಿನ ಯೆಹೂದ್ಯ ಮತಸ್ಥರು ಕೂಡಿ ಒಂದು ಮಹಾ ದೊಡ್ಡ ಸಮೂಹವು; ಹ್ಯಾಗಂದರೆ ರೋವಿಾಯ ಸಾಮ್ರಾಜ್ಯದ ಒಳಗೂ ಹೊರಗೂ ಜಾತಿಯ ಮೇಲೆ ಯೆಹೂದ್ಯರಲ್ಲದ ಅನೇಕಾನೇಕ ಜನರು ಇವರೊಳಗಿನ ಸತ್ಯಕ್ಕೆ ವಿಸ್ಮಯ ಪಟ್ಟು, ಇವರ ಮತ ಶೇರಿದವರಾಗಿದ್ದರು[1]. ಈ ಸಂಗತಿಗೆ ಸೆನೆಕನೆಂಬ ಆ ರೋವಿಾಯ ನೀತಿಶಾಸ್ತ್ರಿಯು[2] ಕೋಪ ಪಟ್ಟು ಬರದದ್ದೇನಂದರೆ—ಸಕಲ ಶೀಮೆಗಳವರು ಆ ಬಹು ಕೆಟ್ಟ ಜನರಾದ ಯೆಹೂದ್ಯರ ಮತವನ್ನು ಅಂಗೀಕರಿಸಿ ಕೊಂಡಿದ್ದಾರೆ, ಇಷ್ಟು ಬಲವನ್ನೇ ಆ ಜನಾಂಗದ ಮತವು ಹೊಂದಿ ಅದೆ; ಸೋತವರು ತಮ್ಮನ್ನು ಗೆದ್ದವರಿಗೆ (ಅಂದರೆ ರೋವಿಾಯರಿಗೆ) ನ್ಯಾಯಪ್ರಮಾಣ ಕೊಟ್ಟಿದ್ದಾರೆಂಬ ಹಾಗಾಗಿದೆ!—ಈ ಪ್ರಕಾರವಾಗಿ ಸೆನೆಕ ಮುಂತಾದ ಆಗಿನ ಹಲವು ಜನ ಮೂರ್ತಿಪೂಜಕ ಪಂಡಿತರು ಯೆಹೂದ್ಯರ ಸನ್ಮತದ ಬಲಕ್ಕೆ ಹೊಟ್ಟೆಕಿಚ್ಚು ಪಡುತ್ತಿದ್ದರು. ಆ ಸನ್ಮತವನ್ನು ಪರಿಚ್ಛೇದನಾದಿ ಪೂರ್ಣ ವಿಧಿಯ ಅಂಗೀಕಾರದಿಂದ ಶೇರಿ ಕೊಂಡಂಥವರು ಗ್ರೇಕ ಭಾಷೆಯಲ್ಲಿ ಪ್ರೊಸೇಲುತರು[3] ಎನ್ನಿಸಿ ಕೊಂಡರು[4]; ಮೂರ್ತಿಪೂಜೆ ಬಿಟ್ಟು ದೇವರ ಹೆಸರನ್ನು ಸನ್ಮಾನಿಸುತ್ತೇವೆ ಇತ್ಯಾದಿ 7 ಮುಖ್ಯ ಪ್ರಮಾಣಗಳಿಗೆ ಮಾತ್ರ[5] ಒಳ ಪಟ್ಟು ಪರಿಚ್ಛೇದನೆ ಹೊಂದದೆ ಆ ಸನ್ಮತವನ್ನು ಶೇರಿ ಕೊಂಡಂಥವರು ಗ್ರೇಕ ಭಾಷೆಯಲ್ಲಿ ಫೊಬೂಮೆನರೆಂತಾಗಲಿ ಸೆಬೊಮೆನರೆಂತಾಗಲಿ[6] ಎನ್ನಿಸಿ ಕೊಂಡರು.

ಈ ವರುಷಕ್ಕೆ ಮುಂಚಿನ 3789ನೇದರಲ್ಲಿಯಾದರೂ ಮೂರ್ತಿಪೂಜಕತ್ವವು ಭೂಮಿಯ ಜನರಲ್ಲಿ ಸರ್ವತ್ರ ಪ್ರಬಲವಾಗಿತ್ತು. ಆಗ ದೇವರು ತನ್ನ ಅಮಿತ ಕೃಪೆಯಿಂದಲೂ ಶೋಧನಾತೀತ ಸುಚಿತ್ತದಿಂದಲೂ ಅಬ್ರಹಾಮನೆಂಬ ಒಬ್ಬ ಪಶುಪಾಲಕನನ್ನು ತನ್ನ ಸೇವೆಗೆ ಪ್ರತ್ಯೇಕಿಸಿ ಕೊಂಡು, ನಿನ್ನಿಂದ ಭೂಮಿಯ ಸರ್ವಕುಲಗಳು ಆಶೀರ್ವಾದ ಹೊಂದುವವೆಂತ, ಅವನಿಗೆ ವಾಗ್ದತ್ತ ಮಾಡಿದನು. ಅಬ್ರಹಾಮನು ದೃಢ ವಿಶ್ವಾಸದವನಾದನು. ಅವನಿಗೀಚೆ ದೇವರು, ಹಿಂದೆ ಸೂಚಿಸಿರುವಂತೆ, ಹೆಚ್ಚು ವಿವರವಾದ ಆಶೀರ್ವಾದದ ವಾಗ್ದತ್ತಗಳನ್ನು ಮಾಡುತ್ತಾ ಬಂದಿದ್ದ

1) ಅಪೊ. ಕ್ರಿ. 2, 9. 2) 15ನೇ ಪಾನು. 3) ಅಥವಾ ನೀತಿಯ ಪ್ರೊಸೇಲುತರು.

4) ಅಪೊ. ಕ್ರಿ. 2, 10; 6, 5. 5) ಅಪೊ. ಕ್ರಿ. 15, 19—20. 29.

6) ಅಥವಾ ಬಾಗಲಿನ ಪ್ರೊಸೇಲುತರು; 5 ಮೋಶೆ. 31, 12. ಫೊಬೂಮೆನರು ಅಂದರೆ (ದೇವರಿಗೆ) ಭಯ ಪಡುವವರು; ಸೆಬೊಮೆನರು ಅಂದರೆ (ದೇವರಿಗೆ) ಸೇವಿಸುವವರು. ಅಪೊ. ಕ್ರಿ. 2, 5; 10, 2; 13, 43; 17, 4; 18, 7.

ಆ ಯೆಹೂದ್ಯರು ಅಬ್ರಹಾಮನ ಸಂತಾನದವರೇ. ಈ ವರುಷಕ್ಕೆ ಮುಂಚಿನ 1868ನೇದರಲ್ಲಿಯ ಯೆಹೂದ್ಯರು ಬಹು ಕಾಂಕ್ಷೆಯಿಂದ ಮೆಸ್ಸೀಯನು[1] ಅಂದರೆ (ರಾಜತ್ವಕ್ಕೆ ಪರಿಶುದ್ಧಾತ್ಮವೆಂಬ ತೈಲದಿಂದ) ಅಭಿಷಿಕ್ತನೆಂಬ ಆ ಸಮಾಧಾನದ ಮಹಾರಾಜನ ದಾರಿ ನೋಡುತ್ತಲೇ ಇದ್ದರು; ಆದರೆ ಅವರಲ್ಲಿ ಹೆಚ್ಚು ಜನರು—ಬೋಧಕರಾದರೇನು? ಬೋಧಕರಲ್ಲದವರಾದರೇನು?—ಆ ಮೆಸ್ಸೀಯನ ಭಾವದ ವಿಷಯವಾಗಿ ಅವಸತ್ಯದ ಆಲೋಚನೆಗಳನ್ನು ಹಿಡುಕೊಂಡಿದ್ದರು. ದೇವರ ಆಲೋಚನೆಯ ಪ್ರಕಾರ ಆ ಮಹಾರಾಜನು ಭೂಲೋಕದಲ್ಲಿ ಪರಲೋಕದ ರಾಜ್ಯವನ್ನು ಸ್ಥಾಪಿಸಲಿಕ್ಕೆ ಬರುವ ಹಾಗೆ ಇದ್ದನು[2]; ಆದರೆ ಆ ಯೆಹೂದ್ಯರು—ಅವನು ದೊಡ್ಡ ಲೌಕಿಕ ರಾಜನಾಗಿ, ರೋಮಾಯರ ಅಧಿಕಾರವೆಂಬ ನೊಗವನ್ನು ತಮ್ಮಿಂದ ತೆಗೆದುಹಾಕುವನೆಂತ, ನೆನಸುತ್ತಾ ಇದ್ದರು. ಹ್ಯಾಗಂದರೆ ಈ ವರುಷಕ್ಕೆ ಮುಂಚಿನ 1931ನೇದರಲ್ಲಿ ಪಲೇಸ್ತೀನವೆಂಬ ಯೆಹೂದ್ಯರ ಪೂರ್ಣ ದೇಶವು ರೋಮಾಯರಿಗೆ ವಶವಾಗಿ, ಕಪ್ಪ ತೆರುವ ಕಟ್ಟಳೆಗೆ ಒಳ ಬಿದ್ದಿತ್ತು; ಅಂದು ಅದರ ಯೆಹೂದ್ಯವಂಶಸ್ಥರಾಜನು ರೋಮಾಯರಿಗೆ ಅಧೀನನಾಗಿದ್ದನು. ಬಳಿಕ 24 ವರುಷಗಳ ಈಚೆ ಅರಸತನದ ಮುದ್ರೆಗೋಲು ಯೆಹೂದ್ಯರಿಗೆ ಹೆಚ್ಚು ತಪ್ಪಿ ಹೋಗಿತ್ತು; ಹ್ಯಾಗಂದರೆ ಆಗ ಇದೂಮೇಯ (ಎದೋಮು) ಎಂಬ ಪರ ಶೀಮೆಯವನಾದ ಹೇರೋದನೆಂಬವನು ಪಲೇಸ್ತೀನ ದೇಶದಲ್ಲಿ ರೋಮಾಯರ ಅಪ್ಪಣೆಯಿಂದ ಸಿಂಹಾಸನಾರೂಢನಾಗಿದ್ದನು. ಇವನು ಪರಿಚ್ಛೇದನೆಯ ಮೇಲೆ ಸಹ ಯೆಹೂದ್ಯ ಮತ ಶೇರಿದವನಾಗಿದ್ದರೂ ಯೆಹೂದ್ಯರ ಮುಖ್ಯ ಪಟ್ಣವಾದ ಯೆರೂಸಲೇಮಿನಲ್ಲಿರುವ ದೇವಾಲಯವನ್ನು ವಿಸ್ತರಿಸುತ್ತಾ ಅಲಂಕರಿಸುತ್ತಾ ಬಂದರೂ[3] ಯೆಹೂದ್ಯರು ಅವನ ಕ್ರೂರತ್ವಕ್ಕಾಗಿ ಅವನಿಗೆ ಬಹಳ ಹಗೆ ಗೊಂಡಿರುತ್ತಿದ್ದರು; ತಾವು ಪ್ರತೀಕ್ಷಿಸುತ್ತಿರುವ ಲೌಕಿಕ ರಕ್ಷಕನ ಮೇಲಿನ ಕಾಂಕ್ಷೆಯು ಹೆಚ್ಚಾಗುತ್ತಲೇ ಇತ್ತು. ಆಗಿನ ಕಾಲದ ಹೆಚ್ಚು ಮಂದಿ ಯೆಹೂದ್ಯರಿಗೆ ತಮಗೆ ವಾಗ್ದತ್ತ ಮಾಡಿದ್ದ ಮೆಸ್ಸೀಯನ ನಿಜಜ್ಞಾನವು ಆ ವಿಧವಾಗಿ ತಪ್ಪಿ ಹೋಗಿದ್ದದ್ದಲ್ಲದೆ ಅವರ ಪಿತೃಗಳ ಹೃದ್ಭಕ್ತಿಯು ಅವರೊಳಗೆ ಬಹಳ ಕಡಿಮೆಯಾಗಿತ್ತು. ದೇವರ ನ್ಯಾಯಪ್ರಮಾಣವು ಅವರ ಗ್ರಂಥಗಳಲ್ಲಿಯೂ ತಲೆಯೊಳಗೂ ಬಾಯಿಯಲ್ಲಿಯೂ ಇನ್ನೂ ಇದ್ದರೂ ಅದು ಹೆಚ್ಚು ಜನರ ಹೃದಯದೊಳಗಿಂದ ಹೊರಟು ಹೋಗಿತ್ತು. ದೇವರು ತಮಗೆ ಕೊಟ್ಟ ನ್ಯಾಯಪ್ರಮಾಣದ ಬೆಳಕಿನಲ್ಲಿ ತಾವು ಉಳಿದೆಲ್ಲಾ ಮನುಷ್ಯರ ಹಾಗೆ ತಮಗೂ ಇರುವ ತಮ್ಮ ದೊಡ್ಡ ಪಾಪಿಷ್ಠತ್ವವನ್ನು ತಿಳುಕೊಂಡು, ಲೋಕದ ಪಾಪವಿ

---

1) ಕೀರ್ತನೆ. 45, 7; ಯೆಶಾ. 61, 1; ಯೋಹಾ. 1, 41; 4, 25. 2) ಮರ್ಕ. 1, 15; ಲೂಕ. 6, 20; 17, 20—21; ಯೋಹಾ. 18, 36. 3) ಯೋಹಾ. 2, 20.

ಮೋಚನಕ್ಕಾಗಿ ಬಂದು ಸಾಯಲಿಕ್ಕಿರುವಂಥ ಆ ಆತ್ಮಸಮಾಧಾನಕರ ರಾಜನ ಆಗಮನಕ್ಕೆ ಆ ಪ್ರಕಾರ ಹೆಚ್ಚು ಹೆಚ್ಚು ಆಶೆ ಗೊಳ್ಳ ಬೇಕು[1] ಎಂಬ ನ್ಯಾಯವನ್ನು ಬಹಳ ಮಂದಿಯು ಕಳೆದು ಬಿಟ್ಟ ಕಾರಣದಿಂದ ತಮ್ಮ ಪಾಪತ್ವವನ್ನೂ ಆತ್ಮಿಕ ನಿರ್ಬಲತ್ವವನ್ನೂ ನೋಡಲಿಕ್ಕೆ ಕಣ್ಣಿಲ್ಲದವರಾಗಿ, ತಮ್ಮ ಕ್ರಿಯಾಭಿಮಾನದಿಂದಲೂ ತಾವು ಅಬ್ರಹಾಮನ ಸಂತಾನದವರಾಗಿ ಸಕಲ ಭೂಜನರಿಗಿಂತ ಹೆಚ್ಚಿನವರಾಗಿದ್ಧೇವೆಂಬ ಹೆಡ್ಡ ಸೊಕ್ಕಿನಿಂದಲೂ ಮರುಳಾಗಿದ್ದರು; ತಮ್ಮ ದೊಡ್ಡ ಪ್ರವಾದಿಯಾದ ಯೆಶಾಯನು, ಸ್ವನೀತಿಯು ಒಂದು ಮಲಿನ ವಸ್ತ್ರವೇ! ಎಂದು, ಹೇಳಿದ ವಾಕ್ಯದ[2] ಅರ್ಥವು ಹೆಚ್ಚು ಮಂದಿಯಲ್ಲಿ ಕಿಂಚಿತ್ತೂ ಉಳಿದಿರಲಿಲ್ಲ. ಅನೇಕರು, ತಾವು ದೇವರ ನ್ಯಾಯಪ್ರಮಾಣವನ್ನು ಏನೂ ಕುಂದಿಲ್ಲದೆ ಕೈಕೊಂಡು ದೇವರ ಮುಂದೆ ನೀತಿವಂತರಾಗಿರ ಬಹುದೆಂದು, ಭಾವಿಸಿ ಕೊಳ್ಳುತ್ತಿದ್ದದ್ದಲ್ಲದೆ, ತಾವು ಆ ನ್ಯಾಯ ಪ್ರಮಾಣಕ್ಕೆ ಕೂಡಿಸಿ ಕೊಂಡಿದ್ದ ಸ್ನಾನ ದಾನ ಜಪಾದಿ ನಾನಾ ಬಹಿರಾಚಾರಗಳಿಂದ ಇನ್ನು ಅತಿಶಯವಾದ ನೀತಿಯನ್ನು ಘಳಿಸಿ ಕೊಳ್ಳ ಬಹುದೆಂಬಂತೆ ಸಹ ಭಾವಿಸಿ ಕೊಳ್ಳುತ್ತಿದ್ದರು; ಇಷ್ಟು ಮರುಳುತನವಾದರೂ ಅವರೊಳಗೆ ಹುಟ್ಟಿತ್ತು. ಈ ಸಕಲ ಅತ್ಯಯೋಗ್ಯವಾದ ಭಾವಾರ್ಥಕ್ಕೆ ಯೆಹೂದ್ಯತ್ವವೆಂಬ ಹೆಸರು. ಅಷ್ಟರಲ್ಲಿ ಈ ವರುಷಕ್ಕೆ ಮುಂಚಿನ 1868ನೇದರ ಆ ಯೆಹೂದ್ಯರಲ್ಲಿ ಬಹಳ ಜನರು ಪೂರಾ ನೀತಿಮಾರ್ಗ ಗೆಟ್ಟವರೇ ಆಗಿದ್ದರು. ಆ ವರುಷಕ್ಕೆ ಈಚೆ 36 ವರುಷ ಹೋದ ಬಳಿಕ, ಯೆಹೂದ್ಯ ಯಾಜಕರ ಮಕ್ಕಬೇಯವೆಂಬದೊಂದು ಕುಟುಂಬದಲ್ಲಿ ಹುಟ್ಟಿದ ಯೋಸೇಫನೆಂಬ ಕೀರ್ತ್ಯ ಚರಿತ್ರಗಾರನು ತನ್ನ ಕಾಲದ ಯೆಹೂದ್ಯರನ್ನು ಕುರಿತು ನಿರ್ಣಯ ಮಾಡಿ ಬರದದ್ದೇನಂದರೆ—ಯೆಹೂದ್ಯರಿಗೆ ಈಗ ಇರುವದಕ್ಕಿಂತ ಹೆಚ್ಚು ಭೀಕರವಾದ ದುಷ್ಟತ್ವವು ಇದ್ದ ಒಂದು ಮನುಷ್ಯವಂಶವೂ ಲೋಕೋತ್ಪತ್ತಿಯಿಂದಲೇ ಎಂದೂ ಇರಲಿಲ್ಲ!—ಹೆಚ್ಚು ಮಂದಿ ಯೆಹೂದ್ಯರು, ತಮಗೆ ಆತ್ಮರಕ್ಷಕನಾಗುವಂಥ ಮೆಸ್ಸೀಯನು ಬೇಕಾಗುವದಿಲ್ಲವೆಂತ, ನೆನಸುತ್ತಿದ್ದರೂ ಅಂಥಾ ರಕ್ಷಕನೇ ಆಗಲೇ ಅವರೆಲ್ಲರಿಗೂ ಅಗತ್ಯವಾಗಿ ಬೇಕಾಗುವ ಹಾಗೆ ಇತ್ತು; ಆ ಯೆಹೂದ್ಯ ಜನಾಂಗವು ತನ್ನ ಗರ್ವದಿಂದ ಬೇರು ಧರಿಸಲೇ ಕೆಟ್ಟು ಹೋಗುವ ಕಂಟಕವೇ ಒದಗಿತ್ತು. ಆತ್ಮಕುರುಡರಾದ ಬಹು ಕೆಟ್ಟ ಗುರುಗಳು ಆ ಜನಾಂಗಕ್ಕೆ ಇರುವದರಿಂದ ಅದರ ಸ್ಥಿತಿಗತಿಯು ಮತ್ತಷ್ಟು ಕಂಟಕಕರವಾದದ್ದು. ಹ್ಯಾಗಂದರೆ ಫರಿಸಾಯರೆಂಬ ಒಂದು ತರದ ಗುರುಗಳು ಅದರ ಗರ್ವವನ್ನು ಸಾಕುತ್ತಲೇ ಇದ್ದರು; ಸದ್ದುಕಾಯರೆಂಬ ಮತ್ತೊಂದು ತರದವರು, ದೇವರ ಲೋಕಪಾಲನವೂ ಸತ್ತವರ ಪುನರುತ್ಥಾನವೂ ದೇವದೂತರೂ ಮುಕ್ತಾತ್ಮರ ಲೋಕವೂ ಆತ್ಮವಾದರೂ ಸಹ ಇಲ್ಲ!

1) ಗಲಾತ್ಯ. 3, 21—26. 2) ಯೆಶಾ. 53, 6; 64, 6.

ಎಂತ, ಬೋಧಿಸುತ್ತಾ[1], ಅದರ ಅಸ್ತಿಕತ್ವವನ್ನು ಕೀಳುತ್ತಾ, ನಾಸ್ತಿಕತ್ವವನ್ನು ನೆಡುತ್ತಾ ಇದ್ದರು. ಸಾಧಾರಣ ಸ್ಥಿತಿಯವರಾದ ಹೆಚ್ಚು ಜನರು ಫರಿಸಾಯರ ಪಕ್ಷದವರಾಗಿದ್ದರು; ಉಳಿದವರು ಸದ್ದುಕಾಯರ ಹಿಂಬಾಲಕರು.

## 2. ಪಲೇಸ್ತೀನದಲ್ಲಿ ಕ್ರೈಸ್ತ ಸಭೆಯು ಸ್ಥಾಪಿತವಾದದ್ದು.

ಈ ವರುಷಕ್ಕೆ ಮುಂಚಿನ ಆ 1868ನೇ ವರುಷದಲ್ಲಿ ಯೆಹೂದ್ಯರಾಗಲಿ ಪರ ಜನರೆಂಬ ಯೆಹೂದ್ಯ ಮತಸ್ಥರಲ್ಲದವರಾಗಲಿ ಹಿಂದೆ ಸಂಕ್ಷೇಪವಾಗಿ ವಿವರಿಸಿರುವಷ್ಟು ಕೆಟ್ಟ ಸ್ಥಿತಿಯಲ್ಲಿದ್ದು[2] ಅವ್ಯಜಗವಾಶ್ವಪುರುಷಾದಿಮೇಧ ಸಹ ಮಾಡಿ[3] ಬಯಸಿದ ಹೃಚ್ಛಾಂತಿ ಹೊಂದದೆ ತೊಳಲಿ ಬಳಲಿ ಷಡ್ದರ್ಶನಾದಿ ವಿದ್ಯೆ ಮುಂತಾದ್ದರ[4] ಶುಷ್ಕವಾದ ಆಹಾರ ನುಂಗಿ ಕೊಳ್ಳುತ್ತಿರುವ ಆ ಸಮಯದಲ್ಲಿಯೂ, ಅವರೂ ಇವರೂ ದೇವರಿಂದ ಪ್ರೇರಿತರಾಗಿ ಒಬ್ಬ ರಕ್ಷಕನನ್ನು ಪ್ರತೀಕ್ಷಿಸಿ ಕೊಳ್ಳುತ್ತಿರುವ ಆ ಸಮಯದಲ್ಲಿಯೂ[5], ಒಕ್ತಾವಿಯಾನ ಔಗುಸ್ತನೆಂಬ ಮೊದಲಿನ ಕೈಸರನು[6] ರೋಮೀಯ ಸಾಮ್ರಾಜ್ಯವನ್ನು ಆಳುತ್ತಿರುವ ಆ ಸಮಯದಲ್ಲಿಯೂ, ಈ ಕೈಸರನ ಘಟ್ಟಿಗತನದಿಂದ ಸರ್ವ ರೋಮೀಯ ಸಾಮ್ರಾಜ್ಯದೊಳಗೆ ಬಹಿಃಸಮಾಧಾನವಾಗಿ ಪ್ರಜೆಯ ಮನಸ್ಸು ಯುದ್ಧ ಕಲಹಗಳಿಂದ ಗಲಿಬಿಲಿ ಪಡದಿರುವ ಆ ಸಮಯದಲ್ಲಿಯೂ, ಒಂದು ಸುವಾರ್ತೆಯನ್ನು ಸ್ವಲ್ಪ ಕಾಲದಲ್ಲಿ ಸಮಸ್ತ ಸಾಮ್ರಾಜ್ಯದ ಮೇಲೆ ಹಬ್ಬಿಸಲಿಕ್ಕೆ ನಾನಾ ಚಂದ ರಾಜಮಾರ್ಗಗಳು ಕಟ್ಟಿರುವದಲ್ಲದೆ ಸಾಮ್ರಾಜ್ಯದ ಪೂರ್ವ ಭಾಗದಲ್ಲಿ ಗ್ರೇಕ ಭಾಷೆಯು ಅದರ ಪಶ್ಚಿಮ ಭಾಗದಲ್ಲಿ ಲತೀನ ಭಾಷೆಯು ಸರ್ವತ್ರವೇ ನಡೆಯುತ್ತಿರುವ ಆ ಸಮಯದಲ್ಲಿಯೂ, ಮೆಸ್ಸೀಯನು ತನ್ನ ಪುಣ್ಯ ಕಾರ್ಯವನ್ನು ಬೈಲಿಗಿಳಿದು ತೊಡಗಿಸ ಬೇಕಾದ್ದಕ್ಕೆ 30 ವರುಷ ಮುಂಚೆ ಆದ ಆ ಸಮಯದಲ್ಲಿಯೂ[7], ಇದೂಮೇಯವೆಂಬ ಪರ ಶೀಮೆಯವನಾದ ಹೇರೋದನು ಪಲೇಸ್ತೀನ ದೇಶದಲ್ಲಿ ರಾಜನಾಗಿರುವಷ್ಟರ ಮಟ್ಟಿಗಾದರೂ ರಾಜತ್ವವು ಯೆಹೂದ್ಯರನ್ನು ತೊಲಗಿ ಬಿಟ್ಟ ಆ ಸಮಯದಲ್ಲಿಯೂ[8], ಕೈಸರನು ಪಲೇಸ್ತೀನಕ್ಕೆ ನೆರೆಯಾದ ಸುರಿಯ ದೇಶದಲ್ಲಿರುವ ತನ್ನ ಸೇನಾಧಿಪತಿಯಾದ ಕುರೇನ್ಯನಿಂದ (ಕ್ವಿರೀನನಿಂದ) ಮೊದಲಿನ ಸರ್ತಿ ಪಲೇಸ್ತೀನದವರ ಲೆಖ್ಖವ ಬರೆಸುವದರಿಂದ ದಾವೀದನೆಂಬ ಪ್ರಾಚೀನ ರಾಜನ ಮನೆಯವರೂ ಕುಟುಂಬದವರೂ ಆ ಬೆತ್ಲೆಹೇಮೆಂಬ

---

1) ಅಪೊ. ಕ್ರಿ. 23, 8. 2) 8ನೇದು ಮುಂತಾದ ಪಾನುಗಳು; 20ನೇದಾದಿ. 3) 9ನೇ ಪಾನು. 4) 10ನೇದು ಮುಂತಾದ ಪಾನುಗಳು. 5) 16ನೇದು ಮುಂತಾದ ಪಾನುಗಳು; 20ನೇದು. 6) 15ನೇ, 17ನೇ ಪಾನುಗಳು. 7) 18ನೇ ಪಾನು. 8) 18ನೇ ಪಾನು.

ದಾವೀದನ ಪಟ್ಣಕ್ಕೆ ಹೋಗಿರುವ ಆ ಸಮಯದಲ್ಲಿಯೂ[1]—ಹಿಂದೆ ಹೇಳಿದ ಎಂಟು ವಿಶೇಷ ಲಕ್ಷಣಗಳುಳ್ಳ ಆ ಸಮಯದಲ್ಲಿಯೇ ಕಾಲಪೂರ್ಣತೆಯು ಒದಗಿತ್ತು[2]; ದೇವರಾದ ಯೆಹೋವನು, ತಾನು ಮುಂತಿಳಿಸಿದ್ದಂತೆ, ಆ ಸಮಯದಲ್ಲಿಯೇ, ತನ್ನ ವಾಗ್ದತ್ತಗಳನ್ನು ಮುಟ್ಟಿಸುತ್ತೇನೆಂತ, ಯೆಹೂದ್ಯರಲ್ಲಿಯೂ ಹಿಂದು ಮೊದಲಾದ ಅನ್ಯ ಜನರಲ್ಲಿಯೂ ಪರಿಕೀರ್ತಿತವಾದ[3] ತನ್ನ ಅನಾದಿವಾಕ್ಯೂ ರಾಜಾಧಿರಾಜನೂ ಆದ ಕುಮಾರನನ್ನು ಅವತರಿಸ ಮಾಡಿ, ಯೆಹೂದ್ಯ ಶೀಮೆಯ ಬೆತ್ಲೆಹೇಮೆಂಬ ಆ ಪಟ್ಣದಲ್ಲಿ ದಾವೀದ ರಾಜನ ಗೋತ್ರದವಳಾದ ಮರಿಯಳೆಂಬ ಒಬ್ಬ ಕನ್ಯೆಯಿಂದಲೇ ಅವನನ್ನು ಮನುಷ್ಯನಾಗಿ ಜನ್ಮಿಸ ಮಾಡಿದನು[4]. ಆ ಅವತಾರಪುರುಷನು ಕ್ರಿಸ್ತನು ಅಂದರೆ (ಪರಿಶುದ್ಧ ಆತ್ಮದಿಂದ) ಘೃಷ್ಟನಾದ (ಅಂದರೆ ಅಭಿಷಿಕ್ತನಾದ) ಯೇಸುವು ಅಂದರೆ ರಕ್ಷಕನು ಎನ್ನಿಸಿ ಕೊಳ್ಳುವವನಾದನು. ಕ್ರಿಸ್ತನೆಂಬದು ಗ್ರೇಕ ಭಾಷೆಯದು, ಮೆಸ್ಸೀಯನೆಂಬದು ಎಬ್ರೀಯ ಭಾಷೆಯದು; ಅವೆರಡಕ್ಕೂ ಅಭಿಷಿಕ್ತನೆಂಬ ಅರ್ಥವು. ದೇವರ ಅನಾದಿವಾಕ್ಯವು ಅವತಾರವಾಗಿ, ಯೇಸುವು ಎನ್ನಿಸಿ ಕೊಂಡಂದೇ ಈಸಿವಿ (ಯೇಸುವಿ) ಶಕವೆಂತಾಗಲಿ ಕ್ರಿಸ್ತಶಕವೆಂತಾಗಲಿ ಹೆಸರಿರುವ ಶಕವು ಉತ್ಪನ್ನವಾಯಿತು; ಈಗ ಅದರ 1868ನೇ ವರುಷ[5] ನಡೆಯುತ್ತದೆ.

ವಿಶ್ವೋಪಾಸ್ಯನಾದ ಯೇಸುವಿನ ಸಾಕುತಂದೆಯು ತನ್ನ ಜೋಕೆಗೆ ಒಪ್ಪಿಸಿರುವ ಆ ಎಳೇ ಶಿಶುವನ್ನು ಹೇರೋದ ರಾಯನ ಹೊಟ್ಟೆಕಿಚ್ಚಿಗೆ ತಪ್ಪಿಸಲಿಕ್ಕೆ ಅದನ್ನು ತಕ್ಕೊಂಡು ಹೊರಟು, ಐಗುಪ್ತ ದೇಶಕ್ಕೆ ಹೋದನು. ಈ ಸಂಗತಿಯನ್ನು ಒಬ್ಬ ದೇವಪ್ರವಾದಿಯು ಅಂದಿಗೆ 740 ವರುಷಗಳ ಮುಂಚೆ ತಿಳಿಸಿದ್ದನು[6]. ಯೇಸು ಅಲ್ಲಿ ಸುಮಾರು ಒಂದೆರಡು ವರುಷದವನಾದಾಗ ಆ ದುಷ್ಟ ರಾಯನು ತನ್ನ ಆಳ್ವಿಕೆಯ 37ನೇ ವರುಷದಲ್ಲಿ ಒಂದು ಮಹಾಭಯಂಕರವಾದ ಕೊಳಕುರೋಗದಿಂದ (ಯೂಕವ್ಯಾಧಿ ಎಂಬದರಿಂದ) ಸತ್ತನು; ಬಳಿಕ ಒಕ್ತಾವಿಯಾನ ಔಗುಸ್ತನೆಂಬ ಕೈಸರನ ಅಪ್ಪಣೆಯ ಮೇಲೆ ಹೇರೋದನ 3 ಕುಮಾರರು ಅವನ ಉತ್ತರಾಧಿಕಾರಿಗಳಾದರು. ಈ ಕುಮಾರರು ಯಾರಂದರೆ—ಅರ್ಖೆಲಾವನು, ಫಿಲಿಪ್ಪನು, ಹೇರೋದ ಅಂತಿಪನು ಎಂತ, ಈ ಮೂವರು. ಅಂದು ಏಳು ಮುಖ್ಯ ಶೀಮೆಗಳುಳ್ಳ ಆ ಪಲೇಸ್ತೀನ ರಾಜ್ಯವು ಪಾಲಾದ್ದು ಹ್ಯಾಗಂದರೆ—ಹೇರೋದನ ಆ ಕುಮಾರರಲ್ಲಿ ಅರ್ಖೆಲಾವನೆಂಬವನು ಯೆಹೂದದಲ್ಲಿಯೂ ಸಮರೀಯದಲ್ಲಿಯೂ ಇದೂಮೇಯದಲ್ಲಿಯೂ[7], ಫಿಲಿಪ್ಪನೆಂ

---

1) 18ನೇ ಪಾನು. 2) ಮರ್ಕ. 1, 14; ಗಲಾತ್ಯ. 4, 4. 3) 1ಮೋಶೆ. 1; ಕೀರ್ತನೆ. 33, 6; A. Weber's Indische Studien IV, p. 473 seq. 4) ಯೋಹಾ. 1, 1—14. ಮತ್ತಾ. 1, 1—25; 2, 1; ಲೂಕ. 2, 1—7. 5) 7ನೇ ಪಾನು. 6) ಹೋಶೇಯ. 11, 1. 7) ಮತ್ತಾ. 2, 22; ಮರ್ಕ. 3, 8; 20ನೇ ಪಾನು ನೋಡು.

ಬವನು ಇತುರೇಯದಲ್ಲಿಯೂ ತ್ರಖೋನಿತಿಯಲ್ಲಿಯೂ, ಹೇರೋದ ಅಂತಿಪನೆಂಬ
ವನು ಗಲಿಲಾಯದಲ್ಲಿಯೂ[1] ಪೆರೇಯದಲ್ಲಿಯೂ ಆಳುವವನಾದನು[2]. ಆ ಸ
ಮಯದಲ್ಲಿ ಯೇಸುವಿನ ಸಾಕುತಂದೆಯು ಯೇಸುವನ್ನು ತಿರಿಗಿ ತಕ್ಕೊಂಡು ಬಂ
ದು, ಗಲಿಲಾಯ ನಾಡಿನಲ್ಲಿರುವ ನಾಜರೇಥೆಂಬ ಪಟ್ಟದಲ್ಲಿ ವಾಸ ಮಾಡುವವನಾ
ದನು. ಅಲ್ಲಿ ಯೇಸುವು ಅಂದಿನಿಂದ ತನ್ನ ಜೀವಿತದ 30ನೇ ವರುಷದ ವರೆಗೆ ಇದ್ದ
ದರಿಂದಲೂ[3] ತದನಂತರ ಅಲ್ಲಿ ಬಹಳ ಪ್ರಸಂಗಿಸುತ್ತಾ ಅನೇಕ ಶಿಷ್ಯರನ್ನು ಮಾಡಿ
ಕೊಳ್ಳುತ್ತಾ ಇದ್ದದರಿಂದಲೂ ಅವನಿಗೆ ಹಿಂದಗಡೆ ನಾಜರೇನನೆಂಬ ಹೆಸರೂ ಗಲಿ
ಲಾಯನೆಂಬ ಹೆಸರೂ ಬಂತು; ಆ ನಾಡೂ ಆ ಪಟ್ಟವೂ ಕೀರ್ತಿಗೊಂಡಂಥವು ಅಲ್ಲ
ದಿದ್ದದರಿಂದ[4] ಅವನ ಶತ್ರುಗಳೂ ಅವನ ಶಿಷ್ಯರ ಶತ್ರುಗಳೂ ಮುಖ್ಯವಾಗಿ ಆ ಎರ
ಡು ಹೆಸರು ಹೇಳುವವರಾದರು[5]. ಕ್ರಿಸ್ತಶಕದ 8ನೇ ವರುಷದಲ್ಲಿ ಕೈಸರನು ಆ ಕ್ರೂ
ರ ಅರ್ಖೆಲಾವನ ಅಧಿಕಾರವ ತೆಗದು, ಅವನನ್ನು ಗಲ್ಲಿಯ ದೇಶದ ವಿಯೆನೆಂಬ ಪಟ್ಟ
ಕ್ಕೆ ಗಡಿ ದಾಟಿಸಿ ಕಳುಹಿಸಿ, ಅವನು ಆಳಿದ್ದ 3 ಪ್ರದೇಶಗಳ ಮೇಲೆ ಒಬ್ಬ ರೋಮಾ
ಯ ಪ್ರತಿನಿಧಿಯನ್ನು ನೇಮಿಸಿಟ್ಟನು; ಇವನು ಪಲೇಸ್ತೀನಕ್ಕೆ ನೆರೆದೇಶವಾದ ಸುರಿ
ಯದ ರಾಜಧಾನಿಯಾದ ಅಂತಿಯೊಖೀಯ ಪಟ್ಟದಲ್ಲಿಯಣ ರೋಮಾಯ ಪ್ರ
ಧಾನ ಪ್ರತಿನಿಧಿಯ ಕೈಯ ಕೆಳಗೆ ಕಾರುಭಾರು ಮಾಡಲಪ್ಪಣೆಯಾಯಿತು. ಅರ್ಖೆ
ಲಾವನಿದ್ದ ಆ ಪ್ರದೇಶಗಳಲ್ಲಿ ನಾಲ್ವರು ಅಂಥ ಪ್ರತಿನಿಧಿಗಳು ಇದ್ದ ಈಚೆ ಕ್ರಿಸ್ತಶ
ಕದ 27ನೇ ವರುಷದಲ್ಲಿ ಪೊಂತಿಯ ಪೀಲಾತನೆಂಬವನು ಅಲ್ಲಿ ಪ್ರತಿನಿಧಿಯಾದನು;
ಇವನು ಬಹಳ ಅನ್ಯಾಯದಿಂದ ಆಳುವಂಥವನು. ತನ್ಮಧ್ಯದಲ್ಲಿ ಕ್ರಿಸ್ತಶಕದ 14ನೇ
ವರುಷದಲ್ಲಿ ಒಕ್ತಾವಿಯಾನ ಔಗುಸ್ತ ಕೈಸರನು ಸಾಯಲಾಗಿ, ಇವನ ರಾಣಿಯ
ಮುಂಚಿನ ಗಂಡನ ಮಗನಾದ ತಿಬೆರಿಯನೆಂಬವನು ಕೈಸರನಾಗಿದ್ದನು. ಇವನ ಆ
ಳುವಿಕೆಯ 15ನೇ ವರುಷದಲ್ಲಿ ಅಂದರೆ ಕ್ರಿಸ್ತಶಕದ 29ನೇದರಲ್ಲಿ[6] ಯೋಹಾನನೆಂ
ಬ ದೊಡ್ಡ ಪ್ರವಾದಿಯು ದೇವರ ಪೂರ್ವ ಪ್ರವಾದನೆಯ ಮೇರೆಗೆ[7] ಮಾನಸಾಂ
ತರದ ಪ್ರಸಂಗ ಸ್ನಾನಗಳಿಂದ ಯೇಸು ಕ್ರಿಸ್ತನ ಬಹಿರ್ವೃತ್ತಿಗೆ[8] ಮಾರ್ಗವನ್ನು ಸಿದ್ಧ
ಮಾಡಲಿಕ್ಕೆ ಹತ್ತಿದನು. ಮರುವರುಷದಲ್ಲಿ ಅಂದರೆ ತನ್ನ ಜೀವಿತದ 30ನೇದರಲ್ಲಿ
ಯೇಸುವು ತನ್ನ ರಕ್ಷಣಕಾರ್ಯವನ್ನು ಬಹಿರಂಗದಲ್ಲಿ ನಡಿಸುವವನಾಗಿ, ತಾನು
ತನ್ನ ಬೇರೆ ಶಿಷ್ಯರೊಳಗೆ ಆರಿಸಿ ಕೊಂಡ ಗಲಿಲಾಯರಾದ 12 ಮಂದಿ ಮುಖ್ಯ
ಶಿಷ್ಯರೊಂದಿಗೆ ಪಲೇಸ್ತೀನದಲ್ಲಿ ಸಂಚರಿಸುತ್ತಾ, ಯೆಹೂದ್ಯರಿಗೂ ಕಾಲಕಾಲಕ್ಕೆ

---

1) ಲೂಕ. 23, 6—12. 2) ಲೂಕ. 3, 1. 3) ಲೂಕ. 4, 16; 3, 23.
4) ಯೋಹಾ. 1, 46—47; 7, 52. 5) ಲೂಕ. 22, 59; 23, 5—6. ಅಪೊ. ಕ್ರಿ. 24, 5.
6) ಲೂಕ. 3, 1—2. 7) ಯೆಶಾ. 40, 3. 8) 18ನೇ, 22ನೇ ಪಾನುಗಳು.

ಯೆಹೂದ್ಯರಲ್ಲದವರಿಗೂ[1] ಬೋಧನೆ ಹೇಳುತ್ತಾ, ಆದರ ಕೊಡುತ್ತಾ, ರೋಗಿಷ್ಠರನ್ನು ಸ್ವಸ್ಥ ಮಾಡುತ್ತಾ, ದೆವ್ವಗಳನ್ನು ಹೊರಡಿಸುತ್ತಾ, ಸತ್ತವರನ್ನು ಎಬ್ಬಿಸುತ್ತಾ ಬಂದನು. ಅವನು ಇದ್ದ ಎಲ್ಲಾ ಸ್ಥಳಗಳಲ್ಲಿ ಏನಾಯಿತಂದರೆ, ಪಿತೃದೇವರಿಂದ ಒಬ್ಬನೇ ಹುಟ್ಟಿದವನ ಮಹಿಮೆಯಾಗಿ ಅವನ ಮಹಿಮೆಯು ಸತ್ಯವಂತರಿಗೆ ಗೋಚರವಾಗುತ್ತಾ ಇತ್ತು[2]. ಫರಿಸಾಯರೆಂಬವರು[3] ಅವನಿಗೆ ಅಡ್ಡಮಾತು ಆಡುತ್ತಾ, ಉಪದ್ರವ ಕೊಡುತ್ತಾ ಇದ್ದರು; ಯಾಕಂದರೆ ಅವನು ತಮ್ಮನ್ನು ತಮ್ಮ ಗರ್ವಕ್ಕೆ ಗದರಿಸುತ್ತಿದ್ದನಲ್ಲ? ಸದ್ದುಕಾಯರು[3] ಅವನನ್ನು ತುಚ್ಛೀಕರಿಸುತ್ತಿದ್ದರು; ಯಾಕಂದರೆ ತಾವು ಪಾರಲೌಕಿಕವಾದದ್ದನ್ನಲ್ಲ ಐಹಿಕವಾದದ್ದನ್ನೇ ಬಯಸುತ್ತಿದ್ದರಲ್ಲ? ಸಾಧಾರಣ ಪ್ರಜೆಯವರಲ್ಲಿ ಹೆಚ್ಚು ಮಂದಿಯು ಅವನಿಗೆ ಮೆಚ್ಚಿಗೆ ಪಡುತ್ತಾ ಇದ್ದರು; ಯಾಕಂದರೆ ತಮ್ಮ ಎಲ್ಲಾ ಗುರುಗಳಿಗಿಂತ ಬಹು ಹೆಚ್ಚು ಪ್ರೀತಿಯೂ ದಯೆಯೂ ಸತ್ಯವೂ ಆ ಬೋಧಕನಲ್ಲಿ ತೋರುತ್ತಿತ್ತಲ್ಲ? ಆದರೆ ಆ ಪ್ರಜೆಯವರ ಕುಗುರುಗಳು ಅವರ ವಿಶ್ವಾಸವನ್ನು ಕೆಡಿಸಲಿಕ್ಕೆ ಪೇಚಾಡುತ್ತಲೇ ಇರುವದರಿಂದ ಅವರಲ್ಲಿ ಸ್ವಲ್ಪ ಮಂದಿಯು ಮಾತ್ರ ಯೇಸುವಿನ ಮೇಲೆ ಸ್ಥಿರವಾದ ನಂಬಿಗೆ ಇಟ್ಟು ಕೊಂಡಿರುತ್ತಿದ್ದರು. ಯೇಸುವು ಸುಮಾರು 3 ವರುಷ ತನ್ನ ರಕ್ಷಣಕಾರ್ಯವನ್ನು ನಡಿಸುತ್ತಾ ಇರಲು, ತನ್ನ ಬಹಿರ್ವೃತ್ತಿಕಾಲದೊಳಗೆ 4ನೇ ಪಸ್ಕ ಹಬ್ಬವು[4] ಸಮೀಪವಾದ[5] ಒಂದು ಆದಿತ್ಯವಾರ ಅವನು ಅರಸರಾದ ತನ್ನ ವಂಶಸ್ಥರು ಆಳಿದ್ದ ಯೆರೂಸಲೇಮು ಪಟ್ಣದಲ್ಲಿ ಪ್ರವೇಶಿಸುವಂದು ಬಹು ಪ್ರಜೆಯು ನೆರೆದು, ರಾಜೋತ್ಸವಸ್ತೋತ್ರದಿಂದ ಅವನ ಕೂಡ ಬಂತು. 4 ದಿವಸಕ್ಕೆ ಈಚೆ ಬೃಹಸ್ಪತಿವಾರದ ರಾತ್ರಿಯಲ್ಲಿ ಯೇಸುವು ರಾತ್ರಿಭೋಜನವೆಂಬ ಪರಿಶುದ್ಧ ಸಂಸ್ಕಾರವನ್ನು ನೇಮಿಸಿದನು. ಅಷ್ಟರೊಳಗೆ ಯೆಹೂದ್ಯ ಪ್ರಜೆಯು ಹೊಟ್ಟೆಕಿಚ್ಚುಳ್ಳ ಕೆಟ್ಟ ಗುರುಗಳಿಂದ ವೈರಕ್ಕೆ ಪ್ರೇರಿತವಾಗಿ, ಶುಕ್ರವಾರದಲ್ಲಿ ಪೊಂತಿಯ ಪೀಲಾತನೆಂಬ ರೋಮಾಯ ಪ್ರತಿನಿಧಿಯ ನ್ಯಾಯಸ್ಥಾನದ ಮುಂದೆ ಈ ಭ್ರಷ್ಟನಿಗಾದರೂ ದೋಷರಹಿತನೆನ್ನಿಸುವ ಯೇಸುವನ್ನು ಕುರಿತು—ಕ್ರೂಜೆಗೆ ಹಾಕು! ಅವನನ್ನು ಕ್ರೂಜೆಗೆ ಹಾಕು! ಎಂತ, ಒದರಿತು. ಆಗ ಯೇಸುವು ತನ್ನ ಅನಂತ ಕೃಪೆಗೂ ತನ್ನ ತಂದೆಯ ಅನಂತ ಕೃಪೆಗೂ ಅನುಸಾರವಾಗಿ ಗೈದು, ಅದೇ ದಿನದಲ್ಲಿ ತನ್ನನ್ನು ತಾನು ತನ್ನ ಶತ್ರುಗಳ ಕೈಗೆ ಒಪ್ಪಿಸಿ ಕೊಟ್ಟು[6],

---

1) ಯೋಹಾ. 4; ಮತ್ತಾ. 15, 21 ಆದಿ; ಮರ್ಕ. 7, 24. ಲೂಕ. 7, 2. 9.

2) ಯೋಹಾ. 1, 14. 3) 21ನೇ, 22ನೇ ಪಾನುಗಳು. 4) ಕ್ರಿಸ್ತಶಕಕ್ಕೆ 1490 ವರುಷ ಮುಂಚೆ ಊರಿದ್ದ ಇದರ ವಿಷಯವನ್ನು ಮೋಶೆಯ 2ನೇ ಗ್ರಂಥದ 12ನೇ ಸಂಧಿಯಲ್ಲಿ ಓದಿರಿ; ಅದು ಕ್ರಿಸ್ತನಲ್ಲಾದ ವಿಮೋಚನಕರ ಮಹಾ ಯಜ್ಞದ ಅರ್ಥವನ್ನು ಮುಂದಾಗಿ ತೋರಿಸಿದ್ದಂಥಾದ್ದು.

5) ಯೋಹಾ. 2, 13; ಲೂಕ. 6, 1; ಯೋಹಾ. 6, 4; 11, 55; 12, 1—13.

6) ಯೋಹಾ. 10, 18; 19, 11; ಮತ್ತಾ. 26, 53.

ನಿಜ ಯಜ್ಞಪಶುವೆಂಬಂತೆ ಕ್ರೂಜೆಯಲ್ಲಿ ಸತ್ತು, ವಿಶ್ವೋಪಾಸ್ಯನಾದ ಯಜ್ಞಾಂತಕೃತ್ ಆದನು. ಆ ನಿರಪರಾಧಿಯಾದ ಮಹಾ ಪುರುಷನು ದೇವರಿಗೆ ವಿಧೇಯರಾಗದ ಮನುಷ್ಯರ ಬದಲಾಗಿ ದೇವರ ಚಿತ್ತಕ್ಕೆ, ಅಸಹ್ಯ ಕ್ರೂಜೆಯ ಮರಣದ ಪರ್ಯಂತವಾದರೂ, ವಿಧೇಯನಾಗಿ, ಮನುಷ್ಯರ ದೊಡ್ಡ ಋಣವನ್ನು ತೀರಿಸಿ, ಅವರ ಪಾಪಗಳ ಶಿಕ್ಷೆಯನ್ನು ತಾನೇ ತಾಳಿ, ಮನುಷ್ಯರನ್ನೂ ದೇವರನ್ನೂ ತಿರಿಗಿ ಒಂದೇ ಮಾಡಿದನು.—ಇನ್ನು ಮುಂದೆ ಈ ಗ್ರಂಥದಲ್ಲಿ ವಿವರ ಬರುವ ತೆರ್ತುಲ್ಲಿಯಾನನೆಂಬ ಒಬ್ಬ ಕ್ರೈಸ್ತ ಸಭಾಬೋಧಕನು[1] ಸುಮಾರು 1668 ವರುಷಕ್ಕೆ ಮುಂಚೆ ಬರೆದದ್ದೇನಂದರೆ—ಪೊಂತಿಯ ಪೀಲಾತನು ಯೇಸುವಿನ ವಿಚಾರಣ ಮರಣ ಪುನರುತ್ಥಾನಗಳ ವಿಷಯವಾದ ಪತ್ರಗಳನ್ನು ಅಂದಿನ ತಿಬೆರಿಯನೆಂಬ ಆ 2ನೇ ರೋಮಾಯ ಕೈಸರನಿಗೆ[2] ಕಳುಹಿಸಿ ಕೊಟ್ಟ ಮೇಲೆ ಬಹು ನೀಚ ಗುಣದ ಈ ಕೈಸರನಾದರೂ ಮುಖ್ಯವಾಗಿ ಅವನ ಪುನರುತ್ಥಾನಕ್ಕೆ ವಿಸ್ಮಯ ಪಟ್ಟು, ಸಾಮ್ರಾಜ್ಯದ ಆಢ್ಯಾಲೋಚನಾಸಭೆಯವರ ಸಮ್ಮುಖದಲ್ಲಿ, ಯೇಸು ಕ್ರಿಸ್ತನನ್ನು ರೋಮಾಯ ದೇವತೆಗಳ ಲೆಖ್ಖದಲ್ಲಿ ಶೇರಿಸುವ! ಎಂತ, ಹೇಳಿದನು; ಇವರು ಒಪ್ಪದಿರಲಾಗಿ, ಅವನು, ಕ್ರೈಸ್ತರೆಂಬ ಕ್ರಿಸ್ತನ ಭಕ್ತರ ಮೇಲೆ ಅಪರಾಧ ಹೊರಿಸಲಿಕ್ಕೆ ಬರುವಂಥವರಿಗೆ ಶಿಕ್ಷೆಯಾಗುವದೆಂದು, ತನ್ನಷ್ಟಕ್ಕೆ ನೇಮಿಸಿದನು.—ಹ್ಯಾಗಂದರೆ ಯೇಸು ಕ್ರಿಸ್ತನು ಜೀವಾಧಿಪತಿಯಾಗಿರುವ ಕಾರಣದಿಂದ ಮರಣವು ಅವನನ್ನು ಹಿಡು ಕೊಂಡಿರ ಕೂಡಲಿಲ್ಲ. ತಾನು ಮುಂದಾಗಿ ತಿಳಿಸಿದ್ದಂತೆಯೇ ಅವನು ಸಮಾಧಿಯೊಳಗಿದ್ದ 3ನೇ ದಿವಸದಲ್ಲಿ, ಒಂದು ಆದಿತ್ಯವಾರದಲ್ಲಿ, ಸತ್ತವರೊಳಗಿಂದ ಎದ್ದು ಬಂದು, ಇನ್ನು 40 ದಿವಸ[3] ಭೂಮಿಯಲ್ಲಿ ತನ್ನ ಶಿಷ್ಯರಿಗೆ ಆಗಿಂದಾಗ ಪ್ರತ್ಯಕ್ಷನಾಗುತ್ತಾ ಇದ್ದನು. ಆ ಸಮಯದಲ್ಲಿ ಅವನಿಗೆ 500ಕ್ಕಿಂತ ಹೆಚ್ಚು ಮಂದಿ ಶಿಷ್ಯರಿದ್ದರು[4]. ಆ 40 ದಿವಸದೊಳಗೆ ಒಮ್ಮೆ ಅವನು ತನ್ನ ಶಿಷ್ಯರಿಗೆ ಗಲಿಲಾಯ ನಾಡಿನ ಒಂದು ಬೆಟ್ಟದಲ್ಲಿ ತನ್ನನ್ನು ತೋರಿಸಿ ಕೊಂಡು, ಅಂದು ಅಪೊಸ್ತಲರೆನ್ನಿಸಿ ಕೊಂಬ 11ಮಂದಿ ಶಿಷ್ಯರಿಗೆ ಮುಖ್ಯವಾಗಿ ಅಪ್ಪಣೆ ಕೊಟ್ಟದ್ದೇನಂದರೆ—ಪರಲೋಕದಲ್ಲಿಯೂ ಭೂಲೋಕದಲ್ಲಿಯೂ ಸಮಸ್ತ ಅಧಿಕಾರವು ನನಗೆ ಕೊಟ್ಟದೆ; ಆದದರಿಂದ ನೀವು ಹೊರಟು ಹೋಗಿ, ತಂದೆಯ, ಮಗನ, ಪರಿಶುದ್ಧಾತ್ಮದ ಹೆಸರಿನಲ್ಲಿ ಅವರಿಗೆ ಸ್ನಾನ ಕೊಡುತ್ತಾ, ನಾನು ನಿಮಗೆ ಆಜ್ಞಾಪಿಸಿದವನ್ನೆಲ್ಲಾ ಕೈಕೊಳ್ಳುವದಕ್ಕೆ ಅವರಿಗೆ ಬೋಧಿಸುತ್ತಾ, ಸಮಸ್ತ ಜನಾಂಗಗಳನ್ನು ಶಿಷ್ಯರಾಗ ಮಾಡಿರಿ! ಇಗೋ, ನಾನು ಲೋಕಾಂತದ ವರೆಗೂ ಎಲ್ಲಾ ದಿವಸಗಳಲ್ಲಿ ನಿಮ್ಮ ಸಂಗಡ ಇದ್ದೇನೆ[5].—ಹೀಗೆ ಸ್ನಾನವೆಂ

1) 15ನೇ ಸಂಧಿ. 2) 24ನೇ ಪಾನು. 3) ಅಪೊ. ಕ್ರಿ. 1, 3. 4) 1 ಕೊರಿ. 15, 6.
5) ಮತ್ತಾ. 28, 18—20; 24ನೇ ಪಾನು.

ಬ 2ನೇ ಪರಿಶುದ್ಧ ಸಂಸ್ಕಾರವು[1] ಸ್ಥಾಪಿತವಾಯಿತು. ಬಳಿಕ ಯೇಸುವು ತನ್ನ ಪುನರುತ್ಥಾನದ ಈಚೆಯ 40ನೇ ದಿವಸದಲ್ಲಿ ತನ್ನ ಶಿಷ್ಯರನ್ನು ಬೇಥಾನಿಯದ ಸಮೀಪದಲ್ಲಿ ಕೂಡಿಸಿದನು; ಇದು ಯೆರೂಸಲೇಮಿಗೆ ಬಹಳ ದೂರವಿಲ್ಲದ ಇಪ್ಪೇ ಗುಡ್ಡದ ಮೂಡಣ ಕಡೆಯಲ್ಲಿರುವ ಒಂದು ಊರು[2]. ಅಲ್ಲಿ ಅವನು ಅವರ ಮುಂದೆ—ಹೀಗೆ (ದೇವವಾಕ್ಯದ ಗ್ರಂಥದಲ್ಲಿ) ಬರದದೆ; ಮತ್ತು ಹೀಗೆ ಕ್ರಿಸ್ತನು ಶ್ರಮ ಪಟ್ಟು ಏಳಲೂ ಸಮಸ್ತ ಜನಾಂಗಗಳನ್ನು ಕುರಿತಿರುವ ಮಾನಸಾಂತರ ಪಾಪಪರಿಹಾರಗಳು ಅವನ ಹೆಸರಿನಲ್ಲಿ, ಯೆರೂಸಲೇಮಿನಿಂದ ಆರಂಭವಾಗಿ, ಸಾರಲ್ಪಡಲೂ ಬೇಕಾಗಿತ್ತು; ಆದರೆ ನೀವು ಇವಕ್ಕೆ ಸಾಕ್ಷಿಗಳಾಗಿದ್ಧೀರಿ. ಮತ್ತು, ಇಗೋ, ನನ್ನ ತಂದೆಯ ವಾಗ್ದತ್ತವನ್ನು (ಅಂದರೆ ಪರಿಶುದ್ಧಾತ್ಮವನ್ನು) ನಿಮ್ಮ ಮೇಲೆ ಕಳುಹಿಸುತ್ತೇನೆ; ಆದರೆ ನೀವು ಉನ್ನತ ಸ್ಥಳದಿಂದ ಬಲವನ್ನು ಧರಿಸಿ ಕೊಳ್ಳುವ ಪರ್ಯಂತ ಯೆರೂಸಲೇಮು ಪಟ್ಣದಲ್ಲಿ ಇರ್ರಿ! ಎಂತ, ಹೇಳಿ[3], ತನ್ನ ಹಸ್ತವನ್ನೆತ್ತಿ, ಅವರನ್ನು ಆಶೀರ್ವದಿಸುತ್ತಿರುವಾಗ ಅವರ ಕಣ್ಣೆದುರಿಗೆ ಪರಲೋಕಕ್ಕೆ ಏರಿದನು. ಅಲ್ಲಿಂದ ಅವನು ಸಹಸ್ರವರ್ಷರಾಜ್ಯದ ನಿರ್ಮಾಣಕ್ಕೂ[4] ಕಡೆಯ ಮಹಾ ನ್ಯಾಯನಿರ್ಣಯದ ದಿವಸದಲ್ಲೂ ತಿರಿಗಿ ಪ್ರತ್ಯಕ್ಷನಾಗಿ ಬರುವನು; ಆಯಾ ವರೆಗೆ ಅವನು ಅದೃಶ್ಯರೀತಿಯಾಗಿ ತನ್ನ ಆತ್ಮದ ಮೂಲದಿಂದ ಎಲ್ಲಾ ವಿಶ್ವಾಸಿಗಳ ಸಂಗಡ ಇರುವನು.

ಶಿಷ್ಯರು ತಮ್ಮ ಕಣ್ಣೆದುರಿಗೆ ಪರಲೋಕಕ್ಕೆ ಏರಿ ಹೋಗುವ ಒಡೆಯನು ತೋರುವ ತನಕ ಅವನನ್ನು ವಂದಿಸುತ್ತಿದ್ದು, ಬಳಿಕ ಬಹಳ ಹರ್ಷದೊಡನೆ ಯೆರೂಸಲೇಮಿಗೆ ತಿರಿಗಿ ಹೋದರು. ಅಲ್ಲಿ ಅನೇಕ ಶಿಷ್ಯರು ಕೂಡಿ ಒಂದು ಮನೆಯ ಮಾಳಿಗೆಯ ಮೇಲೆ ಜನರ ಗದ್ದಲವಿಲ್ಲದಲ್ಲಿ ವಾಸ ಮಾಡಿ ಕೊಂಡು, ತಮ್ಮ ಒಡೆಯನು ಮಾತು ಕೊಟ್ಟ ಪರಿಶುದ್ಧಾತ್ಮದಾನದ ಬಹು ಪ್ರತೀಕ್ಷೆಯುಳ್ಳವರಾಗಿದ್ದು, ಪ್ರಾರ್ಥಿಸುತ್ತಾ ಇರುವರು[5]. ಯೇಸು ಕ್ರಿಸ್ತನು ತನ್ನ ಸುವಾರ್ತೆಯ ಮುಖ್ಯ ವಿಸ್ತಾರಕರಾಗಲಿಕ್ಕೆ 12 ಮಂದಿ ಅಪೊಸ್ತಲರನ್ನು[6] ಅಂದರೆ ಪ್ರೇಷಿತರನ್ನು ಆರಿಸಿ ಕೊಂಡಿದ್ದನೆಂತ, ಹಿಂದೆ ಹೇಳಿ ಅದೆ; ಇವರು ಯಾರಂದರೆ—ಪೇತ್ರನು (ಪ್ರಸ್ತರನು) ಎಂಬ ಸಿಮೋನನು, ಇವನ ಸಹೋದರನಾದ ಅಂದ್ರೆಯನು, ಜೆಬೆದಾಯನ ಮಗನಾದ ಹಿರಿ ಯಕೋಬನು, ಇವನ ಸಹೋದರನಾದ ಯೋಹಾನನು, ಫಿಲಿಪ್ಪನು, ಥೋಮನು, ಬರ್ಥೊಲೊಮಾಯನೆಂಬ ನಥನಯೇಲನು, ಅಲ್ಫಾಯನ ಮಗನಾದ ಲೇವಿ

---

1) 25ನೇ ಪಾನು. 2) ಲೂಕ. 24, 50; ಅಪೊ. ಕ್ರಿ. 1, 12. 3) ಲೂಕ. 24, 46—49; ಅಪೊ. ಕ್ರಿ. 1, 4—9. 4) ಅಪೊ. ಕ್ರಿ. 1, 11; (1ಥೆಸ್ಸ. 4, 15—17;) 2ಥೆಸ್ಸ. 2, 1—8; ಪ್ರಕಟ. 19, 11—20; 20, 1—6. 5) ಲೂಕ. 24, 51—53; ಅಪೊ. ಕ್ರಿ. 1, 12—14; 3, 1. 6) ಲೂಕ. 6, 13; 26ನೇ ಪಾನು.

ಎನ್ನಿಸಿ ಕೊಂಡಿದ್ದ ಮತ್ಥಾಯಸು, ಕ್ಲೋಫನೆಂಬ(?) ಅಲ್ಫಾಯನ ಮಗನೂ ಯೇಸುವಿನ ನೆಂಟನೂ ಆದ ಕಿರಿ ಯಕೋಬನು, ಕನಾನ್ಯನೆಂತಾಗಲಿ ಜೇಲೋತನೆಂತಾಗಲಿ ಎನ್ನಿಸಿ ಕೊಳ್ಳುವ ಸಿಮೋನನು, ಯಕೋಬನ ಮಗನಾದ ಲೆಬ್ಬಾಯನೆಂತಾಗಲಿ ತದ್ದಾಯನೆಂತಾಗಲಿ ಎನ್ನಿಸಿ ಕೊಳ್ಳುವ ಯೂದನು, ಇಸ್ಕರಿಯೋತನೆಂಬ ಯೂದನು[1]. ಇವರಲ್ಲಿ ಇಸ್ಕರಿಯೋತನೆಂಬ ಯೂದನು ಯೇಸುವಿನ ದ್ರೋಹಿಯಾಗಿ ಕೆಟ್ಟು ಹೋದ ಕಾರಣದಿಂದ ಪೇತ್ರನು 120 ಶಿಷ್ಯರು ನೆರೆದಿರುವಲ್ಲಿ ಆ ದ್ರೋಹಿಯ ಬದಲಾಗಿ ಮತ್ಥಿಯನೆಂಬವನನ್ನು ಒಂದು ದೇವಸಂಜ್ಞೆಯ ಮೇಲೆ ಆರಿಸಿಟ್ಟನು[2]. ಕ್ರಿಸ್ತನ ದಿವಾರೋಹಣದ ಈಚೆಯ 10ನೇ ದಿವಸವು ಅಂದರೆ ಪುನರುತ್ಥಾನದ ಈಚೆಯ ಪಂಚಾಶತ್ತಮ ಅಂದರೆ 50ನೇ ದಿವಸವು ಒದಗಿರಲಾಗಿ, ಯೆಹೂದ್ಯರೆಲ್ಲರಿಗೆ ಮಧ್ಯಾಹ್ನಕ್ಕೆ ಮುಂಚೆ 9ನೇ ಘಂಟೆಗೆ ನಿತ್ಯ ನೇಮಕವಾಗಿರುವ ಪ್ರಾರ್ಥನೆಗೋಸ್ಕರ ಶಿಷ್ಯರು ದೇವಾಲಯದ ಸಂಬಂಧವಾದ ಒಂದು ಮನೆಯಲ್ಲಿ[3] ಕೂಡಿ ಕೊಂಡಿರುವಂದು ಕರ್ತನು ವಾಗ್ದತ್ತ ಮಾಡಿದ್ದೇ ಮುಟ್ಟಿ ಬಂತು; ಹ್ಯಾಗಂದರೆ ಬೀಸುವ ಬಿರುಘಾಳಿಯಂತಿರುವ ಶಬ್ದವು ಫಕ್ಕನೆ ಆಕಾಶದಲ್ಲಿ ಉಂಟಾಗಿ, ಅವರು ಕೂತು ಕೊಂಡಿರುವ ಮನೆಯೆಲ್ಲಾ ತುಂಬಿತು; ಮತ್ತು ಬೆಂಕಿಯ ಉರಿಯಂತೆ ಭಾಗವಾದ ನಾಲಿಗೆಗಳು ಅವರಿಗೆ ಕಾಣಿಸಿ, ಅವರಲ್ಲಿ ಒಬ್ಬೊಬ್ಬನ ಮೇಲೆ ಕೂತು ಕೊಂಡವು; ಮತ್ತು ಅವರೆಲ್ಲರು ಸರ್ವಸತ್ಯಜ್ಞಾನಭಾಸಕನಾದ ಪರಿಶುದ್ಧಾತ್ಮದಿಂದ ತುಂಬಿದವರಾಗಿ, ಆತ್ಮವು ತಮಗೆ ನುಡಿಯ ಕೊಟ್ಟ ಪ್ರಕಾರ ಬೇರೆ ಭಾಷೆಗಳಿಂದ ಮಾತಾಡಲಾರಂಭಿಸಿದರು[4]. ಆ ಮಹಾ ಸಂಗತಿಯ ದಿವಸವು ಒಂದು ಆದಿತ್ಯವಾರ. ಯೆಹೂದ್ಯರು ವರುಷ ವರುಷಕ್ಕೆ ಆ ದಿವಸದಲ್ಲಿ ತಮಗೆ 1527 ವರುಷಗಳ ಹಿಂದೆ ದೇವರ ನ್ಯಾಯಪ್ರಮಾಣವು ಪ್ರಾಪ್ತವಾಗಿದ್ದ ದೊಡ್ಡ ಹಬ್ಬವನ್ನೂ ಗೋಧಿಬೆಳೆಯ ಪ್ರಥಮ ಫಲವ ದೇವಾಲಯಕ್ಕೆ ತರುವ ಹಬ್ಬವನ್ನೂ ಆಚರಿಸುತ್ತಿದ್ದರು; ಆದ್ದರಿಂದ ರೋಮಾಯ ಸಾಮ್ರಾಜ್ಯದ ಹೊರಗಿನವರೂ ಒಳಗಿನವರೂ ಆದ ಅನೇಕಾನೇಕ ಯೆಹೂದ್ಯರೂ ಇವರ ಮತ ಸೇರಿದವರೂ ತಮಗೆ ಪರಿಶುದ್ಧವಾದ ದೇವಾಲಯವಿರುವ ಯೆರೂಸಲೇಮಿಗೆ ಬಂದಿದ್ದರು. ಅವರು ಯಾವ ಯಾವ ದೇಶಸ್ಥರಂದರೆ[5]—ಅಸಿಯ ಖಂಡದಲ್ಲಿರುವ ಪಲೇಸ್ತೀನದವರೂ ಅರಬಿಸ್ಥಾನದವರೂ ಸಣ್ಣ ಅಸಿಯದ ಪ್ರದೇಶಗಳಾದ ಕಪ್ಪದೊಕಿಯ, ಪೊಂತ, ಫ್ರುಗಿಯ, ಪಂಫೂಲಿಯ ಎಂಬ ಈ 4 ಪ್ರದೇಶಗಳವರೂ ಮೆಸೊಪೊತಮಿಯದವರೂ

1) ಮತ್ತಾ. 10, 1—5; ಲೂಕ. 6, 13—16; ಮಾರ್ಕ. 2, 14; 15, 40; ಯೋಹಾ. 19, 25; ಅಪೊ. ಕ್ರಿ. 1, 13. 2) ಅಪೊ. ಕ್ರಿ. 1, 15—26. 3) ಲೂಕ. 24, 53; ಅಪೊ. ಕ್ರಿ. 1, 13; 2, 2. 46; 3, 1. 4) ಅಪೊ. ಕ್ರಿ. 2, 1—4. 5) 18ನೇ ಪಾನು ನೋಡು.

ಎಲಮಿನವರೂ (ಎಲಮಿಾತರೂ) ಮೇದಿಯದವರೂ (ಮೇದರೂ) ಪಾರ್ಥಿಯದವರೂ (ಪಾರ್ಥರೂ); ಆಫ್ರಿಕ ಖಂಡದಲ್ಲಿರುವ ಐಗುಪ್ತದವರೂ ಲಿಬುಯದ ಕೂರೇನೆಯವರೂ; ಯುರೋಪ ಖಂಡದಲ್ಲಿರುವ ಕ್ರೇತದ್ವೀಪದವರೂ ರೋಮಿಾಯರ ಮೂಲಸ್ಥಾನವಾದ ಈತಲಿಯದವರೂ. ಆಯಾ ದೇಶದವರ ಒಂದು ದೊಡ್ಡ ಸಮೂಹವು ಆ ಅತ್ಯಪೂರ್ವವಾದ ಶಬ್ದಕ್ಕೆ ಕೂಡಿ, ಆ ಬೇರೆ ಬೇರೆ ಜ್ಞಾನಭಾಷೆಯ ಪ್ರಸಂಗಕ್ಕೆ ಬಹಳ ವಿಸ್ಮಯ ಪಟ್ಟು, ನಿಂತಿರಲು, ಪೆತ್ರನೆಂಬ ಅಪೊಸ್ತಲನು ಅವರ ಮುಂದೆ ಕ್ರಿಸ್ತನ ರಕ್ಷಣಕಾರ್ಯವನ್ನೂ ಅವನು ಕೊಟ್ಟ ಆ ಪರಿಶುದ್ಧಾತ್ಮದಾನವನ್ನೂ ಘನವಾಗಿ ವಿವರಿಸಿ ಸಾರಿದ್ದರಿಂದ ಆ ನಾನಾ ದೇಶದವರಲ್ಲಿ ಪರಿಚ್ಛೇದನೆಯ ಮೇಲೆ ಯೆಹೂದ್ಯ ಮತಸ್ಥರಾಗಿರುವ ಸುಮಾರು 3000 ಜನರು ವಿಶ್ವಾಸಿಸಿ, ಸ್ನಾನ ಹೊಂದಿದರು. ಆ ದಿವಸ ಮೊದಲ್ಗೊಂಡು ಯೆರೂಸಲೇಮಿನ ಸಭೆಯು ದಿನಾಲು ದೇವರ ಬಲದಿಂದ ಹೆಚ್ಚುತ್ತಲೇ ಇತ್ತು[1].

ಕ್ರಿಸ್ತನ ಸಭೆಯು ಆ ಅತ್ಯಾಶ್ಚರ್ಯಕರವಾದ ಪ್ರಕಾರದಿಂದ ಪೂರ್ಣ ಸ್ಥಾಪನೆ ಹೊಂದಿದ್ದು ಕ್ರಿಸ್ತಶಕದ 34ನೇ ವರುಷದಲ್ಲಿ ಸಂಭವಿಸಿತು. ಆರಂಭದಲ್ಲಿ ಯೆರೂಸಲೇಮಿನ ಎಲ್ಲಾ ಪ್ರಜೆಯ ಒಲುಮೆಯು ಆ ಸಭೆಯ ಮೇಲೆ ಇರುತ್ತಾ ಇತ್ತು[2]. ಬಹಳ ಕಾಲ ಹೋಗದ್ದಕ್ಕಿಂತ ಮುಂಚೆ ಒಂದು ದಿನದಲ್ಲಿ ಮಧ್ಯಾಹ್ನದ ಮೇಲೆ ಪೆತ್ರನೂ ಯೋಹಾನನೂ ಯೇಸು ಕ್ರಿಸ್ತನ ಹೆಸರಿನಿಂದ ಒಬ್ಬ ಕುಂಟನನ್ನು ಸ್ವಸ್ಥ ಮಾಡಿದರು. ಅದಕ್ಕೆ ಪ್ರಜೆಯು ಮಿಗು ಬೆರಗಾಗಿ ನೆರದು ಬಂದಂದು ಪೆತ್ರನು ಮನುಷ್ಯರ ಪಾಪಪರಿಹಾರಕ್ಕೋಸ್ಕರ ಸತ್ತು ಪುನರುತ್ಥಾನದವನಾದ ಯೇಸುವೆಂಬ ಜೀವಾಧಿಪತಿಯ ಶ್ರೇಷ್ಠ ಬಲವನ್ನು ಕುರಿತು ಘಟ್ಟಿಯಾಗಿ ಸಾಕ್ಷಿಕೊಡುವ ಪ್ರಸಂಗದ ಮೂಲಕ ಅನೇಕ ಹೆಂಗಸರಲ್ಲದೆ 5000 ಮಂದಿ ಗಂಡಸರು ಸಹ ವಿಶ್ವಾಸಿಗಳಾಗಿ, ಸಭೆಯನ್ನು ಕೂಡಿ ಕೊಂಡರು[3]; ಆದ್ದರಿಂದ ಕ್ರಿಸ್ತನ ಎಲ್ಲಾ ಸಭೆಯವರ ಒಟ್ಟುಸಂಖ್ಯೆಯು ಅಂದು 8500ಕ್ಕಿಂತ ಹೆಚ್ಚಾದಂತೆ ಕಾಣುತ್ತದೆ. ಆದರೆ ಸದ್ದುಕಾಯರ ಪಕ್ಷಾವಲಂಬಿಗಳು ಕ್ರಿಸ್ತನ ಪುನರುತ್ಥಾನದ ವಿಷಯವಾದ ಆ ಪ್ರಸಂಗಕ್ಕೆ ಶಿಟ್ಟು ಪಟ್ಟು, ಅದೇ ದಿನದ ಸಾಯಂಕಾಲದಲ್ಲಿ ಆ ಇಬ್ಬರು ಅಪೊಸ್ತಲರನ್ನು ಶೆರೆಮನೆಗೆ ಹಾಕಿಸಿದರು. ಹೀಗೆ ಮಾಡುವದಕ್ಕೆ ಆ ಸದ್ದುಕಾಯರಿಗೆ ತಕ್ಕಷ್ಟು ಅಧಿಕಾರವಿತ್ತು; ಹ್ಯಾಗಂದರೆ ಅವರು ಯೆರೂಸಲೇಮಿನ ಸುನೆದ್ರಿಯವೆಂಬ ಮಹಾಲೋಚನಾಸಭೆಯೊಳಗಿನವರು. ಆ ಸುನೆದ್ರಿಯವು ಗುರುಗಳೂ ಪ್ರಜಾಶ್ರೇಷ್ಠರೂ ಆದಂಥ 70 ಮಂದಿಯದ್ದೇ; ಇವರು ಯಾರನ್ನೂ ಶೆರೆಮನೆಗೆ ಹಾಕಿಸಲಿಕ್ಕೆ ಅಡ್ಡಿ ಇರಲಿಲ್ಲ, ಆದರೆ ಯಾರನ್ನೂ ಕೊಲ್ಲಿಸುವ ಅಧಿಕಾರವು ರೋಮಿಾ

1) ಅಪೊ. ಕ್ರಿ. 2, 5—47. 2) ಅಪೊ. ಕ್ರಿ. 2, 47. 3) ಅಪೊ. ಕ್ರಿ. 4, 4.

ಯರ ಆಳುವಿಕೆಯಲ್ಲಿ ಅವರಿಗೆ ತಪ್ಪಿ ಹೋಗಿತ್ತು[1]. ಅದಲ್ಲದೆ ಆ ಸಮಯ ಸದ್ದುಕಾಯರಿಗೆಯೇ ಆ ಮಹಾಲೋಚನಾಸಭೆಯಲ್ಲಿ ಹೆಚ್ಚು ಬಲವಿತ್ತು[2]. ಮರುದಿವಸದ ಪ್ರಾತಃಕಾಲದಲ್ಲಿ ಸುನೆದ್ರಿಯದವರು ಕೂಡಿ, ಆ ಇಬ್ಬರು ಅಪೊಸ್ತಲರನ್ನು ತರಿಸಿ, ಪ್ರಜೆಯ ಮೇಲಿನ ಭಯದ ದೆಸೆಯಿಂದ ಅವರಿಗೆ ಕೇಡು ಗೈಯದೆ, ಅವರನ್ನು ಬೆದರಿಸಲಿಕ್ಕೆ ಪೇಚಾಡಿ, ಕಳುಹಿಸಿ ಬಿಟ್ಟರಷ್ಟೇ[3]. ಆದರೆ ಅಪೊಸ್ತಲರು ಎಡೆಬಿಡದೆ ಮುಂಚಿನಂತೆ ಯೇಸುವೆಂಬ ಜೀವಾಧಿಪತಿಯ ಪ್ರಸಂಗ ಮಾಡುತ್ತಾ, ಪೇತ್ರನು ಪ್ರಮುಖನಾಗಿ ಅವರೆಲ್ಲರೂ ಯೇಸುವು ನಡಿಸುತ್ತಿದ್ದಂಥ ಹೇರಳ ಅದ್ಭುತಕ್ರಿಯೆಗಳನ್ನೇ ಯೇಸುವಿನ ಹೆಸರಲ್ಲಿ ನಡಿಸುತ್ತಾ ಬರುವಲ್ಲಿ ಕರ್ತನ ಸಭೆಯು ಬೆಳಕೊಳ್ಳುತ್ತಾ ಇತ್ತು[4]. ಅದು ಕಾರಣವಾಗಿ ಸದ್ದುಕಾಯರ ಪ್ರೇರಣೆಯಿಂದ ಆ ಸುನೆದ್ರಿಯದವರೆಲ್ಲರು ಕೋಪವುಳ್ಳವರಾಗಿ, ಅಪೊಸ್ತಲರೆಲ್ಲರನ್ನು ಶೆರೆಮನೆಗೆ ಶೇರಿಸಿದರು; ಆದರೆ ಅಂದಿನ ಇರುಳಿನಲ್ಲಿ ಒಬ್ಬ ದೇವದೂತನು ಅದರ ಬಾಗಿಲನ್ನು ತೆರೆದು, ಅವರನ್ನು ಹೊರಗೆ ಹೋಗ ಬಿಟ್ಟನು. ಮರುದಿವಸ ಸುನೆದ್ರಿಯದವರು ಅವರನ್ನು ತಿರಿಗಿ ಕರ ತರಿಸಿ, ಅವರನ್ನು ಕೊಲ್ಲ ಬೇಕೆಂಬ ಆಲೋಚನೆಯುಳ್ಳವರಾದಲ್ಲಿ ಆ ಸಭೆಯ ಅಗ್ರಸ್ಥನಾದ ಗಮಲಿಯೇಲನೆಂಬ ಪ್ರಖ್ಯಾತ ಫರಿಸಾಯನು ಹೇಳುವ ಬುದ್ಧಿಯ ದೆಸೆಯಿಂದ ಅಂಥ ಆಲೋಚನೆ ಬಿಟ್ಟು, ಅಪೊಸ್ತಲರಿಗೆ ಹೊಡಿಸಿ, ಯೇಸು ಕ್ರಿಸ್ತನ ನಾಮದಲ್ಲಿ ಹ್ಯಾಗೂ ಇನ್ನೂ ಮಾತಾಡ ಬಾರದೆಂದು, ಕಟ್ಟುತ್ತರ ಹೇಳಿ, ಅವರನ್ನು ಹೋಗಿಸಿದರು. ಆದರೂ ಅಪೊಸ್ತಲರು ಅಧಿಕ ಧೈರ್ಯದಿಂದ ಮರಳಿ ಪ್ರಸಂಗಿಸುತ್ತಾ ಬಂದರು; ಮತ್ತು ಯೆರೂಸಲೇಮಿನೊಳಗೆ ಶಿಷ್ಯರು ಬಹಳ ಹೆಚ್ಚುತ್ತಾ ಇದ್ದರು[5]. ಕಾಲಗತಿಯಲ್ಲಿ ಹಲವು ಮಂದಿ ಗರ್ವಿಷ್ಠ ಯೆಹೂದ್ಯರ ಒಳಸಂಚಿನಿಂದ ಸುನೆದ್ರಿಯದವರು ತಮ್ಮ ಅಧಿಕಾರದ ಮೇರೆಯನ್ನು ಮರೆತು, ಪ್ರಜೆಯ ಸಹಾಯದಲ್ಲಿ ಸ್ತೆಫನನೆಂಬ ಒಬ್ಬ ಕ್ರೈಸ್ತ ದರಿದ್ರಪೋಷಕೋದ್ಯೋಗಸ್ಥನನ್ನು ಕಲ್ಲೆಸೆದು ಕೊಂದರು[6]. ಈ ಸ್ತೆಫನನು ಮೊದಲಿನ ಕ್ರೈಸ್ತ ರಕ್ತಸಾಕ್ಷಿಯು ಅಂದರೆ ಕ್ರಿಸ್ತನು ಕರ್ತನೆಂತ ಅಚಲ ಸಾಕ್ಷಿ ಕೊಟ್ಟದ್ದರಿಂದ ಕ್ರಿಸ್ತನ ಶತ್ರುಗಳ ಕೈಯಿಂದ ಮೃತನಾದವನು. ಅವನ ಸಾಕ್ಷಿಮರಣವು ಕ್ರಿಸ್ತಶಕದ 35ನೇ ವರುಷದಲ್ಲಿಯಾಗಲಿ 36ನೇದರಲ್ಲಿಯಾಗಲಿ ಸಂಭವಿಸಿತು.

ಅದೇ ಸಮಯ ಯೆರೂಸಲೇಮಿನಲ್ಲಿಯ ಸಮಸ್ತ ಕ್ರೈಸ್ತ ಸಭೆಗೆ ದೊಡ್ಡ ಹಿಂಸೆಯಾಯಿತು; ಹಿಂಸಕರಲ್ಲಿ ಸೌಲನೆಂಬವನೊಬ್ಬ ಫರಿಸಾಯನು[7] ವಿಶೇಷನಾಗಿ ತೋ

---

1) ಯೋಹಾ. 18, 31; 5 ಮೋಶೆ. 13, 5—10. 2) ಅಪೊ. ಕ್ರಿ. 5, 17; 23, 6. 3) ಅಪೊ. ಕ್ರಿ. 4, 21. 4) ಅಪೊ. ಕ್ರಿ. 4, 33; 5, 1—16. 5) ಅಪೊ. ಕ್ರಿ. 5, 17—42; 6, 1—7. 6) ಅಪೊ. ಕ್ರಿ. 6, 8—7, 1—59. 7) 25ನೇ ಪಾನು.

ರಿಸಿ ಕೊಂಡನು. ಇವನು ಸುನೆದ್ರಿಯದ ಮುಖ್ಯಸ್ಥನಾದ ಆ ಗಮಲಿಯೇಲನೆಂಬ ಮಹಾ ಪಂಡಿತನಾದ ಫರಿಸಾಯನ ಶಿಷ್ಯರಲ್ಲಿ ಒಬ್ಬನು. ಹಿಂಸಕರು ಹಲವು ಮಂದಿ ಕ್ರೈಸ್ತರನ್ನು ಶೆರೆಮನೆಗೆ ವೈದು, ಹಲವರನ್ನು ಕೊಂದರು. ಅನೇಕ ಕ್ರೈಸ್ತರು ಓಡಿ ಹೋಗಿ, ಹಿಂಸಕರ ಕೈಗೆ ತಪ್ಪಿಸಿ ಕೊಂಡರು; ಆದರೆ ಅಪೊಸ್ತಲರು ಯೆರೂಸಲೇಮನ್ನು ಬಿಟ್ಟು ಹೋಗಲಿಲ್ಲ. ಪಲಾಯನ ತೆಗೆದಂಥ ಕ್ರೈಸ್ತರು ಪಲೇಸ್ತೀನದೊಳಗಿರುವ ಯೆಹೂದ್ಯ ಶೀಮೆಯ ಊರು ಹಳ್ಳಿಗಳಿಗೂ ಸಮರೀಯ ಶೀಮೆಗೂ ಪಲೇಸ್ತೀನದ ಹೊರಗಿರುವ ತುರ ಮತ್ತು ಸೀದೋನು ಎಂಬ ಎರಡು ಪ್ರಧಾನ ಪಟ್ಣಗಳಿರುವ ಫೊಯಿನೀಕೆ ಶೀಮೆಗೂ ಸುರಿಯ ದೇಶದ ಎರಡು ದೊಡ್ಡ ಪಟ್ಣಗಳಾದ ಅಂತಿಯೊಖೀಯಕ್ಕೂ[1] ದಮಸ್ಕಕ್ಕೂ ಕುಪ್ರದ್ವೀಪಕ್ಕೂ ಗಮಿಸಿ, ಅಲ್ಲಿ ಅಲ್ಲಿ ಯೆಹೂದ್ಯರಿಗೂ ಅವರ ಮತದ ಸಂಬಂಧಿಕರಿಗೂ ಸುವಾರ್ತೆಯನ್ನು ಸಾರುವವರಾದರು.[2] ಈ ಪ್ರಕಾರವಾಗಿ ಆ ಹಿಂಸೆಯಿಂದ ದೇವರ ರಾಜ್ಯಕ್ಕೆ ಉಪಕಾರ ಬಂತು; ಹ್ಯಾಗಂದರೆ ಅದರಿಂದ ಸುವಾರ್ತೆಯ ಪ್ರಸಂಗವು ಯೆರೂಸಲೇಮನ್ನು ದಾಟಿ, ಯೇಸು ಮುಂತಿಳಿಸಿದ್ದ ಕ್ರಮವಾಗಿಯೇ[3], ಬಹಳ ದೂರ ಪಸರಿಸಿ ಹೋಯಿತು. ಸಮರೀಯ ಶೀಮೆಯ ನಿವಾಸಿಗಳು ಜಾತಿಯ ಮೇಲೆ ನಿಜ ಯೆಹೂದ್ಯರಲ್ಲ; ಅವರು ಯೆಹೂದ್ಯರೂ ಫೊಯಿನೀಕಿಯರೂ ಸುರಿಯಕರೂ ಬೆರಿಕೆಯಾದ[4] ಒಂದು ಜನಾಂಗವೇ; ಅವರು ಪರಿಚ್ಛೇದನೆಯವರು, ಆದರೆ ಮೋಶೆಯ 5 ಗ್ರಂಥಗಳಲ್ಲದುಳಿದ ದೇವವಾಕ್ಯವನ್ನು ಅವರು ತಕ್ಕೊಂಡಿದ್ದಿಲ್ಲ; ಅವರ ದೇವಾಲಯವು ಯೆರೂಸಲೇಮಿನಲ್ಲಿ ಅಲ್ಲ, ಗರಿಜೀಮೆಂಬ ಬೆಟ್ಟದಲ್ಲಿ ಇತ್ತು. ಹಿಂದಿನ ಕಾಲದಲ್ಲಿ ಒಮ್ಮೆ ಯೇಸುವು ಆ ಬೆಟ್ಟದ ಸಮೀಪದಲ್ಲಿಯ ಪಟ್ಣವಾದ ಸುಖರಿನವರಿಗೆ ಬೋಧನೆ ಹೇಳುವಾಗ ಅವರು, ಲೋಕದ ರಕ್ಷಕನಾದ ಕ್ರಿಸ್ತನೆಂತ, ಅವನನ್ನು ಅಂಗೀಕರಿಸಿ ಕೊಂಡಿದ್ದರು[5]. ಯೆಹೂದ್ಯರ ಕಡೆಯ ಹಿಂಸೆಗಾಗಿ ಪಲಾಯಿಗಳಾದ ಆ ಕ್ರೈಸ್ತರಲ್ಲೊಬ್ಬನಾದ ಫಿಲಿಪ್ಪನೆಂಬ ದರಿದ್ರಪೋಷಕೋದ್ಯೋಗಸ್ಥನು ಹೋಗಿ ಪ್ರಸಂಗಿಸುತ್ತಾ ಅದ್ಭುತ ಕ್ರಿಯೆಗಳನ್ನು ನಡಿಸುತ್ತಾ ಇರುವ ಸಮರೀಯದ ಒಂದು ಪಟ್ಣದವರು ಸಹ ಕ್ರೈಸ್ತತ್ವಕ್ಕೆ ಬಹಳ ಮೆಚ್ಚಿದರು; ಅವರಲ್ಲಿ ಅನೇಕ ಗಂಡಸರೂ ಹೆಂಗಸರೂ ವಿಶ್ವಾಸಿಸಿ, ಸ್ನಾನ ಹೊಂದಿದರು. ಯೆರೂಸಲೇಮಿನಲ್ಲಿ ಅಪೊಸ್ತಲರು ಅದರ ಸುದ್ದಿ ಕೇಳಿದ ಮೇಲೆ ಪೆತ್ರನೂ ಯೋಹಾನನೂ ಸಮರೀಯದ ಆ ಪಟ್ಣಕ್ಕೆ ಹೋಗಿ, ಅದರೊಳಗೆ ಕ್ರೈಸ್ತರಾದವರಿಗೆ ತಮ್ಮ ಹಸ್ತಾಧಾನದಿಂದ ದೃಢೀಕರಣಕ್ಕೆಂಬಂತೆ ಒಂದು ವಿಶೇಷ ಆಶೀರ್ವಾದ ಕೊಟ್ಟು, ಯೆರೂಸಲೇಮಿಗೆ ತಿರಿಗಿ ಬರುತ್ತಿ

1) 24ನೇ ಪಾನು. 2) ಅಪೊ. ಕ್ರಿ. 22, 3; 5, 34; 8, 1—5; 9, 1. 10. 19; 11, 19.
3) ಅಪೊ. ಕ್ರಿ. 1, 8; 27ನೇ ಪಾನು. 4) 2 ಅರಸು. 17, 23—41. 5) ಯೋಹಾ. 4.

ರುವಾಗ ಸಮರೀಯದ ಬಹಳ ಊರು ಹಳ್ಳಿಗಳಲ್ಲಿ ಸುವಾರ್ತೆ ಪ್ರಸಂಗಿಸಿದರು[1]. ಬಳಿಕ ಫಿಲಿಪ್ಪನೆಂಬ ಆ ದರಿದ್ರಪೋಷಕನು ಪಲೇಸ್ತೀನದ ದಕ್ಷಿಣ ಮೇರೆಯ ಪಟ್ಣವಾದ ಗಾಜಕ್ಕೆ ಹೋಗುವ ಮಾರ್ಗದಲ್ಲಿ ದೇವಾತ್ಮದ ಅಪ್ಪಣೆಯ ಪ್ರಕಾರ ಒಬ್ಬ ದೊಡ್ಡ ಉದ್ಯೋಗಸ್ಥನಿಗೆ ಸ್ನಾನ ಕೊಟ್ಟನು; ಇವನು ಆಫ್ರಿಕ ಖಂಡದ ಐಥಿಯೊಪಿಯದಲ್ಲಿರುವ ನೂಬಿಯವೆಂಬ ಶೀಮೆಯ ರಾಣಿಯಾದ ಕಂದಾಕೆಯ ಪ್ರಧಾನರಲ್ಲಿ ಒಬ್ಬನು; ಅವಳ ಸಮಸ್ತ ಬೊಕ್ಕಸದ ಮೇಲೆ ಅವನಿಗೆ ಅಧಿಕಾರವಿತ್ತು. ಆ ನೂಬಿಯ ಶೀಮೆಯು ರೋಮಾಯ ಸಾಮ್ರಾಜ್ಯದ ಹೊರಗಿನದು. ಆ ಪ್ರಭುವು ತನ್ನ ಉದ್ಯೋಗಕ್ಕೋಸ್ಕರ ನಪುಂಸಕತ್ವದವನು, ತನ್ನ ದೇವಭಕ್ತಿಯಿಂದ ಯೆಹೂದ್ಯ ಮತವ ಶೇರಿ ಕೊಂಡವನು. ಕ್ರಿಸ್ತನ ಸಭೆಯಲ್ಲಿ ಶೇರಲಿಕ್ಕೆ ನಪುಂಸಕತ್ವವಾದರೂ ಅಡ್ಡಿ ಮಾಡ ಕೂಡದೆಂಬ ನ್ಯಾಯವು ಅವನ ಸ್ನಾನದಿಂದ ಸ್ಥಾಪನೆಯಾಯಿತು[2]. ತದನಂತರ ಫಿಲಿಪ್ಪನು ಪಲೇಸ್ತೀನದ ಸಮುದ್ರತೀರದಲ್ಲಿ ಅಜೋತೆಂಬ ದಕ್ಷಿಣ ದಿಕ್ಕಿನ ಪಟ್ಣದಿಂದ ಉತ್ತರ ದಿಕ್ಕಿಗೆ ಕೈಸರೈಯವೆಂಬ ಬಂದರಸ್ಥಳದ ಪರ್ಯಂತ ಯೆಹೂದ್ಯರಿಗೆ ಪ್ರಸಂಗಿಸುತ್ತಾ ಹೋದನು[3]. ಈ ಕೈಸರೈಯವು[4] ಕರ್ಮೇಲು ಬೆಟ್ಟದ ತೆಂಕಣ ಅಡಿಯಲ್ಲಿ ಅದೆ; ಅದು ರೋಮಾಯ ಕೈಸರನ ಪ್ರತಿನಿಧಿಯ ಅರಮನೆಯಿರುವದೊಂದು[5] ದೊಡ್ಡ ವ್ಯಾಪಾರಸ್ಥಳವು. ಯೇಸುವನ್ನು ಕ್ರೂಜಿಸ ಗೊಟ್ಟ ಆ ಪೊಂತಿಯ ಪೀಲಾತನೆಂಬ ಪ್ರತಿನಿಧಿಯು ಅಲ್ಲಿ 10 ವರುಷ, ಕ್ರಿಸ್ತಶಕದ 37ನೇ ವರುಷದ ಅಂತದಲ್ಲಿ ತನ್ನ ಕ್ರೂರತ್ವಕ್ಕೋಸ್ಕರ ಉದ್ಯೋಗ ಕಳಕೊಳ್ಳುವ ತನಕ, ಅಧಿಕಾರ ಮಾಡುತ್ತಿದ್ದನು.

ಅಷ್ಟರೊಳಗೆ ಕ್ರಿಸ್ತಶಕದ ಆ 35ನೇ ಅಥವಾ 36ನೇ ವರುಷದಲ್ಲಿ ಯೆರೂಸಲೇಮಿನ ಕ್ರೈಸ್ತರ ಮೇಲಿನ ಹಿಂಸೆಯು ಆ ಸೌಲನೆಂಬವನ ಮುಖ್ಯಸ್ಥಿಕೆಯಲ್ಲಿ ನಡೆಯುತ್ತಲೇ ಬಂದಿತ್ತು. ಇವನು, ಸುರಿಯ ದೇಶದ ದೊಡ್ಡ ಪಟ್ಣವಾದ ಆ ದಮಸ್ಕದಲ್ಲಿ ಕ್ರೈಸ್ತರಾದವರನ್ನು[6] ಸಹ ಪೀಡಿಸ ಬೇಕೆಂದು, ಅಲ್ಲಿಗೆ ಹೋಗುವಾಗಲೇ ಅದ್ಭುತ ರೀತಿಯಿಂದ ಮಾನಸಾಂತರ ಪಟ್ಟು, ತಾನು ಕ್ರೈಸ್ತರನ್ನು ಹಿಂಸಿಸುತ್ತಿದ್ದದರಲ್ಲಿ ಹಿಂಸಕನಾಗಿದ್ದ ಯೇಸು ಕ್ರಿಸ್ತನ ಪರಮ ಮಿತ್ರನಾದನು. ಅವನು ಕೆಲವು ದಿವಸ ದಮುಸ್ಕದ ಕ್ರೈಸ್ತರಲ್ಲಿದ್ದು, ಬಳಿಕ ಸುವಾರ್ತೆಯ ಪ್ರಸಂಗಕ್ಕಾಗಿ ಅರಬಿಸ್ಥಾನಕ್ಕೆ ಹೋದನು.[7] ಈಚೆ ಅವನು ಅಲ್ಲಿಂದ ತಿರಿಗಿ ದಮುಸ್ಕ ಪಟ್ಣಕ್ಕೆ ಬಂದು, ತಾನು

1) ಅಪೊ. ಕ್ರಿ. 8, 5—25. 2) 5 ಮೋಶೆ. 23, 1; ಯೆಶಾ. 56, 3—7. 3) ಅಪೊ. ಕ್ರಿ. 8, 26—40; 21, 8—9. 4) ಅಪೊ. ಕ್ರಿ. 8, 40; 9, 30; 10, 1. 24; 11, 11; 12, 19; ಇತ್ಯಾದಿ. 5) 24ನೇ ಪಾನು. 6) ಅಪೊ. ಕ್ರಿ. 9, 1. 2. 10. 19; 31ನೇ ಪಾನು. 7) ಗಲಾ. 1, 17; ಅಪೊ, ಕ್ರಿ. 9, 1—22.

ಹೃತ್ಪರಿಣಾಮ ಪಟ್ಟು 3 ವರುಷ ಆದ ಮೇಲೆ ಕ್ರಿಸ್ತಶಕದ 39ನೇ ವರುಷ ಅಲ್ಲಿಂದ ಮೊದಲಿನ ಸಾರಿ ಯೆರೂಸಲೇಮಿಗ್ಹೈದಿ, ಅಲ್ಲಿ 15 ದಿವಸ ಇದ್ದು, ಅಪೊಸ್ತಲರಲ್ಲಿ ಪೆತ್ರನನ್ನೂ ಯೇಸುವಿನ ಸಹೋದರನಾದ ಆ ಕಿರಿ(?) ಯಕೋಬನನ್ನೂ ಕಂಡನು[1]; ಉಳಿದ ಅಪೊಸ್ತಲರು ಒಂದು ವೇಳೆ ಆ ದಿವಸಗಳಲ್ಲಿ ಅನಕ ಒಂದು ಪ್ರಸಂಗ ಪ್ರಯಾಣದಲ್ಲಿದ್ದರು.

ಸೌಲನು ಆ 2ನೇ ಸಾರಿ ದಮಸ್ಕಕ್ಕೆ ಬರುವಂದು ರೋವಿೂಯ ಸಾಮ್ರಾಜ್ಯದೊಳಗೆ ಇದ್ದ ಈ ಪಟ್ಣವು ಅರಬಿಸ್ಥಾನದ ಅರಸನಾದ ಆರೆತನು (ಹಾರೆಥನು) ಎಂಬವನ ವಶವಾಗಿತ್ತು[2]. ಈ ಆರೆತನು ಹೇರೋದ ಅಂತಿಪಸ[3] ಮಾವನು. ರೋವಿೂಯ ಕೈಸರನ ಅಧೀನತೆಯಲ್ಲಿ ಗಲಿಲಾಯ ಪೆರೇಯ ಎಂಬ ಈ ಎರಡು ಶೀಮೆಗಳನ್ನು ಆಳುವ ಹೇರೋದ ಅಂತಿಪನು ಇನ್ನು ಜೀವದಿಂದಿರುವ ಫಿಲಿಪ್ಪನೆಂಬ ತನ್ನ ಮಲಸಹೋದರನ ಹೆಂಡತಿಯಾದ ಹೇರೋದಿಯಳಿಗೆ ಮನ ಸೋತು, ಅವಳನ್ನು ಇಟ್ಟು ಕೊಂಡಿದ್ದನು. ಈ ಫಿಲಿಪ್ಪನನ್ನೂ ಹೇರೋದ ಅಂತಿಪನ ನಿಜ ಸಹೋದರನಾದ ಫಿಲಿಪ್ಪನನ್ನೂ[4] ಬದಲಿಸಲಾಗದು; ಹೇರೋದ ಅಂತಿಪನ ಆ ಮಲಸಹೋದರನು ತಂದೆಯಿಂದ ಏನೂ ಬಾಧ್ಯತೆಯ ಹೊಂದದೆ, ಸಾಧಾರಣ ಪ್ರಜೆಯವರಲ್ಲಿ ಒಬ್ಬನಂತೆ ಜೀವನ ಮಾಡುತ್ತಿದ್ದನು. ಹೇರೋದಿಯಳೆಂಬ ವ್ಯಭಿಚಾರಕಳು ಹೇಳುವ ಮಾತಿನ ಮೇಲೆ ಹೇರೋದ ಅಂತಿಪನು ತನ್ನ ಹೆಂಡತಿಯನ್ನು ದೂಡಿ ಬಿಟ್ಟದ್ದಲ್ಲದೆ ಯೋಹಾನನೆಂಬ ಸತ್ಯಾತ್ಮನಾದ ಸ್ನಾನಿಕನನ್ನು ಕೊಲ್ಲಿಸಿದ್ದನು[5]. ಅವನ ಹೆಂಡತಿಯು ತನ್ನ ತಂದೆಯಾದ ಆರೆತನ ಆಶ್ರಯಕ್ಕೆ ಓಡಿ ಹೋಗಿದ್ದಳು. ಅಂದಿನಿಂದ ಆರೆತನಿಗೂ ಹೇರೋದ ಅಂತಿಪನಿಗೂ ವರ್ಮ ಬಿತ್ತು. ಕ್ರಿಸ್ತಶಕದ 36ನೇ ವರುಷದ ಕಡೆಯಲ್ಲಿ ಆರೆತನು ದಂಡೆತ್ತಿ ಕೊಂಡು ಬಂದು, ಹೇರೋದನು ಎದುರಿಗೆ ಕಳುಹಿಸಿದ ದಂಡನ್ನು ಪೂರಾಗಿ ಹಾಳು ಮಾಡಿ ಬಿಟ್ಟನು. ಆದ್ದರಿಂದ ಅಂತಿಪನು ತನ್ನ ಧನಿಯಾದ ತಿಬೆರಿಯ ಕೈಸರನ ಸಹಾಯ ಬೇಡಿ ಕೊಂಡನು. ಇವನು ಸಮ್ಮತಿ ಪಟ್ಟು, ತಾನು ಹೊಸ್ತಾಗಿ ಸುರಿಯ ದೇಶದಲ್ಲಿ ನೇಮಿಸಿಟ್ಟ ವಿತೆಲ್ಲಿಯನೆಂಬ ತನ್ನ ಆ ಕಡೆಯ ಪ್ರಧಾನ ಪ್ರತಿನಿಧಿಗೆ[6], ಒಂದು ಸೇನೆಯ ಸಂಗಡ ಆರೆತನ ಮೇಲೆ ಯುದ್ಧಕ್ಕೆ ಹೋಗ ಬೇಕೆಂತ, ಅಪ್ಪಣೆ ಕೊಡುತ್ತಲೇ ಇವನು ಕ್ರಿಸ್ತಶಕದ 38ನೇ ವರುಷದ ಮಾರ್ಚ್ ತಿಂಗಳಲ್ಲಿ ಆ ಅಂತಿಯೊಖೀಯ ಪಟ್ಣದಿಂದ[7]

1) ಅಪೊ. ಕ್ರಿ. 9, 26 — 29; ಗಲಾ. 1, 17 — 19; 28ನೇ ಪಾನು. 2) 2 ಕೊರಿ. 11, 32; ಅಪೊ. ಕ್ರಿ. 9, 23 — 26. 3) 23ನೇ ಪಾನು ನೋಡು. 4) 23ನೇ ಪಾನು ನೋಡು. 5) ಲೂಕ. 3, 19 — 20; ಮರ್ಕ. 6, 17 — 30; ಮತ್ತಾ. 14, 3 ಇತ್ಯಾದಿ; ಲೂಕ. 23, 7 ಇತ್ಯಾದಿ; 24ನೇ ಪಾನು. 6) 24ನೇ ಪಾನು ನೋಡು. 7) 31ನೇ ಪಾನು.

ಹೊರಟು, ಯೆರೂಸಲೇಮಿಗೆ ಗಮಿಸಿ, ಅಲ್ಲಿ ಕೆಲವು ದಿವಸ ದಂಡಿಳಿದಿರುವಾಗ, ತಿಬೆರಿಯ ಕೈಸರನು ಮಡಿದನೆಂದು, ಸುದ್ದಿ ಬಂದು ಮುಟ್ಟಿತು. ತದನಂತರ ಕಾಯ ಕಲಿಗುಲನೆಂಬವನು ಕೈಸರನಾದನು. ತನಗೆ ಇವನ ಕಡೆಯಿಂದ ಯುದ್ಧಕ್ಕೆ ಆಜ್ಞೆ ಇಲ್ಲದಿರಲಾಗಿ, ವಿತೆಲ್ಲಿಯನು ತನ್ನೊಳಗಿನ ಸೇನೆಯನ್ನು ಬಿಡಿಸಿ, ಹಿಮಕಾಲಕ್ಕೆ ತಕ್ಕ ವಸ್ತಿಗೆ ಕಳುಹಿಸಿದನು. ಬಳಿಕ ಹೇರೋದಿಯಳೆಂಬ ಆ ವ್ಯಭಿಚಾರಕಳ ಸಹೋದರನಾದಂಥ ಹೇರೋದ ಅಗ್ರಿಪ್ಪನೆಂಬವನು ಆ ಹೊಸ ಕೈಸರನ ಹತ್ತರ ತನ್ನ ಪಿತೃವ್ಯನಾದ ಹೇರೋದ ಅಂತಿಪನ ಮೇಲೆ ಅನೇಕ ಅನ್ಯಾಯಕ್ರಿಯೆಗಳನ್ನು ಸ್ಥಾಪಿಸಿದ ದೆಸೆಯಿಂದ ಅಂತಿಪನು ಕ್ರಿಸ್ತಶಕದ 39ನೇ ವರುಷದಲ್ಲಿ ಗಲ್ಲಿಯ ದೇಶದ ಲಿಯೋನ್ ಎಂಬ ಪಟ್ಣಕ್ಕೆ ಗಡಿದಾಟಿ ಹೋಗ ಬೇಕಾಯಿತು. ಆದರೆ ಕ್ರಿಸ್ತಶಕದ 38ನೇದರಲ್ಲಿ ಆರೆತನಿಗೆ ಕಲಿಗುಲ ಕೈಸರನ ದಯೆಯಿಂದ ದಮಸ್ಕ ಪಟ್ಣವು ಇನಾಮಾಗಿ ಶಿಕ್ಕಿತ್ತೆಂಬಂತೆ ಕಾಣಿಸುತ್ತದೆ; 16 ವರುಷಕ್ಕೆ ಈಚೆ ಆ ಪಟ್ಣವು ತಿರಿಗಿ ರೋಮಿಾಯರ ಅಧೀನತೆಯೊಳಗೆ ಬಂದಿತ್ತು.

ಹೇರೋದ ಅಂತಿಪನ ನಿಜ ಸಹೋದರನಾದ ಫಿಲಿಪ್ಪನೆಂಬವನು ಇತೂರೇಯದಲ್ಲಿಯೂ ತ್ರಖೋನಿತಿಯಲ್ಲಿಯೂ ಆಳಿ[1], ಕ್ರಿಸ್ತಶಕದ 34ನೇ ವರುಷದಲ್ಲಿ ಸತ್ತಿದ್ದನು; ಅಂದಿನಿಂದ ಆ ಎರಡು ಪ್ರದೇಶಗಳು 3 ವರುಷ ಒಬ್ಬ ರೋಮಿಾಯ ಪ್ರತಿನಿಧಿಯ ಕೈಯ ಕೆಳಗಿದ್ದು, ತರುವಾಯ ಕ್ರಿಸ್ತಶಕದ 38ನೇದರಲ್ಲಿ ಕಲಿಗುಲ ಕೈಸರನ ಅಪ್ಪಣೆಯ ಮೇಲೆ 1ನೇ ಹೇರೋದ ಅಗ್ರಿಪ್ಪನಿಗೆ ಪ್ರಾಪ್ತವಾದವು. ಇವನು ಕ್ರಿಸ್ತನ ಜನ್ಮಕಾಲದಲ್ಲಿ ಆಳಿದ್ದ ಹೇರೋದನ ಮೊಮ್ಮಗನು; ತನ್ನ ಪಿತೃವ್ಯನಾದ ಹೇರೋದ ಅಂತಿಪನನ್ನು ಕೆಡಿಸಿದವನು ಇವನೇ. ಅವನು ಸರ್ವಥಾ ನೀಚ ಗುಣವುಳ್ಳವನು. ಮರುವರುಷಕ್ಕೆ ಅಂದರೆ ಕ್ರಿಸ್ತಶಕದ 39ನೇದಕ್ಕೆ ಕೈಸರನು ಆ ಹೇರೋದ ಅಂತಿಪನನ್ನು ಗಡಿ ದಾಟಿಸಿದನಂತರ ಇವನಿಗಿದ್ದ ಪ್ರದೇಶಗಳು ಸಹ ಹೇರೋದ ಅಗ್ರಿಪ್ಪನ ಕೈಯ ಕೆಳಗೆ ಬಂದವು. ಕಲಿಗುಲನು ಕ್ರಿಸ್ತಶಕದ 41ನೇ ವರುಷದಲ್ಲಿ ಕೊಲೆ ಪಟ್ಟನು; ಇವನ ಉತ್ತರಾಧಿಕಾರಿಯಾದ ಕ್ಲಾದಿಯನೆಂಬವನು ತನ್ನ ಪೂರ್ವಾಧಿಕಾರಿಯಂತೆ ಹೇರೋದ ಅಗ್ರಿಪ್ಪನಿಗೆ ಮೆಚ್ಚಿ, ಕ್ರಿಸ್ತಶಕದ 8ನೇ ವರುಷದಿಂದ[2] ರೋಮಿಾಯ ಪ್ರತಿನಿಧಿಗಳು ಆಳುತ್ತಾ ಬಂದಿದ್ದ ಯೆಹೂದ, ಇದೂಮೇಯ, ಸಮರೀಯ ಎಂಬ ಈ 3 ಶೀಮೆಗಳನ್ನು ಸಹ ಅವನ ಪರಿಪಾಲನಕ್ಕೆ ಒಪ್ಪಿಸಿಕೊಟ್ಟನು. ಹೀಗೆ ಕ್ರಿಸ್ತಶಕದ ಆ 41ನೇ ವರುಷ ಸಮಸ್ತ ಪಲೇಸ್ತೀನವೂ ಅದರ ನೆರೆಪ್ರದೇಶಗಳೂ ಕೂಡಿ ತಿರಿಗಿ ರೋಮಿಾಯರ ಅಧೀನತೆಯಲ್ಲಿ ಒಬ್ಬನೇ ರಾಯನ ಕೆಳಗೆ ಆದವು.

---

1) 23ನೇ ಪಾನು ನೋಡು. 2) 24ನೇ ಪಾನು ನೋಡು.

ಯೆಹೂದದಲ್ಲಿಯೂ ಗಲಿಲಾಯದಲ್ಲಿಯೂ ಸಮರೀಯದಲ್ಲಿಯೂ ಉತ್ಪನ್ನವಾದ ಕ್ರೈಸ್ತ ಸಭೆಗಳು ತನ್ಮಧ್ಯದಲ್ಲಿ ಸೌಲನ ಹೃತ್ಪರಿಣಾಮದ ಈಚೆ 8 ವರುಷ ಕ್ರಿಸ್ತಶಕದ 44ನೇದರ ವರೆಗೆ ಶಾಂತಿ ಅನುಭವಿಸುತ್ತಾ ಅಭಿವರ್ಧಿಸುತ್ತಾ ಇದ್ದವು[1]. ಆ ಸಮಯದೊಳಗೆ ಪೇತ್ರನೆಂಬ ಅಪೊಸ್ತಲನು ಆ 3 ಶೀಮೆಗಳಲ್ಲಿ ಸಂಚರಿಸುತ್ತಾ ಇದ್ದು, ಒಮ್ಮೆ ಯೆಹೂದದ ಒಂದು ಪಟ್ಣವಾದ ಲುದ್ದದಲ್ಲಿ, ಆ ಮೇಲೆ ಅದೇ ಶೀಮೆಯ ಒಂದು ಬಂದರಸ್ಥಳವಾದ ಯೊಪ್ಪೆಯಲ್ಲಿ ಸಹ ಪ್ರಸಂಗಿಸುತ್ತಾ ಅದ್ಭುತ ಕ್ರಿಯೆಗಳನ್ನು ನಡಿಸುತ್ತಾ ಇರಲು, ಒಂದು ವಿಶೇಷ ದೇವದರ್ಶನದ ಮೇಲೆ—ಕ್ರಿಸ್ತನ ಸಭೆಯಲ್ಲಿ ಶೇರಲಿಕ್ಕೆ ಪರಿಚ್ಛೇದನಾದಿ ಪೂರ್ಣ ವಿಧಿಯ ಅಂಗೀಕಾರವು ಬೇಡ, ಕ್ರಿಸ್ತನ ಮೇಲಿನ ವಿಶ್ವಾಸ ಒಂದೇ ಸಾಕೆಂತ, ಮೊದಲಿನ ಸರ್ತಿ ಸ್ಪಷ್ಟವಾಗಿ ತಿಳುಕೊಂಡು, ದೇವರಾತ್ಮದ ಪ್ರೇರಣೆಯಿಂದ ಉತ್ತರಕ್ಕೆ ಯೆಹೂದದ ಕೈಸರೈಯವೆಂಬ ಆ ಬಂದರಸ್ಥಳಕ್ಕೆ ಹೋಗಿ[2], ಅಲ್ಲಿಯ ಒಂದು ಈತಲಿಕ ಅಂದರೆ ರೋವಿಾಯ ಸೇನಾಭಾಗದ ಮುಖ್ಯಸ್ಥನಾದ ಕೊರ್ನೇಲಿಯನೆಂಬ ಒಬ್ಬ ಅಪರಿಚ್ಛೇದನವಿಶ್ವಾಸಿಗೂ ಅವನ ಮನೆಯವರಿಗೂ ಪರಿಚ್ಛೇದನ ಮಾಡಿಸದಲೇ ಸ್ನಾನ ಕೊಡಿಸಿದನು[3]. ಆ ಪಟ್ಣದಲ್ಲಿ ಫಿಲಿಪ್ಪನೆಂಬ ಆ ದರಿದ್ರಪೋಷಕೋದ್ಯೋಗಸ್ಥನು ಮುಂದಾಗಿ ಯೆಹೂದ್ಯರಿಗೆ ಪ್ರಸಂಗಿಸಿದ್ದನು[4]. ಪೇತ್ರನು ಅಲ್ಲಿ ಕೆಲವು ದಿವಸ ತಡದು, ಯೆರೂಸಲೇಮಿನಲ್ಲಿರುವ ಬೇರೆ ಅಪೊಸ್ತಲರ ಮತ್ತು ಸಭೆಯವರ ಹತ್ತರ ತಿರಿಗಿ ಬಂದಾಗ—ತಾನು, ಆ ಕೊರ್ನೇಲಿಯನೂ ಅವನ ಮನೆಯವರೂ ಅಪರಿಚ್ಛೇದನೆಯವರೆಂದು, ಲಕ್ಷಿಸದೆ, ಅವರಿಗೆ ಪರಿಚ್ಛೇದನಾದಿ ಕ್ರಿಯೆಗೆ ಒಡಂಬಡಿಸದಲೇ ಸ್ನಾನ ಕೊಡಿಸಿದ್ದು ದಿವ್ಯ ನ್ಯಾಯವೇ! ಎಂತ, ಸ್ಥಾಪನೆ ಮಾಡಿದನು. ಆ ವಿಷಯದ ಸ್ಥಾಪನೆಯು ಅತ್ಯಗತ್ಯವಾಗಿತ್ತು, ಹ್ಯಾಗಂದರೆ ಅಪೊಸ್ತಲರಿಗೂ ಯೆರೂಸಲೇಮಿನ ಕ್ರೈಸ್ತರೆಲ್ಲರಿಗೂ ಆ ವಿಷಯದ ಬಹು ಸಂಶಯವು ಇರುತ್ತಿತ್ತು. ಪರಿಚ್ಛೇದನೆಯು 2000 ವರುಷ ದೇವರ ಸಂಗಡದ ಒಡಂಬಡಿಕೆಯ ಬಹಿಃಸಂಜ್ಞೆಯಾಗಿ ನಡೆದು ಬಂದಿತ್ತಲ್ಲ[5]? ಅವರಿಗೆ ಆಗಲೇ ಆ ವಿಷಯದ ನಿಶ್ಚಯತ್ವವು ದೇವರಿಂದ ದೊರಕದಿದ್ದರೆ ಸಭಾಭೇದವು ಆಗುವ ಕಂಟಕವು ಒದಗುತ್ತಿತ್ತು. ಯಾಕಂದರೆ ಅಷ್ಟರೊಳಗೆಯೇ ಬೇರೆ ಕಡೆಯಲ್ಲಿ ಅಪರಿಚ್ಛೇದನೆಯ ಅನೇಕರು ಕ್ರಿಸ್ತನ ಸಭೆಯನ್ನು ಕೂಡಿ ಕೊಂಡಿದ್ದರು; ಹ್ಯಾಗಂದರೆ ಕುಪ್ರ ದ್ವೀಪದವರೂ[6] ಆಫ್ರಿಕ ಖಂಡದ ಕೂರೇನೆ ಪಟ್ಣದವರೂ[7] ಆದ ಹಲವು ಮಂದಿ ಯೆಹೂದ್ಯ ಮತದವರು ಕ್ರೈಸ್ತರಾಗಿ, ಲಿಬನವೆಂಬ ಪರ್ವತಗಳ ಪ್ರದೇಶವೂ ಇದರ ಪೂರ್ವದಲ್ಲೊಂದು ಬೈಲುಶೀಮೆಯೂ ಅಡಗಿರುವ ಆ ಸುರಿಯ

1) ಅಪೊ. ಕ್ರಿ. 9, 31. 2) 32ನೇ ಪಾನು. 3) ಅಪೊ. ಕ್ರಿ. 9, 32—10, 1—48.
4) ಅಪೊ. ಕ್ರಿ. 8, 40. 5) 1 ಮೋಶೆ. 17, 10—14. 6) 31ನೇ ಪಾನು. 7) 29ನೇ ಪಾನು.

ದೇಶದ ಮತ್ತು ರೋಮಿಾಯ ಸಾಮ್ರಾಜ್ಯದ ಮಿಕ್ಕಾದ ಮೂಡಣ ಭಾಗದ ಮುಖ್ಯ ಪುರವಾದಂಥ ಅಂತಿಯೊಖೀಯಕ್ಕೆ[1] ಬಂದು, ಅಲ್ಲಿ ಯೆಹೂದ್ಯರ ಸಂಬಂಧವಿಲ್ಲದಂಥ ಗ್ರೇಕರಿಗೆ ಸಹ ಸುವಾರ್ತೆಯನ್ನು ಪ್ರಸಂಗಿಸಿದ್ದದ್ದರಿಂದ ಆ ಗ್ರೇಕರ ಒಂದು ದೊಡ್ಡ ಮಾಂಸಾಪರಿಚ್ಛೇದನಸಭೆಯು ಹುಟ್ಟಿತ್ತು[2]. ಪೇತ್ರನು ಸ್ಥಾಪನೆ ಮಾಡಿದ್ದರ ನಿಮಿತ್ತವೇ ಇಂಥ ಸಭೆಯವರಿಗೂ ಯೆರೂಸಲೇಮಿನ ಕ್ರೈಸ್ತರ ಮೆಚ್ಚಿಗೆ ಪ್ರಾಪ್ತವಾಯಿತು. ಆ ಅಂತಿಯೊಖೀಯ ಪಟ್ಣವನ್ನು ಯುರೋಪ ಭೂಖಂಡದ ಗ್ರೇಕಿಯವೆಂಬ ದೇಶದವರು ಕಟ್ಟಿದ್ದರು; ಅದರಲ್ಲಿ ಮುಖ್ಯ ನಿವಾಸಿಗಳು ಗ್ರೇಕರೇ (ಯವನರೇ)[3]; ರೋಮಪುರವೂ ಐಗುಪ್ತದ ಅಲೆಕ್ಸಂದರೀಯಪುರವೂ[4] ಅಂತಿಯೊಖೀಯವೂ ರೋಮಿಾಯ ಸಾಮ್ರಾಜ್ಯದ 3 ದೊಡ್ಡ ಪಟ್ಣಗಳೇ. ಕೈಸರನಾದ ಕ್ಲೌದಿಯನು 3 ವರುಷ ಆಳಿದ ಮೇಲೆ ಕ್ರಿಸ್ತಶಕದ 44ನೇದರಲ್ಲಿ ಆ ಅಂತಿಯೊಖೀಯದ ಕ್ರೈಸ್ತರು (ಕ್ರಿಸ್ತಿಯಾನರು) ಯೆಹೂದ ಶೀಮೆಯಲ್ಲಿ ಒಂದು ಬರದಿಂದ ಕಷ್ಟ ತಾಳುವ ತಮ್ಮ ಕ್ರೈಸ್ತ ಸಹೋದರರಿಗೆ ಅಂತಃಕರಣ ಪಟ್ಟು, ತಮ್ಮ ಬೋಧಕರಾದ ಬರ್ನಬನ ಮತ್ತು ಆ ಸೌಲನ ಮುಖಾಂತರವಾಗಿ ದಾನಧರ್ಮಸಹಾಯವನ್ನು ಕಳುಹಿಸಿ ಕೊಟ್ಟರು[5].

ಬರ್ನಬನೂ ಸೌಲನೂ ಅಂದು ಯೆರೂಸಲೇಮಿನಲ್ಲಿ ಇರುವಾಗ 1ನೇ ಹೇರೋದ ಅಗ್ರಿಪ್ಪನೆಂಬ ಸರ್ವ ಪಲೇಸ್ತೀನ ದೇಶವನ್ನು ಬಹು ಕ್ರೂರ ಪ್ರಕಾರವಾಗಿ ಆಳುವ ಆ ಅರಸನು[6] ಕೈಸರೈಯ ಪಟ್ಣದಲ್ಲಿಯ[7] ತನ್ನ ಅರಮನೆಯಿಂದ ಪಸ್ಕ ಹಬ್ಬಕ್ಕೋಸ್ಕರ[8] ಯೆರೂಸಲೇಮಿಗೆ ಬಂದು, ಹಲವರು ಕ್ರೈಸ್ತರನ್ನು ಪೀಡೆ ಪಡಿಸಿ, ಯೋಹಾನ ಅಪೊಸ್ತಲನ ಸಹೋದರನಾದ ಹಿರಿ ಯಕೋಬನನ್ನು ಕತ್ತಿಯಿಂದ ಕೊಲ್ಲಿಸಿದನು[9]. ಯುಸೆಬಿಯನೆಂಬ ಸಭಾಚರಿತ್ರಗಾರನಾದವನ[10] ಗ್ರಂಥದಲ್ಲಿ ಇರುವದೇನಂದರೆ—ಯಕೋಬನ ಮೇಲೆ ಸುಳ್ಳು ಹೇಳಿ ಅವನ ಮರಣಕ್ಕೆ ಮುಖ್ಯ ಕಾ

---

1) 33ನೇ ಪಾನು. 2) ಅಪೊ. ಕ್ರಿ. 11, 19—24. 3) ಆ ಗ್ರೇಕಿಯವೆಂಬ ಯವನ ದೇಶದ ಅಲೆಕ್ಸಂದರನೆಂಬ ಮಹಾರಾಜನು ಕ್ರಿಸ್ತಶಕಕ್ಕೆ ಮುಂಚಿನ 327ನೇ ಅಬ್ದ ಸುತ್ತ ಹಿಂದು ದೇಶದ ಪಶ್ಚಿಮೋತ್ತರ ಭಾಗವನ್ನು ಸಾಧಿಸಿ ಕೊಂಡು, 4 ಅಬ್ದಕ್ಕೆ ಈಚೆ ಸತ್ತ ಮೇಲೆ ಅವನ ದಳವಾಯಿಗಳಲ್ಲೊಬ್ಬನಾದ ಸೆಲ್ಯುಕನು ಹಿಂದು ದೇಶದಲ್ಲಿ ಅವನ ಉತ್ತರಾಧಿಕಾರಿಯಾಗಿ, ಕ್ರಿಸ್ತಶಕಕ್ಕೆ ಮುಂಚಿನ 311ನೇ ಅಬ್ದ ಪಾಟಲಿಪುತ್ರದ (ಪಟ್ಣದ) ಚಂದ್ರಗುಪ್ತನೆಂಬ ರಾಯನ ಸಂಗಡ ಸ್ನೇಹವುಳ್ಳದ್ದೊಂದು ಒಡಂಬಡಿಕೆ ಕಟ್ಟಿ ಕೊಂಡನು. 11 ವರುಷ ಹೋದನಂತರ ಸುರಿಯದ ಅಂತಿಯೊಖೀವನ್ನು ನಿರ್ಮಿಸಿದವನು ಆ ಸೆಲ್ಯುಕನೇ. 4) ಇದನ್ನು ಕಟ್ಟಿದವನು ಅಲೆಕ್ಸಂದರನೆಂಬ ಆ ಮಹಾರಾಜನೇ. 5) ಅಪೊ. ಕ್ರಿ. 11, 27—30; 12, 25; 33ನೇ ಪಾನು. 6) 34ನೇ ಪಾನು ನೋಡು. 7) 32ನೇ, 35ನೇ ಪಾನುಗಳನ್ನು ನೋಡು. 8) 25ನೇ ಪಾನು. 9) ಅಪೊ. ಕ್ರಿ. 12, 1—2; 27ನೇ ಪಾನು. 10) 10ನೇ, 22ನೇ ಸಂಧಿಗಳು.

ರಣನಾದ ಆ ಮನುಷ್ಯನು ಆ ಅಪೊಸ್ತಲನು ಕ್ರಿಸ್ತನ ಮೇಲೆ ಅರಿಕೆ ಮಾಡಿದ ಭಕ್ತಿಯ ಬಲದಿಂದ ಮನಸ್ಸು ಒಡೆದವನಾಗಿ, ತಾನು ಕ್ರೈಸ್ತನಾದನು. ಈಚೆ ಯಕೋಬನ ಸಂಗಡ ಅವನನ್ನು ಸಹ ಹನನಸ್ಥಳಕ್ಕೆ ವೈಯುತ್ತಿರಲು, ಆ ಹೃತ್ಪರಿಣಾಮಪಟ್ಟ ಮನುಷ್ಯನು ಯಕೋಬನನ್ನು, ಮನ್ನಿಸಿರೆಂತ, ಬೇಡಿ ಕೊಂಡದ್ದಕ್ಕೆ ಇವನು, ಸಮಾಧಾನವು ನಿನ್ನ ಸಂಗಡ ಇರಲಿ! ಎಂದು, ಹೇಳಿ, ಅವನಿಗೆ ಮುದ್ದಿಕ್ಕಿ, ಧೈರ್ಯಕೊಟ್ಟನು. ಬಳಿಕ ಅವರಿಬ್ಬರು ಕೂಡಿ ಹತರಾದರು.—ಅಪೊಸ್ತಲರಲ್ಲಿ ಮೊದಲಿನವನಾಗಿ ರಕ್ತಸಾಕ್ಷಿಯಾದವನು ಯಕೋಬನೇ[1]. ತಾನು ಕ್ರೈಸ್ತರಿಗೆ ಆ ಪ್ರಕಾರವಾಗಿ ಹಿಂಸಿಸುವದಕ್ಕೆ ಯೆಹೂದ್ಯರು ಮೆಚ್ಚುತ್ತಾರೆಂತ, ಅಗ್ರಿಪ್ಪನು ತಿಳಿದು, ಆ ಹಿಂಸೆಯನ್ನು ಮುಂದೆ ನಡಿಸುವಲ್ಲಿ ಪೇತ್ರನನ್ನು ಸಹ ಶೆರೆ ಹಿಡಿಸಿದನು; ಆದರೆ ಇವನಿಗೆ ಅನೇಕ ವಿಶ್ವಾಸಿಗಳ ಪ್ರಾರ್ಥನೆಯಿಂದಲೂ ಒಬ್ಬ ದೇವದೂತನ ಕೈಯಿಂದಲೂ ಬಿಡುಗಡೆಯಾಯಿತು[2]. ತದನಂತರ ಪೇತ್ರನು ಅನಕ ಯೆರೂಸಲೇಮನ್ನು ಬಿಟ್ಟು, ಬೇರೊಂದು ಸ್ಥಳಕ್ಕೆ ಹೋಗಲಾಗಿ, ಕರ್ತನ ಸಹೋದರನೂ ಅಲ್ಫಾಯನ ಮಗನೂ ಅನ್ನಿಸಿ ಕೊಳ್ಳುವ ಕಿರಿ (?) ಯಕೋಬನು[3] ಅಲ್ಲಿಯ ಸಭೆಯ ಅಧ್ಯಕ್ಷನಾದನು. 1ನೇ ಹೇರೋದ ಅಗ್ರಿಪ್ಪನು ಕೈಸರೈಯಕ್ಕೆ ಹಿಂದಿರುಗಿದ ಮೇಲೆ ಇನ್ನೂ ಕ್ರಿಸ್ತಶಕದ ಅದೇ 44ನೇ ವರುಷದಲ್ಲಿ ಆ ಕೆಟ್ಟ ಗರ್ವಿಷ್ಠ ರಾಜನನ್ನು ಜೀವದಶೆಯಲ್ಲಿಯೇ ಹುಳಗಳು ಸ್ವಲ್ಪ ದಿವಸದೊಳಗೆ ತಿಂದು ಬಿಟ್ಟವು[4]. ಆಗ 2ನೇ ಹೇರೋದ ಅಗ್ರಿಪ್ಪನೆಂಬ ಅವನ ಮಗನು 17 ವರುಷಮಾತ್ರದವನಾಗಿ ಇರುವ ಕಾರಣ ಸರ್ವ ಪಲೇಸ್ತೀನವು ರೋಮಾಯ ಪ್ರತಿನಿಧಿಗಳಿಗೆ ಒಪ್ಪಿಸಲಾಯಿತು; ಅವನಿಗೆ 26ನೇ ವರುಷ ಬಂದಂದು ಕ್ರಿಸ್ತಶಕದ 53ನೇದರಲ್ಲಿ ಕ್ಲಾದಿಯ ಕೈಸರನು ಅವನಿಗೆ ಪಲೇಸ್ತೀನದ ಬಡಗ ಭಾಗದ ಮೇಲೆ ಅರಸುತನವನ್ನೂ ಯೆರೂಸಲೇಮಿನೊಳಗಣ ಯೆಹೂದ್ಯ ದೇವಾಲಯದ ಮೇಲಿನ ಆಡಳಿತೆಯನ್ನೂ ಕೊಟ್ಟನು; ಆ ದೇಶದ ಮಿಕ್ಕ ಭಾಗವನ್ನು ರೋಮಾಯ ಪ್ರತಿನಿಧಿಗಳು ಮುಂಚಿನಂತೆ ನೋಡುತ್ತಿದ್ದರು. 1ನೇ ಹೇರೋದ ಅಗ್ರಿಪ್ಪನ ಮರಣಕ್ಕೆ ಇತ್ತಲಾಗೆ ಯೆರೂಸಲೇಮಿನಲ್ಲಿಯ ಯೆಹೂದ್ಯಶ್ರೇಷ್ಠರು ಕ್ರೈಸ್ತರ ಮೇಲಿನ ತಮ್ಮ ಹಗೆ ಬಿಡಲಿಲ್ಲ; ಇದಕ್ಕೆ ಆ ಯುಸೆಬಿಯನ ಸಭಾಚರಿತ್ರದಲ್ಲಿ ಒಂದು ಮಾತು ಇರುವದೇನಂದರೆ—ಒಂದು ಹಳೇ ಗ್ರಂಥವು ತಿಳಿಸುವ ಪ್ರಕಾರ ಆ ಯೆಹೂದ್ಯಶ್ರೇಷ್ಠರು, ಕ್ರಿಸ್ತನ ಮೋಸದ ವಾಕ್ಯಸಂಗಕ್ಕೆ ಬಹು ಹೆದರಿ ಕೊಂಡು ಇರ್ರಿ! ಎಂತ, ಸರ್ವ ಭೂಮಿಯ ಸಕಲ ಯೆಹೂದ್ಯ

1) 30ನೇ ಪಾನು ಸರಿ ನೋಡು. 2) ಅಪೊ. ಕ್ರಿ. 12, 3—18. 3) ಮರ್ಕ. 15, 40; 28ನೇ ಪಾನು. 4) ಅಪೊ. ಕ್ರಿ. 12, 19—23; ಅವನ ಅಜ್ಜನು ಸತ್ತ ರೀತಿಯನ್ನು ಕುರಿತು 23ನೇ ಪಾನು ನೋಡು.

ರಿಗೆ ಕಾಗದ ಬರದು ತಲಪಿಸಿದರು.—ಆದರೂ ದೇವರ ವಾಕ್ಯವು ಎಲ್ಲಾ ಹಿಂಸೆ ಗೆದ್ದು ಬಲಗೊಳ್ಳುತ್ತಾ ಇತ್ತು[1]; ಯೆಹೂದ್ಯ ಯಾಜಕರೂ ಫರಿಸಾಯರೂ ಸಹ ವಿಶ್ವಾಸಿಗಳಾಗದಿರಲಿಲ್ಲ[2].

ಪೇತ್ರ ಅಪೊಸ್ತಲನು ಕ್ರಿಸ್ತಶಕದ 44ನೇ ವರುಷದಲ್ಲಿ ಯೆರೂಸಲೇಮನ್ನು ಬಿಟ್ಟು, ಯಾವ ಸ್ಥಳಕ್ಕೆ ಹೋದನೆಂತ, ಅಗದೀ ಗೊತ್ತಿಲ್ಲ; ಆ ಕಾಲದಿಂದ 6 ವರುಷದ ಪರ್ಯಂತ ಅವನ ವಿಷಯದ ನಿಶ್ಚಯವಾದ ಒಂದು ಸುದ್ದಿಯೂ ಇಲ್ಲ. ಅಂದಿಗೆ ಸುಮಾರು 300 ವರುಷ ಈಚೆ ಬದುಕಿದ ಯುಸೆಬಿಯ, ಹಿಯೆರೋನುಮ[3] ಎಂಬ ಇಬ್ಬರು ಸಭಾಪಿತೃಗಳು, ಪೇತ್ರನು ಅಂದು ಅಂದರೆ ಕ್ರಿಸ್ತಶಕದ ಆ 44ನೇ ವರುಷದಲ್ಲಿ ರೋಮಪುರಕ್ಕೆ ಹೋಗಿರ ಬಹುದೆಂತ, ಊಹಿಸಿದ್ದು ದೇವವಾಕ್ಯಕ್ಕೆ ವಿರೋಧವೆಂಬದನ್ನು ಇನ್ನು ಮುಂದೆ ಬೇರೆ ಕಡೆಯಲ್ಲಿ ತೋರಿಸೋಣವಾಗುವದು. ಕ್ರಿಸ್ತಶಕದ 185ನೇ ವರುಷ ಹುಟ್ಟಿದ ಒರೀಗೆನನು ಎಂಬ ಸಭಾಪಿತೃವು[4] ಮತ್ತು ಆ ಯುಸೆಬಿಯನು ಸಹ, ಪೇತ್ರನು ಪೊಂತ, ಗಲತಿಯ, ಬಿಥೂನಿಯ, ಕಪ್ಪದೊಕಿಯ ಮುಂತಾದ ಸಣ್ಣ ಅಸಿಯದ ಪ್ರದೇಶಗಳಲ್ಲಿಯ[5] ಕ್ರೈಸ್ತರಿಗೆ ಎರಡು ಕಾಗದ ಬರೆದು ಕಳುಹಿಸಿದನೆಂತ, ಅರಿತು, ಇದರ ಮೇಲೆ, ಅವನು ಅಲ್ಲಿ ಅಲ್ಲಿ ಪ್ರಸಂಗಿಸಿದನೆಂದು, ಆಲೋಚನೆ ಮಾಡಿ ಕೊಂಡು, ಲೇಖಿಸಿದಂತೆ ಕಾಣಿಸುತ್ತದೆ. ಅವರಿಬ್ಬರು ಊಹಿಸಿದಂತಿದ್ದದು ಸತ್ಯವಾದರೆ ಪೇತ್ರನ ಆಯಾ ಕಡೆಯ ಪ್ರಸಂಗಪ್ರಯಾಣವು ಕ್ರಿಸ್ತಶಕದ 58ನೇ ವರುಷಕ್ಕೆ ಮುಂಚೆ ನಡೆದಿರ ಕೂಡದು; ಹ್ಯಾಗಂದರೆ, ಪೂರ್ವದಲ್ಲಿ ಸೌಲನೆನ್ನಿಸಿ ಕೊಂಡು[6], ತರುವಾಯ ಪೌಲ ಅಪೊಸ್ತಲನು ಆದ ಅವನು ಸಣ್ಣ ಅಸಿಯದ ಅಲ್ಲಲ್ಲಿಯ ಸಭೆಗಳನ್ನು ಹುಟ್ಟಿಸುತ್ತಿರುವ ಕಾಲದೊಳಗೆ ಅಂದರೆ ಕ್ರಿಸ್ತಶಕದ 45ನೇ ವರುಷದಿಂದ 58ನೇದರ ತನಕ ಪೇತ್ರನು ಆಯಾ ಪ್ರದೇಶಗಳಲ್ಲಿ ಪ್ರಸಂಗವೃತ್ತಿ ನಡಿಸಿದನೆಂತ, ಪರಿಶುದ್ಧ ಬರಹದಲ್ಲಿ ರವೆಯಷ್ಟು ಸೂಚನೆಯೂ ಇಲ್ಲ; ಅದು ಹೊರ್ತಾಗಿ ಪೇತ್ರನು ಗಮಿಸಿ, ಆಯಾ ಕಡೆಯಲ್ಲಿ ಸ್ವಲ್ಪ ಮಾತ್ರವೂ ಮುಂದಾಗಿ ಸುವಾರ್ತೆ ಸಾರ ತೊಡಗಿದ್ದರೆ ಪೌಲನು ಈ ನಿಮಿತ್ತೋಸ್ಕರ ಅಲ್ಲಿಗೆ ಹೋಗುತ್ತಿದ್ದಿಲ್ಲ, ಹ್ಯಾಗಂದರೆ ಕ್ರಿಸ್ತನ ಹೆಸರು ಇನ್ನು ಗೊತ್ತಾಗದ್ದಲ್ಲಿ ಮಾತ್ರ ಸುವಾರ್ತೆ ಪ್ರಸಂಗಿಸುತ್ತೇನೆಂಬದು ಪೌಲನ ನಿಶ್ಚಲವಾದ ಸಿದ್ಧಾರ್ಥವು[7]. ಪೇತ್ರನು ಕ್ರಿಸ್ತಶಕದ 44ನೇದಕ್ಕೆ ಸುಮಾರು 19 ವರುಷ ಈಚೆ[8] ಬಬೆಲು ದೇಶದಲ್ಲಿ ವಸ್ತಿ ಮಾಡಿದನು; ಹಾಗಾದರೆ, ಅವನು ಕ್ರಿಸ್ತಶಕದ 44ನೇದರಲ್ಲಿ ಸಹ ಹೋಗಿ, ಅಲ್ಲಿ

---

1) ಅಪೊ. ಕ್ರಿ. 12, 24. 2) ಅಪೊ. ಕ್ರಿ. 6, 7; 15, 5; 21ನೇ ಪಾನು ನೋಡು. 3) 19ನೇ ಸಂಧಿ. 4) 16ನೇ ಸಂಧಿ. 5) 1 ಪೇತ್ರ. 1, 1. 6) 30ನೇ ಪಾನು. 7) ರೋಮಾ. 15, 20. 8) 1 ಪೇತ್ರ. 5, 13.

ಕೆಲವು ಕಾಲ ಕಳೆದನೋ? ಇಲ್ಲವೋ? ಎಂಬಂತೆ ಕೇಳ ಬಹುದು. ಈ ಪ್ರಶ್ನೆಗೆ ಕಟ್ಟುತ್ತರ ಶಿಕ್ಕದಿದ್ದರೂ ಅಂಥ ಸಂಗತಿಗೆ ಅಭ್ಯಂತರ ಕಾಣುವದಿಲ್ಲ. ಬಬೆಲು ದೇಶವು ಪಲೇಸ್ತೀನಕ್ಕೆ ಮೂಡಲಲ್ಲಿ ಅದೆ. ಆ ದೇಶದ ಉಫ್ರಾತು ನದಿಯ ದಂಡೆಯಲ್ಲಿದ್ದ ಪ್ರಖ್ಯಾತ ಬಬೆಲು ನಗರವು ಸುಮಾರು ಕ್ರಿಸ್ತಶಕಕ್ಕೆ ಮುಂಚಿನ 300ನೇ ವರುಷದಲ್ಲಿ ಇಲ್ಲದೆ ಹೋಗಿತ್ತು[1]; ಅಂದು ಅದರಲ್ಲಿ ಉಳಿದಿದ್ದ ಸಕಲ ನಿವಾಸಿಗಳು ಗಡಿ ದಾಟಿ ತಿಗ್ರಿಸ್ ಎಂಬ ನದಿಯ ಬಳಿಯಲ್ಲಿ (ಸೆಲ್ಯುಕನೆಂಬ ಯವನ ರಾಜನಿಂದ[2]) ಸ್ಥಾಪಿತವಾದ ಸೆಲ್ಯುಕೀಯ ಮತ್ತು ಕ್ತೇಸಿಫೋನು (ಬಾಗ್ದಾದ್) ಎಂಬ ಪಟ್ಟಣಗಳಿಗೆ ಹೋಗ ಬೇಕಾಯಿತು. ಬಬೆಲು ದೇಶವು ರೋಮಾಯ ಸಾಮ್ರಾಜ್ಯದೊಳಗಿನದಲ್ಲ, ಅದು ಕ್ರಿಸ್ತಶಕಕ್ಕೆ ಮುಂಚೆ ಸುಮಾರು 190ನೇ ವರುಷದಲ್ಲಿ ಪಾರ್ಥರ ವಶವಾಗಿತ್ತು; ಈ ಪಾರ್ಥರು (ಪಾರದರು) ಅಪೊಸ್ತಲರ ಕಾಲದಲ್ಲಿ ರೋಮಾಯ ಸಾಮ್ರಾಜ್ಯದ ಪೂರ್ವ ಮೇರೆಯನ್ನು ಹಿಡಿದು ಹಿಂದು ದೇಶದ ವರೆಗೆ ಆಳುತ್ತಿದ್ದರು. ಅಪೊಸ್ತಲರು ಬದುಕುತ್ತಿರುವ ಸಮಯ ಸಹ ಬಬೆಲು ದೇಶದಲ್ಲಿ ಅನೇಕ ಯೆಹೂದ್ಯರು ಇದ್ದರು[3]. ಕ್ರಿಸ್ತಶಕದ 40ನೇ ವರುಷ ಆ ಕಡೆಯ ಯೆಹೂದ್ಯರಿಗೆ ಕೆಲವು ಕಾಲ ಒಂದು ದೊಡ್ಡ ಹಿಂಸೆಯಾಯಿತು; ಹಾಗಾದರೆ, ಪೇತ್ರನು ಅಲ್ಲಿ ತನ್ನ ವಂಶಸ್ಥರೂ ತನ್ನ ಅಪೊಸ್ತಲತನಕ್ಕೆ ವಿಶೇಷದಿಂದೊಳಗಾಗ ತಕ್ಕವರೂ[4] ಆದಂಥವರಿಗೆ ಮಿಗು ಅಂತಃಕರಣ ಪಟ್ಟು, ಕ್ರಿಸ್ತಶಕದ 44ನೇ ವರುಷದಲ್ಲಿಯೂ ಅವರ ಬಳಿಗೆ ಹೋಗಿರ ಬಹುದೆಂತ, ನೆನಸ ಬರುತ್ತದೆ.

ಪೇತ್ರನು ಕ್ರಿಸ್ತಶಕದ 44ನೇ ವರುಷ ಯೆರೂಸಲೇಮನ್ನು ಬಿಟ್ಟು ಹೋದ ಹಾಗೆಯೇ ಕಿರಿ(?) ಯಕೋಬನಲ್ಲದೆ ಉಳಿದ ಅಪೊಸ್ತಲರು ಸಹ ಆ ವರುಷದಲ್ಲಿ ಆಗಲಿ ಮರು ವರುಷದಲ್ಲಿ ಆಗಲಿ ಯೆರೂಸಲೇಮಿಂದ ಹೊರಟು, ಪ್ರಯಾಣಪ್ರಸಂಗಿಕರಾಗಿ ಬೇರೆ ಬೇರೆ ದಿಕ್ಕಿಗೆ ಹೋದರೆಂದು, ತೋಚುತ್ತದೆ. ಈ ಮಾತು ಯುಸೆಬಿಯನ ಸಭಾಚರಿತ್ರದಲ್ಲಿ ಇರುವ ಒಂದು ಸುದ್ದಿಯಿಂದ ಸ್ವಲ್ಪ ಬಲ ಹೊಂದುತ್ತದೆ, ಅದೇನಂದರೆ—ನನ್ನ ಪುನರುತ್ಥಾನಕ್ಕೆ ಈಚೆ ಅನಕ 12 ವರುಷ (ಅಂದರೆ ಕ್ರಿಸ್ತಶಕದ 45ನೇದರ ವರೆಗೆ) ಯೆರೂಸಲೇಮಿನಲ್ಲಿ ಇರ್ರಿ! ಎಂತ, ಕ್ರಿಸ್ತನು ತನ್ನ ಅಪೊಸ್ತಲರಿಗೆ ಆಜ್ಞಾಪಿಸಿದನೆಂದು, (ಕ್ರಿಸ್ತಶಕದ 190ನೇ ವರುಷ ಸುತ್ತ ಗ್ರಂಥಗಳನ್ನು ಬರೆಯುತ್ತಿದ್ದ) ಅಪೊಲ್ಲೋನಿಯನೆಂಬ ಒಬ್ಬ ಸಭಾಚರಿತ್ರಗಾರನು ಬರೆದಿದ್ದಾನೆ.— ಅದಲ್ಲದೆ ಸಕಲ ಅಪೊಸ್ತಲರೂ ಕ್ರಿಸ್ತಶಕದ 44ನೇ ವರುಷದ ಮೇಲೆ ಇನ್ನು ಒಂದೇ ಸಾರಿ ಮಾತ್ರ ಅಂದರೆ ಕ್ರಿಸ್ತಶಕದ 50ನೇದಕ್ಕೆ ಯೆರೂಸಲೇಮಿನಲ್ಲಿ ಕೂಡಿ ಇದ್ದರೆಂಬದು ದೇವವಾಕ್ಯಸಿದ್ಧಾಂತವಾದೀತು. ಹ್ಯಾಗಂದರೆ ಅಂದು ಅಷ್ಟರೊಳಗೆ

1) ಯೆಶಾ. 13; 47. 2) 36ನೇ ಪಾನು. 3) 18ನೇ ಪಾನು ನೋಡು. 4) ಗಲಾ. 2, 8—9.

ಪೌಲನೆಂಬ ಹೆಸರನ್ನು ಪಡ ಕೊಂಡಿದ್ದ ಸೌಲನು (ತನ್ನ ಹೃತ್ಪರಿಣಾಮಕ್ಕೆ 14 ವರುಷ ಈಚೆ) ಬರ್ನಬನೆಂಬವನ ಸಂಗಾತ ಸುರಿಯದ ಅಂತಿಯೊಖೀಯದಿಂದ ಹೊರಟು, ತನ್ನ ಹೃತ್ಪರಿಣಾಮದ ಈಚೆ 3ನೇ ಸರ್ತಿ ಯೆರೂಸಲೇಮಿಗೆ ಬಂದು, ಅಪೊಸ್ತಲರ ಮತ್ತು ಸಭೆಯ ಹಿರಿಯರ ಸಂಘದಲ್ಲಿ ಅವರಿವರ ಕೂಡ, ಯೆಹೂದ್ಯರಲ್ಲದಂಥವರು ಕ್ರೈಸ್ತರಾಗುತ್ತೇವೆಂದರೆ ಯೆಹೂದ್ಯ ಕಲ್ಪವಿಧಿಗೆ ಪೂರಾಗಿ ಅನುಸರಿಸಬೇಕೋ? ಬೇಡವೋ? ಎಂತ, ಆಲೋಚನೆ ಹಾಕಿ ಕೊಂಡನು. ಆಗ ನಿರ್ಣಯವಾಯಿತು ಏನಂದರೆ—ಅಂಥ ಪರ ಜನರು ದೇವತಾಯಜ್ಞಶೇಷವನ್ನೂ ರಕ್ತ ಚೆಲ್ಲದೆ ಕೊರಳು ಹಿಸಿಕಿ ಸತ್ತ ಜೀವಿಗಳ ಮಾಂಸವನ್ನೂ ರಕ್ತವನ್ನೂ ತಿನ್ನದೆ ದೇವತಾಯಜ್ಞಭೋಜನಗಳಿಗೆ ಹೋಗದೆ ಜಾರತ್ವವನ್ನು ನಡಿಸದೆ ಇರೋಣ ಎಂದು, ಮಾತ್ರ ಮಾತು ಕೊಡ ಬೇಕು[1].—ಆಗಿನಿಂದ 4 ವರುಷದ ತನಕ ಪೆತ್ರನು ಎಲ್ಲಿ ಇರುತ್ತಿದ್ದನೆಂಬದು ತಿರಿಗಿ ಗೊತ್ತಾಗುವದಿಲ್ಲ. ಕ್ರಿಸ್ತಶಕದ 54ನೇ ವರುಷದಲ್ಲಿ ಪೌಲನು ಒಂದು ಹಬ್ಬಕ್ಕೋಸ್ಕರ, ತನ್ನ ಹೃತ್ಪರಿಣಾಮಕ್ಕೆ ಇತ್ತಲಾಗೆ 4ನೇ ಸರ್ತಿ, ಯೆರೂಸಲೇಮಿಗೆ ಬಂದು, ಅಲ್ಲಿಯ ಸಭೆಗೆ ಭೇಟಿ ಮಾಡಲು[2], ಅಪೊಸ್ತಲರಲ್ಲಿ ಕಿರಿ ಯಕೋಬನೆಂಬ ಅಧ್ಯಕ್ಷನೊಬ್ಬನೇ[3] ಅಲ್ಲಿ ಇದ್ದನೆಂಬ ಹಾಗೆ ಕಾಣಿಸುತ್ತದೆ[4]. ಪೌಲನು ಆ ಪಟ್ಣದಲ್ಲಿ ಸ್ವಲ್ಪ ದಿವಸ ತಡೆದು, ಸುರಿಯದ ಅಂತಿಯೊಖೀಯಕ್ಕೆ ಹೋಗಿರಲಾಗಿ, ಪೆತ್ರ ಅಪೊಸ್ತಲನು ಅಲ್ಲಿಗೆ ಅವನ ಹತ್ತರ ಬಂದನು; ಪೆತ್ರನು ಪಲೇಸ್ತೀನದ ಹೊರಗೆ ಇದ್ದನೆಂಬ ಮೊದಲಿನ ಪರಿಶುದ್ಧಬರಹಸಾಕ್ಷಿಯು ಇದೇ. ಆ ವೇಳೆ ಅವರಿಬ್ಬರು ಯೆಹೂದ್ಯರಲ್ಲದವರಿಗೆ ಯೆಹೂದ್ಯ ಕಲ್ಪಪ್ರಮಾಣದಲ್ಲಿ ಇರುವ ಹಂಗನ್ನು ಕುರಿತು[5] ಮಾತಾಡಿ ಕೊಳ್ಳೋಣ, ಪೆತ್ರನು ಅಂತದಲ್ಲಿ ಪೌಲನ ಸೌವಾರ್ತಿಕ ಅಂದರೆ ಸುವಾರ್ತಾಭಿಪ್ರಾಯವುಳ್ಳ ಆಲೋಚನೆಗಳಿಗೆ ಒಡಂಬಟ್ಟನು[6]. ತದನಂತರ ಪೆತ್ರನು 9 ವರುಷ ಅಂದರೆ ಕ್ರಿಸ್ತಶಕದ 63ನೇದರ ವರೆಗೆ ಎಲ್ಲಿ ವೃತ್ತಿ ನಡಿಸಿದನೆಂದು, ಮತ್ತೂ ಹ್ಯಾಗೂ ತಿಳಿಯುವದಿಲ್ಲ. ಕ್ರಿಸ್ತಶಕದ ಆ 63ನೇದಕ್ಕೆ ಅವನು ತಾನು ಬಬೆಲಿನಲ್ಲಿ ಉತ್ಪಾದಿಸಿದ ಕ್ರೈಸ್ತ ಸಭೆಯಲ್ಲಿ ಇದ್ದನು. ಹ್ಯಾಗಂದರೆ ಕ್ರಿಸ್ತಶಕದ 61ನೇದರಿಂದ 63ನೇದರ ತನಕ ಪೌಲನು ರೋಮಪುರದಲ್ಲಿ ಶೆರೆಯೊಳಗಿರುತ್ತಿರಲು, ಅವನ ಆಪ್ತ ಜೊತೆಗಾರನಾದ ಮರ್ಕನು ಅವನೊಂದಿಗಿರುತ್ತಿದ್ದನು[7]; ಬಳಿಕ ಪೌಲನು ಆ 63ನೇ ವರುಷದಲ್ಲಿ ಬಿಡುಗಡೆ ಹೊಂದಲಾಗಿ, ಮರ್ಕನು ಬಬೆಲಿಗೆ ಗಮನ ಮಾಡಿ, ಪೆತ್ರನನ್ನು ಶೇರಿ ಕೊಂಡನು[8]. ಆ ಸಮಯ ಪೌಲನು ಕ್ರೇತ

---

1) ಅಪೊ. ಕ್ರಿ. 15. 1—30. 2) ಅಪೊ. ಕ್ರಿ. 18, 22. 3) 37ನೇ ಪಾನು ನೋಡು.
4) ಗಲಾ. 2, 12. 5) ಗಲಾ. 2, 11—17. 6) 2 ಪೆತ್ರ. 3, 15. 7) ಕೊಲೊ. 4, 10.
8) 1 ಪೆತ್ರ. 5, 13.

ದ್ವೀಪಕ್ಕೂ[1] ಎಫೆಸ ಪಟ್ಟಣಕ್ಕೂ[2] ಹೋಗಿ, ತನ್ನ ಮಕ್ಕಳಂತೆ ಇರುವ ಅಲ್ಲಲ್ಲಿಯ
ಸಣ್ಣ ಅಸಿಯಕ ಸಭೆಗಳನ್ನು ಕಟ್ಟಕಡೆಯ ಸಾರಿ ನೋಡಿ, ಬೀಳ್ಕೊಂಡು ಬಿಡ
ಬೇಕಾಯಿತು; ಆದ್ದರಿಂದ ಅವು ದಿಕ್ಕಿಲ್ಲದ ಮಕ್ಕಳಂತೆ ಆದವೆಂತ, ಹೇಳ ಬಹುದು.
ಅಂದು ಮರ್ಕನ ಸಂಗಡ ಬಬೆಲಿನಲ್ಲಿ ಇರುವ ಪೇತ್ರನು ಆ ಸುದ್ದಿ ಕೇಳಿ, ಸಣ್ಣ ಅಸಿ
ಯದ ಸಭೆಗಳಿಗೆ ಆದರ ಕೊಡಲಿಕ್ಕೆ ತನ್ನ ಪ್ರಥಮ ಪತ್ರಿಕೆಯನ್ನು ಬರೆದು ಕಳುಹಿ
ಸಿದ ಹಾಗೆ ಕಾಣಿಸುತ್ತದೆ; ತನ್ನ ಮರಣ ಸಮೀಪವಾದಾಗ ಕ್ರಿಸ್ತಶಕದ 67ನೇ ವರು
ಷದಲ್ಲಿ ಆಗಲಿ 68ನೇದರಲ್ಲಿ ಆಗಲಿ ಅವಕ್ಕೆ ಮತ್ತೊಂದನ್ನು ಬರೆದು ತಲಪಿಸಿದನು[3].

ತನ್ಮಧ್ಯ ಕ್ರಿಸ್ತಶಕದ 53ನೇ ವರುಷ ಆ 2ನೇ ಹೇರೋದ ಅಗ್ರಿಪ್ಪನು ಪಲೇ
ಸ್ತೀನದ ಉತ್ತರ ಭಾಗದ್ದೊಂದು ತುಕ್ಕಡಿಯ ಅರಸಾಗಿದ್ದನು[4]; ಕೈಸರ್ಯೆಯವೆಂಬ
ಲ್ಲಿಯ ರೋಮಾಯ ಪ್ರತಿನಿಧಿಗಳು[5] ಪಲೇಸ್ತೀನದ ಮಿಕ್ಕಂಥ ಭಾಗವನ್ನಾಳುತ್ತಾ
ಬಂದರು. ತಮ್ಮ ಆತ್ಮರಕ್ಷಕನಾದ ಕ್ರಿಸ್ತನನ್ನು ತಳ್ಳಿ ಬಿಟ್ಟ ಪಲೇಸ್ತೀನದ ಯೆಹೂ
ದ್ಯರು ರೋಮಾಯರ ಅಧಿಕಾರಕ್ಕೆ ವರುಷಂಪ್ರತಿ ಹೆಚ್ಚು ಬೇಸರ ಪಡುವವರಾ
ಗಿ, ತಾಳಲಾರದ ನೊಗವೆಂತ, ಅದಕ್ಕೆ ತಪ್ಪಿಸಿ ಕೊಳ್ಳಲಿಕ್ಕೆ ಪ್ರಯತ್ನ ಗೈಯುತ್ತಾ
ಇದ್ದರು. ಅದರ ದೆಸೆಯಿಂದ ಕ್ರಿಸ್ತಶಕದ 44ನೇ ವರುಷಕ್ಕೆ ಮುಂಚೆ ಆದರೂ ಥೈದ
ನೆಂಬವನೊಬ್ಬನು ಕಲಹವೆಬ್ಬಿಸಿದ್ದನು; ಆದರೆ ಅವನು ವಧೆಯಾಗಿ, ಅವನ ಪಕಾ
ವಲಂಬಿಗಳು ಚದರಿ, ದಿಶೆ ಗೆಟ್ಟು ಹೋಗಿದ್ದರು[6]. ತರುವಾಯ ಯೂದನೆಂಬವ
ನೊಬ್ಬ ಫರಿಸಾಯನು ಬಹು ಪ್ರಜೆಯೊಂದಿಗೆ ಕೈಸರದ್ರೋಹ ಮಾಡುವಾಗ ಅವ
ನಿಗೆ ಅದೇ ಗತಿಯಾಯಿತು[7]. ಬಳಿಕ 1ನೇ ಹೇರೋದ ಅಗ್ರಿಪ್ಪನ ಈಚೆಯ ಆ
ಪ್ರತಿನಿಧಿಗಳೊಳಗೆ ಮೊದಲಿನವನ ಕಾಲದಲ್ಲಿ, ಕ್ರಿಸ್ತಶಕದ 45ನೇ ವರುಷದಲ್ಲಿ, ತಿ
ರಿಗಿ ಥೈದನೆಂಬ ಹೆಸರಿರುವ ಒಬ್ಬ ಸುಳ್ಳುಪ್ರವಾದಿಯು ಎದ್ದು, ಯೊರ್ದನು ನದಿ
ಯ ನೀರು ಯೆಹೋಶುವನ ಮುಂದೆ ಭೇದವಾದ ಹಾಗೆಯೇ[8] ಅದು ತನ್ನ ಮುಂ
ದೆ ಸಹ ಭೇದಿಸೀತು ಎಂದು, ಮೊದಲಾದ ದರ್ಪದ ಮಾತು ಆಡಿ, ಅನೇಕ ಯೆಹೂ
ದ್ಯರನ್ನು ತನ್ನ ಕಡೆಗೆ ಆಕ್ರಮಿಸಿ ಕೊಂಡಿರಲಿಕ್ಕೆ, ಆ ಪ್ರತಿನಿಧಿಯು ಅವನ ಗುಂಪ
ನ್ನು ಝಾಡಿಸಿ, ಅವನಿಗೆ ಆಜ್ಞೆ ಮಾಡಿಸಿದನು. ಆ ಪ್ರತಿನಿಧಿಗಳ 2ನೆಯವನ ದಿವ
ಸಗಳಲ್ಲಿ ಯೆಹೂದ್ಯರು ಮತ್ತು ದಂಗೆ ತೆಗೆದರು; 3ನೆಯವನ ದಿನಗಳಲ್ಲಿ ಒಂದು
ಹಬ್ಬದ ದಿವಸ ಒಬ್ಬ ರೋಮಾಯ ದಂಡುಗಾರನು ಪರಿಶೆಯವರಿಗೆ ಚೇಷ್ಟೆ ಮಾಡ
ಲಾಗಿ, ಮರಳಿ ಒಂದು ದೊಡ್ಡ ಗದ್ದಲವಾದಲ್ಲಿ ರಕ್ತ ಚೆಲ್ಲದೆ ಹೋಗಲಿಲ್ಲ. ಆ ಪ್ರತಿ

---

1) ತಿತ. 1, 5. 2) 1 ತೀಮೊ. 1, 3. 3) 2 ಪೇತ್ರ. 1, 14. 4) 37ನೇ ಪಾನು ನೋಡು. 5) 37ನೇ ಪಾನು. 6) ಅಪೊ. ಕ್ರಿ. 5, 36. 7) ಅಪೊ. ಕ್ರಿ. 5, 37. 8) ಯೆಹೋಶು. 3.

ನಿಧಿಗಳಲ್ಲಿ 4ನೆಯವನ ಹೆಸರು ಫೇಲಿಕ್ಸ[1]; ಅವನು ಕ್ರಿಸ್ತಶಕದ 52ನೇ ವರುಷ ತನ್ನ ಕಾರಭಾರು ನಡಿಸಲಿಕ್ಕೆ ಹತ್ತಿದನು. ಇವನ ವಿಷಯ ತಕಿತನೆಂಬ ರೋವಿಾಯ ಕೀರ್ತ್ಯ ಚರಿತ್ರಗಾರನು ಬರೆದ್ದೇನಂದರೆ—ಫೇಲಿಕ್ಸನು ಒಬ್ಬ ಕಿಂಕರನಿಗೆ ಯೋಗ್ಯ ವಲ್ಲದಂಥ ನೀಚ ಭಾವವುಳ್ಳ ಬಲಾತ್ಕಾರಿಯಾಗಿ, ಸಕಲ ತರದ ಕ್ರೂರತನ ಪಟಿಂಗ ತನಗಳನ್ನು ನಡಿಸುತ್ತಿರುವನು.— ತನ್ನ ಎಲ್ಲಾ ಪೂರ್ವಾಧಿಕಾರಿಗಳಿಗಿಂತ ಹೆಚ್ಚಾಗಿ ಅವನು ಯೆಹೂದ್ಯರನ್ನು ಕಾಡಿಸುತ್ತಿದ್ದನು; ಒಂದು ದೃಷ್ಟಾಂತವೇನಂದರೆ—ಪ್ರಧಾನ ಯಾಜಕನಾದ ಯೋನತಾನನು ಅವನಿಗೆ ಪ್ರತಿನಿಧಿತ್ವವನ್ನು ದೊರಕಿಸುವದಕ್ಕೆ ಬಹಳ ಸಹಾಯ ಮಾಡಿದ್ದನು; ಇವನು ತನ್ನ ಕ್ರೂರ ಕ್ರಿಯೆಗಳಿಗಾಗಿ ತನಗೆ ಆಗಿಂದಾಗ ಬುದ್ಧಿ ಹೇಳುವ ಕಾರಣದಿಂದ ಅಂಥವನನ್ನಾದರೂ ರಹಸ್ಯದಲ್ಲಿ ಕೊಲ್ಲಿಸಿದನು. ಸುರಿಯ ದೇಶದ ಮಧ್ಯದಲ್ಲಿ ದಮಸ್ಕ ಮತ್ತು ಅಂತಿಯೊಖೀಯ ಎಂಬ ಪಟ್ಣಗಳಿಗೆ ನಡುವೆ ಇರುವ ಎಮೆಸ ಶೀಮೆಯ ರಾಜನು ಯೆಹೂದ್ಯ ಮತಸ್ಥನಾಗಿ, 2ನೇ ಹೇರೋದ ಅಗ್ರಿಪ್ಪನ ಸಹೋದರಿಯಾದ ದ್ರುಸಿಲ್ಲಳನ್ನು ಮದುವೆ ಮಾಡಿ ಕೊಂಡಿದ್ದನು; ಫೇಲಿಕ್ಸನು ಅವಳನ್ನು ವ್ಯಭಿಚಾರಕ್ಕೆ ಎಳಕೊಂಡು, ಇಟ್ಟು ಕೊಂಡನು[2]. ಈ ಮುಂತಾದ ಅವನ ದುರ್ನಡತೆಗೆ ಯಾವಾಗಲೂ ಮೊರವೊರೆಯುತ್ತಿರುವ ಪ್ರಜೆಯಲ್ಲಿ ಹಲವರು ಸುಳ್ಳುಪ್ರವಾದಿಗಳು ಎದ್ದು, ಪ್ರಜೆಗೆ ಬಿಡುಗಡೆ ದೊರಕಿಸಿ ಕೊಡುವದಕ್ಕೆ ದೇವರು ತಮ್ಮನ್ನು ಕಳುಹಿದನೆಂತ, ಪ್ರಮಾಣ ಮಾಡತೊಡಗಿದರು. ಇವರಲ್ಲಿ ಒಬ್ಬನು ಐಗುಪ್ತ ದೇಶದ ಒಬ್ಬ ಯೆಹೂದ್ಯನು; ರೋವಿಾಯರಲ್ಲಿ ಹಗೆ ತೀರಿಸಲಿಕ್ಕೆ ಫರಿಸಾಯರ ಸಲಹೆಯಿಂದ ಆಗ ದೇಶವ ತಿರುಗ್ಯಾಡುತ್ತಿರುವ ಕನಿಷ್ಠರಾದ ಕಠಾರಿಯವರಲ್ಲಿ ಅವನು 4000 ಮಂದಿ ಕೂಡಿಸಿ ಕೊಳ್ಳಲು, ಫೇಲಿಕ್ಸನು ಅವರನ್ನು ಗೆದ್ದು, ಚದರಿಸಿದನು. ಆ ಐಗುಪ್ತ್ಯನು ಓಡಿ ಹೋಗಿ, ಬಳಿಕ ತಿರಿಗಿ ಬಂದು, ಪ್ರಾಚೀನದಲ್ಲಿ ಯೆರಿಕೋ ಪಟ್ಣದ ಗೋಡೆಗಳಂತೆಯೇ[3] ಯೆರೂಸಲೇಮಿನ ಗೋಡೆಗಳು ಯೆಹೂದ್ಯರ ಶತ್ರುಗಳ ಮೇಲೆ ಹಿಸಿದು ಬೀಳುವವೆಂತ, ನೆವನ ಹೇಳಿ, ಯೆಹೂದ್ಯರ ಒಂದು ದೊಡ್ಡ ಗುಂಪನ್ನು ಪಟ್ಣದ ಹೊರಗೆ ಇಪ್ಪೇ ಗುಡ್ಡದ ಮೇಲೆ ತಕ್ಕೊಂಡು ಹೋದನು; ಆಗ ಫೇಲಿಕ್ಸನು ಪುನಃ ಆ ಕಲಹಗಾರರನ್ನು ಓಡಿಸಿ ಬಿಟ್ಟನು[4]. ಅವನು ನ್ಯಾಯದಿಂದಲಾಗಲಿ ಅನ್ಯಾಯದಿಂದಲಾಗಲಿ ಮರಣಾಜ್ಞೆ ವಿಧಿಸದಂಥ ಒಂದೂ ದಿನವಾದರೂ ಹೋಗುತ್ತಿದ್ದಿಲ್ಲ; ಆದಾಗ್ಯೂ ಮತ್ತು ಮತ್ತು ದಂಗೆಯಾಗುತ್ತಿರುವದು. ಪ್ರಧಾನ ಯಾಜಕರ ಉದ್ಯೋಗವ ಬಹಳ ಸಾರಿ ತೆಗೆಯಲಾದಲ್ಲಿ ಇವರೆಲ್ಲರೂ ತಮಗೆ ಜೀವನಾಂಶಕ್ಕೋಸ್ಕರ ಸಾ

1) ಅಪೊ. ಕ್ರಿ. 23, 23—24. 2) ಅಪೊ. ಕ್ರಿ. 24, 24. 3) ಯೆಹೋಶು. 6, 20. 4) ಅಪೊ. ಕ್ರಿ. 21, 37—38.

ಧಾರಣ ಯಾಜಕರಿಗಿಂತ ಶಿಕ್ಕುತ್ತಿದ್ದ ದೊಡ್ಡ ಪಾಲನ್ನು ಮುಂಚಿನಂತೆ ಕೇಳಿ ಕೊಳ್ಳುತ್ತಾ ಬರುವ ಕಾರಣ ಸಾಧಾರಣ ಯಾಜಕರಿಗೆ ದುರ್ಭಿಕ್ಷೆ ಒದಗಿತು; ಹೀಗಿರಲಾಗಿ ಕೊಲೆಯಾದರೂ ನಡೆಯುವ ಒಂದು ಜಗಳ ಹುಟ್ಟಿತು. ಈ ಮುಂತಾದ ಪ್ರಕಾರವಾಗಿ ಯೆಹೂದ ದೇಶದವರು ಫೇಲಿಕ್ಸನ ಕಾರಭಾರಿನೊಳಗೆ ಅಧಿಕ ಸಂಕಟ ಪಡುತ್ತಿದ್ದರು; ಆದರೂ ಕರ್ತನ ರಾಜ್ಯವು ವರ್ಧಿಸುತ್ತಲೇ ಇತ್ತು[1].

ಕ್ಲಾದಿಯ ಕೈಸರನು ಕ್ರಿಸ್ತಶಕದ 54ನೇ ವರುಷದಲ್ಲಿ ವಿಷದಿಂದ ಕೊಲೆ ಪಟ್ಟು, ಅವನ ಉತ್ತರಾಧಿಕಾರಿಯಾದ ನೆರೋನನು[2] 3 ವರುಷ ಆಳಿದನಂತರ ಫೇಲಿಕ್ಸನು ಇನ್ನು ಪ್ರತಿನಿಧಿಯಾಗಿರುವಾಗ ಕ್ರಿಸ್ತಶಕದ 58ನೇದಕ್ಕೆ ಪೌಲ ಅಪೊಸ್ತಲನು ಗ್ರೇಕ ದೇಶದ ಮತ್ತು ಸಣ್ಣ ಅಸಿಯ ದೇಶದ ಕ್ರೈಸ್ತರ ಕೈಯಿಂದ ತಾನು ಇಸು ಕೊಂಡಿದ್ದ ಬಹಳ ಧರ್ಮಹಣವನ್ನು ತಕ್ಕೊಂಡು, ತನ್ನ ಹೃತ್ಪರಿಣಾಮಕ್ಕೆ ಈಚೆ 5ನೇ ಸಾರಿ ಯೆರೂಸಲೇಮಿಗೆ ಬಂದು, ಆ ಹಣವನ್ನು ಯೆಹೂದ ದೇಶದ ಕ್ರೈಸ್ತರಿಗೆ ಒಪ್ಪಿಸಿ ಕೊಟ್ಟನು[3]. ಈಗ ಸಹ, ಮುಂಚೆ ಒಮ್ಮೆ ಆದಂತೆ[4], ಅಪೊಸ್ತಲರಲ್ಲಿ ಕಿರಿ (?) ಯಕೋಬ ಅಧ್ಯಕ್ಷನೊಬ್ಬನೇ ಆ ಪಟ್ಣದಲ್ಲಿ ಇದ್ದನು. ಇವನೂ ಕ್ರೈಸ್ತ ಸಭೆಯ ಹಿರಿಯರೂ ಪೌಲನನ್ನು ಪ್ರೀತಿಯಿಂದ ಅಂಗೀಕರಿಸಿ, ದೇವರು ಅವನ ವೃತ್ತಿಯಿಂದ ಯೆಹೂದ್ಯ ಮತಸ್ಥರಲ್ಲದ ಪರ ಜನರಿಗೆ ಹೇರಳ ಆಶೀರ್ವಾದ ಮಾಡಿದನೆಂತ, ಸಂತೋಷ ಗೊಂಡರು; ಆದರೆ ಯೆರೂಸಲೇಮಿನ ಯೆಹೂದ್ಯರು ಪೌಲನಿಗಾಗಿ ಗುಬಾರು ಹುಟ್ಟಿಸಿ, ಅವನು ಕ್ರಿಸ್ತನ ಹೆಸರನ್ನು ಸಾರುವದರಿಂದ ಅವನನ್ನು ಹೊಡೆದು, ಹತ್ಯ ಮಾಡಲಿಕ್ಕೆ ನೋಡುವಾಗ[5] ದೇವರು ಅವನನ್ನು ಅವರ ಕೈಗೆ ತಪ್ಪಿಸಿದನು.

ಪೌಲನು ತಮಗೆ ಶಿಕ್ಕದಿರಲಾಗಿ, ಯೆಹೂದ್ಯರ ಹಗೆಯು ಯಕೋಬ ಅಧ್ಯಕ್ಷನ ಮೇಲೆ ಹೋಗ ಹತ್ತಿತು. ಇದಕ್ಕೆ ಬಹಳ ಆಶ್ಚರ್ಯ ಪಡ ತಕ್ಕದ್ದು; ಹ್ಯಾಗಂದರೆ ಆ ವರೆಗೆ ಕ್ರೈಸ್ತರು ಮಾತ್ರವಲ್ಲದೆ ಸಕಲ ಯೆಹೂದ್ಯರಾದರೂ ಅವನನ್ನು, ನೀತಿವಂತನೆಂತ, ಹೊಗಳುತ್ತಾ ಬಂದಿದ್ದರು; ಯಾಕಂದರೆ ಅವನು ತನ್ನ ಯೆಹೂದ್ಯ ವಂಶಸ್ಥರೆಲ್ಲರ ಹಿತವನ್ನೇ ಬಯಸುತ್ತಿದ್ದಾನೆಂಬದನ್ನು ಎಲ್ಲರೂ ತಿಳು ಕೊಂಡಿದ್ದರು. ಅವನು ಅನೇಕಾನೇಕಾವರ್ತಿ ಯೆಹೂದ್ಯ ದೇವಾಲಯದೊಳಗೆ ಹೋಗಿ, ಮೊಣಕಾಲೂರಿ, ಪ್ರಜೆಗೆ ಮನ್ನಿಸೆಂತ, ದೇವರಿಗೆ ಪ್ರಾರ್ಥಿಸುತ್ತಿದ್ದದರಿಂದ ಅವನ ಮೊಣಗಾಲು ಒಂಟೆಯದರ ಹಾಗೆಯೇ ದಡ್ಡೆ ಗಟ್ಟಿತ್ತು. ಆದರೆ ಅವನ ಮೂಲವಾಗಿ ಪ್ರ

1) ಅಪೊ. ಕ್ರಿ. 21, 20. 2) 15ನೇ ಪಾನು. 3) ಅಪೊ. ಕ್ರಿ. 24, 17; 1ಕೊರಿ. 16, 1—4; 2ಕೊರಿ. 8, 1—6; 9, 1—15; ರೋಮಾ. 15, 25—26; 36ನೇ ಪಾನು ಸರಿ ನೋಡು. 4) 39ನೇ, 40ನೇ ಪಾನುಗಳು ನೋಡು. 5) ಅಪೊ. ಕ್ರಿ. 21, 27—32; 22, 22—23; 23, 12—16.

ಜಾಶ್ರೇಷ್ಠರಲ್ಲಿಯೂ ಬಹಳ ಮಂದಿ ಕ್ರೈಸ್ತರಾಗುವ ದೆಸೆಯಿಂದ ಆಗಿನ ಚಿಕ್ಕ ಅನ್ನನು ಅಥವಾ ಚಿಕ್ಕ ಅನನೆಂಬ ಪ್ರಧಾನ ಯಾಜಕನು[1] ಪ್ರಥಮದಲ್ಲಿ ಅವನ ವೈರಿಯಾದನು; ಫೇಲಿಕ್ಸ ಪ್ರತಿನಿಧಿಯು ಕ್ರಿಸ್ತಶಕದ 60ನೇ ವರುಷದಲ್ಲಿ ಉದ್ಯೋಗ ಹೋದವನಾಗಿ, ಅವನ ಉತ್ತರಾಧಿಕಾರಿಯಾದ ಫೆಸ್ತನು[2] 63ನೇದರಲ್ಲಿ ಸಾಯುತ್ತಲೇ ಅಲ್ಬೀನನೆಂಬ 6ನೇ ಪ್ರತಿನಿಧಿಯು ಇನ್ನು ಬಾರದಿರುವದರಿಂದ ಆ ಸದ್ದುಕಾಯ[3] ಮತದ ಅನನು ಅಧಿಕ ಬಲ ಪಡಕೊಂಡನು. ಹೀಗಿರುವಾಗ ಕ್ರಿಸ್ತಶಕದ 63ನೇ ವರುಷದ ಪಸ್ಕ ಹಬ್ಬದಲ್ಲಿ[4] ಆ ಅನನೂ ಸದ್ದುಕಾಯ ಫರಿಸಾಯ ಶಾಸ್ತ್ರಿಗಳಲ್ಲಿ ಅವನಿಗಿರುವ ಪಕ್ಷಕರೂ, ಕ್ರಿಸ್ತನನ್ನು ಅತಿಗಳಿಸುವದಕ್ಕೆ ಯಕೋಬನನ್ನು ಬಲಾತ್ಕರಿಸೋಣ! ಎಂತ, ಒಂದೇ ಮನಸ್ಸು ಮಾಡಿ ಕೊಂಡು, ಅವನನ್ನು ದೇವಾಲಯದ ಶಿಖರದ ಮೇಲೆ ತಕ್ಕೊಂಡು ಹೋಗಿ, ಅಲ್ಲಿ ಬಿಟ್ಟು—ಈ ಹೊತ್ತು ಸಕಲ ಪ್ರಜೆಯ ಮುಂದೆ ಯೇಸು ಕ್ರಿಸ್ತನ ವಿಷಯದ ನಿಮ್ಮ ಮನೋರ್ಥವ ತಿಳಿಸಿರಿ! ನೀವು ನೀತಿವಂತನಲ್ಲವೋ? ಹಾಗಾದರೆ ನೀವು ಏನೂ ಮಾಜಿ ಹೇಳುವಂಥವರಲ್ಲ! ಎಂತ, ಅವನನ್ನು ಹಂಗಿಸಿದರು. ಆಗ ಅವನು ಆ ಉದ್ದನ ಸ್ಥಳದಲ್ಲಿ ನಿಂತು ಕೊಂಡು, ಕೂಗಿದ್ದೇನಂದರೆ—ಮನುಷ್ಯಪುತ್ರನನ್ನು ಕುರಿತು ನನಗೆ ಪ್ರಶ್ನೆ ಹಾಕುವದೇನು? ಅವನು ಮಹಾ ಮಹಿಮೆಯ ಬಲಗಡೆ ಪರಲೋಕದಲ್ಲಿ ಕೂತು ಕೊಂಡಿದ್ದು, ಇನ್ನು ಮುಂದೆ ಆಕಾಶಾಬ್ದಗಳಲ್ಲಿ ತೋರಿ ಬರುವನು!—ಈ ಸಾಕ್ಷಿಗಾಗಿ ಅನೇಕರು, ದಾವೀದನ ಮಗನಿಗೆ ಸ್ತೋತ್ರವಾಗಲಿ! (ಯೇಸುವೇ,) ಹೊಸನ್ನ (ಸಹಾಯ ಮಾಡು)! ಎಂತ, ಒಪ್ಪಿ ಕೊಂಡು, ಹಾಡಲಾಗಿ, ಆ ಸದ್ದುಕಾಯರೂ ಫರಿಸಾಯರೂ ಶಾಸ್ತ್ರಿಗಳೂ, ಆ ನೀತಿವಂತನಾದರೂ ಭ್ರಮೆಗೆ ಒಳ ಬಿದ್ದನು ಎಂದು, ಒದರಿ, ಮೇಲಕ್ಕೇರಿ, ಆ ನೀತಿವಂತನನ್ನು ಕೆಳೆಯಕ್ಕೆ ದೊಬ್ಬಿ ಬಿಟ್ಟು, ಅಂಥಾ ನೀತಿವಂತನಾದ ಯಕೋಬಗೆ ಕಲ್ಲೆಸೆಯುವ! ಎಂದು, ಒಬ್ಬರಿಗೊಬ್ಬರು ಹೇಳಿ, ಕಲ್ಲೆಸೆಯುವವರಾದರು. ಆದರೆ ಅವನು ಒಮ್ಮಿಂದೊಮ್ಮೆ ಸಾಯದೆ, ಮೊಣಗಾಲೂರಿ—ಯೆಹೋವನೇ, ದೇವರೇ, ತಂದೆಯೇ, ಅವರಿಗೆ ಕ್ಷಮೆ ಮಾಡು; ಯಾಕಂದರೆ, ತಾವು ಮಾಡುವದೇನೆಂತ, ಅರಿಯರು ಎಂದು, ಬೇಡಿ ಕೊಳ್ಳೋಣ, ಅವರು ಇನ್ನೂ ಕಲ್ಲೆಸೆಯೋಣ, ಯಾಜಕರಲ್ಲೊಬ್ಬನು ಸ್ವರವೆತ್ತಿ ಕೂಗಿದ್ದು—ಬಿಡಿರಿ, ಬಿಡಿರಿ! ಏನು ಮಾಡುತ್ತೀರಿ! ಆ ನೀತಿವಂತನು ನಿಮಗಾಗಿ ಪ್ರಾರ್ಥಿಸುತ್ತಾನಲ್ಲ?—ತತ್‌ಕ್ಷಣ ಒಬ್ಬ ಕೊಡ್ಡಂಟೆಯವನು ತನ್ನ ಕೊಡ್ಡಂಟೆಯಿಂದ ಆ ನೀತಿವಂತನ ತಲೆಗೆ ಬಡಿದು, ಅವನನ್ನು ಕೊಂದನು. ಈ ವಿಧವಾಗಿ ಕಿರಿ ಯಕೋಬನು ರಕ್ತಸಾಕ್ಷಿಯಾದನು; ಹೊಸ ಒಡಂಬಡಿಕೆಯಲ್ಲಿ

---

1) ಹಿರೀ ಅನ್ನನ ಸುದ್ದಿಯನ್ನು ಯೋಹಾ. 18, 13; ಅಪೊ. ಕ್ರಿ. 4, 6 ಎಂಬಲ್ಲಿ ನೋಡು.
2) ಅಪೊ. ಕ್ರಿ. 24, 27. 3) 21ನೇ, 30ನೇ ಪಾನು ನೋಡು. 4) 36ನೇ ಪಾನು.

ಇರುವ ಯಕೋಬನ ಪತ್ರಿಕೆ ಎಂಬದು ಇವನದೇ. ಯೆಹೂದ್ಯರಲ್ಲಿ ಜ್ಞಾನವಿದ್ದವರು, ಯೋಸೇಫನೆಂಬ ಚರಿತ್ರಗಾರನು ಸಹ[1], ಅಂದಿಗೆ ಕೆಲವು ವರುಷ ಈಚೆ ಯೆರೂಸಲೇಮಿಗೆ ಬಂದ ನಾಶನವು ಅಂಥ ದುಷ್ಕ್ರಿಯೆಗೆ ಸಹ ತಕ್ಕ ಪ್ರತಿಫಲವಾಯಿತೆಂತ, ನಂಬಿ ಕೊಂಡರು[2]. ಅನೇಕ ಭಕ್ತಿವಂತ ಯೆಹೂದ್ಯರು ಆದದ್ದಕ್ಕೆ ಬಹು ಮುನಿದು, ಅಷ್ಟರೊಳಗೆ ಬಂದಿದ್ದ ಅಲ್ಬೀನ ಪ್ರತಿನಿಧಿಯ ಮುಂದೆಯೂ ದೇವಾಲಯದ ಪಾರುಪತ್ಯಗಾರನಾದ 2ನೇ ಅಗ್ರಿಪ್ಪ ರಾಜನ ಮುಂದೆಯೂ ಅನ ಪ್ರಧಾನ ಯಾಜಕನ ಮೇಲೆ ಅಪರಾಧ ಹೊರಿಸಲು, ಅಗ್ರಿಪ್ಪನು ಅವನ ಉದ್ಯೋಗ ತಪ್ಪಿಸಿದನು. ಆದರೆ ಯೆರೂಸಲೇಮಿನ ಕ್ರೈಸ್ತ ಸಭೆಯವರು ಕೂಡಿ ಬಂದು, ಯಕೋಬ ರಕ್ತಸಾಕ್ಷಿಯ ಹಾಗೆ ಕ್ಲೋಫನ ಮಗನೂ ಯೇಸುವಿನ ನೆಂಟರಲ್ಲೊಬ್ಬನೂ ಯೇಸುವಿನ ಬಾಯಿಯಿಂದಲೇ ಸುವಾರ್ತೆಯನ್ನು ಕೇಳಿದವನೂ ಆದಂಥ ಸಿಮೆಯೋನನನ್ನು, ಯಕೋಬನ ಬದಲಿಗೆ ಸಭಾಧ್ಯಕ್ಷನೆಂತ, ಆರಿಸಿ ಇಟ್ಟರು.

ಹಾಗಾದರೆ, ಯೆಹೂದ್ಯರ ಗುರುಗಳೂ ಧೊರೆಗಳೂ ಯೆಹೂದ್ಯ ಪ್ರಜೆಯ ಸಹಿತ ಕ್ರಿಸ್ತನಿಗೂ ಅವನ ಶಿಷ್ಯರಿಗೂ ವಿರುದ್ಧ ಮಾಡುತ್ತಿದ್ದಾಗ್ಯೂ ಕ್ರಿಸ್ತನ ಸಭೆಯು ಪಲೇಸ್ತೀನದಲ್ಲಿಯ ಯೆಹೂದ್ಯರಲ್ಲಿ ನೆಟ್ಟು, ಬೆಳೆದು, ವಿಸ್ತರಿಸಲಾಯಿತೆಂತ, ಹಿಂದೆ ಹೇಳೋಣವಾಯಿತು; ಪುನರುತ್ಥಿತನಾಗಿ ಪರಲೋಕಕ್ಕೆ ಏರಿ ಹೋದ ಕ್ರಿಸ್ತನ ಬಲವೇ ಆ ಮಹಾದ್ಭುತಕ್ಕೆ ಮೂಲವು; ಹ್ಯಾಗಂದರೆ ಅವನು ಸುವಾರ್ತಾಪ್ರಸಂಗಕ್ಕೆ ಯೆಹೂದ್ಯರಿಂದ ಆರಿಸಿ ಕೊಂಡ 11 ಮುಖ್ಯ ಅಪೊಸ್ತಲರು ಎಂಥವರು? ಬಹಳ ವಿದ್ಯೆ ಕಲಿಯದಿದ್ದ ಮೀನುಗಾರರೂ ಒಬ್ಬ ಸುಂಕದವನೂ ಅಲ್ಲವೋ?

ಆ ಅಪೊಸ್ತಲರಲ್ಲಿ ಪೇತ್ರನಿಗೆ ಪರಿಚ್ಛೇದನೆಯವರಲ್ಲಿ ಮುಖ್ಯವಾಗಿ ಅಪೊಸ್ತಲತನವು ಪ್ರಾಪ್ತವಾಗಿತ್ತು[3]; ಅವನಿಗಲ್ಲದೆ ಕರ್ತನ ಸಹೋದರನಾದ ಕಿರಿ ಯಕೋಬನಿಗೂ ಆರಂಭದಲ್ಲಿ ಯೋಹಾನನಿಗೂ ಸಹ ಅಂಥವರಲ್ಲಿ ಮುಖ್ಯವಾಗಿ ಅಪೊಸ್ತಲತನವು[4].

## 3. ಪಲೇಸ್ತೀನದ ಹೊರಗೆ ಕ್ರೈಸ್ತ ಸಭೆಯು ಸ್ಥಾಪಿತವಾದದ್ದು.

ಯೇಸುನಾಥನ ಚಿತ್ತ ಆಜ್ಞೆಗಳ ಪ್ರಕಾರವೂ ದೇವರು ಪ್ರವಾದಿಗಳಿಂದ ಪ್ರಕಟಿಸಿದ ತನ್ನ ಕಲ್ಪನಾರ್ಥದ ಪ್ರಕಾರವೂ ಸುವಾರ್ತೆಯು ಪಲೇಸ್ತೀನದೊಳಗಿನ ಯೆಹೂದ್ಯರಿಗೂ ಯೆಹೂದ್ಯಮತಾವಲಂಬಿಗಳಿಗೂ ಮಾತ್ರವಲ್ಲ ಭೂಮಿಯ ಸಮ

1) 21ನೇ ಪಾನು. 2) Euseb. h. e. II, 23. 3) ಗಲಾ. 2, 8—9; 39ನೇ ಪಾನು.
4) ಗಲಾ. 2, 9—10; 5ನೇ ಸಂಧಿ.

ಸ್ತ ಪರಿಚ್ಛೇದನಾಪರಿಚ್ಛೇದನಜನಾಂಗಗಳಿಗೆ ಪ್ರಸಂಗವಾಗ ಬೇಕಾಯಿತು[1]. ಹೀಗಿರಲಾಗಿ ಕ್ರಿಸ್ತಶಕದ 42ನೇ ವರುಷಕ್ಕೆ ಮುಂಚೆ ಪಲೇಸ್ತೀನದ ಹೊರಗೆ ಸುರಿಯ ದೇಶದ ರಾಜಧಾನಿಯಾದ ಆ ಅಂತಿಯೊಖೀಯದಲ್ಲಿ ಯೆಹೂದ್ಯರ ಸಂಬಂಧಿಗಳಲ್ಲದಂಥ ಗ್ರೇಕರೆಂಬ ಪರಜನರದೊಂದು ದೊಡ್ಡ ಕ್ರೈಸ್ತ ಸಭೆಯು ಹುಟ್ಟಿತು[2]. ಪಲೇಸ್ತೀನದ ಹೊರಗಣ ಯೆಹೂದ್ಯ ಮತಸ್ಥರಲ್ಲದವರಲ್ಲಿ ತನ್ನ ರಾಜ್ಯದ ಮುಖ್ಯ ಸ್ಥಾಪಕನಾಗಲಿಕ್ಕೆ ಕ್ರಿಸ್ತನು ತನ್ನ ಶಕದ (35ನೇ ವರುಷದಲ್ಲಿಯಾಗಲಿ) 36ನೇದರಲ್ಲಿಯಾಗಲಿ ಸೌಲನೆಂಬವನನ್ನು ಆದು ಕೊಂಡಿದ್ದನು; ಕ್ರೈಸ್ತ ಸಭೆಯ ಕಠೋರ ಹಿಂಸಕರಲ್ಲಿ ಪ್ರಧಾನ ನಾಯಕನಾಗಿದ್ದು ಅಪೂರ್ವ ರೀತಿಯಿಂದ ಹೃತ್ಪರಿಣಾಮ ಪಟ್ಟು ಅಪೊಸ್ತಲನಾದವನು ಇವನೇ[3]. ಕ್ರಿಸ್ತನ ನಾಮವು ಇನ್ನು ತಿಳಿಯದ ಕಡೆಯಲ್ಲಿ ಅಂದರೆ ಮಿಕ್ಕ 12 ಅಪೊಸ್ತಲರೊಳಗೆ ಒಬ್ಬನು ಇನ್ನು ಪ್ರಸಂಗಿಸದ ಸ್ಥಳಗಳಲ್ಲಿ ತಾನು ಪ್ರಸಂಗಪ್ರಯಾಣ ಮಾಡುತ್ತಿರ ಬೇಕೆಂಬದು ಈ ಅಪೊಸ್ತಲನ ನಿಶ್ಚಲ ಮನಸು[4]; ಅದು ಕಾರಣವಾಗಿ ಅವನು ತನ್ನ ಹೃತ್ಪರಿಣಾಮದ ಮೇಲೆ ತಡೆಯದೆ, ಪಲೇಸ್ತೀನದ ಹೊರಗೆ ತೆಂಕು ಬಡಗು ದಿಕ್ಕಿನಲ್ಲಿರುವ ಅರಬಿಸ್ಥಾನದ ಭಾಗಕ್ಕೆ ಹೋಗಿ, ಅಲ್ಲಿ 3 ವರುಷ ಸುಮಾರು ಕ್ರಿಸ್ತಶಕದ 39ನೇದರ ವರೆಗೆ ಪ್ರಸಂಗವೃತ್ತಿ ನಡಿಸುತ್ತಾ ಇದ್ದನು. ಬಳಿಕ ಅವನು ಅಲ್ಲಿಂದ ಹೊರಟು, ಸುರಿಯದ ದಮಸ್ಕ ಪಟ್ಟದ ಮೇಲೆ ಹಾದು, ಯೆರೂಸಲೇಮಿಗೆ ಹೋಗಿ, ಅಲ್ಲಿ 15 ದಿವಸ ಕಳೆದು, ಪುನಃ ಸುರಿಯದಲ್ಲಿ ಸುವಾರ್ತೆ ಸಾರುತ್ತಾ ಸಣ್ಣ ಅಸಿಯದ ಕಿಲಿಕಿಯ ಶೀಮೆಯಲ್ಲಿ ಇರುವ ತರ್ಸವೆಂಬ ತನ್ನ ಜನ್ಮಪಟ್ಟಣಕ್ಕೆ ಗಮಿಸಿದನು[5]. ಕುಪ್ರ ದ್ವೀಪದಲ್ಲಿ[6] ಹುಟ್ಟಿ ಬರ್ನಬನೆಂದು ಅಡ್ಡಹೆಸರು ಹೊಂದಿ ಅಂತಿಯೊಖೀಯದ ಕ್ರೈಸ್ತ ಸಭೆಯ ಬೋಧಕನಾದ ಯೋಸೆಯು[7] ಸುಮಾರು ಕ್ರಿಸ್ತಶಕದ 42ನೇ ವರುಷದಲ್ಲಿ ತರ್ಸಕ್ಕೆ ಬಂದು, ತನ್ನ ದೊಡ್ಡ ಸಭೆಯಲ್ಲಿ ತನಗೆ ಆವಶ್ಯಕನಾದ ಸಹಾಯಕನಾಗ ತಕ್ಕವನು ಸೌಲನೇ ಎಂದು, ಅವನನ್ನು ಕರಕೊಂಡು, ತಿರಿಗಿ ಹೋಗಲಾಗಿ, ಅವರಿಬ್ಬರು ಕೂಡ ಅಂತಿಯೊಖೀಯದಲ್ಲಿ ಒಂದು ವರುಷ ಬಹಳ ಆಶೀರ್ವಾದದೊಡನೆ ಬೋಧನಾವೃತ್ತಿ ನಡಿಸುತ್ತಿದ್ದರು[8]. ಮರುವರುಷ ಕ್ರಿಸ್ತಶಕದ 44ನೇದರಲ್ಲಿ ಅವರಿಬ್ಬರು ತಮ್ಮಲ್ಲಿಯಣ ಕ್ರೈಸ್ತರ ಒಂದು ಪ್ರೀತಿದಾನವನ್ನು ತಕ್ಕೊಂಡು ಹೋಗಿ, ಯೆಹೂದ ದೇಶದ ತಮ್ಮ ಕ್ರೈಸ್ತ ಸಹೋದರರಿಗೆ ಕೊಟ್ಟರು[9].

---

1) ಯೆಶಾ. 2, 2—5; ಮತ್ತಾ. 28, 19. 20; ಲೂಕ. 24, 47; ಅಪೊ. ಕ್ರಿ. 1, 8. 2) 36ನೇ ಪಾನು. 3) ಅಪೊ. ಕ್ರಿ. 9, 15; 22, 21; ಗಲಾ. 1, 16; 2, 7—10; 30ನೇ, 32ನೇ ಪಾನು. 4) ರೋಮಿಾ. 15, 20—21; 38ನೇ ಪಾನು. 5) ಗಲಾ. 1, 21; ಅಪೊ. ಕ್ರಿ. 9, 30. 6) 35ನೇ ಪಾನು ನೋಡು. 7) ಅಪೊ. ಕ್ರಿ. 4, 36—37. 8) ಅಪೊ. ಕ್ರಿ. 11, 24—26. 9) 36ನೇ ಪಾನು ನೋಡು.

ಅವರು ಅಂತಿಯೊಖೀಯಕ್ಕೆ ತಿರಿಗಿ ಬಂದ ಮೇಲೆ ಅಲ್ಲಿಯ ಸಭೆಯವರು ಕ್ರಿಸ್ತಶಕದ 45ನೇ ವರುಷದಲ್ಲಿ ಅವರಿಬ್ಬರಿಗೋಸ್ಕರ ಪ್ರಾರ್ಥಿಸಿ, ಅವರಿಗೆ ಹಸ್ತಾವಧಾನವನ್ನು ಕೊಟ್ಟು, ಅವರನ್ನು ಒಂದು ದೊಡ್ಡ ಪ್ರಸಂಗಪ್ರಯಾಣಕ್ಕೆ ಕಳುಹಿಸಿದರು[1]. ಅವರು ಹಡಗವೇರಿ, ಮೊದಲು ಬರ್ನಬನ ಜನ್ಮಸ್ಥಳವಾದ ಕುಪ್ರ ದ್ವೀಪಕ್ಕೆ ಹೋಗಿ ಪ್ರಸಂಗಿಸಲಿಕ್ಕೆ, ಅಲ್ಲಿಯ ರೋಮಿಾಯ ಪ್ರತಿನಿಧಿಯು ಸಹ ಕ್ರೈಸ್ತನಾದನು. ಸೌಲನು ಅಲ್ಲಿ ಇದ್ದಂದಿನಿಂದಲೇ ಅವನಿಗೆ, ಪೌಲನೆಂತ, ಹೆಸರು ಬಂತು. ಸೌಲನೆಂಬದು ಒಂದು ಯೆಹೂದ್ಯ ಹೆಸರು, ಪೌಲನೆಂಬದು ಒಂದು ರೋಮಿಾಯ ಹೆಸರು; ಸೌಲನು ಮುಖ್ಯವಾಗಿ ಯೆಹೂದ್ಯರಲ್ಲದವರಿಗೆ ಸುವಾರ್ತೆ ಸಾರ ಬೇಕೆಂದು, ಆ ರೋಮಿಾಯ ಹೆಸರು ಬಂದದರಿಂದ ಸಹ ಗೋಚರವಾಗ ಬೇಕಾಯಿತು. ಕುಪ್ರದಿಂದ ಆ ಇಬ್ಬರು ಬೋಧಕರು ಹಡಗದಲ್ಲಿ ಸಣ್ಣ ಅಸಿಯಕ್ಕೆ ಪಯಣಮಾಡಿ, ಸಮುದ್ರತೀರ ದಾಟಿ, ಅಂಜದೆ ಮುಂದರಿಸಿ, ಬಹಳ ಕಳ್ಳರಿರುವ ಘಟ್ಟಗಳನ್ನು ಹತ್ತಿ[2], ಬೈಲುತಪ್ಪಲಿಗೆ ಹೋಗಿ, ತಮಗೆ ಸರ್ವತ್ರ ನಿತ್ಯದಲ್ಲಿ ಒದಗುತ್ತಿರುವ ನಾನಾ ಕಷ್ಟ ಚಿಂತಿಸದೆ, ಕಿಲಿಕಿಯವೆಂಬ ಪೌಲನ ಜನ್ಮಶೀಮೆಗೆ ಪಡುವಲಲ್ಲಿರುವ ಪಂಫೂಲಿಯ ಶೀಮೆಯಲ್ಲಿಯೂ ಇದಕ್ಕೆ ನೆರೆಯಾದ ಪಿಸಿದಿಯ ಶೀಮೆಯಲ್ಲಿಯೂ ಫ್ರುಗಿಯ ಶೀಮೆಯ ಒಂದು ಭಾಗವಾದ ಲುಕಾವೊನಿಯದಲ್ಲಿಯೂ ಪ್ರಸಂಗಿಸಿ, ತಾವು ಪ್ರಸಂಗಿಸಿದ ಒಂದೊಂದು ದೊಡ್ಡ ಪಟ್ಟದಲ್ಲಿ ಒಂದೊಂದು ಸಭೆ ಉತ್ಪಾದಿಸಿ, ತರುವಾಯ ಸುರಿಯದ ಅಂತಿಯೊಖೀಯಕ್ಕೆ ಹಿಂದಿರುಗಿ, ಅಲ್ಲಿಯ ಸಭೆಯ ಮುಂದೆ ದೇವರು ತಮ್ಮ ಕೈಯಿಂದ ಸಾಗಿಸಿದ ಆಶ್ಚರ್ಯಗಳನ್ನು ತಿಳಿಸಿದರು[3]. ಹೀಗೆ ಪೌಲನು ಅಂದು ತನ್ನ ಮೊದಲಿನ ಪ್ರಸಂಗಪ್ರಯಾಣ ಮುಗಿಸಿ ಬಿಟ್ಟನು.

ಆ ಮೇಲೆ ಪೌಲನು ಹಲವರು ಕ್ರೈಸ್ತರ ಸಂಗಾತ ಇನ್ನು ಎರಡು ದೊಡ್ಡ ಪ್ರಸಂಗಪ್ರಯಾಣಗಳನ್ನು ಮಾಡಿದನು. ಹ್ಯಾಗಂದರೆ ಅವನು ತನ್ನ ಹೃತ್ಪರಿಣಾಮಕ್ಕೆ 14 ವರುಷ ಇತ್ತಲಾಗೆ 3ನೇ ಸರ್ತಿ[4] ಅಂದರೆ ಸುಮಾರು ಕ್ರಿಸ್ತಶಕದ 50ನೇ ದರಲ್ಲಿ ಬರ್ನಬನ ಜೊತೆಯಲ್ಲಿ ಯೆರೂಸಲೇಮಿಗೆ ಗಮನ ಮಾಡಿ, ಅಂತಿಯೊಖೀಯಕ್ಕೆ ಮರಳಿ ಬಂದಾಗ ಕ್ರಿಸ್ತಶಕದ 51ನೇ ವರುಷದಲ್ಲಿ ಹೊರಟು ಹೋಗಿ, ಸುರಿಯದ ಮತ್ತು ಕಿಲಿಕಿಯದ ಸಭೆಗಳಿಗೆ ಭೇಟಿ ಕೊಟ್ಟು, ತಾನು ಮುಂಚೆ ಹೋಗದಿದ್ದ ನಿಜ ಫ್ರುಗಿಯ ಮತ್ತು ಗಲತಿಯ ಎಂಬ ಸಣ್ಣ ಅಸಿಯದ ಎರಡು ಶೀಮೆಯಲ್ಲಿ ಪ್ರಸಂಗವೃತ್ತಿ ನಡಿಸಿದನು. ಗಲತಿಯದವರು (ಗಲತರು) ಅವನ ಆಗಮನಕ್ಕೆ ಬ

---

1) ಅಪೊ. ಕ್ರಿ. 12, 25; 13, 1—5. 2) 2 ಕೊರಿ. 11, 26. 3) ಅಪೊ. ಕ್ರಿ. 13, 1—52; 14, 1—28. 4) ಗಲಾ. 2, 1; 40ನೇ ಪಾನು.

ಹಳ ಆನಂದ ಪಟ್ಟರು[1]. ಈ ಗಲತರು[2] ಗಲ್ಲರೆಂಬ ಕೆಲ್ತರ ವಂಶಸ್ಥರು; ಅವರ ಮೂಲದೇಶವು ಯುರೋಪ ಖಂಡದಲ್ಲಿಯ ಗಲ್ಲಿಯವೆಂಬ ಫ್ರಂಕ ದೇಶ. ಹ್ಯಾಗಂದರೆ ಪೂರ್ವದಲ್ಲಿ ತಮ್ಮ ಮೂಲಸ್ಥಾನವು ತಮಗೆ ಸಾಲದಿದ್ದಾಗ ಆ ಗಲ್ಲರದು ಒಂದು ಭಾಗವು ಒಕ್ಕಲು ತೆಗೆಯಿತು; ಅದು ಕ್ರಿಸ್ತಶಕಕ್ಕೆ ಮುಂಚಿನ 276ನೇ ವರುಷದಲ್ಲಿ ಯುರೋಪ ಖಂಡದ ತೆಮ್ಕೂಡಲು ಕಡೆಯ ಶೀಮೆಯಾದ ಥ್ರಾಕಿಯದಲ್ಲಿ ವಸ್ತಿಯಾಗಿದ್ದು, ಅದೇ ವರುಷದಲ್ಲಿ ಸಣ್ಣ ಅಸಿಯಕ್ಕೆ ಗಮನ ಮಾಡಿ, ಅಲ್ಲಿ ಒಂದು ವಿಸ್ತಾರವಾದ ಪ್ರದೇಶವನ್ನು ಆಕ್ರಮಿಸಿ ಕೊಂಡಿತು; ಇದಕ್ಕೆ, ಗಲತಿಯವೆಂತ, ಹೆಸರಾಯಿತು[3].—ಪೌಲನು ತನ್ನ ಜೊತೆಗಾರರ ಸಂಗಡ ಇನ್ನು ಸಣ್ಣ ಅಸಿಯದ ಇತರ ಪ್ರದೇಶಗಳಲ್ಲಿ ಪ್ರಸಂಗಿಸಲಿಕ್ಕೆ ಮನಸ್ಸು ಮಾಡಿ ಕೊಂಡಲ್ಲಿ ದೇವರಾತ್ಮವು ಅಡ್ಡಿ ತಂದು, ಅವರನ್ನು ಸಮುದ್ರದ ಆಚೆ ಯುರೋಪ ಖಂಡಕ್ಕೆ ಕಳುಹಿಸಿದನು; ಹ್ಯಾಗಂದರೆ ದೇವರ ಚಿತ್ತದ ಮೇರೆಗೆ ಆ ಖಂಡದಲ್ಲಿಯೂ ಪೌಲ ಅಪೊಸ್ತಲನ ಮುಖದಿಂದಲೇ ಪ್ರಥಮ ಸಭೆಗಳನ್ನು ಸ್ಥಾಪಿಸ ಬೇಕಾಯಿತು[4]. ಪೌಲನು ಯುರೋಪದಲ್ಲಿ ಮೊದಲು ಬಂದ ಶೀಮೆಯು ಮಕೆದೊನಿಯವೆಂಬದು; ಅವನು ಅಲ್ಲಿಯ 3 ದೊಡ್ಡ ಪಟ್ಣಗಳಾದ ಫಿಲಿಪ್ಪಿ ಥೆಸ್ಸಲೊನೀಕೆ ಬೆರೋಯ ಎಂಬಲ್ಲಿ ಸಭೆಗಳನ್ನು ನೆಟ್ಟು[5], ಗ್ರೀಕ ದೇಶದ ಬಹು ಪ್ರಖ್ಯಾತ ಪಟ್ಣವಾದ ಅಥೇನೆಗೆ ಹೋಗಿ, ತಕ್ಕ ಆಶೀರ್ವಾದದೊಡನೆ ಪ್ರಸಂಗಿಸಿದನು. ಅದು ಸರ್ವ ರೋಮಿಾಯ ಸಾಮ್ರಾಜ್ಯದೊಳಗೆ ಕಲಾಕುಶಲತ್ವ ವಿದ್ಯೆಗಳ ಮುಖ್ಯಸ್ಥಾನವು; ರೋಮಿಾಯಶ್ರೇಷ್ಠರು ಪಾಂಡಿತ್ಯವನ್ನು ಅಭ್ಯಸಿಸುವ ಶಾಲೆಯು ಅದರಲ್ಲಿಯೇ; ಅದಲ್ಲದೆ ಬೇರೆ ಎಲ್ಲಿಯೂ ದೇವತೆಗಳಿಗೆ ಹೆಚ್ಚು ಶೃಂಗಾರವಾದ ಆಲಯಗಳೂ ಪೀಠಗಳೂ ಕಟ್ಟೆದ್ದಿಲ್ಲ. ಅಲ್ಲಿಂದ ಪೌಲನು ಗ್ರೀಕ ದೇಶದ ಆಗಿನ ರಾಜಧಾನಿಯಾದ ಕೊರಿಂಥ ಪಟ್ಣಕ್ಕೆ ಗಮಿಸಿದನು. ಅದು ರೋಮಿಾಯ ಪ್ರತಿನಿಧಿಯ ವಾಸಸ್ಥಳವು; ಅದರಲ್ಲಿ ಇರುವ ವೆನಳೆಂಬ ದೇವತೆಯ[6] ಒಂದು ಮಹಾ ದೊಡ್ಡ ಆಲಯದೊಳಗೆ ಸಾವಿರ ಸೂಳೆಯರೂ ಸೇವಕಿಯರಾಗಿರುವರು. ಪೌಲನು ಅಲ್ಲಿ 1½ ವರುಷ ಬಹಳ ಆಶೀರ್ವಾದಕರವಾದ ಪ್ರಸಂಗವೃತ್ತಿಯನ್ನು ನಡಿಸುತ್ತಾ ಇದ್ದು, ಅಲ್ಲಿಂದ ಮಕೆದೊನಿಯದ ಥೆಸ್ಸಲೊನೀಕೆಯಲ್ಲಿ ತಾನು ಹುಟ್ಟಿಸಿದ್ದ ಸಭೆಯ ಬಳಿಗೆ ಈಗ ನಮಗುಳಿದಿರುವ ಎರಡು

1) ಗಲಾ. 4, 14—15. 2) Roth's Dictionary (Supplement to letter K) supposes them to be the same as the Kirâtas mentioned in the Véda. 3) ಅಪೊ. ಕ್ರಿ. 15, 36—16, 1—6. 4) ಯುರೋಪ ಖಂಡದಲ್ಲಿಯ ರೋಮಪುರದ ಕ್ರೈಸ್ತಸಭೆಯು ಹೆಚ್ಚಾಗಿ ಪಾಲನ ಮಧ್ಯಸ್ಥಿಕೆಯಿಂದ ಅಂದಾದರೂ ಹುಟ್ಟಿರ ಬಹುದು; ರೋಮಿಾ. 1, 8; 15, 23; 16, 19. 5) ಅಪೊ. ಕ್ರಿ. 16, 7—17, 1—13. 6) 9ನೇ, 16ನೇ ಪಾನು ನೋಡು.

ಪತ್ರಿಕೆಗಳನ್ನು ಬರೆದು ಕಳುಹಿಸಿದನು[1]. ಆ ಮೇಲೆ ಕ್ರಿಸ್ತಶಕದ 54ನೇ ವರುಷದಲ್ಲಿ ಅವನು ಸಣ್ಣ ಅಸಿಯದ ಎಫೆಸ ಪಟ್ಟಣದ[2] ಮೇಲೆ, ಮತ್ತೆ ಯೆರೂಸಲೇಮಿನ ಮೇಲೆ ಸಹ[3] ಅಂತಿಯೊಖೀಯಕ್ಕೆ ತಿರಿಗಿ ಹೋದನು[4]. ಪೌಲನ 2ನೇ ದೊಡ್ಡ ಪ್ರಸಂಗಪ್ರಯಾಣವು ಇದೇ. ಅದೇ ವರುಷ ಪೇತ್ರ ಅಪೊಸ್ತಲನು ಅಲ್ಲಿಗೆ ಬಂದು, ಪೌಲನಿಗೆ ಭೇಟಿ ಕೊಟ್ಟನು[5].

ಪೌಲನು ಇನ್ನೂ ಅದೇ ವರುಷದಲ್ಲಿ ಅಂದರೆ ಕ್ರಿಸ್ತಶಕದ 54ನೇದರಲ್ಲಿ ಹೊರಟು ಹೋದ 3ನೇ ದೊಡ್ಡ ಪ್ರಸಂಗಪ್ರಯಾಣದಲ್ಲಿ[6] ಅವನು ಸಣ್ಣ ಅಸಿಯದ ಯವನ (ಯೋನಿಯ) ಶೀಮೆಯ ರಾಜಧಾನಿಯಾದ ಆ ಎಫೆಸವೆಂಬ ಬಂದರ ಸ್ಥಳದಲ್ಲಿ 2 ವರುಷಕ್ಕಿಂತ ಹೆಚ್ಚು ಕಾಲ ಕಳೆದು, ಒಂದು ದೊಡ್ಡ ಸಭೆಯನ್ನು ಉತ್ಪಾದಿಸಿದನು; ದೇವರ ವಾಕ್ಯವು ಪೂರ್ಣ ಸಣ್ಣ ಅಸಿಯ ದೇಶದ ಮೇಲೆ ಹಬ್ಬಿ ಹೋಗುವಷ್ಟು ಆಶೀರ್ವಾದವು ಅಲ್ಲಿಯ ಅವನ ವೃತ್ತಿಯ ಮೇಲೆ ಆಯಿತು[7]. ಅವನು ಅಂದು ಎಫೆಸದಲ್ಲಿ ಇದ್ದು ಗಲತರಿಗೂ ಕೊರಿಂಥಿಯರಿಗೂ ತನ್ನ ಒಂದೊಂದು ಪತ್ರಿಕೆ ಮುಟ್ಟಿಸಿದನು[8]. ಸುಮಾರು ಕ್ರಿಸ್ತಶಕದ 57ನೇ ವರುಷ ಅವನು ಎಫೆಸ ಬಿಟ್ಟು, 2ನೇ ಸಾರಿ ಯುರೋಪಕ್ಕೆ ಹೋಗಿ, ತಾನು ಮಕೆದೊನಿಯದಲ್ಲಿ ಸ್ಥಾಪಿಸಿದ ಸಭೆಗಳಿಗೆ ದರ್ಶನ ಮಾಡಿ[9], ಅಲ್ಲಿಂದ ಕೊರಿಂಥಿಯರಿಗೆ ಮತ್ತೊಂದು ಪತ್ರಿಕೆ ಬರೆದು ಕಳುಹಿಸಿ, ಮಕೆದೊನಿಯದ ಬಡಗುಪಡುವಲು ದಿಕ್ಕಿನಲ್ಲಿರುವ ಇಲ್ಲುರಿಯ ಶೀಮೆಯಲ್ಲಿ ಸಹ ಪ್ರಸಂಗಿಸಿ[10], ಕೊರಿಂಥಕ್ಕೆ ಗಮಿಸಿ[11], ಅಲ್ಲಿ 3 ತಿಂಗಳು ತಡೆಯುವಷ್ಟರೊಳಗೆ ರೋಮಪುರದ[12] ಸಭೆಯವರಿಗೆ ಒಂದು ಕಾಗದ ಬರೆದು ಕಳುಹಿಸಿದನು[13].

ಆಗ ರೋಮಪುರದಲ್ಲಿ ಕ್ರೈಸ್ತರಾದ ಯೆಹೂದ್ಯರ ಮತ್ತು ಪರ ಜನರ ಒಂದು ಕ್ರೈಸ್ತ ಸಭೆಯು ಹುಟ್ಟಿತ್ತು; ಹೋಗಿ ಅದರ ಪ್ರಥಮ ಮೂಲಕನು ಆದವನು ಯಾರೆಂತ, ಎಂತೂ ಗೊತ್ತಿಲ್ಲ. ಮುಖ್ಯ ಅಪೊಸ್ತಲರಲ್ಲೊಬ್ಬನು ತಾನು ರೋಮಕ್ಕೆ ಹೋಗಿ, ಆ ಸಭೆ ಹುಟ್ಟಿಸಿದನೆಂದರೆ, ಅದು ಏನೂ ಆಧಾರವಿಲ್ಲದ್ದಲ್ಲದೆ ದೇವಾಕ್ಯಪ್ರತಿಕೂಲವಾದ್ದೆಂದು, ಪೇತ್ರನ ವಿಷಯವಾಗಿ ಹಿಂದೆ ಸೂಚಿಸಲಾಯಿತು[14]. ಆದರೆ ಆ ಸಭೆಯನ್ನು ಕುರಿತು ಹೇಳ ತಕ್ಕದ್ದೇನೆಂದರೆ—ಕ್ರಿಸ್ತನ ಜನ್ಮಕ್ಕೆ ಮುಂಚೆಯೇ ಅನೇ

---

1) 1 ಥೆಸ್ಸ. 3, 1—6; ಅಪೊ. ಕ್ರಿ. 18, 5. 2) 9ನೇ ಪಾನು. 3) 40ನೇ ಪಾನು. 4) ಅಪೊ. ಕ್ರಿ. 17, 14—18, 1—22. 5) ಗಲಾ. 2, 11; 40ನೇ ಪಾನು. 6) ಅಪೊ. ಕ್ರಿ. 18, 23—21, 1—15. 7) ಅಪೊ. ಕ್ರಿ. 19, 1—10. 8) 1 ಕೊರಿ. 16, 5—9. 9) ಅಪೊ. ಕ್ರಿ. 20, 1. 10) ರೋಮಾ. 15, 19. 11) ಅಪೊ. ಕ್ರಿ. 20, 2—3. 12) 7ನೇ, 48ನೇ ಪಾನು ನೋಡು. 13) ರೋಮಾ. 16, 1—2. 14) 38ನೇ ಪಾನು ನೋಡು.

ಕ ಯೆಹೂದ್ಯರು ರೋಮಿಾಯ ಅಧಿಕಾರಸ್ಥರ ಸಂಗಡದ ಜಗಳದ ದೆಸೆಯಿಂದ[1] ಶೆರೆಯವರಾಗಿ, ರೋಮಪುರದಲ್ಲಿಯ ಸ್ಥಿತಿವಂತರಿಗೆ ದಾಸರಾಗ ಮಾರಲಾಯಿತು. ಅವರ ಒಡೆಯರು, ಅವರು ತಮ್ಮ ನ್ಯಾಯಪ್ರಮಾಣದ ಪ್ರಕಾರ ಸಬ್ಬತು[2] ದಿನಗಳಲ್ಲಿ ಏನೂ ಕೆಲಸ ಮಾಡ ಒಲ್ಲರೆಂದು, ಬೇಸರ ಪಟ್ಟು, ಅವರಲ್ಲಿ ಅನೇಕರಿಗೆ ಬಿಡುಗಡೆ ಕೊಡುತ್ತಿರಲಾಗಿ, ಕ್ರಿಸ್ತಶಕದ 14ನೇ ವರುಷದಲ್ಲಿ ಸತ್ತ ಆ ಒಕ್ತಾವಿಯಾನ ಔಗುಸ್ತ ಕೈಸರನು ಪುರದ ಒಂದು ಪ್ರತ್ಯೇಕ ಭಾಗವನ್ನು, ಅವರ ವಾಸಸ್ಥಳವೆಂತ, ನೇಮಿಸಿದನು. ಆ ಯೆಹೂದ್ಯರು ಅಲ್ಲಿ ಕಟ್ಟಿದ ಹಲವು ಪ್ರಾರ್ಥನೆಮನೆಗಳಿಗೆ ಬಹಳ ಮಂದಿ ರೋಮಿಾಯರು, ಹೆಚ್ಚಾಗಿ ಶ್ರೇಷ್ಠರ ಹೆಂಡರು, ಬಂದು ಕೇಳುವವರಾದರು. ಆ ರೋಮಪುರದ ಯೆಹೂದ್ಯರಿಗೂ ಪಲೇಸ್ತೀನದವರಿಗೂ ನಿತ್ಯ ಪರಿಚರ್ಯವು. ಕ್ರಿಸ್ತಶಕದ 34ನೇ ವರುಷ ಆರಂಭದ ಪಂಚಾಶತ್ತಮದಿನಹಬ್ಬದಲ್ಲಿ ಅಂಥ ಪ್ರವಾಸಿಗಳಾದ ಯೆಹೂದ್ಯರೂ ಅವರ ಮತ ಶೇರಿದವರೂ ರೋಮಪುರದಿಂದ ಯೆರೂಸಲೇಮಿಗೆ ಬಂದಿದ್ದು, ಪರಿಶುದ್ಧಾತ್ಮಾವತಾರದ ದರ್ಶಿಗಳಾಗಿ[3], ಆ ಅದ್ಭುತದ ಸುದ್ದಿ ತಕ್ಕೊಂಡು, ತಿರಿಗಿ ಹೋಗಿ, ತಿಳಿಸಿದರೆಂದು, ಊಹಿಸುವದಕ್ಕೆ ಅಭ್ಯಂತರ ಕಾಣುವದಿಲ್ಲ. ತದನಂತರ 23 ವರ್ಷ ಹೋದ ಮೇಲೆ ಕ್ರಿಸ್ತಶಕದ 57ನೇದರಲ್ಲಿ ಪೌಲನು ಕೊರಿಂಥ ಪಟ್ಣದಿಂದ ರೋಮಪುರದಲ್ಲಿಯಣ ಕ್ರೈಸ್ತ ಸಭೆಗೆ ಒಂದು ಕಾಗದ ಬರೆಯುವಾಗ ಆ ಸಭೆಯು ಸ್ಥಾಪಿತವಾಗಿ ಬಹಳ ದಿವಸ ಹೋಗಿದ್ದವಲ್ಲದೆ ಅದು ತನ್ನ ವಿಶ್ವಾಸಮಂಗಳತ್ವದಿಂದ ಕೀರ್ತಿ ಗೊಂಡಿತ್ತು[4]. ಆ ಸಮಯ ಅದರಲ್ಲಿ ಅಂದ್ರೊನೀಕ ಮತ್ತು ಯೂನಿಯ ಎಂಬ ಇಬ್ಬರು ಪ್ರಖ್ಯಾತ ಸುವಾರ್ತಾಪ್ರಸಂಗಿಕರು ಇದ್ದರು; ಇವರು ಪೌಲನ ಪೂರ್ವದಲ್ಲಿ ಅಂದರೆ ಅಂದಿಗೆ 21 ವರುಷ ಮುಂಚೆಯೇ ಕ್ರೈಸ್ತರಾಗಿದ್ದರು[5]. ಕ್ರಿಸ್ತಶಕದ 52ನೇದರಲ್ಲಿ ಆ ಸಭೆಯ ಮೇಲೆ ಹಿಂಸೆ ಬಂತು, ಹ್ಯಾಗಂದರೆ ಆಗ ರೋಮಪುರದ ಯೆಹೂದ್ಯರು ಒಬ್ಬ ಮೆಸ್ಸೀಯನ ಮೇಲಣ ವ್ಯರ್ಥ ಆಶೆಯಿಂದ ಕಲಹ ತೆಗೆದರು; ಆದ್ದರಿಂದ ಕ್ಲಾದಿಯ ಕೈಸರನು[6], ಯೆಹೂದ್ಯರು ರೋಮವ ಬಿಟ್ಟು ಹೋಗ ಬೇಕೆಂತ, ಆಜ್ಞೆ ಪ್ರಕಟಿಸಲು, ಯೆಹೂದ್ಯರಲ್ಲದೆ ಅಲ್ಲಿಯ ಕ್ರೈಸ್ತರು ಸಹ ಸ್ವಲ್ಪ ಕಾಲ ಉಪದ್ರವ ತಾಳುವವರಾದರು; ರೋಮಿಾಯ ಅಧಿಕಾರಸ್ಥರು ಯೆಹೂದ್ಯರಿಗೂ ಕ್ರೈಸ್ತರಿಗೂ ಇರುವ ಹೆಚ್ಚು ಕಡಿಮೆಯನ್ನು ಅಂದು ನೆಟ್ಟಗೆ ತಿಳು ಕೊಂಡಿದ್ದಿಲ್ಲ. ಆ ಕೈಸರನ ಆಜ್ಞೆಯ ದೆಸೆಯಿಂದ ರೋಮಪುರ ಬಿಟ್ಟು ಹೋದವರಲ್ಲಿ ಅಕ್ವಿಲನೆಂಬ ಒಬ್ಬ ಗುಡಾರಕೆಲಸದವನೂ ಪ್ರಿಸ್ಕಿಲ್ಲಳೆಂಬ ಅ

---

1) 20ನೇ ಪಾನುಸರಿ ನೋಡು. 2) 2 ಮೋಶೆ. 20, 10. 11. 3) 28ನೇ ಪಾನು ನೋಡು. 4) ರೋಮಿಾ. 1, 8; 15, 23; 16, 19. 5) ರೋಮಿಾ. 16, 7. 6) 34ನೇ, 36ನೇ, 37ನೇ 43ನೇ ಪಾನುಗಳು.

ವನ ಹೆಂಡತಿಯೂ ಸಹ ಇದ್ದು[1], ಬಳಿಕ ಪೌಲನ ಮುಖಾಂತರವಾಗಿ ಕ್ರಿಸ್ತನ ವಿಶ್ವಾಸಿಗಳಾಗಿ, ಕ್ರಿಸ್ತಶಕದ 54ನೇ ವರುಷ ಎಫೆಸ ಪಟ್ಟಣದಲ್ಲಿ ಇದ್ದು[2], ಕ್ರಿಸ್ತಶಕದ 57ನೇದರಲ್ಲಿ ಪೌಲನು ರೋಮಿಯ ಕ್ರೈಸ್ತರಿಗೆ ತನ್ನ ಪತ್ರಿಕೆ ಬರೆಯುವಾಗ ರೋಮಪುರಕ್ಕೆ ಹಿಂದಿರುಗಿದ್ದರು; ಆ ಪುರದೊಳಗಿನ ಅವರ ಮನೆಯೊಳಗೆ ಅಲ್ಲಿಯ ಸಭೆಯು ಪ್ರಾರ್ಥನೆಗೆ ಕೂಡುತ್ತಿರುವದಲ್ಲದೆ ಪೌಲನು ಆಗ ಕೊರಿಂಥದಲ್ಲಿ ಸುವಾರ್ತೆ ಸಾರುವಂತೆ ಅವರು ರೋಮದಲ್ಲಿ ಅದನ್ನು ಸಾರುತ್ತಿರುವರು[3]. ಅವರು ಹೊರ್ತಾಗಿ ಆ ಅಂದ್ರೊನೀಕನೂ ಯೂನಿಯನೂ ಕೂಡ ಅಂದು ರೋಮದಲ್ಲಿ ಪ್ರಸಂಗವೃತ್ತಿ ನಡಿಸುತ್ತಿರುವರು[4]; ಇವರು ಅಲ್ಲಿಗೆ ಬಹಳ ದಿವಸಗಳ ಮೊದಲು ಬಂದಿದ್ದರೋ? ಇಲ್ಲವೋ? ಎಂತ, ತಿಳಿಯುವದಿಲ್ಲ. ಪುನಃ ಪೌಲನಿಗೆ ಆ ರೋಮದೊಳಗಣ ಸಭ್ಯರಲ್ಲಿ ಅನೇಕರ ಹೆಸರು ಗೊತ್ತಿದ್ದದಲ್ಲದೆ ಎಲ್ಲರ ಪರಿಚಿತಿಯೂ ಅವನಿಗಿತ್ತು[5].—

ರೋಮಪುರದ ಸಭೆಯು ಉತ್ಪನ್ನವಾಗಿ ಸುಮಾರು 300 ವರುಷ ಹೋದ ಮೇಲೆ ಜನ್ಮಕ್ಕೆ ಬಂದ ಕೆಲವರು ಸಭಾಪಿತೃಗಳು (ನುಮಿದಿಯದ ಒಪ್ತಾತನು, ಹಿಯೆರೋನುಮನು[6], ಔಗುಸ್ತೀನನು[7]), ಪೆತ್ರನು ರೋಮಪುರದ ಪ್ರಥಮ ಅಧ್ಯಕ್ಷನಾಗಿದ್ದನೆಂತ, ನೆನಸಿದರು; ಕ್ರಿಸ್ತಶಕದ 340ನೇ ವರುಷದಲ್ಲಿ ಸತ್ತ ಕೈಸರೈಯದ ಆ ಯುಸೆಬಿಯನೆಂಬ ಮತ್ತೊಬ್ಬನು, ಪೆತ್ರನು ಕ್ರಿಸ್ತಶಕದ ಸುಮಾರು 44ನೇದರಲ್ಲಿ ಒಮ್ಮೆ ಆ ಪುರಕ್ಕೆ ಹೋದನೆಂತ, ಊಹಿಸಿದನು; ಇನ್ನೊಬ್ಬ ಸಭಾಪಿತೃ (ಹಿಂದಿನ ಆವರಣಚಿನ್ಹೆಯೊಳಗಣ ಆ ಹಿಯೆರೋನುಮನು), ಅವನು (ಕ್ರಿಸ್ತಶಕದ 67ನೇ ವರುಷದಲ್ಲಿ ಆಗಲಿ 68ನೇದರಲ್ಲಿ ಆಗಲಿ ಅಲ್ಲಿ ಸಂಭವಿಸಿದ ತನ್ನ ಮರಣದ ವರೆಗೆ) 25 ವರುಷ ಅಲ್ಲಿ ಸಭಾಧ್ಯಕ್ಷನಾಗಿದ್ದನೆಂಬದನ್ನಾದರೂ ಭಾವಿಸಿ ಕೊಂಡನು. ಕ್ರಿಸ್ತಶಕದ 258ನೇ ವರುಷದಲ್ಲಿ ತೀರಿ ಹೋದ ಬೇರೊಬ್ಬ ಸಭಾಪಿತೃ (ಕುಪ್ರಿಯಾನನು) ನೆನಸಿದ್ದದ್ದು—ರೋಮವು ಪೆತ್ರನ ಲೋಕವೆಂಬ ಸ್ಥಳವು, ಅದರಲ್ಲಿ ಪೆತ್ರನು ಕೂತ ಪೀಠವದೆ, ಇದರಲ್ಲಿ (ಸಹ) ಕ್ರೈಸ್ತ ಸಭೆಯು ಕಟ್ಟಿರುವದು[8].—ಆದರೆ ಆ ರೋಮಿಯ ಸಭೆಯು ಹುಟ್ಟಿ ಸುಮಾರು 200 ವರುಷ ಮಾತ್ರ ಕಳೆದು ಹೋದಾಗ ಜನಿಸಿದ ಇತರ ಮನನೀಯರಾದ ಸಭಾಪಿತೃಗಳು (ಅಪೊಸ್ತೊಲಿಕ ಪಿತೃವಾದ ಪಪಿಯನು; ಕೊರಿಂಥದ ದಿಯೊನೂಸಿಯನು, ಈರೇನೇಯನು, ತೆರ್ತುಲ್ಲಿಯಾನನು, ಒರೀಗೆನನು, ಹಿಪ್ಪೊಲೂತನು; ಸಭೆಯ ಹಿರಿಯನಾದ ಕಾಯ ರೋಮಾನನು)

---

1) ಅಪೊ. ಕ್ರಿ. 18, 2. 2) 1 ಕೊರಿ. 16, 19. 3) ರೊಮಿ. 16, 3—5. 4) ರೋಮಿ. 16, 7. 5) ರೋಮಿ. 16. 6) 38ನೇ ಪಾನು. 7) 30ನೇ ಸಂಧಿ. 8) 17ನೇ ಸಂಧಿಯ ಅಂತ ನೋಡು.

ಆ ಪ್ರಕಾರದ ಮಾತನ್ನರಿಯದೆ—ಪೇತ್ರನೂ ಪೌಲನೂ ರೋಮದಲ್ಲಿ ಬೋಧಿಸಿ, ಅಲ್ಲಿಯ ಸಭೆಯುದ್ಪಾದಿಸಿ[1], ರಕ್ತಸಾಕ್ಷಿಮರಣ ತಾಳಿದರೆಂತ, ಹೇಳಿದರಷ್ಟೇ[2]. ಆಯಾ ಸಭಾಪಿತೃಗಳು ಪೇತ್ರನನ್ನು ಕುರಿತು ಹೇಳಿರುವಂಥಾದು ಇವನನ್ನು ಕುರಿತು ಬಹಳ ಸುದ್ದಿ ಹೇಳುವ ಪರಿಶುದ್ಧ ಬರಹದಲ್ಲಿ ಇಲ್ಲ. ಆದಾಗ್ಯೂ ಹ್ಯಾಗೂ ಅವರ ಆಯಾ ಮಾತುಗಳನ್ನು ಪರಿಶುದ್ಧ ಬರಹ ಹಿಡಿದು ಶೋಧಿಸ ತಕ್ಕದು. ಹಾಗಾದರೆ, ಪೇತ್ರನು ಪೌಲನಿಂದ ಅಂದು ಆ ಪತ್ರಿಕೆ ರಚಿತವಾಗದ್ದಕ್ಕಿಂತ ಮುಂಚೆ ರೋಮಕ್ಕೆ ಹೋಗಿ, ಅಲ್ಲಿ ಪ್ರಸಂಗಿಸಿ, ಅಲ್ಲಿಯ ಸಭೆ ಉತ್ಪಾದಿಸಿದನೆಂಬದು ಪರಿಶುದ್ಧ ಬರಹದ ಪ್ರಕಾರ ಸಾಧ್ಯವೋ? ಏನೋ? ಎಂತ, ಮೊದಲು ಕೇಳೋಣ. ಪೌಲನು ಕ್ರಿಸ್ತಶಕದ ಆ 57ನೇ ವರುಷ ರೋಮಪುರದಲ್ಲಿಯ ಕ್ರೈಸ್ತರಿಗೆ ಬರದ ಆ ಪತ್ರಿಕೆಯ ಪ್ರಕಾರವೇ ಅದು ಅಸಾಧ್ಯ. ಹ್ಯಾಗಂದರೆ, ಅವನು ಆ ಪತ್ರಿಕೆಯಲ್ಲಿ—ರೋಮಪುರದ ಸಭ್ಯರ ಬಳಿಗೆ ಬರುವದಕ್ಕೆ ತನಗೆ ಬಹಳ ವರುಷಗಳಾರಭ್ಯ ಕಾಂಕ್ಷೆ ಇರುತ್ತಿತ್ತು, ತಾನು ರೋಮದಲ್ಲಿರುವ ಸಭೆಗೆ ಸಹ ಸುವಾರ್ತೆ ಪ್ರಸಂಗಿಸುವದಕ್ಕೆ ಸಿದ್ಧನಾಗಿದ್ದೇನೆ, ಕೂಡುವಷ್ಟು ಬೇಗ ಬರುವೆನೆಂತ, ಬರೆದಿದ್ದಾನೆ[3]; ಹೀಗಿರಲಾಗಿ ಆ ದೊಡ್ಡ ರೋಮಿಾಯ ಸಾಮ್ರಾಜ್ಯದ ರಾಜಧಾನಿಯೊಳಗಣ ಸಭೆಯ ಪಾಯ ಹಾಕಿರುವಂದೇ ಅವನು ಬರೆದ ಅಂಥಾ ಮಾತಿನ ಅಭಿಪ್ರಾಯವು, ಅವನು ತಾನು ಬಹು ವಿಶೇಷ ಮಧ್ಯಸ್ಥಿಕೆಯಿಂದ ಆ ಪಾಯ ಹಾಕಿದ್ದನೆಂತ, ಹೇಳಿದರೆ ಮಾತ್ರ ಸ್ಪಷ್ಟವಾಗುತ್ತದೆ[4]; ಯಾಕಂದರೆ, ಪರರು ಹಾಕಿದ ಅಸ್ತಿವಾರದಲ್ಲಿ ತಾನು ಕಟ್ಟದ ಹಾಗೆ ಕ್ರಿಸ್ತನ ಹೆಸರು ಇನ್ನು ಗೊತ್ತಾಗದಿದ್ದಲ್ಲಿ ಮಾತ್ರ ತಾನು ಸುವಾರ್ತೆ ಸಾರಬೇಕೆಂದು, ತನ್ನ ಪ್ರಸಂಗವೃತ್ತಿಯ ಆರಂಭದಿಂದಲೇ ಅವನಿಗೆ ಸಿದ್ಧಾಂತವಿರುವದು[5]; ಪೇತ್ರನು ಮುಂದಾಗಿ ರೋಮಕ್ಕೆ ಬಂದು, ಅಲ್ಲಿಯ ಸಭೆಯ ಮೂಲಸ್ಥನಾಗಿದ್ದರೆ ಪೌಲನ ಸಿದ್ಧಾಂತಕ್ಕೂ ಅವನ ಕಾಂಕ್ಷೆ ನಡಾವಳಿಗಳಿಗೂ ದೊಡ್ಡ ವ್ಯತ್ಯಾಸ ಬೀಳುತ್ತಿತ್ತು, ಅಲ್ಲವೋ? ಅದಲ್ಲದೆ, ಪೌಲನು ತನ್ನ ಪತ್ರಿಕೆಯಲ್ಲಿ, ಪೇತ್ರನು ರೋಮಪುರದಲ್ಲಿ ಒಮ್ಮೆ ಇದ್ದು ಕ್ರಿಸ್ತನ ನಾಮವನ್ನು ಸಾರಿದನೆಂತ, ಕಿಂಚಿತ್ತೂ ಸೂಚಿಸದಿರುವದಲ್ಲದೆ ಪೇತ್ರನ ಹೆಸರನ್ನಾದರೂ ತೆಗೆದಿಲ್ಲ; ಪೇತ್ರನು ಅಂದು ಅಲ್ಲಿಯ ಸಭೆಯ ಪಿತೃವು ಅಂದರೆ ಸ್ಥಾಪಕನು ಎನ್ನಿಸಿ ಕೊಂಡಿದ್ದರೆ ಅದರಿಂದ ಇವನಿಗೆ ಉಪೇಕ್ಷೆ ಎಂಬ ಅನ್ಯಾಯ ಗೈದಂತಾಗುತ್ತಿತ್ತು. ಪುನಃ, ಪೇತ್ರನು ಆ ಸಭೆಯ ಪಿತೃ

1) Irenaeus III, 5, 3. 2) The same is stated by Euseb. III, 2; 4, and by Rufini praef. in recognit. Clem. 3) ರೋಮಿಾ. 1, 13—15; 15, 23. 4) ಪಂಚಾಶತ್ತಮದಿನಹಬ್ಬ ಪೇತ್ರನಿಂದಾದ ಮಧ್ಯಸ್ಥಿಕೆಯು ಆ ಪುರದಲ್ಲಿ ಸಭೆಯು ಅಸ್ತಿವಾರ ಹಾಕಿದಂತೆ ಆಗಲಿಲ್ಲ; ಅದು ಮುಂಬೆಳಗು ಮೂಡಿದಂತಾಯಿತಷ್ಟೇ. 5) ರೋಮಿಾ. 15, 20—21; 38ನೇ, 46ನೇ ಪಾನು; 2ನೇ ಕೊರಿ. 10, 15. 16.

ವಾಗಿದ್ದರೆ ಪೌಲನು, ಪೇತ್ರನ ಕಡೆಯದೊಂದು ಅಪ್ಪಣೆ ಹೊಂದದೆ ಇದನ್ನು ತನ್ನ ಪತ್ರಿಕೆಯಲ್ಲಿ ಪ್ರತ್ಯೇಕವಾಗಿ ಹೇಳದೆ, ಆ ಸಭೆಯ ಅನೇಕ ಒಳಕಾರ್ಯಗಳಲ್ಲಿ ತನ್ನ ಕೈ ಹಾಕುತ್ತಿದ್ದಿಲ್ಲ; ಅದು ದೊಡ್ಡ ಪೇತ್ರ ಅಪೊಸ್ತಲನಿಗೆ ಮಾನಗೇಡಾಗಿರುತ್ತಿತ್ತಲ್ಲವೋ? ಇನ್ನು, ಪೌಲನು ತನ್ನ ಪತ್ರಿಕೆ ಬರೆಯದ್ದಕ್ಕಿಂತ ಮುಂಚೆ, ರೋಮಕ್ಕೆ ಹೋಗಿ ಪ್ರಸಂಗಿಸ್ಯೇನೆಂತ, ಬಹು ಆಶೆ ಪಡುತ್ತಿದ್ದ ಆ ಅನೇಕ ವರುಷಗಳಲ್ಲಿ ಪೇತ್ರನು ಅಲ್ಲಿ ಇಲ್ಲದಿದ್ದದ್ದು ಸಹಜವಾಗಿ ತಿಳಿಯುತ್ತದೆ; ಪೇತ್ರನು ಅಲ್ಲಿಯ ಸುವಾರ್ತಾಪ್ರಸಂಗಕ್ಕೆ ಈಡಾಗಲಿಲ್ಲ ಎಂಬಂತೆ ನಮ್ರನಾದ ಪೌಲನು ನಂಬುತ್ತಿದ್ದದುಂಟೇ? ಮತ್ತು, ಕ್ರಿಸ್ತಶಕದ 57ನೇ ವರುಷ ಪೌಲನು ತನ್ನ ಪತ್ರಿಕೆ ಲೇಖಿಸುವ ಸಮಯದಲ್ಲಿ ಸಹ ಪೇತ್ರನು ಅಲ್ಲಿ ಇರಲಿಲ್ಲ; ಎಂತೆಂದರೆ, ಪೇತ್ರನು ಅಲ್ಲಿ ಇದ್ದರೆ ಪೌಲನು ಆ ಸಭೆಯ ಸ್ಥಿತಿಗತಿಯನ್ನು ತಿದ್ದಲಿಕ್ಕೆ ಬರೆದ ಪತ್ರಿಕೆಯು ಅನವಶ್ಯವೂ ಅಯೋಗ್ಯವೂ ಆಗುತ್ತಿತ್ತು; ಅದು ಹೊರ್ತಾಗಿ, ಪೇತ್ರನು ಆಗ ಅಲ್ಲಿ ಇದ್ದರೆ ಪೌಲನು ತನ್ನ ಪತ್ರಿಕೆಯಲ್ಲಿ ಅನೇಕ ಸಾಧಾರಣ ಸ್ಥಿತಿಯ ಕ್ರೈಸ್ತರಿಗೆ ವಂದಿಸಿರುವಲ್ಲಿ ಹ್ಯಾಗೂ ಪೇತ್ರನಿಗೆ ಸಹ ವಂದಿಸುತ್ತಿದ್ದನು[1]. ಹೀಗಿರಲಿಕ್ಕಾಗಿ—ಪೇತ್ರನು ಪೌಲನ ಪತ್ರಿಕೆಗೆ ಮುಂದಾಗಿ ರೋಮಪುರಕ್ಕೆ ಹೋಗಿ ಅಲ್ಲಿಯ ಸಭೆ ಸ್ಥಾಪಿಸಿದವನಲ್ಲದಿದ್ದು, ಕ್ರಿಸ್ತಶಕದ 57ನೇ ವರುಷದಲ್ಲಿ ಪೌಲನು ತನ್ನ ಪತ್ರಿಕೆ ಬರೆಯುವಾಗಲೂ ಅಲ್ಲಿ ಇರಲಿಲ್ಲವೆಂತ, ಪರಿಶುದ್ಧಬರಹಸಿದ್ಧಾಂತವು. ಪೌಲನು ತನ್ನ ಪತ್ರಿಕೆ ಬರೆದು ಕಳುಹಿಸಿ, 4 ವರುಷ ಹೋದನಂತರ ಅಂದರೆ ಕ್ರಿಸ್ತಶಕದ 61ನೇದರಲ್ಲಿ (ನಾವು ಇನ್ನು ಮುಂದೆ ಓದುವಂತೆ) ತಾನು ರೋಮಪುರಕ್ಕೆ ಹೋಗಿ, ಅಲ್ಲಿ 2 ವರುಷ ಕಾಲಕ್ಷೇಪ ಮಾಡುವಂದು ಸಹ ಪೇತ್ರನು ಅಲ್ಲಿ ಇರಲಿಲ್ಲ; ಇದು ಅಪೊಸ್ತಲಕ್ರಿಯಾಗ್ರಂಥದ ಕಡೆಯ ಸಂಧಿಯ ಮೇಲೆ ಮಾತ್ರ ಅಲ್ಲದೆ ಪೌಲನು ಅಲ್ಲಿ (ನಾವು ಇನ್ನು ಮುಂದೆ ಸಹ ಓದುವಂತೆ) ಆಗ ಬರೆದ 4 ಪತ್ರಿಕೆಗಳ ಮೇಲೆಯೂ ಪ್ರಕಟವಾಗುತ್ತದೆ; ಹ್ಯಾಗಂದರೆ ಅವನು ತನ್ನ ಬಳಿಕೆಯವರಾದ ಅನೇಕ ಕ್ರೈಸ್ತ ಸಹೋದರರ ಹೆಸರನ್ನು ಆ ಪತ್ರಿಕೆಗಳಲ್ಲಿ[2] ಹೇಳುವೆಡೆ ಪೇತ್ರ ಅಪೊಸ್ತಲನ ಹೆಸರು ಇರುವದಿಲ್ಲ. ಪೇತ್ರನು ಕ್ರಿಸ್ತಶಕದ 57ನೇ ವರುಷಕ್ಕೂ 61ನೇದಕ್ಕೂ ಮಧ್ಯದಲ್ಲಿ ರೋಮಕ್ಕೆ ಹೋದನೇನೋ? ಎಂತ, ಗೊತ್ತಿಲ್ಲ; ಆದರೆ ಈ ವಿಷಯಕ್ಕೆ ಕ್ರಿಸ್ತಶಕದ 185ನೇ ವರುಷದಲ್ಲಿ ಜನಿಸಿ 254ನೇದರಲ್ಲಿ ಸತ್ತ ಆ ಒರೀಗೆನನೆಂಬ ಪ್ರಖ್ಯಾತ ಸಭಾಪಿತೃವಿನ ಒಂದು ಮಾತನ್ನು ಈಗ ಹಚ್ಚ ತಕ್ಕದ್ದು, ಅದೇನಂದರೆ—ಪೇತ್ರನು ಕಡೆಯಲ್ಲಿಯೇ (ಅಂದರೆ ತನ್ನ ವೃತ್ತಿಯ ಅಂತ್ಯದಲ್ಲಿಯೇ ಕ್ರಿಸ್ತಶಕದ 67ನೇ ವರುಷದಲ್ಲಿ ಅಥವಾ 68ನೇದರಲ್ಲಿ)

---

1) ರೋಮಾ. 16. 2) ಅಂದರೆ ಕೊಲೊಸ್ಸೆಯರ, ಫಿಲೇಮೋನನ, ಎಫೆಸಿಯರ, ಫಿಲಿಪ್ಪಿಯರ ಪತ್ರಿಕೆಗಳಲ್ಲಿ.

ರೋಮಪುರದಲ್ಲಿ ಇದ್ದನು[1].—ಆ ಕಾಲದಲ್ಲಿ ಪೇತ್ರನು ಅಲ್ಲಿ ಸಹ ಹಲವು ದಿವಸ ಆಶೀರ್ವಾದದೊಂದಿಗೆ ಬೋಧಿಸಿ, ಅಲ್ಲಿಯೇ ಬಂದೊದಗಿರುವ ಪೌಲನ ಸಂಗಡ ಅಲ್ಲಿಯ ಸಭೆಯ ಪ್ರವರ್ಧಕನಾದ ಕಾರಣ ಸಭೋತ್ಪಾದಕನೆಂಬಂಥವನಾಗಿ ತೋರಿ, ಅವನ ಸಂಗಡ ರಕ್ತಸಾಕ್ಷಿಮರಣ ಪಟ್ಟನು.—ಆ ಬಳಿಕ ಪೌಲನ ಮತ್ತು ಪೇತ್ರನ ರಕ್ತಸಾಕ್ಷಿಮರಣದ ಇತ್ತ, ಲಿನನೆಂಬವನನ್ನು ಅಲ್ಲಿಯ ಸಭೆಯ ಅಧ್ಯಕ್ಷತೆಗೆ ಪ್ರಥಮನನ್ನಾಗಿಯೇ ಆರಿಸಿ ಇಟ್ಟರೆಂಮು, ಯುಸೆಬಿಯನು ತನ್ನ ಸಭಾಚರಿತ್ರದಲ್ಲಿ ಹೇಳಿದ್ದಾನೆ[2]. ಇಷ್ಟೆಲ್ಲಾ ಆದ ಮೇಲೆ ನಿರ್ಣಯಿಸ ತಕ್ಕದ್ದೇನಂದರೆ—ಪೇತ್ರನು ಗಮಿಸಿ, ರೋಮದ ಸಭೆಗೆ ಪಾಯ ಹಾಕಿ, ಅದರ ಏಕ ಪ್ರಥಮ ಅಧ್ಯಕ್ಷನಾಗಿದ್ದನೆಂದು, ಆ ರೋಮಿಾಯ ಸಭೆಯು ಉತ್ಪನ್ನವಾದ್ದಕ್ಕೆ ಸುಮಾರು 300 ವರುಷ ಈಚೆ ಹುಟ್ಟಿದ ಆ ಸಭಾಪಿತೃಗಳ ಆಲೋಚನೆಯು ಬರೇ ತಪ್ಪೇ. ಈ ವಿಧದ ತೀರ್ಪು ಒಂದು ಪ್ರಕಾರವಾಗಿ ಇನ್ನು ಬಲ ಪಡುವದು ಹ್ಯಾಗಂದರೆ—ಪೇತ್ರನು ಸ್ವಂತ ಕೈಯಿಂದ 2 ಪತ್ರಿಕೆ ಬರೆದನಲ್ಲ? ಇವುಗಳಲ್ಲಿ ಅವನು ತನಗೆ, ಸಭೆಯ ಎಪಿಸ್ಕೊಪನು ಅಂದರೆ ಒಂದು ಸಭೆಯಲ್ಲಿದ್ದು ಕೊಂಡು ಅದನ್ನು ನೋಡುವವನೆಂಬ ಅಧ್ಯಕ್ಷನು ಎಂದಲ್ಲ, ಯೇಸು ಕ್ರಿಸ್ತನ ಅಪೊಸ್ತಲನೂ ಸೇವಕನೂ ಎಂದೇ, ಹೆಸರು ಇಟ್ಟು ಕೊಂಡಿದ್ದಾನೆ[3]; ಆದರೆ ಅಪೊಸ್ತಲನೆಂಬ ಶಬ್ದವು ಒಂದು ಸಭೆಯಲ್ಲಿ ಕೂತು ಅದನ್ನು ನೋಡುವವನು ಎಂಬ ಅರ್ಥದ್ದಲ್ಲ, ಸಮಸ್ತ ಲೋಕಕ್ಕೆ (ಯೇಸು ಕ್ರಿಸ್ತನಿಂದ) ಕಳುಹಿಸಿ ಕೊಂಡು ಹೋಗುವವನು ಎಂಬ ಅರ್ಥದ್ದೇ[4].—

ಪೌಲನು ಕೊರಿಂಥ ಪಟ್ಟಣದಲ್ಲಿ 3 ತಿಂಗಳು ಕಳೆದು[5], ಅಷ್ಟರೊಳಗೆ ಆ ರೋಮಿಾಯ ಸಭೆಗೆ ಆ ಪತ್ರಿಕೆಯನ್ನು ಬರೆದು ಕಳುಹಿಸಿದ ತರುವಾಯ ಕ್ರಿಸ್ತಶಕದ 58ನೇ ವರ್ಷದಲ್ಲಿ ಮಕೆದೊನಿಯ ಶೀಮೆ ದಾಟಿ, ಸಣ್ಣ ಅಸಿಯಕ್ಕೆ ಹಿಂದಿರುಗಿ, ತನ್ನ ಹೃತ್ಪರಿಣಾಮಕ್ಕೆ ಈಚೆ 5ನೇ ಸಾರಿ ಯೆರೂಸಲೇಮಿಗೆ ಹೋದನು[6]. ಹೀಗೆ ಪೌಲನ 3ನೇ ಪ್ರಸಂಗಪ್ರಯಾಣವು ಅಂತ್ಯಕ್ಕೆ ಬಂತು. ಅವನು ತನ್ನ 3 ದೊಡ ಪ್ರಸಂಗಪಯಣಗಳಲ್ಲಿ ಯೆಹೂದ್ಯರಿಂದಲೂ ಪರ ಜನರಿಂದಲೂ ಅನೇಕಾನೇಕ ಹಿಂಸೆ ತಾಳುತ್ತಾ ಬಂದಿದ್ದನು; ಆದರೆ ಯೇಸುನಾಥನು ಅವನನ್ನು ಕಾಪಾಡಿ, ಅವನ ಸುವಾರ್ತಾಪ್ರಸಂಗಕ್ಕೆ ಎಲ್ಲಿಯೂ ಜಯ ಕೊಟ್ಟಿದ್ದನು; ಇಂಥಾ ಜಯಕ್ಕೋಸ್ಕರ ಕರ್ತನು, ತನ್ನ ಇತರ ಅಪೊಸ್ತಲರಿಗೆ ದಯೆ ಮಾಡಿದ ಹಾಗೆ, ರೋಗಿಗಳನ್ನು ಗು

1) Euseb. h. e. III, 1. 2) Euseb. h. e. III, 2; the same stated by Irenaeus (III, 5, 3.) 3) 1 ಪೇತ್ರ 1, 1; 2 ಪೇತ್ರ. 1, 1. 4) ಮತ್ತಾ. 10, 1—16; ಮರ್ಕ. 3, 14; 6, 7; ಮತ್ತಾ. 28, 19. 5) ಅಪೊ. ಕ್ರಿ. 20, 2. 6) ಅಪೊ. ಕ್ರಿ. 20, 3—21, 1—15; 43ನೇ ಪಾನು.

ಣ ಹೊಂದಿಸಲಿಕ್ಕೂ ದೆವ್ವಗಳನ್ನು ಹೊರಡಿಸಲಿಕ್ಕೂ ಸತ್ತವರನ್ನು ಎಬ್ಬಿಸಲಿಕ್ಕೂ ಅವನಿಗೆ ಸಹ ಅದ್ಭುತಶಕ್ತಿಯನ್ನು ದಯೆ ಮಾಡಿದ್ದನು[1].

ಪೌಲನು ಅಂದು ಯೆರೂಸಲೇಮಿನಲ್ಲಿರುವಾಗ ಸಣ್ಣ ಅಸಿಯದಿಂದ ಬಂದ ಯೆಹೂದ್ಯರು ಅವನ ಸುವಾರ್ತಾಪ್ರಸಂಗದ ದೆಸೆಯಿಂದ ಅವನಿಗೆ ಶಿಟ್ಟು ಪಡುವವರಾಗಿದ್ದು, ಅವನಿಗೆ ವಿರೋಧವಾಗಿ ಯೆಹೂದ್ಯ ಪ್ರಜೆಯಲ್ಲಿ ಗುಬಾರು ಎಬ್ಬಿಸಲಾಗಿ, ಅದು ಅವನನ್ನು ಕೊಲ್ಲಲಿಕ್ಕೆ ಕೈ ಹಚ್ಚುತ್ತಲೇ ರೋಮಿಾಯ ದಂಡುಠಾಣ್ಯದ ಮುಖ್ಯಸ್ಥನು ಅವನನ್ನು ಅದರ ಕೈಯಿಂದ ಕಸು ಕೊಂಡು, ಸ್ವಲ್ಪ ಸಂಶಯದ ಮನುಷ್ಯನೆಂತ, ಅವನಿಗೆ ಹೊಡೆಯಲಿಕ್ಕೆ ಹೇಳಿದಾಗ ಪೌಲನು—ಅದು ನ್ಯಾಯವಲ್ಲ, ಹ್ಯಾಗಂದರೆ ತಾನು ಜನ್ಮದ ಮೇಲೆಯೇ ರೋಮಿಾಯ ಪಟ್ಣವಾಸಿತನದವನು ಎಂತ, ನುಡಿದನು[2]. ತತ್‌ಕ್ಷಣವೇ ಆ ಮುಖ್ಯಸ್ಥನು ಹ್ಯಾಗಾದರೂ ಹೊಡೆಯುವದು ಬಿಟ್ಟು, ಅವನನ್ನು ಮನ್ನಿಸ ಬೇಕಾಯಿತು; ಎಂತೆಂದರೆ, ಬಹು ಪ್ರಾಚೀನ ರೋಮಿಾಯರಾಜನೀತಿಪ್ರಮಾಣದಲ್ಲಿ ಕಟ್ಟಳೆ ಇರುವದೇನಂದರೆ—ಒಬ್ಬ ರೋಮಿಾಯ ಪಟ್ಣವಾಸಿಗೆ ಹೊಡೆಯ ಬಾರದು; ಈ ಕಟ್ಟಳೆ ಮಿಾರುವವನ ಆಸ್ತಿಯನ್ನು ಮುಟ್ಟುಗೋಲು ಮಾಡಿ, ಅವನಿಗೆ ಮರಣಾಜ್ಞೆ ಮಾಡಿಸ ತಕ್ಕದು.—ಆದ್ದರಿಂದ ಆ ಮುಖ್ಯಸ್ಥನು ಅವನ ಮೇಲೆ ಕಾವಲಿಟ್ಟು, ಅವನನ್ನು ಕೈಸರೈಯದ ಆ ಫೇಲಿಕ್ಸ ಪ್ರತಿನಿಧಿಯ[3] ಸನ್ನಿಧಾನಕ್ಕೆ ಕಳುಹಿಸಿದನು. ಈ ನೀಚ ಧೊರೆಯು ಲಂಚದ ದಾರಿ ನೋಡಿ ಕೊಂಡು, ತನ್ನ ಉದ್ಯೋಗ ಹೋಗುವ ತನಕ 2 ವರುಷವೇ ಪೌಲನನ್ನು ಶೆರೆಯಲ್ಲಿಟ್ಟು ಬಿಟ್ಟನು. ಆಗ ಕ್ರಿಸ್ತಶಕದ 61ನೇ ವರುಷದಲ್ಲಿ ಅವನ ಉತ್ತರಾಧಿಕಾರಿಯಾದ ಫೆಸ್ತನಿಂದ ಸಹ ತನಗೆ ನ್ಯಾಯವಾಗದಿರಲು, ಪೌಲನು, ರೋಮಿಾಯ ಕೈಸರನಾದ ನೆರೋನನಿಗೆ[4] ದೂರು ಕೊಡುತ್ತೇನೆಂತ, ಹೇಳಿದ್ದಕ್ಕೆ[5] ಅಲ್ಲಿಯ ರೋಮಿಾಯ ಆಲೋಚನಾಸಭ್ಯರು ಒಪ್ಪಿ ಕೊಂಡಿರುವ ಸಮಯ 2ನೇ ಅಗ್ರಿಪ್ಪರಾಯನು[6] ಫೆಸ್ತನಿಗೆ ಪಟ್ಟಾಭಿಷೇಕಕ್ಕೋಸ್ಕರ ವಂದಿಸುವದಕ್ಕೆ ಪಲೇಸ್ತೀನದ ಬಡಗು ಭಾಗದಿಂದ ಬಂದನು. ಈ ಅಗ್ರಿಪ್ಪನು ಸಾಧು ಗುಣದ ಮನುಷ್ಯನೂ ರೋಮಿಾಯ ಅಧಿಕಾರಸ್ಥರ ಒಳ್ಳೇ ನಂಬಿಗಸ್ತನೂ; ಅವನು ತನ್ನ ಆಳ್ತನದಲ್ಲಿ ಎಂದಾದರೂ ರಾಜನೀತಿಸಂಬಂಧವಾದ ಅನ್ಯಾಯ ಗೈಯಲಿಲ್ಲ; ಹೀಗಿರಲಾಗಿ ಅವನು ಕ್ರಿಸ್ತಶಕದ 53ನೇ ವರುಷದಿಂದ 104ನೇದರ ವರೆಗೆ ಸಮಾಧಾನದೊಡನೆ ರಾಜ್ಯವಾಳುತ್ತಿದ್ದನು; ಅವನು ತನ್ನ ಸಹೋದರಿಯಾದ ಬೆರೆನೀಕೆ ಎಂಬವಳ ಸಂಗ

1) ಅಪೊ. ಕ್ರಿ. 19, 11—16; 20, 9—12. 2) ಅಪೊ. ಕ್ರಿ. 22, 25—29; 23, 27; 26, 32. 3) 37ನೇ, 41ನೇ, 42ನೇ, 44ನೇ ಪಾನುಗಳು. 4) 43ನೇ ಪಾನು. 5) ಅಪೊ. ಕ್ರಿ. 25, 11. 6) 37ನೇ ಪಾನು ನೋಡು.

ಡ ಅಗಮ್ಯಗಮನ ನಡಿಸುತ್ತಿದ್ದದ್ದು ಮಾತ್ರ ಅವನದೊಂದು ಮಹಾ ಪಾತಕವು. ಅವನು ಕ್ರಿಸ್ತಶಕದ ಆ 61ನೇ ವರುಷದಲ್ಲಿ ಕೈಸರ್ೈಯಕ್ಕೆ ಬಂದಿರಲಾಗಿ, ಪೌಲನು ಅವನಿಗೂ ಅವನ ಸಹೋದರಿಗೂ ಹೃದಯ ತಿವಿಯುವಂಥ ಒಂದು ಪ್ರಸಂಗ ಮಾಡ ಲನುವಾಯಿತು[1]. ಇನ್ನು ಅದೇ ವರುಷದಲ್ಲಿ ಪೌಲನನ್ನು ಹಡಗು ಹತ್ತಿಸಿ, ರೋ ಮಪುರಕ್ಕೆ ಕಳುಹಿಸಿದರು[2]; ಅಲ್ಲಿ ಅವನನ್ನು ನೆರೋನ ಕೈಸರನ ಮೈಗಾವಲಿಯ ವರಲ್ಲಿಯ ಮುಖ್ಯನ ಕೈಗೆ ಒಪ್ಪಿಸಿ, ಒಂದು ಬಾಡಿಗೆಮನೆ ಮಾಡಿ ಕೊಂಡು ಇರ ಲಿಕ್ಕೆ ಅಪ್ಪಣೆ ಕೊಟ್ಟರು. ತರುವಾಯ ಅವನ ಭೇಟಿಗೆ ಅನೇಕರು ಬರುತ್ತಾ ಹೋ ಗುತ್ತಾ ಇರಲು, ಸುವಾರ್ತಾಪ್ರಸಂಗಕ್ಕೆ ಬಹಳ ಅನುಕೂಲತೆ ಆಯಿತು. ಇಂತಿ ರಲಾಗಿ, ರೋಮಪುರದಲ್ಲಿಯೂ ಸುವಾರ್ತೆ ಸಾರ ಬೇಕೆಂದು, ಅವನು ಬಹಳ ವ ರುಷ ಪ್ರತೀಕ್ಷಿಸುತ್ತಿದ್ದದ್ದೂ[3] ಕ್ರಿಸ್ತನು ತಾನು ಅವನಿಗೆ ವಾಗ್ದತ್ತ ಮಾಡಿದ್ದದ್ದೂ[4] ಅಂದು ಚಮತ್ಕಾರದಿಂದ ಸತ್ಯವಾಗಿತ್ತು.

ಪೌಲನು ಅಂದು 2 ವರುಷ ಅಂದರೆ ಕ್ರಿಸ್ತಶಕದ 61ನೇದರ ಕಡೆಯಿಂದ 63ನೇ ದರ ಮೊದಲಿನ ವರೆಗೆ ರೋಮಪುರದಲ್ಲಿ ಇರುವಷ್ಟರೊಳಗೆ[5] 4 ಪತ್ರಿಕೆಗಳನ್ನು ಬ ರೆದು, ಒಂದನ್ನು ಸಣ್ಣ ಅಸಿಯದ ಫ್ರುಗಿಯ ಶೀಮೆಯ ಕೊಲೊಸ್ಸೆ ಪಟ್ಟದಲ್ಲಿ ಎಪ ಫ್ರನೆಂಬ ಕ್ರೈಸ್ತನ ಮುಖಾಂತರದಿಂದ ಆದ ಸಭೆಗೂ[6] ಮತ್ತೊಂದನ್ನು ಅದೇ ಪಟ್ಣ ದಲ್ಲಿ ಇರುವ ಫಿಲೇಮೋನನೆಂಬ ಕ್ರೈಸ್ತನಿಗೂ ಇನ್ನೊಂದನ್ನು ತಾನು ಸಣ್ಣ ಅಸಿಯ ದ ಯವನ ಶೀಮೆಯ ಎಫೆಸ ಪಟ್ಣದಲ್ಲಿ ಸ್ಥಾಪಿಸಿದ ಸಭೆಗೂ ಬೇರೊಂದನ್ನು ತಾ ನು ಮಕೆದೊನಿಯದ ಫಿಲಿಪ್ಪಿ ಪಟ್ಣದಲ್ಲಿ ಸ್ಥಾಪಿಸಿದ ಸಭೆಗೂ ಕಳುಹಿಸಿದನು.—ಅ ವನು ರೋಮಪುರದೊಳಗೆ ಒಬ್ಬಿಬ್ಬರು ಸರ್ತಿಗೆ ಬದಲಾಗುವ ದಂಡುಗಾರರ ಕಾ ವಲಿಯಲ್ಲಿ ಇರುತ್ತಿರಲಿಕ್ಕೆ, ಸುವಾರ್ತೆಯು ಕೈಸರನ ಮೈಗಾವಲಿಯವರ ಸಮಸ್ತ ಠಾಣ್ಯದಲ್ಲಿ ಅಡಿಗಡಿಗೆ ಗೊತ್ತಾಯಿತು[7]; ಅದಲ್ಲದೆ ಪೌಲನಿಂದ ಧೈರ್ಯ ಗೊಳ್ಳುತ್ತಿ ರುವ ಕ್ರೈಸ್ತರು ರೋಮದೊಳಗೆ ಎಲ್ಲೆಲ್ಲಿಯೂ ಕ್ರಿಸ್ತನ ನಾಮವನ್ನು ಆಸಕ್ತಿಯಿಂ ದ ಸಾರುತ್ತಾ ಬಂದರು[8].

ಕ್ರಿಸ್ತಶಕದ 63ನೇ ವರುಷದಲ್ಲಿ ಪೌಲನು, ತಾನು ದಾರಿ ನೋಡಿದಂತೆ[9], ಬಿಡು ಗಡೆಯವನಾಗಿ, ಇನ್ನು ಈತಲಿಯ ದೇಶದಲ್ಲಿರುವಾಗ[10] ಎಬ್ರೇಯ ಅಂದರೆ ಯೆ ಹೂದ್ಯ ಕ್ರೈಸ್ತರಿಗೆ ಒಂದು ಕಾಗದ ಬರೆದು ತಲಪಿಸಿ, ಕ್ರೇತದ್ವೀಪಕ್ಕೆ ಹೋಗಿ, ಇತ್ತ

1) ಅಪೊ. ಕ್ರಿ. 25, 13—26, 1—30. 2) ಅಪೊ. ಕ್ರಿ. 27; 28, 1—15. 3) ರೋ ಮಾ. 1, 13—15; 15, 23; 52ನೇ ಪಾನು. 4) ಅಪೊ. ಕ್ರಿ. 23, 11. 5) ಅಪೊ. ಕ್ರಿ. 28, 30. 6) ಕೊಲೊ. 1, 7; 4, 12. 7) ಫಿಲಿ. 1, 13; 4, 22. 8) ಫಿಲಿ. 1, 14. 9) ಫಿಲಿ. 1, 25—26. 10) ಎಬ್ರೇ. 13, 24.

ಕಡೆ, ಸಣ್ಣ ಅಸಿಯದ ಎಫೆಸ ಪಟ್ಣ ದಾಟುವಾಗ, ತಾನು ಇದೇ ಪಯಣದಲ್ಲಿ ಕ್ರೇತ ದ್ವೀಪದ ಸಭೆಯ ಮೇಲೆ ಇಟ್ಟಿದ್ದ ತಿತನೆಂಬ ತನ್ನ ಶಿಷ್ಯನಿಗೆ[1] ತನ್ನದೊಂದು ಕಾಗದ ಮುಟ್ಟಿಸಿ, ಮಕೆದೊನಿಯದ ಕ್ರೈಸ್ತರಿಗೆ ಭೇಟಿ ಕೊಡಲಿಕ್ಕೆ ಹೋಗುವ ಮಾರ್ಗದಲ್ಲಿ ತಾನು ಇದೇ ಪಯಣದಲ್ಲಿ ಎಫೆಸ ಪಟ್ಣದ ಸಭೆಯ ಮೇಲೆ ಇರಿಸಿದ್ದ ತೀಮೊಥೆಯನೆಂಬವನಿಗೆ[2] ತನ್ನದೊಂದು ಕಾಗದ ತಲಿಪಿಸಿ, ಮಕೆದೊನಿಯದ ಪಶ್ಚಿಮ ಸಮುದ್ರ ತೀರದ ಒಂದು ಬಂದರಸ್ಥಳವಾದ ನೀಕೊಪೊಲಿ ಎಂಬಲ್ಲಿಂದ, ತಾನು ಬಯಸುತ್ತಿದ್ದಂತೆ[3], ಹೆಚ್ಚು ಪಶ್ಚಿಮಕ್ಕೆ ಹಿಸ್ಪಾನಿಯ ದೇಶಕ್ಕೂ ಗಮಿಸಿ, ಸುವಾರ್ತೆ ಪ್ರಸಂಗಿಸಿದನು; ಅದೇ ಪಯಣದಲ್ಲಿ ಬ್ರಿತನ್ನಿಯ ದೇಶಕ್ಕೆ ಸಹ ಹೋದನಂತೆ.

ತನ್ಮಧ್ಯ ನೆರೋನ ಕೈಸರನು[4] 10 ವರುಷ ಆಳಿದನಂತರ ಕ್ರಿಸ್ತಶಕದ 64ನೇದರಲ್ಲಿ ರೋಮಪುರದೊಳಗೆ ಕ್ರೈಸ್ತರನ್ನು (ಇನ್ನು ಮುಂದೆ ಓದುವಂತೆ) ಕಠೋರ ರೀತಿಯಿಂದ ಹಿಂಸಿಸಲಿಕ್ಕೆ ಹತ್ತಿ, ತಾನು ಕ್ರಿಸ್ತಶಕದ 68ನೇದರಲ್ಲಿ ಸಾಯುವ ತನಕ ಅದನ್ನು ಬಿಡಲೇ ಇಲ್ಲ. ಪೌಲ ಅಪೊಸ್ತಲನು ಸುಮಾರು 3 ವರುಷ ತನ್ನ ಕಡೆಯ ಪಯಣದಲ್ಲಿ ಇದ್ದ ಮೇಲೆ ಅವನನ್ನು ತಿರಿಗಿ ಶೆರೆ ಹಿಡಿದು, ಸುಮಾರು ಕ್ರಿಸ್ತಶಕದ 66ನೇದರಲ್ಲಿ ರೋಮಕ್ಕೆ ಒಯಿದು, ವಿಚಾರಿಸಿದರು. ಮೊದಲಿನ ವಿಚಾರಣದ ಮೇಲೆ ಅವನನ್ನು ಇನ್ನು ಜೀವದಿಂದಿರ ಗೊಟ್ಟರು; ಆದರೆ ಅವನು, ತಾನು ಬೇಗ ರಕ್ತಸಾಕ್ಷಿಮರಣ ತಾಳುತ್ತೇನೆಂತ, ಸಂಶಯ ಪಡಲಿಲ್ಲ[5]. ಕ್ರೈಸ್ತನಾಗಿರುತ್ತೇನೆಂಬ ಬರೇ ಅರಿಕೆಯಿಂದಲೇ ಆಗ ಮರಣ ಒದಗುತ್ತಿರುವ ಕಾರಣ ಲೂಕ ಮತ್ತು ಒನೇಸಿಫೊರ ಎಂಬ ಪೌಲನ ಈ ಇಬ್ಬರು ಶಿಷ್ಯರಲ್ಲದೆ ಇನ್ನ್ಯಾರೂ ಅವನ ಉಪಶಮನಕ್ಕೋಸ್ಕರ ಅವನ ಶೆರೆಮನೆಗೆ ಬರಲಿಕ್ಕೆ ಧೈರ್ಯ ಗೊಳ್ಳಲಿಲ್ಲ[6]. ಆ ಲೂಕನು ವೈದ್ಯನು; ಅವನು ಪೌಲನ ನಂಬಿಗಸ್ತ ಜೊತೆಗಾರನಾಗಿ 14 ವರುಷ ಹೋಗಿದ್ದವು[7]; ಲೂಕನ ಸುವಾರ್ತೆ ಮತ್ತು ಅಪೊಸ್ತಲರ ಕ್ರಿಯೆಗಳು ಎಂಬ 2 ಗ್ರಂಥಗಳನ್ನು ಬರೆದವನು ಇವನೇ. ಆಗಿನ ತನ್ನ ಬಂಧನಾವಸ್ಥೆಯಲ್ಲಿ ಪೌಲನು ತೀಮೊಥೆಯನೆಂಬ ಸಭಾಧ್ಯಕ್ಷನಿಗೆ 2ನೇ ಪತ್ರಿಕೆ ಬರೆದು, ಎಫೆಸ ಪಟ್ಣಕ್ಕೆ ಕಳುಹಿಸಿದನು; ಪರಿಶುದ್ಧ ಬರಹದಲ್ಲಿ ಉಳಿದಿರುವ ಪೌಲನ ಪತ್ರಿಕೆಗಳಲ್ಲಿ ಇದು 14ನೇದೂ ಕಡೇದೂ. ತದನಂತರ ಬಹಳ ಕಾಲ ಹೋಗದ್ದಕಿಂತ ಮುಂಚೆ ಸುಮಾರು ಕ್ರಿಸ್ತಶಕದ 67ನೇ ವರುಷದಿಂದ 68ನೇದರ ಪರ್ಯಂತ ಪೌಲನೂ ಪೆತ್ರನೂ ಇವರಿಬ್ಬರ ಆಪ್ತ ಗೆಳೆಯನಾದಂಥ ಮರ್ಕನೂ ಕೂಡಿ ರೋಮದಲ್ಲಿದ್ದು, ಕ್ರಿಸ್ತನ ಸುವಾರ್ತೆ ಘೋಷಿಸುತ್ತಿದ್ದರು. ಆ ಸಮು

1) ತಿತ. 1, 5; 56ನೇ ಪಾನು. 2) 1ತೀಮೊ. 1, 3; 56ನೇ ಪಾನು ನೋಡು. 3) ರೋಮಾ. 15, 24. 28; 7ನೇ ಪಾನು. 4) 15ನೇ, 43ನೇ, 55ನೇ, 56ನೇ ಪಾನುಗಳು. 5) 2ತೀಮೊ. 4, 16—17. 6) 2ತೀಮೊ. 1, 16; 4, 11. 7) ಅಪೊ. ಕ್ರಿ. 16, 10 ಆದಿ.

ಯದಲ್ಲಿ, ಆ ಯುಸೆಬಿಯನ[1] ಸಭಾಚರಿತ್ರದ ಮೇರೆಗೆ ಇಬ್ಬರು ಪ್ರಖ್ಯಾತರಾದ ಪೂರ್ವಿಕ ಸಭಾಪಿತೃಗಳು ವರ್ತಮಾನ ಹೇಳಿದ್ದಂತೆ, ಆದದ್ದೇನಂದರೆ—ಪೇತ್ರನ ಭಕ್ತಿಯುಳ್ಳ ಸುವಾರ್ತಾಪ್ರಸಂಗ ಕೇಳುವವರು ಅದಕ್ಕೆ ಬಹಳ ಮೆಚ್ಚಿ, ಆ ಮರ್ಕನನ್ನು, ನಿಮ್ಮ ಉಪದೇಶಿಯು ಪ್ರಸಂಗಿಸುತ್ತಿದ್ದದ್ದನ್ನು ದಯೆ ಮಾಡಿ ನಮಗೆ ಬರೆದು ಕೊಡಿರೆಂತ, ಬಹು ತರವಾಗಿ ಬೇಡಿ ಕೊಳ್ಳಲು, ಅವನು ಸಮ್ಮತಿ ಪಟ್ಟು, ಪರಿಶುದ್ಧ ಬರಹದಲ್ಲಿ ಇನ್ನು ಇರುವ ಮರ್ಕನ ಸುವಾರ್ತೆಯೆಂಬ ಗ್ರಂಥವನ್ನು ರಚಿಸಿದನು; ಬಳಿಕ ಪೇತ್ರ ಅಪೊಸ್ತಲನು ಅದು ಕೇಳಿ, ಆ ಗ್ರಂಥವು ಸಭೆಗಳಲ್ಲಿ ಅಧ್ಯಯನವಾಗ ತಕ್ಕದ್ದೆಂತ, ತೀರ್ಪು ಮಾಡಿದನು.—ಕ್ರಿಸ್ತಶಕದ ಸುಮಾರು 68ನೇ ವರುಷದಲ್ಲಿ ಪೌಲನೂ ಪೇತ್ರನೂ ಒಂದೇ ದಿವಸದಲ್ಲಿ ರಕ್ತಸಾಕ್ಷಿಗಳಾಗಿ ತೀರಿದರು.

ಕ್ರಿಸ್ತಶಕದ 96ನೇ ವರುಷದಲ್ಲಿ ಕ್ಲೇಮೆಂತನೆಂಬ ರೋಮಪುರದ 3ನೇ[2] ಸಭಾಧ್ಯಕ್ಷನು ಪೌಲ ಅಪೊಸ್ತಲನನ್ನು ಕುರಿತು ಬರೆದದ್ದೇನಂದರೆ—ಕೆಟ್ಟ ಲೋಕದ ಹಗೆಯಿಂದ ಪೌಲನು ಹೊಡೆಯುವದನ್ನೂ ಕಲ್ಲೆಸೆಯುವದನ್ನೂ 7 ಸಾರಿ ಶೆರೆಮನೆಗೆ ಹಾಕುವದನ್ನೂ ಪಟ್ಟು, ಕಡೆಯಲ್ಲಿ ತನ್ನ ತಾಳ್ಮೆಯ ಫಲವನ್ನು ಹೊಂದಿದನು. ಪೂರ್ವ ಪಶ್ಚಿಮ ದಿಶೆಗಳಲ್ಲಿ ಸುವಾರ್ತೆ ಪ್ರಸಂಗಿಸಿ, ತನ್ನ ವಿಶ್ವಾಸದಿಂದ ಒಳ್ಳೇ ಹೆಸರು ಪಡ ಕೊಂಡನು; ಪಶ್ಚಿಮ ದಿಕ್ಕಿನ ಬಹು ದೂರ ಪ್ರಾಂತ್ಯಕ್ಕೆ (ಹಿಸ್ಪಾನಿಯ ದೇಶಕ್ಕೆ) ಹೋಗಿ, ನೀತಿಪ್ರಸಂಗ ಮಾಡಿ, ಧೊರೆಗಳಿಂದ ಹಿಂಸೆ ತಾಳಿ, ರಕ್ತಸಾಕ್ಷಿಯಾಗಿ ಇಹಲೋಕವ ಬಿಟ್ಟು, ಆನಂದವುಳ್ಳ ಅಮರ್ತ್ಯ ಜೀವದ ಲೋಕತೀರಕ್ಕೆ ಹೋಗಿ ಮುಟ್ಟಿದನು. ನೀತಿಗಾಗಿ ಶ್ರಮ ಪಡುವವರಿಗೆ ಒಂದು ಶ್ರೇಷ್ಠ ಮಾದರಿಯು ಅವನೇ.—

ಪೌಲನ ಮುಖಾಂತರವಾಗಿ ಸುವಾರ್ತೆಯು ಪಲೇಸ್ತೀನದ ಹೊರಗೆ ಪ್ರಸಂಗವಾದದ್ದನ್ನು ಹಿಂದೆ ಸಂಕ್ಷೇಪದಿಂದ ವರ್ಣಿಸಿದ ಮೇಲೆ ಇತರ ಅಪೊಸ್ತಲರು ಪಲೇಸ್ತೀನದ ಹೊರಗೆ ಪ್ರಸಂಗವೃತ್ತಿ ನಡಿಸಿದ್ದನ್ನು ಸಹ, ತಿಳಿಯುವ ಮಟ್ಟಿಗೆ, ವಿವರಿಸ ತಕ್ಕದ್ದು.

ಕ್ರಿಸ್ತಶಕದ 190ನೇ ವರ್ಷದ ಒಂದು ಸುದ್ದಿಯ ಪ್ರಕಾರ[3] ಅಪೊಸ್ತಲ ಫಿಲಿಪ್ಪನು ಸಣ್ಣ ಅಸಿಯದ ಫ್ರುಗಿಯ ಶೀಮೆಯ ಹಿಯೆರೊಪೊಲಿ ಎಂಬ ಪಟ್ಣದಲ್ಲಿ ತನ್ನ ಜೀವಿತದ ಕಡೆಯ ವರುಷಗಳಲ್ಲಿ ಇದ್ದು, ಸುವಾರ್ತೆ ಪ್ರಸಂಗಿಸಿದನು.

ಸುಮಾರು ಕ್ರಿಸ್ತಶಕದ 69ನೇ ವರುಷದಲ್ಲಿ ಯೋಹಾನ ಅಪೊಸ್ತಲನು ಪಲೇಸ್ತೀನದಿಂದ ಸಣ್ಣ ಅಸಿಯಕ್ಕೆ ಹೋಗಿ, ಪೌಲನು ಅಲ್ಲಿ ಊರಿದ ಸಭೆಗಳನ್ನು ತನ್ನ ಜೀವಾಂತದ ವರೆಗೆ ಸಾಕುತ್ತಾ ಬಂದನು.

---

1) 36ನೇ ಆದಿ ಪಾನು. 2) 54ನೇ ಪಾನು ಸರಿ ನೋಡು. 3) Polycrates (Theodoret).

ಥೋಮ ಅಪೊಸ್ತಲನು ಪಶ್ಚಿಮೋತ್ತರದಲ್ಲಿ ಹಿಂದು ದೇಶಕ್ಕೆ ಹೊಂದಿರುವ ಮೂಲ ಪಾರ್ಥಿಯ ಎಂಬ ಆ ಪಾರದರ ದೇಶದಲ್ಲಿ[1] ಕ್ರಿಸ್ತನ ಹೆಸರು ಸಾರಿದನು; ಅವನು ಹಿಂದು ದೇಶಕ್ಕೆ ಸಹ ಬಂದ ಹಾಗೆ ತೋಚುತ್ತದೆ.

ಕ್ರಿಸ್ತಶಕದ 230ನೇ ವರುಷದ ಒಂದು ಸುದ್ದಿಗನುಗುಣವಾಗಿ[2] ಅಂದ್ರೆಯ ಅಪೊಸ್ತಲನು ಪಾರ್ಥಿಯಕ್ಕೂ ಬಾಕ್ತ್ರಿಯವೆಂಬ ಬಾಹ್ಲಿದೇಶಕ್ಕೂ ಉತ್ತರದಲ್ಲಿರುವ ಸ್ಕುಥಿಯವೆಂಬ ಶಕರ ದೇಶದಲ್ಲಿ ಪ್ರಸಂಗ ನಡಿಸಿದನು.

ಬರ್ಥೊಲೊಮಾಯ ಅಪೊಸ್ತಲನು ಹಿಂದು ದೇಶದಲ್ಲಿ ಪ್ರಸಂಗಿಸಿದಂತೆ ಕಾಣುತ್ತದೆ.—

ಸುವಾರ್ತಾಗ್ರಂಥಕರ್ತನಾದ ಮರ್ಕನು ಐಗುಪ್ತದ ಅಲೆಕ್ಸಂದರೀಯ ಪಟ್ಣದಲ್ಲಿ ಒಂದು ಸಭೆ ಸ್ಥಾಪಿಸಿದನು[3].

## 4. ಯೆರೂಸಲೇಮು ಪಟ್ಣವು ನಾಶನವಾದದ್ದು.

ಕ್ರಿಸ್ತಶಕದ 27ನೇ ವರುಷದಲ್ಲಿ ಯೆಹೂದ್ಯ ಶೀಮೆಯ ಮೇಲೆ ರೋಮಾಯ ಪ್ರತಿನಿಧಿಯಾದ ಆ ಪೊಂತಿಯ ಪೀಲಾತನು[4] ತನ್ನ ಅತಿರೇಕ ಅನ್ಯಾಯವುಳ್ಳ ಕಾರಭಾರಿಗೋಸ್ಕರ ಯೆಹೂದ್ಯರ ದೂರಿಗೆ ಅಂಜಿ, ಬೇಡವೆನ್ನುವ ತನ್ನ ಮನಸ್ಸಾಕ್ಷಿಯ ಶಬ್ದ ಕೇಳದೆ, (ಕ್ರಿಸ್ತಶಕದ 14ನೇ ವರುಷದಿಂದ 37ನೇದರ ವರೆಗೆ ಆಳಿದ) ತಿಬೆರಿಯನೆಂಬ ಕೈಸರನ[5] ಮಿತ್ರನಾಗಿ ಉಳಿಯುವದಕ್ಕಾಗಿ, ಕ್ರಿಸ್ತನನ್ನು ಕ್ರೂಜೆಯಿಂದ ಕೊಲ್ಲಿಸಿ, 3 ವರುಷ ಹೋಗಿ 4ನೇದು ಮುಗಿಯುವಾಗ ಯೆಹೂದ್ಯ ಪ್ರಧಾನಯಾಜಕರು, ಅವನು ಕಳ್ಳನೂ ತಂಟೆಗಾರನೂ ಎಂತ, ಪೀಲಾತನ ಮೇಲೆ ಸುರಿಯ ದೇಶದಲ್ಲಿ ಮುಖ್ಯ ಪ್ರತಿನಿಧಿಯಾಗಿರುವ ವಿತೆಲ್ಲಿಯನ[6] ಮುಂದೆ ಅಪರಾಧ ಹೇಳಿದರು. ಆದ್ದರಿಂದ ಪೀಲಾತನು ರೋಮಪುರಕ್ಕೆ ಹೋಗ ಬೇಕಾಯಿತು. ಅವನು ಅಲ್ಲಿ ಬಂದು ಮುಟ್ಟುವದಕ್ಕಿಂತ ಸ್ವಲ್ಪ ಕಾಲ ಮುಂದಾಗಿ ತಿಬೆರಿಯ ಕೈಸರನು ಸತ್ತು, ಕಲಿಗುಲನೆಂಬವನು[7] ಅವನ ಉತ್ತರಾಧಿಕಾರಿಯಾಗಿರಲು, ಇವನು ಪೀಲಾತನಿಗೆ ಬಹಳ ಬೆದರಿಸಿದನು; ಅದಕ್ಕಾಗಿ ಪೀಲಾತನು ಭಯದಿಂದ ಸ್ಮೃತಿ ತಪ್ಪಿ, ತನ್ನನ್ನು ತಾನೇ ಕತ್ತಿಯಿಂದ ಕೊಂದು ಕೊಂಡನು. ಹೀಗೆ ಹೇರಳ ಗರ್ವವೂ ಅನ್ಯಾಯವೂ ಉಳ್ಳ ಆ ಮನುಷ್ಯನು ಕೆಟ್ಟನು.

1) 39ನೇ ಪಾನು. 2) Origenes. 3) Eusebius; 36ನೇ ಪಾನು. 4) 24ನೇ, 25ನೇ, 32ನೇ ಪಾನು ನೋಡು. 5) 24ನೇ ಪಾನು. 6) 33ನೇ ಪಾನು ನೋಡು. 7) 34ನೇ ಪಾನು.

ತದನಂತರ ಕ್ರಿಸ್ತಶಕದ 41ನೇ ವರುಷದಿಂದ 44ನೇದರ ವರೆಗೆ 1ನೇ ಹೇರೋದ ಅಗ್ರಿಪ್ಪನು ಸರ್ವ ಪಲೇಸ್ತೀನವನ್ನು ಕ್ಲೌದಿಯ ಕೈಸರನ ಅಪ್ಪಣೆಯೊಳಗೆ ಆಳಿ, ತನ್ನ ಅಜ್ಜನಂತೆಯೇ ಭೀಕರ ರೀತಿಯಾಗಿ ಮಡಿದ್ದು ಹಿಂದೆ ಹೇಳಿ ಅದೆ[1]. ಬಳಿಕ ರೋವಿಾಯ ಪ್ರತಿನಿಧಿಗಳು ಆ ದೇಶದ ದೊಡ್ಡ ಭಾಗದ ಕಾರಭಾರು ಮಾಡುವವರಾದರು. ಇವರೆಲ್ಲರೂ ಹೆಚ್ಚು ಕಡಿಮೆಯಾಗಿ ಕ್ರೂರರೇ; ಯೆಹೂದ್ಯರು ಕ್ರಿಸ್ತನಿಗೂ ಅವನ ಭಕ್ತರಿಗೂ ಗೈಯುತ್ತಿರುವ ಹಿಂಸೆಗೆ ದೇವರು ಅಂಥ ಪ್ರತಿನಿಧಿಗಳ ಮುಖಾಂತರದಿಂದ ಶಿಕ್ಷೆ ಕೊಡುತ್ತಾ ಇದ್ದದ್ದು ನಿಶ್ಚಯ. ಕ್ರಿಸ್ತಶಕದ 64ನೇ ವರುಷದಲ್ಲಿ ಉದ್ಯೋಗಕ್ಕೆ ಬಂದ ಆ ಅಲ್ಬೀನನೆಂಬ ಪ್ರತಿನಿಧಿಯು[2] ಬಹು ನಿರ್ಲಜ್ಜೆಯಿಂದ ದೇಶವನ್ನು ಸುಲು ಕೊಳ್ಳುವವನಾದನು; ಅನ್ಯಾಯಗಳಲ್ಲಿ ಅವನು ನಡಿಸದ್ದು ಒಂದಾದರೂ ಇಲ್ಲ! ಎಂತ, ಯೆಹೂದ್ಯ ಚರಿತ್ರಗಾರನಾದ ಯೋಸೇಫನು[3] ಅವನ ವಿಷಯ ಬರೆದಿದ್ದಾನೆ. ಕೊಳ್ಳೆಗಾರ ದಂಗೆಗಾರರಾದರೂ ಹಣ ಕೊಟ್ಟು ಅವನ ಆಶ್ರಯ ಪಡ ಕೊಳ್ಳುತ್ತಿರುವರು; ಅವನು ಇಂಥ ದುಷ್ಟರಲ್ಲಿ ಮುಖ್ಯನೆನ್ನಿಸಿ ಕೊಳ್ಳುವ ಹಾಗೆ ಆಯಿತು. ಆದಾಗ್ಯೂ ಯಾರಾದರೂ ಅವನನ್ನೂ ಕ್ರಿಸ್ತಶಕದ 65ನೇ ವರುಷದಲ್ಲಿ ಅವನ ಬದಲಿಗೆ ಬಂದ ಗೆಸ್ಸಿಯ ಫ್ಲೋರನೆಂಬವನನ್ನೂ ಸರಿ ನೋಡಿದರೆ ಅಲ್ಬೀನನು ಅತ್ಯುತ್ತಮನೆನ್ನಿಸಿ ಕೊಂಡಾನು; ಆದ್ದರಿಂದ ಮಳೆಗೆ ತಪ್ಪಿಸಿ ಕೊಂಡು ಹೊಳೆಗೆ ಬಿದ್ದ ಹಾಗಾಯಿತು ಎಂಬ ಗಾದೆಯು ಯೆಹೂದ್ಯರಿಗೆ ಒದಗಿತು. ಈ ಫ್ಲೋರನು ಅವರಲ್ಲಿ ಪೂರ್ಣ ನಿರಾಶೆ ಹುಟ್ಟಿಸಿ ಅವರನ್ನು ರೋವಿಾಯ ಅಧಿಕಾರಿಗಳ ಮೇಲಣ ಕಲಹಕ್ಕೆ ಪ್ರೇರಿಸಲಿಕ್ಕೆ ಒದ್ದಾಡುತ್ತಿರುವನು; ಯಾಕಂದರೆ—ಯೆಹೂದ್ಯ ಜನಾಂಗವೆಲ್ಲವೂ ಕಲಹಕ್ಕೇಳುವದರಿಂದಲೇ ಮಾತ್ರ ತನ್ನ ನೀಚ ಕ್ರಿಯೆಗಳು ಬೈಲಾಗದೆ, ತನಗೆ ನೆರೋನ ಕೈಸರನ[4] ಕಡೆಯಿಂದ ಶಿಕ್ಷೆ ಬರುವದಿಲ್ಲವೆಂದು, ಆಲೋಚಿಸುತ್ತಿರುವನು. ಹೀಗಿರಲಾಗಿ ಅನೇಕ ಯೆಹೂದ್ಯರು ಕಷ್ಟ ತಾಳಲಾರದೆ, ಗುಳೆಯ ತೆಗೆಯುತ್ತಿರುವರು.

ಕ್ರಿಸ್ತಶಕದ 66ನೇ ವರುಷ ಹಿಡಿದು ಫ್ಲೋರನು ಪ್ರಜೆಯನ್ನು ದಂಗೆಗೆ ಏಳಿಸುವದಕ್ಕೆ ಮತ್ತಷ್ಟು ಪ್ರಯತ್ನ ಮಾಡ ತೊಡಗಿದನು; ಬೇರೆ ಬೇರೆ ದುಷ್ಕ್ರಿಯೆಗಳಲ್ಲಿ ಯೆಹೂದ್ಯ ದೇವಾಲಯದ ಭಂಡದ್ರೋಹವನ್ನು ಸಹ ಗೈದನು. ಆಗ ಯೆರೂಸಲೇಮಿನೊಳಗೆ ದಂಗೆ ಇನ್ನೂ ತಡೆಯಲಾರದೆ, ಆರಂಭಿಸಲಿಕ್ಕೆ, ಅವನು ಬೇಗ ಓಡಿ ಹೋದನು. ಅಂದು ಸುರಿಯ ದೇಶದಲ್ಲಿಯ ಮುಖ್ಯ ಪ್ರತಿನಿಧಿಯಾದ[5] ಕೆಸ್ತಿಯ ಗಲ್ಲನೆಂಬವನು ಅದನ್ನು ಕೇಳಿ, ಆ 2ನೇ ಅಗ್ರಿಪ್ಪರಾಯನ[6] ಸಹಿತ ಆಢ್ಯ ಸ್ಥಿತಿ

1) 34ನೇ, 37ನೇ, 41ನೇ ಪಾನುಗಳು ನೋಡು. 2) 44ನೇ, 45ನೇ ಪಾನು. 3) 21ನೇ, 45ನೇ ಪಾನುಗಳು. 4) 57ನೇ ಪಾನು. 5) 24ನೇ, 33ನೇ ಪಾನು. 6) 45ನೇ, 55ನೇ ಪಾನು.

ಯವನೊಬ್ಬ ರಾಯಭಾರಿಯನ್ನು ಯೆರೂಸಲೇಮಿಗೆ ಕಳುಹಿಸಲಾಗಿ, ಅಗ್ರಿಪ್ಪನು ಸೌಜನ್ಯದಿಂದ ಸಂಧಾನ ಮಾಡಲಿಕ್ಕೆ ನಾನಾ ತರದ ಪ್ರಯತ್ನ ಪಟ್ಟರೂ ನಡೆಯದಿದ್ದದ್ದು ಮಾತ್ರವಲ್ಲ, ಯೆಹೂದ್ಯರು ಅವನಿಗೆ ಕಲ್ಲು ಹೊಡೆಯಲೆಸಗಿದರು; ಅದು ಕಾರಣ ಅವನು ದುಃಖಿಸಿ, ತನ್ನ ಸಂಸ್ಥಾನಕ್ಕೆ ಮರಳಿದನು.

ಯೆಹೂದ್ಯರೊಳಗೆ ಆವಾಗ ಎರಡು ಪಕ್ಷದವರು. ಪ್ರಜೆಯ ದೊಡ್ಡ ಗುಂಪು ಅವಲಂಬಿಸುವಂಥಾದ್ದು ಒಂದು ಪಕ್ಷದವರು, ರೋಮಿಾಯರ ಸಂಗಡದ ಯುದ್ಧವು ಎಂತಾದರೂ ಬೇಕು! ಎಂದು, ಪೇಚಾಡುತ್ತಿರುವರು; ಸಾಮಭಾವವುಳ್ಳ ಮತ್ತೊಂದು ಪಕ್ಷದವರು ಅಂಥ ನಾಶನಕರ ಯುದ್ಧವನ್ನು, ಸಾಧ್ಯವಾದರೆ, ನಿವಾರಿಸಲಿಕ್ಕೆ ಹುಡುಕುತ್ತಿರುವರು. ಈ ಕಡೆಯವರಲ್ಲಿ ಯಾಜಕರ ವಂಶಜನಾದ ಯೋಸೇಫನೆಂಬ ಆ ಚರಿತ್ರಲೇಖಕನು ಗಲಿಲಾಯವೆಂಬಲ್ಲಿ ದಳವಾಯಿಯಾದನು. ಕಠಿಣ ಪಕ್ಷದವರ ಅಭಿಪ್ರಾಯವು ಗೆದ್ದ ಮೇಲೆ ಕೆಸ್ತಿಯ ಗಲ್ಲನು ಒಂದು ದೊಡ್ಡ ಸೇನೆಯ ತಕ್ಕೊಂಡು ಬಂದು, ಯೆರೂಸಲೇಮಿಗೆ ಮುತ್ತಿಗೆ ಹಾಕಲು, ಅವನು ಅಪಜಯ ಪಟ್ಟು, ಸಮುದ್ರದಂಡೆಗೆ ಪಲಾಯನಸ್ಥನಾಗಿ ಹೋದನು. ಈ ಜಯದಿಂದ ಯೆಹೂದ್ಯರು ಬಹಳ ಎದೆ ಗೊಳ್ಳಲಾಗಿ, ಆ ಸಾಮಭಾವದ ಪಕ್ಷಕರು ತೀರ ಸೋತರು. ಆ ಸಮಯ ಸ್ಥಿತಿವಂತರಲ್ಲಿ ಆಢ್ಯರಾದ ಹಲವರು, ಒಡೆದು ಮುಳುಗುವದೊಂದು ಹಡಗವನ್ನು ಬಿಡುವಂತೆ, ಯೆರೂಸಲೇಮನ್ನು ಬಿಟ್ಟರು; ಅಲ್ಲಿಯ ಕ್ರೈಸ್ತರ ಸಭೆಯು ಸಹ ತಮ್ಮ ಕರ್ತನದೊಂದು ಎಚ್ಚರಿಕೆಯ ಮಾತು ನೆನಪು ಮಾಡಿ ಕೊಂಡು, ವಲಸೆ ಹೊರಟು, ಯೊರ್ದನು ನದಿಯ ಅತ್ತ ಕಡೆಯ ಬೆಟ್ಟಗಳ ಪೆಲ್ಲವೆಂಬ ಸಣ್ಣ ಪಟ್ಟಕ್ಕೆ ಗಮಿಸಿತು[1]. 2ನೇ ಹೇರೋದ ಅಗ್ರಿಪ್ಪ ರಾಯನ ಆಳ್ತನದೊಳಗಿರುವ ಈ ಪಟ್ಣದಲ್ಲಿ ಕ್ರೈಸ್ತರಿಗೆ ಯೆಹೂದ್ಯ ಯುದ್ಧದ ಪೂರ್ತಿಗೂ ಶಾಂತಿ ಇರುತ್ತಿರುವದು; ಅಗ್ರಿಪ್ಪನು ಅವರಿಗೆ ಅಂಥ ಆಶ್ರಯಸ್ಥಳವ ಕೊಟ್ಟು ಬಿಟ್ಟದ್ದಕ್ಕೆ ಪೌಲನು ಅವನಿಗೆ ಒಮ್ಮೆ ಮಾಡಿದ ಪ್ರಸಂಗವು ಸಹ ಕಾರಣವಾಗಿದ್ದೀತು[2].

ಅಷ್ಟರಲ್ಲಿ ಕೆಸ್ತಿಯ ಗಲ್ಲನು, ಎಲ್ಲಾ ದುರವಸ್ಥೆಯ ಬೇರು ಫ್ಲೋರನೇ! ಎಂತ, ಅರ್ಥವುಳ್ಳದ್ದೊಂದು ಕಾಗದವನ್ನು ನೆರೋನ ಕೈಸರನಿಗೆ ಬರದು ಕಳುಹಿಸಿದ್ದನು; ಅದು ಕಾರಣವಾಗಿ ಇವನು ತಕ್ಕ ಶೂರತ್ವವೂ ಅನುಭವವೂ ಉಳ್ಳ ದಳವಾಯಿಯಾದ ವೆಸ್ಪಸಿಯಾನನನ್ನು ಒಂದು ಮಹಾ ಸೇನೆಯ ಸಹಿತ ಪಲೇಸ್ತೀನಕ್ಕೆ ಗಮನ ಮಾಡಿಸಿದನು. ಪೌಲ ಅಪೊಸ್ತಲನು ತಿರಿಗಿ ಬಂಧನದವನಾದಾಗ[3] ಕ್ರಿಸ್ತಶಕದ 67ನೇ ವರುಷದಲ್ಲಿ ವೆಸ್ಪಸಿಯಾನನು ಗಲಿಲಾಯ ಸಮರೀಯ ಎಂಬ ನಾಡುಗಳನ್ನು ತನ್ನ ವಶ ಮಾಡಿ ಕೊಂಡು, ಯೋಸೇಫನೆಂಬ ಆ ಚರಿತ್ರಕರ್ತನನ್ನು ಸಹ ಕೈ

1) ಮತ್ತಾ. 24, 16. 2) 56ನೇ ಪಾನು ನೋಡು. 3) 57ನೇ ಪಾನು.

ಶಿರೆ ಹಿಡು ಕೊಂಡು, ಯೆಹೂದ್ಯರು ರೋವಿಸಾಯರ ಮೇಲೆ ನಡಿಸಿದ ಕ್ರೂರ ಕ್ರಿಯೆಗಳಿಗಾಗಿ ಆ ನಾಡುಗಳನ್ನು ಹಾಳು ಗೈದು, ಹೇರಳ ಮಂದಿ ನಿವಾಸಿಗಳನ್ನು ಕೊಂದನು. ಯೆಹೂದ್ಯರೆದೆಗೆ ಬಹಳ ಒತ್ತುವ ಈ ಸಂಗತಿಯ ಇತ್ತ ಕಡೆ ಯೆರೂಸಲೇಮಿನಲ್ಲಿ ಸಮಾಧಾನಪಕ್ಷದವರು, ಕೌಲಿಗೆ ಇಳಿಯ ಬೇಕೆಂತ, ತಿರಿಗಿ ನುಡಿಯುವವರಾದರು; ನೀತಿವಂತನೆನ್ನಿಸಿ ಕೊಳ್ಳುತ್ತಿದ್ದ ಕಿರಿ ಯಕೋಬನ ಕೊಲೆಯ ದೆಸೆಯಿಂದ ಉದ್ಯೋಗ ಕಳಕೊಂಡ ಅನನೆಂಬ ಪ್ರಧಾನ ಯಾಜಕನು[1] ಆಗ ಇವರ ಮುಖ್ಯಸ್ಥನು. ಆದರೆ ಮಾರ್ಪಕ್ಷದ ಕಠಿಣ ಭಾವದವರು ಮತ್ತೂ ಗೆದ್ದು, ಅವನನ್ನೂ ಅವನಿಗೆ ಶೇರಿದ ದೊಡ್ಡ ಸ್ಥಿತಿವಂತರನೇಕರನ್ನೂ ಹತ ಮಾಡಿದರು. ಅಷ್ಟರಲ್ಲಿ ರೋವಿಸಾಯರ ದಂಡು ಆ ಪಟ್ಣಕ್ಕೆ ಎಲ್ಲಾ ಕಡೆಯಿಂದ ಹೆಚ್ಚು ಹೆಚ್ಚಿಗೆ ಸಮಿಸಾಪಿಸುತ್ತಾ ಇತ್ತು; ದಾರಿಯಲ್ಲಿ ಯೆಹೂದ್ಯರು ಜೀವದಾಶೆ ಇಲ್ಲದೆ ಕಾದಿದರೂ ಒಂದು ಪಟ್ಣದ ಮೇಲೆ ಮತ್ತೊಂದು ವೆಸ್ಪಸಿಯಾನನ ಕೈಗೆ ಶಿಕ್ಕಿತು.

ಅವನು ಕ್ರಿಸ್ತಶಕದ 68ನೇ ವರುಷದಲ್ಲಿ ಯೆರೂಸಲೇಮಿಗೆ ಮುತ್ತಿಗೆ ಹಾಕಲಿಕ್ಕೆ ಕೈ ಹಚ್ಚುವಾಗಲೇ ನೆರೋನ ಕೈಸರನು ಸತ್ತನು; ತದನಂತರ ವೆಸ್ಪಸಿಯಾನನನ್ನು, ಕೈಸರನೆಂತ, ಆರಿಸಿ ಕೊಂಡರು; ಆದ್ದರಿಂದ ಅವನು ರೋಮಕ್ಕೆ ತೀವ್ರವಾಗಿ ಹೋಗಲವಶ್ಯವಾಯಿತು. ಹೀಗಿರಲಾಗಿ 2 ವರುಷದ ಈಚೆ ಅವನು, ಯೆಹೂದ್ಯ ಯುದ್ಧವನ್ನು ನೀನು ಮುಂದೆ ನಡಿಸೆಂದು, ತನ್ನ ಮಗನಾದ ತಿತನಿಗೆ ಅಪ್ಪಣೆ ಕೊಟ್ಟು, ಅವನನ್ನು 80,000 ಆಳುಗಳ ಸಂಗಡ ಕಳುಹಿಸಿದ ಮೇಲೆ ಇವನು ತಡವಿಲ್ಲದೆ ಯೆರೂಸಲೇಮಿನ ಸುತ್ತುಮುತ್ತಲು ಆ ದಂಡಿಳಿಸಿದನು. ಆಗ ಪಸ್ಕ ಹಬ್ಬದ[2] ಕಾಲ ಇದ್ದದರಿಂದ 35 ಲಕ್ಷ ಮಂದಿ ಯೆಹೂದ್ಯರು ಆ ವಿಸ್ತೀರ್ಣ ಪಟ್ಣದೊಳಗೆ ನೆರೆದು ಇದ್ದರು. ಒಳ್ಳೇ ಸಾಧುವಾದ ಮನಸ್ಸುಳ್ಳ ತಿತನು ಅವರನ್ನು ಸಂಧಾನಕ್ಕೆ ಕರೆದು—ನಿಮ್ಮನ್ನು ನನ್ನ ಕೈಗೆ ಒಪ್ಪಿಸಿ ಕೊಟ್ಟು, ನಿಮ್ಮ ಪಟ್ಣವನ್ನೂ ದೇವಾಲಯವನ್ನೂ ಉಳಿಸಿ ಕೊಳ್ಳಿರಿ! ಎಂತ, ಬುದ್ಧಿ ಹೇಳಿದರೂ ಅವರು ಆ ದಳವಾಯಿಗೆ ಹಾಸ್ಯ ಮಾಡಿ, ಹಟದಿಂದ ಎದುರಿಸುತ್ತಾ ಇದ್ದರು. ಒಂದು ವೇಳೆ ಕಾಲೋಚಿತವಾದ ಕ್ರೂರತ್ವದಿಂದ ಅವರನ್ನು ಬೆದರಿಸ ಬಹುದೆಂದು, ತಿತನು ಪಟ್ಣದ ಸುತ್ತಲು ಅನೇಕ ಕ್ರೂಜೆಗಳನ್ನು ನಿಲ್ಲಿಸಿ, ಶಿರೆಯಾದ ಹಲವು ಸಾವಿರ ಮಂದಿ ಯೆಹೂದ್ಯರನ್ನು ಅವಕ್ಕೆ ಹೊಡಿಸಿದನು; ಕ್ರೂಜೆಗಳಿಗೆ ಇನ್ನು ಸ್ಥಳವಿಲ್ಲ, ಕ್ರೂಜೆಮರಣ ತಾಳ ನೇಮಕವಾದವರಿಗೆ ಇನ್ನು ಕ್ರೂಜೆಗಳಿಲ್ಲ ಎಂಬ ಹಾಗೆ ಆಯಿತು. ಆಗಿಂದಾಗ 500 ಜನರು ಕೂಡಿ ಕ್ರೂಜೆಗೆ ಜಡಿದಿದ್ದವರಾಗಿ ಪಟ್ಣದೊಳಗಿನವರಿಗೆ ತೋರಿದರು. ಆ ಸಮಯ ಕ್ರೂಜೆಪೀಡೆ ಪಡುವಂಥವರು ಪಟ್ಣದ ಹೊರಗೆ, ಹಶಿವೆಪೀಡೆ ಪಡುವಂಥವರು ಪಟ್ಣದ ಒಳಗೆ

---

1) 45ನೇ ಪಾನು ನೋಡು. 2) 44ನೇ ಪಾನು.

ಗೋಳಾಡುತ್ತಾ ಇದ್ದರು. ಪಟ್ಣದೊಳಗೆ ಹಶಿವೆಯಿಂದಲ್ಲದೆ ಕೆಟ್ಟ ಸೊಂಕುರೋಗದಿಂದ ಸಹ ದಿನ ದಿನಕ್ಕೆ ಸುಮಾರು 400 ಜನರು ಸಾಯುವರು; ಅಂಥವರು ಬೀದಿಗಳಲ್ಲಿ ಸತ್ತು ಬಿದ್ದಿರುವಲ್ಲಿ ತಾವು ತಮ್ಮ ಹಶಿವೆ ತೀರಿಸಿ ಕೊಳ್ಳುವ ಹಾಗೆ ಬಾಯಿಗೆ ಹಾಕಿ ಕೊಂಡಿದ್ದ ಒಣ ಹುಲ್ಲಾಗಲಿ ತೊಗಲಾಗಲಿ ಶೆಗಣಿಯಾಗಲಿ ಅವರ ಬಾಯಿಯೊಳಗೆ ಇನ್ನು ಇದ್ದು ಕಾಣಿಸಿತು. ಒಂದು ರೊಟ್ಟಿತುಂಡಿಗಾಗಿ ಒಬ್ಬ ಗೆಳೆಯನು ಮತ್ತೊಬ್ಬನನ್ನು ಕೊಲ್ಲುವನು; ತಮ್ಮ ಪ್ರಾಣ ಉಳಿಸಿ ಕೊಳ್ಳುವದಕ್ಕಾಗಿ ಹೆತ್ತವರು ಉಣ್ಣಲಿಕ್ಕೆ ಆಶೆ ತಾಳುವ ಕಡೆಯ ಅನ್ನತುತ್ತನ್ನೂ ಮಕ್ಕಳು ಅವರ ಬಾಯಿಯಿಂದಲೇ ಕಸು ಕೊಳ್ಳುವರು; ಮಾನಸ್ಥಳಾದ ಒಬ್ಬ ಸ್ತ್ರೀಯು ಹಶಿವೆಯಿಂದ ಹುಚ್ಚಳಾಗಿ, ಸ್ವಂತ ಶಿಶುವನ್ನು ತಿನ್ನಲಿಕ್ಕೆ ಕೊಂದು ಹಾಕಿರುವಲ್ಲಿ ಬೇರೊಬ್ಬರು ಬಂದು, ಅರ್ಧ ಪಾಲನ್ನು ಕದ್ದು ಕೊಂಡು, ತಿಂದರು. ಯೆಹೂದ್ಯ ದಂಡಿನವರು ಐಶ್ವರ್ಯವಂತರ ಮನೆಗಳನ್ನು ಹೊಕ್ಕು, ನೋಡಿದವರನ್ನು ವಧೆ ಮಾಡಿ, ಆ ಹೆಣಗಳ ಹೊಟ್ಟೆ ಶೀಳಿ, ಅವುಗಳೊಳಗೆ ಇನ್ನು ಜೀರ್ಣವಾಗದಿದ್ದ ಆಹಾರವನ್ನು ಬಹು ಆಶೆಯಿಂದ ಗಬಗಬನೆ ತಿನ್ನುತ್ತಿರುವರು. ಯೆಹೂದ್ಯರು ಲೆಖ್ಖವಿಲ್ಲದ ಹೆಣಗಳನ್ನು ಆಲಂಗಕ್ಕೆ ತಂದು, ಖಂದಕದೊಳಗೆ ಬಿಸುಡುತ್ತಿರುವದರಿಂದ ಇದು ಆ ಹೆಣಗಳಿಂದ ತುಂಬಲಾಯಿತು. ಯಾರಾದರೂ ಪಟ್ಣವ ಬಿಟ್ಟು ಹೋಗಲಿಕ್ಕೆ ಯತ್ನಿಸಿದರೆ ಅವರನ್ನು ಹಿಡಿದು, ಮರಣಾಜ್ಞೆ ಮಾಡಿಸುತ್ತಿರುವರು. ಫಕ್ಕನೆ ಒಬ್ಬನಿಗೆ ರೋವಿಾಯ ಪಾಳ್ಯದೊಳಗೆ ಓಡಿ ಶೇರ ಕೂಡಿದರೆ ಲೋಭಿಗಳಾದ ರೋವಿಾಯ ಸೈನಿಕರು, ನಾಣ್ಯಗಳನ್ನು ನುಂಗಿ ಕೊಂಡಿದ್ದಾರು ಎಂತ, ಅವರ ಒಡಲು ಶೀಳುವರು. ಲೋಕೋತ್ಪತ್ತಿಯಿಂದ ಆಗದಿದ್ದಂಥ, ಇನ್ನು ಮೇಲೆಯೂ ಆಗದಂಥ ಉಪದ್ರವವು ಅಂದು ಆಯಿತೆಂದು, ಹೇಳ ಬಹುದು[1]. ಇಷ್ಟು ಸಂಕಷ್ಟ ಸಂಭವಿಸಿದಾಗ್ಯೂ ಯೆಹೂದ್ಯರು ಸುಳ್ಳುಪ್ರವಾದಿಗಳಿಂದ ಮರುಳು ಗೊಂಡು, ತಮ್ಮ ವೈರಿಗಳಿಗೆ ಅಣಕಿಸುತ್ತಾ ಎದುರಿಸುತ್ತಾ ಇರುವರು.

ಬಳಿಕ ತಿತ ದಳಕರ್ತನು, ಪಟ್ಣದೊಳಗಿನ ಸಂಕಟವನ್ನು ಇನ್ನು ಬೇಗ ಮುಗಿಸ ಬೇಕೆಂದು, ಸಂಧಾನನಿರೀಕ್ಷೆ ತ್ಯಜಿಸಿ, ಮುತ್ತಿಗೆ ಹಾಕ ತೊಡಗಿ 4 ತಿಂಗಳು ಕಳೆದು ಹೋದಾಗ್ಯೆ ತನ್ನ ಸರ್ವ ಸೇನೆಯೊಂದಿಗೆ ಪಟ್ಣದ ಮೇಲೆ ಬಿದ್ದು, ಒಳಹೊಕ್ಕು, ಬೆಂಕಿ ಹಚ್ಚಿ, ಕತ್ತಿಯಿಂದ ಕಂಡಾಬಟ್ಟೆ ಪ್ರಾಣಹಿಂಸೆ ಗೈದ ಮೇಲಾದರೂ ಯೆಹೂದ್ಯರ ಭ್ರಮೆಯುಳ್ಳ ಹಟವು ಹೋಗಿಲ್ಲ; ಪಟ್ಣವು ಬೂದಿಯಾದ ಬಳಿಕ ಅವರದು ಒಂದು ಗುಂಪು ಬಹು ಘಟ್ಟಿ ಮಾಡಿರುವ ದೇವಾಲಯದೊಳಗೆ ಕೂಡಿದ್ದು, ಜೀವದಾಶೆ ಪೂರಾ ಬಿಟ್ಟು ಮಲೆತು, ನಿಂತಿತು. ಮಹಾ ಶಿಲಾಶಿಲ್ಪದಿಂದ ಅಮಿತ

1) ಮತ್ತಾ. 24, 21.

ಶೃಂಗಾರವಾಗಿ ಕಟ್ಟಿರುವ ಆ ದೊಡ್ಡ ಮಂದಿರವನ್ನು[1] ಹ್ಯಾಗೂ ಉಳಿಸ ಬೇಕೆಂತ, ತಿತನು ಅಪೇಕ್ಷಿಸಿದನು; ಆದರೆ ಒಬ್ಬ ರೋಮಿಾಯ ಸೈನಿಕನು ರೋಷಾಗ್ನಿ ತಾಳ ಲಾರದೆ, ಅವನ ಅಪ್ಪಣೆ ಮಿಾರಿ, ಉರಿಯುವ ದೀವಟಿಗೆಯನ್ನು ಮರವುಳ್ಳ ಭಾಗಕ್ಕೆ ಬೀಸಾಡಲಾಗಿ, ದೇವಾಲಯವೂ ಸುಟ್ಟು ಹೋಯಿತು. ಜಯಶಾಲಿಗಳು ಪಟ್ಣವನ್ನೆಲ್ಲ ನೆಲಕ್ಕೆ ಸಮ ಮಾಡಿ—ನಿನ್ನನ್ನು ನೆಲಸಮ ಮಾಡಿ, ನಿನ್ನಲ್ಲಿ ಕಲ್ಲಿನ ಮೇಲೆ ಕಲ್ಲು ಬಿಡದ ದಿವಸಗಳು ನಿನ್ನ ಮೇಲೆ ಬರುವವು! ಎಂಬ ಕ್ರಿಸ್ತಪ್ರವಾದನೆಯನ್ನು ಈಡು ಏರಿಸಿದರು[2]. ಮೂರು ಉದ್ದ ಗೋಪುರಗಳನ್ನು ಮಾತ್ರ, ಮಹಾ ಜಯದ ಜ್ಞಾಪಕಚಿಹ್ನೆಗಳೆಂತ, ಹಾಗೆಯೇ ಇರ ಗೊಟ್ಟರು. ತಿತನು ವಿವಿಧಾಲೋಚನೆಯುಳ್ಳವನಾಗಿ, ಅವುಗಳ ಕಡೆಗೆ ದೃಷ್ಟಿ ಇಟ್ಟು ಕೊಂಡು, ನಿಂತಿರಲು, ತಾನು ನಿಜ ದೇವರನ್ನರಿಯದವನಾಗಿದ್ದರೂ—ದೇವರ ಸಹಾಯದಿಂದಲೇ ಹೋರನ್ನಾಡಿದೆವು; ಯೆಹೂದ್ಯರನ್ನು ಇಂಥಾ ಭದ್ರವಾದ ಕಟ್ಟಿನಿಂದ ಕೆಳಗೆ ದೊಬ್ಬಿ ಹಾಕಿದವನು ದೇವರೇ; ಹ್ಯಾಗಂದರೆ ಮನುಷ್ಯರ ಕೈಗಳೂ ಯಂತ್ರಗಳೂ ಇಂಥಾ ಗೋಪುರಗಳಿಗೆ ಈಡಾಗುವದುಂಟೇ? ಎಂತ, ವಿಸ್ಮಯದಿಂದ ಕೂಗಿದನು.

ಆ ದೊಡ್ಡ ಮುತ್ತಿಗೆಯಲ್ಲಿ 14,60,000 ಮಂದಿ ಯೆಹೂದ್ಯರು ಸತ್ತರು, ಹೊರ್ತಾಗಿ 97,000 ಮಂದಿ ಶೆರೆಯವರಾದರು; ಇವರಲ್ಲಿ ಒಂದು ಪಾಲು ಐಗುಪ್ತ ದೇಶದೊಳಗೆ ಕಷ್ಟವುಳ್ಳ ಗಣಿಕೆಲಸಕ್ಕೆ ಹೋಗ ಬೇಕಾಯಿತು, ಮತ್ತೊಂದು ಪಾಲು ರೋಮಿಾಯರ ವಿನೋದಕ್ಕಾಗಿ ರಂಗಸ್ಥಳದಲ್ಲಿ ಮೃಗಗಳ ಸಂಗಡಲೂ ಕುಸ್ತಿಗಾರರ (ದ್ವಂದ್ವಯುದ್ಧಕಾರಿಗಳ) ಸಂಗಡಲೂ ಕಾದ್ಯಾಡಿ[3] ಅಳಿಯ ಬೇಕಾಯಿತು. ಅದು ಹೊರ್ತಾಗಿ ಆ ಪಟ್ಣದ ಮುತ್ತಿಗೆಯಲ್ಲಿ ಅಲ್ಲದೆ ಯುದ್ಧದುರಿಯು ಹತ್ತಿದ್ದ ಬೇರೆ ಕಡೆಯಲ್ಲಿ ಇನ್ನು 2,00,000 ಯೆಹೂದ್ಯರು ಹತರಾಗಿದ್ದರು. ಈ ಪ್ರಕಾರವಾಗಿ ಆ ದಿವ್ಯ ಪಟ್ಣವೂ ದೇಶವೂ ಕ್ರಿಸ್ತನನ್ನು ಕ್ರೂಜಿಸುವಲ್ಲಿ, ಆತನ ರಕ್ತವು ನಮ ಮತ್ತು ನಮ್ಮ ಮಕ್ಕಳ ಮೇಲೆ ಬರಲಿ! ಎಂದು, ಕೂಗು ಹಾಕಿದ ಯೆಹೂದ್ಯ ಜನಾಂಗವೂ[4] ಭಯಂಕರ ನಾಶನ ಪಟ್ಟವು. ಇದು ಕ್ರಿಸ್ತಶಕದ 70ನೇ ವರುಷದಲ್ಲಿ, ಕ್ರಿಸ್ತನು ಕ್ರೂಜೆಯಲ್ಲಿ ತೀರಿ ಕೊಂಡು 37 ವರುಷಗಳಾದ ಈಚೆ, ಸಂಭವಿಸಿತು.

ಆ ಯುದ್ಧವು ತೀರಿದನಂತರ ಕ್ರೈಸ್ತ ಸಭೆಯು ಪೆಲ್ಲವೆಂಬಲ್ಲಿಂದ ತಿರಿಗಿ ಬಂದು, ಹಾಳು ಬಿದ್ದ ಯೆರೂಸಲೇಮಿನಲ್ಲಿ ಇಳು ಕೊಳ್ಳುವದಾಯಿತು; ಕರ್ತನ ನೆಂಟನಾದ ಆ ಸಿಮೆಯೋನನು ಇನ್ನೂ ಅದರ ಅಧ್ಯಕ್ಷನಾಗಿದ್ದು[5], ಆ ಮೇಲೆ 36 ವರ್ಷ ಕ್ರಿಸ್ತಶಕದ 107ನೇದರ ವರೆಗೆ ಮುಂದೆಯೂ ಆ ಉದ್ಯೋಗದಲ್ಲೇ ಇದ್ದು, ರಕ್ತ

1) 20ನೇ ಪಾನು. 2) ಮರ್ಕ. 13, 2; ಲೂಕ. 19, 43—44. 3) 14ನೇ ಪಾನು. 4) ಮತ್ತಾ. 27, 25. 5) 45ನೇ ಪಾನು ನೋಡು.

ಸಾಕ್ಷಿಮರಣದವನಾದನು. ಆ ಒಳಿಕ 25 ವರುಷಗಳಲ್ಲಿ ಉತ್ತರೋದ್ಯೋಗಸ್ಥರಾಗುತ್ತಿದ್ದ 13 ಮಂದಿ ಅಧ್ಯಕ್ಷರು ಸಹ ಕ್ರೈಸ್ತರಾದಂಥ ಯೆಹೂದ್ಯರಾದ ಕಾರಣ ಈ ಆವಳಿಯ ಅಧ್ಯಕ್ಷರು ಪರಿಚ್ಛೇದನಾಧ್ಯಕ್ಷರು ಎನ್ನಿಸಿ ಕೊಂಡದ್ದಾಯಿತು. ತರುವಾಯ ಮುಂಚೆ ಯೆಹೂದ್ಯರಲ್ಲದಿದ್ದ ಕ್ರೈಸ್ತರು ಆ ಸಭೆಯಲ್ಲಿ ಅಧ್ಯಕ್ಷತೆಯನ್ನು ಹೊಂದುತ್ತಾ ಬಂದರು.

ಸಿಮೆಯೋನನ ಮರಣಕ್ಕೆ ಇತ್ತ ಕಡೆ ಯೆರೂಸಲೇಮಿನ ಕ್ರೈಸ್ತರಲ್ಲಿ ಒಂದು ದುಃಖಕರವಾದ ಸಂಗತಿ ಆಯಿತು; ಏನಂದರೆ ಅವರೊಂದು ಭಾಗದವರು ಪಾಷಂಡಕ್ಕೊಳ ಬಿದ್ದರು; ಹ್ಯಾಗಂದರೆ—ಮೋಶೆಯ ನ್ಯಾಯಪ್ರಮಾಣದ ಕಲ್ಪವಿಧಿ ಎಲ್ಲವೂ ಆತ್ಮರಕ್ಷಣಕ್ಕೆ ಅತ್ಯಗತ್ಯವೇ ಸರಿ, ಅದಲ್ಲದೆ ಏಕದೇವತ್ವವು ತಪ್ಪದ ಹಾಗೆ ಯೇಸುವೆಂಬವನು ಬರೇ ಮನುಷ್ಯನು ಎನ್ನ ಬೇಕು ಎಂತ, ಬೋಧಿಸಲಿಕ್ಕೆ ತೊಡಗಿದರು; ಅವರಿಗೆ, ಎಬ್ಯೋನಿತರೆಂತ, ಹೆಸರು ಬಂತು. ಅಂದಿಗೆ ಸುಮಾರು 40 ವರುಷ ಮಾತ್ರ ಹಿಂದೆ ತನ್ನ ವಾಗ್ದತ್ತಗಳಿಗೆ ಅನುಸಾರವಾಗಿ ಯೆಹೂದ್ಯರಿಗೆ ಮಹಾ ಶಿಕ್ಷೆ ಕೊಟ್ಟು ತನ್ನ ಸಭೆಯನ್ನು ರಕ್ಷಿಸಿ, ಹೀಗೆ, ತಾನು ವಿಶ್ವಪಾಲಕನೆಂತ, ತಮ್ಮ ಮುಂದೆ ಸಾಕ್ಷಾತ್ತಾಗಿ ತೋರಿಸಿ ಕೊಂಡ ಯೇಸುವನ್ನು ಎಬ್ಯೋನಿತರು ಆ ಪ್ರಕಾರದಿಂದ ಅಪಲಾಪಿಸಿದ್ದು ಬುದ್ಧಿಭ್ರಮಾಭಿಮಾನವಲ್ಲದೆ ಪೂರ್ಣ ಭಕ್ತಿಗೇಡೇ.

---

## 5. ಯೋಹಾನ ಅಪೊಸ್ತಲನ ಅಂತ್ಯ ವೃತ್ತಿಯು.

ಕ್ರಿಸ್ತಶಕದ 66ನೇ ವರ್ಷ ಯೆರೂಸಲೇಮಿನ ಕ್ರೈಸ್ತ ಸಭೆಯು, ಯೇಸುನಾಥನು ತಾವಿರುವ ಪಟ್ಟಕ್ಕೆ ಶಿಕ್ಷಾದಾಯಕನಾಗಿ ಬರುವನೆಂದು[1], ತಿಳಿದು, ಪೆಲ್ಲವೆಂಬಲ್ಲಿಗೆ ಓಡಿ ಹೋಗುವಾಗ ಪೌಲ ಅಪೊಸ್ತಲನು ರೋಮಪುರದಲ್ಲಿ 2ನೇ ಸರ್ತಿ ಶೆರೆಯವನಾಗಿರಲು, ಯೋಹಾನ ಅಪೊಸ್ತಲನು ಸಣ್ಣ ಅಸಿಯಕ್ಕೆ ಗಮಿಸಿ, ಎಫೆಸ ಪಟ್ಟದ ಕ್ರೈಸ್ತರೊಳಗೆ ಮನೆ ಮಾಡಿ ಕೊಂಡು, ಅಲ್ಲಿಂದ ವೇಳೆ ವೇಳೆಗೆ ಹೊರಟು ಹೋಗಿ, ಸಣ್ಣ ಅಸಿಯದ ಇತರ ಕ್ರೈಸ್ತರಿಗೆ ಭೇಟಿ ಕೊಟ್ಟು, ಅವರ ವಿಶ್ವಾಸವನ್ನು ಸ್ಥಿರ ಪಡಿಸಿ, ಸಭೆಗಳೊಳಗಣ ಎಲ್ಲಾ ವಿಷಯಗಳು ನೆಟ್ಟಗೆ ನಡೆಯುವ ಹಾಗೆ ನೋಡುತ್ತಾ ಇದ್ದನು. ಅಂದು ಅವನು ತಾನು ಉಪದೇಶಿಸುತ್ತಿದ್ದ ಶಿಷ್ಯರಲ್ಲಿ ಬಹು ಪ್ರಖ್ಯಾತರಾದ ಮೂವರ ಹೆಸರೇನಂದರೆ— ಪೊಲುಕರ್ಪ, ಇಗ್ನಾತಿಯ, ಪಪಿಯ[2]; ಇವರು ದಿನಗತಿಯಿಂದ ದೊಡ್ಡ ಅಪೊಸ್ತೊಲಿಕ ಪಿತೃಗಳಾದರು[3]. ಯೋಹಾನನು ಸಣ್ಣ ಅಸಿಯದಲ್ಲಿ ಇರುವ ಸಮಯ ಎಫೆಸದ ಸಭೆಯಲ್ಲದೆ ಮತ್ತು 6 ಪಟ್ಟದ

---

1) ಯೋಹಾ. 21, 20—23. 2) Irenaeus; 51ನೇ ಪಾನು. 3) 4ನೇ ಪಾನು; 8ನೇ ಸಂಧಿ.

ಸಭೆಗಳು ಅಂದರೆ ಸ್ಮುರ್ನ, ಪೆರ್ಗಮ, ಥುವತೀರ, ಸಾರ್ದಿ, ಫಿಲದೆಲ್ಫೀಯ, ಲಾವೊದಿಕೇಯ ಎಂಬವುಗಳ ಸಭೆಗಳು ಕೀರ್ತಿ ಗೊಂಡು, ಅವನಿಂದ ವಿಶೇಷವಾದ ಜೋಕೆ ಹೊಂದುತ್ತಿದ್ದವು[1]. ಅವನು ಸುಮಾರು 28 ವರುಷ ಆ ದಿಕ್ಕಿನಲ್ಲಿ ಪ್ರವೃತ್ತಿ ನಡಿಸುತ್ತಿರಲಂದು ದೊಮಿತಿಯಾನನೆಂಬ ಕ್ರೂರ ಕೈಸರನು, ಯೋಹಾನನ ಪ್ರಾಚುರ್ಯ ಸ್ಥಿತಿಯಿಂದ ರಾಜ್ಯಕ್ಕೆ ಕಂಟಕ ಬಂದೀತೆಂತ, ನೆವನ ಹೇಳಿ, ಕ್ರಿಸ್ತ ಶಕದ 94ನೇ ವರುಷದಲ್ಲಿ ಅವನನ್ನು ರೋಮಪುರಕ್ಕೆ ತರಿಸಿ, ಕುದಿವೆಣ್ಣೆಯೊಳಗೆ ಬಿಸುಡಲಾದರೂ ಅವನು ದೇವರಕ್ಷಿತನಾಗಿ, ಉಳಿದ ಈಚೆ ಅವನನ್ನು ಜೀವದಿಂದಿರಗೊಟ್ಟು, ಮರುವರ್ಷ (ಸಣ್ಣ ಅಸಿಯದ ತೀರದ ಮಿಲೇತ ಪಟ್ಣಕ್ಕೆ[2] ಸಮೀಪವಾದ) ಪಾತ್ಮೊಸೆಂಬ ದ್ವೀಪಕ್ಕೆ[3] ಗಡಿ ದಾಟಿಸಿ ಕಳುಹಿಸಿದನು; ಅಲ್ಲಿ ದೇವರು ಪ್ರಕಟನಗ್ರಂಥವೆಂಬದನ್ನು ಅವನಿಗೆ ಕಾಣಿಸಿ, ಕೇಳಿಸಿ, ಬರೆಯಲಿಕ್ಕೆ ಕೊಟ್ಟನು. ಕ್ರಿಸ್ತಶಕದ 96ನೇ ವರುಷ ದೊಮಿತಿಯಾನನು ಸತ್ತು, ನೆರ್ವನೆಂಬವನು ಕೈಸರನಾದ ಬಳಿಕ ಯೋಹಾನನಿಗೆ, ಎಫೆಸಕ್ಕೆ ಹಿಂದಿರುಗ ಬಹುದೆಂತ, ಅಪ್ಪಣೆಯಾಯಿತು. ಆದ್ದರಿಂದ ಅವನು ತಿರಿಗಿ ಬಂದು, ತನಗೆ ಪಾತ್ಮೊಸಿನಲ್ಲಿ ಆದ ಮಹಾ ಪ್ರಕಟನಗಳನ್ನು ಗ್ರಂಥವಾಗಿ ಬರೆದು, ಸಭೆಗಳ ಹತ್ತರ ಕಳುಹಿಸಿ, ಮುಂಚಿನಂತೆ ಇವುಗಳನ್ನು ಪರಾಮರಿಸುತ್ತಿರುವನು.

ಆಗಲವನು ಒಮ್ಮೆ ತನ್ನ ಜೋಕೆಯೊಳಗಿನ ಸಭೆಗಳಲ್ಲಿ ಪ್ರಯಾಣ ಮಾಡುತ್ತಿರಲು, ಒಂದು ಸಭೆಗೆ ಬಂದು, ಕಪಟವಿಲ್ಲದ ಹೃದಯದವನೂ ಸತ್ಯಕ್ಕೆ ಮೆಚ್ಚುವವನೂ ಆದಂಥ ಒಬ್ಬ ಮನೋಹರ ಯೌವನಸ್ಥನನ್ನು ಕಂಡು, ಪಿತೃಮಮಕಾರದಿಂದ ಸ್ವೀಕರಿಸಿ, ತಾನು ಹೋಗುವ ಸಮಯದಲ್ಲಿ ಅವನನ್ನು ಆ ಸಭೆಯ ಅಧ್ಯಕ್ಷನ ಅವಧಾನಕ್ಕೆ ಒಪ್ಪಿಸಿ ಕೊಟ್ಟನು. ಇವನು ಆ ಯುವನನ್ನು ಚಂದಾಗಿ ಕಾದು ಕೊಂಡು ಇದ್ದು, ಸ್ನಾನ ಕೊಟ್ಟು, ಈ ಸ್ನಾನವರವು ಇನ್ನು ಮುಂದೆ ಅವನನ್ನು ಭದ್ರ ಪಡಿಸುವದೆಂತ, ಆಲೋಚಿಸಿ ಕೊಂಡು, ಜೋಕೆ ಗೈಯುವದನ್ನು ಕೊಂಚ ಸಡ್ಲು ಮಾಡಿ ಬಿಟ್ಟನು. ಬಳಿಕ ಆ ಯೌವನಸ್ಥನು ಸ್ವಲ್ಪ ಕಾಲದ ಪರ್ಯಂತ ಸನ್ಮಾರ್ಗದಲ್ಲಿ ನಡೆದ ಮೇಲೆ ಪಟಿಂಗರ ಸಂಗತಿಯಲ್ಲಿ ಶಿಕ್ಕಿ ಕೊಂಡು, ಇವರಿಂದ ಮೈಗಳ್ಳತನಕ್ಕೂ ವಿಧವಿಧದ ದುಂದಾಟಕ್ಕೂ ನಡಿಸಿ ಕೊಂಡನು. ಅವನ ಹೃದಯದಲ್ಲಿ ಆರಂಭವಾಗಿದ್ದ ಹೊಸ ಜೀವವು ಹೆಚ್ಚು ಹೆಚ್ಚಿಗೆ ಅಡಗಿ ಹೋಯಿತು, ಪಾಪವೆಂಬ ಕಳೆಯು ಬೇಗ ಬೆಳ ಕೊಂಡು ಬಂತು. ಅವನೂ ಅವನ ಸಂಗಡಿಗರೂ ತಮ್ಮ ಬದುಕನ್ನು ಬಳಿಸಿ ಬಿಟ್ಟು, ಅಪಮಾನ ತಾಳಿ, ಮನಃಸಾಕ್ಷಿಯಿಂದ ಪೀಡಿತರಾಗಿ, ಓಡಿ ಹೋಗಿ, ಒಂದು ಕಾಡಿನಲ್ಲಿ ಲೂಟಿಯಿಂದ ಕಾಲಕ್ಷೇಪ ಮಾಡಲಿಕ್ಕೆ

1) ಪ್ರಕಟ. 1, 11. 2) ಅಪೊ. ಕ್ರಿ. 20, 15. 17; 2 ತೀಮೊ. 4, 20. 3) ಪ್ರಕಟ. 1, 9.

ಹತ್ತಿದ ಹಿಂದೆ ಯೋಹಾನನ ಆ ಸಾಕುಮಗನು ನಿರ್ಭಯದಲ್ಲಿಯೂ ಯುಕ್ತಿಯಲ್ಲಿಯೂ ತನ್ನ ಜತೆಗಳ್ಳರಿಗಿಂತ ಹೆಚ್ಚಿನವನಾದ್ದರಿಂದ ಇವರು ಅವನನ್ನು, ತಮ್ಮ ಮುಖ್ಯಸ್ಥನೆಂತ, ನೇಮಿಸಿ ಕೊಂಡರು. ಯೋಹಾನನು ಕೆಲವು ವರುಷದನಂತರ ತಿರಿಗಿ ಆ ಕಡೆಗೆ ಬಂದು, ಆ ಅಧ್ಯಕ್ಷನ ಹತ್ತರ ತನ್ನ ಮಗನನ್ನು ಕೇಳುವಾಗ ಅಧ್ಯಕ್ಷನು ನೆಟ್ಟುಸುರಿಟ್ಟು, ಅತ್ತು, ಸತ್ತು ಹೋದನೆಂತ, ಹೇಳಿದನು. ಅಪೊಸ್ತಲನು, ಹಾಗಾದರೆ ನನ್ನನ್ನು ಅವನ ಸಮಾಧಿಗೆ ಕರಕೊಂಡು ಹೋಗೆನ್ನಲಾಗಿ, ಆ ಅಧ್ಯಕ್ಷನು—ಅವನು ಸಮಾಧಿಯೊಳಗೆ ಇದ್ದರೆ ಒಂದು ವೇಳೆ ಸಂತೋಷ ಪಡ ಬಹುದಾಗುತ್ತಿತ್ತು; ಅಕಟಾ, ಅವನು ಇನ್ನೂ ಶಾರೀರಕ ಜೀವದಲ್ಲಿದ್ದಾನೆ, ಆದರೂ ದೇವರನ್ನೂ ವಿಶ್ವಾಸವನ್ನೂ ಬಿಟ್ಟದರಿಂದ ಸತ್ತಿದ್ದಾನೆಂದೆನು ಎಂತ, ನಡದ ದುಃಖಕರವಾದ ಸಂಗತಿಗಳನ್ನು ವಿವರಿಸಿದನು. ಆಗ ಯೋಹಾನನು ಪಿತೃಮಮತೆಯಿಂದ ಪ್ರೇರಿತನಾಗಿ, ಕುದುರೆ ಹತ್ತಿ ಕೊಂಡು, ಒಬ್ಬನೇ ಆಗಿ ಆ ಕಳ್ಳರಾಳುವ ಕಾಡಿಗೆ ಹೋದನು. ಇವರು ಅವನನ್ನು ಕಂಡು, ಅವನ ಮೇಲೆ ಬಿದ್ದು, ಅವನನ್ನು ಬಂಧಿಸುತ್ತಲೇ, ನನ್ನನ್ನು ನಿಮ್ಮ ಮುಖ್ಯಸ್ಥನ ಬಳಿಗೆ ಕರದೊಯ್ಯಿರಿ! ಎಂತ, ಬಿನ್ನವಿಸಿದನು. ಅಷ್ಟರಲ್ಲಿ ಆ ಕ್ರೂರ ಮುಖ್ಯಸ್ಥನು ಸರ್ವಾಯುಧವುಳ್ಳವನಾಗಿ ಒಂದು ದಿಂಬದಲ್ಲಿ ನಿಂತು ಕೊಂಡು, ತನ್ನ ಆಳುಗಳು ಎಳ ಕೊಂಡು ಬರುವ ಶೆರೆಯವನ ಮುಖವನ್ನು ದೂರದಿಂದ ಪರೀಕ್ಷಿಸಿ, ಅಪೊಸ್ತಲನ ಗುರ್ತು ಹಿಡಿದು, ಲಜ್ಜೆಯುಳ್ಳವನಾಗಿ, ಓಡಿ ಹೋಗಲು, ಯೋಹಾನನು ತೀವ್ರವಾಗಿ ಅವನ ಬೆನ್ನು ಹತ್ತಿ ಹೋಗಿ—ಎಲೇ ಮಗನೇ, ಆಯುಧವಿಲ್ಲದೆ ಬಂದು ನಿಸ್ತ್ರಾಣಿಯಾದ ನಿನ್ನ ಮುದಿತಂದೆಯ ಕಡೆಯಿಂದ ಯಾಕೆ ಓಡುತ್ತಿದ್ಧಿ? ನೀನು ಇನ್ನಾದರೂ ರಕ್ಷಣ ಹೊಂದ ಬಹುದು, ಧೈರ್ಯ ಗೊಳ್ಳು; ಕ್ರಿಸ್ತನೇ ನನ್ನನ್ನು ಕಳುಹಿಸಿದ್ದಾನೆಂತ, ನಂಬಿ ಕೋ; ನಿಲ್ಲು, ನನ್ನ ಪ್ರಾಣಪುತ್ರನೇ! ಎಂತ, ಕೂಗಿದಾಗ, ಆ ಯೌವನಸ್ಥನು ನಿಂತು ಕೊಂಡು, ಅಧೋಮುಖನಾಗಿ, ಬಹಳ ಕಣ್ಣೀರು ಬಿಡುವವನಾದನು. ಅಪೊಸ್ತಲನು ಅವನನ್ನು ಅಪ್ಪಿ ಕೊಂಡು, ಮುದ್ದಿಟ್ಟು, ಕಾಡಿನಿಂದ ತಿರಿಗಿ ಸಭೆಗೆ ಕರ ಕೊಂಡು ಬಂದು, ಅವನನ್ನು ಕುರಿತು ಬಿಡದೆ ದೇವರಿಗೆ ಪ್ರಾರ್ಥಿಸಿ, ಅವನಿಗೆ ದಣಿಯದೆ ಬುದ್ಧಿ ಹೇಳಿದ ಮೇಲೆ ನಿಜ ಮಾನಸಾಂತರ ಪಟ್ಟ ಅವನನ್ನು ಪುನಃ ಸಭೆಯೊಳಗೆ ಶೇರಿಸಿದನು. ಅಂದಿನಿಂದ ತನ್ನ ಮರಣದ ತನಕ ಆ ಶಿಷ್ಯನು ತನ್ನ ಕರ್ತನಾದ ಕ್ರಿಸ್ತನ ಚಿತ್ತಕ್ಕೆ ತಕ್ಕ ಹಾಗೆ ತಪ್ಪದೆ ನಡ ಕೊಳ್ಳುತ್ತಾ ಇದ್ದನು.

ಆ ಅಪೊಸ್ತಲನ ವಿಷಯವಾದ ಮತ್ತೊಂದು ರಮಣೀಯ ವದಂತಿ ಏನಂದರೆ—ತಾನು ಸಾಕಿ ಕೊಂಡು ಬಂದ ಒಂದು ತಿತ್ತಿರಿ ಪಕ್ಷಿಯನ್ನು ಅವನು ಒಮ್ಮೆ ಕೈಯಲ್ಲಿ ಹಿಡು ಕೊಂಡು, ಬೆನ್ನು ಒರಸುತ್ತಿರಲು, ಒಬ್ಬ ಬೇಟೆಗಾರನು ಬಂದು, ನೋ

ಡಿ, ವಿಸ್ಮಯ ಪಟ್ಟು—ಇದೇನು? ಅಂಥಾ ದೊಡ್ಡ ಪರಿಶುದ್ಧ ಮನುಷ್ಯನು ಇಂಥಾ ಹುಡುಗರಾಟಕ್ಕೆ ಮೆಚ್ಚುವದುಂಟೇ? ಎಂತ, ಹೇಳಿದ್ದಕ್ಕೆ ಯೋಹಾನನು, ನಿನ್ನ ಕೈಯಲ್ಲಿರುವದೇನು? ಎಂತ, ಕೇಳಿದನು. ಇವನು, ಒಂದು ಬಾಣವಲ್ಲವೋ? ಎನ್ನಲಾಗಿ, ಅವನು, ಯಾಕೆ ಅದನ್ನು ಏರಿಸಲಿಲ್ಲ? ಎಂದು, ಕೇಳಿದನು. ಆ ವ್ಯಾಧನು ಪ್ರತ್ಯುತ್ತರವಾಗಿ, ಅದು ಯಾವಾಗಲೂ ಏರಿಸಿದ್ದರೆ ಅದರ ಬಾರು ಬಿಗಿ ತಪ್ಪಿ ಹೋಗುವದೇ ನಿಶ್ಚಯ! ಎನ್ನಲು, ಅಪೊಸ್ತಲನು—ಹಾಗಾದರೆ, ವ್ಯಾಧನೇ, ನಾನು ಉದ್ಯೋಗಕ್ಕೆ ಹೊಸ ತ್ರಾಣ ಪಡ ಕೊಳ್ಳುವದಕ್ಕಾಗಿ ನನ್ನ ಆತ್ಮವನ್ನು ಈ ಪ್ರಕಾರವಾಗಿ ಸ್ವಲ್ಪ ವಿಶ್ರಾಂತಿ ಪಡಿಸಿದರೆ ಆಶ್ಚರ್ಯವೇನು? ಎಂತ, ವಿನಯದಿಂದ ನುಡಿದನು.

ಕ್ರೈಸ್ತರು ದೇವಾರಾಧನೆಗೆ ಕೂಡುವಲ್ಲಿ ಅವರ ಎಡೆಗೆ ಬಂದು ಪ್ರಸಂಗ ಗೈಯುವದು ಯೋಹಾನನಿಗೆ ಯಾವಾಗ್ಯೂ ಬಹಳ ಸುಖಕರವಾದದ್ದೇ. ತನ್ನ ಜೀವಾಂತದ ಕಡೆಗೆ ಅವನು ನಿರ್ಬಲತ್ವದ ದೆಸೆಯಿಂದ ಅವರ ಬಳಿಗೆ ನಡೆದು ಹೋಗಲಾರದ ಕಾರಣ ಅನೇಕ ಸರ್ತಿ ಒಂದು ವಾಹನದಲ್ಲಿ ಏರಿ ಕೊಂಡು ಬಂದು, ಬೇರೆ ಮಾತಿಗೆ ಇನ್ನು ತ್ರಾಣ ಸಾಲದೆ, ಪ್ರಿಯ ಮಕ್ಕಳೇ, ಒಬ್ಬರಿಗೊಬ್ಬರು ಪ್ರೀತಿ ಮಾಡಿರಿ! ಎಂಬ ಮಧುವಾದ ವಚನವನ್ನು ನಿರ್ಧಾರವಾಗಿ ಸಾರಿ, ಬಿಟ್ಟನು. ಈ ಒಂದೇ ಮಾತನ್ನು ಯಾಕೆ ತಿರಿಗಿ ತಿರಿಗಿ ಹೇಳುತ್ತೀರಿ? ಎಂತ, ಜನರು ವಿಚಾರಿಸುವಾಗ ಯೋಹಾನನು ಅಂದದ್ದೇನು—ಇದೇ ನನ್ನ ಕರ್ತನ ಆಜ್ಞೆ[1]; ಇದೊಂದು ಆದರೆ ಎಲ್ಲಾ ಆದ ಹಾಗಾಯಿತು.

ಅಪೊಸ್ತಲನಾದ ಯೋಹಾನನು ಪ್ರಕಟನಗ್ರಂಥವನ್ನಲ್ಲದೆ ಒಂದು ಸುವಾರ್ತಾಗ್ರಂಥವನ್ನೂ ಮೂರು ಪತ್ರಿಕೆಗಳನ್ನೂ ಸಹ ಬರೆದನು.

ಕ್ರಿಸ್ತಶಕದ 98ನೇ ವರುಷದಿಂದ 117ನೇದರ ವರೆಗೆ ಆಳಿದ ತ್ರಾಯಾನನೆಂಬ ರೋಮಿಾಯ ಕೈಸರನ ಆಳಿಕೆಯ 3ನೇ ವರುಷದಲ್ಲಿ ಯೋಹಾನನು ಎಫೆಸದಲ್ಲಿ ಬಹಳ ಮುದುಕನಾಗಿ ತೀರಿ ಕೊಂಡನು; ಆ ಪಟ್ಟದಲ್ಲೇ ಅವನನ್ನು ಹುಗಿದರು. ಬೇರೆ ಅಪೊಸ್ತಲರೆಲ್ಲರು ಅವನಿಗೆ ಮುಂಚೆ ತೀರಿ ಹೋಗಿದ್ದರು; ಅವನ ಮರಣದಲ್ಲಿ ಅಪೊಸ್ತೊಲಿಕ ಕಾಲವು ಮುಗಿಯಿತು.

## 6. ಅಪೊಸ್ತೊಲಿಕ ಕ್ರೈಸ್ತಸಭೆಯ ಅಂತಃಸ್ಥಿತಿಗತಿಯು.

ಪಲೇಸ್ತೀನ ದೇಶದ ಹೊರಗೂ ಒಳಗೂ ಯೇಸುನಾಥನ ವಿಶ್ವಾಸಿಗಳಾದವರು ವಾಗ್ಲಿಖಿತರೂಪವಾಗಿ ಅಪೊಸ್ತಲರಿಂದ ಉಪದೇಶ ಪಡ ಕೊಳ್ಳುತ್ತಿರುವರು.

1) ಯೋಹಾ. 13, 34. 35.

ಪರಸ್ಪರ ಪ್ರೀತಿಯು ಅವರಲ್ಲಿ ಬಹಳ; ಸ್ವಲ್ಪ ಹೆಚ್ಚು ಕಡಿಮೆ ಎಲ್ಲರೂ ಒಂದೇ ಹೃದಯವೂ ಒಂದೇ ಆತ್ಮವೂ ಆಗಿರಲಿಕ್ಕೆ ಮನಃಪೂರ್ವಕವಾಗಿ ಪ್ರಯತ್ನಿಸುತ್ತಿರುವರು. ತಮ ತಮಗೆ ದಾನಧರ್ಮಸಹಾಯವನ್ನು ಮಾಡುವದು ಅವರಿಗೆ ಸಂತೋಷ[1]. ಬಹು ಕೆಟ್ಟಂಥಾದ್ದೂ ನಾಶಕ್ಕೊಳ ಬೀಳುವಂಥಾದ್ದೂ ಆದ ಲೋಕದೊಳಗೆ ತಾವು ದೇವರಾದು ಕೊಂಡ ಪರಿಶುದ್ಧ ಪ್ರಜೆಯು ಎಂತ, ನಂಬಿ ಕೊಂಡಿರುವರು; ತಾವು ನಡಾವಳಿಯಲ್ಲಿ ಏನೂ ಕಳಂಕವಿಲ್ಲದಂಥವರು ಎಂಬ ಹಾಗಲ್ಲ, ಯೇಸು ಕ್ರಿಸ್ತನ ವಿಮೋಚಕವಾದ ರಕ್ತವು ತಮ್ಮ ಪಾಪಶಾಪವನ್ನು ನಿರ್ಮಲವಾಗಿ ತೊಳೆದು ಬಿಟ್ಟಿತು, ಹೊರ್ತಾಗಿ ಆ ರಕ್ತದಲ್ಲಿಯಣ ಬಲದ ಮೂಲಕ ನಡತೆಯಲ್ಲಿ ಸಹ ಪರಿಶುದ್ಧರಾಗಲಿಕ್ಕೂ ಈ ಮಹಿಮೆಯುಳ್ಳ ಗುರಿಯ ಕಡೆಗೆ ಎಲ್ಲಾ ಶಕ್ತಿಯಿಂದ ಓಡಿ ಹೋಗಲಿಕ್ಕೂ ತಾವು ಹಂಗಿಗರು ಎಂಬ ಹಾಗೆ ಆ ನಂಬಿಕೆಯ ಅಭಿಪ್ರಾಯವು. ಅವರಲ್ಲಿ ಹೆಚ್ಚು ಜನರು ಪರಿಪೂರ್ಣನೀತಿಕರ್ತನಾದ ಯೇಸುವಿನ ಸ್ತೋತ್ರಕ್ಕಾಗಿ ನಡ ಕೊಳ್ಳುತ್ತಿರುವರು. ತಿದ್ದುಪಾಟ ಮಾಡಿಸಿ ಕೊಳ್ಳಲೊಲ್ಲದಂಥ ಅಸಂಭಾವಿತರನ್ನು ಸಭೆಯೊಳಗಿಂದ ಬಹಿಷ್ಕರಿಸುತ್ತಿರುವರು[2]; ಅಂಥವರು ದುಃಖ ಗೊಂಡು, ನಿಜ ಮಾನಸಾಂತರ ಪಟ್ಟು, ಜೀವಿತದಲ್ಲಿ ಪರಿಣಾಮದವರಾದ ಪಕ್ಷದಲ್ಲಿ ಮಾತ್ರ ಅದರಲ್ಲಿ ತಿರಿಗಿ ಅಂಗೀಕೃತರಾಗುವರು[3]. ಸಭೆಗಳಲ್ಲಿ ಏಳುವ ಹಾಗಿರುವ ಸುಳ್ಳು ಬೋಧಕರಿಗೂ ಸುಳ್ಳುಬೋಧನೆಗಳಿಗೂ ಅಪೊಸ್ತಲರು ಸರ್ವಥಾ ಅಡ್ಡಗಾಲು ಹಾಕುತ್ತಿರುವರು[4].

ಸಮಸ್ತ ಸಭೆಗಳ ಮೇಲ್ಗಾವಲಿಯವರೂ ಸದ್ಬೋಧನಾಧಾರಕರೂ ಆದ ಅಪೊಸ್ತಲರಿಗೆ ಒಂದೊಂದು ಸಭೆಯಲ್ಲಿ ಸಹಾಯಕರಾಗಿ ಪ್ರೆಸ್ಬುತರೆಂಬ ಹಿರಿಯರು ಇರುವರು; ಇವರಿಗೆ ಎಪಿಸ್ಕೊಪರು ಅಂದರೆ ಮೇಲ್ಜಾಗ್ರತೆ ನೋಡುವವರೆಂಬ ಅಧ್ಯಕ್ಷರೆಂತಲೂ ಹೆಸರು[5]. ಹಿರಿಯರ ಸಹಾಯಕರು ಎವಂಗೆಲಿಸ್ತರೆಂಬ ಪ್ರಯಾಣಿಕರಾದ ಸುವಾರ್ತಿಕರೂ[6] ಗಂಡು ಮತ್ತು ಹೆಣ್ಣು ದಿಯಕೊನರೆಂಬ ಸಭಾಸೇವಕರೂ; ದಿಯಕೊನರು ಹೆಚ್ಚಾಗಿ ದರಿದ್ರರನ್ನು ಸಭಾಭಂಡದಿಂದ ಪೋಷಿಸುವ ಉದ್ಯೋಗ[7] ನಡಿಸುತ್ತಿದ್ದರೂ ಅವರೊಳಗಿನ ಗಂಡಸರು ವಾಕ್ಯಸಂಗಿಕರು ಕೂಡ

---

1) 36ನೇ, 43 ನೇ ಪಾನು ನೋಡು. ಅಪೊ. ಕ್ರಿ. 2, 44. 45; 4, 35; 6, 1—6. 2) 1 ಕೊರಿ. 5, 2—13; 1 ತೀಮೊ. 1, 20. 3) 2 ಕೊರಿ. 2, 5—8; ಗಲಾತ. 6, 1. 4) ಯಕೋಬನ ಪತ್ರಿಕೆ; ಪ್ರಕಟ. 2, 6. 14. 15; 1 ಯೋಹಾ. 4, 2. 3; 2 ಯೋಹಾ. 7; ಕೊಲೊ. 2, 8. 16 ಆದಿ; 1 ಥೆಸ್ಸ. 4, 13 ಆದಿ; 2 ತೀಮೊ. 2, 18; ಇತ್ಯಾದಿ. 5) ಅಪೊ. ಕ್ರಿ. 20, 17. 28; ತಿತ. 1, 5—7; ಫಿಲಿ. 1, 1; 1 ತೀಮೊ. 3, 1—7; 2 ಯೋಹಾ. 1, 1; 1 ಪೇತ್ರ. 5, 1. 6) ಅಪೊ. ಕ್ರಿ. 21, 8; ಎಫೆ. 4, 11; 2 ತೀಮೊ. 4, 5. 7) 30ನೇ, 31ನೇ, 35ನೇ ಪಾನು.

ಆಗಿರುವರು[1]. ಸಭೆಗಳಲ್ಲಿ ಅಧ್ಯಕ್ಷತಾಸಂಬಂಧಿಗಳಾದವರೆಲ್ಲರಿಗೂ ಬಡವರಿಗೂ ಜೀವನಾಂಶವು ಸಭ್ಯರ ಸ್ವೇಚ್ಛಾಮಿಲಿತ ಭಂಡದಿಂದ ಸಂದರ್ಭಾನುಗುಣವಾಗಿ ಸಲುವಳಿಯಾಗುತ್ತಿರುವದು[2]. ಕ್ರಿಸ್ತನಿಂದ ನಿರ್ಮಿತವಾದ ಸ್ನಾನ ರಾತ್ರಿಭೋಜನ ಎಂಬ 2 ಪರಿಶುದ್ಧ ಸಂಸ್ಕಾರಗಳನ್ನು ನಡಿಸುವದಕ್ಕೂ ಅಪೊಸ್ತೊಲಿಕ ಬೋಧನೆಯನ್ನೂ ಪ್ರಾರ್ಥನೆಗಳನ್ನೂ ಬಂಧಮೋಕ್ಷವಾಚನವನ್ನೂ ಹೇಳುವದಕ್ಕೂ ಇವರೇ ಮಾತ್ರ ಯೋಗ್ಯರೆಂತ, ವಿಶೇಷಿಸಿರುವದೊಂದು ಪ್ರತ್ಯೇಕ ಕುಲವು ಅಪೊಸ್ತೊಲಿಕ ಕಾಲದಲ್ಲಿ ಕಾಣುವದಿಲ್ಲ[3]; ಹ್ಯಾಗಂದರೆ ನಂಬಿಗಸ್ತರಾದ ಸರ್ವ ಕ್ರೈಸ್ತರು ಏಕೀಭಾವದ ರಾಜಯಾಜಕತ್ವಕುಲವೆನ್ನಿಸಿ ಕೊಳ್ಳುವರು[4], ಅಂದರೆ ಪ್ರಾಚೀನದಲ್ಲಿ ಯೆಹೂದ್ಯರೆಲ್ಲರಿಗೂ[5] ಯೆಹೂದ್ಯ ಯಾಜಕರಿಗೂ ದೇವರಾಳ್ತನದೊಳಗೆ ಇರುತ್ತಿದ್ದಂಥ ಮಂಗಳ ಸ್ಥಿತಿಯೂ ಅಧಿಕಾರವೂ ಆತ್ಮೀಯ ರೀತಿಯಾಗಿ ಒಬ್ಬೊಬ್ಬ ಸತ್ಕ್ರೈಸ್ತನಿಗೂ ಇರುವದು. ಪರಿಶುದ್ಧಾತ್ಮದಿಂದ ಪ್ರೇರಿತರಾದ ಎಲ್ಲಾ ಕ್ರೈಸ್ತ ಪುರುಷರೂ ಸಭಾಸಂಘಗಳಲ್ಲಿ ಸಹ ಪ್ರಾರ್ಥಿಸುತ್ತಾ ಬೋಧಿಸುತ್ತಾ ವಿಶ್ವಾಸಕ್ಕೆ ನೆಲೆಗೊಳ್ಳಿಸುತ್ತಾ ಇರಲಿಕ್ಕೆ ಏನೂ ಅಡ್ಡಿ ಇರುತ್ತಿದ್ದಿಲ್ಲ[6]. ಆದಾಗ್ಯೂ ಸಭೆ ದೇವಾರಾಧನಾಸಮಾಗಮಗಳೆರಡರಲ್ಲಿ ಸಮಸ್ತವೂ ಒಳ್ಳೇ ಮರ್ಯಾದೆಯಿಂದಲೂ ಕ್ರಮದಿಂದಲೂ ನಡೆಯುವಂತೆ[7] ಅಪೊಸ್ತಲರೂ ಅವರು ಅಧಿಕಾರ ಕೊಟ್ಟಂಥವರೂ ಪರಿಶುದ್ಧಾತ್ಮದ ನಾಯಕತ್ವ ಪಡೆದು[8] ಆ ಹಿರಿಯರನ್ನು ನೇಮಿಸಿಟ್ಟರು[9]. ಇವರು ದಾನಧರ್ಮಗಳನ್ನು ತೆಕ್ಕೊಳ್ಳುತ್ತಾ[10], ಬೋಧನೇ ಶುದ್ಧಿಗೋಸ್ಕರ ಜಾಗ್ರತೆ ಪಡುತ್ತಾ[11], ತಾವಾದರೂ ಬೋಧಿಸುತ್ತಾ[12], ಪ್ರತಿಕೂಲವಾದಿಗಳಿಗೆ ಶಿಕ್ಷಿಸುತ್ತಾ[13], ಸಾಧಾರಣ ಸಭ್ಯರ ಸಂಗಡ ದೊಡ್ಡ ಸಂಘವಾಗಿ ಕೂಡಿ ವ್ಯವಸ್ಥೆಗಳನ್ನು ಮಾಡುತ್ತಾ[14] ಇದ್ದು, ಈ ಪ್ರಕಾರ ತಮಗೊಪ್ಪಿಸಿರುವಂಥ ಸಭೆ ಎಂಬ ಮಂದೆಯನ್ನು ಮೇಯಿಸುತ್ತಾ[15] ಇರುವರು. ಒಂದು ವಿಶೇಷ ಕಾರ್ಯಕ್ಕೆ ನೇಮಿತರಾಗುವಂಥ ಕ್ರೈಸ್ತ ಸಹೋದರರಿಗೆ ಒಂದು ವಿಶೇಷ ಆತ್ಮವರ ಕೊಡುವದಕ್ಕೋಸ್ಕರ ಪ್ರಾರ್ಥಿಸಿ ಹಸ್ತಾಧಾನ ಗೈಯುವದು ಸಹ ಹಿರಿಯರ ಋಣವು[16].

---

1) ಅಪೊ. ಕ್ರಿ. 6, 1—6; 6, 8 ಆದಿ; 8, 5. 26 ಆದಿ; ರೋಮಾ. 16, 1; 1 ತೀಮೊ. 5, 2. 9. 10. 2) 1 ತೀಮೊ. 5, 17. 18; 1 ಕೊರಿ. 9, 13. 14. 3) ಅಪೊ. ಕ್ರಿ. 1, 14; 2, 42. 46; 11, 20—23; 10, 23. 48; 1 ಕೊರಿ. 1, 17; 2 ಕೊರಿ. 2, 6. 7. 10. 4) ಎಬ್ರೇ. 4, 16; 1 ಪೆತ್ರ. 2, 5. 9; ಪ್ರಕಟ. 1, 6. 5) 2 ಮೋಶೆ. 19, 6. 6) 1 ಕೊರಿ. 12; 14; 1 ತೀಮೊ. 2, 8. 7) 1 ಕೊರಿ. 14, 33. 40. 8) ಅಪೊ. ಕ್ರಿ. 20, 28. 9) ಅಪೊ ಕ್ರಿ. 11, 30; 14, 23; 20, 17; ತಿತ. 1, 5. 10) ಅಪೊ. ಕ್ರಿ. 11, 30. 11) ಅಪೊ. ಕ್ರಿ. 20, 29—31; 1 ತೀಮೊ. 1, 3—7. 12) ಅಪೊ. ಕ್ರಿ. 6, 9. 10; 1 ತೀಮೊ. 5, 17. 13) ತಿತ. 1, 9. 14) ಅಪೊ. ಕ್ರಿ. 15, 6. 22. 15) 1 ಪೆತ್ರ. 5, 1. 2. ಅಪೊ. ಕ್ರಿ. 20, 28. 16) 2 ತೀಮೊ. 1, 6; 1 ತೀಮೊ. 4, 14; 5, 22; ಅಪೊ. ಕ್ರಿ. 6, 6.—8, 18; 19, 6 ಸರಿ ನೋಡು.

ಪ್ರಾರ್ಥನೆಗೂ ದೇವವಾಕ್ಯಶ್ರವಣಕ್ಕೂ ದೇವಸ್ತೋತ್ರಗಾಯನಕ್ಕೂ ಕ್ರೈಸ್ತರು ದಿನಾಲು[1] ಸ್ವಂತ ಮನೆಗಳಲ್ಲಿ ಕೂಡುತ್ತಿರುವರು[2]; ಆವಾಗ ಪ್ರತ್ಯೇಕವಾದ ಕ್ರೈಸ್ತ ದೇವಾಲಯಗಳು ಇರಲಿಲ್ಲ. ರಾತ್ರಿಭೋಜನ ಸಹ ಆಚರಿಸಲಾಗುವ ಅಗಪೆಗಳೆಂಬ ಮಿತ್ರಭೋಜನಗಳು ಅನೇಕ ಸರ್ತಿ, ಹೆಚ್ಚಾಗಿ ಆದಿತ್ಯವಾರಗಳಲ್ಲಿ[3], ಆಗುತ್ತಿರುವವು[4]. ಸಹೋದರಪ್ರೀತಿಯ ಸಂಜ್ಞೆಯಾಗಿ ಸಭಾಸಂಘಗಳಲ್ಲಿ ಸಹೋದರಮುದ್ದು ನಡೆಯುತ್ತಿರುವದು[5]. ಪಸ್ಕವೆಂಬದು ವಾರ್ಷಿಕ ಹಬ್ಬವು; 4ನೇ ಕ್ರಿಸ್ತಶತಮಾನದ ವರೆಗೆ ಇದು ಕ್ರಿಸ್ತನ ಮರಣದ ಮತ್ತು ಪುನರುತ್ಥಾನದ ಜ್ಞಾಪಕಕ್ಕೋಸ್ಕರ ಮಾಡಲಾಯಿತು[6]. ಕ್ರಿಸ್ತನ ಪುನರುತ್ಥಾನದಿವಸವೆನ್ನಿಸುವ ಪ್ರತ್ಯಾದಿತ್ಯವಾರವು ಬೋಧನೆಗೂ ರಾತ್ರಿಭೋಜನಾಚರಣಕ್ಕೂ ವಿಶೇಷಿಸಿ ನೇಮಿಸಿರುವದು[7]. ಉಪವಾಸವು ಪ್ರಾರ್ಥನೆಗೆ ತಕ್ಕ ಸಾಹಿತ್ಯವೆನ್ನಿಸುತ್ತಿರುವದು[8]; ಅದಲ್ಲದೆ, ಇನ್ನು ಸರ್ವತ್ರ ಬೇಗವಾಗಿ ಬಂದೊದಗಲಿಕ್ಕಿರುವ ಕಷ್ಟಕಾಲದ ದೆಸೆಯಿಂದ ಅವಿವಾಹಿತ್ವವೇ ಒಳ್ಳೇದೆಂತ, ಪೌಲ ಅಪೊಸ್ತಲನ ಬೋಧನೆಯು[9]. ಆದರೂ ವಿಶೇಷ ಹಬ್ಬಗಳನ್ನೂ ಉಪವಾಸವನ್ನೂ ಅವಿವಾಹಿತ್ವವನ್ನೂ ಕುರಿತು ಯಾರಾದರೂ ಬದ್ಧರಾಗಿರುವದಿಲ್ಲ ಎಂಬ ನಿಯಮವಿರುವದು[10].



1) ಅಪೊ. ಕ್ರಿ. 2, 42. 46. 47; 5, 42. 2) ರೋಮಾ. 16, 5; 1 ಕೊರಿ. 16, 19; ಫಿಲೇಮೋ. 2; ಕೊಲೊ. 4, 15—16; 3, 16; 1 ತೀಮೊ. 4, 13; 1 ಥೆಸ್ಸ. 5, 27. 3) ಅಪೊ. ಕ್ರಿ. 20, 7. 4) ಅಪೊ. ಕ್ರಿ. 2, 42—46; 20, 7; ಯೂದ. 12; 1 ಕೊರಿ. 11, 20 ಆದಿ. 5) ರೋಮಾ. 16, 16; 1 ಪೆತ್ರ. 5, 14. 6) 1 ಕೊರಿ. 5, 6—8; 25ನೇ ಪಾನು. 7) ಅಪೊ. ಕ್ರಿ. 20, 7; 1 ಕೊರಿ. 16, 2; ಪ್ರಕಟ. 1, 10. 8) ಅಪೊ. ಕ್ರಿ. 13, 2—3; 14, 23. 9) 1 ಕೊರಿ. 7, 26. 10) ಗಲಾ. 4, 9—11; ಕೊಲೊ. 2, 16; ರೋಮಾ. 14, 17; 1 ಕೊರಿ. 7; 1 ತೀಮೊ. 4, 3.

# II. ಕ್ರೈಸ್ತತ್ವವು ರಾಜ್ಯಮತವಾಗದಿದ್ದಾಗಿನ

# ಹಿಂಸಾಕಾಲ.

(ಕ್ರಿಸ್ತಶಕದ 100ನೇ ವರುಷದಿಂದ 323ನೇದರ ವರೆಗೆ.)

---

## 7. ಅಪ್ತೊಸ್ತೊಲಿಕ ಕಾಲವನ್ನು ಹೊಂದಿದ ಹಿಂಸಾಕಾಲದಲ್ಲಿ ಕ್ರೈಸ್ತ ಸಭೆಯು ಮೂರ್ತಿಪೂಜಕರಲ್ಲಿ ವಿಸ್ತರಿಸಿದ ಸಂಗ್ರಹವು.

### 1. ಅಸಿಯ ಖಂಡ.

#### ಸುರಿಯ, ಸಣ್ಣ ಅಸಿಯ ಎಂಬ ದೇಶಗಳು.

ಪಲೇಸ್ತೀನ ದೇಶಕ್ಕೆ ಈಶಾನ್ಯದಲ್ಲಿರುವ ಸುರಿಯ ದೇಶದಲ್ಲಿಯೂ[1] ಇದಕ್ಕೆ ಉತ್ತರಪಶ್ಚಿಮ ದಿಕ್ಕಿನಲ್ಲಿರುವ ಸಣ್ಣ ಅಸಿಯ ದೇಶದಲ್ಲಿಯೂ ಮೊದಲಿನ ಕ್ರಿಸ್ತಶತಮಾನದೊಳಗೆ ಸುವಾರ್ತೆಯು ಪ್ರಸಂಗವಾಗಿ, ಬಹಳ ಜನರು ವಿಶ್ವಾಸಿಗಳಾದದ್ದು ಹಿಂದೆ ಹೇಳೋಣವಾಯಿತು[2]. ಅಲ್ಲಲ್ಲಿಯ ಕ್ರೈಸ್ತ ಸಭೆಗಳು ಬೇರೆ ಬೇರೆ ಉತ್ತಮ ಅಧ್ಯಕ್ಷರ ಕೆಳಗೆ ಬೆಳ ಕೊಂಡು ಬರುತ್ತಿದ್ದವು.

#### ಪಾರ್ಥಿಯ ಸಾಮ್ರಾಜ್ಯವು.

ಸುರಿಯ ದೇಶಕ್ಕೆ ಪೂರ್ವದಲ್ಲಿ ಉಫ್ರಾತು ಎಂಬ ನದಿಯು ಹರಿದು, ಕೈಸರರ ಕಾಲದಲ್ಲಿ ರೋಮಾಯ ಸಾಮ್ರಾಜ್ಯದ ಮೂಡಣ ಮೇರೆಯಾಗಿತ್ತು. ಈ ನದಿಗೂ ತಿಗ್ರಿಸ್ ಎಂಬ ನದಿಗೂ ನಡುವೆ ಉತ್ತರಪಶ್ಚಿಮದಲ್ಲಿ ಮೆಸೊಪೊತಮಿಯವು; ಇದಕ್ಕೆ ದಕ್ಷಿಣಪೂರ್ವದಲ್ಲಿ ಬಬೆಲು ಹತ್ತುತ್ತದೆ; ತಿಗ್ರಿಸ್ ನದಿಯ ಪೂರ್ವದಲ್ಲಿ ಅಸ್ಸುರಿಯವು, ಅದರ ದಕ್ಷಿಣಪೂರ್ವದಲ್ಲಿ ಎಲಮೂ ಮೂಲಪಾರ್ಶಿಸ್ಥಾನವು; ಅಸ್ಸುರಿಯಕ್ಕೆ ಉತ್ತರದಲ್ಲಿ ಅರ್ಮಿನಿಯವು; ಇದಕ್ಕೆ ಉತ್ತರದಲ್ಲಿ ಇಬೇರಿಯವೆಂಬ ಗೆಯೋರ್ಗಿಯವು[3]; ಅಸ್ಸುರಿಯಕ್ಕೆ ಪೂರ್ವದಲ್ಲಿಯೂ ಮೂಲ ಪಾರ್ಶಿಸ್ಥಾನಕ್ಕೆ

---

1) 35ನೇ ಪಾನು. 2) 31 ಆದಿ ಪಾನೂ 65ನೇದೂ ನೋಡು. 3) 7ನೇ ಪಾನು ನೋಡು.

ಉತ್ತರದಲ್ಲಿಯೂ ಮೇದಿಯವು; ಮೇದಿಯಕ್ಕೆ ಉತ್ತರಪೂರ್ವದಲ್ಲಿ ಮೂಲಪಾರ್ಥಿಯವು; ಮೂಲಪಾರ್ಥಿಯಕ್ಕೆ ಪೂರ್ವದಲ್ಲಿ ಬಾಫ್ಕಿಯು (ಬಾಕ್ತ್ರಿಯವು); ಈ ಬಾಫ್ಕಿ ದೇಶವು ಹಿಂದು ದೇಶದ ಸಿಂಧು ನದಿಯ ಉತ್ತರ ಭಾಗಕ್ಕೆ ಹೊಂದುತ್ತದೆ. ಈ ಹೇಳಿದ ಪ್ರಕಾರವಾಗಿ ಒಂದಕ್ಕೊಂದು ಹೊಂದಿರುವ ಸುಮಾರು ಆ ಎಲ್ಲಾ ದೇಶಗಳು ಕ್ರಿಸ್ತಶಕಕ್ಕೆ ಮುಂಚಿನ 256ನೇ ವರ್ಷದಲ್ಲಿ ಮೂಲಪಾರ್ಥಿಯದವರಿಗೆ ಅಂದರೆ ಪಾರದರೆಂಬ[1] ಪಾರ್ಥರಿಗೆ ಒಳಗಾಗಿದ್ದವು. ಈ ಸಾಮ್ರಾಜ್ಯದವರಿಗೂ ರೋಮಿಾಯ ಕೈಸರರಿಗೂ ಎಡೆ ಬಿಡದೆ ಜಗಳ; ಮೇರೆಯ ಶೀಮೆಗಳು ಒಮ್ಮೆ ಇವರ ಒಮ್ಮೆ ಅವರ ಕೈಗೆ ಶಿಕ್ಕುತ್ತಾ ಇದ್ದವು. ತರುವಾಯ ಕ್ರಿ. ಶ[2]. 226ನೇ ವರ್ಷದಲ್ಲಿ ಅರ್ತಷಷ್ಟನೆಂಬ ಒಬ್ಬ ಮೂಲಪಾರ್ಶಿಸ್ಥಾನದವನು ದಂಗೆ ತೆಗೆದು, ಪಾರದರನ್ನು ಜಯಿಸಿ, ಉಫ್ರಾತು ನದಿಯಿಂದ ಹಿಂದು ದೇಶದ ವರೆಗಿರುವ ಹೆಚ್ಚು ಕಡಿಮೆ ಆ ಸಮಸ್ತ ದೇಶಗಳನ್ನು ತನ್ನವುಗಳಾಗ ಮಾಡಿ ಕೊಂಡು, ತಿಗ್ರಿಸ್ ನದಿಯ ಬಳಿಯ ಸೆಲ್ಯುಕೀಯ, ಕ್ತೇಸಿಫೋನು ಎಂಬ ಪಟ್ಟಗಳಲ್ಲಿ ಆ ಸಾಮ್ರಾಜ್ಯವನ್ನು ಆಳುವವನಾದನು. ಅವನ ತಂದೆಯ ಹೆಸರು, ಸಸಾನ್ ಎಂತ, ಇದ್ದ ಮೇಲೆ ಅವನು ಸ್ಥಾಪಿಸಿದ ಹೊಸ ಪಾರ್ಶಿ ಸಾಮ್ರಾಜ್ಯಕ್ಕೆ, ಸಾಸಾನಿದ ಸಾಮ್ರಾಜ್ಯವೆಂತ, ಹೆಸರು ಆಯಿತು; ಇದು ಸುಮಾರು 416 ವರುಷ ಉಳಿಯಿತು[3].

ಹಲವು ಮಂದಿ ಯೆಹೂದ್ಯ ಮತಸ್ಥರಾದ ಮೆಸೊಪೊತಮಿಯದವರೂ ಏಲಮಿನವರೂ ಮೇದಿಯದವರೂ ಮೂಲಪಾರ್ಥಿಯದವರೂ ಪ್ರಾರಂಭದ ಪಂಚಾಶತ್ತಮದಿನಹಬ್ಬ ಯೆರೂಸಲೇಮಿನಲ್ಲಿ ಬಂದಿದ್ದು, ಪೇತ್ರ ಅಪೊಸ್ತಲನ ಪ್ರಸಂಗ ಕೇಳಿ, ಸುವಾರ್ತೆಯ ಬೀಜವನ್ನು ತಮ್ಮ ತಮ್ಮ ದೇಶಕ್ಕೆ ತಕ್ಕೊಂಡು ಹೋದರು[4].

ಮೆಸೊಪೊತಮಿಯವನ್ನು ಕುರಿತ ಒಂದು ಪೂರ್ವ ಕಥೆ ಏನಂದರೆ[5]—ಅದರದೊಂದು ಪ್ರದೇಶದ ರಾಜಧಾನಿಯಾದ ಎದೆಸ್ಸ ಎಂಬಲ್ಲಿ ಅಬ್ಗರನೆಂಬ ರಾಯನಿರುತ್ತಿದ್ದನು; ಅವನು ಕಠಿಣ ರೋಗದಲ್ಲಿ ಬಿದ್ದು, ದಯೆ ಮಾಡಿ ತನ್ನ ಹತ್ತರ ಬಂದು ತನ್ನನ್ನು ಸ್ವಸ್ಥ ಮಾಡ ಬೇಕೆಂಬ ಅರ್ಥವುಳ್ಳದೊಂದು ಕಾಗದ ಬರೆದು, ಯೇಸು ಕ್ರಿಸ್ತನ ಸನ್ನಿಧಾನಕ್ಕೆ ಕಳುಹಿಸಿದನು. ಕ್ರಿಸ್ತನು ಅದಕ್ಕೆ ಪ್ರತ್ಯುತ್ತರವಾಗಿ—ನಾನು ಈಗ ಬರ ಕೂಡದು; ಆದರೆ ನನ್ನ ದಿವಾರೋಹಣದ ಮೇಲೆ ಒಬ್ಬ ಶಿಷ್ಯನನ್ನು ನಿನ್ನ ಮತ್ತು ನಿನ್ನ ಪ್ರಜೆಯ ಹಿತಕ್ಕೆ ಪ್ರೇಷಿಸುವೆನು ಎಂಬಂತೆ ಅವನಿಗೆ ತನ್ನದೊಂ

---

1) Mentioned Manu X, 44; Vishnu Purâna VI, 3; Harivamsa XIV, 773—783; 39ನೇ, 59ಶೇ ಪಾನು ನೋಡು. 2) ಇನ್ನು ಮುಂದೆ, ಕ್ರಿಸ್ತಶಕದ ಎಂತ, ಪೂರ್ಣ ಮಾತು ಛಾಪಿಸದೆ, ಕ್ರಿ. ಶ. ಎಂತ, ಮಾತ್ರ ಛಾಪಿಸಲಾಗುವದು. 3) 37ನೇ ಸಂಧಿ. 4) 28ನೇ, 29ನೇ ಪಾನು. 5) Euseb. h. e. I, 13.

ದು ಪತ್ರಿಕೆಯನ್ನು ತಲಪಿಸಿದನು. ಬಳಿಕ ಕ್ರಿಸ್ತನ ದಿವಾರೋಹಣದ ಈಚೆ ಥೋಮ ಅಪೊಸ್ತಲನು ಕ್ರಿಸ್ತನ 70 ಮಂದಿ ಶಿಷ್ಯರೆಂಬವರಲ್ಲಿ[1] ಒಬ್ಬನನ್ನು ಆ ಎದಸ್ಸಕ್ಕೆ ಕಳುಹಿಸಿದನು; ಇವನ ಮುಖಾಂತರವಾಗಿ ಆ ಅರಸನೂ ಅವನ ಪ್ರಜೆಯಲ್ಲಿ ಅನೇಕರೂ ಕ್ರೈಸ್ತರಾದರು.—ಥೋಮ ಅಪೊಸ್ತಲನು ತಾನು[2] ಆ ಪಟ್ಣದಲ್ಲಿ ಸುವಾರ್ತೆ ಸಾರಿದ ಹಾಗೆ ಕಾಣಿಸುತ್ತದೆ; ಯಾಕಂದರೆ ಅಲ್ಲಿಯ ಕ್ರೈಸ್ತರಲ್ಲಿ ಅವನ ನೆನಪು ಬಹಳವಿರುತ್ತಿತ್ತು. ಹ್ಯಾಗಂದರೆ ಕ್ರಿ. ಶ. 400ನೇ ವರ್ಷ ಸೋಕ್ರತನೆಂಬ ಒಬ್ಬ ಕ್ರೈಸ್ತ ಸಭಾಚರಿತ್ರಗಾರನು ಬರೆದ್ದರಲ್ಲಿ—ಎದೆಸ್ಸ ಪಟ್ಣದಲ್ಲಿ ಥೋಮ ಅಪೊಸ್ತಲನ ರಕ್ತಸಾಕ್ಷಿಮರಣವನ್ನು ನೆನಸುವದಕ್ಕಾಗಿ ಒಂದು ಚಂದವಾದ ಮಹಾ ದೇವಾಲಯವು ಇದೆ; ಈ ಮಂಗಳ ಸ್ಥಳದಲ್ಲಿ ಸಭೆಯು ನಿತ್ಯ ನೆರೆಯುತ್ತಿರುವದು ಎಂತ, ಅದೆ. ಹ್ಯಾಗಾದರೂ ಅಬ್ಗರನ ಉತ್ತರಾಧಿಕಾರಿಗಳೊಳಗೆ ಕ್ರಿ. ಶ. 160ನೇ ವರುಷದಿಂದ 170ನೇದರ ಪರ್ಯಂತ ಆಳುತ್ತಿದ್ದವನೊಬ್ಬ ಕ್ರೈಸ್ತ ರಾಯನ ಕಾಲಕ್ಕೆ ಎದೆಸ್ಸದಲ್ಲಿ ಒಂದು ದೊಡ್ಡ ಕ್ರೈಸ್ತ ಸಭೆಯು ಇತ್ತು; ಅವನ ಅರಮನೆಯೊಳಗೆ ಬರ್ದೇಸನನೆಂಬ ಕ್ರೈಸ್ತ ಪಂಡಿತನು ಶೋಭಿಸುತ್ತಿದ್ದನು. ಆ ಪಟ್ಣದ ಸಭೆಯವರು ಕಟ್ಟಿದ್ದ ಯಾವದೂ ಒಂದು ದೇವಾಲಯವು ಕ್ರಿ. ಶ. 202ನೇ ವರುಷ ಹೆಚ್ಚಾಗಿ ಬಿದ್ದ ಹೊಳೆನೀರಿನಿಂದ ಹಾಳಾಯಿತು. ರೋಮಾಯ ಅಧಿಕಾರವು ನಡೆಯುವಂಥ ಮೆಸೊಪೊತಮಿಯದೆಡೆಗಳಲ್ಲಿ ಕ್ರಿ. ಶ. 303ನೇ ವರುಷ ಕ್ರೈಸ್ತರು ಕೈಸರನಿಂದ ಬಹಳ ಹಿಂಸೆ ತಾಳುವವರಾದರು.

ಪೆತ್ರ ಅಪೊಸ್ತಲನು ಬಬೆಲು ದೇಶದಲ್ಲಿ ಸುವಾರ್ತೆ ಪ್ರಸಂಗಿಸಿದ್ದು ಹಿಂದೆ ಗೊತ್ತಾಯಿತು[3]. ಕ್ರಿ. ಶ. 200ನೇ ವರುಷಕ್ಕೆ ಕ್ರೈಸ್ತ ಮತವು ಅಲ್ಲಿ ಪ್ರಬಲವಾಗಿತ್ತು[4]. ಅಲ್ಲಿಯ ಪ್ರಖ್ಯಾತ ಪಟ್ಣಗಳಾದ ಸೆಲ್ಯುಕೀಯ ಎಂಬಲ್ಲಿಯೂ ಕ್ತೇಸಿಫೋನೆಬಲ್ಲಿಯೂ ಕ್ರಿ. ಶ. 310ನೇ ವರುಷಕ್ಕೆ ದೊಡ್ಡ ಕ್ರೈಸ್ತ ಸಭೆಗಳಿದ್ದವು.

ಥೋಮ ಅಪೊಸ್ತಲನು ಮೂಲಪಾರ್ಥಿಯದಲ್ಲಿ ಕ್ರಿಸ್ತನ ಹೆಸರನ್ನು ಮೊದಲಿಗೆ ಘೋಷಿಸಿದನು; ಕ್ರೈಸ್ತತ್ವವೆಂಬ ವೃಕ್ಷವು ಅಲ್ಲಿ ಕ್ರಿ. ಶ. 170ನೇ ವರುಷದಲ್ಲಿ ಮೊಗ್ಗೆ ಬಿಟ್ಟು, 200ನೇದರಲ್ಲಿ ಫಲಭರಿತವಾಯಿತು.

ಕ್ರಿ. ಶ. 170ನೇ ವರುಷಕ್ಕೆ ಕೀರ್ತಿ ಗೊಂಡಿದ್ದ ಮೂಲಪಾರ್ಶಿಕ ಕ್ರೈಸ್ತ ಸಭೆಗಳ[5] ಮತ್ತು ದೊಡ್ಡ ಹಿಂದು ದೇಶದವುಗಳ ಒಬ್ಬ ಅಧ್ಯಕ್ಷನಾದ ಯೋಹಾನನು ಕ್ರಿ. ಶ. 325ನೇ ವರ್ಷ ಸಣ್ಣ ಅಸಿಯದ ನೀಕೇಯವೆಂಬ ಪಟ್ಣದಲ್ಲಿ ಕೂಡಿದ ಪ್ರಥಮ ಸರ್ವಸಭಾಸಂಘಕ್ಕೆ ಬಂದನು. ಕ್ರಿ. ಶ. 226ನೇದರಲ್ಲಿ ಉತ್ಪನ್ನವಾಗಿದ್ದ ಆ

1) ಲೂಕ. 10, 1. 2) 59ನೇ ಪಾನು. 3) 39ನೇ, 41ನೇ ಪಾನು. 4) Tertullian. 5) Tertullian; Bardesanes. 6) Bardesanes.

ಸಾಸಾನಿದ ಅಂದರೆ ಹೊಸ ಫಾರ್ಶಿ ಸಾಮ್ರಾಜ್ಯದೊಳಗಿನ ನಾನಾ ಕ್ರೈಸ್ತ ಸಭೆಗಳ ಮುಖ್ಯ ಅಧ್ಯಕ್ಷನು ಆ ಸೆಲ್ಯುಕೀಯ, ಕ್ತೇಸಿಫೋನು ಎಂಬ ಪಟ್ಣಗಳಲ್ಲಿ ಇರುವನು.

ಕ್ರಿ. ಶ. 170ನೇ ವರುಷಕ್ಕೆ ಕ್ರೈಸ್ತತ್ವವು ಅರ್ಮಿನಿ ದೇಶದಲ್ಲಿ ನೆಲೆ ಗೊಂಡಿತ್ತು; ಹ್ಯಾಗಂದರೆ ಆಗ ಕೊರಿಂಥ ಪಟ್ಣದ ದಿಯೊನೂಸಿಯನೆಂಬ ಅಧ್ಯಕ್ಷನು[1] ಅಲ್ಲಿಯ ಕ್ರೈಸ್ತರಿಗೆ ಪ್ರಶ್ಚಾತ್ತಾಪವನ್ನು ಕುರಿತು ಒಂದು ರಮ್ಯ ಪತ್ರಿಕೆ ಬರೆದು ಕಳುಹಿಸಿದನು. ಆದರೂ ಪೂಜಾರಿಗಳ ಹಗೆಗೆಲಸದಿಂದ ಕ್ರೈಸ್ತತ್ವದ ವಿಸ್ತರಣಕ್ಕೆ ತೊಂದರೆಯಾಗುತ್ತಲೇ ಇತ್ತು. ಬಳಿಕ ಏನಾಯಿತಂದರೆ—ಒಬ್ಬ ಪಾರದ ರಾಜನ 2 ವರುಷದ ಕುಮಾರನು ತನ್ನ ದಾದಿಯ ನಂಬಿಗೆಯಿಂದ ಕಲಹಗಾರರ ಖಡ್ಗಕ್ಕೆ ತಪ್ಪಿಸಿಕೊಂಡು, ಸಣ್ಣ ಅಸಿಯದ ಕಪ್ಪದೊಕಿಯವೆಂಬ[2] ರೋಮಿಾಯ ಶೀಮೆಯೊಳಗೆ ಓಡಿ ಹೋಗಿ, ಅಲ್ಲಿ ಕ್ರೈಸ್ತರಿಂದ ಸಾಕಿಸಿ ಕೊಂಡು, ಉಪದೇಶ ಹೊಂದಿದನು; ಅವನ ಹೆಸರು ಗ್ರಿಗೋರ. ಕಾಲಗತಿಯಿಂದ ಅವನು ಬೋಧಕನಾಗಿ, ಅರ್ಮಿನಿಯಕ್ಕೆ ಹೋಗಿರಲು, ಅವನ ಪ್ರವೃತ್ತಿಯಿಂದ ಅಲ್ಲಿಯ ರಾಯನು ಸಹ ಕ್ರಿಸ್ತನ ವಿಶ್ವಾಸಿಯಾಗಿ, ಅನೇಕ ವಿದ್ಯಾಶಾಲೆಗಳು ಸ್ಥಾಪಿತವಾದವು. ಗ್ರಿಗೋರನು ಗೈಯುತ್ತಿದ್ದ ಒಳ್ಳೇ ಉಪದೇಶಗೆಲಸಕ್ಕೋಸ್ಕರ ಅವನಿಗೆ, ಪ್ರಭಾಕರನೆಂತ, ಅಡ್ಡಹೆಸರು ಪ್ರಾಪಿಸಿತು. ಅವನು ಸುಮಾರು ಕ್ರಿ. ಶ. 336ನೇ ಅಬ್ದ ಸತ್ತನು.

ಇಬೇರಿಯದವರಲ್ಲಿ ಕ್ರೈಸ್ತತ್ವವು ಸುಮಾರು ಕ್ರಿ. ಶ. 330ನೇ ವರುಷದಲ್ಲಿ ಸ್ಥಾಪಿತವಾಯಿತು. ಹ್ಯಾಗಂದರೆ ಆ ಸಮಯ ಅವರು ಒಂದು ರೋಮಿಾಯ ನಾಡಿನೊಳಗೆ ಹೊಕ್ಕು, ತಾವು ಶೆರೆ ಹಿಡಿದವರಲ್ಲಿ ಒಬ್ಬ ಕ್ರೈಸ್ತಳನ್ನು ಸಹ ಒಯಿದು, ಒಂದು ಪಟ್ಣದಲ್ಲಿ ಒಂದು ಕುಟುಂಬಕ್ಕೆ ದಾಸಿಯಾಗ ಮಾರಲು, ಅವಳು ತನ್ನ ನೀತಿಯುಳ್ಳ ಕ್ರೈಸ್ತ ನಡಾವಳಿಯಿಂದ ಬೇಗ ಎಲ್ಲರ ಮನ್ನಣೆಯನ್ನೂ ಪ್ರೀತಿಯನ್ನೂ ಪಡಕೊಂಡಳು. ಒಮ್ಮೆ ಆ ಪಟ್ಣದವರು, ಯಾರಾದರೂ ಒಂದು ಒಳ್ಳೇ ಔಷಧ ಮಾಡಿಕೊಟ್ಟಾರೆಂತ, ಒಂದು ರೋಗಿಷ್ಠ ಕೂಸನ್ನು ಮನೆ ಮನೆಗೆ ತಕ್ಕೊಂಡು ಹೋಗುತ್ತಿರುವಾಗ ಅದನ್ನು ಆ ಕ್ರೈಸ್ತ ಭಕ್ತಳಿಗೂ ತೋರಿಸಿದರು. ಆ ಹೊತ್ತು ಅವಳು ಆ ಕೂಸಿನ ಹೆತ್ತವರ ಮುಂದೆ, ತನಗೆ ಸಹಾಯ ಗೈಯಲಿಕ್ಕೆ ಬರುವದಿಲ್ಲವಾದರೂ ತನ್ನ ದೇವರಾದ ಕ್ರಿಸ್ತನಿಗೆ ಬಂದೀತೆಂತ, ನುಡಿದು, ಹೃದಯಿಕ ಪ್ರಾರ್ಥನೆಯಿಂದ ಅದನ್ನು ದೇವರ ರಕ್ಷಣಕ್ಕೆ ಒಪ್ಪಿಸಿ ಕೊಡಲಾಗಿ, ಅದು ಸ್ವಸ್ಥವಾಗುತ್ತಲೇ ಆ ಮೂರ್ತಿಪೂಜಕರು, ಅವಳು ಒಬ್ಬ ದೇವತೆಯೇ, ಸರಿ! ಎಂತ, ಸನ್ಮಾನಿಸಿ, ಆ ಅದ್ಭುತವನ್ನು ತಮ್ಮ ರಾಯನಿಗೆ ಸಹ ತಿಳಿಸಿದರು. ಆ ಮೇಲೆ ಇವನು ಸಹ ಒಂದು ಅಸಾ

1) 51ನೇ ಪಾನು. 2) 28ನೇ, 38ನೇ ಪಾನುಗಳು.

ಧ್ಯ ರೋಗದಲ್ಲಿ ಬೀಳಲು, ಗುಣ ಮಾಡಲಿಕ್ಕೆ ಆ ಬಡ ದಾಸಿಯನ್ನು ಕರೆದರು; ಆದರೆ ಅವಳು, ಆ ಆಶ್ಚರ್ಯ ನಡಿಸಿದವಳು ನಾನಲ್ಲ! ಎಂದು, ರಾಣಿಯ ಹತ್ತರ ಹೋಗಲಿಲ್ಲ. ಅದಕ್ಕಾಗಿ ಇವಳು ಆ ದಾಸಿಯ ಬಳಿಗೆ ಹೊರಿಸಿ ಕೊಂಡು ಬಂದು, ನಿನ್ನ ದೇವರಿಗೆ ಬೇಡಿ ಕೊಳ್ಳೆಂತ, ನಾನಾ ವಿಧದಿಂದ ಬೆಸಗೊಳ್ಳಲಾಗಿ, ಅವಳು ಇನ್ನೊಮ್ಮೆ ಹಾಗೆ ಮಾಡಲಿಕ್ಕೆ, ದೇವರು ಅವಳ ಪ್ರಾರ್ಥನಾರ್ಥವನ್ನು ತಿರಿಗಿ ದಯೆ ಪಾಲಿಸಿದ್ದರಿಂದ ಆ ರಾಯನು ಸ್ವಸ್ಥನಾದಂದು ಅವಳಿಗೆ ಬಹಳ ಉಚಿತಗಳನ್ನೀಯಲಿಕ್ಕೆ ಹತ್ತಿದಾಗ ಅವಳು ತಾನೊಲ್ಲೆನೆಂದಳು. ಆದರೆ ರಾಣಿಯು ನಡೆದ ಸಂಗತಿಯಿಂದ ಹೃತ್ತು ತಿವಿದವಳಾಗಿ, ಇನ್ನು ಮುಂದೆ ನಾನು ಸಹ ಕ್ರೈಸ್ತರ ಆ ಬಲಿಷ್ಠ ದೇವರಿಗೆ ಆರಾಧಿಸ ಬೇಕೆಂತ, ಬಹಳ ಅಪೇಕ್ಷೆ ಪಡುವಲ್ಲಿ ರಾಯನು ಅದಕ್ಕೊಡಂಬಡಲಿಲ್ಲ; ಕ್ರೈಸ್ತ ದೇವರ ಬಲವೂ ಅನುಗ್ರಹವೂ ಅವನಿಗೆ ಇನ್ನು ಹೆಚ್ಚು ಗೋಚರವಾಗ ಬೇಕಾಯಿತು. ಹೀಗಿರಲಾಗಿ ಒಂದು ದಿನ ಅವನು ಬೇಟೆಯಾಡುತ್ತಿರಲು, ಒಂದು ದೊಡ್ಡ ಗುಡುಗುಮಳೆ ಬಂದು, ತಾನು ದಾರಿ ತಪ್ಪಿ ತನ್ನ ಪರಿಜನರನ್ನು ಅಗಲಿ, ಮಹಾ ಕಾಡಿನೊಳಗೆ ಒಬ್ಬನೇ ಸುತ್ತುತ್ತಿರುವಾಗ ಬೇರೆ ಉಪಾಯವನ್ನರಿಯದೆ, ಕ್ರಿಸ್ತನಾಥನ ಸಹಾಯವನ್ನು ಬೇಡಿ ಕೊಳ್ಳಲೆಸಗುತ್ತಲೇ ಮೋಡ ಹರಿದು ಹೋಗಿ, ಹೊಳಪಾಗಿ, ತನ್ನವರನ್ನು ತಿರಿಗಿ ಶೇರಿ ಕೊಳ್ಳಲನುವಾಯಿತು. ತದನಂತರ ಅವನು, ಈ ಸಂಕಟದ ವೇಳ್ಯದಲ್ಲಿ ನನಗೆ ರಕ್ಷಣ ಮಾಡಿದರೆ ನಿನ್ನ ಭಕ್ತನಾಗುವೆನೆಂದು, ತಾನು ಕ್ರಿಸ್ತನಿಗೆ ಹರಿಕೆ ಹೇಳಿದ್ದಂತೆಯೇ ನಡ ಕೊಳ್ಳುವದಕ್ಕಾಗಿ ತಾನು ತನ್ನ ರಾಣಿಯ ಸಹಿತ ಆ ಕ್ರೈಸ್ತಳಿಂದ ಉಪದೇಶ ಹೊಂದಿದವನಾದ ಮೇಲೆ ತಾನು ತನ್ನ ಪ್ರಜೆಯ ಗಂಡಸರಿಗೆ, ಅವನ ಹೆಂಡತಿಯು ಹೆಂಗಸರಿಗೆ ಸಹ, ಉಪದೇಶಿಸಿದ್ದಲ್ಲದೆ ರೋಮಾಯ ಸಾಮ್ರಾಜ್ಯದೊಳಗಿಂದ ಬೋಧಕರನ್ನು ಕೂಡ ತರಿಸೋಣವಾಯಿತು.

ಹಿಂದೆ ಹೇಳಿದ ಆ ಎದೆಸ್ಸ ಪಟ್ಣದ ಪಂಡಿತನಾದ ಬರ್ದೇಸನನು[1] ಸುಮಾರು ಕ್ರಿ. ಶ. 170ನೇ ವರುಷದಲ್ಲಿ ಪಾರ್ಥಿಯಸಾಮ್ರಾಜ್ಯ ಮುಂತಾದ ಸ್ಥಳಗಳಲ್ಲಿರುವ ಕ್ರೈಸ್ತರ ವಿಷಯವಾಗಿ ಹೀಗೆ ಬರೆದನು—ಮೂಲಪಾರ್ಥಿಯದ ಕ್ರೈಸ್ತರು ಬಹುಸ್ತ್ರೀವಿವಾಹಧರ್ಮವನ್ನು ತ್ಯಜಿಸಿ ಬಿಟ್ಟಿದ್ದಾರೆ; ಪಾರ್ಶಿಸ್ಥಾನದ ಕ್ರೈಸ್ತರು ತಮ್ಮ ಹಿರಿಯರ ಮಾರ್ಗವಗಲಿದ್ದರಿಂದ ಸ್ವಂತ ಕುಮಾರ್ತೆಗಳನ್ನು ಇನ್ನು ಮದಿವೆ ಮಾಡಿ ಕೊಳ್ಳುವದಿಲ್ಲ; ಬಾಹ್ಳಿ ದೇಶದ ಕ್ರೈಸ್ತರೂ ಗಲ್ಲರೊಳಗಣ ಕ್ರೈಸ್ತ ಜನರೂ ವ್ಯಭಿಚಾರ ನಡಿಸುವದಿಲ್ಲ; ಕ್ರೈಸ್ತರು ಯಾವ ಯಾವ ದೇಶಗಳಲ್ಲಿ ಇದ್ದಾರೋ, ಆಯಾ ಎಲ್ಲಾ ದೇಶಗಳ ಕೆಟ್ಟ ಧರ್ಮ ಮರ್ಯಾದೆಗಳನ್ನು ಜಯಿಸಿ ಬಿಡುತ್ತಾರೆ.—

1) 74ನೇ ಪಾನು.

## ಹಿಂದು ದೇಶ.

ಹಾಗಾದರೆ, ಸುವಾರ್ತೆಯು ಬಹಳ ತಡವಿಲ್ಲದೆ ೨ನೇ ಕ್ರಿಸ್ತಶತಮಾನದಲ್ಲಿ ಯೂ ನೆಲಮಾರ್ಗವಾಗಿ ಹಿಂದು ದೇಶದ ವಾಯುವ್ಯ ಪ್ರಾಂತ್ಯಕ್ಕೆ ಬಂದು ಮು ಟ್ಟಿತ್ತೆಂತ, ಹಿಂದಿನ ಸಂಗ್ರಹದ ಮೇಲೆ ತಿಳಿಯುತ್ತದೆ. ಆದರೆ ಕ್ರಿಸ್ತನ ವರ್ತಮಾ ನವು ಎಂದು ಹ್ಯಾಗೆ ನಮ್ಮ ಈ ಹಿಂದು ದೇಶದೊಳಗೆ ಬಂದು ಮುಟ್ಟಿತು? ಅಪೊಸ್ತೊ ಲಿಕ ಕಾಲದಲ್ಲಿಯೋ? ಈ ಪ್ರಕಾರ ಕೇಳಿದರೆ, ಅದಂದು ಸಾಧ್ಯವಾಗಿತ್ತೋ? ಇಲ್ಲ ವೋ? ಎಂತ, ಮೊದಲು ಪ್ರಶ್ನೆ ಹಾಕ ತಕ್ಕದ್ದು. ಈ ಪ್ರಶ್ನೆಗೆ ಖಂಡಿತವಾಗಿ ಹೌ ದೆನ್ನ ಬೇಕು. ಹ್ಯಾಗಂದರೆ, ಅಪೊಸ್ತೊಲಿಕ ಕಾಲಕ್ಕೆ ರೋಮಾಯ ಸಾಮ್ರಾಜ್ಯ ವೆನ್ನಿಸುವ ಆ ದೇಶಗಳಲ್ಲಿ ಅನೇಕಕ್ಕೆ ನೂರಾರು ವರುಷದ ಹಿಂದೆ (ಅಭೀರ ದೇಶ ಅಥವಾ ಒಫೀರ ದೇಶವೆಂಬ) ಹಿಂದು ದೇಶದ ಸಂಗಡ ನಡೆಯ ತೊಡಗಿದ್ದ ಆ ವ್ಯಾಪಾರವು[1] ಕ್ರಿಸ್ತನ ಜನ್ಮಕಾಲಕ್ಕೆ ಆಳಿದ ಔಗುಸ್ತನೆಂಬ ಪ್ರಥಮ ರೋಮಾಯ ಕೈಸರನ ದಿನಗಳಲ್ಲಿ ಮುಂಚಿಗಿಂತ ಬಹಳ ಹೆಚ್ಚಾಗುತ್ತಾ ಬಂತು. ಆಗ ಒಂದು ವ್ಯಾ ಪಾರಮಾರ್ಗವು ಪಾರ್ಥಿಯಸಾಮ್ರಾಜ್ಯವನ್ನು ದಾಟಿ, ಮತ್ತೊಂದು ಐಗುಪ್ತದ ಅಲೆಕ್ಸಂದರೀಯ ಪಟ್ಣವನ್ನೂ ಅರಬಿ ಮತ್ತು ಹಿಂದು ಸಮುದ್ರವನ್ನೂ ದಾಟಿ, ಇ ನ್ನೊಂದು ಉಫ್ರಾತು ನದಿಯನ್ನೂ ಪಾರ್ಶಿಕ ಕೊಲ್ಲಿಯನ್ನೂ ಹಿಂದು ಸಮುದ್ರವ ನ್ನೂ ದಾಟಿ, ಹಿಂದು ದೇಶಕ್ಕೆ ಹೋದವು. ರೋಮಾಯ ಹಡಗಗಳು ಅಂದು ಮು ಖ್ಯವಾಗಿ ಗಮನಾಗಮನ ಮಾಡುತ್ತಿದ್ದ ಸ್ಥಳಗಳು ಮಲಯಾಳವು ಮತ್ತು ಲಂಕಾ ದ್ವೀಪವು. ವರ್ಷ ವರ್ಷಕ್ಕೆ ಹಲವು ಪ್ರಯುತ ಸಂಖ್ಯೆಯ ಹಣವು ಅಂಥ ವ್ಯಾಪಾರ ದ ಸಲುವಾಗಿ ರೋಮಪುರದಿಂದ ಹಿಂದು ದೇಶಸ್ಥರಿಗೆ ಪ್ರಾಪ್ತವಾಗುತ್ತಿರುವ ಕಾ ರಣ ಇವರು, ತಮಗೆ ಬಹು ಆದಾಯಕರವಾದ ಆ ವ್ಯಾಪಾರವು ಮುಂದೆ ಸಹ ನಡೆಯುತ್ತಿರಲಿ! ಎಂದು, ಆಶೆ ಪಟ್ಟು, ಆ ಔಗುಸ್ತ ಕೈಸರನ ಬಳಿಗೂ ಇವನ ಉ ತ್ತರಾಧಿಕಾರಿಗಳಲ್ಲಿ ಹಲವರ ಬಳಿಗೂ ರಾಯಭಾರಿಗಳನ್ನು ಕಳುಹಿಸಿ, ಅವರ ಕೃ

1) ಅಭೀರವೆಂಬ ದೇಶದಿಂದ ತಂದದ್ದೇನಂದರೆ— ಅಗುರು, ಅಗರು (ahalîm) ವಲ್ಗು (algumîm, almugîm), ಕಪಿಗಳು (kophîm), ತೋಗ್ಯೆ ಅಥವಾ ಸೋಗ್ಯೆಗಳು (tukkiyîm), ಇಭದ ದಂತ (shen habbîm), ಕರ್ಪಾಸ (karpas), ಕುಂಕುಮ (karkom), ನರದ, ನಲದ (nerd), ದಾಲ-ಚೀನಿ (kinnâ-môn), ಒಂದು ವೇಳೆ ಲೋಭಾನ (lbonâh) ಸಹ. 4 ಮೋಶೆ. 24, 6; 1 ಅರಸು. 10, 11. 18. 22; 22, 39; 2 ದಿನಚರ್ಯ. 2, 7; 9, 10. 11; ಎಸ್ತೆರ. 1, 6; ಸೊಲೊಮೋ. ಗೀತ. 4, 14; ಎಜೆಕಿಯೇಲ. 27, 15; 2 ಮೋಶೆ. 30, 34. Cf. also ಪಿಪ್ಪಲೀ (peperi), ಕಸ್ತೂರೀ (kastôreion), ರೇವಲ-ಚೀನಿ (râ, rhêum), ಆನೆ (ಆಲೆ) - ಪದ (ele-phant), etc. etc. Weber's Ind. Skizzen, pp. 73—89. An Indian alphabet of the year 250 B. C. is clearly of Semitic origin, vid. M. Müller's Sanskrt Grammar, 1866, p. 1. See also Royal Asiatic Society's Journal, 1867, III, 1, pp. 148, 153.

ಪೆಯನ್ನು ಬೇಡಿ ಕೊಳ್ಳುತ್ತಿರುವರು[1]. ಆ ಸಮಯ ಬ್ರಾಹ್ಮಣರೂ ಐಗುಪ್ತ ದೇಶದ ಆ ಅಲೆಕ್ಸಂದರೀಯದಲ್ಲಿ ಬಂದು ಇರುವರು[2]. ಅರಬಿ ಸಮುದ್ರಕೊಲ್ಲಿಯ ಮುಖದೊಳು, ಹಿಂದು ದೇಶದಿಂದ ಅಲೆಕ್ಸಂದರೀಯಕ್ಕೆ ಹೋಗುವ ಮಾರ್ಗದಲ್ಲಿ, ಇರುವ ಒಂದು ದ್ವೀಪದ ಮೇಲೆ ವಸ್ತಿ ಮಾಡುತ್ತಿರುವ ಹಿಂದು ವಾಣಿಜರು ಇದಕ್ಕೆ, ದ್ವೀಪಸುಖತರವೆಂತ, ಒಂದು ಸಂಸ್ಕೃತ ಹೆಸರನ್ನಿಟ್ಟರು. ಹಿಂದು ದೇಶದ ಸುದ್ದಿಯು ಅಪೊಸ್ತೊಲಿಕ ಕಾಲದಲ್ಲಾದರೂ ಸರ್ವ ರೋಮಾಯ ಸಾಮ್ರಾಜ್ಯದೊಳಗೆ ಪ್ರಬಲವೇ; ಅದಲ್ಲದೆ ಅದಕ್ಕೆ ಹೋಗಿ ಬರುವ ಪ್ರಯಾಣವು ಸುಲಭವೇ. ಕ್ರಿ. ಶಕಕ್ಕೆ 250 ವರುಷಗಳಾದರೂ ಮುಂಚೆ ಯೆಹೂದ್ಯರು ಹಿಂದು ದೇಶಕ್ಕೆ ಹೋಗಿ[3], ಹೆಚ್ಚಾಗಿ ಮಲಯಾಳದಲ್ಲಿ ಪ್ರವಾಸಿಗಳಾಗಿದ್ದರು. ಇಷ್ಟೆಲ್ಲಾ ಆದ ಮೇಲೆ ಕ್ರಿಸ್ತನ ಸುವಾರ್ತೆಯು ಅಪೊಸ್ತೊಲಿಕ ಕಾಲದಲ್ಲಿಯೇ ಈ ನಮ್ಮ ಹಿಂದು ದೇಶಕ್ಕೆ ಬಂದು ಮುಟ್ಟುವದಕ್ಕೆ ಏನೂ ಅಡ್ಡಿ ಇರಲಿಲ್ಲ.

ಹಾಗಾದರೆ ಪೂರ್ವ ಸಭಾಪಿತೃಗಳ ಗ್ರಂಥಗಳಲ್ಲಿ, ಅಪೊಸ್ತಲರು ಹಿಂದು ದೇಶದಲ್ಲಿ ಸುವಾರ್ತೆ ಸಾರಿದರೆಂತ, ಸೂಚನೆಗಳುಂಟೋ? ಹೌದು! ಪಲೇಸ್ತೀನದ ಕೈಸರ್‍ಯೆಯ ಪಟ್ಟಣದ ಒಬ್ಬ ಅಧ್ಯಕ್ಷನಾದ ಯುಸೆಬಿಯನೆಂಬ ಆ ಕ್ರೈಸ್ತಸಭಾಚಾರಿತ್ರಕನು ಸುಮಾರು ಕ್ರಿ. ಶ. 320ನೇ ವರುಷಕ್ಕೆ ಬರೆದ್ದೇನೆಂದರೆ[4]—ಬರ್ಥೊಲೊಮಾಯ ಅಪೊಸ್ತಲನು[5] ಅಲೆಕ್ಸಂದರೀಯಕ್ಕೆ ಮೂಡಣ ಜನಾಂಗಗಳಲ್ಲಿ, (ಅರಬಿಸ್ಥಾನ ಪಾರ್ಶಿಸ್ಥಾನ ಮುಂತಾದವುಗಳಿಗೆ ಮೂಡಣ ದಿಕ್ಕಿನಲ್ಲಿರುವ) ಹಿಂದು ಜನರಲ್ಲಿ ಯಾದರೂ ಪ್ರಸಂಗಿಸಿ, ಅಲ್ಲಿ ವಿಶ್ವಾಸಿಗಳಾದವರಿಗೆ ಎಬ್ರೀಯ ಭಾಷೆಯದೊಂದು ಮತ್ಥಾಯನ ಸುವಾರ್ತಾಗ್ರಂಥವನ್ನು ಕೊಟ್ಟು ಬಿಟ್ಟನಂತೆ[6].—ಈ ಭಾವದ ಪ್ರಕಾರ ಬರ್ಥೊಲೊಮಾಯನು ಈ ನಮ್ಮ ಹಿಂದು ದೇಶದಲ್ಲಿ ನೆಲೆ ಗೊಂಡಿದ್ದ ಎಬ್ರೀಯರೆಂಬ ಯೆಹೂದ್ಯರಿಗೆ ಪ್ರಸಂಗಿಸಿದ ಹಾಗೆ ತೋರುತ್ತದೆ. ಪುನಃ, ಅಲೆಕ್ಸಂದರೀಯದಲ್ಲಿ ಕೆಲವು ವರುಷ ಬದುಕುತ್ತಿದ್ದ[7] ರೂಫೀನನೆಂಬ ಸಭಾಚಾರಿತ್ರಕನು ಈತಲಿಯ ದೇಶಕ್ಕೆ ಹಿಂದಿರುಗಿ, ಸುಮಾರು ಕ್ರಿ. ಶ. 400ನೇ ವರುಷದಲ್ಲಿ ಹೀಗೆ ಬರೆದನು[8]—ಅಪೊಸ್ತಲರಲ್ಲಿ ಥೋಮನಿಗೆ ಪಾರ್ಥಿಯವು, ಮತ್ಥಾಯನಿಗೆ ಐಥಿಯೊಪಿಯವು, ಬರ್ಥೊಲೊಮಾಯನಿಗೆ ಇದನ್ನು ಹೊಂದಿರುವ ಹೊರಗಿನ ಹಿಂದು ದೇಶವು (ಪ್ರಸಂಗಸ್ಥಳವೆಂತ) ನೇಮಕವಾಯಿತು; ಇದಕ್ಕೂ (ಅಂದರೆ ಹೊರಗಿನ ಹಿಂದು

---

1) Lassen II, 539 seq.; III, 1—82; IV, 2; 892 seq. 2) Lassen III, 378 seq.; Weber I, 400, 421, 423; II, 168 seq; 314, 397 seq; 411; 36ನೇ, 59ನೇ ಪಾನುಗಳು. 3) Lassen IV, 2, 928, note; 18ನೇ ಪಾನು ನೋಡು. 4) Euseb. h. e. V, 10; 54ನೇ, 58ನೇ ಪಾನುಗಳು. 5) 59ನೇ ಪಾನು. 6) Euseb. h. e. V, 10; Socrates. h. e. I, 19. 7) Eusebius too was in Alexandria. 8) Rufin. h. e. X, 9.

ದೇಶಕ್ಕೂ) ಪಾರ್ಥಿಯಕ್ಕೂ ನಡುವೆ ಮೇದಿಯವು; ಆದರೆ ಇದಕ್ಕೆ (ಅಂದರೆ ಮೇದಿಯಕ್ಕೆ) ಆಚೆ ಒಂದು ಉದ್ದ ದೇಶಾಂತರದ ಮೇಲೆ ಒಳಗಿನ ಹಿಂದು ದೇಶವದೆ.— ಆದರೆ ಈ ರೂಫೀನನ ಮಾತಿನಿಂದ ಒಂದು ಸ್ವಲ್ಪ ತೊಡಕು ಬಂತು; ಅದೇನಂದರೆ ಬರ್ಥೊಲೊಮಾಯನು ಹೋದ ಆ ಹೊರಗಿನ ಹಿಂದು ದೇಶವು ಅವನ ದೇಶವಿವರಣದ ಮೇರೆಗೆ ನಮ್ಮ ಈ ದೇಶವಲ್ಲ, ಅರಬಿಸ್ಥಾನವೇ; ನಮ್ಮ ಈ ದೇಶವು ಅವನ ಮಾತಿನ ಪ್ರಕಾರ ಒಳಗಿನ ಹಿಂದು ದೇಶವೆನ್ನಿಸ ಬೇಕು. ಹಾಗಾದರೆ ಅವನು ಅರಬಿಸ್ಥಾನವನ್ನು, ಹಿಂದು ದೇಶವೆಂತ, ಹೇಳಿದ್ದಕ್ಕೆ, ಕಾರಣವೇನೆಂದರೆ, ಹಿಂದು ದೇಶವು ಇಷ್ಟಿಷ್ಟು ದೊಡ್ಡದೆಂತ, ಬಹು ಪ್ರಾಚೀನ ಕಾಲದಲ್ಲಿ ಪಶ್ಚಿಮದವರಿಗೆ ಒಳ್ಳೇ ಗೊತ್ತಿಗೆ ಬಂದಿರಲಿಲ್ಲ[1]; ಅರಬಿಸ್ಥಾನವೂ ಆಫ್ರಿಕದಲ್ಲಿ ನೂಬಿಯ ಸೆನ್ನಾರು ಹಬೆಸಿ ಶೀಮೆಗಳುಳ್ಳ ಐಥಿಯೊಪಿಯವೂ ಹಿಂದು ದೇಶದ ಭಾಗಗಳೆಂತ, ಅವರು ನೆನಸುತ್ತಿದ್ದರು; ಅದಲ್ಲದೆ, ಮಸಕು ಮತ್ತು ಕಪ್ಪು ಬಣ್ಣದವರೆಲ್ಲರೂ ಐಥಿಯೊಪಿಯದವರೆಂತ, ಹೇಳುತ್ತಿರುವದರಿಂದ ಹಿಂದು ದೇಶಕ್ಕೆ ಸಹ, ಐಥಿಯೊಪಿಯವೆಂತ, ಹೆಸರಿಕ್ಕುತ್ತಿದ್ದರು. ಗ್ರೀಕ (ಯವನ) ದೇಶದ ಅಲೆಕ್ಸಂದರ ಮಹಾರಾಯನು ಕ್ರಿ. ಶಕಕ್ಕೆ ಮುಂಚಿನ 327ನೇ ವರ್ಷಕ್ಕೆ ಈ ನಮ್ಮ ಹಿಂದು ದೇಶದಲ್ಲಿ ಅಭಿಯೋಗ ಮಾಡಿ, ತನ್ನದೊಂದು ರಾಜ್ಯ ಸ್ಥಾಪಿಸಿ[2], ಹಿಂದಿರುಗಿದ ಮೇಲಾದರೂ ಆ ವಿಧದ ಭಾಷೆಗಲಿಬಿಲಿಯು ಪರದೇಶಸಂಚಾರ ಮಾಡದ ಸಾಧಾರಣ ಪಂಡಿತರಲ್ಲಿ ಸಹ ಇನ್ನೂ ಉಳಿದಿತ್ತು[3]. ಆದರೆ ಹ್ಯಾಗಾದರೂ ಯುಸೆಬಿಯನ ಆ ವರ್ತಮಾನದ ಆಧಾರದಿಂದ, ಬರ್ಥೊಲೊಮಾಯನು ಈ ನಮ್ಮ ಹಿಂದು ದೇಶದವರಿಗೆ ಕ್ರಿಸ್ತನ ನಾಮ ಸಾರಿದನೆಂತ, ಆಲೋಚಿಸ ಬೇಕು[4]; ಯುಸೆಬಿಯನ ಮಾತಿಗೂ ರೂಫೀನನದಕ್ಕೂ ತಾಳೆ ಬೀಳುವ ಹಾಗೆ, ಬರ್ಥೊಲೊಮಾಯನು ಅರಬಿಸ್ಥಾನದಿಂದ ಈ ನಮ್ಮ ದೇಶಕ್ಕೆ ಸಹ ಬಂದನೆಂತ, ಹೇಳಿದರೆ ಸರಿ.

ಅದು ಹೊರ್ತಾಗಿ, ಸುಮಾರು ಕ್ರಿ. ಶ. 380ನೇ ವರುಷದಲ್ಲಿ ಇಬ್ಬರು ಸಭಾಪಿತೃಗಳು[5], ಥೋಮ ಅಪೊಸ್ತಲನು ಹಿಂದು ದೇಶದಲ್ಲಿ ಸುವಾರ್ತಾಪ್ರಸಂಗಿಕನಾಗಿದ್ದನೆಂತ, ಬರೆದ್ದಕ್ಕೆ ಅದೇ ಕಾಲದ ಬೇರೆ ಇಬ್ಬರು ಸಭಾಪಿತೃಗಳು[6], ಅವನು ಪ್ರಸಂಗಿಸಿದ ದೇಶವು ಐಥಿಯೊಪಿಯವೆಂತ, ಬರೆದದ್ದು ಪ್ರತಿಕೂಲವಲ್ಲ, ಹ್ಯಾಗಂ

1) The Book of Esther, however, for instance, knows already the difference between India (Hoddu) and Aethiopia (Kûsh) ; 1, 1; 8, 9; it was composed between 486 and 466 B. C. 2) 36ನೇ ಪಾನು. 3) Cf. also Philostorgius (h. e. II, 6) who wrote about 425 A. D. 4) Cf. Lassen II, 1100 seq.; IV, 2, p. 928, note. 5) Gregor of Nazianz in Kappadocia, Ambrosius of Mailand in Italy. 6) Hieronymus of Bethlehem in Palaestina, Chrysostomus of Constantinopolis,

ದರೆ ಐಥಿಯೊೂಪಿಯದಲ್ಲಿ ಈ ನಮ್ಮ ದೇಶವ ಸಹ ಶೇರಿಸುವ ಪೂರ್ವ ರೂಢಿ ಅವರಿವರಲ್ಲಿ ಇದ್ದಿರ ಬಹುದು, ಅಲ್ಲವೇ? ಇವರು, ಆ ಐಥಿಯೊಪಿಯವು ನೂಬಿಯ ಸೆನ್ನಾರು ಹಬೆಸಿ ಎಂಬ ಮೂರು ಶೀಮೆಗಳು ಮಾತ್ರ ಇರುವಂಥ ಐಥಿಯೊಪಿಯವೆಂತ, ನೆನಸಿದ್ದರೆ ಅದು ಅಸತ್ಯವೇ ಆಗುತ್ತಿತ್ತು; ಹ್ಯಾಗಂದರೆ ಅವರಿಗೆ ಮುಂಚೆ ಸುಮಾರು ಕ್ರಿ. ಶ. 230ನೇ ವರುಷ ಅಲೆಕ್ಸಂದರೀಯದ ಒರೀಗೆನನೆಂಬ ಪ್ರಖ್ಯಾತ ಸಭಾಪಿತನು ಬರೆದದೊಂದು ಸಾಂಪ್ರದಾಯಿಕ ವರ್ತಮಾನದ ಪ್ರಕಾರ ಥೋಮನು ಹಬೆಸಿ ಮುಂತಾದ ಆ ಶೀಮೆಗಳಿಗೆ ಬಹು ದೂರ, ಈ ನಮ್ಮ ದೇಶಕ್ಕೆ ಸಮೀಪ, ಮೂಲಪಾರ್ಥಿಯದಲ್ಲಿ ಪ್ರವೃತ್ತಿ ನಡಿಸಿದನು. ಆ ವರ್ತಮಾನವೇನಂದರೆ— ಕ್ರಿಸ್ತರಕ್ಷಕನ ಅಪೊಸ್ತಲರೂ ಶಿಷ್ಯರೂ ಆದವರು ಸಮಸ್ತ ಭೂಮಿಯ ಮೇಲೆ ಪಸರಿಸಿ ಹೋಗುವ ಹಾಗಿದ್ದಾಗ ಒಂದು ಸಾಂಪ್ರದಾಯಿಕ ಮಾತಿನ ಮೇಲೆ ಥೋಮನಿಗೆ ಪಾರ್ಥಿಯವು ನೇಮಿತವಾಯಿತು[1].—ಅದು ವಿನಹ ಒರೀಗೆನನಿಗೂ ಮುಂಚಿತವಾಗಿ ಹಿಪ್ಪೊಲುತನೆಂಬ ಸಭಾಪಿತನು, ಥೋಮನ ವೃತ್ತಿಪ್ರದೇಶಗಳು ಪಾರ್ಥಿಯ ಪಾರ್ಶಿಯ ಹಿಂದು ದೇಶವೆಂತ, ಲೇಖಿಸಿದ್ದನು[2]. ಇಂತಾದರೆ, ಥೋಮನು ಕಾಲುನಡೆಯಲ್ಲಿ ಪಾರ್ಥಿಯದಿಂದಲಾಗಲಿ ನಗ ಹತ್ತಿ ಪಾರ್ಶಿಕ ಸಮುದ್ರಕೊಲ್ಲಿಯಿಂದಲಾಗಲಿ ನಮ್ಮ ಈ ಹಿಂದು ದೇಶಕ್ಕೆ ಬಂದನೆಂತ, ಆಲೋಚಿಸುವದು ಸಹಜ. ಮಲಯಾಳದಲ್ಲಿ ಥೋಮಕ್ರೈಸ್ತರೆನ್ನಿಸಿ ಕೊಳ್ಳುವ ಸುರಿಯಕ (ಅಂದರೆ ಸುರಿಯ ದೇಶದ ಸಭೆಗಳಿಗೆ ಸಂಬಂಧಿಗಳಾದಂಥ) ಕ್ರೈಸ್ತರಿದ್ದಾರಲ್ಲ? ಇವರಲ್ಲಿ ಒಂದು ಪ್ರಾಚೀನ ಸುದ್ದಿ ಇರುವದೇನಂದರೆ—ಥೋಮ ಅಪೊಸ್ತಲನು ಹಡಗದಲ್ಲಿ ಮಲಯಾಳಕ್ಕಿಳಿದು, ಅಲ್ಲಿ ಬೋಧಿಸಿ, ಚನ್ನಪಟ್ಣಕ್ಕೆ ಗಮಿಸಿ, ಅಲ್ಲಿಂದ ಹೊರಟು, ಲಂಕಾದ್ವೀಪದಲ್ಲಿಯೂ ಚೀನದೇಶದಲ್ಲಿಯೂ ಸುವಾರ್ತೆ ಸಾರಿ, ಬಳಿಕ ಚನ್ನಪಟ್ಣಕ್ಕೆ ಪುನರಾಗಮನ ಮಾಡಲಾಗಿ, ಅದರದೊಂದು ನೆರೆ ಊರಾದ ಮೈಲಾಪುರಗ್ರಾಮದಲ್ಲಿ ಇಬ್ಬರು ಬ್ರಾಹ್ಮಣರು ಅವನನ್ನು ಕೊಂದರು.—

ಸುಮಾರು ಕ್ರಿ. ಶ. 192ನೇ ವರುಷ ಅಲೆಕ್ಸಂದರೀಯ ಪಟ್ಣದ ಪಂತೇನನೆಂಬ ಕ್ರೈಸ್ತ ಬೋಧಕನು[3] ಈ ನಮ್ಮ ದೇಶಕ್ಕೆ ಬಂದನು. ಈ ವಿಷಯವಾಗಿ ಯುಸೆಬಿಯನ ಸಭಾಚರಿತ್ರದಲ್ಲಿ ಹೀಗದೆ[4]—ಅಲೆಕ್ಸಂದರೀಯದ ಪಂತೇನನು ದೇವವಾಕ್ಯದಲ್ಲಿ ಬಹು ಆಸಕ್ತಿಯುಳ್ಳವನಾದ್ದರಿಂದ (ಅಲೆಕ್ಸಂದರೀಯಕ್ಕೆ) ಮೂಡಣ ದೆಸೆಯ

1) Euseb. h. e. III, 1; Rufin. h. e. X, 9; 78ನೇ ಪಾನು; Socrat. h. e. I, 19; 74ನೇ ಪಾನು ನೋಡು. 2) Asseman. Bib. Orient. Tom. III, apud Rev. I. Hough, p 35. 3) Weber III, 117, seq. 4) Euseb. h. e. V, 10; cf. Clem. Alex. Strom. l. I, where this scholar of Pantaenus shows an intimate acquaintance with the philosophy in India Proper.

ಜನಾಂಗಗಳಿಗೆ ಕ್ರಿಸ್ತನ ಸುವಾರ್ತೆ ಘೋಷಿಸುತ್ತಿರಲು, ಹಿಂದು ಜನರ ದೇಶಕ್ಕಾದರೂ (ತನ್ನ ಅಧ್ಯಕ್ಷನಾದ ದೇಮೇತ್ರಿಯನೆಂಬವನಿಂದ) ಕಳುಹಿಸಿ ಕೊಂಡು ಹೋದನು. ಎಂತೆಂದರೆ ದೇವರ ವಾಕ್ಯ ವಿಸ್ತರಿಸಲಿಕ್ಕೂ ನೆಲೆ ಗೊಳ್ಳಿಸಲಿಕ್ಕೂ ಅಪೊಸ್ತಲರ ಮಾದರಿಗನುಗುಣವಾದ ದಿವ್ಯ ಕುತೂಹಲವನ್ನು ತೋರಿಸುವ ಹಾಗೆ ಚಿಂತಿಸಿ ಕೊಳ್ಳುವಂಥ ಸುವಾರ್ತಿಕರು ಆ ಸಮಯದಲ್ಲಿ ಅನೇಕರೇ; ಇವರೊಳಗೆ ಪಂತೇನನೊಬ್ಬನು. ಇವನು ಹಿಂದು ದೇಶಕ್ಕೆ ಹೋಗಿ, ಬರ್ಥೊಲೊಮಾಯ ಅಪೊಸ್ತಲನು ಪ್ರಸಂಗಿಸಿ ಎಬ್ರೇಯ ಭಾಷೆಯದೊಂದು ಮತ್ಥಾಯನ ಸುವಾರ್ತಾಗ್ರಂಥ ಕೊಟ್ಟು ಬಿಟ್ಟಲ್ಲಿಯ ಹಲವರು ಕ್ರೈಸ್ತರೆಡೆ ಮತ್ಥಾಯನ ಆ ಸುವಾರ್ತೆಯನ್ನು[1] ಇನ್ನೂ ಕಂಡು ಕೊಂಡನೆಂತ, ಪಾರಂಪರ್ಯವಾಗಿ ಹೇಳುತ್ತಾ ಬಂದಿದ್ಧಾರೆ.—ಪಂತೇನನು ಕೆಲವು ವರುಷ ಹಿಂದು ದೇಶದಲ್ಲಿ ಪ್ರಸಂಗವೃತ್ತಿ ನಡಿಸಿದನಂತರ ಐಗುಪ್ತಕ್ಕೆ ಮರಳಿದನು.

ಪಂತೇನನು ಹಿಂದು ದೇಶಕ್ಕೆ ಬಂದು, ಹೋಗಿ, ಸುಮಾರು 35ವರುಷಗಳಾದ ಮೇಲೆ ಕ್ರಿ. ಶ. 230ನೇದಕ್ಕೆ ವೀರ ರಾಘವನೆಂಬವನು ಮಲಯಾಳದಲ್ಲಿ ಚೇರಮಾನ್ ಪೆರುಮಾಳ್ ಅಂದರೆ ಚೇರ (ಶೇಲ) ದೇಶದ ರಾಜನ ಪ್ರತಿನಿಧಿಯು ಆಗಿದ್ದನು; ಈ ಚಕ್ರವರ್ತಿಯು ಆ ವರುಷ ಕೊಡುಂಜಲೂರು ಪಟ್ಣದಲ್ಲಿ ತನ್ನ ಐಶ್ವರ್ಯಾದಿಯಿಂದ ರವಿಕರ್ತನೆಂಬ ಬಿರುದುಹೆಸರು ಪಡೆದವನೊಬ್ಬ ಕ್ರೈಸ್ತ ಶೆಟ್ಟಿಗೆ ಮಣಿಗ್ರಾಮವೆಂಬ ಪಟ್ಣದ ಪಟ್ಟವನ್ನು ಒಂದು ಶಾಸನದ ಮೂಲಕ ಕೊಟ್ಟು, ಬಿಟ್ಟನು[2]. ಆ ದೊಡ್ಡ ಶೆಟ್ಟಿಯ ನಿಜ ಹೆಸರು, ಮಾರ್ ಥೋಮನೆಂತ, ಇತ್ತೆಂಬ ಹಾಗೆ ಕಾಣಿಸುತ್ತದೆ; ಅರ್ಮಿನಿಯ ಅವನ ಜನ್ಮದೇಶವಂತೆ. ತರುವಾಯ ಕ್ರಿ. ಶ. 321ನೇ ವರುಷ ಸ್ತನೂರವಿಗುಪ್ತನೆಂಬ ಕಡೆಯ ಚೇರಮಾನ್ ಪೆರುಮಾಳ್ ಮಲಯಾಳವನ್ನಾಳುತ್ತಿದ್ದು, 352ನೇದರ ತನಕ ಆಳ್ತನದಲ್ಲುಳಿದನು. ಅವನು ತನ್ನ ಕೈಯ ಕೆಳಗೆ ತಿರುವಾಂಕೋಡಿನ ಕಾರುಭಾರ ಮಾಡುವ ಐಯ್ಯನ್ ಆದಿಗಳ್ ಎಂಬವನಿಗೆ ರಾಜನೆಂಬ ಬಿರುದನ್ನಿಟ್ಟನು. ಒಳಿಕ ಆ 321ನೇ ವರುಷದಲ್ಲಿ ಮರುವಾನ್ ಸಪೀರ್ ಇಸೋ (ಮಾರ್ ಯೋಹಾನ ಶಾಹ್ಪೂರ ಈಸನು?) ಎಂಬವನು ಇಸೋದಾತನು (ಯೇಸುದತ್ತನು?) ಎಂಬವನಿಂದ ನಿರ್ಮಿತವಾಗಿದ್ದದೊಂದು ತರಿಸಾ (ತಸರ್ಾ) ಪಳ್ಳಿಗೆ ಅಂದರೆ ಕ್ರೈಸ್ತ ದೇವಾಲಯಕ್ಕೆ ಒಂದು ಇನಾಮು ಕೊಡು

1) 78ನೇ ಪಾನು ನೋಡು. 2) Madras Journal of Literature and Science, April—September, 1859: “Memorandum on the Syrian and Jewish Copper Plates of Malabar, by Kookel Keloo Nair, District Moonsiff in Malabar”. p. 35 ffl. cf. The same Journal, June, 1844. Codungalore is named also ತಿರುವಂಜಿಕುಳಂ or ಮುಯಿರಿಕೋಡು (Musiris?).

ವಾಗ ಆ ನವರಾಜನು ಅದೇ ಅಬ್ದ ಒಂದು ಶಾಸನದಿಂದ ಅದನ್ನು ಸ್ಥಿರ ಪಡಿಸಿದ್ದಲ್ಲದೆ ಹಲವು ವಿಗ್ರಹಾರಾಧಕ ಕುಟುಂಬಗಳನ್ನು ಆ ಪಳ್ಳಿಯ ಸೇವೆಯಲ್ಲಿರಿಸಿ, ಹಲವು ಸ್ವತಂತ್ರಗಳನ್ನು ಸಹ ನೇಮಿಸಿತ್ತನು[1].

ಕ್ರಿ. ಶ. 325ನೇ ವರುಷಕ್ಕೆ ಮುಂಚೆ ಆ ಮಲಯಾಳದ ಕ್ರೈಸ್ತರಿಗೆ ಹಳೇ ಮತ್ತು ಹೊಸ ಒಡಂಬಡಿಕೆ ಎಂಬ ಪೂರ್ಣ ದೇವವಾಕ್ಯವು ಸುರಿಯಕ ಭಾಷಾಂತರದಲ್ಲಿ ಇತ್ತು. ಕ್ರಿ. ಶ. 325ನೇ ವರುಷ ಸಣ್ಣ ಅಸಿಯದ ನೀಕೇಯ ಪಟ್ಣದಲ್ಲಿ ಮೊದಲಿನ ಆ ಸರ್ವಸಭಾಸಂಘವು ಕೂಡುವಾಗ ಪಾರ್ಶಿಸ್ಥಾನದ ಮತ್ತು ದೊಡ್ಡ ಹಿಂದು ದೇಶದ ಕ್ರೈಸ್ತ ಸಭೆಗಳ ಅಂದಿನ ಅಧ್ಯಕ್ಷನಾದ ಆ ಯೋಹಾನನು ಸಹ ಅಲ್ಲಿಗೆ ಬಿಜ ಮಾಡಿದನು[2]. ನಮ್ಮ ಹಿಂದು ದೇಶದಲ್ಲಿಯ ಕ್ರೈಸ್ತರು ಆ ಸಮಯ ಪಾರ್ಶಿಸ್ಥಾನದ ಕ್ರೈಸ್ತ ಸಭಾಧ್ಯಕ್ಷರ ಪರಿಪಾಲನದೊಳಗಿದ್ದರೆಂತ, ಅದರ ಮೇಲೆ ತಿಳ ಕೊಳ್ಳುತ್ತೇವೆ. ಕ್ರಿ. ಶ. 345ನೇ ವರುಷಕ್ಕೆ ಒಬ್ಬ ಕ್ರೈಸ್ತ ಸಭಾಧ್ಯಕ್ಷನು ಬೇರೆ ಬೋಧಕರ ಸಂಗಡ ಯೆರೂಸಲೇಮು ಪಟ್ಣದಿಂದ ಮಲಯಾಳಕ್ಕೆ ಬಂದನಂತೆ.

ತರುವಾಯ, ತಾನು ಜಲಯಾನವಾಗಿ ಹಿಂದು ದೇಶಕ್ಕೆ ಬರುತ್ತಾ ಹೋಗುತ್ತಾ ಇದ್ದದರಿಂದ ಹಿಂದುಸಮುದ್ರಪ್ರಯಾಣಿಕನೆನ್ನಿಸಿ ಕೊಳ್ಳುತ್ತಿರುವ ಕೊಸ್ಮನೆಂಬ ಒಬ್ಬ ಐಗುಪ್ತ್ಯ ವ್ಯಾಪಾರಸ್ಥನು ಸುಮಾರು ಕ್ರಿ. ಶ. 530ನೇ ವರುಷಕ್ಕೆ ಬರೆದ್ದೇನೆಂದರೆ—ಹಿಂದು ಅರ್ಧದ್ವೀಪದ ಪಶ್ಚಿಮ ತೀರದಲ್ಲಿ ತಕ್ಕ ಹೆಸರು ಗೊಂಡ ಪಟ್ಣಗಳಲ್ಲಿ ಕ್ರೈಸ್ತ ಸಭೆಗಳು ಅವೆ; ಒಳಗಿನ[3] ಹಿಂದು ದೇಶಕ್ಕೆ ಶೇರಿರುವ ಲಂಕಾದ್ವೀಪದಲ್ಲಿ ಪಾರ್ಶಿ ಕ್ರೈಸ್ತರ ಒಂದು ಸಭೆಯದೆ, ಇವರು ಪಾರ್ಶಿ ದೇಶದಲ್ಲಿ ಹಸ್ತ್ರಾಧಾನ ಹೊಂದಿದ ಒಬ್ಬ ಪ್ರೆಸ್ಬುತೆರನ (ಅಂದರೆ ಹಿರಿಯನ) ಅಧ್ಯಕ್ಷತೆಯೊಳಗೆ ಇದ್ದಾರೆ; ಅದಲ್ಲದೆ ಮಲಯಾಳದಲ್ಲಿಯೂ ಒಂದು ಸಭೆ; (ಕೊಂಕಣದ) ಕಲ್ಯಾಣಿಯಲ್ಲಿರುವ ಅಧ್ಯಕ್ಷನಿಗೆ ಸಹ ಪಾರ್ಶಿಸ್ಥಾನದಲ್ಲಿ ಹಸ್ತ್ರಾಧಾನವಾಯಿತು; ದ್ವೀಪಸುಖತರದಲ್ಲಿ[4] ಅದೇ ತರವಾಗಿದೆ.—ಆ ಸಮಯ ಸಹ ಹಿಂದು ದೇಶದ ಸಭೆಗಳು ಸಾಸಾನಿದ ಸಾಮ್ರಾಜ್ಯದೊಳಗಿನ[5] ಮುಖ್ಯಾಧ್ಯಕ್ಷನ ಕೈಯ ಕೆಳಗಿದ್ದವು.

## ಅರಬಿಸ್ಥಾನ.

ಪಲೇಸ್ತೀನರಾಜ್ಯದ ದಕ್ಷಿಣಪೂರ್ವ ಭಾಗವಾದ ಇದೂಮೇಯದವರು ಒಮ್ಮೆ, ಕ್ರಿಸ್ತನು ಇನ್ನು ಭೂಮಿಯಲ್ಲಿ ಬದುಕುವಾಗ, ಅವನ ಮಹತ್ಕ್ರಿಯೆಗಳ ಸುದ್ದಿ

1) The same Memorandum, p. 46 ffl. 2) Act. Synod. Nicaen. II, c. 28; 74ನೇ ಪಾನು. 3) 79ನೇ ಪಾನು. 4) 78ನೇ ಪಾನು. H. Venn's Xavier, p. 22. 5) 75ನೇ ಪಾನು ನೋಡು.

ಕೇಳಿ, ಅವನನ್ನು ನೋಡ ಬೇಕೆಂತ, ಬಂದರು[1]. ಈ ಇದೂಮೇಯ ನಾಡಿಗೆ ದಕ್ಷಿಣಪೂರ್ವದಲ್ಲಿ ಅರಬಿಸ್ಥಾನವು ಹತ್ತುತ್ತದೆ. ಕೆಲವರು ಯೆಹೂದ್ಯಮತಸ್ಥರಾದ ಅರಬಿಯರು ಪ್ರಥಮ ಪಂಚಾಶತ್ತಮದಿನಹಬ್ಬಕ್ಕೆ ಯೆರೂಸಲೇಮಿನಲ್ಲಿ ಪೆತ್ರ ಅಪೊಸ್ತಲನ ಪ್ರಸಂಗದ ಶ್ರವಣ ಮಾಡಿದರು[2]; ತದನಂತರ ಪೌಲ ಅಪೊಸ್ತಲನು ಅರಬಿಸ್ಥಾನದಲ್ಲಿ ಸುವಾರ್ತೆ ಸಾರಿದನು[3]. 3ನೇ ಕ್ರಿಸ್ತ ಶತಮಾನಾರಂಭಕ್ಕೆ ಉತ್ತರ ಅರಬಿಸ್ಥಾನದಲ್ಲಿರುವ ಒಬ್ಬ ರೋಮಿಾಯ ಪ್ರತಿನಿಧಿಯು ಅಲೆಕ್ಸಂದರೀಯ ಪಟ್ಟದ ಒಂದು ದೊಡ್ಡ ಕ್ರೈಸ್ತ ಉಪದೇಶಿಶಾಲೆಗೆ ಆ ವೇಳೆ ಮುಖ್ಯಸ್ಥನಾದ ಆ ಒರೀಗೆನ ನೆಂಬವನನ್ನು[4] ಸತ್ಯಸಂಭಾಷಣೆಗೋಸ್ಕರ ತನ್ನ ಬಳಿಗೆ ಕರ ತರಿಸಿದನು. ತದನಂತರ ಒರೀಗೆನನು ಕ್ರಿ. ಶ. 244ನೇ ಮತ್ತು 250ನೇ ವರುಷ ಉತ್ತರ ಅರಬಿಸ್ಥಾನದಲ್ಲಿ ಒಂದರ ಹಿಂದೆ ಒಂದಾಗಿ ಕೂಡುವ ಅನೇಕ ಮಂದಿ ಸಭಾಧ್ಯಕ್ಷರ ಸಂಘಗಳಿಗೆ ಸಹ, ಪಲೇಸ್ತೀನದ ಕೈಸರೈಯ ಬಂದರಸ್ಥಳದಿಂದ ಅಂದಂದು ಹೊರಟು, ಹೋದನು. ಆ ಸಮಯದಲ್ಲಿ ಅರಬಿ ಅರಣ್ಯದ ಬಹಳ ಜನಕುಲಗಳು ಕ್ರೈಸ್ತತ್ವ ಪಡ ಕೊಂಡಿದ್ದವು; ಅರಬಿಸ್ಥಾನದ ನಡುಶೀಮೆಯಾದ ನಜ್ರಾನಿನಲ್ಲಿಯೂ ಒಂದು ಕ್ರೈಸ್ತ ಸಭೆ ಹುಟ್ಟಿತ್ತು. ಅದರ ದಕ್ಷಿಣ ಶೀಮೆಯಾದ ಯೆಮೆನ್ ಎಂಬಲ್ಲಿ ಆಳುವ ಅಬ್ದ್ ಕೆಲಾಲ್ ಕ್ರಿ. ಶ. 275ನೇ ವರುಷ ಕ್ರಿಸ್ತನ ಭಕ್ತನಾಗಿ ಕಾಣಿಸಿದನು. ಒರೀಗೆನನು ಸತ್ತು 96 ವರುಷಗಳಾದ ಮೇಲೆ ಕ್ರಿ. ಶ. 350ನೇದರಲ್ಲಿ ಥೆಯೊಫಿಲನೆಂಬವನೊಬ್ಬನು ಆ ದಕ್ಷಿಣ ಅರಬಿಸ್ಥಾನದಲ್ಲಿ ಕ್ರೈಸ್ತ ಉಪದೇಶ ಹೇಳಿದನು; ಇವನು ದ್ವೀಪ ಸುಖತರದಲ್ಲಿ[5] ಜನಿಸಿ, ಚಿಕ್ಕ ಪ್ರಾಯದಲ್ಲಿ ಕೊನ್ಸ್ತಂತೀನೊಪೊಲಿ ಎಂಬದೊಂದು ರೋಮಿಾಯ ನಗರಕ್ಕೆ[6] ಹೋಗಿ, ಕ್ರೈಸ್ತನಾಗಿ, ಬೋಧಕವಿದ್ಯೆ ಕಲಿತಿರಲು, ಕ್ರಿಸ್ತನವನೆನ್ನಿಸುವ ಆಗಿನ ಕೊನ್ಸ್ತಂತಿಯನೆಂಬ ಕೈಸರನು[7] ಅವನನ್ನು, ಅರಬಿಸ್ಥಾನದ ಅಧ್ಯಕ್ಷನೆಂದು, ಅಲ್ಲಿಗೆ ಕಳುಹಿಸಿದ್ದನು. ಆ ಥೆಯೊಫಿಲನು ಹಿಂದು ಜಾತಿಯವನೆಂತ, ಊಹಿಸುತ್ತಾರೆ. ಆ ಅಬ್ದ್ ಕೆಲಾಲ್ ಎಂಬವನ ಮಗನು ಅಂದು ಯೆಮೆನ್ ಶೀಮೆಯ ಆಳ್ತನಕ್ಕೆ ಬಂದಿದ್ದನು; ಇವನು ಅವನ ಪ್ರಸಂಗದಿಂದ ಕ್ರಿಸ್ತನ ಭಕ್ತನಾಗಿ, ತನ್ನ ರಾಜಧಾನಿಯಾದ ತಾಫರಿನಲ್ಲಿಯೂ ರೋಮಿಾಯ ಬಂದರಸ್ಥಳವಾದ ಅದನ್[8] ಮತ್ತು ಪಾರ್ಶಿ ವ್ಯಾಪಾರಸ್ಥಳವಾದ ಹೊರ್ಮುಜ್ ಪಟ್ಟಗಳಲ್ಲಿಯೂ ಒಂದೊಂದು ದೇವಾಲಯ ಕಟ್ಟಿಸಿದನು.

---

1) ಮಾರ್ಕ. 3, 8; 20ನೇ, 22ನೇ, 23ನೇ, 34ನೇ ಪಾನುಗಳು ನೋಡು. 2) 18ನೇ, 28ನೇ ಪಾನುಗಳು ನೋಡು. 3) 32ನೇ ಪಾನು ನೋಡು. 4) 53ನೇ, 80ನೇ ಪಾನುಗಳು. 5) 78ನೇ, 82ನೇ ಪಾನುಗಳು ನೋಡು. 6) 21ನೇ ಸಂಧಿ ನೋಡು. 7) 21ನೇ ಸಂಧಿಯ ಕಡೆಯನ್ನೂ 23ನೇ, 24ನೇ ಸಂಧಿಗಳನ್ನೂ ನೋಡು. 8) 77ನೇ ಪಾನು ಸರಿ ನೋಡು.

## 2. ಆಫ್ರಿಕ ಖಂಡ.

### ಕೆಳಗಿನ ಐಗುಪ್ತ.

ಪೌಲನ ಮತ್ತು ಪೇತ್ರನ ಜೊತೆಗಾರನಾದ ಮರ್ಕನು ಒಂದು ಸುವಾರ್ತಾ ಗ್ರಂಥ ಬರೆದನಲ್ಲ[1]? ಆ ಇಬ್ಬರು ಅಪೊಸ್ತಲರ ಮರಣಕ್ಕೆ ಈಚೆ ಅವನು ರೋಮಪುರವ ಬಿಟ್ಟು, ಐಗುಪ್ತ ದೇಶದ ಅಲೆಕ್ಸಂದರೀಯವೆಂಬ ಆ ಪ್ರಖ್ಯಾತ ಪಟ್ಟಣಕ್ಕೆ ಗಮಿಸಿ, ಅಲ್ಲಿಯೂ ಅದರ ನೆರೆನಾಡಿನಲ್ಲಿಯೂ ಹಲವು ಸಭೆಗಳನ್ನು ಸ್ಥಾಪಿಸಿ, ಅವುಗಳ ಅಧ್ಯಕ್ಷತೆ ನಡಿಸಿ, ದಿನಗತಿಯಿಂದ ರಕ್ತಸಾಕ್ಷಿಮರಣದವನಾದನು; ಅಲೆಕ್ಸಂದರೀಯದಲ್ಲಿ ಹಿಂದಗಡೆ ಬಹು ಕೀರ್ತಿ ಗೊಂಡ ಉಪದೇಶಿಶಾಲೆಯ ಮೂಲಕನು ಅವನೇ. ಸುಮಾರು ಕ್ರಿ. ಶ. 180ನೇ ವರುಷಕ್ಕೆ ಪಂತೇನನು ಆ ಶಾಲೆಯ ಮುಖ್ಯಸ್ಥನಾದನು; ಇವನು ಕ್ರೈಸ್ತನಾಗುವದಕ್ಕಿಂತ ಮುಂಚೆ ಮೂರ್ತಿಪೂಜಕರಲ್ಲಿ ದೊಡ್ಡ ಪಂಡಿತನೆನ್ನಿಸಿ ಕೊಂಡಿದ್ದನು. ಅವನು ಕ್ರಿ. ಶ. ಸುಮಾರು 192ನೇ ವರುಷದಲ್ಲಿ ಈ ನಮ್ಮ ಹಿಂದು ದೇಶಕ್ಕೆ ಬಂದು, ಕೆಲವು ವರುಷ ಸುವಾರ್ತೆ ಸಾರಿದನೆಂತ, ಹಿಂದೆ ಹೇಳೋಣವಾಯಿತು[2]. ಇಲ್ಲಿಂದ ಹಿಂದಿರುಗಲಾಗಿ, ಅವನು ಮುಂಚೆ ತನ್ನ ಶಿಷ್ಯನಾಗಿದ್ದ ಕ್ಲೇಮೆಂತನೆಂಬವನ ಸಂಗಡ ಆ ಶಾಲೆ ನೋಡಿ, ತಾನು 20 ವರುಷ ಆ ಕೆಲಸದಲ್ಲಿದ್ದು ಮುದುಕನಾದ ಮೇಲೆ ಕ್ರಿ. ಶ. 200ನೇ ವರುಷದಲ್ಲಿ ಅದನ್ನು ಕ್ಲೇಮೆಂತನೊಬ್ಬನ ಕೈಗೆಯೇ ಒಪ್ಪಿಸಿ ಕೊಟ್ಟನು. 3 ವರುಷದನಂತರ ಆ ಒರೀಗೆನನೆಂಬ ಅವರ ಶಿಷ್ಯರಲ್ಲೊಬ್ಬನು[3] ಆ ಶಾಲೆಯ ಮೇಲೆ ವಿಚಾರಕನಾದನು. ಕ್ರಿ. ಶ. 134ನೇ ವರುಷದಲ್ಲಿಯಾದರೂ ಆ ಮಹಾ ಅಲೆಕ್ಸಂದರೀಯದಲ್ಲಿ ಬಹುಶಃ ಮೂರ್ತಿಪೂಜಕರೆಷ್ಟು ಮಂದಿಯೋ, ಅವರಷ್ಟೇ ಕ್ರೈಸ್ತರಿದ್ದರು[4].

### ಲಿಬುಯ, ನುಮಿದಿಯ.

ಅಲೆಕ್ಸಂದರೀಯದಿಂದ ಆಫ್ರಿಕ ಖಂಡದ ಉತ್ತರ ಸಮುದ್ರತೀರದಲ್ಲಿ ಪಶ್ಚಿಮದಿಕ್ಕಿಗೆ ಸುವಾರ್ತೆಯು ಬೇಗ ವಿಸ್ತರಿಸುತ್ತಾ ಹೋಯಿತು. ಅತ್ಲಾಗಿನದೊಂದು ದೇಶವಾದ ಲಿಬುಯದಲ್ಲಿ ಕೂರೇನೆ ಎಂಬ ಪಟ್ಟಣವು[5]; ಈ ಪಟ್ಟಣದ ಕೆಲವರು ಪ್ರಥಮ ಪಂಚಾಶತ್ತಮದಿನಹಬ್ಬದಲ್ಲಿ ಪೇತ್ರ ಅಪೊಸ್ತಲನ ಪ್ರಸಂಗ ಕೇಳಿದ್ದರು[6]; ಕ್ರಿ. ಶ. 45ನೇ ವರುಷ ಸುರಿಯದ ಅಂತಿಯೊಖೀಯ ಪಟ್ಟಣದಲ್ಲಿದ್ದ ಲೂಕಿಯನೆಂಬ ಒಬ್ಬ

---

1) 58ನೇ ಪಾನು ನೋಡು. 2) 81ನೇ ಪಾನು ನೋಡು. 3) 83ನೇ ಪಾನು. 4) The emperor Hadrian's letter to his brother in law. 5) 7ನೇ, 18ನೇ, 29ನೇ, 35ನೇ ಪಾನುಗಳು ನೋಡು. 6) 29ನೇ ಪಾನು ನೋಡು.

ಕ್ರೈಸ್ತ ಬೋಧಕನು ಕೂರೇನೆಯವನೇ[1]. ಕ್ರಿ. ಶ. 200ನೇ ವರುಷದಲ್ಲಿ ಲಿಬುಯದ ಸಭೆಗಳು ದೊಡ್ಡ ಹೆಸರಿಗೆ ಬಂದಿದ್ದವು[2].

ಲಿಬುಯಕ್ಕೆ ಪಶ್ಚಿಮದಲ್ಲಿರುವ ನುಮಿದಿಯ[3] ದೇಶದ ರಾಜಧಾನಿಯಾದ ಕರ್ಥಾಗೊ (ತೂನಿಸ್) ಎಂಬಲ್ಲಿ ತೆರ್ತುಲ್ಲಿಯಾನನೆಂಬ ಕೀರ್ತ್ಯ ರಾಜನೀತಿಶಾಸ್ತ್ರಿಯು ಕ್ರಿ. ಶ. 190ನೇ ವರುಷದಲ್ಲಿ ಕ್ರಿಸ್ತನ ಕಡೆಯವನಾಗಿ, ಸುಮಾರು 3 ವರುಷದ ಮೇಲೆ ಅಲ್ಲಿಯ ಸಭೆಯ ಹಿರಿತನ ಹೊಂದಿದನು; ಆ ವೇಳೆ ಆ ಪಟ್ಣದ ಅತಿರೇಕ ನಿವಾಸಿಗಳಲ್ಲಿ ಹತ್ತತ್ತು ಮಂದಿಯೊಳು ಒಬ್ಬೊಬ್ಬನು ಕ್ರೈಸ್ತನು[4]. ಕ್ರಿ. ಶ. 203ನೇದಕ್ಕೆ ಕರ್ಥಾಗೊವಿನಲ್ಲಿ 70 ಮಂದಿ ಕ್ರೈಸ್ತ ಅಧ್ಯಕ್ಷರು ಕೂಡಿ ಬಂದರು[5]; ಸುಮಾರು 50 ವರುಷದ ಮೇಲೆ (ಕ್ರಿ. ಶ. 256ನೇದಕ್ಕೆ) 87 ಮಂದಿ; ಇನ್ನು ಸುಮಾರು 50 ವರುಷದ ಮೇಲೆ 456 ಮಂದಿ. ಆಗ ಅಲ್ಲಿಯ ಹಿಪ್ಪೊ (ಬೋನ) ಪಟ್ಣದ ಕ್ರೈಸ್ತರು ಸಹ ಹೆಸರಿಗೆ ಬಂದರು.

### ನೀಲ ನದಿಯ ಬೈಲು.

ಅಲೆಕ್ಸಂದರೀಯ ಪಟ್ಣದ ದಕ್ಷಿಣಕ್ಕೆ ನೀಲ ನದಿಯು ಹರಿದು ಬರುವ ಬೈಲಿನಲ್ಲಿ ಸಹ ಕ್ರೈಸ್ತತ್ವವು ತೀವ್ರವಾಗಿ ಎಡೆ ಗೊಂಡಿತು; ಗ್ರೇಕ ದೇಶದಿಂದ ಬಂದ ಕ್ರೈಸ್ತ ಪರವಾಸಿಗಳು ಅಲ್ಲಿ ಮೊದಲಿಗೆ ಪ್ರಸಂಗಿಸುವವರಾದರು; ಕೊಪ್ತರೆಂಬ ಮೂಲಐಗುಪ್ತ್ಯರಲ್ಲಿ ಅನೇಕರು ಅವರ ಮುಖಾಂತರದಿಂದ ಕ್ರೈಸ್ತರಾದರು. ಕ್ರಿ. ಶ. 202ನೇ ವರುಷ ಅತ್ತಲಾಗಿನ ಕ್ರೈಸ್ತರ ಮೇಲೆ ಒಬ್ಬ ರೋವಿಾಯ ಕೈಸರನಿಂದ ಕ್ರೂರ ಹಿಂಸೆಯು ಬಂತು. ಅಂದಿನಿಂದ 50 ವರುಷಗಳ ಈಚೆ ಹೊಸ ಒಡಂಬಡಿಕೆ ಎಂಬ ದೇವವಾಕ್ಯೋತ್ತರಭಾಗವು ಅವರ ಭಾಷೆಯಲ್ಲಿಯೇ ಅವರಿಗಿತ್ತು.

### ಹಬೆಸಿ ದೇಶ.

ನೀಲ ನದಿಯ ಬೈಲಿಗೆ ದಕ್ಷಿಣದಲ್ಲಿ ಐಥಿಯೊಪಿಯದ್ದೊಂದು ಪರ್ವತದೇಶವಾದ ಹಬೆಸಿಯವರಿಗೆ ಕ್ರಿಸ್ತನಲ್ಲಿಯ ರಕ್ಷಣವು ಸುಮಾರು ಕ್ರಿ. ಶ. 320ನೇ ವರುಷದಲ್ಲಿ ಗೊತ್ತಾಯಿತು. ಹ್ಯಾಗಂದರೆ ಅಂದು ಫೊಯಿನೀಕೆ ಶೀಮೆಯ ತುರ ಪಟ್ಣದ[6] ಒಬ್ಬ ಪಂಡಿತನು, ಐಗುಪ್ತ ದೇಶದ ದಕ್ಷಿಣದಲ್ಲಿರುವ ಶೀಮೆಗಳನ್ನು ನೋಡಬೇಕೆಂತ, ಪಯಣ ಹೊರಟು, ಹಬೆಸಿ ದೇಶದ ಒಂದು ಬಂದರದಲ್ಲಿ ಲಂಗರ ಹಾಕಲಾಗಿ, ಆ ಕಡೆಯ ಕಾಡುಜನರು ಅವನನ್ನೂ ಅವನ ಸಂಗಡಿಗರನ್ನೂ ಕೊಲ್ಲುವಲ್ಲಿ ಅವನ ನೆಂಟರಾದ ಇಬ್ಬರು ಕ್ರೈಸ್ತರನ್ನು ಮಾತ್ರ ಅಂತಃಕರಣ ಪಟ್ಟು ಉಳಿಸಿ,

1) ಅಪೊ. ಕ್ರಿ. 13, 1; cf. ಮರ್ಕ. 15, 21; ಲೂಕ. 23, 26. 2) Irenaeus I, 3. 3) 7ನೇ, 51ನೇ ಪಾನು. 4) Tertull. adv. Scapul. V. 5) Augustin. de bapt. II, 13. 6) 31ನೇ ಪಾನು.

ತಮ್ಮ ರಾಜನ ಬಳಿಗೆ ತಕ್ಕೊಂಡು ಹೋದರು. ಆ ಹಬೆಸಿ ರಾಯನು ಆ ಯೌವನಸ್ಥರಿಗೆ ಮೆಚ್ಚಿ, ದೊಡ್ಡ ಉದ್ಯೋಗ ಕೊಟ್ಟನು. ಅವನು ತೀರಿ ಹೋದನಂತರ ಅವನ ವಿಧವೆಯು ಉತ್ತರಾಧಿಕಾರಿಯಾಗಲಿಕ್ಕೆ ತಕ್ಕ ಶ್ರೀಮಂತನನ್ನು, ಚಂದಾಗಿ ಬುದ್ಧಿ ಕಲಿಸಿರೆಂತ, ಅವರಿಗೆ ಒಪ್ಪಿಸಿತ್ತಳು. ಅವರು ಸರ್ವತ್ರ ಸುವಾರ್ತೆ ಹೇಳುತ್ತಾ ಇರುವದಲ್ಲದೆ ಐಗುಪ್ತದಿಂದ ಕ್ರೈಸ್ತ ವ್ಯಾಪಾರಸ್ಥರನ್ನು ಕರಿಸಿ, ಹಬೆಸಿಯಲ್ಲಿ ನೆಲೆಗೊಳ್ಳಿಸುವರು. ಅವರಿಗೆ ಸ್ವಶೀಮೆಗೆ ತಿರಿಗಿ ಹೋಗುವದಕ್ಕೆ ಅಪ್ಪಣೆಯಾದಾಗ ಅವರಲ್ಲಿ ಫ್ರೂಮೆಂತಿಯನೆಂಬವನು, ಆ ಐಥಿಯೊಪಿಯ ದೇಶಕ್ಕೆ ಸುವಾರ್ತೆಯ ಆಶೀರ್ವಾದವನ್ನು ಕ್ರೈಸ್ತಸಭಾಧಿಕಾರದಿಂದ ಹೆಚ್ಚಿಸ ಬೇಕೆಂದು, ಅಲೆಕ್ಸಂದರೀಯ ಪಟ್ಣದಲ್ಲಿ ಕ್ರಿ. ಶ. 328ನೇ ವರುಷ ಅಧ್ಯಕ್ಷನಾಗಿದ್ದ ಅಥನಾಸಿಯನ ಬಳಿಗೆ ಹೋಗಿ, ತನ್ನ ಆಲೋಚನೆ ಹೇಳಿ ಕೊಳ್ಳಲು, ಇವನು ಅವನನ್ನೇ, ಅಧ್ಯಕ್ಷನೆಂತ, ಹಸ್ತಾಧಾನ ಮಾಡಿ, ಅಲ್ಲಿಗೆ ಕಳುಹಿಸಿದನು. ಫ್ರೂಮೆಂತಿಯನು ಅಲ್ಲಿ ಐಜಾನನೆಂಬ ತಾನು ಮುಂಚೆ ವಿದ್ಯೆ ಕಲಿಸಿದ ಆ ಯುವರಾಜನಿಗೆ ಸ್ನಾನ ಕೊಟ್ಟು, ಹಬೆಸಿ ಸಭೆಗಳನ್ನು ವೃದ್ಧೀಕರಿಸುತ್ತಾ ಬಂದನು. ದೇವರ ವಾಕ್ಯವನ್ನು ಹಬೆಸಿ ಭಾಷಾಂತರ ಮಾಡಿ ಕೊಟ್ಟವನು ಇವನೇ ಎಂತ, ಕೆಲವರು ಹೇಳುತ್ತಾರೆ. ಅವನು ಇನ್ನು ಜೀವದಿಂದ ಇರುವಾಗ ಕ್ರಿ. ಶ. 356ನೇ ವರುಷ ದ್ವೀಪಸುಖತರಜನಾದ ಆ ಥೆಯೊಫಿಲನು[1] ಅರಬಿಸ್ಥಾನದಿಂದ ಹಬೆಸಿಗೆ ಬಂದು, ಅಲ್ಲಿ ಸ್ವಲ್ಪ ಕಾಲ ಪ್ರಸಂಗಿಸಿ, ತಿರಿಗಿ ಹೋದನು.

### 3. ಯುರೋಪ ಖಂಡ.

#### ಗ್ರೇಕಿಯ, ಈತಲಿಯ.

ಸಣ್ಣ ಅಸಿಯದ ತೀರದಿಂದ ಸಮುದ್ರಮಾರ್ಗವಾಗಿ ಪಶ್ಚಿಮಕ್ಕೆ ಹೋದರೆ, ಯುರೋಪ ಖಂಡದಲ್ಲಿ ಗ್ರೇಕಿಯವು ಮೊದಲು ಹತ್ತುತ್ತದೆ; ಇದರಲ್ಲಿ ಮುಖ್ಯವಾಗಿ ಪೌಲನು ಸುವಾರ್ತಾಪ್ರಸಂಗದ ವೃತ್ತಿ ನಡಿಸಿದ್ದು ಹಿಂದೆ ವಿವರಿಸಿ ತೀರಿತು[2]; ಬಳಿಕ ಕ್ರೈಸ್ತತ್ವವು ಅಲ್ಲಿಯ ರಾಜಧಾನಿಯಿಂದ ಪಟ್ಣಗಳಿಗೂ ಊರುಗಳಿಗೂ ಹಳ್ಳಿಗಳಿಗೂ ಪಸರಿಸುತ್ತಲೇ ಇತ್ತು[3]. ಗ್ರೇಕ ದೇಶದ ಪಶ್ಚಿಮದಲ್ಲಿ ಒಂದು ಸಮುದ್ರದಾಚೆ ಈತಲಿಯವೆಂಬ ರೋವಿಾಯ ಮೂಲದೇಶವು; ಅಲ್ಲಿಯ ರೋಮಪುರದ ಕ್ರೈಸ್ತ ಸಭೆಯ ಸುದ್ದಿಯು ಸಹ ಹಿಂದೆ ಹೇಳಿಯದೆ[4]; ಕ್ರಿ. ಶ. 250ನೇ ವರುಷಕ್ಕೂ 258ನೇದಕ್ಕೂ ಮಧ್ಯ ಆ ಪುರದಲ್ಲಿ 5 ಮಂದಿ ಅಧ್ಯಕ್ಷರು ರಕ್ಷಸಾಕ್ಷಿಗಳಾಗಿ ಸತ್ತರು.

---

1) 83ನೇ ಪಾನು. 2) 48ನೇದು ಮೊದಲಾದ ಪಾನು ನೋಡು. 3) Words of Clement and of Origin. 4) 49ನೇದಾದಿ ಪಾನು ನೋಡು.

## ಗಲ್ಲಿಯ.

ಈತಲಿಯಕ್ಕೆ ಉತ್ತರಪಶ್ಚಿಮದಲ್ಲಿ ಗಲ್ಲಿಯ (ಫ್ರಂಕ) ದೇಶವು ಹೊಂದುತ್ತದೆ. ಗಲ್ಲರೆಂತಲೂ ಕೆಲ್ತರೆಂತಲೂ ಗಲತರೆಂತಲೂ ಹೆಸರಿರುವ ಗಲ್ಲಿಯದವರಲ್ಲಿ ಅನೇಕರು ಕ್ರಿಸ್ತನ ಜನ್ಮಕ್ಕೆ ಮುಂಚೆ ಸಣ್ಣ ಅಸಿಯಕ್ಕೆ ಹೋಗಿ, ಅಲ್ಲಿ ಪ್ರವಾಸಿಗಳಾಗಿ, ಪೌಲನಿಂದ ಸುವಾರ್ತೆ ಕೇಳಿದರೆಂತ, ಹಿಂದೆ ಓದಿ ತಿಳಿದಿದ್ಧೀರಿ[1]. ಈ ಸಣ್ಣ ಅಸಿಯದಿಂದ, ಒಂದು ವೇಳೆ ಅಲ್ಲಿಯ ಗಲತ ಕ್ರೈಸ್ತರಿಂದ ಸಹ, ಗಲ್ಲಿಯ ದೇಶದವರಿಗೆ ಕ್ರೈಸ್ತತ್ವವು ತ್ವರ್ಯದಿಂದ ಪ್ರಾಪಿಸಿತೆಂಬ ಹಾಗೆ ಕಾಣುತ್ತದೆ. ಹ್ಯಾಗಂದರೆ ಅಲ್ಲಿಂದ ಗಲ್ಲಿಯಕ್ಕೆ ನಿತ್ಯ ಗಮನಾಗಮನ ಮಾಡುತ್ತಿರುವ ವರ್ತಕರಲ್ಲಿಯೂ ಗಲ್ಲಿಯದಲ್ಲಿ ನೆಲೆಗೊಂಡ ಸಣ್ಣ ಅಸಿಯಕ ಪ್ರವಾಸಿಗಳಲ್ಲಿಯೂ ಮಾತ್ರವಲ್ಲದೆ ರೋವಿಾಯ ಕೈಸರರು ತಮ್ಮ ಸ್ವಾತಂತ್ರ್ಯದೊಳಗಣ ಆ ಗಲ್ಲಿಯಕ್ಕೆ ಸರ್ತಿಯ ಮೇಲೆ ಆಗಿಂದಾಗ ಕಳುಹಿಸುವ ತಮ್ಮ ಸಣ್ಣ ಅಸಿಯಕ ದಂಡಿನಲ್ಲಿ ಸಹ[2] ಅನೇಕ ಮಂದಿ ಸಾಕ್ಷ್ಯಸಕ್ತರಾದ ಕ್ರೈಸ್ತರಿದ್ದರೆಂತ, ನೆನಸುವದು ಸಹಜ; ಅದು ಹೊರ್ತಾಗಿ 2ನೇ ಕ್ರಿಸ್ತಶತಮಾನಕ್ಕೆ ಗಲ್ಲಿಯದ ದಕ್ಷಿಣ ಭಾಗದಲ್ಲಿ ಕ್ರೈಸ್ತ ಸಭಾಧ್ಯಕ್ಷರಾಗುತ್ತಿದ್ದ ನೀಕೇತಿಯನೂ ಪೊಥಿನನೂ ಈರೇನೇಯನೂ ಸಣ್ಣ ಅಸಿಯದವರೇ. ಕ್ರಿ. ಶ. 250ನೇ ವರುಷದಲ್ಲಿ ಏಳ್ವರು ಕ್ರೈಸ್ತ ಬೋಧಕರು ರೋಮಪುರದಿಂದ ಹೊರಮಟ್ಟು, ಹೋಗಿ, ಗಲ್ಲಿಯದ ಉತ್ತರ ಭಾಗದಲ್ಲಿರುವ ಪರೀಸು ಪಟ್ಣದಲ್ಲಿಯೂ ದಕ್ಷಿಣ ಭಾಗದಲ್ಲಿರುವ ತುಲೂಸು ಪಟ್ಣದಲ್ಲಿಯೂ ಇತರ ಐದು ಪಟ್ಣಗಳಲ್ಲಿಯೂ ಸಭೆಗಳನ್ನು ಸ್ಥಾಪಿಸಿದರಂತೆ. ಆದರೆ ಇವಕ್ಕೆ ಮುಂಚೆ ಸಣ್ಣ ಅಸಿಯದವರಿಂದ ಗಲ್ಲಿಯದಲ್ಲಿ ನಿರ್ಮಿತವಾಗಿದ್ದ ಸಭೆಗಳು ಲಿಯೋನ್ ಎಂಬಲ್ಲಿ ಮತ್ತು ವಿಯೆನ್ ಎಂಬಲ್ಲಿ[3] ಇದ್ದವು; ಇವಕ್ಕೆ ಕ್ರಿ. ಶ. 177ನೇ ವರುಷದಲ್ಲಿ ಅಘೋರ ಹಿಂಸೆಯಾದಾಗ ಆ ಪೊಥಿನ ಅಧ್ಯಕ್ಷನು ರಕ್ತಸಾಕ್ಷಿಮರಣ ತಾಳಿದನು; ಅಂದು ಆ ಈರೇನೇಯನು ಅವನ ಉತ್ತರಾಧಿಕಾರಿಯಾದನು.

## ಹಿಸ್ಪಾನಿಯ (ಸ್ಪಾನಿಯ).

ಗಲ್ಲಿಯಕ್ಕೆ ದಕ್ಷಿಣಪಶ್ಚಿಮದಲ್ಲಿ ಸ್ಪಾನಿಯ ದೇಶವು ಹತ್ತುತ್ತದೆ. ಇದರಲ್ಲಿ ಪೌಲ ಅಪೊಸ್ತಲನು ಸುಮಾರು ಕ್ರಿ. ಶ. 65ನೇ ವರುಷಕ್ಕೆ ಸುವಾರ್ತೆ ಪ್ರಸಂಗಿಸಿದಂತೆ ತೋರುತ್ತದೆ[4]; ಕ್ರಿ. ಶ. 180ನೇದಕ್ಕೆ ಅಲ್ಲಿ ಕ್ರೈಸ್ತ ಸಭೆಗಳಿದ್ದದ್ದು ನಿಶ್ಚಯ[5].

---

1) 47ನೇ, 49ನೇ ಪಾನು. 2) ಕ್ರಿ. ಶ. 174ನೇ ವರುಷಕ್ಕೆ ಮುಂಚೆಯೇ ರೋವಿಾಯ ದಂಡುಗಳಲ್ಲಿ ಬಹಳ ಮಂದಿ ಕ್ರೈಸ್ತರಿದ್ದದಕ್ಕೆ ಸಂಶಯವಿಲ್ಲ. 3) 24ನೇ, 34ನೇ ಪಾನುಗಳು. 4) 57ನೇ, 58ನೇ ಪಾನುಗಳು ನೋಡು. 5) Irenaeus I, 3.

### ಗೆರ್ಮಾನಿಯ.

ಗಲ್ಲಿಯಕ್ಕೆ ಉತ್ತರಪೂರ್ವದಲ್ಲಿ ತ್ಯುತೊನಿಯ ಅಂದರೆ ಗೆರ್ಮಾನಿಯ (ಜರ್ಮನಿ) ದೇಶವದೆ. ಇದರಲ್ಲಿ ರೋಮಿಾಯ ಕೈಸರರ ಅಧಿಕಾರವು ಎಲ್ಲಿ ನಡೆಯಿತೋ, ಅಲ್ಲಿಗೆ ಸುವಾರ್ತೆಯು ಅವಿಲಂಬವಾಗಿ ಹೋಗಿ ಮುಟ್ಟಿತು. ಗಲ್ಲಿಯದ ಕಡೆಗಿರುವ ರೈನು (ರೇನ) ಎಂಬ ಗೆರ್ಮಾನ ನದಿಯ ತೀರದಲ್ಲಿ ಕ್ರಿ. ಶ. 180ನೇ ವರುಷಕ್ಕೆ ಕ್ರೈಸ್ತ ಸಭೆಗಳು ಉತ್ಪನ್ನವಾಗಿದ್ದವು[1]. ಕ್ರಿ. ಶ. 313ನೇ ವರುಷ ಹಿಡಿದು ಗೆರ್ಮಾನ ಸಭಾಧ್ಯಕ್ಷರ ಸುದ್ದಿಯು ಬೇರೆ ಬೇರೆ ಸಭಾಸಂಘಗಳಲ್ಲಿ ಬರೆಯುತ್ತಿದ್ದ ಪತ್ರಿಕೆಗಳಲ್ಲಿ ಬರುತ್ತದೆ.

3ನೇ ಕ್ರಿಸ್ತಶತಮಾನದಲ್ಲಿ ತ್ಯುತೊನರೆಂಬ ಆ ಗೆರ್ಮಾನರ ಒಂದು ಕುಲವು ಗೆರ್ಮಾನಿಯದ ಹೊರಗೆ ಉಳು ಕೊಂಡಿತ್ತು; ಆ ಕುಲದವರ್‍ಯಾರಂದರೆ—ಗೊಥರೆಂಬವರು. ದೋನವು (ದಾನುಬಿಯ) ನದಿಯ ಬಡಗ ತೀರದಲ್ಲಿ ಕಪ್ಪು ಸಮುದ್ರದ ಹತ್ತರ ಅವರ ವಸತಿಸ್ಥಳವು. ಅವರು ಕ್ರಿ. ಶ. 253ನೇ ವರುಷದಿಂದ 265ನೇದರ ವರೆಗೆ ರೋಮಿಾಯ ಕೈಸರರಿಗೆದುರಾಗಿ ಕದನವಾಡುತ್ತಿರಲು, ಸಣ್ಣ ಅಸಿಯದ ಗಲತಿಯ ಮತ್ತು ಕಪ್ಪದೊಕಿಯ[2] ಎಂಬ ಶೀಮೆಗಳಿಂದ ಹೇರಳ ಕೊಳ್ಳೆಯನ್ನಲ್ಲದೆ ಕ್ರೈಸ್ತ ಶೆರೆಯವರನ್ನು ಸಹ ತಕ್ಕೊಂಡು ಹೋಗುತ್ತಿದ್ದರು.—ಇವರಲ್ಲಿಯ ಬೋಧಕರು ದೇವಪುತ್ರನಾದ ಕ್ರಿಸ್ತನ ನಾಮವೆಂಬ ಒಂದೇ ಬಲದಿಂದ ಗೊಥರೊಳಗಿನ ರೋಗಿಷ್ಠರನ್ನು ಗುಣ ಪಡಿಸುತ್ತಾ, ದೆವ್ವಗಳನ್ನು ಹೊರಡಿಸುತ್ತಾ ಇದ್ದ ಹೊರ್ತು ನಿಷ್ಕಳಂಕ ನಡತೆಯಿಂದ ಶೋಭಿಸುತ್ತಾ, ಸುಗುಣಗಳನ್ನು ತೋರಿಸುತ್ತಾ ಇದ್ದದರಿಂದ ಕ್ರಿಸ್ತನಿಗೆ ವಿರೋಧವಾಗಿದ್ದ ಎಲ್ಲಾ ಆಲೋಚನೆಗಳನ್ನು ಗೆದ್ದರು. ಆ ಗೊಥರು ಅಂಥಾ ಮಹಾ ಪುರುಷರ ಜೀವಿತಕ್ಕೂ ಅದ್ಭುತಕ್ರಿಯೆಗಳಿಗೂ ವಿಸ್ಮಯ ಪೂರಿತರಾಗಿ, ಕ್ರೈಸ್ತರ ದೇವರನ್ನು ಒಲಿಸುವದು ತಮಗೆ ಹಿತವೆಂತ, ತಿಳು ಕೊಂಡು, ಆ ಪುರುಷರಿಗೆ ಅನುಸರಿಸಿ ಅವರು ಸೇವಿಸುವ ಪರಾತ್ಪರನಿಗೆ ಆರಾಧಿಸಲಿಚ್ಛೆ ಗೊಂಡು, ಉಪದೇಶ ಕೇಳಲಾಗಿ, ಆ ಬೋಧಕರು ಹಾಗೆ ಮಾಡಿ, ಹೇರಳರನ್ನು ಸ್ನಾನ ಕೊಟ್ಟು ಸಭಾಸಂಬಂಧಿಗಳಾಗ ನಡಿಸಿದರು[3].—ಕ್ರಿ. ಶ. 325ನೇ ವರುಷ ಸಣ್ಣ ಅಸಿಯದ ನೀಕೇಯ ಪಟ್ಟದಲ್ಲಿ ನೆರೆಯುವ ಆರಂಭದ ಸರ್ವಸಭಾಸಂಘಕ್ಕೆ ದೊಡ್ಡ ಹಿಂದು ದೇಶದ ಒಬ್ಬ ಅಧ್ಯಕ್ಷನು ಬಂದನಲ್ಲ[4]? ಅದೇ ಸಂಘಕ್ಕೆ ಥೆಯೊಫಿಲನೆಂಬ ಗೊಥಿಕ ಅಧ್ಯಕ್ಷನು ಸಹ ಬಿಜ ಮಾಡಿದನು.

1) Irenaeus I, 3. 2) 75ನೇ ಪಾನು. 3) Sozomenos and Philostorgius.
4) 82ನೇ ಪಾನು ನೋಡು.

## ಬ್ರಿತನ್ನಿಯ.

ಗಲ್ಲಿಯಕ್ಕೆ ಉತ್ತರದಲ್ಲಿ ಒಂದು ಸಮುದ್ರದತ್ತ ಕಡೆ ಬ್ರಿತನ್ನಿಯ (ಇಂಗ್ಲಂದು) ರಾಜ್ಯವು. ಕ್ರಿಸ್ತಜನ್ಮಕ್ಕೆ ಮುಂಚಿನ 55ನೇ ವರುಷದಲ್ಲಿ ಅಂದು ಇನ್ನು ದಳವಾಯಿಯಾಗಿರುವ ಆ ಕಾಯ ಯೂಲಿಯ ಕೈಸರನೆಂಬವನ[1] ಕೈಯ ಕೆಳಗೆ ಒಂದು ರೋವಿೂಾಯ ದಂಡು ಅಲ್ಲಿಗೆ ಹೋಗಿ, ಜಯಿಸದೆ, ಹಿಂದಿರುಗಿತು; ಮರುವರುಷ ಆ ದಳವಾಯಿಯು ಮತ್ತೊಂದು ದಂಡೆತ್ತಿ, ಗಮಿಸಿ, ಆ ರಾಜ್ಯದ್ದೊಂದು ಭಾಗವನ್ನು ಹಿಡು ಕೊಂಡು, ರೋವಿೂಾಯ ಧೊರೆತನದವರಿಗೆ ಕಪ್ಪ ತೆರುವ ಕಟ್ಟಳೆಯನ್ನು ಅದರಲ್ಲಿ ಸ್ಥಾಪಿಸಿದನು. ಕ್ರಿ. ಶ. 43ನೇ ವರುಷದಲ್ಲಿ ಬ್ರಿತನ್ನರು ದಂಗೆ ತೆಗಿಯಲಿಕ್ಕೆ, ರೋವಿೂಾಯರು ಒಂದು ಮಹಾ ಸೇನೆ ಕಳುಹಿಸಲಾಗಿ, ಆ ಬ್ರಿತನ್ನರು ಕರಕ್ತಕನೆಂಬವನೊಬ್ಬ ಮುಖ್ಯಸ್ಥನಿಂದ ನಡಿಸಿ ಕೊಂಡು, 9 ವರುಷ ಆ ಸೈನ್ಯಕ್ಕೆ ಜಯದಿಂದೆ ದುರಿಸುತ್ತಿದ್ದ ಮೇಲೆ ಆ ಮುಖ್ಯಸ್ಥನು ತನ್ನ ಮಲತಾಯಿಯ ದ್ರೋಹದಿಂದ ರೋವಿೂಾಯರ ಕೈವಶನಾದನು. ಕ್ರಿ. ಶ. 53ನೇ ವರುಷ ಅವನೂ ಅವನ ಕುಟುಂಬವೂ, ಬ್ರೆನ್ನನೆಂಬ ಅವನ ಮುದಿತಂದೆ ಸಹ, ಶೆರೆಯವರಾಗಿ ರೋಮಪುರಕ್ಕೆ ಹೋಗಿರಲು, ಅಲ್ಲಿ ಸುವಾರ್ತೆಯು ಗೊತ್ತಾಗಿತ್ತು[2]; ಮತ್ತು ಬ್ರೆನ್ನನೂ ಅವನ ನೆಂಟರಲ್ಲಿ ಕೆಲವರೂ ಕ್ರೈಸ್ತರಾದರಂತೆ. ಕ್ರಿ. ಶ. 61ನೇದರಲ್ಲಿ ಬ್ರೆನ್ನನು ತನ್ನ ದೇಶಕ್ಕೆ ಮರಳುವಾಗ ಬ್ರಿತನ್ನರಲ್ಲದ ಮೂವರು ರೋವಿೂಾಯ ಕ್ರೈಸ್ತರು ಅವನ ಸಂಗಡ ಇಂಗ್ಲಂದಿಗೆ ಬಂದು, ಸುವಾರ್ತಾಪ್ರಸಂಗದಲ್ಲಿ ಅವನ ಸಹಾಯಕರಾದರಂತೆ; ಬಳಿಕ ತಾನು ರೋಮದಲ್ಲಿ ಕಂಡಿದ್ದ[3] ಪೌಲ ಅಪೊಸ್ತಲನನ್ನು ಇಂಗ್ಲಂದಿಗೆ ತನ್ನ ಹತ್ತರ ಕರ ತರಿಸಿದನಂತೆ.

ಮೂರ್ತಿಪೂಜಕರಾದ ಆ ಬ್ರಿತನ್ನರ ಯಾಜಕರಿಗೆ ದೆರ್ವಿದರು ಅಥವಾ ದ್ರುವಿದರು ಎಂಬ ಹೆಸರು ಇತ್ತು. ರೋವಿೂಾಯರು ಬ್ರಿತನ್ನರಿಗೆ ಯುದ್ಧದಲ್ಲಿ ಶೆರೆಯವರಾದರೆ ಆ ದ್ರುವಿದರು ಅವರ ಕೊರಳು ಕೊಯಿದು, ಅವರನ್ನು ತಮ್ಮ ದೇವತೆಗಳಿಗೆ ಯಾಗ ಮಾಡಿ ಅರ್ಪಿಸುತ್ತಿರುವದರಿಂದ ನೆರೋನನೆಂಬ ಆ 5ನೇ ರೋವಿೂಾಯ ಕೈಸರನು[4] ಬಹಳ ಕೋಪ ಪಟ್ಟು, ಆ ಕ್ರೂರ ಯಾಜಕರನ್ನು ಸಂಹರಿಸ ಬೇಕೆಂತ, ಕ್ರಿ. ಶ. ಆ 61ನೇ ವರುಷದಲ್ಲಿ ಅವರ ಮೇಲೆ ಒಂದು ದಂಡು ಕವಿಸಿ, ದೊಡ್ಡ ಕೊಲೆ ಮಾಡಿಸಿ, ಅವರ ಯಾಗಪೀಠಗಳನ್ನು ಕೆಡವಿಸಿ ಬಿಟ್ಟನು. ಈ ಪ್ರಕಾರವಾಗಿ ಆ ಕ್ರೈಸ್ತನಲ್ಲದ ಮಹಾರಾಜನು ತಾನು ಅರಿಯದಲೇ ಬ್ರಿತನ್ನಿಯದ ಮೂರ್ತಿಪೂಜೆಯ ಬಲವನ್ನು ಕುಂದಿಸುವವನಾದನು. ಕೆಲವು ವರುಷ ಕಳೆದನಂತರ ರೋವಿೂಾಯ ಅಧಿಕಾರಸ್ಥರು ಸೇನೆಯಲ್ಲಿ ತಮ್ಮ ಸೇವಾಕಾಲ ತೀರಿಸಿದಂಥ ಉಂಬಳಿ

1) 15ನೇ ಪಾನು. 2) 49ನೇದಾದಿ ಪಾನು ನೋಡು. 3) 56ನೇ ಪಾನು ನೋಡು.
4) 15ನೇ, 43ನೇ, 55ನೇ, 57ನೇ, 60ನೇ, 61ನೇ, 62ನೇ ಪಾನುಗಳು ನೋಡು.

ಗಾರರನ್ನು ಬ್ರಿತನ್ನಿಯದಲ್ಲಿ ಸಹ ನೆಲೆ ಗೊಳ್ಳಿಸುವಂದು ಇವರಲ್ಲಿ ಸುವಾರ್ತೆ ಸಾರುವಂಥ ಕ್ರೈಸ್ತರು ಇದ್ದಿರ ಬಹುದು[1]. ಬ್ರಿತನ್ನಿಯದೊಳಗಣ ಇಂಗ್ಲಂದು ಶೀಮೆಗೆ ಪಶ್ಚಿಮದಲ್ಲಿ ಹೊಂದಿರುವ ವೇಲ್ಜು ಎಂಬ ಶೀಮೆಯಲ್ಲಿ ಸುಮಾರು ಕ್ರಿ. ಶ. 182ನೇ ವರುಷ ಲೂಕಿಯನೆಂಬ ಬ್ರಿತನ್ನ ರಾಜನು ಕ್ರೈಸ್ತನಾಗಿದ್ದನು; ಇವನು ಆ ಕಾಲದಲ್ಲಿ—ದಯೆ ಮಾಡಿ, ತನಗೂ ತನ್ನ ಪ್ರಜೆಗೂ ಬೋಧಕರನ್ನು ಕಳುಹಿಸಿ ಕೊಡ ಬೇಕೆಂದು, ರೋಮಪುರದ 12ನೇ ಸಭಾಧ್ಯಕ್ಷನಾದ ಎಲ್ಯುಥೆರನ[2] ಬಳಿಗೆ ರಾಯಭಾರಿಗಳನ್ನು ತಲಪಿಸಲಾಗಿ, ಇವನು ಫುಗಾತಿಯ ಮತ್ತು ದಾಮಿಯಾಮ ಎಂಬ ಇಬ್ಬರು ಒಳ್ಳೇ ಭಕ್ತರನ್ನು ದಯೆ ಮಾಡಿದನಂತೆ. ರೋಮಿಾಯರಿಗೆ ಒಳ ಪಡದಿರುವಂಥ ಬ್ರಿತನ್ನ (ಬ್ರಿತಿಷ) ನಾಡುಗಳಲ್ಲಿಯೂ ಹ್ಯಾಗಾದರೂ ಕ್ರಿ. ಶ. 200ನೇ ವರುಷಕ್ಕೆ ಕ್ರೈಸ್ತರಿದ್ದರು[3].

32ನೇ ರೋಮಿಾಯ ಕೈಸರನಾದ ದಿಯೊಕ್ಲೇತಿಯಾನನ ಸಹಾಯಕೈಸರರಾದವರಲ್ಲಿ ಕೊನ್ಸ್ತಂತಿಯ ಖ್ಲೋರನೆಂಬವನೊಬ್ಬನು ಕ್ರಿ. ಶ. 298ನೇ ವರುಷ ರೋಮಿಾಯ ಬ್ರಿತನ್ನಿಯದ ಪರಿಪಾಲಕನಾದನು. ಇವನು ಮೂರ್ತಿಪೂಜಕನಾದ ರೋಮಿಾಯನಾಗಿದ್ದಾಗ್ಯೂ ಕ್ರೈಸ್ತರ ಮಿತ್ರನು; ಯಾಕಂದರೆ, ಅವರು ತಮ್ಮ ದೇವರಿಗೆ ನಂಬಿಗಸ್ತರಾದ ಕಾರಣ ಕೈಸರನಿಗೂ ನಂಬಿಗಸ್ತರಾಗಿರುವರೆಂತ, ಅವನಿಗೆ ವಿಶ್ವಾಸವಿತ್ತು. ಅವನ ಹೆಂಡತಿಯಾದ ಹೆಲೆನಳೆಂಬಾಕೆ ಅದೇ ಮನಸ್ಸುಳ್ಳವಳಾಗಿ, ಕಾಲಗತಿಯಿಂದ ಕ್ರೈಸ್ತಳಾದಳು. ಕ್ರಿ. ಶ. 303ನೇ ವರುಷದಲ್ಲಿ ಆ ದಿಯೊಕ್ಲೇತಿಯಾನನಿಂದ, ಕ್ರೈಸ್ತರನ್ನು ಸರ್ವತ್ರ ಹಿಂಸಿಸ ಬೇಕೆಂದು, ಆಜ್ಞೆ ಬಂದಾಗ ಕೊನ್ಸ್ತಂತಿಯ ಖ್ಲೋರನು ಸಮ್ಮತಿಸದಿದ್ದರೂ ತನ್ನೊಳಗಿನ ಕ್ರೈಸ್ತರಿಗೆ ಏನೇನೂ ಹಿಂಸೆಯಾಗದ ಹಾಗೆ ಅವರನ್ನು ಕಾಪಾಡಲಿಕ್ಕೆ ಅಸಮರ್ಥನಾಗಿದ್ದನು. ಅವನು ಯೊರ್ಕ್ ಎಂಬ ತನ್ನ ರಾಜಧಾನಿಯಲ್ಲಿ 3 ವರುಷದೀಚೆ ತೀರಿ ಹೋದ ಬಳಿಕ ಕೊನ್ಸ್ತಂತೀನನೆಂಬ ಕುಮಾರನು ಗಲ್ಲಿಯದಲ್ಲಿಯೂ ಹಿಸ್ಪಾನಿಯದಲ್ಲಿಯೂ ಬ್ರಿತನ್ನಿಯದಲ್ಲಿಯೂ ಅವನ ಉತ್ತರಾಧಿಕಾರಿಯಾಗಿ, ಬ್ರಿತನ್ನಿಯದ ಕ್ರೈಸ್ತರ ಉಪದ್ರವವನ್ನು ಪೂರಾ ತಪ್ಪಿಸಿದನು. ಅಂದು ಅಲ್ಲಿಯ ಕ್ರೈಸ್ತರು ತಾವಿರುವ ಪಟ್ಣಗಳಲ್ಲಿ ದೇವಾಲಯಗಳನ್ನು ಕಟ್ಟಲಿಕ್ಕೆ ಹತ್ತಿದರು. ಕ್ರಿ. ಶ. 314ನೇ ವರುಷ ಗಲ್ಲಿಯ ದೇಶದ ಆರ್ಲ್ ಎಂಬಲ್ಲಿ ಪಶ್ಚಿಮ ದಿಕ್ಕಿನ ಕ್ರೈಸ್ತ ಸಭೆಯ ಅಧ್ಯಕ್ಷರು ಕೂಡುವಾಗ ಬ್ರಿತನ್ನಿಯದಿಂದ ಸಹ ಮೂವರು ಅಧ್ಯಕ್ಷರು ಬಂದೊದಗಿದರು; ಒಬ್ಬನು ಯೊರ್ಕಿನವನು, ಮತ್ತೊಬ್ಬನು ಲೊಂದನಿನವನು, ಇನ್ನೊಬ್ಬನು ರಿಜ್ಬರೊವಿನವನು.—

---

1) 87ನೇ ಪಾನು ನೋಡು. 2) According to Eusebius, Linus being the first. V, 10, 1, seq.; III, 13, seq.; 54ನೇ ಪಾನು. 3) Tertull. adv. Judaeos VII.

ರೋವಿಾಯ ಸಾಮ್ರಾಜ್ಯದ ಹೊರಗೂ ಒಳಗೂ ಕ್ರೈಸ್ತತ್ವವು ಈ ಮಟ್ಟಿಗೆ 300 ವರುಷಗಳೊಳಗೆ ವಿಸ್ತಾರವಾಯಿತೆಂಬ ಸಂಕ್ಷೇಪವಿವರಣಕ್ಕೆ ಕೂಡಿಸ ತಕ್ಕ ಇನ್ನೊಂದು ಮಾತೇನೆಂದರೆ—ಅದೆಲ್ಲವೂ ಬಹಿಃಸಹಾಯವೇನೂ ಇಲ್ಲದೆ ಮೂರ್ತಿಪೂಜಕಾದಿಜನರ ಕಡೆಯ ಅತಿ ಕಠೋರ ಹಿಂಸೆಗಳೊಳಗೆ ಕ್ರೈಸ್ತತ್ವದ ಅಂತಃಸತ್ಯದ ಮತ್ತು ತನ್ನವರೊಡನೆ ಅದೃಶ್ಯ ರೀತಿಯಾಗಿ ನಿತ್ಯದಲ್ಲಿರುವ ಕ್ರಿಸ್ತನಾಥನ ಬಲದಿಂದ ಮಾತ್ರ ಸಂಭವಿಸಿತಷ್ಟೇ! ಅದು ಹೊರ್ತಾಗಿ ಆ ಹಿಂಸೆಗಳಲ್ಲಿ ಹರಿದು ಹೋದ ಕ್ರೈಸ್ತರ ರಕ್ತವು ಕ್ರಿಸ್ತನ ಸಭೆಗೆ ಬೀಜವೇ ಆಯಿತು.

---

## 8. ಅಪೊಸ್ತೊಲಿಕ ಕಾಲವನ್ನು ಹೊಂದಿದ ಕಾಲದ ಕ್ರೈಸ್ತ ಸಭೆಯ ಅಂತಃಸ್ಥಿತಿಗತಿಯು.

ಅಪೊಸ್ತಲರ ಮೃತಿಗೀಚೆಗೂ ಕ್ರೈಸ್ತತ್ವದ ಆಶೀರ್ವಾದಗಳು ಮುಂಚಿನಂತೆಯೇ ನಡೆಯುತ್ತಿದ್ದವು; ಕ್ರಿ. ಶ. 100ನೇ ವರುಷದಿಂದ 323ನೇದರ ತನಕ ಅದು ಇರುವಲ್ಲಿಯೂ ಅದು ಹೋದಲ್ಲಿಯೂ ಎಡೆ ಬಿಡದೆ ತನ್ನ ಮಂಗಲಕರವಾದ ಬಲ ತೋರಿಸುತ್ತಿತ್ತು. ಯೆಹೂದ್ಯರಾದರೇನು, ಮೂರ್ತಿಪೂಜಕರಾದರೇನು, ರೋವಿಾಯರಾದರೇನು, ಗ್ರೇಕರಾದರೇನು, ಇತರರಾದರೇನು, ವಿದ್ವಾಂಸರಾದರೇನು, ಅವಿದ್ವಾಂಸರಾದರೇನು, ಬಲಿಷ್ಠರಾದರೇನು, ಅಬಲರಾದರೇನು—ಎಲ್ಲರೂ ಸುವಾರ್ತೆಯಿಂದ ಆದರಣವನ್ನೂ ನವ ಜೀವವನ್ನೂ[1] ಪಡ ಕೊಂಡರು; ಆ ಸುವಾರ್ತೆಯು ವಿಶ್ವಾಸಿಗಳೆಲ್ಲರನ್ನು ನಿಜವಾಗಿ ರಕ್ಷಿಸುವಂಥ ದಿವ್ಯ ತ್ರಾಣವೆಂಬದೇ ಎಲ್ಲಾ ಕಡೆಯಲ್ಲಿ ಗೋಚರವಾಯಿತು.

ಕ್ರೈಸ್ತತ್ವದಿಂದ ಮನುಷ್ಯರ ಹೃದಯದೊಳಗೆ ನಿರ್ಮಿತವಾದ ಪರಿಣಾಮವು ಅಂತರ್ಯದೊಳಗಡಗಿರಲಾರದೆ, ಇಂಪು ನಡೆ ನುಡಿಗಳಲ್ಲಿ ಪ್ರತ್ಯಕ್ಷವಾಗುವದು. ಆ ಕಾಲಾಂತರದಲ್ಲಿ ಮೂರ್ತಿಪೂಜಕರ ಕ್ರಿಯೆಗಳನ್ನೂ ಕ್ರೈಸ್ತರ ಕ್ರಿಯೆಗಳನ್ನೂ ತೂಗಿ ನೋಡಿದರೆ ಎಂಥಾ ಹೆಚ್ಚುಕಡಿಮೆ ಕಾಣುತ್ತದೆ! ಮೂರ್ತಿಪೂಜಕರ ಏನೊಂದೂ ಚರಿತ್ರಗ್ರಂಥವು ಎಂದೂ ವರ್ಣಿಸದಿದ್ದಷ್ಟು ಮತ್ತು ವರ್ಣಿಸ ಕೂಡದಷ್ಟು ಉತ್ತಮ ನೀತಿಚರ್ಯಾಭಾವವು ಕ್ರೈಸ್ತರೊಳಗೆ ಇರುತ್ತಿತ್ತೆಂತ, ಆಗಿನ ಕ್ರಿಸ್ತಶತ್ರುಗಳಾದರೂ[2] ತಮ್ಮ ಗ್ರಂಥಗಳಿಂದ ಸಾಕ್ಷಿ ಕೊಡುತ್ತಾರೆ. ಕ್ರೈಸ್ತರು ಆ ಸಮಯ ತಮತಮಗೂ ದೇವರಿಗೂ ಮಾಡುವ ಪ್ರೀತಿಯು ಬಹುಶಃ ಯಥಾರ್ಥವಾದದ್ದೇ; ಹಗೆ ತೀರಿಸಬೇಕೆಂಬ ಮನಸ್ಸು ಅವರಲ್ಲಿ ಕೊಂಚವೂ ಇರಲಿಲ್ಲ; ತಮ್ಮೊಳಗೆ ಯಾವದೊಂದು ಭೇ

1) 76ನೇ ಪಾನು ಸರಿ ನೋಡು. 2) 20ನೇ ಸಂಧಿ ನೋಡು.

ದವೂ ಆಗುವದಕ್ಕೆ ಬಹಳ ಹೇಸುವರು. ತಮ್ಮ ಜತೆಕ್ರೈಸ್ತರು ಗೈಯುವ ತಪ್ಪುಗಳು ತಮ್ಮವೇ ಎಂತ, ಆಲೋಚಿಸಿ, ಅಳುವರು[1]. ಯಾವದೊಂದು ಸತ್ಕ್ರಿಯೆ ನಡಿಸಲಿಕ್ಕೆ ಕುತೂಹಲ ಪಡುವರು; ಸಮಿಾಪದಲ್ಲಿಯೂ ದೂರದಲ್ಲಿಯೂ ಇರುವ ಆರ್ತರಾದ ಮತ್ತು ಬಡವರಾದ ಕ್ರೈಸ್ತ ಸಹೋದರರಿಗೆ—ಅವರು ತಮಗೆ ಪರಿಚಿತರಾಗಲಿ ಅಪರಿಚಿತರಾಗಲಿ—ಸರ್ವಥಾ ಸಹಾಯ ಮಾಡಲಿಕ್ಕೂ ಆದರಿಸಲಿಕ್ಕೂ ನೋಡುವರು; ಇಂಥಾ ಸ್ವಾರ್ಥವಿಲ್ಲದ ಪ್ರೀತಿಯನ್ನೇ ತಮ್ಮನ್ನು ಹಿಂಸಿಸುವ ಮೂರ್ತಿಪೂಜಕರಿಗೂ ತೋರಿಸುವರು[2].

ಆದರೆ ಒಬ್ಬಾನೊಬ್ಬ ಕ್ರೈಸ್ತನು, ಒಬ್ಬಾನೊಬ್ಬ ಬೋಧಕನಾದರೂ ಸಹ, ಕರ್ತನ ಮಾನಕ್ಕೆ ಅಯೋಗ್ಯನಾಗಿ ನಡೆದ್ದಕ್ಕೆ ಆಶ್ಚರ್ಯ ಪಡ ಬೇಡ; ಆಗಿನ ಸಭೆಗಳಲ್ಲ್ಯಾದರೂ ಕಪಟಿಗರು ಅಥವಾ ಬಲಹೀನರು ಆದಂಥ ಕ್ರೈಸ್ತರು ಇಲ್ಲದಿರಲಿಲ್ಲ, ಅದಲ್ಲದೆ ಸರ್ವದಾ ಪ್ರತಿ ಕ್ರೈಸ್ತನ ಐಹಿಕ ಜೀವಿತವು ಅವನು ತನ್ನೊಳಗಿನ್ನು ಇರುವ ಪಾಪಕ್ಕೆ ಹೆಚ್ಚಾಗಿ ಗೆದ್ದು ಆಗಿಂದಾಗ ಒಮ್ಮೆ ಸೋಲುವಂಥಾದ್ದೊಂದು ಕಠೋರ ಯುದ್ಧವಾಗಿರುವದಲ್ಲವೋ? ಆ ಕಾಲಾಂತರದ ಕ್ರೈಸ್ತರೊಳಗೆ ಅಲ್ಲಲ್ಲಿ ಮತ್ಸರ ಗರ್ವ ಅಧಿಕಾರೇಚ್ಛೆ ಅಪ್ರೀತಿ ಮುಂತಾದ ಪಾಪಕ್ರಿಯೆಗಳು ಮೂಡದಿರಲಿಲ್ಲವಾದರೂ ಹೆಚ್ಚು ಜನರು ಕ್ರಿಸ್ತನ ಹಿಂಬಾಲಕರಿಗೆ ಯೋಗ್ಯವಾದಂಥ ಸುಗುಣಗಳನ್ನು ಮನೋವಾಕ್ಕಾಯಗಳಿಂದ ಕಾಣಿಸುವರು. ಇಲ್ಲಿಯಲ್ಲಿ ಅಂದಂದು ಉತ್ಪನ್ನವಾಗುತ್ತಿರುವ ಸಭಾಶಾಖೆಗಳಿಗೆ ಒಂದು ತಕ್ಕದ್ದೊಳ್ಳೇ ಕಾರಣವಿರುವದು; ಹ್ಯಾಗಂದರೆ ಕಾಲೋಚಿತಕ್ಕೆ ಇವರವರಿಗಿಂತ ಒಂದು ದೇವವಾಕ್ಯದರ್ಥವನ್ನು ಹೆಚ್ಚು ಖಂಡಿತವಾಗಿ ಪ್ರಯೋಗಿಸುವದೊಂದರಿಂದಲೇ ಅಂಥ ಶಾಖೆಗಳ ಉತ್ಪತ್ತಿಯು; ಇಂತಾಗುವಲ್ಲಿ ನೀತಿ ಇದ್ದರೂ ಪ್ರೀತಿ ಬಿಡ ಬಾರದೆಂಬ ಮಾತು ಒಮ್ಮಿಂದೊಮ್ಮೆ ತಪ್ಪಿ ಹೋದ ಹಾಗಾದದೂ ತೋಚುತ್ತದೆ.

ಬೋಧನೆಯಲ್ಲಿಯೂ ಸಭಾಶಿಕ್ಷೆಯಲ್ಲಿಯೂ ಹೆಚ್ಚು ಕಡಿಮೆ ಬೀಳುವ ಹಾಗಾದ ಸಮಯ ಐಕಭಾವವನ್ನು ತಿರಿಗಿ ಹುಟ್ಟಿಸಲಿಕ್ಕೆ ಸುನೊದಗಳು ಅಥವಾ ಕೊಂಕಿಲಿಯಗಳು ಎಂಬ ಸಂಸದುಗಳು ಅಂದರೆ ಬೇರೆ ಬೇರೆ ಕಡೆಯ ಅಧ್ಯಕ್ಷರು ನೆರೆಯುವಂಥ ಸಭಾಸಂಘಗಳು ಆಗುತ್ತಿರುವವು[3]; ಮೊದಲಿನ ಅಂಥ ಸಭಾಸಂಘವು ಇನ್ನು ಅಪೊಸ್ತೊಲಿಕ ಕಾಲದಲ್ಲಿಯೇ ಕ್ರಿ. ಶ. 50ನೇ ವರುಷಕ್ಕೆ ಯೆರೂಸಲೇಮಿನಲ್ಲಿ ಆಯಿತು[4]. ದೇವವಾಕ್ಯವೆಂಬ ಅಪರಂಜಿಯನ್ನು ಕಂದು ಮಾಡಲೆಸಗುವ ಪಾಷಂಡರನ್ನು ಸಭೆಯೊಳಗಿಂದ ಬಹಿಷ್ಕರಿಸುತ್ತಿರುವರು.

---

1) Clement. Roman. ep. ad. Corinth. 2) Euseb. h. e. 4, 23; Gieseler. h. e. I, 1, p. 413 seq. 3) 83ನೇ, 85ನೇ, 88ನೇ, 90ನೇ ಪಾನುಗಳು ನೋಡು. 4) 40ನೇ ಪಾನು ನೋಡು.

ಈ ಕಾಲಾಂತರದ ಮಧ್ಯ ಹಿಡಿದು ಬೋಧಕೋದ್ಯೋಗಿಗಳ ಮಾನವು ಬಹಳ ಬೆಳ ಕೊಂಡು ಬರುತ್ತಿರುವದು; ಹಸ್ತಾಧಾನ ಹೊಂದಿದ ಬೋಧಕರು ಒಂದು ಪ್ರತ್ಯೇಕ ಕುಲವೆಂಬ ಭಾವನೆಯು ಮಾತ್ರವಲ್ಲದೆ ಒಂದು ಪ್ರತ್ಯೇಕ ಜಾತಿ ಎಂಬದು ಸಹ ಉತ್ಪನ್ನವಾಗಲಿಕ್ಕೆ ಹತ್ತಿತು[1]; ಅದು ಕಾರಣವಾಗಿ ಸರ್ವ ಕ್ರೈಸ್ತರೂ ಒಂದು ರಾಜಯಾಜಕತ್ವಕುಟುಂಬವೆಂಬ ದಿವ್ಯ ಸತ್ಯವು[2] ಸ್ವಲ್ಪ ಕುಂದುವ ಹಾಗಾಯಿತು.

ಸಭಾಚರಿತ್ರವ ಬರೆಯುವಲ್ಲಿ ನಾವು ಈ ಪ್ರಕಾರವಾಗಿ ಕ್ರೈಸ್ತರ ತಪ್ಪುಗಳನ್ನು ಸಹ ಎಂತಾದರೂ ಮಾಜದಿರುವದರಿಂದ, ಪೂರ್ಣ ಸತ್ಯದ ಅಪೇಕ್ಷೆ ನಮ್ಮಲ್ಲಿ ಉಂಟೆಂತ, ಪ್ರಿಯ ಅಧ್ಯಯನಿಕರು ಸ್ಪಷ್ಟವಾಗಿ ತಿಳು ಕೊಳ್ಳ ಬಹುದು; ಸತ್ಯವೇ ಸದಾ ಜಯಿಸುವದು!

ಯೆರೂಸಲೇಮಿನ ನಾಶನದ ಇತ್ತ ಸುರಿಯ ದೇಶದ ಅಂತಿಯೊಖೀಯದ ಆ ಸಭೆಯು ಮೂಡಣ ದಿಕ್ಕಿನವುಗಳಲ್ಲಿ ಹೆಸರಿನ ಮೇಲೆ ಹೆಚ್ಚಿನದು; ಸರ್ವ ಕಡೆಯ ಸಭ್ಯರನೇಕರು ಅಲೆಕ್ಸಂದರೀಯಕ್ಕೆ ಬಂದು, ಅಲ್ಲಿಯ ಶಾಲೆಯಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವರು. ರೋಮಪುರದ ಸಭೆಯು ಸಂಖ್ಯೆಯಲ್ಲಿಯೂ ಐಶ್ವರ್ಯದಲ್ಲಿಯೂ ಮುಖ್ಯ, ಆದ್ದರಿಂದ ಬಡವರಿಗೆ ಅದರಲ್ಲಿ ವಿಶೇಷ ಸಹಾಯ ಶಿಕ್ಕುವ ಹಾಗೆ ಆಗುವದು; ಅಲ್ಲಿ ಕ್ರಿ. ಶ. 250ನೇ ವರುಷ ಸಾವಿರದ್ಯೆನೂರ್ವರಿಗಿಂತ ಹೆಚ್ಚು ವಿಧವೆಗಳೂ ಕಷ್ಟಗ್ರಸ್ತರೂ ಪೋಷಿತರಾಗುತ್ತಿದ್ದರು.

ಹಿಂದೆ ತಿಳಿಯ ಬಂದಂತೆ[3] ಅಪೊಸ್ತೊಲಿಕ ಕಾಲದಲ್ಲಿ ಕ್ರೈಸ್ತ ಸಭೆಯಲ್ಲಿ ನಾಲ್ಕು ತರದ ಉದ್ಯೋಗಸ್ಥರು, ಯಾರಂದರೆ—ಪ್ರೆಸ್ಬುತರು (ಪ್ರೀಸ್ತರು) ಎಂಬೀ ಹಿರಿಯರು, ದಿಯಾಕೊನರೆಂಬ ಗಂಡು ಮತ್ತು ಹೆಣ್ಣು ಸಭಾಸೇವಕರು, ಎವಂಗೆಲಿಸ್ತರೆಂಬ ಪ್ರಯಾಣಿಕರಾದ ಸುವಾರ್ತಿಕರು. ಹಿರಿಯರಿಗೆ ಎಪಿಸ್ಕೊಪರು (ಬಿಷೊಪರು) ಅಂದರೆ ಅಧ್ಯಕ್ಷರು ಎಂಬ ಹೆಸರು ಕೂಡ ಇತ್ತು[4]; ಅಪೊಸ್ತಲರು ಸಹ ಹಿರಿಯರೆನ್ನಿಸಿ ಕೊಂಡರು[5]. ಉಳಿದ ಸಭ್ಯರಿಗಿಂತ ಹೆಚ್ಚಾಗಿ ಹಿರಿಯರ ದೃಷ್ಟಿಯೂ ಚಿಂತೆಯೂ ದೇವವಾಕ್ಯಸಂಗದ ಮೇಲೆಯೂ ಸಭೆಯ ದೇವಸೇವಾಚರಣದ ಮೇಲೆಯೂ ಸಭ್ಯರ ಆತ್ಮಪರಿಪಾಲನದ ಮೇಲೆಯೂ ಪರಿಶುದ್ಧ ಸಂಸ್ಕಾರಗಳ ಪ್ರಯೋಗದ ಮೇಲೆಯೂ ಬಂಧಮೋಕ್ಷವಾಕ್ಯಾಧಿಕಾರದ ಮೇಲೆಯೂ ಹೋಗಬೇಕಾದ್ದರಿಂದ ಅವರಿಗೆ ಅಧ್ಯಕ್ಷರೆಂಬ ಆ ಹೆಸರಿತ್ತು; ಅಪೊಸ್ತೊಲಿಕ ಕಾಲಕ್ಕೆ ಒಂ

1) Irenaeus IV, 26, 2; Tertullian; Cyprian. 2) 70ನೇ ಪಾನು ನೋಡು. 3) 69ನೇ ಪಾನು ನೋಡು. 4) ಅಪೊ. ಕ್ರಿ. 20, 17. 28; ತಿತ. 1, 5. 7; ಫಿಲಿ. 1, 1. 5) 1 ಪೆತ್ರ. 5, 1; 2 ಯೋಹಾ. 1, 1; 3 ಯೋಹಾ. 1, 1.

ದೊಂದು ಸಭೆಯಲ್ಲಿ ಏಕಾಧಿಕಾರವುಳ್ಳ ಹಲವರು ಅಂಥ ಅಧ್ಯಕ್ಷರಿದ್ದರು. ಆದರೆ
ಪೌಲ ಅಪೊಸ್ತಲನು ನೇಮಿಸಲಾರಂಭಿಸಿದಂತೆ[1] ಹಿರಿಯರ ವಿಷಯದಲ್ಲಿ ಸರ್ವತ್ರ
ಬೇಗನೆ ಒಂದು ಬದಲಾಯಿತು; ಹ್ಯಾಗಂದರೆ ಎಲ್ಲರೂ ಒಂದೇ ಅಧಿಕಾರವುಳ್ಳಂಥ
ವರಾಗಿದ್ದ ಆ ಹಿರಿಯರು ತಮ್ಮ ಸಂಘದಲ್ಲಿಯಣ ಒಬ್ಬ ಸುಗುಣಿಯನ್ನು, ಸಂಘಾ
ಗ್ರಸ್ಥನೆಂತ, ಆರಿಸಿ ಕೊಳ್ಳುವವರಾದರು; ಇಂಥವನು ಸಭಾಗ್ರಸ್ಥನು ಸಹ ಆಗಿ, ವಿ
ಶೇಷ ಪ್ರಕಾರದಿಂದ ಅಧ್ಯಕ್ಷನೆನ್ನಿಸಿ ಕೊಳ್ಳುವವನಾದನು[2]. ದಿನಕ್ರಮೇಣ ಹತ್ತ
ರ ಹತ್ತರದ ಅನೇಕ ಸಭೆಗಳು ಕೂಡಿ ಅಂಥ ಸಭಾಗ್ರಸ್ಥರ ಜೋಕೆಯಲ್ಲಿ ಶೇರುವ
ದರಿಂದ ಅವರ ಅಧಿಕಾರವು ಹೆಚ್ಚುತ್ತಾ ಬಂತು. ಅದಲ್ಲದೆ ಸಮಯ ಸವೆಯುತ್ತಾ
ಸಭೋದ್ಯೋಗಗಳು ಅಧಿಕವಾದವು; ನಿದರ್ಶನಕ್ಕಾಗಿ ಕ್ರಿ. ಶ. 252ನೇ ವರುಷ
ರೋಮಪುರದಲ್ಲಿ 46 ಮಂದಿ ಪ್ರೆಸ್ಬುತರೂ 7 ಮಂದಿ ದಿಯಾಕೊನರೂ ಹೊರ್ತಾಗಿ
7 ಮಂದಿ ಉಪಸೇವಕರೂ 42 ಮಂದಿ ಅಧ್ಯಕ್ಷೋಪಚಾರಕರೂ ಸ್ನಾನಸಂಸ್ಕಾರ
ಸಹಾಯಕ, ಸಭಾಧ್ಯಯನಿಕ, ದ್ವಾರಪಾಲಕ ಇವರು ಸಹ ಕೂಡಿ 42 ಮಂದಿಯೂ
ಇದ್ದರು. ಬೇರೆ ಸಭೆಗಳಲ್ಲಿ ಇನ್ನೂ ಬೇರೆ ಉದ್ಯೋಗಿಗಳು. ಅಧ್ಯಕ್ಷರನ್ನಾರಿಸಿ
ಡುವವರು ಸಭ್ಯರೇ.

ಕರ್ತನ ದಿವಸವೆಂಬ ಆದಿತ್ಯವಾರಕ್ಕೆ ಕ್ರೈಸ್ತರು ಮುಂಚಿನಂತೆ ತಮ್ಮಲ್ಲೊಬ್ಬನ
ಮನೆಯಲ್ಲಿ ದೇವಾರಾಧನೆಗೋಸ್ಕರ ಕೂಡಿ ಬರುತ್ತಿರುವರು; ಹಿಂಸೆ ನಡೆಯುವಾಗ
ಅವರಿಗೆ ಕಾಡು ಗುಹೆಗಳು ಸಹ ದೇವಾರಾಧನೆಯ ಸ್ಥಳಗಳಾಗುವವು; ಇಂಥಾ
ಕಾಲದಲ್ಲಿ ಅಂದಂದಿಗೆ ಹಗಲಲ್ಲಿ ಅನುವ ಕಾಣದೆ, ಇರುಳಲ್ಲಿ ನೆರದು ಬರ ಬೇಕಾ
ಗುವದು. ಕ್ರಿ. ಶ. 180ನೇ ವರುಷದಲ್ಲಿ ಬರೆದ್ದೊಂದು ವರ್ತಮಾನದ ಪ್ರಕಾರ ಆ
ಗ ಕೆಲವು ದೇವಾಲಯಗಳು ಕಟ್ಟಿದ್ದವು[3]; ದೇವಾರಾಧನೆಗೆ ಪ್ರತ್ಯೇಕವಾಗಿ ಏರಿ
ಸಿದ ಅಂಥಾದೊಂದು ಆಲಯಕ್ಕೆ ಕೂರಿಯಕೆ ಅಂದರೆ ಕರ್ತನಾಲಯ ಎಂಬ ಹೆಸ
ರು ಬಿತ್ತು; 4ನೇ ಕ್ರಿಸ್ತಶತಮಾನದ ಆರಂಭಕ್ಕೆ ರೋಮಪುರ ಒಂದರಲ್ಲೇ 40ಕ್ಕಿಂತ
ಹೆಚ್ಚು ಅಂಥ ಆಲಯಗಳಿದ್ದವು. ಕರ್ತನ ದಿನದಲ್ಲಿ ಕ್ರೈಸ್ತರು ತಮಗೆ ಕೂಡುವಷ್ಟರ
ಮಟ್ಟಿಗೆ ಲೌಕಿಕ ವೃತ್ತಿಗಳನ್ನು ತೊಲಗಿ ಬಿಡುತ್ತಿದ್ದರು[4].

ಆರಂಭದಲ್ಲಿ ಪ್ರತಿ ದಿನಕ್ಕೆ ದಿನಗತಿಯಿಂದ ಹ್ಯಾಗೂ ಪ್ರತ್ಯಾದಿತ್ಯವಾರಕ್ಕೆ
ಆಗುತ್ತಿರುವ ದೇವಾರಾಧನಕ್ರಮವೇನೆಂದರೆ—ಪರಿಶುದ್ಧ ಬರಹದ ಹಳೇ ಒಡಂ
ಬಡಿಕೆಯದೊಂದು ಕೀರ್ತನೆಯನ್ನಾಗಲಿ ದಿನ ಹೋಗುತ್ತಾ ಒಬ್ಬ ಬೋಧಕನ ಗೀ

---

1) 57ನೇ ಪಾನು. 2) ತಿತನ ಮತ್ತು ತೀಮೊಥೆಯನ ಪತ್ರಿಕೆಗಳು; ಪ್ರಕಟ. 2; 3; 37, 45, 54, 58, 64, 66ನೇದಾದಿ ಪಾನುಗಳನ್ನು ಸರಿ ನೋಡು; Justinus; Ignatius. 3) 74ನೇ ಪಾನು ಸರಿ ನೋಡು. 4) Tertull. de oratione c. 23; Concil. Loodicae. can. 29.

ತಕೃತಿಯನ್ನಾಗಲಿ ಹಾಡುವರು; ಬಳಿಕ ಒಬ್ಬ ಸಭಾಸೇವಕನು ಪರಿಶುದ್ಧ ಬರಹದ ಒಂದು ಭಾಗ ಓದುವನು; ಇದಕ್ಕನುಸಾರವಾಗಿ ಸಭಾಧ್ಯಕ್ಷನಿಂದ ಇಲ್ಲವೆ ಒಬ್ಬ ಹಿರಿಯನಿಂದ ಪ್ರಸಂಗವಾಗುವದು; ತದನಂತರ ಸಮಸ್ತರು ಎದ್ದು, ಕ್ರೈಸ್ತ ಸಭೆಯ ಹಿತಕ್ಕೂ ಸರ್ವ ಮನುಷ್ಯರ ಮಾನಸಾಂತರಕ್ಕೂ ತಮ್ಮ ಹಿತಕ್ಕೂ ಕೈಸರನ ಹಿತಕ್ಕೂ ವಿಶಿಷ್ಟ ಅಧಿಕಾರಸ್ಥರ ಹಿತಕ್ಕೂ ಸಾಮ್ರಾಜ್ಯದ ಹಿತಕ್ಕೂ ದೇವರಿಗೆ ಪ್ರಾರ್ಥಿಸಿ, ತಾವೆಲ್ಲರೂ ಕ್ರಿಸ್ತನಾಥನಲ್ಲಿ ಪ್ರಮುದಿತವಾದ ಒಂದೇ ಕುಟುಂಬವೆಂತ, ಕಾಣಿಸುವ ಹಾಗೆ ತಮುತಮಗೆ ಆ ಸಹೋದರಮುದ್ದನ್ನೀಯುವರು; ತರುವಾಯ ಅಧ್ಯಕ್ಷನು ದೇವಸ್ತುತಿವಾಕ್ಯಗಳನ್ನುಚ್ಚರಿಸುತ್ತಲೆ ಸರ್ವ ಸಭ್ಯರು, ಆಮೆನ್! (ಅಂದರೆ ಹಾಗಾಗಲಿ!) ಎಂತ, ಅಸ್ತುಬಟ್ಟು, ನುಡಿಯುವರು[1].—ಆದಿತ್ಯವಾರದಲ್ಲಿ ಕ್ರೈಸ್ತರು, ಕರ್ತನು ಸತ್ತವರೊಳಗಿಂದೆದ್ದ ದಿವಸವೆಂದು, ಮೊಣಕಾಲೂರದೆ, ನಿಂತು ಪ್ರಾರ್ಥಿಸಿ, ಉಪವಾಸವನ್ನು ಎಂತೂ ಮಾಡದೆ ಇರುವರು.

ಕ್ರಿ. ಶ. ೩ನೇ ಶತಮಾನದ ನಡುವೆ ಇನ್ನಾದರೂ ಅಗಪೆ ಎಂಬ ಮಿತ್ರಭೋಜನದ ಸಂಗಡ ಪರಿಶುದ್ಧ ರಾತ್ರಿಭೋಜನವನ್ನು ದಿನಾಲು ಸಹ ಆಚರಿಸುವದು ಬಹಳ ರೂಢಿ[2]; ತದನಂತರ ರಾತ್ರಿಭೋಜನವು ಆ ಮಿತ್ರಭೋಜನಗಳಿಂದ ವಿಂಗಡವಾಗಿ, ಅದರ ಆಚರಣವು ಒಂದೊಂದು ಆದಿವಾರದ ಪ್ರಾತಃಕಾಲಕ್ಕೆಂತ, ನೇಮಿತವಾಯಿತು. ಹ್ಯಾಗಂದರೆ, ಆ ವಾರದ ದೇವಾರಾಧನೆಯು ಮುಗಿಯಲಾಗಿ, ಸಭೆಯಿಂದ ಬಹಿಷ್ಕೃತರಾಗಿರುವವರ ವಿನಹ ಸ್ನಾನ ಹೊಂದಿದ ಬೇರವರೆಲ್ಲರು ಇನ್ನು ಸಂಘ ನೆರೆದಿರುವಲ್ಲಿ ಸಹೋದರರ ಅಗ್ರಸ್ಥನಿಗೆ ರೊಟ್ಟಿಯನ್ನೂ ನೀರು ಮತ್ತು ದ್ರಾಕ್ಷೇ ರಸ ಉಳ್ಳ ಒಂದು ಪಾತ್ರವನ್ನೂ ತಂದು ಕೊಡುವರು; ಅವನು ಅದನ್ನು ತಕ್ಕೊಂಡು, ಪುತ್ರನ ಮತ್ತು ಪರಿಶುದ್ಧಾತ್ಮದ ನಾಮದಿಂದ ವಿಶ್ವಪಿತೃದೇವರಿಗೆ ಸ್ತೋತ್ರವನ್ನರ್ಪಿಸಿ, ಇವನು ಸಭ್ಯರಿಗೆ, ಇಂಥಾದ್ದಕ್ಕೆ ತಕ್ಕವರೆಂತ, ಒಲಿದ್ದರಿಂದ ಒಂದು ಉದ್ದವಾದ ಯುಖರಿಸ್ತಿಯವನ್ನು (ಅಂದರೆ ಕೃತಜ್ಞತಾಪ್ರಶಂಸೆಯನ್ನು) ಮಾಡುವನು; ಅವನು ಆ ಪ್ರಾರ್ಥನೆ ಪ್ರಶಂಸೆಗಳನ್ನು ತೀರಿಸಿದಂದು ಸರ್ವ ಸಭ್ಯರು, ಆಮೆನ್! ಎಂದು, ಒಡಂಬಡುವರು. ಆ ಮೇಲೆ ದಿಯಾಕೊನರೆಂಬವರು ಆ ಕೃತಜ್ಞತಾಪ್ರಶಂಸೆ ಹೇಳಿದ ಆ ರೊಟ್ಟಿಯಲ್ಲಿಯೂ ದ್ರಾಕ್ಷೇ ರಸ ಮತ್ತು ನೀರು ಉಳ್ಳ ಪಾತ್ರದಲ್ಲಿಯೂ ಒಂದೊಂದು ಪಾಲನ್ನು ಬಂದಿರುವವರೆಲ್ಲರಿಗೆ ಹಂಚಿ ಕೊಟ್ಟು, ಬಾರದೆ ಇರುವವರಿಗೆ ಒಂದು ಪಾಲನ್ನು ತಕ್ಕೊಂಡು ಹೋಗುವರು[3]. ತರುವಾಯ ಸಭ್ಯರು ತಮ್ಮ ತಮ್ಮ ಶಕ್ತಿ ನೋಡಿ, ಅನಾಥರ ಮತ್ತು ರೋಗಿಗಳ ಮತ್ತು ನಾನಾ ಕಷ್ಟಿಗಳ ಪರಿಣಾಮಕ್ಕಾಗಿ ಸಭಾಭಂಡಕ್ಕೆ ಧರ್ಮದಾನಗಳನ್ನು ಸಲ್ಲಿಸುವರು[4].

1) Justin. apol. I, 67. 2) Hippolytus. 3) Justin. apol. I, 65. 4) Justin. I, 67.

ಪ್ರಾಯಸ್ಥರು ಕ್ರೈಸ್ತರಾಗಲಿಕ್ಕೆ ಬಂದರೆ ಅವರಿಗೆ ಮೊದಲಿಗೆ ಬೋಧನೆ ಹೇಳುವರು; ಹೀಗೆ ಸ್ನಾನಕ್ಕೋಸ್ಕರ ಉಪದಿಷ್ಟರಾಗುವವರು ಕತೇಖೂಮೆನರು ಎನ್ನಿಸಿಕೊಳ್ಳುತ್ತಿದ್ದರು, ಉಪದೇಶ ಹೇಳುವವರ ಹೆಸರು ಕತೇಖಿಸ್ತರೆಂಬದು. ಕ್ರಿ. ಶ. 100ನೇ ವರುಷಕ್ಕೆ ಹುಟ್ಟಿದ ಒಬ್ಬ ಸಭಾಪಿತನು[1] ಸ್ನಾನವ ಕುರಿತು ಬರೆದ್ದೇನೆಂದರೆ—ವಿಶ್ವಾಸವಿದ್ದು ನಮ್ಮ ಬೋಧನೆ ಸತ್ಯವೆಂತ ನಂಬಿ ಕೊಂಡು ಅದಕ್ಕನುಗುಣವಾಗಿ ನಡಿಯೋಣವೆಂತ ಮಾತು ಕೊಟ್ಟಂಥವರಿಗೆ ಪ್ರಾರ್ಥಿಸಲಿಕ್ಕೂ ಪಾಪಪರಿಹಾರ ಕೊಡೆಂತ ದೇವರನ್ನು ಉಪವಾಸದೊಡನೆ ಬೇಡಿ ಕೊಳ್ಳಲಿಕ್ಕೂ ಉಪದೇಶ ಹೇಳುವೆವು, ಅಷ್ಟರಲ್ಲಿ ನಾವು ಸಹ ಪ್ರಾರ್ಥಿಸುತ್ತಾ ಉಪವಾಸದಿಂದಿರುತ್ತಾ ಇರುವೆವು; ಬಳಿಕ ನಾವು ಅವರನ್ನು ನೀರಿರುವದೊಂದು ಸ್ಥಳಕ್ಕೆ ಕರ ಕೊಂಡು ಹೋಗಿರುವಲ್ಲಿ ಅವರು, ನಾವು ಸಹ ನವಜೀವಿತರಾದ ರೀತಿಯಿಂದ, ನವಜೀವಿತರಾಗುವರು; ಹ್ಯಾಗಂದರೆ ವಿಶ್ವದೊಡೆಯನಾದ ಪಿತನ ಮತ್ತು ರಕ್ಷಕನಾದ ಯೇಸು ಕ್ರಿಸ್ತನ ಮತ್ತು ಪರಿಶುದ್ಧಾತ್ಮದ ಹೆಸರಿನ ಮೇಲೆ ಅವರನ್ನು ಆ ನೀರೊಳಗೆ ಮುಳುಗಿಸಲಾಗುವದು. ತದನಂತರ ಅವರನ್ನು ಕ್ರೈಸ್ತ ಸಹೋದರರ ಸಭೆಗೆ ಕರತಂದು, (ಮುಂಚೆ ವಿವರಿಸಿದಂತೆ) ಅವರ ಸಂಗಡ ರಾತ್ರಿಭೋಜನವನ್ನಾಚರಿಸುವೆವು.—ಕ್ರಿ. ಶ. 190ನೇ ವರುಷದಲ್ಲಿ ಕ್ರೈಸ್ತನಾದ ತೆರ್ತುಲ್ಲಿಯಾನನೆಂಬ ಆ ಸಭಾಬೋಧಕನು[2] ಆಗಿನ ಸ್ನಾನಸಂಬಂಧವಾದ ಕಲ್ಪದ ಮತ್ತೊಂದು ಮಾತು ಬರೆದನದೇನಂದರೆ—ಸ್ನಾನವಾಗುತ್ತಲೇ ಮಸ್ತಕತೈಲಾಭಿಷೇಕವಾಗುವದು; ಯಾಕಂದರೆ, ತೈಲಾಭಿಷೇಕ ಮಾರ್ಗವಾಗಿ ಯಾಜಕತ್ವಕ್ಕೆ[3] ಬರುವದೆಂತ, ಪ್ರಾಚೀನ ವಿಧಿ ಇತ್ತಲ್ಲವೋ?[4]—ಸ್ನಾನದಲ್ಲಿ ದೇವರೊಡನಾಗುವ ಒಡಂಬಡಿಕೆಯು ಹೊಸಬರ ನಿಸ್ತ್ರಾಣತ್ವದಿಂದ ತಿರಿಗಿ ಬಿಚ್ಚಿ ಹೋದೀತೆಂಬ ಭಯದ ಸಲುವಾಗಿ ಆಗಿಂದಾಗ ಬಹಳ ದಿವಸ ತಡೆದು ಸ್ನಾನ ಕೊಡುವರು; ಹ್ಯಾಗಾದರೂ ಒಬ್ಬನು, ನಿಜ ಮಾನಸಾಂತರ ಪಟ್ಟಿದ್ಧೇನೆಂತ, ತನ್ನ ಜೀವಿತದಿಂದಲೂ ನಿಶ್ಚಯ ತೋರಿಸುವದಕ್ಕಿಂತ ಮುಂಚೆ ಅವನಿಗೆ ಸ್ನಾನ ಆಗುವದೇ ಇಲ್ಲ.—ಅಪೊಸ್ತಲರು ಕೂಸುಗಳಿಗೆ ಸ್ನಾನ ಕೊಟ್ಟರೆಂಬ ಸುದ್ದಿಯೂ ಕೂಸುಗಳಿಗೆ ಸ್ನಾನ ಕೊಡ ಬೇಕೆಂಬ ಅಪ್ಪಣೆಯೂ ಪರಿಶುದ್ಧ ಬರಹದಲ್ಲಿ ಕಂಠೋಕ್ತವಾಗಿ ಬರೆದಿರುವದಿಲ್ಲ; ಆದರೆ, ಅಪೊಸ್ತೊಲಿಕ ಕಾಲವನ್ನು ಹೊಂದುವ ಕಾಲದಲ್ಲಿಯೇ ಶಿಶುಸ್ನಾನವು ಸಹ ನಡೆಯುತ್ತಾ ಇತ್ತೆಂತ, ನಿಃಸಂದೇಹವಾಗಿ ಬಲ್ಲೆವು[5].

---

1) Justin Martyr; apol. I, 61. 2) 26ನೇ, 85ನೇ ಪಾನು. 3) 70ನೇ, 93ನೇ ಪಾನುಗಳು ನೋಡು. 4) 2 ಮೋಶೆ. 28, 41. 5) Irenaeus, born A. D. 148, adv. haer. II, 22, 4; Tertullian, born A. D. 160, de bapt. c. 18; Origenes, born A. D. 185, homil. in Rom. V, 9; Apost. Constitt. VI, 15 (of the end of the 3rd Christian Century). Children's baptism is rightly inferred from Matth. 28, 19; 19, 14; 18, 1 seq.; Luk. 1, 15; etc.

ಅದಲ್ಲದೆ ಕ್ರಿ. ಶ. 253ನೇ ವರುಷಕ್ಕೆ ಕರ್ಥಾಗೊ ಪಟ್ಣದಲ್ಲಿ ಕುಪ್ರಿಯಾನನೆಂಬ ಸಭಾಪಿತ ಮುಂತಾದ 66 ಮಂದಿ ಅಧ್ಯಕ್ಷರು ಕೂಡಿ[1], ಜನ್ಮದ ಮೇಲೆ ಎಷ್ಟನೇ ದಿನದಲ್ಲಿ ಕೂಸುಗಳಿಗೆ ಸ್ನಾನ ಕೊಡ ತಕ್ಕದೆಂತ, ಆಲೋಚಿಸುವಲ್ಲಿ, ಶಿಶುಸ್ನಾನವು ಸಮವೋ? ಅಲ್ಲವೋ? ಎಂಬ ಅನುಮಾನವು ಅವರಿಗಿರಲೇ ಇಲ್ಲ; ಅವರು, ಒಂದು ಕೂಸು ಹುಟ್ಟಿದಾಗಲೇ ಅದಕ್ಕೆ ಸ್ನಾನವಾಗ ತಕ್ಕದೆಂತ, ವ್ಯವಸ್ಥೆ ಮಾಡಿದರು.— ಸ್ನಾನಾರ್ಹರು, ಪಿಶಾಚನನ್ನೂ ಅವನ ಸೇವೆಯನ್ನೂ ಅವನ ದೂತರನ್ನೂ ತ್ಯಜಿಸಿ ಬಿಡುತ್ತೇವೆಂತ, ಅರಿಕೆ ಗೈದ ಮೇಲೆ[2] ತಾವು ಕಲಿತು ಕೊಂಡು ಬಂದ ಒಂದು ಸಣ ವಿಶ್ವಾಸಪ್ರಮಾಣವನ್ನು ಸಹ ಹೇಳುವರು. ಅದು ಬೇರೆ ಬೇರೆ ಸಭೆಗಳಲ್ಲಿ ಬೇರೆ ಬೇರೆ ಮಾತಿನದಾದರೂ ಏಕಾರ್ಥದ್ದೇ ಆಗಿ, ನಾವು ಈಗ ಅಪೊಸ್ತೊಲಿಕ ವಿಶ್ವಾಸ ಪ್ರಮಾಣವೆನ್ನುವಂಥಾದ್ದರ ಅಭಿಪ್ರಾಯವೇ ಕೊಡುವದು; ಈ ಅಪೊಸ್ತೊಲಿಕ ವಿಶ್ವಾಸಪ್ರಮಾಣವು ಈಗ ಇದ್ದಂತೆಯೇ 4ನೇ ಕ್ರಿಸ್ತಶತಮಾನದೊಳಗೆ ರಚಿತವಾದಂತೆ ತೋರುತ್ತದೆ; ಆದರೆ ಸುಮಾರು ಕ್ರಿ. ಶ. 390ನೇ ವರುಷದ ಒಂದು ಮಾತೇನಂದರೆ[3]—ಯೆರೂಸಲೇಮಿನಲ್ಲಿದ್ದ ಅಪೊಸ್ತಲರು ಅಗಲಿ ಹೋಗದ್ದಕ್ಕಿಂತ ಮುಂಚೆ ಕೂಡಿ ಬಂದು, ಒಬ್ಬೊಬ್ಬನು ಒಂದು ವಚನ ಹೇಳಿ ಆ ವಿಶ್ವಾಸಪ್ರಮಾಣವನ್ನು, ಈಗ ಇರುವ ಹಾಗೆಯೇ, ನಿರ್ಮಿಸಿದರು.— ನೀರೊಳಗೆ ಮುಳುಗಿಸುತ್ತಾ ಸ್ನಾನ ಕೊಡುವ ಪದ್ಧತಿಯು ಕ್ರಿ. ಶ. 800ನೇ ವರುಷದ ವರೆಗೆ ಎಲ್ಲಿಯೂ ನಡೆಯುತ್ತಾ ಇತ್ತು; ಅಶಕ್ತರಿಗೂ ರೋಗಿಗಳಿಗೂ ಮಾತ್ರ ಆಗಾಗ್ಯೆ ನೀರು ಚಿಮಿಕಿಸುತ್ತಾ ಸ್ನಾನವಾಗುವದು.

ಕ್ರಿಸ್ತನು ಕ್ರೂಜೆಯಲ್ಲಿ ಸತ್ತ ದಿನಕ್ಕೆ ಅಂದರೆ ಶುಕ್ರವಾರಕ್ಕೆ ಉಪವಾಸ ಮಾಡುವದು ನಿತ್ಯ ಪದ್ಧತಿಯು; 2ನೇ ಶತಮಾನ ತೀರುವದಕ್ಕೆ ಮುಂಚೆ ಒಂದೊಂದು ಬುಧವಾರದಲ್ಲಿಯೂ, ಯೂದನೆಂಬ ಶಿಷ್ಯನು ಕ್ರಿಸ್ತನಿಗೆ ದ್ರೋಹಿಯಾದ ದಿನವೆಂತ, ಉಪವಾಸದಿಂದಿರುವದು ಅಲೆಕ್ಸಂದರೀಯದಲ್ಲಿ ಬಹಳ ನಡವಳಿಯು[4]; ಸ್ನಾನೋಪವಾಸದ ಕ್ರಮವನ್ನು ಹಿಂದೆ ಹೇಳಲಾಯಿತು[5].

ಕ್ರೈಸ್ತತ್ವದ ಪ್ರಾಣವೂ ವಿಶ್ವಾಸದ ಗೋಡೆಯೂ ಪ್ರಾರ್ಥನೆಯೇ! ಎಂತ, ಹೇಳುವರು; ಆಯಾ ವೇಳೆಯಲ್ಲಿ ಪ್ರಾರ್ಥಿಸ ಬೇಕೆಂಬ ಕಟ್ಟಳೆಯು ಆಗಿನ ಕ್ರೈಸ್ತರಲ್ಲಿ ಇರಲಿಲ್ಲ; ಆದರೂ ಪ್ರಾತಃಕಾಲದಲ್ಲಿಯೂ ಸಾಯಂಕಾಲದಲ್ಲಿಯೂ ಭೋಜನ ಕಾಲದಲ್ಲಿಯೂ ಪ್ರಾರ್ಥನೆ ಮಾಡುವದು ಅವರಿಗೆ ಸಹಜವೆನ್ನಿಸುವದು; ಶರೀರವು ಸುಖಗೊಳ್ಳುವಾಗ ಆತ್ಮವು ಸುಖಗೊಳ್ಳ ಬಾರದೇ? ಎಂತ, ಹೇಳುವರು.

---

1) 85ನೇ ಪಾನು ಸರಿ ನೋಡು. 2) Tertullian. 3) With Rufin. 4) Clemens Alexandrinus. 5) 96ನೇ ಪಾನು ನೋಡು.

ವಿವಾಹಾಪೇಕ್ಷಕರು ಅಧ್ಯಕ್ಷನ ಸಮ್ಮತಿಯ ಪಡ ಕೊಂಡು, ಸಭೆಯು ಸಂಘ ನೆರೆದಲ್ಲಿಗೆ ಬಂದು, ಸಭಾಭಂಡಕ್ಕೊಂದು ಕಾಣಿಕೆಯ ಕೊಟ್ಟು, ಅಧ್ಯಕ್ಷನ ಪ್ರಾರ್ಥನಾಶೀರ್ವಾದವ ಹೊಂದಿ, ಪರಿಶುದ್ಧ ರಾತ್ರಿಭೋಜನವ ತೀರಿಸಲಾಗಿ, ವಿವಾಹವು ಸ್ಥಿರವಾಯಿತು[1]. ಯೆಹೂದ್ಯರಲ್ಲಿಯೂ ವಿಗ್ರಹಾರಾಧಕರಲ್ಲಿಯೂ ದಂಪತಿಗಳಿಗಿರ ತಕ್ಕ ಪರಸ್ಪರ ವಿಶ್ವಾಸದ ಮತ್ತು ಬಿಗು ಅನ್ಯೋನ್ಯದ ಸಂಜ್ಞೆಗಾಗಿ ಮದುಮಗನು ಮದುಮಗಳಿಗೆ, ತಿರಿಗಿ ಇವಳು ಅವನಿಗೆ ಒಂದೊಂದು ಉಂಗುರ ಕೊಡುವ ಪದ್ಧತಿಯನ್ನು ಅಂದಿನ ಕ್ರೈಸ್ತರು ಸಹ ಬಳಿಸುತ್ತಿದ್ದರು[2].

ತಾವು ಸ್ನಾನದಲ್ಲಿ ಕೊಟ್ಟ ವಚನವನ್ನು[3] ದುರ್ನಡತೆಯಿಂದಾಗಲಿ ದುರ್ಬೋಧನೆಯಿಂದಾಗಲಿ ಕ್ರಿಸ್ತನನ್ನು ಬಿಟ್ಟಾಡುವದರಿಂದಾಗಲಿ ತಪ್ಪಿಸುವಂಥವರನ್ನು ಸಭೆಯೊಳಗಿಂದ ಹೊರಗೆ ಹಾಕುವ ಸಭಾಶಿಕ್ಷೆಯು ಸಾಗುತ್ತಲೇ ಇರುವದು. ಬಹಿಷ್ಕೃತರಾದವರನ್ನು ತಿರಿಗಿ ಅಂಗೀಕರಿಸುವ ಸಾಧಾರಣ ಪದ್ಧತಿಯು ಕ್ರಿ. ಶ. 300ನೇ ವರುಷದಲ್ಲಿ ಎಂತೆಂದರೆ—ಅಂಥವರು ಮೊದಲು ಬಹು ಕಾಲ ದುಃಖಸೂಚಕ ವಸ್ತ್ರಗಳನ್ನು ಹೊದ್ದು ಕೊಂಡು, ದೇವಾಲಯದ ಬಾಗಿಲಲ್ಲಿ ನಿಂತು, ತಮ್ಮ ಮುಂದೆ ಹಾದು ಹೋಗುವ ಬೋಧಕರಿಗೂ ಸಭ್ಯರಿಗೂ, ನಮ್ಮನ್ನು ತಿರಿಗಿ ಸಭೆಯಲ್ಲಿ ಶೇರಿಸಿರಿ! ಎಂತ, ಬೇಡಿ ಕೊಳ್ಳುತ್ತಿರ ಬೇಕು; ಆ ಮೇಲೆ, ದೇವಾರಾಧನೆಯಲ್ಲಿ ಪರಿಶುದ್ಧ ಬರಹದ ಅಧ್ಯಯನವನ್ನೂ ಪ್ರಸಂಗವನ್ನೂ ಬಂದು ಕೇಳ ಬಹುದೆಂತ, ಅಪ್ಪಣೆಯಾಗುವದು, ಆದಾಗ್ಯೂ ಮೂರ್ತಿಪೂಜಕರೂ ಯೆಹೂದ್ಯರೂ ಸಹ ಪ್ರವೇಶಿಸಲಿಕ್ಕೆ ಅಡ್ಡಿ ಇಲ್ಲದ ದೇವಾಲಯಭಾಗಕ್ಕೆ ಮಾತ್ರ ಅವರು ಬರ ಬಹುದು; ತದನಂತರ ಮತ್ತು ಬಹು ಕಾಲ ಹೋದಂದು ಅವರು ದೇವಪ್ರಾರ್ಥನೆಗೂ[4] ಕರ್ತನಾಲಯದೊಳಗೆ ಇದ್ದು ಕೊಳ್ಳ ಬಹುದಾದರೂ ಮಿಕ್ಕಾದವರು ನಿಂತು ಕೊಂಡಿರುವಲ್ಲಿ ಅವರು ಮೊಣಕಾಲೂರಿ ಕೊಂಡು ಇರ ಬೇಕು; ಮತ್ತು ದಿನ ಹೋಗುತ್ತಾ ಅವರು ದೇವಾರಾಧನದ ಪೂರ್ತಿಗೆ ದೇವಾಲಯದೊಳಗೆ ಉಳಿದು, ರಾತ್ರಿಭೋಜನಾಚರಣವನ್ನೂ ನೋಡ ಬಹುದಾದರೂ ಸಭೆಯು ಮೊಣಕಾಲೂರಿ ಕೊಂಡಿರುವಲ್ಲಿ ಅವರು ನಿಂತು ಕೊಂಡಿರ ಬೇಕು; ಅವರು, ನಿಜ ಪಶ್ಚಾತ್ತಾಪ ಮಾನಸಾಂತರಗಳನ್ನು ಪಟ್ಟದ್ದೇವೆಂತ, ಜೀವಿತದಿಂದ ಸ್ಥಾಪಿಸಿ, ಸರ್ವ ಸಭೆಯು ಕೂಡಿರುವೆಡೆ ಪಾಪದರಿಕೆಯನ್ನು ಸಹ ಮಾಡಲಾಗಿ, ಅಧ್ಯಕ್ಷನು ಹಸ್ತಾಧಾನದೊಂದಿಗೆ ಮೋಕ್ಷವಾಕ್ಯವನ್ನುಚ್ಚರಿಸುವನು[5]; ಅದಾದ ಮೇಲೆ ರಾತ್ರಿಭೋಜನೋತ್ತರದಲ್ಲಿ ಸಭೆಯೊಳಗೆ ತಿರಿಗಿ ಶೇರಿದಂತಾಯಿತು.

---

1) Ignatius; Tertullian. 2) Tertull. apologet. c. 6. 3) 96ನೇ, 97ನೇ ಪಾನು ನೋಡು. 4) 95ನೇ ಪಾನು ನೋಡು. 5) 70ನೇ ಪಾನು ನೋಡು.

ಆಗಿನ ಕ್ರೈಸ್ತ ಹಬ್ಬಗಳು ಯಾವವಂದರೆ—1) ಪುನರುತ್ಥಾನದ ಹಬ್ಬವು; 2) ಪರಿಶುದ್ಧಾತ್ಮದ ಹಬ್ಬವೆಂಬ ಪಂಚಾಶತ್ತಮದಿನಹಬ್ಬವು; 3) ಕ್ರಿಸ್ತನ ದಿವಾರೋಹಣದ ಹಬ್ಬವು; ಕ್ರಿ. ಶ. 323ನೇ ವರುಷದ ಇತ್ತಗಡೆ 4) ಕ್ರಿಸ್ತನ ಜನ್ಮದ ದಿನವು ಮತ್ತು 5) ಪ್ರತ್ಯಕ್ಷತೆಯ ದಿನವು ಸರ್ವಸಾಧಾರಣ ಹಬ್ಬಗಳಾದವು. ಅದಲ್ಲದೆ ತಮ್ಮೊಳಗಣ ಬೋಧಕರಾಗಲಿ ಸಾಮಾನ್ಯ ಕ್ರೈಸ್ತರಾಗಲಿ ರಕ್ತಸಾಕ್ಷಿಗಳಾಗಿ ತೀರಿದ ದಿವಸಗಳನ್ನು ಸಭ್ಯರು ವಿಶೇಷಿಸಿ, ಅವರವರ ಸಮಾಧಿಯಲ್ಲಿ ಕೂಡಿ, ಅವರವರ ಚರಿತ್ರವನ್ನೋದಿ, ಪ್ರಾರ್ಥಿಸಿ, ರಾತ್ರಿಭೋಜನವನ್ನಾಚರಿಸುವರು.

ಪ್ರಯಾಣದಲ್ಲಿರುವಂಥ ಕ್ರೈಸ್ತನಾಗಲಿ ಹಿಂಸಾಕಾಲದಲ್ಲಿ ಸ್ವಸ್ಥಳದಿಂದ ಓಡಿ ಹೋದಂಥವನಾಗಲಿ ಒಂದು ಸಭೆಗೆ ಬಂದು, ಕ್ರೈಸ್ತ ಸಭೆಯ ನಿಜ ಅಂಗವೆಂದು, ತನ್ನ ತನ್ನ ಅಧ್ಯಕ್ಷನಿಂದ ತನ್ನ ತನ್ನನ್ನು ಕುರಿತು ಬರೆಸಿ ರುಜು ಹಾಕಿಸಿ ಕೊಂಡ ಒಂದು ರಾಯಸಪತ್ರಿಕೆಯನ್ನು ತೋರಿಸಿದರೆ ಆ ಸಭೆಯವರು ಅವನನ್ನು, ಸಹೋದರನೆಂತ, ಸ್ವೀಕರಿಸಿ ಕೊಂಡು, ಉಪಚಾರ ಗೈಯುವರು.

ಅಪೊಸ್ತಲರನ್ನು ಕಂಡು, ಅವರ ಬಾಯಿಂದಲೇ ಬೋಧನೆ ಕೇಳಿ, ತಾವು ಬರೆದ ಗ್ರಂಥಗಳಿಂದ ಸಹ ನಮಗಿನ್ನು ಗೊತ್ತಾಗಿರುವಂಥ ಕ್ರೈಸ್ತ ಸಭಾಧ್ಯಕ್ಷರು ಅಪೊಸ್ತೊಲಿಕ ಪಿತೃಗಳು[1] ಎಂಬ ಹೆಸರನ್ನು ಹೊಂದಿದ್ದಾರೆ. ಅವರು ನಾಲ್ವರು; ಯಾರ್ಯಾರಂದರೆ—1) ಕ್ಲೇಮೆಂತನು; ಪೌಲನು ಫಿಲಿಪ್ಪಿಯರಿಗೆ ಬರೆದ ಪತ್ರಿಕೆಯ ಪ್ರಕಾರ ಇವನು ಆ ಅಪೊಸ್ತಲನ ಜತೆಕೆಲಸದವರಲ್ಲಿ ಒಬ್ಬನಾಗಿದ್ದನು[2]; ಅವನು ಕ್ರಿ. ಶ. 93ನೇ ವರುಷದಲ್ಲಿ ರೋಮಪುರದ ಸಭೆಯ 3ನೇ ಅಧ್ಯಕ್ಷನಾದನು[3]; ಬಳಿಕ 9 ವರುಷ ಆ ಉದ್ಯೋಗದಲ್ಲಿದ್ದ ಮೇಲೆ ರಕ್ತಸಾಕ್ಷಿಯಾಗಿ ತೀರಿ ಹೋದನಂತೆ[4]. 2) ಇಗ್ನಾತಿಯನೆಂಬವನು; ಯೋಹಾನ ಅಪೊಸ್ತಲನ ಶಿಷ್ಯರಲ್ಲೊಬ್ಬನಾಗಿದ್ದು[5], ಸುರಿಯ ದೇಶದ ಅಂತಿಯೊಖೀಯ ಪಟ್ಣದಲ್ಲಿ ಅಧ್ಯಕ್ಷನಾದ ಇವನನ್ನು ಕುರಿತು ಇನ್ನು ಮುಂದೆ ಹೆಚ್ಚು ವರ್ತಮಾನ ಬರುವದು; ಅವನು ತನ್ನ ಬೋಧಕನಿಗೆ ಸ್ವಲ್ಪ ಈಚೆ ಕ್ರಿ. ಶ. 116ನೇ ವರುಷದಲ್ಲಿ ರಕ್ತಸಾಕ್ಷಿಯಾಗಿ ಪ್ರಾಣ ಬಿಟ್ಟನು. 3) ಪೊಲುಕರ್ಪನು; ಯೋಹಾನ ಅಪೊಸ್ತಲನ ಶಿಷ್ಯನಾಗಿದ್ದು[6], ಸಣ್ಣ ಅಸಿಯದ ಸ್ಮುರ್ನ ಪಟ್ಣದಲ್ಲಿ ಅಧ್ಯಕ್ಷನಾದ ಇವನ ಚರಿತ್ರವ ಸಹ ಮುಂದೆ ಹೇಳಲಾಗುವದು; ಅವನು ಕ್ರಿ. ಶ. 168ನೇದರಲ್ಲಿ ರಕ್ತಸಾಕ್ಷಿಮರಣ ತಾಳಿದನು. 4) ಪಪಿಯನೆಂಬವನು; ಇವನು ಕೂಡ ಯೋಹಾನನ ಶಿಷ್ಯರಲ್ಲೊಬ್ಬನು[6]; ಅವನು ಸಣ್ಣ ಅಸಿಯದ ಫ್ರುಗಿಯ ಶೀಮೆಯ ಹಿಯೆರೊಪೊಲಿ ಎಂಬ ಪಟ್ಣದಲ್ಲಿ[7] ಅಧ್ಯಕ್ಷನಾಗಿ, ಕ್ರಿ. ಶ.

1) 4ನೇ ಪಾನು. 2) ಫಿಲಿ. 4, 3; Euseb. III, 15. 3) Irenaeus and Eusebius; 58ನೇ ಪಾನು. 4) Rufin. 5) 65ನೇ ಪಾನು ನೋಡು. 6) 65ನೇ ಪಾನು. 7) 65ನೇ ಪಾನು.

161ನೇ ವರುಷದಿಂದ 180ನೇದರ ತನಕ ಆಳಿದ ಮರ್ಕ ಔರೇಲಿಯನೆಂಬ ರೋಮಿಾಯ ಕೈಸರನ ಕಾಲದಲ್ಲಿ ರಕ್ತಸಾಕ್ಷಿಮರಣದವನಾದನು.

ಅಪೊಸ್ತಲರಿಗೀಚೆ ಬದುಕಿ, ಬೋಧಕರಾಗಿದ್ದು, ತಮ್ಮಿಂದ ಲಿಖಿತವಾದ ಗ್ರಂಥಗಳಿಂದ ಸಹ ನಮಗಿನ್ನು ಗೊತ್ತಾಗಿರುವಂಥ ಅನೇಕ ಪೂರ್ವ ಕ್ರೈಸ್ತರು ಸಭಾಪಿತೃಗಳೆಂತಾಗಲಿ ಸಭಾಬೋಧಕರೆಂತಾಗಲಿ ಹೆಸರು ಗೊಂಡಿದ್ದಾರೆ; ಇವರಲ್ಲಿ ಕೆಲವರು ಯಾರಂದರೆ—ಸಮರೀಯ ಶೀಮೆಯ ಯುಸ್ತೀನನು, ಅಲೆಕ್ಸಂದರೀಯ ಪಟ್ಟದ ಪಂತೇನನು[1], ಅಲೆಕ್ಸಂದರೀಯದ ಕ್ಲೇಮೆಂತನು[1], ಗಲ್ಲಿಯ ದೇಶದ ಈರೇನೇಯನು[2], ಅಲೆಕ್ಸಂದರೀಯದ ಒರೀಗೆನೆನು[3], ಕರ್ಥಾಗೊ ಪಟ್ಟದ ತೆರ್ತುಲ್ಲಿಯಾನನು[4], ಕರ್ಥಾಗೊವಿನ ಕುಪ್ರಿಯಾನನು[5], ಕೈಸರೈಯ ಪಟ್ಟದ ಯುಸೆಬಿಯನು[6], ಮೈಲಂದು ಪಟ್ಟದ ಅಂಬ್ರೊಸಿಯನು, ಸುರಿಯ ದೇಶದ ಖ್ರುಸೊಸ್ತೊಮನು, ನುಮಿದಿಯ ದೇಶದ ಔರೇಲಿಯ ಔಗುಸ್ತೀನನು, ಇತ್ಯಾದಿಯವರು. ಹೇಳಿದವರೆಲ್ಲರ ವಿಷಯವಾಗಿ ತಕ್ಕ ಸ್ಥಳದಲ್ಲಿ ಹೆಚ್ಚು ಸುದ್ದಿ ಹೊರಡುವದು.

## 9. ರೋಮಿಾಯರ ಕಡೆಯ ಹಿಂಸೆಗೆ ಕಾರಣವಾದದ್ದೂ ಕ್ರೈಸ್ತರು ತಮ್ಮ ಹಿಂಸಕರಲ್ಲಿ ನಡಕೊಂಡ ರೀತಿಯೂ.

ಕ್ರೈಸ್ತರ ಪ್ರಥಮ ಹಿಂಸಕರಾದ ಯೆಹೂದ್ಯರು ಯೆರೂಸಲೇಮಿನ ನಾಶನದ ಮೇಲೆ ಬೇರೆ ಬೇರೆ ದಿಕ್ಕಿಗೆ ಚದರಿ ಹೋಗಿ, ದೇವರಾಜ್ಯದ ವಿಸ್ತರಣಕ್ಕೆ ಇನ್ನೂ ಬಹಳ ಅಭ್ಯಂತರ ಮಾಡಲಿಕ್ಕೆ ಅಸಮರ್ಥರಾಗಿರುವಾಗ ಕ್ರೈಸ್ತತ್ವವು ರೋಮಿಾಯ ಸಾಮ್ರಾಜ್ಯದ ಮೂರ್ತಿಪೂಜಕರೊಳಗೆ ಹಬ್ಬುತ್ತಾ ಇರಲು, ಇವರು ಕ್ರೈಸ್ತರ ಮಹಾ ಶತ್ರುಗಳೂ ಹಿಂಸಕರೂ ಆದರು. ಇದಕ್ಕೆ ಹಲವು ಕಾರಣಗಳು ಯಾವವಂದರೆ—

ಕೈಸರರ ಕಾಲಕ್ಕೆ ಸುಮಾರು 700 ವರುಷ ಹಿಂದೆ[7] ರೋಮಿಾಯರಲ್ಲಿ ಸ್ಥಾಪಿತವಾಗಿದ್ದದ್ದೊಂದು ರಾಜನೀತಿಯಲ್ಲಿ—ಯಾರೂ ರಾಜ್ಯಮತಕ್ಕೆ ಬೇರೆಯಾದದ್ದೊಂದು ಪೂಜೆ ನಡಿಸಲೂ ಯಾವದೊಂದು ಹೊಸ ದೇವತೆ ಮಾಡಿ ಕೊಳ್ಳಲೂ ಬಾರದು, ಡಂಗುರ ಸಾರಿ ರಾಜ್ಯಮತದ್ದೆಂತ ಪ್ರಕಟಿಸದ ಅನ್ಯ ದೇವತೆಗೆ ಅಂತರಂ

1) 80ನೇ, 81ನೇ, 84ನೇ ಪಾನು. 2) 51ನೇ, 87ನೇ ಪಾನು. 3) 38ನೇ, 51ನೇ, 53ನೇ, 80ನೇ, 83ನೇ, 84ನೇ ಪಾನು. 4) 26ನೇ, 51ನೇ, 85ನೇ, 96ನೇ ಪಾನು. 5) 51ನೇ ಪಾನು. 6) 37ನೇ, 38ನೇ, 39ನೇ, 51ನೇ, 54ನೇ, 58ನೇ, 78ನೇ, 79ನೇ, 80ನೇ ಪಾನು. 7) ಕ್ರಿ. ಶಕಕ್ಕೆ ಮುಂಚಿನ 753ನೇ ಅಬ್ದ ರೋಮಪುರವನ್ನು ಕಟ್ಟಲಾರಂಭವಾಗಿತ್ತು.

ಗದಲ್ಲಿಯೂ ಸೇವಿಸ ಬಾರದು, ತಮ್ಮ ಹಿರಿಯರು ಏರಿಸಿದ ದೇವಸ್ಥಾನಗಳಲ್ಲಿಯೇ ಪ್ರಜೆಯ ಪೂಜೆ ನಡಿಯ ಬೇಕು ಎಂಬದು ಅದೆ[1]; ತರುವಾಯ ಇದಕ್ಕೆ ಕೂಡಿದ್ದೇನೆಂದರೆ — ವಿಷಯಪತಿ ರಾಷ್ಟ್ರಪತಿ ಗ್ರಾಮಪತಿಗಳೆಲ್ಲರೂ ಸಕಲ ಅನ್ಯ ಪೂಜೆಯನ್ನು ನಿಲ್ಲಿಸಿ, ಅದರ ಅವಲಂಬಿಗಳನ್ನು ಸಂತೆಬೈಲಿನಿಂದಲೂ ಹಯರಂಗದಿಂದಲೂ ಪಟ್ಣದಿಂದಲೂ ಓಡಿಸಿ, ಅದರ ಸಂಬಂಧವಾದ ಪುಸ್ತಕಗಳನ್ನು ಹುಡುಕಿ, ಸುಟ್ಟು, ರಾಜಿಕ ಮತ್ತು ಸಾರ್ವಜನೀನ ಯಾಗವಿಧಿಯಲ್ಲದೆ ಇತರ ಸಮಸ್ತ ವಿಧಿಗಳನ್ನು ಕಿತ್ತು ಹಾಕ ಬೇಕು[2]; ಹೊಸ ಮತಗಳನ್ನಾಗಲಿ ಭಾವವೂ ಲಕ್ಷ್ಯೆಯೂ ತಿಳಿಯದೆ ಜನರ ಮನಸ್ಸು ಭ್ರಮ ಗೊಳ್ಳಿಸುವಂಥವನ್ನಾಗಲಿ ಸ್ಥಾಪಿಸುವವರು ಆಢ್ಯ ಸ್ಥಿತಿಯವರಾದರೆ ಅವರ ಮಾನ ಕೆಡಿಸ ಬೇಕು, ಹೀನ ಸ್ಥಿತಿಯವರಾದರೆ ಅವರಿಗೆ ಮರಣಾಜ್ಞೆ ಮಾಡಿಸ ಬೇಕು[3]. — ರಾಜ್ಯಮತವಲ್ಲದ[4] ಕ್ರೈಸ್ತತ್ವಕ್ಕೆ ಇಂಥ ಕಠಿಣ ರಾಜನೀತಿಯೊಂದರಿಂದಲೇ ಬಹಳ ಕಷ್ಟ ಬರಲಿಕ್ಕೆ ಸಾಕು; ಅಷ್ಟು ಮಾತ್ರವಲ್ಲದೆ ಕ್ರೈಸ್ತರು ದಿವ್ಯ ಶೋಭೆಯೂ ದಿವ್ಯ ಮರ್ಮವೂ ಉಳ್ಳ ತಮ್ಮ ದೇವಭಕ್ತಿಯಿಂದ ಆ ರೋಮಾಯ ಅಧಿಕಾರಸ್ಥರ ತೀವ್ರ ಕೋಪಕ್ಕೂ ಒಳ ಬೀಳ ಬೇಕಾಯಿತು. ಹ್ಯಾಗಂದರೆ, ಅವರು ತಮ್ಮ ಮೇಲಿನ ಅಧಿಕಾರಿಗಳಿಗೆ ಕ್ರಿಸ್ತಕರ್ತನ ಹೆಸರಿನಲ್ಲಿ ನಂಬಿಗಸ್ತರಾಗಿದ್ದರೂ, ಮನುಷ್ಯರಿಗಿಂತ ಹೆಚ್ಚಾಗಿ ದೇವರಿಗೆ ವಿಧೇಯರಾಗಿರುವದು ನ್ಯಾಯವೆಂತ[5], ತೀರ್ಪು ಮಾಡಿ ಕೊಳ್ಳುತ್ತಿರುವದರಿಂದ ಕೈಸರರ ಗೊಂಬೆಗೆ[6], ದೇವತೆ ಎಂದು, ಎಂತೂ ಧೂಪ ಸುಡಲೊಲ್ಲರು; ಮೂರ್ತಿಪೂಜಕ ಕಲ್ಪಕ್ರಿಯೆಗಳು ತೀವಿದ ರಾಜೋದ್ಯೋಗಗಳು ತಮಗೆ ಬೇಡವೆನ್ನುವರು; ತಾವು ಆಣೆ ಇಡಲಿಕ್ಕೆ[7] ಬಹುಶಃ ಒಪ್ಪಿ ಕೊಳ್ಳದ್ದರಿಂದ ಮಾತ್ರವಲ್ಲದೆ ಸೈನಿಕರು ವಿಗ್ರಹಗಳಿಗೆ ಬಲಿ ಅರ್ಪಿಸಲೂ ಕೈಸರನಿಗೆ ಪೂಜಿಸಲೂ ಬೇಕಾದ್ದರಿಂದ ಸಹ ಸೇನೋದ್ಯೋಗಕ್ಕೆ ಅಸಹ್ಯ ಪಡುವರು; ಮೂರ್ತಿಪೂಜಕರಲ್ಲಿಯ ವಿದ್ವಾಂಸರು ರಾಜಧರ್ಮವೇ ಆದ ಮೂರ್ತಿಪೂಜೆಗೆ ಅಂತರಂಗದಲ್ಲಿ ಹಾಸ್ಯ ಮಾಡಿ, ಕೈಸರನನ್ನೂ ಹೆಡ್ಡ ಪ್ರಜೆಯ ಗುಂಪನ್ನೂ ಮೆಚ್ಚಿಸುವದಕ್ಕಾಗಿ ಕೇವಲ ಕಪಟದಿಂದ ಮಾತ್ರ ಬಹಿರಂಗದಲ್ಲಿ ಮೂರ್ತಿಗಳಿಗೆ ಅಡ್ಡ ಬೀಳುವಷ್ಟರೊಳಗೆ[8] ಕ್ರೈಸ್ತರು ಆ ನೀಚ ಮೂರ್ತಿಪೂಜೆಗೆ ಮನಃಪೂರ್ವಕವಾಗಿ ಹೇಸಿ ಕೊಂಡು, ಅದನ್ನು ಬಹಿರಂಗದಲ್ಲಿಯೂ ವಿಸರ್ಜಿಸಿ ಬಿಟ್ಟು, ಅದಕ್ಕೆ ಮನೋವಾಕ್ಕಾಯಗಳಿಂದ ಸರ್ವಥಾ ಎದುರಿಸುವರು. ರೋಮಾ

---

1) Cicero. 2) Livius. 3) Julius Paulus. 4) ರಾಜ್ಯಮತ ಅಥವಾ ರಾಜಮತ ಅಂದರೆ ಅಧಿಕಾರಸ್ಥರ ಆಜ್ಞೆಯ ಮೇಲೆ ಸರ್ವ ರಾಜ್ಯದಲ್ಲಿ ಸಲ್ಲ ಯೋಗ್ಯವಾದಂಥಾದ್ದು. 5) ಅಪೊ. ಕ್ರಿ. 4, 19; 5, 29. 6) 10ನೇ ಪಾನು. 7) ಮತ್ತಾ. 5, 37; ಯಕೋ. 5, 12. 8) 11ನೇ, 13ನೇ ಪಾನು.

ಯ ಸಾಮ್ರಾಜ್ಯದವರು ಪ್ರೇತಸಂಸ್ಕಾರದಲ್ಲಿಯೂ ಬೇರೆ ಬೇರೆ ಹಬ್ಬಗಳಲ್ಲಿಯೂ ಗುಲಾಮರನ್ನಾಗಲಿ ಜಟ್ಟಿಗಳನ್ನಾಗಲಿ ರಂಗಸ್ಥಳದೊಳಗೆ ಅತಿ ಕ್ರೂರವಾದ ದ್ವಂದ ಯುದ್ಧ ಮಾಡಿಸುವರು[1], ಅಂಥ ವೇಳ್ಯದಲ್ಲಿ ಆಗಿಂದಾಗ 120 ಜೋಡಿ ಗುಲಾಮರಾದರೂ ಜೀವಾಂತದ ಮಟ್ಟಿಗೂ ಹೆಣಗ್ಯಾಡುವರು; ಅದಲ್ಲದೆ ಅವರು ಸಿಂಹ ಹುಲಿ ಕರಡಿ ಮುಂತಾದ ಮೃಗಗಳನ್ನೂ ಮನುಷ್ಯರೊಡನಾಗಲಿ ಒಂದರೊಡನೊಂದನ್ನಾಗಲಿ ಪ್ರಾಣಾಂತಕ್ಕೆ ಹೋರಾಡಿಸುವರು; ಆ ಪ್ರಕಾರದ ಅನಿಷ್ಟ ಜೀವಹಿಂಸೆಯಿಂದ ರೋಮಿಾಯರ ಮನಸ್ಸು ಬಹಳ ನಿಷ್ಠುರವಾಗುತ್ತಾ ಬಂದಿತ್ತು;—ಕ್ರೈಸ್ತರು ಅಂಥ ಆಟಗಳಿಗೆ ಹೋಗದ್ದಲ್ಲದೆ, ಅವು ದೊಡ್ಡ ಪಾಪವೆಂತ, ಹೇಳುವರು. ಅದು ಹೊರ್ತಾಗಿ ಅವರು ಮೂರ್ತಿಪೂಜಕರ ಯಾವದೊಂದು ಹಬ್ಬಕ್ಕೂ ಪ್ರೇತಸಂಸ್ಕಾರಕ್ಕೂ ಮದಿವೆಯ ಮೆರವಣಿಗೆಗೂ ಕೂಡುವದೇ ಇಲ್ಲ. ಕ್ರೈಸ್ತರಿಗೆ (ಅವರ ಲಕ್ಷ್ಯೆ ತಿಳಿಯ ಬರಲಿಕ್ಕಾಗುವ) ಯಾಗಪೀಠ, ವಿಗ್ರಹ, ದೇವಸ್ಥಾನಗಳು ಇಲ್ಲ; ಮತ್ತು ಅವರು ತಮಗೆ ಮಾತ್ರ ತಿಳಿದಿರುವ ಗುಟ್ಟುಸಂಜ್ಞೆಗಳಿಂದ ತಮ್ಮ ತಮ್ಮ ಗೊತ್ತು ಹಿಡಿಯುವದಲ್ಲದೆ ತಮ್ಮ ತಮ್ಮ ಗೊತ್ತು ಹಿಡಿದ ಕ್ಷಣವೇ ತಮತಮಗೆ ಪ್ರೀತಿ ಮಾಡುವದರಲ್ಲಿ ಪ್ರಾಣ ಸಹ ಕೊಟ್ಟು ಬಿಡುತ್ತಾರೆ! ಎಂತ[2], ವಿಗ್ರಹಾರಾಧಕರು ಹೇಳಿ, ಕ್ರೈಸ್ತರ ಆತ್ಮೀಯ ದೇವಸೇವೆಯ ಮತ್ತು ಪರಸ್ಪರ ಪರಿಶುದ್ಧ ಪ್ರೀತಿಯ ಮರ್ಮವನ್ನು ಗ್ರಹಿಸಲಾರದೆ, ಅವರು ಸಾಮ್ರಾಜ್ಯಕ್ಕೆ ರಹಸ್ಯದಲ್ಲಿ ಒಳಸಂಚು ನಡಿಸುವಂಥಾದೊಂದು ದ್ರೋಹಿಕ ಕುಲವೆಂತ, ಅವರ ಮೇಲೆ ವಿಚಾರಣೆ ಇಲ್ಲದೆ ಸುಮ್ಮನೆ ಸಂಶಯ ಪಟ್ಟು, ಅಪರಾಧ ಹೊರಿಸಲಿಕ್ಕೆ ನೋಡುವರು. ಕ್ರೈಸ್ತರು ದ್ರೋಹಚಿಂತಕರಾದ್ದರಿಂದ ಇನ್ನು ಸಂಘ ನೆರೆದು ಬರ ಬಾರದು! ಎಂಬ ರಾಜಾಜ್ಞೆಯು ತಿರಿಗಿ ತಿರಿಗಿ ಬರುತ್ತಿದ್ದರೂ ಸತ್‌ಕ್ರೈಸ್ತರು ಅದನ್ನು ಸಹಜವಾಗಿ ಲಕ್ಷಿಸದೆ, ಮರಳಿ ಮರಳಿ ದೇವಾರಾಧನೆಗೆ ಕೂಡುವಲ್ಲಿ ಮತ್ತು ಕೈಸರನ ಗೊಂಬೆಗೆ ಧೂಪ ಸುಡಲೊಲ್ಲದಿರುವಲ್ಲಿ ಮೂರ್ತಿಪೂಜಕರು ಬೋಳಯಿಸುವ ಉಪಾಯಗಳಿಂದಲೂ ಬಲಾತ್ಕಾರ ಮಾಡುವ ಉಪಾಯಗಳಿಂದಲೂ ಸಡಲಿಸ ಕೂಡದಂಥ ಅವರ ದೇವಭಕ್ತಿದೃಢತ್ವವು ಅವಿಧೇಯತ್ವವೇ ಎನ್ನಿಸುವದು. ಪುನಃ, ಕ್ರೈಸ್ತರಲ್ಲಿ ಅನೇಕರು, ದುಷ್ಕ್ರಿಯೆಗಳುಳ್ಳ ರೋಮಿಾಯ ಸಾಮ್ರಾಜ್ಯವು ದೇವರ ಕೋಪದಿಂದ ಬೇಗ ಹಾಳಾದೀತೆಂತ, ಪ್ರಸಂಗಿಸುವ ಕಾರಣ ಕ್ರೈಸ್ತರ ಮೇಲಿನ ಶಿಟ್ಟು ಹೆಚ್ಚುವದು. ಅದಲ್ಲದೆ, ಕ್ರೈಸ್ತರು ಸಭಾಬಹಿಷ್ಕೃತರನ್ನು, ಅಸ್ನಾತರೆಲ್ಲರನ್ನೂ ಸಹ, ಹೊರಡಿಸಿ ಅಂತರಂಗದಲ್ಲೇ ಪರಿಶುದ್ಧ ರಾತ್ರಿಭೋಜನವನ್ನಾಚರಿಸುವ ದೆಸೆಯಿಂದ[3] ಮೂರ್ತಿಪೂ

1) 14ನೇ, 64ನೇ ಪಾನುಗಳು ನೋಡು. 2) Celsus; Minuc. Felix. 3) 95ನೇ ಪಾನು.

ಜಕರು, ಅವರು ವಿಧವಿಧದ ಕಾಮವಿಕಾರವನ್ನು ನಡಿಸುವಂಥವರೂ ಶಿಶುಗಳನ್ನು ಕೊಂದು ತಿನ್ನುವಂಥವರೂ ಮುಂತಾದ ಬೈಲಾಗ ಬಾರದೆ ರಾಜದಂಡನಕ್ಕೊಳಗಾಗುವಂಥ ದುರ್ನಡತೆಯುಳ್ಳವರೂ! ಎಂದು, ಚಾಡಿ ಹೇಳುವರು; ಈ ವಿಷಯದಲ್ಲಿ ಆ ಮೂರ್ತಿಪೂಜಕರು ತಮ್ಮಲ್ಲಿ ಗುಪ್ತವಾಗಿ ಸರ್ವಥಾ ನಡೆಯುತ್ತಿರುವ ದುರಾಚಾರಗಳನ್ನು ಅವರಲ್ಲಿ ವ್ಯರ್ಥವಾಗಿ ಆರೋಪಿಸುವರು; ಅಶುದ್ಧರಾದ ತಾವು ಕ್ರೈಸ್ತತ್ವದ ಶುದ್ಧತೆಯನ್ನು ತಿಳಿಯಲರಿಯರು.—ಇಷ್ಟೆಲ್ಲಾದರಿಂದ ಮಾತ್ರವಲ್ಲದೆ, ತಾವು ಭದ್ರ ಮಾಡಿಡಲಿಕ್ಕೆ ಬಹಳ ಕಷ್ಟವಾಗುವ ತಮ್ಮ ಮಹಾ ಸಾಮ್ರಾಜ್ಯದಲ್ಲಿ ಒಂದಕ್ಕೊಂದು ವಿರುದ್ಧವಾದ ಎರಡು ಮತಗಳಿದ್ದರೆ ಅದು ತಡೆಯದಲೇ ಕೆಟ್ಟೀತೆಂತ, ಭಯ ಪಡುವದರಿಂದ ಸಹ ಅಧಿಕಾರಿಗಳು ಕ್ರೈಸ್ತರಿಗೆ ಹಗೆ ಗೊಂಡಿರುವರು.

ಸಾಮ್ರಾಜ್ಯದ ಬೇರೆ ಬೇರೆ ಕುಲದವರು ಕ್ರೈಸ್ತರಿಗೆ ವಿರೋಧವಾಗಿ ಬೇರೆ ಬೇರೆ ಮಾತಾಡುವರು. ವಿದ್ಯಾಧನಗರ್ವಿತರು, ಸುವಾರ್ತೆಯು ಒಂದು ಶಿರೋಭ್ರಮಣ; ಅಗೋ, ಆ ಕ್ರೈಸ್ತರ ನಾಯಕನು ತನ್ನ ದುಷ್ಕರ್ಮಗಳ ದೆಸೆಯಿಂದ ಕ್ರೂಜೆಗೆ ಹಾಕಿಸಿ ಕೊಂಡ ಒಬ್ಬ ಅನಾಯಕ ಮನುಷ್ಯನೇ! ಎಂತ, ಮುಂತಾದ ಅಘೋರ ದೂಷಣವ ಮುಖ ಗ್ರಂಥಗಳಿಂದ ಮಾಡಿ, ಎಲ್ಲಾ ಮನುಷ್ಯರು ಕ್ರಿಸ್ತನಲ್ಲಿ ಸಹೋದರರಾಗ ಬೇಕೆಂದು ಜಾತಿಭೇದದ ಹುಸಿ ಕೀಳುವ ಕ್ರೈಸ್ತರ ಪ್ರಸಂಗಕ್ಕೋಸ್ಕರ ಬೇಸತ್ತು, ಕ್ರೈಸ್ತರು ತಮ್ಮ ಮಾಂಸಲ ಇಚ್ಛೆ ಆಶೆಗಳನ್ನು ಅಲ್ಲಗಳಿದು ಬಿಡುವಂಥ ಧರ್ಮವು ಹುಚ್ಚುತನವೆಂತ, ವದಿಸುವರು; ಕ್ರೈಸ್ತತ್ವದಿಂದ ತಮ್ಮ ಸುಳ್ಳುಮಾನವೂ ತಮ್ಮ ಹೊಟ್ಟೇ ಸೌಖ್ಯವೂ ತಪ್ಪಿ ಹೋದೀತೆಂತ, ಪೂಜಾರಿಗಳೂ ಕಣಿಗಾರರೂ ಮಂತ್ರಗಾರೂ ಕ್ರೈಸ್ತರ ವೈರಿಗಳಾಗಿರುವರು; ತಮ್ಮ ಧೂಪವು ಇನ್ನು ಮಾರುವದಿಲ್ಲವೆಂತ, ಅಂಗಡಿಗಾರರು ಕೋಪ ತಾಳುವರು; ತಮ್ಮ ಮೂರ್ತಿವ್ಯಾಪಾರವು ಇನ್ನು ನಡಿಯಲಿಕ್ಕಿಲ್ಲವೆಂತ, ಪಂಚಾಳರು ಗುಣುಗುಟ್ಟುವರು; ಆದರೆ ಒಟ್ಟಿಗೆ ಪ್ರಜೆಯು—ಅವರಿಗೆ ಬಲಿಪೀಠಗಳೂ ವಿಗ್ರಹಗಳೂ ಇಲ್ಲ, ಅವರು ದೇವತೆಗಳ ರೋಷವೇರಿಸುವ ನಾಸ್ತಿಕರೆಂತ, ಕ್ರೈಸ್ತರಿಗೆ ದೂಷಿಸುವರು. ಐಗುಪ್ತ ದೇಶದಲ್ಲಿ ನೀಲ ನದಿಯು ಹೊಲ ಗದ್ದೆಗಳ ಮೇಲೆ ಹೆಚ್ಚಾಗಿ ಬೀಳದೆ ದುರ್ಭಿಕ್ಷೆಯಾಗುವ ಪಕ್ಷದಲ್ಲಿಯೂ ಈತಲಿಯ ದೇಶದಲ್ಲಿ ತಿಬೆರಿ ನದಿಯು ದೊಡ್ಡ ಮಳೆಗಾಗಿ ರೋಮಪುರದ ಮೇಲೆ ಉಬ್ಬೇರಿ ಬೀಳುವ ಪಕ್ಷದಲ್ಲಿಯೂ ಮಾರಿರೋಗವು ಕೊಲ್ಲುವ ಪಕ್ಷದಲ್ಲಿಯೂ ಭೂಕಂಪವು ಆಗುವ ಪಕ್ಷದಲ್ಲಿಯೂ ಬರವು ಬೀಳುವ ಪಕ್ಷದಲ್ಲಿಯೂ—ಹೀಗೆ ರೋಮಾಯ ಸಾಮ್ರಾಜ್ಯದೊಳಗೆ ಆಗುವ ಯಾವದೊಂದೂ ಕಷ್ಟದಲ್ಲಿ ಅಕ್ರೈಸ್ತರು—ಅಗೋ, ಕ್ರೈಸ್ತತ್ವದ ದೆಸೆಯಿಂದ ಉರಿಯುವ ದೇವತೆಗಳ ಕೋಪವು! (ರಂಗಸ್ಥಳದಲ್ಲಿ) ಕ್ರೈಸ್ತರನ್ನು ಸಿಂಹದ ಬಾಯಿಗೆ ಹಾಕಿರಿ! ಎಂದು, ಒದರಲೆಸಗಿ,

ಕ್ರೈಸ್ತರನ್ನು ಕೊಲ್ಲುವವರಾಗುವರು. ದೇವರು ಮಳೆ ಹೊಯ್ಯಿಸುವದಿಲ್ಲ, ಕ್ರೈಸ್ತರನ್ನು ಹನನಸ್ಥಳಕ್ಕೆ ವೈಯಿರಿ! ಎಂಬ ಗಾದೆಯು ಅವರಲ್ಲಿ ರೂಢಿಯಾಯಿತು. ಸುಮಾರು ಕ್ರಿ. ಶ. 198ನೇ ವರುಷದಲ್ಲಿ ತೆರ್ತುಲ್ಲಿಯಾನನೆಂಬ ಆ ಕ್ರೈಸ್ತ ಸಭಾಪಿತನು[1] ಬರೆದ್ದೇನೆಂದರೆ—ನಾವು, ಕ್ರೈಸ್ತರಾಗಿದ್ಧೇವೆಂತ, ನಿವೇದನ ಮಾಡಿದರೆ ಮೂರ್ತಿಪೂಜಕರು ನಮ್ಮ ಮೇಲೆ ಪೀಡಾಯಂತ್ರಗಳನ್ನು ಪ್ರಯೋಗಿಸುವರು; ನಾವು ಆ ಅರಿಕೆಯಲ್ಲಿ ಇದ್ದು ಕೊಂಡರೆ ನಮಗೆ ಮರಣದಂಡನ ಗೈಯುವರು; ನಾವು ಕ್ರೈಸ್ತರಲ್ಲವೆಂತ, ಹೇಳಿದರೆ ನಮ್ಮನ್ನು ಬಿಡಿಸಿ, ಕಳುಹಿಸುವರು; ಯಾಕಂದರೆ ಕ್ರೈಸ್ತರೆಂಬ ಹೆಸರಿಗೆಯೇ ಎದುರಾಳಿಗಳಾಗಿದ್ದಾರೆ!—

ಹಿಂದೆ ವರ್ಣಿಸಿದ ಆ ನಾನಾ ಕಾರಣಗಳಿಂದ ಅನ್ಯಾಯವಾಗಿ ಆಗುತ್ತಲಿರುವ ಹಿಂಸೆಗಳೊಳಗೆ ಕ್ರೈಸ್ತರು ತಮ್ಮ ಹಾಗೆ ಪಾಪಿಷ್ಠರಿಂದ ಅಮಿತ ಶ್ರಮ ಪಟ್ಟ ತಮ್ಮ ಕರ್ತನ ನಾಮದಲ್ಲಿ ಏನೇನೂ ಎದುರು ಚಂಡಿಸದಲೇ ಶ್ರಮ ಸಹಿಸುವಂಥವರಾಗಿ, ಕ್ರಿಸ್ತನ ನಿಮಿತ್ತ ಏನೊಂದೂ ಉಪದ್ರವ ತಾಳುವದು ಮಾನವೆಂತ, ಎಣಿಸಿ ಕೊಳ್ಳುವದು ಮಾತ್ರವಲ್ಲದೆ—ನಿಮ್ಮ ಶತ್ರುಗಳಿಗೆ ಪ್ರೀತಿಸಿರಿ, ನಿಮ್ಮ ಶಾಪಕರಿಗೆ ಆಶೀರ್ವದಿಸಿರಿ, ನಿಮ್ಮ ಹಗೆಗಾರರಿಗೆ ಒಳ್ಳೇದು ಮಾಡಿರಿ, ನಿಮ್ಮ ನಿಂದಕರಿಗೋಸ್ಕರವೂ ಹಿಂಸಕರಿಗೋಸ್ಕರವೂ ಪ್ರಾರ್ಥಿಸಿರಿ! ಎಂಬ ಕ್ರಿಸ್ತಾಜ್ಞೆಯನ್ನು[2] ಪೀಡೆಯೊಳಗೂ ಮರಣದೊಳಗೂ ನಡಿಸುವವರಾಗಿರುವರು. ಮೂರ್ತಿಪೂಜಕರು ತಮ್ಮ ಮೇಲೆ ಹೇಳುವ ಚಾಡಿ ದೂಷಣೆಗಳು ಅಯೋಗ್ಯವೆಂತಲೂ ಕ್ರೈಸ್ತ ಮತವು ದಿವ್ಯ ಸತ್ಯವೆಂತಲೂ ನಿತ್ಯದಲ್ಲಿ ತಮ್ಮ ಜೀವಿತದಿಂದ, ಕಾಲಕಾಲಕ್ಕೆ ಗ್ರಂಥಗಳಿಂದ ಸಹ, ಸಿದ್ಧಾಂತ ಮಾಡುವರು. ಸಾಧಾರಣವಾಗಿ ಅವರು ಸ್ವೇಚ್ಛೆಯಿಂದ ಶ್ರಮ ಹುಡುಕಿ ಕೊಳ್ಳುವದಿಲ್ಲ, ಆದರೆ ವಿಶ್ವಾಸಸಾಕ್ಷಿಯ ದೆಸೆಯಿಂದ ಅದು ಬರುವ ಸಮಯ ಶರೀರಕ್ಕೆ ಅತಿ ಸಂಕಟವುಳ್ಳ ಮೃತಿಗೂ ಸಂತೋಷ ಪಡುವರು. ತಮ್ಮ ದೃಢ ಸಾಕ್ಷಿಗೆ ಮರಣ ಹೊಂದಿ ಮುದ್ರೆ ಹಾಕುವಂಥವರು ಮರ್ತುರರು ಅಂದರೆ ರಕ್ತಸಾಕ್ಷಿಗಳು ಅನ್ನಿಸಿ ಕೊಳ್ಳುವರೆಂತ, ಹಿಂದೆ ತಿಳಿಸಿ ಅದೆ[3]; ಒಳ್ಳೇ ಸಾಕ್ಷಿ ಕೊಟ್ಟು ಜೀವದಿಂದುಳಿಯುವಂಥವರು ಕೊನ್ಫೆಸ್ಸೊರರು ಅಂದರೆ ಸಾಕ್ಷಿಗಳೆನ್ನಿಸಿ ಕೊಳ್ಳುವವರಷ್ಟೇ. ಹೇರಳ ಕ್ರೈಸ್ತರು ಆಗಿನ ಹಿಂಸಾಕಾಲದಲ್ಲಿ ರಕ್ತಸಾಕ್ಷಿಗಳಾಗಲಿ ಸಾಕ್ಷಿಗಳಾಗಲಿ ಆಗುವದಕ್ಕೆ ಸಮರ್ಥರಾದರು; ಹ್ಯಾಗಂದರೆ ಸ್ವಭಾವದ ಪ್ರಕಾರ ಬಲಹೀನರಾದ ಅವರಲ್ಲಿ ದೇವರ ವಾಕ್ಯವು ಬಲವಾಗಿದ್ದು, ಜಯ ಗೊಳ್ಳಿಸಿತು[4].

---

1) 100ನೇ ಪಾನು. 2) ಮತ್ತಾ. 5, 44. 3) 30ನೇ, 37ನೇ, 44ನೇ, 58ನೇ, 84ನೇ, 86ನೇ, 87ನೇ ಪಾನು. 4) 91ನೇ ಪಾನು ಸರಿ ನೋಡು.

## 10. ರೋಮಾಯ ಅಧಿಕಾರಿಗಳಿಂದ ಕ್ರೈಸ್ತರಿಗಾದ ಹಿಂಸೆಯು.

ಕ್ರಿ. ಶ. 14ನೇ ವರುಷದಿಂದ 37ನೇದರ ವರೆಗೆ ರೋಮಾಯ ಸಾಮ್ರಾಜ್ಯವನ್ನು ಆಳಿದ ತಿಬೆರಿಯನೆಂಬ 2ನೇ ಕೈಸರನು ಕಾಮಾತುರನಾಗಿದ್ದ ಹೊರ್ತು ಆಢ್ಯಸ್ಥಿತಿಯವರಿಗೆ ಬಹು ತಂಟೆ ಕೊಡುತ್ತಿದ್ದರೂ ಸಾಧಾರಣ ಪ್ರಜೆಗೆ ಅವನಿಂದ ತಕ್ಕಷ್ಟು ನ್ಯಾಯ ಶಿಕ್ಕುತ್ತಿರುವದು. ಅವನ ಕಾಲದಲ್ಲಿ ಕ್ರಿಸ್ತನಾಥನು ಕ್ರೂಜೆಯ ಮರಣ ಪಟ್ಟನು.[1] ಆ ತಿಬೆರಿಯನನ್ನು ಪ್ರಧಾನರಲ್ಲೊಬ್ಬನು ಮಂಚದ ವಸ್ತ್ರದಿಂದ ಅವನ ಉಸುರು ಕಟ್ಟಿಸಿ ಕೊಲ್ಲಿಸಿದನು[2].

ಕ್ರಿ. ಶ. 37ನೇ ವರುಷದಿಂದ 41ನೇದರ ವರೆಗೆ ಕಲಿಗುಲನೆಂಬ ಯೌವನಸ್ಥ ಕೈಸರನು[3] ಆಳಿ, ತನ್ನ ಬಂಡುತನಕ್ಕಾಗಿ ತನ್ನ ಮೇಲಾಳುಗಳ ಮುಖ್ಯಸ್ಥನಿಂದ ಕೊಲೆ ಪಟ್ಟನಂತರ ಕ್ಲಾದಿಯನೆಂಬ ಮುದುಕನು ಕೈಸರನಾಗಿ[4], ಯೆಹೂದ್ಯರನ್ನೂ ಕ್ರೈಸ್ತರನ್ನೂ ರೋಮಪುರದಿಂದ ಹೊರಡಿಸಲಿಕ್ಕೆ ಅಪ್ಪಣೆ ಕೊಟ್ಟನು; ಕೆಲವು ದಿವಸಗಳ ಈಚೆ ಈ ಅಪ್ಪಣೆಯು—ಆ ರಾಜಧರ್ಮವಿರೋಧಿಗಳು ರೋಮದೊಳಗೆ ಉಳಿಯಲಿಕ್ಕೆ ಮನಸ್ಸಾಗಿದ್ದರೆ ತಮ್ಮ ಧರ್ಮಾಚಾರ ಬಿಟ್ಟು ಬಿಡ ಬೇಕೆಂಬಂತೆ ಬದಲಾಯಿತು; ಆದರೆ ಇನ್ನು ಅದೇ ವರುಷದಲ್ಲಿ ಆ ಆಜ್ಞೆಯು ಪೂರ್ಣ ರದ್ದಿಗೆ ಬಿತ್ತು. ಹೀಗಿರಲಾಗಿ ರೋಮದಲ್ಲಿಯ ಕ್ರೈಸ್ತ ಸಭೆಯು ಚಲೋ ಅಭಿವೃದ್ಧಿಸ್ಥಿತಿಯಲ್ಲಿ ಬಂತು. ಕ್ಲಾದಿಯನ ಇಬ್ಬರು ನೀಚ ಹೆಂಡರಲ್ಲೊಬ್ಬಳು ಕ್ರಿ. ಶ. 54ನೇ ವರುಷಕ್ಕೆ ಅವನಿಗೆ ವಿಷವಿಕ್ಕಿ, ಕೊಂದು, ನೆರೋನನೆಂಬ ಪುತ್ರನಿಗೆ ಪಟ್ಟ ಕಟ್ಟಿಸಿದಳು.

ನೆರೋನನು[5] ಕ್ರಿ. ಶ. 54ನೇದರಿಂದ 68ನೇದರ ತನಕ ರಾಜ್ಯ ಗೇಯ್ದನು. ಅವನು ತನ್ನ ಆಳುವಿಕೆಯ ಆರಂಭದಲ್ಲಿ ಸ್ವಲ್ಪ ನೆಟ್ಟಗೆ ನಡ ಕೊಂಡರೂ ಆ ಮೇಲೆ ಅತಿ ನಿಷ್ಠುರನಾಗಿ, ತನ್ನ ತಾಯಿಯನ್ನಾದರೂ ಹೆಂಡತಿಯನ್ನಾದರೂ ತನ್ನ ಪ್ರಖ್ಯಾತ ಉಪಾಧ್ಯಾಯನಾದ ಸೆನೆಕನನ್ನಾದರೂ[6] ಜೀವಹಾನಿ ಮಾಡಿಸಿದನು. ಅವನು 3 ವರುಷ ಆಳಿರುವಂದು ಪೌಲ ಅಪೊಸ್ತಲನು ರೋಮದ ಕ್ರೈಸ್ತರಿಗೆ ತನ್ನ ಪತ್ರಿಕೆ ಬರೆದು ಕಳುಹಿಸಿ[7], 4 ವರುಷದ ಇತ್ತಕಡೆ ತಾನು ಅವರ ಬಳಿಗೆ ಶೆರೆಯವನಾಗಿ ಬಂದು[8], ಕ್ರಿ. ಶ. 63ನೇ ವರುಷ ತಿರಿಗಿ ಬಿಡುಗಡೆಯವನಾಗಿ[9], ರೋಮದಿಂದ ಹೊರಟು ಹೋದ್ದಕ್ಕೀಚೆ ಕ್ರಿ. ಶ. 64ನೇದರಲ್ಲಿ ಆ ಪುರದೊಳಗೆ ಭಯಂಕರವಾದದ್ದೊಂದು ಬೆಂಕಿಯು ಹತ್ತಿತು; ಆಗ ಸರ್ವಪ್ರಜೆಯು, ನೆರೋನನು ಆ

---

1) 24ನೇ, 26ನೇ, 33ನೇ, 34ನೇ, 59ನೇ ಪಾನು. 2) 15ನೇ ಪಾನು. 3) 34ನೇ, 59ನೇ ಪಾನುಗಳು. 4) 34ನೇ, 36ನೇ, 37ನೇ, 43ನೇ, 50ನೇ, 60ನೇ ಪಾನು. 5) 15ನೇ, 43ನೇ, 55ನೇ, 56ನೇ, 57ನೇ, 60ನೇ, 61ನೇ, 62ನೇ, 89ನೇ ಪಾನುಗಳು. 6) 15ನೇ, 19ನೇ ಪಾನು ನೋಡು. 7) 49ನೇ ಪಾನು. 8) 56ನೇ ಪಾನು. 9) 56ನೇ ಪಾನು.

ಮಹಾ ಅಗ್ನಿಯಿಂದ ಹುಚ್ಚು ವಿನೋದ ಗೊಳ್ಳುವದಕ್ಕೆ ತಾನೇ ಅದನ್ನು ಹಚ್ಚಿಸಿದ ನೆಂತ, ಹೇಳಿ, ಕೋಪದಿಂದ ಆ ಭ್ರಷ್ಟನಿಗೆ ವಿರೋಧವಾಗಿ ಏಳಲು, ಅವನು ಆ ಬೆಂಕಿಯ ಅಪರಾಧವನ್ನು ಕ್ರೈಸ್ತರ ಮೇಲೆ ಹೊರಿಸಲಿಕ್ಕೆ ಪೇಚಾಡಿ, ಹೇಳಲಾರ ದಂಥ ದುಷ್ಟತ್ವದಿಂದ ಆ ನಿರ್ದೋಷಿಗಳನ್ನು ಪೀಡಿಸುವವನಾದನು. ಅವನ ಅಪ್ಪ ಣೆಯ ಮೇರೆಗೆ ರೋಮದಲ್ಲಿ ಅನೇಕ ಕ್ರೈಸ್ತರನ್ನು ಕ್ರೂಜೆಗೆ ಜಡಿದರು; ಮತ್ತೊ ಬ್ಬರ ಮೈಗೆ ಮೃಗಚರ್ಮ ಸುತ್ತಿ ಹೊಲಿದು, ರಂಗಸ್ಥಳದಲ್ಲಿ ಅವರನ್ನು ದೊಡ್ಡ ನಾಯಿಗಳ ಬಾಯಿಗೆ ಹಾಕಿದರು; ಇನ್ನೊಬ್ಬರಿಗೆ ಮೇಣ ರಾಳ ಇತ್ಯಾದಿ ಅಗ್ನಿವ ರ್ಧಕ ಜೀನಸುಗಳನ್ನು ಹಚ್ಚಿ, ಅವರನ್ನು ಕಂಭಕ್ಕೆ ಕಟ್ಟಿ, ಅವರು ಕೈಸರನ ಉದ್ಯಾ ನದಲ್ಲಿ ದೀವಟಗೆಗಳಂತೆ ಉರಿಯುವ ಹಾಗೆ ರಾತ್ರಿಯಲ್ಲಿ ಅವರನ್ನು ಹೊತ್ತಿಸಿದ ರು[1]. ಪೆತ್ರ ಅಪೊಸ್ತಲನು ತನ್ನ ಪ್ರವೃತ್ತಿಯ ಅಂತ್ಯಕಾಲಕ್ಕೆ ಸುಮಾರು ಕ್ರಿ. ಶ. 67ನೇ ವರುಷ ಪೌಲನೊಂದಿಗೆ[2] ರೋಮದಲ್ಲಿರಲಂದು ಆ ಪ್ರಕಾರದ ಹಿಂಸೆಯು ಇನ್ನೂ ನಡಿಯುತ್ತಿತ್ತು. ಪೆತ್ರನನ್ನು ಕುರಿತು ಉಳಿದಿರುವ ಒಂದು ಕಥೆ ಏನೆಂದ ರೆ—ಅವನಿಗೆ ಸಹ ಆಗ ಪ್ರಾಣನಷ್ಟ ಬರುವ ಹಾಗೆ ಆದ ವೇಳೆ ಕ್ರೈಸ್ತ ಸಹೋದ ರರು ಅವನಿಗೆ, ತಪ್ಪಿಸಿ ಕೊಂಡು ಹೋಗೆಂತ, ಬುದ್ಧಿ ಹೇಳಲವನು ರಾತ್ರಿಹೊ ತ್ತು ಓಡಿ ಹೋಗುವ ಉದ್ದಿಶ್ಯ ಪಟ್ಣದ ಬಾಗಿಲಿಗೆ ಸಮಿಾಪಿಸಲಾಗಿ, ಕ್ರಿಸ್ತನಾಥ ನು ಅವನಿಗೆ ಪ್ರತ್ಯಕ್ಷನಾದನು. ಪೆತ್ರನು, ಕರ್ತನೇ, ಎಲ್ಲಿಗೆ ಗಮನ? ಎಂತ, ಕೇಳ ಲು, ಕ್ರಿಸ್ತನು ಪ್ರತ್ಯುತ್ತರವಾಗಿ, ಮತ್ತೊಮ್ಮೆ ಕ್ರೂಜೆಮರಣ ತಾಳುವ ಹಾಗೆ ಬಂ ದಿದ್ದೇನೆಂತ, ಹೇಳಿದನು. ಸಂಗಡಲೇ ಪೆತ್ರನು, ತನ್ನ ಸೇವಕನಾದ ನನ್ನಲ್ಲಿ ಕ್ರಿಸ್ತ ನು ಮರಳಿ ಕ್ರೂಜೆಯಲ್ಲಿ ಸಾಯುವ ಹಾಗಾಗ ಬೇಕೆಂದು, ತಿಳುಕೊಂಡು, ಹಿಂದಿ ರುಗಿ, ಸ್ವಲ್ಪ ಕಾಲದನಂತರ ಶಿರೆಯವನಾದನು[3]. ಪೆತ್ರನ ಹೆಂಡತಿಯು ಅವನಿಗೆ ಮುಂದಾಗಿ ರಕ್ತಸಾಕ್ಷಿಯಾಗುವದಕ್ಕೆ ಹೋಗ ಬೇಕಾದಾಗ ಅವನು ನೋಡಿ, ಅವಳ ಹೆಸರು ಉಚ್ಚರಿಸಿ, ಪ್ರಿಯಳೇ, ಕರ್ತನನ್ನು ನೆನಸಿ ಕೋ! ಎಂತ, ಅವಳಿಗೆ ಧೈರ್ಯ ಹೇಳಿ ಕೊಟ್ಟನು[4]. ಕ್ರೂಜೆಮರಣವು ಬಹು ನಿಂದ್ಯವೆನ್ನಿಸುವದರಿಂದ[5], ರೋಮಿಾಯ ಪಟ್ಣವಾಸಿತ್ವವುಳ್ಳವರನ್ನು ಕ್ರೂಜೆಗೆ ಹಾಕ ಬಾರದೆಂತ, ಕಟ್ಟಳೆ ಇ ತ್ತು. ಅದು ಕಾರಣವಾಗಿ ರೋಮಿಾಯ ಪಟ್ಣವಾಸಿಯಾದ ಪೌಲ ಅಪೊಸ್ತಲನು ಕ್ರೂಜೆಯಿಂದಲ್ಲ ಕತ್ತಿಯಿಂದ ಕೊಲೆ ಪಟ್ಟ ದಿವಸದಲ್ಲಿಯೇ ಆ ಪಟ್ಣವಾಸಿತ್ವವಿಲ್ಲದ ಪೆತ್ರನನ್ನು ಕ್ರೂಜೆಗೆ, ಮೊಳೆ ತಕ್ಕೊಂಡು, ಜಡಿಯಲಿಕ್ಕೆ ಸಿದ್ಧರಾಗಲು, ಅವನು ವಿ

---

1) Tacitus; annals XV, 44. 2) Hippolytus; refut. c. haer. VI, 20; 53ನೇ, 57ನೇ ಪಾನುಗಳು. 3) ಯೋಹಾ. 21, 18. 19. 4) Clemens Alexandrinus, strom. VII; Euseb. h. e. III, 30, 1 seq. 5) 26ನೇ ಪಾನು.

ನಂತಿ ಮಾಡುವ ಹಾಗೆ ಅವನನ್ನು ತಲೆ ಕೆಳಗಾಗಿ ಅದಕ್ಕೆ ಜಡಿದರು; ಅವನು, ತನ್ನ ಕರ್ತನ ರೀತಿಯಿಂದಲೇ ಸಾಯಲಿಕ್ಕೆ ತಾನು ಅಯೋಗ್ಯನೆಂತ, ಆಲೋಚಿಸಿ ಕೊಂಡನು.—ಕ್ರಿಸ್ತನ ಸಭೆಯು ಮನುಷ್ಯರ ಮೇಲೆ ಕಟ್ಟಿದ್ದರೆ ಆ ಮಹಾತ್ಮರಿಬ್ಬರು ತೀರಿ ಹೋದ್ದರಿಂದ ಅದು ಒಂದು ವೇಳೆ ಶಿಥಿಲವಾಗುತ್ತಿತ್ತು; ಹಾಗಿರದೆ, ತನ್ನ ರಾಜ್ಯಕ್ಕೆ ಜಯ ಸ್ಥೈರ್ಯಗಳನ್ನು ಕೊಡುವದಕ್ಕೋಸ್ಕರ ಅವನಿಗೆ ಘನಾತಿಶಯ ಸೇವಕರಾದರೂ ಅವಶ್ಯವಿಲ್ಲ.—ನೆರೋನನು ಸುಮಾರು 4 ವರುಷ ಕ್ರೈಸ್ತರನ್ನು ಹಿಂಸಿಸುತ್ತಾ ಬಂದ ಮೇಲೆ ತಕಿತನೆಂಬ ಆ ರೋವಿಾಯ ಚಾರಿತ್ರಲೇಖಕನ[1] ಗ್ರಂಥದ ಪ್ರಕಾರ ರೋವಿಾಯ ಮೂರ್ತ್ಯಾರಾಧಕ ಪ್ರಜೆಯಾದರೂ, ನೆರೋನನ ಅಪ್ಪಣೆಯಿಂದ ಎಣಿಕೆ ಇಲ್ಲದ ಕ್ರೈಸ್ತರು ಅತಿ ಕ್ರೂರ ವಿಧವಾಗಿ ಮೃತರಾಗುತ್ತಲಿರುವದನ್ನು ಕಂಡು, ಅಂತಃಕರಣವಿನ್ನೂ ಸಹಿಸಲಾರದೆ, ಇದಕ್ಕೂ ತನಗೆ ಸಹ ಆದ ಅನ್ಯಾಯಕ್ಕೂ ಕಲಹ ಹುಟ್ಟಿಸಲಾಗಿ, ಆ ಕಲ್ಲೆದೆಯವನು ಓಡಿ, ಗುಲಾಮಕುಲಜನಾದ ಒಬ್ಬನ ಮನೆ ಹೊಕ್ಕು, ಆತ್ಮಹತ್ಯ ಮಾಡಿ ಕೊಂಡನು. ಅವನು ಸಾಯಲಿಲ್ಲ; ಉಫ್ರಾತು ನದಿಯಾಚೆಗೆ ಹೋಗಿ, ಅಂತಿಕ್ರಿಸ್ತನಾಗಿ[2] (ಅಂದರೆ ಕ್ರಿಸ್ತನ ಮಹಾ ಪ್ರತಿಕೂಲನಾಗಿ) ತಿರಿಗಿ ಬರುವನೆಂಬ ವಾರ್ತೆಯು ಅಂದು ಕ್ರೈಸ್ತರಲ್ಲಿ ಪಸರಿಸಲಿಕ್ಕೆ ಹತ್ತಿತು.

ನೆರೋನನಿಗೀಚೆ ಮೂವರು ನೀಚ ಗುಣದ ಸೇನಾಧಿಪರು ಆಳಿದ ಬಳಿಕ ಕ್ರಿ. ಶ. 69ನೇ ವರ್ಷದಲ್ಲಿ ವೆಸ್ಪಸಿಯಾನನು ಕೈಸರನಾಗಿ, ಮರು ವರುಷ ಯೆರೂಸಲೇಮು ಹಾಳು ಮಾಡಿಸಿ[3], 79ನೇದರಲ್ಲಿ ಅಳಿಯಲು, ತಿತನೆಂಬ ಕುಮಾರನು[3] ಉತ್ತರಾಧಿಕಾರಿಯಾಗಿ, ಕ್ರಿ. ಶ. 81ನೇ ಅಬ್ದದ ತನಕ ಸರ್ವ ಪ್ರಜೆಯನ್ನು ದಯೆಯಿಂದ ಪಾಲಿಸಿದನು. ನೆರೋನನು ಸತ್ತಂದಿನಿಂದ ಈ 81ನೇ ವರ್ಷದ ವರೆಗೆ ಕ್ರೈಸ್ತರು 13 ವರುಷ ಬಾಹ್ಯ ಶಾಂತಿಯನ್ನನುಭವಿಸುತ್ತಿದ್ದರು.

ಬಳಿಕ ತಿತನ ನೀಚ ಸಹೋದರನು ಪಟ್ಟಾಭಿಷೇಕ ಹೊಂದಿದನು; ಅವನ ಹೆಸರು ದೊಮಿತಿಯಾನನೆಂಬದು[4]. ಅವನು ಕ್ರೈಸ್ತರಿಗೆ ಹಿಂಸಿಸುವವನಾಗಿ, ದಾವೀದರಾಜನ ಕುಲದವರೂ ಯೇಸುನಾಥನ ನೆಂಟರೂ ಆದವರು ಪಲೇಸ್ತೀನದಲ್ಲಿದ್ದಾರೆಂತ, ಕೇಳಿ, ತನ್ನ ಅಧಿಕಾರದ ವಿರೋಧಿಗಳೆಂತ, ಹೆದರಿ ಕೊಂಡು, ಯೇಸುವಿನ ಸಹೋದರನಾದ ಯೂದನೆಂಬ ಅಪೊಸ್ತಲನ ಮೊಮ್ಮಕ್ಕಳಿಬ್ಬರನ್ನು ಹಿಡಿಸಿ, ಕಟ್ಟಿಸಿ, ರೋಮಕ್ಕೆ ತನ್ನ ಸಿಂಹಾಸನದೆಡೆಗೆ ತರಿಸಿ—ಕ್ರಿಸ್ತನು ಯಾರು? ಅವನ

1) 16ನೇ, 42ನೇ ಪಾನು. 2) 1 ಯೋಹಾ. 2, 18; 2 ಥೆಸ್ಸಲೊ. 2, 3. 4. 10; 1 ತಿಮೊ. 4, 2. 3; 2 ಪೇತ್ರ. 2; ಪ್ರಕಟ. 13; 17; 19; ಇತ್ಯಾದಿ. 3) 62ನೇ, 63ನೇ, 64ನೇ ಪಾನುಗಳು. 4) 66ನೇ ಪಾನು.

ರಾಜ್ಯವೆಂಥಾದ್ದು? ಯಾವಾಗ ಮತ್ತು ಎಲ್ಲಿ ಪ್ರಕಟವಾಗುವದು? ಎಂತ, ವಿಚಾರಿಸಲು, ಅವರು—ಅದು ಇಹಲೋಕದ್ದಲ್ಲ ಸ್ವರ್ಗೀಯವಾದದ್ದು; ಲೋಕಾಂತದಲ್ಲಿ ಕ್ರಿಸ್ತನು ಮಹಿಮೆಯಿಂದ ಬಂದು, ಸತ್ತವರಿಗೂ ಜೀವದಿಂದಿರುವವರಿಗೂ ನ್ಯಾಯ ತೀರಿಸುವಂದು ಸಿದ್ಧವಾಗುವದೆಂತ, ತಿಳಿಸೋಣ, ಆ ಕೈಸರನು ಅವರ ಬಡ ರೂಪ ವಸ್ತ್ರಗಳನ್ನೂ ಕೃಷಿಕೆಲಸದಿಂದ ಕೈಯಲ್ಲಿ ಹುಟ್ಟಿದ ದಡ್ಡುಗಳನ್ನೂ ದೃಷ್ಟಿಸಿ, ಇಂಥಾ ಮನುಷ್ಯರಿಗೆ ತಾನು ಭಯ ಪಡ ಬೇಕಾಗುವದಿಲ್ಲವೆಂತ, ಅವರನ್ನು ಹಿಂದಕ್ಕೆ ಕಳುಹಿಸಿ ಬಿಟ್ಟನು. ಅವನು ತನ್ನ ಮರಣದ ವರೆಗೆ ಅಂದಿನಿಂದಂದು ಕ್ರೈಸ್ತರಲ್ಲಿ ಕೆಲವರನ್ನು ಕೊಲ್ಲಿಸುತ್ತಾ, ಕೆಲವರ ಬದುಕನ್ನು ಕಸುಕೊಳ್ಳುತ್ತಾ, ಕೆಲವರನ್ನು ಗಡಿಪಾರು ಮಾಡುತ್ತಾ ಇದ್ದನು. ಯೋಹಾನ ಅಪೊಸ್ತಲನಿಗೆ ಸಹ ಅವನಿಂದ ಹಿಂಸೆಯಾಯಿತೆಂತ, ಹಿಂದೆ ಓದಿದ್ಧೀರಿ[1]. ಸ್ವಂತ ಹೆಂಡತಿಯ ಸಲಹೆಯಿಂದ ದೊಮಿತಿಯಾನನನ್ನು ಮಡಿಸಿದರು.

ಅವನ ತರುವಾಯದವನಾದ ನೆರ್ವನು[2] ಕ್ರಿ. ಶ. 96ನೇ ವರುಷದಿಂದ 98ನೇದರ ಮಟ್ಟಿಗೆ ಸಾಧುವಾಗಿ ರಾಜ್ಯ ಗೈಯುತ್ತಿದ್ದು, ದುಷ್ಕರ್ಮಿಗಳನ್ನಲ್ಲದೆ ಮತ್ತ್ಯಾರನ್ನೂ ಶಿಕ್ಷಿಸದೆ, ಗಡಿ ದಾಟಿಸಿದ ಕ್ರೈಸ್ತರನ್ನು ತಿರಿಗಿ ಬರಲೀಸಿ, ಕ್ರೈಸ್ತರ ಚಾಡಿಗಾರರ ಮಾತಿಗೆ ಕಿವಿ ಗೊಡದಿದ್ದನು. ಆದರೂ ಅವನ ಕಾಲದೊಳಗೆ ಸಹ ಕ್ರೈಸ್ತತ್ವವು ರಾಜಧರ್ಮಕ್ಕೆ ಬರಲಿಲ್ಲ.

ಕ್ರಿ. ಶ. 98ನೇ ವರುಷಕ್ಕೆ ತ್ರಾಯಾನನೆಂಬವನು[3] ಉತ್ತರಾಧಿಕಾರಿಯಾಗಿ, 3 ಅಬ್ದ ಆಳಿದನಂತರ ಯೋಹಾನ ಅಪೊಸ್ತಲನು ತೀರಿದನು[3]. ತ್ರಾಯಾನನು (ಲಕ್ಷ್ಯೈ ತಿಳಿಯದ) ಗುಪ್ತ ಕಾರ್ಯಗಳನ್ನು ನಡಿಸುವ ಜನಸಂಘವು ರಾಜ್ಯದಲ್ಲೆಲ್ಲಿಯೂ ಆಗ ಬಾರದೆಂಬ ಹಳೇ ರಾಜ್ಯಾಜ್ಞೆಯನ್ನೇ[4] ಕ್ರಿ. ಶ. 104ನೇದರಲ್ಲಿ ತಿರಿಗಿ ಪ್ರಕಟಿಸಿದ್ದರಿಂದ ದೇವಾರಾಧನ ಪರಿಶುದ್ಧರಾತ್ರಿಭೋಜನಗಳಿಗೆ ನಿತ್ಯ ಕೂಡುವ ಕ್ರೈಸ್ತರಿಗೆ ಮತ್ತೂ ಮಹಾ ಉಪದ್ರವವಾಯಿತು. ಆ ಸಮಯ ಸಣ್ಣ ಅಸಿಯದ ಬಿಥೂನಿಯ ಶೀಮೆಯಲ್ಲಿ ಪ್ರತಿನಿಧಿಯಾದ ಪ್ಲೀನಿಯನೆಂಬವನು ಕೈಸರನಿಗೆ ತನ್ನ ರಾಷ್ಟ್ರದ ವಿಷಯವಾಗಿ ಬರೆದು ಕಳುಹಿಸಿದ ಒಂದು ಪತ್ರಿಕೆ ಏನೆಂದರೆ—

ತ್ರಾಯಾನ ಕೈಸರನು ಕ್ಷೇಮವಾಗಿರಲಿ! ಎಂದು, ಪ್ಲೀನಿಯನು ಬಯಸುತ್ತಾನೆ. ಆ ಮೇಲೆ, ನನಗೆ ಸಂಶಯವಿರುವಂಥಾದನ್ನೆಲ್ಲಾ ನಿಮ್ಮ ಮುಂದೆ ಇಟ್ಟು, ನಿಮ್ಮ ಅಪ್ಪಣೆ ಕೇಳಿ ಕೊಳ್ಳುವದು ನನ್ನ ಮನಸ್ಸಾಗಿದೆ; ಹ್ಯಾಗಂದರೆ ನಾನು ಸಂಶಯ ಪಡುವ ಸಮಯದಲ್ಲಿ ನೀವಲ್ಲದೆ ಇನ್ನ್ಯಾರು ನನಗೆ ಬುದ್ಧಿ ಹೇಳುವರು? ಈ ಪ್ರದೇಶಕ್ಕೆ ಬರುವ ಮುಂಚೆ ನಾನು ಕ್ರೈಸ್ತರದೊಂದು ವಿಚಾರಣದಲ್ಲಿ ಎಂದೂ ಇ

1) 66ನೇ ಪಾನು ನೋಡು. 2) 66ನೇ ಪಾನು. 3) 68ನೇ ಪಾನು. 4) 100ನೇದಾದ ಪಾನು.

ದ್ದಿರಲಿಲ್ಲ; ಆದ್ದರಿಂದ ಅವರನ್ನು ಹುಡುಕಿ ತರುವ ವಿಷಯವೂ ಅವರನ್ನು ತಕ್ಕಂತೆ ಶಿಕ್ಷಿಸುವ ಬಗೆಯೂ ನನಗೆ ನೆಟ್ಟಗೆ ತಿಳಿಯುವದಿಲ್ಲ. ಚಿಕ್ಕ ಪ್ರಾಯದವರಿಗೂ ದೊಡ್ಡ ಪ್ರಾಯದವರಿಗೂ ಹೆಚ್ಚು ಕಡಿಮೆ ಮಾಡ ಬೇಕೋ? ಬೇಡವೋ? ಬಲಿಷ್ಠರ ಮೇಲೆಯೂ ಬಲಹೀನರ ಮೇಲೆಯೂ ಪೀಡಾಯಂತ್ರಗಳನ್ನು ಪ್ರಯೋಗಿಸುವಲ್ಲಿ ವ್ಯತ್ಯಾಸ ಮಾಡ ಬೇಕೋ? ಬೇಡವೋ? ಮಾನಸಾಂತರ ಪಟ್ಟು ಕ್ರೈಸ್ತತ್ವ ಬಿಟ್ಟವರಿಗೆ ಮನ್ನಿಸ ಬೇಕೋ? ಬೇಡವೋ? ಅದಲ್ಲದೆ, ಕ್ರೈಸ್ತರು ದುಷ್ಕರ್ಮಿಗಳೋ? ಅಲ್ಲವೋ? ಎಂದು, ಹ್ಯಾಗೂ ವಿಚಾರಿಸದೆ ಕ್ರೈಸ್ತರೆಂಬ ನಾಮಮಾತ್ರಕ್ಕೆ ಅವರನ್ನು ಶಿಕ್ಷಿಸ ಬೇಕೋ? ಅಥವಾ ಕ್ರೈಸ್ತರ ಮೇಲೆ ದುಷ್ಕರ್ಮಗಳನ್ನು ಹಿಡಿದಲೇ ಅವರನ್ನು ಶಿಕ್ಷಿಸ ಬೇಕೋ?—ಇಷ್ಟೆಲ್ಲವ ಕುರಿತು ನನಗೆ ನಿಶ್ಚಯವಿಲ್ಲ. ಅಷ್ಟರಲ್ಲಿ ಕ್ರೈಸ್ತರಾಗಿದ್ದಾರೆಂಬ ನ್ಯಾಯ ಬಂದವರನ್ನು ನಾನು ಈ ವರೆಗೂ ನಡಿಸುತ್ತಾ ಇದ್ದ ರೀತಿ ಏನೆಂದರೆ—ಕ್ರೈಸ್ತರಾಗಿದ್ಧೀರೋ? ಅಲ್ಲವೋ? ಎಂದು, ಕೇಳುವೆನು; ಅವರು ಹೌದಂದರೆ ಮರಣಶಿಕ್ಷಾಭಯದಿಂದ ಅವರನ್ನು ಬೆದರಿಸುತ್ತಾ ಇನ್ನು ಎರಡು ಸಾರಿ ಅದೇ ಪ್ರಶ್ನೆ ಮಾಡುವೆನು; ಅವರು ಅದೇ ಉತ್ತರ ಕೊಟ್ಟರೆ ಅವರನ್ನು ಕೊಲ್ಲಿಸುವೆನು; ಯಾಕಂದರೆ, ಅವರ ಮತವು ಎಂಥಾದಾಗಿದ್ದರೇನು? ಅವರ ಅವಿಧೇಯತ್ವಕ್ಕೂ ಹಟಕ್ಕೂ ಶಿಕ್ಷೆ ಕೊಡ ಬೇಕೆಂಬದೇ ನ್ಯಾಯವೆಂತ, ಸ್ಪಷ್ಟವಾಗಿ ತಿಳು ಕೊಂಡಿದ್ಧೇನೆ. ಅಂಥ ಹುಚ್ಚರೊಳಗಿನ ರೋಮಿಾಯ ಪಟ್ಣವಾಸಿತ್ವದವರನ್ನು ರೋಮಪುರದಲ್ಲಿಯ ನಿಮ್ಮ ನ್ಯಾಯಸ್ಥಾನಕ್ಕೆ ಕಳುಹಿಸುವೆನು. ಪರಂತು, ಲೋಕಪದ್ಧತಿ ಇದ್ದಂತೆ, ವಿಚಾರದೊಳಗೆ ಯಾರ ಮೇಲೆಯೂ ಅಪರಾಧ ಹೊರಿಸುವವರ ಲೆಖ್ಖವು ಬಹಳ ಹೆಚ್ಚಾಗುತ್ತಾ ಬಂದದೆ; ಹಾಗಾದರೆ ಕ್ರೈಸ್ತರಾಗಿದ್ದಾರೆಂಬ ಅಪರಾಧವು ಹಚ್ಚಿರುವಂಥ ಅನೇಕರದೊಂದು ಪಟ್ಟಿಯನ್ನು ಸಹ ಒಮ್ಮೆ ರುಜು ಹಾಕದೆ ನನ್ನ ಕೈಯಲ್ಲಿ ಕೊಡಲಾಗಿ, ನಾನು ಆ ಅಪರಾಧ ಹಚ್ಚಿರುವವರನ್ನು ಕರಿಸಿ ಕೇಳುವಲ್ಲಿ ಹಲವರು, ನಾವು ಎಂದಾದರೂ ಕ್ರೈಸ್ತರಾಗಿರಲಿಲ್ಲವೆಂತ, ಪ್ರಮಾಣಿಸಿ, ರಾಜ್ಯದೇವತೆಗಳನ್ನೂ ನಾನು ಇವುಗಳ ಸಾಲಿನಲ್ಲಿ ನಿಲ್ಲಿಸಿದ ನಿಮ್ಮ ಬೊಂಬೆಯನ್ನೂ ಕುರಿತ ಒಂದು ಸ್ತೋತ್ರವ, ನಾನು ಹೇಳಿದಂತೆಯೇ, ಹೇಳಿ, ಶಾಪಗ್ರಸ್ತನೆಂದು ಕ್ರಿಸ್ತನನ್ನು ದೂಷಿಸುತ್ತಾ ಅವಕ್ಕೆ ದ್ರಾಕ್ಷಾರಸದಿಂದಲೂ ಧೂಪದಿಂದಲೂ ಪೂಜಿಸಿದರು. ಸತ್‌ಕ್ರೈಸ್ತರು ಎಂದೂ ಹ್ಯಾಗೂ ಹಾಗೆ ಮಾಡಲಿಕ್ಕಿಲ್ಲವಂತೆ; ಆದ್ದರಿಂದ ಹಾಗೆ ಮಾಡಿದ ಅವರಿಗೆ ಬಿಡುಗಡೆ ಕೊಟ್ಟು, ಕಳುಹಿಸಿ ಬಿಟ್ಟೆನು. ಆ ಪಟ್ಟಿಯ ಮೇರೆಗೆ ಕ್ರೈಸ್ತತ್ವದ ಅಪರಾಧ ಹಚ್ಚಿರುವ ಮತ್ತೊಬ್ಬರು, ಕ್ರೈಸ್ತರಾಗಿದ್ಧೇವೆಂತ, ಆರಂಭದಲ್ಲಿ ನಿವೇದಿಸಿದರೂ ಆ ಮೇಲೆ, ತಾವು ಕ್ರೈಸ್ತರಲ್ಲವೆಂತ, ಅಲ್ಲಗಳೆದರು; ಇನ್ನೊಬ್ಬರು—3 ವರುಷದ ಹಿಂದಾಗಲಿ ಹೆಚ್ಚು ವರುಷದ ಹಿಂದಾಗಲಿ 20 ವರು

ಷದ ಹಿಂದೆಯೂ ಆಗಲಿ ಕ್ರೈಸ್ತರಾಗಿದ್ದೆವು, ಆದರೆ ಈಚೆ ಕ್ರೈಸ್ತತ್ವ ಬಿಟ್ಟು ಬಿಟ್ಟೆವೆಂತ, ಹೇಳಿದರು. ಈ ತರದವರೆಲ್ಲರು ನಿಮ್ಮ ಬೊಂಬೆಗೂ ಬೇರೆ ವಿಗ್ರಹಗಳಿಗೂ ಪೂಜೆ ಮಾಡಿ, ಕ್ರಿಸ್ತನಿಗೆ ಶಪಿಸಿದರು. ಆದರೂ, ಇವರು ತಾವು ಮುಂಚೆ ಇದ್ದು ಬಿಟ್ಟು ಬಿಟ್ಟ ಆ ಮತಾರ್ಥವನ್ನು ವಿವರಿಸುವಾಗ, ತಾವು ಗೈದ ಅಪರಾಧವೆಂಬದಾಗಲಿ ತಪ್ಪೆಂಬದಾಗಲಿ ಇದರಲ್ಲೇ ಉಂಟೆಂತ, ಪ್ರಮಾಣಿಸಿದರು; ಯಾವದರಲ್ಲೆಂದರೆ—ನೇಮಕವಾದ ಒಂದು ದಿವಸದಲ್ಲಿ (ಆದಿತ್ಯವಾರದಲ್ಲಿ) ನಾವು ಅರುಣೋದಯಕ್ಕಿಂತ ಮುಂಚೆ ಕೂಡಿ ಬಂದು, ದೇವರೆಂತ, ಕ್ರಿಸ್ತನನ್ನು ಕುರಿತು ಒಂದು ಗೀತ ಹಾಡಿ, ಏನೇನೂ ಪಾಪವನ್ನು ಮಾಡದಿರುವದಕ್ಕೂ ಕಳ್ಳತನ ಲೂಟಿ ವ್ಯಭಿಚಾರಗಳನ್ನು ನಡಿಸದಿರುವದಕ್ಕೂ ಕೊಟ್ಟ ಮಾತನ್ನು ಹಿಡು ಕೊಂಡಿರುವದಕ್ಕೂ ಒತ್ತೆಗಳನ್ನು ಅಡಗಿಸದಿರುವದಕ್ಕೂ ನಮ್ಮ ನಮ್ಮನ್ನು ಘನ ರೀತಿಯಾಗಿ ಆಣೆ ಕೊಟ್ಟು ಎಚ್ಚರಿಸಿ ಕೊಂಡು, ಅಗಲಿ, ಕೆಲವು ವೇಳೆಯ ಮೇಲೆ ಹೆಣ್ಣು ಗಂಡು ಮಕ್ಕಳೂ ಐಶ್ವರ್ಯವಂತರೂ ಬಡವರೂ ಕೂಡಿ ಬರುವದೊಂದು (ಅಗಪೆ ಎಂಬ) ಭೋಜನವನ್ನು[1], ನೀತಿ ಮರ್ಯಾದೆಗಳನ್ನು ಹ್ಯಾಗೂ ತಪ್ಪಿಸದಲೇ, ಮಾಡುವದು ನಮ್ಮ ಪದ್ಧತಿಯಾಗಿತ್ತು; ಆದರೆ ಗುಪ್ತವಾದ ಸಂಘಗಳು ನಡೆಯ ಬಾರದೆಂಬ ರಾಜಾಜ್ಞೆಯು ಪ್ರಕಟವಾದಾಗ ಅದೆಲ್ಲವನ್ನು ಬಿಟ್ಟು ಬಿಟ್ಟೆವು.—ಸತ್ಯವನ್ನು ಪೂರಾಗಿ ತಿಳು ಕೊಳ್ಳುವದಕ್ಕೆ ನಾನು ದಿಯಾಕೊನರೆನ್ನಿಸುವವರಲ್ಲಿ ಇಬ್ಬರು ಹೆಣ್ಣು ಮಕ್ಕಳ ಮೇಲೆ[2] ಪೀಡಾಯಂತ್ರಗಳನ್ನು ಕಠಿಣವಾಗಿ ಪ್ರಯೋಗಿಸಿದರೂ ಅವಳವಳ ಬಾಯಿಯಿಂದ ವಿಶೇಷವಾದದ್ದೇನೂ ಹೊರಡಲಿಲ್ಲ; ಕ್ರೈಸ್ತತ್ವವು ಒಂದು ಸೊಟ್ಟಗಾದ ಮಹಾ ಅಪಬೋಧನಾಮಾರ್ಗವೆಂತ, ತಿಳು ಕೊಂಡೆನಷ್ಟೇ. ಅದು ಕಾರಣ ಎಲ್ಲಾ ವಿಚಾರಣವನ್ನು ಅನಕ ನಿಲ್ಲಿಸಿ ಬಿಟ್ಟು, ಆ ಕಾರ್ಯವನ್ನು ನಿಮ್ಮ ಮುಂದೆ ಇಡಲಿಕ್ಕೆ ಯೋಗ್ಯವೆಂದೆಣಿಸಿದ್ಧೇನೆ; ಯಾಕಂದರೆ ಆ ಕಾರ್ಯದಲ್ಲಿ ಅನೇಕಾನೇಕ ಜನರು ಶೇರಿ ಕೊಂಡಿರುವದರಿಂದ ಅದನ್ನು ಮನಸ್ಸು ಕೊಟ್ಟು ವಿಚಾರಿಸುವದು ತಕ್ಕದಾಗಿದೆ. ನಾನಾ ವಿಧದ ಆಯುಷ್ಯವೂ ಸ್ಥಿತಿಯೂ ಉಳ್ಳ ಕ್ರೈಸ್ತ ಗಂಡಸರ ಮತ್ತು ಹೆಂಗಸರ ಹೆಸರು ನನಗೆ ಹೇಳಿ ಅವೆ; ಇನ್ನು ಬಹಳ ಮಂದಿಯ ಹೆಸರು ತಡಿಯದೆ ನನಗೆ ಹೇಳೋಣವಾಗುವದೆಂಬದು ನಿಶ್ಚಯ. ಸೊಂಕುರೋಗದ ಹಾಗಿರುವ ಆ ಅಪನಂಬಿಕೆಯು ಪಟ್ಣಗಳ ಮೇಲೆ ಅಲ್ಲದೆ ಊರುಗಳ ಮೇಲೆಯೂ ಹಳ್ಳಿಗಳ ಮೇಲೆಯೂ ಹಬ್ಬಿ ಹೋಗಿದೆ; ಆದರೂ, ಅದನ್ನು ತಡಿಸುವದು ಅಸಾಧ್ಯವೆಂದು, ನಾನು ನೆನಸುವದಿಲ್ಲ; ಈ ವರೆಗೆ ನನ್ನ ಪ್ರಯತ್ನವು ಕೈಗೂಡಿ ಬರುತ್ತಾ ಇದ್ದದರಿಂದ ಧೈರ್ಯವಂತನಾಗಿರುವದಕ್ಕೆ ಕಾರಣವುಂಟು. ಸ್ವಲ್ಪ ಕಾಲಕ್ಕೆ ಮುಂಚೆ ಅತ್ಯ

1) 71ನೇ, 95ನೇ ಪಾನು. 2) 69ನೇ ಪಾನು.

ಲ್ಪ ಜನರು ಮಾತ್ರ ಹೋಗುತ್ತಿದ್ದ ದೇವಸ್ಥಾನಗಳಿಗೆ ತಿರಿಗಿ ಹೆಚ್ಚು ಜನರು ಹೋಗಲಿಕ್ಕೆ ಹತ್ತಿದರಲ್ಲ? ನಿಂತು ಹೋದ ಯಾಗಗಳು ತಿರಿಗಿ ನಡಿಯ ತೊಡಗಿದವಲ್ಲ? ಮಾರದುಳಿದ ಯಜ್ಞಪಶುಗಳು ತಿರಿಗಿ ಎಲ್ಲಿಯೂ ಮಾರುತ್ತವಲ್ಲ? ಮಾನಸಾಂತರ ಪಟ್ಟವರಿಗೆ ಏನೂ ಶಿಕ್ಷೆ ಬರುವದಿಲ್ಲವೆಂಬ ರಾಜಾಜ್ಞೆಯು ಬಂದರೆ, ಅನೇಕರು ರಾಜ್ಯಧರ್ಮಕ್ಕೆ ತಿರಿಗಿ ಕೊಂಡಾರೆಂತ, ನೆನಸುತ್ತೇನೆ.—

ಆ ಪತ್ರಿಕೆಗೆ ತ್ರಾಯಾನ ಕೈಸರನು ಉತ್ತರ ಬರೆದು ಕಳುಹಿಸಿದ್ದೇನಂದರೆ —

ತ್ರಾಯಾನನು ಪ್ಲೀನಿಯನಿಗೆ ಬರೆಯುವದೇನಂದರೆ—ನೀನು ಕ್ರೈಸ್ತರನ್ನು ನಡಿಸಿದ ರೀತಿಯು ಸಮವೇ ಸರಿ, ನನ್ನ ಪ್ರಿಯ ಪ್ಲೀನಿಯನೇ. ಎಲ್ಲಾ ಪಕ್ಷದಲ್ಲಿಯೂ ಸರಿ ಬೀಳುವಂಥ ಕಟ್ಟಳೆ ನಿರ್ಮಿಸುವದು ಕಷ್ಟವಾದೀತು, ಆದರೆ ನನಗೆ ಒಳ್ಳೇತಾಗಿ ತೋಚುವದೇನಂದರೆ—ಆ ಕ್ರೈಸ್ತ ಜನರನ್ನು ಹುಡುಕಲಿಕ್ಕೆ ಹೋಗ ಬಾರದು. ನಿನಗೆ, ಕ್ರೈಸ್ತರೆಂತ, ಒಪ್ಪಿಸಿರುವ ಜನರೊಳಗೆ ಯಾರೂ, ನಾವು ಕ್ರೈಸ್ತರಲ್ಲವೆಂತ, ಹೇಳಿ, ನಮ್ಮ ದೇವತೆಗಳಿಗೆ ಸ್ತೋತ್ರ ಮಾಡುವದರಿಂದ ತಮ್ಮ ಮಾತನ್ನು ಸತ್ಯ ಮಾಡುವಂಥವರಿಗೆ ಮನ್ನಣೆಯಾಗ ಬೇಕು; ಅವರು ಮುಂಚೆ ಕ್ರೈಸ್ತರಾಗಿದ್ದರೆಂತ, ಸಂದೇಹವಿದ್ದರೂ ಚಿಂತೆ ಇಲ್ಲ; ಅವರು ಮಾನಸಾಂತರ ತೋರಿಸಿದ್ದಾರಲ್ಲ? ಕ್ರೈಸ್ತರೆಂದು ಗೊತ್ತಾಗಿ ಕ್ರೈಸ್ತತ್ವವ ಬಿಡಲೊಲ್ಲದಂಥವರ ಜೀವವನ್ನು ಅಗತ್ಯವಾಗಿ ತೆಗೆದು ಬಿಡ ಬೇಕು. ತಳ್ಳೀ ಫಿರ್ಯಾದಿಗಳನ್ನು ನೀನು ಯಾವ ಪಕ್ಷದಲ್ಲೂ ತೆಕ್ಕೊಳ್ಳ ಬೇಡ; ಅದು ಬಹಳ ಕಂಟಕಕರ ಮರ್ಯಾದೆಯೂ ನಮ್ಮ ರಾಜನೀತಿಗೆ ವಿರೋಧವೂ ಆಗಿರುವದು.—

ಬೇರೆ ಪ್ರತಿನಿಧಿಗಳು ಕ್ರೈಸ್ತರಿಗೆ ಪ್ಲೀನಿಯನಿಗಿಂತ ಹೆಚ್ಚು ಅನ್ಯಾಯ ಮಾಡುತ್ತಿದ್ದರು; ದೃಷ್ಟಾಂತಕ್ಕಾಗಿ ಒಬ್ಬನು ತನ್ನ ಕಡೆಯ ಕ್ರೈಸ್ತರನ್ನು ಎಡೆ ಬಿಡದೆ ಪೀಡಿಸಿ ದಣಿಸಿದ ಮೇಲೆ ಇವರೆಲ್ಲರು ಒಟ್ಟಾಗಿ ತಮ್ಮಿಂದ ತಾವೇ ಅವನ ಪಾರುಪತ್ಯಚಾವಡಿಗೆ ಬಂದು, ಕ್ರೈಸ್ತರಾಗಿದ್ದೇವೆಂತ, ಹೇಳಲಾಗಿ, ಆ ನಿಷ್ಠುರನು ಸಾರಾಸಾರವೇನೂ ವಿಚಾರಿಸದಲೇ ಕೆಲವರನ್ನು ಹತ ಮಾಡಿಸಿ, ಉಳಿದವರನ್ನು ತುಚ್ಛೀಕಾರದಿಂದ ಹಿಂದಕ್ಕೋಡಿಸಿದನು.—ಆಗಿನ ಕ್ರೈಸ್ತರ ಹಿಂಸೆಯು ವಿಶೇಷವಾಗಿ ಸುರಿಯ ದೇಶದಲ್ಲಿ ಮತ್ತು ಪಲೇಸ್ತೀನದಲ್ಲಿ ಪ್ರಬಲವಾಯಿತು. ಯೆರೂಸಲೇಮಿನ ನಾಶನದಿತ್ತಲ್ಲಿ ಯೇಸುವಿನ ನೆಂಟನಾದ ಸಿಮೆಯೋನನು ಸಭಾಧ್ಯಕ್ಷನಾಗಿದ್ದನಲ್ಲ[1]? ಅವನು ಒಟ್ಟಿಗೆ 43 ವರುಷ ಆ ಸಭೆಯನ್ನು ಬಹು ಮಮತೆಯಿಂದ ಪಾಲಿಸಿದ ಮೇಲೆ ತ್ರಾಯಾನನ ಆಳ್ತನದ 9ನೇ ವರುಷದಲ್ಲಿ ಚಾಡಿಗರು ಪಲೇಸ್ತೀನದ ಪ್ರತಿನಿಧಿಯ ಬಳಿಗೆ ಬಂದು, ಆ ಸಿಮೆಯೋನನು ದಾವೀದ ರಾಜನ ವಂಶಜನೂ ಕ್ರೈಸ್ತನೂ ಆ

1) 64ನೇ ಪಾನು.

ದ್ದರಿಂದ ರಾಜ್ಯಕ್ಕೆ ಕೇಡು ಮಾಡ್ಯಾನೆಂತ, ಅವನಲ್ಲಿ ಅಪರಾಧವನ್ನಾರೋಪಿಸಲಾಗಿ, ಆ ಅಧಿಕಾರಿಯು 120 ವರುಷದವನಾಗಿರುವಂಥ ಆ ಅಧ್ಯಕ್ಷನನ್ನು, ಕ್ರಿಸ್ತನನ್ನು ಬಿಟ್ಟಾಡು! ಎಂದು, ಬಹಳ ಬಲೋದ್ಬಂದಿ ಮಾಡಿದನು. ಇವನು ಬೊಂಕದೆ, ವಿಶ್ವಾಸದೃಢದವನಾಗಿದ್ದಾಗ ಪ್ರತಿನಿಧಿಯು ಕೋಪಗ್ರಸ್ತನಾಗಿ, ಅವನನ್ನಾಳುಗಳ ಕೈಗೊಪ್ಪಿಸಿ, ಅವನು ಕ್ರಿಸ್ತನನ್ನು ಅತಿಗಳಿಯುವನಕವೇ ಅವನಿಗೆ ಹೊಡೆಯಿರಿ! ಎಂತ, ಅಪ್ಪಣೆ ಕೊಟ್ಟನು. ಆ ಆಳುಗಳು ಆ ಮುದಿವಿಶ್ವಾಸಿಗೆ ಹಲವು ದಿವಸ ಹೊಡೆಯುತ್ತಿದ್ದರೂ ಅವನು ಹಾಗೆಯೇ ಕ್ರಿಸ್ತನನ್ನು ಕೊಂಡಾಡುತ್ತಿರಲಾಗಿ, ಪ್ರತಿನಿಧಿಯು ಆ ವರ್ತಮಾನ ನಂಬಲೊಲ್ಲದೆ, ಅವನನ್ನು ತನ್ನ ಹತ್ತರ ತರಿಸಿ, ಪೀಡಾಯಂತ್ರಗಳನ್ನು ನಾನಾ ಪ್ರಕಾರದಿಂದ ಅವನ ಮೇಲೆ ಹೂಡಿಸಿದನು; ಅಷ್ಟಾದರೂ ಸಿಮೆಯೋನನು ಚಿತ್ತಸ್ಥೈರ್ಯನಾಗಿ ಉಳಿದನು. ನೆರೆದು ಬಂದಿರುವ ಜನರೆಲ್ಲರು, ಪ್ರತಿನಿಧಿಯು ತಾನು ಸಹ, ಆ ವೃದ್ಧನ ಆತ್ಮಿಕ ಶಕ್ತಿಗೆ ಅತಿ ವಿಸ್ಮಯ ತಾಳ ಬೇಕಾದ ದೆಸೆಯಿಂದಲೇ ಆ ಪ್ರತಿನಿಧಿಯು ಮತ್ತಷ್ಟು ಕೋಪಿಸಿ, ಅವನನ್ನು ಕ್ರೂಜಿಗೆ ಹಾಕಿರಿ! ಕ್ರೂಜಿಗೆ ಹಾಕಿರಿ! ಎಂದು, ಒದರುತ್ತಿರಲು, ಆಳುಗಲು ಕ್ರಿ. ಶ. 107ನೇ ಆ ವರುಷದಲ್ಲಿ ಅವನನ್ನು ಕ್ರೂಜಿಸಿದರು.—ಅದೇ ಹಿಂಸೆಯಲ್ಲಿ ತ್ರಾಯಾನನು ಸುರಿಯದ ಅಂತಿಯೊಖೀಯ ಪಟ್ಣದ ಇಗ್ನಾತಿಯನೆಂಬ ಅತ್ಯುತ್ತಮ ಸಭಾಧ್ಯಕ್ಷನನ್ನು[1] ಕ್ರೈಸ್ತತ್ವಕ್ಕೋಸ್ಕರ ಸಿಂಹಗಳ ಬಾಯಿಗೆ ಹಾಕಿಸಿದನು.—ಆ ಕೈಸರನು ಪಾರ್ಥರೆಂಬವರ[2] ಸಂಗಡ ಬಹಳ ಕದನವಾಡಿ ಗೆಲ್ಲುತ್ತಿದ್ದರೂ ಅವರೊಮ್ಮೆ ದಂಡು ಕೂಡಿ ಬಂದು, ಅವನು ಗೆದ್ದದ್ದನ್ನೆಲ್ಲಾ ತಿರಿಗಿ ತಮ್ಮದು ಮಾಡಿ ಕೊಳ್ಳುತ್ತಲೇ ಕ್ರಿ. ಶ. 117ನೇ ವರುಷಕ್ಕೆ ಅವನು ಸತ್ತನು.

ಅಂದು ಅವನ ನೆಂಟರಲ್ಲೊಬ್ಬನಾದ ಹದ್ರಿಯಾನನು ಕೈಸರನಾದನು. ಇವನು ಒಂದರೆ ತರದ ಮನುಷ್ಯನು; ಕ್ರಿಸ್ತನಿಗೆ ಒಂದು ದೇವಸ್ಥಾನ ಕಟ್ಟಿಸಿ, ಅವನನ್ನು ರೋಮಿಾಯ ದೇವತೆಗಳಲ್ಲಿ ಶೇರಿಸ ಬೇಕೆಂದು, ಯೋಚಿಸಿದನಂತೆ; ಅದಲ್ಲದೆ ಅವನು, ಕ್ರೈಸ್ತರೆಂಬ ಫಿರ್ಯಾದಿ ಬಂದ ಯಾರನ್ನೂ, ಕ್ರೈಸ್ತರೋ? ಅಲ್ಲವೋ? ಎಂತ, ವಿಮರ್ಶಿಸದೆ ಕೊಲ್ಲ ಬಾರದೆಂದು, ಆಜ್ಞಾಪಿಸಿದನು. ಆದರೆ ಅವನು ಬಹು ಕ್ರೂರ ಹಿಂಸಕನಲ್ಲದಿದ್ದರೂ ಕ್ರೈಸ್ತತ್ವವನ್ನು ತಾತ್ಸಾರ ಮಾಡಿದ್ದಲ್ಲದೆ ಕ್ರೈಸ್ತರಿಗೆ ಯೆರೂಸಲೇಮಿನಲ್ಲಿ ಅತಿಮಾನ್ಯವೆನ್ನಿಸುವ ಸ್ಥಳಗಳಲ್ಲಿ ವಿಗ್ರಹಗಳಿಗೆ ಗುಡಿಗಳನ್ನೇರಿಸಿ, ಬೇಕೆಂತ, ಅವರಿಗೆ ಮನೋದುಃಖ ಪಡಿಸಿದನು. ಅವನ ಕಾಲದಲ್ಲಿ ಪಲೇಸ್ತೀನದೊಳಗೆ ಯೆಹೂದ್ಯರು ಬರ್ಕೊಖ್ಬನೆಂಬ ಬುದ್ಧಿಭ್ರಾಂತನಿಂದ ನಡಿಸಿ ಕೊಂಡು, ರೋಮಿಾಯ ಅಧಿಕಾರಿಗಳ ಮೇಲೆ ದಂಗೆಗೇಳಲು, ಅತ್ತಲಾಗಿನ ಕ್ರೈಸ್ತರು ತಮ್ಮ

1) 65ನೇ, 99ನೇ ಪಾನುಗಳು. 2) 73ನೇ ಪಾನು.

ಪಕ್ಷ ಹಿಡಿಯಲೊಲ್ಲದ್ದರಿಂದ ಇವರಲ್ಲಿ ಹೇರಳರನ್ನು ಕೊಂದರು; ಬಳಿಕ ಕ್ರಿ. ಶ. 134ನೇ ವರ್ಷದಲ್ಲಿ ರೋಮಿಾಯರು ಆ ದಂಗೆಗಾರರನ್ನು ಜಯಿಸಿ, ವಿಚಾರಿಸದೆ ಕಂಡಾಬಟ್ಟೆ ನರಹತ್ಯ ಗೈಯುವಲ್ಲಿ ನಿರಪರಾಧಿಗಳಾದ ಕ್ರೈಸ್ತರಲ್ಲಿ ಸಹ ಅನೇಕರು ಮೃತಿ ಗೊಂಡರು. ಹದ್ರಿಯಾನನು ಜಲೋದರದ ನೋವಿಗೆ ತಪ್ಪಿಸಿ ಕೊಳ್ಳಲಿಕ್ಕೆ ತಿಂದ ವಿಷದಿಂದಲೂ ತಾನೇ ಹೊಡ ಕೊಂಡ ಕತ್ತಿಯ ಪೆಟ್ಟಿನಿಂದಲೂ ಸಾಯದೆ, ಬಳಿಕ ವೈದ್ಯರು ಹೇಳಿದ ಪಥ್ಯವನ್ನು, ಬೇಕೆಂತ, ಮಿಾರಿ, ಕ್ರಿ. ಶ. 138ನೇ ವರ್ಷ ಮಡಿದನು.

ಅವನಿಗೀಚೆ ಅಂತೋನೀನನೆಂಬವನಿಗೆ ಪಟ್ಟಾಭಿಷೇಕವಾಯಿತು. ಇವನು ಬಹಳ ಸೌಜನ್ಯದ ಮನುಷ್ಯನು; ಸಾವಿರ ಮಂದಿ ಶತ್ರುಗಳನ್ನು ಕೊಲ್ಲುವದಕ್ಕಿಂತ ಪ್ರಜೆಯಲ್ಲೊಬ್ಬನನ್ನೂ ಉಳಿಸುವದು ವಾಸಿ! ಎಂಬದೇ ಅವನ ನಿಶ್ಚಿತಾರ್ಥವು. ತಾನು ಕೈಸರನಾಗಿರುವ 23 ವರ್ಷದ ಪೂರ್ತಿಗೆ ಕ್ರೈಸ್ತ ಮತದ ಮೇಲೆ ಉದಾಸೀನ ಅಂದರೆ ರಾಗದ್ವೇಷವಿಲ್ಲದ ಮನಸುಳ್ಳವನಾಗಿದ್ದು, ತನ್ನ ದಶೆಯಲ್ಲಿ ಆಗುತ್ತಿರುವ ಬರ ಭೂಕಂಪ ಜಲಗೇಡು ಅಗ್ನಿಪ್ರವೇಶ ಇತ್ಯಾದಿಯ ಕಾರಣವನ್ನು ಕ್ರೈಸ್ತರಲ್ಲಿ ಕಲ್ಪಿಸ ಗೊಡಲೇ ಇಲ್ಲ. ಅವನು ಆಳಲಾರಂಭಿಸಿದಾಗಲೇ ಸಮರೀಯ ಶೀಮೆಯ ಯುಸ್ತೀನನೆಂಬ ಸಭಾಪಿತನು[1] ಕ್ರೈಸ್ತತ್ವದ್ದೊಂದು ಸತ್ಸಿದ್ಧಾಂತಗ್ರಂಥವ ಬರೆದು ಅವನಿಗೆ ಕಳುಹಿಸಿದದರಿಂದ ಸಹ ಕ್ರೈಸ್ತರ ಮೇಲಿನ ಅವನ ಔದಾಸ್ಯಪರವಾದ ರಾಜನೀತಿಯು ಸ್ಥಿರವಾದಂತೆ ಕಾಣುತ್ತದೆ. ಆದರೂ ಪ್ರಜೆಯು, ಸಾಮ್ರಾಜ್ಯದ ಬೇರೆ ಬೇರೆ ಕಡೆಯಲ್ಲಿ ಹುಟ್ಟುವ ಆ ಉತ್ಪಾತಗಳಿಗೆ ಕ್ರೈಸ್ತರೇ ಮೂಲವೆಂತ, ಗುರಿ ಇಟ್ಟು, ಅವರನ್ನು ಪೀಡಿಸುವದನ್ನು ವಿಶೇಷವಾಗಿ ನಿಲ್ಲಿಸುವದಕ್ಕೆ ಅವನಿಂದಾಗಲಿಲ್ಲ. ನಿದರ್ಶನವಾಗಿ ಗ್ರೇಕ ದೇಶದ ಅಥೇನೆ ಪಟ್ಣದ[2] ಮೂರ್ತಿಪೂಜೆಯವರು ಅಲ್ಲಿಯ ಒಳ್ಳೇ ಕ್ರೈಸ್ತಸಭಾಧ್ಯಕ್ಷನಾದ ಪುಬ್ಲಿಯನನ್ನು ಕೊಂದರು; ಬಳಿಕ ತನಗೆ ಸಹ ಉದ್ಭವಿಸಿದ ಹಿಂಸೆಯಿಂದ ಚದರಿ ಹೋಗಿದ್ದ ಅವನ ಸಭೆಯನ್ನು ಕೊದ್ರತನೆಂಬ ಮತ್ತೊಬ್ಬ ಅಧ್ಯಕ್ಷನು ತಿರಿಗಿ ಕೂಡಿಸಿದಂದು ಆ ಕ್ರೂರ ಪ್ರಜೆಯು ಇವನ ಜೀವವನ್ನು ಕಳೆದು ಬಿಟ್ಟಿತು. ಅಂತೋನೀನನು ತನ್ನ ಜೀವಿತದ 70ನೇ ವರುಷದಲ್ಲಿ, ಕ್ರಿ. ಶ. 161ನೇದರಲ್ಲಿ, ಸತ್ತನು.

ಅಂತೋನೀನನ ಈಚೆಯವನಾದ ಮರ್ಕ ಔರೇಲಿಯನೆಂಬವನು ಅತಿ ಕಲಾಕುಶಲನಾಗಿದ್ದರೂ ವಿಗ್ರಹಾರಾಧನಾಸಕ್ತಿಯಿಂದ ತನ್ನ ಆಳುವಿಕೆಯ ಪರಿಪೂರ್ತಿಗೆ 19 ವರುಷವೇ ಕ್ರೈಸ್ತರಿಗೆ ಬಹಳ ದ್ವೇಷಿಸುತ್ತಾ, ಅವರಿಗಿದ್ದದ್ದನ್ನು ಮುಟ್ಟುಗೋಳು ಮಾಡಿಸುತ್ತಾ, ಆ ನಿರಪರಾಧಿಗಳಲ್ಲತಿರೇಕ ಜನರ ರಕ್ತವನ್ನು ಚೆಲ್ಲಿಸುತ್ತಾ ಇ

1) 100ನೇ ಪಾನು. 2) 16ನೇ, 48ನೇ ಪಾನು.

15

ದ್ದನು. ಸಮಸ್ತ ಕ್ರೈಸ್ತರನ್ನು ನಿರ್ಮೂಲ ಮಾಡ ಬೇಕೆಂಬದೇ ಇವನ ಹಟವು. ಕ್ರಿ. ಶ. 166ನೇ ವರುಷ ಸಮರೀಯದ ಆ ಯುಸ್ತೀನನು ಕ್ರೈಸ್ತತ್ವದ ದಿವ್ಯತೆ ತೋರಿಸುವಂಥ ಮಗುಳೊಂದು ಪತ್ರವ ಬರೆದು, ಅವನಿಗೆ ಕಳುಹಿಸಿದಾಗ ಅವನು ರೋಷಗೊಂಡು, ಈ ನಿಮಿತ್ತಕ್ಕೂ ಅವನ ತಲೆ ಸಹ ಹೊಯಿಸಿದನು. ಮುಖ್ಯವಾಗಿ ಸಣ್ಣ ಅಸಿಯದಲ್ಲಿ ಮತ್ತು ಗಲ್ಲಿಯ ದೇಶದಲ್ಲಿ ಅವನಿಂದಾಗುವ ಜೀವಹಿಂಸೆಯು ನಡೆಯುತ್ತಿತ್ತು; ದೃಷ್ಟಾಂತವಾಗಿ, ಸ್ಮುರ್ನ ಪಟ್ಣದಲ್ಲಿಯ ಪೊಲುಕರ್ಪ ಸಭಾಧ್ಯಕ್ಷನನ್ನು[1], ಲಿಯೋನ್ ಮತ್ತು ವಿಯೆನ್ ಪಟ್ಣಗಳಲ್ಲಿಯ ಪೊಥಿನ ಸಭಾಧ್ಯಕ್ಷನನ್ನು[2] ಕೊಂದರು. ಮರ್ಕ ಔರೇಲಿಯನು ಗೆರ್ಮಾನ ವಂಶಜರಾದ[3] ಸ್ವೇವರ ಒಂದು ಶಾಖೆಯಾದ ಮರ್ಕೊಮನ್ನರ ಸಂಗಡ ಕ್ರಿ. ಶ. 174ನೇ ವರುಷ ಯುದ್ಧವ ಗೈಯುತ್ತಾ, ದೋನವು ನದಿಯ[4] ಬಳಿಯಲ್ಲಿ ಸೇನೆ ಇಳಿದಿರಲು, ಅವನಿಗೆ ಆ ಶತ್ರುಗಳಿಂದ ಮಾತ್ರವಲ್ಲದೆ ವಿಪರೀತ ಬರದಿಂದ ಸಹ ಬಹು ಸಂಕಷ್ಟವಾಗೋಣ—ಅವನ ಸೇನೆಯದೊಂದು ಭಾಗದಲ್ಲಿರುವ ಕ್ರೈಸ್ತರು[5] ಬಹುಶಃ ದೇವರಿಗೆ ಬೇಡಿ ಕೊಳ್ಳುತ್ತಿರುವದರಿಂದ ದೊಡ್ಡ ಮಳೆ ಹೊಯಿದು,ದಾಹದುರಿಯನ್ನು ಪರಿಹರಿಸಿತು, ಹೊರ್ತಾಗಿ ಘೋರ ತರದ ಶಿಡಿಲು ಗುಡುಗು ಬಿರುಘಾಳಿಗಳು ವೈರಿಗಳನ್ನೋಡಿಸಿದವೆಂದು, ಸ್ಪಷ್ಟವಾಗಿ ಕಂಡು ಬಂದ ಕಾರಣ ಔರೇಲಿಯನ ಮನಸ್ಸು ಸ್ವಲ್ಪ ದಿವಸಕ್ಕೆ ಕಿಂಚಿತ್ತೂ ಬೇರೆಯಾದ ಹಾಗಾಯಿತು; ಆದರೂ ಆ ಬಳಿಕ ಕ್ರೈಸ್ತರ ಮೇಲೆ ಮುಂಚಿನಂತೆ ಏನೂ ಅಂತಃಕರಣವಿಲ್ಲದೆ ನಡ ಕೊಂಡನು. ಅವನ ಕಾಲದಲ್ಲಿ ಸರ್ವ ರೋಮಿಯ ಸಾಮ್ರಾಜ್ಯವು ಆರ್ತಿಯನ್ನನ್ನುಭವಿಸುತ್ತಲೇ ಇತ್ತು; ಎಂತೆಂದರೆ, ಕಠೋರ ಸೊಂಕುರೋಗ, ಪಾರ್ಥರ ಮತ್ತು ಮರ್ಕೊಮನ್ನಾದಿ ಗೆರ್ಮಾನರ ಸಂಗಡದ ಯುದ್ಧ ಮುಂತಾದದ್ದು ಎಲ್ಲರ ಮೇಲೂ ಭಾರವಾಗಿ ಬಿದ್ದಿತ್ತು. ಈ ದುಃಸ್ಥಿತಿಯಿಂದ ಅವನ ಶರೀರಕ್ಕೆ ಕ್ಷಣವಿಶ್ರಾಂತಿ ದೊರೆಯದಿರುವಲ್ಲಿ ಕ್ರಿ. ಶ. 180ನೇ ಅಬ್ದಕ್ಕೆ ಅಳಿದನು.

ಕೊಮ್ಮೊದನೆಂಬವನು ಅವನ ಉತ್ತರಾಧಿಕಾರಿಯಾದನು. ಇವನು ಕೇವಲ ಪಟಿಂಗನೀಚತನಗಳಿಂದ ತುಂಬಿದವನಾದರೂ ತಾನು ಇಟ್ಟು ಕೊಂಡಿದ್ದು ಕ್ರೈಸ್ತತ್ವಕ್ಕೆ ಸ್ವಲ್ಪ ಮೆಚ್ಚುವ ಮರ್ಕಿಯಳೆಂಬವಳು ಹೇಳುವ ಬುದ್ಧಿಗನುಸರಿಸಿ, ತನ್ನ ತಂದೆಯಾದ ಮರ್ಕ ಔರೇಲಿಯನ ಹಿಂಸಾಪದ್ಧತಿಯನ್ನು ಮೂಲೆಗೆ ಹಾಕಿ, ಕ್ರೈಸ್ತರಿಗೆ ಸರಿಸುಮಾರು ದಯೆಯನ್ನೇ ತೋರಿಸುತ್ತಿದ್ದನು. ಈರೇನೇಯ ಸಭಾಪಿತನು[6] ಆಗ ಪಾಷಂಡರಿಗೆ ವಿರೋಧವಾಗಿ ಬರೆದದೊಂದು ಗ್ರಂಥದಲ್ಲಿ, ಕೊಮ್ಮೊದನ ಅರ

1) 65ನೇ, 99ನೇ ಪಾನುಗಳು. 2) 87ನೇ ಪಾನು. 3) 88ನೇ ಪಾನು. 4) 7ನೇ, 88ನೇ ಪಾನು. 5) 87ನೇ ಪಾನು. 6) 87ನೇ, 100ನೇ ಪಾನುಗಳು.

ಮನೆಯ ಸೇವಕರಲ್ಲಿ ಸಹ ಕ್ರೈಸ್ತರಿದ್ದಾರೆ ಎಂತ, ಅದೆ; ಆದರೆ ಕೊಮ್ಮೊದನು ಕ್ರೈಸ್ತರಿಗೆ ಪ್ರತಿಕೂಲವಾದ ರಾಜಾಜ್ಞೆಗಳನ್ನು ಕೀಳದ ದೆಸೆಯಿಂದ ಸಣ್ಣ ಅಸಿಯ ಮುಂತಾದ ಪ್ರದೇಶಗಳಲ್ಲಿ ರಕ್ತಸಾಕ್ಷಿಗಳಾಗುವವರಿಲ್ಲದಿರಲಿಲ್ಲ. ನಿದರ್ಶನಕ್ಕಾಗಿ, ರೋಮಪುರದ ರಾಜಮಂತ್ರಿಸಭೆಯವನೂ ಸಕಲವಿದ್ಯಾಪ್ರವೀಣನೂ ಆದ ಅಪೊಲ್ಲೋನಿಯನೆಂಬ ಕ್ರೈಸ್ತನ ಮೇಲೆ ಸುಳ್ಳುಅಪರಾಧ ಕಲ್ಪಿಸಿ, ಅವನನ್ನು ಕ್ರಿ. ಶ. 185ನೇ ವರುಷದಲ್ಲಿ ಕೊಂದರು. ಕೊಮ್ಮೊದ ಕೈಸರನು ಬಹು ಮೋಹ ಪಟ್ಟು ಅನೇಕಾವರ್ತಿ ತಾನೂ ಆಡುತ್ತಿದ್ದ ದ್ವಂದ್ವಯುದ್ಧಗಳೊಳಗೊಂದರಲ್ಲಿ[1] ಕ್ರಿ. ಶ. 192ನೇ ವರುಷ ಸೋತು, ಪಂಚತ್ವವನ್ನೈದಿದನು.

ಅವನ ತರುವಾಯ ಹೆಚ್ಚುಕಡಿಮೆ 1 ವರುಷ ಒಬ್ಬ ಕೈಸರನಿರಲೇ ಇಲ್ಲ, ಯಾಕಂದರೆ ಪ್ರಜೆಯು ಐಕ್ಯಮತ್ಯವಾಗಿ ಇರುತ್ತಿದ್ದಿಲ್ಲ. ಹೀಗಿರಲಾಗಿ ಪ್ರಜೆಯ ಮುನಿಸೂ ಹಲವರು ಪ್ರತಿನಿಧಿಗಳ ವರ್ಮವೂ ಕ್ರೈಸ್ತರ ಮೇಲೆ ದಂಡನವಿಲ್ಲದೆ ಪ್ರವರ್ತಿಸುತ್ತಿತ್ತು. ಅಲೆಕ್ಸಂದರೀಯದ ಉಪದೇಶಿಶಾಲೆಯ ಪ್ರಮುಖನಾದ ಕ್ಲೇಮೆಂತ ಸಭಾಪಿತನು[2] ಅಂದು ಬರೆದದ್ದೇನಂದರೆ—ಪ್ರತಿ ದಿನ ನಮ್ಮ ಕಣ್ಣೆದುರಿಗೆ ಅನೇಕ ಕ್ರೈಸ್ತರನ್ನು ಸುಡುತ್ತಾ, ಶಿಲುಬೆಗೆ ಹಾಕುತ್ತಾ, ತಲೆ ಹೊಡೆಯುತ್ತಾ ಇದ್ದಾರೆ.—

ಇತ್ತಕಡೆ ಕ್ರಿ. ಶ. 193ನೇ ಅಬ್ದಕ್ಕೆ ಸೆಪ್ತಿಮಿಯ ಸೆವೇರನೆಂಬವನೊಬ್ಬ ದಳವಾಯಿಯು ಕೈಸರನಾದನು; ಅವನು ಆಫ್ರಿಕದಲ್ಲಿ ಹುಟ್ಟಿದವನು. ಪ್ರೊಕುಲನೆಂಬ ಒಬ್ಬ ಕ್ರೈಸ್ತ ಗುಲಾಮನು ರೋಗದಲ್ಲಿ ಬಿದ್ದ ಅವನನ್ನು ಗುಣ ಪಡಿಸಿದ್ದದರಿಂದವನು ತನ್ನ ಆಳುವಿಕೆಯ ಆರಂಭದಲ್ಲಿ ಕ್ರೈಸ್ತರಿಗೆ ಕೊಂಚ ಉಪಕಾರ ಮಾಡಿದನೆಂತ, ತೆರ್ತುಲ್ಲಿಯಾನ ಸಭಾಪಿತನು[3] ಸ್ವಲ್ಪ ಕಾಲಕ್ಕೀಚೆ ಬರೆದನು; ಆದರೆ ಕ್ರೈಸ್ತತ್ವದ ತೀವ್ರವಾದ ಬೆಳೆಯುವಿಕೆಯ ಭಯದಿಂದ ಆ ಧನಿಯು ಬೇಗ ಬೇರೆ ಮನಸ್ಸಿನವನಾಗಿ, ಯಾರೂ ಕ್ರೈಸ್ತರಾಗ ಬಾರದೆಂಬಂತೆ ಆಜ್ಞೆಯೊಂದನ್ನು ಕ್ರಿ. ಶ. 202ನೇದರಲ್ಲಿ ಪ್ರಕಟಿಸಲಿಕ್ಕೆ, ಮುಖ್ಯವಾಗಿ ಆಫ್ರಿಕದಲ್ಲಿಯ ಕ್ರೈಸ್ತರಿಗೆ ವಾಚಾತೀತ ಪ್ರಾಣಹಿಂಸೆಯುದ್ಭವಿಸಿತು[4]. ಒಂದೆರಡು ದೃಷ್ಟಾಂತವೇನಂದರೆ—ಕ್ರಿ. ಶ. 203ನೇದಕ್ಕೆ ಅಲೆಕ್ಸಂದರೀಯದಲ್ಲಿ ಕ್ಲೇಮೆಂತನ ಉತ್ತರೋದ್ಯೋಗಿಯಾದ ಒರೀಗೆನನ[5] ತಂದೆಯಾದ ಲೆಯೋನಿದನೆಂಬವನ ತಲೆ ಹೊಯ್ಯಿಸಿದರು. ಆ ಪಟ್ಟದ ಪ್ರತಿನಿಧಿಯು ನಿಷ್ಕಳಂಕ ನಡತೆ ರೂಪಸೌಂದರ್ಯಗಳಿಂದ ಪ್ರಸಿದ್ಧಳಾದ ಪೊತಮಿಯೇನಳೆಂಬವಳೊಬ್ಬ ಕ್ರೈಸ್ತ ಕನ್ಯೆಯನ್ನು ಅಧಿಕವಾಗಿ ಪೀಡಿಸಿ, ನಿನ್ನನ್ನು ಕೆಡಿಸುವ ಹಾಗೆ (ದ್ವಂದ್ವಯುದ್ಧಕಾರಿಗಳಾದಂಥ ನೀಚ) ಜಟ್ಟಿಗಳ ಕೈಗೆ ಒಪ್ಪಿಸಿ ಕೊಡುವೆನೆಂತ, ಭಯ

1) 14ನೇ, 64ನೇ, 102ನೇ ಪಾನುಗಳು. 2) 84ನೇ, 100ನೇ ಪಾನುಗಳು. 3) 100ನೇ, 104ನೇ ಪಾನುಗಳು- 4) 85ನೇ ಪಾನು. 5) 84ನೇ, 100ನೇ ಪಾನು ನೋಡು.

ತೋರಿಸಿದರೂ ಅವಳದಕ್ಕಂಜದೆ, ಅಂಥಾ ಅಪಮಾನಕ್ಕೆ ಧೈರ್ಯಸ್ಥೈರ್ಯಗಳಿಂದ ತಪ್ಪಿಸಿ ಕೊಂಡಿರಲಾಗಿ, ಅವಳನ್ನೂ ಅವಳ ತಾಯಿಯಾದ ಮರ್ಕೆಲ್ಲಳನ್ನೂ ಅವರಿಬ್ಬರ ಕಣ್ಣೆದುರಿನಲ್ಲೇ ಕುದಿಸಿದ್ದ ರಾಳದೊಳಗೆ ಮೆಲ್ಲ ಮೆಲ್ಲಗೆ ಮುಳುಗಿಸಿ, ಕೊಂದರು. ಆಗಲವರನ್ನು ಮರಣಕ್ಕೊಯಿದ ಬಸಿಲಿದನೆಂಬ ದಂಡುಗಾರನು ಅವರ ಸಹನ ಸಾಹಸಗಳೆರಡನ್ನು ಕಂಡು, ವಿಚಿತ್ರಗೊಂಡು, ತಾನು ಕ್ರೈಸ್ತನಾಗಿ, ಮರುದಿನದಲ್ಲಿ ರಕ್ತಸಾಕ್ಷಿಯಾಗಿ ಶಸ್ತ್ರಹತನಾದನು.—ಕ್ರಿ. ಶ. 202ನೇ ವರುಷ ಗಲ್ಲಿಯ ದೇಶದಲ್ಲಿ ಈರೇನೇಯನೆಂಬ ಪ್ರಖ್ಯಾತ ಸಭಾಪಿತನನ್ನು[1] ಸಹ ಕ್ರೈಸ್ತತ್ವಕ್ಕಾಗಿ ಮಡಿಸಿದ್ದರು.

ಯುದ್ಧ ಮಾಡುವದರಿಂದ ಮಾತ್ರ ಹೆಸರಿಗೆ ಬಂದ ಆ ಸೆಪ್ತಿಮಿಯ ಸೆವೇರ ಕೈಸರನು, ಕ್ರಿ. ಶ. 211ನೇ ವರುಷ, ಬ್ರಿತನ್ನಿಯ ದೇಶದ ಯೊರ್ಕು ಪಟ್ಣದಲ್ಲಿ[2] ಮರಣ ಪಟ್ಟನಂತರ ಕರಕಲ್ಲನೆಂಬ ಮಗನು ಕೈಸರನಾಗಿ, ತೆರ್ತುಲ್ಲಿಯಾನ ಸಭಾಪಿತನದೊಂದು ಮಾತಿನ ಪ್ರಕಾರ ತನ್ನ ಕಾರಭಾರಿನ ಆದಿಯಲ್ಲಿ ಮುಖ್ಯವಾಗಿ ಆಫ್ರಿಕದ ಕ್ರೈಸ್ತರಿಗೆ ಹೆಚ್ಚು ಹಾನಿ ಮಾಡಿ, ಕ್ರಿ. ಶ. 217ನೇದರ ವರೆಗೆ ನಿಷ್ಠುರತ್ವದಿಂದ ಆಳುವಷ್ಟರಲ್ಲಿ ಕ್ರೈಸ್ತರ ಮೇಲಣ ಹಿಂಸೆಗಳು ತೀರಲಿಲ್ಲ.

ಕರಕಲ್ಲನನ್ನು ಕೊಂದ ಮಕ್ರಿನನೆಂಬ ಸೈನಿಕನು ಎರಡು ತಿಂಗಳು ರಾಜ್ಯಭಾರ ಗೈದ ತರುವಾಯ ಹೇಲಿಯೊಗಬಾಳನೆಂಬವನೊಬ್ಬ[3] ಪೂಜಾರಿಯಾಗಿದ್ದ 14 ವರುಷದ ಹುಡುಗನು ಕ್ರಿ. ಶ. 218ನೇ ಅಬ್ದದಲ್ಲಿ ಪಟ್ಟಾಭಿಷೇಕ ಹೊಂದಿದನು. ಇವನಂಥಾ ಬಂಡನೂ ಪುಂಡನೂ ಎಂದಾದರೂ ಕೈಸರನಾಗಿರಲಿಲ್ಲ; ಅವನು ಸಾಮ್ರಾಜ್ಯದೊಳಗಿನ ಎಲ್ಲಾ ಮತಗಳನ್ನು, ಕ್ರೈಸ್ತತ್ವವನ್ನು ಸಹ, ತಾನು ನಡಿಸುವ ಅವಾಚ್ಯ ದುರಾಚಾರಗಳುಳ್ಳ ಬಾಳೆಂಬ ಸೂರ್ಯನ ಪೂಜೆಗೆ ಅನುಗುಣ ಮಾಡಿ ಜೋಡಿಸ ಬೇಕೆಂಬ ಹುಚ್ಚಭಿಲಾಷೆಯಿಂದ ಕ್ರೈಸ್ತರನ್ನು ಹಿಂಸಿಸದಿರುವನು. ಕ್ರಿ. ಶ. 222ನೇದರಲ್ಲಿ ದಂಡಿನವರು ದಂಗೆ ತೆಗೆದು, 18 ವರುಷದವನಾದ ಆ ಕೈಸರನ ಜೀವ ಕಳೆದು, ಅವನ ಹೆಣವ ಬತ್ತಲೆ ಮಾಡಿ, ರೋಮಪುರದ ಬಳಿಯ ತಿಬೆರಿ ಹೊಳೆಗೆ ಹಾಕಿದರು.

ಆಗ ಅಲೆಕ್ಸಂದರ ಸೆವೇರನೆಂಬ 17 ವರುಷದವನೊಬ್ಬ ಯೌವನಸ್ಥನು ಪಟ್ಟಕ್ಕೆ ಹತ್ತಿ,[4] ಸಾಧುಗುಣಿಯಾಗಿದ್ದು, ಕ್ರಿ. ಶ. 235ನೇ ವರುಷದ ಮುಟ್ಟಗೆ ಆಳಿದನು. ಅವನು ಕ್ರಿಸ್ತನ ಮತ್ತು ಅಬ್ರಹಾಮನ[5] ಬೊಂಬೆಗಳನ್ನು ಕೆತ್ತಿಸಿ, ಮಿಕ್ಕ ತನ್ನ ದೇವ

---

1) 87ನೇ, 100ನೇ, 114ನೇ ಪಾನು. 2) 90ನೇ ಪಾನು ನೋಡು. 3) ಬೇರೊಬ್ಬರು, ಹೇಲಿಯೊಗಬಲನೆಂತ, ಬರೆಯುತ್ತಾರೆ. 4) ಅವನ ಕಾಲದಲ್ಲಿ ಆ ಸಾಸಾನಿದ ಸಾಮ್ರಾಜ್ಯವು ಹುಟ್ಟಿತು; 73ನೇ ಪಾನು. 5) 19ನೇ ಪಾನು.

ತೆಗಳ ಪಂಕ್ತಿಯಲ್ಲಿ ನಿಲ್ಲಿಸಿ, ಹೆಚ್ಚು ಕಡಿಮೆಯಾಗಿ ಕ್ರೈಸ್ತರಿಗೊಲುಮೆ ಕಾಣಿಸುತ್ತಿದ್ದು, ಮನುಷ್ಯರು ನಿಮಗೆ ಹ್ಯಾಗೆ ಮಾಡ ಬೇಕೆಂದು ಇಚ್ಛಿಸುತ್ತೀರೋ ಹಾಗೆಯೇ ನೀವು ಸಹ ಅವರಿಗೆ ಮಾಡಿರೆಂತ, ಕ್ರಿಸ್ತನು ಹೇಳಿದ ಮಾತುಗಳನ್ನು[1] ತನ್ನ ಅರಮನೆಯ ಗೋಡೆಗಳಲ್ಲಿ ಬರೆಸಿದನು. ಅವನ ಮಾನ್ಯ ಮಾತೆಯಾದ ಯೂಲಿಯೆ ಮಮ್ಮೇಯಳೆಂಬವಳು ಒರೀಗೆನನೆಂಬ ಆ ಸಭಾಬೋಧಕನಿಗೆ ಮೆಚ್ಚಿ, ಉಪಕಾರ ಮಾಡಿದಳು; ಒಂದು ವದಂತಿಯ ಪ್ರಕಾರ ಅವಳು ಕ್ರೈಸ್ತಳಾದಳು. ಕ್ರಿ. ಶ. 235ನೇ ವರುಷದಲ್ಲಿ ಸೈನಿಕರು ಸೆವೇರನನ್ನೂ ಅವನ ತಾಯಿಯನ್ನೂ ವಧಿಸಿದರು.

ತದನಂತರ ಅವರ ಕೊಲೆಗೆ ಹೇತುವಾಗಿದ್ದವರಲ್ಲಿ ಒಬ್ಬನಾದ ಮಕ್ಸಿಮೀನ ಥ್ರಾಕ್ಸನೆಂಬವನು ಕೈಸರತ್ವ ಪಡೆದು, ಕ್ರೈಸ್ತರ ಶತ್ರುವಾಗಿದ್ದು, ತನ್ನ ವಿಗ್ರಹಾರಾಧಕ ಪ್ರಜೆಯು, ಅಲ್ಲಲ್ಲಿ ಭೂಕಂಪಗಳಾಗುತ್ತಿರುವದಕ್ಕೆ ಕ್ರೈಸ್ತರೇ ಬುಡವೆಂತ, ಅವರ ಮೇಲೆ ಸುಮ್ಮನೇ ರೋಷಿಸಿ ಅವರನ್ನು ಹತ ಮಾಡುವದಕ್ಕೆ ಅಡ್ಡಗಟ್ಟಲೇ ಇಲ್ಲ; ಮುಖ್ಯವಾಗಿ ಕ್ರೈಸ್ತ ಸಭೆಯ ಅಧ್ಯಕ್ಷ ಬೋಧಕರನ್ನು ಕಂಡರೆ ಅವನ ಕಣ್ಣಿಗೆ ಮುಳ್ಳೂರಿದಂತಾಗುವದು. ಆದರೂ ಹಲವು ಸ್ಥಳಗಳಲ್ಲಿ ಕ್ರೈಸ್ತರಿಗೆ ಶಾಂತಿ ಇರುತ್ತಿತ್ತು.

ಥ್ರಾಕ್ಸನ ಸೈನಿಕರು ಕ್ರಿ ಶ. 238ನೇ ವರುಷಕ್ಕೆ ಅವನನ್ನು ಕೊಂದು ಹಾಕಲು, ಗೊರ್ದಿಯಾನನೆಂಬವನು ಉತ್ತರಾಧಿಕಾರಿಯಾಗಿ, ಕ್ರಿ. ಶ. 244ನೇದರ ವರೆಗೆ ಸಾಧುತ್ವದಿಂದ ಆಳಿ, ಸಾಸಾನಿದರ ಮೇಲಿನ ಯುದ್ಧಕ್ಕೆ ಹೊರಟ ಹಿಂದೆ ಫಿಲಿಪ್ಪನೆಂಬವನೊಬ್ಬ ಅರಬಿಯು ಅವನನ್ನು ತಂಟೆ ತೀರಿಸಿದನು; ಗೊರ್ದಿಯಾನನ ಕಾಲದಲ್ಲಿ ಕ್ರೈಸ್ತರಿಗೇನೂ ಹಿಂಸೆಯಾಗಲಿಲ್ಲ.

ಅರಬಿಯಾದ ಆ ಫಿಲಿಪ್ಪನು ಕೈಸರನಾಗಿ, ಕ್ರೈಸ್ತರಿಗೆ ಪ್ರೀತಿಸುತ್ತಿದ್ದನು. ಸಭಾಬೋಧಕನಾದ ಒರೀಗೆನನು ಅವನ ಮತ್ತು ಅವನ ಹೆಂಡತಿಯಾದ ಸೆವೇರಳ ಸಂಗಡ ಕಾಗದ ಪತ್ರ ನಡಿಸುತ್ತಿದ್ದನು. ಅವನು ಕ್ರೈಸ್ತನಾದನೆಂತ, ಒಂದು ಸುದ್ದಿ ಇದೆ. ಕ್ರಿ. ಶ. 249ನೇ ವರುಷದಲ್ಲಿ ಅವನು ಸತ್ತನು.

ಹಿಂದೆ ಸೂಚಿಸಿರುವಂತೆ ಕ್ರಿ. ಶ. 218ನೇ ವರುಷದಿಂದ[2] ಅರಬಿಯಾದ ಫಿಲಿಪ್ಪನ ಮರಣದನಕ 31 ವರುಷ ಕ್ರೈಸ್ತರಿಗೆ ಸುಮಾರು ರೀತಿಯ ಬಹಿಃಶಾಂತಿ ಇರುತ್ತಿತ್ತು; ಆ ಕಾಲದೊಳಗೆ ಕ್ರೈಸ್ತರ ಲೆಖ್ಖವು ಹೆಚ್ಚುತ್ತಾ ಬಂದರೂ[3] ಅವರ ಭಕ್ತಿಯುರಿಯು ಕೊಂಚ ಕುಂದುತ್ತಾ ಬಂದ ಹೊರ್ತು ಅನೇಕ ಜನ ಅರ್ಧಭಕ್ತಿಯವ

---

1) ಮತ್ತಾ. 7, 12. 2) 116ನೇ ಪಾನು. 3) 257ನೇ ವರುಷ ಕ್ರೈಸ್ತರ ಹಿಂಸಕನಾದ ವಲೇರಿಯಾನ ಕೈಸರನ ಕಥೆಯನ್ನು ಸರಿ ನೋಡು.

ರೂ ಸಭೆಯಲ್ಲಿ ಶೇರಿದಂತಾಯಿತು. ಅದು ಕಾರಣ ಕ್ರಿ. ಶ. 248ನೇದಕ್ಕೆ ಕರ್ಥಾಗೊ ಪಟ್ಣದಲ್ಲಿ ಅಧ್ಯಕ್ಷನಾಗಿದ್ದ ಕುಪ್ರಿಯಾನನು[1] ಬಣ್ಣಿಸಿ ಬರೆದ್ದೇನೆಂದರೆ—ಕ್ರೈಸ್ತರು ಲೌಕಿಕ ಸುಖವನ್ನು ಹೆಚ್ಚಾಗಿ ಚಿಂತಿಸುವವರಾಗಿದ್ಧಾರೆ; ಹಿರಿಯರೂ ಸೇವಕರೂ ಸಭಾಪಾಲನದಲ್ಲಿ ಆಲಸ್ಯವುಳ್ಳವರಾಗಿದ್ಧಾರೆ; ಪ್ರೀತಿಯ ಕಾರ್ಯಗಳು ಕಮ್ಮಿಯಾಗಿ ನಡಿಯುತ್ತವೆ; ಐಶ್ವರ್ಯಭೋಗಾಭಿಲಾಷೆಯು ಬೆಳೆದು ಬಂದದೆ; ಕ್ರೈಸ್ತರ ಮನಸ್ಸು ಭೂಷಣಾಭರಣಾದಿಗಳ ಮೇಲೆ ಹೋಗಲಿಕ್ಕೆಸಗಿ ಅದೆ; ಸಹೋದರರಾದ ಕ್ರೈಸ್ತರೊಳಗಾದರೂ ಸುಳ್ಳೂ ಮೋಸವೂ ನಡಿಯಲೆಡೆಗೊಂಡಿವೆ.—

ಹೀಗಿರಲಾಗಿ ಕ್ರಿಸ್ತನು ತನ್ನ ಸಭೆಯನ್ನು ತಿರಿಗಿ ಜಾಗ್ರತೆ ಪಡಿಸುವದಕ್ಕೋಸ್ಕರ ಮಾಡಿದ್ದೇನಂದರೆ—ಅರಬಿಸ್ಥಾನದ ಆ ಫಿಲಿಪ್ಪನು, ಕ್ರಿ. ಶ. 249ನೇ ಅಬ್ದ, ಯುದ್ಧದಲ್ಲಿ ದೆಕಿಯನೆಂಬೊಬ್ಬನಿಂದ ಅಪಜಯ ಹೊಂದಿ ಹತನಾದ ಮೇಲೆ ಇವನು ಕೈಸರನಾಗಿ, ಮುಂಚಿನೆಲ್ಲಾ ಹಿಂಸೆಗಳಿಗಿಂತ ಅಧಿಕವಾದ ಹಿಂಸೆಯಿಂದ ಕ್ರೈಸ್ತರನ್ನು ಪೀಡಿಸುವವನಾದನು; ಕ್ರೈಸ್ತತ್ವವನ್ನು ಹ್ಯಾಗೂ ಬೇರೊಂದಿಗೆ ಕಿತ್ತು ಹಾಕಿ ವಿಗ್ರಹಾರಾಧನವನ್ನು ತಿರಿಗಿ ನಡ ಬೇಕೆಂಬದೇ ಅವನ ಮನಸ್ಸಿನಲ್ಲಿ ದೃಢವಾಗಿತ್ತು. ಆದ್ದರಿಂದವನು ಕ್ರಿ. ಶ. 250ನೇದಕ್ಕೆ ಒಂದು ದಿನ ನೇಮಿಸಿ—ಅದರಲ್ಲಿ ಸರ್ವ ಕ್ರೈಸ್ತರು ಆಯಾ ಕಡೆಯ ನ್ಯಾಯಸ್ಥಾನಗಳಿಗೆ ಬಂದು, ರಾಜದೇವತೆಗಳ ಪೂಜೆ ಮಾಡಿ, ತಮ್ಮ ವಿಶ್ವಾಸ ತ್ಯಜಿಸಿ ಬಿಡ ಬೇಕು; ಒಲ್ಲೆವೆಂತ ಹೇಳುವವರೆಲ್ಲರನ್ನು ಕೊಲ್ಲ ಬೇಕು; ಓಡಿ ಹೋಗುವವರ ಆಸ್ತಿಯನ್ನು ಮುಟ್ಟುಗೋಲು ಹಿಡಿದು, ಹಿಂದಕ್ಕೆ ಬರುವವರ ಜೀವ ತೆಗೆಯ ಬೇಕೆಂತ, ಹೇಳುವ ಆಜ್ಞೆಯನ್ನು ಸಮಸ್ತ ಸಾಮ್ರಾಜ್ಯದಲ್ಲಿ ವಿಸ್ತರಿಸಿದನು. ಅದು ಪ್ರಕಟವಾಗುತ್ತಲೇ ಆ ಶಾಂತಿಕಾಲದ ದೆಸೆಯಿಂದ ಭಕ್ತಿ ನೆಲೆಗೊಳ್ಳದಿದ್ದ ಅನೇಕ ಐಶ್ವರ್ಯವಂತ ಕ್ರೈಸ್ತರು ಸಂತೇ ಬೈಲಿಗೆ ನೆರೆದು ಬಂದು, ರೋಮಿಾಯ ದೇವತೆಗಳಿಗೂ ಕೈಸರನ ಗೊಂಬೆಗೂ ಎರಗಿ, ತಾವೆಂದಾದರೂ ಕ್ರೈಸ್ತರಾಗಿರಲಿಲ್ಲವೆಂತ, ನಿರ್ಲಜ್ಜೆಯಿಂದ ಪ್ರಮಾಣಿಸಿ, ಹಿಂಸೆಗೆ ತಪ್ಪಿಸಿ ಕೊಂಡರು; ಮತ್ತೊಬ್ಬ ಕ್ರೈಸ್ತರು ಆರಂಭದಲ್ಲಿ ಬಾರದೆ, ತರುವಾಯ ಬಲಾತ್ಕಾರದಿಂದ ತರಿಸಿ ಕೊಂಡು, ಬರೇ ಅಂಜಿಕೆಯಿಂದ ಕ್ರಿಸ್ತನನ್ನು ಬಿಟ್ಟಾಡುವಲ್ಲಿ ಅದರಿಂದ ಅಕ್ರೈಸ್ತರ ಹಾಸ್ಯಕ್ಕೊಳಗಾಗಿ, ಹೋದರು; ಇನ್ನೊಬ್ಬರು ತಾವು ಪೀಡಕರಿಂದ ತಾಳುವ ಬಂಧನ ಕ್ಷುಧೆಗಳನ್ನು ಕೆಲವು ದಿವಸ ಚಿಂತಿಸದೆ, ಬಳಿಕ ಧೈರ್ಯಹೀನರಾಗಿ, ಬಹಿರಕ್ಕೆ ತಮ್ಮ ವಿಶ್ವಾಸಾರ್ಥದಿಂದ ಹಿಂಜಾರಿದರು; ಬೇರೊಬ್ಬರು ಲೋಭಿಗಳಾದ ಅಧಿಕಾರಸ್ಥರಿಗೆ ಲಂಚ ಕೊಟ್ಟು, ಮೂರ್ತಿಪೂಜೆ ಮಾಡಿದವರಾಗಿದ್ಧಾರೆಂಬದೊಂದು ಚೀಟು ಪಡೆದು, ಸಾಕ್ಷಿಮರಣಕ್ಕೊಪ್ಪದೆ, ತಪ್ಪಿಸಿ ಕೊಂಡರು; ಮಗುಳೊಬ್ಬ

1) 97ನೇ, 100ನೇ ಪಾನು.

ರು ಜನರಿಲ್ಲದ ಅರಣ್ಯಗಳಿಗೆ ಪಲಾಯನ ಮಾಡಿದರು. ಪರಂತು ವಿಶ್ವಾಸಭ್ರಷ್ಟ ರಾದ ಕ್ರೈಸ್ತರಲ್ಲಿ, ಹಿಂದೆ ಸೂಚಿಸಿದಂತೆ, ಭೋಗಾಸ್ಪದವುಳ್ಳ ಐಶ್ವರ್ಯವಂತರು ಬಹು ಹೆಚ್ಚು; ಅದಲ್ಲದೆ ಮೊದಲಿನ ಭಯಭ್ರಮವು ಬೇಗ ತೀರಿದಾಗಲೇ ಆ ಭ್ರಂಶ ಸಹ ಅಣಗಿತು. ಆದರೆ ಸತ್ಕ್ರೈಸ್ತರ ದೊಡ್ಡ ಸಭೆಯು, ಹೇಳಿದ ಆ ಅನ್ಯಾಯಪರಿ ಯಿಂದ ಮರಣಕ್ಕೆ ತಪ್ಪಿಸಿ ಕೊಂಡವರೆಲ್ಲರೂ ಕರ್ತೃದ್ರೋಹಿಗಳೆಂದು, ಅವರೆಲ್ಲರನ್ನು ತನ್ನೊಳಗಿಂದ ಬಹಿಷ್ಕರಿಸಿತು; ಮತ್ತು ಆ ಸತ್ಕ್ರೈಸ್ತರಲ್ಲಿ ಹೇರಳರು ತಮ್ಮ ಯೇಸು ನಾಥನ ಪ್ರೀತ್ಯಾಸಕ್ತಿಯಿಂದ ತೋಷ ಗೊಂಡು ರಕ್ತಸಾಕ್ಷಿಗಳಾದರು; ಇಂಥವರ ಲ್ಲಿ ಸೈನಿಕರು ಅಧಿಕರೆಂದು, ಕಾಣುತ್ತದೆ. ಕರ್ತೃದ್ರೋಹಿಗಳಾದ ಅನೇಕರು ತಡೆ ಯದೆ ಪಶ್ಚಾತ್ತಾಪ ಪಟ್ಟು, ಸಭೆಯಲ್ಲಿ ಪುನಃಪ್ರವೇಶಿತರಾಗಲಿಕ್ಕೋಸ್ಕರ ಬಹು ಕಠಿ ಣವಾದ ಸಭಾಶಿಕ್ಷೆಯನ್ನಾದರೂ ತಮ್ಮ ಮೇಲೆ ತಕ್ಕೊಳ್ಳುತ್ತಿದ್ದರು. ದೆಕಿಯ ಕೈಸ ರನ ವೈಮನಸ್ಯದ ಗೊತ್ತು ಹ್ಯಾಗೂ ಒದಗಲಿಲ್ಲ; ಕ್ರೈಸ್ತ ಸಭೆಯನ್ನು 3 ವರುಷ ಆ ಕಠೋರ ಹಿಂಸೆ ಎಂಬ ಪುಟಕ್ಕೆ ಹಾಕಿ ಚೊಕ್ಕ ಮಾಡಿದ ಹಾಗಾಯಿತಷ್ಟೇ.—ಅವ ನ ಆ ಹಿಂಸೆಯೊಳಗೆ ಕ್ರಿಸ್ತನ ನಾಮಕ್ಕಾಗಿ ಮೃತಿಗೊಂಡ ಅನೇಕಾನೇಕ ಪ್ರಖ್ಯಾತ ಕ್ರೈಸ್ತರಲ್ಲಿ ನಾಲ್ವರು ಯಾರಂದರೆ—ರೋಮಪುರದ ಫಬಿಯಾನ ಸಭಾಧ್ಯಕ್ಷನು[1], ಯೆರೂಸಲೇಮಿನ ಅಲೆಕ್ಸಂದರ ಸಭಾಧ್ಯಕ್ಷನು, ಅಂತಿಯೊಖೀಯದ 12ನೇ ಸಭಾ ಧ್ಯಕ್ಷನಾದ ಬಬುಲನು, ಸ್ಮುರ್ನದ ಹಿರಿಯರಲ್ಲೊಬ್ಬನಾದ ಪಿಯೋನಿಯನು; ಒ ರೀಗೆನನೆಂಬ ಸಭಾಪಿತನನ್ನು ಆವಾಗ ಶೆರೆಮನೆಗೆ ಹಾಕಿ, ಅವನ ಮೇಲೆ ಪೀಡಾ ಯಂತ್ರಗಳನ್ನು ಬಹು ಕ್ರೌರ್ಯದಿಂದ ಹೂಡಿಸಿದರು.—ರಕ್ತಸಾಕ್ಷಿಗಳ ಅಗ್ನ್ಯಾದಿ ಮರಣ ಪಡುವದಕ್ಕೆ ಕರ್ಥಾಗೊವಿನ ಕ್ರೈಸ್ತರಲ್ಲಿ ಅಂದು ಅತ್ಯಂತ ಕಾಂಕ್ಷೆ ಕಾಣಿ ಸುತ್ತಿತ್ತು; ಮತ್ತು ಆ ಕಾಂಕ್ಷಾರ್ಥವು ಅನೇಕಾವರ್ತಿ ಒದಗುತ್ತಿತ್ತು. ಅಲ್ಲಿಯ ಹಿಂಸಕರು ಒಮ್ಮೆ ರೋಮಿಾಯ ಪ್ರತಿನಿಧಿಯ ಬಳಿಗೆ ಎಳತಂದ ನಾಲ್ವರು ಕ್ರೈಸ್ತ ರೊಳಗೆ ದಿಯೊಸ್ಕೊರನೆಂಬ 15 ವರುಷದ ಹುಡುಗನೊಬ್ಬನು; ಈ ಹುಡುಗನ ನ್ನು ತಾನು ಬೇಗ ಮಾನಸಾಂತರ ಪಡಿಸ್ಯೇನೆಂತ, ಆ ಪ್ರತಿನಿಧಿಯಾಲೋಚಿಸಿ, ಆ ರಂಭದಲ್ಲಿ ಅವನನ್ನು ಗೌರವಿಸಿ, ಹೀಗೆ ಅವನನ್ನು ತನ್ನೊಳಗೆ ಮಾಡಿ ಕೊಳ್ಳಲಾರ ದೆ, ಪೀಡಾಯಂತ್ರಗಳನ್ನು ಅವನ ಮೇಲೆ ಪ್ರಯೋಗಿಸಿದನು; ಇದು ಸಹ ವ್ಯರ್ಥ ವಾಗಲಾಗಿ, ಅವನು ಆ ಹುಡುಗನ ಸಂಗಡಲಿದ್ದು ಇವನಂತೆಯೇ ಉತ್ತಮ ಸಾ ಕ್ಷಿಗಳಾದ ಆ ಮೂವರನ್ನು ಅಗ್ನಿಮರಣಕ್ಕೆ ಕಳುಹಿಸಿ, ತಾನು ಅತಿ ವಿಸ್ಮಯ ಗೊಂಡ ಆ ಹುಡುಗನನ್ನು ಮಾತ್ರ ತಿರಿಗಿ ಹೋಗ ಬಿಟ್ಟನು.—ರೋಮಪುರದಲ್ಲಿ ಒಂದು ವರುಷವೇ ಶೆರೆಯೊಳಗಿದ್ದ ಅನೇಕ ಕ್ರೈಸ್ತರು ಭಾಷಾತೀತ ಸಂಕಷ್ಟ ಪಟ್ಟಿ

1) 86ನೇ ಪಾನು ನೋಡು.

ದ್ದರೂ, ಪರಮ ಸ್ಥಿತಿಯಲ್ಲಿದ್ದೇವೆಂತ, ದೇವರನ್ನು ಹೊಗಳುತ್ತಿರಲು, ಕರ್ಥಾಗೊಪಟ್ಟಣದ ಅಧ್ಯಕ್ಷನಾದ ಆ ಕುಪ್ರಿಯಾನನು[1] ಅವರಿಗೆ ಆದರಣಪತ್ರಿಕೆಯೊಂದನ್ನು ಬರೆದು ಕಳುಹಿಸಿದಾಗ ಅವರು ಅದಕ್ಕೆ ತಮ್ಮ ಕೃತಜ್ಞತೆ ತೋರಿಸುವದೊಂದುತ್ತರಪತ್ರದಲ್ಲಿ—ಮಾರಕನ ಕೈಯೊಳಗೂ ಧೈರ್ಯದಿಂದ, ದೇವರು ಕರ್ತನೇ ಎಂತ, ಅರಿಕೆ ಮಾಡಿ, ಪೀಡೆಯೊಳಗೂ ಅಘೋರ ಕಷ್ಟದೊಳಗೂ ಶರೀರವೆಲ್ಲಾ ಘಾಯಮಯವಾಗಿ ಸ್ವಾತಂತ್ರ್ಯಾತ್ಮವು ಉತ್ಕ್ರಮಿಸುವಂತಾಗುತ್ತಲೇ, ಕ್ರಿಸ್ತನು ದೇವರ ಪುತ್ರನೇ ಎಂತ, ನಿವೇದಿಸಿ, ಈ ಪ್ರಕಾರದಿಂದ ಕ್ರಿಸ್ತನ ನಾಮದಲ್ಲಿ ಕ್ರಿಸ್ತನ ಜತೆಯ ಕಷ್ಟಿಯಾಗುವದಕ್ಕಿಂತ ಹೆಚ್ಚು ಮಹಿಮೆಯೂ ಆಶೀರ್ವಾದವೂ ಮನುಷ್ಯರಿಗೆ ಪ್ರಾಪಿಸುವದುಂಟೇ? ಕ್ರಿಸ್ತನ ಪ್ರೀತಿಗೆ ನಮ್ಮನ್ನಗಲಿಸುವವನು ಯಾರು? ಉಪದ್ರವವೋ? ಸಂಕಟವೋ? ಹಿಂಸೆಯೋ? ಬರವೋ? ಬೆತ್ತಲೆತನವೋ? ಗಂಡಾಂತರವೋ? ಖಡ್ಗವೋ? ಇಲ್ಲವಿಲ್ಲ! ಇವೆಲ್ಲವುಗಳಲ್ಲಿ ನಮ್ಮನ್ನು ಪ್ರೀತಿ ಮಾಡಿದವನ (ಯೇಸುವಿನ) ಮುಖಾಂತರ ಅಧಿಕ ಜಯಶಾಲಿಗಳಾಗುತ್ತೇವೆ[2]! ಇತ್ಯಾದಿ ಸಹ ಬರೆದರು.—ಆಗಿನ ಹಿಂಸೆಯೊಳಗೆ ರಕ್ತಸಾಕ್ಷಿಗಳಾಗಿ ತೀರಿದ ಸಹಸ್ರಾನುಸಹಸ್ರ ಕ್ರೈಸ್ತರ ಹೆಸರುಗಳನ್ನು ದೇವರು ತನ್ನ ಕೈಯಲ್ಲಿ ಬರೆದಿರುವನು.—

ಕ್ರೈಸ್ತರ ಮೇಲಣ ದೇವಕೃಪಾಸಂಕಲ್ಪದಿಂದ ದೆಕಿಯನು 3 ವರುಷ ಮಾತ್ರ ಕ್ರಿ. ಶ. 251ನೇದರ ವರೆಗೆ ಆಳಿ, ಯುದ್ಧದಲ್ಲಿ ಸತ್ತ ಹಿಂದೆ ಗಲ್ಲನೆಂಬವನೊಬ್ಬನು ಕೈಸರನಾಗಿ, ಕ್ರಿ. ಶ. 253ನೇದರ ತನಕ ರಾಜ್ಯಭಾರ ಮಾಡಿ, ತನ್ನ ಮಗನೊಂದಿಗೆ ಸೈನಿಕರ ಕೈಯಿಂದ ಕೊಲೆ ಪಟ್ಟನು. ಅವನ ಆಳುವಿಕೆಯಲ್ಲಿ ಕ್ರೈಸ್ತರ ಕಷ್ಟೋಪದ್ರವವು ಬಹಳ ಕಡಿಮೆಯಾಗಲಿಲ್ಲ; ವೇಳೆ ವೇಳೆಗಾಗುತ್ತಿರುವ ಮಾರಿಬೇನೆ ಬರಗಳ ದೆಸೆಯಿಂದ ವಿಗ್ರಹಪೂಜಕರು ಅಪರಾಧವಿಲ್ಲದ ಕ್ರೈಸ್ತರಲ್ಲಿ ತಮ್ಮ ಹಗೆ ತೀರಿಸುತ್ತಿದ್ದರು. ಆ ಸಮಯ ರೋಮಪುರದಲ್ಲಿ ಕೊರ್ನೇಲಿಯ ಇವನ ಉತ್ತರೋದ್ಯೋಗಿಯಾದ ಲೂಕಿಯ ಎಂಬವರಿಬ್ಬರು ಅಧ್ಯಕ್ಷರು[3] ಸಹ ರಕ್ತಸಾಕ್ಷಿಮರಣ ಹೊಂದಿದರು.

ಕ್ರಿ. ಶ. 253ನೇ ಆ ವರುಷ ವಲೇರಿಯಾನನೆಂಬವನು ಪಟ್ಟಾಭಿಷೇಕದವನಾಗಿ, ಆರಂಭದಲ್ಲಿ ಕ್ರೈಸ್ತರಿಗೊಲಿದನು; ಅವನ ಅರಮನೆಯು ಒಂದು ದೇವಾಲಯದ ಹಾಗಿತ್ತೆಂತ, ಆ ಕಾಲದವನಾದ ಸಭಾಬೋಧಕನೊಬ್ಬನು ಬರೆದಿದ್ದಾನೆ. ಆದರೆ ಕಾಲಗತಿಯಲ್ಲಿ ಆ ಕೈಸರನು ತನ್ನನ್ನು ಫುಸಲಾಯಿಸುತ್ತಿರುವ ಮೂರ್ತಿಪೂಜಾಸಕ್ತನೊಬ್ಬ ಪೋಕರಿಯ ಮಾತು ಕೇಳಿ, ಕ್ರಿ. ಶ. 257ನೇದರಲ್ಲಿ ಕ್ರೈಸ್ತರನ್ನು

1) 118ನೇ ಪಾನು. 2) ರೋಮಾ. 8, 35—37; ಪೌಲ ಅಪೊಸ್ತಲನ ಆ ಪತ್ರಿಕೆಯ ಅಧ್ಯಯನವು ಅವರಲ್ಲಿ ಬಹು ರೂಢಿಯಾಗಿದ್ದಂತೆ ಕಾಣಿಸುತ್ತದೆ; 49ನೇ ಪಾನು. 3) 119ನೇ ಪಾನು.

ಹಿಂಸಿಸಲಿಕ್ಕೆ ತೊಡಗಿದನು. ಅವನು ಕ್ರೈಸ್ತ ಸಭೋದ್ಯೋಗಿಗಳನ್ನು ಗಡಿ ದಾಟಿಸಿ, ಕ್ರೈಸ್ತ ದೇವಾರಾಧನಾಸಂಘಗಳು ಇನ್ನು ನಡೆಯ ಬಾರದೆಂತ, ಆಜ್ಞಾಪಿಸಿದ್ದು ಕ್ರೈಸ್ತತ್ವಕ್ಕೆ ಏನೂ ಕೇಡು ಮಾಡದೆ, ಅದರ ಅಭಿವೃದ್ಧಿಗೆ ಕಾರಣವಾಯಿತಷ್ಟೇ; ಹ್ಯಾಗಂದರೆ, ಪತ್ರಗಳಿಂದಲೂ ದೂತರಿಂದಲೂ ಸಭೆಗಳಿಗೂ ಸಭಾಧ್ಯಕ್ಷರಿಗೂ ತಮ್ಮೊಳಗೆ ಇನ್ನೂ ಹೆಚ್ಚು ಪರಿಚಿತಿಯು ರೂಢಿಗೆ ಬರುತ್ತಿರುವದು; ಅದಲ್ಲದೆ ಆ ಅಧ್ಯಕ್ಷರು ಇತರ ದೂರ ದೇಶಗಳಲ್ಲಿ ಸುವಾರ್ತೆ ಪ್ರಸಂಗಿಸಿ, ಹೊಸ ಸಭೆಗಳನ್ನು ಉತ್ಪಾದಿಸಲಿಕ್ಕೆ ಅನುವಾಯಿತು[1]. ಕೈಸರನು, ತನ್ನ ಆ ಉಪಾಯಗಳು ಸಾಗುವದಿಲ್ಲವೆಂತ, ತಿಳಿದು, ಮರುವರುಷಕ್ಕೆ ಮಿಗೆ ಕಠಿಣವಾದ ಇನ್ನೊಂದು ಅಪ್ಪಣೆ ಕೊಟ್ಟನು; ಅಂದು ಸಕಲ ಸ್ಥಿತಿಯವರಲ್ಲಿ ಕ್ರೈಸ್ತರಿದ್ದರೆಂಬದು ಅದರಿಂದ ಗೊತ್ತಾಗುವ ಕಾರಣ ಅದನ್ನು ಇದ್ದ ಹಾಗೆಯೇ ಇಲ್ಲಿ ಹೇಳ ತಕ್ಕದ್ದು; ಏನಂದರೆ—ಕ್ರೈಸ್ತ ಅಧ್ಯಕ್ಷರನ್ನೂ ಹಿರಿಯರನ್ನೂ ಸೇವಕರನ್ನೂ ಮಾಣದಲೇ ಕೊಲ್ಲ ಬೇಕು; ಕ್ರೈಸ್ತ ಪುರಮಂತ್ರಿಗಳ, ಘನಾಢ್ಯರ, ಸೇನಾಪ್ರಮುಖರ ಉದ್ಯೋಗ ನಿವರ್ತಿಸಿ, ಅವರವರ ಸರ್ವಸ್ವವನ್ನಪಹರಿಸ ಬೇಕು; ಇಂಥ ಅಪಹರಣದ ಮೇಲಾದರೂ ಅವರಿನ್ನೂ ತಾವು ಕ್ರೈಸ್ತರೇ ಅಂದರೆ ಅವರಿಗೆ ಮರಣಾಜ್ಞೆ ತೀರಿಸ ಬೇಕು; ಆಢ್ಯರಾದ ಕ್ರೈಸ್ತ ಸ್ತ್ರೀಯರ ಆಸ್ತಿಯನ್ನು ಮುದ್ರಾಪಣೆ ಗೈದು, ಅವರನ್ನು ರಾಜ್ಯದ ಹೊರಗೆ ಮಾಡ ಬೇಕು; ಕೈಸರನ ಸೇವೆಯಲ್ಲಿದ್ದು ಕ್ರೈಸ್ತರೆನ್ನಿಸಿದವರನ್ನಾಗಲಿ ಕ್ರೈಸ್ತರೆನ್ನಿಸುವವರನ್ನಾಗಲಿ ಹಿಡಿದು, ಬೇಡಿ ಹಾಕಿ, ಗಣಿಯಗಿಯುವ ಮೊದಲಾದ ಮಣ್ಣು ಕೆಲಸಕ್ಕೆ ನೇಮಿಸ ಬೇಕು.—ರೋಮಪುರದಲ್ಲಿ ಲೂಕಿಯನ ಬದಲಿಯವನಾದ ಸ್ತೆಫನನು[2], ಇವನ ಬದಲಿಯವನಾದ 2ನೇ ಸಿಕ್ಸ್ತನು, ಕರ್ಥಾಗೊವಿನ ಕುಪ್ರಿಯಾನನು[3] ಮುಂತಾದ ಸಭಾಧ್ಯಕ್ಷರು ಅಂದು ರಕ್ತಸಾಕ್ಷಿಗಳಾದರು. ಆ ಸಿಕ್ಸ್ತನಿಗೆ ಸಭಾಪಾಲನದಲ್ಲಿ ಸಹಾಯಕನಾಗಿದ್ದ ಲೌರೆಂತಿಯನೆಂಬ ದಿಯಕೊನನನ್ನು ಪ್ರತಿನಿಧಿಯು ಕರೆಸಿ—ನೀನು ದಿನಾಲು ಬಹಳ ಬಡವರನ್ನೂ ರೋಗಿಷ್ಠರನ್ನೂ ಪೋಷಿಸುತ್ತಾ ಇದ್ಧಿಯಲ್ಲ[4]? ನೀನು ದೊಡ್ಡ ದ್ರವ್ಯ ಕಾದು ಕೊಂಡಿರುವಂಥವನು, ನಿಶ್ಚಯ! ಅದನ್ನೆಲ್ಲಿ ಅಡಗಿಸಿ ಕೊಂಡಿದ್ಧೀ? ತೋರಿಸೆನ್ನಲಾಗಿ, ಲೌರೆಂತಿಯನು—ಯಾಕಾಗವಲ್ಲದು? ನೀವು ನಾಳೆ ದೇವಾಲಯಕ್ಕೆ ಬಂದರೆ ಆ ದ್ರವ್ಯವನ್ನೆಲ್ಲಾ ಅಲ್ಲಿ ಕೂಡಿಸಿಟ್ಟು, ತೋರಿಸುವೆನೆಂತ, ಹೇಳಿ, ಬೀಳ್ಕೊಂಡು, ಹೋದನು. ಮರುದಿವಸದಲ್ಲಿ ಆ ಪ್ರತಿನಿಧಿಯು ಸಂತೋಷ ಪಟ್ಟು ಆ ದೇವಾಲಯಕ್ಕೆ ಬರುವಾಗ ಲೌರೆಂತಿಯನು ಅವನನ್ನೆದುರ್ಗೊಂಡು, ಅಗೋ, ಅಂಗಳದಲ್ಲಿ ಭಂಗಾರದ ಪಾತ್ರಗಳು ತುಂ

1) Euseb. VII; XI. 2) 120ನೇ ಪಾನು. 3) 120ನೇ ಪಾನು. 4) 93ನೇ ಪಾನು ಸರಿ ನೋಡು.

ಬಿಸಿ ಅವೆ! ಎಂದು, ತಾನು ನೆರಸಿದ ಬಡವರನ್ನೂ ರೋಗಿಗಳನ್ನೂ ಊನರನ್ನೂ ಕುಂಟರನ್ನೂ ಅವನಿಗೆ ತೋರಿಸಲು, ಆ ಲೋಭಿಯು ಬಹಳ ಕೋಪ ಗೊಂಡು, ಉರಿಗೆಂಡಗಳ ಮೇಲೆ ಕಬ್ಬಿಣದೊಲೆ ಹೂಡಿಸಿ, ಲೌರೆಂತಿಯನನ್ನು ಅದರ ಮೇಲಿಡಿಸಿ, ಮೆಲ್ಲಮೆಲ್ಲಗೆ ಸುಡಿಸಿದನು; ಲೌರೆಂತಿಯನು ಅಂಥಾ ಪೀಡೆಯಲ್ಲೂ ಕರ್ತನ ಹೆಸರಿಗೆ ಸಂತುಷ್ಟನಾಗಿದ್ದು, ತನ್ನದೊಂದು ಪಕ್ಷ ಸುಟ್ಟ ಮೇಲೆ—ಈಗ ನನ್ನನ್ನು ತಿರಿಗಿಸಿ ಹಾಕಿರಿ! ಈ ಕಡೆ ಸುಟ್ಟು ಸಾಕಾಯಿತೆಂತ, ಹೇಳಿ, ಕ್ರೈಸ್ತ ಸಭೆಗೋಸ್ಕರ ದೇವರಿಗೆ ಪ್ರಾರ್ಥಿಸುತ್ತಾ ತೀರಿದನು.—

ವಲೇರಿಯಾನನು ಸಾಸಾನಿದ ಸಾಮ್ರಾಜ್ಯದ ಒಬ್ಬ ಚಕ್ರವರ್ತಿಯ ಸಂಗಡ[1] ಯುದ್ಧ ಮಾಡ ಬೇಕಾದಲ್ಲಿ ಕ್ರಿ. ಶ. 259ನೇ ವರುಷ ಅವನ ಶೆರೆಯವನಾದನು. ಸಾಸಾನಿದ ಚಕ್ರವರ್ತಿಯು ಅವನಿಗೆ ಸಂಕೋಲೆ ಜೋಡಿಸಿ, ತಾನು ಹೋಗುವಲ್ಲಿಗೆ ಅವನನ್ನೆಳಿಸಿ ಕೊಂಡು ಹೋಗುತ್ತಾ, ಕುದುರೆ ಹತ್ತುವಾಗ ಅವನ ಕೈಯಲ್ಲಿ ಕಾಲಿಟ್ಟು ಕುದುರೆ ಹತ್ತುತ್ತಾ ಇರುವನು. ವಲೇರಿಯಾನನು 3 ವರುಷ ಆ ರೀತಿಯ ಅಪಮಾನ ಪಟ್ಟು, ಸಾಯಲು, ಆ ಚಕ್ರವರ್ತಿಯು ಅವನ ತಲೆ ಕೊಯಿಸಿ, ಅದಕ್ಕೆ ಹದ ಕೊಡಿಸಿ, ಅದನ್ನು ಒಂದು ದೇವಸ್ಥಾನದೊಳಗೆ ತೂಗ ಹಾಕಿಸಿದನು.

ವಲೇರಿಯಾನನ ಮಗನಾದ ಗಲ್ಲಿಯೇನನು ಕ್ರಿ. ಶ. 260ನೇ ವರುಷದಲ್ಲಿ ಕೈಸರನಾಗಿ, ಲೋಕಭೋಗವನ್ನು ಸಮಾಧಾನದಿಂದ ಮಾಡಿ ಕೊಳ್ಳುವೆನೆಂತ, ಸಾಮ್ರಾಜ್ಯದಲ್ಲಿಯ ಯಾವದೊಂದು ಗದ್ದಲಕ್ಕೆ ಮೆಚ್ಚದೆ, ಇದರಿಂದ ಕ್ರೈಸ್ತರ ಹಿಂಸೆ ಸಹ ನಿಲ್ಲಿಸಿ, ಕ್ರೈಸ್ತತ್ವವು ರಾಜ್ಯಮತಗಳಲ್ಲಿ[2] ಶೇರಿದ್ದೇ ಎಂಬ ಆಜ್ಞೆಯನ್ನು ಡಂಗುರ ಹೊಡಿಸಿ, ಸ್ವಲ್ಪ ಕಾಲಕ್ಕೆ ಈಚೆ, ಕ್ರೈಸ್ತರು ನಡಿಸುವ ಆಚಾರಗಳಿಗೆ ಸಾಮ್ರಾಜ್ಯದಲ್ಲೆಲ್ಲಿಯೂ ಅಡ್ಡಿ ಆಗ ಬಾರದೆಂತ, ಪ್ರಕಟಿಸಿದನು. ಆದರೆ ಅವನ ದಶೆಯಲ್ಲಿ ಬಹಳ ಮಂದಿ ಪ್ರತಿನಿಧಿಗಳು ದ್ರೋಹ ಚಿಂತಿಸಿ, ತಾವು ಕೈಸರರೆಂತ, ಅಪ್ಪಣೆ ಸಾರುತ್ತಿರುವರು; ಹೀಗಿರಲಾಗಿ ಒಮ್ಮೆ ಒಂದೇ ಸಾರಿಗೆ 18 ಮಂದಿ ಕೈಸರರಿದ್ದರು. ಆದ್ದರಿಂದ ಪಲೇಸ್ತೀನ ಮುಂತಾದ ಸಾಮ್ರಾಜ್ಯದ ಮೂಡಣ ಪ್ರದೇಶಗಳಲ್ಲಿ ಕ್ರೈಸ್ತರಿಗೆ ಬರುವ ಹಿಂಸೆಯನ್ನು ತಡಿಸುವದಕ್ಕೆ ಗಲ್ಲಿಯೇನನಿಂದ ಕೂಡಲಿಲ್ಲ. ಅವನು 8 ವರುಷ ಆಳಿ, ತನ್ನ ಸೇನಾಧಿಪರಲ್ಲೊಬ್ಬನ ಕೈಯಿಂದ ಮೃತನಾದನು.

ಅವನ ಸೇನಾಧಿಪತಿಗಳಲ್ಲಿ ಮತ್ತೊಬ್ಬನಾದ ಕ್ಲೌದಿಯನು ಕೈಸರತ್ವಕ್ಕೆ ಬಂದು, 2ನೇ ಕ್ಲೌದಿಯನೆನ್ನಿಸಿ ಕೊಂಡು, ಕ್ರಿ. ಶ. 270ನೇ ವರುಷದಲ್ಲಿ ಕೆಟ್ಟ ಮಾರಿ ರೋಗದಿಂದ ಸತ್ತನು. ಇವನ ಆಳುವಿಕೆಯಲ್ಲಿಯೂ ಕ್ರೈಸ್ತರಿಗೆ ವಿಶೇಷ ಹಿಂಸೆಯಾಗಲಿಲ್ಲ.

---

1) 116ನೇ ಪಾನು ಸರಿ ನೋಡು. 2) 101ನೇ, 108ನೇ ಪಾನು ಸರಿ ನೋಡು.

ಅವನಿಗೀಚೆ ಔರೇಲಿಯಾನನೆಂಬವನು ಪಟ್ಟಾಭಿಷಿಕ್ತನಾಗಿ, ಗಲ್ಲಿಯೇನನು ಕ್ರೈಸ್ತತ್ವವನ್ನು ಕುರಿತು ಕೊಟ್ಟ ಕಟ್ಟಳೆ ಪುನಃಸ್ಥಾಪಿಸಿದರೂ ತಾನು ಶಿರೋಭ್ರಮಣವುಳ್ಳ ಮೂರ್ತಿಪೂಜಕನಾಗಿದ್ದು, ನರಮೇಧ ಸಹ ಮಾಡಿಸುತ್ತಿರುವಲ್ಲಿ ಇದಕ್ಕೆ ಹೇಸುವ ಕ್ರೈಸ್ತರ ಶತ್ರುವಾಗಿ, ಅವರಿಗೆ ವಿರೋಧ ಒಂದು ಹಿಂಸಾಜ್ಞೆ ಹೊರಡಿಸುತ್ತೇನೆಂತ, ಯೋಚಿಸುವ ಸಮಯವೇ ಕ್ರಿ. ಶ. 275ನೇ ವರುಷದಲ್ಲಿ ತನ್ನ ದಂಡುಗಾರರಿಂದಳಿದನು.

ಔರೇಲಿಯಾನನ ಉತ್ತರಾಧಿಕಾರಿಗಳಾದವರಲ್ಲಿ ತಕಿತನು ಕ್ರಿ. ಶ. 276ನೇ ವರುಷದ ವರೆಗೆ, ಪ್ರೊಬನು 282ನೇದರ ವರೆಗೆ, ಕಾರನು 283ನೇದರ ವರೆಗೆ, ಕಾರೀನನು 284ನೇದರ ವರೆಗೆ ಆಳೋಣವಾಯಿತು; ಅವರೆಲ್ಲರೂ ಸೈನಿಕರಿಂದ ಕೊಲೆಯವರಾದರು. ಅವರ ಕಾಲದೊಳಗೆ ಸಹ ಕ್ರೈಸ್ತರು ಶಾಂತಿಯಾಗಿದ್ದರು.

ಆ ಕೈಸರರಿಗೀಚೆ ದಿಯೊಕ್ಲೇತಿಯಾನನೆಂಬವನು ರೋಮಾಯ ಸಾಮ್ರಾಜ್ಯವನ್ನಾಳುವವನಾದನು; ಅವನು ಗುಲಾಮರಿಂದ ಹುಟ್ಟಿ, ಬಿಡುಗಡೆಯಾದವನು. ತಾನೊಬ್ಬನೇ ತನ್ನ ಸಾಮ್ರಾಜ್ಯವನ್ನು ಚಂದಾಗಿ ಕಾದು ಕೊಳ್ಳ ಕೂಡದೆಂದು, ತನ್ನ ಗೆಳೆಯನಾದ ಮಕ್ಸಿಮಿಯಾನನೆಂಬ ಸೈನಿಕನನ್ನು ಕ್ರಿ. ಶ. 285ನೇ ವರ್ಷ, ತನ್ನ ಸಹಾಯಕೈಸರನೆಂತ, ಆರಿಸಿ ಕೊಂಡು, ಸಾಮ್ರಾಜ್ಯದ ಪಶ್ಚಿಮ ಭಾಗದ ಪರಿಪಾಲನವನ್ನು ಅವನಿಗೊಪ್ಪಿಸಿ ಕೊಟ್ಟು, ತಾನು ಪೂರ್ವ ಭಾಗ ಪರಿಪಾಲಿಸುತ್ತಾ ಬಂದನು. 7 ವರುಷದ ಮೇಲೆ ದಿಯೊಕ್ಲೇತಿಯಾನನು ತನ್ನ ರಾಜ್ಯಭಾರದ ಕಾರ್ಯಗಳನ್ನು ಹೆಚ್ಚು ಸುಲಭವಾಗಿ ನಡಿಸುವದಕ್ಕೋಸ್ಕರ ತನ್ನ ಅಳಿಯನಾದ ಗಲೇರಿಯನನ್ನು, ಸಹಾಯಕನೆಂತ, ತೆಕ್ಕೊಂಡನು; ಇವನು ಮುಂಚೆ ಗೋವಾಳನಾಗಿದ್ದನು. ಕ್ರಿ. ಶ. ಅದೇ 292ನೇ ವರುಷದಲ್ಲಿ ಮಕ್ಸಿಮಿಯಾನನು ತನ್ನ ಅಳಿಯನಾದ ಕೊನ್ಸ್ತಂತಿಯ ಖ್ಲೋರನೆಂಬವನನ್ನು[1] ತನ್ನ ಸಹಾಯಕನಾಗ ಮಾಡಿಕೊಂಡು, ಗಲ್ಲಿಯ, ಸ್ಪಾನಿಯ, ಬ್ರಿತನ್ನಿಯ ಎಂಬ ಮೂರು ದೇಶಗಳನ್ನು ಅವನ ಕೈಯ ಕೆಳಗೆ ಕೊಟ್ಟನು; ಇವನು ಕೈಸರನ ವಶಕ್ಕೆ ಕೆಲವು ವರುಷ ತಪ್ಪಿ ಹೋಗಿದ್ದ ಬ್ರಿತನ್ನಿಯ ದೇಶದಲ್ಲಿ ತಿರಿಗಿ ಅವನ ಅಧಿಕಾರವ ನೆಲೆ ಗೊಳ್ಳಿಸಿದನು. ದಿಯೊಕ್ಲೇತಿಯಾನ ಕೈಸರನು ಕ್ರಿ. ಶ. 303ನೇ ವರುಷದ ವರೆಗೆ ಕ್ರೈಸ್ತರನ್ನು ಹಿಂಸಿಸಲೇ ಇಲ್ಲ; ಗಲ್ಲಿಯೇನನು[2] ಕ್ರಿ. ಶ. 260ನೇದರಲ್ಲಿ ಕೈಸರನಾದಂದಿನಿಂದ ಈ 303ನೇದರ ತನಕ ಕ್ರೈಸ್ತರು 43 ವರುಷ ಬಹಿಃಸಮಾಧಾನವನ್ನನುಭೋಗಿಸಿ[3], ದೊಡ್ಡ ರಾಜ್ಯೋದ್ಯೋಗ ಮಾನಗಳೆರಡನ್ನು ಸಹ ಸಂಪಾದಿಸುತ್ತಾ ಬಂದಿದ್ದರು. ಆಗ ದಯಾಪೂರ್ಣಕರ್ತನು ತನ್ನ ಸಭೆಯನ್ನು ತಿರಿಗಿ ಶುದ್ಧೀಕರಿಸುವದಕ್ಕಾಗಿ ಆ ಶಾಂತಿಕಾಲವ

1) 90ನೇ ಪಾನು ನೋಡು. 2) 122ನೇ ಪಾನು. 3) 117ನೇ ಪಾನು ಸರಿ ನೋಡು.

ಮರಳಿ ತಪ್ಪಿಸಿ, ದೆಕಿಯ ಕೈಸರನು ಮಾಡಿದ ಹಿಂಸೆಗಿಂತಲೂ ಇನ್ನೂ ಅತ್ಯಧಿಕವಾದದ್ದನ್ನು ತನ್ನ ಭಕ್ತರ ಮೇಲೆ ಬರಗೊಟ್ಟನು.

ಹ್ಯಾಗಂದರೆ ದಿಯೊಕ್ಲೇತಿಯಾನನ ಅಳಿಯನಾದ ಆ ಗಲೇರಿಯನು ಮೂರ್ತಿಪೂಜೆಯಲ್ಲಿ ಮರುಳಾಗಿದ್ದು, ಪೂಜಾರಿಗಳ ಪ್ರೇರಣೆಯಿಂದ ಕ್ರೈಸ್ತರಿಗೆ ಬಹಳ ಹಗೆಯವನಾಗಿ, ತನ್ನ ಮಾವನಿಗೆ, ಕ್ರೈಸ್ತರನ್ನು ನಿರ್ಮೂಲ ಮಾಡ ಬೇಕೆಂತ, ಎಡೆಬಿಡದೆ ದುರ್ಬುದ್ಧಿ ಹೇಳುತ್ತಾ ಇದ್ದನು; ಅದೇ ಪ್ರಕಾರ ಪೂಜಾರಿಗಳು ಸಹ ಅವನಿಗೆ ಹೇಳುತ್ತಾ ಇದ್ದರು. ಆದರೆ ದಿಯೊಕ್ಲೇತಿಯಾನನು, ತಾನು ವಿಗ್ರಹಾರಾಧನಪ್ರಿಯನಾಗಿದ್ದರೂ, ತನ್ನ ಪೂರ್ವಾಧಿಕಾರಿಯಾದ ಆ ಗಲ್ಲಿಯೇನನು ಕೊಟ್ಟ ಆಜ್ಞೆಮೀರಲೊಲ್ಲದೆ, ಅಮಿತ ಸಂಖ್ಯೆಯ ಕ್ರೈಸ್ತರ ಹಿಂಸೆಯಿಂದ ರಾಜ್ಯಕ್ಕೆ ಕ್ಷೇಮ ಬರಲಿಕ್ಕಿಲ್ಲವೆಂತ, ತಿಳುಕೊಂಡು, ಆರಂಭದಲ್ಲಿ ಆ ದುರ್ಬುದ್ಧಿಗೆ ಒಡಂಬಡಲಿಲ್ಲ; ಅದಲ್ಲದೆ, ಅವನ ಹೆಂಡತಿಯಾದ ಪ್ರಿಸ್ಕಳೂ ಅವನ ಮಗಳಾದ ವಲೇರಿಯಳೂ ಕ್ರೈಸ್ತತ್ವಕ್ಕೆ ಪ್ರೀತಿ ಮಾಡುವ ಕಾರಣದಿಂದಲೂ ಅವನ ನಂಬಿಗಸ್ತರಾದ ಸೇವಕರೆಲ್ಲರೂ ಕ್ರೈಸ್ತರಾಗಿರುವ ಕಾರಣದಿಂದಲೂ ಅವನಿಗೆ ತನ್ನ ಅಳಿಯನ ಮತ್ತು ಪೂಜಾರಿಗಳ ಮಾತುಗಳಿಗೆ ಬೇಗ ಒಳ ಪಡುವದಕ್ಕೆ ಇನ್ನಷ್ಟು ಅಡ್ಡಿಯಾಯಿತು; ಇಂತಿರಲವನು 11 ವರುಷವೇ ಎಲ್ಲಾ ದುರ್ಬೋಧನೆಗೆ ತನ್ನ ಕಿವಿ ಮುಚ್ಚಿ ಕೊಂಡಿದ್ದನು. ಕ್ರಿ. ಶ. 298ನೇ ವರುಷ ಗಲೇರಿಯನೆಂಬ ಆ ನೀಚನು ತನ್ನ ಮಾವನ ಸಮ್ಮತವಿಲ್ಲದೆ, ತನ್ನ ದಂಡುಗಾರರೆಲ್ಲರು ದೇವತೆಗಳಿಗೆ ಬಲಿ ಅರ್ಪಿಸ ಬೇಕೆಂತ, ಆಜ್ಞೆ ಕೊಟ್ಟಾಗ ಅನೇಕಾನೇಕ ಕ್ರೈಸ್ತರು ಅವನ ಸೇನೆ ಬಿಟ್ಟು ಬಿಟ್ಟರು. ಬಳಿಕ ಕ್ರಿ. ಶ. 303ನೇದರಲ್ಲಿ ಅವನೂ ಅವನ ಮಾವನೂ ಸಣ್ಣ ಅಸಿಯದ ಶೀಮೆಯಾದ ಬಿಥೂನಿಯದ ನೀಕೊಮೇದೀಯವೆಂಬ ಪಟ್ಟಣದಲ್ಲಿ ಇರುವಷ್ಟರೊಳಗೆ ತನ್ನ ಮಾವನನ್ನು ಕ್ರೈಸ್ತರಿಗೆ ಹಿಂಸೆ ಮಾಡುವದಕ್ಕೆ ಒಡಂಬಡಿಸುವದು ಗಲೇರಿಯನಿಗೆ ಮೊದಲಿನ ಸರ್ತಿ ಕೈಗೂಡಲು, ಅಲ್ಲಿಯ ಕ್ರೈಸ್ತ ಮುಖ್ಯ ದೇವಾಲಯವನ್ನೂ ಅದರೊಳಗಿನ ಕ್ರೈಸ್ತ ಗ್ರಂಥಗಳನ್ನೂ ದೇವತೆಗಳದೊಂದು ಹಬ್ಬದಿನದಲ್ಲಿ ನಶಿಸ ಬೇಕೆಂದು, ಮೂರ್ತಿಪೂಜಕರಿಗೆ ಅಪ್ಪಣೆಯಾಯಿತು; ಆ ದಿನದಲ್ಲಿ ದಿಯೊಕ್ಲೇತಿಯಾನನಾದರೂ ತನ್ನ ಮೇಲಾಳುಗಳನ್ನು ಆ ನಾಶನಕಾರ್ಯಕ್ಕೆ ಕಳುಹಿಸಿದನು. ಮತ್ತು ತಡವಿಲ್ಲದೆ ಮರುದಿವಸ ರಾಜಾಜ್ಞೆ ಆದದ್ದೇನಂದರೆ—ಕ್ರೈಸ್ತರ ದೇವಾರಾಧನಸಂಘಗಳು ಇನ್ನು ನಡೆಯ ಬಾರದು; ಎಲ್ಲಾ ಕ್ರೈಸ್ತ ದೇವಾಲಯಗಳನ್ನು ಕೆಡಿಸ ಬೇಕು; ಪರಿಶುದ್ಧ ಬರಹದ ಕ್ರೈಸ್ತ ಗ್ರಂಥಗಳನ್ನೆಲ್ಲಾ ಸುಡ ಬೇಕು; ಉದ್ಯೋಗವಿದ್ದ ಕ್ರೈಸ್ತರು ಕ್ರಿಸ್ತನನ್ನು ಬಿಟ್ಟಾಡದಿದ್ದರೆ ಅದನ್ನು ಕಳಕೊಳ್ಳುವರು; ಗುಲಾಮರಲ್ಲಿ ಕ್ರೈಸ್ತರೆನ್ನಿಸುವ ಅಂಥವರು ಎಂದಿಗೂ ಬಿಡುಗಡೆ ಹೊಂದ ಕೂಡದು; ಕ್ರಿಸ್ತನನ್ನು ಅಲ್ಲಗಳೆಯಲೊಲ್ಲದ

ಯಾವ ಸ್ಥಿತಿಯ ಕ್ರೈಸ್ತರ ಮೇಲೆಯೂ ಪೀಡಾಯಂತ್ರಗಳನ್ನು ಪ್ರಯೋಗಿಸ ಬೇಕು.—ಈ ಆಜ್ಞೆಯದೊಂದು ಪತ್ರಿಕೆಯು ಆ ಪಟ್ಣದಲ್ಲಿ ಒಂದು ಕಂಭಕ್ಕೆ ಹಚ್ಚಿರಲಾಗಿ, ತಾನು ಮಾಡುವದೇನೆಂತ ಚನ್ನಾಗಿ ಅರಿಯದ ಒಬ್ಬ ಕ್ರೈಸ್ತನು ಅದನ್ನು ಕಿತ್ತು ತೆಗೆದಾಗ ಅವನನ್ನು ತತ್ಕ್ಷಣವೇ ಬೆಂಕಿಯಲ್ಲಿ ಸುಟ್ಟರು; ಅವನು ಮುಖದಲ್ಲಿ ಎಳೆ ನಗೆಯಾಗಿ ತೀರಿದನು. ಸ್ವಲ್ಪ ಕಾಲದ ಮೇಲೆ ನೀಕೊಮೇದೀಯದ ಅರಮನೆಯ ಒಂದು ಪಾಲು ದಹಿಸಲಾಗಿ, ಅದರ ಅಪರಾಧವನ್ನು ಅಲ್ಲಿಯ ಕ್ರೈಸ್ತರ ಮೇಲೆ ಸುಳ್ಳಿನಿಂದ ಸ್ಥಾಪಿಸ ಪೇಚಾಡಿ, ಸುಮ್ಮನೇ ಅನೇಕರನ್ನು ಪೀಡಿಸಿ, ಅನೇಕರನ್ನು ಕೊಂದರು. ಸಾಮ್ರಾಜ್ಯದ ಸರ್ವ ಕ್ರೈಸ್ತರಲ್ಲಿ ವಿರಳರು ಪರಿಶುದ್ಧ ಬರಹದ ಗ್ರಂಥಗಳನ್ನು ಅಧಿಕಾರಸ್ಥರಿಗೆ ತಂದು ಕೊಟ್ಟದ್ದು ಸರಿ; ಆದರೆ ಹೇರಳರು ಪೀಡೆಗೂ ಮರಣಕ್ಕೂ ಅಂಜದೆ, ಅವನ್ನು ಇಟ್ಟು ಕೊಂಡಿರುವರು. ಅಧಿಕಾರಸ್ಥರು ಪಟ್ಣಗಳ ಬಾಗಿಲುಗಳಲ್ಲಿ ಕಾವಲನ್ನಿರಿಸಿ, ಕ್ರೈಸ್ತರ ಮನೆಗಳನ್ನು ಝಡತಿ ಮಾಡಿಸಿ, ಯಾರಲ್ಲಿ ಅಂಥ ಗ್ರಂಥವು ಶಿಕ್ಕುತ್ತದೋ, ಅವರನ್ನು ಕೊಲ್ಲಿಸುವರು; ಬಹು ದೇವಾಲಯಗಳನ್ನು ಹಾಳು ಗೈಯುವರು. ಅದೇ 303ನೇ ವರುಷದಲ್ಲಿ, ಕ್ರೈಸ್ತರನ್ನು ವ್ಯರ್ಥವಾಗಿ ಹಿಂಸಿಸುವದಕ್ಕೆ, ಇನ್ನೂ ಎರಡು ರಾಜಾಜ್ಞೆಗಳು ಬಂದವು;—ಸಕಲ ಸಭೋದ್ಯೋಗಸ್ಥರ ಮೇಲೆ ರಾಜದ್ರೋಹದ ಸಂಶಯವಿರುವದರಿಂದ ಅವರನ್ನು ಶೆರೆಮನೆಗೆ ಹಾಕ ಬೇಕೆಂಬದು ಒಂದು; ಆ ಸಭೋದ್ಯೋಗಸ್ಥರು ಮೂರ್ತಿಗಳಿಗೆ ಬಲಿ ಅರ್ಪಿಸುವದಕ್ಕೆ ಅವರನ್ನು ಸಕಲ ವಿಧದ ಬಲಾತ್ಕಾರದಿಂದ ಹ್ಯಾಗೂ ನಡಿಸ ಬೇಕೆಂಬದು ಮತ್ತೊಂದು. ಸಭೋದ್ಯೋಗಿಗಳನ್ನು ಕುರಿತು ಮಾತ್ರ ಹೊರಟ ಈ ಕಡೇ ಆಜ್ಞೆಯು ಕ್ರಿ. ಶ. 304ನೇದರಲ್ಲಿ ಸಾಮ್ರಾಜ್ಯದ ಸಕಲ ಕ್ರೈಸ್ತರನ್ನು ಕುರಿತು ಪ್ರಕಟಿಸಲಾಯಿತು. ಅಂದು ಕ್ರೈಸ್ತರಿಗೆ ಪ್ರಾಣಹಿಂಸೆಯು ಮಿತಿ ಇಲ್ಲದೆ ದೊಡ್ಡದಾಯಿತು; ನೀಚರಿಗೆ ಮಾತ್ರ ತಕ್ಕಂಥ, ಅತ್ಯಸಹ್ಯವಾದಂಥ ಶೆರೆಮನೆಗಳೆಲ್ಲಾ ಬೇಗ ಸಭೆಗಳ ಅಧ್ಯಕ್ಷರಿಂದಲೂ ಹಿರಿಯರಿಂದಲೂ ಸೇವಕರಿಂದಲೂ ಅಧ್ಯಯನಿಕರಿಂದಲೂ[1] ಸಾಧಾರಣ ಸಭ್ಯರಿಂದಲೂ ತುಂಬಾದವು.

ಈ ಹೊಸ ಹಿಂಸೆಯ ಆರಂಭದಲ್ಲಿಯೇ ನೀಕೊಮೇದೀಯದ ಅರಮನೆಯಲ್ಲೊಬ್ಬ ಉದ್ಯೋಗಿಯಾಗಿರುವ ಪೆತ್ರನೆಂಬ ಕ್ರೈಸ್ತನನ್ನು ಬಾರುಗಳಿಂದ ಹೊಡಿಸಿ, ಅವನ ಘಾಯಗಳಿಗೆ ಉಪ್ಪನ್ನೂ ಹುಳೀ ರಸವನ್ನೂ ಹಾಕಿದರೂ ಅವನು ವಿಶ್ವಾಸದಲ್ಲಿ ದಾರ್ಢ್ಯನಾಗಿರಲು, ಅವನನ್ನುರಿಗೆಂಡಗಳ ಮೇಲೆ ತಡೆತಡೆದು ಸುಟ್ಟು, ಕೊಂದರು. ಈ ಮುಂತಾದ ಅತಿ ಕ್ರೂರ ರೀತಿಯಿಂದ ಕ್ರೈಸ್ತರಲ್ಲಮಿತರನ್ನು ಒಬ್ಬನ ಹಿಂದೆ ಒಬ್ಬನನ್ನು ಪ್ರತ್ಯೇಕವಾಗಿ ಕೊಲ್ಲುವದಕ್ಕೆ ಹಿಂಸಕರು ದಿನಗತಿಯಲ್ಲಿ

1) 94ನೇ ಪಾನು ನೋಡು.

ಬೇಸರ ಪಟ್ಟು, ದೊಡ್ಡ ಚಿತೆಗಳನ್ನು ಜ್ವಲಿಸಿ, 100 ಜನ ಕ್ರೈಸ್ತರಾದರೂ ಇರುವ ಗುಂಪುಗಳನ್ನೇ ಅವವುಗಳೊಳಗೆ ದೊಬ್ಬಿ ಹಾಕುವರು; ಮತ್ತೊಬ್ಬರ ಕಾಲಿಗೆ ಭಾರವಾದ ಗುಂಡುಕಲ್ಲು ಕಟ್ಟಿ, ಅವರನ್ನು ಸಮುದ್ರದೊಳಗೆ ಮುಳುಗಿಸಿ ಬಿಡುವರು. ಆದರೆ ಹಿಂಸೆಯು ಎಷ್ಟು ಹೆಚ್ಚಾಯಿತೋ, ಅಷ್ಟೇ ಹೆಚ್ಚಾಗಿ ಕ್ರೈಸ್ತರ ವಿಶ್ವಾಸಸ್ಥೈರ್ಯವು ಶೋಭಿಸಿತು.

ಆಫ್ರಿಕ ಖಂಡದಲ್ಲಿ ಅಂದು ನಡೆದ ಹಿಂಸಕಕ್ರಿಯೆಗಳ ವಿಧದ ಸಂಕ್ಷೇಪವರ್ತಮಾನ ಏನಂದರೆ—ಐಗುಪ್ತದಲ್ಲಿ ಕ್ರೈಸ್ತ ಕುಟುಂಬಗಳನ್ನೇ ಒಟ್ಟಿಗೆ ಪೀಡಿಸಿ, ಅಗ್ನಿಯಿಂದಲಾಗಲಿ ಜಲದಿಂದಲಾಗಲಿ ಖಡ್ಗದಿಂದಲಾಗಲಿ ಸಂಹರಿಸುವರು; ಅದಲ್ಲದೆ ಕೆಲವರನ್ನು ಹಸಿವೆ ಪಡಿಸಿ, ಕೆಲವರನ್ನು ಕ್ರೂಜಿಸಿ ಕೊಲ್ಲುವರು. ಅಲೆಕ್ಸಂದರೀಯ ಪಟ್ಣದಲ್ಲಿ ಹಲವು ಮಂದಿ ವಿಶ್ವಾಸಿಗಳ ಕೈ ಹಿಂದಕ್ಕೆ ಬಾಗಿಸಿ, ಹೆಡೆ ಗಟ್ಟಿ, ಮೈಸಂದುಗಳನ್ನೆಲ್ಲಾ ಜಗ್ಗಿ ತಪ್ಪಿಸುವರು; ಮತ್ತೊಬ್ಬರ ಮೈಮಾಂಸವನ್ನೆಲ್ಲಾ ಕಬ್ಬಿಣದ ಮೊಳೆಗಳಿಂದ ಕಿತ್ತು ಬಿಡುವರು; ಬೇರೊಬ್ಬರನ್ನು ಒಂದೇ ಕೈಗೆ ಹಗ್ಗ ಕಟ್ಟಿ ತೂಗಿಸಿ, ಅವರ ಸಂದುಗಳನ್ನೆಲ್ಲಾ ಕಳಚಿ ಬಿಡುವರು; ಇನ್ನೊಬ್ಬರ ಮೇಲೆ ಪೀಡಾಯಂತ್ರಗಳನ್ನು ಹೂಡಿದ ಬಳಿಕ ಅವರ ಘಾಯಗಳನ್ನು ತಿರಿಗಿ ಮಾಯಿಸಿ, ಅವರನ್ನು ಹೊಸತಾಗಿ ಪೀಡಿಸುವರು. ಆ ಪಟ್ಣಕ್ಕೆ ತೆಂಕಣದಲ್ಲಿ ಥೇಬೆ ಎಂಬ ಪಟ್ಣವಿರುವ ಥೇಬಾಯಿಸ್ ನಾಡಿನಲ್ಲಿ ಕ್ರೈಸ್ತರ ಮೈಯೆಲ್ಲವನ್ನು ಸಮುದ್ರದ ಚಿಪ್ಪುಗಳಿಂದ ಗೀರಿ, ಅವರನ್ನು ಅಳಿಸುವರು; ಕ್ರೈಸ್ತ ಸ್ತ್ರೀಯರನ್ನು ಪೂರಾ ಬತ್ತಲೆ ಮಾಡಿ, ಒಂದು ಕಾಲು ಕಟ್ಟಿ ತೂಗ ಹಾಕುವರು; ಮತ್ತೊಬ್ಬ ಕ್ರೈಸ್ತರ ಒಂದೊಂದು ಕಾಲನ್ನು ಒಂದೊಂದು ಗಿಡಕ್ಕೆ ಕಟ್ಟಿ, ಆ ಗಿಡಗಳನ್ನು ಬೊಗ್ಗಿಸಿ, ಹೀಗೆ ಅವರನ್ನು ಶೀಳಿ ಬಿಡುವರು.

ಮೆಸೊಪೊತಮಿಯದಲ್ಲಿ[1] ಕ್ರೈಸ್ತರ ಕಾಲು ಕಟ್ಟಿ, ತೂಗ ಹಾಕಿ, ಅವರ ತಲೆಯ ಕೆಳಗೆ ಹಶಿ ಕಟ್ಟಿಗೆಯ ಹೊಗೆಯುವ ಬೆಂಕಿ ಹತ್ತಿಸುವದರಿಂದ ಅವರನ್ನು ಮಡಿಸುವರು.

ಸಣ್ಣ ಅಸಿಯದಲ್ಲಿ ಆದದ್ದೇನಂದರೆ—ಪೊಂತ ಪ್ರದೇಶದಲ್ಲಿ ಹಿಂಸಕರು ಚೂಪಾದ ಮೊಳೆಗಳಿಂದ ಕ್ರೈಸ್ತರ ಒಂದೊಂದು ಉಗುರಿನ ತುದಿ ಹಿಡಿದು ಬೆರಳುಗಳನ್ನು ಚುಚ್ಚಿ, ತೂತು ಮಾಡಿ, ಅವರ ಬೆನ್ನ ಮೇಲೆ ಶೀಸವನ್ನು ಕರಗಿಸಿ ಸುರಿಯುವರು; ಕ್ರೈಸ್ತ ಕನ್ಯೆಗಳನ್ನು ಇವರಿಗೆ ಕ್ರೂರ ಮರಣಕ್ಕಿಂತ ಹೆಚ್ಚಿನದಾದ ಭಯಂಕರ ಪೀಡೆ ಪಡಿಸುವರು. ಪಿಸಿದಿಯವೆಂಬ ಶೀಮೆಯ ಅಂತಿಯೊಖೀಯದಲ್ಲಿ[2] ರಕ್ತಸಾಕ್ಷಿಗಳನ್ನು ಒಲೆಯ ಮೇಲಿಟ್ಟು ಸಾವಕಾಶದಿಂದ ಕರಿಯೋಣವು ಧಾರಾಳವಾಗಿ

1) 74ನೇ ಪಾನು. 2) ಅಪೊ. ಕ್ರಿ. 13, 14. 50; 2ನೇ ತಿಮೊ. 3, 11.

ನಡೆಯುವದು. ಕಪ್ಪದೊಕಿಯ ಪ್ರದೇಶದಲ್ಲಿ ಅವರ ಕಾಲನ್ನು ಮುರಿಯೋಣವು ನಡೆಯುವದು. ಫ್ರುಗಿಯ ಪ್ರದೇಶದಲ್ಲಿ ಕ್ರೈಸ್ತರು ಮಾತ್ರ ಇರುವ ಒಂದು ಪಟ್ಟದ ಸುತ್ತಲು ಒಮ್ಮೆ ದಂಡುಗಾರರನ್ನು ನಿಲ್ಲಿಸಿ, ಅದಕ್ಕೆ ಕಿಚ್ಚು ಹಾಕಿ, ಎಲ್ಲಾ ನಿವಾಸಿಗಳನ್ನು, ಹೆಂಡರು ಮಕ್ಕಳನ್ನು ಸಹ, ಸುಟ್ಟು ಬಿಟ್ಟರು.—ಆ ಸಮಯ 34 ವರುಷದವನಾಗಿದ್ದು ಪಲೇಸ್ತೀನದ ಕೈಸರೈಯದಲ್ಲಿ ಬದುಕುತ್ತಿರುವ ಸಭಾಬೋಧಕನೂ ಸಭಾಚರಿತ್ರಗಾರನೂ ಆದ ಆ ಯುಸೆಬಿಯನು[1] ಆಗಿನ ಹಿಂಸೆ ಕಂಡು, ಬರೆದದ್ದೇನಂದರೆ—ಕೊಲೆಯಿಂದ ಹಿಂಸಕರ ಕತ್ತಿಗಳು ಮೊಂಡಾಗಿ, ಸವೆಯುವವು; ಕೊಲೆ ಮಾಡಲಿಕ್ಕಿಟ್ಟಿರುವ ಆಳುಗಳು ಕೈ ದಣಿದು ಹೋಗಿ, ಇನ್ನು ಸರ್ತಿಯ ಮೇಲೆ ಕೊಲ್ಲುವರು; ಆದರೂ ರಕ್ತಸಾಕ್ಷಿಗಳಾಗುವ ಕ್ರೈಸ್ತರು ತಮ್ಮ ಪ್ರಾಣ ಬಿಡುವ ತನಕವೇ ಸರ್ವತ್ರಾಣಿದೇವರ ಸ್ತೋತ್ರಕ್ಕಾಗಿ ಕೀರ್ತನೆಗಳನ್ನು ಹಾಡುತ್ತಿರುವರು.— ಸಣ್ಣ ಅಸಿಯದಲ್ಲಿ ಒಂದೇ ತಿಂಗಳೊಳಗೆ ಒಮ್ಮೆ 15,000 ಕ್ರೈಸ್ತರು ರಕ್ತಸಾಕ್ಷಿಗಳಾದರು. ಯುಸೆಬಿಯನ ಬಳಿಕೆಯವರಾಗಿ ಆ ವೇಳೆ ರಕ್ತಸಾಕ್ಷಿಗಳಾದ 13 ಮಂದಿ ದೊಡ್ಡ ಅಧ್ಯಕ್ಷರ ಹೆಸರು ಅವನ ಸಭಾಚರಿತ್ರದಲ್ಲಿ ಇನ್ನೂ ಉಳಿದವೆ. ಕ್ರೈಸ್ತರ ಹಿಂಸಕರು ಕೊಲ್ಲುವದಕ್ಕೆ ಸ್ವಲ್ಪ ಬೇಸರ ಪಡಲಿಕ್ಕೆ ಹತ್ತಿದಾಗ ಅವರ ಕಣ್ಣುಗಳನ್ನು ತೋಡುವರು, ಅಥವಾ ಅವರ ಒಂದು ಕಾಲನ್ನು ಕಡಿಯುವರು, ಅಷ್ಟೇ; ಹೀಗೆ ಲೆಖ್ಖವಿಲ್ಲದವರನ್ನು ಕುರುಡರೂ ಕುಂಟರೂ ಆಗ ಮಾಡಿ, ಬಹುಶಃ ಅವರನ್ನು ಗಣಿಗಳಲ್ಲಿಯ ಕಷ್ಟಕ್ಕೆ ಕಳುಹಿಸುವರು. ಅಂದು ಕೈಸರರು, ಸಾಮ್ರಾಜ್ಯವನ್ನು ಅಳಿಸುತ್ತಿದ್ದ ಕ್ರೈಸ್ತರ ಹೆಸರು ಹಾಳಾಯಿತು! ಎಂತಾಗಲಿ, ಕ್ರೈಸ್ತತ್ವದ ಅಪಬೋಧನೆಯು ಎಲ್ಲಿಯೂ ಹಾಳಾಯಿತು! ಎಂತಾಗಲಿ, ಸಂತೇ ಬೈಲುಗಳಲ್ಲಿ ಶಿಲಾಶಾಸನಗಳನ್ನು ಕೆತ್ತಿಸಿ, ಉಲ್ಲಾಸ ಪಟ್ಟರೂ ಹಿಂಸೆ ಇದ್ದಲ್ಲಿಯ ಕ್ರೈಸ್ತರ ಬಲವು ರವೆಯಷ್ಟಾದರೂ ಕುಂದಿದ್ದಿಲ್ಲ; ಮತ್ತು ಸಾಮ್ರಾಜ್ಯದ ಪಶ್ಚಿಮ ಭಾಗದಲ್ಲಿ, ಗಲ್ಲಿಯದಲ್ಲಿಯೂ ಸ್ಪಾನಿಯದಲ್ಲಿಯೂ ಬ್ರಿತನ್ನಿಯದಲ್ಲಿಯೂ, ಆಳುವ ಕೊನ್ಸ್ತಂತಿಯ ಖ್ಲೋರನೆಂಬ ಸಾಧು ಅಧಿಕಾರಿಯು[2] ಕೆಲವು ದೇವಾಲಯಗಳನ್ನು ಕೆಡವಿದ್ದಲ್ಲದೆ ಕ್ರೈಸ್ತರಿಗೆ ತನ್ನ ಕೈಯಲ್ಲಿ ಆಗುವಷ್ಟು ಆಶ್ರಯ ಕೊಡುತ್ತಾ ಬಂದಿದ್ದನು.

ಕ್ರಿ. ಶ. 305ನೇ ವರುಷದಲ್ಲಿ ಸ್ವಾಭಿಮಾನಾಶೆಯುಳ್ಳ ಆ ಗಲೇರಿಯನು ಒಂದು ರೋಗದಿಂದ ಬುದ್ಧಿ ಕಡಿಮೆಯಾದ ದಿಯೊಕ್ಲೇತಿಯಾನನನ್ನು ಕೈಸರತ್ವವ ಕೊಟ್ಟು ಬಿಡಲಿಕ್ಕೆ ಒಡಂಬಡಿಸಲಾಗಿ, ದಿಯೊಕ್ಲೇತಿಯಾನನ ಗೆಳೆಯನಾದಂಥ ಮಕ್ಸಿಮಿಯಾನನು[3] ಸಹ ತನ್ನ ಉದ್ಯೋಗ ವಿಸರ್ಜಿಸಿದನು. ಆಗ ಗಲೇರಿಯನು ತನ್ನ ನೆಂಟನಾದ ಮಕ್ಸಿಮಿನನನ್ನು, ಅಸಿಯದಲ್ಲಿ ಸಹಾಯಕೈಸರನೆಂತ, ನೇಮಿಸಿ

1) 100ನೇ ಪಾನು. 2) 123ನೇ ಪಾನು. 3) 123ನೇ ಪಾನು.

ದನು. ಮಕ್ಸಿಮಿಾನನು ಗಲೇರಿಯನ ಹಾಗೆ ದನ ಕಾಯುವವನೊಬ್ಬನ ಮಗನು; ಅವನು ಮಹಾ ಹೊಟ್ಟೆಬಾಕನು; ದಿನ ಒಂದಕ್ಕೆ 40 ಸೇರುತೂಕದ ಮಾಂಸ ತಿಂದು, ಒಂದು ಕೊಡಕ್ಕಿಂತ ಹೆಚ್ಚು ದ್ರಾಕ್ಷಾರಸ ಕುಡಿಯುವನು. ಕ್ರಿ. ಶ. 306ನೇ ವರುಷ ಮಕ್ಸಿಮಿಯಾನನ ಮಗನಾದಂಥ ಮಕ್ಸೆಂತಿಯನು ಕಲಹವೆಬ್ಬಿಸಿ, ರೋಮಪುರದಲ್ಲಿ ಆಳಲಿಕ್ಕೆಸಗಿದನು; ಇವನು ಕಾಲಜ್ಞಾನ ಸಂಪಾದನದ ನಿಮಿತ್ತ ಬಹಳ ಮಂತ್ರತಂತ್ರಾಚರಣವುಳ್ಳವನಾಗಿ, ಬಸುರಾದ ಸ್ತ್ರೀಯರ ಹೊಟ್ಟೆಯನ್ನು ತನ್ನ ಹುಚ್ಚು ಜ್ಞಾನಿಕತ್ವಕ್ಕೋಸ್ಕರ ಶೀಳಿ, ಹೊಸ್ತಾಗಿ ಹುಟ್ಟಿದ ಶಿಶುಗಳ ಕರುಳು ಸಹ ಕಿತ್ತು ಶೋಧಿಸಿ, ಇತ್ಯಾದಿ ನೀಚ ಕಾರ್ಯಗಳನ್ನು ನಡಿಸುತ್ತಾ ಬಂದರೂ ಆರಂಭದಲ್ಲಿ ತನ್ನ ಅಧಿಕಾರದ ಭದ್ರತೆಯ ಅಭಿಲಾಷೆಯಿಂದ ಕ್ರೈಸ್ತರನ್ನು ಹಿಂಸಿಸಲಿಲ್ಲ.

ಮಕ್ಸಿಮಿಾನನ ಪ್ರೇರೇಪಣೆಯಿಂದ ಗಲೇರಿಯನ ಕ್ರೂರತ್ವವು ಇನ್ನೂ ಬೆಳದು ಬಂದ ಕಾರಣ ಸಾಮ್ರಾಜ್ಯದ ಪೂರ್ವ ಭಾಗದಲ್ಲಿ ಕ್ರೈಸ್ತರ ಮೇಲಣ ಹಿಂಸೆಯು ನಿಲ್ಲದಲೇ ಹೆಚ್ಚಾಗುತ್ತಾ ಇತ್ತು. ಕ್ರಿ. ಶ. 308ನೇದಕ್ಕೆ ಅಲ್ಲಿ ರಾಜಾಜ್ಞೆಯು ಆದದ್ದೇನಂದರೆ—ಪೇಟೆಗೆ ಮಾರಲಿಕ್ಕೆ ಬರುವ ಎಲ್ಲಾ ಆಹಾರದ ಮೇಲೆ ದೇವತಾಯಜ್ಞಗಳ ನೀರನ್ನೂ ದ್ರಾಕ್ಷಾರಸವನ್ನೂ ಹಾಕಿ, ಹೀಗೆ ಕ್ರೈಸ್ತರನ್ನು ಮತಭ್ರಷ್ಟರಾಗ ಮಾಡಿಸ ಬೇಕು.—ಯುಸೆಬಿಯು ಸಭಾಚಾರಿತ್ರಕನಿಗೆ ಪಲೇಸ್ತೀನದ ಆ ಕೈಸರೈಯ ಪಟ್ಣದಲ್ಲಿ ಪಂಫೂಲನೆಂಬ ಪ್ರಾಣಗೆಳೆಯನಿರುವನು; ಅವನು ಅಲ್ಲಿಯ ಹಿರಿಯರಲ್ಲೊಬ್ಬನು; ಅವನನ್ನು ಕ್ರಿ. ಶ. 308ನೇ ವರುಷ ಬಂಧನದಲ್ಲಿಟ್ಟು, ಮರುವರುಷ ರಕ್ತಸಾಕ್ಷಿಮರಣ ಪಡಿಸಲು, ಯುಸೆಬಿಯನು, ತನಗೆ ಸಹ ಜೀವನಷ್ಟ ಬರುವ ಹಾಗಾಯಿತೆಂತ, ತಿಳಿದು, ಐಗುಪ್ತಕ್ಕೆ ಓಡಿ ಹೋಗಿ, ಅಲ್ಲಿ ಕ್ರೈಸ್ತರಿಗೊದಗುತ್ತಿರುವ ದುಸ್ತರ ಹತ್ಯವ ಸಹ ಕಣ್ಣಾರೆ ಕಂಡು, ಇತರ ಹೇರಳ ಕ್ರೈಸ್ತರ ಸಹಿತಲೊಮ್ಮೆ ತನ್ನ ಸತ್ಸಾಕ್ಷಿಯ ನಿಮಿತ್ತ ಶೆರೆಗೆ ಹೋಗ ಬೇಕಾಯಿತು.—ಕ್ರಿ. ಶ. 310ನೇ ವರುಷ ಪಲೇಸ್ತೀನದಲ್ಲಿ ಒಂದು ಭಾರಿ ಒಂದೇ ಹೊತ್ತಿನಲ್ಲಿ 39 ಜನ ವಿಶ್ವಾಸಿಗಳ ತಲೆ ಹಾರಿಸಿದರು. ಇವರ ರಕ್ತವು ಚಲ್ಲಿ ಹೋದ ಮೇಲೆ ಗಲೇರಿಯನ ಕಡೆಯ ಹಿಂಸೆಯು ತೀರಿತು. ಹ್ಯಾಗಂದರೆ, ಅವನು ಒಂದು ಕಠಿಣ ರೋಗದವನಾಗಿದ್ದನು; ಅವನ ಮೈಯ ಕೆಳಭಾಗವೆಲ್ಲಾ ಕೊಳೆಯಲಿಕ್ಕೆ ಹತ್ತಿತ್ತು; ಅವನ ಹುಣ್ಣುಗಳಲ್ಲಿ ಹುಟ್ಟಿದ ಹೇನುಗಳು ಅವನನ್ನು ತಿನ್ನುತ್ತಾ ಇದ್ದವು[1]; ಅವನಿಂದ ಹೊರಡುವ ನಾತವು ಅರಮನೆಯನ್ನೆಲ್ಲಾ ವ್ಯಾಪಿಸಿ, ಅದರ ಹೊರಗೂ ಹರಿಯುತ್ತಾ ಇತ್ತು; ಆ ನಾತಕ್ಕೆ ಹೇಸಿ ಕೊಂಡು ಓಡಿ ಹೋಗುವ ವೈದ್ಯರನ್ನು ಅವನು ಕೊಲ್ಲಿಸುವನು. ಆದರೆ ಕಾಲಕ್ರಮೇಣ ಅವನು, ಈ ದುಷ್ಟ ವ್ಯಾಧಿಯಿಂದ ದೇವರು ನನ್ನನ್ನು ಶಿಕ್ಷಿ

1) 37ನೇ ಪಾನು ಸರಿ ನೋಡು.

ಸುತ್ತಾನೆಂದು, ತಿಳಿದು ಕೊಂಡು, ಕ್ರೈಸ್ತರನ್ನು ಸಂಹರಿಸುವದು ಮನುಷ್ಯರೊಳಗೆ ಯಾರಿಂದಲೂ ಆಗಲಿಕ್ಕಿಲ್ಲ! ಎಂದು, ಅನುಭವಿಸಿ, ಕ್ರಿ. ಶ. 311ನೇದರಲ್ಲಿ, ತಾನು ಕೊಟ್ಟ ಹಿಂಸಾಜ್ಞೆಗಳು ಇನ್ನು ಮುಂದೆ ನಡೆಯ ಬಾರದೆಂದು, ಸಾರಿಸಿದನು. ಈ ಸಾರೋಣದಲ್ಲಿ ಅವನು ಹೇಳಿದ್ದೇನಂದರೆ—ಕ್ರೈಸ್ತರನ್ನು ಪಿತೃಗಳ ಮತಕ್ಕೆ ತಿರಿಗಿ ನಡಿಸ ಬೇಕೆಂಬ ನಮ್ಮ ಆಲೋಚನಾರ್ಥದ ಪ್ರಯತ್ನವು ಕೈಗೂಡಲಿಲ್ಲ, ಅದರಿಂದ ಕ್ರೈಸ್ತರಲ್ಲದವರು ತಮ್ಮ ದೇವತೆಗಳಿಗೆ ಶಾಂತಿಯೊಡನೆ ಆರಾಧನೆ ಮಾಡಲಾರದ ಹಾಗಾಯಿತಷ್ಟೇ; ಕ್ರೈಸ್ತರು ಸಾಮ್ರಾಜ್ಯಕ್ಕೆ ದ್ರೋಹಕಾರ್ಯಗಳನ್ನು ನಡಿಸದಿದ್ದರೆ ಅಗತ್ಯವಾಗಿ ಅವರನ್ನು ತಾಳಿ ಕೊಂಡು ಬರ ಬೇಕು; ಅವರು ದೇವರ ಹತ್ತರ ತಮ್ಮ ರಕ್ಷಣವನ್ನು ಬೇಡಿ ಕೊಳ್ಳುವಂತೆ ಸಾಮ್ರಾಜ್ಯದ ಮತ್ತು ಕೈಸರನಾದ ನಮ್ಮ ರಕ್ಷಣವನ್ನು ಸಹ ಬೇಡಿ ಕೊಳ್ಳುತ್ತಾ ಇರಲಿ[1]!—ಗಲೇರಿಯನು ಅದೇ ವರುಷದಲ್ಲಿ ಸತ್ತನು.

8 ವರುಷ ಎಡೆ ಬಿಡದಲೇ ವಾಚಾತೀತ ಕ್ರೂರತ್ವದಿಂದ ನಡೆಯುತ್ತಿದ್ದು ಕ್ರಿ. ಶ. ಆ 311ನೇದರಲ್ಲಿ ಹೆಚ್ಚು ಕಡಿಮೆ ಮುಗಿದ ಆ ಹಿಂಸಾಕಾಲದೊಳಗೆ ಕ್ರೈಸ್ತರ ಭಕ್ತಿಯೂ ಇದಕ್ಕೆ ಬೇರು ಆದ ಕ್ರಿಸ್ತನ ತ್ರಾಣವೂ ಅತುಲ್ಯ ಪ್ರಕಾರವಾಗಿ ಪರಿಶೋಭಿಸುತ್ತಾ ಬಂದಿದ್ದವು; ಹಿಂಸೆ ಪಟ್ಟವರಲ್ಲಿ ಅಲ್ಪ ಸ್ವಲ್ಪ ಜನರು ಮಾತ್ರ ಕ್ರಿಸ್ತನಾಥನನ್ನು ಅಲ್ಲಗಳೆದಿದ್ದರು.—ದಿಯೊಕ್ಲೇತಿಯಾನನು ಬಹು ದಿವಸ ಒಂದು ಕಠಿಣ ವೇದನೆಯುಳ್ಳ ವ್ಯಾಧಿಯಿಂದ ಪೀಡಿತನಾಗಿದ್ದು, ಕ್ರಿ. ಶ. 313ನೇ ವರುಷದಲ್ಲಿ ಸತ್ತನು; ಮಕ್ಸಿಮಿಯಾನನು 310ನೇದರಲ್ಲಿ ಉರುಲು ಹಾಕಿ ಕೊಂಡು ಅಳಿದಿದ್ದನು.

ಕ್ರಿ. ಶ. 311ನೇ ಅಬ್ದಕ್ಕೆ ಗಲೇರಿಯ ಕೈಸರನು, ಕ್ರೈಸ್ತರನ್ನು ಇನ್ನು ಮುಂದೆ ಹಿಂಸಿಸ ಬಾರದೆಂದು, ಅಪ್ಪಣೆ ಕೊಟ್ಟಾಗ ಅವನ ಸಂಗಡ ಅಸಿಯದ ಪ್ರದೇಶಗಳನ್ನಾಳುತ್ತಿದ್ದ ಮಕ್ಸಿಮಿನನು ಅದನ್ನು ಬಹಳ ಲಕ್ಷಿಸದೆ, ಕ್ರೈಸ್ತರನ್ನು ಇನ್ನೂ ವಿವಿಧೋಪದ್ರವ ಪಡಿಸುತ್ತಾ ಬಂದನು; ಆದರೂ ಅವರನ್ನು ಅತಿ ತೀಕ್ಷ್ಣವಾಗಿ ಹಿಂಸಿಸಲಿಕ್ಕೆ ಅವನಿಗೆ ಧೈರ್ಯ ಸಾಲಲಿಲ್ಲ. ಯಾಕಂದರೆ ಸಾಮ್ರಾಜ್ಯದ ಪಶ್ಚಿಮ ಭಾಗದಲ್ಲಿ ಆ ಕೊನ್ಸ್ತಂತಿಯ ಖ್ಲೋರನೆಂಬ ಕ್ರೈಸ್ತರ ಮಿತ್ರನು ಕ್ರಿ. ಶ. 306ನೇ ವರುಷಕ್ಕೆ ಮಡಿದ ಮೇಲೆ ಕೊನ್ಸ್ತಂತೀನನೆಂಬ ಕುಮಾರನು[2] ಅವನ ಉತ್ತರಾಧಿಕಾರಿಯಾಗಿ, ಕ್ರೈಸ್ತರಿಗೆ ಮಿಗಿಲೊಲುಮೆ ತೋರಿಸುವವನಾಗಿದ್ದನು; ಕ್ರಿ. ಶ. 312ನೇದಕ್ಕೆ ಇವನು ರೋಮಪುರದಲ್ಲಿಯ ಕಲಹಗಾರನಾದ ಆ ಮಕ್ಸೆಂತಿಯನನ್ನು ದಂಡಿಸಲಿಕ್ಕೆ ಹೋಗಿ, ಅವನನ್ನು ಜಯಿಸಿ, ಬಳಿಕ 308ನೇದರಲ್ಲಿ ಇಲ್ಲುರಿಕ ಪ್ರದೇಶದಲ್ಲಿ[3] ಸಹಾಯಕೈಸರನಾಗಿದ್ದ ಲಿಕಿನಿಯನೆಂಬ ತನ್ನ ಭಾವನ ಸಮ್ಮತಿಯ ಪಡ

1) 95ನೇ ಪಾನು ಸರಿ ನೋಡು. 2) 90ನೇ ಪಾನು. 3) 49ನೇ ಪಾನು ನೋಡು.

ಕೊಂಡು, ಅದೇ 312ನೇ ವರುಷದಲ್ಲಿ ಕ್ರೈಸ್ತರಿಗೆ ಹಿತವಾದದೊಂದು ಆಜ್ಞೆಯನ್ನು, ಮರುವರುಷದಲ್ಲಿ ಹೆಚ್ಚು ಹಿತವಾದ ಮತ್ತೊಂದನ್ನು ಪ್ರಕಟಿಸಿದನು. ಮಕ್ಸಿಮಿನನು ಆ ಇಬ್ಬರು ಸಹಾಯಕೈಸರರ ಬಲ ಕಂಡು, ಮೊದಲು ಎದುರಾಟ ಮಾಡಲಿಕ್ಕಂಜಿ, ಆ ಮೇಲೆ ತನ್ನ ಅಧಿಕಾರಾಭಿಲಾಷೆ ತಾಳಲಾರದೆ, ಲಿಕಿನಿಯನ ಸಂಗಡ ಯುದ್ಧಕ್ಕೆ ಗಮಿಸಿ, ಕ್ರಿ. ಶ. 313ನೇ ವರುಷದಲ್ಲಿ ಸೋತು, ಓಡಿ, ತಿರುಗುತ್ತಿರಲು, ಕಿಲಿಕಿಯ ಶೀಮೆಯ ತರ್ಸ ಪಟ್ಟದಲ್ಲಿ[1] ಮೃತನಾದನು. ತರುವಾಯ ಲಿಕಿನಿಯನು 323ನೇದರಲ್ಲಿ ಸತ್ತಾಗ ಕೊನ್ಸ್ತಂತೀನನು ಏಕಚಕ್ರವರ್ತಿಯಾದನು. ಕ್ರಿ. ಶ. 64ನೇ ವರುಷದಾರಭ್ಯ ರೋಮಿಾಯ ಕೈಸರರಿಂದ ಕ್ರೈಸ್ತರ ಮೇಲೆ ತಿರಿತಿರಿಗಿ ಉರಿಯುತ್ತಾ ಬಂದಿದ್ದ ಹಿಂಸಾಜ್ವಾಲೆಯು ಅಂದೇ ಪೂರಾಗಿ ಆರಿತು; ಶಾಂತರು ಭಾಗ್ಯವಂತರು, ಯಾಕಂದರೆ ಅವರು ಭೂಮಿಯನ್ನು ಬಾಧ್ಯಸ್ತಿಕೆಯಾಗಿ ಹೊಂದುವರೆಂಬ ಕರ್ತೃವಾಕ್ಯವು[2] ಆಗ ಘನವಾಗಿ ಪೂರೈಸಿತು.

## 11. ಅಂತಿಯೊಖೀಯದ ಇಗ್ನಾತಿಯನೆಂಬ ಅಪೊಸ್ತೊಲಿಕ ಪಿತನು.

ಪೌಲನು ಮತ್ತು ಬರ್ನಬನು ಬೋಧಕರಾಗಿದ್ದ ಸುರಿಯ ದೇಶದ ಆ ಅಂತಿಯೊಖೀಯ ಪಟ್ಟದಲ್ಲಿಯ[3] ಸಭೆಯ ಪ್ರಥಮ ಅಧ್ಯಕ್ಷನು ಯುವೊದಿಯನೆಂಬವನು. ಸುಮಾರು ಕ್ರಿ. ಶ. 68ನೇ ವರುಷದಲ್ಲಿ ಇಗ್ನಾತಿಯನೆಂಬವನು ಅವನ ಉತ್ತರೋದ್ಯೋಗಿಯಾದನು. ಇವನು ಪೆತ್ರ, ಯೋಹಾನ ಇವರಿಬ್ಬರಪೊಸ್ತಲರ ಶಿಷ್ಯರಲ್ಲೊಬ್ಬನು[4]; ಅವನಿಗೆ ಥೆಯೊಫೊರನು ಅಂದರೆ ದೇವಭರನೆಂಬ ಉಪನಾಮವು. ಅವನು ತನ್ನೊಳಗಿನ ಸಭೆಯನ್ನು ಅಪೊಸ್ತೊಲಿಕ ಪ್ರೀತಿಯಿಂದ ನೋಡುತ್ತಿರುವನು. ದೊಮಿತಿಯಾನನೆಂಬ ಕೈಸರನು[5] ಕ್ರಿ. ಶ. 81ನೇ ವರುಷ ಹಿಡಿದು ಸುರಿಯದ ಕ್ರೈಸ್ತರಿಗೆ ಸಹ ಹಿಂಸೆ ಮಾಡುವಾಗ ಇಗ್ನಾತಿಯನು, ಯೋಹಾನ ಅಪೊಸ್ತಲನು ಅಂದು ಸಣ್ಣ ಅಸಿಯದಲ್ಲಿ ಗೈಯುವಂತೆ, ಆ ಕಡೆಯ ಸಾಕ್ಷಿಗಳಿಗೂ ರಕ್ತಸಾಕ್ಷಿಗಳಿಗೂ ಧೈರ್ಯಾದರಣಗಳನ್ನು ಕೊಡುತ್ತಿದ್ದು, ವಿಶ್ವಾಸಭ್ರಷ್ಟತ್ವವು ಹುಟ್ಟದ ಹಾಗೆ ಸಭ್ಯರನ್ನು ಪರಿಪಾಲಿಸಿದನು. ಬಳಿಕ ಕ್ರಿ. ಶ. 107ನೇದಕ್ಕೆ ತ್ರಾಯಾನ ಕೈಸರನು[6] ಪಾರ್ಥರ ಸಂಗಡ ಯುದ್ಧವಾಡಲಿಕ್ಕೆ ಸೇನೆ ಕಟ್ಟಿ ಕೊಂಡು, ಅಂತಿಯೊಖೀಯಕ್ಕೂ ಬಂದು, ಅಲ್ಲಿಯ ಕ್ರೈಸ್ತರನ್ನು ಸಹ ರಾಜಮತಕ್ಕೆ ಹ್ಯಾಗೂ ತಿರಿಗಿ ಒಳ ಪಡಿಸಲಾಲೋಚಿಸಿ, ಪೀಡಿಸಲು, ಇಗ್ನಾತಿಯನು ಕೂಡ ಅವನ ಬಳಿಗೆ ಬರ

1) 46ನೇ ಪಾನು ನೋಡು. 2) ಮತ್ತಾ. 5, 5. 3) 36ನೇ ಪಾನು. 4) 99ನೇ ಪಾನು. 5) 107ನೇ ಪಾನು. 6) 112ನೇ ಪಾನು.

ಬೇಕಾಯಿತು. ಅವನು ಬಂದ ಕ್ಷಣವೇ ತ್ರಾಯಾನನು, ಒಂದು ದೆವ್ವದ ಹಾಗೆ ನನ್ನ ಆಜ್ಞೆಗಳಿಗೆದುರಿಸಿ ಮತ್ತೊಬ್ಬರನ್ನು ಅದೇ ನಾಶಕರವಾದ ಕಾರ್ಯಕ್ಕೊಡಂಬಡಿಸುವಂಥವನು ನೀನೇ? ಎಂತ, ಕೇಳಿದನು. ಅದಕ್ಕೆ ಇಗ್ನಾತಿಯನು ಶಾಂತಿಯಿಂದ ನುಡಿದ್ದೇನು—ಥೆಯೊಫೊರನನ್ನು (ದೇವವಾಹಕನನ್ನು) ಯಾರಾದರೂ, ದೆವ್ವವೆಂದು, ಹೇಳುವದಿಲ್ಲ; ದೆವ್ವಗಳು ದೇವಸೇವಕರಿಗೆ ದೂರ ಓಡಿ ಹೋಗುತ್ತವಲ್ಲ? ನಾನು ದೆವ್ವಗಳಿಗೆ ಮುನಿದು, ಅವಕ್ಕೆ ಅಸಹ್ಯನಾದ ಕಾರಣ ನನಗೆ ಆ ಹೆಸರಿಕ್ಕುತ್ತಿಯಾದರೆ ಇರಲಿ; ಹ್ಯಾಗಂದರೆ, ಸ್ವರ್ಗರಾಜನಾದ ಕ್ರಿಸ್ತನನ್ನು ಹೃತ್ತಿನೊಳಗೆ ವಹಿಸಿ ಕೊಂಡಿದ್ದು, ಅವುಗಳ ಯುಕ್ತಿ ತಂತ್ರಗಳನ್ನು ನಿರರ್ಥಕ ಗೈಯುತ್ತಿರುವೆನು.—ಹಾಗಾದರೆ, ಒಬ್ಬ ಥೆಯೊಫೊರನು ಯಾರೆಂತ, ಕೈಸರನು ಬೆಸಗೊಳ್ಳಲು, ಕ್ರಿಸ್ತನನ್ನು ಹೃದದೊಳಗೆ ವಹಿಸುವವನೇ! ಎಂದು, ಆ ಅಧ್ಯಕ್ಷನು ಮಾರುತ್ತರ ಹೇಳೋಣ, ತ್ರಾಯಾನನು—ಹಾಗಾದರೆ, ನಮ್ಮ ಶತ್ರುಗಳ ಸಹಿತ ಯುದ್ಧದಲ್ಲಿ ನಮಗೊತ್ತಾಶೆ ಈಯುವ ದೇವರುಗಳನ್ನು ನಾವು ನಮ್ಮ ಮನಸ್ಸಿನೊಳಗೆ ವಹಿಸಿ ಕೊಳ್ಳುವದಿಲ್ಲವೆಂತ, ನೆನಸುತ್ತೀಯಾ? ಎನ್ನಲಿಕ್ಕೆ, ಇಗ್ನಾತಿಯನು ಹೇಳಿದ್ದೇನಂದರೆ—ನಿನ್ನ ಮಾತಿನಲ್ಲೊಂದು ತಪ್ಪು; ನೀವು ನಂಬುವ ದೇವತೆಗಳು ದೆವ್ವಗಳೇ! ವಿಶ್ವಕರ್ತನು ಒಬ್ಬನೇ! ಮತ್ತು ಸಂರಕ್ಷಣಕರ್ತನಾದ ಯೇಸು ಕ್ರಿಸ್ತನು ಒಬ್ಬನೇ!—ಆಗ ತ್ರಾಯಾನನು, ನೀನು ಹೇಳಿದವನು ಪೊಂತಿಯ ಪೀಲಾತನ ಕಾಲದಲ್ಲಿ ಕ್ರೂಜೆಮರಣ ಪಟ್ಟವನೋ? ಎಂತ, ಕೇಳಲಾಗಿ—ಹೌದು, ಅವನೇ! ಅವನು ಪಾಪಗಳನ್ನು ಅವುಗಳ ಮೂಲಕನೊಡನೆ ಕ್ರೂಜೆಗೆ ಹಾಕಿ, ದೆವ್ವಸಂಬಂಧಿಕವಾದ ಸಕಲ ದುಷ್ಟತ್ವ ತೀರಿಸಿ, ತನ್ನನ್ನು ಹೃದಯದೊಳಗೆ ವಹಿಸಿ ಕೊಂಡಿರುವವರಿಗೆ ದೆವ್ವಗಳನ್ನು ಆಧೀನ ಮಾಡಿದ್ದಾನೆ! ಎಂದು, ಇಗ್ನಾತಿಯನು ಹೇಳಲು, ಕೈಸರನು, ಇಂತಾದರೆ ಆ ಕ್ರೂಜಿತನನ್ನು ಹೃತ್ತಿನೊಳಗೆ ಧರಿಸಿ ಕೊಂಡಿದ್ಧಿಯಾ? ಎಂಬೋಣ, ಇಗ್ನಾತಿಯನು—ಹೌದು, ನಿಶ್ಚಯ! ಯಾಕಂದರೆ, ಭಕ್ತರೊಳಗೆ ಬಂದು ವಾಸಿಸುವೆನೆಂಬದು ಕರ್ತನ ವಾಕ್ಯವೆಂತ, ನುಡಿದನು. ಅಂದು ಆ ಕ್ರೂರ ಕೈಸರನು ಅಪಹಾಸ್ಯ ಗೈದು—ಕ್ರೂಜೆಯಲ್ಲಿ ಸತ್ತ ಕ್ರಿಸ್ತನನ್ನೇ ಹೃತ್ತಿನೊಳಗೆ ಹೊತ್ತು ಕೊಂಡಿದ್ಧೇನೆಂತ ಹೇಳುವ ಈ ಇಗ್ನಾತಿಯನನ್ನು ಬಂಧಿಸಿ, ರೋಮಪುರಕ್ಕೊಯಿದು, ಅಲ್ಲಿ ಪ್ರಜಾವಿನೋದಕ್ಕಾಗಿ ಮೃಗಗಳ ಬಾಯಿಗೆ ಹಾಕ ಬೇಕೆಂತ, ಆಜ್ಞಾಪಿಸುತ್ತೇನೆಂದು, ಒದರಿದನು.

ಬಳಿಕ ಹತ್ತು ಮಂದಿ ಕಾಡುಗುಣವುಳ್ಳ ದಂಡುಗಾರರನ್ನು ಇಗ್ನಾತಿಯನ ಮೇಲೆ ಕಾವಲಿಯಾಗಿಟ್ಟು, ಅವರೊಳಗಿನೊಬ್ಬನ ಕೈಗೆ ಅವನನ್ನು ಸಂಕೋಲೆಯಿಂದ ಜೋಡಿಸಿ, ಹಡಗವನ್ನೇರಿಸಿದರು; ಹಲವರು ಕ್ರೈಸ್ತರು ಮಮತೆಯಿಂದ ಅವನ

ಸಂಗಡ ಪ್ರಯಾಣಸ್ಥರಾದರು. ತಾನಿರುವ ಹಡಗವು ಸಣ್ಣ ಅಸಿಯದ ಸ್ಮುರ್ನ ಪಟ್ಣಕ್ಕೆ ಮುಟ್ಟಿ, ಹಲವು ತಿಂಗಳು ಲಂಗರು ಹಾಕಿರುವ ಸಮಯ ಅವನು ಆ ಪಟ್ಣದ ಕ್ರೈಸ್ತ ಸಭೆಯನ್ನೂ ಅದರ ಅಧ್ಯಕ್ಷನಾಗಿರುವ ಪೊಲುಕರ್ಪನನ್ನೂ[1] ದೃಷ್ಟಿಸಲಾಗಿ, ಎಫೆಸ[2] ಮುಂತಾದ 3 ಸಭೆಗಳಿಂದಲೂ ಅನೇಕ ಕ್ರೈಸ್ತರು ಬಂದು ಕೂಡಿ, ಆ ಪ್ರಿಯ ಬೋಧಕನಿಗೆ ವಂದಿಸಿ, ಉಪಚರಿಸಿ, ಅವನು ಮಾಡುವ ಆನಂದಕರವಾದ ಪ್ರಸಂಗವ ಕೇಳಿ, ವಿಶ್ವಾಸದಲ್ಲಿ ದೃಢರಾಗುವರು. ಅಲ್ಲಿ ಸಹ ಪ್ರವರ್ತಿಸುತ್ತಿದ್ದ ಯೋಹಾನ ಅಪೊಸ್ತಲನು ಮಡಿದು, 6 ವರುಷ ಕಳೆದಿದ್ದವು. ಸ್ಮುರ್ನದಲ್ಲಿ ತಡೆಯಾಗುವಷ್ಟರೊಳಗೆ ಇಗ್ನಾತಿಯನು ಆ 3 ಸಭೆಗಳಿಗಲ್ಲದೆ ರೋಮದಲ್ಲಿಯದಕ್ಕೆ ಸಹ ಒಂದೊಂದು ರಮಣೀಯ ಪತ್ರಿಕೆ ಬರೆದು ಕಳುಹಿಸಿದನು; ರೋಮದ ಕ್ರೈಸ್ತರು ತನ್ನನ್ನು ಶೆರೆ ಬಿಡಿಸಲಿಕ್ಕೆ ಪ್ರಯತ್ನ ಪಟ್ಟಾರೆಂಬ ಅನುಮಾನದಿಂದ ಅವನವರಿಗೆ ತಿಳಿಸಿದ್ದೇನಂದರೆ—ನನ್ನ ನಿಮಿತ್ತ ಚಿಂತೆಗೊಳ್ಳ ಬೇಡಿರಿ! ಕ್ರಿಸ್ತನಿಗಾಗಿ ಸಾಯುವದೇ ಲೋಕದ ಸಕಲ ರಾಜ್ಯಗಳನ್ನಾಳುವದಕ್ಕಿಂತ ನನಗೆ ಬಹಳ ಹೆಚ್ಚು ಹಿತವಾಗಿದೆ. ನನ್ನ ಪ್ರೀತಿಯಾಗಿರುವವನು ಕ್ರೂಜೆಯಲ್ಲಿ ಸತ್ತನಲ್ಲ? ನಾನು ದೇವರದೊಂದು ಗೋಧೀ ಕಾಳು; ನಾನು ಹದವಾದದೊಂದು ರೊಟ್ಟಿಯಾಗುವಂತೆ ಮೃಗಗಳು ನನ್ನನ್ನು ಬೀಸುವಂತೆ ಮುರಿದು ಬಿಡ ಬೇಕು; ಮೃಗಗಳು ನನ್ನನ್ನು ಕೊಂದರೆ ನನ್ನ ಮರಣದಿಂದ ಮನುಷ್ಯರಲ್ಲಿ ಯಾರೂ ತೊಂದರೆ ಪಡುವದಿಲ್ಲವಲ್ಲ?—

ಸ್ಮುರ್ನದಿಂದ ಇಗ್ನಾತಿಯನನ್ನು ಸಣ್ಣ ಅಸಿಯದ ತ್ರೋಯ ಪಟ್ಣಕ್ಕೆ[3] ವೈದರು; ಅಲ್ಲಿಗೆ ಮುಟ್ಟಿದಾಗ, ಅಂತಿಯೊಖೀಯದೊಳಗಿನ ಹಿಂಸೆ ತೀರಿತೆಂತ, ವರ್ತಮಾನ ತಿಳಿದು, ಉಲ್ಲಾಸ ಪಟ್ಟು, ತ್ರೋಯದ ಸಭೆಯವರನ್ನು ಸಹ ವಿಶ್ವಾಸದಲ್ಲಿ ಬಲಗೊಳ್ಳಿಸಿ, ತನ್ನ ಹಾಗೆ ಯೋಹಾನನ ಶಿಷ್ಯನಾಗಿದ್ದ ಆ ಪೊಲುಕರ್ಪನೆಂಬ ತನ್ನ ಪ್ರಾಣಗೆಳೆಯನಿಗೂ ಎರಡು ಸಭೆಗಳಿಗೂ ಒಂದೊಂದು ಅಭೀಷ್ಟ ಪತ್ರಿಕೆ ಬರೆದು ತಲಪಿಸಲಿಕ್ಕೆ ಅನುವ ಕಂಡನು. ತದನಂತರ ಹಡಗವು ಸಣ್ಣ ಅಸಿಯದ ದಂಡೆ ಬಿಟ್ಟು, ಮಕೆದೊನಿಯಕ್ಕೆ[4] ಹೋಗಲಾಗಿ, ಅದನ್ನು ಹತ್ತಿ ಬಂದವರೆಲ್ಲರು ಈ ದೇಶವನ್ನೂ ಇದಕ್ಕೆ ಪಡುವಣ ಏಪೀರ ಶೀಮೆಯನ್ನೂ ಕಾಲುನಡೆಯಾಗಿ ದಾಟುವಷ್ಟರೊಳಗೆ ಇಗ್ನಾತಿಯನು ಅಲ್ಲ್ಯಲ್ಲಿಯ ಸಭೆಗಳಿಗೆ ಅತ್ಯಾದರ ಹುಟ್ಟಿಸಿ ಕೊಡುತ್ತಿದ್ದನು. ಹಾಗಾದರೆ, ಇಗ್ನಾತಿಯನನ್ನು ಕೊಂದು ಕ್ರೈಸ್ತತ್ವಕ್ಕೆ ಕೇಡು ಮಾಡುತ್ತೇನೆಂತ, ತ್ರಾಯಾನನು ಯೋಚಿಸಿದ್ದು ನಿರರ್ಥಕವಾದದಲ್ಲದೆ ಅದರಿಂದ ಕ್ರೈಸ್ತತ್ವವು ಹೆಚ್ಚಾಗಿ ನೆಲೆಗೊಂಡಿತು.

1) 99ನೇ ಪಾನು. 2) ಅಲ್ಲಿ ಆ ವೇಳೆ ಒನೇಸಿಮನೆಂಬವನು ಅಧ್ಯಕ್ಷನಾಗಿದ್ದು, ಸದ್ಭಕ್ತಿಯಿಂದ ವಿರಾಜಿಸುತ್ತಿದ್ದನು. 3) ಅಪೊ. ಕ್ರಿ. 16, 8; 20, 5; 2 ಕೊರಿ. 2, 12; 2 ತಿಮೊ. 4, 13. 4) 48ನೇ ಪಾನು.

ಇಗ್ನಾತಿಯನು ಏಪೀರದಲ್ಲಿ ತಿರಿಗಿ ಹಡಗವನ್ನೇರಿ ಹೋಗಿ, ಈತಲಿಯ ದೇಶದ ತೀರಕ್ಕಿಳಿದ ಮೇಲೆ ರೋಮಪುರದ ಅನೇಕ ಕ್ರೈಸ್ತರು ಅವನಿಗೆದುರ್ಗೊಂಡು ಬಂದು—ನಿನ್ನ ವಿಷಯ ಪ್ರಜೆಗೆ ವಿನಂತಿ ಮಾಡ್ಯೇವು, ಒಂದು ವೇಳೆ ನಿನ್ನನ್ನು ಬಿಡಿಸಿ ಬಿಟ್ಟೇತೆಂದು, ಹೇಳುವಲ್ಲಿ ಅವನೊಪ್ಪದೆ, ಬೇಗ ಕ್ರಿಸ್ತನ ಬಳಿಗೆ ಶೇರಲಿಕ್ಕಿರುವ ನನಗೆ ಅಡ್ಡಿ ಮಾಡ ಬೇಡಿರಿ! ಎಂದು, ನುಡಿದನು. ದಂಡಿನವರು ಅವನನ್ನು ರೋಮದ ಪ್ರತಿನಿಧಿಗೆ ಕೈವಶ ಮಾಡಿ, ತರುವಾಯ ತಡೆಯದೆ ಮೃಗರಂಗಸ್ಥಳಕ್ಕೆ ವೈಯುತ್ತಿರಲು, ಅನೇಕ ಕ್ರೈಸ್ತ ಸಹೋದರರು ನೆರೆದು ಬಂದಿರುವಲ್ಲಿ ಪ್ರಾರ್ಥನೆ ಮಾಡಲಿಕ್ಕೆ ಅವನಿಗೆ ಅಪ್ಪಣೆ ದೊರಕಿತು. ಆಗಲವನು ಮೊಣಗಾಲೂರಿ—ದೇವರೇ, ಸರ್ವತ್ರ ಹಿಂಸೆ ತೀರಿಸು! ಸಭೆಗಳಲ್ಲಿ ಅನ್ಯೋನ್ಯ ಪ್ರೀತಿ ಹೆಚ್ಚಿಸು! ಎಂಬಂತೆ ದೊಡ್ಡ ಶಬ್ದದಿಂದ ಬೇಡಿ ಕೊಂಡು, ಎದ್ದ ಹಿಂದೆ ಅವನನ್ನು ತಕ್ಕೊಂಡು ಹೋಗಿ, ಬಹಳ ಹಸಿದಿರುವ ಸಿಂಹಗಳ ಮುಂದೆ ಹಾಕಲಾಗಿ, ಇವು ತಕ್ಷಣವೇ ಅವನನ್ನು ಮುರಿದು ತಿಂದವು. ಅದು ಕ್ರಿ. ಶ. 116ನೇ ವರುಷದ ಹಿಮಕಾಲದಲ್ಲಿ ಆಯಿತು. ಮೃಗಗಳು ಉಳಿಸಿದ ಸ್ವಲ್ಪ ಎಲುವುಗಳನ್ನು ಹಲವರು ಸಹೋದರರು ಅಂತಿಯೊಖೀಯಕ್ಕೊಯಿದು, ಹುಗಿದರು. ಆದರೆ ಅವನು ಮರಣದಲ್ಲಿ ತೋರಿಸಿದ ಧೈರ್ಯ ಕಂಡ ಕ್ರೈಸ್ತರೆಲ್ಲರು ಅವನು ಸತ್ತ ದಿವಸದಿರುಳೆಲ್ಲಾ ಎಚ್ಚತ್ತಿದ್ದು, ದೇವರು ತಮಗೆ ಸಹ ಅದೇ ವಿಶ್ವಾಸಸಂತೋಷವನ್ನು ದಯೆ ಪಾಲಿಸಿ ಕೊಡ ಬೇಕೆಂತ, ಪ್ರಾರ್ಥಿಸಿದರು.

## 12. ಸ್ಮುರ್ನದ ಪೊಲುಕರ್ಪನೆಂಬ ಅಪೊಸ್ತೊಲಿಕ ಪಿತನು.

ಅಪೊಸ್ತಲನಾದ ಯೋಹಾನನು ತಾನೇ ಪೊಲುಕರ್ಪನೆಂಬ ತನ್ನ ಶಿಷ್ಯನನ್ನು ಸಣ್ಣ ಅಸಿಯದ ಸ್ಮುರ್ನ ಪಟ್ಟಣದಲ್ಲಿ, ಅಧ್ಯಕ್ಷನೆಂತ, ನೇಮಿಸಿಟ್ಟನು[1]; ಪೊಲುಕರ್ಪನು ಕ್ರಿ. ಶ. 100ನೇ ವರ್ಷ[2] ಆ ಉದ್ಯೋಗಕ್ಕೆ ಬಂದಂತೆ ತೋರುತ್ತದೆ. ಯೇಸುನಾಥನನ್ನು ಕಂಡು ಮಾತಾಡಿಸಿದವರ ಸಲಿಗೆಯಲ್ಲಿದ್ದ ಆ ವೃದ್ಧ ಅಧ್ಯಕ್ಷನು ತಾನವರ ಬಾಯಿಯಿಂದಲೇ ಕರ್ತನನ್ನು ಕುರಿತು ಕೇಳಿದ್ದನ್ನು ಹೇಳುತ್ತಿರಲಿಕ್ಕೆ ಎಂದೂ ಬಹಳ ಸಂತೋಷ ಪಡುವನು.

ಅವನು ಸುಮಾರು 67 ವರುಷ ತನ್ನ ಅಧ್ಯಕ್ಷತೆಯೊಳಗಿನ ಸಭೆಯನ್ನು ಮಿಗಿಲಾಶೀರ್ವಾದದೊಡನೆ ಪರಿಪಾಲಿಸುತ್ತಿರಲಾಗಿ, ಮರ್ಕ ಔರೇಲಿಯ ಕೈಸರನ[3] ಆಳುವಿಕೆಯ 6ನೇ ವರುಷದಲ್ಲಿ, ಕ್ರಿ. ಶ. 167ನೇದರಲ್ಲಿ, ಸ್ಮುರ್ನದ ಕ್ರೈಸ್ತರ ಮೇಲೆ ಅತಿ

1) Irenaeus adv. haer. III, 3; 99ನೇ, 132ನೇ ಪಾನು. 2) 108ನೇ ಪಾನು.
3) 113ನೇ ಪಾನು.

ಕಠೋರವಾದ ಹಿಂಸೆಯು ಬಂತು[1]; ಅನೇಕ ಕ್ರೈಸ್ತರನ್ನು ಶೆರೆ ಹಿಡಿದು, ಬಾರುಗಳಿಂದ ಹೊಡೆದು ಕೊಲ್ಲುವರು, ಬೇರೊಬ್ಬರನ್ನು ಸುಡುವರು, ಇನ್ನೊಬ್ಬರನ್ನು ಸಿಂಹಾದಿ ಮೃಗಗಳ ಬಾಯಿಗೆ ಹಾಕುವರು; ಆದರೆ ಆಯಾ ಕ್ರೈಸ್ತರು ಅಚಲ ವಿಶ್ವಾಸದವರಾಗಿ, ಪೀಡೆಯೊಳಗೂ ಮರಣದೊಳಗೂ ನಿಟ್ಟುಸುರಾದರೂ ಬಿಡದಲಿರುವರು. ಹಿಂಸಕರು ತಾವು ಕಾಣುತ್ತಿದ್ದ ಆ ವಿಶ್ವಾಸಸ್ಥೈರ್ಯದ ದೆಸೆಯಿಂದ ಬಹಳ ಮುನಿಯುತ್ತಿರುವರು. ಒಂದು ದಿನದಲ್ಲವರು ಗೆರ್ಮಾನಿಕನೆಂಬ ಯೌವನಸ್ಥ ಕ್ರೈಸ್ತನನ್ನು ಮೃಗಗಳ ಮೇಲಿಗಿಟ್ಟರಲು, ಇವನು ಅಂಜದೆ, ತನ್ನನ್ನು ಬೇಗ ಹರಿದು ತನ್ನಾತ್ಮವನ್ನು ಕ್ರಿಸ್ತನಿರುವಲ್ಲಿಗೆ ಕಳುಹಿಸುವ ಹಾಗೆ ಮೃಗಗಳ ಶಿಟ್ಟನ್ನು ಇನ್ನೂ ಹೆಚ್ಚಿಸುವಲ್ಲಿ ಸುತ್ತಲು ನಿಂತು ನೋಡುವ ಕ್ರೂರ ಪ್ರಜೆಯು ರೋಷ ಸಹಿಸಲಾರದೆ—ಪೊಲುಕರ್ಪನನ್ನು ಕೊಲ್ಲ ಬೇಕು, ಇಂಥಾ ರಾಜ್ಯಮತಭ್ರಷ್ಟತ್ವವು ನಡೆಯುವದಕ್ಕೆ ಕಾರಣವು ಅವನೇ! ಎಂತ, ಅತ್ಯಧಿಕವಾಗಿ ಕೂಗಲಿಕ್ಕೆ ಹತ್ತಿತು. ಪೊಲುಕರ್ಪನು ಅದನ್ನು ಕೇಳಿ, ಒಡದೆ ಪಟ್ಣದಲ್ಲಿಯೇ ಇರುವೆನೆಂದು, ಆಲೋಚಿಸಿ ಕೊಳ್ಳುತ್ತಿರಲು, ಅವನ ಸಭೆಯವರು ಬಂದು, ಬಹಳ ಬೇಡಿ ಕೊಂಡದರಿಂದವನು ಪಟ್ಣದ ಹೊರಗೆ ಒಂದು ಹಳ್ಳೀ ಮನೆಗೆ ಹೋಗಿ, ತನ್ನ ಮುಂದಿನ ಗತಿಯನ್ನು ಪೂರ್ಣವಾಗಿ ದೇವರ ಕೈಯಲ್ಲಿಟ್ಟು, ಸರ್ವ ಕ್ರೈಸ್ತ ಸಭೆಯ ಉದ್ದಿಶ್ಯ ದೇವರಿಗೆ ಪ್ರಾರ್ಥಿಸುತ್ತಾ ಕಾಲಕ್ಷೇಪ ಮಾಡುವಾಗ ಒಂದು ಸ್ವಪ್ನದಲ್ಲಿ ತನ್ನ ತಲೆದಿಂಬು ಸುಟ್ಟದ್ದು ಕಂಡು, ನಾನು ರಕ್ತಸಾಕ್ಷಿಯಾಗಿ ಸಾಯ ಬೇಕೆಂಬದಕ್ಕೆ ಒಂದು ದೇವದರ್ಶನವಾಯಿತೆಂತ, ನಿಶ್ಚಯಿಸಿ ಕೊಂಡನು. ಆದರೂ ಅವನು ಈ ವಿಷಯದಲ್ಲಿ ಎಲ್ಲಾ ಸ್ವಾರ್ಥ ಬಿಟ್ಟು, ಹೊಂಚುಗಾರರಿಗೆ ತಾನಿರುವ ಸ್ಥಳವು ಗೊತ್ತಾದ ಕ್ಷಣವೇ ಬೇರೊಂದು ಮನೆಗೆ ತಪ್ಪಿಸಿ ಕೊಂಡು ಹೋದನು. ಶತ್ರುಗಳ ಆಳುಗಳು ಈ ಮನೆಗೆ ಸಹ ಬರಲಾಗಿ, ಅವನು ಪಲಾಯನದ ಪ್ರಯತ್ನವೆಲ್ಲಾ ಹಾರಿಸಿ, ಅವರ ಮುಂದೆ ಪ್ರೀತಿಯಿಂದ ಅನ್ನ ಪಾನಗಳನ್ನಿಡಿಸಿ, ಅವರ ಅಪ್ಪಣೆ ತೆಕ್ಕೊಂಡು, ಒಳಗೋಣೆಯೊಂದರೊಳಗೆ ಎರಡು ತಾಸಿನ ಪರ್ಯಂತವೇ ದೇವರ ಹತ್ತರ ಬಹು ಆಸಕ್ತಿಯಿಂದ ಅವರಿಗೋಸ್ಕರ ಸಹ ಬಿನ್ನಹವರ್ಪಿಸಿದ ಮೇಲೆ ಆ ಕಾಡುಗುಣದ ಆಳುಗಳ ಗುಂಪಾದರೂ ಅದನ್ನು ತಿಳಿದು ಬೆರಗಾಯಿತು; ಅವರಲ್ಲಿ ಹಲವರು ಅಂಥಾ ಒಳ್ಳೇ ಮನುಷ್ಯನನ್ನು ಹಿಡುಕೊಳ್ಳ ಬಂದದಕ್ಕೆ ನಾಚಿ ಕೊಂಡರು.

ತದನಂತರ ಅವನನ್ನು ಒಂದು ಕತ್ತೆ ಹತ್ತಿಸಿ, ಪಟ್ಣಕ್ಕೆ ವೈಯುತ್ತಿರುವ ಸಮಯದಲ್ಲಿ ರಥವೇರಿರುವ ಇಬ್ಬರು ಮುಖ್ಯ ನ್ಯಾಯಾಧಿಪರು ಅವನೆದುರಿಗೆ ಬಂದು, ಅವನನ್ನು ತಮ್ಮ ಬಳಿಯಲ್ಲೇರಿಸಿ, ಕುಂಡ್ರಿಸಿ ಕೊಂಡು, ನಿಮ್ಮ ಜೀವರಕ್ಷಣೆಗಾಗಿ

1) ಪ್ರಕಟ. 2, 10.

ದೇವತೆಗಳಿಗೆ ದಯೆ ಮಾಡಿ ಬಲಿ ಅರ್ಪಿಸಿರಿ! ಎಂದು, ಅವನನ್ನು ನಾನಾ ಪ್ರಕಾರದಿಂದ ಸಮ್ಮತಿ ಗೊಳ್ಳಿಸಲಿಕ್ಕೆ ಒದ್ದಾಡಿದರು. ಆದರೆ ಅವನು ಕಿವಿ ಕೊಡದಿರಲಿಕ್ಕೆ, ಅವರು ಕೋಪಿಷ್ಠರಾಗಿ, ಬೈದು, ಅವನನ್ನು ರಥದಿಂದ ದೂಡಿ ಬಿಟ್ಟರು; ಅದರಿಂದ ಅವನ ತೊಡೆಗೆ ದೊಡ್ಡ ಪೆಟ್ಟು ಹತ್ತಿತು. ಅವನು ಅದನ್ನು ಲಕ್ಷಿಸದೆ, ಸಂತೋಷದಿಂದ ನ್ಯಾಯಸ್ಥಾನಕ್ಕೆ ಸಮೀಪಿಸುವಂದು—ಪರಲೋಕದಿಂದಲೋ? ಎಲ್ಲಿಂದಲೋ?—ಒಂದು ಶಬ್ದವಾಯಿತು, ಏನಂದರೆ—ಪೊಲುಕರ್ಪನೇ, ದೃಢನಾಗಿರು! ಕ್ರೈಸ್ತತ್ವದಲ್ಲಿ ಪೌರುಷವುಳ್ಳವನಾಗಿರು!—ಈ ಮಾತು ಹೇಳಿದವನನ್ನು ಯಾರೂ ನೋಡಿಲ್ಲ; ಆದರೆ ನೆರೆದಿರುವ ಕ್ರೈಸ್ತರಲ್ಲಿ ಅನೇಕರು ಅದನ್ನು ಕೇಳಿದರು. ತದನಂತರ ಕೈಸರನ ಪ್ರತಿನಿಧಿಯು, ಆ ಮಾನ್ಯ ಗೃಹಸ್ಥನನ್ನುಳಿಸ ಬೇಕೆಂತ, ಚಿಂತಿಸಿ ಕೊಂಡು—ನೀನು ಮುದುಕನು, ಯಾಕೆ ಇನ್ನು ತೊಂದರೆ ಹುಡುಕಿ ಕೊಳ್ಳುತ್ತಿದ್ದಿ? ನೀನು ಕೈಸರನ ನಾಮದಲ್ಲಿ ಕ್ರಿಸ್ತನಿಗೆ ಶಪಿಸುತ್ತಲೇ ನಿನ್ನನ್ನು ಬಿಟ್ಟು ಬಿಡುವೆನೆಂತ, ಅವನಿಗೆ ನಿರ್ಧಾರವಾಗಿ ವದಿಸಲು, ಆ ವೃದ್ಧನು—ನಾನು 86 ವರುಷವೇ ಕ್ರಿಸ್ತನಿಗೆ ಸೇವಿಸುತ್ತಿದ್ದ ಕಾಲದೊಳಗೆ ಆತನು ಎಂದಾದರೂ ನನ್ನನ್ನು ದುಃಖ ಪಡಿಸಲಿಲ್ಲ; ನನಗೆ ನಿತ್ಯ ಭಾಗ್ಯವನ್ನೇ ಕೊಟ್ಟ ನನ್ನ ಅರಸನಿಗೆ ನಾನು ಶಪಿಸುವದುಂಟೇ? ಎಂದು, ಪ್ರತ್ಯುತ್ತರ ಹೇಳಿದನು. ಆಗಲಾ ಪ್ರತಿನಿಧಿಯು ಮೃಗಗಳ ಬಾಯಿಯ ಮತ್ತು ಪೀಡಾಯಂತ್ರಗಳ ಮತ್ತು ಅಗ್ನಿಮರಣದ ಭಯದಿಂದ ಅವನನ್ನು ಬೆದರಿಸಲಿಕ್ಕೆ ಯತ್ನಿಸಿದರೂ ಪೊಲುಕರ್ಪನು ಹಾಗೆಯೇ ಕ್ರಿಸ್ತನನ್ನು ಕೊಂಡಾಡುತ್ತಿದ್ದು—ಒಂದು ಕ್ಷಣ ಮಾತ್ರ ಉರಿದು ಆರುವ ಬೆಂಕಿಯಿಂದ ನನ್ನನ್ನು ಅಂಜಿಸುವದಕ್ಕೆ ಪೇಚಾಡುವ ನೀನು ಕಡೆಯ ನ್ಯಾಯನಿರ್ಣಯದ ದಿವಸದಲ್ಲಿ ಪಾಪಿಷ್ಠರು ಬೀಳ ಬೇಕಾದ ನಿತ್ಯಾಗ್ನಿಯನ್ನು ಹ್ಯಾಗೂ ಅರಿಯಿ! ತಡವು ಯಾತಕ್ಕೆ? ನಿನ್ನ ಇಚ್ಛೆಗನುಕೂಲ ಮಾಡೆನ್ನಲು, ಆ ಪ್ರತಿನಿಧಿಯು ಅವನ ಅಚಲತ್ವ ಕಂಡು, ತನ್ನ ಘೋಷಕನಿಂದ ಪ್ರಜಾಸಮೂಹದ ಮುಂದೆ—ಕ್ರೈಸ್ತನಾಗಿದ್ದೇನೆ! ಎಂತ, ಪೊಲುಕರ್ಪನು ಅರಿಸಿದ್ಧಾನೆಂದು, ಕೂಗಿಸೋಣ, ಸಾವಿರಾರು ಮಂದಿ ಮೂರ್ತಿಪೂಜಕರೂ ಯೆಹೂದ್ಯರೂ[1]—ನಾಸ್ತಿಕತ್ವದ ಉಪದೇಶಿಯು ಅವನೇ, ಕ್ರೈಸ್ತರ ತಂದೆಯು ಅವನೇ, ನಮ್ಮ ದೇವರುಗಳನ್ನು ಕೆಡಿಸುವವನು ಅವನೇ, ನಮ್ಮ ದೇವರುಗಳಿಗೆ ಇನ್ನು ಪೂಜೆ ಮಾಡ ಬಾರದೆಂತ ಅನೇಕರಿಗೆ ಬುದ್ಧಿ ಕಲಿಸುತ್ತಾ ಬಂದವನು ಅವನೇ! ಅವನನ್ನು ಸಿಂಹಗಳೆಡೆಗೆ ಹಾಕಿರಿ! ಎಂತ, ರೋಷಧ್ವನಿಗೈದರು. ಬಳಿಕ ಪ್ರತಿನಿಧಿಯ ಬಾಯಿಯಿಂದ ಅಗ್ನಿಮರಣಾಜ್ಞೆ ಹೊರಟಾಗಲೇ ಮೂರ್ತಿಪೂಜಕರೂ ಯೆಹೂದ್ಯರೂ ಹತ್ತರದ ಮನೆಗಳೊಳಗಿಂದ ಕಟ್ಟಿಗೆ ತರ

1) ಪ್ರಕಟ. 2, 9.

ಲಾರಂಭಿಸಿ, ಚಿತಿಯು ಸಿದ್ಧವಾದನಂತರ ಪೊಲುಕರ್ಪನು ತಾನೇ ತನ್ನ ವಸ್ತ್ರ ತೆಗೆದಿಟ್ಟು, ಚಿತಿ ಹತ್ತಿರುವಲ್ಲಿ ತನ್ನನ್ನು ಯೂಪಕ್ಕೆ ಮೊಳೆಯಿಂದ ಜಡಿಯ ಕೈ ಹಚ್ಚುವವರಿಗೆ—ಈಗ ಇದ್ದ ಹಾಗೆಯೇ ನನ್ನನ್ನು ಬಿಡಿರಿ; ಅಗ್ನಿಜ್ವಾಲೆ ತಾಳಿ ಕೊಳ್ಳುವದಕ್ಕೆ ನನ್ನನ್ನು ಬಲ ಪಡಿಸುವವನು ಬಂಧನ ಮೊಳೆಗಳಿಲ್ಲದಿದ್ದರೂ ಅಚಲನಾಗಿ ನಿಲ್ಲುವದಕ್ಕೆ ಸಹ ನನ್ನ ಸಹಾಯಕನಾಗುವನು! ಎಂದು, ಬೇಡಿ ಕೊಂಡಾಗ ಅವನ ಹಸ್ತಗಳನ್ನು ಹೆಡೆಗಟ್ಟಿದರಷ್ಟೇ. ಆಗಲವನು—ಸರ್ವ ತ್ರಾಣವಿದ್ದ ಕರ್ತನಾದ ದೇವರೇ, ನಿನ್ನ ಪ್ರಿಯ ಯೇಸು ಕ್ರಿಸ್ತನ ತಂದೆಯೇ, ಪರಿಶುದ್ಧಾತ್ಮದ ಅಮರತ್ವದಲ್ಲಿಯ ಶರೀರಾತ್ಮಗಳ ನಿತ್ಯಜೀವದ ಪುನರುತ್ಥಾನಕ್ಕೋಸ್ಕರ ನೀನು ಈ ಘಳಿಗೆ ನನ್ನನ್ನು ನಿನ್ನ ಸಾಕ್ಷಿಗಳ ಲೆಖ್ಖದಲ್ಲಿ ಶೇರಿಸಲಿಕ್ಕೂ ನಿನ್ನ ಕ್ರಿಸ್ತನು ಕುಡಿದ ಪಾತ್ರದಲ್ಲಿ ನನ್ನನ್ನು ಕುಡಿಸಲಿಕ್ಕೂ ಮೆಚ್ಚಿದ್ದರಿಂದ ನಿನ್ನನ್ನು ಕೊಂಡಾಡುತ್ತೇನೆ! ಇತ್ಯಾದಿ ಮಂಗಳ ಪ್ರಾರ್ಥನೆ ಹೇಳಿ, ಮುಗಿಸುತ್ತಲೆ ಚಿತಿಗೆ ಕಿಚ್ಚು ಹಾಕಿದರು. ಅದರುರಿಯು ಒಂದು ಬಿಲ್ಲಿನಾಕಾರವಾಗಿ ವಾರೆಯಾಗಿ ನಿಂತು, ಅವನ ಮೈಗೆ ಮುಟ್ಟಲೊಲ್ಲದೆ ಕಾಣಿಸುವದರಿಂದ ಆಳುಗಳಲ್ಲೊಬ್ಬನು ಹತ್ತರಕ್ಕೆ ಹೋಗಿ, ಕತ್ತಿಯಿಂದ ಅವನನ್ನು ತಿವಿದು ಕೊಂದನು. ಕ್ರಿ. ಶ. 168ನೇ ವರುಷ ಸಂಭವಿಸಿದ ಅವನ ಮರಣದಲ್ಲಿಯೇ ಆ ಕಡೆಯ ಹಿಂಸೆಯು ಅನಕ ತೀರಿತು. ಯಾಕಂದರೆ ಆಗಿನ ಆ ಪ್ರತಿನಿಧಿಯು ಆ ವೃದ್ಧ ಸದ್ಭಕ್ತನ ಮರಣಕ್ಕೆ ಮನ ನೊಂದವನಾಗಿ, ಮಿಕ್ಕ ಕ್ರೈಸ್ತರ ಮೇಲೆ ತನ್ನ ಬಳಿಗೆ ಇನ್ನೂ ಬರುವ ದೋಷಾರೋಪಣದ ಪತ್ರಗಳನ್ನು ಹರಿದು ಬಿಟ್ಟನಷ್ಟೇ.

## 13. ರಕ್ತಸಾಕ್ಷಿ ಎಂಬ ಉಪನಾಮದ ಯುಸ್ತೀನನೆಂಬ ಸಭಾಪಿತನು.

ಯೋಹಾನ ಅಪೊಸ್ತಲನು ಪರಂಧಾಮವನ್ನೈದುವದಕ್ಕೆ ಸುಮಾರು ಒಂದು ವರುಷ ಮುಂಚೆ ಕ್ರಿ. ಶ. 100ನೇ ವರುಷ ಯುಸ್ತೀನನೆಂಬವನು ಸಮರೀಯ ಶೀಮೆಯ ಸುಖರ್ ಅಥವಾ ಶಿಖೇಮ್ ಎಂಬ ಪಟ್ಣದಲ್ಲಿ[1] ಹುಟ್ಟಿದನು[2]; ಮೂರ್ತಿಪೂಜಕರಾದ ಅವನ ಹೆತ್ತವರು ಗ್ರೇಕವಂಶಜರು; ಅವರಿಗೆ ಬಹಳ ಬದುಕು ಇತ್ತು. ಅವನ ತಂದೆಯು ಅವನಿಗೆ ತಕ್ಕ ಉಪಾಧ್ಯಾಯರಿಂದ ವಿದ್ಯಾಭ್ಯಾಸ ಮಾಡಿಸಿದನು. ಯುಸ್ತೀನನು ಅದು ಸಾಕೆನ್ನದೆ, ತನ್ನ ವಿದ್ಯಾಭಿವೃದ್ಧಿಗೋಸ್ಕರ ಬೇರೆ ಬೇರೆ ಜ್ಞಾನಿಕರ[3] ಶಾಲೆಗಳಲ್ಲಿ ಇನ್ನೂ ಕಲಿಯ ಬೇಕೆಂದು, ಮೊದಲು ಹೋದ

1) 31ನೇ ಪಾನು. 2) 100ನೇ ಪಾನು. 3) 10ನೇ ಪಾನು.

ನೊಬ್ಬ ಜ್ಞಾನಿಕನು, ಮೂರ್ತಿಪೂಜೆಯು ನಿಷಿದ್ಧವೆಂತ, ತೆರೆದು ಪ್ರಮಾಣಿಸುವಾಗ ಅವನು, ವಿಶ್ವವನ್ನು ಪರಿಪಾಲಿಸುವ ದೇವರೆಂಥವನು? ಎಂದು, ಕೇಳಲು, ಅವನ ಬಾಯಿ ಮೌನ ಗೊಂಡಿತು. ಮತ್ತೊಬ್ಬ ಜ್ಞಾನಿಕನು, ನನಗಿಷ್ಟಿಷ್ಟು ಹಣ ಕೊಟ್ಟರೆ ನಿನಗೆ ಬೇಕಾದ ಜ್ಞಾನವೆಲ್ಲಾ ಕಲಿಸಿ ಕೊಡುವೆನೆಂತ, ಅವನಿಗೆ ಹೇಳುವಲ್ಲಿ ಅವನು, ಸತ್ಯವನ್ನು ವಿಕ್ರಯಿಸುವಂಥವನಿಗೆ ಸತ್ಯವಲ್ಲ ಹಣವೇ ದೊಡ್ಡದೆಂತ, ತನ್ನೊಳಾಲೋಚಿಸಿ ಕೊಂಡು, ಹೋದನು. ಮತ್ತೊಬ್ಬ ಜ್ಞಾನಿಕನು—ಪರಮಾರ್ಥ ಪಡೆಯುವಂತೆ ಜ್ಯೋತಿಷ್ಯ ಗಣಿತಾದಿ ವಿದ್ಯೆಗಳ ಕಲಿತಿರ ಬೇಕು; ಅವನ್ನು ಸಾಧಿಸಿ ಕೊಂಡಿದ್ಧಿಯಾ? ಎಂತ, ಬೆಸಗೊಳ್ಳಲಿಕ್ಕೆ, ಯುಸ್ತೀನನು—ಈ ವಿದ್ಯೆಗಳಿಂದ ತನ್ನ ತಲೆ ತುಂಬಿದರೂ ತನ್ನ ಹೃತ್ತು ಈಗಿನಂತೆಯೇ ಬರೆದಾಗಿರುವದೆಂದು, ನೆನಸಿ, ಅವನ್ನು ಬಹುಶಃ ಕಲಿತಿಲ್ಲವೆಂಬೋಣ, ಆ ಜ್ಞಾನಿಕನು ಅವನನ್ನು ಕಳುಹಿಸಿ ಬಿಟ್ಟನು. ತದನಂತರ ಅವನು ಇನ್ನೊಬ್ಬ ಜ್ಞಾನಿಕನ ಬಳಿಯಲ್ಲಿ, ವಿಶ್ವವೇ ದೇವರೆಂತ, ಹೇಳುವ ಬ್ರಹ್ಮಜ್ಞಾನವೆಂಬದನ್ನು ಅಭ್ಯಾಸಿಸುವದರಲ್ಲಿ ಬಹಳ ಕಾಲ ಕಳೆದು, ಕ್ರಿ. ಶ. 132ನೇ ವರುಷದ ಒಂದಾನೊಂದು ದಿನ ತನ್ನೊಳಗೆ ಧ್ಯಾನಿಸಿ ಕೊಂಡು ಸಮುದ್ರತೀರದಲ್ಲಿ ಅಡ್ಡಾಡುತ್ತಿರಲು, ಮಾನ್ಯ ರೂಪವುಳ್ಳವನೊಬ್ಬ ಮುದುಕನು ಅವನೆದುರಿಗೆ ಬಂದು, ಅವನನ್ನು ಮಾತಾಡಿಸಿದನು. ಆ ಮುದುಕನ ಭಾವ ವಾಕ್ಯಗಳ ಶಾಂತಿಪೂರ್ಣತೆಯು ಯುಸ್ತೀನನನ್ನು ಮಿಗಿಲು ಮೆಚ್ಚಿಸಿತು; ಆದ್ದರಿಂದ ಅವನು ಮುದುಕನ ಮೇಲೆ ನಂಬಿಗೆ ಹಿಡಿದು, ತನ್ನ ಅಂತರಂಗದ ವಿಶಿಷ್ಟಾರ್ಥವನ್ನು ಅವನಿಗೆ ವಿವರಿಸಲಾಗಿ, ಆ ವೃದ್ಧನು ಪೈತೃಕ ಮಮತೆಯಿಂದ ಕ್ರೈಸ್ತತ್ವದ ಶ್ರೇಯಸ್ಸನ್ನು ಅವನಿಗೆ ತೋರಿಸಿ, ಪರಿಶುದ್ಧ ಬರಹದ ಪ್ರವಾದನಾಗ್ರಂಥಗಳನ್ನು ಓದಲೆಚ್ಚರಿಸಿ, ದೇವರಿಂದ ಜ್ಞಾನ ಬೇಡಿ ಕೊಳ್ಳುವದೇ ಅತ್ಯವಶ್ಯವೆಂದು, ಖಂಡಿತವಾಗಿ ನುಡಿದು, ಅವನನ್ನಗಲಿ ಹೋದನು. ಈ ಸಂಗತಿಯ ವಿಷಯವಾಗಿ ಯುಸ್ತೀನನು ಹಿಂದಗಡೆ ಬರದದೇನಂದರೆ—ನಾನು ಆ ವೃದ್ಧನನ್ನು ಮತ್ತೊಮ್ಮೆ ನೋಡಲೇ ಇಲ್ಲ; ಆದರೆ ಅವನ ದೆಸೆಯಿಂದ ನನ್ನ ಹೃದಯದೊಳಗೊಂದು ತೇಜ ಹಚ್ಚಿದ ಹಾಗಾಯಿತು. ಅಂದಿನಿಂದಲೇ ನಾನು ಆ ಪ್ರವಾದನಾಗ್ರಂಥಗಳಿಗೂ ಕ್ರಿಸ್ತನ ಭಕ್ತರಿಗೂ ಒಲೆಯುವವನಾದೆನು.—ಅವನು ಆ ಗ್ರಂಥಗಳ ಪಾರಾಯಣದಿಂದಲೂ ಹದ್ರಿಯಾನ ಕೈಸರನ ದಶೆಯೊಳಗಿನ ಕ್ರೈಸ್ತ ರಕ್ತಸಾಕ್ಷಿಗಳ ಸ್ಥೈರ್ಯದ ದರ್ಶನದಿಂದಲೂ ಸ್ವಲ್ಪ ಕಾಲಕ್ಕೀಚೆ ಕ್ರೈಸ್ತನೆನ್ನಿಸಿ ಕೊಂಡನು.

ಯುಸ್ತೀನನು ಸ್ನಾನ ಹೊಂದಿದ ಮೇಲೆ ಸುವಾರ್ತಾವಿಸ್ತರಣಕ್ಕಾಗಿ ಪಲೇಸ್ತೀನ, ಸಣ್ಣಅಸಿಯ, ಈತಲಿಯ ಮುಂತಾದ ದೇಶಗಳನ್ನು ತಿರಿಗ್ಯಾಡುತ್ತಿದ್ದನು. ಅದು ಹೊರ್ತಾಗಿ ಅವನು ಸಿದ್ಧಾಂತಗ್ರಂಥಗಳಿಂದ ಕ್ರೈಸ್ತತ್ವದ ಹಿತಕ್ಕೆ ಇಂಬು ಗೊ

ಡುವವನಾದನು; ದೃಷ್ಟಾಂತಕ್ಕಾಗಿ ಅವನು ಅಂತೋನೀನ ಮತ್ತು ಮರ್ಕ ಔರೇಲಿಯ ಕೈಸರರಿಗೆ[1] ಅದನ್ನು ಸತ್ಯ ಮಾಡುವಂಥಾ ಒಂದೊಂದು ಪತ್ರಿಕೆ ಬರೆದನು. ಈ ಕಡೇ ಪತ್ರಿಕೆಯಿಂದ ಅವನಿಗೆ ಶೆರೆಯೂ ಮರಣವೂ ಬಂದೊದಗಿದವು. ಹ್ಯಾಗಂದರೆ ಅವನು ಅದರಲ್ಲಿ ರೋಮಪುರದ ಕ್ರೆಸ್ಕೆನ್ಸ್ ಎಂಬವನೊಬ್ಬ ನೀಚ ನಾಸ್ತಿಕನನ್ನು ಕುರಿತು ಔರೇಲಿಯ ಕೈಸರನಿಗೆ ಬುದ್ಧಿ ಹೇಳಿದ್ದು ಅವನಿಗೆ ಕೇಳಿತು; ಅದರ ನಿಮಿತ್ತ ಅವನು ಯುಸ್ತೀನನನ್ನು ಕೆಡಿಸಲಿಕ್ಕೆ ತನ್ನಿಂದಾಗುವಷ್ಟು ಪ್ರಯತ್ನ ಮಾಡುವವನಾಗಿ, ಕೈಸರನಲ್ಲಿ ಇವನ ಮೇಲೆಯೂ ಸಕಲ ಕ್ರೈಸ್ತರ ಮೇಲೆಯೂ ಎದ್ದಿರುವ ರೋಷ ದ್ವೇಷಗಳನ್ನು ಪ್ರಜ್ವಲೀಕರಿಸಲನುಕೂಲವಾದಾಗ ರೋಮಪುರಕ್ಕೆ ಬಂದಿರುವ ಯುಸ್ತೀನನನ್ನು ಬೇರೆ ಹಲವರು ಕ್ರೈಸ್ತರ ಸಂಗಡ ಬಂಧಿಸಲಾಯಿತು. ಅವರೆಲ್ಲರು ಕೂಡಿ ಸ್ಥಿರ ಧೈರ್ಯದಿಂದ ಕ್ರಿಸ್ತನ ನಾಮವ ನಿವೇದಿಸುತ್ತಿರಲು, ಮೊದಲು ಅವರಿಗೆ ಬಹಳ ಹೊಡೆದು, ಆ ತರುವಾಯ ಅವರ ತಲೆ ಕಡೆದರು. ಇದು ಕ್ರಿ. ಶ. 166ನೇ ವರುಷದಲ್ಲಿ ಆಯಿತು.

## 14. ಲಿಯೋನ್ ಮತ್ತು ವಿಯೆನ್ ಎಂಬ ಪಟ್ಣಗಳಲ್ಲಿ ಕ್ರೈಸ್ತರು ಹಿಂಸೆ ಪಟ್ಟದ್ದು.

ಮರ್ಕ ಔರೇಲಿಯ ಕೈಸರನ ಆಳ್ತನದೊಳಗೆ ಪೊಲುಕರ್ಪ ಯುಸ್ತೀನ ಎಂಬವರಿಬ್ಬರು ಕೀರ್ತ್ಯ ಭಕ್ತರು ರಕ್ತಸಾಕ್ಷಿಗಳಾದರಲ್ಲ[2]? ಅದೇ ಸಮಯ ಫ್ರಂಚು ಅಥವಾ ಫ್ರಂಕ ಎಂಬ ಗಲ್ಲಿಯ ದೇಶದ ದಕ್ಷಿಣ ಭಾಗದಲ್ಲಿರುವ ವಿಯೆನ್ ಮತ್ತು ಲಿಯೋನ್ ಎಂಬ ಪಟ್ಣಗಳಲ್ಲಿ[3] ಕ್ರೈಸ್ತರು ಮೂರ್ತಿಪೂಜಕರಿಂದ ವಿವಿಧೋಪದ್ರವ ಪಡುತ್ತಿದ್ದರು; ದೇವತೆಗಳ ಪೂಜಾರಿಗಳು ಅವರ ಮೇಲೆ ಸುಳ್ಳುಸುದ್ದಿ ಹುಟ್ಟಿಸಿ, ತಮ್ಮ ಪಕ್ಷಕರಿಂದ ಅವರಿಗೆ ಕಂಡಾಬಟ್ಟೆ ಬೈಸುತ್ತ, ಹೊಡೆಸುತ್ತ, ಕಲ್ಲೆಸೆಸುತ್ತ, ಅವರ ಮನೆಗಳನ್ನು ಸುಲಿಸುತ್ತ ಇರುವರು. ಆದರೆ ಆ ಕ್ರೈಸ್ತರು ಅದನ್ನೆಲ್ಲಾ ತಾಳ್ಮೆಯಿಂದ ಸಹಿಸುತ್ತಿರುವರು. ತನ್ಮಧ್ಯ ಅಲ್ಲಿಯ ರೋಮಾಯ ಪ್ರತಿನಿಧಿಯು ಒಮ್ಮೆ ಬೇರೊಂದು ಸ್ಥಳಕ್ಕೆ ಹೋಗಿರುವ ವೇಳ್ಯಕ್ಕೆ ಅವರ ಶತ್ರುಗಳು ಮರ್ಯಾದೆ ಪೂರಾ ಕಳೆದು, ಅವರೊಳಗೆ ಹೆಸರು ಗೊಂಡವರ ಮೇಲೆ ಫಕ್ಕನೆ ಬಿದ್ದು, ಅವರನ್ನು ಬಂಧನದಲ್ಲಿಟ್ಟರು. ಆ ಪ್ರತಿನಿಧಿಯು ತಿರಿಗಿ ಬಂದು, ಆ ಶೆರೆಯವರನ್ನು ಕರಿಸಲು, ಇವರು, ನಿರಪರಾಧಿಗಳಾಗಿದ್ದೇವೆಂತ, ಹೇಳುವಲ್ಲಿ ಅವರ ಮೇಲೆ ಪೀಡಾಯಂತ್ರಗಳನ್ನು ಪ್ರಯೋಗಿಸುವವನಾದನು. ವೆತ್ತಿಯ ಎಪಗಥೇತನೆಂಬ ಒಬ್ಬ ಐಶ್ವರ್ಯ

1) 104ನೇ, 113ನೇ, 114ನೇ ಪಾನು. 2) 114ನೇ ಪಾನು; 12ನೇ, 13ನೇ ಸಂಧಿ. 3) 87ನೇ ಪಾನು.

ವುಳ್ಳ ಗೃಹಸ್ಥನಾದ ಕ್ರೈಸ್ತ ಯುವನು ಆ ಹೊತ್ತು ತನ್ನ ಸಹೋದರರ ನೈಷ್ಕಳಂಕ್ಯವ ಸ್ಥಾಪಿಸುವದಕ್ಕಾಗಿ ತನ್ನಿಂದ ತಾನೇ ಪ್ರತಿನಿಧಿಯ ಹತ್ತರ ಬರೋಣ, ರೋಷ ತುಂಬಿದಂಥ ಇವನು ಅವನ ಮಾತು ಶ್ರವಣ ಮಾಡಲೊಲ್ಲದೆ, ನೀನು ಸಹ ಕ್ರೈಸ್ತ ನಾಗಿದ್ಧೀಯೋ? ಎಂತ, ಕೇಳಿದನಷ್ಟೇ. ಅವನು, ಹೌದೆಂದು, ಹೇಳಲು, ಅವನನ್ನು ಆ ಮತ್ತೊಬ್ಬ ಕ್ರೈಸ್ತರಿರುವ ಶೆರೆಮನೆಗೆ ಹಾಕಿದರು. ಬಳಿಕ ಶತ್ರುಗಳು ಕ್ರೈಸ್ತರಲ್ಲಿ ಯಾರಿಗೂ ಸೇವಕರಾಗಿದ್ದ ಕೆಲವರು ವಿಗ್ರಹಾರಾಧಕರ ಹಿಡಿದು, ನಾನಾ ಪ್ರಕಾರವಾಗಿ ಪೀಡಿಸುತ್ತಿದ್ದ ಮೇಲೆ ಇವರು ಮರಣಕ್ಕೆ ಅಂಜಿ—ಕ್ರೈಸ್ತರು ಕೂಸುಗಳ ಮಾಂಸ ತಿನ್ನುವದಲ್ಲದೆ ಬೇರೆ ಬೇರೆ ದುಷ್ಕರ್ಮಗಳನ್ನು ರಹಸ್ಯದಲ್ಲಿ ನಡಿಸುವರೆಂದು, ವ್ಯರ್ಥವಾಗಿ ದೂರು[1] ಹೇಳಿದ ಕ್ಷಣವೇ ಹಿಂಸಾಗ್ನಿಯು ಅತಿರೇಕವಾಯಿತು; ಅಂದಿನಿಂದ ಮೂರ್ತಿಪೂಜಕರೆಲ್ಲರಿಗೆ, ಪ್ರತಿನಿಧಿಗೂ ಪ್ರಜೆಗೂ ಸೈನಿಕರಿಗೂ, ಸಕಲ ಕ್ರೈಸ್ತರನ್ನು ತಂದು ವೇದನೆ ಪಡಿಸ ಬೇಕೆಂತ, ಈ ಒಂದೇ ಆಶೆಯು ಇನ್ನು ಇರುವದು; ಅವರು ಇದು ತೀರಿಸಲೆಸಗಿದಾಗ ಅಮಿತ ಸಂಕಷ್ಟಕ್ಕೊಳ ಬೀಳುವ ಕ್ರೈಸ್ತರ ದೊಡ್ಡ ಗುಂಪುಗಳಲ್ಲಿ 10 ಮಂದಿ ಮಾತ್ರ ಧೈರ್ಯ ಸೋತವರಾಗಿ, ಕ್ರಿಸ್ತನನ್ನು ಬಿಟ್ಟಾಡಿದರು; ಉಳಿಕಿಯವರೆಲ್ಲರೂ ವಿಶ್ವಾಸದೃಢದವರಾಗಿರುವರು. ಆ ವಿಶ್ವಾಸಭ್ರಷ್ಟರಿಗೂ ಕ್ಷೇಮ ಒದಗಲಿಲ್ಲ; ಇವರೂ ಆ ಅಚಲ ಕ್ರೈಸ್ತರೂ ಕಾಗರ್ತ್ತಲೆ ಹೇಸಿಕೆಗಳುಳ್ಳ ಅದೇ ಶೆರೆಮನೆಯೊಳಗೆ ಇರ ಬೇಕಾಯಿತು, ಅದರೊಳಗೆ ಅವರೆಲ್ಲರ ಕುತ್ತಿಗೆ ಕೋಳಕ್ಕೆ ಶಿಕ್ಕಿಸಿದ್ದವು, ಒಂದು ದಾರುಯಂತ್ರದಿಂದ ಅವರೆಲ್ಲರ ಅಂಗಸಂದುಗಳು ಎಳದು ಜೆಗ್ಗಿಸಿದ್ದವು; ಅದಲ್ಲದೆ ವಿಶ್ವಾಸಹೀನರಾದವರಿಗೆ ಕೇವಲ ದುಃಖವಿರುವಷ್ಟರೊಳಗೆ ವಿಶ್ವಾಸಿಗಳಿಗೆ ಬಹಳ ಸುಖವಿರುವದು, ಹ್ಯಾಗಂದರೆ ಅವರಿಗೆ ಮನಸ್ಸಾಕ್ಷಿಯು ನೋಯಿಸುತ್ತಿರುವಲ್ಲಿ ಇವರು ಕ್ರಿಸ್ತನ ಕಡೆಯಿಂದ ಆದರಾನಂದವುಳ್ಳವರಾಗಿರುವರು. ಕ್ರಿ. ಶ. 177ನೇ ವರ್ಷ ಬಂದೊದಗಿದಂದು, ಇನ್ನೂ ಆ ಮರ್ಕ ಔರೇಲಿಯನಾಳ್ತನದಲ್ಲಿ[2], ಲಿಯೋನ್ ಎಂಬಲ್ಲಿ ವಾಸಿಸಿರುವ ಪೊಥಿನನೆಂಬ ಅಧ್ಯಕ್ಷನನ್ನು ಸಹ ವಿಚಾರಣಾಸ್ಥಾನಕ್ಕೆಳ ತಂದರು; ಅವನು 90 ವರುಷ ಮೀರಿದವನು, ಅದಲ್ಲದೆ ಸ್ವಲ್ಪ ದಿವಸಕ್ಕೆ ಮುಂಚೆ ಮಾತ್ರ ತೊಲಗಿದ್ದ ಒಂದು ರೋಗದಿಂದ ಅವನಿಗೆ ಬಹಳ ಅಶಕ್ತಿ ಇತ್ತು. ಪ್ರತಿನಿಧಿಯು ಅವನನ್ನು ಕಂಡು, ಕ್ರೈಸ್ತರ ದೇವರು ಯಾರೆಂತ, ವಿಚಾರಿಸುವಾಗ ಅವನು, ನೀನು ಯೋಗ್ಯನಾಗಿದ್ದರೆ ನಿನಗೆ ತಿಳಿಸಲಾದೀತು! ಎಂತ, ಉತ್ತರ ಕೊಡಲು, ಸುತ್ತಲಿನ ಪ್ರಜೆಯು ಆ ಮಾತು ಕೇಳುತ್ತಲೇ ಅವನ ಮೇಲೆ ಕವಿದು, ಅವನಿಗೊದ್ದಿ, ಹೊಡೆದು, ಕಲ್ಲೆಸೆದು ಬರುವಲ್ಲಿ ಅವನನ್ನು ಶೆರೆಮನೆಗೊಯಿದರು. ಅವನನ್ನದರೊಳ

1) 102ನೇ, 103ನೇ ಪಾನು. 2) 113ನೇ ಪಾನು.

ಗೆ ನೆಲಕ್ಕಡಿಸಲು, ಅವನ ಉಸುರು ಕಟ್ಟಿದ ಹಾಗಾಗಿತ್ತು; ಎರಡು ದಿವಸದ ಈಚೆ ಅವನು ತೀರಿ ಹೋದನು.

ಅವನ ಮರಣದಿತ್ತ ಹಿಂಸಕರ ರೋಷವು ವಿಶೇಷವಾಗಿ ಉರಿಯಲಿಕ್ಕೆಸಗಿದ ನಾಲ್ವರು ಕ್ರೈಸ್ತರು ಯಾರಂದರೆ—ವಿಯೆನ್ ಪಟ್ಣದ ಒಬ್ಬ ಸಭಾಸೇವಕನಾದ ಸಂಕ್ತನು; ಸ್ವಲ್ಪ ದಿವಸಕ್ಕೆ ಮುಂಚೆ ಸ್ನಾನ ಹೊಂದಿ ಅಧಿಕ ವಿಶ್ವಾಸಶಾಲಿಯಾದ ಮಾತೂರನು; ಸಭೆಯದೊಂದು ಕಂಭವೆನ್ನಿಸುವ ಅತ್ತಲನೆಂಬ ರೋವಿಾಯ ಪಟ್ಣವಾಸಿತ್ವವುಳ್ಳ ಸಣ್ಣ ಅಸಿಯದವನೊಬ್ಬನು; ಗುಲಾಮಿಯಾದ ಬ್ಲಂದೀನಳೆಂಬವಳು.

ಸಂಕ್ತನೆಂಬ ಯೌವನಸ್ಥನ ಮೈ ಎಲ್ಲಾ ಪೀಡೆಯಿಂದ ರಕ್ತವಾಯಿತು; ಆದರೂ ಅವನು ಸಕಲ ಪ್ರಶ್ನೆಗಳಿಗೆ, ನಾನು ಕ್ರೈಸ್ತನಾಗಿದ್ಧೇನೆ! ಎಂದು, ಈ ಒಂದೇ ಉತ್ತರ ಹೇಳುತ್ತಲಿರುವನು. ಅದಕ್ಕೆ ಪ್ರತಿನಿಧಿಯೂ ನೆರೆದ ಪೀಡಕರೂ ಬಹಳ ಕುಪಿತರಾಗಿ, ಅವನ ಅಂಗಾಂಗಕ್ಕೆ ಹಿತ್ತಾಳೀ ಪಟ್ಟಿಗಳನ್ನು ಕಾಸಿ ಹಚ್ಚುವಲ್ಲಿ ಶರೀರವೆಲ್ಲಾ ಮುರುಟಿ ಹೋದರೂ ಅವನ ಬಾಯಿಯಿಂದ ಬೇರೆ ಮಾತು ಹೊರಡಲೇ ಇದ್ದ ಕಾರಣ ಅವನನ್ನು ತಿರಿಗಿ ಶೆರೆಮನೆಗೆ ಕಳುಹಿಸಿ, ಕೆಲವು ದಿನಕ್ಕೀಚೆ ತಿರಿಗಿ ತರಿಸಿ, ಅಂಥಾ ಪಟ್ಟೆಗಳಿಂದ ಅವನ ಮೈ ಮತ್ತೂ ಸುಡುವಷ್ಟರಲ್ಲಿ ಮುರುಟಿದ್ದದು ಮರಳಿ ನೆಟ್ಟಗಾಯಿತು. ಅಂದು ಅವನನ್ನು ಹೊಸ್ತಾಗಿ ಶೆರೆಗೆ ಹಾಕಿದರು. ಸಂಕ್ತನಿಗಾದಂಥ ಪೀಡೆಯನ್ನೇ ಆ ಮಾತೂರನು ಸಹ ತಾಳಿ ಕೊಂಡು ಬಂದಿದ್ದನು. ಸಂತೇ ಬೈಲಿನಲ್ಲಿ ಕಟ್ಟಿರುವದೊಂದು ಅಟ್ಟಣಿಯ ಮೇಲೆ ಆ ಪೀಡಾಕಾರ್ಯಗಳು ಮೂರ್ತಿಪೂಜಕರ ವಿನೋದಾರ್ಥ ನಡೆಯುವವು; ಕ್ರೈಸ್ತರನ್ನು ಅದರ ಮೇಲೆ ಹತ್ತಿಸಿ, ವೇದನೆ ಪಡಿಸುತ್ತಿದ್ದ ಹಿಂದೆ ಅವರನ್ನು ಮೃಗಗಳ ಬಾಯಿಗೊಯ್ಯುವ ಪದ್ಧತಿ ಇರುವದು. ಸಂಕ್ತನನ್ನೂ ಮಾತೂರನನ್ನೂ ಕೊಲ್ಲಲಿಕ್ಕೆ ನಿಶ್ಚೈಸಿದ ದಿವಸವು ವಿಗ್ರಹಾರಾಧಕರಿಗೆ ಒಂದು ಹಬ್ಬದ್ದು. ಪ್ರತಿನಿಧಿಯು ಆ ದಿನ ಅವರಿಬ್ಬರನ್ನು ಆ ಅಟ್ಟಣಿಯ ಮೇಲೆ ನಿಲ್ಲಿಸಿ, ಪ್ರಜೆಯು ದಿಕ್ಕುದಿಕ್ಕಿನಿಂದ ಗುಂಪುಗುಂಪಾಗಿ ಕೂಡಿರುವಲ್ಲಿ ಅವರಿಗೆ ಮೈ ಎಲ್ಲಾ ರಕ್ತ ಸುರಿಯುವಂತೆ ಹೊಡಿಸಿ, ಮೃಗಗಳ ವದನಗ್ರಾಸವಾಗಲಿಕ್ಕೆ ನೇಮಿತರಾಗುವ ಸಮಸ್ತ ಕ್ರೈಸ್ತರಿಗೂ ನಡಿಸುವ ಪ್ರಕಾರ ಅವರನ್ನು ಸಹ ಕೆಂಪಗೆ ಕಾಸಿದ್ದೊಂದು ಕಬ್ಬಿಣಕುರ್ಚಿಯಲ್ಲಿರಿಸಿ, ಹಶಿಬಿಶಿ ಮಾಡಿಸಿ, ಇನ್ನಾದರೂ ಅವರಿಬ್ಬರು ಅಚಲ ವಿಶ್ವಾಸಿಗಳಾಗಿ ಪ್ರಕಾಶಿಸುವಾಗ ಅವರನ್ನು ರಂಗಸ್ಥಳಕ್ಕೆಳೆಸಿ, ಮೃಗಗಳ ಮುಖದೆಡೆಗೆ ಹಾಕಿಸಿದನು.

ಅತ್ತಲನೆಂಬವನು ಸಣ್ಣ ಅಸಿಯದ ಪಟ್ಣವಾದ ಪೆರ್ಗಮದಿಂದ[1] ಬಂದು ಹಲವು ಕಾಲ ಲಿಯೋನಿನ ಸಭೆಯೊಳಗಿದ್ದ ಒಬ್ಬ ಬಹುಧೈರ್ಯಶೀಲ ಕ್ರೈಸ್ತನು.

1) 66ನೇ ಪಾನು.

ಮೂರ್ತಿಪೂಜಕರು, ಅವನನ್ನು ಸಹ ಸಂಹರಿಸ ಬೇಕೆಂತ, ಆಶೆಗೊಂಡರು. ಆಗ
ಲವರಾಳುಗಳು ಅವನನ್ನು ಶೆರೆಮನೆಯಿಂದ ತಂದು, ಬಾಧಿಸಿ, ಇಗೋ, ಅತ್ತಲನೆಂ
ಬ ಕ್ರೈಸ್ತನು ಇವನೇ! ಎಂತ, ಬರೆದಿರುವ ಒಂದು ಹಲಿಗೆ ಅವನ ಮುಂದೆ ಹಿಡು
ಕೊಂಡು, ಹೀಗೆ ಅವನನ್ನು ರಂಗಸ್ಥಳದ ಸುತ್ತಲು ನಡಿಸುತ್ತಾ ಬಂದರು. ಪ್ರಜೆ
ಯು ಆ ವೇಳೆಯಲ್ಲಿಯೇ, ಅವನನ್ನು ಕೊಲ್ಲ ಬೇಕೆಂತ, ಕೇಳಿತು; ಆದರೆ ಪ್ರತಿನಿ
ಧಿಯು, ಅವನು ರೋಮೀಯ ಪಟ್ಣವಾಸಿತನದವನೆಂದು[1], ತಿಳಿದು, ತನ್ನ ಕೈಯ
ಕೆಳಗಿನ ರೋಮೀಯ ಪಟ್ಣವಾಸಿಗಳಾದ ಬೇರೆ ಬೇರೆ ಕ್ರೈಸ್ತರ ವಿಷಯ ಕೈಸರನ
ಅಪ್ಪಣೆ ಏನಾಗುವದೆಂತ, ವಿಚಾರಿಸುವದಕ್ಕೋಸ್ಕರ ಕಳುಹಿಸಿರಲಿಕ್ಕೆ, ಉತ್ತರ ಬ
ರುವ ತನಕ ಅತ್ತಲನನ್ನು ತಿರಿಗಿ ಬಂಧಿಸಲಾಜ್ಞಾಪಿಸಿದನು. ಈ ಸಂಗತಿಯಿಂದ
ಅತ್ಲಾಗಿನ ಎಲ್ಲಾ ಹಿಂಸೆಯು ಅನಕ ಸ್ವಲ್ಪ ಅಡಗಿದ್ದು ಸಭೆಗೆ ಹಿತ; ಹ್ಯಾಗಂದರೆ,
ಪೀಡಾಭಯದಿಂದ ಕ್ರಿಸ್ತನನ್ನು ಅಲ್ಲಗಳೆದಿದ್ದ ಆ ಕ್ರೈಸ್ತರು ಪಶ್ಚಾತ್ತಾಪ ಪಟ್ಟು ಮ
ತ್ತೂ ಧೈರ್ಯಗೊಳ್ಳುವ ಅನುವಾಯಿತು. ಇಂತಾಗುವದೆಂದು, ಕಿಂಚಿತ್ತೂ ಯೋ
ಚಿಸದಿದ್ದ ವಿಗ್ರಹಾರಾಧಕರು ಇನ್ನು ಮುಂದೆ ಹೊಸ ವಿಚಾರಣವಾಗುವಲ್ಲಿ ಅ
ವರ ಮಾನಸಾಂತರ ಕಂಡು, ಕೋಪದಿಂದ ಹಲ್ಲು ಕಡೆಯುವವರಾದರು. ಮರ್ಕ
ಔರೇಲಿಯ ಕೈಸರನಿಂದ ಬಂದ ಅಪ್ಪಣೆ ಏನಂದರೆ—ಬಂಧನದಲ್ಲಿರುವ ಸಕಲ ಕ್ರೈ
ಸ್ತರನ್ನು ಇನ್ನೊಮ್ಮೆ ವಿಚಾರಿಸ ಬೇಕು; ಕ್ರೈಸ್ತತ್ವ ಶಪಿಸಿ ಬಿಡುವಂಥವರನ್ನು ಶೆರೆ
ಯಿಂದ ಬಿಡಿಸಿ, ಮಿಕ್ಕಾದವರ ಶಿರಸ್ಸು ಛೇದಿಸ ಬೇಕು.—ಶೆರೆಯ ಸಕಲ ಕ್ರೈಸ್ತರ
ಮೇಲೆ, ಅತ್ತಲನ ಮೇಲೆಯೂ, ಹೇಳಿದಂತೆ, ಪುನರ್ವಿಚಾರಣವಾಗಲು, ಆ ಕ್ರೈಸ್ತ
ರೆಲ್ಲರು, ಮುಂಚೆ ವಿಶ್ವಾಸಭ್ರಷ್ಟರಾಗಿದ್ದವರು ಸಹ, ಪ್ರಮುದಿತ ಸಾಕ್ಷಿ ಕೊಡುವ
ಸಮಯ ಅಲೆಕ್ಸಂದರನೆಂಬ ಒಬ್ಬ ಕ್ರೈಸ್ತ ವೈದ್ಯನು ಅವರ ಸಮೀಪದಲ್ಲಿ ನಿಂತು
ಕೊಂಡು, ಮುಖ ಹಸ್ತಗಳ ಸಂಜ್ಞೆಯಿಂದ ಅವರನ್ನು ದೃಢತ್ವಕ್ಕೆಚ್ಚರಿಸುತ್ತ, ಅವರಿ
ದು ಕಾಣಿಸುವಂದು ಅದೇ ರೀತಿಯಾಗಿ ಮೆಚ್ಚಿಗೆ ತೋರಿಸುತ್ತ ಇರುವನು. ಅವ
ನು ಸಣ್ಣಅಸಿಯದ ಫ್ರುಗಿಯ ದೇಶದಲ್ಲಿ[2] ಹುಟ್ಟಿ, ಬಂದು, ಅನೇಕ ವರುಷ ಗಲ್ಲಿ
ಯದಲ್ಲಿ ತನ್ನ ಕ್ರೈಸ್ತ ಸಹೋದರರೊಡನೆ ಬದುಕಿದ್ದನು. ಕ್ರೈಸ್ತರ ಹಗೆಗಾರರು ಅ
ಲೆಕ್ಸಂದರನಿಗೆ ತನ್ನ ಜತೆಕ್ರೈಸ್ತರ ಮೇಲಿರುವ ಮಮತೆ ನೋಡಿ, ಇವರ ಮಂಗಳ
ವಾದ ವಿಶ್ವಾಸನಿಶ್ಚಲತ್ವಕ್ಕೆ ಕಾರಣವಾದವನಿವನೇ! ಎಂತ, ಕಿನಿಸೇರಿದವರಾಗಿ, ಇ
ವನನ್ನೂ ಆಜ್ಞೆ ಮಾಡಿಸ ಬೇಕೆಂತ, ಕೂಗುತ್ತಲೇ ನ್ಯಾಯಾಧಿಪತಿ ಅವನನ್ನು ಹಿ
ಡಿಸಿ, ಪ್ರತಿನಿಧಿಯ ಬಳಿಗೆ ಕಳುಹಿಸಿದನು. ಅಲೆಕ್ಸಂದರನು ಅತ್ತಲನ ಸಹಿತ, ನಾ
ನು ಕ್ರೈಸ್ತನಾಗಿದ್ದೇನೆ! ಎಂದು, ಪ್ರತಿನಿಧಿಯ ಸಮ್ಮುಖದಲ್ಲಿ ಅಂಜದೆ ಅರಿಸಲಾಗಿ,

---

1) 55ನೇ, 106ನೇ ಪಾನು. 2) 28ನೇ, 47ನೇ, 56ನೇ, 58ನೇ, 99ನೇ ಪಾನು.

ಇವನು ಮೂರ್ತಿಪೂಜಾಜಾತ್ರೆಯಾಗುವ ಮರುದಿವಸ ಅವರಿಬ್ಬರನ್ನು ಸಂತೆಯ ಅಟ್ಟಣಿಯ ಮೇಲೆ ಹತ್ತಿಸಿ, ಹೊಡಿಸಿ, ಕೆಂಪಾಗಿ ಕಾಸಿದ ಕಬ್ಬಿಣಕುರ್ಚಿಯಲ್ಲಿ ಕುಂಡ್ರಿಸಿದಾಗ ಅತ್ತಲನು ಪ್ರಜೆಗೆ ಹೇಳಿದ್ದೇನಂದರೆ—ನೀವು ಈಗ ಗೈಯುವದು ಮನುಷ್ಯರನ್ನು ಸಂಹರಿಸುವ ಕಾರ್ಯವು; ಆದರೆ ನಾವು ನಮ್ಮ ಜತೆಮನುಷ್ಯರನ್ನು ಸಂಹರಿಸದ್ದು ಮಾತ್ರವಲ್ಲದೆ ಎಷ್ಟನ್ನಾದರೂ ಕೇಡು ಮಾಡುವದೇ ಇಲ್ಲ!— ಅಷ್ಟರಲ್ಲಿ ಅಲೆಕ್ಸಂದರನು ಒಂದು ನಿಟ್ಟುಸುರಾದರೂ ಬಿಡದೆ, ಸುಮ್ಮನಿದ್ದು, ತನ್ನ ಹೃದಂತರಂಗದೊಳಗೆ ದೇವರ ಸಂಗಡ ಮಾತಾಡುವನು. ಬಳಿಕ ಅವರನ್ನು ಮೃಗಗಳ ವದನಕ್ಕೆ ಹಾಕಿದರು. ಇವು ಅತ್ತಲನ ಮೈ ಎಲ್ಲಾ ರಕ್ತ ಮಾಡಿದರೂ ಅವನನ್ನು ಕೊಲ್ಲದೆ ಬಿಡಲಾಗಿ, ಮಾರಕನು ಅವನನ್ನು ಕತ್ತಿಯಿಂದ ಹೊಡದು ತೀರಿಸಿದನು.

ಹಿಂದೆ ಹೇಳಿದ ಆ ನಾಲ್ವರು ರಕ್ತಸಾಕ್ಷಿಗಳ ಮತ್ತು ಇತರರ ಕಠೋರ ವಿಚಾರಣ ಪೀಡೆ ಮರಣಗಳನ್ನು ಬ್ಲಂದೀನಳೆಂಬ ಆ ಗುಲಾಮಿಯೂ ಪೊಂತಿಕನೆಂಬ ಅವಳ ತಮ್ಮನೂ ದಿನಾಲು ನೋಡುತ್ತಿರ ಬೇಕಾಯಿತು; ಅದು ಹೊರ್ತಾಗಿ ನಾನಾ ತರದ ಶರೀರಪೀಡೆ ಪಡುತ್ತಾ ಬಂದಿದ್ದರು. ಮೊದಲಿನ ವಿಚಾರಣೆಯಲ್ಲಿ ಬ್ಲಂದೀನಳ ಸಂಗಡ ಇದ್ದ ಕ್ರೈಸ್ತರು, ಸ್ವಲ್ಪ ಕಾಲಕ್ಕೀಚೆ ರಕ್ತಸಾಕ್ಷಿಯಾದ ಅವಳ ಯಜಮಾನಳು ಸಹ—ಇವಳು ಬಹಳ ನಿಶ್ಪ್ರಾಣವಾದ ಮೈಯವಳು, ಇವಳು ತನಗೊದಗಲಿಕ್ಕಿರುವ ವೇದನೆಯನ್ನೆಲ್ಲ ತಾಳಿ ಕೊಂಡು ಸಂತೋಷದಿಂದ ಸಾಕ್ಷಿ ಕೊಡುವದಕ್ಕೆ ಅಸಮರ್ಥಳೆಂದು, ನೆನಸಿದ್ದದ್ದು ದೇವರ ದಯೆಯಿಂದ ಸತ್ಯವಾಗಲಿಲ್ಲ. ಹ್ಯಾಗಂದರೆ ಅವಳ ಪೀಡಕರು ಪ್ರಾತಃಕಾಲದಿಂದ ಸಾಯಂಕಾಲದ ಪರ್ಯಂತ ಅವಳನ್ನು ಬೇನೆ ಪಡಿಸುವಲ್ಲಿ ತಮಗಿದ್ದ ಎಲ್ಲಾ ವಿಧದ ಪೀಡಾಯಂತ್ರಗಳನ್ನು ಅವಳ ಮೇಲೆ ಹೂಡಿ, ದಣಿದು ಬಿಟ್ಟು, ಇವಳ ದೇಹವೆಲ್ಲಾ ಈಗ ಒಂದು ಮಹಾ ಘಾಯವಾದ ನಂತರ ಇವಳಿನ್ನು ಬದುಕುವದು ಹ್ಯಾಗೆ? ಎಂದು, ವಿಸ್ಮಿತರಾಗುತ್ತ ಬಂದಿದ್ದರೂ ಅವಳು ತನ್ನ ಕರ್ತನನ್ನು ಬೊಂಕಲಿಲ್ಲ. ಬಳಿಕ ಅವಳನ್ನೊಮ್ಮೆ ರಂಗಸ್ಥಳದೊಳಗಿನ ಮೃಗಗಳ ಮುಂದೆ ಒಂದು ಕಂಭಕ್ಕೆ ಕಟ್ಟಿರಲಾಗಿ, ಪ್ರಾರ್ಥನಾಸಕ್ತಳಾಗಿ ಪರಲೋಕದ ಕಡೆಗೆ ಕಣ್ಣೆತ್ತಿ ಕೈ ಚಾಚಿ ನಿಂತು ಕೊಂಡಿರುವವಳನ್ನು ಮೃಗಗಳು ಕಂಡು, ಮುಟ್ಟಲಿಕ್ಕೆ ಭಯ ಪಟ್ಟವಂತೆ. ಹ್ಯಾಗಾದರೂ ಅವು ಹತ್ತರ ಬಾರದಿರಲು, ಅವಳನ್ನು ಮತ್ತೂ ಶೆರೆಮನೆಗೊಯಿದರು. ಅವಳನ್ನು ಕಡೆಯ ಸರ್ತಿ ಪೀಡಿಸುವ ವೇಳ್ಯದಲ್ಲಿ ಪೊಂತಿಕನೆಂಬ ಆ 15 ವರುಷದ ಹುಡುಗನು ಮುಂಚಿನಂತೆ ಅವಳ ಕಷ್ಟದ ಸಂಗಡಿಗನಾಗಿದ್ದನು. ಕ್ರೈಸ್ತತ್ವದ ನೀಚತನವನ್ನರಿಕೆ ಮಾಡಿರಿ! ದೇವತೆಗಳಿಗೆ ಪೂಜಿಸಿರಿ! ಎಂತ, ವೈರಿಗಳವರನ್ನೊಡಂಬಡಿಸಲಿಕ್ಕೆ ತಿರಿಗಿ ಪ್ರಯತ್ನಿಸಿದ್ದು ತಿರಿಗಿ

ವ್ಯರ್ಥವಾಯಿತು; ಆದರೆ ಆ ಒಳ್ಳೇ ಸಾಕ್ಷಿಯಾದ ಎಳೇ ಹುಡುಗನು ತನ್ನ ಪ್ರಾ
ಣವನ್ನು ಯೇಸುವಿನ ಕೈಗೊಪ್ಪಿಸಿ, ಅಂದೇ ತೀರಿ ಹೋದನು. ತರುವಾಯ ಆ
ಕ್ರಿಸ್ತವಿರೋಧಿಗಳು ತನ್ನ ಶ್ರೇಷ್ಠ ಸಹನ ಆನಂದಗಳಿಂದ ಅನೇಕ ಮಂದಿ ಗಂಡು
ಮತ್ತು ಹೆಣ್ಣು ರಕ್ತಸಾಕ್ಷಿಗಳನ್ನೂ ಉಳಿದ ಕ್ರೈಸ್ತರೆಲ್ಲರನ್ನೂ ಬಲ ಪಡಿಸುತ್ತಲೇ ಇ
ದ್ದ ಬ್ಲಂದೀನಳನ್ನು ಮೃಗಗಳ ವದನಗ್ರಾಸವಾಗ ನೇಮಕವಾದವರೆಲ್ಲರಿಗೆ ಆಗು
ತ್ತಿರುವ ಆ ಸಮಸ್ತ ಸಂಕಟದೊಳಗೆ ಮುಳುಗಿಸಿ, ತದನಂತರ ಅವಳಿಗೊಂದು ಬ
ಲೆ ಸುತ್ತಿ ಕಟ್ಟಿ, ಅವಳನ್ನು ಒಂದು ಹುಚ್ಚು ಹೋರಿಯ ಮುಂದಿಟ್ಟರು. ಇದು ಅ
ವಳನ್ನು ಕೊಂಬಿನಿಂದ ತಿವಿದು, ಕಾಲಿನಲ್ಲಿ ತುಳಿದು, ಕೊಂದಿತು.

ಹಿಂದೆ ಹೇಳಿದವರಂತೆಯೇ ಇನ್ನು 48 ಮಂದಿ ರಕ್ತಸಾಕ್ಷಿಗಳು ಮೃಗರಂಗ
ಸ್ಥಳದಲ್ಲಿ ಈ ಲೋಕ ಬಿಟ್ಟು, ತಮ್ಮ ಕರ್ತನಿದ್ದಲ್ಲಿಗೆ ಹೋದರು. ಅದು ವಿನಹ
ಹೇರಳ ಮಂದಿ ಸಾಕ್ಷಿಗಳು ಶೆರೆಮನೆಯಲ್ಲಿ ಸತ್ತರು; ಇವರ ಹೆಣಗಳನ್ನು ಊರ
ನಾಯಿಗಳಿಗೆ ಹಾಕಿ ಕೊಡುವ ಪದ್ಧತಿ ಇತ್ತು. ಈ ಊರ ನಾಯಿಗಳೂ ರಂಗಸ್ಥಳ
ದ ಮೃಗಗಳೂ ಉಳಿಸಿದ ಎಲುವುಗಳನ್ನು ಕ್ರೈಸ್ತರು ತೆಕ್ಕೊಂಡು ಹೋಗಿ ಹುಗಿಯ
ದಂತೆ ಮೂರ್ತಿಪೂಜಕರು ಅವನ್ನೆಲ್ಲಾ ಒಂದೇ ಸ್ಥಳದಲ್ಲಿ ಕೂಡಿಸಿ, ಸುಟ್ಟು, ಬೂ
ದಿಯನ್ನು ಲಿಯೋನಿನಲ್ಲಿಯ ನದಿಗೆ ಚೆಲ್ಲಿದರು; ಕ್ರೈಸ್ತರು ನಂಬುವ ಶರೀರಪುನ
ರುತ್ಥಾನವನ್ನು ಆ ಪ್ರಕಾರವಾಗಿ ತಪ್ಪಿಸ ಬಹುದೆಂಬ ಆಲೋಚನೆಯು ಆ ಮರು
ಳುಜನಕ್ಕಿತ್ತು. ಗಲ್ಲಿಯದಲ್ಲಿ ಆ ಪ್ರಾಣಹಿಂಸೆಯು ಆ 177ನೇ ವರುಷಕ್ಕೆ ತೀರಿತು;
ಯಾಕಂದರೆ ಆ ಮಹಾ ಕೊಲೆ ಮಾಡುತ್ತಿದ್ದವರಿಗೆ ಕಡೆಯಲ್ಲಿ ಬೇಸರವೂ ಭಯ
ವೂ ಹಿಡಿಯಿತು.—

ರಕ್ತಸಾಕ್ಷಿಮರಣ ಹೊಂದಿದ ಪೊಥಿನ ಸಭಾಧ್ಯಕ್ಷನು ಇನ್ನು ಜೀವದಿಂದಿರು
ವಾಗ ಅವನು ಈರೇನೇಯನೆಂಬವನನ್ನು[1] ಲಿಯೋನ್ ಪಟ್ಣದಲ್ಲಿ ತನ್ನ ಸಹಾಯ
ಕ್ಕಾಗಿ, ಸಭೆಯ ಹಿರಿಯನೆಂತ, ನೇಮಿಸಿದ್ದನು. ಈ ಈರೇನೇಯನು ಸಣ್ಣ ಅಸಿಯ
ದ ಯವನ ಶೀಮೆಯಲ್ಲಿ ಗ್ರೇಕ ವಂಶದ ತಂದೆ ತಾಯಿಂದಿರಿಗೆ ಸುಮಾರು ಕ್ರಿ. ಶ.
140ನೇ ವರುಷ ಹುಟ್ಟಿದನು. ಬಾಲ್ಯದಿಂದಲೇ ಅವನಿಗೆ ಕ್ರೈಸ್ತ ಉಪದೇಶವಾಯಿ
ತು. ಕಾಲಗತಿಯಿಂದ ಪಪಿಯನೆಂಬ[2] ಮತ್ತು ಪೊಲುಕರ್ಪನೆಂಬ ಇವರಿಬ್ಬರು
ಅಪೊಸ್ತೊಲಿಕ ಪಿತೃಗಳು ಅವನಿಗೆ ಬೋಧಿಸಿದರು. ಆ ಮೇಲೆ ಕ್ರಿ. ಶ. 168ನೇ
ವರುಷಕ್ಕೆ ಮುಂಚೆ[3] ಪೊಲುಕರ್ಪನು ಅವನನ್ನು ಸುವಾರ್ತಾಪ್ರಸಂಗದ ನಿಮಿತ್ತ
ಗಲ್ಲಿಯ ದೇಶಕ್ಕೆ ಕಳುಹಿಸಲು, ಅವನು ಲಿಯೋನಿನ ಸಭೆಯಲ್ಲಿ ಆ ಹಿರಿತನ ಪಡೆದ
ನು. ಆ ಸಭೆಯುವರವನಿಗೆ ಬಹಳ ಮೆಚ್ಚುವವರಾದರು. ಕ್ರಿ. ಶ. 177ನೇ ವರುಷ

1) 100ನೇ, 114ನೇ, 116ನೇ ಪಾನುಗಳು. 2) 99ನೇ ಪಾನು. 3) 133ನೇ ಪಾನು.

ಕ್ಕೆ ಆ ದೊಡ್ಡ ಹಿಂಸೆ ಹತ್ತಿದ್ದಕ್ಕಿಂತ ಮುಂಚೆ ಪೊಥಿನನು ಅವನಿಗೆ ತನ್ನ ಸಭ್ಯರದೊಂದು ಪತ್ರ ಕೊಟ್ಟು, ರೋಮಪುರಕ್ಕೆ ಪ್ರೇಷಿಸಿದನು. ಯಾಕಂದರೆ ಅಂದಿಗೆ ಸ್ವಲ್ಪ ಕಾಲ ಮುಂಚೆ ಉದ್ಭವಿಸಿದ್ದ ಮಂತಾನಿಯಾನರೆಂಬ ಒಂದು ಶಾಖೆಯ ಕ್ರೈಸ್ತರನ್ನು[1] ರೋಮದ ಸಭೆಯವರು, ಇನ್ನೂ ಸಹೋದರರೆಂತ, ಅಂಗೀಕರಿಸಲೊಲ್ಲದೆ, ತಮ್ಮಲ್ಲಿಂದ ಬಹಿಷ್ಕರಿಸಿದ್ದರು; ಆದರೆ ಅನ್ಯ ಸ್ಥಳದ ಅನೇಕ ಕ್ರೈಸ್ತರಂತೆ ಗಲ್ಲಿಯದವರು ಸಹ ಆ ಶಾಖೆಯಲ್ಲಿ ಸದಭಿಪ್ರಾಯವೆನ್ನಿಸುವಂಥಾದ್ದಕ್ಕೊಳಿದು, ಸರ್ವಸಾಧಾರಣ ಕ್ರಮಕ್ಕಿಂತ ಸ್ವಲ್ಪ ಬೇರೆಯಾದ ಆ ಸಹೋದರರನ್ನು ಕರ್ತನ ಹೆಸರಲ್ಲಿ ಹ್ಯಾಗೂ ತಾಳಿ ಕೊಳ್ಳ ಬೇಕೆಂತ, ಆ ಪತ್ರದಲ್ಲಿ ಬರೆದಿದ್ದರು. ಆಗಿನ ರೋಮದ 12ನೇ ಅಧ್ಯಕ್ಷನಾದ ಆ ಎಲ್ಯುಥೆರನು[2] ಅದನ್ನೋದಿ, ಅದರ ಅರ್ಥಕ್ಕೆ ಅಸ್ತುಬಟ್ಟನು. ಈರೇನೇಯನು ಲಿಯೋನಿಗೆ ಹಿಂದಿರುಗಲಾಗಿ, ಪೊಥಿನನು ತೀರಿದ್ದನು; ಅಂದು ಹಿಂಸೆಗುಳಿದಿದ್ದ ಸಭ್ಯರು ಕ್ರಿ. ಶ. 178ನೇದರಲ್ಲಿ ಈರೇನೇಯನನ್ನು, ತಮ್ಮ ಅಧ್ಯಕ್ಷನೆಂತ, ಆರಿಸಿ ಕೊಂಡರು. ಬಳಿಕಲವನು 24 ವರುಷ ಪ್ರಸಂಗ ಗ್ರಂಥಗಳೆರಡರಿಂದ ಕ್ರೈಸ್ತತ್ವಕ್ಕಾಸ್ಪದ ಕೊಡುತ್ತಾ ಬರುತ್ತಿರಲಿಕ್ಕೆ, ಲಿಯೋನ್ ಪಟ್ಣದವರೆಲ್ಲರೂ ಕ್ರೈಸ್ತರಾದರು. ತರುವಾಯ ಕ್ರಿ. ಶ. 202ನೇ ವರ್ಷ ಸೆಪ್ತಿಮಿಯ ಸೇವೇರ ಕೈಸರನ ದೆಸೆಯಿಂದ ಗಲ್ಲಿಯದಲ್ಲಿಯೂ ಮತ್ತೊಂದು ಹಿಂಸೆ ಆದಾಗ ಈರೇನೇಯನು ಕೂಡ ರಕ್ತಸಾಕ್ಷಿಮರಣ ಪಟ್ಟನು[3].

## 15. ತೆರ್ತುಲ್ಲಿಯಾನನೆಂಬ ಸಭಾಪಿತನು.

ಕ್ರಿ. ಶ. 160ನೇ ವರುಷ ಆಫ್ರಿಕದ ಕರ್ಥಾಗೊ ಪಟ್ಣದಲ್ಲಿ[4] ತೆರ್ತುಲ್ಲಿಯಾನನೆಂಬವನು[5] ಜನಿಸಿದನು. ಅವನ ತಂದೆಯು ಮತದ ಮೇಲೆ ಮೂರ್ತಿಪೂಜಕನು, ಉದ್ಯೋಗದ ಮೇಲೆ ರೋಮಿಾಯ ಪ್ರತಿನಿಧಿಯ ಸೇನೆಯಲ್ಲೊಬ್ಬ ಶತಾಧಿಪತಿಯು. ಅವನು ತನ್ನ ಮಗನನ್ನು ರಾಜಸೇವೆಗೆ ನೇಮಿಸಿದ್ದರಿಂದ ಇವನು ರಾಜಕನೀತಿಶಾಸ್ತ್ರಾಭ್ಯಾಸ ಮಾಡುವವನಾದನು. ತನ್ನ ಜತೆಯೌವನಸ್ಥರಂತೆ ಅವನು ಸಹ ಅಂದು ಲೌಕಿಕ ಭೋಗಕ್ಕೆಳಸದಿರಲಿಲ್ಲ; ವಿಶೇಷವಾಗಿ ನಾಟ್ಯಮೃಗರಂಗಸ್ಥಳಗಳ ಮೇಲೆ ಅವನಿಗೆ ಬಹಳ ಪ್ರೀತಿ; ಹಿಂದಗಡೆ ಅವನಿದಕ್ಕೋಸ್ಕರ ಕಠಿಣ ದುಃಖಗೊಂಡಿರುವನು. ಅವನು ತನ್ನ ಅಭ್ಯಾಸವೆಲ್ಲಾ ತೀರಿಸುತ್ತಲೆ ವಿವಾಹಿತನಾಗಿ, ರಾಜನೀತಿಶಾಸ್ತ್ರಿತ್ವದಿಂದ ಕೀರ್ತಿ ಪಡುತ್ತಿರಲು, ತನ್ನ ಆತ್ಮಕುರುಡತನದಲ್ಲಿ,

1) 15ನೇ ಸಂಧಿ. 2) 90ನೇ ಪಾನು. 3) 116ನೇ ಪಾನು. 4) 85ನೇ, 97ನೇ, 100ನೇ, 119ನೇ ಪಾನು. 5) 100, 104, 115, 116ನೇ ಪಾನುಗಳು.

ಕ್ರೈಸ್ತತ್ವವು ನಕಲಿಯ ಮೂಢತ್ವವೇ! ಎಂತ, ನೆನಸುತ್ತಿದ್ದನು. ಆದರೆ ಅಲೆಕ್ಸಂದರೀಯ ಪಟ್ಟದ ಕ್ಲೇಮೆಂತ ಉಪಾಧ್ಯಾಯನು[1] ವರ್ಣಿಸಿದ ಹಿಂಸೆಯೊಳಗಣ ರಕ್ತಸಾಕ್ಷಿಗಳ ಅದ್ಭುತ ಸ್ಥೈರ್ಯವನ್ನೂ ಸಕಲ ಕ್ರೈಸ್ತರು ದೆವ್ವಗಳ ಮೇಲೂ ತೋರಿಸುವ ಮಹಾತ್ಮೀಯ ಬಲವನ್ನೂ ಕಂಡು, ತನ್ನ ಜೀವಿತದ 33ನೇ ವರುಷಕ್ಕೆ ಕ್ರಿಸ್ತನ ವಿಶ್ವಾಸಿಯಾಗಿ, ತತ್‌ಕ್ಷಣವೇ ತನ್ನ ಕಡದು ಭಾವದ ಸರ್ವ ಸಾಹಸದಿಂದ ಅವನ ಹಿಂಬಾಲ ಹಿಡು ಕೊಂಡನು; ಅವನು ಒಂದೇ ಸಾರಿಗೆ ಸಂಪೂರ್ಣ ಕ್ರೈಸ್ತನಾದ ಹಾಗಾಯಿತು. ಯಾವದೊಂದು ಕಾರ್ಯವ ಮುಗಿಸದೆ ಅರ್ಧದಲ್ಲಿಡೋಣವು ಅವನಿಗೆ ತೀರಾ ಅಸಮ್ಮತವು; ಕ್ರೈಸ್ತರಿಂದ ಹುಟ್ಟಿ ಉಪದಿಷ್ಟರಾದ ಮಕ್ಕಳು ಸಹ ತನ್ನಂತೆ ಆಮೂಲಿಕ ಮಾನಸಾಂತರದಿಂದ ಕ್ರೈಸ್ತರಾಗ ಬೇಕೆಂತ, ಹೇಳುತ್ತಿರುವನು; ಯಾರೊಬ್ಬರೂ ಹುಟ್ಟುವಿಕೆಯಿಂದ ಕ್ರೈಸ್ತರಲ್ಲ, ಕ್ರೈಸ್ತರಾಗುವಿಕೆಯಿಂದಲೇ ಮಾತ್ರ! ಎಂಬ ಇಂಪು ನುಡಿ ಕೂಡ ಅವನಿಂದ ಬಂದದೆ. ಅವನು ಕ್ರೈಸ್ತನಾದಾಗಲೇ ವಿಗ್ರಹಾರಾಧಕರಿಗೂ ಯೆಹೂದ್ಯರಿಗೂ ಜ್ಞೋಸ್ತಿಕರು[2] ಮುಂತಾದ ಪಾಷಂಡರಿಗೂ ಅಂಜಿಕೆ ಇಲ್ಲದೆ ಎದುರಿಸಿ, ಕ್ರೈಸ್ತತ್ವದ ವಾದಿಯಾಗಿ, ಮಾಂಗಲ್ಯ ನೀತಿಚರ್ಯೆಯಿಂದೊಪ್ಪಲೆಸಗಿದನು.

ಅವನು ಬಹು ತಡವಿಲ್ಲದೆ ಸ್ನಾನ ಹೊಂದಿದ ಮೇಲೆ, ಸುಮಾರು ಕ್ರಿ. ಶ. 194ನೇ ವರುಷದಲ್ಲಿ, ಸಭೆಯ ಹಿರಿಯರಲ್ಲಿ ಒಬ್ಬನಾದನು; ತದನಂತರ ಕೊಂಚ ದಿವಸಕ್ಕೀಚೆ ರೋಮಪುರಕ್ಕೆ ಗಮನ ಮಾಡಿದನು.

ಅಷ್ಟರಲ್ಲಿ ಮೊಂತಾನಿಯಾನರೆಂಬ ಆ ಶಾಖೆಯ ಕ್ರೈಸ್ತರು ಉತ್ಪನ್ನರಾಗಿದ್ದರು[3]. ಹ್ಯಾಗಂದರೆ, ಸಣ್ಣ ಅಸಿಯದ ಫ್ರುಗಿಯ ಶೀಮೆಯ[4] ಒಂದು ಊರಲ್ಲಿ ಕ್ರಿ. ಶ. 150ನೇ ವರುಷಕ್ಕೆ ಮೊಂತಾನನೆಂಬ ಒಬ್ಬ ಪೂಜಾರಿಯು ಕ್ರೈಸ್ತಮತಾವಲಂಬಿಯಾದನು; ತನ್ನ ಶೀಮೆಯ ಇತರರೆಲ್ಲರಂತೆ ಅವನು ಸಹ ಗಂಧರ್ವಗ್ರಹವೆಂಬದೊಂದು ನಿರರ್ಥಕ ವಿದ್ಯೆಯ ಅಭಿಮಾನಿಯಾಗಿದ್ದು, ಕ್ರೈಸ್ತನಾದ ಮೇಲೆಯೂ ಅದರಲ್ಲಿ ಉಳು ಕೊಂಡನು. ಬಲ್ಲವರಿಗೆ, ಅದು ಮೆದುಲಿಗೆ ಸಂಬಂಧವಾದ ರೋಗವೆಂದು, ತಿಳಿದಿದ್ದರೂ ಅವನು, ಅದರಿಂದ ಸಹ ದೇವರು ಮನುಷ್ಯರಿಗೆ ತನ್ನ ಚಿತ್ತದ ಪರಿಜ್ಞಾನ ಕೊಡುವನೆಂತ, ಭಾವಿಸಿ ಕೊಳ್ಳುತ್ತಿದ್ದನು. ಸುಮಾರು ಕ್ರಿ. ಶ. 171ನೇ ವರುಷಕ್ಕೆ ಅವನು ಗಂಧರ್ವಗೃಹೀತನಂತೆ ಕಾಣಿಸಿ ಕೊಂಡು, ಅಂಥ ಅವಸ್ಥೆಯಲ್ಲಿ ಹೇಳುತ್ತಿದ್ದದೇನಂದರೆ—ಕ್ರೈಸ್ತರ ಮೇಲೆ ಹಿಂಸೆಗಳು ಬರಲಿಕ್ಕೆ ಸಮಯವಾಯಿತು; ಕ್ರಿಸ್ತವಿಶ್ವಾಸಿಗಳು ರಕ್ತಸಾಕ್ಷಿಮರಣ ಬಯಸ ತಕ್ಕದ್ದಲ್ಲದೆ ಸ್ವಶರೀರದಂಡನ

1) 84ನೇ, 100ನೇ, 115ನೇ ಪಾನು. 2) 18ನೇ ಸಂಧಿ. 3) 144ನೇ ಪಾನು. 4) 28, 47, 56, 58, 99. 141ನೇ ಪಾನುಗಳು.

ದಲ್ಲೂ ಲೋಕತ್ಯಾಗಿಗಳಾಗಿ ತೋರಿಸಿ ಕೊಳ್ಳ ಬೇಕು; ಸಭಾಹಿಂಸಕರ ಮೇಲೆ ದೇವರ ಶಿಕ್ಷೆಯು ಬೇಗನೆ ಒತ್ತರಿಸಿ ಬರುವದು; ಕಂಠೋಕ್ತಪ್ರಕಾರವೇ ತಿಳಿಯ ಬೇಕಾದ ಪರಿಶುದ್ಧ ಬರಹದಲ್ಲಿ ವಾಗ್ದತ್ತ ಮಾಡಿರುವ ಕರ್ತನ ಪುನರಾಗಮನವೂ ಇದರ ಸಹಿತದ ಅವನ ಸಹಸ್ರವರ್ಷರಾಜ್ಯವೂ ಸಮಿಾಪವಾದವು.—ಇಷ್ಟೆಲ್ಲಾ ಒಂದು ಅಂದದಿಂದ ಸರಿ; ಆದರೆ ಅವನು ಧಾತು ತಪ್ಪಿದ ಆ ರೋಗಸ್ಥಿತಿಯಿಂದ ನಿಜವಾಗಿ ಮರುಳು ಗೊಂಡು, ಕ್ರಿಸ್ತನು ಮಾತು ಕೊಟ್ಟ ಪರಿಶುದ್ಧಾತ್ಮವೆಂಬ ಆದರಿಕನು[1] ಮುಂಚೆ ಪಂಚಾಶತ್ತಮದಿನಹಬ್ಬದಲ್ಲಿ ಅಲ್ಲ ತನ್ನ ಕಾಲಕ್ಕೆಯೇ ಸಂಪೂರ್ಣವಾಗಿ ಬಂದು ತನಗೆ ಪ್ರಾಪ್ತವಾದನೆಂದು, ವದಿಸಿದ್ದು ಸತ್ಯಭ್ರುಂಶವೇ. ಅವನು ಆ ವಿಧದ ಮಾತುಗಳನ್ನಾಡುವ ಸಮಯ ಮರ್ಕ ಔರೇಲಿಯನೆಂಬ ಆ ಕ್ರೈಸ್ತದ್ವೇಷಿಯಾದ ಕೈಸರನು[2] ಆಳುತ್ತಿದ್ದನು; ಅಂದು ಕ್ರೈಸ್ತರಿಗೆ ಸರ್ವತ್ರ ಹಿಂಸೆಯು ಒದಗುತ್ತಿತ್ತಲ್ಲ? ಇಂತಿರಲಾಗಿ ಅನೇಕ ಕ್ರೈಸ್ತರು, ಮೊಂತಾನನು ತನ್ನ ಸ್ವವಿಷಯ ಹೇಳಿದ್ದನ್ನು ತಾವು ತುಚ್ಛೀಕರಿಸಿ ಹಾರಿಸಿದರೂ, ಅವನು ತನ್ನ ತರದಿಂದ ವಾಚಾತೀತ ಹಿಂಸೆಯೊಳಗಣ ಕ್ರೈಸ್ತರನ್ನು ಆತ್ಮಿಕ ಜಾಗ್ರತೆಗೂ ಸುಧೈರ್ಯವುಳ್ಳ ವಿಶ್ವಾಸಕ್ಕೂ ಪ್ರಚಂಡ ರೀತಿಯಾಗಿ ಎಚ್ಚರಿಸುತ್ತಿದ್ದದಕ್ಕೋಸ್ಕರ ಬಹಳ ಸಂತೋಷ ಪಡುವವರಾದರು; ಕ್ರೈಸ್ತಬೋಧಾರ್ಥದಲ್ಲಿ ಏನೂ ಅಲ್ಲಗಳೆಯುವದಲ್ಲ, ಕ್ರೈಸ್ತ ಜೀವಿತ ಪ್ರತೀಕ್ಷೆಗಳೆರಡರ ಶುಭಾರ್ಥದ ಸಂಸಿದ್ಧಿಗೆ ಧಾವತಿ ಪಡುವದೇ ಅವನ ಅಭಿಪ್ರಾಯವಲ್ಲವೋ? ಎಂತೆಂದರೆ,

ಅವನ ಮೇಲೆ ಮೊಂತಾನಿಯಾನರೆಂಬ ಉಪನಾಮ ಬಂದ ಕ್ರೈಸ್ತ ಶಾಖೆಯವರಿಗಿದ್ದ ಜೀವಿತ ಪ್ರತೀಕ್ಷೆಗಳ 7 ಮುಖ್ಯ ಸೂತ್ರಗಳು ಯಾವವಂದರೆ—1) ಪಟಂಗತನ, ವ್ಯಭಿಚಾರ, ಕೊಲೆ, ಮೂರ್ತಿಪೂಜಾಸಂಬಂಧವಾದ ಯಾವದೊಂದು ಕಾರ್ಯ ಮುಂತಾದ ಪಾತಕಗಳಿಗೆ ಮನಃಪೂರ್ವಕವಾಗಿ ಹೇಸಿ ಕೊಳ್ಳ ಬೇಕು; ವಿವಾಹವು ಅತಿ ಪರಿಶುದ್ಧವಾದ್ದರಿಂದ ಪುನರ್ವಿವಾಹವು ಸಹ ನೀತಿಚರ್ಯೆಗೆ ವಿರೋಧವಾಗಿದ್ದು, ವ್ಯಭಿಚಾರವೆನ್ನಿಸುವದು. 2)ಕಠಿಣೋಪವಾಸ, ಅವಿವಾಹಿತ್ವ ಇತ್ಯಾದಿ ಮೈದಂಡನವು ಕ್ರಿಸ್ತನ ಸ್ತೋತ್ರಕ್ಕಾಗುವ ಉತ್ಕೃಷ್ಟ ಪುಣ್ಯವು. 3)ಬಿಗಿಯಾದ ಸಭಾಶಿಕ್ಷೆ ನಡಿಯ ಬೇಕು; ಸ್ನಾತರಾದ ಬಳಿಕ ಕೊಲೆ, ವ್ಯಭಿಚಾರ ಮುಂತಾದ ಮಹಾ ಪಾತಕಗಳನ್ನು ಗೈಯುವವರು ಸಭೆಯೊಳಗಿಂದ ಬಹಿಷ್ಕೃತರಾಗ ಬೇಕು, ಅವರನ್ನದರೊಳಗೆ ಎಂದೂ ತಿರಿಗಿ ಶೇರಿಸ ಕೂಡದು; ಆದಾಗ್ಯೂ ಯಾವನೊಬ್ಬ ಮನುಷ್ಯನು, ಒಬ್ಬ ಸಭಾಧ್ಯಕ್ಷನಾದರೂ, ಅವರು ಮೋಕ್ಷ ಹೊಂದುವದಿಲ್ಲವೆಂತ, ಹೇಳ ಬಾರದು; ಆದರೆ ಹೀಗಿರಲಾಗಿ ಶಿಶುಸ್ನಾನವು ಯೋಗ್ಯ

1) 28ನೇ ಪಾನು; ಯೋಹಾ. 14, 16. 26. 2) 113ನೇ ಪಾನು.

ವಾದದಲ್ಲ, ಸಭೆಗೆ ಪ್ರವೇಶದ್ವಾರವೆನ್ನಿಸ ತಕ್ಕದ್ದಲ್ಲ; ಸನ್ಮಾರ್ಗದಲ್ಲಿ ನೆಲೆ ಗೊಂಡವರೇ ಮಾತ್ರ ಸ್ನಾನಾರ್ಹರು. 4)ರಕ್ತಸಾಕ್ಷಿಮರಣದ ಕಾಂಕ್ಷೆ ಇರ ಬೇಕು; ಅದಕ್ಕೆ ಪಲಾಯನದಿಂದ ತಪ್ಪಿಸಿ ಕೊಳ್ಳ ಬಾರದು. 5)ಪರಿಶುದ್ಧಾತ್ಮದ ವರಗಳು ಅಧ್ಯಕ್ಷ ಮೊದಲಾದ ಸಭೋದ್ಯೋಗಸ್ಥರಿಗೆ ವಿಶೇಷದಿಂದ ಪ್ರಾಪಿಸುವದಿಲ್ಲ; ಸರ್ವ ಕ್ರೈಸ್ತರೂ ಒಂದೇ ಭಾವದ ಯಾಜಕಕುಲವೂ[1] ಏಕ ಪ್ರಕಾರದಿಂದ ಪರಿಶುದ್ಧಾತ್ಮಾಭೃತಿಗೆ ಬಯಸಲರ್ಹರೂ ಆಗಿದ್ದಾರೆ. 6)ದೇವಪ್ರವಾದನಾವಾಕ್ಯಗಳು ಮಹಾಮೂಲ್ಯವೆಂದೆಣಿಸಿ, ಅವುಗಳಲ್ಲಿ ವಾಗ್ದತ್ತವಾದ ಸಹಸ್ರವರ್ಷರಾಜ್ಯವನ್ನು[2] ಅಭಿಲಾಷೆಯಿಂದ ಪ್ರತೀಕ್ಷಿಸುತ್ತಿರ ಬೇಕು. 7)ಸರ್ವ ಸಭ್ಯರಿಗೆ ಆ ಕಾಲದಲ್ಲಿ ಅಪೊಸ್ತೊಲಿಕ ವಿಶ್ವಾಸಪ್ರಮಾಣವೆನ್ನಿಸುವಂಥಾದ್ದನ್ನೇ ಕೈಕೊಂಡಿರ ಬೇಕು[3].—ಇಷ್ಟರಲ್ಲಿ ಕಾಲೋಚಿತಕ್ಕೆ ಹುಟ್ಟಿ ಸೌವಾರ್ತಿಕವಲ್ಲದಂಥ[4] ಭಕ್ತಿ ಸಹ ಗೋಚರಿಸಿದರೂ ಕ್ರಿಸ್ತನಿಗೆ ಬದುಕಿ ಸಾಯಲಿಕ್ಕಿಚ್ಛೈಸುವ ಭಾವವು ಅಭೀಷ್ಟವಲ್ಲವೇ? ಸ್ವಯಂಕೃತ ಪುಣ್ಯದಿಂದ ದೇವರೊಲ್ಮೆ ಸಂಪಾದಿಸಿ ಕೊಳ್ಳ ಬಹುದೆಂಬ ಅವಗುಣವುಳ್ಳ ತಾತ್ಪರ್ಯವನ್ನು ಮೊಂತಾನಿಯಾನರಲ್ಲಿ ಆರೋಪಿಸುವದು ನಿರ್ದಯೆಯೇ!

ತೆರ್ತುಲ್ಲಿಯಾನನು ರೋಮಕ್ಕೆ ಬಿಜ ಮಾಡಿದ್ದಕ್ಕೆ ಸುಮಾರು 19 ವರುಷ ಮುಂಚೆ ಲಿಯೋನಿನ ಈರೇನೇಯನು ಮೊಂತಾನಿಯಾನರ ಉದ್ದಿಶ್ಯ ಅಲ್ಲಿಗೆ ಆಗಮಿಸಿ, ಆಗಿನ ಸಭಾಧ್ಯಕ್ಷನಾದ ಎಲ್ಯುಥೆರನಿಗೆ ಅವರ ಮೇಲೆ ಅಂತಃಕರಣ ಹುಟ್ಟಿಸಿ, ಕೊಟ್ಟದ್ದನು[5]. ಬಳಿಕ ಕ್ರಿ. ಶ. ಸುಮಾರು 193ನೇದರಲ್ಲಿ ಸಣ್ಣ ಅಸಿಯದಿಂದ ಕ್ರೈಸ್ತನೆನ್ನಿಸುವವನೊಬ್ಬ ಪಂಡಿತನು ಅಲ್ಲಿಗೆ ಬಂದನು; ಅವನ ಹೆಸರು ಪ್ರಕ್ಸೆಯನೆಂಬದು; ಅಂದು ಎಲ್ಯುಥೆರನ ಉತ್ತರೋದ್ಯೋಗಿಯಾದ 1ನೇ ವಿಕ್ತೋರನನ್ನು ಮೊಂತಾನಿಯಾನರಿಗೆ ದ್ವೇಷ ಗೊಳ್ಳಿಸಲಿಕ್ಕೆ ಆ ಪಂಡಿತನಿಂದಾಯಿತು. ಅದಕ್ಕವನಿಗೆ ಅಯೋಗ್ಯವಾದದೊಂದು ಕಾರಣವಿತ್ತು. ಹ್ಯಾಗಂದರೆ ಅವನು ಪಾಷಂಡಿ; ಎಬ್ಯೋನಿತರಲ್ಲಿ[6] ಮುಂಚೆ ಉದ್ಭವಿಸಿದ್ದ ಕಳೆಗೆ ಹೋಲುವಂಥ ಅಪಬೋಧನೆ ಅವನಿಗಿತ್ತು; ಅವನೊದರಿದ್ದೇನಂದರೆ—ದೇವರು ತ್ರಿಯೇಕನಲ್ಲ, ಹಾಗಿದ್ದರೆ ಏಕದೇವತ್ವಕ್ಕೆ ಪ್ರತಿಕೂಲ; ಕ್ರಿಸ್ತನು ತನ್ನ ಜನ್ಮಕ್ಕೆ ಮುಂಚೆ ಮಾನುಷ ಅಥವಾ ದೈವಿಕ ಪುರುಷನಾಗಿರಲೇ ಇಲ್ಲ; ದೇವರು ಮಾನುಷ ಮಾಂಸಕ್ಕೆ ಕೂಡಿದ್ದರಿಂದ ಮಾತ್ರ ದೇವಪುತ್ರನೆನ್ನಿಸುವಂಥವನು ಉತ್ಪನ್ನನಾದನು.—ಇಂಥ ಅಪಬೋಧನೆಯ ಮೇಲೆ, ಕ್ರೂಜೆಯಲ್ಲಿ ಶ್ರಮ ಪಟ್ಟ ಪುರುಷನು ಪಿತೃದೇವನೇ! ಎಂತ, ಅನು

1) 93ನೇ, 96ನೇ ಪಾನುಗಳು. 2) 27ನೇ ಪಾನು. 3) 97ನೇ ಪಾನು; ತೆರ್ತುಲ್ಲಿಯಾನನ ಗ್ರಂಥದಲ್ಲಿಯದು ಅಂಥಾದೊಂದು ಈ ಸಂಧಿಯ ಅಂತದಲ್ಲಿ ಅದೆ. 4) 40ನೇ ಪಾನು. 5) 144ನೇ ಪಾನು. 6) 65ನೇ ಪಾನು.

ಮಾನ ಹುಟ್ಟುವ ಕಾರಣ ಆ ಪ್ರಕ್ಸೆಯನಿಗೂ ಅವನ ಪಕ್ಷದವರಿಗೂ, ಪಿತೃಶ್ರಮು ದಾತರೆಂತ, ಹೆಸರು ಬಂತು; ಅದಲ್ಲದೆ ಅವರು, ತ್ರಿಯೇಕತ್ವದ್ವೇಷಿಗಳು ಮತ್ತು ಏಕಪುರುಷಾಭಿಮಾನಿಗಳು ಎಂತಲೂ, ಕರಿಸಿ ಕೊಂಡರು. ಮೊಂತಾನಿಯಾನರು ತನ್ನ ಆ ಅಪಬೋಧನೆಗೆ ಬಹಳ ಅಸಹಿಸುವ ನಿಮಿತ್ತವೇ ಪ್ರಕ್ಸೆಯನು ಅವರ ವೈರಿಯಾಗಿದ್ದು, ವಿಕ್ತೋರ ಅಧ್ಯಕ್ಷನು, ಸರ್ವ ಮೊಂತಾನಿಯಾನರು ಸಭೆಯೊಳಗಿಂದ ಬಹಿಷ್ಕೃತರಾದವರೆಂತ, ತೀರ್ಪು ಮಾಡುವದಕ್ಕವನನ್ನು ಫುಸಲಾಯಿಸಿ, ಒಡಂಬಡಿಸಿದನು; ಅದು ಮಾತ್ರವಲ್ಲ, ಅವನು ಆ ಅಧ್ಯಕ್ಷನನ್ನು ಏಕಪುರುಷಾಭಿಮತಕ್ಕೆ ಒಪ್ಪು ಗೊಳ್ಳಿಸಿದನು. ವಿಕ್ತೋರ ಅಧ್ಯಕ್ಷನು ಉದ್ಯೋಗಾಧಿಕಾರಕಾಮನಾಗಿದ್ದು, ಸರ್ವ ಕ್ರೈಸ್ತರು ಏಕೀಭಾವದ ಯಾಜಕಕುಲವೆಂಬ ಮೊಂತಾನಿಯಾನರ ಆ ಮಂಗಳ ಬೋಧನಾಸೂತ್ರಕ್ಕೆ ಅಗದೀ ಮೆಚ್ಚದ್ದರಿಂದ ಅವರ ಮೇಲೆ ಹಗೆ ಮಾಡಲಿಕ್ಕೆ ಇನ್ನೊಂದು ಬೀಜ ಕಂಡು ಕೊಂಡನು.

ಆ ಸಮಯವೇ ತೆರ್ತುಲ್ಲಿಯಾನನು, ಹಿಂದೆ ಹೇಳಿರುವಂತೆ[1], ಕ್ರಿ. ಶ. ಸುಮಾರು 194ನೇ ವರುಷದಲ್ಲಿ ರೋಮಕ್ಕೆ ಬಂದು, ಪ್ರಕ್ಸೆಯನ ಎದುರಾಳಿಯಾಗಿ, ಅವನ ಬೋಧನೆಯ ಸುಳ್ಳುತನವನ್ನು ಚಂದಾಗಿ ತೋರಿಸಿದನು. ತದನಂತರ ಕ್ರಿ. ಶ. 202ನೇದರಲ್ಲಿ ವಿಕ್ತೋರನು ಸಾಯಲು, ಜೆಫುರೀನನು ಅವನ ಬದಲಿಯವನಾದನು. ಆ ವೇಳೆ ಸೆಪ್ತಿಮಿಯ ಸೆವೇರ ಕೈಸರನು ಕ್ರೈಸ್ತರಿಗೆ ಮುನಿಯುವವನಾಗಿ, ಕರುಣಿಸದೆ, ತನ್ನ ಕ್ರೂರ ಹಿಂಸಾಜ್ಞೆ ಪ್ರಕಟಿಸಲಿಕ್ಕೆ[2], ರೋಮಪುರದಲ್ಲಿ ಹಲವರು ಕ್ರೈಸ್ತರು ವಿಶ್ವಾಸಭ್ರಷ್ಟರಾಗುವಲ್ಲಿ ಜೆಫುರೀನನು ಅಂಥವರನ್ನು ಸಭೆಯೊಳಗೆ ತಿರಿಗಿ ಶೇರಿಸುವದಕ್ಕೆ ನ್ಯಾಯಾನ್ಯಾಯಗಳನ್ನು ಒಳ್ಳಿಥಾಗೆ ಪರಿಶೋಧಿಸದೆ, ಬೇರೆ ವಿಷಯದಲ್ಲಿಯೂ ಬಹಳ ಸಡ್ಲು ತರದ್ದೊಂದು ಸಭಾಶಿಕ್ಷೆ ನಡಿಸುತ್ತಿರುವನು. ಅದು ವಿನಹ ಅವನು ಆ ತ್ರಿಯೇಕತ್ವದ್ವೇಷಾಪಬೋಧನೆಗೆ ಮಿಗಿಲಾಸ್ಪದ ಕೊಡುತ್ತಿರುವನು. ವಿಶ್ವಾಸಭ್ರಷ್ಟರನ್ನೂ ಪಾಷಂಡಿಗಳನ್ನೂ ಕುರಿತ ಆ ವಿಧದ ಲಘುತನವು ತೆರ್ತುಲ್ಲಿಯಾನನಿಗೆ ಕೇವಲ ಅಸಹ್ಯವಾದದ್ದು; ಆದ್ದರಿಂದ ಜೆಫುರೀನನಿಗಿಂತಲೂ ಅವನವಲಂಬಿಗಳಾದ ರೋಮದ ಇತರ ಅನೇಕ ಸಭೋದ್ಯೋಗಿಗಳಿಗಿಂತಲೂ ಮೊಂತಾನಿಯಾನರು ಅವನ ಹೃದಯಕ್ಕೆ ಪ್ರಿಯರಾದರು. ಹೀಗಿರಲಿಕ್ಕೆ, ಆ ಸಭೋದ್ಯೋಗಸ್ಥರು ಅವನ ಕೀರ್ತ್ಯ ನೀತಿಚರ್ಯೆಗೆ ಮಾತ್ರವಲ್ಲದೆ ಅವನ ವಿದ್ಯಾತಿಶಯಕ್ಕೆ ಸಹ ಪಡುತ್ತಾ ಬಂದ ಹೊಟ್ಟೆಕಿಚ್ಚನ್ನು ಕ್ರಿಯೆಗಳಿಂದಲೂ ಕಾಣಿಸಲಿಕ್ಕೆ ತೊಡಗಿದರು. ಅದು ನಿಮಿತ್ತ ಅವನು ಬಹು ದುಃಖಗೊಂಡು, ಸುಮಾರು ಕ್ರಿ. ಶ. 203ನೇ ವರುಷ ಕರ್ಥಾಗೊವಿಗೆ ಹಿಂದಿರುಗಿ, ಸ್ವಲ್ಪ ಕಾಲದ ಮೇ

1) 145ನೇ ಪಾನು. 2) 115ನೇ ಪಾನು.

ಲೆ ಪ್ರಕ್ಸೆಯನಿಗೆ ವಿರೋಧವಾದದೊಂದು ಇಂಪಿನ ಸಿದ್ಧಾಂತಗ್ರಂಥ ರಚಿಸಿ, ಹೊರಡಿಸಿದನು. ತನ್ಮಧ್ಯ ಕರ್ಥಾಗೊವಿನಲ್ಲಿಯ ಆ ಸೆವೇರ ಕೈಸರನ ಪ್ರತಿನಿಧಿಯು ಆ ಪಟ್ಣದ ಕ್ರೈಸ್ತರನ್ನು ಅಧಿಕ ರೋಷದಿಂದ ಹಿಂಸಿಸುವವನಾಗಿದ್ದನು. ಈ ಸಭಾಕಂಟಕಕ್ಕೋಸ್ಕರ ತೆರ್ತುಲ್ಲಿಯಾನನು ತನ್ನ ಕಡದು ಭಾವಕ್ಕನುಗುಣವಾಗಿ, ಒಂದೇ ಸಾರಿಗೆ ಸರ್ವ ಶಕ್ತಿಯಿಂದ ಎಲ್ಲಾ ಅಬಲವಾದ ಸಭಾಶಿಕ್ಷೆಗೆದುರಿಸುವದು ತನ್ನ ಹಂಗೆಂದು, ತಿಳುಕೊಂಡು, ಬಹಿರಂಗದಲ್ಲಿ ಮೊಂತಾನಿಯಾನರ ಪಕ್ಷವಾದಿಯಾಗಿ, ಅವರು ತನ್ನ ವಿಶೇಷೋತ್ತಮ ಸಹೋದರರಾದವರೆಂದು, ನಿರ್ಣಯ ಹೇಳಿದನು. ಅವನು 16 ವರುಷದಿತ್ತ ರೋಮಪುರದಲ್ಲಿ ಆ ಸಡ್ಲು ತರದ ಸಭಾಶಿಕ್ಷೆಯಿಂದಾಗುವ ದುಷ್ಫಲಗಳನ್ನು ನೋಡಲು, ತನ್ನ ಆ ನಡತೆಗೆ ಪಶ್ಚಾತ್ತಾಪ ಗೊಳ್ಳದ್ದಕ್ಕೆ ಮತ್ತಷ್ಟು ಕಾರಣವಾಯಿತು. ಹ್ಯಾಗಂದರೆ ಅಂದು ಆ ಹೇಲಿಯೊಗಬಾಳ[1] ಕೈಸರನ ಕಾರುಭಾರಿನೊಳಗೆ ಕ್ರಿ. ಶ. 219ನೇ ವರ್ಷ ಕಲ್ಲಿಸ್ತನೆಂಬವನು[2] ಜೆಫುರೀನನ ಉತ್ತರೋದ್ಯೋಗಿಯಾದನು. ರೋಮಪುರದ ಈ 15ನೇ ಅಧ್ಯಕ್ಷನು ಪ್ರಕ್ಸೆಯನ ಅಪಬೋಧನೆಯನ್ನು ಬಯಲಾಗಿ ಸಾರುವದಕ್ಕೆ ನಾಚಿಕೆ ಪಡದಿದ್ದದು ಮಾತ್ರವಲ್ಲದೆ ನೀತಿಚರ್ಯೆ ಕೆಡಿಸುವಂಥ ಈ ಸೂತ್ರಗಳನ್ನೂ ಪ್ರಕಟಿಸಿದನು, ಯಾವವಂದರೆ—ಇಬ್ಬರು ಮೂವರು ಹೆಂಡರಿರುವ ಸಭ್ಯರಿಗೂ ಹಸ್ತಾಧಾನದಿಂದ ಸಭೋದ್ಯೋಗ ಕೊಡ ಬಹುದು; ಒಬ್ಬ ಸಭಾಧ್ಯಕ್ಷನು ಆತ್ಮನಾಶನಕ್ಕಾಗುವದೊಂದು ಮಹಾ ಪಾತಕ ಮಾಡಿದ್ದರೂ ಅವನುದ್ಯೋಗ ತೆಗೆಯ ಕೂಡದು; ಸಭೋದ್ಯೋಗಿಗಳಿಗಿರುವ ಬಂಧಮೋಕ್ಷಾಧಿಕಾರದಿಂದ ವಿಮೋಚನವಾಗದಂಥ ಒಂದು ಮಹಾ ಪಾತಕವೂ ಇಲ್ಲ; ಬಿಗುವಿನ ಸಭಾಶಿಕ್ಷೆ ಯಾತಕ್ಕೆ? ಜಲಪ್ರಳಯದ ಕಾಲದಲ್ಲಿ ಕ್ರೈಸ್ತ ಸಭಾಸಾದೃಶ್ಯವಾದ ನೋಹನ ನಾವೆಯೊಳಗೆ ಶುದ್ಧಾಶುದ್ಧ ಮೃಗ ಪಶುಗಳು, ನಾಯಿ ತೋಳಗಳಾದರೂ, ಒಟ್ಟುಗೂಡಿದ್ದವಲ್ಲ?—ಇಂಥಾ ಸೂತ್ರಗಳ ಕೆಟ್ಟ ಫಲ ವರ್ಣಿಸಲವಶ್ಯವಿಲ್ಲ; ಆದರೆ ಅವುಗಳ ದೆಸೆಯಿಂದ ಸಹ ಕ್ರಿಸ್ತನಾಥನು, ಹಿಂದೆ ಗೊತ್ತಾದ ಹಾಗೆ[3], ತನ್ನ ಶಕದ 249ನೇ ವರುಷ ಹಿಡಿದು, ತನ್ನ ಸಭೆಯನ್ನು, ಒಂದು ಹಿಂಸೆ ತಂದು, ತಿರಿಗಿ ಚೊಕ್ಕ ಮಾಡ ಬೇಕಾಯಿತು. ಅಲೆಕ್ಸಂದರ ಸೆವೇರ ಕೈಸರನ[4] ಆಳುಗಳು ಕ್ರಿ. ಶ. 223ನೇದಕ್ಕೆ ಕಲ್ಲಿಸ್ತನನ್ನು, ಅವನ ಆ ವಿಧದ ಕ್ರೈಸ್ತತ್ವಕ್ಕೇನೋ? ಬಂಧಿಸಿ, ಶಿರೆಮನೆಯ ಒಂದು ಕಿಟಕಿಯೊಳಗಿಂದ ಒಂದು ಭಾವಿಯೊಳಗೆ ದೊಬ್ಬಿ ಹಾಕಿ, ಈ ರೀತಿಯಿಂದ ಕೊಂದರು.

ಆದರೆ ತೆರ್ತುಲ್ಲಿಯಾನನು ಕ್ರಿ. ಶ. 240ನೇ ವರುಷದ ವರೆಗೆ ಸಭಾಭಿವೃದ್ಧಿಗೆ ಬದುಕಿ, ಅಂದು 80 ವರುಷದವನಾಗಿ ತೀರಿದನು.

---

1) 116ನೇ ಪಾನು. 2) Hippolyt, Book 9. 3) 118ನೇ ಪಾನು. 4) 116ನೇ ಪಾನು.

ಅವನ ಗ್ರಂಥಗಳಲ್ಲಿ ಕ್ರೈಸ್ತರಿಗೆ ಅಂದಿರುವ ಎರಡು ಸಣ್ಣ ವಿಶ್ವಾಸಪ್ರಮಾಣಗಳಿವೆ. ಒಂದು ಯಾವದಂದರೆ[1]— ಏಕ ದೇವರಲ್ಲಿ ನಂಬುತ್ತೇವೆ, ಆದರೆ ದೇವರ ವಾಕ್ಯವಾದ ಪುತ್ರನು ಸಹ ಇದ್ದಾನೆ; ಅವನಿಂದ ಇವನು ಹೊರಟನು; ಇವನಿಂದ ವಿಶ್ವವು ನಿರ್ಮಿತವಾಗಿದೆ, ಇವನಿಲ್ಲದೆ ಒಂದೂ ನಿರ್ಮಿತವಾಗಲಿಲ್ಲ; ಇವನು ಅವನಿಂದ ಒಬ್ಬ ಕನ್ಯಾಸ್ತ್ರೀಯೊಳಗೆ ಪ್ರೇಷಿತನಾಗಿ, ಅವಳಿಂದ ಹುಟ್ಟಿ, ಹೀಗೆ ಮನುಷ್ಯನೂ ದೇವರೂ ಅಂದರೆ ಮನುಷ್ಯಪುತ್ರನೂ ದೇವಪುತ್ರನೂ ಆಗಿದ್ದು, ಯೇಸು ಕ್ರಿಸ್ತನೆಂದು, ಹೇಳಿಸಿ ಕೊಂಡನು; ಇವನು ಪರಿಶುದ್ಧ ಬರಹಕ್ಕನುಸಾರವಾಗಿ ಶ್ರಮ ಪಟ್ಟು, ಸತ್ತು, ಹುಗಿಸಿ ಕೊಂಡು, ಪಿತನಿಂದ ತಿರಿಗಿ ಉತ್ಥಿತನಾಗಿ, ಪರಲೋಕಕ್ಕೇರಿಸಿ ಕೊಂಡು, ಅಲ್ಲಿ ಪಿತನ ಬಲಪಾರ್ಶ್ವದಲ್ಲಿ ಕೂತು ಕೊಂಡು, ಅಲ್ಲಿಂದ ಬಂದು, ಜೀವದಿಂದಿರುವವರಿಗೂ ಸತ್ತವರಿಗೂ ನ್ಯಾಯ ತೀರಿಸುವನು; ಇವನು ಪರಲೋಕದ ಕಡೆಯಿಂದ ತನ್ನ ತಂದೆಯಿಂದ ತನ್ನ ವಾಗ್ದತ್ತಕ್ಕನುಗುಣವಾಗಿ ಕಳುಹಿಸಿದ ಪರಿಶುದ್ಧಾತ್ಮವು ಆದರಿಕನೂ ಪಿತಾಪುತ್ರಪರಿಶುದ್ಧಾತ್ಮದಲ್ಲಿ ನಂಬುವವರೆಲ್ಲರ ವಿಶ್ವಾಸದ ಶುದ್ಧೀಕಾರನೂ ಆಗಿದ್ದಾನೆ.—ತೆರ್ತುಲ್ಲಿಯಾನನು ತನ್ನ ಸುತ್ತಲಿನ ಮೂರ್ತಿಪೂಜಕರಿಗೆ ಬರೆದ್ದೊಂದು ಗ್ರಂಥದಲ್ಲಿ, ವಿಧೇಯ ಪ್ರಜೆಯೂ ಧೊರೆತನದವರ ಕ್ಷೇಮಕ್ಕಾಗಿ ಪ್ರಾರ್ಥಿಸುವವರೂ ಆದಂಥ ಕ್ರೈಸ್ತರನ್ನೆಂತೂ ಹಿಂಸಿಸುವದು ಬಹಳ ಅನ್ಯಾಯವೆಂದು, ತೋರಿಸಿದ ಮೇಲೆ ಕ್ರೈಸ್ತರು ಆಗಿನ ಹಿಂಸೆಗಳಲ್ಲಿ ನಡೆಯುವ ರೀತಿಯ ಕುರಿತು ಹೇಳುವದೇನಂದರೆ—ದೇವಪ್ರಾರ್ಥನೆಯಲ್ಲೂರಿ ಕೊಂಡಿರುವವನೊಬ್ಬ ಕ್ರೈಸ್ತನು ಏನೇನೂ ಸಹಿಸುವನು. ಅಪಕಾರಕ್ಕೆ ಅಪಕಾರ ಮಾಡುವದು ಕ್ರೈಸ್ತರಾದ ನಮ್ಮ ಮನೋರ್ಥವಾಗಿದ್ದರೆ ನಮ್ಮ ಹಗೆ ತೀರಿಸಿ ಕೊಳ್ಳಲಿಕ್ಕೆ ಏನೂ ಅಡ್ಡಿ ಇರುತ್ತಿದ್ದಿಲ್ಲ. ನಾವು ಸರ್ವತ್ರ ದೊಡ್ಡ ಸಮೂಹವಾಗಿದ್ದೇವಲ್ಲ? ನಾವು ಮೊನ್ನಿನವರು, ಹೌದು; ಆದರೆ ನಿಮ್ಮ ಪಟ್ಣಗಳಲ್ಲಿಯೂ ದ್ವೀಪಗಳಲ್ಲಿಯೂ ಮಂತ್ರಿಸಭೆಗಳಲ್ಲಿಯೂ ರಾಜಾಲಯಗಳಲ್ಲಿಯೂ ಸಮೂಹ ಸಮೂಹವಾಗಿ ಇರುವವರು ನಾವೇ. ನಾವೆಲ್ಲರೂ ಒಟ್ಟಾಗಿ ನಿಮ್ಮ ಪ್ರದೇಶಗಳನ್ನು ಬಿಟ್ಟದ್ದಾದರೆ, ಅವೆಲ್ಲವು ಎಷ್ಟೋ ಬರೇವು ಆದಾವು! ಎಂತ, ಬಹಳ ವಿಸ್ಮಯ ಪಟ್ಟೇರಿ! ನಾವು ಘಟ್ಟಿಯಾದದೊಂದು ಬಲ; ಹ್ಯಾಗಂದರೆ ನಾವೆಲ್ಲರು ಕೂಡಿ ಒಂದೇ ಶರೀರ, ಮತ ನೀತಿ ಪ್ರತೀಕ್ಷೆಗಳ ಅದೇ ಬಂಧವು ನಮ್ಮೆಲ್ಲರನ್ನು ಬಿಗಿಯಾಗಿ ಜೋಡಿಸಿ ಅದೆ; ಆದರೂ ಕ್ರೈಸ್ತರು ಮುಯ್ಯಿಗೆ ಮುಯ್ಯಿ ಗೈಯುವದುಂಟೇ? ನಿಮ್ಮ ಶತ್ರುಗಳಿಗೆ ಪ್ರೀತಿ ಮಾಡಿರೆಂತ, ದೇವರು ಅಪ್ಪಣೆ ಕೊಟ್ಟಿದ್ದಾನಲ್ಲವೋ[2]?—

1) 147ನೇ ಪಾನು. 2) ಮತ್ತಾ. 5, 24.

## 16. ಒರೀಗೆನನೆಂಬ ಸಭಾಪಿತನು.

ಆಫ್ರಿಕದಲ್ಲಿಯ ಐಗುಪ್ತ ದೇಶದ ಅಲೆಕ್ಸಂದರೀಯ ಪಟ್ಣದಲ್ಲಿ[1] ಲೆಯೋನಿದನೆಂಬ ಒಬ್ಬ ವಿದ್ವಾಂಸನಿದ್ದನು; ಈ ಒಳ್ಳೇ ಕ್ರೈಸ್ತನಿಗೆ ಕ್ರಿ. ಶ. 185ನೇ ವರುಷ ಕೊಮ್ಮೊದ ಕೈಸರನ ಆಳ್ತನದಲ್ಲಿ[2] ಒರೀಗೆನನೆಂಬ ಕುಮಾರನು ಹುಟ್ಟಿದನು. ಈ ಹುಡುಗನಿಗೆ ಬಹಳ ಬುದ್ಧಿಚಾತುರ್ಯವೂ ಜ್ಞಾಪಕಶಕ್ತಿಯೂ ಇರುವದು; ಅವನು ತನ್ನ ತಂದೆಯ ಅಪ್ಪಣೆಯೊಳಗೆ ಲೌಕಿಕ ವಿದ್ಯೆಯ ಗ್ರಂಥಗಳನ್ನಲ್ಲದೆ ಪರಿಶುದ್ಧ ಬರಹವನ್ನು ಸಹ ಎಡೆ ಬಿಡದೆ ಓದುವದರಿಂದ ಇದನ್ನೆಲ್ಲಾ ಬಾಯಿಪಾಠವಾಗಿ ಕಲಿತು ಕೊಂಡನು. ಆದರೆ ಅವನು ಬಾಯಿಪಾಠ ಮಾಡಿ ಕೊಂಡದ್ದು ಅವನ ಗ್ರಹಿಕೆಗೆ ಸಹ ಬರುವದು; ಆದ್ದರಿಂದ ಅವನು ಬಾಲ್ಯದಲ್ಲಿಯೇ ದೇವವಾಕ್ಯದ ಅರ್ಥವನ್ನು ಕುರಿತು ಮಹಾವಿಚಿತ್ರವಾದ ಪ್ರಶ್ನೆಗಳನ್ನು ಹಾಕುವನು. ಅವನ ತಂದೆಯು, ತನ್ನ ಮಗನಲ್ಲಿ ಗರ್ವವು ಉದ್ಭವಿಸೀತೆಂದು, ಅಂಥ ಪ್ರಶ್ನೆಗಳಿಗೋಸ್ಕರ ಅವನನ್ನು ತಿರಿತಿರಿಗಿ ಬೆದರಿಸುವನು. ಆದರೂ ತಂದೆಗೆ ಆ ಗುಣದಿಂದ ಸಲೆ ಸಂತೋಷವಾಯಿತು; ಅವನು ಆಗಿಂದಾಗ ರಾತ್ರಿಹೊತ್ತಿನಲ್ಲಿ ತನ್ನ ಮಗನು ನಿದ್ರೆಗೊಂಡಿರುವ ಮಂಚಕ್ಕೆ ಬಂದು, ಅವನೆದೆಗೆ ಮುದ್ದಿಕ್ಕಿ, ದೇವರೇ, ನನಗೆ ಇಂಥಾ ಕುಮಾರನನ್ನು ಕೊಟ್ಟದ್ದು ಬಹಳ ಉಪಕಾರವಾಯಿತೆಂದು, ಕೃತಜ್ಞತೆಯಿಂದ ಕಣ್ಣೀರು ಸುರಿಸುವನು. ಆ ಹುಡುಗನ ತಂದೆಯು ಹೊರ್ತಾಗಿ ಅಲೆಕ್ಸಂದರೀಯದ ಉಪದೇಶಿಶಾಲೆಯ ಉಪಾಧ್ಯಾಯರಾದ ಪಂತೇನನೂ[3] ಕ್ಲೇಮೆಂತನೂ[4] ಅವನಿಗೆ ವಿದ್ಯೆ ಕಲಿಸುತ್ತಾ ಇರುವರು. ಅವನು 17 ವರುಷದವನಾಗಿರಲು, ಸೆಪ್ತಿಮಿಯ ಸೆವೇರ ಕೈಸರನ ಆಳುವಿಕೆಯೊಳಗೆ ಅಲೆಕ್ಸಂದರೀಯದ ಕ್ರೈಸ್ತರಿಗೆ ಅಘೋರ ಹಿಂಸೆಯಾದಾಗ ಲೆಯೋನಿದನನ್ನು ಸಹ ಶಿರೆಮನೆಗೆ ವೈದರು[5]. ಬಳಿಕ ಒರೀಗೆನನು ದಿನದಿನಕ್ಕೆ ತನ್ನ ತಂದೆಯೆಡೆಗೆ ಬಂದು, ಅವನ ಸಂಗಡ ರಕ್ತಸಾಕ್ಷಿಯಾಗಿ ಸಾಯುವದಕ್ಕೆ ಅಭಿಲಾಷೆ ತೋರಿಸೋಣ, ತಾಯಿಯು ಅವನನ್ನು ಮನೆಯಲ್ಲಿರಿಸುವದಕ್ಕೆ ಅವನ ವಸ್ತ್ರಗಳನ್ನು ಅಡಗಿಸಿಡ ಬೇಕಾಯಿತು. ಅದು ನಿಮಿತ್ತ ಅವನು ಹೋಗಲಾರದೆ, ಪ್ರಿಯ ತಂದೆಯೇ, ನೀವು ನಿಮ್ಮವರ ಮೇಲಿನ ಮಮತೆಯಿಂದ ಬೇರೆ ಮನಸ್ಸಿನವರಾಗ ಬೇಡಿರಿ! ಎಂದು, ಒಂದು ಪತ್ರಿಕೆ ಬರೆದು, ತಂದೆಯ ಸನ್ನಿಧಿಗೆ ಕಳುಹಿಸಿ, ಅವನ ವಿಶ್ವಾಸವನ್ನು ಬಲ ಪಡಿಸಿದನು. ಲೆಯೋನಿದನು ಸುಮಾರು ಒಂದು ವರುಷ ಬಂಧನದಲ್ಲಿದ್ದು, ಸಂತೋಷದಿಂದ ಕ್ರಿಸ್ತನ ನಾಮವನ್ನು ಅರಿಕೆ ಮಾಡುತ್ತಿದ್ದ ಮೇಲೆ ಕ್ರಿ. ಶ. 203ನೇದರಲ್ಲಿ ಅವನ ತಲೆ ಕಡೆದು, ಅವನಿಗಿದ್ದ ಬ

1) 36ನೇ, 84ನೇ ಪಾನು. 2) 114ನೇ ಪಾನು. 3) 80ನೇ, 81ನೇ, 84ನೇ, 100ನೇ ಪಾನುಗಳು. 4) 84ನೇ, 100ನೇ, 115ನೇ, 145ನೇ ಪಾನುಗಳು. 5) 115ನೇ ಪಾನು.

ದುಕು ಕಸು ಕೊಂಡರು. ಈ ಕಾರಣದಿಂದ ಅವನ ವಿಧವೆಯು ತನ್ನ 7 ಮಂದಿ ಗಂಡು ಮಕ್ಕಳ ಸಂಗಡ ಬಡತನದವಳಾಗಿ, ದಾರಿದ್ರತಾಪದೊಳಗೆ ಮುಳುಗಿರುವ ಸಮಯ ಒಬ್ಬ ಐಶ್ವರ್ಯವಂತ ಕ್ರೈಸ್ತಳು ಅವರೆಲ್ಲರನ್ನು ತನ್ನ ಮನೆಯಲ್ಲಿ ಶೇರಿಸಿ ಕೊಂಡಳು. ಆದರೆ ಒರೀಗೆನನು ಬಹಳ ದಿವಸ ಅವಳ ಮನೆಯಲ್ಲಿರಲಿಲ್ಲ; ಹ್ಯಾಗಂದರೆ ಅವಳು ಜ್ಞೋಸ್ತಿಕರೆಂಬ[1] ಮೂರ್ಖ ಜ್ಞಾನಿಕರಲ್ಲಿ ಒಬ್ಬನಿಗೆ ತನ್ನ ಮನೆಗೆ ಬರಲಿಕ್ಕೂ ಅದರೊಳಗೆ ಪ್ರಸಂಗ ಮಾಡಲಿಕ್ಕೂ ಅಪ್ಪಣೆ ಕೊಟ್ಟನಂತರ ಒರೀಗೆನನು ದುಃಖಿಸಿ, ಅವನು ಬೋಧಿಸುವಂಥಾದ್ದು ಮಹಾ ಪಾಷಂಡವೇ! ಎಂದು, ಅಂಜದೆ ಹೇಳಿ, ತನ್ನ ಉಪಕಾರಸ್ಥಳು ಏನೇನೂ ಮಾತಾಡಿದರೂ ಅವನು ಪ್ರಸಂಗಿಸುವಲ್ಲಿಗೆ ಹೋಗಲೇ ಇಲ್ಲ. ನಾನಲ್ಲಿಗೆ ಹೋದರೆ ಅವನ ಸಂಗಡ ಪ್ರಾರ್ಥನೆ ಮಾಡಬೇಕಾಗುತ್ತದಲ್ಲವೋ? ಹೀಗಾದರೆ ಅವನಿಗೂ ನನಗೂ ವಿಶ್ವಾಸದ ಐಕ್ಯ ಉಂಟೆಂಬ ಹಾಗೆ ತೋರೀತಲ್ಲವೋ? ಎಂಬ ಒಳ್ಳೇ ಅನುಮಾನವು ಅವನಲ್ಲಿತ್ತು. ಹೀಗಿರಲಾಗಿ ಅವನು ಕೆಲವು ಕಾಲದಿತ್ತ ಆ ಕ್ರೈಸ್ತಳ ತಂತ್ರಕ್ಕೆ ತಪ್ಪಿಸಿ ಕೊಂಡು ಹೋಗಿ, ವ್ಯಾಕರಣ ವಾಕ್ಪಟುತ್ವಗಳನ್ನು ಕಲಿಸಲಿಕ್ಕೆ ಹತ್ತಿ, ಇಂತು ಘಳಿಸುವ ಹಣದಿಂದ ಜೀವನ ಮಾಡಿ ಕೊಳ್ಳುವವನಾದನು. ಅವನು ಆ ಕಾಲದಲ್ಲಿಯೂ ತನ್ನ ಜೀವಿತದ ಎಲ್ಲ ಕಾಲದಲ್ಲಿಯೂ ತೋರಿಸುತ್ತಿರುವ ಕಾರ್ಯಶೀಲತ್ವದ ದೆಸೆಯಿಂದ ಅವನಿಗೆ ಹಿಂದಗಡೆ ಅದಮಂತಿಯನು ಅಂದರೆ ವಜ್ರಮಯನು ಎಂಬ ಹೆಸರು ಬಿತ್ತು. ತನ್ಮಧ್ಯ 18 ವರುಷದವನಾದ ಆ ಯೌವನಸ್ಥನ ವಿದ್ಯೆಯೂ ಸುಚೇತನವೂ ಕ್ರೈಸ್ತ ವಿಶ್ವಾಸಾಸಕ್ತಿಯೂ ನಿಷ್ಕಳಂಕ ನಡತೆಯೂ ದೇಶಪ್ರಸಿದ್ಧಿಯಾಗಲಿಕ್ಕೆ, ಕ್ರೈಸ್ತರೂ ಮೂರ್ತಿಪೂಜಕರೂ ಅವನ ಶಿಷ್ಯರಾದರು. ಅಂದು ಆ ವಿಗ್ರಹಾರಾಧಕರಲ್ಲಿ ಅನೇಕರು ಅವನ ಉಪದೇಶದಿಂದ ಕ್ರೈಸ್ತರಾಗಿ, ರಕ್ತಸಾಕ್ಷಿಗಳಾಗುವದಕ್ಕಾಗಲಿ ಬೋಧಕರಾಗುವದಕ್ಕಾಗಲಿ ಸಮರ್ಥರಾದರು.

ಅಷ್ಟರೊಳಗೆ ಸೆಪ್ತಿಮಿಯ ಸೆವೇರ ಕೈಸರನ ಕಡೆಯ ಹಿಂಸೆಯು ನಿತ್ಯ ನಡೆಯುತ್ತಿರಲು, ಒರೀಗೆನನು ತನ್ನ ಶಿಷ್ಯರೂ ಇತರ ಕ್ರೈಸ್ತರೂ ಆದ ಹೇರಳ ಮಂದಿ ರಕ್ತಸಾಕ್ಷಿಗಳಿಗೆ ಅತುಲ್ಯ ಪ್ರೀತಿ ಮಾಡುತ್ತಲಿರುವನು; ಹ್ಯಾಗಂದರೆ ಅವರವರು ಬೇಡಿ ಹಾಕಿರುವ ಮಿಗು ಹೇಸಿಕೆಯುಳ್ಳ ಸ್ಥಳಗಳಿಗೆ ಹೋಗಿ, ಅವರಿಗೆ ಧೈರ್ಯ ಹೇಳಿ, ಮಾರಕರವರನ್ನು ಮರಣಕ್ಕೆ ಒಯ್ಯುವಲ್ಲಿ ಅವರ ಸಂಗಡಲಿದ್ದು, ಹಿಂಸಕರು ಮುತ್ತಿ ಬಂದ ಹನನಸ್ಥಳದಲ್ಲಿಯೂ ಅವರನ್ನು ತಕ್ಕೈಸಿ, ಮುದ್ದಿಕ್ಕಿ, ಈ ಪ್ರಕಾರವಾಗಿ ಸ್ವಂತ ಜೀವದ ಏನೂ ಆಶೆ ಇಲ್ಲದಂಥ ಅಕ್ಕರೆಯಿಂದಲೊಪ್ಪುತ್ತಾ ಇರುವನು. ಈ ನಡತೆಯ ಸಲುವಾಗಿ ಅವನಿಗೆ ತಿರಿತಿರಿಗಿ ಪ್ರಾಣಸಂಕಟ ಬಂದದು

1) 145ನೇ ಪಾನು.

ಸಹಜವೇ; ಆದರೆ ದೇವರು ಅವನನ್ನು ಎಂದೆಂದೂ ರಕ್ಷಿಸುತ್ತಿದ್ದನು. ಒಮ್ಮೆ ಶತ್ರುಗಳು ಅವನಿರುವ ಮನೆಯ ಸುತ್ತಲು ಮುತ್ತಲು ನಿಂತು, ಅವನನ್ನು ಹಿಡಿಯ ಬೇಕೆಂದು, ಸಿದ್ಧರಾಗಿರುವಾಗಲಾದರೂ ಓಡಿ ಹೋಗುವ ದಾರಿ ಕಂಡು ಕೊಂಡನು; ಮತ್ತೊಮ್ಮೆ ತನಗೆ ಕಲ್ಲೆಸೆಯುವವರ ಕೈಗೆ ತಪ್ಪಿಸಿ ಕೊಂಡನು; ಇನ್ನೊಮ್ಮೆ ಮೂರ್ತಿಪೂಜಕರದೊಂದು ಮಹಾ ಸಮೂಹವು ಅವನನ್ನು ಹಿಡು ಕೊಂಡು, ಸೆರಾಪಿಸ್ ಎಂಬ ದೊಡ್ಡ ವಿಗ್ರಹದ ಪೂಜಾರಿತನದ ಬಟ್ಟೆಯನ್ನು ಅವನಿಗೆ ಒತ್ತಾಯ ಮಾಡಿ ಹೊದಿಸಿ, ಆ ದೇವತೆಯ ಸ್ಥಾನದ ಪಾವಟಿಗೆಯಲ್ಲಿ ಅವನನ್ನು ನಿಲ್ಲಿಸಿ, ಅವನ ಕೈಯಲ್ಲಿ ಈಚಲ ಗರಿಗಳನ್ನು ಕೊಟ್ಟು, ಬರುವವರಿಗೆ ಪದ್ಧತಿಯ ಪ್ರಕಾರ ಅವನ್ನು ಹಂಚಿ ಕೊಡೆಂದು, ಆಜ್ಞಾಪಿಸಲಾಗಿ, ಅವನು ನಿಂತು ಕೊಂಡಿದ್ದು, ತಾನು ಆ ಗರಿಗಳನ್ನು ಕೊಡುತ್ತಾ ಇರುವವರಿಗೆ ಕೂಗಿ ಹೇಳಿದ್ದೇನಂದರೆ—ತೆಕ್ಕೊಳ್ಳಿರಿ! ಇದು ಆ ಮೂರ್ತಿಯ ಗರಿಯಲ್ಲ, ಕ್ರಿಸ್ತನ ಗರಿಯೇ!—

ಕ್ಲೇಮೆಂತನೆಂಬ ಅಲೆಕ್ಸಂದರೀಯದ ಉಪದೇಶಿಶಾಲೆಯ ಆ ಉಪಾಧ್ಯಾಯನು ಕ್ರಿ. ಶ. 202ನೇ ವರುಷದಲ್ಲಿ, ಸಾಧ್ಯವಾದರೆ ಹಿಂಸೆಗೆ ತಪ್ಪಿಸಿ ಕೊಂಡು ಹೋಗಬೇಕೆಂತ ಕ್ರಿಸ್ತನು ಕೊಟ್ಟ ಅಪ್ಪಣೆಯಂತೆ[1], ಸಣ್ಣ ಅಸಿಯಕ್ಕೆ ಓಡಿ ಹೋಗಿದ್ದದರಿಂದ ಆ ಶಾಲೆಯು ಉಪಾಧ್ಯಾಯನಿಲ್ಲದಿರಲು, ಅಲೆಕ್ಸಂದರೀಯದ ದೇಮೇತ್ರಿಯನೆಂಬ ಆ ಸಭಾಧ್ಯಕ್ಷನು[2] ಕ್ರಿ. ಶ. 203ನೇದರಲ್ಲಿ ಆ ಯೌವನಸ್ಥನಾದಂಥ ಒರೀಗೆನನನ್ನೇ ಆ ಶಾಲೆಯ ಉಪಾಧ್ಯಾಯತ್ವಕ್ಕೆ ನೇಮಿಸಿದನು. ಅದು ಸಭೋದ್ಯೋಗವೆನ್ನಿಸದ್ದರಿಂದ ಒರೀಗೆನನಿಗೆ ಸಂಬಳ ಕೊಡೋಣವಾಗಲಿಲ್ಲ; ಅದಕ್ಕವನು ಗ್ರಂಥಗಳನ್ನು ಎತ್ತಿ ಬರೆದು ಮಾರಲೆಸಗಿ, ಹೀಗೆ ದಿನಾಲು ಘಳಿಸುತ್ತಿರುವ 3 ಅಣೆ 9 ಪೈಗಳಿಂದ ಜೀವಿಸುವವನಾದನು; ತನ್ನ ಕೈಯ ಕೆಳಗೆ ವಿದ್ಯಾಭ್ಯಾಸ ಮಾಡುವವರು ತರುವ ಉಚಿತಗಳನ್ನು ತೆಗೆಯಲೊಲ್ಲನು. ಅವನು ತೀರ ಸ್ವಲ್ಪ ವಸ್ತ್ರಾಹಾರಾದಿಯಲ್ಲೇ ತೃಪ್ತಿ ಪಡುತ್ತಾ, ಮೊಂತಾನಿಯಾನರಂತೆ[3] ಶರೀರದಂಡನದಲ್ಲಿ ಆಸಕ್ತಿ ತೋರಿಸುತ್ತಾ ಇರುವನು. ಅವನು ಕೆರ ಮೆಟ್ಟುವದಿಲ್ಲ; ಬರೇ ನೆಲದಲ್ಲಿ ಮಲಗುವನು. ಆಗಲವನು ಪರಿಶುದ್ಧ ಬರಹದ ಒಂದು ಮಾತನ್ನು[4] ಚಂದಾಗಿ ತಿಳುಕೊಳ್ಳದ ಕಾರಣದಿಂದಲೂ ತಾನು ಹೆಣ್ಣು ಮಕ್ಕಳಿಗೆ ಸಹ ಉಪದೇಶ ಕೊಡಲಿಕ್ಕಪ್ಪಣೆಯಾದಲ್ಲಿ ತನ್ನ ಹೆಸರಿಗೆ ಏನೇನೂ ದುರ್ಗಂಧವು ಹತ್ತದಿರಲಿ! ಎಂಬ ಆಲೋಚನೆಯಿಂದಲೂ ತನ್ನನ್ನು ತಾನೇ ನಪುಂಸಕ ಮಾಡಿ ಕೊಂಡದ್ದಕ್ಕಾಗಿ ಹಿಂದಗಡೆ ಬಹಳ ಪಶ್ಚಾತ್ತಾಪ ತಾಳಿದನು. ಅವನು ಸುಮಾರು 11 ವರ್ಷ ಬಹು ಆಶೀರ್ವಾದದೊಡನೆ ತನ್ನ ಉಪಾಧ್ಯಾಯತ್ವ ನಡಿಸಿದ ಮೇಲೆ ಅರಬಿಸ್ಥಾನದ ಒಬ್ಬ ರೋ

1) ಮತ್ತಾ. 10, 23. 2) 81ನೇ ಪಾನು. 3) 146ನೇ ಪಾನು. 4) ಮತ್ತಾ. 19, 12.

ಮಾಯ ಪ್ರತಿನಿಧಿಯು ಅವನ ಬಾಯಿಯಿಂದ ಕ್ರೈಸ್ತತ್ವದ ಅರ್ಥ ಕೇಳಿ ಕೊಳ್ಳುವದಕ್ಕೋಸ್ಕರ ಅವನನ್ನು ತನ್ನ ಬಳಿಗೆ ಕರತರಿಸಿದನು[1]. ಅವನು ಅಲೆಕ್ಸಂದರೀಯಕ್ಕೆ ತಿರಿಗಿ ಬರಲು, ಅಲ್ಲಿ ಕರಕಲ್ಲನೆಂಬ ಕೈಸರನಿಂದ[2] ಕ್ರೈಸ್ತರಿಗೆ ಉಗ್ರ ಹಿಂಸೆ ಉದ್ಭವಿಸುವ ನಿಮಿತ್ತ ಅವನು ಕ್ರಿ. ಶ. 215ನೇ ವರ್ಷದಲ್ಲಿ ಪಲೇಸ್ತೀನಕ್ಕೆ ಓಡಿಹೋಗ ಬೇಕಾಗಿ, ಪ್ರಾಚೀನ ಪ್ರವಾದಿಗಳೂ ಯೇಸುವೂ ಅಪೊಸ್ತಲರೂ ಸಂಚರಿಸುತ್ತಿದ್ದ ಸ್ಥಳಗಳನ್ನು ಕಂಡು, ಸಲೆ ಸಂತೋಷ ಗೊಂಡು, ತನ್ನ ಸಂಗಡ ಅಲೆಕ್ಸಂದರೀಯದಲ್ಲಿ ಕ್ಲೇಮೆಂತನ ಶಿಷ್ಯರಲ್ಲೊಬ್ಬನಾಗಿದ್ದು ತನ್ನ ಪ್ರಾಣಗೆಳೆಯನಾದ ಯೆರೂಸಲೇಮಿನ ಅಲೆಕ್ಸಂದರ ಅಧ್ಯಕ್ಷನ[3] ಮತ್ತು ಕೈಸರೈಯದ ಥೆಯೊಕ್ತಿಸ್ತ ಅಧ್ಯಕ್ಷನ ಬಳಿಯಲ್ಲಿ ವಸತಿ ಮಾಡುತ್ತಿದ್ದನು. ಇವರಿಬ್ಬರು ಅವನ ಭಕ್ತಿಗೆ ಬಹಳ ಮೆಚ್ಚಿ, ತಮ್ಮೊಳಗಿನ ಸಭಾಸಂಘಗಳಲ್ಲಿ ಬೋಧನ ಪ್ರಸಂಗ ಹೇಳಲಿಕ್ಕೆ ಅವನನ್ನಸ್ತುಬಡಿಸಿದರು. ಇದಕ್ಕೆ ಆ ಕಡೆಯಲ್ಲಿ ಒರೀಗೆನನಂಥ ಸಭೋದ್ಯೋಗಸ್ಥರಲ್ಲದವರಿಗೆ ಸಹ ಅಪ್ಪಣೆ ಇರುವದು; ಆದರೆ ಇದು ಅಲೆಕ್ಸಂದರೀಯದಲ್ಲಿ ಅಂದಾದರೂ[4] ಸಲ್ಲದು. ಹೀಗಿರಲಿಕ್ಕೆ ದೇಮೇತ್ರಿಯ ಅಧ್ಯಕ್ಷನು ಅದು ಕೇಳಿ, ಒಂದು ಪತ್ರಿಕೆಯಿಂದ ಒರೀಗೆನನನ್ನು ಬೆದರಿಸಿ, ಹಿಂದಕ್ಕೆ ಕರಿಸಿದನು. ಅವನು ಬಂದು, ಉಪದೇಶಿಶಾಲೆಯ ವೃತ್ತಿ ತಿರಿಗಿ ನಡಿಸಲಾರಂಭಿಸಿದಾಗಲೇ ಅವನು ಸುರಿಯದ ಅಂತಿಯೊಖೀಯ ಪಟ್ಣಕ್ಕೆ ಗಮಿಸಲವಶ್ಯವಾಯಿತು; ಯಾಕಂದರೆ ಕ್ರಿ. ಶ. 222ನೇ ವರುಷದಲ್ಲಿ ಕೈಸರನಾದ ಅಲೆಕ್ಸಂದರ ಸೆವೇರನೆಂಬವನ ತಾಯಿಯಾದ ಯೂಲಿಯೆ ಮಮ್ಮೇಯಳು[5] ಅಲ್ಲಿಗೆ ಆಗಮನ ಮಾಡಿದ್ದು, ಅವನ ಸಂಗಡದ ಸಂಭಾಷಣಕ್ಕೆ ಅತಿರೇಕ ಕಾಂಕ್ಷೆಯುಳ್ಳವಳಾಗಿದ್ದಳು. ಅವನವಳಿಗೆ ಸುವಾರ್ತೆಯ ಅರ್ಥವನ್ನು ಚಂದಾಗಿ ವಿವರಿಸಿದ ಹಿಂದೆ, ಅಲೆಕ್ಸಂದರೀಯಕ್ಕೆ ಮರಳಿ, ಸುಮಾರು 6 ವರುಷ ಮುಖ್ಯವಾಗಿ ಪರಿಶುದ್ಧ ಬರಹಟೀಕೆಯ ವಿವಿಧ ಗ್ರಂಥಗಳನ್ನು ರಚಿಸುತ್ತಾ ದಿನ ಕಳಿಯುವಂದು ಪಾಷಂಡಿಗಳಿಗೋಸ್ಕರ ತೊಂದರೆ ಪಡುವ ಗ್ರೇಕ ದೇಶದ ಸಭೆಗಳಲ್ಲಿ ಶಾಂತಿ ಹುಟ್ಟಿಸುವ ಉದ್ದಿಶ್ಯ ದೇಮೇತ್ರಿಯನಿಂದ ಕಳುಹಿಸಿ ಕೊಂಡು ಹೋಗಿ, ಪಲೇಸ್ತೀನವನ್ನು ಸಹ ಪುನಃ ದಾಟುವಲ್ಲಿ ತನ್ನ ಮಿತ್ರರಾದ ಆ ಇಬ್ಬರು ಅಧ್ಯಕ್ಷರಿಗೆ ಮತ್ತು ಸಂದರ್ಶಿಸಲು, ಅವರಿಬ್ಬರು ನೆರೆಯ ಅಧ್ಯಕ್ಷರನ್ನು ಕೂಡಿಸಿ, ಕ್ರಿ. ಶ. 228ನೇ ವರುಷಕ್ಕೆ ಕೈಸರೈಯ ಪಟ್ಣದಲ್ಲಿ ಹಸ್ತಾವಧಾನದೊಡನೆ ಅವನಿಗೆ ಸಭೆಯ ಹಿರಿಯತನವೆಂಬ ಉದ್ಯೋಗ ಕೊಟ್ಟರು; ಅವನು, ಅದು ಬೇಕೆಂತ, ಕಿಂಚಿತ್ತೂ ಆಶೆ ತೋರಿಸಿದ್ದಿಲ್ಲ. ಒರೀಗೆನನ ದೊಡ್ಡ ಕೀರ್ತಿಗೆ ಹಲವು ಕಾಲದಿಂದ ಸ್ವಲ್ಪ ಹೊಟ್ಟೆಕಿಚ್ಚು ಪಡುತ್ತಿದ್ದ ದೇಮೇತ್ರಿಯ ಅಧ್ಯಕ್ಷನು ಅದರ ಸುದ್ದಿ ಕೇಳಿ, ಅವರು

1) 83ನೇ ಪಾನು. 2) 116ನೇ ಪಾನು. 3) 119ನೇ ಪಾನು. 4) 70ನೇ ಪಾನು. 5) 117ನೇ ಪಾನು.

ತನ್ನನ್ನು ಬೆಸಸದಲೇ ಒರೀಗೆನನಿಗೆ ಆ ಉದ್ಯೋಗ ಕೊಟ್ಟದರಿಂದ ತನ್ನ ಅಧ್ಯಕ್ಷತೆ
ಯ ಮಾನವು ಕುಂದೀತೆಂದು, ನೆನಸಿ, ಒರೀಗೆನನ ಮೇಲೆ ದಯೆಯಿಲ್ಲದವನಾದ
ನು. ಇವನು ತನ್ನ ಶಾಲೆಗೆ ಪುನರಾಗಮಿಸಿ, ಆ ಅಧ್ಯಕ್ಷನ ಇಂಗಿತ ತಿಳಿದು, ತನ್ನ
ಸಂಗಡ 20 ವರ್ಷ ಅಲೆಕ್ಸಂದರೀಯದ ಉಪದೇಶಿಶಾಲೆ ನೋಡುತ್ತಿದ್ದ ತನ್ನ ಶಿಷ್ಯ
ರಲ್ಲೊಬ್ಬನನ್ನು ತನ್ನ ಬದಲಿಗಿಟ್ಟು, ಕೈಸರೇಯಕ್ಕೈದಲಾಗಿ, ದೇಮೇತ್ರಿಯನು
ಕ್ರಿ. ಶ. 231ನೇ ಮತ್ತು 232ನೇ ವರುಷ ಕೂಡಿಸಿದ ಐಗುಪ್ತ್ಯ ಬೋಧಕರ ಸಂಘ
ಗಳಲ್ಲಿ ಅಪಬೋಧನೆ, ಸ್ವಂತ ಶರೀರದ ಊನೀಕಾರ, ಸಭಾಜ್ಞೆಗಳ ತುಚ್ಛೀಕಾರ
ಎಂಬ 3 ತಪ್ಪನ್ನು ಅಂತಃಕರಣ ಸಮತೆಗಳನ್ನರಿಯದೆ ಅವನ ಮೇಲೆ ಹೊರಿಸಿ, ಹಿರಿ
ಯತನದ ಉದ್ಯೋಗವನ್ನೂ ಉಪಾಧ್ಯಾಯತ್ವವನ್ನೂ ಅವನಿಂದ ತೆಗಿಸಿ, ಅವನ
ನ್ನು ಸಭೆಯೊಳಗಿಂದ ಬಹಿಷ್ಕರಿಸ ಮಾಡಿ, ಈ ಸಂಗತಿಯನ್ನು ತನ್ನ ಸ್ವಂತ ಬು
ದ್ಧಿಯಿಂದ ಬರೆಸಿದಂಥ ಕಾಗದಗಳನ್ನು ನಾನಾ ದಿಕ್ಕಿನ ಕ್ರೈಸ್ತ ಸಭಾಧ್ಯಕ್ಷರ ಹತ್ತ
ರ ಕಳುಹಿಸಲು, ಪಲೇಸ್ತೀನ, ಫೊಯಿನೀಕೆ[1], ಅರಬಿಸ್ಥಾನ, ಗ್ರೇಕಿಯದ ಅಖಾ
ಯ[2] ಎಂಬ 5 ಶೀಮೆಗಳವರು ಮಾತ್ರ ಒಡಂಬಡದೆ ಇದ್ದರು.

ಒರೀಗೆನನು ಎಲ್ಲರೂ ಪಾಪಿಷ್ಠರಾಗಿರುವ ಬೇರೆ ಮನುಷ್ಯರ ಹಾಗೆ ಪರಿಶು
ದ್ಧ ಬರಹದ ಗ್ರಹಿಕೆಯಲ್ಲಿ ಅನೇಕ ತಪ್ಪು ಮಾಡಿದ್ದು ಆಶ್ಚರ್ಯವೋ? ಹಿಂದೆ ಸೂ
ಚಿಸಿರುವಂತೆ ಅವನು ತನ್ನ ಸ್ವಭಾವದ ಪ್ರಕಾರ ತಕ್ಕ ಮಿತಿಯನ್ನೂ ಮಾನುಷ
ಜ್ಞಾನಶಕ್ತಿಯನ್ನೂ ಮೀರುವಂಥ ಪ್ರಶ್ನೆ ಹಾಕಿ ಉತ್ತರ ಹುಡುಕಿ ಕೊಳ್ಳುವಂಥ
ಮನುಷ್ಯನು; ಆದರೂ ಅವನ ಹೃದಯವು ಪೂರ್ಣವಾಗಿ ಕ್ರಿಸ್ತನೆಡೆಯಲ್ಲಿ ಇರು
ವದು; ಹೀಗಿರುವದರಿಂದ ಅವನ ಗ್ರಂಥಗಳಲ್ಲಿ ಬೇರೆ ಬೇರೆ ಅಯೋಗ್ಯ ವಿಚಾರವಿ
ದ್ದರೂ ನಿಜ ದೇವಜ್ಞಾನವು ಅವುಗಳಲ್ಲಿ ಹೆಚ್ಚು. ಇದು ಕಾರಣವಾಗಿ ಕಾಲಕ್ರಮೇ
ಣ ಏನಾಯಿತೆಂದರೆ, 4ನೇ ಕ್ರಿಸ್ತಶತಮಾನದಲ್ಲಿ ಬದುಕಿ ಸತ್ತ ದೊಡ್ಡ ಬೋಧಕ
ರಾದ ಸದ್ಬೋಧನಪಿತನೆಂತ ಹೆಸರು ಗೊಂಡ ಅಥನಸಿಯನೆಂಬ ಅಲೆಕ್ಸಂದರೀಯ
ದ ಅಧ್ಯಕ್ಷನೂ[3] ಮಹಾ ಬಸಿಲೀಯನೆಂಬ ಕಪ್ಪದೊಕಿಯದ[4] ಕೈಸರೈಯ ಪಟ್ಣದ
ಅಧ್ಯಕ್ಷನೂ ಇವನ ಸಹೋದರನಾದ ಗ್ರೆಗೋರನೆಂಬ ಕಪ್ಪದೊಕಿಯದ ನೂಸ್ಸ
ಪಟ್ಣದ ಅಧ್ಯಕ್ಷನೂ ಕಪ್ಪದೊಕಿಯದ ನಾಜಿಯಂಜು ಪಟ್ಣದ ಗ್ರೆಗೋರನೆಂಬ ಅ
ಧ್ಯಕ್ಷನೂ ಕೀರ್ತಿ ಪಟ್ಟ ಸಭಾಚರಿತ್ರಗಾರನಾದ ಯುಸೆಬಿಯನೆಂಬ ಪಲೇಸ್ತೀನದ
ಕೈಸರೈಯ ಪಟ್ಣದ ಆ ಅಧ್ಯಕ್ಷನೂ[5] ಅಂಬ್ರೊಸಿಯನೆಂಬ ಈತಲಿಯದ ಮೈಲಂದಿ
ನ ಅಧ್ಯಕ್ಷನೂ[6] ಬೆತ್ಲೆಹೇಮಿನ ಹಿಯೆರೋನುಮನೆಂಬ ದೇವವಾಕ್ಯಭಾಷಾಂ

---

1) 31ನೇ, 85ನೇ ಪಾನು. 2) ರೋಮಾ. 15, 26; 16, 5; 1 ಕೊರಿ. 16, 15. 3) 86ನೇ ಪಾನು.
4) 28ನೇ, 38ನೇ, 75ನೇ, 88ನೇ, 127ನೇ ಪಾನು. 5) 127ನೇ, 128ನೇ ಪಾನುಗಳು. 6) 100ನೇ ಪಾನು.

ತರಗಾರನೂ[1], ಮುಂತಾದವರು ಸಹ, ಮುಖ್ಯವಾಗಿ ಒರೀಗೆನನ ಗ್ರಂಥಗಳನ್ನೇ ಅಭ್ಯಾಸಿಸುತ್ತಿದ್ದರು. ಅದಲ್ಲದೆ ಯಾವದೂ ಒಂದು ಅಪಬೋಧನೆಗೆ ಬಹಳ ಹೆದರಿ ಕೊಳ್ಳುವ ಒರೀಗೆನನು ತನ್ನ ಶಿಷ್ಯರಲ್ಲೊಬ್ಬನಿಗೆ ಒಮ್ಮೆ ಬರೆದದ್ದೇನಂದರೆ— ನನ್ನ ಮಗನೇ, ಎಲ್ಲಕ್ಕಿಂತ ಅಧಿಕವಾಗಿ ಪರಿಶುದ್ಧ ಬರಹದ ಅಭ್ಯಾಸ ಮಾಡಿಕೋ! ಯಾರಾದರೂ ಪರಿಶುದ್ಧ ಬರಹವನ್ನು ಉದ್ವೇಗದಿಂದ ಟೀಕೆ ಮಾಡಿ ಹೇಳ ಬಾರದ್ದರಿಂದ ಬಹು ಚಿಂತನೆಯಿಂದಲೂ ಧ್ಯಾನದಿಂದಲೂ ಅದರ ಅಭ್ಯಾಸ ಮಾಡಿಕೊಳ್ಳುತ್ತಲಿರು! ನೀನು ವಿಶ್ವಾಸವುಳ್ಳಂಥ ಮತ್ತು ದೇವರಿಗೆ ಸಮರ್ಪಕವಾದಂಥ ಮನಸ್ಸಿನಿಂದ ಪರಿಶುದ್ಧ ಬರಹ ಪರಿಶೋಧಿಸಿ ಕೊಳ್ಳುವಲ್ಲಿ ನಿನಗೆ ಏನಾದರೂ, ಬೀಗ ಹಾಕಿರುವಂತೆ, ತಿಳಿಯದಿದ್ದರೆ ತತ್‌ಕ್ಷಣ ಬಿಡದೆ, ಬಾರಿಸುತ್ತಿರು; ಆಗ, ಕ್ರಿಸ್ತನು ಹೇಳಿದ ಹಾಗೆ[2], ಬಾಗಲು ಕಾಯುವವನು ತೆರಿಯುತ್ತಾನೆಂಬಂತೆ ಆಗುವದು. ಆದರೂ ನೀನೇ ವಾಕ್ಯ ಬಾರಿಸುವದೂ ಅದರ ಅರ್ಥ ಹುಡುಕಿ ಕೊಳ್ಳುವದೂ ಸಾಕಲ್ಲ, ಪರಿಶುದ್ಧ ಬರಹದ ದಿವ್ಯ ಅರ್ಥ ಗ್ರಹಿಸುವದಕ್ಕೆ ಪ್ರಾರ್ಥನೆಯು ನಿನಗೆ ಅತ್ಯವಶ್ಯವಾದದ್ದು; ಹ್ಯಾಗಂದರೆ ನಮ್ಮ ರಕ್ಷಕನು—ಬಾರಿಸಿರಿ, ಆಗ ನಿಮಗೆ ತೆರೆಯುವದು; ಹುಡುಕಿ ಕೊಳ್ಳಿರಿ, ಆಗ ನಿಮಗೆ ಶಿಕ್ಕುವದು ಎಂಬದನ್ನು ಮಾತ್ರವಲ್ಲ, ಪ್ರಾರ್ಥಿಸಿರಿ, ಆಗ ನಿಮಗೆ ಕೊಡಲ್ಪಡುವದು ಎಂಬದನ್ನು ಸಹ ಹೇಳಿದ್ದಾನೆ.—

ಒರೀಗೆನನು ದೇಮೇತ್ರಿಯನ ತೀರ್ಪಿಗೆ ದುಃಖ ಗೊಂಡರೂ ಏನೂ ಶಿಟ್ಟು ಪಡದೆ, ದೇವರ ಚಿತ್ತವಾಗಲಿ! ಎಂತ, ಹೇಳಿ, ಪಲೇಸ್ತೀನದ ಆ ಕೈಸರೈಯದಲ್ಲಿ ಥೆಯೊಕ್ತಿಸ್ತನೆಂಬ ತನ್ನ ಸ್ನೇಹಿತನ ಆಶ್ರಯದೊಳಗೆ ಅಲೆಕ್ಸಂದರೀಯದದರಂತೆ ಒಂದು ಶಾಲೆ ಸ್ಥಾಪಿಸಿ, ಉಪದೇಶ ಹೇಳ ತೊಡಗಿದಾಗ ಬಹಳ ಮಂದಿ ಅಧ್ಯಕ್ಷರು ಸಹ ಕೇಳ ಬಂದರು. ಅವನ ಕೀರ್ತಿಯು ಮುಂಚಿಗಿಂತ ಇನ್ನು ಬೆಳೆಯಿತು; ಅತಿ ದೂರದಿಂದಲೂ ಉಪದೇಶಾರ್ಥಿಗಳು ಬಂದು, ಅವನ ಪಾದದಲ್ಲಿ ನೆರೆಯುತ್ತಿರುವರು. ಅವನ ಆಗಿನ ಶಿಷ್ಯರಲ್ಲಿ ಸಣ್ಣ ಅಸಿಯದ ಪೊಂತ ನಾಡಿನ[3] ನವಕೈಸರೈಯದ ಗ್ರೆಗೋರನೆಂಬವನೊಬ್ಬನು ಬಹು ಖ್ಯಾತಿ ಗೊಂಡಂಥವನು. ಇವನು ತನ್ನ ಜೀವತ್ವದ 14ನೇ ವರುಷಕ್ಕೆ ಕ್ರಿಸ್ತನ ಭಕ್ತನಾಗಿ, ರೋಮಪುರದಲ್ಲಿ ವಾಕ್ಚಾತುರ್ಯ ಪಾಂಡಿತ್ಯ ಕಲಿಯಲೆಸಗಿ, ಕುಟುಂಬಕಾರ್ಯಗಳಿಗೋಸ್ಕರ ಒಮ್ಮೆ ಪಲೇಸ್ತೀನಕ್ಕೆ ಆಗಮಿಸಿ, ಒರೀಗೆನನನ್ನು ಕಂಡು, ಅವನ ಬೋಧನವೈಚಿತ್ರ್ಯಕ್ಕೊಲಿದು, ಅವನ ಬಳಿಯಲ್ಲಿ 5 ವರುಷ ಉಳಿದು, ವಿಶ್ವಾಸೋತ್ಕೃಷ್ಟನಾಗಿ, ಕ್ರಿ. ಶ. 244ನೇ ವರುಷದಲ್ಲಿ ಆ ನವಕೈಸರೈಯದ ಕ್ರೈಸ್ತ ಸಭೆಯ ಮೇಲೆ ಅಧ್ಯಕ್ಷತೆ ಹೊಂದಲು, ಅಲ್ಲಿ 17 ಮಂದಿ ಕ್ರೈಸ್ತರು ಮಾತ್ರ ಇದ್ದರು; ಆದರೆ ಅವನು 26 ವರುಷಕ್ಕೀಚೆ ಮಡಿಯು

1) 38ನೇ, 51ನೇ ಪಾನು; 19ನೇ ಸಂಧಿ. 2) ಮತ್ತಾ. 7, 7. 8. 3) 28ನೇ, 38ನೇ ಪಾನು.

ವಾಗ 17 ಮಂದಿ ವಿಗ್ರಹಾರಾಧಕರು ಮಾತ್ರ ಮಿಕ್ಕಿದ್ದರು. ಮುಖ್ಯವಾಗಿ ಅವನಿಗೆ ದೇವಪ್ರಾರ್ಥನೆಯಿಂದ ಅದ್ಭುತಗಳನ್ನು ನಡಿಸುವದೊಂದು ಬಲವಿದ್ದದರಿಂದ[1] ಅವನ ವೃತ್ತಿಯಲ್ಲಿ ಅಂಥ ಸುಫಲವು ಹುಟ್ಟಿದ ಕಾರಣ ಅದ್ಭುತಕೃತ್ ಎಂಬ ಹೆಸರು ಅವನಲ್ಲೆಡೆ ಗೋಡಿತು.

ಮಕ್ಸಿಮಿನ ಥ್ರಾಕ್ಸನು[2] ಕ್ರಿ. ಶ. 235ನೇ ವರುಷ ಕೈಸರತ್ವದ ಪಟ್ಟಾಭಿಷೇಕದವನಾಗಿ, ವಿಶೇಷದಿಂದ ಕ್ರೈಸ್ತ ಬೋಧಕರನ್ನು ಹಿಂಸಿಸಲಿಕ್ಕೆ, ಒರೀಗೆನನು ಪಲೇಸ್ತೀನ ಬಿಟ್ಟು, ಸಣ್ಣಅಸಿಯದ ಕಪ್ಪದೊಕಿಯದ ಕೈಸರೈಯ ಪಟ್ಣದ[3] ಅಂದಿನ ಅಧ್ಯಕ್ಷನಾದ ಫಿರ್ಮಿಲಿಯಾನನ ಸನ್ನಿಧಿಗೆ ಬಿಜ ಮಾಡಿದನು; ಇವನು ಅವನ ಗೆಳೆಯರಲ್ಲಿಯೂ ಮಾನದಾಯಕರಲ್ಲಿಯೂ ಒಬ್ಬನು. ಆ ಪಟ್ಣದಲ್ಲಿ ಒರೀಗೆನನು ಯೂಲಿಯಾನಳೆಂಬ ಒಬ್ಬ ಕ್ರೈಸ್ತ ಕನ್ಯೆಯ ಮನೆಯೊಳಗೆ ಅತಿ ರಹಸ್ಯದಿಂದ ಬದುಕಿ, ಭದ್ರವಾಗಿರುವಷ್ಟರಲ್ಲಿ ಹಲವು ಮನೋಹರ ಕೃತಿಗಳನ್ನು ಮಾಡುತ್ತಿದ್ದನು. ಕ್ರಿ. ಶ. 238ನೇದಕ್ಕೆ ಆ ಕೈಸರನು ಸತ್ತು, ಕ್ರೈಸ್ತರ ಕಡೆಗೆ ಶಾಂತಿ ತಿರಿಗಿದ ಬಳಿಕ ಅವನು ಪಲೇಸ್ತೀನಕ್ಕೆ ಪುನರಾಗಮಿಸಿ, ಕಾಲಾಂತರದಲ್ಲಿ ಅನೇಕ ಮಂದಿ ಆಢ್ಯರ ಸಂಗಡ, ಕ್ರಿ. ಶ. 244ನೇದಕ್ಕೆ ಕೈಸರನಾದ ಅರಬಿ ಫಿಲಿಪ್ಪನ ಮತ್ತು ಇವನ ಹೆಂಡತಿಯ ಸಂಗಡ ಸಹ, ಕಾಗದ ಪತ್ರ ನಡಿಸುವವನಾದನು[4]. ಆ 244ನೇ ವರುಷದಲ್ಲೇ ಅರಬಿಸ್ಥಾನದ ಉತ್ತರ ಭಾಗದ ಅಧ್ಯಕ್ಷರು ರೋಮಪುರದಲ್ಲಿ ಪ್ರಕ್ಸೆಯನು[5] ಮುಂಚೆ ಹೇಳಿದ್ದಂಥ ಅಪಬೋಧನೆಯನ್ನೇ ತಮ್ಮ ಕಡೆಯ ಕ್ರೈಸ್ತರೊಳಗೆ ಹಬ್ಬಿಸುವ ಬೆರುಲ್ಲನೆಂಬ ಬೊಸ್ತ್ರ ಪಟ್ಣದ ಅಧ್ಯಕ್ಷನನ್ನು ವಿಚಾರಿಸುವವರಾಗಿ, ಅವನನ್ನು ಮಾನಸಾಂತರ ಪಡಿಸ ಕೂಡದೆ, ಒರೀಗೆನನನ್ನು ಕರೆಸುತ್ತಲೇ[6] ಇವನು ಬಂದು, ಆ ಅಧ್ಯಕ್ಷನಿಗೆ ಪ್ರೀತಿಯೊಡನೆ ಬುದ್ಧಿ ಹೇಳಿ, ಅವನು ಪಶ್ಚಾತ್ತಾಪದಿಂದ ಸಭಾಸಂಘದಲ್ಲಿ ತನ್ನ ಅಪಬೋಧನೆ ತ್ಯಜಿಸಿ ಬಿಡುವದಕ್ಕೆ ಅವನನ್ನೊಡಂಬಡಿಸಿದನು. ಒರೀಗೆನನು ಕೈಸರೈಯಕ್ಕೆ ಹಿಂದಿರುಗಿರಲು, ಆ ಬೆರುಲ್ಲನು ಅವನಿಗೊಂದು ಪತ್ರವ ಬರೆದು ಕಳುಹಿಸಿ, ಅದರಲ್ಲಿ ಬಹಳ ಕೃತಜ್ಞತೆ ತೋರಿಸಿದನು. ಸುಮಾರು 5 ವರುಷದಿತ್ತ ಒರೀಗೆನನು ಅರಬಿಸ್ಥಾನದ ಬೇರೆ ಕುಬೋಧಕರನ್ನು ಸನ್ಮಾರ್ಗಕ್ಕೆ ಬೊಗ್ಗಿಸಿದನು[7].

ಈ ವಿಷಯದಲ್ಲಿ ಅವನ ಮಿತ್ರರೂ ಶಿಷ್ಯರೂ ಕೊಡ ಪರಿಶೋಭಿಸುತ್ತಿದ್ದರು; ಒಂದೆರಡು ದೃಷ್ಟಾಂತಗಳ್ಯಾವವಂದರೆ—ಒರೀಗೆನನು ಸತ್ತು 11 ವರುಷ ಹೋದ ನಂತರ ಕ್ರಿ. ಶ. 265ನೇ ವರುಷ ಉಫ್ರಾತು ನದಿಯ ಪಶ್ಚಿಮ ತೀರದ ಸಮೊಸತ

1) 75ನೇ, 76ನೇ, 88ನೇ, 145ನೇ ಪಾನುಗಳನ್ನು ಸರಿ ನೋಡು. 2) 117ನೇ ಪಾನು. 3) 155ನೇ ಪಾನು. 4) 117ನೇ ಪಾನು. 5) 147ನೇ, 148ನೇ ಪಾನು. 6) 83ನೇ ಪಾನು. 7) 83ನೇ ಪಾನು.

ಪಟ್ಟದ ಪೌಲನೆಂಬವನೊಬ್ಬನು ಸುರಿಯದ ಅಂತಿಯೊಖೀಯದಲ್ಲಿ[1] ಸಭಾಧ್ಯಕ್ಷನಾದನು; ಇವನು ಅಧಿಕಾರಾಭಿಮಾನಿಯಾದ್ದಲ್ಲದೆ ಲೋಭಿಯೂ ಅನ್ಯಾಯಾರ್ಜನಜೀವಿಯೂ ಸಹ ಆಗಿ, ಈ ನಿಮಿತ್ತ ತೆರಿಗೆ ಎತ್ತುವ ಲೌಕಿಕೋದ್ಯೋಗ ವಹಿಸಲಿಕ್ಕೂ ಹೆದರಲಿಲ್ಲ. ಅವನು ಮತದ ಮೇಲೆ ತ್ರಿಯೇಕತ್ವದೇಷಿಯು; ಸಾಧಾರಣವಾಗಿ ಮಾನುಷ ರೀತಿಯಿಂದ ಹುಟ್ಟಿದ ಕ್ರಿಸ್ತನೆಂಬ ಕೇವಲ ಮನುಷ್ಯನಲ್ಲಿ ದಿವ್ಯ ಜ್ಞಾನಶಕ್ತಿಯು ಮೇಲಿನಿಂದ ಬಂದಿದ್ದು ವಿಶೇಷದಿಂದ ಪ್ರವರ್ತಿಸಿತೆಂತ, ಕ್ರಿಸ್ತನನ್ನು ಕುರಿತು ವದಿಸುತ್ತಿರುವನು. ಇಷ್ಟೆಲ್ಲಾ ಕ್ರೈಸ್ತಸಭಾಪ್ರಸಿದ್ಧಿಯಾದ ಮೇಲೆ ಹೇರಳ ಮಂದಿ ಅಧ್ಯಕ್ಷರು ಮುಂತಾದ ಸಭೋದ್ಯೋಗಿಗಳು ಕ್ರಿ. ಶ. 269ನೇ ವರುಷ ಆ ಪ್ರಖ್ಯಾತ ಅಂತಿಯೊಖೀಯದಲ್ಲಿ ವಿಚಾರಣಕ್ಕೋಸ್ಕರ ಕೂಡಿದರು; ಅವರ ಮುಖ್ಯಸ್ಥನು ಒರೀಗೆನನ ಜೀವಮಿತ್ರನಾದ ಕಪ್ಪದೊಕಿಯದ ಆ ಫಿರ್ಮಿಲಿಯಾನ ಅಧ್ಯಕ್ಷನೇ; ವಿಶೇಷವಾಗಿ ಇವನ ಸಲಹೆಯಿಂದ ಆ ನೀಚ ಪೌಲನನ್ನು ಉದ್ಯೋಗದಿಂದ ನಿವರ್ತಿಸಲಾಯಿತು.—ಪುನಃ, ಆಫ್ರಿಕದ ಲಿಬುಯ ದೇಶದ[2] ಸಬೆಲ್ಲನೆಂಬವನು ಕ್ರಿ. ಶ. 251ನೇ ವರುಷ ಐಗುಪ್ತದ ಪ್ತೊಲೊಮೇಯ ಪಟ್ಟದಲ್ಲಿ ಕ್ರೈಸ್ತ ಸಭೆಯ ಹಿರಿಯನಾಗಿ, ಏಕಪುರುಷಾಭಿಮಾನಿಯೆನ್ನಿಸಿ ಕೊಂಡನು. ಅವನು ಬೋಧಿಸಿದ್ದೇನಂದರೆ—ಶರೀರ ಪ್ರಾಣ ಆತ್ಮಗಳು ಮನುಷ್ಯನಲ್ಲಿ ಇರುವ ಪ್ರಕಾರ ಅಥವಾ ಮೂಲಾಕಾರ ತೇಜಶ್ಶಕ್ತಿ ತಪಶ್ಶಕ್ತಿಗಳು ಸೂರ್ಯನಲ್ಲಿ ಇರುವ ಪ್ರಕಾರ ಮಾತ್ರ ದೇವರಲ್ಲಿ ಉಂಟು; ದೇವರಿಂದ ಹೊರಟ ಕ್ಷಣಿಕವಾದದೊಂದು ಕಿರಣವು ಕೇವಲ ಮನುಷ್ಯನಾದ ಯೇಸುವಿನಲ್ಲಿ ವಸಿಸಿತಷ್ಟೇ.—ಅಲೆಕ್ಸಂದರೀಯದಲ್ಲಿ ಆ ದೇಮೇತ್ರಿಯನಿಗೀಚೆ 2ನೇ ಉತ್ತರಾಧಿಕಾರಿಯೂ ಒರೀಗೆನನ ಶಿಷ್ಯರಲ್ಲೊಬ್ಬನೂ ಆದಂಥ ದಿಯೊನೂಸಿಯನು ಕ್ರಿ. ಶ. 261ನೇದಕ್ಕೆ ಆ ಪಟ್ಟದಲ್ಲಿ ಅಧ್ಯಕ್ಷರದೊಂದು ಸಂಘ ನೆರೆಸಿ, ಅವರೊಂದಿಗೆ ಆ ಪಾಷಂಡಿಯಾದ ಸಬೆಲ್ಲನನ್ನು ಸಭೆಯಿಂದ ಹೊರಗೆ ಮಾಡಿದನು.

ಆದರೆ ಕ್ರಿ. ಶ. 250ನೇ ವರುಷ ದೆಕಿಯ ಕೈಸರನಾಳುವಿಕೆಯಲ್ಲಿ[3] ಪಲೇಸ್ತೀನದ ಆ ಕೈಸರ್ಯೆಯದಲ್ಲಿ ಸಹ ಹಿಂಸೆಯಾಗಲು, ಒರೀಗೆನನನ್ನು ಶೆರೆಮನೆಗೆ ಹಾಕಿ, ಅವನ ಕೊರಳಿಗೆ ಭಾರವಾದದೊಂದು ಕಬ್ಬಿಣದ ಸಂಕೋಲೆ ಕಟ್ಟಿ, ಅವನ ಮೈಯವಯವಗಳನ್ನು ಒಂದು ಯಂತ್ರದಿಂದ ಅಧಿಕವಾಗಿ ಜಗ್ಗಿಸಿ, ಹೀಗೆ ಅವನನ್ನು ಒಂದಬ್ದ ಆ ಕೈಸರನ ಮರಣದ ವರೆಗೆ ಇಟ್ಟು, ಬಳಿಕ ಮರಳಿ ಬಿಡಿಸಿದರು; ಆದರೆ ಅಂದು ಪಟ್ಟ ಪೀಡೆಯಿಂದ ಅವನ ಕಾಯವು ಬೇಗ ಕ್ಷೀಣವಾಗುತ್ತಾ ಬರಲಾಗಿ, ಅವನು ಕ್ರಿ. ಶ. 254ನೇದರೊಳಗೆ ಸುರಿಯದ (ಫೊಯಿ

1) 36ನೇ ಪಾನು. 2) 7ನೇ, 18ನೇ, 29ನೇ, 84ನೇ, 85ನೇ ಪಾನು. 3) 118ನೇ ಪಾನು.

ನೀಕೆಯ) ತುರವೆಂಬ ಪಟ್ಟದಲ್ಲಿ[1] ಪರಂಧಾಮವನ್ನೈದಿದನು; ಅಲ್ಲಿಯೇ ಅವನನ್ನು ಹುಗಿದರು.

ಒರೀಗೆನನು ಬಹಳ ದೇವವಾಕ್ಯವ್ಯಾಖ್ಯಾನಾದಿ ಗ್ರಂಥಗಳನ್ನು ಬರೆದನು; ಒಮ್ಮೆ ಕ್ರಿ. ಶ. 360ನೇ ವರ್ಷದಲ್ಲಿ, ಅವುಗಳ ಲೆಖ್ಖವು 6000 ಎಂದು, ಕಂಡು ಬಂತು. 420ನೇದರಲ್ಲಿ ಸತ್ತ ಹಿಯೆರೋನುಮನೆಂಬ ಆ ಸಭಾಬೋಧಕನು[2] ಆ ಗ್ರಂಥಗಳಲ್ಲಿ 2000ದಷ್ಟನ್ನು ಬಲ್ಲವನಾಗಿ, ಒರೀಗೆನನು ಬರೆದ ಅಷ್ಟು ಗ್ರಂಥಗಳನ್ನು ನಮ್ಮ ಕಾಲದವರಲ್ಲಿ ಒಬ್ಬನು ಪೂರಾ ಓದುವದಾದರೂ ಬಂದೀತೇ? ಎಂದು, ಆಶ್ಚರ್ಯಭರಿತನಾಗಿ ಹೇಳಿದನು.

## 17. ಕುಪ್ರಿಯಾನನೆಂಬ ಸಭಾಪಿತನು.

ಕರ್ಥಾಗೊ ಪಟ್ಟದ ತೆರ್ತುಲ್ಲಿಯಾನನೆಂಬ ಬೋಧಕನು[3] ಸತ್ತು 8 ವರುಷವಾದ ಮೇಲೆ ಕ್ರಿ. ಶ. 248ನೇದಕ್ಕೆ ಕುಪ್ರಿಯಾನನೆಂಬವನು ಅಲ್ಲಿ ಸಭಾಧ್ಯಕ್ಷನಾದನು[4]. ಈ ಕುಪ್ರಿಯಾನನು ಸುಮಾರು ಕ್ರಿ. ಶ. 200ನೇದರಲ್ಲಿ ಅಲ್ಲಿ ಹುಟ್ಟಿದನು; ಅವನು ಧನವಂತನಾದವನೊಬ್ಬ ಉದ್ಯೋಗಿಯಾದ ಮೂರ್ತಿಪೂಜಕನ ಮಗನು. ಅವನು ವಾಕ್ಪಟುತ್ವವಿದ್ಯೆಯಲ್ಲಿ ಒಳ್ಳೇ ಪಂಡಿತನಾಗಿ, ಅದನ್ನು ಕಲಿಸುತ್ತಿರಲು, ಕೇಕಿಲಿಯನೆಂಬ ಕ್ರೈಸ್ತ ಸಭೆಯ ಹಿರಿಯರಲ್ಲೊಬ್ಬನು ಅವನ ಮನೆಯಲ್ಲಿ ಸಹ ವಾಸವಾಗಿದ್ದು, ಅವನು ಕ್ರಿಸ್ತನ ಭಕ್ತನಾಗುವ ಹಾಗೆ ಮೂಲಸ್ಥನಾದನು. ಕುಪ್ರಿಯಾನನು ಕ್ರಿ. ಶ. 246ನೇ ವರುಷ ಸ್ನಾನ ಹೊಂದುವಂದು ಆ ಹಿರಿಯನ ಮೇಲಿನ ಕೃತಜ್ಞತೆಯಿಂದ ಕೇಕಿಲಿಯನೆಂಬ ಅಡ್ಡಹೆಸರು ತೆಕ್ಕೊಂಡನು. ಬಳಿಕಲೇ ಅವನು ಮಾನವುಳ್ಳ ಆ ತನ್ನ ಪಂಡಿತವೃತ್ತಿಯನ್ನೂ ಬಿಟ್ಟು, ತನಗಿದ್ದ ಬದುಕು ಮಾರಿ, ಬಂದ ಹಣವನ್ನು ಬಡವರಿಗೆ ಹಂಚಿ ಕೊಟ್ಟು, ದೇವವಾಕ್ಯಾಭ್ಯಾಸ ಒಂದೇ ಮಾಡುವವನಾಗಿ, ನೀತಿಚರ್ಯೆಯುಳ್ಳ ನಡತೆಯಿಂದ ಹೊಳೆಯುವವನಾದನು. 2 ವರುಷದಿತ್ತ ಮಾತ್ರ ಕರ್ಥಾಗೊವಿನ ಸಭ್ಯರು ಅವನನ್ನು, ಸಭೆಯ ಹಿರಿಯರಲ್ಲೊಬ್ಬನೆಂತ, ನೇಮಿಸಿ ಕೊಂಡರು; ಇನ್ನೂ ಅದೇ ವರುಷದಲ್ಲಿ ಅವರು ಅವನನ್ನು, ತಮ್ಮ ಅಧ್ಯಕ್ಷನೆಂತ, ಆರಿಸಿ ಕೊಳ್ಳಲಿಕ್ಕೆ ಬರಲು, ಅವನು, ತಾನೊಲ್ಲೆನೆಂತ, ತಿರಿತಿರಿಗಿ ಹೇಳುತ್ತಿದ್ದರೂ ಕಡೆಯಲ್ಲಿ ಅವರ ವಿನಂತಿಗೊಳಗಾಗ ಬೇಕಾಯಿತು. ಆ ಸಮಯ ಕ್ರಿಸ್ತನ ಸಭೆಯವರು 31 ವರುಷ ಒಂದು ತರದ ಬಹಿಃಶಾಂತಿ ಅನುಭವಿಸುತ್ತಾ ಬಂದಿದ್ದಲ್ಲಿ ಮೊಂತಾನಿಯಾನರ ಸಮಸ್ತ ಶಾಖೆಯವರಲ್ಲದೆ ತೆರ್ತುಲ್ಲಿಯಾ

1) 31ನೇ, 85ನೇ ಪಾನುಗಳು. 2) 155ನೇ ಪಾನು. 3) 15ನೇ ಸಂಧಿ. 4) 100ನೇ, 121ನೇ ಪಾನು.

ನನೂ ಬಳಿಕ ಒರೀಗೆನ ಮುಂತಾದ ಸದ್ಭಕ್ತರೂ ಕೂಡ ಬಹು ಅಂದದಿಂದ ಕ್ರೈಸ್ತ ಸಜ್ಜೀವನಕ್ಕೆ ಆಸ್ಪದ ಗೈಯುತ್ತಿದ್ದಾಗ್ಯೂ ಅನೇಕರ ಭಕ್ತಿಯು ಕುಂದಿದ್ದಾಗಿತ್ತು[1]; ಅದು ಕಾರಣ ಕುಪ್ರಿಯಾನನು ಭಕ್ತಿಗೆ ಅನುಸಾರೀಕರಿಸಿದ ತನ್ನ ಪ್ರಸಂಗ ನಡುವಳಿಗಳಿಂದ ಅಂಥವರನ್ನೆಚ್ಚರಿಸುವದಕ್ಕೆ ಬಹಳ ಪೇಚಾಟ ಮಾಡಲೆಸಗಿದನು. ಆದರೆ ಸ್ವಲ್ಪ ಕಾಲಕ್ಕೀಚೆಯೇ ಕ್ರಿ. ಶ. 250ನೇ ವರುಷ ದೆಕಿಯ ಕೈಸರನ ಕಡೆಯ ಹಿಂಸೆಯು ಆರಂಭವಾಯಿತು[2]. ಆ ಅಮಿತ ಹಿಂಸೆಯೊಳಗೆ ಕರ್ಥಾಗೊವಿನ ಹೆಚ್ಚು ಜನ ಕ್ರೈಸ್ತರು ಅಚಲ ವಿಶ್ವಾಸದಿಂದೊಪ್ಪುತ್ತಿದ್ದರೂ[3] ಕುಪ್ರಿಯಾನನ ಈ ಅಧ್ಯಕ್ಷತಾಸ್ಥಳದಲ್ಲಿ ಸಹ ಆಗಿಂದಾಗ ಕೆಲವರು ಕ್ರಿಸ್ತನನ್ನು ಬಿಟ್ಟಾಡುವ ನಿಮಿತ್ತ ಅವನಿಗೆ ಬಹಳ ದುಃಖ ಬರುತ್ತಿರುವದು; ಆದರೆ ಅಷ್ಟರಲ್ಲಿ ಅವನು ದೃಢ ಸಾಕ್ಷಿಗಳನ್ನು ಜೀವದಾಶೆ ಕಳೆದ ಪ್ರೀತಿಯಿಂದಲೇ ಆದರಿಸುತ್ತಿದ್ದು, ಸುಖ ಹುಡುಕಿ ಕೊಳ್ಳುತ್ತಿರುವನು. ಮೂರ್ತಿಪೂಜಕರು ಇದನ್ನು ಕಂಡು, ಹಗೆ ಗೊಂಡು, ಕುಪ್ರಿಯಾನನನ್ನು ಸಿಂಹದ ಬಾಯಿಗೆ ಹಾಕಿರಿ! ಎಂತ, ದೊಡ್ಡ ಶಬ್ದದಿಂದ ಒದರುತ್ತಿರಲಾಗಿ, ಅವನು ತನ್ನೊಳಗೆ ವಿವೇಕಾಲೋಚನೆ ಮಾಡಿ ಕೊಂಡು, ಅದೇ ವರುಷದಲ್ಲಿ ಪಲಾಯನ ತೆಗೆದು[4], ಹಿಂಸಕರಿಗೆ ಗೊತ್ತಿಲ್ಲದ್ದೊಂದು ಸ್ಥಳದಲ್ಲಿ ಅಡಗಿ ಕೊಂಡು, ಪತ್ರಮುಖಾಂತರವಾಗಿ ತನ್ನ ಸಭೆಯ ಕಾರ್ಯಗಳನ್ನು ನಡಿಸುತ್ತಿರುವನು. ಅವನು ಯಾವಾಗಲೂ ಹೆಚ್ಚು ಅಧ್ಯಯನ ಗೈಯುತ್ತಿದ್ದ ಗ್ರಂಥಗಳು ತೆರ್ತುಲ್ಲಿಯಾನನವುಗಳೇ.

ತನ್ಮಧ್ಯ ಆ ಸಭೆಗೆ ಹೊರಗಿಂದ ಶುದ್ಧೀಕರಣದ ಹಿಂಸೆ ಒದಗುತ್ತಲಿರುವಲ್ಲಿ ಸಭೆಯ ಒಳಗೆ ಏಕಮತಿಯು ತಪ್ಪಿದ್ದು ಅತಿ ದುಃಖಕರವೇ. ಹ್ಯಾಗಂದರೆ ಹಿಂಸೆಯ ಮೊದಲಿನ ಮಹಾ ಶೆಳವಿಗೆ ವಿಶ್ವಾಸಭ್ರಷ್ಟರಾಗಿ ಬಹಿಷ್ಕೃತರಾದವರು ಪಶ್ಚಾತ್ತಾಪ ಪಟ್ಟು, ಆಗ ಶೆರೆಯಲ್ಲಿದ್ದು ಮರಣಾಜ್ಞೆ ಬಂದಿರುವಂಥ ಸತ್ಸಾಕ್ಷಿಗಳೆಡೆಯನ್ನೈದಿ, ತಾವು ತಿರಿಗಿ ಸಭಾಂಗಗಳಾಗ ಬೇಕೆಂತ, ನಾನಾ ಪ್ರಕಾರ ಬೇಡಿ ಕೊಳ್ಳಲು, ಇವರು ಸಮಾಧಾನಪತ್ರವೆಂಬಂಥಾದ್ದೊಂದು ಪ್ರತಿವಿಜ್ಞಾಪನಪತ್ರ ಕೊಟ್ಟು, ಅವರನ್ನು ಸಭೆಯ ಹಿರಿಯರ ಹತ್ತರ ಕಳುಹಿಸಲಿಕ್ಕೆ, ಈ ಹಿರಿಯರು ಅಂಥಾ ಮಹಾ ಸಾಕ್ಷಿಗಳ[5] ಪತ್ರಗಳನ್ನು ಸನ್ಮಾನಿಸುವೆಡೆ ಇಂಥವನ್ನು ತಂದು ತೋರಿಸಿದವರಿಗೆ ಸ್ವಲ್ಪ ಲಘುಮನಸ್ಸಿನಿಂದ ಅಪ್ಪಣೆ ಕೊಡುವಂಥವರು ಸಹ ಅವರಲ್ಲಿದ್ದು, ಕಾಣಿಸಿ ಕೊಂಡ ಹಾಗಾಯಿತು. ಕುಪ್ರಿಯಾನನು ಅದು ತಿಳಿದು—ಸಮಾಧಾನಪತ್ರ ತಂದವರನ್ನು ವೇಗದಿಂದ ಸಭೆಯೊಳಗೆ ಪುನರಂಗೀಕರಿಸುವದು ಒಳ್ಳೇದಲ್ಲ, ಹಿಂಸಾಕಾಲ ತೀರಿದನಂತರ ಅವರನ್ನು ಮೊದಲು ಪರೀಕ್ಷಿಸ ತಕ್ಕದೆಂದು, ನಿರ್ಣಯಿಸಿ

---

1) 117ನೇ 149ನೇ ಪಾನು. 2) 118ನೇ ಪಾನು. 3) 119ನೇ ಪಾನು. 4) 153ನೇ ಪಾನು. 5) 104ನೇ ಪಾನು.

ದ್ದಕ್ಕೆ ಹೇರಳರು, ಅದು ಆ ಸತ್ಸಾಕ್ಷಿಗಳಿಗೆ ಮಾತ್ರವಲ್ಲದೆ ತಮಗೆ ಸಹ ಒಂದು ವಿಧದ ಅಪಮಾನವೆಂದು, ಸಮ್ಮತಿಸದಿರಲು, ಹಿರಿಯರೈವರು, ತಮ್ಮ ಕಾಲಕ್ಕೆ ಅಧ್ಯಕ್ಷಾಧಿಕಾರ ಮಿಗೆ ಬೆಳೆಯುವದೊಂದು ಸಂಜ್ಞೆಯು[1] ಈ ಕಾರ್ಯದಲ್ಲಿ ಸಹ ಗೋಚರಿಸುತ್ತದೆಂದು, ಬೇಸತ್ತು, ಆ ವಿಮತಿಯವರ ಮುಖ್ಯಸ್ಥರಾದರು. ಬಳಿಕ ಇವರಲ್ಲಿ ನೊವಾತನೆಂಬವನೊಬ್ಬನು ಒಮ್ಮೆ ಕುಪ್ರಿಯಾನನನ್ನು ಕೇಳದಲೇ ಫೇಲೀಕಿಸ್ಸಿಮನೆಂಬವನನ್ನು, ಸಭಾಸೇವಕನೆಂತ, ಆರಿಸಿಟ್ಟನು. ಅದು ವಿನಹ ಅಂದು ಆ ಸಭೆಯಲ್ಲಿ ಮೊಂತಾನಿಯಾನರು ಇಲ್ಲದಿರಲಿಲ್ಲ; ಇವರು ಸಹ ಅಧ್ಯಕ್ಷರ ಅಧಿಕಾರಾಭಿವೃದ್ಧಿಗೊಲೆಯದ್ದಲ್ಲದೆ, ರಕ್ತಸಾಕ್ಷಿಮರಣ ಪಡ ಕೊಳ್ಳುವದು ಉತ್ಕೃಷ್ಟ ಪುಣ್ಯವೆಂದು[2], ಎಣಿಸಿ, ಪಲಾಯಿಯಾದ ಕುಪ್ರಿಯಾನನು ಹೇಡಿಯೂ ತನ್ನ ಹಂಗು ಬಿಟ್ಟವನೂ! ಎಂದು, ನುಡಿಯುವವರಾಗಿದ್ದರು. ಅಂಥಾ ದುಸ್ತರ ವೇಳೆಗೆ ಕುಪ್ರಿಯಾನನು ತನ್ನ ಬದಲಿಗೆ ದಾನಧರ್ಮವಿಭಾಗಕ್ಕೋಸ್ಕರ ಇಬ್ಬರಧ್ಯಕ್ಷರನ್ನೂ ಇಬ್ಬರು ಹಿರಿಯರನ್ನೂ ಕಳುಹಿಸಲು, ಫೇಲೀಕಿಸ್ಸಿಮನು, ಅದು ಸಭಾಸೇವಕರಿಗೆ ಪೂರ್ವದಿಂದಿದ್ದ ಅಧಿಕಾರಕ್ಕೆ ವಿರುದ್ಧವೆಂದು[3], ಆಲೋಚಿಸಿ, ಅದಕ್ಕೊಪ್ಪಲಿಲ್ಲ. ಆ ಪ್ರೇಷಿತರು ಹಾಗೆಯೇ ಹಿಂದಿರುಗಿ, ಆದದ್ದನ್ನು ಕುಪ್ರಿಯಾನನಿಗೆ ತಿಳಿಸುತ್ತಲೆ ಆ ಸಭಾಸೇವಕನನ್ನು ಸಭೆಯೊಳಗಿಂದ ಬಹಿಷ್ಕರಿಸಿದನು. ಇದರಿಂದ ಆ ಭೇದವು ಅಡಗದೆ, ಹೆಚ್ಚಲಾಗಿ, ಕುಪ್ರಿಯಾನನು ಕ್ರಿ. ಶ. 251ನೇ ವರುಷ ಹಿಂಸಾಂತವಾದಂದು ತನ್ನ ಸಭೆಗೆ ಮತ್ತು ಬಂದು, ತನ್ನ ನಂಬಿಗಸ್ತರಾದ ಅಧ್ಯಕ್ಷರದೊಂದು ಸಂಘ ಕೂಡಿಸಿ, ತಕ್ಕ ಮಿತವಾದ ಸಭಾಶಿಕ್ಷಾಜ್ಞೆಗಳನ್ನು ಮಾಡಿಸಿ, ಅವರ ಸಮ್ಮತಿಯ ಮೇಲೆ ಆ ಐವರು ಹಿರಿಯರನ್ನು ಸಹ ತೆಗೆದಿಟ್ಟನು. ಬಳಿಕ ಫೇಲೀಕಿಸ್ಸಿಮನು ರೋಮಪುರಕ್ಕೆ ಹೋಗಿ, ಆ 251ನೇ ವರುಷದ ಕಡೇ ಭಾಗದಲ್ಲಿ ಅಲ್ಲಿ ಅಧ್ಯಕ್ಷನಾಗಿದ್ದ ಕೊರ್ನೇಲಿಯನ[4] ಹತ್ತರ ಬಹಿಷ್ಕಾರದ ನಿವರ್ತನೆ ಕೇಳಿಕೊಂಡನು; ಆದರೆ ಕುಪ್ರಿಯಾನನು ಒಂದು ಪತ್ರದಿಂದ ಹ್ಯಾಗೂ ಅಡ್ಡಗಟ್ಟುವದಕ್ಕೋಸ್ಕರ[5] ಕೊರ್ನೇಲಿಯನು ಫೇಲೀಕಿಸ್ಸಿಮನ ಪ್ರಾರ್ಥನೆ ಪೂರೈಸಲಿಕ್ಕೆ ಹಿಂದೆಗೆದ ಕಾರಣ ಇವನು ಬಂದಂತೆ ಕರ್ಥಾಗೊವಿಗೆ ಮರಳಿದನು. ಅಧ್ಯಕ್ಷರ ಅತ್ಯಧಿಕಾರಕ್ಕೋಸ್ಕರ ಅವನ ಶಾಖೆಯವರು ಆ ಮೇಲೆ ಇನ್ನೂ ಬಹಳ ದಿನ ಬಹಿರಕ್ಕೆ ಬಾಳಲಿಲ್ಲ. ಆದರೆ ಆ ಶಾಖೆಯನ್ನು, ಪ್ರೆಸ್ಬುತೆರಿಯಾಲವಾದ್ದು ಅಂದರೆ ಸಮಸ್ತ ಪ್ರೆಸ್ಬುತರೆಂಬ ಹಿರಿಯರ[6] ಏಕಾಧಿಕಾರದ ಸಂಬಂಧವಾದ್ದು ಎಂದು, ಹೇಳ ಬಹುದು.

ಸುಮಾರು ಅದೇ ಸಮಯಕ್ಕೆ ರೋಮಪುರದಲ್ಲಿ ಸಹ ಒಂದು ಭೇದ ಮೂ

1) 93ನೇ, 148ನೇ, 154ನೇ, 155ನೇ, 155ನೇ ಪಾನುಗಳನ್ನು ಸರಿ ನೋಡು. 2) 146ನೇ ಪಾನು. 3) 69ನೇ, 121ನೇ ಪಾನು. 4) 120ನೇ ಪಾನು. 5) Cypr. ep. 55. 6) 93ನೇ ಪಾನು.

ಡಿತು. ಹ್ಯಾಗಂದರೆ, ಹಿಂದೆ ಹೇಳಿರುವ ಪ್ರಕಾರ[1], ಅಲ್ಲಿಯ ಕಲ್ಲಿಸ್ತ ಅಧ್ಯಕ್ಷನು ಕ್ರಿ. ಶ. 219ನೇ ವರುಷದಾರಭ್ಯ ಬಹಳ ಸಡಿಲು ತರದ ಸಭಾಶಿಕ್ಷೆ ಸ್ಥಾಪಿಸಿದದಕ್ಕೆ ಅನೇಕ ಸತ್ಸಭ್ಯರು ಅಸಂತೋಷ ಪಟ್ಟದರಿಂದ 2 ಶಾಖೆಗಳು ಜನಿಸಿದವು. ಅವನು ಸತ್ತು 12 ವರುಷ ಹೋದ ಮೇಲೆ ರೋಮದಲ್ಲಿ 19ನೇ ಅಧ್ಯಕ್ಷನಾದ ಫಬಿಯಾನನೆಂಬ[2] ಉತ್ತಮ ಕ್ರೈಸ್ತನ ಪರಿಪಾಲನದೊಳಗೆ ಅಲ್ಲಿಯ ಕ್ರೈಸ್ತರೆಲ್ಲರೂ ಅನಕ ಮತ್ತು ಒಂದೇ ಮನಸ್ಸಾಗಿ, ಭಕ್ತಿದಾರ್ಢ್ಯದಿಂದೆಸೆಯಲಿಕ್ಕೆ ಸಾಮರ್ಥ್ಯ ಪಡೆದರು[3]. ಆದರೆ ಫಬಿಯಾನನು ದೆಕಿಯ ಕೈಸರನ ಹಿಂಸೆಯ ಆರಂಭದಲ್ಲಿ, ಕ್ರಿ. ಶ. 250ನೇ ವರ್ಷ, ರಕ್ತಸಾಕ್ಷಿಯಾದನಂತರ ಆ ಹಿಂಸೆಯ ದೆಸೆಯಿಂದ ವಿಶ್ವಾಸಭ್ರಷ್ಟರಾದ ಹಲವು ಮಂದಿ ಕ್ರೈಸ್ತರು ತಿರಿಗಿ ಸಭ್ಯರಾಗುವ ಅಪೇಕ್ಷೆ ತೋರಿಸಲಿಕ್ಕೆ, ಸಭಾಶಿಕ್ಷೆಯನ್ನು ಕುರಿತ ಆ ವ್ಯತ್ಯಾಸವು ಹೊಸ್ತಾಗಿ ನಡೆಯಲಿಕ್ಕೆ ಹತ್ತಿತು; ನೊವಾತಿಯಾನನೆಂಬ ಹಿರಿಯನು ಬಿಗು ಶಿಕ್ಷೆಯವರ ಪ್ರಾಮುಖ್ಯನಾದನು. ಹೀಗಿರಲಾಗಿ ಇವರವರು, ಪ್ರೀತಿಮಯ ವಿವೇಕವಿಲ್ಲದೆ, ತಕ್ಕದಾದ ಮಧ್ಯಮ ತರಕ್ಕೆ ಬರಲಾರದ ನಿಮಿತ್ತ ಆ ರೋಮದ ಸಭೆಯು ದೆಕಿಯ ಕೈಸರನ ವಿಪರೀತ ಹಿಂಸೆಯೊಳಗೆ $1\frac{1}{2}$ ವರುಷ ಅಗ್ರಸ್ಥಾಧ್ಯಕ್ಷನಿಲ್ಲದಲೇ ಇತ್ತು. ಅಷ್ಟರಲ್ಲಿ ಕುಪ್ರಿಯಾನನ ಬುದ್ಧಿವಂತಿಕೆಯಿಂದ ರೋಮಿಾಯ ಕ್ರೈಸ್ತರು ಮರಳಿ ಐಕ್ಯದವರಾಗಿ, ಕೊರ್ನೇಲಿಯನೆಂಬವನೊಬ್ಬ ಸಭೆಯ ಹಿರಿಯನನ್ನು, ತಮ್ಮ ಅಧ್ಯಕ್ಷನೆಂತ, ಆದು ಕೊಳ್ಳಲು[4], ಇವನು ಹ್ಯಾಗೂ ಆ ಕಠಿಣ ಸಭಾಶಿಕ್ಷೆಯ ಶಾಖೆಯವರಿಗೆ ಲಘುವೆನ್ನಿಸುವಂಥ ಶಿಕ್ಷೆ ಗೈಯ ತೊಡಗಿದ ಉದ್ದಿಶ್ಯ ಆ ಭೇದವು ಪುನಃ ಶುರುವಾಯಿತು. ಅವನೆದುರಾಳಿಗಳು ಮೊಂತಾನಿಯಾನರಂತೆ—ಕ್ರಿಸ್ತನ ಸಭೆಯು ಕಥರರ ಅಂದರೆ ಶುದ್ಧರ ಸಂಘವೇ ಮಾತ್ರ; ವಿಶ್ವಾಸಭ್ರಷ್ಟನಾಗಿ ಬಹಿಷ್ಕೃತನಾದವನೊಬ್ಬನು ಮಾನಸಾಂತರ ಪಟ್ಟರೂ ಎಂದೂ ತಿರಿಗಿ ಬಹಿಃಸಭ್ಯನಾಗ ಕೂಡದೆಂದು, ಹೇಳುವವರಾದಲ್ಲಿಗೆ ಅಕಸ್ಮಾತ್ತಾಗಿ ಕರ್ಥಾಗೊವಿನಿಂದ ಆ ನೊವಾತನು[5] ಬಂದು, ತಾನು ಕಠಿಣ ಸಭಾಶಿಕ್ಷೆಯ ಶಾಖೆಯವನಲ್ಲದಿದ್ದರೂ, ಅಧ್ಯಕ್ಷರು ತಮ್ಮ ಅಧಿಕಾರ ಅತಿಕ್ರಮಿಸುವವರಾಗಿದ್ದಾರೆಂತ, ಹೇಳಿ, ಇದಕ್ಕೋಸ್ಕರ ನೊವಾತಿಯಾನನ ಶಾಖೆಯ ಅವಲಂಬಿಯಾಗಿ, ಇವನ ಶಿಷ್ಯರು ಅವನನ್ನು ತಮ್ಮ ಅಧ್ಯಕ್ಷ ಮಾಡಿ ಕೊಳ್ಳುವದಕ್ಕೆ ಕಾರಣನಾದನು; ಬಳಿಕ ಇವರು ಕಥರರು ಅಂದರೆ ಶುದ್ಧರು (ಪೂತರು) ಎಂಬ ಅಡ್ಡಹೆಸರು ಹೊಂದಿದರು. ಹೀಗಿರಲಿಕ್ಕೆ ಕೊರ್ನೇಲಿಯ ಮತ್ತು ನೊವಾತಿಯಾನ ಎಂಬವರಿಬ್ಬರಧ್ಯಕ್ಷರಲ್ಲಿ ಒಬ್ಬೊಬ್ಬನು ಆಫ್ರಿಕದ ಅಧ್ಯಕ್ಷರಿಂದ ತನ್ನ ತ

1) 149ನೇ ಪಾನು. 2) 119ನೇ, 120ನೇ ಪಾನು. 3) 119ನೇ ಪಾನು. 4) 161ನೇ ಪಾನು. 5) 161ನೇ ಪಾನು.

ನ್ನ ಉದ್ಯೋಗವನ್ನೂರಿಸಿ ಕೊಳ್ಳಲಿಕ್ಕೆ ಪ್ರಯತ್ನಿಸುವವನಾದನು. ಕುಪ್ರಿಯಾನ
ನೂ ಒರೀಗೆನನ ಶಿಷ್ಯನಾಗಿದ್ದ ಅಲೆಕ್ಸಂದರೀಯದ ದಿಯೊನೂಸಿಯ ಅಧ್ಯಕ್ಷ
ನೂ[1] ಪರ್ಯಾಲೋಚಿಸಿ, ಕೊರ್ನೇಲಿಯನ ಕಡೆ ಹಿಡಿದು, ಅವನ ಉದ್ಯೋಗ
ನೆಲೆ ಗೊಳ್ಳಿಸಿದಾಗ ಇವನು ಬಲ ಹೊಂದಿ, ನೊವಾತಿಯಾನನನ್ನು ಬಹಿಷ್ಕರಿಸಲಾ
ಯಿತು; ಆದನಂತರ ನೊವಾತಿಯಾನಕವಾದ್ದೆಂಬ ಶಾಖೆಯು ಹೊರಬಳಿಗೆ ಕೊಂಚ
ಬಲಹೀನವಾಯಿತು.—ಕರ್ಥಾಗೊವಿನ ಮತ್ತು ರೋಮದ ಉಭಯ ಶಾಖೆಯವ
ರನ್ನು ಪರ್ಯಾಲೋಚಿಸಿದರೆ, ನೀತಿ ಇದ್ದರೂ ಪ್ರೀತಿ ಬಿಡ ಬಾರದೆಂತ, ಹೇಳುವ
ಮಾತನ್ನು[2] ಅವರಿಗೆ ಹಚ್ಚ ಯೋಗ್ಯವು. ಆದರೆ ತಾವು ದೇವರದೊಂದೊಂದು
ವಾಕ್ಯಕ್ಕೆ ಏಕಾರ್ಥಮಾನ ಕೊಡುತ್ತೇವೆಂತ ನೆನಸುವಂಥ ಕ್ರೈಸ್ತರು ಹೆಚ್ಚಾಗಿ ಆ
ಸಮಯದಲ್ಲಿ ಕಥೊಲಿಕರು ಅಂದರೆ ಸರ್ವಸಾಧಾರಣವಾಗಿ ಸಲ್ಲ ತಕ್ಕ ಸೌವಾರ್ತಿ
ಕ[3] ಬೋಧನೆಯುಳ್ಳವರು ಎನ್ನಿಸಿ ಕೊಳ್ಳಲಾರಂಭಿಸಿದರು.—ಕಾಲಗತಿಯಲ್ಲಿ ಉ
ದ್ಭವಿಸಿದ ಪಪ್ಪಕರೆಂಬ ಪಕ್ಷಕರು ಕಥರರೆಂಬ ಆ ಹೆಸರಿನ ಮಹಾ ದುಷ್ಪ್ರಯೋಗ
ಮಾಡಿದ್ದು ಮುಂದೆ ಗೊತ್ತಾಗುವದು[4].

ಕ್ರಿ. ಶ. 252ನೇ ವರುಷಕ್ಕೆ ಸಮಸ್ತ ರೋಮೀಯ ಸಾಮ್ರಾಜ್ಯದಲ್ಲಿ, ಕರ್ಥಾ
ಗೊವಿನಲ್ಲಿ ಸಹ, ಅಘೋರ ತರದ್ದೊಂದು ಮಾರಿಬೇನೆಯುದ್ಭವಿಸಲು[5], ಈ ಪ
ಟ್ಟಣದ ಮೂರ್ತಿಪೂಜಕರು—ಕ್ರೈಸ್ತರೇ ಅದಕ್ಕೆ ಬೇರು! ರಾಜ್ಯಕ್ಕೆ ಬರುವ ಸಂಕಷ್ಟ
ವೆಲ್ಲವು ಅವರ ದೆಸೆಯಿಂದಲೇ! ಎಂತ, ಗುಣುಗುಟ್ಟುವವರಾಗಿರುವ ವೇಳೆಗೆ ಕು
ಪ್ರಿಯಾನನು ತಾನು ಸಕಲ ವ್ಯಾಧಿಯುಕ್ತರ ಬಳಿಗೆ ಹೋಗಿ, ಅವರನ್ನು ಬಹು
ಪ್ರೀತಿಯಿಂದ ಪರಾಮರಿಸುತ್ತ ಬಂದದಲ್ಲದೆ—ಕ್ರೈಸ್ತರೋ? ಅಕ್ರೈಸ್ತರೋ? ಎಂದು,
ವಿಚಾರಿಸದಲೆ ಆ ವ್ಯಾಧಿತರಿಗೆ ಸಹಾಯ ಮಾಡ ಬೇಕೆಂತ, ತನ್ನ ಸಭ್ಯರನ್ನು ಮು
ಖದಾಕ್ಷಿಣ್ಯವಿಲ್ಲದ ಪ್ರೀತಿವೃತ್ತಿಗೆಚ್ಚರಿಸಿ, ತಾನು ಅಂದು ಬರೆದು ಪ್ರಕಟಿಸಿದೊಂ
ದು ಚಲೋ ಗ್ರಂಥದಿಂದಲೂ ಮೂರ್ತಿಪೂಜಕರ ಹಗೆ ತಗ್ಗಿಸಿದನು; ಕಡೆಯಲ್ಲಿ
ಇವರು ತಮ್ಮಲ್ಲಿಯ ಕ್ರೈಸ್ತರ ಸಮದೃಷ್ಟಿಭಾವದ ಮಮಕಾರಕ್ಕೆ ಬಹಳ ವಿಸ್ಮಯ
ಗೊಳ್ಳುವ ಹಾಗಾಯಿತು. ಆ ಬೇನೆಯಿಂದ ಮಾತ್ರವಲ್ಲದೆ ಮಹಾ ಬರದಿಂದ ಸಹ
ಕರ್ಥಾಗೊವಿರುವ ನುಮಿದಿಯ ಪ್ರದೇಶದಲ್ಲಿ ಗಲಿಬಿಲಿಯು ಮಿಗಿಲಾದಂದು ಕಾ
ಡುಜನರದೊಂದು ಗುಂಪು ಬೇರೆ ಬೇರೆ ಸಭೆಯವರ ಮೇಲೆ ಬಿದ್ದು, ಅವರಲ್ಲನೇ
ಕರನ್ನು ಶೆರೆ ವೈದು, ಬಿಡುಗಡೆಯ ಹಣ ಕೇಳಲಾಗಿ, ಆ ಊರು ಹಳ್ಳಿಗಳ ಕ್ರೈಸ್ತ
ರು ಬಡವರಾದ ಕಾರಣ ಕುಪ್ರಿಯಾನನು ಒಂತಿಗೆಯ ಮೇಲೆ ಕರ್ಥಾಗೊ ಪಟ್ಟಣದ

---

1) 158ನೇ ಪಾನು. 2) 92ನೇ ಪಾನು; ಮಾರ್ಕ. 9, 50. 3) 40ನೇ, 147ನೇ ಪಾನುಗಳು.
4) 35ನೇ ಸಂಧಿ ಸರಿ ನೋಡು. 5) 120ನೇ ಪಾನು. (109, 113, 114, 117ನೇ ಪಾನು.)

ಸಭ್ಯರಿಂದ ಬೇಕಾದ ಹಣ ಅಂದರೆ ಸುಮಾರು 6000 ರೂಪಾಯಿ ಕೂಡಿಸಿ, ಇದರಿಂದ ಆ ಶೆರೆಯವರೆಲ್ಲರನ್ನು ಬಿಡಿಸಿದನು. ಅದಲ್ಲದೆ ಅವನು ಪರ ಸಭೆಗಳ ಬಡ ಕ್ರೈಸ್ತರನ್ನು, ಸಹಾಯ ಪಡೆಯುವದಕ್ಕೋಸ್ಕರ ಕರ್ಥಾಗೊ ಪಟ್ಣಕ್ಕೆ ಬನ್ನಿ! ಎಂತ, ನಿತ್ಯ ಬೇಡುತ್ತಿರುವ ದಯೆಯಿಂದಲೊಪ್ಪುತ್ತಿರುವನು.

ಕ್ರಿ. ಶ. 253ನೇ ವರುಷ ಅವನು ಶಿಶುಸ್ನಾನವನ್ನು ಕುರಿತು ಕರ್ಥಾಗೊವಿನಲ್ಲಿ ಒಂದು ದೊಡ್ಡ ಅಧ್ಯಕ್ಷಸಂಘ ಕೂಡಿಸಿದ್ದು ಹಿಂದೆ ಓದಿದ್ಧೀರಿ[1]. 3 ವರುಷದಿತ್ತ ಅವನಿಗೂ ಸ್ತೆಫನನೆಂಬ ರೋಮಪುರದ 22ನೇ ಅಧ್ಯಕ್ಷನಿಗೂ[2] ಶಾಖಾವಲಂಬಿಗಳಾದ ಕ್ರೈಸ್ತರೆಂಬವರ ಸ್ನಾನದ ವಿಷಯವಾಗಿ ಹೆಚ್ಚು ಕಡಿಮೆ ಬಿತ್ತು. ಎಂತೆಂದರೆ, ಸ್ತೆಫನನು ರೋಮಪುರದ ಕ್ರೈಸ್ತರಲ್ಲಿಯ ಪದ್ಧತಿಯ ಪ್ರಕಾರ—ನಮ್ಮಂಥ ಕಥೊಲಿಕರಲ್ಲದ ಕ್ರೈಸ್ತರು ಅಂದರೆ ಕ್ರೈಸ್ತ ಶಾಖೆಯವರು ತ್ರಿಯೇಕನಾದ ದೇವರ ನಾಮದಲ್ಲ್ಯಾಗಲಿ ಕ್ರಿಸ್ತನ ನಾಮಮಾತ್ರದಲ್ಲ್ಯಾಗಲಿ ಸ್ನಾನ ಕೊಟ್ಟರೆ ಅದು ನಿಜ ಸ್ನಾನವೇ; ಆದ್ದರಿಂದ ಅಂಥಾದೊಂದು ಸ್ನಾನ ಹೊಂದಿದ ಶಾಖೆಯವರನ್ನು ಸ್ನಾನ ಕೊಡದಲೇ ಕಥೊಲಿಕ ಸಭೆಯಲ್ಲಿ ತಿರಿಗಿ ಶೇರಿಸ ಬೇಕೆಂತ, ಹೇಳುವಲ್ಲಿ ಕುಪ್ರಿಯಾನನು—ಅದು ಸಮವಲ್ಲ; ಶಾಖೆಯವರು ಕೊಟ್ಟ ಅಂಥಾದೊಂದು ಸ್ನಾನ ಹೊಂದಿದವರು ಸ್ನಾತರಲ್ಲವೆಂತ, ತಿಳು ಕೊಳ್ಳ ಬೇಕೆಂದು, ಚರ್ಚಿಸಿದನು. ಕುಪ್ರಿಯಾನನು ಕ್ರಿ. ಶ. ಆ 256ನೇ ವರುಷದಲ್ಲಿ ತನ್ನ ಪರಿಪಾಲನದವರದೊಂದು ಸಂಘ ಕೂಡ ಕರಿಸಲು, ಅದಕ್ಕೆ ಕರ್ಥಾಗೊ ಪ್ರದೇಶದಿಂದ 87 ಮಂದಿ ಅಧ್ಯಕ್ಷರು ಬಿಜಮಾಡಿ[3], ಎಲ್ಲರೂ ಸ್ತೆಫನನಿಗೆದುರಾಗಿ, ಕುಪ್ರಿಯಾನನಿಗೊಡಂಬಟ್ಟರು. ಸ್ತೆಫನನು ಅದು ಕೇಳಿ, ಕೋಪ ಗೊಂಡು—ಕುಪ್ರಿಯಾನನು ಸುಳ್ಳುಕ್ರೈಸ್ತನೂ ಸುಳ್ಳು ಅಪೊಸ್ತಲನೂ ಮೋಸಗಾರನೂ; ಅವನ ಅಧೀನತೆಯ ಅಧ್ಯಕ್ಷರೂ ಅವನೂ ಇನ್ನು ತನ್ನ ಸಹೋದರರಲ್ಲ, ಸಭೆಯಿಂದ ಬಹಿಷ್ಕೃತರಾದವರೇ! ಎಂದು, ಪತ್ರ ಬರೆದು, ಕಳುಹಿಸಿ[4], ಕ್ರೈಸ್ತರಿಗೆ ಇರ ತಕ್ಕ ತಾಳ್ಮೆಯುಳ್ಳ ಅನ್ಯೋನ್ಯ ಪ್ರೀತಿಯನ್ನು ಪೂರಾ ಹಾರಿಸಿ ಬಿಡಲಿಕ್ಕೆ, ಕುಪ್ರಿಯಾನನೂ ಒರೀಗೆನನ ಗೆಳೆಯರಾಗಿದ್ದ ಕಪ್ಪದೊಕಿಯದ ಕೈಸರೈಯ ಪಟ್ಣದ ಅಧ್ಯಕ್ಷನಾದ ಫಿರ್ಮಿಲಿಯಾನ[5] ಮತ್ತು ಅಲೆಕ್ಸಂದರೀಯ ಪಟ್ಣದ ಅಧ್ಯಕ್ಷನಾದ ದಿಯೊನೂಸಿಯ[6] ಎಂಬವರಿಬ್ಬರೂ ಸ್ತೆಫನನಿಗೆ ಚಂದಾಗಿ ಬುದ್ಧಿ ಹೇಳ ಬೇಕಾಯಿತು. ಕುಪ್ರಿಯಾನನು ಹೇಳಿದ್ದರಲ್ಲಿ ಒಂದು ಸೂತ್ರವೇನಂದರೆ—ಸತ್ಯರಹಿತವಾದದೊಂದು ಪದ್ಧತಿಯು ಒಂದು ಪ್ರಮಾದದ ವಿಲಂಬನವೇ[7]!—ಫಿರ್ಮಿಲಿಯಾನನು ಕರ್ಥಾಗೊವಿನ ಅಧ್ಯಕ್ಷರಿಗೆ ಅಂದು ಬರೆದದರ

1) 97ನೇ ಪಾನು. 2) 121ನೇ ಪಾನು. 3) 85ನೇ ಪಾನು. 4) Cypr. ep. 75. 5) 157ನೇ, 158ನೇ ಪಾನು. 6) 163ನೇ ಪಾನು. 7) ಅಂದರೆ ಅಂಥಾ ಪದ್ಧತಿಯು ಇರುವದೊಂದು ಪ್ರಮಾದ ಪರಿಹರಿಸದ್ದಲ್ಲತೆ ನಡೆಯುಲೀಸುತ್ತದೆ.

ಲ್ಲಿರುವದೇನಂದರೆ—ತನ್ನ ಅಧ್ಯಕ್ಷತಾಸ್ಥಳಕ್ಕಾಗಿ ತನ್ನನ್ನು ಬಹಳ ಹೊಗಳಿ ಕೊಂಡು, ಸಭೆಯ ಅಸ್ತಿವಾರವಿಟ್ಟಿರುವ ಪೇತ್ರ ಅಪೊಸ್ತಲನ ಉತ್ತರಾಧಿಕಾರದವನು ತಾನೇ! ಎಂತ, ಚರ್ಚಿಸುವ ಸ್ತೆಫನನು ಇತರ (ಅಂದರೆ ಅಧ್ಯಕ್ಷಸಾಂಪ್ರದಾಯಾದಿ ಅನರ್ಥಕವಾದ) ಅನೇಕ ಪ್ರಸ್ತರಗಳನ್ನು ತರುವ ಈ ಪ್ರತ್ಯಕ್ಷ ಮೂಢತ್ವಕ್ಕೋಸ್ಕರ ಸಹ ನಾನು ಬೇಸರುತ್ತೇನೆ. . . . ಓ ಸ್ತೆಫನನೇ, ಅಷ್ಟು ಬಹಳ ಸಭೆಗಳಿಂದ ನಿನ್ನನ್ನು ಕಡೆದು ಕೊಂಡದರಿಂದ ಎಂಥಾ ಮಹಾಪಾತಕವನ್ನು ನಿನ್ನ ಮೇಲೆ ಹೊತ್ತಿದ್ಧಿ! ಹ್ಯಾಗಂದರೆ ನಿನ್ನನ್ನೇ ಕಡೆದು ಕೊಂಡಿದ್ಧಿ! ಈ ವಿಷಯಕ್ಕೆ ಮೋಸ ಪಡದಿರು! ಯಾಕಂದರೆ ತನ್ನಿಂದ ತಾನೇ ಸಭೈಕ್ಯದ ಅನ್ಯೋನ್ಯದಿಂದ ಅಪಭ್ರಷ್ಟನಾಗುವಂಥವನು ಭೇದಕನೇ, ಸರಿ! ಹ್ಯಾಗಂದರೆ, ಎಲ್ಲರನ್ನು ನನಗೆ ದೂರ ಮಾಡಿಡುತ್ತೇನೆಂತ, ನೀನು ನೆನಸುವದರಿಂದ ನಿನ್ನನ್ನೇ ಎಲ್ಲರಿಂದ ದೂರ ಮಾಡಿಟ್ಟು ಕೊಂಡಿ[1].—ಶಾಖೆಯವರ ಸ್ನಾನವಿಷಯದ ಆ ವ್ಯತ್ಯಾಸವು ಇನ್ನು 58 ವರುಷ ಸ್ವಲ್ಪ ನಡೆದ ತರುವಾಯ ಕ್ರಿ. ಶ. 314ನೇದಕ್ಕೆ ಗಲ್ಲಿಯ ದೇಶದ ಆರ್ಲ್ ಎಂಬ ಪಟ್ಣದಲ್ಲಿ ಕ್ರೈಸ್ತ ಸಭೆಗಳೊಂದು ದೊಡ್ಡ ಸಂಘ ಕೇರಿತು[2]; ಅದಕ್ಕೆ ಕರ್ಥಾಗೊ ಪ್ರದೇಶದ ಹಲವರಧ್ಯಕ್ಷರು ಸಹ ಬಂದರು; ಅದರಲ್ಲಿದ್ದವರೆಲ್ಲರು ನಿರ್ಣಯಿಸಿದ್ದೇನಂದರೆ—ಯಾರಾದರೂ ತ್ರಿಯೇಕ ದೇವರ ನಾಮದಲ್ಲಿ ಕೊಟ್ಟ ಸ್ನಾನವು ನಿಜ ಸ್ನಾನವೇ; ಆದರೆ ಯಾರಾದರೂ ತ್ರಿಯೇಕ ದೇವರ ನಾಮ ತೆಗೆಯಲೊಲ್ಲದೆ, ಕ್ರಿಸ್ತನ ನಾಮ ಮಾತ್ರದಲ್ಲಿ ಕೊಟ್ಟಂಥಾದ್ದು ಸ್ನಾನವಲ್ಲ!—ಈ ವಿಧದ ನಿರ್ಣಯವು 11 ವರುಷ ದೀಚೆ ಸಣ್ಣಅಸಿಯದ ನೀಕೇಯ ಪಟ್ಣದಲ್ಲಿ ಕೂಡಿದ 1ನೇ ಕ್ರೈಸ್ತ ಸರ್ವಸಭಾಸಂಘದೊಳಗೆ ಪುನಃಸ್ಥಾಪಿತವಾಯಿತು[3].

ಕ್ರಿ. ಶ. 257ನೇದರಲ್ಲಿ ಕುಪ್ರಿಯಾನನು 9 ವರುಷ ಅಧ್ಯಕ್ಷೋದ್ಯೋಗಿಯಾಗಿದ್ದನಂತರ ವಲೇರಿಯಾನ ಕೈಸರನು[4] ಮುಖ್ಯವಾಗಿ ಸಭಾಬೋಧಕರನ್ನು ಹಿಂಸಿಸಲಿಕ್ಕೆ ತೊಡಗಿದಾಗ ನುಮಿದಿಯದ ರೋಮಾಯ ಪ್ರತಿನಿಧಿಯು ಕುಪ್ರಿಯಾನನನ್ನು ತನ್ನ ಬಳಿಗೆ ತರಿಸಿ—ಸಮಸ್ತರು ಸಾಮ್ರಾಜ್ಯದ ದೇವತೆಗಳಿಗೆ ಪೂಜಿಸ ಬೇಕೆಂಬ ಅಪ್ಪಣೆಯು ಕೈಸರನಿಂದ ಹೊರಟು ಬಂದದೆ; ನೀನು ಯಾರೆಂದು, ಕೇಳಲು, ಇವನು ಅಂಜದೆ—ನಾನು ಕ್ರೈಸ್ತನೂ ಸಭಾಧ್ಯಕ್ಷನೂ ಆಗಿದ್ದೇನೆ; ಪರಲೋಕ ಭೂಲೋಕಗಳ ಒಡೆಯನೂ ಒಬ್ಬನೇ ನಿಜನೂ ಆದ ದೇವರಿಗೆ ಕ್ರೈಸ್ತರಾದ ನಾವು ಸೇವಿಸುತ್ತೇವೆ; ಈತನ ಸನ್ನಿಧಾನದಲ್ಲಿ ನಾವು ನಮ್ಮ ಮತ್ತು ಸರ್ವ ಪ್ರಜೆಯ ಮತ್ತು ಕೈಸರನ ಹಿತಕ್ಕಾಗಿ ಪ್ರಾರ್ಥನೆ ಮಾಡುತ್ತಿರುವೆವೆಂದು[5], ನುಡಿದನು. ಆ ಪ್ರತಿನಿ

1) Epist. Cypr. 75. 2) 90ನೇ ಪಾನು. 3) 74ನೇ, 82ನೇ, 88ನೇ ಪಾನು.
4) 121ನೇ ಪಾನು. 5) 129ನೇ ಪಾನು ಸರಿ ನೋಡು.

ಧಿಯು, ಅಂಥ ಛಲವನ್ನು ನೀನು ಬಿಡುವದಿಲ್ಲವೋ? ಎಂತ, ಕೇಳಿದ್ದಕ್ಕೆ ಕುಪ್ರಿಯಾನನು, ದಿವ್ಯ ಜ್ಞಾನದಿಂದ ಹುಟ್ಟಿದ್ದೊಂದು ಉತ್ತಮ ಛಲವು ಎಂದಿಗೂ ಬದಲಾಗಲರಿಯದು! ಎಂತ, ಉತ್ತರ ಕೊಡುತ್ತಲೆ ಆ ಧೊರೆಯು—ಕೈಸರನ ಆಜ್ಞೆಯ ಪ್ರಕಾರ ನೀನು ಗಡಿ ದಾಟಿ ಹೋಗ ಬೇಕು; ಪಟ್ಣದಲ್ಲಿರುವ ಉಳಿಕಿಯ ಸಭಾಬೋಧಕರು ಯಾರು? ಹೇಳೆನ್ನಲಾಗಿ, ಇವನು ಹೇಳಿದ್ದೇನಂದರೆ—ನಿಮ್ಮ ರಾಜನೀತಿಯ ಮೇರೆಗೆ ನಾಮೋಚ್ಚಾರದ ಅಪರಾಧ ಮಾಡ ಬಾರದು, ಅಲ್ಲವೋ? ಆದ್ದರಿಂದ ನಾನು ಅವರ ಹೆಸರು ಹೇಳಲಾರೆನು; ಆದರೆ ಅವರು ಇರುವ ಕಡೆಯಲ್ಲಿ ನಿಮಗೆ ಶಿಕ್ಕುವರು; ಅವರು ತಾವೇ ಬಂದು, ತಮ್ಮನ್ನು ನಿಮ್ಮ ವಶಕ್ಕೆ ಒಪ್ಪಿಸಿ ಕೊಡುವದು ನ್ಯಾಯವಲ್ಲ! ಬೇಕಾದರೆ ಅವರನ್ನು ಹುಡುಕಿಸಿ ಕೊಳ್ಳಿರಿ!—ಆಗಲಾ ಪ್ರತಿನಿಧಿಯು ಕೋಪ ಗೊಂಡು—ಅವರು ಹ್ಯಾಗೂ ನನಗೆ ಶಿಕ್ಕುವರು! ಆದರೆ ಯಾವ ಸ್ಥಳದಲ್ಲಿಯೂ ಪ್ರಾರ್ಥನೆಗೆ ಕೂಡಿ ಬರುವದು ಮುಂತಾದ ನಿಮ್ಮ ಸಭಾಸಂಘಗಳು ಸಹ ನಡೆಯ ಬಾರದೆಂದು, ಕೈಸರನು ಆಜ್ಞಾಪಿಸಿದ್ದಾನೆ; ಇದನ್ನು ಮಿಾರುವವರೆಲ್ಲರಿಗೆ ಮರಣಾಜ್ಞೆಯು ಆಗುವದೇ ನಿಶ್ಚಯ! ಎಂತ, ಕುಪ್ರಿಯಾನನನ್ನು ಬೆದರಿಸ ನೋಡಿದರೂ ಇವನು, ನಿಮಗೆ ಅಪ್ಪಣೆಯಾದದನ್ನೇ ನಡಿಸಿರೆಂದು, ಅದೇ ಮನಃಶಾಂತಿಯಿಂದ ಹೇಳಲು, ಆ ಧೊರೆಯು ಅವನನ್ನು ಅನಕ ಹಾಗೆಯೇ ಹೋಗಲೀಸಿ, 14 ದಿವಸದ ಮೇಲೆ ಸಮುದ್ರತೀರದಲ್ಲಿ ಕರ್ಥಾಗೊವಿಗೆ ದೂರವಲ್ಲದ್ದೊಂದು ಚಿಕ್ಕ ಪಟ್ಣಕ್ಕೆ ಗಡಿಪಾರು ಮಾಡಿ, ಕಳುಹಿಸಿದನು. ಬಳಿಕ ಅನೇಕ ಸಭ್ಯರು ಅಲ್ಲಿಗಾಗಮಿಸಿ, ಅವನಿಗೆ ಪ್ರೀತಿ ತೋರಿಸುವರು. ಅಷ್ಟರೊಳಗೆ ಆ ಪ್ರತಿನಿಧಿಯು ಹಲವರು ಅಧ್ಯಕ್ಷರನ್ನೂ ಬೇರೆ ಬೋಧಕರನ್ನೂ, ಸಭ್ಯರನ್ನು ಸಹ, ಹಿಡಿಸಿ, ಅಸಹ್ಯ ಬಂಧನಸ್ಥಳದೊಳಗೆ ಹಾಕಿಸಿ, ಈ ಪೀಡೆಯಿಂದ ಸಾಯದವರನ್ನು ಗಣಿಗಳಿಗೊಯ್ಯಿಸಿ, ನಾನಾ ವಿಧದ ಕಷ್ಟದಿಂದ ಅವರನ್ನು ವ್ಯಥೆ ಪಡಿಸುವಾಗ ಕುಪ್ರಿಯಾನನು ಆಯಾ ಶ್ರಮಾಲುಗಳಿಗೆ ಧೈರ್ಯಕರವಾದ ಪತ್ರಿಕೆಗಳನ್ನಲ್ಲದೆ ತನಗಿರುವ ಪ್ರಾಪ್ತಿಯಲ್ಲಿ ತೆಗದ ತಕ್ಕಷ್ಟು ಹಣವನ್ನು ಸಹ ಕಳುಹಿಸಿ ಕೊಡುತ್ತಿರುವನು. ಕುಪ್ರಿಯಾನನು $\frac{3}{4}$ ವರುಷ ಗಡಿ ದಾಟಿದವನಾಗಿದ್ದ ಮೇಲೆ ಪ್ರತಿನಿಧಿಯು ಅವನನ್ನು ಕರ್ಥಾಗೊವಿಗೆ ತಿರಿಗಿ ಬರಗೊಡಿಸಿದನು. ಆದರೆ ಆ ಅಧ್ಯಕ್ಷನು ಬಹು ಸಂತೋಷದಿಂದ ತನ್ನ ಪ್ರಿಯ ಸಭೆಯಲ್ಲಿ ಮರಳಿ ಶೇರಿ, ಸ್ವಲ್ಪ ಕಾಲ ಮಾತ್ರ ಕಳೆಯುತ್ತಲೇ ಅವನಿಗೆ ಮೂರ್ತಿಪೂಜಕರಿಂದ ತಿರಿಗಿ ಪ್ರಾಣಸಂಕಟವಾಯಿತು; ಅವನ ಸಹೋದರರಾದ ಕ್ರೈಸ್ತರು ಅಂದು ಬಂದು, ಓಡಿ ಹೋಗಿರೆಂದು, ಅವನನ್ನು ಬಹು ತರ ಬೇಡಿ ಕೊಂಡರೂ ಅವನು ಒಪ್ಪದಿರಲು, ಅವನು ನ್ಯಾಯಸ್ಥಾನಕ್ಕೆ ಹೋಗ ಬೇಕಾಯಿತು. ಅಲ್ಲಿ ಅವನು ಪ್ರತಿನಿಧಿಯ ಎಲ್ಲಾ ಪ್ರಶ್ನೆಗಳಿಗೆ ಒಳ್ಳೇ ಕ್ರೈಸ್ತ ಸಾಕ್ಷಿಯು

ಳ ಉತ್ತರ ಕೊಟ್ಟ ಹಿಂದೆ ಇವನು, ಖಡ್ಗದಿಂದ ಅವನಿಗೆ ಆಜ್ಞೆ ಮಾಡಿಸ ಬೇಕೆಂತ, ತೀರ್ಪು ಹೇಳಲಾಗಿ, ಕುಪ್ರಿಯಾನನು, ದೇವರಿಗೆ ಸ್ತೋತ್ರವಾಗಲಿ! ಎಂದು, ಉಚ್ಚರಿಸಿದನು. ತತ್‌ಕ್ಷಣವೇ ಅವನನ್ನು ಹಿಡಿದು, ಮರಣಸ್ಥಳಕ್ಕೆ ವೈಯಲು, ದಾರಿಯಲ್ಲಿ ಅನೇಕ ಕ್ರೈಸ್ತರು ನೆರೆದು, ನಮ್ಮ ಅಧ್ಯಕ್ಷನ ಸಂಗಡ ನಾವು ಸಾಯ ಬಾರದೇ? ಎಂತ, ದುಃಖದಿಂದ ಕೂಗಿದರು. ಮರಣಸ್ಥಳಕ್ಕೆ ಮುಟ್ಟಿದಂದು ಕುಪ್ರಿಯಾನನು ತನ್ನ ಮೇಲಂಗಿ ತಾನು ತೆಗದಿಟ್ಟು, ಮೊಣಕಾಲೂರಿ, ಪ್ರಾರ್ಥಿಸಿ, ಎದ್ದು, ತನ್ನ ಗೆಳೆಯರಿಂದ ಶಿರಚ್ಛೇದಕನ ಕೈಯಲ್ಲಿ ದೊಡ್ಡ ಇನಾಮು ಕೊಡಿಸಿ, ತನ್ನ ಕಣ್ಣು ತಾನು ಕಟ್ಟಿ ಕೊಂಡು, ನಿಲ್ಲಲು, ಇಬ್ಬರು ಸಭಾಬೋಧಕರು ಮಮತೆಯಿಂದ ಬಂದು, ಅವನ ಕೈ ಕಟ್ಟಿದರು. ಆಗ ಆ ಶಿರಚ್ಛೇದಕನು ಅಂತಃಕರಣದಿಂದ ನಡುಗಿ ಕೊಂಡು, ದುಃಖಾಕ್ರಾಂತನಾಗಿ ತನ್ನ ಉದ್ಯೋಗದ ಹಂಗು ತೀರಿಸಿದನು. ರಾತ್ರಿಯಲ್ಲಿ ಕ್ರೈಸ್ತರು ತಮ್ಮ ಸಹೋದರನ ಹೆಣ ತಕ್ಕೊಂಡು ಹೋಗಿ, ಹನನಸ್ಥಳದ ಸಮೀಪದಲ್ಲಿ ಪ್ರಾರ್ಥನೆ ಸ್ತೋತ್ರಗಳೊಡನೆ ಹುಗಿದರು. ಕುಪ್ರಿಯಾನನ ಸಾಕ್ಷಿಮರಣವು ಕ್ರಿ. ಶ. 258ನೇ ವರುಷದಲ್ಲಿ ಸಂಭವಿಸಿತು.

ಕುಪ್ರಿಯಾನನ ಚರಿತ್ರ ಮುಗಿಸಿದ ತರುವಾಯ ಅವನಲ್ಲಿದ್ದು ಕಾಣಿಸಿ ಕಾಲಕ್ರಮೇಣ ಸಭೆಯಲ್ಲಿ ಅತಿ ರೂಢಿಯಾದ್ದೊಂದು ಶಾಖಾಭಾವವನ್ನು ಈಗ ಇನ್ನು ಸೂಚಿಸ ತಕ್ಕದ್ದು; ಅದೇನಂದರೆ, ಅವನು, ಸರ್ವತ್ರದ ಸಕಲ ಅಧ್ಯಕ್ಷರೆಂಬವರು ಒಂದು ಪ್ರತ್ಯೇಕ ಕುಲವೆಂದು, ಹೇಳಿ[1], ಅವರ ಮಾನವನ್ನು ಹೆಚ್ಚಿಸ ನೋಡುತ್ತಿದ್ದದೇ. ಕ್ರೈಸ್ತ ಸಭೆಯು ಆಗಿನಂಥ ಅಧ್ಯಕ್ಷರ ಮೇಲೆ ಕಟ್ಟೋಣವಾಗುತ್ತದೆಂಬದೇ ಅವನ ಚರ್ಚೆ[2]. ಮತ್ತಾಯನ ಸುವಾರ್ತೆಯ 16ನೇ ಸಂಧಿಯಲ್ಲಿರುವ 18 ಮುಂತಾದ ವಚನಗಳನ್ನು ಕ್ರಿಸ್ತ ಕರ್ತನು ಮೊದಲು ಪೇತ್ರ ಅಪೊಸ್ತಲನಿಗೆ, ಬಳಿಕ ಎರಡು ಸಾರಿ ಸಮಸ್ತರಿಗೆ[3] ಹೇಳಿದನಲ್ಲ? ಕುಪ್ರಿಯಾನನು ಧೈರ್ಯದೊಡನೆ ಆ ವಚನಗಳ ಅಧಿಕಾರವನ್ನು, ಬೇರೆ ಅವುಗಳದನ್ನು ಕೂಡ, ಆಗಿನಂಥ ಅಧ್ಯಕ್ಷೋದ್ಯೋಗಿಗಳಿಗೆ ಮಾತ್ರ ಅಂದರೆ ತನಗೂ ಇತರ ಸಕಲ ಅಧ್ಯಕ್ಷರಿಗೂ, ನೀವು ಹಿಂದೆ ತಿಳಿದಂತೆ[4], ರೋಮಪುರದವನಿಗೆ ಸಹ ತಾಗಿಸುತ್ತಿದ್ದನು[5]. ಅವನು ರೋಮದ ಅಧ್ಯಕ್ಷತಾಸ್ಥಳವನ್ನು ವಿಶೇಷವಾಗಿ ಹೊಗಳಿದ್ದಕ್ಕೆ ನಿಮಿತ್ತವೇನೆಂದರೆ, ಆ ಮಹಾ ರಾಜಧಾನಿಯಲ್ಲಿ ಅಧ್ಯಕ್ಷನಾಗಿದ್ದ ಮೂಲಾಧ್ಯಕ್ಷನೆನ್ನಿಸುವ ಪೇತ್ರನು ಅಧ್ಯಕ್ಷರೆಲ್ಲರ ಏಕತ್ವದ ದೃಷ್ಟಾಂತವಾದ್ದರಿಂದ ಕ್ರೈಸ್ತ ದೃಶ್ಯ ಸಭಾಸಮಷ್ಟಿಯ ಏಕತ್ವದ ದೃಷ್ಟಾಂತವು ಸಹ ಆಗಿದ್ದಾನೆಂತ, ಅವನು ಭಾವಿಸಿ ಕೊಂಡದ್ದೇ[6]. ಹ್ಯಾಗಂದ

1) 93ನೇ ಪಾನು. 2) Ep. 27. 3) ಮತ್ತಾ. 18. 18; ಯೋಹಾ. 20, 21 ಆದಿ. 4) 51ನೇ ಪಾನು. 5) De unit. eccl. ep. 4; 70ನೇ ಪಾನು ನೋಡು. 6) ep. IV ad Cornel.

ರೆ—ಸಮಸ್ತ ಅಧ್ಯಕ್ಷರೂ ಒಂದೇ, ಅವರ ಮೇಲೆ ಕಟ್ಟೋಣವಾಗುವ ದೃಶ್ಯ ಸಭೆಗಳೆಲ್ಲವೂ ಶಾಖಾವಿಚಿತ್ರತ್ವ[1] ಸಹ ಇಲ್ಲದೆ ಒಂದೇ ಆಗಿರ ಬೇಕು ಎಂತ, ಒಂದು ಉಪಮೆಯಿಂದ ನಿದರ್ಶಿಸಲಿಕ್ಕೋಸ್ಕರ ಕ್ರಿಸ್ತನು ಅಧ್ಯಕ್ಷೋದ್ಯೋಗವನ್ನೂ ಅದರ ಸಂಬಂಧವಾದ ಅಧಿಕಾರವನ್ನೂ ಪ್ರಥಮದಲ್ಲಿ ಪೇತ್ರನೊಬ್ಬನಿಗೆಯೇ ಮಾತ್ರ ಕೊಟ್ಟನೆಂಬಂತೆ. ಆದಾಗ್ಯೂ ಪೇತ್ರನಿಗಾಗಲಿ ರೋಮದ ಅಧ್ಯಕ್ಷರಿಗಾಗಲಿ ಹೆಚ್ಚಿನದೇನಾದರೂ ಮಾನ ಹಚ್ಚುವದು ಕುಪ್ರಿಯಾನನಿಗೆ ಬಹು ದೂರ. ತನಗೆ ಮುಂಚೆ ರೋಮದಲ್ಲಿದ್ದ ಅಧ್ಯಕ್ಷರನ್ನು, ತನ್ನ ಪೂರ್ವೋದ್ಯೋಗಿಗಳೆಂದು[2], ಹೇಳುತ್ತಾನೆ; ತನ್ನ ಕಾಲದವನಿಗೆ, ಸಹೋದರನೆಂತಾಗಲಿ ಜತೆಕೆಲಸದವನೆಂತಾಗಲಿ, ಬರೆಯುತ್ತಾನೆ. ತಾನು ರೋಮದ ಅಧ್ಯಕ್ಷರಿಗೆ ಪೂರಾ ಈಡೆಂದು, ಅವನು ತಿಳುಕೊಂಡಿದ್ದದು ಅವನು ರೋಮದ ಕೊರ್ನೇಲಿಯ ಮತ್ತು ಸ್ತೆಫನ ಎಂಬವರಿಬ್ಬರು ಅಧ್ಯಕ್ಷರನ್ನು ಕುರಿತು ನಡೆದ ರೀತಿಯಿಂದಲೂ ಸ್ಪಷ್ಟವಾಗುತ್ತದೆ. ಕುಪ್ರಿಯಾನನಲ್ಲಿ ಗೋಚರಿಸಿದ ಆ ವಿಶೇಷ ಭಾವವನ್ನು, ಎಪಿಸ್ಕೊಪಾಲ ಅಂದರೆ ಅಧ್ಯಕ್ಷರ ಸಂಬಂಧವಾದ ಭಾವವೆಂತ, ಹೇಳ ಬಹುದು.

## 18. ಜ್ಞೋಸ್ತಿಕರೆಂಬ ಪಾಷಂಡಿಗಳು.

ಹಿಂಸಾಕಾಲದೊಳಗೆ ಕ್ರೈಸ್ತ ಸಭೆಗೆ ಆಗಿಂದಾಗ ಉಪದ್ರವ ಒದಗುತ್ತಿದ್ದ ವಿರೂಪಭಾವಿಗಳಾದ ಜ್ಞೋಸ್ತಿಕರನ್ನು[3] ಕುರಿತು ಸ್ವಲ್ಪ ವಿವರ ಹೇಳ ತಕ್ಕದಾಯಿತು. ಹ್ಯಾಗಂದರೆ ಕ್ರಿಸ್ತನ ಸಭೆಯು ಬೇಗ ಬೆಳೆದು ಬರುವಾಗ, ಅಪೊಸ್ತೊಲಿಕ ಕಾಲದಲ್ಲ್ಯಾದರೂ, ನಿಜ ಹೃತ್ಪರಿಣಾಮ ಪಡದಿದ್ದ ಜ್ಞಾನಿಕರು ಸಹ ಸಭೆಗೆ ಕೂಡುತ್ತಿರುವರು. ಇವರು ಮುಖ್ಯವಾಗಿ ವಿಶ್ವೋತ್ಪತ್ತಿ ಪಾಪೋತ್ಪತ್ತಿ ಸಂಸಾರಾಂತಗಳನ್ನು ಕುರಿತು ವಿಗ್ರಹಾರಾಧಕರ ದರ್ಶನಗಳನ್ನು ಕ್ರೈಸ್ತತ್ವದೊಳಗೆ, ಹಾಲಿನೊಳಗೆ ವಿಷ ಬೆರಸುವಂತೆ, ಮಿಲಿತ ಮಾಡ ಯೋಚಿಸಿದರು; ಕ್ರೈಸ್ತರು ಇಂಥವರನ್ನು ಜ್ಞೋಸ್ತಿಕರು ಅಂದರೆ ನಿರರ್ಥಕ ಜ್ಞಾನಿಕರು ಎಂತ, ಹೇಳುವರು. ಹಿಂದೆ ಗೊತ್ತಾದ ಪ್ರಕಾರ[4] ಅಪೊಸ್ತೊಲಿಕ ಕಾಲದಲ್ಲಿಯೂ ಅದಕ್ಕೀಚೆಯೂ ರೋಮಿಯ ಸಾಮ್ರಾಜ್ಯದ ಐಗುಪ್ತ, ಸುರಿಯ, ಸಣ್ಣ ಅಸಿಯ, ಗ್ರೇಕಿಯ ಎಂಬ ದೇಶಗಳಲ್ಲಿ ಬೌದ್ಧ ಮತಕ್ಕೂ ಹಿಂದು ವೇದಾಂತಕ್ಕೂ ಸೇಶ್ವರಸಾಂಖ್ಯಯೋಗಗಳಿಗೂ ಸರಿ ಬೀಳುವಂಥ ಜ್ಞಾನಿಕತ್ವದರ್ಶನಗಳು ಪ್ರಬಲವಾಗಿದ್ದವಲ್ಲದೆ ಅಹುರ ಮಜ್ದನು

1) 1ನೇ, 92ನೇ, 144ನೇ, 146ನೇ, 161ನೇ, 162ನೇ, 163ನೇ, 164ನೇ, 165ನೇ ಪಾನುಗಳು.
2) ep. 68. 3) 145ನೇ, 152ನೇ ಪಾನುಗಳು. 4) 10 ಆದಿ ಪಾನುಗಳು; 136ನೇದು.

(ಅಸುರ ಮೇಧಸ್) ಎಂಬ ಅನಾದಿತೇಜೋರಾಜನ ಮತ್ತು ಅರ್ಹಮನ್ ಎಂಬ ಅನಾದಿತಮೋರಾಜನ ವಿಷಯವಾದ ಪಾರ್ಶಿ ದರ್ಶನವು ಸಹ ನಡೆಯುತ್ತಿತ್ತು. ಈ ಜ್ಞಾನಿಕತ್ವಗಳೊಳಗೆ ಹೊರಳಾಡಿದಂಥವರಲ್ಲನೇಕರು ಕ್ರೈಸ್ತರೆನ್ನಿಸಿ ಕೊಳ್ಳುವವರಾದರೂ ಸತ್‌ಕ್ರೈಸ್ತರಲ್ಲದಿದ್ದು, ಹಿಂದೆ ಸೂಚಿಸಿದ ಪಾಷಂಡಕ್ಕೆ ಕಾರಣರಾದರು. ಆ ಪಾಷಂಡರೆಲ್ಲರಿಗೂ ಅವರವರ ವಿಶ್ವಮಾಯಾವಾದದ ಮೇಲೆ—ನಿಜ ವಸ್ತುವನ್ನು (ಬ್ರಹ್ಮವನ್ನು) ತೋರಿಸುವದಕ್ಕೋಸ್ಕರ ಮಾತ್ರ ಅವತರಿಸಿ ಬಂದ ಕ್ರಿಸ್ತನ ಜೀವವು ಬರೀ ಮಾಯೆ! ಅವನು ಶ್ರಮ ಪಟ್ಟು ಸತ್ತದ್ದೂ ಬರೀ ಮಾಯೆ! ಎಂದು, ಕ್ರಿಸ್ತನಿಂದಾದ ಶಾಪವಿಮೋಚನಕಾರ್ಯವನ್ನು ಅನರ್ಥಕ ಮಾಡುವಂಥ ದೊಡ್ಡ ಅಪಬೋಧನೆ ಇರುವದು. ಆದ್ದರಿಂದ ಯೋಹಾನ ಅಪೊಸ್ತಲನು ಆ ಮಿಥ್ಯಾವಾದಿಗಳನ್ನು ಸಭ್ಯರಿಗೆ ವರ್ಣಿಸಿ ತೋರಿಸುವದಕ್ಕೋಸ್ಕರ ತನ್ನ ಪತ್ರಿಕೆಗಳೊಂದರಲ್ಲಿ[1] ಬರೆದದ್ದೇನಂದರೆ—ಯೇಸು ಕ್ರಿಸ್ತನು (ಮಾಯಾರ್ಥವಾಗಿ ಅಲ್ಲ, ನಿಜವಾಗಿ) ಮಾಂಸದಲ್ಲಿ ಬಂದನೆಂದು ಅರಿಕೆ ಮಾಡುವ ಪ್ರತ್ಯಾತ್ಮವು ದೇವರಿಂದಾದದ್ದು; ಆದರೆ ಯೇಸು ಕ್ರಿಸ್ತನು ಮಾಂಸದಲ್ಲಿ ಬಂದನೆಂದು ಅರಿಕೆ ಮಾಡದ ಪ್ರತ್ಯಾತ್ಮವು ದೇವರಿಂದಾದದ್ದಲ್ಲ, ಕ್ರಿಸ್ತನ ವಿರೋಧಿಯದಾಗಿದೆ!—ಆ ಜ್ಞೋಸ್ತಿಕರ ವಿವಿಧದ ಪಾಷಂಡವನ್ನು ಹೆಚ್ಚಾಗಿ ವಿವರಿಸುವದು ಅಪ್ರಯೋಜನವೇ; ಆದರೆ, ಹಿಂದು ಕ್ರೈಸ್ತ ಸಭೆಗಳಲ್ಲಿ ಅಂಥಾದ್ದು ನಡೆಯಲಾರಂಭಿಸದ ಹಾಗೆ, ಪೂರ್ವದ ಕೀರ್ತ್ಯ ಕ್ರೈಸ್ತರು ಅದನ್ನು ಕುರಿತು ಯೋಚಿಸಿದ್ದನ್ನು ಇನ್ನು ಒಂದೆರಡು ದೃಷ್ಟಾಂತಗಳಿಂದ ತಿಳಿಸುವದೇ ಹಿತವು.—ರೋಮಾಯ ಸಾಮ್ರಾಜ್ಯದ ಪಟ್ಣಗಳಲ್ಲಿ ಬೇರೆ ಬೇರೆ ಬಚ್ಚಲುಗೋಣೆಗಳಿರುವ ಚಲೋ ಸ್ನಾನಾಲಯಗಳಿರುವವು. ಯೋಹಾನ ಅಪೊಸ್ತಲನು ಒಂದಾನೊಂದು ದಿನ ಅಂಥಾದೊಂದು ಸ್ನಾನಾಲಯದೊಳಗೆ ಪ್ರವೇಶಿಸಲಾಗಿ, ಕೇರಿಂಥನೆಂಬವನೊಬ್ಬ ಮುಖ್ಯ ಜ್ಞೋಸ್ತಿಕನು ಸಹ ಒಳಗಿದ್ದಾನೆಂತ, ಕೇಳುತ್ತಲೇ—ಓಡಿ ಹೋಗೋಣ! ಸ್ನಾನಾಲಯವು ಬಿದ್ದೀತು, ಯಾಕಂದರೆ ಸತ್ಯವಿರೋಧಿಯಾದ ಆ ಕೇರಿಂಥನು ಒಳಗಿದ್ದಾನೆ! ಎಂದು, ಹೇಳಿ, ಹೊರಗೆ ಓಡಿ ಹೋದನು[2]. ಅದಲ್ಲದೆ ಸ್ಮುರ್ನ ಪಟ್ಣದ ಅಧ್ಯಕ್ಷನಾದ ಪೊಲುಕರ್ಪನೆಂಬ ಯೋಹಾನನ ಶಿಷ್ಯನು[3] ರೋಮಪುರಕ್ಕೆ ಬಂದಿರುವಲ್ಲಿ ಮರ್ಕಿಯೊನನೆಂಬ ಜ್ಞೋಸ್ತಿಕನು, ರೋಮದ ಸಭ್ಯರೂ ಸಭಾಧ್ಯಕ್ಷನೂ ತನ್ನನ್ನು ಕ್ರೈಸ್ತನೆಂತ ಹೇಳಲೊಲ್ಲದ ಕಾರಣದಿಂದ, ಬಹಳ ಹೊಟ್ಟೆಕಿಚ್ಚು ಪಟ್ಟು, ಒಮ್ಮೆ ಆ ಪುರಬೀದಿಯಲ್ಲಿ ಪೊಲುಕರ್ಪನನ್ನು ಕಂಡು, ಎಲೇ, ನನ್ನನ್ನೂ ನನ್ನ ಪಕ್ಷದವರನ್ನೂ ಕ್ರೈಸ್ತರೆಂತ ತಿಳಿದು ಕೊಳ್ಳಿರೆಂದು, ಒದರಲಿಕ್ಕೆ, ಆ ವೃದ್ಧ ಅಧ್ಯಕ್ಷನು, ನಿನ್ನನ್ನು ಸೈತಾನನ ಹಿರಿ ಮಗನೆಂದು ತಿಳಿದು ಕೊಂಡಿದ್ದೇನೆ,

1) ಯೋಹಾ. 4, 2. 3. 2) Irenaeus. 3, 3. 3) 12ನೇ ಸಂಧಿ.

ನಿಶ್ಚಯ! ಎಂತ, ಉತ್ತರ ಕೊಟ್ಟನು[1]. ಅದು ಹೊರ್ತಾಗಿ ಆ ಪೊಲುಕರ್ಪನ ಶಿಷ್ಯನಾದ ಈರೇನೇಯನೆಂಬ ಲಿಯೋನಿನ ಅಧ್ಯಕ್ಷನು[2] ತನ್ನ ಪ್ರಾಣಸಖನಾದ ಫ್ಲೋರೀನನೆಂಬವನೊಬ್ಬನಿಗೆ ಬರೆದ್ದೊಂದು ಪತ್ರಿಕೆಯಲ್ಲಿರುವದೇನಂದರೆ—ಕರ್ತನ ಅಪೊಸ್ತಲರ ಜತೆಗಾರನಾಗಿದ್ದ ನಮ್ಮ ಹಿರಿಯನ ಬಾಯಿಗೆ ಅಂಥ ಪಾಷಂಡವು ಬಹು ದೂರದಲ್ಲಿತ್ತು. ನಾನು ಇನ್ನು ಹುಡುಗನಾಗಿರುವಾಗ ನಿನ್ನ ಸಂಗಡ ಸಣ್ಣ ಅಸಿಯದಲ್ಲಿ ನಮ್ಮ ಪೊಲುಕರ್ಪನ ಬಳಿಯಲ್ಲಿದ್ದೆನಲ್ಲ? ಈಗ ನಡೆಯುವ ಎಲ್ಲಾ ಕಾರ್ಯಗಳಿಗಿಂತ ಬಹು ಹೆಚ್ಚಾಗಿ ಆಗ ನಡೆಯುತ್ತಿದ್ದದು ನನ್ನ ನೆನಪಿನಲ್ಲಿದೆ. ತನ್ನ ಕರ್ತನೆಡೆಗೆ ಹೋಗಿರುವ ಪೊಲುಕರ್ಪನು ಅಂದು ಕೂತು ಕೊಂಡು ಬೋಧಿಸುತ್ತಿದ್ದ ಸ್ಥಳವನ್ನು ಇಂದಾದರೂ ವಿವರವಾಗಿ ವರ್ಣಿಸುವದು ನನಗೆ ಬರುತ್ತದೆ; ಅವನ ಬರೋಣವೂ ಹೋಗೋಣವೂ ಜೀವಿತರೀತಿಯೂ ಶರೀರಾಕಾರವೂ ಪ್ರಸಂಗವೂ ಇಷ್ಟೆಲ್ಲಾ ಇನ್ನೂ ಸ್ಪಷ್ಟವಾಗಿ ನನ್ನ ಧ್ಯಾನದಲ್ಲಿದೆ. ಅವನು ಯೋಹಾನನ ಮತ್ತು ಕರ್ತನನ್ನು ಕಂಡ ಬೇರೊಬ್ಬರ ಸಂಗತಿಯಲ್ಲಿದ್ದು ಕೇಳಿ ಕೊಂಡು ನಮಗೆ ಹೇಳುತ್ತಿದ್ದ ಕರ್ತನ ಪ್ರಸಂಗ, ಅದ್ಭುತ, ಪ್ರೀತಿ ಮುಂತಾದ ಕಾರ್ಯಗಳ ವರ್ತಮಾನವು ಪರಿಶುದ್ಧ ಬರಹಕ್ಕೆ ಪೂರಾ ತಾಳೆ ಬಿತ್ತು; ಅವನಿಗೆ ಅದೆಲ್ಲವೂ ಕಣ್ಣುಸಾಕ್ಷಿಗಳಿಂದಲೇ ತಿಳಿದು ಬಂದಿತ್ತಲ್ಲವೋ? ಆ ಅಪೊಸ್ತೊಲಿಕ ಮನುಷ್ಯನು ನಮ್ಮ ಕಾಲದಲ್ಲಿ ಬದುಕಿ ಈಗಿನ ಪಾಷಂಡಿಗಳ ಬೋಧನೆ ಕೇಳಿದ್ದರೆ ಅವನು ಬೊಬ್ಬೆ ಹಾಕಿ, ಕಿವಿ ಮುಚ್ಚಿ ಕೊಂಡು, ಓ ದೇವರೇ! ನಾನು ಇಂಥಾದ್ದನ್ನನುಭವಿಸ ಬೇಕಾದಂಥ ಕಾಲಕ್ಕೆ ನನ್ನನ್ನು ಯಾಕೆ ಉಳಿಸಿದ್ದಿ? ಎಂತ, ಕೂಗಿ, ಅಂಥಾ ಬೋಧನೆ ಕೇಳಿದಲ್ಲಿಂದ ಬೇಗ ಓಡಿ ಹೋಗುತ್ತಿದ್ದನೆಂಬದಕ್ಕೆ ಸಂಶಯವೇನೂ ಇಲ್ಲ!—ಹೆಸರು ಹೇಳಿದ ಇವರು ಮಾತ್ರವಲ್ಲದೆ ತೆರ್ತುಲ್ಲಿಯಾನ ಒರೀಗೆನ ಮುಂತಾದ ಕ್ರೈಸ್ತೋತ್ತಮರನೇಕರೂ ಆ ಪ್ರಕಾರ ತೀರ್ಪು ಮಾಡಿದ ಜ್ಞೋಸ್ತಿಕರು, ಈ ಜೀವವು ಬರೇ ಮಾಯೆ ಎಂದು, ಹೇಳಿ, ಇದರಿಂದ ಬಿಡುಗಡೆ ಹೊಂದುವದಕ್ಕೆ ಆರಂಭದಲ್ಲಿ ಬಹಳ ಮೈದಂಡನ ಮಾಡಿ ಕೊಳ್ಳುತ್ತಿದ್ದರೂ ಹಿಂದಗಡೆ ತೀರಾ ನೀಚರಾದರು. ಹ್ಯಾಗಂದರೆ ಅವರು—ಈ ಜೀವ ಜೀವಿತಗಳೆರಡೂ ದುಷ್ಟ ಮಾಯೆಯೆ! ಇವುಗಳ ಮೂಲವಾದ ಪ್ರಕೃತಿಮಯ ಕಾಯದ ಬಲ ಕುಂದಿಸ್ಯೇವೆಂದು, ನಿರ್ಲಜ್ಜೆಯಿಂದ ಮಾಂಸದ ಸರ್ವ ಇಚ್ಛೆ ಆಶೆಗಳನ್ನು, ಕಾಯಕೇಡಿಗೆಂತ, ತೀರಿಸಿ ಕೊಳ್ಳುವವರಾಗಿ, ಸ್ವಪರಸ್ತ್ರೀ ಎಂಬ ಭೇದಶೂನ್ಯತೆ ಪುರುಷಸಂಗಮ ಪಟಿಂಗತನ ಮದ್ಯಪಾನ ಇತ್ಯಾದಿ ಮಹಾ ಪಾತಕಗಳುಳ್ಳವರಾಗಿರುವರು. ಯೋಹಾನ ಅಪೊಸ್ತಲನು ಇನ್ನು ಜೀವದಿಂದಿರಲು, ಇಂಥವರಲ್ಲೊಂದು ಪಕ್ಷದವರು ನೀಕೊ

1) Irenaeus. 3, 3. 2) 143ನೇ ಪಾನು.

ಲಾಯಿತರೆನ್ನಿಸಿ ಕೊಂಡರು[1]. ಆ ಜ್ಞೋಸ್ತಿಕತ್ವವು ಅಪೊಸ್ತಲರಿಗೀಚೆ 150 ವರುಷ ನಡೆದ ಮೇಲೆ ಅದು ಪರಿಹಾರವಾಯಿತು. ಆದರೆ ಕ್ರಿ. ಶ. 270ನೇದರಲ್ಲಿ ಮಣಿ ಎಂಬವನೊಬ್ಬ ಮಗರ ಕುಲಜನಾದ[2] ಫಾರ್ಶಿ ಕ್ರೈಸ್ತನು ಬುದ್ಧಿ ಗೆಟ್ಟು, ಇನ್ನೊಮ್ಮೆ ಫಾರ್ಶಿ ಮತ್ತು ಬೌದ್ಧ ಮತಗಳನ್ನೂ ಕ್ರೈಸ್ತತ್ವವನ್ನೂ ಒಟ್ಟುಗೂಡಿಸುವವನಾಗಿ, ಮಣಿಕೇಯರೆಂಬ ಪಾಷಂಡಿಗಳ ಉತ್ಪಾದಕನಾದನು. ಇವರು ಸುಮಾರು 120 ವರುಷವಿದ್ದು ತೋರದೆ ಹೋದರು. ಅವರ ಗುರುವಿಗೆ ಬೇಗನೆ ನಾಶನ ಬಂದೊದಗಿತು; ಹ್ಯಾಗಂದರೆ ಬಹ್ರಾಮನೆಂಬ ಸಾಸಾನಿದ ರಾಜನು[3] ಪ್ರಾಚೀನ ಫಾರ್ಶಿ ಮತದಲ್ಲಿ ಅತ್ಯಾಸಕ್ತನಾಗಿರುವದರಿಂದ ಮಣಿಯ ಆ ವೃತ್ತಿಗೆ ಅಗದೀ ಮೆಚ್ಚದೆ, ಕ್ರಿ. ಶ. 277ನೇ ವರುಷಕ್ಕೆ ಅವನನ್ನು ಚರ್ಮ ಸುಲಿಸಿ ಕೊಲ್ಲಿಸಿದನು.

---

## 19. ಪರಿಶುದ್ಧ ಬರಹದ ವಿಷಯವು.

ಹಿಂಸೆ ತಾಳುತ್ತಿದ್ದ ಆ ಸಮಸ್ತ ಕ್ರೈಸ್ತರ ವಿಶೇಷವಾದ ಆದರಣವು ಪರಿಶುದ ಬರಹವೇ; ಹಾಗಾದರೆ ಇದನ್ನು ಕಾಪಾಡಿ ಕೊಳ್ಳುವದಕ್ಕೆ ಅವರಿಗೆ ಬಹಳ ಚಿಂತೆ ಇರುವದು. ಈ ಚಿಂತೆಗೆ ಸ್ವಂತಾದರಣವಲ್ಲದೆ ಮತ್ತೊಂದು ಸಂಗತಿಯೂ ಕಾರಣವಾಯಿತು; ಯಾವದಂದರೆ, ಜ್ಞೋಸ್ತಿಕರೆಂಬ ಸುಳ್ಳುಕ್ರೈಸ್ತರು ಉದ್ಭವವಾಗಿ, ಸ್ವಾರ್ಥವುಳ್ಳ ಅನೇಕ ಗ್ರಂಥಗಳನ್ನು ಬರೆದು, ಅಪೊಸ್ತಲರ ಗ್ರಂಥಗಳೇ ಎಂದು, ವದಿಸುತ್ತಿರಲಿಕ್ಕೆ, ಮಾನುಷ ಬರಹ ಯಾವದು? ದಿವ್ಯ ಪರಿಶುದ ಬರಹ ಯಾವದು? ಎಂದು, ತಿಳುಕೊಳ್ಳುವದು ಅತ್ಯವಶ್ಯವಾಯಿತು. ಈ ತಿಳುವಿಕೆಗಾಧಾರವಾಗಿ ಅಪೊಸ್ತಲರ ಶಿಷ್ಯರೂ ಅಪೊಸ್ತಲರಿಂದಲೇ ಗ್ರಂಥಗಳು ಬಂದು ಮುಟ್ಟಿದ ಸಭ್ಯರೂ ಇರುವರು. ಯೋಹಾನ ಅಪೊಸ್ತಲನು ತಾನು ಸ್ಮುರ್ನ ಪಟ್ಟದಲ್ಲಿ ಅಧ್ಯಕ್ಷನೆಂತ ನೇಮಿಸಿದ ಪೊಲುಕರ್ಪನು[4] ಕ್ರಿ. ಶ. 168ನೇ ವರುಷದ ವರೆಗಾದರೂ ಬದುಕುತ್ತಿದ್ದನಲ್ಲ? ಇವನ ಜೀವಿತದ ಸಮಯವೇ—4 ಸುವಾರ್ತೆಗಳೂ ಅಪೊಸ್ತಲರ ಕ್ರಿಯೆಗಳೂ ಪೌಲ ಅಪೊಸ್ತಲನ ಪತ್ರಿಕೆಗಳೂ ಎಬ್ರೇಯರಿಗೆ ಬರೆದ ಪತ್ರಿಕೆಯೂ ಪೇತ್ರ ಅಪೊಸ್ತಲನ 1ನೇ ಪತ್ರಿಕೆಯೂ ಯೋಹಾನ ಅಪೊಸ್ತಲನ 1ನೇ ಪತ್ರಿಕೆಯೂ ಪ್ರಕಟನವೂ ದೇವರ ವಾಕ್ಯವೆಂದು, ಸರ್ವ ಸಭೆಗಳೂ ಸಮ್ಮತಿಯುಳ್ಳವುಗಳಾಗಿದ್ದವು. ಹೊಸ ಒಡಂಬಡಿಕೆಯಲ್ಲಿರುವ ಇತರ ಗ್ರಂಥಗಳನ್ನು ಕುರಿತು ಸಮಸ್ತ ಸಭೆ ಕೂಡಿ ಆ ಕಾಲದಲ್ಲಿ ಖಂಡಿತವಾದ ನಿರ್ಣಯ ಮಾಡಿದ್ದಿಲ್ಲ; ಯಾಕಂದರೆ ಈ ಗ್ರಂಥಗಳು ಅಂದು ಸರ್ವತ್ರ ಗೊತ್ತಾಗಿರಲಿಲ್ಲ. ಕ್ರಿ. ಶ. 393ನೇ ವರುಷದಲ್ಲಿ—ಆಯಾ ಗ್ರಂಥಗ

---

1) ಪ್ರಕಟ. 2, 6. 15. 2) 17ನೇ ಪಾನು. 3) 73ನೇ ಪಾನು. 4) 136ನೇ ಪಾನು.

ಳೆಲ್ಲವೇ ಅಂದರೆ ಈಗಿನ ಹೊಸ ಒಡಂಬಡಿಕೆಯ ಗ್ರಂಥಸಂಚಯವೇ ದೇವರ ವಾಕ್ಯವೆಂದು, ಸರ್ವ ಸಭೆಗಳೂ ಸರ್ವತ್ರ ಒಪ್ಪಿ ಕೊಂಡಿದ್ದವು.

ಅಪೊಸ್ತಲರು ಗ್ರಂಥಗಳನ್ನು ಬರೆದು ಕಳುಹಿಸಿದ ಸಭ್ಯರು ಅವನ್ನು ಬಹು ಜೋಕೆಯಾಗಿ ಕಾಪಾಡಿ ಕೊಂಡದಲ್ಲದೆ ದೇವಾರಾಧನಸಂಘಗಳವರ ಮತ್ತು ತಮ್ಮಲ್ಲೊಬ್ಬೊಬ್ಬನ ಪ್ರಯೋಜನಕ್ಕಾಗಿ ಅನೇಕ ಪ್ರತಿಗಳನ್ನು ಅತಿ ಶುದ್ಧ ರೀತಿಯಿಂದ ತೆಗೆಸುತ್ತಿರುವರು; ಮುಖ್ಯವಾಗಿ ಐಶ್ವರ್ಯವುಳ್ಳ ಕ್ರೈಸ್ತರು, ಹೇರಳ ಹಣ ಖರ್ಚು ಮಾಡಿ, ಪ್ರತಿಗಳನ್ನೆತ್ತಿ ಬರೆಸಿ, ಅವನ್ನು ಎರವಾಗಿಯೂ ಉಚಿತವಾಗಿಯೂ, ತಕ್ಕ ಹಾಗೆ, ಕೊಡುತ್ತಿರುವರು. ಆ ವೇಳೆ ಮುದ್ರಾಶಾಲೆಗಳು ಎಲ್ಲಿಯೂ ಉತ್ಪನ್ನವಾಗಿರಲಿಲ್ಲ. ಕ್ರೈಸ್ತ ಸಭ್ಯರಲ್ಲದೆ ವಿಗ್ರಹಾರಾಧಕರಲ್ಲನೇಕರು ಸಹ ಆ ಕೈಬರಹದ ಪರಿಶುದ್ಧ ಗ್ರಂಥಗಳನ್ನೋದುತ್ತಿರುವರು. ಅವುಗಳ ಬಹು ಧಾರಾಳ ಪ್ರತಿಗಳನ್ನು ಬರೆಯಲಾಯಿತು; ಅದು ಕಾರಣ ದಿಯೊಕ್ಲೇತಿಯಾನ ಕೈಸರನು ಕ್ರಿ. ಶ. 303ನೇ ವರುಷದಲ್ಲಿ, ಅವನ್ನೆಲ್ಲಾ ಸುಟ್ಟು ಬಿಡ ಬೇಕೆಂದು[1], ಆಜ್ಞೆ ಹೊರಡಿಸಿದಾಗ ಸಾವಿರಾರು ಪ್ರತಿಗಳು ಬೆಂಕಿಯಿಂದ ಹಾಳಾದರೂ ಹಿಂಸಕರ ರೋಷ ಲಕ್ಷಿಸದೆ ವಿಶ್ವಾಸಧೈರ್ಯದಿಂದ ತಮ್ಮವನ್ನು ಬಚ್ಚಿಡುವ ಕ್ರೈಸ್ತರಲ್ಲಿ ಅಂಥವು ಮಿಗಿಲು ಹೆಚ್ಚು ಉಳಿದವು. ಸಭಾದೇವಾರಾಧನಸ್ಥಳಗಳೊಳಗಿನ ಆರಾಧನಕ್ಕೆ ಮಾತ್ರವಲ್ಲದೆ ಗೃಹದೊಳಗಿನದಕ್ಕೂ ಬಾಲಶಿಕ್ಷೆಗೂ ಪರಿಶುದ್ಧ ಬರಹವೇ ಪಾಯವಾಗಿರುವದು. ಹಿರಿ ಕಿರಿಯರೂ ಗಂಡು ಹೆಣ್ಣು ಮಕ್ಕಳೂ ದೇವವಾಕ್ಯವನ್ನೋದುತ್ತಿರಬೇಕೆಂದು, ಅಂದಿನ ಸಭಾಬೋಧಕರ ಸಮಸ್ತ ಕೃತಿಗಳಲ್ಲಿಯೇ ಬಹುಶಃ ಹೇಳಿ ಅದೆ[2].

ಗ್ರೇಕ ಭಾಷೆಯಲ್ಲಿ ಬರೆದಿರುವ ಹೊಸ ಒಡಂಬಡಿಕೆ ಎಂಬ ಪರಿಶುದ್ಧ ಗ್ರಂಥಗಳನ್ನು ಕ್ರಿ. ಶ. 2ನೇ ಶತಮಾನದೊಳಗೆ ಎಬ್ರೇಯದ್ದರದೊಂದು ಶಾಖೆಯಾದ ಸುರಿಯಕ[3] ಮತ್ತು ಲತೀನ ಭಾಷೆಯಲ್ಲಿ ಸಹ ಲೇಖಿಸಿದರು; ಇತ್ತಕಡೆ ಇನ್ನೂ ಅವುಗಳ ವಿವಿಧ ಭಾಷಾಂತರ ಮಾಡಿದರು[4]. ಸುಮಾರು ಕ್ರಿ. ಶಕಕ್ಕೆ ಮುಂಚಿನ 280ನೇ ವರುಷದಲ್ಲಿ 70 ಮಂದಿ ಯೆಹೂದ್ಯ ಪಂಡಿತರು ಹಳೇ ಒಡಂಬಡಿಕೆಯನ್ನು ಎಬ್ರೇಯ ಭಾಷೆಯಿಂದ ಗ್ರೇಕ ಭಾಷಾಂತರ ರಚಿಸಿದ್ದರು[5]; ಇದಕ್ಕೆ ಸೆಪ್ತುವಾಗಿಂತ ಅಂದರೆ ಸಪ್ತತಿ ಎಂಬ ಸಂಕ್ಷೇಪಹೆಸರು ಬಿತ್ತು. ಈ ಸೆಪ್ತುವಾಗಿಂತವು ಸಹ ದಿನಗತಿಯಲ್ಲಿ ಲತೀನ ಭಾಷಾಂತರವಾಯಿತು. ಹದ್ರಿಯಾತಿಕ ಸಮುದ್ರದ ಪೂರ್ವ ತೀರವಾದ ದಲ್ಮತಿಯ ಶೀಮೆಯಲ್ಲಿ[6] ಕ್ರಿ. ಶ. 331ನೇ ವರ್ಷಕ್ಕೆ ಹುಟ್ಟಿ, ತನ್ನ

1) 124ನೇ, 125ನೇ ಪಾನು. 2) 156ನೇ ಪಾನು ಸರಿ ನೋಡು. 3) 82ನೇ ಪಾನು ಸರಿ ನೋಡು. 4) 78ನೇ, 81ನೇ, 85ನೇ, 86ನೇ ಪಾನು. 5) 18ನೇ ಪಾನು. 6) 2 ತಿಮೊ. 4, 10.

ಜೀವಿತದ 39ನೇದಕ್ಕೆ ಕಿಸ್ತನಾಥನ ಭಕ್ತನಾಗಿ ಸ್ನಾನ ಹೊಂದಿ, 9 ವರುಷದೀಚೆ ಸುರಿಯದ ಅಂತಿಯೊಖೀಯದಲ್ಲಿ ಸಭೆಯ ಹಿರಿಯನಾಗಿ, 3 ವರುಷ ಕಳೆದ ಮೇಲೆ (ಕ್ರಿ. ಶ. 382ನೇದರಲ್ಲಿ) ರೋಮಪುರಕ್ಕೆ ಹೋಗಿ, ತನ್ನ ಸತ್ಯಸಂಗಕಾಠಿಣ್ಯದ ದೆಸೆಯಿಂದ[1] 3 ವರುಷದಿತ್ತ ಆ ಪುರ ಬಿಟ್ಟು ಹೋಗ ಬೇಕಾಗಿ, ಪಲೇಸ್ತೀನದ ಬೆತ್ಲೆಹೇಮು ಎಂಬ ಕ್ರಿಸ್ತಜನ್ಮಪಟ್ಣದಲ್ಲಿ ಮಠವಾಸಿಯಾಗಿ ಉಳಿದು, 90 ವರುಷದ ಮುದುಕನಾಗಿ (ಕ್ರಿ. ಶ. 420ನೇ ಅಬ್ದ) ಅಲ್ಲಿ ತೀರಿದ ಹಿಯೆರೋನುಮನೆಂಬ ಸಭಾಪಿತನು ಸುಮಾರು ತನ್ನ ಜೀವತದ 51ನೇ ವರುಷ ಹಿಡಿದು, ಹೊಸ ಒಡಂಬಡಿಕೆಯ ಆ ಲತೀನ ಭಾಷಾಂತರ ತಿದ್ದುವವನೂ ಹಳೇ ಒಡಂಬಡಿಕೆಯದೊಂದು ನವ ಲತೀನ ಭಾಷಾಂತರ ಮಾಡುವವನೂ ಆದನು[2]; ಹೀಗೆ ಅವನಿಂದ ರಚಿತವಾದ ಸರ್ವ ದೇವವಾಕ್ಯದ ಲತೀನ ಭಾಷಾಂತರವು ಪಶ್ಚಿಮ ದಿಕ್ಕಿನ ಸಭೆಗಳಲ್ಲಿ ಸರ್ವತ್ರ ರೂಢಿಯಾದದರಿಂದ ಅದಕ್ಕೆ ವುಲ್ಗಾತ ಅಂದರೆ ಬಳಿಕೆಯಾದದ್ದೆಂಬ ಗುಣನಾಮವು ಬಂತು. ಕಾಲಕ್ರಮೇಣ ಆ ಪಪ್ಪಕ ಪಕ್ಷದ ಸಭ್ಯರು[3] ಈ ವುಲ್ಗಾತಕ್ಕೆ ಅಯೋಗ್ಯ ಮಾನ ಹಚ್ಚುವವರಾಗಿ—ಅದು ಮೂಲಭಾಷೆಯ ಪರಿಶುದ್ಧ ಬರಹಕ್ಕೆ ಈಡಾದದು, ಏನೊಂದೂ ಅರ್ಥದ ಬೋಧನೆಯನ್ನು ಸಿದ್ಧಾಂತ ಪಡಿಸಬೇಕಾದರೆ ಉಲ್ಗಾತವೇ ಸಾಕು! ಎಂದು, ನಿರ್ಣಯಿಸ ತೊಡಗಿದರು; ಆದರೆ ಹಿಯೆರೋನುಮನು ತಾನು ತನ್ನ ಭಾಷಾಂತರ ಕುರಿತು ಬರೆದದ್ದೇನಂದರೆ—ಹಳೇ ಒಡಂಬಡಿಕೆಯ ಭಾಷಾಂತರದ ಶುದ್ಧತೆಯನ್ನು ಎಬ್ರೇಯ ಪ್ರತಿ ನೋಡಿ ಪರಿಶೋಧಿಸ ಬೇಕು; ಹೊಸ ಒಡಂಬಡಿಕೆಯದರ ಶುದ್ಧತೆಯನ್ನು ಗ್ರೇಕ ಪ್ರತಿ ನೋಡಿ ಪರಿಶೋಧಿಸ ಬೇಕು[4].—

## 20. ಲೂಕಿಯಾನನೆಂಬ ಕ್ರೈಸ್ತವಿರೋಧಿಯು ಕ್ರೈಸ್ತರನ್ನು ಕುರಿತು ಮಾಡಿದ ನಿರ್ಣಯವು.

ಪ್ಲೀನಿಯನೆಂಬ ದೊಡ್ಡ ಉದ್ಯೋಗಿಯಾದವನೊಬ್ಬನು ಕ್ರಿ. ಶ. 104ನೇ ವರುಷಕ್ಕೆ ಬರೆದ್ದೊಂದು ಹಿಂಸಾಪತ್ರಿಕೆಯಿಂದ ಕ್ರೈಸ್ತರಿಗೆ ಕೇವಲ ಮಾನ ಬಂದದು ಹಿಂದೆ ತೋರಿ ಬರುತ್ತದೆ[5]; ಅದರಂಥಾದ್ದಿನ್ನೊಂದು ಸಂಗತಿ ನೆನಸೋಣ. ಏನಂದರೆ, ಕ್ರಿ. ಶ. 170ನೇದಕ್ಕೆ ಸಮೊಸತ ಪಟ್ಣದಲ್ಲಿ[6] ಲೂಕಿಯಾನನೆಂಬ ವಿಗ್ರ

1) ಅವನ ಪ್ರಸಂಗಗಳನ್ನು ಮಠವಾಸಿತ್ವದ ವೈರಾಗ್ಯಾರ್ಥ ವ್ಯಾಪಿಸಿ ಕೊಂಡಿದ್ದದು ಒಂದು ತಪ್ಪು, 33ನೇ ಸಂಧಿ. 2) 155ನೇ ಪಾನು. 3) 163ನೇ ಪಾನು. 4) Epist. ad Suniam and ad Lucin. 5) 110ನೇ ಪಾನು. 6) 157ನೇ ಪಾನು.

ಹಾರಾಧಕನಾದ ಪಂಡಿತನಿದ್ದನು; ಐಹಿಕಾಮುಷ್ಮಿಕಗಳೆರಡಕ್ಕೂ ನೆಗಾಡುವದೇ ಅವನ ದರ್ಶನದ ಮುಖ್ಯಾರ್ಥವು; ಕ್ರೈಸ್ತತ್ವವನ್ನು ಅಪಹಾಸ್ಯ ಪಡಿಸುವದಕ್ಕೋಸ್ಕರ ಅವನು ಅಂದು ಒಂದು ಕಥೆ ಬರೆದು ಹಬ್ಬಿಸಿದನು; ಅದು ಎಂತೆಂದರೆ—ಅರ್ಮಿನಿಯ ದೇಶದಲ್ಲಿ[1] ಹುಟ್ಟಿದ ಪೆರೆಗ್ರೀನನೆಂಬವನೊಬ್ಬನು ವ್ಯಭಿಚಾರ ಪುರುಷ ಸಂಗಮ ಪಿತೃಹತ್ಯ ಇತ್ಯಾದಿ ದುಷ್ಕರ್ಮಗಳಿಂದ ಗಡಿಪಾರಾದವನಾಗಿ, ಪಲೇಸ್ತೀನಕ್ಕೆ ಬಂದು, ಕ್ರೈಸ್ತರ ಮತ ಕಲಿತು ಕೊಂಡು, ಅದನ್ನವಲಂಬಿಸುವಂತೆ ಬಹಿರಕ್ಕೆ ಕಾಣಿಸಿದನು. ಅವನು ಬಹಳ ಯುಕ್ತಿ ತಂತ್ರಗಳುಳ್ಳವನಾದ್ದರಿಂದ ಅಲ್ಲಿಯ ಕ್ರೈಸ್ತರಿಂದ ಅತಿರೇಕ ಮನ್ನಣೆ ಪಡಕೊಳ್ಳುವದು ಅವನಿಗೆ ಕೈಗೂಡಿತು. ಹೀಗಿರಲಿಕ್ಕೆ ಮರ್ಕ ಔರೇಲಿಯ ಕೈಸರನ[2] ಆ ಕಡೆಯ ಪ್ರತಿನಿಧಿಯು, ಅವನು ಸಹ ಒಳ್ಳೇ ಕ್ರೈಸ್ತನೆಂತ, ಅವನನ್ನು ಶೆರೆಮನೆಗೆ ಹಾಕಿಸಿದನು. ಅವನು ಅದರೊಳಗಿರಲು, ಅವನನ್ನು ಉಪಶಮಿಸಲಿಕ್ಕೂ ಧೈರ್ಯ ಗೊಳ್ಳಿಸಲಿಕ್ಕೂ ಆದರಿಸಲಿಕ್ಕೂ ಅಸಿಯದ ಅನೇಕ ಪಟ್ಣಗಳಿಂದಲೂ ಕ್ರೈಸ್ತರು ಬರುತ್ತಿದ್ದರು; ಹ್ಯಾಗಂದರೆ, ಇಂಥಾ ಪಕ್ಷದಲ್ಲಿ ಕ್ರೈಸ್ತರು ತೋರಿಸುವ ಜೋಕೆಯೂ ಜಾಗರವೂ ಭಾವನಾತೀತವಾದದ್ದೇ, ಒಟ್ಟಿಗೆ ಅವರು ಮಾಡ ತಕ್ಕದ್ದೇನನ್ನೂ ಉಳಿಸಿ ಬಿಡುವದಿಲ್ಲ. ಆದ್ದರಿಂದ ಅವರು ಪೆರೆಗ್ರೀನನಿಗೆ ಹೇರಳ ಹಣ ಕಳುಹಿಸುತ್ತಿರಲಿಕ್ಕೆ, ಅವನ ಬಂಧನವು ಮಹಾ ದ್ರವ್ಯಗಳನ್ನು ಘಳಿಸುವಂಥ ಕಾರ್ಯವಾಯಿತು. ಆ ಬಡ ಹುಳಗಳಾದ ಕ್ರೈಸ್ತರು, ತಾವು ಒಮ್ಮೆ ಅಮರ್ತ್ಯಜೀವಾನಂದ ಭೋಗಿಸುವೆವೆಂತ, ದೃಢವಾಗಿ ನಿಶ್ಚೈಸುವ ಕಾರಣ ವಿಸ್ಮಯಕರ ಧೈರ್ಯದಿಂದ ಮರಣಭಯ ಕಳೆದು, ಬೇಕೆಂತ, ತಮ್ಮನ್ನು ದಂಡನಕ್ಕೆ ಒಪ್ಪಿಸಿ ಕೊಡುತ್ತಾರೆ. ಅವರು ಗ್ರೇಕರ ದೇವತೆಗಳನ್ನು ತ್ಯಜಿಸಿ ಬಿಟ್ಟು, ಕ್ರೂಜೆಯಲ್ಲಿ ಸತ್ತ ತಮ್ಮ ನಾಯಕನನ್ನು, ದೇವರೆಂತ, ಆರಾಧಿಸ ತೊಡಗಿ, ಅವನ ಆಜ್ಞೆಗಳಿಗನುಸಾರ ಬದುಕುವವರಾದಲ್ಲಿ, ಅವರೆಲ್ಲರೂ ಸಹೋದರರೆಂತ, ಅವರ ಪ್ರಥಮ ನ್ಯಾಯಪ್ರಮಾಣದಾಯಕನು ಅವರಿಗೆ ಕಲಿಸಿದ್ದಾನೆ. ಹೀಗಿರುವದರಿಂದ ಅವರು ಐಹಿಕವಾದ ಸಕಲ ಆಸ್ತಿ ಹೀನೈಸುತ್ತಾ, ಹುದುವಾಗಿ ಅನುಭವಿಸುತ್ತಾ[3] ಇರುವರು. ಅದು ನಿಮಿತ್ತವಾಗಿ ಯಾರೊಬ್ಬ ಚೇಷ್ಟೆಗಾರನಾಗಲಿ ಕಪಟಸ್ಥನಾಗಲಿ ವಂಚನೋಪಾಯದಿಂದ ಅವರ ಸಭೆಯಲ್ಲಿ ಶೇರಿದ ಕ್ಷಣವೇ ಐಶ್ವರ್ಯವಂತನಾಗುವನು; ಹ್ಯಾಗಂದರೆ ಒಂದು ತರದವರಾದ ಈ ಜನರ ಬೋಳೇತನಕ್ಕೆ ದುಷ್ಪ್ರಯೋಗ ಮಾಡುವದು ಸುಲಭ. ಆದರೆ ಆ ಕೈಸರನ ಪ್ರತಿನಿಧಿಯು ಪೆರೆಗ್ರೀನನ ಇಂಗಿತವರಿತು, ಅವನನ್ನು ಬೇಗ ತಿರಿಗಿ ಬಿಡಿಸಿದನು; ಇತ್ತಕಡೆ ಅವನು ದೇವತಾಯಜ್ಞದ ಮಾಂಸ ತಿಂದದ್ದು ಗೊತ್ತಿಗೆ ಬರಲಾಗಿ, ಆ ಕ್ರೈಸ್ತರು ಅವನನ್ನು

1) 75ನೇ ಪಾನು. 2) 113ನೇ ಪಾನು. 3) ಅಪೊ. ಕ್ರಿ. 2, 44.

ಸಭೆಯೊಳಗಿಂದ ಬಹಿಷ್ಕರಿಸಿದರು; ಇತ್ಯಾದಿ.—ಕ್ರೈಸ್ತ ವಿರೋಧಿಗಳಲ್ಲೊಬ್ಬನು ಲೇಖಿಸಿದ ಅಂಥಾ ವರ್ಣನಕ್ಕಾಗಿ ಯಾವನೊಬ್ಬ ಕ್ರೈಸ್ತನೂ ಸಂತೋಷ ಗೊಳ್ಳ ಬೇಕಷ್ಟೇ!

ಲೂಕಿಯಾನನಿಗೆ ಮುಂಚಿತವಾಗಿ ಸುಮಾರು ಕ್ರಿ. ಶ. 160ನೇ ವರುಷ ಕ್ಲಾದಿಯ ಗಲೇನನೆಂಬ ಚಿಕಿತ್ಸಾಶಾಸ್ತ್ರವಿದ್ಯೆಯಿಂದ ಬಹು ಯಶಸ್ಸು ಹೊದವನೊಬ್ಬ ವಿಗ್ರಹಾರಾಧಕನು—ಕ್ರಿಸ್ತಿಯಾನರೆನ್ನಿಸುವವರು[1] ಆಗಿಂದಾಗ ಮಾಡುತ್ತಿರುವಂಥಾದ್ದನ್ನು ಸತ್ಪಂಡಿತರು ಮಾತ್ರ ಮಾಡುವದದೆ. ಹ್ಯಾಗಂದರೆ ಅವರು ಮರಣವನ್ನು ಲಕ್ಷ್ಯದಲ್ಲಿಡದಿರುವದು ನಾವೆಲ್ಲವರೂ ಕಣ್ಣಾರೆ ನೋಡುತ್ತೇವಲ್ಲ? ಅದೇ ಪ್ರಕಾರ ಅವರು, ಯಾವದೊಂದೂ ಪರಿಶುದ್ಧ ಭಯದಿಂದ ಪ್ರೇರಿತರಾಗಿ, ಕಾಮವೃತ್ತಿಗೆ ಹೇಸುತ್ತಾರೆ. ಎಂತೆಂದರೆ ತಮ್ಮ ಜೀವಿತದ ಪೂರ್ತಿಗೆ ಸಂಗ ತ್ಯಜಿಸುವಂಥಾ ಪುರುಷರೂ ಸ್ತ್ರೀಯರೂ ಅವರಲ್ಲಿದ್ದಾರೆ. ಅದಲ್ಲದೆ ಹೃದಯಿಕ ಶಮ ದಮುಗಳಲ್ಲಿಯೂ ಸಚ್ಛೀಲದ ಅತ್ಯುತ್ಕಟಾಭ್ಯಾಸದಲ್ಲಿಯೂ ಬಹಳ ಮುಂದೊರಿದಂಥವರು ಅವರಲ್ಲಿದ್ಧಾರೆ; ಇಂಥವರು ಯಾವ ವಿಷಯದಲ್ಲಿಯೂ ಸತ್ಪಂಡಿತರಿಗೆ ಹಿಂದೆ ಬೀಳುವವರಲ್ಲ! ಎಂತ, ಸ್ವಾಭಿಪ್ರಾಯ ಬರೆದಿದ್ದನು.



1) 36ನೇ ಪಾನು.

# III. ಕ್ರೈಸ್ತತ್ವವು ರಾಜ್ಯಮತವಾದಲ್ಲಿಯ ಬಹಿಃಶಾಂತಿಯ ಕಾಲವು.

(ಕ್ರಿಸ್ತಶಕದ 323ನೇ ವರುಷದಿಂದ 600ನೇದರ ವರೆಗೆ.)

## 21. ದೊಡ್ಡವನೆಂಬ ಉಪನಾಮವುಗೊಂಡ ಕೊನ್ಸ್ತಂತೀನನು.

ಹಿಂದೆ ಸಂಕ್ಷೇಪವಾಗಿ ಹೇಳಿರುವಂತೆ ಕೊನ್ಸ್ತಂತೀನ ಕೈಸರನು ಕ್ರೈಸ್ತತ್ವಕ್ಕೆ ಆಗುತ್ತಿದ್ದ ಹಿಂಸೆಯನ್ನೆಲ್ಲಾ ನಿಲ್ಲಿಸಿ ಬಿಟ್ಟನು. ಅವನು ಕ್ರಿ. ಶ. 271ನೇ ವರುಷದಲ್ಲಿ, ಕೊನ್ಸ್ತಂತಿಯ ಖ್ಲೋರನೆಂಬ ತಂದೆಯು ಗಲ್ಲಿಯದಲ್ಲಿಯೂ ಸ್ಪಾನಿಯದಲ್ಲಿಯೂ ಬ್ರಿತನ್ನಿಯದಲ್ಲಿಯೂ ಸಹಾಯಕೈಸರನಾಗದ್ದಕ್ಕಿಂತ ಮುಂಚೆ, ಹುಟ್ಟಿದವನು[1]. ಅವನ ತಂದೆಯು ಮುದಿತನದಿಂದ ಬಲಹೀನನಾದಾಗ ಅವನನ್ನು, ತನ್ನ ಸಹಾಯಾಧಿಕಾರಸ್ಥನೆಂತ, ತೆಕ್ಕೊಂಡು, ಕ್ರಿ. ಶ. 306ನೇದಕ್ಕೆ ಇಂಗ್ಲಂದಿನಲ್ಲಿ ತೀರಿ ಹೋದ ಬಳಿಕ ಸೈನಿಕರು ಕೊನ್ಸ್ತಂತೀನನನ್ನು, ಸಹಾಯಕೈಸರನೆಂತ, ಆರಿಸಿ ಕೊಂಡರು. ಇವನು ಸ್ವಂತ ಆತ್ಮದ ಪ್ರೇರಣೆಯಿಂದಲೂ ತನ್ನ ತಾಯಿಯಾದ ಹೆಲೆನಳದರಿಂದಲೂ[2] ತನ್ನ ತಂದೆಗಿಂತ ಇನ್ನೂ ಹೆಚ್ಚಾಗಿ ಕ್ರೈಸ್ತರಿಗೆ ಉಪಕಾರ ಮಾಡುವ ಸಲುವಾಗಿ ಇವರು ಕೈಸರತ್ವವು ಅವನಿಗೆ ಪ್ರಾಪಿಸಿದ್ದಕ್ಕೋಸ್ಕರ ಪ್ರಮುದಿತರಾದರು. ಹೀಗಿರಲಿಕ್ಕಾಗಿ, ರೋಮಪುರದ ಮಕ್ಸೆಂತಿಯನೆಂಬವನು ಅಲ್ಲಿಯ ಮೂರ್ತ್ಯಾರಾಧಕ ಪ್ರಜೆಯನ್ನೆಲ್ಲಾ ಪೀಡಿಸುತ್ತಿದ್ದದಲ್ಲದೆ ತನ್ನ ಆಳುವಿಕೆಯ ಆರಂಭದಲ್ಲಿ ಮತಕ್ಕಾಗಿ ಹಿಂಸಿಸದಿದ್ದ ಕ್ರೈಸ್ತರನ್ನು[3] ಈಗ, ನಿರ್ಮೂಲ ಮಾಡ ಬೇಕೆಂತ, ಮನಸ್ಸು ತೋರಿಸಲು, ಮೂರ್ತಿಪೂಜಕ ಪ್ರಜೆಯು ಹೊರ್ತಾಗಿ ಕ್ರೈಸ್ತ ಪ್ರಜೆಯು ಸಹ ಕೊನ್ಸ್ತಂತೀನನನ್ನು ತಮ್ಮ ರಕ್ಷಣೆಗೆ ಒದಗಿಸಿ ಕೊಂಡವು. ಅವನು ಬಂದು, ಮಕ್ಸೆಂತಿಯನ ಸೇನಾಪತಿಗಳಿಬ್ಬರನ್ನು ಜಯಿಸಿ, ಇವನು ತಾನಿರುವ ಮಹಾ ಸೇನೆಗೆ ಎದುರ್ಗೊಂಡು ಗಮಿಸುವ ಸಮಯ ಒಂದಾನೊಂದು ಮಧ್ಯಾಹ್ನದ ಮೇಲೆ ಆದ

1) 90ನೇ, 123ನೇ, 127ನೇ, 129ನೇ, 130ನೇ ಪಾನು. 2) 90ನೇ ಪಾನು. 3) 128ನೇ ಪಾನು.

ದ್ದೇನಂದರೆ—ಕೊನ್ಸ್ತಂತೀನನು, ತಾನಿನ್ನು ಮೂರ್ತಿಪೂಜಕನಾಗಿದ್ದರೂ, ಮನ್ನಿಸುವ ಕ್ರೈಸ್ತ ದೇವರಿಗೆ ಮನೋಜಪ ಮಾಡಿ ಕೊಳ್ಳುತ್ತಿರಲು, ಪ್ರಕಾಶವುಳ್ಳದೊಂದು ಕ್ರೂಜೆಯ ಆಕಾರವು ಗಗನದಲ್ಲಿ ಅವನಿಗೆ ಗೋಚರಿಸಿತು; ಈ ಗುರ್ತಿನಲ್ಲಿ ಜಯಿಸುವಿ! ಎಂದು, ಅದರಲ್ಲಿ ಬರೆದಿತ್ತು; ಅದಲ್ಲದೆ ರಾತ್ರಿಯ ಸ್ವಪ್ನದಲ್ಲಿ, ಆ ಗುರುತೇ ನಿನ್ನ ಧ್ವಜವಾಗಲಿ! ಎಂದು, ಅವನಿಗೆ ಉತ್ತರವಾಯಿತು. ಅದು ನಿಮಿತ್ತ ಅವನು ಕ್ರೂಜೆಯಾಕೃತಿಯಿರುವ ಒಂದು ಧ್ವಜ ಮಾಡಿಸಿ, ಸೇನೆಯ ಮುಂದೆ ಹೊರಿಸಲಾಗಿ, ಆ ಸೇನೆಯೊಳಗಿನ ಕ್ರೈಸ್ತರಿಗೆ ಮತ್ತಷ್ಟು ಧೈರ್ಯ ಬಂತು. ಇದರಿಂದಲೂ ದೇವರ ವಿಶೇಷ ಸಹಾಯದಿಂದಲೂ ಮಕ್ಸೆಂತಿಯನ ಮಹಾ ಸೇನೆಯ ಮೇಲೆ ಜಯ ಹೊಂದುವದು ಹಗುರವಾಯಿತು. ಇವನು ಕಣ್ಗೆಟ್ಟು, ಓಡಿ ಹೋಗಿ, ತಿಬೆರಿ ಹೊಳೆಯ[1] ಸಂಕದಿಂದ ಕೆಳಯಕ್ಕೆ ಬಿದ್ದನು; ಮರುದಿವಸ ಅವನನ್ನು ರಾಡಿಯೊಳಗಿಂದ ಹೊರಗೆ ತೆಗೆಯುವಾಗ ಸತ್ತಿದ್ದನು. ಕೊನ್ಸ್ತಂತೀನನ ಆ ಜಯವು ಕ್ರಿ. ಶ. 312ನೇ ವರುಷ ಸಂಭವಿಸಿತು. ಬಳಿಕ ಅವನು ರಾಜ್ಯದ ಮುಖ್ಯ ಧ್ವಜದಲ್ಲಿ ಹದ್ದಿನಾಕಾರಕ್ಕೆ ಬದಲಾಗಿ ಕ್ರೂಜೆಯದನ್ನು ನಿರ್ಮಿಸ ಹೇಳಿದನು; ಅದಲ್ಲದೆ, ರೋಮಪುರದವರು ಕೃತಜ್ಞತೆಯಿಂದ ಅವನ ರೂಪದ್ದೊಂದು ಶಿಲಾಸ್ತಂಭ ಮಾಡಿಸುವಂದು ಅವನು, ಅದರ ಬಲಗೈಯಲ್ಲಿ ಕ್ರೂಜೆಯಾಕಾರವುಳ್ಳಂಥ ಒಂದು ಈಟಿಯು ಇರಲಿ! ಎಂತ, ಆಜ್ಞಾಪಿಸಿ, ಅದರ ಬುಡದಲ್ಲಿ, ನಿಜ ಧೈರ್ಯ ಹುಟ್ಟಿಸುವಂಥ ಈ ರಕ್ಷಣಕರವಾದ ಗುರ್ತಿನಿಂದ ನಿಮ್ಮ ಪುರವನ್ನು ಪೀಡಕನ ನೊಗದಿಂದ ಬಿಡಿಸಿದೆನೆಂತ, ಕೆತ್ತಿಸಿದನು.

ಕೊನ್ಸ್ತಂತೀನನ ಮೂರ್ತಿಪೂಜಕತ್ವವು ಆ ಕಾಲದಲ್ಲಿ ಪೂರಾ ಹೋಗದಿದ್ದರೂ ಅವನು ಎರಡು ಆಜ್ಞೆಯಿಂದ ಕ್ರೈಸ್ತರಿಗೆ ಸ್ವಮತಪ್ರಮಾಣಾರಾಧನೆಯ ಪೂರ್ಣ ಸ್ವತಂತ್ರ ಕೊಟ್ಟನಲ್ಲ[2]? ಸುರಿಯದಲ್ಲಿಯೂ ಐಗುಪ್ತದಲ್ಲಿಯೂ ಸಹಾಯಕೈಸರನಾಗಿರುವ ಮಕ್ಸಿಮಿನಾನನು[3] ಅಷ್ಟೆಲ್ಲಾ ಕಂಡು, ಕ್ರೈಸ್ತರ ಮೇಲೆ ತನ್ನ ವೈಮನಸ್ಯವನ್ನೆಲ್ಲಾ ನಡಿಸಲಿಕ್ಕಂಜಿ, ಮುಖ್ಯವಾಗಿ ಕ್ರಿಸ್ತನಿಗೆ, ದೇಶಕೆಡುಕನೆಂತ, ಹಾಸ್ಯ ಮಾಡುವಂಥ ಮತ್ತು ಮೂರ್ತಿಗಳನ್ನು, ದೇಶರಕ್ಷಕರೆಂತ, ಕೊಂಡಾಡುವಂಥ ಗ್ರಂಥಗಳನ್ನು ಹುಟ್ಟಿಸಿ, ಒಂದರ ಮೇಲೊಂದನ್ನು ಪ್ರಜೆಯೊಳಗೆ ಪ್ರಕಟಿಸುವ ರೀತಿಯಿಂದಲೂ ವಿಗ್ರಹಾರಾಧಕರಿಗೆ ಅಧಿಕ ಮಾನ ತೋರಿಸುವ ರೀತಿಯಿಂದಲೂ ತನ್ನ ಹಗೆ ತೀರಿಸಿ ಕೊಳ್ಳಲಿಕ್ಕೆ ಪ್ರಯತ್ನಿಸಿದನಷ್ಟೇ. ಆದರೆ ಆಗಲೇ ಅವನು ತನ್ನ ಮೂರ್ತಿಸೇವೆಯ ಫಲ ತಿನ್ನ ಬೇಕಾಯಿತು. ಹ್ಯಾಗಂದರೆ ಆ ಹೊತ್ತೇ ಬರ ಮಾರಿ ರೋಗಗಳು ಬಂದು, ಅವನ ದೇಶ ನಶಿಸಿದವು[4]; ಆ ಹೊತ್ತೇ ಶತ್ರುಗಳು ಅದರೊ

1) 116ನೇ ಪಾನು. 2) 130ನೇ ಪಾನು. 3) 128ನೇ—130ನೇ ಪಾನು. 4) 109ನೇ, 113ನೇ, 114ನೇ, 117ನೇ, 120ನೇ, 163ನೇ ಪಾನು ಸರಿ ನೋಡು.

ಳಗೆ ಹೊಕ್ಕರು. ಅದಲ್ಲದೆ ಅವನು ತುಚ್ಛೀಕರಿಸಿದ ಕ್ರೈಸ್ತರೇ, ಆಗಿನ ಆ ತೀಕ್ಷ್ಣ ಕಷ್ಟದೊಳಗೆ ಮೂರ್ತಿಪೂಜಕರು ತಮ್ಮ ನೆಂಟರಿಷ್ಟರ ಚಿಂತೆಯನ್ನಾದರೂ ಮರೆತು ಬಿಡುವಲ್ಲಿ, ಕ್ರಿಸ್ತನ ಆಜ್ಞೆಯ ಪ್ರಕಾರ[1], ತಮ್ಮವರು ಮೂರ್ತಿಪೂಜಕರು ಎಂದು, ಭೇದವರಿಯದೆ ರೋಗಿಷ್ಠರಿಗೆ ಒತ್ತಾಸೆ ಮಾಡುತ್ತಾ, ಬಡವರಿಗೆ ಅನ್ನ ಹಂಚಿ ಕೊಡುತ್ತಾ, ಸತ್ತವರನ್ನು ಹುಗಿಯುತ್ತಾ, ಮುಂತಾದ ಪ್ರೀತಿ ತೋರಿಸುತ್ತಾ ಶೋಭಿಸುತ್ತಿದ್ದದರಿಂದ ಸಕಲ ಮೂರ್ತಿಪೂಜಕರನ್ನೂ ಲಜ್ಜೆ ಪಡಿಸಿದರು[2]. ತದನಂತರ ಮಕ್ಸಿಮಿನನು ಅಸಿಯದ ರಾಜ್ಯಾಧಿಕಾರವೆಲ್ಲಾ ಬಯಸಿ, ಇಲ್ಲುರಿಕ ಪ್ರದೇಶದಲ್ಲಿಯ ಲಿಕಿನಿಯನೆಂಬ ಸಹಾಯಕೈಸರನ[3] ಸಂಗಡ ಕದನಕ್ಕೆ ಹೋಗಿ, ಅದು ಹತ್ತುವದಕ್ಕಿಂತ ಮುಂಚೆ ತನ್ನ ದೇವತೆಗಳನ್ನು ಬಹಳ ಸ್ತುತಿಸಿ, ಜಯ ತನಗೆ ಬಂದರೆ ಕ್ರಿಸ್ತನ ಹೆಸರನ್ನು ಅಣಗಿಸುವೆನೆಂತ, ಹರಿಕೆ ಹೇಳಿದರೂ ಅಪಜಯ ಪಟ್ಟಾಗ ಭೀತಿಯೊಳಗೆ ಮುಳುಗಿ, ಕಠಿಣ ರೋಗದಲ್ಲಿ ಬಿದ್ದನು; ಅಂತರಂಗದ ಉರಿಯಿಂದ ಅವನ ಮಾಂಸವು ಬೆಂದು, ಎಲುವಿನಿಂದ ಉಚ್ಚುತ್ತಿರುವದು; ಅವನ ಕಣ್ಣುಬೇಳೆಗಳು ಗುಂಡಿಯೊಳಗಿಂದ ಹೊರ ಬಿದ್ದವು. ಮರಣಸಂಕಟದಲ್ಲಿ ಅವನು ಅನೇಕ ಸರ್ತಿ—ನಾನು ಕ್ರೈಸ್ತರಿಗೆ ಅನ್ಯಾಯ ಮಾಡಲಿಲ್ಲ! ನಾನಲ್ಲ, ಮತ್ತೊಬ್ಬರು ಮಾಡಿದರು! ಎಂದು, ಒದರುತ್ತಿರುವನು; ಆದರೆ ಕಡೆಯಲ್ಲಿ ಅವನು, ಅಪರಾಧಸ್ಥನು ನಾನೇ! ಎಂದು, ತಿಳು ಕೊಂಡು, ನಿವೇದಿಸಿ, ಕ್ರಿಸ್ತನೇ! ಕರುಣಿಸೆಂದು, ಬೇಡಿ ಕೊಂಡು, ಸತ್ತನು.

ಇವನು ಸತ್ತ ಹಿಂದೆ ರೋಮಾಯ ಸಾಮ್ರಾಜ್ಯದಲ್ಲಿ ಇನ್ನು ಇಬ್ಬರು ಕೈಸರರು ಉಳಿದಿದ್ದರು; ಕೊನ್ಸ್ತಂತೀನನು ಮತ್ತು ಅವನ ಭಾವನಾದ ಲಿಕಿನಿಯನು. ಲಿಕಿನಿಯನು ಆರಂಭದಲ್ಲಿ ತನ್ನ ಭಾವನಿಗೋಸ್ಕರ ಕ್ರೈಸ್ತರಿಗೊಲ್ಮೆ ತೋರಿಸುತ್ತಿದ್ದರೂ ಬಳಿಕ ಅಧಿಕಾರಾಭಿಮಾನದಿಂದ ಬೇರೆ ನಡತೆಯವನಾಗಲಿಕ್ಕೆ, ಸಾಮ್ರಾಜ್ಯದ ಕ್ರೈಸ್ತರೆಲ್ಲರ ಪ್ರೀತಿಯು ಅವನ ಭಾವನ ಮೇಲೆ ಹೋಯಿತು. ಆದ್ದರಿಂದ ಲಿಕಿನಿಯನು ತನ್ನೊಳಗಿನ ಕ್ರೈಸ್ತ ಪ್ರಜೆಯ ಮೇಲೆ ಸಂಶಯ ಗೊಂಡು, ಅದನ್ನು ನಾನಾ ವಿಧವಾಗಿ ಉಪದ್ರವ ಪಡಿಸಲೆಸಗಿ, ದೇವಾಲಯಗಳಲ್ಲಿ ಇನ್ನು ಕೂಡಿ ಬರ ಬಾರದೆಂಬ ಆಜ್ಞೆ ಸಹ ಪ್ರಕಟಿಸಿದನು. ಈ ಅನ್ಯಾಯ ನಿಲ್ಲಿಸುವ ಕಾರಣದಿಂದ ಕೊನ್ಸ್ತಂತೀನನು ಬಹಳ ಕ್ರೈಸ್ತರಿರುವದೊಂದು ದೊಡ್ಡ ದಂಡೆತ್ತಿ ಕೊಂಡು ಹೋಗಿ, ಕ್ರೂಜೆಯಾಕೃತಿಯುಳ್ಳ ಧ್ವಜವನ್ನು ಅದರ ಮುಂದೆ ಹೊರಿಸಿ, ಮಕೆದೊನಿಯಕ್ಕೆ ಪೂರ್ವದಲ್ಲಿ ಥ್ರಾಕಿಯ ಶೀಮೆಯ[4] ಹದ್ರಿಯಾನೊಪೊಲಿ ಎಂಬಲ್ಲಿ ತನ್ನ ಭಾವನಿಗೆ ಸ

1) ಮತ್ತಾ. 5, 44; ಲೂಕ. 6, 35. 2) 163ನೇ ಪಾನು ಸರಿ ನೋಡು. 3) 130ನೇ ಪಾನು.
4) 7ನೇ, 48ನೇ ಪಾನು.

ವಿಾಪಿಸಿರುವಾಗ ಇವನು ತನ್ನ ಮೇಲಾಳುಗಳನ್ನೂ ಅರಮನೆಯ ಶ್ರೇಷ್ಠರೆಲ್ಲರನ್ನೂ ತನ್ನ ದೇವತೆಗಳಿದ್ದಲ್ಲಿಗೆ ಕರದೊಯಿದು, ಬಲಿ ಅರ್ಪಿಸಿ—ಕ್ರೈಸ್ತತ್ವವು ಸತ್ಯವೋ? ಮೂರ್ತಿಪೂಜಕತ್ವವು ಸತ್ಯವೋ? ಏನೋ? ಕಾದ್ಯಾಡಿ ನೋಡೋಣ! ನಾವು ಈಗ ಹಾಸ್ಯ ಮಾಡುವ ಆ ದೇವನು ಗೆದ್ದರೆ ನಾವಾದರೂ ಈ ದೇವತೆಗಳಿಗೆ ಇನ್ನು ದೀಪ ಹಚ್ಚದೆ, ಅವನಿಗೆ ಸೇವಿಸ ಬೇಕು! ಆದರೆ ಈ ನಮ್ಮ ದೇವತೆಗಳು, ನಾವು ದೃಢವಾಗಿ ನಂಬಿ ಕೊಂಡಿರುವಂತೆ, ಗೆದ್ದರೆ ಅವುಗಳ ಶತ್ರು ದಂಡಿಸಿ ಬಿಡುವ! ಎಂದು, ಪಂಥ ಹೇಳಿದನು. ದೇವರು ಅದು ಕೇಳಿ, ತಾನು ಆ ಮೂರ್ತಿಪೂಜಕರಿಗೆ ತಕ್ಕ ಉತ್ತರ ಕೊಟ್ಟನು; ಹ್ಯಾಗಂದರೆ ಅಂದು ಕ್ರಿ. ಶ. 323ನೇ ವರುಷದಲ್ಲಿ ಲಿಕಿನಿಯನು ಕೆಲವು ಸಾರಿ ಪೂರ್ಣ ಅಪಜಯ ಪಟ್ಟು, ಅದೇ ವರುಷದಲ್ಲಿ ತನ್ನ ಅಧಿಕಾರ ಕೊಟ್ಟು ಬಿಡ ಬೇಕಾದ ಮೇಲೆ ಕೊನ್ಸ್ತಂತೀನನು ಅವನನ್ನು ಉರ್ಲು ಹಾಕಿಸಿ ಕೊಲ್ಲಿಸಿದನು. ಆಗ ಕೊನ್ಸ್ತಂತೀನನು ದೊಡ್ಡವನೆಂಬ ಅಡ್ಡಹೆಸರು ಹೊಂದಿ, ರೋವಿಾಯ ಮಹಾ ಸಾಮ್ರಾಜ್ಯದ ಏಕ ಚಕ್ರವರ್ತಿಯಾಗಿ, ಕ್ರೈಸ್ತನಾಗಿದ್ಧೇನೆಂತ, ಅರಿಕೆ ಮಾಡಿ, ಮರುವರುಷ, ಕ್ರೈಸ್ತತ್ವವು ರಾಜ್ಯಮತವೇ[1])! ಎಂತ, ನೇಮಿಸಿದನು. ಆದರೂ ಅವನು ಆ ವೇಳೆ ಸ್ನಾನ ತಕ್ಕೊಳ್ಳಲಿಲ್ಲ[2]); ಅದು ಹೊರ್ತಾಗಿ ಅವನಲ್ಲಿ ಯೇಸು ಕ್ರಿಸ್ತನ ಮೇಲೆ ಅಖಂಡವಾದ ಪ್ರೀತಿಯು ಹುಟ್ಟಿದ್ದಿಲ್ಲ.

ಗಲೇರಿಯ ಕೈಸರನು ಅಂದಿಗೆ 13 ವರುಷ ಮುಂಚೆ[3]), ಕ್ರೈಸ್ತರನ್ನು ಇನ್ನು ವ್ಯರ್ಥವಾಗಿ ಹಿಂಸಿಸ ಬಾರದೆಂದು, ಆಜ್ಞೆ ಪ್ರಕಟಿಸಿದ್ದಾಗಲೇ ಕ್ರೈಸ್ತರು ಹಿಂಸಕರ ಕೈಯಿಂದ ಹಾಳಾಗಿದ್ದ ತಮ್ಮ ದೇವಾಲಯಗಳನ್ನು[4]) ಬಹಳ ಆನಂದದಿಂದ ತಿರಿಗಿ ಕಟ್ಟಲಾರಂಭಿಸಿದ್ದರು, ಅದಲ್ಲದೆ ಗಡಿಪಾರಾಗಿದ್ದವರು ಪುನರಾಗಮಿಸುವವರಾಗಿದ್ದರು; ಆದರೆ ಕೊನ್ಸ್ತಂತೀನನು ಏಕ ಚಕ್ರವರ್ತಿಯಾದ ಬಳಿಕ ಶೆರೆಯಲ್ಲಿಯೂ ಗಣಿಗಳಲ್ಲಿಯೂ ದೇಶಾಂತರದಲ್ಲಿಯೂ ಇದ್ದ ಕ್ರೈಸ್ತರೆಲ್ಲರೂ ಬಿಡುಗಡೆಯವರಾಗಿ, ಮರಳಿ ತಮ್ಮ ತಮ್ಮ ಸ್ಥಳಕ್ಕೆ ಬಂದು ಶೇರಿ, ಮುಟ್ಟುಗೋಲು ಮಾಡಿದ್ದ ತಮ್ಮ ತಮ್ಮ ಬದುಕು ಮತ್ತು ಹೊಂದಿದರು; ಆಗ ಮಾರ್ಗಗಳಲ್ಲಿಯೂ ಮನೆಗಳೊಳಗೂ ಕ್ರೈಸ್ತರ ಸ್ತೋತ್ರಗೀತಗಳು ಕೇಳಿಸುತ್ತಿದ್ದವು; ಅವರಲ್ಲಿ ಅಪಮಾನದಲ್ಲಿದ್ದವರಿಗೆ ಬಹುಮಾನವಾಯಿತು, ರಾಜ್ಯದ ದೊಡ್ಡ ಉದ್ಯೋಗಗಳು ಬಹುಶಃ ಅವರಿಗೆ ಪ್ರಾಪ್ತವಾದವು, ಸಭೋದ್ಯೋಗ ತಪ್ಪಿದ್ದ ಉತ್ತಮ ಅಧ್ಯಕ್ಷಾದಿ ಬೋಧಕರು ವಿಶೇಷ ಮನ್ನಣೆಯಿಂದ ಅದರಲ್ಲೇ ತಿರಿಗಿ ಸ್ಥಾಪಿತರಾದರು. ಕೊನ್ಸ್ತಂತೀನನು ತನ್ನ

1) 100ನೇ, 101ನೇ, 108ನೇ, 122ನೇ ಪಾನು. 2) Euseb. de vita coust. IV, 61, 62. 3) 129ನೇ ಪಾನು. 4) 71ನೇ, 74ನೇ, 94ನೇ, 98ನೇ, 178ನೇ ಪಾನು.

ಕುಮಾರರಿಗೆ ಕ್ರೈಸ್ತ ಉಪಾಧ್ಯಾಯರಿಂದ ಬುದ್ಧಿ ಕಲಿಸುವವನಾದ್ದಲ್ಲದೆ ಕ್ರೈಸ್ತರೆಲ್ಲರು ತಮ್ಮ ಮತದಲ್ಲಿ ಸಲೆ ಉಪದಿಷ್ಟರಾಗುವದಕ್ಕೂ ವಿಶ್ವಾಸದಲ್ಲಿ ಬೆಳಿಯುವದಕ್ಕೂ ಚಿಂತಿಸುವವನಾದನು. ಪುನಃ ಅವನು ಆಜ್ಞಾಪಿಸಿದ್ದೇನಂದರೆ—ಆದಿತ್ಯವಾರದ ಕ್ರೈಸ್ತ ದೇವಾರಾಧನೆಗೆ[1] ಯಾವ ಲೌಕಿಕ ವೃತ್ತಿಯಿಂದಲೂ ಅಡ್ಡಿಯಾಗ ಬಾರದು; ಆ ದಿನದಲ್ಲಿ ಸಮಸ್ತ ನ್ಯಾಯಸ್ಥಾನಗಳು ಮುಚ್ಚಿರ ಬೇಕು; ಸೇನೆಯ ಸಾಧಕವೆಲ್ಲವು ಅದರಲ್ಲಿ ನಿಂತು ಹೋಗ ಬೇಕು;—ರಾಜ್ಯಾಧಿಕಾರಿಗಳು ದೇವಾಲಯಗಳ ಮತ್ತು ಸಭೋದ್ಯೋಗಿಗಳ ಮತ್ತು ಸಭೆಗಳೊಳಗಿನ ಧರ್ಮಕಾರ್ಯಗಳ ಕರ್ಚಿಗೆ ಒತ್ತಾಸೆ ಗೈಯ ಬೇಕು;—ಯಾರಾದರೂ ಸಾಯುವಾಗ ಕಥೊಲಿಕ[2] ಸಭೆಗಳಿಗೆ ಬಿಟ್ಟು ಕೊಡುತ್ತಿರುವ ಸ್ವಾಸ್ತಿ ತೆಕ್ಕೊಳ್ಳಲಿಕ್ಕೆ ಅಭ್ಯಂತರವೇನೂ ಇಲ್ಲ;—ಸಭೆಗಳ ಉದ್ಯೋಗಸ್ಥರು ಬಿಟ್ಟಿಕೆಲಸವನ್ನೂ ಸೇನಾಸೇವೆ ಮುಂತಾದ ರಾಜ್ಯಸೇವೆಯನ್ನೂ ಮಾಡಲಿಕ್ಕೆ ಹಂಗಿಲ್ಲದವರಾಗಿದ್ದಾರೆ;—ಎರಡು ಪಕ್ಷದವರೂ ಒಪ್ಪಿ ಕೊಳ್ಳುವಂತೆ ಅಧ್ಯಕ್ಷರಲ್ಲೊಬ್ಬನು ಮಾಡುವಂಥ ಯಾವದೊಂದು ತೀರ್ಪು ಏನೂ ಅಡ್ಡಿ ಇಲ್ಲದೆ ಸಲ್ಲ ಬೇಕು.—ಅವನ ಸಹಾಯದಿಂದ ಬಹು ಪಟ್ಣಗಳಲ್ಲಿ ಅತಿ ಶೃಂಗಾರವಾದ ದೇವಾಲಯಗಳನ್ನು ಕಟ್ಟಲಾಯಿತು; ಅವವುಗಳಿಗೆ ಅವನು ದೊಡ್ಡ ದಾನ ಶಾಸನಗಳನ್ನು ನಡಿಸಿದನು, ಹೊರ್ತಾಗಿ ಸಭೋದ್ಯೋಗಸ್ಥರ ಜೀವನಾಂಶಕ್ಕೆ ಹೇರಳ ಇನಾಮುಗಳನ್ನಿತ್ತನು. ಅವನು ಒಮ್ಮೆ ಪರಿಶುದ್ಧ ಬರಹದ 50 ಪ್ರತಿಗಳನ್ನೇ ಬರೆಸಿ, ಸ್ವಂತ ರಥಗಳೆರಡರ ಮೇಲೆ ಆ ಬಹಳ ಭಾರವುಳ್ಳ ಗ್ರಂಥಗಳನ್ನು ಹೇರಿಸಿ, ಬೇರೆ ಬೇರೆ ದೇವಾಲಯಗಳ ಉಪಯೋಗಕ್ಕೆ ಒಂದೊಂದನ್ನು ಕಳುಹಿಸಿ ಕೊಟ್ಟನು. ಅವನ ತಾಯಿಯಾದ ಹೆಲೆನಳು ಕ್ರಿಸ್ತನ ಭಕ್ತಳಾಗಿ, ಗೊಥರು[3] ಮುಂತಾದ ವಿಗ್ರಹಾರಾಧಕರಲ್ಲಿ ಕ್ರೈಸ್ತತ್ವ ವಿಸ್ತರಿಸಲಿಕ್ಕೆ ತನ್ನ ಕುಮಾರನಂತೆ ಬಹು ಪ್ರಯಾಸ ಪಡುವವಳಾಗಿ, ಒಮ್ಮೆ ಅವನೊಂದಿಗೆ ಪಲೇಸ್ತೀನಕ್ಕೆ ಗಮಿಸಿ, ಕ್ರಿ. ಶ. 326ನೇ ವರುಷ ಅಲ್ಲಿ ಯೊರ್ದನ್ ನದಿಯಲ್ಲಿ ಸ್ನಾನ ಹೊಂದಿ, ಯೇಸು ಕ್ರೂಜೆಯಲ್ಲಿ ಸತ್ತು ಹುಗಿಯಲಾದ ಸ್ಥಳದಲ್ಲಿ ಒಂದು ಚಲೋ ದೇವಾಲಯವನ್ನೇರಿಸಿದಳು; ಅದು ಈಗಲೂ ಇನ್ನು ಅದೆ. ಬೇರೆ ಅನೇಕ ಕಡೆಯಲ್ಲಿಯೂ ಅವಳು ದೇವಾಲಯಗಳನ್ನು ಕಟ್ಟಿಸಿ, 80 ವರುಷದ ಮುದುಕಿಯಾಗಿ ಪಲೇಸ್ತೀನದಲ್ಲಿ ತೀರಿ ಹೋದಳು. ಯೆರೂಸಲೇಮಿನಲ್ಲಿ ಕ್ರೈಸ್ತರಿಗೆ ಪರಿಶುದ್ಧವೆನ್ನಿಸುವ ಸ್ಥಳಗಳಲ್ಲಿ ಮೂರ್ತಿಪೂಜಕರು ಕಟ್ಟಿದ್ದ ದೇವಸ್ಥಾನಗಳನ್ನೆಲ್ಲಾ[4] ಕೊನ್ಸ್ತಂತೀನನು ಕೆಡಿಸಿ ಬಿಟ್ಟನು.

ಅವನು ತನ್ನ ಕೈಯ ಕೆಳಗಿನ ಮೂರ್ತಿಪೂಜಕರನ್ನು ಹಿಂಸೆ ಪಡಿಸದಲೇ ಇರುವನು. ಅವನು, ದೇವತೆಗಳ ಯಾಗವು ಇನ್ನು ನಡೆಯದಿರುವದೂ ಅವುಗಳ ಪ್ರ

1) 94ನೇ ಪಾನು. 2) 163ನೇ, 164ನೇ ಪಾನು. 3) 88ನೇ ಪಾನು. 4) 112ನೇ ಪಾನು.

ತಿಮೆ ಇನ್ನು ನಿಲ್ಲಿಸದಿರುವದೂ ಯೋಗ್ಯವೆಂದು, ಪ್ರಕಟಿಸಿದರೂ ಬಲಾತ್ಕಾರ ಮಾಡಲಿಲ್ಲ; ಮೂರ್ತಿಪೂಜಕರ ಬಹಳ ಬಂಡ ಆಚಾರಗಳನ್ನೂ ಪೂಜಾರಿಗಳ ಮೋಸಕಾರ್ಯಗಳನ್ನೂ ಮಾತ್ರ ಸಂಹರಿಸಿದನು. ಅವರದೊಂದು ದೇವಸ್ಥಾನವು ಖಾಲಿ ಬಿದ್ದರೆ ಅದನ್ನು ಕ್ರೈಸ್ತರಿಗೆ ಕೊಡುವನು; ಅವನು ಸಂತೇ ಬೈಲಿನಲ್ಲಿ ರಾಜನೀತಿಯನ್ನು ಕುರಿತು ಪ್ರಸಂಗಿಸುವಂದು ಆಗಿಂದಾಗ ಕ್ರೈಸ್ತತ್ವದ ಆಶೀರ್ವಾದವನ್ನು ಕುರಿತು ಸಹ ಸಾರುವನು; ಅದಲ್ಲದೆ ಅವನು ಅಲ್ಲಲ್ಲಿಯ ತನ್ನ ಪ್ರತಿನಿಧಿಗಳಿಂದ ಕ್ರೈಸ್ತತ್ವವನ್ನು ಒಡ್ಡೋಲಗಗಳಲ್ಲಿ ಕೊಂಡಾಡಿಸುವನು.

ರೋಮಾಯ ಸಾಮ್ರಾಜ್ಯದಲ್ಲಿ ಪೂರ್ವದಿಂದಲೇ ಕೈಸರರು ರಾಜ್ಯಮತದ ಮುಖ್ಯಸ್ಥರು.[1] ಕೊನ್ಸ್ತಂತೀನನು ಸಹ ಆ ಪದ್ಧತಿ ಹಿಡು ಕೊಂಡಿರುವನು. ಒಂದಾನೊಂದು ದಿನದಲ್ಲವನು ಊಟದ ಸಮಯಕ್ಕೆ ತನ್ನಲ್ಲಿದ್ದ ಸಭಾಧ್ಯಕ್ಷರಿಗೆ ಹೇಳಿದ್ದೇನಂದರೆ—ನೀವು ಸಭೆಯ ಒಳಕಾರ್ಯಗಳ ಅಧ್ಯಕ್ಷರು, ನಾನು ದೇವರ ಅಪ್ಪಣೆಯ ಮೇಲೆ ಸಭೆಯ ಹೊರಕಾರ್ಯಗಳ ಅಧ್ಯಕ್ಷನು.—ಹೀಗಿರಲಾಗಿ ಅವನು ಕ್ರೈಸ್ತ ರಾಜ್ಯಮತಕ್ಕೆ, ಹಿಂದೆ ಸೂಚಿಸಿದಂತೆ[2], ನಾನಾ ಸಹಾಯ ಗೈಯುವ ಋಣವನ್ನು ತನ್ನ ಮೇಲೆ ವಹಿಸುವಲ್ಲಿ—ತನ್ನ ಆಜ್ಞೆಯಿಲ್ಲದೆ ಒಬ್ಬನು ಮೇಲ್ತರದ್ದೊಂದೂ ಸಭೋದ್ಯೋಗಕ್ಕೆ ಬರಲಾರನು, ತನ್ನ ಅಪ್ಪಣೆಯಿಲ್ಲದೆ ಸಭಾಸಂಘಗಳದೊಂದೂ ವ್ಯವಸ್ಥೆ ನಡೆಯಲಾರದು ಎಂತ, ಹೇಳುವ ಅಧಿಕಾರವನ್ನು ಸಹ ತನಗೆ ತೆಕ್ಕೊಂಡನು[3].

ಕ್ರಿ. ಶ. 327ನೇ ವರುಷದಲ್ಲಿ ಅವನು ರೋಮಪುರಕ್ಕೆ ಬದಲಾಗಿ ಒಂದು ಹೊಸ ರಾಜಧಾನಿ ಕಟ್ಟುವವನಾದನು; ಯಾಕಂದರೆ—ಆ ರೋಮವು ಮುಂಚೆ ಮೂರ್ತಿಪೂಜಕತ್ವದ ಮಹಾ ಸ್ಥಾನವಾಗಿತ್ತು, ಅದರಲ್ಲಿಯ ದೇವಸ್ಥಾನಗಳು ಇನ್ನೂ ಎಡೆ ಬಿಡದೆ ಆ ಮಿಥ್ಯಾರಾಧನೆಯ ನೆಪ್ಪು ಹಚ್ಚುತ್ತಾ ಅವೆ, ಅದರಲ್ಲಿ ಕ್ರೈಸ್ತರಾಗದ ಅನೇಕ ದೊಡ್ಡ ಸ್ಥಿತಿವಂತರು ತಾನು ಕ್ರೈಸ್ತತ್ವವನ್ನು ರಾಜ್ಯಧರ್ಮವೆಂತ ಸ್ಥಾಪಿಸಿದ್ದಕ್ಕೆ ಶಿಟ್ಟು ಪಡುತ್ತಾ ಇದ್ಧಾರೆ, ಮೂರ್ತಿಪೂಜಕತ್ವದ ಒಂದೂ ಚಿನ್ಹೆಯಾದರೂ ಇರದಂಥಾದೊಂದು ರಾಜಧಾನಿ ನಿರ್ಮಿಸುತ್ತೇನೆಂಬ ಮನಸ್ಸು ಅವನಿಗೆ ಬಂದಿತ್ತು. ಅವನು ಗ್ರೇಕ ದೇಶದ ಥ್ರಾಕಿಯ ನಾಡಿನ[4] ಬೂಜಂತಿಯ ಎಂಬ ಪಟ್ಣವನ್ನು ಅದಕ್ಕೆ ಆರಿಸಿ ಕೊಂಡನು; ಯಾಕಂದರೆ ಅದು ರಾಜ್ಯದ ಕಠಿಣ ಶತ್ರುಗಳಾದ ಗೊಥರೆಂಬ ಗೆರ್ಮಾನರಲ್ಲುಳಿದ ವಿಗ್ರಹಾರಾಧಕರಿಗೂ ಸಾಸಾನಿದರೆಂಬ ಪಾರ್ಥಿಯರಿಗೂ[5] ಎದುರಾಗಿ ಒಂದು ತಕ್ಕ ಕೋಟೆಯಾಗುವ ಹಾಗೆ ಕಾಣಿಸಿತು. ಆ ಹೊಸ

---

1) 9ನೇ ಪಾನು. 2) 179ನೇ, 180ನೇ ಪಾನು. 3) ರಾಜ್ಯಾಧಿಕಾರವು ಸಭೆಯಲ್ಲಿ ಹೊಕ್ಕದರಿಂದ ಇದರ ಕಥೊಲಿಕ (180ನೇ ಪಾನು) ಭಾವವು ಕುಂದಿ ಹೋಯಿತು. 4) 178ನೇ ಪಾನು. 5) 73, 75, 82, 117, 122, 171ನೇ ಪಾನುಗಳು.

ರಾಜಧಾನಿಯನ್ನು 4 ವರುಷದೊಳಗೆ ಬಹಳ ಖರ್ಚಿನಿಂದ ಮಿಗು ಚಂದವಾಗಿ ಕಟ್ಟಲಾಯಿತು. ಕೈಸರನು ಅದಕ್ಕಿಟ್ಟ ನವೀನರೋಮಪುರವೆಂಬ ಹೆಸರನ್ನು ಪ್ರಜೆಯವರು ಬದಲಾಯಿಸಿ, ಅವನ ಮಾನಕ್ಕೋಸ್ಕರ ಅದನ್ನು, ಕೊನ್ಸ್ತಂತೀನೊಪೊಲಿ ಅಂದರೆ ಕೊನ್ಸ್ತಂತೀನನ ಪುರಿ ಎಂದು[1], ಹೇಳುವವರಾದರು. ಕೊನ್ಸ್ತಂತೀನನ ಕಾಲದಲ್ಲಿ ಅದು 5 ಗುಡ್ಡಗಳ ಮೇಲೆ ಕಟ್ಟಿತ್ತು; ಬಳಿಕ 100 ವರುಷದೊಳಗೆ ಅದಕ್ಕೆ ಇನ್ನು 2 ಗುಡ್ಡಗಳು ಶೇರಿದನಂತರ ಅದು ರೋಮಪುರದ ಹಾಗೆ 7 ಗುಡ್ಡಗಳ ಪಟ್ಣವು ಎನ್ನಿಸಲಿಕ್ಕೆ ಅನುವಾಯಿತು.

ಕೊನ್ಸ್ತಂತೀನನು ಕ್ರೈಸ್ತತ್ವದ ಮೇಲೆ ತನಗಿರುವ ಪ್ರೀತಿಯನ್ನು, ವರ್ಣಿಸಿದ ತರವಾಗಿ, ತೋರಿಸುತ್ತಿರುವಷ್ಟರಲ್ಲಿ ಕ್ರಿಸ್ತನ ಬೋಧನೆಯು ಅವನನ್ನು ಪೂರಾ ವ್ಯಾಪಿಸಿ ಕೊಂಡಿದ್ದಿಲ್ಲ. ಹೀಗಿರಲಿಕ್ಕವನು ಒಂದೆರಡು ಸರ್ತಿ ತನ್ನ ನೆಂಟರ ಮೇಲೆ ಕ್ರೂರತ್ವ ನಡಿಸಿದ್ದಲ್ಲದೆ ತನ್ನ ಜೀವಿತದ ಎಲ್ಲಾ ಕಾಲದಲ್ಲಿ ಒಮ್ಮೆಯಾದರೂ ತಾನು ಬಂದದೊಂದು ಕ್ರೈಸ್ತ ದೇವಾರಾಧನೆಯು ತೀರುವ ವರೆಗೆ ದೇವಾಲಯದಲ್ಲಿ ಉಳಿಯಲಿಲ್ಲ; ಆ ಸಮಯದ್ದೊಂದು ದೇವಾರಾಧನೆಯು ಬಹಳ ಹೊತ್ತು ನಡೆಯುತ್ತಿತ್ತೆಂತ, ಅವನ ತಪ್ಪನ್ನು ಸ್ವಲ್ಪ ಕಡಿಮೆ ಮಾಡುವದಕ್ಕೆ, ಈಗಿನವರಿಗೆ ಹೇಳ ತಕ್ಕದ್ದಾಗಿದೆ. ಅವನು ತನ್ನ ಜೀವನದ 65ನೇ ವರುಷಕ್ಕೆ ಮೊದಲಿನ ಸಾರಿ ಮುದುಕತನದ ಬಲಹೀನತ್ವವನುಭವಿಸುವವನಾಗಿ, ಬಿಥೂನಿಯದಲ್ಲಿಯ[2] ಕ್ಷೇಮಕರವಾದ ಜರಿಜಲವ ತಕ್ಕೊಂಡೇನೆಂತ, ಕೊನ್ಸ್ತಂತೀನೊಪೊಲಿಯಿಂದ ಅಲ್ಲಿಗೆ ಪ್ರಯಾಣವಾಗಿ ಹೋಗಿ, ಬೇಗ ಸತ್ತೇನೆಂತ, ಅಲ್ಲಿ ತಿಳುಕೊಂಡು, ಕ್ರಿ. ಶ. 337ನೇದರಲ್ಲಿ ಪಂಚಾಶತ್ತಮದಿನಹಬ್ಬಕ್ಕೆ ನೀಕೊಮೇದೀಯ ಪಟ್ಣದಲ್ಲಿಯ[3] ಒಂದು ಪ್ರಸಿದ್ಧ ದೇವಾಲಯದೊಳಗೆ ಕೂಡಿ ಬಂದ ಅಧ್ಯಕ್ಷರ ಮುಂದೆ ಬೇರೊಬ್ಬ ಸ್ನಾನಾಪೇಕ್ಷಕನ ಹಾಗೆ ತನ್ನ ಪಾಪ ನಿವೇದಿಸಿ, ಅದರ ವಿಮೋಚನೆಯ ಮಾತು ಕೇಳಿ ಕೊಂಡು, ಬಳಿಕ ತನ್ನ ಅರಮನೆಗೆ ತಿರುಗಿ, ಅಲ್ಲಿ ಆ ಪಟ್ಣದ ಅಧ್ಯಕ್ಷನಾದ ಯುಸೆಬಿಯನೆಂಬವನೊಬ್ಬನಿಂದ ಸ್ನಾನ ಹೊಂದಲು, ದೇವರು ನನ್ನ ಜೀವ ಉಳಿಸಿದರೆ ಈ ಹೊತ್ತು ಹಿಡಿದು ಅವನಿಗೆ ಯೋಗ್ಯವಾದ ನಡಾವಳಿಯಿಂದಿದ್ದೇನೆಂತ, ವಚನ ಹೇಳಿದನು. ಸ್ನಾನದ ಮೇಲೆ ಅವನು ಕೈಸರತ್ವದ ನಿಲುವಂಗಿಯನ್ನು ಇನ್ನೂ ಹಾಕಿ ಕೊಳ್ಳಲೊಲ್ಲದೆ, ಸ್ನಾನಕ್ಕೋಸ್ಕರ ತಾನು ಹಾಕಿ ಕೊಂಡಿದ್ದ ಬಿಳೇ ಅಂಗಿಯನ್ನು ತಿರಿಗಿ ತೆಗೆದಿಡಲೇ ಇಲ್ಲ. ಆ ಹಬ್ಬದ ದಿವಸಗಳು ಕಳೆದು ಹೋದ್ದಕ್ಕಿಂತ ಮುಂಚೆ ಅವನು ಕ್ರಿಸ್ತನ ಹೆಸರಿನಲ್ಲಿ ದೇವರ ಕೃಪೆಯ ಮೇಲೆ ದೃಢ ವಿಶ್ವಾಸವಿಡಲಿಕ್ಕೆ ಧೈರ್ಯಗೊಂಡು, ಶಾಂತಿಯಿಂದ ತೀರಿ ಕೊಂಡನು. ಮಹಾರಾಜಮಂತ್ರಿಸಭೆಯಲ್ಲಿರುವ ಮೂರ್ತಿ

1) 83ನೇ ಪಾನು. 2) 124ನೇ ಪಾನು. 3) 124ನೇ, 125ನೇ ಪಾನುಗಳು.

ಪೂಜಕರು ಹಳೇ ಪದ್ಧತಿಯ ಪ್ರಕಾರ ಅವನನ್ನು ತಮ್ಮ ದೇವತೆಗಳ ಲೆಖ್ಖದಲ್ಲಿ ಶೇರಿಸಿದರು[1]. ತದನಂತರ ಕೊನ್ಸ್ತಂತ, ಕೊನ್ಸ್ತಂತಿಯ[2], ಕೊನ್ಸ್ತಂತೀನ ಎಂಬ ಮೂವರು ಕುಮಾರರು ಕೈಸರರಾದರು.

## 22. ನೀಕೇಯ ಪಟ್ಣದಲ್ಲಿಯ ಮೊದಲಿನ ಸರ್ವಸಭಾಸಂಘವು.

ಈರೇನೇಯ ಸಭಾಪಿತನು[3] ಪಾಷಂಡಿಗಳಿಗೊಮ್ಮೆ ಬರೆದದ್ದೇನಂದರೆ—ಒಬ್ಬನು ನಮ್ಮನ್ನು, ಪುತ್ರದೇವರು ಪಿತೃದೇವರಿಂದ ಉತ್ಪನ್ನನಾದದ್ದು ಹ್ಯಾಗೆಂದು, ಕೇಳಿದರೆ—ಈ ಉತ್ಪಾದನವನ್ನು ಅಥವಾ ಜನಕತೆಯನ್ನು ನಿರ್ಮಿತವಾದವರಲ್ಲಿ ಯಾರೂ, ಜ್ಞೋಸ್ತಿಕರಾದರೇನು? ದೇವದೂತರಾದರೇನು?, ತಿಳಿಯಲರಿಯರು; ಜನಯಿಸಿದ ಪಿತನು ಜಾತನಾದ ಮಗನು ಇವರು ಮಾತ್ರ ಅದನ್ನು ಬಲ್ಲರು! ಎಂದು, ಉತ್ತರ ಕೊಡುವೆನು. ಈ ಪ್ರಕಾರ ಪುತ್ರನ ಜನಕತೆಯು ವಾಚಾತೀತವಾದ್ದರಿಂದ ಅವನ ಉತ್ಪಾದನ ಜನಕತೆಗಳನ್ನು ವಾಚಿಸಲಿಕ್ಕೆ ಪೇಚಾಡುವಂಥವರು, ವಾಚಾತೀತವಾದ್ದನ್ನು ವಾಚಿಸುತ್ತೇವೆಂತ, ಚರ್ಚಿಸುವಲ್ಲಿ ಮರುಳು ಗೊಂಡಂಥವರೇ[4]!—ಈ ಸದ್ವಾಕ್ಯವನ್ನು ಸರ್ವ ಕ್ರೈಸ್ತರು ಸರ್ವದಾ ನೆನಪಿನಲ್ಲಿಟ್ಟು ಕೊಂಡು, ಅದಕ್ಕನುಗುಣವಾಗಿ ನಡಕೊಂಡಿದ್ದರೆ ಅತಿಹಿತವಾಗುತ್ತಿತ್ತು; ಆದರೆ, ನೀವು ಹಿಂದೆ ಓದಿರುವಂತೆ[5], ಪ್ರಕ್ಸೆಯ, ಬೆರುಲ್ಲ, ಪೌಲ, ಸಬೆಲ್ಲ ಮುಂತಾದ ಹಲವರು ಅದನ್ನು ಚಿಂತಿಸದೆ, ತ್ರಿಯೇಕತ್ವದ್ವೇಷಿಗಳೆಂಬ ಪಾಷಂಡಿಗಳಾದರು. ಅದರ ಹಾಗೆ ಕೊನ್ಸ್ತಂತೀನನ ಆಳ್ತನದಲ್ಲಿ ಒಂದು ಸಂಗತಿಯು ಉದ್ಭವಿಸಿತು. ಹ್ಯಾಗಂದರೆ, ಕ್ರಿಸ್ತನಾಥನ ಕೃಪಾಸಂಕಲ್ಪದಿಂದ ಕ್ರೈಸ್ತ ಸಭೆಗಳಿಗೆ ಆ ಕೈಸರನಿಂದ ಬಹಿಃಸುಖವು ಬಂದೊದಗಿದಾಗಲೇ ಅದು ತಿರಿಗಿ ಕುಂದುವಂತೆ ಅರೀಯನೆಂಬವನೊಬ್ಬ ಸಭೋದ್ಯೋಗಿಯು, ಕ್ರಿಸ್ತನಾಥನ ಮಹಿಮೆ ಹಾರಿಸಿ, ಕಾರಣನಾದನು. ಅವನು ಆಫ್ರಿಕದ ಲಿಬುಯ ದೇಶದಲ್ಲಿ[6] ಹುಟ್ಟಿ, ಕ್ರಿ. ಶ. 313ನೇ ವರುಷಕ್ಕೆ ಅಲೆಕ್ಸಂದರೀಯದ ಸಭೆಯ ಹಿರಿಯರಲ್ಲಿ ಶೇರಿದಂಥವನು; ತನ್ನ ಭಾವದ ಮೇಲೆ ಅವನು ಜಗಳಗಂಟನು. ಅವನಿಗೆ ಮುಂಚಿನ ಆ ಪಾಷಂಡಿಗಳು—ತನ್ನ ಮನುಷ್ಯತ್ವಕ್ಕಿಂತ ಪೂರ್ವದಲ್ಲಿ ದೇವಪುತ್ರನು ದಿವ್ಯ ಪುರುಷನಲ್ಲ ದಿವ್ಯ ಶಕ್ತಿಯು ಮಾತ್ರ ಆಗಿದ್ದನು, ಆದರೂ ಇಂಥಾದ್ದು ಅನಾದಿಯೂ ದೇವಸಮಭಾವವೂ ಎಂತ, ವದಿಸಿದ್ದರು; ಆದರೆ ಅವನು ಕ್ರಿ. ಶ. 318ನೇದರಲ್ಲಿ ಒದರಲಿಕ್ಕೆ ತೊಡಗಿದ್ದೇನೆಂದರೆ—ತನ್ನ ಮಾನುಷತ್ವಕ್ಕಿಂತ

1) 10ನೇ ಪಾನು. 2) 83ನೇ ಪಾನು. 3) 170ನೇ ಪಾನು. 4) Adv. haeret. II, 28,6.
5) 147ನೇ, 157ನೇ, 158ನೇ ಪಾನು. 6) 84ನೇ ಪಾನು.

ಪೂರ್ವದಲ್ಲಿ ಕ್ರಿಸ್ತನು ಪುರುಷನಾಗಿದ್ದನು, ಆದರೂ ದೇವರೂ ಅಲ್ಲ ಅನಾದಿಯೂ ಅಲ್ಲ; ದೇವರು ಒಂದು ಕಾಲಸಂಯೋಗದಲ್ಲಿ ಅವನನ್ನು ನಿರ್ಮಿಸಿದನು; ಈ ಪುತ್ರನು ಪಿತನಿಗೆ ಗೌಣಭಾವಿಯಾದರೂ ಸಮಭಾವಿಯಲ್ಲ, ಅವನು ಮಹಾತ್ಮನಷ್ಟೇ; ಅವನ ಮುಖಾಂತರದಿಂದ ದೇವರು ವಿಶ್ವವನ್ನು ನಿರ್ಮಿಸಿದನು.—ಅವನು ಬಹು ಯುಕ್ತಿ ಮಾಡಿ ಪರಿಶುದ್ಧ ಬರಹದರ್ಥ ತುಚ್ಛೀಕರಿಸದಿರುವವನ ಹಾಗೆ ತೋರಿಸಿಕೊಳ್ಳುವದರಿಂದಲೂ, ಕ್ರಿಸ್ತನು ತನ್ನ ಭಕ್ತಿಗೋಸ್ಕರ ಹಿಂದಗಡೆ ದೇವರಾದವನು, ಅದು ಕಾರಣವಾಗಿ ಅವನಿಗೆ ದೇವರೆಂತ ಆರಾಧನೆ ಮಾಡ ಬೇಕು ಇತ್ಯಾದಿ ಶ್ಲೇಷಾಲಂಕಾರ ಪ್ರಯೋಗಿಸುವದರಿಂದಲೂ, ಕಠಿಣ ಮೈದಂಡನಕಾರಕನಾಗಿರುವದರಿಂದಲೂ[1] ಅನೇಕ ಒಳ್ಳೇ ಭಕ್ತಿವಂತರಾದರೂ ಅವನ ಪ್ರಸಂಗದ ಗುಟ್ಟನ್ನರಿಯದೆ, ಅವನ ಭಕ್ತಿಯ ಛಾಯೆಯಿಂದ ಭ್ರಮೆ ಗೊಂಡಿರಲು, ಹಲವರು ಅವನಿಗೆದುರಿಸದೆ, ಹಲವರವನ ಪಕ್ಷದವರಾದ ಹಾಗಾಯಿತು. ಡಂಭಃ ಸರ್ವತ್ರ ಪೂಜ್ಯತೇ ಅಂದರೆ ಡಂಭವು ಎಲ್ಲರಿಗೂ ಒಪ್ಪುತ್ತದೆ! ಎಂಬ ಗಾದೆ ಒದಗಿತು. ಅರೀಯನು ಮುಖದಿಂದ ಪ್ರಸಂಗಿಸುತ್ತಿದ್ದದಲ್ಲದೆ ದಾರಿಗರು ಹಡಗದವರು ಗಾಣಿಗರು ಮುಂತಾದಂಥ ಜನರಿಗೋಸ್ಕರ ತಾನು ರಚಿಸುವ ಕಾವ್ಯಗಳಲ್ಲಿ ತನ್ನ ಅಪಬೋಧನೆ ಸೇರಿಸಿ, ಅವನ್ನು ಬಹಳ ಕಡೆಯಲ್ಲಿ ಬಹಳ ತರದಿಂದ ಹಬ್ಬಿಸುತ್ತಿದ್ದನು. ಅವನಿಗೆ ಒಡಂಬಡದಂಥ ಬೋಧಕರು ದೀರ್ಘ ಶಾಂತಿಯಿಂದ ಹಲವು ಕಾಲ ವಿಶೇಷ ಅಡ್ಡಿ ಮಾಡದೆ, ಸುಮ್ಮನಿದ್ದ ಮೇಲೆ ಅಲೆಕ್ಸಂದರನೆಂಬ ಅಲೆಕ್ಸಂದರೀಯದ ಆಗಿನ ಅಧ್ಯಕ್ಷನು ಕ್ರಿ. ಶ. 321ನೇ ವರುಷಕ್ಕೆ ಆ ಪಟ್ಟಣದಲ್ಲಿ 100 ಮಂದಿ ಅಧ್ಯಕ್ಷರದೊಂದು ಸಂಘವ ಕೂಡಿಸಿದನು; ಅದಕ್ಕೆ ಬಂದವರು ಅರೀಯನ ಆ ಬೋಧನೆಯನ್ನು, ಪಾಷಂಡವೆಂದು, ನಿರ್ಣಯ ಮಾಡಿ, ಅವನ ಉದ್ಯೋಗ ತೆಗೆದು, ಅವನನ್ನು ಸಭೆಯೊಳಗಿಂದ ಬಹಿಷ್ಕರಿಸಿದರು. ಬಿಥೂನಿಯದಲ್ಲಿ ಅಂದಿನ್ನು ಲಿಕಿನಿಯ ಕೈಸರನ[2] ರಾಜಧಾನಿಯಾದ ನೀಕೊಮೇದೀಯದ ಸಭಾಧ್ಯಕ್ಷನೂ ಆ ಕೈಸರನ ಗೆಳೆಯನೂ ಆದ ಯುಸೆಬಿಯನು[3] ಮಾತ್ರವಲ್ಲದೆ ಸಣ್ಣ ಅಸಿಯದ ಮತ್ತು ಸುರಿಯ ದೇಶದ ಇತರ ಅನೇಕ ಅಧ್ಯಕ್ಷರು ಕೂಡ ಆ ತೀರ್ಪಿಗೆ ಹೆಚ್ಚು ಕಡಿಮೆಯಾಗಿ ಸಮ್ಮತಿಸದಿರಲು, ಒಂದು ಅತಿ ದುಃಖಕರವಾದ ಭೇದವಾಯಿತು. ಮೂರ್ತಿಪೂಜಕರು ಅದು ಕಂಡು, ಉಲ್ಲಾಸ ಪಟ್ಟು, ತಮ್ಮ ನಾಟಕಗಳಲ್ಲಿ ಅದಕ್ಕೆ ಹಾಸ್ಯ ಮಾಡುವವರಾದರು. ಅಷ್ಟರಲ್ಲಿ ಕೊನ್ಸ್ತಂತೀನ ಕೈಸರನು ಲಿಕಿನಿಯನನ್ನು ಜಯಿಸಿ, ಆ ನೀಕೊಮೇದೀಯದಲ್ಲಿದ್ದು, ತಾನು ತನ್ನ ಅಧಿಕಾರದ ಭದ್ರತೆಗೋಸ್ಕರ ಆತು ಕೊಳ್ಳಲಿಚ್ಛೈಸುವ ಕ್ರೈಸ್ತರು ಆ ಪ್ರಕಾರ ಐಕ್ಯ ಗೆಟ್ಟರೆ ಏನಾದೀತೆಂದು, ಅಂಜಿ, ಆ ವಾದವು

1) 153ನೇ ಪಾನು ಸರಿ ನೋಡು. 2) 178ನೇ, 179ನೇ ಪಾನು. 3) 182ನೇ ಪಾನು.

ಹುಡುಗರಾಟದಂತೆ ಒಂದು ಪುಕ್ಕಟೆ ಕೆಲಸವೆಂದು, ನೆನಸಿ, ಎರಡು ಪಕ್ಷದವರಿಗೂ, ಬಾಯಿ ಮುಚ್ಚಿ ಕೊಂಡಿರ ಬೇಕೆಂದು, ಒಂದು ಆಜ್ಞೆ ಬರೆದು, ತನ್ನ ಮಿತ್ರನಾದ ಸ್ಪಾನಿಯ ದೇಶದ ಕೊರ್ದೋವ ಪಟ್ಟದ ಹೋಸೀಯನೆಂಬ ಅಧ್ಯಕ್ಷನ ಕೈಯಲ್ಲಿ ಕೊಟ್ಟು, ಅವನನ್ನು ಅಲೆಕ್ಸಂದರೀಯಕ್ಕೆ ಕಳುಹಿಸಲು, ಇವನು ಅಲ್ಲಿಗೆ ಹೋಗಿ, ಆ ಭೇದದ ಭಾವವು ಬಹಳ ಕಠಿಣವೆಂದು, ತಿಳಿದು, ಹಿಂದಿರುಗಿ, ಕೈಸರನಿಗೆ ತಿಳಿಸಿದನು. ಆಗ ಕೊನ್ಸ್ತಂತೀನನು ಕ್ರಿ. ಶ. 325ನೇ ವರುಷಕ್ಕೆ ಸಣ್ಣ ಅಸಿಯದ ಬಿಥೂನಿಯ ನಾಡಿನ ನೀಕೇಯ ಪಟ್ಟದಲ್ಲಿ ಸರ್ವ ಕ್ರೈಸ್ತ ಸಭೆಗಳ ಮೊದಲಿನ ಸಂಘವನ್ನು ಕೂಡ ಕರಿಸಿದನು[1]. ಅಂದು ಕೈಸರನ ವಿಜ್ಞಾಪನೆಯ ಮೇರೆಗೆ ರಾಜಭಂಡದ ಖರ್ಚಿನ ಮೇಲೆ 318 ಮಂದಿ ಅಧ್ಯಕ್ಷರೂ 300 ಮಂದಿ ಹಿರಿಯರೂ ಆ ನೀಕೇಯದಲ್ಲಿ ನೆರೆದರು. ರೋಮಪುರದ ಅಧ್ಯಕ್ಷನಿಗೆ ಬಹಳ ಬಲಹೀನತೆ ಇತ್ತು, ಆದ್ದರಿಂದ ಅವನಿಗೆ ಬರಲಿಕ್ಕೆ ತೀರಲಿಲ್ಲ; ಅವನು ತನ್ನ ಕೈಯ ಕೆಳಗಿನ ಹಿರಿಯರಲ್ಲಿಬ್ಬರನ್ನು ಕಳುಹಿಸಿದನು. ನೀಕೇಯದಲ್ಲಿ ಕೂಡಿರುವ ಅಧ್ಯಕ್ಷರಲ್ಲನೇಕರು ಕೈಸರರ ಆ ಹಿಂಸೆಗಳಿಂದ ಯೇಸು ಕ್ರಿಸ್ತನ ಶ್ರಮಗುರುತುಗಳು ಶರೀರದಲ್ಲಿದ್ದವರಾಗಿ ಕಾಣಿಸಿ ಕೊಂಡರು[2]; ಇಂಥವರಲ್ಲಿ ಕೆಲವರು ಯಾರಂದರೆ—ಕೊರ್ದೋವ ಪಟ್ಟದ ಆ ಹೋಸೀಯನೆಂಬ ಮುದುಕನು; ಇವನು ಕೆಲವು ಅತಿಕ್ರೂರ ಹಿಂಸೆಗಳಲ್ಲಿ ವಿಶ್ವಾಸಧೈರ್ಯಸ್ಥೈರ್ಯಗಳಿಂದ ಶೋಭಿಸಿ ಕೊಂಡು ಬಂದಂಥವನು;—ಇದಲ್ಲದೆ ಸಣ್ಣ ಅಸಿಯದ ಲೂಕಿಯ ನಾಡಿನಲ್ಲಿರುವ ಮುರ ಪಟ್ಟದ ನೀಕೊಲಾವನೆಂಬವನು; ಇವನು ಬಹಳ ವರುಷ ಬಂಧನದಲ್ಲಿಯೂ ಪೀಡೆಗಳಲ್ಲಿಯೂ ಇರುತ್ತಿದ್ದಲ್ಲಿ ಕರ್ತನಿಗೆ ನಂಬಿಗಸ್ತನಾಗಿದ್ದು ಬಂದಂಥವನು;—ಪುನಃ ಫ್ರಾತು ನದಿಯ ಕೈಸರೈಯ ಪಟ್ಟದ ಪೌಲನು; ಇವನ ಎರಡು ಕೈಯನ್ನು ಹಿಂಸಕರು ಕಬ್ಬಿಣ ಕೆಂಪಗೆ ಕಾಸಿ ಸುಟ್ಟಿದ್ದರು;—ಮತ್ತು ಐಗುಪ್ತದ ಥೇಬಾಯಿಸ್ ನಾಡಿನ[3] ಮುದೀ ಅಧ್ಯಕ್ಷನಾದ ಪಫ್ನುತಿಯನೆಂಬವನು; ಒಳ್ಳೇ ಸಾಕ್ಷಿ ಕೊಟ್ಟ ಇವನ ಒಂದು ಕಣ್ಣನ್ನು ಹಿಂಸಕರು ಕಿತ್ತಿದ್ದರು; ಕೊನ್ಸ್ತಂತೀನ ಕೈಸರನು ಈ ಮಾನ್ಯ ಅಧ್ಯಕ್ಷನನ್ನು ಆಗಿಂದಾಗ ತನ್ನ ಹತ್ತರ ಕರೆಸಿ, ಅವನ ಬರೇ ಕಣ್ಣುಗುಂಡಿಗೆ ಅನೇಕ ಸರ್ತಿ ಮುದ್ದಿಕ್ಕುತ್ತಿರುವನು;—ಇನ್ನು ಯೆರೂಸಲೇಮಿನ ಸಭೆಯ ಉತ್ತಮ ಅಧ್ಯಕ್ಷನಾದ ಮಕ್ಸಿಮನೆಂಬವನು; ಹಿಂಸಕರು ಇವನ ಬಲಗಣ್ಣು ಕಿತ್ತು, ಅವನ ಎಡಗಾಲು ಕಡೆದಿದ್ದರು. ಈ ಮುಂತಾದ[4] ಸದ್ಭಕ್ತರ ಸಂಘಕ್ಕೆ ಕೊನ್ಸ್ತಂತೀನ ಕೈಸರನು ಅಗ್ರಸ್ಥನು; ಅಧ್ಯಕ್ಷರಲ್ಲಿ ಕೊರ್ದೋವದ ಹೋಸೀಯನು ಅವನ ಸಹಾಯಾಗ್ರಸ್ಥನು. ಅರೀಯನು ತನ್ನ ಬೋಧನೆಯ

1) 165ನೇ ಪಾನು. 2) 127ನೇ ಪಾನು ಸರಿ ನೋಡು. 3) 126ನೇ ಪಾನು. 4) 82ನೇ, 88ನೇ ಪಾನು.

ನ್ನು ಬಹಳ ವಾಕ್ಚಾತುರ್ಯದಿಂದ ವಿವರಿಸುತ್ತಿರಲು, ಅದು ಪಾಷಂಡವೆಂತ ಪ್ರತಿಪಾದಿಸುವ ಆ ಪ್ರಖ್ಯಾತ ಅಧ್ಯಕ್ಷರು ಮೊದಲಾದ ಬೋಧಕರಲ್ಲಿ ಅಥನಸಿಯನೆಂಬವನು ವಿಶೇಷವಾಗಿ ಮೆರೆದನು. ಇವನು ಕ್ರಿ. ಶ. 298ನೇ ವರುಷದಲ್ಲಿ ಹುಟ್ಟಿ, 319ನೇದಕ್ಕೆ ಅಲೆಕ್ಸಂದರೀಯದಲ್ಲಿ ಸಭಾಸೇವಕನಾಗಿದ್ದನು; ಅವನ ಅಧ್ಯಕ್ಷನಾದ ಆ ಅಲೆಕ್ಸಂದರನು[1] ಅವನ ಭಕ್ತಿಗೂ ಬುದ್ಧಿಗೂ ಮೆಚ್ಚಿ, ಅವನನ್ನು ನೀಕೇಯಕ್ಕೆ ತಂದಿದ್ದನು; ದಿನಗತಿಯಿಂದ ಕ್ರಿ. ಶ. 328ನೇದಕ್ಕೆ ಅಲೆಕ್ಸಂದರನು ಸತ್ತಾಗ ಅಥನಸಿಯನು ಅವನ ಉತ್ತರಾಧಿಕಾರಿಯಾಗಿ[2], ಸದ್ಬೋಧನಪ್ರಮಾಣಪಿತನೆಂಬ ಹೆಸರು ಹೊಂದಿದನು[3]. ಒಳ್ಳೇದು! ಅರೀಯನೂ ಅವನ ಪ್ರತಿವಾದಿಗಳೂ ಮಾತಾಡಿ ತೀರಿಸಿದ ಬಳಿಕ ಆ ಯುಸೆಬಿಯನೆಂಬ ಸಭಾಚರಿತ್ರಲೇಖಕನು[4] ಎದ್ದನು; ಅವನು ಕ್ರಿ. ಶ. 313ನೇ ವರ್ಷದಾರಭ್ಯ ಪಲೇಸ್ತೀನದ ಕೈಸರೈಯದಲ್ಲಿ ಅಧ್ಯಕ್ಷನಾಗಿದ್ದು ಆಗತನಾದವನು. ಅವನೆದ್ದು, ಉಭಯಪಕ್ಷಕರಿಗೂ ಸರಿ ಬಿದ್ದೀತೆಂದು, ತಾನು ರಚಿಸಿದ್ದೊಂದು ಸಾಮಭಾವದ ವಿಶ್ವಾಸಪ್ರಮಾಣವನ್ನು ಎಲ್ಲರ ಮುಂದೆ ಓದಿದನು; ಆದರೆ ಅನೇಕ ಮಂದಿ ಬೋಧಕರು, ಕೈಸರನು ಸಹ, ಅಂಥಾದ್ದನ್ನು ಶ್ಲೇಷಾಲಂಕಾರಿಗಳಾದ ಅರೀಯನವರು ತಮ್ಮ ಪಾಷಂಡಕ್ಕೂ ಬಳಿಸಿ ಕೊಂಡಾರೆಂತ, ಹೆದರಿ ಕೊಂಡು—ಯುಸೆಬಿಯನ ಆ ವಿಶ್ವಾಸಪ್ರಮಾಣಕ್ಕೆ ಎರಡರ್ಥವಾಗದಂಥ ಮಾತುಗಳನ್ನು ಕೂಡಿಸಿ, ಇಂತು ಒಂದು ಹೊಸದನ್ನು ಮಾಡಿ, ಅರೀಯನ ಬೋಧನೆಯು ಪಾಷಂಡವೆಂಬದನ್ನು ಸಹ ಅದರಲ್ಲಿ ಶೇರಿಸ ಬೇಕೆಂದು, ಹೇಳುತ್ತಿರಲಾಗಿ, ಕಡೆಯಲ್ಲಿ ಅರೀಯನೂ ಇಬ್ಬರು ಐಗುಪ್ತ್ಯ ಅಧ್ಯಕ್ಷರೂ ಮಾತ್ರವಲ್ಲದೆ ಉಳಿದವರೆಲ್ಲರೂ ಹ್ಯಾಗೂ ಬಹಿರಕ್ಕೆ ಅವರಿಗೆ ಒಡಂಬಟ್ಟು, ಅಂದು ಉತ್ಪನ್ನವಾದ ನೀಕೇನ ವಿಶ್ವಾಸಪ್ರಮಾಣಕ್ಕೆ ಅವರ ಹಾಗೆ ತಮ್ಮ ಕೈಯೊಪ್ಪಿತ ಹಾಕಿದರು. ಅರೀಯನನ್ನೂ ಅವನ ಅವಲಂಬಿಗಳಿಬ್ಬರನ್ನೂ ಸಭೆಯೊಳಗಿಂದ ತಳ್ಳಿ, ಅವನ ಗ್ರಂಥಗಳನ್ನು ಸುಟ್ಟು ಬಿಡ ಬೇಕೆಂತ, ತೀರ್ಪಾಯಿತು; ಅದರ ಹೊರ್ತು ಆ ಮೂವರು ಗಡಿ ದಾಟಿ ಹೋಗ ಬೇಕಾಯಿತು.—ಕ್ರಿ. ಶ. 6ನೇ ಶತಮಾನದಲ್ಲಿ ರಚಿತವಾದ ಅಥನಸಿಕ ವಿಶ್ವಾಸಪ್ರಮಾಣವೆಂಬದು ಅಥನಸಿಯನು ಹೇಳಿದ ಬೋಧನೆಗೆ ಸಮವಾದ್ದರಿಂದ ಆ ಹೆಸರನ್ನು ಪಡೆದದೆ.

ಆದರೆ ಅಧಿಕ ಮಂದಿ ಬೋಧಕರು ಅರೀಯನಿಗೆ ವಿರೋಧವಾದ ಆ ನೀಕೇನ ವಿಶ್ವಾಸಪ್ರಮಾಣಕ್ಕೆ ಹಸ್ತಬರಹ ಹಾಕಿದ್ದರೂ ಸತ್ಯಪರಿಜ್ಞಾನಾರ್ಥಶೋಧನೆಯಲ್ಲಿ ಬುದ್ಧಿಪ್ರಮಾಣಿಕತ್ವವುಳ್ಳ ಅನೇಕರು ಹೃದಂತರಂಗದೊಳಗೆ ಅವನಿಗೆ, ಒಬ್ಬನು ಹೆಚ್ಚು ಮತ್ತೊಬ್ಬನು ಕಡಿಮೆಯಾಗಿ, ಒಪ್ಪಿ ಕೊಂಡು, ಒಳಸಂಚು ನಡಿಸಿ, ಕೈಸರ

1) 184ನೇ ಪಾನು. 2) 86ನೇ ಪಾನು. 3) 155ನೇ ಪಾನು. 4) 127, 128ನೇ ಪಾನು.

ನಿಗೆ ಫುಸಲಾಯಿಸಿ, ಅರೀಯನನ್ನು ಇವನ ಅಪ್ಪಣೆಯಿಂದ ಹಿಂದಕ್ಕೆ ಕರಿಸಿ, ತರುವಾಯ ಕ್ರಿ. ಶ. 336ನೇ ವರ್ಷ ಅವನ ಮುಖ್ಯ ಎದುರಾಳಿಯಾದ ಅಥನಸಿಯನಿಂದ ಅಧ್ಯಕ್ಷತೆ ತೆಗಿಸಿದರು. ಅದಲ್ಲದೆ ಎರಡು ನಾಲಿಗೆಯ ಆ ಅರೀಯನು ಆಗ ತನ್ನ ವಿಶ್ವಾಸದ ದ್ವ್ಯರ್ಥವುಳ್ಳದ್ದೊಂದು ಪ್ರಮಾಣ ರಚಿಸಿ, ಕೊನ್ಸ್ತಂತೀನೊಪೊಲಿಯಲ್ಲಿ[1] ಕೈಸರನಿಗೆ ಸಹ ತೋರಿಸಿ, ನಾನು ಅಪಬೋಧನೆಯವನಲ್ಲವೆಂತ, ಆಣೆ ಇಟ್ಟ ಮೇಲೆ ಕೊನ್ಸ್ತಂತೀನನು—ನೀನು ನಿಜ ವಿಶ್ವಾಸದವನಾಗಿದ್ದರೆ ನಿನ್ನ ಆಣೆ ಒಳ್ಳೇದು; ಆದರೆ ನಿನ್ನ ವಿಶ್ವಾಸಾರ್ಥವು ಪಾಷಂಡವಾಗಿದ್ದಲ್ಲಿ ಆಣೆ ಇಟ್ಟದ್ದಾಗಿದ್ದರೆ ಆ ಆಣೆಯ ಪ್ರಕಾರವೇ ದೇವರು ನಿನ್ನ ಕಾರ್ಯ ತೀರಿಸಲಿ! ಎಂದು, ಹೇಳಿ, ಅವನನ್ನು ಸಭೆಯಲ್ಲಿ ತಿರಿಗಿ ಶೇರಿಸ ಬೇಕೆಂತ, ಆಜ್ಞಾಪಿಸಿದನು. ಈ ಕಾರ್ಯಕ್ಕೆ ಆ ಪಟ್ಟವೇ ನೇಮಕವಾಯಿತು. ಅಂದು ಅಲೆಕ್ಸಂದರನೆಂಬವನೊಬ್ಬನು ಅದರ ಅಧ್ಯಕ್ಷನು; ಇವನು ಕೈಸರನ ಆ ನಿರ್ಣಯಕ್ಕೆ ಅಗದೀ ಅಸ್ತುಬಡದೆ, ಅವನಿಗೆ ನಾನಾ ಪ್ರಕಾರ ಬುದ್ಧಿ ಹೇಳಿದರೂ ಕೈಸರನು ಅವನನ್ನು ಬೆದರಿಸಿ ಬಿಟ್ಟನಷ್ಟೇ. ಹೀಗಿರಲಾಗಿ ಅಲೆಕ್ಸಂದರನು ಬೇರೆ ಸದ್ಭಕ್ತರೊಡನೆ ದೇವರೊಬ್ಬನ ಮೇಲೆಯೇ ಮನೋದೃಷ್ಟಿ ಇಟ್ಟು, ಬಹಳವಾಗಿ ಪ್ರಾರ್ಥಿಸುತ್ತಿರಲು, ಏನಾಯಿತಂದರೆ—ಅರೀಯನು ತನಗೆ ಸಭಾವಾಸಿತನ ತಿರಿಗಿ ಪ್ರಾಪ್ತವಾಗ ನೇಮಿಸಿರುವ ದಿವಸಕ್ಕೆ ಮುಂಚಿನ ಸಾಯಂಕಾಲದಲ್ಲಿ ತನ್ನ ಗೆಳೆಯರಲ್ಲಿ ಕೆಲವರ ಸಂಗಡ ಪಟ್ಣದೊಳಗಡ್ಡಾಡುತ್ತಿರಲು, ಅವನಿಗೆ ಬಹಿರ್ದೇಶದ ಕಾರ್ಯ ಹುಟ್ಟಿತು; ಆದ್ದರಿಂದ ಅವನು ಅಂಥಾದ್ದಕ್ಕೆ ಯೋಗ್ಯವಾದದೊಂದು ಸ್ಥಳಕ್ಕೆ ಹೋದನು. ಬಳಿಕ ಅವನ ಗೆಳೆಯರು—ಅವನು ಹೋಗಿ ಬಹಳ ಹೊತ್ತಾಯಿತು, ಯಾಕೆ ತಿರಿಗಿ ಬರುವದಿಲ್ಲ? ಎಂದು, ವಿಚಾರಿಸಲಾಗಿ, ಅವನು ಸತ್ತದ್ದನ್ನು ನೋಡಿದರು; ಹ್ಯಾಗಂದರೆ ಮಲದ ಸಂಗಡ ಅವನ ಕರುಳು ಸಹ ಹೊಂಟಿತ್ತು. ಅರೀಯನು ಕ್ರಿ. ಶ. 336ನೇದರಲ್ಲಿ ಆ ರೀತಿ ಅಳಿದಿದ್ದರೂ ಅವನ ಪಕ್ಷಕರು ಇನ್ನು 45 ವರುಷ (ಕ್ರಿ. ಶ. 381ನೇದರ ವರೆಗೆ) ದೊಡ್ಡ ಗದ್ದಲ ಮಾಡುತ್ತಾ, ಸಭೆಗಳ ಸಮಾಧಾನ ಕೆಡಿಸುತ್ತಾ ಬಂದರು. ಹೀಗಿರಲಿಕ್ಕೆ ಅಲೆಕ್ಸಂದರೀಯದ ಆ ಅಥನಸಿಯನು ಅವರ ಕುಯುಕ್ತಿಯಿಂದ ಇನ್ನೂ 9 ಸರ್ತಿ ತನ್ನ ಅಧ್ಯಕ್ಷತೆಯನ್ನೂ ಪಟ್ಣವನ್ನೂ ತಿರಿಗಿ ತಿರಿಗಿ ಬಿಟ್ಟು ಹೋಗ ಬೇಕಾಯಿತು; ಅವನು ಅಧ್ಯಕ್ಷನಾಗಿರುವ 46 ವರುಷಗಳೊಳಗೆ ಆ ಪ್ರಕಾರ ಆಗಿಂದಾಗ ಗಡಿ ದಾಟಿ ಹೋಗ ಬೇಕಾಗಿರುತ್ತಿದ್ದಲ್ಲಿ 20 ವರುಷ ಕಳೆದನು. ಅರೀಯಾನರೆಂಬ ಅರೀಯನ ಪಕ್ಷದವರು ಮುಖ್ಯವಾಗಿ ಪೂರ್ವ ದಿಕ್ಕಿನ ಸಭೆಗಳಲ್ಲಿ, ನೀಕೇನರೆಂಬ ನೀಕೇಯ ಪಟ್ಣದ ವಿಶ್ವಾಸಪ್ರಮಾಣದವರು ಅಥವಾ ಕಥೊಲಿಕರು[2] ಎನ್ನಿಸುವ

1) 182ನೇ ಪಾನು. 2) 181ನೇ ಪಾನು.

ವರು ಮುಖ್ಯವಾಗಿ ಪಶ್ಚಿಮ ದಿಕ್ಕಿನವುಗಳಲ್ಲಿ ಇರುತ್ತಿದ್ದರು. ಆದಾಗ್ಯೂ ಈ ದಿಕ್ಕಿನ ಸಭೆಗಳಲ್ಲಿ ಸಹ ಅರೀಯಾನರು ಇಲ್ಲದಿರಲಿಲ್ಲ[1]; ಒಂದು ದೃಷ್ಟಾಂತವೇನಂದರೆ—ರೋಮಪುರದಲ್ಲಿ ಕ್ರಿ. ಶ. 352ನೇ ವರುಷಕ್ಕೆ ಸಭಾಧ್ಯಕ್ಷನಾದ ಲೀಬೆರಿಯನೆಂಬವನು ನೀಕೇನನಾದ ಕಾರಣ ಅವರ ವೈಮನಸ್ಯದಿಂದ 3 ವರುಷದೀಚೆ ಉದ್ಯೋಗ ಹೋದವನಾಗಲು, ಅರೀಯನ ಪಕ್ಷವನ್ನು ಘಟ್ಟಿ ಹಿಡುಕೊಂಡಿರುವಂಥ 2ನೇ ಫೇಲಿಕ್ಸನೆಂಬವನು ಅವನ ಸ್ಥಳಕ್ಕೆ ಬಂದನು; ತರುವಾಯ ಲೀಬೆರಿಯನು ತನ್ನ ಕಥೊಲಿಕ ವಿಶ್ವಾಸ ಅಲ್ಲಗಳೆದು, ಫೇಲಿಕ್ಸನನ್ನು ತಪ್ಪಿಸಿ, ತಾನು ಮರಳಿ ಅಧ್ಯಕ್ಷತೆ ಹೊಂದಿ, 8 ವರುಷ ಕ್ರಿ. ಶ. 366ನೇದರ ವರೆಗೆ ಅದರಲ್ಲಿದ್ದನು.

ಕ್ರೈಸ್ತತ್ವವು ರಾಜ್ಯಮತವಾಗದಿದ್ದರೆ ಅರೀಯಾನತ್ವವೆಂಬ ಕಾಡುಬೆಂಕಿಯು ಅಥನಸಿಯ ಮೊದಲಾದ ಹೇರಳ ಮಂದಿ ಸದ್ಭಕ್ತರ ಮೂಲಕ ಶೀಘ್ರವಾಗಿ ನೊಂದು ಹೋಗುತ್ತಿತ್ತು; ಆದರೆ ಕ್ರೈಸ್ತ ಸಭೆಯ ಮೇಲ್ವಿಚಾರಣ ಆಕ್ರಮಿಸಿ ಕೊಂಡು ಕ್ರಿ. ಶ. 350ನೇ ವರ್ಷದಿಂದ 361ನೇದರ ತನಕ ಏಕ ಚಕ್ರವರ್ತಿಯಾಗಿರುತ್ತಿದ್ದ ಕೊನ್ಸ್ತಂತಿಯನೂ[2], ಕ್ರಿ. ಶ. 364ನೇದರಿಂದ 378ನೇದರ ತನಕ ಸಾಮ್ರಾಜ್ಯದ ಪೂರ್ವ ಭಾಗದ ಕೈಸರನಾಗಿರುತ್ತಿದ್ದ ವಲೆಂತನೂ[3], ಸುಮಾರು ಕ್ರಿ. ಶ. 374ನೇದರಿಂದ 390ನೇದರ ತನಕ ಅದರ ಪಶ್ಚಿಮ ಭಾಗವನ್ನು ಕೂಡಿ ಆಳುತ್ತಿದ್ದ 2ನೇ ವಲೆಂತೀನಿಯಾನನೂ ಇವನ ತಾಯಿಯಾದ ಯುಸ್ತೀನಳೂ[4] ಕುಹಕ ಅರೀಯಾನರಾದ್ದರಿಂದ ಅರೀಯಾನತ್ವವು ರಾಜರ ಮತ್ತು ಇವರ ಉಪಜೀವಿಗಳ ಬಲಾತ್ಕಾರದಿಂದ ಸೊಕ್ಕುವಂತಾಯಿತು.

ಕ್ರಿ. ಶ. 378ನೇದರಲ್ಲಿ ಥೆಯೊದೊಸಿಯನೆಂಬವನು ರೋವಿಸಾಯ ಸಾಮ್ರಾಜ್ಯದ ಮೂಡಣ ಭಾಗದ ಮೇಲೆ ಕೈಸರನಾದನು; ಅವನು ನೀಕೇನರ ಮಿತ್ರನು. ಕ್ರಿ. ಶ. 381ನೇದಕ್ಕೆ ಅವನು, ಅರೀಯಾನತ್ವದಿಂದ ಕ್ರೈಸ್ತರೊಳಗೆ ಹುಟ್ಟಿರುವ ಭೇದ ಪರಿಹರಿಸ ಬೇಕೆಂದು, ಕೊನ್ಸ್ತಂತೀನೊಪೊಲಿಗೆ 2ನೇ ಸರ್ವಸಭಾಸಂಘವನ್ನು ಶೇರಿಸಿದನು; ಅದಕ್ಕೆ 150 ಮಂದಿ ಅಧ್ಯಕ್ಷರು ಬಂದರು. ಅದರಲ್ಲಿ ಮುಖ್ಯವಾಗಿ ನಾಜಿಯಂಜು ಪಟ್ಣದ ಗ್ರೆಗೋರ, ನೂಸ್ಸ ಪಟ್ಣದ ಗ್ರೆಗೋರ ಎಂಬವರಿಬ್ಬರು ಅಧ್ಯಕ್ಷರು[5], ನೀಕೇನರ ಹಿತಕ್ಕೆ ಮಾತಾಡಿದರು. ಆಗ, ಕ್ರಿಸ್ತದ್ರೋಹಮಯವಾದ ಅರೀಯಾನತ್ವವು ಪಾಷಂಡವೆಂದು, ಖಂಡಿತವಾಗಿ ಪುನರ್ವ್ಯವಸ್ಥೆಯಾಯಿತು. ಅದು ಹೊರ್ತಾಗಿ ಅರೀಯಾನರು ಅನಾದಿದೇವರಾದ ಪರಿಶುದ್ಧಾತ್ಮವನ್ನು ಕುರಿತು ಹೇಳ ತೊಡಗಿದ್ದ ಅಪಬೋಧನೆಯ ಕಿತ್ತು ಹಾಕಲಾಯಿತು; ಆ ಅಪಬೋಧೆಯು

1) 28ನೇ ಸಂಧಿ ಸರಿ ನೋಡು. 2) 182ನೇ ಪಾನು; 24ನೇ ಸಂಧಿ. 3) 25ನೇ ಸಂಧಿ. 4) 28ನೇ ಸಂಧಿ. 5) 155ನೇ ಪಾನು.

ಏನಂದರೆ—ಪರಿಶುದ್ಧಾತ್ಮವು ಅನಾದಿಪುರುಷನಾದ ದೇವರಲ್ಲ, ದೇವಪುತ್ರನಿಂದ ನಿರ್ಮಿತವಾದ ಪ್ರಥಮ ವಸ್ತುವೇ.—ಅದಲ್ಲದೆ ಆ ಸಂಘದವರು ನೀಕೇನ ವಿಶ್ವಾಸಪ್ರಮಾಣದರ್ಶನದ್ದೊಂದು ವಿವರಣ ರಚಿಸಿದರು; ಅದು ನೀಕೇನೊ—ಕೊನ್ಸ್ತಂತೀನೊಪೊಲಿತಾನ ವಿಶ್ವಾಸಪ್ರಮಾಣವೆಂಬ ಹೆಸರು ಹೊಂದಿತು. ಅಂದು, ಅರೀಯಾನರು ಇನ್ನು ಮುಂದೆ ಪಟ್ಣಗಳಲ್ಲಿ ತಮ್ಮ ಕುಮತದ ದೇವಾರಾಧನೆ ನಡಿಸ ಬಾರದೆಂದು, ರಾಜಾಜ್ಞೆಯು ಸಹ ಹೊರಟಿತು. ಹೀಗಿರಲಿಕ್ಕೆ ಅರೀಯಾನತ್ವವು ರೋಮಿಾಯ ಸಾಮ್ರಾಜ್ಯದೊಳಗೆ ಅಡಗಲಾರಂಭಿಸಿತು; ಕಾಲಗತಿಯಲ್ಲಿ ಅರೀಯಾನರು ಅದರೊಳಗಿನ ತಮ್ಮ ದೇವಾಲಯಗಳನ್ನೆಲ್ಲಾ ನೀಕೇನರಿಗೆ ಕೊಟ್ಟು ಬಿಡ ಬೇಕಾಯಿತು. ಅರೀಯಾನತ್ವವು ಗೆರ್ಮಾನರ ವಂಶಜರಾದ ಪಶ್ಚಿಮಗೊಥರಲ್ಲಿಯೂ ಪೂರ್ವಗೊಥರಲ್ಲಿಯೂ[1] ವಂದಲರಲ್ಲಿಯೂ ಸ್ವೇವರದೊಂದು ಪಾಲಿನಲ್ಲಿಯೂ[2] ಲೊಂಗೊಬರ್ದರಲ್ಲಿಯೂ ಹೆರುಲರಲ್ಲಿಯೂ ಬುರ್ಗುಂದಿಯರಲ್ಲಿಯೂ ಮಾತ್ರ ಇನ್ನು ಸುಮಾರು 150 ವರುಷ ಪ್ರಬಲವಾಗಿರುತ್ತಿತ್ತು; ಆದರೆ ಆ ಕಾಲದಲ್ಲಿ ಹೆಚ್ಚು ಕಡಿಮೆ ರಣಕಾರ್ಯವಿರುವ ಇವರೆಲ್ಲರಿಗೂ ಅದರ ಕುಹಕ ಇಂಗಿತವನ್ನೂ ಭಕ್ತಿಮಾರ್ಗವನ್ನೂ ವಿಚಾರಿಸಿ ತಿಳುಕೊಳ್ಳಲಿಕ್ಕೆ ಬಹಳ ಅನುವು ದೊರಕಲಿಲ್ಲ.

---

## 23. ಸಾಸಾನಿದ ಸಮ್ರಾಜರಿಂದ ಕ್ರೈಸ್ತರಿಗೆ ಹಿಂಸೆಯಾದದ್ದು.

ಸಾಸಾನಿದ ಅಂದರೆ ಹೊಸ ಪಾರ್ಶಿ ಸಾಮ್ರಾಜ್ಯದಲ್ಲಿ ಕ್ರೈಸ್ತತ್ವವು ಅಪೊಸ್ತಲರಿಂದ ಸ್ಥಾಪಿತವಾಯಿತು[3]. ಅಲ್ಲಿಯ ಕ್ರೈಸ್ತರೂ ಸುರಿಯ ದೇಶದ ಕ್ರೈಸ್ತರೂ[4] ಬಹಳ ಅನ್ಯೋನ್ಯಪ್ರೀತಿಯಿಂದಿರುತ್ತಿದ್ದರು. ಪಾರ್ಶಿ ಕ್ರೈಸ್ತರಿಗೆ ಪರಿಶುದ್ಧ ಬರಹದ ಒಳ್ಳೇ ಸ್ವಭಾಷಾಂತರವಿರಲಿಲ್ಲ; ಆದ್ದರಿಂದ ಅವರ ಬೋಧಕರು ದೇವಾಲಯಗಳಲ್ಲಿ ಸುರಿಯಕ ಭಾಷಾಂತರ ಓದಿ, ಟೀಕೆ ಮಾಡುತ್ತಾ ಬಂದರು. ಈ ಭಾಷಾಂತರಕ್ಕೆ, ಪೆಷಿತೊ ಅಂದರೆ ಶುದ್ಧವಾದ್ದೆಂತ, ಹೆಸರು[5]. 4ನೇ ಕ್ರಿಸ್ತಶತಮಾನಕ್ಕೆ ಆ ಪಾರ್ಶಿ ಕ್ರೈಸ್ತರು ಬಬೆಲು ದೇಶದ ಪಟ್ಣಗಳಾದ ಸಲ್ಯುಕೀಯ, ಕ್ತೇಸಿಫೋನ್ ಎಂಬಲ್ಲಿ[6] ವಾಸಿಸುತ್ತಿರುವ ತಮ್ಮ ಮುಖ್ಯ ಅಧ್ಯಕ್ಷರ ಪರಿಪಾಲನದೊಳಗೆ ಅಭಿವೃದ್ಧಿಯಾಗಿದ್ದರು. ಹಿಂದು ದೇಶದ ಕ್ರೈಸ್ತರು ಸಹ ಆ ಅಧ್ಯಕ್ಷರ ಅಧೀನತೆಯಲ್ಲಿರುವರು[7]. ಕ್ರಿ. ಶ. 310ನೇ ವರುಷದಲ್ಲಿ 2ನೇ ಶಾಹ್‌ಪೂರನೆಂಬವನು ಪಾರ್ಶಿ ಸ

---

1) 180ನೇ, 181ನೇ ಪಾನು. 2) 114ನೇ ಪಾನು. 3) 59ನೇ, 73ನೇ, 74ನೇ, 78ನೇ, 80ನೇ, 116ನೇ, 122ನೇ, 171ನೇ, 181ನೇ ಪಾನುಗಳು. 4) 35ನೇ, 36ನೇ ಪಾನು. 5) 172ನೇ ಪಾನು. 6) 39ನೇ, 73ನೇ, 74ನೇ, 75ನೇ ಪಾನು. 7) 82ನೇ ಪಾನು.

ಮ್ರಾಜನಾದನು; ಅವನು ಪಾರ್ಶಿಯರ ಪೂರ್ವ ಮತದಲ್ಲಿ ಅತ್ಯಭಿಮಾನವುಳ್ಳವನು[1]. ಅವನು ಆಳುತ್ತಿರುವಷ್ಟರಲ್ಲಿ ದೊಡ್ಡ ಕೊನ್ಸ್ತಂತೀನ ಕೈಸರನು, ಕ್ರೈಸ್ತತ್ವವು ಸ್ವಂತ ಸಾಮ್ರಾಜ್ಯದ ಮತವೆಂತ, ಆಜ್ಞಾಪಿಸಿದ್ದಲ್ಲದೆ ಆ ಶಾಹ್‍ಪೂರನಿಗೆ ಒಂದು ಕಾಗದ ಬರೆದು ಕಳುಹಿಸಿ, ನಿಮ್ಮ ಕೈಯ ಕೆಳಗಿನ ಕ್ರೈಸ್ತರನ್ನು ಚಂದಾಗಿ ಪರಾಮರಿಸಿರೆಂತ, ಅವನನ್ನು ಬೇಡಿ ಕೊಂಡನು. ಅದು ಕಾರಣ ಪಾರ್ಶಿ ಕ್ರೈಸ್ತರಿಗೂ ರೋಮಿಾಯ ಸಾಮ್ರಾಜ್ಯದ ಕ್ರೈಸ್ತರಿಗೂ ಇದ್ದ ಬಳಿಕೆ ಹೆಚ್ಚಿತು. ಶಾಹ್‍ಪೂರನ ಪೂಜಾರಿಗಳು ಇದನ್ನು ಕಂಡು, ತಮ್ಮ ಹಾಗೆ ಕ್ರೈಸ್ತರ ಹಗೆಗಾರರಾದ ಯೆಹೂದ್ಯರ[2] ಸಹಿತ ಸಮ್ರಾಜನ ಸನ್ನಿಧಿಗೆ ಗಮಿಸಿ, ಕ್ರೈಸ್ತರು ಸಾಮ್ರಾಜ್ಯದ ಶತ್ರುಗಳಾದ ರೋಮಿಾಯ ಕೈಸರರಿಗೆ ಒಳಸಂಚು ಕೊಡುವವರೆಂದು, ಕ್ರೈಸ್ತರ ಮೇಲೆ ಚಾಡಿ ಹೇಳಿದರು. ಅಂದಿನಿಂದ ಶಾಹ್‍ಪೂರನು ಕ್ರೈಸ್ತರಿಗೆ ಸಂಶಯ ಪಟ್ಟಿರುವನು. ತರುವಾಯ ಕ್ರಿ. ಶ. 343ನೇ ವರುಷದಲ್ಲಿ ಕೊನ್ಸ್ತಂತಿಯನೆಂಬ ರೋಮಿಾಯ ಕೈಸರನಿಗೂ[3] ಶಾಹ್‍ಪೂರನಿಗೂ ಯುದ್ಧ ಹತ್ತಲಾಗಿ, ಇವನು ಕ್ರೈಸ್ತರನ್ನು ಹಿಂಸಿಸುವವನಾದನು; ಕ್ರೈಸ್ತರು ಪಾರ್ಶಿ ದೇವತೆಗಳಿಗೆ ಪೂಜೆ ಮಾಡಲೊಲ್ಲವೆಂದರೆ ಅಮಿತ ತೆರಿಗೆ ಕೊಡಬೇಕೆಂದು, ರಾಜಾಜ್ಞೆಯು ಹೊರಟಿತು. ಆಗ ಸಿಮೆಯೋನನೆಂಬವನು ಪಾರ್ಶಿ ಕ್ರೈಸ್ತರ ಮುಖ್ಯಾಧ್ಯಕ್ಷನು. ಆ ತೆರಿಗೆಯನ್ನು ನೀನು ಕೂಡಿಸಿ ಕೊಂಡು ಬಾ! ಎಂತ, ಶಾಹ್‍ಪೂರನು ಅವನಿಗಪ್ಪಣೆ ಮಾಡಿದನು. ಸಿಮೆಯೋನನು ಅವನಿಗೆ ಒಂದು ಪತ್ರದ ಮುಖಾಂತರದಿಂದ ತಕ್ಕ ಬುದ್ಧಿಯನ್ನು ವಿನಯವಾಗಿ ತಿಳಿಸಿದನು; ಆದರೂ ಆ ರಾಯನು ಬೇರೆ ಮನಸ್ಸಿನವನಾಗದ್ದಲ್ಲದೆ ಹೆಚ್ಚು ಶಿಟ್ಟುಳ್ಳವನಾಗಿ, ಪ್ರಕಟಿಸಿದ ಆಜ್ಞೆಯು ಏನಂದರೆ—ಎಲ್ಲಾ ಕ್ರೈಸ್ತ ದೇವಾಲಯಗಳನ್ನು ಕೆಡಿಸ ಬೇಕು, ಎಲ್ಲಾ ಅಧ್ಯಕ್ಷರನ್ನೂ ಹಿರಿಯರನ್ನೂ ಸಭೆಯ ಸೇವಕರನ್ನೂ ಕೊಂದು ಬಿಡ ಬೇಕು.—ಅವನು ಸಿಮೆಯೋನನನ್ನು ತನ್ನ ಹತ್ತರ ಕರತರಲಿಕ್ಕೆ ಹೇಳಿದಾಗ ಅವನನ್ನು ಬೇಡಿ ಹಾಕಿ ತಂದರು. ಅವನು ಬಂದು, ದೇಶಪದ್ಧತಿಯ ಬಿಟ್ಟು ಸಾಷ್ಟಾಂಗ ವೆರಗದಿರಲು, ರಾಯನು, ನೀನು ನನಗೆ ಅಡ್ಡ ಬೀಳಲೊಲ್ಲೆನೆಂದರೆ ಹ್ಯಾಗೂ ಸೂರ್ಯದೇವತೆಗೆ ಅಡ್ಡ ಬೀಳೆಂದು, ಬೆಸಸುವಲ್ಲಿ ಸಿಮೆಯೋನನು ಅಂಜದೆ—ನಿರ್ಜೀವವಸ್ತುವಾದ ಸೂರ್ಯನಿಗೆ ಪೂಜಿಸುವದಕ್ಕಿಂತ ಹೆಚ್ಚಾಗಿ ಬುದ್ಧೀಂದ್ರಿಯವುಳ್ಳ ನಿಮಗೆ ಪೂಜಿಸ್ಯೇನು! ಎಂದು, ಉತ್ತರ ಕೊಟ್ಟನು. ಆ ಮಾತಿಗೆ ಶಾಹ್‍ಪೂರನು ರೋಷಮಯನಾಗಿ, ಅವನನ್ನು ಶೆರೆಮನೆಗೆ ವೈಯಲಾಜ್ಞಾಪಿಸಲಿಕ್ಕೆ, ಅವನನ್ನಲ್ಲಿಗೆ ವೈಯುತ್ತಿರುವ ದಾರಿಯಲ್ಲಿ ಗುಹ್ಸ್ಯತಾಜಾದನು ಎಂಬ ಅರಮನೆಯ ದೊಡ್ಡ ಉದ್ಯೋಗಸ್ಥನು ಅವನನ್ನೆದುರ್ಗೊಂಡು ಬಂದನು; ಇವನು ಕ್ರೈಸ್ತನಾಗಿದ್ದರೂ ರಾ

1) 171ನೇ ಪಾನು ಸರಿ ನೋಡು. 2) 135ನೇ, 145ನೇ ಪಾನು. 3) 183ನೇ, 188ನೇ ಪಾನು.

ಯನ ಬೇಡುವಿಕೆ ಬೆದರಿಕೆಗಳಿಂದ ಪಾರ್ಶಿಯರ ಸೂರ್ಯದೇವತೆಗೆ ಪೂಜೆ ಮಾಡಿದಂಥವನು. ಗುಷ್ಟ್ಯತಾಜಾದನು ಸಿಮೆಯೋನನ ಮುಖದಲ್ಲಿರುವ ಧೈರ್ಯ ಕಳೆ ನೋಡಿ, ಬೆರಗಾಗಿ, ಅವನಿಗೆ ಮೊಣಕಾಲೂರಿ ವಂದಿಸಿದನು. ಆದರೆ ಸಿಮೆಯೋನನು ಅವನಲ್ಲಿ ಪಶ್ಚಾತ್ತಾಪ ಹುಟ್ಟಿಸುವದಕ್ಕಾಗಿ ಅವನ ಮೇಲೆ ದೃಷ್ಟಿ ಇಡದಲೇ ಮುಂದರಿಸಿದನು. ಆಗ ಆ ಉದ್ಯೋಗಸ್ಥನು ಕಣ್ಣೀರು ಬಿಡುವವನಾಗಿ, ಹಲುಬಿ ಕೊಂಡದ್ದೇನಂದರೆ—ಅಕಟಾ, ನಿರ್ಭಾಗ್ಯವಂತನಾದೆನು! ಸಿಮೆಯೋನನು ನನಗೆ ಬೆನ್ನು ಹಾಕಿದ್ದರಿಂದ ನನಗಾದ ನೋವು ಇಷ್ಟು ದೊಡ್ಡದಾದ ಮೇಲೆ ನಾನು ಅಲ್ಲಗಳೆದ ಕ್ರಿಸ್ತನು ಇನ್ನು ಮುಂದೆ ನನಗೆ ಬೆನ್ನು ಹಾಕುವಲ್ಲಿ ದೇವರ ಕೋಪದಿಂದ ನನಗೆಷ್ಟೋ ನೋವಾಗುವದು!—ಈ ಪ್ರಕಾರ ಚಿಂತಾಕ್ರಾಂತನಾಗಿ, ಹೋಗಿ, ಅರಮನೆಯೊಳಗೆ ಪ್ರವೇಶಿಸಿ, ಶಾಹ್‌ಪೂರನಿಗೆ, ತಾನು ಸೂರ್ಯನಿಗೆ ಪೂಜಿಸಿದ್ದು ಮಹಾ ಪಾತಕವಾಯಿತೆಂತ, ಅರುಹಲಾಗಿ, ಇವನು, ಇಂಥಾ ವ್ಯರ್ಥ ಆಲೋಚನೆಗಳನ್ನು ಹಾರಿಸಿ ಬಿಡೆಂತ, ಹೇಳಿದ್ದಕ್ಕೆ ಆ ಉದ್ಯೋಗಸ್ಥನು ಹೇಳಿದ್ದೇನು—ನನಗೆ ಬಹಳ ದುಃಖ ಬಂದಿರುವ ಸೂರ್ಯಪೂಜೆ ಎಂಬಂಥ ದುಷ್ಟತ್ವವನ್ನು ನಾನು ಇನ್ನು ಮೇಲೆ ತಿರಿಗಿ ನಡಿಸಲಿಕ್ಕಿಲ್ಲವು; ಇದಕ್ಕೆ ಭೂಪರಲೋಕಗಳ ಕರ್ತನೇ ಸಾಕ್ಷಿ! ನನ್ನ ಸ್ವಾಮಿಯೇ, ನಾನು ಕ್ರೈಸ್ತನು; ಆಗಿನಂತೆ ಮನುಷ್ಯರನ್ನು ಮೆಚ್ಚಿಸುವದಕ್ಕೋಸ್ಕರ ನಾನು ಇಂದಿನಿಂದ ಎಂದೆಂದಿಗೂ ದೇವರಿಗೆ ವಿರುದ್ಧವಾದ್ದನ್ನು ಮರಳಿ ಗೈಯಲಿಕ್ಕಿಲ್ಲವು!—ತದನಂತರ ಆ ರಾಯನು ಅವನನ್ನು ಶೆರೆಯಲ್ಲಿಡಿಸಿ, ಅವನನ್ನು ಕೊಲ್ಲ ಬೇಕೆಂದು, ಆಜ್ಞಾಪಿಸಿದನು. ಗುಷ್ಟ್ಯತಾಜಾದನು ಅದು ತಿಳಿದು—ರಾಯನೇ, ನನಗೆ ಇನ್ನು ಒಂದೇ ದಯೆ ಮಾಡಿರಿ! ಗುಷ್ಟ್ಯತಾಜಾದನು ಬೇರೇನೂ ಅಪರಾಧ ಮಾಡದಿದ್ದು ತನ್ನ ಕ್ರೈಸ್ತ ವಿಶ್ವಾಸಕ್ಕೋಸ್ಕರ ಮಾತ್ರ ಸಾಯ ಬೇಕೆಂತ, ಡಂಗುರ ಹೊಡೆಸಿರಿ! ಎಂದು, ಅವನ ಬಳಿಗೆ ಕಳುಹಿಸಿ, ಬಿನ್ನವಿಸಿದನು. ಆ ರಾಯನು, ನನ್ನ ಶ್ರೇಷ್ಠ ಉದ್ಯೋಗಸ್ಥನು ತನ್ನ ವಿಶ್ವಾಸ ಒಂದಕ್ಕಾಗಿಯೇ ಸಾಯ ಬೇಕಾದದು ಗೊತ್ತಾದರೆ ಬೇರೆ ಕ್ರೈಸ್ತರು ಹ್ಯಾಗಾದರೂ ಅಂಥ ವಿಶ್ವಾಸ ಬಿಟ್ಟು ಬಿಡುವರೆಂತ, ಆಲೋಚಿಸಿ ಕೊಂಡು, ಅ ವಿನಂತಿಯ ಪ್ರಕಾರ ಮಾಡಿದನು. ಬಳಿಕಲೇ ಗುಷ್ಟ್ಯತಾಜಾದನ ತಲೆ ಕಡೆದರು. ಸಿಮೆಯೋನನು ಶೆರೆಮನೆಯೊಳಗೆ, ಗುಷ್ಟ್ಯತಾಜಾದನು ರಕ್ತಸಾಕ್ಷಿಯಾಗಿ ತೀರಿದನೆಂತ, ಕೇಳಿ, ದೇವರನ್ನು ಬಹಳ ಕೊಂಡಾಡಿ, ತನಗೆ ಅದೇ ಗತಿ ಬೇಕೆಂದು, ಅವನನ್ನು ಬೇಡಿ ಕೊಂಡನು. ಮರುದಿವಸ ಸಿಮೆಯೋನನನ್ನು ರಾಯನ ಹತ್ತರ ವೈದಾಗ ಇವನು—ಮರಣವು ಬಹು ಮಾನವುಳ್ಳ ಜೀವನಕ್ಕಿಂತ ಒಳ್ಳೇದೇ! ಎಂಬ ಹುಚ್ಚುತನವನ್ನಿನ್ನೂ ಬಿಡಲಿಲ್ಲವೋ? ಸೂರ್ಯನಿಗೆ ಪೂಜಿಸು! ಒಂದು ಸರ್ತಿಯಾದರೂ ಪೂಜಿಸಿದರೆ ನಿನಗೆ ನಿ

ತ್ಯಕ್ಕೂ ಬಿಡುಗಡೆಯಾಗುವದು! ಎಂತ, ಒದರಲು, ಸಿಮೆಯೋನನು ಧೈರ್ಯ ವಾಗಿ ಉತ್ತರ ಕೊಟ್ಟದ್ದೇನಂದರೆ—ನನ್ನ ದೇವರಿಗೆ ವಿರೋಧವಾದಂಥ ಮತ್ತು ನನ್ನ ಕ್ರೈಸ್ತ ಸಹೋದರರಿಗೆ ಆತಂಕ ಹಾಕುವಂಥ ಆ ಪಾಪಕ್ಕೆ ದೇವರು ತಾನು ನನ್ನನ್ನು ತಪ್ಪಿಸಲಿ!—ಈ ಉತ್ತರದ ದೆಸೆಯಿಂದ, ಸಿಮೆಯೋನನೆಂಬ ಆ ಮುದುಕನ ತಲೆ ಮಾತ್ರವಲ್ಲದೆ 5 ಮಂದಿ ಅಧ್ಯಕ್ಷರಿರುವ ಬೇರೆ 100 ಮಂದಿ ಸಭೋದ್ಯೋಗಿಗಳದು ಸಹ ಕಡೆಯ ಬೇಕೆಂದು, ಅಪ್ಪಣೆಯಾಯಿತು. ಮುಖ್ಯ ನ್ಯಾಯಾಧಿಪತಿಯು ಆ ಸಾಕ್ಷಿಗಳ ಸಮೂಹದ ಮುಂದೆ, ಸೂರ್ಯನಿಗಾರಾಧಿಸಿದರೆ ನಿಮ್ಮನ್ನು ಬಿಡಿಸುವೆನೆಂತ, ಹೇಳೋಣ, ಅವರೆಲ್ಲರೂ ಒಂದೇ ಮನಸ್ಸಾಗಿ—ನಿಮ್ಮ ಪೀಡೆಗಳನ್ನು ತಾಳ್ಮೆಯಿಂದ ಸಹಿಸುವದಕ್ಕೆ ದೇವರು ನಮ್ಮನ್ನು ಬಲ ಪಡಿಸುವನು; ನಿಜನೂ ನಿತ್ಯನೂ ಆದ ದೇವರನ್ನು ನಾವು ಎಂದಿಗೂ ಅಗಲಲಿಕ್ಕಿಲ್ಲವು! ಎಂತ, ನಿವೇದಿಸಿದರು. ಆ ಮೇಲೆ ಮಾರಕರು ಸಿಮೆಯೋನನನ್ನು ಕಡೆಗಿಟ್ಟು, ಅವನು ನೋಡುವಲ್ಲಿ ಅವನ ಸಂಗಡಿಗರ ರಕ್ತ ಚೆಲ್ಲುವವರಾದರು. ಹನನೀಯನೆಂಬ ಒಬ್ಬ ಬೋಧಕನ ಸರ್ತಿ ಬಂದಾಗ ಮಾರಕರು ಅವನ ವಸ್ತ್ರ ತೆಗೆದು, ಅವನನ್ನು ಕಟ್ಟಿ, ಹೀಗೆ ಮರಣದ ಪೆಟ್ಟು ಹಾಕಲಿಕ್ಕೆ ಒದಗಿಸಲು, ಅವನನ್ನು ಭಯ ಹಿಡಿಯಿತು. ಫೂಸಿಕನೆಂಬವನೊಬ್ಬ ದೊಡ್ಡ ರಾಜೋದ್ಯೋಗವಿರುವ ಕ್ರೈಸ್ತನು ಅವನ ಮನೋಭ್ರಮಣ ನೋಡುತ್ತಲೇ ಅವನ ಸಮಿಾಪಕ್ಕೆ ಓಡಿ ಬಂದು—ಹನನೀಯನೇ, ಕಣ್ಣು ಮುಚ್ಚಿಕೋ! ಇನ್ನೊಂದು ಕ್ಷಣದ ಮೇಲೆಯೇ ಯೇಸು ಕ್ರಿಸ್ತನ ದಿವ್ಯ ಬೆಳಕನ್ನು ದೃಷ್ಟಿಸುವಿ! ಎಂತ, ಧೈರ್ಯ ಕೊಟ್ಟ ಹಿಂದೆ ಹನನೀಯನು ಪ್ರಮುದಿತನಾಗಿ, ಈ ಲೋಕವನ್ನು ಬಿಟ್ಟು, ಅನಂತ ತೇಜಸ್ಸಿಗೆ ಹೋದನು. ಕಡೆಯಲ್ಲಿ ಸಿಮೆಯೋನನ ಸರ್ತಿ ಬಂತು; ಅವನು ಏನೂ ಮಾತಾಡದೆ ತನ್ನ ತಲೆಯನ್ನು ಕತ್ತಿಗೊಡ್ಡಿ, ತನ್ನ ಕರ್ತನ ಸಾಮಿಾಪ್ಯ ಪಡೆದನು. ಆ 101 ಮಂದಿ ಸಾಕ್ಷಿಗಳೆಲ್ಲರೂ ಹತರಾದನಂತರ ಮಾರಕರು ಆ ಫೂಸಿಕನನ್ನು ಹಿಡು ಕೊಂಡು, ಅರಮನೆಗೆ ಹೋದರು. ರಾಯನು ಅವನಾಡಿದ ಮಾತಿನ ಸುದ್ದಿ ಕೇಳಿ, ಅವನಿಗೆ—ಸ್ವಲ್ಪ ಕಾಲದ ಮುಂಚೆ ಮಾತ್ರ ನನ್ನ ದಯೆಯಿಂದ ದೊಡ್ಡ ಉದ್ಯೋಗ ಸಿಕ್ಕಿದ ನೀನಾದರೂ ಕೃತಘ್ನನಾದಿಯೋ? ಎಂದು, ಹೇಳಿ, ಅವನು ಕೊಡುವ ಒಳ್ಳೇ ಸಾಕ್ಷಿಗೆ ಕೋಪಿಷ್ಠನಾಗಿ, ಅವನ ನಾಲಿಗೆ ಕೀಳಿಸಿ, ಅವನ ಕೊರಳನ್ನು ಮೆಲ್ಲ ಮೆಲ್ಲಗೆ ಕೊಯಿಸಿದನು; ಬಳಿಕ ಅವನ ಮಗಳ ತಲೆ ಕಡೆಸಿದನು.

ಮರುವರುಷಕ್ಕೆ ಶಾಹ್‌ಪೂರನು, ಕ್ರೈಸ್ತ ಸಭೋದ್ಯೋಗಸ್ಥರನ್ನಲ್ಲದೆ ಸಭ್ಯರೆಲ್ಲರನ್ನು ಸಹ ಕೊಲ್ಲ ಬೇಕೆಂದು, ಒಂದು ಹೊಸ ಆಜ್ಞೆ ಪ್ರಕಟಿಸಿದನು; ಆಗ ಸಾವಿರಾರು ಮಂದಿಯು ರಕ್ತಸಾಕ್ಷಿಗಳಾದರು. ಶಾಹ್‌ಪೂರನಿಗೆ ಬಹಳ ಇಷ್ಟನಾದ

ಆಜಾದನು ಎಂಬ ದೊಡ್ಡ ರಾಜೋದ್ಯೋಗವುಳ್ಳವನೊಬ್ಬ ಕ್ರೈಸ್ತನು ಸಹ ಆ ಆಜ್ಞೆಯ ಮೇರೆಗೆ ತನ್ನ ವಿಶ್ವಾಸಕ್ಕೋಸ್ಕರ ವಧಿತನಾದನು; ಆದರೆ ರಾಜನು ಅವನ ಕೊಲೆಗೆ ಬಹು ಕರಕರೆ ಪಟ್ಟು, ಇನ್ನು ಮುಂದೆ ಸಭ್ಯರಿಗಲ್ಲ ಸಭೋದ್ಯೋಗಸ್ಥರಿಗೂ ಕ್ರೈಸ್ತ ಮತವಾಸಿಗಳೆಂಬವರಿಗೂ[1] ಮಾತ್ರ ಪ್ರಾಣಹಿಂಸೆ ಮಾಡ ಬೇಕೆಂದು, ನೇಮಿಸಿದನು. ಹೀಗೆ ಆಜಾದನ ಮರಣದಿಂದ ಅನೇಕ ಕ್ರೈಸ್ತರ ಜೀವವು ಉಳಿಯುವ ಹಾಗಾಯಿತು. ಆ ಸಮಯ ಶಾಹ್‌ಪೂರನ ರಾಣಿಯು ಪ್ರಚಂಡ ರೋಗದಲ್ಲಿ ಬೀಳಲು, ಅವಳ ಸೇವಕರಾದ ಕೆಲವು ಮಂದಿ ಯೆಹೂದ್ಯರು[2]—ರಕ್ತಸಾಕ್ಷಿಯಾದ ಆ ಸಿಮೆಯೋನನ ತಂಗಿಯು ತನ್ನ ಅಂಣನ ಕೊಲೆಯಿಂದ ಕೋಪಿಷ್ಠಳಾಗಿ, ಮಂತ್ರಗಳ ಬಲದಿಂದ ನಿಮ್ಮ ರೋಗಕ್ಕೆ ಕಾರಣವಾಗಿದ್ದಾಳೆಂತ, ನೆವನ ಹೇಳಿದರು. ಅದು ನಿಮಿತ್ತ ಸಿಮೆಯೋನನ ಆ ತಂಗಿಯಾದ ಥರ್ಬಳೆಂಬವಳನ್ನೂ ಅವನ ಮತ್ತೊಬ್ಬ ಸಹೋದರಿಯಾದ ಒಬ್ಬ ವಿಧವೆಯನ್ನೂ ಥರ್ಬಳ ದಾಸಿಯನ್ನೂ ನ್ಯಾಯಸ್ಥಾನಕ್ಕೆಳಕೊಂಡು ಬಂದು, ಆ ಕಠಿಣ ಅಪರಾಧವನ್ನು ಅವರ ಮೇಲೆ ಸ್ಥಾಪಿಸಲಿಕ್ಕೆ ಒದ್ದಾಡುತ್ತಿರಲು, ಥರ್ಬಳು ಅಂದದ್ದೇನು—ಮಂತ್ರ ಮಾಟಗಳನ್ನು ಮಾಡುವದು ದೇವರ ನ್ಯಾಯಪ್ರಮಾಣಕ್ಕೆ ವಿರೋಧವಾದದ್ದೇ; ಅದರ ಹೊರ್ತು, ಮುನಿಯುವದು ಕ್ರೈಸ್ತರಿಗೆ ಹ್ಯಾಗೂ ತಕ್ಕದ್ದಲ್ಲ; ಆದರೆ ನಮ್ಮ ಸಹೋದರನಾದ ಸಿಮೆಯೋನನು ಇಹದ ಅನಿತ್ಯ ಸುಖದಿಂದ ನಿತ್ಯ ಸುಭಾಗ್ಯತ್ವಕ್ಕೆ ಹೋದ ಈ ಪಕ್ಷದಲ್ಲಿ ನಾವು ಹಗೆ ಗೊಳ್ಳುವದು ಪೂರಾ ಅಸಾಧ್ಯವೇ, ಸರಿ!—ವಿಚಾರಣೆಯು ತೀರಿದ ಮೇಲೆ ಆ ಮೂವರನ್ನು ಶೆರೆಮನೆಗೆ ಹಾಕಿದರು. ಥರ್ಬಳು ಬಹಳ ರೂಪವತಿಯಾದ್ದರಿಂದ ವಿಚಾರಕರಲ್ಲೊಬ್ಬನು ಅವಳಿಗೆ ಮನ ಸೋತು ಹೋಗಿದ್ದನು. ಹೀಗಿರಲಿಕ್ಕವನು ಅವಳ ಹತ್ತರ ಒಬ್ಬ ಆಳನ್ನು ಕಳುಹಿಸಿ, ನೀನು ನನ್ನ ಇಚ್ಛೆಗೊಳಗಾದರೆ ನಿನ್ನನ್ನು ಜೀವದಿಂದುಳಿಸಲಿಕ್ಕೆ ರಾಣಿಯನ್ನು ಒಡಂಬಡಿಸುವೆನೆಂತ, ಹೇಳಿಸಲಾಗಿ, ಥರ್ಬಳು—ನಾನು ಕ್ರಿಸ್ತನವಳೇ! ಇವನ ವಶಕ್ಕೆ ನನ್ನನ್ನು ಒಪ್ಪಿಸಿ ಕೊಟ್ಟಿದ್ದೇನೆ; ನಾನು ಮರಣಕ್ಕಂಜುವದಿಲ್ಲ, ಯಾಕಂದರೆ ಅದು ಒದಗುವ ದಿವಸವೇ ನಾನು ನನ್ನ ದಿವ್ಯ ಪತಿಯಾದ ಕ್ರಿಸ್ತನ ಪೂರ್ಣ ಐಕ್ಯದಲ್ಲಿ ಶೇರಿ, ಅಲ್ಲಿಗೆ ಹೋಗಿರುವ ನನ್ನ ಸಹೋದರನ ಸಂಗಡ ಅಮಿತ ಶಾಂತಿ ಅನುಭವಿಸುವೆನು! ಎಂದು, ಅವನಿಗೆ ಪ್ರತ್ಯುತ್ತರ ಕಳುಹಿಸಿ ಬಿಟ್ಟಳು.—ತದನಂತರ ರಾಯನು ಆ ಶೆರೆಯವರನ್ನು ಸಂತೇ ಬೈಲಿಗೆ ತರಿಸಿ, ಸೂರ್ಯನಿಗೆ ಪೂಜೆ ಮಾಡಿದರೆ ನಿಮಗೆ ಒಳ್ಳೇದಾಗುವದೆಂದು, ತಿಳಿಸುವಲ್ಲಿ ಆ ಕ್ರೈಸ್ತರು, ದೇವರಿಂದ ನಿರ್ಮಿತವಾದದಕ್ಕೆ ನಾವು ದೇವರಿಗೆ ಯೋಗ್ಯವಾದಂಥ ಮಾನವನ್ನು ಎಂದಿಗೂ ತೋರಿಸಲಿಕ್ಕಿಲ್ಲ

1) 173ನೇ ಪಾನು; 33ನೇ ಸಂಧಿ. 2) 190ನೇ ಪಾನು.

ವೆಂದು, ಖಂಡಿತವಾಗಿ ಉತ್ತರವೀಯುತ್ತಲೇ ಹತ್ತರ ನಿಂತು ಕೊಂಡಿರುವ ಮಗರೆಂಬ ಆ ಪಾರ್ಶಿ ಪೂಜಾರಿಗಳು[1] ರೋಷವುಳ್ಳವರಾಗಿ—ಅವರನ್ನು ಕೊಲ್ಲಿರಿ! ಅವರು ನಮ್ಮ ರಾಣಿಯವರಿಗೆ ಮಂತ್ರಿಸಿದ್ದು ನಿಶ್ಚಯವೇ! ಎಂದು, ಕಾಡುಮೃಗಗಳಂತೆ ಕೂಗಿದರು. ಬಳಿಕ ಶಾಹ್‌ಪೂರನು—ಅವರಿಗೆ ಮರಣಾಜ್ಞೆ ಮಾಡಿಸ ಬೇಕು, ಪೂಜಾರಿಗಳು ತಕ್ಕ ಮರಣದ ರೀತಿಯ ಹೇಳಲಿ! ಎಂದು, ಆಜ್ಞಾಪಿಸಲು, ಅವರ ಶರೀರವನ್ನು ಗರಗಸದಿಂದ ಕೊಯಿದು ಬಿಟ್ಟರೆ ರಾಣಿಗೆ ಕ್ಷೇಮವು ತಿರಿಗಿ ಬಂದೀತೆಂತ, ಪೂಜಾರಿಗಳು ಹೇಳಿದರು. ಮುಂಚೆ ಥರ್ಬ್ಳ ಹತ್ತರ ಒಂದು ಮಾತು ಕಳುಹಿಸಿದ್ದ ಆ ವಿಚಾರಕನು ಆ ಹೊತ್ತು ಬಂದು, ಸ್ವಂತ ಬಾಯಿಯಿಂದ ಅದೇ ಮಾತನ್ನು ಅವಳ ಕಿವಿಯಲ್ಲಿ ಆಡಿದ್ದಕ್ಕೋಸ್ಕರ ಅವಳು ಶಿಟ್ಟಾಗಿ, ಹೀಗಂದಳು—ನಿರ್ಲಜ್ಜೆಯವನೇ, ನೀನು ಅಂಥ ದುರಾಲೋಚನೆಯನ್ನು ಇನ್ನೂ ತಳ್ಳಿ ಬಿಡಲಿಲ್ಲವೋ? ಧೈರ್ಯದಿಂದ ಸಾಯುವದು ನನಗೆ ನಿಜ ಜೀವವೇ! ಮಾನಭಂಗದಿಂದಲೂ ವಿಶ್ವಾಸಭಂಗದಿಂದಲೂ ಫಳಿಸಿ ಕೊಳ್ಳುವಂಥ ಜೀವವು ಮರಣಕ್ಕಿಂತಲೂ ಸಾವಿರಾರು ಮಡಿ ಕಷ್ಟವಾದದ್ದೇ!—ತತ್‌ಕ್ಷಣ ಆ ವಿಚಾರಕನು ಅತ್ಲಾಗೆ ಹೋದನು; ಆದರೆ ಆ ಮೂವರನ್ನು ಪೀಡಾಸ್ಥಳಕ್ಕೊಯಿದು, ಅಲ್ಲಿ ಕಂಭಕ್ಕೆ ಕಟ್ಟಿ, ಗರಗಸದಿಂದ ಕೊಯಿದರು. ಅವರೆಲ್ಲರೂ ಆನಂದದಿಂದ ಪರವನ್ನೈದಿದರು.

ಸಾದೊಥನೆಂಬವನು ಸಿಮೆಯೋನ ಅಧ್ಯಕ್ಷನ ಉತ್ತರಾಧಿಕಾರಿಯಾದನು. ಶಾಹ್‌ಪೂರನು ಒಮ್ಮೆ ಈ ಭಕ್ತಿಯುಳ್ಳ ಅಧ್ಯಕ್ಷನಿರುವ ಸೆಲ್ಯುಕೀಯ ಪಟ್ಣಕ್ಕೆ[2] ಬಂದಾಗ ಅವನನ್ನು ಮಾತ್ರವಲ್ಲದೆ ಬೇರೆ ಬೋಧಕರಲ್ಲಿಯೂ ಗಂಡು ಮತ್ತು ಹೆಣ್ಣು ಮಠವಾಸಿಗಳಲ್ಲಿಯೂ 128 ಜನರನ್ನು ಸಹ ಶೆರೆ ಹಿಡಿಸಿ, 5 ತಿಂಗಳು ಬಹಳ ಪೀಡೆ ಪಡಿಸಿ, ಬಳಿಕ ಇಬ್ಬರಿಬ್ಬರನ್ನು ಹಗ್ಗದಿಂದ ಜೋಡಿಸಿ, ಪಟ್ಣದ ಹೊರಗಿನ ಹನನ ಸ್ಥಳಕ್ಕೆ ಕಳುಹಿಸುವಂದು ಆ ರಕ್ತಸಾಕ್ಷಿಗಳು ದೇವಸ್ತೋತ್ರಗೀತಗಳನ್ನು ಹಾಡುತ್ತಲೇ ಇದ್ದರು. ಆ ರಾಯನಂದು ಸಾದೊಥನನ್ನೊಬ್ಬನನ್ನೇ ಉಳಿಸಿ, ಆ ಬೇರೆ 128 ಮಂದಿ ಸದ್ಭಕ್ತರೆಲ್ಲರನ್ನು ಕೊಲ್ಲಿಸಿದನು; ಸಾದೊಥನನ್ನು ಇನ್ನು ಹ್ಯಾಗೂ ಸೂರ್ಯಪೂಜೆಗೆ ಒಡಂಬಡಿಸ್ಯೇನೆಂಬದು ಅವನ ಮನಸ್ಸಿನಲ್ಲಿತ್ತು. ಆದರೆ ಆ ಅಧ್ಯಕ್ಷನು ಮುಂದೆ ಸಹ ಬಂಧನದಲ್ಲಿಯೂ ಪೀಡೆಯಲ್ಲಿಯೂ ಅದೇ ವಿಶ್ವಾಸದೃಢತ್ವ ತೋರಿಸುತ್ತಾ ಬಂದ ಮೇಲೆ ಅವನ ಶಿರಸ್ಸನ್ನೂ ಛೇದಿಸಿದನು.—ಅದೇ ವರುಷದಲ್ಲಿ ಹೊರ್ಮಿಜ್ದನೆಂಬವನೊಬ್ಬ ಪ್ರತಿನಿಧಿಯು ಪಾರ್ಶಿಸ್ಥಾನದ ಸೂಸ ಪಟ್ಣದ ಅಧ್ಯಕ್ಷನಾಗಿದ್ದ ಮಿಲ್ಲೆಸೆಂಬ ಸದ್ಭಕ್ತನನ್ನು ತಾನು ಕಠಾರಿಯಿಂದ ತಿವಿದು ಕೊಂದನು.

---

1) 17ನೇ, 171ನೇ ಪಾನು. 2) 189ನೇ ಪಾನು.

ಈ ವಿಧದ ಕ್ರೂರ ಹಿಂಸೆಯು 40 ವರುಷವೇ ನಡೆಯುತ್ತಲಿತ್ತು. ಅದರಿಂದ ಸತ್ತ ಬೋಧಕರೂ ಗಂಡು ಮತ್ತು ಹೆಣ್ಣು ಮಠವಾಸಿಗಳೂ 16,000 ಮಂದಿ; ಅದರಿಂದ ಸತ್ತ ಸಾಧಾರಣ ಸಭ್ಯರು ಲೆಖ್ಖ ಮಾಡ ಕೂಡದಷ್ಟು ಮಂದಿ. ರೋಮಿಯ ಕೈಸರರಿಂದ ಹಿಂಸೆ ಪಡುತ್ತಿದ್ದ ಕೈಸ್ತರೊಳಗೆ ಕೆಲವು ಕಡೆಯಲ್ಲಿ ಅನೇಕರು ಆಗಾಗಿನ ಶಾಂತಿಕಾಲದಿಂದ[1] ಬಲಗುಂದಿದವರಾಗಿ ಕರ್ತನನ್ನು ಬಿಟ್ಬಾಡಿದ್ದರು; ಆದರೆ ಶಾಹ್‌ಪೂರನು ಹಿಂಸಿಸುತ್ತಿದ್ದ ಪಾರ್ಶಿ ಕೈಸ್ತರೊಳಗೆ ಸರ್ವತ್ರ ತೀರ ಸ್ವಲ್ಪ ಜನರು ಮಾತ್ರ ವಿಶ್ವಾಸಭ್ರಷ್ಟರಾಗಿದ್ದರು. ಆದರೆ ಬಹಳ ಮಂದಿ ಪಾರ್ಶಿ ಕೈಸ್ತರು ತಮ್ಮ ಜೀವರಕ್ಷಣಕ್ಕೋಸ್ಕರ ಪತ್ತೇವಾರಿ ಹತ್ತಿ ಹಿಂದು ದೇಶಕ್ಕೆ ಓಡಿ ಹೋಗಿದ್ದರು; ಇವರಿಗೂ ಸಾಸಾನಿದ ಸಾಮ್ರಾಜ್ಯದಲ್ಲುಳಿದ ಕೈಸ್ತರಿಗೂ ಅನ್ಯೋನ್ಯ ಪ್ರೀತಿಯು ಇರುತ್ತಲಿರುವದು[2].

## 24. ವಿಶ್ವಾಸಭ್ರಷ್ಟನಾದ ಯೂಲಿಯಾನನು.

ಕೊನ್ಸ್ತಂತೀನ ಕೈಸರನು ಸತ್ತ ಮೇಲೆ ಅವನ 3 ಮಂದಿ ಕುಮಾರರು ಅವನ ಉತ್ತರಾಧಿಕಾರಿಗಳಾದರು[3]. ಅವರು ಒಳ್ಳೇ ಕೈಸ್ತರಾಗಿರಲಿಲ್ಲ. ತಮ್ಮ ಅಧಿಕಾರಕ್ಕೆ ಎದುರಾಟ ಮಾಡ್ಯಾರೆಂತ, ತಮ್ಮ ನೆಂಟರಲ್ಲಿ ಹತ್ತರದವರನ್ನು ಕೊಲ್ಲಿಸಿದರು; ಕೊನ್ಸ್ತಂತೀನನ ಚಿಕ್ಕಪ್ಪನ ಮಕ್ಕಳಾದ ಗಲ್ಲನನ್ನೂ ಯೂಲಿಯಾನನನ್ನೂ ಮಾತ್ರ ಉಳಿಸಿ, ಅವರ ಒಪ್ಪಂದ ಕೇಳದಲೇ, ಅವರು ಸಭಾಬೋಧಕರಾಗ ಬೇಕೆಂತ, ಕಪ್ಪದೊಕಿಯದ ಒಂದು ಕೋಟೆಯೊಳಗೆ ಅವರನ್ನು ಮುಚ್ಚಿ, ಸುಮಾರು ತರದ ಉಪಾಧ್ಯಾಯರನ್ನು ಅವರ ಮೇಲಿಟ್ಟು ಬಿಟ್ಟರು. ಆ ಮೂವರು ಅಣ್ಣತಮ್ಮಂದಿರಲ್ಲಿಬ್ಬರು ತೀರಿದಂದು ಇನ್ನು ಜೀವದಿಂದಿರುವ ಕೊನ್ಸ್ತಂತಿಯನೆಂಬ ಅರೀಯಾನ ಪಕ್ಷದವನು[4] ಕ್ರಿ. ಶ. 353ನೇ ವರುಷದಲ್ಲಿ ಏಕ ಚಕ್ರವರ್ತಿಯಾದನು. ಆಗಲವನು ಕೈಸ್ತ ಸಭೆಯ ಬಹಿರ್ವಿಡಂಬನಾಶೆಯಿಂದ ತಾಳ್ಮೆ ಗೆಟ್ಟು—ದೇವತೆಗಳ ಯಾಗ ಮಾಡುವಂಥವರ ಆಸ್ತಿ ಮುಟ್ಟುಗೋಳು ಮಾಡಿ, ಅವರನ್ನು ಕೊಲ್ಲ ಬೇಕು; ಎಲ್ಲಾ ದೇವಸ್ಥಾನಗಳನ್ನು ಮುಚ್ಚ ಬೇಕು! ಎಂದು, ಆಜ್ಞೆ ಪ್ರಕಟಿಸಿದನು; ಆದ್ದರಿಂದ ಅನೇಕ ಮೂರ್ತಿಪೂಜಕರು ಅಂಜಿ, ಕಪಟದಿಂದ ಕೈಸ್ತರೆನ್ನಿಸಿ ಕೊಂಡರು. ಕೊನ್ಸ್ತಂತಿಯನು ನೀಕೇನ ವಿಶ್ವಾಸಪ್ರಮಾಣದ ಕೈಸ್ತರಿಗೂ ವಿವಿಧದ ತೊಂದರೆ ಕೊಡುತ್ತಿದ್ದನು. ಅಷ್ಟರಲ್ಲಿ ಯೂಲಿಯಾನನು ತಾನು ಅಭ್ಯಾಸಿಸಲಪ್ಪಣೆಯಾ

1) 117ನೇ, 123ನೇ ಪಾನುಗಳು. 2) 82ನೇ, 189ನೇ ಪಾನು. 3) 183ನೇ ಪಾನು.
4) 188ನೇ, 190ನೇ ಪಾನು; 22ನೇ ಸಂಧಿ.

ದ ಕ್ರೈಸ್ತಬೋಧಕವಿದ್ಯೆಗೆ ತೀರಾ ಬೇಸತ್ತು, ತನ್ನ ಸ್ವಂತ ತಂದೆ ಮುಂತಾದ ಅತಿ ಪ್ರಿಯರು ಕೈಸರರಿಂದ ಹತರಾಗಿದ್ದದಕ್ಕೆ ಎಡೆ ಬಿಡದೆ ಮುನಿಯುತ್ತಲಿದ್ದನು; ಆದರೂ ತನ್ನ ಇಂಗಿತವನ್ನು ಬೈಲಿಗೆ ಬೀಳ ಗೊಡದೆ, ಮಹಾ ಕಪಟದಿಂದ ಕ್ರೈಸ್ತ ಭಕ್ತಿಯನ್ನು ತೋರಿಸುತ್ತಿದ್ದನು. ಹೀಗಿರಲಾಗಿ ಕೊನ್ಸ್ತಂತಿಯನು ಅವನನ್ನು ಕಾವಲಿಯಿಂದ ಬಿಡಿಸಿ, ಅಲ್ಲಲ್ಲಿಯ ದೊಡ್ಡ ಪಟ್ಣಗಳಲ್ಲಿ ತನ್ನ ಬೋಧಕವಿದ್ಯಾಭ್ಯಾಸ ಪೂರೈಸಲಿಕ್ಕೆ ಅವನಿಗಾಜ್ಞೆ ಕೊಟ್ಟನು. ಆಗ ಮೂರ್ತಿಪೂಜಕ ಪಂಡಿತರು ಯೂಲಿಯಾನನನ್ನು ತಮ್ಮ ಪಕ್ಷಕ್ಕೆಳೆಯಲಿಕ್ಕೆ ಅಂತರಂಗದಲ್ಲಿ ಅವನನ್ನು ಬಹಳ ಮೆಚ್ಚಿಸುತ್ತಲಿರಲು, ಅವನು, ದೇವತೆಗಳು ತನ್ನನ್ನು ಮೂರ್ತಿಪೂಜಕತ್ವ ಪುನಃಸ್ಥಾಪಿಸುವದಕ್ಕೆ ನೇಮಿಸಿ ಅವೆಂತ, ತನ್ನೊಳಗಾಲೋಚಿಸಿ ಕೊಳ್ಳುವವನಾಗಿ, ಈ ಆಲೋಚನೆ ಮತ್ತು ಬಿಡಲಿಲ್ಲ. ಕ್ರಿ. ಶ. 355ನೇ ವರುಷಕ್ಕೆ ಗೆರ್ಮಾನರಲ್ಲಿ ಅಲೆಮನ್ನ ಫ್ರಂಕ ಎಂಬ ಎರಡು ವಂಶಗಳವರು[1] ಗಲ್ಲಿಯ ದೇಶ ಸ್ವತಂತ್ರಿಸಿ ಕೊಳ್ಳಲಿಕ್ಕೆ ಅಭಿಯೋಗ ಮಾಡುತ್ತಿರುವಂದು ಕೊನ್ಸ್ತಂತಿಯನು ಬೇರೆ ಉಪಾಯವರಿಯದೆ, 25 ವರುಷದವನಾದ ಯೂಲಿಯಾನನನ್ನು, ಸಹಾಯಕೈಸರನೆಂತ, ಅಲ್ಲಿಗೆ ಕಳುಹಿಸಿದ ಹಿಂದೆ ಇವನು ಗೆದ್ದು, ತನ್ನ ಪೌರುಷದಿಂದ ತನ್ನ ಕೈಯ ಕೆಳಗಿನ ಸೇನೆಯನ್ನೊಲಿಸುತ್ತಿರಲಿಕ್ಕೆ, ಕೊನ್ಸ್ತಂತಿಯನು ಅವನ ಮೇಲೆ ತಿರಿಗಿ ಸಂಶಯ ಗೊಂಡು, ಸೇನೆಯ ದೊಡ್ಡ ಪಾಲನ್ನು ಸಾಸಾನಿದರ ಸಂಗಡದ ಯುದ್ಧಕ್ಕಾಗಿ[2] ನನ್ನ ಬಳಿಗೆ ಕಳುಹಿಸೆಂದು, ಆಜ್ಞಾಪಿಸಿದನು. ಆಗ ಆ ಸೈನಿಕರು ಅಷ್ಟು ದೊಡ್ಡ ಪ್ರಯಾಣಕ್ಕೊಪ್ಪದೆ, ನಮ್ಮ ಕೈಸರನು ಯೂಲಿಯಾನನೇ! ಎಂತ, ಕೂಗಿದ್ದಲ್ಲದೆ ಯೂಲಿಯಾನನು ಕಪಟವೇಷ ಕಳೆದು ಬಿಟ್ಟು, ಕೊನ್ಸ್ತಂತಿಯನ ಮೇಲೆ ಕಲಹಗಾರನಾದನು. ಸ್ವಲ್ಪ ಕಾಲದಿತ್ತ ಕ್ರಿ. ಶ. 361ನೇ ವರುಷದಂತ್ಯಕ್ಕೆ ಕೊನ್ಸ್ತಂತಿಯನು ಸಣ್ಣ ಅಸಿಯದ ಕಿಲಿಕಿಯ ಶೀಮೆಯ ತರ್ಸ ಪಟ್ಣದಲ್ಲಿ[3] ಸಾಯಲು, ಯೂಲಿಯಾನನೇ ಏಕ ಚಕ್ರವರ್ತಿಯಾದನು.

ತರುವಾಯ ಅವನು ವಿಗ್ರಹಾರಾಧನೆ ತಿರಿಗಿ ವರ್ಧಿಸಲಿಕ್ಕೆ ಅನಂತವಾದ ಪೇಚಾಟ ಪಡ ತೊಡಗಿ, ಪೂರ್ವದ ಮೂರ್ತಿಪೂಜಾಸಕ್ತ ಕೈಸರರಿಗಿಂತ ಹೆಚ್ಚಾಗಿ ದೇವತೆಗಳ ಪ್ರಧಾನ ಯಾಗಿಯಾಗಿ ನಡೆದು[4], ತಾನು ಬೇರೆ ವಿಷಯದಲ್ಲಿ ಲೋಭಿಯಾಗಿದ್ದರೂ ಪಶುಮೇಧ ಮಾಡಿಸುವದಕ್ಕೆ ಹೇರಳ ಹಣ ಬಳಿಸುತ್ತಾ ಬಂದನು; ಇತರ ಜನರು ತನ್ನ ಸಂಗಡ ಬಾರದ ಪಕ್ಷದಲ್ಲಿ ಅವನು ಮುದೀ ಹೆಂಗಸರ ಸಂಗಡ ಹೋಗಿ ಯಾಜಕರಿಗೆ ಪಶುಗಳನ್ನು ತಂದು ಕೊಡಲಿಕ್ಕೆ ನಾಚಿಕೆ ಗೊಳ್ಳದಿರುವ

1) 87ನೇ, 88ನೇ, 114ನೇ, 189ನೇ ಪಾನುಗಳು. 2) 190ನೇ ಪಾನು ಸರಿ ನೋಡು.
3) 46ನೇ, 47ನೇ, 130ನೇ ಪಾನು. 4) 180ನೇ ಪಾನು.

ನು; ಆಗಿಂದಾಗ್ಯೆ ಅವನು ತಾನು ಸಹ ಕತ್ತಿ ಹಿಡಿದು, ಯಾಗಪಶುಗಳನ್ನು ಕೊಲ್ಲುವನು. ಮೂರ್ತಿಪೂಜಕರಿಗಾದರೂ ಆ ಪ್ರಕಾರದ ಅವನ ವ್ಯಸನದಿಂದ ನಗೆ ಬರುವದು; ಆದ್ದರಿಂದ ಅವರು, ರಾಜ್ಯದಲ್ಲಿ ಸಾಕಾಗುವಷ್ಟು ಪಶುಗಳು ಹುಟ್ಟದೆ ಇದ್ದಾವೆಂತ, ಹಾಸ್ಯ ಮಾಡಿದರಲ್ಲದೆ, ಕಾಲಕಾಲಕ್ಕೆ ತಮ್ಮ ಕೈಸರನು ಹುಚ್ಚು ಮಳೆ ಹೊಡೆಯುವಲ್ಲಿ ಬಲಿಪೀಠದ ಹತ್ತರ ಒಬ್ಬನೇ ನಿಂತು ಕೊಂಡಿರುವಾಗ ತಾವು ದೇವಸ್ಥಾನದ ಮಂಟಪದ ಕೆಳಗೆ ಇದ್ದು ಕೊಂಡು, ಕೈಚಪ್ಪಳೆ ಹಾಕಿ, ಗುಪ್ತ ಕುಚೋದ್ಯ ಗೈಯುವರು. ಅದರ ವಿನಹ ಆ ಕೈಸರನು—ಯೇಸುವೆಂಬ ಗಲಿಲಾಯದವನ[1] ಭಕ್ತರು ನೀತಿಯುಕ್ತರೂ ಸತ್ಯವಂತರೂ ಧರ್ಮಿಷ್ಠರೂ, ನಿಶ್ಚಯ! ಆದ ಕಾರಣ ರಾಜ್ಯದ ಹಳೇ ಮತವ ಜಯಿಸಿದ್ಧಾರೆ; ಹೀಗಿರಲಿಕ್ಕೆ ನಾವು ಆ ಎಲ್ಲಾ ವಿಷಯಗಳಲ್ಲಿ ಅವರಿಗಿಂತ ಹೆಚ್ಚಿನವರಾಗ ತಕ್ಕದೆಂದು, ಕೈಸ್ತರಿಗಿರುವಂಥ ಧರ್ಮಶಾಲೆಗಳನ್ನೂ ಸಭಾಶಿಕ್ಷೆಯನ್ನೂ ಪ್ರಸಂಗಗಳನ್ನೂ ಮತೋಪದೇಶವನ್ನೂ ತನ್ನ ಪಕ್ಷಕರಲ್ಲಿ ಶೇರಿಸಲೆಸಗಿ, ಆತ್ಮವತ್ ಸರ್ವಭೂತೇಷು ಯಃ ಪಶ್ಯತಿ ಸ ಪಂಡಿತಃ ಅಂದರೆ ಎಲ್ಲಾ ಜನರು ತನ್ನ ಸಂಗಡ ಒಂದೇ ಎಂತ ತಿಳು ಕೊಂಡವನು ಪಂಡಿತನಾಗಿದ್ಧಾನೆಂಬ ಶ್ಲೋಕದಂತೆ, ಸರ್ವ ಮತಗಳನ್ನು ಕಾಪಾಡುತ್ತೇನೆಂತ, ಪ್ರಸಂಗಿಸಿದನು. ಆದರೆ ಕೈಸ್ತರ ವಿಷಯದಲ್ಲಿ ಅವನದು ಆ ಪ್ರಸಂಗವು ಹ್ಯಾಗೂ ಬರೇ ಸುಳ್ಳಾಯಿತು; ಹ್ಯಾಗಂದರೆ ಅವನು, ಅವರಿಗೆ ಜೀವಹಿಂಸೆ ಮಾಡ ಬೇಕೆಂದು, ಬಹುಶಃ ಅಪ್ಪಣೆ ಕೊಡದಿದ್ದರೂ ಅವರಿಗೆ ಜೀವಹಿಂಸೆ ಮಾಡುವ ಪ್ರಜೆಗೆ ಕಿಂಚಿತ್ತೂ ಶಿಕ್ಷಿಸದಲಿರುತ್ತಿದ್ದನು; ಅದಲ್ಲದೆ ಕೈಸ್ತ ಸಭೆಗೆ ಶಿಕ್ಕಿದ್ದ ದಾನಶಾಸನ ಇನಾಮಾದಿಗಳನ್ನು[2] ಕಸು ಕೊಂಡು, ರಾಜ್ಯೋದ್ಯೋಗಗಳನ್ನು ಕೈಸ್ತರಿಗೆ ತಪ್ಪಿಸಿ, ಅನೇಕ ಕೈಸ್ತ ದೇವಾಲಯಗಳಲ್ಲಿ ಮೂರ್ತಿಪೂಜೆ ನೆಲೆಗೊಳ್ಳಿಸಿದನು; ಅವನು ಕ್ರಿಸ್ತನನ್ನೂ ಕೈಸ್ತರನ್ನೂ ಕುರಿತು ಮಾತಾಡುವಾಗ, ಗಲಿಲಾಯದವರೆಂದು, ಅವರಿಗೆ ದೂಷಿಸುತ್ತಾ, ಅವರಿಗೆ ಬೈಯುವ ಗ್ರಂಥಗಳನ್ನು ಸಹ ರಚಿಸಿ ಪ್ರಕಟಿಸುತ್ತಾ ಇದ್ದನು. ಕೈಸ್ತ ಸಭೆಗಳಿಗೆ ಪ್ರಾಣಹಿಂಸೆಯೇ ವೃದ್ಧಿಗೆ ಕಾರಣ! ಅದು ಹೊರ್ತಾಗಿ ಪ್ರಜೆಯಲ್ಲಿ ದೊಡ್ಡ ಭಾಗವಾದ ಕ್ರೈಸ್ತರಿಗೆ ಹಿಂಸಿಸುವದು ರಾಜ್ಯಗೇಡು! ಎಂತ, ತಿಳು ಕೊಂಡು, ಪ್ರಚಂಡ ಹಿಂಸಕನಾಗಲಿಕ್ಕೆ ಹೆದರುತ್ತಿದ್ದನು, ಅಷ್ಟೇ! ಮೂರ್ತಿಪೂಜಕರಾದ ಪ್ರಜೆಯು ಹಲವು ಕಡೆಯಲ್ಲಿ ಕೈಸರನ ಶಿಕ್ಷೆಯಿಲ್ಲದಲೇ ಕೈಸ್ತರನ್ನು ಹಾನಿ ಪಡಿಸುತ್ತಿದ್ದ ಒಂದು ದೃಷ್ಟಾಂತವೇನೆಂದರೆ--ಸಿಕಿಲಿಯ ದ್ವೀಪದ ಅರೆಥೂಸ ಪಟ್ಟದ ಅಧ್ಯಕ್ಷನಾದ ಮರ್ಕನೆಂಬ ಮುದುಕನನ್ನು ಅವರು ಪಟ್ಟದ ಬೀದಿಗಳಲ್ಲಿಯೂ ಅನೇಕ ತರದ ಹೇಸಿಕೆಯಲ್ಲಿಯೂ ಎಳಕೊಂಡು ಹೋಗಿ, ಚೂರಿಗಳಿಂದ ಅವನ ಮೈ

1) 24ನೇ ಪಾನು. 2) 180ನೇ ಪಾನು.

ಯನ್ನೆಲ್ಲಾ ಚುಚ್ಚಿ, ಕಡೆಯಲ್ಲಿ ಅದಕ್ಕೆ ಜೇನು ಹೂಸಿ, ಅವನನ್ನು ಬಿಸಿಲಿಗಿಟ್ಟು, ನೊಣಗಳಿಂದ ಕಚ್ಚಿಸಿದರು; ತದನಂತರ ಯೂಲಿಯಾನನು, ಅವನನ್ನು ಇನ್ನೂ ಪೀಡಿಸ ಬೇಡಿರೆಂತ, ತೀರ್ಪು ಮಾಡಿದ್ದು ಯಾತರ ನ್ಯಾಯ? ಅವನು ಮೂರ್ತಿಪೂಜಾಮತವನ್ನು ಗೆಲ್ಲಿಸುವದಕ್ಕೋಸ್ಕರ ನಡಕೊಂಡ ರೀತಿಯ ಇನ್ನು ಕೆಲವು ಮಾತು ಕೇಳಿರಿ! ಅವನು ಕ್ರೈಸ್ತರನ್ನು ದಡ್ಡರಾಗ ಮಾಡಲಿಕ್ಕೆ ಯೋಚಿಸಿ—ಅವರಿಗೆ ವಿದ್ಯಾಶಾಲೆಗಳಿರ ಬಾರದು, ಬೇಕಾದರೆ ಅವರು ಮೂರ್ತಿಪೂಜಕ ಉಪಾಧ್ಯಾಯರನ್ನು ಇಟ್ಟು ಕೊಳ್ಳಲಿ! ಎಂತ, ನೇಮಿಸಿದನು; ಆಗ ಅನೇಕ ಕ್ರೈಸ್ತ ಉಪಾಧ್ಯಾಯರು ತಮ್ಮ ವೃತ್ತಿ ಬಿಟ್ಟು ಬಿಡ ಬೇಕಾಗಿ, ಬಡತನ ಅನುಭವಿಸುವವರಾದರು. ಕ್ರೈಸ್ತರ ಬೋಧಕರು ಸಭ್ಯಾತ್ಮಪಾಲನಕ್ಕೆ ಅನುವು ಕಾಣದ ಹಾಗೆ ಅವನವರನ್ನು ಲೌಕಿಕೋದ್ಯೋಗಗಳಿಗೆ ಬಲಾತ್ಕರಿಸಿ ಹಾಕುತ್ತಿರುವನು. ನಿಜ ಕ್ರೈಸ್ತತ್ವದ ಬಲ ಕುಂದಿಸುವ ಹಾಗೆ ಅವನು ಕ್ರೈಸ್ತ ಸಭೆಗಳಿಂದ ಬಹಿಷ್ಕಾರವಾಗಿದ್ದಂಥ ಪಾಷಂಡಿಗಳನ್ನೂ ಇವರ ಪಕ್ಷಕರನ್ನೂ ಮುಂದಕ್ಕೆ ಕರೆದು, ಮನ್ನಿಸಿ, ಅಲೆಕ್ಸಂದರೀಯದ ಆಗಿನ ಒಳ್ಳೇ ಅಧ್ಯಕ್ಷನಾದ ಆ ಅಥನಸಿಯನನ್ನು[1] ಗಡಿ ದಾಟಿಸಿ, ಕ್ರೈಸ್ತರೊಳಗೆ ಅರೀಯಾನತ್ವದಿಂದ ನಡೆಯುವ ಭೇದವನ್ನು ಸಾಕುತ್ತಿರುವನು. ಮತ್ತೆ ಅವನು—ಕ್ರೈಸ್ತರಿಗೆ ಹಾಸ್ಯ ಮಾಡುವೆನು, ಯೇಸುವಿನ ಪ್ರವಾದನೆಯನ್ನು[2] ಸುಳ್ಳು ಮಾಡುವೆನೆಂತ, ಹೇಳಿ, ಯೆಹೂದ್ಯರಿಗೆ, ಯೆರೂಸಲೇಮಿನಲ್ಲಿ ತಮಗೆ ಇರುತ್ತಿದ್ದ ದೇವಾಲಯ ತಿರಿಗಿ ಕಟ್ಟ ಬಹುದೆಂದು, ಅಪ್ಪಣೆ ಕೊಟ್ಟದ್ದಲ್ಲದೆ ಪಲೇಸ್ತೀನದಲ್ಲಿ ತನ್ನ ಪ್ರತಿನಿಧಿಯಾದವನಿಂದ ಅದನ್ನು ತಿರಿಗಿ ಕಟ್ಟಿಸಲಿಕ್ಕೆ ಹೇರಳ ಖರ್ಚು ಮುಂತಾದ ಸಹಾಯ ಮಾಡಿಸಿದನು; ಆದರೂ ಅಂದು ಅಲ್ಲಿಗೆ ಬಹು ಸಮೂಹವಾಗಿ ಬಂದ ಯೆಹೂದ್ಯರು ನೆಲಗಟ್ಟು ಹಾಕುತ್ತಲೇ ಭೂಮಿಯೊಳಗಿಂದ ಭೀಕರವಾದ ಜ್ವಾಲೆಗಳು ಹೊರಟು, ಭೂಕಂಪವಾಗಿ, ಕಟ್ಟಿದ್ದನ್ನು ನಶಿಸಿದವು; 3 ಸರ್ತಿ ಹಾಗೆಯೇ ಆಯಿತು. ಬಳಿಕ ಯೆಹೂದ್ಯರು ಭಯಗ್ರಸ್ತರಾಗಿ, ಓಡಿ, ಸರ್ವ ದಿಕ್ಕಿಗೆ ಮರಳಿ ಚದರಿ ಹೋದರು. ಅದೇ ಪ್ರಕಾರ ಆ ಕೈಸರನ ಗರ್ವವು ಸರ್ವತ್ರ ಭಂಗವಾಯಿತು. ಹ್ಯಾಗಂದರೆ, ಅವನು ಮೂರ್ತಿಪೂಜಕತ್ವವೆಂಬ ಹಾಳುಮರಕ್ಕೆ ಒಂದೊಂದು ಒಳ್ಳೇ ಫಲವನ್ನು ಎಲ್ಲೆಲ್ಲಿ ಕಟ್ಟಿ ಹಚ್ಚಿದನೋ, ಅಲ್ಲಲ್ಲಿ ಇದು ಬೇಗ ಕೊಳೆತು ಬಿತ್ತು; ಅದಲ್ಲದೆ ಕ್ರೈಸ್ತರ ಸಂಖ್ಯೆಯು ನಿತ್ಯ ಬೆಳಕೊಂಡು ಬಂತು. ಅವನು ಒಮ್ಮೆ ತನ್ನ ರಾಜಧಾನಿಗಳಲ್ಲಿ ಒಂದಾದ ಸುರಿಯದ ಆ ಅಂತಿಯೊಖೀಯದಲ್ಲಿ[3] ಬಹಳ ವರುಷ ನಡೆಯದಿದ್ದ ಒಂದು ದೊಡ್ಡ ಸೂರ್ಯದೇವತೆಯ ಹಬ್ಬವನ್ನು ತಿರಿಗಿ ಆಚರಿಸಲಿಕ್ಕೆ ಹೇಳಿ, ಮಹಾ ಉತ್ಸವವಾಗುವದೆಂದು, ನೆನಸುತ್ತಿರಲು, ಒಬ್ಬನೇ ಪೂಜಾರಿ

1) 187ನೇ ಪಾನು. 2) ಮತ್ತಾ. 23, 37—39; 24, 1—2; 64ನೇ ಪಾನು. 3) 36ನೇ ಪಾನು.

ಬಂದು, ಒಂದು ಬಾತುಗೋಳಿ ಬಲಿ ಅರ್ಪಿಸಿದನು. ಹೀಗೆ ಅವನು, ಕ್ರಿಸ್ತನ ಸಂಗಡ ಯುದ್ಧದಲ್ಲಿ ಗೆಲ್ಲುವದು ಅಸಾಧ್ಯವೆಂದು, ತಿಳುಕೊಳ್ಳುತ್ತಿರ ಬೇಕಾಗುವಷ್ಟರಲ್ಲಿ ಮಾನಸಾಂತರ ಪಟ್ಟನೋ? ಇಲ್ಲವೇ ಇಲ್ಲ! ಕ್ರೈಸ್ತತ್ವದ ಮೇಲಿನ ಅವನ ರೋಷವು ಬಹಳ ಏರುತ್ತಾ ಇತ್ತು; ಕ್ರೈಸ್ತರನ್ನೆಲ್ಲಾ ಬೇರು ಸಹಿತಲೇ ಕೀಳುವೆನೆಂಬದು ಅವನ ಮನಸ್ಸಿನ ಒಂದೇ ಅರ್ಥವಾಯಿತು. ಆದರೆ ಅಥನಸಿಯ ಅಧ್ಯಕ್ಷನು, ಅವನು ಕ್ರೈಸ್ತತ್ವವೆಂಬ ಸೂರ್ಯನೆದುರಾಗಿ ಕ್ಷಣಕ್ಕೆ ಕಾಣಿಸುವದೊಂದು ಮೋಡವೆಂತ, ನಿರ್ಣಯಿಸಿದನು. ಇದು ಹೌದು; ಎಂತೆಂದರೆ,

ಅಂದೇ ಆ ಕೈಸರನು ಸಾಸಾನಿದರೆಂಬ ಪಾರ್ಶಿಯರ ಆ 2ನೇ ಶಾಹ್‌ಪೂರನೆಂಬ ಸಮ್ರಾಜನ[1] ಸಂಗಡದ ರಣಕ್ಕೆ ಹೋಗ ಬೇಕಾಯಿತು. ಅವನು ತನ್ನ ಸೇನೆಯೊಂದಿಗೆ ಅವನೆದುರಿಗೆ ಗಮಿಸುವಾಗ ಒಂದಾನೊಂದು ದಿನ ಒಬ್ಬ ವಿಗ್ರಹಾರಾಧಕನಾದಂಥ ದಂಡುಗಾರನು ಪಲೇಸ್ತೀನದವನೊಬ್ಬ ಕ್ರೈಸ್ತನಿಗಣಕಿಸಿ, ನಾಜರೇಥಿನ ಬಡಗಿಯವನ ಮಗನಾದ ಆ ಯೇಸುವು ಈಗ ಏನು ಮಾಡುತ್ತಾನೆಂತ, ಕೇಳಲಿಕ್ಕೆ, ಆ ಕ್ರೈಸ್ತನು, ಕೈಸರನಿಗೋಸ್ಕರ ಒಂದು ಶವದ ಪೆಟ್ಟಿಗೆ ಮಾಡುತ್ತಿದ್ದಾನೆಂತ, ಹೇಳಿದ್ದೇ ಮುಟ್ಟಿತು. ಹ್ಯಾಗಂದರೆ, ಯೂಲಿಯಾನನು ಕೆಲವು ದಿವಸದಿತ್ತ ಕದನವಾಡಲು, ಬಹಳ ಘಾಯ ತಾಗಿ, ಕುದುರೆಯಿಂದ ಕೆಳೆಯಕ್ಕೆ ಬೀಳುತ್ತಿರುವ ಹೊತ್ತು ತನ್ನ ರಕ್ತ ತುಂಬಿ ಕೊಂಡಿರುವ ಗುದ್ದನ್ನು ಆಕಾಶದ ಕಡೆಗೆತ್ತಿ, ರೋಷದಿಂದ—ಹಾಹಾ, ಗಲಿಲಾಯದವನೇ, ನೀನು ಹ್ಯಾಗಾದರೂ ಗೆದ್ದಿದ್ಧಿ! ಎಂದು, ಒದರಿ, ಬರುವ ರಾತ್ರಿಯಲ್ಲಿ, ಕ್ರಿ. ಶ. 363ನೇ ವರುಷದಲ್ಲಿ, ತನ್ನ ಜೀವತ್ವದ 32ನೇದರಲ್ಲಿ, ಸತ್ತನು. ಅವನು 20 ತಿಂಗಳು ಮಾತ್ರ ಆಳಿದ್ದನು.



## 25. ಕ್ರೈಸ್ತತ್ವವು ರೋಮಿಾಯ ಸಾಮ್ರಾಜ್ಯದೊಳಗೆ ಮೂರ್ತಿಪೂಜಕತ್ವವನ್ನು ಬಹಿರಕ್ಕೆ ಪೂರಾ ಗೆದ್ದದ್ದು.

ಯೂಲಿಯಾನನು ಸತ್ತಾಗ ಮತ್ತೊಬ್ಬ ವಿಗ್ರಹಾರಾಧಕನು ಕೈಸರನಾಗಲಿಲ್ಲ. ಅವನ ಮರಣದ ಮೇಲೆ ದಂಡಿನವರು ಯೊವಿಯಾನನೆಂಬ ಒಬ್ಬ ಕ್ರೈಸ್ತ ದಳವಾಯಿಯನ್ನು, ಕೈಸರನೆಂದು, ಆರಿಸಿ ಕೊಂಡರು. ಇವನು ಆ ಸಾಸಾನಿದರ ದೊಡ್ಡ ಬಲಕ್ಕೆ ಸೋತು, ಅರ್ಮಿನಿಯ ದೇಶದ[2] ನೀಸಿಬಿಸ್ ಮುಂತಾದ ಹಲವು ಪಟ್ಟಣಗಳನ್ನು ಅವರ ವಶಕ್ಕೆ ಕೊಟ್ಟು ಬಿಟ್ಟು, ಹಿಂದಿರುಗಿದನು. ಬಳಿಕ ಅವನು ಸಾಮ್ರಾ

1) 189ನೇ ಪಾನು. 2) 7ನೇ, 72ನೇ, 75ನೇ, 81ನೇ ಪಾನು.

ಜ್ಯವನ್ನು ಚಂದಾಗಿ ಆಳುವವನಾಗಿ, ಕ್ರೈಸ್ತರಿಗೆ ವಿರುದ್ಧವಾದ ರಾಜಾಜ್ಞೆಗಳನ್ನು ತೆಗೆದು ಹಾಕಿ, ಅವರನ್ನೊಲಿಸಿದರೂ ಮೂರ್ತಿಪೂಜಕರಿಗೆ ಏನೇನೂ ಅನ್ಯಾಯ ಮಾಡಲಿಲ್ಲ. ಸಾಮ್ರಾಜ್ಯಕ್ಕೆ ಅವನಿಂದ ಬಹಳ ಉಪಕಾರವಾದೀತೆಂತ, ಪ್ರಜೆ ಎಲ್ಲವೂ ಪ್ರತೀಕ್ಷಿಸುತ್ತಿರುವಲ್ಲಿ ಅವನು 8 ತಿಂಗಳು ಮಾತ್ರ ಕಾರಭಾರು ನಡಿಸಿ, ಕ್ರಿ. ಶ. 364ನೇ ವರುಷದಲ್ಲಿ ತೀರಿ ಹೋದನು.

ಆಗ ಸೈನ್ಯದವರೆಲ್ಲರೂ 1ನೇ ವಲೆಂತೀನಿಯಾನನೆಂಬವನಿಗೆ ಪಟ್ಟ ಕಟ್ಟುತ್ತಲೇ ಇವನು ತನ್ನ ಸಹೋದರನಾದ ವಲೆಂತನೆಂಬವನನ್ನು ತನ್ನ ಸಹಾಯಕೈಸರನನ್ನು ಮಾಡಿ ಕೊಂಡು, ಕೊನ್ಸ್ತಂತೀನೊಪೊಲಿಯು ರಾಜಧಾನಿಯಾದ ಸಾಮ್ರಾಜ್ಯದ ಮೂಡಣ ಭಾಗವನ್ನು ಅವನ ಪರಿಪಾಲನೆಗೆ ಒಪ್ಪಿಸಿ ಕೊಟ್ಟು, ತಾನು ಪಡುವಲ ಭಾಗವನ್ನಾಳುವವನಾದನು. ವಲೆಂತೀನಿಯಾನನು ಯೊವಿಯಾನನಂತೆ ಕ್ರೈಸ್ತರನ್ನೂ ಮೂರ್ತಿಪೂಜಕರನ್ನೂ ಪಕ್ಷಪಾತವಿಲ್ಲದೆ ಅದೇ ಸಮದಯೆಯಿಂದ ನಡಿಸುತ್ತಿದ್ದರೂ ಅವನ ರಾಜ್ಯಭಾರದೊಳಗೆ ಕ್ರೈಸ್ತತ್ವಕ್ಕೆ ದಿವ್ಯವಾದ ಸ್ವಂತ ಬಲದಿಂದ ಎಂದಿನಂತೆ ಹೊರಬೆಳವಣಿಗೆ ಬರುತ್ತಿತ್ತು; ಮೂರ್ತಿಪೂಜಕತ್ವವು ಮುಖ್ಯವಾಗಿ ಊರು ಹಳ್ಳಿಗಳಲ್ಲಿ ಮಾತ್ರ ಇನ್ನು ಉಳಿಯಿತು. ಅಷ್ಟರೊಳಗೆ ವಲೆಂತನು ಅರೀಯಾನರಿಗೊಳಗಾಗಿ, ಕ್ರೈಸ್ತರಿಗೆ ತಕ್ಕ ಶಾಂತಿಯನ್ನು ಪೂರಾ ಮರೆತು ಬಿಟ್ಟು, ತನ್ನ ದಿಕ್ಕಿನ ಮೂರ್ತಿಪೂಜಕರಿಗೆ ತಂಟೆ ಕೊಡುತ್ತಿದ್ದದಲ್ಲದೆ ನೀಕೇನವಿಶ್ವಾಸಪ್ರಮಾಣಿಗಳಿಗೆ ಹಿಂಸೆಯನ್ನಾದರೂ ಮಾಡುತ್ತಿರುವನು. ಕ್ರಿ. ಶ. 367ನೇ ವರುಷದಲ್ಲಿ ಅವನು ಸಹ, ವಿಶ್ವಾಸಭ್ರಷ್ಟನಾದ ಯೂಲಿಯಾನನು ಗೈದಂತೆ[1], ಅಥನಸಿಯನೆಂಬ ಅಲೆಕ್ಸಂದರೀಯದ ಆ ಅಧ್ಯಕ್ಷನನ್ನು ಗಡಿಯ ಹೊರಗೆ ಹಾಯಿಸಿದನು; ಆದರೂ ಅಲ್ಲಿಯ ಕ್ರೈಸ್ತ ಪ್ರಜೆಯು ಬಹಳ ಗುಣುಗುಟ್ಟುವ ಕಾರಣದಿಂದ ಅವನನ್ನು 4 ತಿಂಗಳಿಗೀಚೆ ತನ್ನ ಅಧ್ಯಕ್ಷತೆಯ ಸ್ಥಳಕ್ಕೆ ತಿರಿಗಿ ಬರಲೀಸಿದನು. ನೀಕೇನರೆಂಬ ಸದ್ವಿಶ್ವಾಸಪ್ರಮಾಣಿಗಳ ಮುಖ್ಯ ಆಧಾರವಾಗಿರುವ ಅಥನಸಿಯನು ಅಂದಿನಿಂದ ಕ್ರಿ. ಶ. 373ನೇ ವರುಷದಲ್ಲಿ ತಾನು ಸಾಯುವ ವರೆಗೆ ಸಮಾಧಾನದಿಂದಿರುವ ಅನುವಾಯಿತು. ಕೊನ್ಸ್ತಂತೀನೊಪೊಲಿಯ ನೀಕೇನರು ಅರೀಯಾನರ ಕಡೆಯಿಂದ ನಿತ್ಯದಲ್ಲಿ ಹೇರಳ ಉಪದ್ರವ ಪಡುತ್ತಿರಲಿಕ್ಕೆ, ಸುಮಾರು ಕ್ರಿ. ಶ. 378ನೇ ಅಬ್ದ ಅಲ್ಲಿಯ ನೀಕೇನ ಸಭೆಯ 80 ಮಂದಿ ಹಿರಿಯರು ನೀಕೊಮೇದೀಯದಲ್ಲಿರುವ[2] ವಲೆಂತನ ಹತ್ತರ ಹೋಗಿ, ಅವನ ಕೈಯಲ್ಲಿ ಒಂದು ವಿನಂತಿಪತ್ರ ಕೊಟ್ಟ ಹಿಂದೆ ಆ ಕೈಸರನು ನೀಕೇನರ ಅಂಥ ಧೈರ್ಯಕ್ಕೆ ರೋಷಿಸಿ, ಅವರಿಗೆ ಸಂಕೋಲೆ ಹಾಕಿಸಿ, ಒಂದು ಹಡಗವನ್ನೇರಿಸಿ, ಇದನ್ನು ಧಡಕ್ಕೆ ಸ್ವಲ್ಪ ದೂರ ನೂಕಿಸಿ, ಅದಕ್ಕೆ

1) 198ನೇ ಪಾನು. 2) 124ನೇ, 125ನೇ, 182ನೇ, 184ನೇ ಪಾನುಗಳು.

ಬೆಂಕಿ ಹಚ್ಚಿಸಿದನು. ಆಗ ಆ 80 ಮಂದಿ ಭಕ್ತರು ದೊಡ್ಡ ಶಬ್ದದಿಂದ ದೇವರನ್ನು ಕೀರ್ತಿಸುತ್ತಾ ಸುಟ್ಟು ಹೋಗುತ್ತಿರಲು, ತೀರದಲ್ಲಿ ನಿಂತು ಕೊಂಡು ನೋಡಿ ಕೇಳುವವರಲ್ಲಿ ಅನೇಕರು ಕ್ರಿಸ್ತವಿಶ್ವಾಸಿಗಳೂ ನೀಕೇನ ವಿಶ್ವಾಸಪ್ರಮಾಣದವರೂ ಆದರು.—ಅಲೆಕ್ಸಂದರೀಯದ ಅಥನಸಿಯನು ಮಡಿದ ತರುವಾಯ ಆ ಕೈಸರನು, ಐಗುಪ್ತದ ಎಲ್ಲಾ ನೀಕೇನರನ್ನು ಗಡಿ ದಾಟಿಸ ಬೇಕೆಂದು, ಆಜ್ಞಾಪಿಸಿ, ದಂಡುಗಾರರನ್ನು ಕಳುಹಿಸಿ, ಅನೇಕ ಸದ್ಭಕ್ತರನ್ನು ಕೊಲ್ಲಿಸಿ, ಅಲೆಕ್ಸಂದರೀಯದಲ್ಲಿ ಒಬ್ಬ ಅರೀಯಾನ ಅಧ್ಯಕ್ಷನನ್ನು ಇಟ್ಟನು.

1ನೇ ವಲೆಂತೀನಿಯಾನನು ಕ್ರಿ. ಶ. 374ನೇ ವರುಷದಲ್ಲಿ ಸತ್ತಿದ್ದನು; ಬಳಿಕ ಅವನ ಇಬ್ಬರು ಕುಮಾರರಾದ ಗ್ರಾತಿಯಾನನೂ 2ನೇ ವಲೆಂತೀನಿಯಾನನೂ ಸಾಮ್ರಾಜ್ಯದ ಆ ಪಶ್ಚಿಮ ಭಾಗದಲ್ಲಿ ಅವನ ಉತ್ತರಾಧಿಕಾರಿಗಳಾಗಿದ್ದರು; ವಲೆಂತೀನಿಯಾನನು ಅಂದು 4 ವರುಷದ ಶಿಶುವಾಗಿದ್ದ ದೆಸೆಯಿಂದ ಅಧಿಕಾರವೆಲ್ಲವು ಒಂದು ವಿಧವಾಗಿ ಅನಕ ಅವನ ಅಣ್ಣನೊಬ್ಬನ ಕೈಯಲ್ಲಿಯೇ ಇರುವದು.

ತದನಂತರ ಒಂದು ವರುಷದ ಈಚೆ (ಕ್ರಿ. ಶ. 375ನೇ ಅಬ್ದ) ಜನಾಂಗಸಂಚಾರವೆಂಬದೊಂದು ಮಹಾ ಸಂಗತಿಯು ರೋಮಿಾಯ ಸಾಮ್ರಾಜ್ಯಕ್ಕೆ ಬಂದು ಮುಟ್ಟಿತು. ಹ್ಯಾಗಂದರೆ, ಚೀನ ದೇಶದವರು ತಮ್ಮ ನೆರೆಯವರೂ ಬಹು ಕಾಡುಜನರೂ ಆದ ಹೂಣರೆಂಬ ತುರ್ಕವಂಶಜರ ಮೇಲೆ ಬಿದ್ದು, ಅವರನ್ನು ಪಶ್ಚಿಮಕ್ಕೆ ಓಡಿಸಿದಾಗ ಕ್ರಿ. ಶ. 375ನೇ ವರುಷಕ್ಕೆ ಈ ಹೂಣರು ಕಸ್ಪಿಕ ಸರೋವರದಲ್ಲಿ ಸಂಗಮವಾಗುವಂಥ ವೊಲ್ಗವೆಂಬ ನದಿಗಾಗಮಿಸಿ, ಅದನ್ನು ದಾಟಿ, ಅದಕ್ಕೀ ಕಡೆಯಲ್ಲಿ ನೆಲೆಗೊಂಡಿರುವ ಗೆರ್ಮಾನರಾದ ಪೂರ್ವ ಗೊಥರನ್ನು ಚದರಿಸಿ ಬಿಟ್ಟು, ಇವರೀಚೆ ದೋನವು ನದಿಯ[1] ಉತ್ತರಪೂರ್ವದಲ್ಲಿರುವ ಪಶ್ಚಿಮ ಗೊಥರದೊಂದು ಭಾಗದ ಮೇಲೆ ಸಹ ಕವಿದರು.

ಈ ಗೊಥರಲ್ಲಿ ಕ್ರೈಸ್ತತ್ವವು ಶೇರಿದ ರೀತಿಯು ಹಿಂದೆ ಹೇಳಿ ಅದೆ[2]; ಅದು ಮುಖ್ಯವಾಗಿ ಪಶ್ಚಿಮ ಗೊಥರಲ್ಲಿ ಹಬ್ಬಿ ಕೊಂಡಿತು. ಇದಕ್ಕೆ ಒಂದು ದೃಷ್ಟಾಂತವೇನಂದರೆ, ಹಿಯೆರೋನುಮನೆಂಬ ಆ ಸಭಾಬೋಧಕನು[3] ಪರಿಶುದ್ಧ ಬರಹದ ಮೂಲಭಾಷೆಗಳನ್ನು ಚಂದಾಗಿ ಬಲ್ಲವನಾದ್ದರಿಂದ ಕ್ರಿ. ಶ. 403ನೇ ವರುಷ ಪಶ್ಚಿಮ ಗೊಥರ ಬೋಧಕರಲ್ಲಿಬ್ಬರು ಬೆತ್ಲೆಹೇಮಿನಲ್ಲಿ ಮಠವಾಸಿಯಾಗಿದ್ದ ಅವನ ಹತ್ತರ ಕಳುಹಿಸಿ, ಪರಿಶುದ್ಧ ಬರಹದ ಹಳೇ ಒಡಂಬಡಿಕೆಯ ಅನೇಕ ವಚನಗಳ ನಿಜಾರ್ಥ ಕೇಳಿ ಕೊಳ್ಳಲಾಗಿ, ಆ ಬೋಧಕನು ಬಹಳ ವಿಸ್ಮಯ ಪಟ್ಟು—ವರ್ಬರ ಭಾಷೆಯವರಾದ ಗೊಥರು ಎಬ್ರೀಯ ಭಾಷೆಯ ನಿಜಾರ್ಥ ವಿಚಾರಿಸುವರೆಂದು,

1) 88ನೇ, 114ನೇ ಪಾನುಗಳು. 2) 88ನೇ, 180ನೇ, 181ನೇ, 189ನೇ ಪಾನು. 3) 173ನೇ ಪಾನು.

ನಮ್ಮಲ್ಲಿ ನೆನಸುತ್ತಿದ್ದವರು ಯಾರು? ಗ್ರೇಕರು (ಅಂದರೆ ಗ್ರೇಕ ರಾಜ್ಯದ[1] ಕ್ರೈಸ್ತರು) ನಿದ್ರೆ ಗೊಂಡವರ ಹಾಗಿದ್ದು, ತಮ್ಮೊಳಗೆ ಬರೇ ತರ್ಕ[2] ಮಾಡುತ್ತಿರುವಲ್ಲಿ ಗೆರ್ಮಾನರು ದೇವರ ವಾಕ್ಯವನ್ನು ಅತಿರೇಕ ಚಿಂತೆಯಿಂದ ಪರಿಶೋಧಿಸುತ್ತಾರಲ್ಲವೋ? ಎಂದು, ಅವರಿಗೆ ಉತ್ತರವಾಗಿ ಬರೆದ ಪತ್ರದಲ್ಲಿ ತನ್ನ ಮೆಚ್ಚಿಗೆ ತೋರಿಸಿದನು.—ಕ್ರೈಸ್ತ ಮತದ ಇಂಥಾ ಅಭಿವೃದ್ಧಿಯು ಗೊಥರೊಳಗೆ ಹ್ಯಾಗಾಯಿತಂದರೆ, ಅವರು ಸಣ್ಣ ಅಸಿಯದ ಕಪ್ಪದೊಕಿಯದಿಂದ ಶೆರೆ ಮಾಡಿ ಕೊಂಡು ಬಂದಿದ್ದ ಒಂದು ಕ್ರೈಸ್ತ ಕುಟುಂಬದಲ್ಲಿ ಕ್ರಿ. ಶ. 318ನೇ ವರುಷಕ್ಕೆ ಉಲ್ಫಿಲ (ವೊಲ್ಫ್ಲೆ) ಎಂಬವನು ಹುಟ್ಟಿದನು; ಇವನು ತನ್ನ ಜೀವಿತದ 30ನೇ ವರುಷದ ತನಕ ಸುವಾರ್ತಿಕನಾಗಿದ್ದು[3], ಬಳಿಕ ಕೊನ್ಸ್ತಂತೀನೊಪೊಲಿಯ ಅಧ್ಯಕ್ಷನ ಹಸ್ತಾಧಾನದಿಂದ ಗೊಥರದೊಂದು ಕ್ರೈಸ್ತ ಸಭೆಯ ಅಧ್ಯಕ್ಷನಾಗಿ, ಎಲ್ಲಾ ಗೊಥರಲ್ಲಿ, ವಿಶೇಷವಾಗಿ ಪಶ್ಚಿಮದವರಲ್ಲಿ, ಕ್ರೈಸ್ತ ಮತವನ್ನು ನಾನಾ ವಿಧದಿಂದ ವಿಸ್ತರಿಸುತ್ತಿದ್ದ ಕಾರಣ ವಿಗ್ರಹಾರಾಧನೆಯಲ್ಲುಳಿದಂಥ ಪಶ್ಚಿಮ ಗೊಥರು ಕ್ರಿ. ಶ. 355ನೇದಕ್ಕೆ ಅಥನರೀಕನೆಂಬ ನಾಯಕನಿಂದ ನಡಿಸಿ ಕೊಂಡು, ಕ್ರೈಸ್ತರಾದಂಥವರಿಗೆ ಬಹಳ ಹಿಂಸೆ ಮಾಡ ತೊಡಗಿದರು. ಆದ್ದರಿಂದ ಉಲ್ಫಿಲನು ಇವರಲ್ಲಿ ಒಂದು ದೊಡ್ಡ ಭಾಗದ ಸಂಗಡ ಕೊನ್ಸ್ತಂತಿಯನೆಂಬ ಕೈಸರನ[4] ಶರಣ ಹೊಕ್ಕೊಳ್ಳಲು, ಇವನು, ಉಲ್ಫಿಲನು ಹಳೇ ಒಡಂಬಡಿಕೆಯ ಮೋಶೆ ಎಂಬಂಥವನೆಂದು, ಹೇಳಿ, ಅವನಿಗೆ ಸಲೆ ಮೆಚ್ಚಿ, ಆ ದೋನವು ನದಿಯ ತೆಂಕಣದಲ್ಲಿ ಅವನಿಗೂ ಅವನ ಸಂಗಾತರಿಗೂ ಭದ್ರವಾದ ವಾಸಸ್ಥಳ ಕೊಟ್ಟನು. ತದನಂತರ ಉಲ್ಫಿಲನು ಅಕ್ಷರ ತಿಳಿಯದಂಥ ತನ್ನ ಪ್ರಿಯ ಗೊಥರಿಗೆ ಒಂದು ಅಪೂರ್ವವಾದ ಅಕ್ಷರಮಾಲೆ ರಚಿಸಿ, ಕಲಿಸಿ, ಪರಿಶುದ್ಧ ಬರಹವನ್ನು ಗೊಥರ ಭಾಷಾಂತರ ಮಾಡಿದನು; ಆ ಭಾಷಾಂತರದ ಹೊಸ ಒಡಂಬಡಿಕೆಯು ನಮ್ಮ ಕಾಲದ ವರೆಗೆ ಇನ್ನೂ ಉಳಿದದೆ. ಅದಲ್ಲದೆ ಸುರಿಯದ ಮತ್ತು ಕಪ್ಪದೊಕಿಯದ ಕೆಲವರು ಕ್ರೈಸ್ತರು ಧೈರ್ಯ ತೆಕ್ಕೊಂಡು, ಉಲ್ಫಿಲನ ಒತ್ತಾಸೆಯಿಂದ ವಿಗ್ರಹಾರಾಧನೆಯ ಆ ಗೊಥರಲ್ಲಿಯೂ ಕ್ರಿಸ್ತನ ಹೆಸರು ಸಾರುವವರಾಗಿ, ಅನೇಕರನ್ನು ಮಾನಸಾಂತರ ಪಡಿಸುತ್ತಾ ಬಂದರು.

ಉಲ್ಫಿಲನು ಕ್ರಿ. ಶ. 360ನೇ ವರುಷದಲ್ಲಿ ಕೊನ್ಸ್ತಂತಿಯ ಕೈಸರನ ಪ್ರೇರಣೆಯಿಂದ ಒಂದು ಅರೀಯಾನ ವಿಶ್ವಾಸಪ್ರಮಾಣಕ್ಕೆ ಕೈಬರಹ ಹಾಕಿದ್ದು ಬಹಳ ದುಃಖಕರವಾದದ್ದು; ಅಂದಿನಿಂದ ಅರೀಯಾನತ್ವವು ಗೊಥರಲ್ಲಿ ಸಹ ಶೇರಿತು. ಬಳಿಕ ವಲೆಂತ ಕೈಸರನ[5] ಸೇನಾಧಿಪತಿಗಳಲ್ಲೊಬ್ಬನು ತನ್ನ ಪತಿಯ ಮೇಲೆ ದಂಗೆ

1) 26ನೇ ಸಂಧಿಯ ಆರಂಭ ನೋಡು. 2) ಅರೀಯಾನತ್ವ ಮುಂತಾದ್ದು. 3) 69ನೇ ಪಾನು. 4) 188ನೇ, 195ನೇ, 196ನೇ ಪಾನು. 5) 188ನೇ, 200ನೇ ಪಾನು.

ತೆಗೆದಾಗ ಕ್ರೈಸ್ತರಾಗದಿದ್ದ ಗೊಥರ ಅಥನರೀಕನೆಂಬ ಆ ಮುಖ್ಯಸ್ಥನು ಆ ದಂಗೆಗಾರನಿಗೆ ಸಹಾಯ ಮಾಡಲು, ವಲೆಂತನು ಆ ಗೊಥರನ್ನು ಕಠಿಣವಾಗಿ ದಂಡಿಸಿ, ತಾನು ಅಧ್ಯಕ್ಷರನ್ನು ಕಳುಹಿಸಿ, ಅರೀಯಾನ ಕ್ರೈಸ್ತತ್ವವನ್ನು ಅವರಲ್ಲಿ ಪಸರಿಸಿದನು. ಅಥನರೀಕನು ಕ್ರಿ. ಶ. 370ನೇ ವರುಷದಲ್ಲಿ, ತಾನು 15 ವರುಷದ ಹಿಂದೆ ಸಹ ಮಾಡಿದ ಹಾಗೆ, ಮೂರ್ತಿಪೂಜಾಭಿಮಾನದಿಂದ ತನ್ನ ಕೆಳಗಿನ ಕ್ರೈಸ್ತರನ್ನು ತಿರಿಗಿ ಅತಿ ಕ್ರೂರವಾಗಿ ಹಿಂಸಿಸುವವನಾದನು; ಆದರೂ ಇವರು ತಮ್ಮ ದಿವ್ಯ ನಾಯಕನಾದ ಕ್ರಿಸ್ತನನ್ನು ಬಿಡದಲಿದ್ದರು; ಅನೇಕರು ಸಂತೋಷದಿಂದ ರಕ್ತಸಾಕ್ಷಿಗಳಾದರು. ಹೀಗಿರಲಿಕ್ಕೆ, ಆ ಗೊಥರಲ್ಲಿಯ ಕೆಲವರು ಪಂಡಿತರ ತಲೆಯೊಳಗೆ ಆ ದ್ವಯಾರ್ಥ ಉಳ್ಳ ಅರೀಯಾನತ್ವವು ಒಂದು ಪ್ರಕಾರವಾಗಿ ಸುಳಿದಾಡುತ್ತಿದ್ದರೂ ಸಾಧಾರಣ ಸಭ್ಯರು ಅದರ ಅಂತರರ್ಥವರಿಯದೆ, ಕ್ರಿಸ್ತನ ಮೇಲಿನ ಭಕ್ತಿಯೇ ಶ್ರೇಷ್ಠವೆಂತ, ಅನುಭವಿಸಿ, ತಮ್ಮಲ್ಲಿ ಪ್ರಬಲವಾಗಿದ್ದ ದೇವರ ವಾಕ್ಯದ ಮೇರೆಗೆ ತಮ್ಮ ಹೃದಯವನ್ನು ತಮ್ಮ ಇಷ್ಟ ಮಹಾಸ್ವಾಮಿಯಾದ ಕ್ರಿಸ್ತನ ಮೇಲೆ ಅಚಲವಾಗಿ ನೆಲೆ ಗೊಳ್ಳಿಸಿದ್ದರೆಂತ, ತಿಳು ಕೊಳ್ಳ ಬೇಕು. ಕೈಸರನಾದ ವಲೆಂತನು ತನ್ನ ಸಹಾಯದ ಆಶೆ ತೋರಿಸಿ, ಹಿಂಸೆಯೊಳಗಿನ ಆ ಗೊಥರನ್ನು ಹ್ಯಾಗೂ ಬಹಿರಕ್ಕೆ ಅರೀಯಾನರಾಗುವದಕ್ಕೆ ಸಮ್ಮತಿ ಪಡಿಸಲನುಕೂಲವಾದಂದು ಅವನು ತನ್ನ ಸೈನಿಕರಿಂದ ಆ ಹಿಂಸೆ ನಿಲ್ಲಿಸಿದನು.

ತರುವಾಯ ಹೂಣರು ಕ್ರಿ. ಶ. ಆ 375ನೇ ವರುಷದಲ್ಲಿ ದೋನವು ನದಿಯ ಉತ್ತರಪೂರ್ವದ ದಿಕ್ಕಿನಲ್ಲಿ ಇನ್ನು ಉಳಿದಿರುವ ಪಶ್ಚಿಮ ಗೊಥರ ಮೇಲೆ ಬೀಳಲಾಗಿ, ಇವರಲ್ಲಿ ಕ್ರೈಸ್ತತ್ವಕ್ಕೆ ವಿರುದ್ಧವಾದ ಒಂದು ಪಾಲು ಅಥನರೀಕನೊಳಗೆ ಬೇರೆ ಕಡೆಗೆ ಓಡಿ ಹೋಯಿತು; ಆದರೆ 2,00,000 ಯುದ್ಧಶಾಲಿಗಳಾದ ಕ್ರೈಸ್ತರಿರುವ ಮತ್ತೊಂದು ಪಾಲು ಉಲ್ಫಿಲನಿಂದ ಸ್ನಾನ ಹೊಂದಿದ ಪ್ರೀದಿಗೆರ್ನನೆಂಬವನ ಕೈಯ ಕೆಳಗೆ ಕೆಲವು ಕಾಲ ಹೂಣರಿಗೆ ಎದುರಿಸುತ್ತಿದ್ದು, ಕಡೇಲಿ ಸೋತು, ಉಲ್ಫಿಲನ ಮುಖಾಂತರದಿಂದ—ತಮಗೆ ದೋನವು ನದಿ ದಾಟಲಿಕ್ಕೂ ರೋಮಿಾಯ ಸಾಮ್ರಾಜ್ಯದಲ್ಲಿ ಇಳುಕೊಳ್ಳಲಿಕ್ಕೂ ಅಪ್ಪಣೆಯಾಗ ಬೇಕು; ಅಪ್ಪಣೆಯಾದರೆ ನಿಮಗೆ ವಿಧೇಯರಾಗಿ, ನಿಮ್ಮ ಸೇನೆಯಲ್ಲಿ ಸೇವೆ ಮಾಡುವಣ! ಎಂದು, ಕ್ರಿ. ಶ. 376ನೇ ದರಲ್ಲಿ ವಲೆಂತನ ಹತ್ತರ ಬಹು ತರ ಬೇಡಿ ಕೊಂಡಿತು. ಆಗ ಈ ಕೈಸರನು, ನೀವೆಲ್ಲರೂ ಅರೀಯಾನ ವಿಶ್ವಾಸಪ್ರಮಾಣದವರಾದರೆ ಆದೀತೆಂತ, ತಿಳಿಸಿದ್ದಕ್ಕೆ ಆ ಗೊಥರು ಮುಂಚಿನಂತೆ ಒಡಂಬಟ್ಟು, ಬಂದು, ಥ್ರಾಕಿಯ ನಾಡಿನಲ್ಲಿ[1] ನಿವಾಸಿಗಳಾದರು. ಅಲ್ಲಿಯ ರೋಮಿಾಯ ಪ್ರತಿನಿಧಿಗಳು ಅವರ ಮೇಲೆ ಹೇರಳ ತಂಟೆ ಬ

1) 181ನೇ ಪಾನು.

ರಿಸುತ್ತಲಿರುವಲ್ಲಿ ಕೈಸರನು ಅವರನ್ನು ಉಲ್ಫಿಲನ ವಿನಂತಿಗಳ ಮೇಲಾದರೂ ಸಂರಕ್ಷಣ ಮಾಡದ ಕಾರಣ ಆ ಗೊಥರು ಇನ್ನೂ ತಾಳಲಾರದೆ, ಪೂರ್ವ ಗೊಥರದೊಂದು ಗುಂಪು ಕೂಡಿ ಕೊಂಡು, ತಮ್ಮ ಮುಖ್ಯಸ್ಥನಾದ ಪ್ರೀದಿಗೆರ್ನನಿಂದ ನಡಿಸಿ ಕೊಂಡು, ಕೈಸರನಿಗೆದುರಾಗಿ, ಕ್ರಿ. ಶ. 378ನೇ ವರುಷ ಹದ್ರಿಯಾನೊಪೊಲಿ ಪಟ್ಟಣದ[1] ಹತ್ತರ ವಲೆಂತನ ಸೇನೆಯ ಎರಡು ಭಾಗವನ್ನು ಕೊಂದು ಬಿಟ್ಟರು; ಒಂದು ಭಾಗವು ಮಾತ್ರ ತಪ್ಪಿಸಿ ಕೊಂಡು ಹೋಯಿತು. ಯುದ್ಧದಲ್ಲಿ ಘಾಯತಾಗಿದ ವಲೆಂತನನ್ನು ಅವನ ಸೈನಿಕರು ಒಬ್ಬ ಒಕ್ಕಲಿಗನ ಮನೆಗೊಯಿದು, ಒಳಗೆ ಮಲಗಿಸಿದಾಗ ಗೊಥರು ಸುತ್ತ ಮುತ್ತಲೂ ನೆರದು, ಆ ಮನೆಗೆ ಕಿಚ್ಚು ಹಾಕಿದರು; ಅಂದು ಆ ಕೈಸರನೂ ಅವನ ಸಂಗಡಿಗರೂ ಸುಟ್ಟಳಿದರು. ವಲೆಂತನು ಒಮ್ಮೆ ಆ 80 ಮಂದಿ ಸದ್ಭಕ್ತರನ್ನು ಸಂಹರಿಸಿದ ರೀತಿಯಿಂದಲೇ[2] ಅವನು ತಾನು ಸಂಹಾರ ಪಡ ಬೇಕಾಯಿತು. ಪ್ರೀದಿಗೆರ್ನನು ಮಡಿದು ಸ್ವಲ್ಪ ಕಾಲ ಹೋದ ಬಳಿಕ ಆಲರೀಕನೆಂಬವನು ಪಶ್ಚಿಮ ಗೊಥರ ಅಧಿಪತಿಯಾದನು. ದಿನಗತಿಯಿಂದ ಈ ಗೊಥರ ಮುಖಾಂತರ ಅರೀಯಾನ ಕ್ರೈಸ್ತತ್ವವು ಹಿಂದೆ ಹೇಳಿದ ಇತರ ಗೆರ್ಮಾನರಲ್ಲಿ ಸಹ ಶೇರಿತು[3].

ಅಷ್ಟರಲ್ಲಿ ರೋಮಿಾಯ ಸಾಮ್ರಾಜ್ಯದ ಪಡುವಲ ಭಾಗವನ್ನು ಆಳುತ್ತಿದ್ದ ಗ್ರಾತಿಯಾನನು[4] ವಲೆಂತನ ಮರಣದ ಮೇಲೆ ಸ್ಪಾನಿಯದೇಶಸ್ಥನಾದ ಥೆಯೊದೊಸಿಯನೆಂಬ ಒಬ್ಬ ಒಳ್ಳೇ ಸೇನಾಧಿಪನನ್ನು, ಸಾಮ್ರಾಜ್ಯದ ಮೂಡಣ ಭಾಗದ ಕೈಸರನೆಂದು, ನೇಮಿಸಿದನು. ಇವನು ನೀಕೇನರ ಸ್ನೇಹಿತನಾಗಿ, ಕ್ರಿ. ಶ. 380ನೇ ವರುಷ ಮಕೆದೊನಿಯದ ಥೆಸ್ಸಲೊನೀಕೆ ಪಟ್ಟಣದಲ್ಲಿ[5] ಸ್ನಾನ ಹೊಂದಿ, ಗ್ರಾತಿಯಾನನು 383ನೇದರಲ್ಲಿ ತೀರಿ ಹೋದನಂತರ ಇವನ ತಮ್ಮನಾದ 13 ವರುಷದ 2ನೇ ವಲೆಂತೀನಿಯಾನನನ್ನು, ಉತ್ತರಾಧಿಕಾರಿಯೆಂದು, ಸ್ಥಾಪಿಸಿದನು; ಇವನು 9 ವರುಷದಿತ್ತ ಕೊಲೆ ಪಟ್ಟು ಸಾಯಲಾಗಿ, ಥೆಯೊದೊಸಿಯನು ಕ್ರಿ. ಶ. 394ನೇದರಲ್ಲಿ ಆಲರೀಕನೆಂಬ ತನ್ನ ಗೆಳೆಯನಾಗಿದ್ದಂಥ ಆ ಗೊಥಿಕ ಮುಖ್ಯಸ್ಥನ ದಂಡಿನ ಸಹಾಯದಿಂದ ರೋಮಿಾಯ ಸಾಮ್ರಾಜ್ಯದ ಏಕ ಚಕ್ರವರ್ತಿಯಾದನು. ಅವನು ಅಂದಿಗೆ 13 ವರುಷ ಮುಂಚೆ 2ನೇ ಸರ್ವಕ್ರೈಸ್ತಸಭಾಸಂಘ ಕೂಡಿಸಿದ್ದನೆಂತ, ಹಿಂದೆ ಓದಿದ್ದೀರಿ[6]. ಅದರಲ್ಲಿ, ಅರೀಯಾನತ್ವವು ಪಾಷಂಡವೆಂತ, ತೀರ್ಪಾದದಕ್ಕೆ ಉಲ್ಫಿಲನು ಮನಸ್ತಾಪ ಗೊಂಡು, 6 ವರುಷದ ಮೇಲೆ ಸತ್ತಿದ್ದನು.

ಪಟ್ಣಗಳಲ್ಲಿ ಇನ್ನೂ ಉಳಿದಿದ್ದ[7] ಮೂರ್ತಿಪೂಜಕರಲ್ಲಿ ಹೆಚ್ಚು ಮಂದಿಯು

---

1) 178ನೇ ಪಾನು. 2) 201ನೇ ಪಾನು. 3) 189ನೇ ಪಾನು. 4) 201ನೇ ಪಾನು. 5) 48ನೇ ಪಾನು. 6) 188ನೇ ಪಾನು. 7) 200ನೇ ಪಾನು ಸರಿ ನೋಡು.

ಥೆಯೊದೊಸಿಯನ ಆಳ್ವಿಕೆಯೊಳಗೆ ಕ್ರೈಸ್ತರಾದ್ದರಿಂದ ವಿಗ್ರಹಾರಾಧಕರಿಗೆ ಪಾಗಾನರು ಅಂದರೆ ಹಳ್ಳಿಯವರು ಎಂಬ ಹೆಸರು ಬಿತ್ತು. ಥೆಯೊದೊಸಿಯನು ಕ್ರೈಸ್ತತ್ವವನ್ನು ಸಾಮ್ರಾಜ್ಯದಲ್ಲೆಲ್ಲಿಯೂ ಪೂರ್ಣ ಸ್ಥಾಪಿಸುವದಕ್ಕೆ ಬಹಳ ಪ್ರಯತ್ನಗೈಯುತ್ತಿದ್ದನು; ಈ ವಿಷಯದಲ್ಲಿ ಅವನಿಗೆ ತಕ್ಕ ಮಿತಿಯು ಆಗಿಂದಾಗ ಸ್ವಲ್ಪ ತಪ್ಪಿತೆಂತ, ಸಂಶಯವಿಲ್ಲ. ಅವನು ಏಕ ಚಕ್ರವರ್ತಿ ಆಗದ್ದಕ್ಕಿಂತ ಮುಂಚೆ ಕ್ರಿ. ಶ. 386ನೇ ವರುಷ ಅವನು ತನ್ನ ರಾಜ್ಯಭಾಗದೊಳಗಿನ ಅಸಿಯದಲ್ಲಿಯೂ ಐಗುಪ್ತದಲ್ಲಿಯೂ ಸಕಲ ದೇವಸ್ಥಾನಗಳನ್ನು ಮುಚ್ಚಿಸಿದನು. ಬಳಿಕ ಥೆಯೊಫಿಲನೆಂಬ ಅಲೆಕ್ಸಂದರೀಯದ ಅಧ್ಯಕ್ಷನು ಮೂರ್ತಿಪೂಜೆಯು ನಿಂತು ಹೋದ ಅಂಥ ದೇವಸ್ಥಾನಗಳನ್ನು ಕ್ರೈಸ್ತ ದೇವಾಲಯಗಳಾಗ ಮಾರ್ಪಡಿಸಲಿಕ್ಕೆ ಅಭಿಲಾಷೆ ತಾಳಿ, ಕ್ರಿ. ಶ. 391ನೇದರಲ್ಲಿ ಒಮ್ಮೆ ಅಂಥಾದ್ದೊಂದರ ಮೂರ್ತಿಗಳನ್ನು ಹೊರಗೆ ತರಿಸಿ, ಪಟ್ಣದೊಳಗೆ ಮೆರವಣಿಗೆ ಮಾಡಿಸಿ, ಅವಕ್ಕೆ ವ್ಯರ್ಥವಾಗಿ ನಾನಾ ತರದ ಹಾಸ್ಯ ಗೈಯುತ್ತಿರಲು, ಅಲ್ಲಿಯ ಮೂರ್ತಿಪೂಜಕರು ರೋಷ ಗೊಂಡು, ಆಯುಧ ತೆಕ್ಕೊಂಡು ಹೋಗಿ, ಒಂದು ದಿನ್ನೆಯ ಮೇಲಿರುವ ಸೆರಾಪಿಸೆಂಬ ದೇವತೆಯ[1] ದೊಡ್ಡ ಗುಡಿಯೊಳಗೆ ನೆರೆದು, ಅನೇಕ ಕ್ರೈಸ್ತರನ್ನು ಶೆರೆ ಹಿಡ ತಂದು, ಇವರು ಆ ದೇವತೆಗೆ ಪೂಜಿಸಲೊಲ್ಲೆವೆಂದರೆ ಅವರನ್ನು ವಾಚಾತೀತ ಕ್ರೂರತ್ವದಿಂದ ಕೊಲ್ಲುವವರಾದರು. ಥೆಯೊದೊಸಿಯನು ಅದರ ಸುದ್ದಿ ಕೇಳಿ, ದಂಡುಗಾರರನ್ನು ಕಳುಹಿಸಿ, ಆ ಕಲಹಿಗಳನ್ನು ಕೌಲಿಗಿಳಿಸಿ, ಕ್ಷಮಿಸಿದರೂ, ಆ ಸೆರಾಪಿಸಿನದನ್ನಲ್ಲದೆ ಉಳಿದೆಲ್ಲಾ ದೇವಸ್ಥಾನಗಳನ್ನು ಸಹ ಹಾಳು ಮಾಡ ಬೇಕೆಂದು, ಆಜ್ಞೆ ಪ್ರಕಟಿಸಿದನು. ಆ ಸೆರಾಪಿಸ್ ವಿಗ್ರಹವನ್ನು ಕುರಿತು ಮೂರ್ತಿಪೂಜಕರಲ್ಲಿ ಪೂರ್ವದಿಂದ ಒಂದು ಮಾತು ನಡಿಯುತ್ತಾ ಬಂದಿತ್ತು, ಏನಂದರೆ—ಅದು ಬಿದ್ದರೆ ಭೂಪರಲೋಕಗಳೂ ಬೀಳುವವು!—ಅದು ನಿಮಿತ್ತ ಆ ಕೈಸರನ ಆಜ್ಞೆಗೋಸ್ಕರ ಅನೇಕರು ಭಯಸ್ಥರಾದರು; ಆದರೆ ಒಬ್ಬ ಕ್ರೈಸ್ತ ದಂಡುಗಾರನು ಕೊಡ್ಲಿ ಹಿಡಿದು ಹೋಗಿ, ಆ ಪ್ರತಿಮೆಯ ತಲೆ ಒಡೆದ ಹಿಂದೆ ಪ್ರಜೆಯಲ್ಲಿ ಸ್ವಲ್ಪ ಶಾಂತಿಯಾದಂದು ಪೂಜಾರಿಗಳು—ಸ್ವಲ್ಪ ತಡ ಕೊಳ್ಳಿರಿ! ಈ ವರುಷ ನೀಲ ನದಿಯ ನೀರು ಬತ್ತಿ, ದೇಶಕ್ಕೆ ದೊಡ್ಡ ಬರವು ಬರುವದೆಂದು[2], ಅನೇಕರನ್ನು ತಿರಿಗಿ ಹೆದರಿಸಿದರು. ಆದರೂ ಆ ನೀರು ಮುಂಚೆಗಿಂತ ಅಭಿವೃದ್ಧಿಯಾಗಿ ಹರಿಯುತ್ತಾ ಬರಲಿಕ್ಕೆ, ಆ ಕಡೆಯಲ್ಲಿ ಮೂರ್ತಿಪೂಜಕತ್ವವು ತೀರಾ ಸೋತಿತು. ಕ್ರಿ. ಶ. 392ನೇ ವರುಷ ಥೆಯೊದೊಸಿಯನು, ಮೂರ್ತಿಪೂಜೆಯು ರಾಜದ್ರೋಹವೇ! ಎಂದು, ಆಜ್ಞೆ ಹೊರಡಿಸಿದನು; ರೋಮಪುರದಲ್ಲಿ ಮಂತ್ರಿಸಭೆಯವರೊಳಗೆ ಇನ್ನೂ ಇರುವ ವಿಗ್ರಹಾರಾಧಕರು ಅದನ್ನು ಓದಿ,

1) 153ನೇ ಪಾನು. 2) 103ನೇ ಪಾನು.

ಅಂಜಿ ಕೊಂಡು, ತಮ್ಮ ಪೂಜೆಯನ್ನು ಬಹಿರಂಗದಲ್ಲಿ ನಡಿಸುವದು ಬಿಟ್ಟು ಬಿಟ್ಟು, ಥೆಯೊದೊಸಿಯನು ಸತ್ತ ಮೇಲೆ ಅವನನ್ನು ತಮ್ಮ ದೇವತೆಗಳ ಲೆಖ್ಖದಲ್ಲಿ ಕೂಡಿಸಿ ಕೊಂಡರು[1]; ಅದು ವಿನಹ ಇತರರಲ್ಲನೇಕರು ಕ್ರೈಸ್ತಭಕ್ತವೇಷಧಾರಿಗಳಾದರು[2].

## 26. ರೋವಿಯಾಯ ಸಾವಮ್ರಾಜ್ಯವು ತೀರಲೆಸಗಿದ್ದು.

ಥೆಯೊದೊಸಿಯನು ತನ್ನ ಉತ್ತಮ ರಾಜ್ಯಪರಿಪಾಲನೆಗೋಸ್ಕರ ದೊಡ್ಡವನೆಂಬ ಉಪನಾಮ ಪಡದು, ತಾನು ಅತಿರೇಕ ಪ್ರೇಮದಿಂದ ಮಾಡುತ್ತಿದ್ದ ರಾಜ್ಯಕಾರ್ಯಗಳ ಚಿಂತಾಯಾಸದಿಂದ ಬಲಹೀನನಾಗಿ, ಬೇಗ ಸಾಯುವೆನೆಂದು, ತಿಳುಕೊಂಡು, ತನ್ನ 18 ವರುಷದ ಮಗನಾದ ಅರ್ಕದಿಯನ ವಶಕ್ಕೆ ಸಾಮ್ರಾಜ್ಯದ ಪೂರ್ವ ಭಾಗವನ್ನೂ ತನ್ನ 11 ವರುಷದ ಮಗನಾದ ಹೊನೋರಿಯನ ವಶಕ್ಕೆ ಅದರ ಪಶ್ಚಿಮ ಭಾಗವನ್ನೂ ಒಪ್ಪಿಸಿ ಕೊಟ್ಟ ಕ್ರಿ. ಶ. 395ನೇ ವರುಷದಲ್ಲಿ ತೀರಿದನು. ಅಂದಿನಿಂದಲೇ, ಥೆಯೊದೊಸಿಯನ ಆಶೆಗೆ ವಿರೋಧವಾಗಿಯೇ, ರೋವಿಯಾಯ ಮಹಾ ಸಾಮ್ರಾಜ್ಯವು ಇವರಿಬ್ಬರು ಮುಂತಾದ ಕೈಸರರ ಹೊಟ್ಟೆಕಿಚ್ಚಿಗೋಸ್ಕರ ಏನೂ ಸಂಬಂಧವಿಲ್ಲದಂಥ ಎರಡು ಭಾಗವಾಯಿತು; ರೋವಿಯಾಯ ಸಾಮ್ರಾಜ್ಯವೆಂಬ ಹೆಸರು ಹೋಯಿತು. ಅರ್ಕದಿಯನ ರಾಜ್ಯವು, ಪೂರ್ವ ರಾಜ್ಯವು ಅಥವಾ ಗ್ರೀಕ ರಾಜ್ಯವೆಂತ, ಹೆಸರು ಗೊಂಡಿತು; ಅದರಲ್ಲಿ ಗ್ರೀಕ ಭಾಷೆಯೊಂದೇ ನಡೆಯುವದು; ಅದರ ರಾಜಧಾನಿಯು ಕೊನ್ಸ್ತಂತೀನೊಪೊಲಿ. ಹೊನೋರಿಯನ ರಾಜ್ಯವು, ಪಶ್ಚಿಮ ರಾಜ್ಯವು ಅಥವಾ ರೋವಿಯಾಯ (ಲತೀನ) ರಾಜ್ಯವೆಂತ, ಹೆಸರು ಗೊಂಡಿತು; ಅದರಲ್ಲಿ ಲತೀನ ಭಾಷೆಯು ರೂಢಿಯಾಯಿತು; ಅದರ ರಾಜಧಾನಿಯು ರೋಮಪುರ.

ಥೆಯೊದೊಸಿಯನು ಇನ್ನು ಜೀವದಿಂದಿರುವಾಗ ಪಶ್ಚಿಮ ಗೊಥರು ತಮ್ಮ ಮುಖ್ಯಸ್ಥನಾದ ಆಲರೀಕನೆಂಬವನ ಕೆಳಗೆ ಅವನ ಸೇನೆಯಲ್ಲಿ ಒಳ್ಳೇ ಸೇವೆ ಮಾಡಿದ್ದರು[3]; ಆ ಸಮ್ರಾಜನು ಸತ್ತ ಬಳಿಕ ಅವರು, ತಕ್ಕ ಸಂಬಳವೂ ಬೇರೆ ಪ್ರತಿಫಲವೂ ಶಿಕ್ಕಲಿಲ್ಲವೆಂತ, ನೆನಸಿ, ಆಲರೀಕನ ಪರಿಪಾಲನದೊಳಗೆ ಥ್ರಾಕಿಯದಿಂದ[4] ಹೊರಟು, ಅರ್ಕದಿಯ ಕೈಸರನ ರಾಜ್ಯಕ್ಕೆ ಶೇರಿದ ಮಕೆದೊನಿಯ ಗ್ರೇಕಿಯ ಶೀಮೆಗಳೊಳ ಹೊಕ್ಕು, ಬಹಳ ಲೂಟ ಮಾಡಿ ಕೊಂಡು, ಇನ್ನೂ ಅಲ್ಲಲ್ಲಿ ಉಳಿ

1) 183ನೇ ಪಾನು. 2) 195ನೇ ಪಾನು ಸರಿ ನೋಡು. 3) 204ನೇ ಪಾನು. 4) 203ನೇ ಪಾನು.

ದಿರುವ ವಿಗ್ರಹಸ್ಥಾನಗಳನ್ನೆಲ್ಲಾ ಕೆಡವಿ ಹಾಕಿದರು. ಅರ್ಕದಿಯನಿಗೂ ಹೊನೋರಿಯನಿಗೂ ಆ ಸಮಯದಲ್ಲಿ ಮಿತ್ರಭೇದವಾಗಿರಲು, ಅರ್ಕದಿಯನು ಆಲರೀಕನನ್ನು ಮೆಚ್ಚಿಸಿ, ಕ್ರಿ. ಶ. 400ನೇ ವರುಷ ಹೊನೋರಿಯನಿಗೆದುರಿಗೆ ಈತಲಿಯ ದೇಶದ ದಿಕ್ಕಿಗೆ ಕಳುಹಿಸಿದನು. ಆಲರೀಕನು 8 ವರುಷ ಈ ದೇಶದವರನ್ನು ವಿಧ ವಿಧವಾಗಿ ಹೆದರಿಸುತ್ತಾ ಇದ್ದನು. ಬಳಿಕ ರೋಮಪುರದ ನಿವಾಸಿಗಳು ಅವನ ಸಂಗಡ ಮಾಡಿ ಕೊಂಡದೊಂದು ಒಪ್ಪಂದಕ್ಕೆ ಹೊನೋರಿಯನು ಅಸ್ತುಬಡದ ಕಾರಣದಿಂದಲೂ ಇವನ ಒಬ್ಬ ಸೇನಾಧಿಪತಿಯು ಗೊಥರ ಮೇಲೆ ಮೋಸದ ಕೆಲಸ ನಡಿಸಿದ ಕಾರಣದಿಂದಲೂ ಆಲರೀಕನು ತನ್ನ ದಂಡು ಕೂಡಿ ಕೊಂಡು ಬಂದು, ಕ್ರಿ. ಶ. 410ನೇ ವರುಷದ ಒಂದು ರಾತ್ರೀ ಹೊತ್ತಿನಲ್ಲಿ ರೋಮಪುರದ ಮೇಲೆ ಬಿದ್ದು, ಅದನ್ನು ತಕ್ಕೊಂಡನು. ಅವನು ಕ್ರೈಸ್ತನಲ್ಲ, ಆದರೂ ಕ್ರೈಸ್ತತ್ವಕ್ಕೊಲೆಯದಿರಲಿಲ್ಲ. ಅದರ ದೆಸೆಯಿಂದ ಅವನು ಆ ಪುರದೊಳಗೆ ಪ್ರವೇಶಿಸಲು, ಕ್ರೈಸ್ತ ಬೋಧಕರನ್ನೇನೂ ಕಷ್ಟ ಪಡಿಸ ಬಾರದೆಂತ, ಅಪ್ಪಣೆ ಕೊಟ್ಟು, ಎಲ್ಲಾ ಕ್ರೈಸ್ತ ದೇವಾಲಯಗಳನ್ನು ರಕ್ಷಿಸಿ, ಇವುಗಳೊಳಗೆ ಕೇಳಿಸುತ್ತಿರುವ ಕೀರ್ತನೆಗಳ ಗಾನಕ್ಕೆ ಸಲೆ ಸಂತೋಷಿಸಿ, ತನ್ನ ದೃಷ್ಟಿಗೆ ಬೀಳುವ ಸಕಲ ವಿಗ್ರಹಸ್ಥಾನಗಳನ್ನು ಮಾತ್ರ ಕೆಡಿಸಿದನು. ಅದಲ್ಲದೆ ಅವನ ಕೆಳಗಿನ ಗೊಥರು ಕೊಳ್ಳೆ ಹಿಡು ಕೊಳ್ಳುವಲ್ಲಿ ತಕ್ಕ ಸಾಧುತನ ತೋರಿಸುವರು. ಆದರೂ ಅವನ ದಂಡಿನೊಳಗಣ ಹೂಣ[1] ಮುಂತಾದ ಬರೇ ಕಾಡುಜನರನ್ನು ಅವನು ಸಾಧಿಸಲಾರದ ನಿಮಿತ್ತ ಇವರು ಕಂಡಾಬಟ್ಟೆ ಲೂಟಿ ಮಾಡಿ ಕೊಂಡದ್ದಲ್ಲದೆ ವಧಾಗ್ನಿಗಳಿಂದ ನಾನಾ ತರದ ಕೇಡು ಸಹ ಹುಟ್ಟಿಸಿದರು. ಆಗ ಬೆತ್ಲೆಹೇಮಿನಲ್ಲಿರುವ ಹಿಯೆರೋನುಮನೆಂಬ ಸಭಾಪಿತನು ಅದು ಕೇಳಿ—ನಮ್ಮ (ಅಂದರೆ ರೋಮಿಾಯ ರಾಜ್ಯದವರ) ಪಾಪಗಳಿಗೋಸ್ಕರವೇ ಆ ವರ್ವರರು ಬಲಿಷ್ಠರಾಗಿದ್ದಾರೆ; ನಮ್ಮ ನೀಚ ಕರ್ಮಗಳಿಗೋಸ್ಕರವೇ ರೋಮಪುರವು ಅಪಜಯ ಪಡುತ್ತಲಿದೆ! ಎಂತ, ಬರೆದನು[2]. ತರುವಾಯ ಆಲರೀಕನು ರೋಮಪುರ ಬಿಟ್ಟು, ಆಫ್ರಿಕಕ್ಕೆ ಹೋಗಲಿಕ್ಕೆ ಸೌರಿಸಿ ಕೊಳ್ಳುವ ವೇಳ್ಯದಲ್ಲಿಯೇ ಸತ್ತನು. ಬಳಿಕ ಆ ಪಶ್ಚಿಮ ಗೊಥರು ಹೋಗಿ, ರೋಮಿಾಯ ರಾಜ್ಯದ ಭಾಗಗಳಾದ ಗಲ್ಲಿಯ ಮತ್ತು ಸ್ಪಾನಿಯ ದೇಶಗಳ ಹಲವು ನಾಡುಗಳನ್ನು ಕ್ರಿ. ಶ. 414ನೇ ವರುಷದಾರಭ್ಯ ಸ್ವತಂತ್ರಿಸಿ ಕೊಂಡು ಬಂದು, ಅವುಗಳಲ್ಲಿ ತಮ್ಮದೊಂದು ರಾಜ್ಯ ಸ್ಥಾಪಿಸಿದರು; ಅದಕ್ಕೆ ತುಲೂಸೆಂಬ ಪಟ್ಣವು[3] ರಾಜಧಾನಿಯಾಯಿತು. ಆ ಕಡೆಯಲ್ಲಿ ನೀಕೇನ ವಿಶ್ವಾಸಪ್ರಮಾಣದ ಕ್ರೈಸ್ತತ್ವವು ಪ್ರಬಲವಾಗಿದ್ದದರಿಂದಲೂ ಕಾ

1) 201ನೇ, 203ನೇ ಪಾನು. 2) 173ನೇ ಪಾನು; 202ನೇ ಪಾನು ಸರಿ ನೋಡು.
3) 87ನೇ ಪಾನು.

ಲಗತಿಯಲ್ಲಿ ಫ್ರುಂಕರು[1] (ಫ್ರಂಚರು) ಎಂಬ ಗೆರ್ಮಾನರು ಕ್ರಿ. ಶ. 496ನೇ ವರುಷಕ್ಕೀಚೆ ಅದೇ ವಿಶ್ವಾಸದ ಪ್ರಮಾಣಿಗಳಾಗಿ ಆ ಕಡೆಯಲ್ಲಿ ಅಧಿಕಾರ ಪಡಕೊಳ್ಳುವವರಾದ್ದರಿಂದಲೂ ಅರೀಯಾನತ್ವದ ಆ ಪಶ್ಚಿಮ ಗೊಥರು ನೀಕೇನರಾದರು[2].

ಹೊನೋರಿಯನು ಕ್ರಿ. ಶ. 423ನೇ ವರುಷದಲ್ಲಿ ಸತ್ತ ತರುವಾಯ ರೋಮಿಾಯ ರಾಜ್ಯವು ಹೆಚ್ಚು ಹೆಚ್ಚಿಗೆ ಪರರ ವಶವಾಗಲಾರಂಭಿಸಿತು. ಅವನಿಗೀಚೆ 3ನೇ ವಲೆಂತೀನಿಯಾನನು ಕೈಸರನಾದನು; ಅವನು 6 ವರುಷದ ಹುಡುಗನೇ. ಅವನ ರಾಜ್ಯದ್ದಾದ ಆಫ್ರಿಕದ ಉತ್ತರ ಭಾಗದ ಕ್ರೈಸ್ತರ ಮೇಲೆ ಬೇಗ ಒಂದು ಮಹಾ ಕೃಚ್ಛ್ರವು ಬಂತು. ಹ್ಯಾಗಂದರೆ, ಜನಾಂಗಸಂಚಾರದ ದೆಸೆಯಿಂದ ಸ್ಪಾನಿಯ ದೇಶದಲ್ಲಿ ಹೊಕ್ಕು ನೆಲೆಗೊಂಡಿದ್ದ ಗೆರ್ಮಾನರಾದ ವಂದಲರು[3] ಆಫ್ರಿಕದಲ್ಲಿ ಕಲಹಗಾರನಾದವನೊಬ್ಬ ರೋಮಿಾಯ ಪ್ರತಿನಿಧಿಯ ವಿನಂತಿಯ ಪ್ರಕಾರ ಕ್ರಿ. ಶ. 429ನೇ ವರುಷ ಸಮುದ್ರ ದಾಟಿ ಬರಲು, ಆ ಪ್ರತಿನಿಧಿಯು ತನ್ಮಧ್ಯ ತನ್ನ ಕೈಸರನ ಸಂಗಡ ತಿರಿಗಿ ಸಮಾಧಾನಸ್ಥನಾಗಿ, ವಂದಲರ ಕ್ರೂರತ್ವ ಕಂಡು, ಗೈಸರೀಕನೆಂಬ ಅವರ ದಳವಾಯಿಗೆ—ನಿನ್ನ ಸಹಾಯ ನನಗಿನ್ನೂ ಬೇಡ, ಹಿಂದಕ್ಕೆ ಹೋಗೆಂತ, ಹೇಳಿದನು. ಅದಕ್ಕೆ ಆ ದಳವಾಯಿಯು, ವಚನಭಂಗವಾಯಿತೆಂದು, ಆಫ್ರಿಕದಲ್ಲಿಯ ರೋಮಿಾಯ ನಾಡುಗಳನ್ನೆಲ್ಲಾ ತನ್ನೊಳಗೆ ಮಾಡಿ ಕೊಂಡನು. ತೆರ್ತುಲ್ಲಿಯಾನ ಕುಪ್ರಿಯಾನ ಎಂಬವರಿಬ್ಬರು ಭಕ್ತರು ರಾಜಿಸಿದ್ದ ಕರ್ಥಾಗೊ ಪಟ್ಣವು[4] ಅವನ ರಾಜಧಾನಿಯಾಯಿತು. ಆ ವಂದಲರು ಗೊಥರ ಮುಖಾಂತರದಿಂದ ಅರೀಯಾನ ಕ್ರೈಸ್ತರಾಗಿದ್ದರೂ ಕ್ರೈಸ್ತರ ದೇವರು ಯುದ್ಧದಲ್ಲಿ ತಮಗೆ ಅಧಿಕ ಸಹಾಯ ಮಾಡುವನೆಂಬ ಈ ಒಂದೇ ಆಶೆಯಿಂದ ಮಾತ್ರ ಕ್ರೈಸ್ತರೆನ್ನಿಸಿ ಕೊಳ್ಳುವವರಾಗಿದ್ದರೆಂಬಂತೆ ಕಾಣಿಸುತ್ತದೆ. ಅವರೊಳಗಿನ ಆ ಪ್ರಕಾರದ ಕ್ರೈಸ್ತತ್ವವು ಅವರ ಕಾಡುಗುಣಗಳನ್ನು ಹೆಚ್ಚಿಸಿತ್ತಷ್ಟೇ! ಹೀಗಿರಲಿಕ್ಕೆ ಅವರು, ಅರೀಯಾನತ್ವವೇ ತಮ್ಮ ರಾಜ್ಯಮತವೆಂತ, ಮೃಗಗಳಂತೆ ಒದರಿ, ಹೇರಳ ಮಂದಿ ನೀಕೇನರನ್ನು ಕೊಲ್ಲುತ್ತಿದ್ದರು.

ತದನಂತರ ರೋಮಿಾಯ ಅಧಿಕಾರವು ಬ್ರಿತನ್ನಿಯದಲ್ಲಿ[5] ಸಹ ಇಲ್ಲದೆ ಹೋಯಿತು; ಹ್ಯಾಗಂದರೆ, ಅಲ್ಲಿಯ ರೋಮಿಾಯ ಸೈನ್ಯವು ಆಲರೀಕನ ಕಾಲದಲ್ಲಿ ಈತಲಿಯ ದೇಶದ ಭದ್ರತೆಗೆ ಬೇಕಾಗಿ[6] ತಿರಿಗಿ ಹೋದಂದಿನಿಂದ ಏನಾಯಿತಂದರೆ, ಆಗ ಹೆಚ್ಚು ಕಡಿಮೆ ಕ್ರೈಸ್ತರಾಗಿದ್ದ ಬ್ರಿತನ್ನರೂ ದಕ್ಷಿಣ ಸ್ಕೋತರೂ ತಮ್ಮ ಉತ್ತರದಲ್ಲಿದ್ದು ಕ್ರೈಸ್ತತ್ವಕ್ಕೊಲಿಯದೆ ತಮ್ಮ ಪ್ರದೇಶದಲ್ಲಿ ಯಾವಾಗಲೂ ಅಭಿ

---

1) 196ನೇ ಪಾನು. 2) ಆ ಫ್ರುಂಕರ ಅಪ್ಪಣೆ ಪಡೆದ ಐರ್ಲಂದಿನ ಸತ್‌ಕ್ರೈಸ್ತರು ಸಹ ಇದಕ್ಕೆ ಕಾರಣರಾದರು; 35ನೇ ಸಂಧಿ ನೋಡು. 3) 189ನೇ, 204ನೇ ಪಾನು. 4) 159ನೇ ಪಾನು. 5) 89ನೇ, 90ನೇ ಪಾನು. 6) 207ನೇ ಪಾನು.

ಯೋಗಿಸುತ್ತಿರುವ ಪಿಕ್ತರ ಮತ್ತು ಸ್ಕೋತರ ತಂಟೆ ಸಹಿಸಲಾರದೆ, ಗೆರ್ಮಾನಿಯ ದೇಶದ ಉತ್ತರ ಭಾಗದಲ್ಲಿರುವ ಗೆರ್ಮಾನರಾದಂಥ ಅಂಗ್ಲರನ್ನೂ ಸಕ್ಸರನ್ನೂ ಯುಯಿತರನ್ನೂ ತಮ್ಮ ಸಹಾಯಕ್ಕೆ ಕರಿಸಿ ಕೊಂಡಾಗ ಮೂರ್ತಿಪೂಜಕರಾದಂಥ ಇವರು ಕ್ರಿ. ಶ. 449ನೇ ವರುಷಕ್ಕೆ ಬಂದು, ಬ್ರಿತನ್ನರ ಶತ್ರುಗಳನ್ನು ಜಯಿಸಿದ ಮೇಲೆ ಬ್ರಿತನ್ನಿಯದಲ್ಲಿ (ಇಂಗ್ಲಂದಿನಲ್ಲಿ) 7 ರಾಜ್ಯಗಳನ್ನು ಸ್ಥಾಪಿಸಿರುವಲ್ಲಿ ಸುಮಾರು 150 ವರುಷ ಕ್ರೈಸ್ತತ್ವವನ್ನು ಕುಂದಿಸಲಿಕ್ಕೆ ಪೇಚಾಡುತ್ತಿದ್ದರು. ಅವರಿಂದ ಹಿಂಸೆ ಪಡುವ ಕ್ರೈಸ್ತರಲ್ಲಿ ಅನೇಕರು ವೇಲ್ಜು ಶೀಮೆಗೆ ಮತ್ತು ಐರ್ಲಂದಿಗೆ[1] ಓಡಿ ಹೋದರು; ಬೇರೊಬ್ಬರು ಹಡಗವೇರಿ ಗಲ್ಲಿಯ (ಫ್ರಂಕ) ದೇಶಕ್ಕೈದಿ[2], ತಾವು ನೆಲಸಿ ಕೊಂಡ ಶೀಮೆಗೆ, ಬ್ರೆತಂಞ್ ಎಂತ, ಹೆಸರಿಟ್ಟರು.

ಬಳಿಕ ರೋವಿಾಯ ರಾಜ್ಯಕ್ಕೂ ಅದರೊಳಗಿನ ಕ್ರೈಸ್ತರಿಗೂ ಅತ್ತಿಲನೆಂಬ ಹೂಣರ[3] ಮುಖ್ಯಸ್ಥನಿಂದ ಬಹಳ ಕೇಡುದ್ಭವಿಸಿತು. ಹ್ಯಾಗಂದರೆ ಇವನು ಕ್ರಿ. ಶ. 452ನೇ ವರುಷದಲ್ಲಿ ಈತಲಿಯ ದೇಶದೊಳ ನುಗ್ಗಿ, ಅನೇಕ ಪಟ್ಣಗಳನ್ನು ಹಾಳು ಮಾಡುತ್ತಾ, ಕತ್ತಿ ಬೆಂಕಿಗಳಿಂದ ಸಂಹಾರ ನಡಿಸುತ್ತಾ, ಕೊಳ್ಳೆ ಹಿಡು ಕೊಳ್ಳುತ್ತಾ ಇದ್ದು, ರೋಮಪುರದ ಮೇಲೆಯೂ ಬೀಳಲಿಕ್ಕೆ ಸೌರಿಸಿ ಕೊಂಡನು. ಆ ವೇಳೆ 1ನೇ ಲೆಯೋನನೆಂಬ ರೋಮಪುರದ 1ನೇ ಪಪ್ಪನು (ಪಾಪನು, ಪೋಪನು) ಎನ್ನಿಸುವ ಅಧ್ಯಕ್ಷನು 3ನೇ ವಲೆಂತೀನಿಯಾನನ[4] ರಾಯಭಾರಿಗಳ ಸಂಗಡ ಅವನನ್ನೆದುರ್ಗೊಂಡು ಬಂದು, ದೇವರ ಮತ್ತು ಕೈಸರನ ಹೆಸರಿನಲ್ಲಿ, ರೋಮಪುರಕ್ಕೂ ದೇಶಕ್ಕೂ ದಯೆ ತೋರಿಸಿ ಕರುಣಿಸ ಬೇಕೆಂದು, ಅವನಿಗೆ ಬಹಳ ಬೇಡಿ ಕೊಂಡು, ಬಹಳ ಇನಾಮು ಕೊಡಿಸಿದನಂತರ ಆ ಮುಖ್ಯಸ್ಥನು ಇದಕ್ಕೆ ಮಾತ್ರವಲ್ಲದೆ— ತನ್ನ ದಂಡಿನಲ್ಲಿ ನಾನಾ ತರದ ರೋಗವೂ ಬರವೂ ಅದೆ, ತನ್ನ ಕುದುರೆಬಲಕ್ಕೆ ಅನೇಕ ಹೊಳೆ ಇರುವ ಈತಲಿಯದ ನೆಲವು ಸಮವಾದದ್ದಲ್ಲ, ಗ್ರೇಕ ರಾಜ್ಯದ ಕೈಸರನು ಕೂಡ ತನ್ನ ಮೇಲೆ ದಂಡು ತಂದಾನು ಇತ್ಯಾದಿ ಆಲೋಚನೆಗಳಿಗೆ ಸಹ ಈತಲಿಯವನ್ನು ತಿರಿಗಿ ಬಿಟ್ಟು, ಗಮಿಸಿ, ಕ್ರಿ. ಶ. 454ನೇ ವರುಷದಲ್ಲಿ ಸತ್ತನು.

ಆದರೂ, ರೋವಿಾಯ ರಾಜ್ಯವು ಹೆಚ್ಚು ಬಲಗುಂದಿ ನಿರ್ಮೂಲವಾಗ ಬೇಕೆಂದು, ದೇವರ ಚಿತ್ತದಲ್ಲಿತ್ತು. ಅತ್ತಿಲನು ಅದರಿಂದ ಹೊರಟು 3 ವರುಷ ಹೋದ ಬಳಿಕ ಕ್ರಿ. ಶ. 455ನೇದಕ್ಕೆ ವಂದಲರು[5], ತನ್ನ ಗಂಡನನ್ನು ಕೊಂದು ಕೈಸರನಾಗಿದ್ದ ಪೆತ್ರೋನಿಯನನ್ನು ಶಿಕ್ಷಿಸುತ್ತೇನೆಂತ 3ನೇ ವಲೆಂತೀನಿಯಾನನ[6] ವಿಧವೆಯು ಗೈದ ಬಿನ್ನಹದ ಮೇಲೆ, ಆಫ್ರಿಕದಿಂದ ಬಂದು, ಬೇರೆ ಹಲವು ಪಟ್ಣಗಳನ್ನಲ್ಲ

1) 60ನೇ, 208ನೇ ಪಾನು. 2) 208ನೇ ಪಾನು ಸರಿ ನೋಡು. 3) 201ನೇ ಪಾನು.
4) 208ನೇ ಪಾನು. 5) 208ನೇ ಪಾನು. 6) 208ನೇ ಪಾನು.

ದೆ ರೋಮಪುರವನ್ನು ಸಹ ಸಾಧಿಸಿ ಕೊಂಡರು. ಆಗ 1ನೇ ಲೆಯೋನನೆಂಬ ಆ ಪಪ್ಪನು ವಂದಲರ ರಾಜನಾದ ಆ ಗೈಸರೀಕನ ಬಳಿಗೆ ಬಂದು, ಬಗೆಬಗೆಯಿಂದ ಬಿನ್ನವಿಸಿದ ನಿಮಿತ್ತ ಇವನು—ನಾನು ನಿವಾಸಿಗಳನ್ನು ಕೊಲ್ಲುವದಿಲ್ಲ, ಪುರವನ್ನು ಬೆಂಕಿಯಿಂದ ಕೆಡಿಸುವದಿಲ್ಲವೆಂತ, ಮಾತು ಕೊಟ್ಟು ಕೈಕೊಂಡರೂ ರೋಮದಲ್ಲಿ 14 ದಿವಸವೇ ಕೊಳ್ಳೆ ಮಾಡಿಸಿ, ಅಮಿತ ದ್ರವ್ಯವನ್ನೂ ಆಢ್ಯರಾದ ಗಂಡು ಮತ್ತು ಹೆಣ್ಣು ನಿವಾಸಿಗಳನ್ನೂ ತನ್ನ ಹಡಗಗಳೊಳಗೆ ತುಂಬಿಸಿ ಕೊಂಡು, ಕರ್ಥಾಗೊ ಪಟ್ಣಕ್ಕೆ ಹಿಂದಿರುಗಿದನು. ಅಂದು ಕರ್ಥಾಗೊವಿನ ಅಧ್ಯಕ್ಷನಾಗಿರುವ ದೆಯೊಗ್ರಾತಿಯನೆಂಬವನು ತಾನಿರುವ ಆ ಪಟ್ಣಕ್ಕೆ ಬಂದ ಶೆರೆಯವರ ಹತ್ತರ ಹೋಗಿ, ಅವರಿಗೆ ಬಹುಶಃ ಆದರಿಸಿ, ತನ್ನೊಳಗಿನ ದೇವಾಲಯಗಳಿಗೆ ಶಿಕ್ಕಿರುವ ಸ್ವರ್ಣಪಾತ್ರಾದಿ ಇನಾಮುಗಳನ್ನು ಮಾರಿ, ಹೀಗೆ ಪ್ರಾಪ್ತವಾಗುವ ಹಣದಿಂದ ಶೆರೆಯ ಅನೇಕ ಶಿಶುಗಳನ್ನೂ ಸ್ತ್ರೀಯರನ್ನೂ ಕೊಂಡು ಕೊಂಡು, ಅವರವರ ತಂದೆ ತಾಯಿಗಳಿಗೂ ಪತಿಗಳಿಗೂ ತಿರಿಗಿ ಒಪ್ಪಿಸಿದನು; ಅದಲ್ಲದೆ ಅವನು, ಆ ಶೆರೆಯವರು ದೇವಾಲಯಗಳೊಳಗೆ ಉಳು ಕೊಳ್ಳ ಬಹುದೆಂದು, ನಿರ್ದೇಶಿಸಿ, ತನ್ನ ಹಾಗೆ ಪ್ರೀತ್ಯಾಸಕ್ತಿಯುಳ್ಳ ಸಭ್ಯರ ಸಂಗಡ ಅವರನ್ನು ಹಗಲಿರುಳು ಸಾಕುತ್ತಿದ್ದನು. ಈ ಮುಂತಾದ ಧರ್ಮವೃತ್ತಿಯಿಂದ ಅವನು ಆ ಸಂಕಷ್ಟಕಾಲದೊಳಗೆ 3 ವರುಷ ಒಬ್ಬ ದೇವದೂತನಂತೆ ಪರಿಶೋಭಿಸುತ್ತಿರುವಷ್ಟರಲ್ಲಿ ತನ್ನ ಕರ್ತನೆಡೆಗೆ ಹೋದನು. ತನ್ಮಧ್ಯ ರೋಮಪುರದ ಪ್ರಜೆಯು ದೇವರ ಪರಿಪಾಲನದ ಮೇಲೆ ವಂದಲರ ಕಡೆಯಿಂದ ತಮಗೆ ಬಂದ ಶಿಕ್ಷೆಯ ಚಿಂತೆ ಹಾರಿಸಿ ಬಿಡಲಿಕ್ಕಾಗಿ ತರತರದ ವ್ಯರ್ಥ ಲೌಕಿಕ ವಿನೋದಗಳೊಳಗೆ ಮುಳುಗಿ ಕೊಂಡಿತು.

3ನೇ ವಲೆಂತೀನಿಯಾನನಿಗೀಚೆ 18 ವರುಷಗಳೊಳಗೆ ಇನ್ನು 8 ಕೈಸರರು ರೋಮಿಾಯ ರಾಜ್ಯವನ್ನು ಸುಮಾರು ರೀತಿಯಾಗಿ ಆಳಿದನಂತರ ಕ್ರಿ. ಶ. 475ನೇ ವರುಷದಲ್ಲಿ ರಾಜಸೇವಾಪರರಾದಂಥ ಗೆರ್ಮಾನರದೊಂದು ಸೇನೆಯ ಸಹಾಯದಿಂದ ರೋಮುಲ ಔಗುಸ್ತುಲನೆಂಬ 15 ವರುಷದ ಹುಡುಗನು ಕೈಸರನಾದನು. ಬಳಿಕ ಆ ಗೆರ್ಮಾನರು, ತಮಗೆ ಈತಲಿಯ ದೇಶದಲ್ಲಿ ಹಲವು ನಾಡುಗಳನ್ನು ಇನಾಮು ಬಿಡ ಬೇಕೆಂದು, ಬೇಡಿ ಕೊಂಡರು. ಆಗಲವರ ವಿನಂತಿಯ ಅರ್ಥವು ಒದಗದ ಕಾರಣದಿಂದ ಓದೊವಕೆರನೆಂಬ ಅವರ ದಳವಾಯಿಯು ಅವರನ್ನು ಕರತಂದು, ಕ್ರಿ. ಶ. 476ನೇದರಲ್ಲಿ ರೋಮುಲ ಔಗುಸ್ತುಲನನ್ನು ರಾಜಸಿಂಹಾಸನದಿಂದ ದೊಬ್ಬಿ ಹಾಕಿ, ತಾನು ಅವನ ಉತ್ತರಾಧಿಕಾರಿಯಾದನು. ಓದೊವಕೆರನು ಹೆರುಲರೆಂಬ ಗೆರ್ಮಾನರ[1] ಜಾತಿಯವನು. ಹಾಗಾದರೆ ರೋಮಿಾಯ ಮ

1) 189ನೇ ಪಾನು.

ಹಾ ಸಾಮ್ರಾಜ್ಯಕ್ಕೆ ಮೂಲವಾಗಿದ್ದ ರೋಮಿಾಯ ರಾಜ್ಯದ ದೊಡ್ಡ ಭಾಗವು ಅಂದು ಗೆರ್ಮಾನರ ವಶವಾಯಿತು; ರೋಮಪುರ ಕಟ್ಟಿ 1230 ವರುಷ ಕಳೆದು ಹೋದಾಗ ಅದು ಸಂಭವಿಸಿತು. ಒದೊವಕೆರನು ಚಂದಾಗಿ ಆಳುತ್ತಾ, ತಾನು ಅರೀಯಾನ ಕ್ರೈಸ್ತನಾಗಿದ್ದರೂ ನೀಕೇನ ಕ್ರೈಸ್ತರಿಗೆ ಏನೂ ಅನ್ಯಾಯ ಮಾಡದೆ ಇರುತ್ತಿದ್ದನು.

ಹಿಯೆರೋನುಮ ಸಭಾಪಿತನು ಸುಮಾರು 65 ವರುಷಕ್ಕೆ ಮುಂಚೆ, ರೋಮಿಾಯ ಸಾಮ್ರಾಜ್ಯವು ಭೇದವಾಗಿ ರೋಮಪುರವಿರುವ ಭಾಗವು ಪರಾಧೀನವಾದದ್ದಕ್ಕೆ ಆಗಿನ ಕ್ರೈಸ್ತರ ಪಾಪವೇ ಕಾರಣವೆಂತ, ಸಾರಿದ್ದದ್ದು ಹಿಂದೆ ಕಾಣುತ್ತದೆ[1]. ಕ್ರೈಸ್ತರು ದೊಡ್ಡ ಕೊನ್ಸ್ತಂತೀನನಿಗೀಚೆ 70 ವರುಷ ಮಾತ್ರವೂ ಬಹೀಃಶಾಂತಿಯ[2] ಸುಖಸಂಪತ್ತಿಯನ್ನನುಭವಿಸಿರಲು, ಅವರಲ್ಲನಿಜರ ಭಕ್ತಿಯು, ವಿಶೇಷವಾಗಿ ರೋಮದಲ್ಲಿ[3], ಶಿಥಿಲವಾಗಿ ಕಾಣಿಸಿತು. ಇದಕ್ಕೆ ಲಿಬನಿಯನೆಂಬವನೊಬ್ಬ ವಿಗ್ರಹಾರಾಧಕನಾದ ವಾಕ್ಚಾತುರ್ಯಪಂಡಿತನು ಥೆಯೊದೊಸಿಯ ಕೈಸರನಿಗೆ[4] ಬರೆದ್ದೊಂದು ಪತ್ರಿಕೆಯು ಸಹ ಸಾಕ್ಷಿ; ಅದರಲ್ಲಿರುವದೊಂದು ಮಾತೇನಂದರೆ— ನಿಮ್ಮ ಪ್ರಜೆಯು ದೇವಸ್ಥಾನಗಳನ್ನು ಬಿಟ್ಟು, ದೇವಾಲಯಗಳಿಗೆ ಹೋಗುತ್ತಿದ್ದು, ಹೀಗೆ ಕ್ರೈಸ್ತಭಕ್ತಿವೇಷ ಹಾಕಿ ಕೊಂಡು[5] ಇದ್ದರೂ ಅದು ವಿಗ್ರಹಾರಾಧನಮಯವಾದದ್ದೇ!—ಕ್ರೈಸ್ತತ್ವವು ರಾಜ್ಯಮತವಾದನಂತರ[6] ಕ್ರೈಸ್ತ ಸಭೆಯು ಧನಾಧಿಕಾರಗಳಲ್ಲಿ ಹೆಚ್ಚುತ್ತಾ, ಸುಪುಣ್ಯದಲ್ಲಿ ಕುಂದುತ್ತಾ ಇತ್ತು[7].

## 27. ತ್ಯುತೊನರೆಂಬ ಗೆರ್ಮಾನರ ಕಳೆಯೇರಿದ್ದು.

ಒದೊವಕೆರನು ಈತಲಿಯವನ್ನಾಳಲಾರಂಭಿಸಲು, ಗಲ್ಲಿಯ ದೇಶದ ಉತ್ತರ ಪಶ್ಚಿಮ ಭಾಗದಲ್ಲಿ ರೋಮಿಾಯ ರಾಜ್ಯದ ಒಬ್ಬ ಪ್ರತಿನಿಧಿಯು ಇನ್ನೂ ಉಳಿದಿದ್ದನು. ಇವನ ಮೇಲೆ ಫ್ರಂಕರು ಅಂದರೆ ಫ್ರುಂಚರು ಎಂಬ ವಿಗ್ರಹಾರಾಧಕ ಗೆರ್ಮಾನರು[8] ತಮ್ಮ ಮುಖ್ಯಸ್ಥನಾದ ಖ್ಲೋದ್ವಿಗನ (ಹ್ಲೂದ್ವಿಂಗನ, ಲೂದ್ವಿಗನ) ಕೈಯ ಕೆಳಗೆ ಬಂದು ಬಿದ್ದು, ಕ್ರಿ. ಶ. 486ನೇ ವರುಷದಲ್ಲಿ ಅವನನ್ನು ಗೆದ್ದರು; ಖ್ಲೋದ್ವಿಗನು ಕಾಲಗತಿಯಿಂದ ಗೆರ್ಮಾನಿಯ ದೇಶದ ಮತ್ತು ಗಲ್ಲಿಯ ದೇಶದ ಒಂ

1) 207ನೇ ಪಾನು. 2) 159ನೇ ಪಾನು ಸರಿ ನೋಡು. 3) Ammianus Marcellinus, A. D. 350; Salvianus, A. D. 470; Hieronymus. 4) 204ನೇ, 205ನೇ ಪಾನು. 5) 195ನೇ, 205ನೇ, 206ನೇ ಪಾನು. 6) 101ನೇ, 179ನೇ, 180ನೇ, 181ನೇ, 188ನೇ ಪಾನುಗಳು. 7) Hieron. vita Malchi; ರೋಮಪುರದವರನ್ನು ಕುರಿತು 147ನೇ, 148ನೇ, 149ನೇ, 164ನೇ, 165ನೇ, 173ನೇ, 188ನೇ, 207ನೇ, 210ನೇ ಪಾನುಗಳನ್ನು ಸರಿ ನೋಡು. 8) 208ನೇ ಪಾನು.

ದು ದೊಡ್ಡ ಭಾಗದ ರಾಜನಾದನು. ಅವನು ಗಲ್ಲಿಯಕ್ಕೆ ಬರುವಾಗ ಬುರ್ಗುಂದಿಯರೆಂಬವರಿಗೆ ಅಲ್ಲಿ ಬಹಳ ಅಧಿಕಾರವಿತ್ತು; ಅವರು ಅರೀಯಾನ ಕ್ರೈಸ್ತರಾಗಿದ್ದರು[1]. ಅವರ ವಂಶದವಳಾದ ಖ್ಲೋತಿಲ್ದಳೆಂಬ ಒಬ್ಬ ಶ್ರೀಮಂತಳನ್ನು ಖ್ಲೋದ್ವೀಗನು ಮದುವೆ ಮಾಡಿ ಕೊಂಡನು. ಅವಳು ಏನೋ ಒಂದು ಕಾರಣದಿಂದ ನೀಕೇನ ಕ್ರೈಸ್ತಳಾಗಿದ್ದು, ತನ್ನ ಗಂಡನು ಕ್ರೈಸ್ತನಾಗುವ ಹಾಗೆ ಬಹಳ ಪ್ರಯತ್ನ ಪಡುತ್ತಾ ಇದ್ದಳು; ಆದರೆ ಅವನು, ತನ್ನ ದೇವತೆಗಳು ಕ್ರೈಸ್ತರ ದೇವರಿಗಿಂತ ಅಧಿಕ ಬಲವುಳ್ಳವುಗಳೆಂದು, ನಂಬಿ, ತಾನು ಅವಳಿಗೆ ಒಳಗಾಗದಿದ್ದರೂ ಅವಳ ವಿನಂತಿಯ ಮೇಲೆ ತನ್ನ ಚೊಚ್ಚಲುಕುಮಾರನಿಗೆ ಕ್ರೈಸ್ತ ಸ್ನಾನ ಕೊಡಿಸಿದನು. ಸ್ವಲ್ಪ ಕಾಲದನಂತರ ಆ ಶಿಶುವು ಸಾಯಲಿಕ್ಕೆ, ಅವನು ಕೋಪಿಷ್ಠನಾಗಿ, ಅದಕ್ಕೆ ಸ್ನಾನ ಶಿಕ್ಕದಿದ್ದರೆ ಇನ್ನು ಜೀವದಿಂದಿರುತ್ತಿತ್ತು! ಎಂತ, ಒದರಿದನು. ಹ್ಯಾಗಾದರೂ ಅವನು ತನಗೆ ಆ ಮೇಲೆ ಹುಟ್ಟಿದ ಕುಮಾರನಿಗೆ ಸಹ ಕ್ರಿಸ್ತನ ನಾಮದಲ್ಲಿ ಸ್ನಾನ ಹೊಂದಿಸಿದನು; ಈ ಕುಮಾರನೂ ರೋಗಿಯಾಗಿ, ಅಳೆಯುವಂತೆ ಮಲಗಿರೋಣ, ತಂದೆಯು ಮತ್ತಷ್ಟು ರೋಷಿಸುವಲ್ಲಿ ತಾಯಿಯು ತನ್ನ ದೇವರಿಗೆ ಪ್ರಾರ್ಥಿಸುತ್ತಲೇ ಮಗನು ಸ್ವಸ್ಥನಾಗಿ, ತಂದೆಯ ಸಂತೋಷಕ್ಕಾಗಿ ಬೆಳದು ಬಂದನು. ಬಳಿಕ ಖ್ಲೋದ್ವೀಗನು ಗೆರ್ಮಾನರಾದ ಅಲೆಮನ್ನರ[2] ಸಂಗಡ ಕ್ರಿ. ಶ. 496ನೇ ವರುಷ ಯುದ್ಧವಾಡ ಬೇಕಾಯಿತು. ಇವರು ಜಯ ಗೊಳ್ಳುವ ಹಾಗೆ ಕಾಣಿಸುವ ಸಮಯದಲ್ಲಿ ಖ್ಲೋದ್ವೀಗನು ಮತ್ತೊಂದು ಉಪಾಯವನ್ನರಿಯದೆ, ಕಣ್ಣು ಕೈಗಳನ್ನು ಪರಲೋಕದ ಕಡೆಗೆ ಎತ್ತಿ ಕೊಂಡು, ಬೇಡಿದ್ದೇನಂದರೆ[3]—ಖ್ಲೋತಿಲ್ದಳು ನಿಜ ದೇವರ ಪುತ್ರನೆಂದು ಆರಾಧಿಸುವ ಯೇಸು ಕ್ರಿಸ್ತನೇ! ಈ ನನ್ನ ಭೀಕರವಾದ ಸಂಕಟದಲ್ಲಿ ನಿನಗೆ ಬಿನ್ನವಿಸುತ್ತೇನೆ. ನೀನು ಈ ಶತ್ರುಗಳ ಮೇಲೆ ನನಗೆ ಜಯವನ್ನು ದಯೆ ಮಾಡಿ ಕೊಟ್ಟರೆ ನಿನ್ನಲ್ಲಿ ವಿಶ್ವಾಸವಿಟ್ಟು, ನಿನ್ನ ಹೆಸರಿನಲ್ಲಿ ಸ್ನಾನ ತೆಕ್ಕೊಳ್ಳುವೆನು. ನಾನು ನನ್ನ ದೇವತೆಗಳಿಗೆ ಬೇಡಿದ್ದು ವ್ಯರ್ಥವಾಯಿತು; ಅವಕ್ಕೆ ಏನೂ ಬಲವಿಲ್ಲವೆಂಬದು ನನಗೆ ನಿಶ್ಚಯವಾಯಿತು, ಹ್ಯಾಗಂದರೆ ಅವು ತಮ್ಮ ಭಕ್ತರಿಗೆ ಏನೂ ಒತ್ತಾಸೆ ಗೈಯುವದಿಲ್ಲ!—ತದನಂತರ ಅವನು ತನ್ನ ಸೈನಿಕರನ್ನು ಇನ್ನೊಮ್ಮೆ ಶತ್ರುಗಳ ಮೇಲೆ ಕವಿಸಿದಲ್ಲಿ ಅವನಿಗೆ ಪೂರ್ಣ ಜಯ ಪ್ರಾಪ್ತವಾಯಿತು. ಅವನು ಮನೆಗೆ ಹಿಂದಿರುಗಲು, ಅವನ ಹೆಂಡತಿಯು ಅವನಿಗೆ ಗಲ್ಲಿಯದ ರೇಮ್ಸು ಪಟ್ಣದ ರೇಮಿಗಿಯನೆಂಬ ಅಧ್ಯಕ್ಷನಿಂದ ಉಪದೇಶ ಹೇಳಿಸಿದಳು. ಆ ಅಧ್ಯಕ್ಷನು ಯೇಸುವು ತನ್ನ ಶತ್ರುಗಳಿಂದ ಪಡುತ್ತಿದ್ದ ಶ್ರಮದ ಚರಿತ್ರವನ್ನು ಅವನಿಗೊಮ್ಮೆ ವಿವರಿಸುತ್ತಿರುವ ಹೊತ್ತಿನಲ್ಲಿ ಅವನು ಕೋಪಮುಖನಾಗಿ, ನಾನು ನನ್ನ ಫ್ರಂಕರೊಡನೆ ಯೇಸುವಿನ ಬಳಿ

1) 189ನೇ ಪಾನು. 2) 196ನೇ ಪಾನು. 3) 76ನೇ ಪಾನು ಸರಿ ನೋಡು.

ಯಲ್ಲಿ ಇದ್ದದ್ದಾದರೆ ಹಾಗಾಗುತ್ತಿದ್ದಿಲ್ಲ! ಎಂತ, ಕೂಗಿದನು. ಅವನು, ಸ್ನಾನ ತಕ್ಕೊಳ್ಳುವೆನೆಂತ, ಮನಸ್ಸು ಮಾಡಿ ಕೊಂಡಂದು, ತಾನು ಕ್ರೈಸ್ತನಾದರೆ ಪ್ರಜೆಯು ಮುನಿದೀತೆಂದು, ಹೆದರಿ, ರೇಮಿಗಿಯನ ಹತ್ತರ—ಎಲೇ, ಉತ್ತಮ ಅಧ್ಯಕ್ಷನೇ, ಸಂತೋಷದಿಂದ ನಿಮ್ಮ ಕಾಂಕ್ಷೆಗೆ ಒಳ ಪಟ್ಟೇನು; ಆದರೆ ನಾನು ನನ್ನ ಪ್ರಜೆಯ ದೇವತೆಗಳನ್ನು ತಳ್ಳಿ ಬಿಟ್ಟರೆ ಪ್ರಜೆಯು ಏನು ಹೇಳುವದು? ಹ್ಯಾಗೂ ನಿಮ್ಮ ಅಪ್ಪಣೆಯಂತೆ ಪ್ರಜೆಯ ಸಂಗಡ ಮಾತಾಡುವೆನೆಂದು, ಒಂದು ಪ್ರಜಾಸಂಘ ಕೂಡಕರೆಸಿ, ತನ್ನ ಮನಸ್ಸಿನ ಅರ್ಥ ತಿಳಿಸಲಾರಂಭಿಸಿದ ಕ್ಷಣವೇ ಆ ನೆರದ ಫ್ರಂಕರೆಲ್ಲರೂ—ರಾಜನೇ, ಮರ್ತ್ಯ ದೇವತೆಗಳನ್ನು ತ್ಯಜಿಸಿ ಬಿಟ್ಟೆವು! ರೇಮಿಗಿಯನು ಪ್ರಸಂಗಿಸುವ ಅಮರ್ತ್ಯ ದೇವರಿಗೆ ವಿಧೇಯರಾಗುವದಕ್ಕೆ ಸಿದ್ಧರಾಗಿದ್ದೇವೆಂತ, ಘೋಷಧ್ವನಿ ಗೈದರು. ತರುವಾಯ ಇನ್ನು ಅದೇ 496ನೇ ವರುಷ ಒಂದೇ ದಿವಸ ಅವನೂ ಅವನ ತಂಗಿಯೂ 3000 ಮಂದಿ ಫ್ರಂಕರೂ ರೇಮ್ಸಿನಲ್ಲಿ ನೀಕೇನನಾದ ರೇಮಿಗಿಯನ ಕೈಯಿಂದ ಸ್ನಾತರಾದರು. ಅಂದಿನಿಂದ ಕ್ರೈಸ್ತತ್ವವು ಫ್ರಂಕರಲ್ಲಿ ಮಿಗಿಲಾಗುತ್ತಾ ಇತ್ತು. ಆದರೆ ರಣಪ್ರಿಯನಾದ ಆ ಖ್ಲೋದ್ವೀಗನು ಕ್ರೈಸ್ತನೆನ್ನಿಸಿ ಕೊಳ್ಳುವವನಾಗಿದ್ದರೂ, ನಿಮ್ಮ ಶತ್ರುಗಳಿಗೂ ಪ್ರೀತಿ ಮಾಡಿರೆಂತ, ಕ್ರಿಸ್ತನು ಹೇಳಿದ ದೊಡ್ಡ ಬೋಧನೆಯು ತನ್ನ ಹೃದಯಕ್ಕೆ ವ್ಯಾಪಿಸ ಗೊಡದ್ದು ಬಹಳ ದುಃಖಕರವಾದದ್ದು. ಅವನು ಅರೀಯಾನರಾದ ತನ್ನ ನೆರೆಯ ಪಶ್ಚಿಮ ಗೊಥರಲ್ಲಿ ಕ್ರಿ. ಶ. 500ನೇ ವರುಷದ ಈಚೆ, ವಿಶೇಷವಾಗಿ ಐರ್ಲಂದಿನ ಬೋಧಕರ ಮುಖದಿಂದ, ನೀಕೇನತ್ವ ಹಬ್ಬಿಸುವವನಾದನು[1].

ಅಷ್ಟರಲ್ಲಿ ಓದೊವಕೆರನು 12 ವರುಷ ಬಹು ಪ್ರಸಾದದಿಂದ ರೋಮಾಯ ರಾಜ್ಯವನ್ನಾಳುತ್ತಿದ್ದ ಮೇಲೆ ಏನಾಯಿತೆಂದರೆ—ಪಡುವಲ ಹೂಂಗರಿಯದಲ್ಲಿ ನೆಲೆಗೊಂಡಿರುವ ಪೂರ್ವ ಗೊಥರ[2] ರಾಜನಾದ ಥೆಯೊದೋರೀಕನು (ದೀತ್ರೀಕ್) ಕ್ರಿ. ಶ. 488ನೇದರಲ್ಲಿ ಅವನಿಗೆ ವಿರೋಧವಾಗಿ ದಂಡೆತ್ತಿ ಕೊಂಡು ಬಂದನು. ಯಾಕಂದರೆ, ಓದೊವಕೆರನು ಯುದ್ಧದಲ್ಲಿ ಕೊಂದವನೊಬ್ಬ ಗೆರ್ಮಾನ ರಾಜನ ಮಗನು ತನ್ನ ಹಗೆ ತೀರಿಸಿ ಕೊಳ್ಳುವದಕ್ಕೆ ಥೆಯೊದೋರೀಕನ ಸಹಾಯ ಬೇಡಿ ಕೊಂಡಿದ್ದದ್ದಲ್ಲದೆ ಓದೊವಕೆರನಿಗೆ ಹೊಟ್ಟೆಕಿಚ್ಚು ಪಡುವ ಗ್ರೀಕ ರಾಜ್ಯದ[3] ಜೇನೋನನೆಂಬ ಆಗಿನ ಕೈಸರನು ಥೆಯೊದೋರೀಕನನ್ನು ಈತಲಿಯ ದೇಶದಲ್ಲಿ ತನ್ನ ಜನಾಂಗಕ್ಕೆ ಹೂಂಗರಿಯದ್ದಕ್ಕಿಂತ ಉತ್ಕೃಷ್ಟವಾದ ಭೂಮಿ ಘಳಿಸಿ ಕೊಳ್ಳುವದಕ್ಕೆ ಒಡಂಬಡಿಸಿದ್ದನು. ಹೀಗಿರಲಾಗಿ ಓದೊವಕೆರನು 4 ವರುಷ ಥೆಯೊದೋರೀಕನಿಗೆ ಎದುರಿಸಿದಂದು ತನ್ನನ್ನು ಅವನ ವಶಕ್ಕೆ ಒಪ್ಪಿಸ ಬೇಕಾಯಿತು. ಆಗ ರೋಮಾಯ ರಾ

1) 208ನೇ ಪಾನು. 2) 201ನೇ ಪಾನು. 3) 206ನೇ, 207ನೇ ಪಾನು.

ಜ್ಯವಿದ್ದಲ್ಲಿ ಮತ್ತೊಂದು ಗೆರ್ಮಾನರದು ಅಂದರೆ ಆ ಪೂರ್ವ ಗೊಥರದು ಸ್ಥಾಪನೆಯಾಯಿತು. ಥೆಯೊದೋರೀಕನು ತಾನೂ ಅವನ ಗೊಥರೆಲ್ಲರೂ ಅರೀಯಾನರಾಗಿದ್ದರೂ ಅವನು ಆರಂಭದಲ್ಲಿ, ಓದೊವಕೆರನ ಹಾಗೆಯೇ, ನೀಕೇನರನ್ನು ಪ್ರೀತಿಯಿಂದ ನಡಿಸುತ್ತಿದ್ದನು; ಆದರೆ ಹಿಂದಗಡೆ ಅವನ ಮನಸ್ಸು ಬೇರೆ ಆಯಿತು. ಹ್ಯಾಗಂದರೆ ಗ್ರೇಕ ರಾಜ್ಯದ ಕೈಸರರಲ್ಲಿ ನೀಕೇನರಾದಂಥವರು ತಮ್ಮೊಳಗಿನ ಅರೀಯಾನರನ್ನು ನಿತ್ಯದಲ್ಲಿ ಉಪದ್ರವ ಪಡಿಸುತ್ತಿರುವದರಿಂದ ಥೆಯೊದೋರೀಕನ ತಾಳ್ಮೆಯು ತಪ್ಪಿ ಹೋಯಿತು; ಅದಲ್ಲದೆ, ಆ ಕೈಸರರು ಈತಲಿಯ ದೇಶದ ನೀಕೇನರನ್ನು ಸಹ ಮೆಚ್ಚಿಸಿ ಕೊಳ್ಳುವದರಿಂದ ಇವರು ತನ್ನ ಮೇಲೆ ದಂಗೆ ತೆಗೆದಾರೆಂತ, ಸಂಶಯಗೊಂಡನು. ಅದು ನಿಮಿತ್ತ ಅವನು, ನೀಕೇನತ್ವವನ್ನು ಸರ್ವ ರಾಜ್ಯದಲ್ಲಿ ಕಿತ್ತು ಹಾಕುವೆನೆಂತ, ತನ್ನೊಳಗೆ ನಿಶ್ಚಯಿಸಿ ಕೊಂಡಿದ್ದಾಗಲೇ 71 ವರುಷದ ಮುದುಕನಾಗಿ, ಕ್ರಿ. ಶ. 526ನೇದರಲ್ಲಿ ಸತ್ತನು. ಅವನ ಉತ್ತಮ ಕಾರಭಾರಿಗೂ ಮಹಾಜಯಗತಿಗೂ ಅವನಿಗೆ ದೊಡ್ಡವನೆಂಬ ಬಿರಿದು ಪ್ರಾಪಿಸಿತು.

ಪೂರ್ವ ಗೊಥರು 61 ವರುಷ ಈತಲಿಯ ದೇಶವನ್ನಾಳಿದ ಬಳಿಕ ಅದು ಗ್ರೇಕ ರಾಜ್ಯದ ಕೈಸರನಾದಂಥ 1ನೇ ಯುಸ್ತೀನಿಯಾನನ ವಶವಾಯಿತು; ಅವನು ಅಲ್ಲಿಯ ನೀಕೇನರ ಸಹಾಯದೊಡನೆ 19 ವರುಷವೇ ಬೇಲಿಸರ್ ಮತ್ತು ನಾರ್ಸೆಸ್ ಎಂಬ ತನ್ನ ದಳವಾಯಿಗಳಿಂದ ಆ ಗೊಥರ ಮೇಲೆ ಯುದ್ಧ ನಡಿಸಿ, ಕ್ರಿ. ಶ. 554ನೇದರಲ್ಲಿ ಅವರನ್ನು ಪೂರಾ ಗೆದ್ದನು. ಆಗ ನಾರ್ಸೆಸ್ ಎಂಬವನು ಗ್ರೇಕ ಕೈಸರನ ಪ್ರತಿನಿಧಿಯಾದ ರವೆನ್ನವೆಂಬ ಪಟ್ಟವು ಈತಲಿಯ ದೇಶದ ಹಿರೀ ಪಟ್ಣವಾಯಿತು, ರೋಮವು ಕಿರಿದಾಯಿತು. ಕ್ರಿ. ಶ. 1021ನೇ ಅಬ್ದದ ತನಕ ಗ್ರೇಕ ಕೈಸರರ ಅಧಿಕಾರವು ದಕ್ಷಿಣ ಈತಲಿಯದಲ್ಲಿದ್ದುಳಿಯಿತು[1].

ಆದರೆ 14 ವರುಷದ ವರೆಗೆ ನಾರ್ಸೆಸಿನ ಮುಖಾಂತರ ಗ್ರೇಕ ರಾಜ್ಯ ಒಂದೇ ಈತಲಿಯದಲ್ಲಿ ಬಳಿಸುತ್ತಿದ್ದಾಗ 2ನೇ ಯುಸ್ತೀನನೆಂಬ ಗ್ರೇಕ ಕೈಸರನು ನಾರ್ಸೆಸಿನ ಉದ್ಯೋಗ ತೆಗೆದನು; ಹ್ಯಾಗಂದರೆ, ಇವನು ಲೋಭ ಕಾಠಿಣ್ಯಗಳಿಂದ ಆಳಿದ್ದನು. ತದನಂತರ ನಾರ್ಸೆಸ್ ಹಗೆ ಗೊಂಡು, ಅದನ್ನು ತೀರಿಸಿ ಕೊಳ್ಳುವದಕ್ಕಾಗಿ ಲೊಂಗೊಬರ್ದರೆಂಬ ಗೆರ್ಮಾನರನ್ನು ಈತಲಿಯ ದೇಶ ಸ್ವತಂತ್ರಿಸಿ ಕೊಳ್ಳಲಿಕ್ಕೆ ಕರೆದನು. ಇವರದೊಂದು ಪಾಲಿನವರು ಮೂರ್ತಿಪೂಜಕರಾಗಿದ್ದರು, ಮತ್ತೊಂದು ಪಾಲಿನವರು ಅರೀಯಾನ ಕ್ರೈಸ್ತರಾಗಿದ್ದರು[2]. ಕ್ರಿ. ಶ. 568ನೇ ವರುಷದಲ್ಲಿ ಲೊಂಗೊಬರ್ದರು ತಮ್ಮ ಮುಖ್ಯಸ್ಥನಾದ ಅಲ್ಪ್ಪವಿನನ ಕೈಯ ಕೆಳಗೆ ಹೂಂಗರಿಯದಿಂದ[3] ಹೊರಟು, ಈತಲಿಯಕ್ಕಾಗಮಿಸಿ, ಅದರ ಉತ್ತರ ಭಾಗದಲ್ಲಿಯ ಅನೇಕ ಪಟ್ಣಗಳನ್ನು ಹಿಡು

---

1) 43ನೇ ಸಂಧಿ. 2) 189ನೇ ಪಾನು. 3) 213ನೇ ಪಾನು.

ಕೊಂಡು, ಪವೀಯ ಪಟ್ಟಕ್ಕೆ ಸಹ ಮುತ್ತಿಗೆ ಹಾಕಲು, ಅದು 3 ವರುಷವೇ ಸೊಗಸಾಗಿ ಎದುರಿಸುತ್ತಿತ್ತು. ಆಗ ಅಲ್ಬೊವಿನನು ಕುಪಿತನಾಗಿ, ಅದನ್ನು ತಕ್ಕೊಂಡ ಮೇಲೆ ಅದರ ಎಲ್ಲಾ ನಿವಾಸಿಗಳನ್ನು ಕತ್ತಿಯಿಂದ ಕೊಲ್ಲಿಸುವೆನೆಂತ, ಶಪಥವಿಕ್ಕಿ, ತಾನು ಅದರೊಳಗೆ ಹುಟ್ಟಿಸುತ್ತಾ ಬಂದಿದ್ದ ಕಠೋರವಾದ ಆಹಾರಕ್ಷೀಣತೆಯಿಂದ ಅದನ್ನು ತನ್ನದು ಮಾಡಿ ಕೊಂಡು, ಒಳಗೆ ಪ್ರವೇಶಿಸುವ ಹೊತ್ತು ಅವನು ಹತ್ತಿ ಕೊಂಡಿರುವ ಕುದುರೆಯು ಬಿದ್ದು, ಹ್ಯಾಗೂ ಏಳಲೊಲ್ಲದೆ ಇತ್ತು. ಆ ವೇಳೆ ಒಬ್ಬ ಲೊಂಗೊಬರ್ದನು ಹತ್ತರ ಬಂದು—ಎಲೇ, ರಾಯನೇ, ನಿನ್ನ ಕ್ರೂರ ಆಣೆ ತೆಗೆದು ಹಾಕು! ಅದು ತೆಗೆದು ಹಾಕಿದರೆ ನಿವಾಸಿಗಳು ಕ್ರೈಸ್ತರಾಗಿರುವ ಈ ಪಟ್ಟದಲ್ಲಿ ನೀನು ಅಡ್ಡಿಯಿಲ್ಲದೆ ಪ್ರವೇಶಿಸ ಬಹುದೆಂದು, ಹೇಳಲು, ಆ ರಾಯನು ಅದಕ್ಕನುಸರಿಸಿದ ಕ್ಷಣವೇ ಅವನ ಕುದುರೆಯು ತಾನೇ ಎದ್ದು, ಅವನನ್ನು ಒಳಗೆ ತಕ್ಕೊಂಡು ಹೋಯಿತು. ಕ್ರಿ. ಶ. 591ನೇ ವರುಷ ಅಗಿಲುಲ್ಫನೆಂಬವನು ಮೆದಿಯೋಲಾನ (ಮಿಲಾನೊ, ಮೈಲಂದ್) ಎಂಬ ಪಟ್ಟದಲ್ಲಿ ಲೊಂಗೊಬರ್ದರ ರಾಯಪಟ್ಟಾಭಿಷೇಕ ಹೊಂದಿ, ರವೆನ್ನ ಪಟ್ಟದಲ್ಲಿ ವಾಸಿಸುವ ಗ್ರೇಕ ಪ್ರತಿನಿಧಿಯ ಸಂಗಡ ಯುದ್ಧ ಮಾಡುವವನಾಗಿ, ರೋಮಪುರವನ್ನು ಸಹ ಹಿಡು ಕೊಳ್ಳಲಿಕ್ಕೆ ಸಿದ್ಧನಾದನು. ಆವಾಗ 1ನೇ ಗ್ರೆಗೋರನೆಂಬವನು ಈ ಪುರದ 65ನೇ (?) ಅಧ್ಯಕ್ಷನು ಮತ್ತು 20ನೇ ಪಪ್ಪನಾಗಿದ್ದು[1], ಹಲವು ಕಾಲದಿಂದ ನೀಕೇನಳಾಗಿರುವಂಥ ಅಗಿಲುಲ್ಫನ ಉತ್ತಮ ಹೆಂಡತಿಯ ಗುರುವಾಗಿದ್ದನು. ಹೀಗಿರಲಿಕ್ಕೆ ಆ ಪಪ್ಪನು ರಾಣಿಯಿಂದ ಅಗಿಲುಲ್ಫನಿಗೆ ವಿನಂತಿ ಮಾಡಿಸಿದ್ದಲ್ಲದೆ ಅವನಿಗೆ ಬಹಳ ಹಣವನ್ನು ಉಚಿತವಾಗಿ ಕೊಟ್ಟ ಕಾರಣ ಅವನು ತನ್ನ ದಂಡು ಸಹಿತ ಹಿಂದಿರುಗಿದನು. ದಿನಗತಿಯಿಂದ ತನ್ನ ಹೆಂಡತಿಯ ಮತ್ತು ಇಂಗ್ಲಂದಿನಿಂದ ಬಂದ ಸದ್ಬೋಧಕರ ಪ್ರೇರಣೆಯ ಮೇಲೆ ಅಗಿಲುಲ್ಫನೂ ಅನೇಕ ಮಂದಿ ಬೇರೆ ಲೊಂಗೊಬರ್ದರೂ ಅಥನಸಿಕ[2] ವಿಶ್ವಾಸ ಪ್ರಮಾಣಿಗಳಾದರು. ಬಳಿಕ ಇನ್ನೂ ಕೆಲವರು ಲೊಂಗೊಬರ್ದಿ ರಾಯರು ಅರೀಯಾನರಾಗಿದ್ದರೂ ಅರೀಯಾನತ್ವವು ಕುಂದುತ್ತಾ ಬಂತು. ಕ್ರಿ. ಶ. 662ನೇ ವರುಷದಿಂದ 671ನೇದರ ವರೆಗೆ ಆಳಿದ ಗ್ರಿಮೊವಲ್ದನೆಂಬ ಲೊಂಗೊಬರ್ದಿ ರಾಯನು, ಅಥನಸಿಕತ್ವವು ತನ್ನ ರಾಜ್ಯದ ಏಕ ಮತವೇ! ಎಂತ, ಆಜ್ಞೆ ಪ್ರಕಟಿಸಿದನು.—

ರೋಮಿಾಯ ಸಾಮ್ರಾಜ್ಯದ ಪಶ್ಚಿಮ ಭಾಗವಾಗಿದ್ದ ರೋಮಿಾಯ ರಾಜ್ಯವು, ಹಿಂದೆ ವಿವರಿಸಿರುವಂತೆ, ಕ್ರಿ. ಶ. 476ನೇ ವರುಷದಲ್ಲಿ ತೀರಿದಂದು ಅದರ ಪೂರ್ವ ಭಾಗವಾದ ಗ್ರೇಕ ರಾಜ್ಯವು ಉಳಿದು, ಇನ್ನೂ 977 ವರುಷ ಇತ್ತು. ಗ್ರೇಕ ಕೈಸರನಾದ ಅರ್ಕದಿಯನು[3] ಕ್ರಿ. ಶ. 408ನೇದರಲ್ಲಿ ಮಡಿದ ಹಿಂದೆ 2ನೇ ಥೆಯೊ

1) 4ನೇ, 209ನೇ ಪಾನು ಸರಿ ನೋಡು. 2) 186ನೇ ಪಾನು. 3) 206ನೇ, 207ನೇ ಪಾನು.

ದೊಸಿಯನು ಅವನ ಉತ್ತರಾಧಿಕಾರಿಯಾದನು. ಇವನ ಆಳುವಿಕೆಯೊಳಗೆ ಮೂರ್ತಿಪೂಜಕತ್ವದ ಬಹಿರಾಚಾರಗಳೆಲ್ಲಾ ಗ್ರೇಕ ರಾಜ್ಯದಲ್ಲಿ ಕಾಣದೆ ಹೋದವು. ಆವಾಗ ಹೇಳ ತೊಡಗಿದ ಒಂದು ಕಥೆ ಏನಂದರೆ—200 ವರುಷಗಳ ಹಿಂದೆ ದೆಕಿಯನೆಂಬ ರೋವಿಾಯ ಸಾಮ್ರಾಜ್ಯದ ಕೈಸರನು[1] ಕ್ರೈಸ್ತರನ್ನು ಅತಿ ಕ್ರೂರತ್ವದಿಂದ ಹಿಂಸಿಸುತ್ತಿರಲು, ಸಣ್ಣ ಅಸಿಯದ ಎಫೆಸ ಪಟ್ಟದ 7 ಮಂದಿ ಯೌವನಸ್ಥರು ಓಡಿ ಹೋಗಿ, ಒಂದು ಗುಹೆಯೊಳಗೆ ಅಡಗಿ ಕೊಂಡು, ನಿದ್ರೆ ಗೊಂಡು, 2ನೇ ಥೆಯೊದೊಸಿಯನು ಗ್ರೇಕ ಕೈಸರನಾಗಲೆಚ್ಚತ್ತು, ಮುಂಚೆ ಅತಿರೇಕ ಹಿಂಸೆ ಪಡುತ್ತಿದ್ದ ಕ್ರಿಸ್ತಕ್ರೂಜೆಯು ಎಲ್ಲಾ ಹಳ್ಳಿ ಊರು ಪಟ್ಣಗಳಲ್ಲಿ ಜಯ ಗೊಂಡಿರುವದು ಕಂಡು, ವಿಸ್ಮಯದಿಂದ ರೋಮಹರುಷಿತರಾದರು.— ರಾಜ್ಯಮತಸ್ಥಿತಿಯಲ್ಲಿಣ ಬಹಿಃಸುಖಾನುಭೋಗಕ್ಕುಬ್ಬಿರುವ ಕ್ರೈಸ್ತರೆಂಬವರೊಳಗೆ ಆಗಾಗ್ಯೆ ಕಂಡು ಬರುತ್ತಿದ್ದ ದುರ್ಗುಣಗಳಲ್ಲಿ ಅಸಹನವೆಂಬದು ಒಂದು[2]; ಇದು 2ನೇ ಥೆಯೊದೊಸಿಯನ ಕಾಲಕ್ಕೆ ಸಹ ಆಫ್ರಿಕದಲ್ಲಿ ವಂದಲರು ಬಾರದ್ದಕ್ಕಿಂತ ಮುಂಚೆ[3] ತೋರಿದ್ದೊಂದು ದೃಷ್ಟಾಂತವೇನಂದರೆ—ಕ್ರಿ. ಶ. 412ನೇ ವರುಷದಿಂದ 444ನೇದರ ವರೆಗೆ ಅಲೆಕ್ಸಂದರೀಯ ಪಟ್ಣದಲ್ಲಿ ಅಧ್ಯಕ್ಷನಾಗಿರುವ ಕುರಿಲ್ಲನೆಂಬವನು ಒಮ್ಮೆ ಎಲ್ಲಾ ಯೆಹೂದ್ಯರನ್ನೂ ಮೂರ್ತಿಪೂಜಕರನ್ನೂ ತನ್ನ ಅಧ್ಯಕ್ಷತೆಯ ಸ್ಥಳದಲ್ಲಿ ಸಹ ಇನ್ನೂ ಉಳಿದಿರುವ ನೊವಾತಿಯಾನಕರೆಂಬವರಂಥ ಕ್ರೈಸ್ತ ಶಾಖೆಯವರನ್ನೂ[4] ಪಟ್ಣದೊಳಗಿಂದ ತಳ್ಳಿ, ಅವರವರ ಆಸ್ತಿಯನ್ನು ಕಸು ಕೊಂಡು, ತನ್ನ ಸಭೆಯ ಭಂಡಾರಕ್ಕೆ ಕೂಡಿಸಿದನು.

ಕ್ರಿ. ಶ. 450ನೇ ಅಬ್ದ ತೀರಿದ 2ನೇ ಥೆಯೊದೊಸಿಯನ 8ನೇ ಉತ್ತರಾಧಿಕಾರಿಯಾದ ಆ 1ನೇ ಯುಸ್ತೀನಿಯಾನನು[5] ಕ್ರಿ. ಶ. 527ನೇ ವರುಷದಿಂದ 565ನೇದರ ವರೆಗೆ ಆಳುತ್ತಿದ್ದನು. ಅವನು ತನ್ನ ದಳವಾಯಿಯಾದ ಬೇಲಿಸರೆಂಬವನನ್ನು ಕ್ರಿ. ಶ. 533ನೇದಕ್ಕೆ ದೊಡ್ಡದೊಂದು ಸೇನೆಯೊಂದಿಗೆ ಆಫ್ರಿಕಕ್ಕೆ ಕಳುಹಿ, ಅಲ್ಲಿ ವಂದಲರ ಅಧಿಕಾರ ಮುರಿದು ಬಿಟ್ಟನು; ಆದರೂ ಆಫ್ರಿಕದ ಸಭೆಗಳಿಗೆ ಶಾಂತಿಯೊದಗಲಿಲ್ಲ. ಹ್ಯಾಗಂದರೆ, ಆ ಭೂಖಂಡದ ಉತ್ತರ ತೀರದಲ್ಲಿ ಕರ್ಥಾಗೊ ಪಟ್ಣಕ್ಕೆ[6] ಪಶ್ಚಿಮದಲ್ಲಿರುವ ಮೌರರೆಂಬವರು ಆ ಸಮಯ ಮೊದಲ್ಗೊಂಡ 60 ವರುಷ ಅವುಗಳಿಗೆ ಹೇರಳ ಹಾನಿ ಮಾಡುವವರಾದರು; ಒಂದು ಲೆಖ್ಖದ ಪ್ರಕಾರ ವಂದಲರು ಬಂದಂದಿನಿಂದ ಕ್ರಿ. ಶ. 550ನೇದರ ತನಕ ನಡೆಯುತ್ತಿದ್ದ ಯುದ್ಧ ಹಿಂಸೆಗಳಿಂದ ಮಾತ್ರ 50,00,000 ಜನರು ಹತರಾದ ಕಾರಣ ಆ ಕಡೆಯ ಕ್ರೈಸ್ತ ಸಭೆಗಳು

---

1) 118ನೇ ಪಾನು. 2) 195ನೇ, 200ನೇ, 201ನೇ, 205ನೇ, 214ನೇ ಪಾನುಗಳು ಸರಿ ನೋಡು. 3) 208ನೇ ಪಾನು. 4) 163ನೇ, 168ನೇ ಪಾನು. 5) 214ನೇ ಪಾನು. 6) 208ನೇ ಪಾನು.

ಸಣ್ಣವಾಗುತ್ತಾ ಬಂದವು. ಹಿಂದೆ ಗೊತ್ತಾದಂತೆ[1], ಯುಸ್ತೀನಿಯಾನನು 20 ವರುಷಗಳಿಗಿತ್ತ ಈತಲಿಯದಲ್ಲಿ ಪೂರ್ವ ಗೊಥರ ರಾಜ್ಯ ತೀರಿಸಿ, ತನ್ನದು ಸ್ಥಾಪಿಸಿದನು. ತನ್ನ ಕಾಲದ ವರೆಗೂ ಅಥೇನೆ ಪಟ್ಟದಲ್ಲಿ ಮಿಕ್ಕಿರುವ ಮೂರ್ತಿಪೂಜಾಪಾಂಡಿತ್ಯದ ಆ ಪ್ರಖ್ಯಾತ ಶಾಲೆ[2] ನಿಲ್ಲಿಸಿದ್ದರಿಂದ ಅವನು ಆ ದಿಶೆಯಲ್ಲಿ ವಿಗ್ರಹಾರಾಧನೆಯ ಕಡೇ ಬೇರು ಕಿತ್ತು ಬಿಟ್ಟನು; ಅದಲ್ಲದೆ ಅವನು ಓದೊವಕೆರನ ವಂಶಸ್ಥರಾದ ಹೆರುಲರಲ್ಲಿಯೂ[3] ಯೆಹೂದ್ಯರಲ್ಲಿಯೂ ಆ ಮೌರರಲ್ಲಿಯೂ ಸುವಾರ್ತೆ ಸಾರಿಸಿ, ತನ್ನ ರಾಜಧಾನಿಯಾದ ಕೊನ್ಸ್ತಂತೀನೊಪೊಲಿಯಲ್ಲಿ 25 ದೇವಾಲಯಗಳನ್ನು ಕಟ್ಟಿಸಿದನು. ಇವುಗಳಲ್ಲೊಂದರ ಹೆಸರು ಸೊಫಿಯ ದೇವಾಲಯವೆಂಬದು; ಅದು ಈಗಲೂ ಅದೆ. ಅದನ್ನು ಕಟ್ಟಿಸುವದಕ್ಕೆ ಅವನು 10,000 ಆಳುಗಳನ್ನು 6 ವರುಷ ಇಟ್ಟನು. ಅದು ತೀರಿದನಂತರ ಅವನು ಒಳಗೆ ಪ್ರವೇಶಿಸಿ, ಭಂಗಾರ ಬೆಳ್ಳಿ ಅಸಂಖ್ಯರತ್ನಗಳ ಅಮಿತ ಪ್ರಕಾಶ ಕಂಡು, ವಿಸ್ಮಯಪೂರಿತನಾಗಿ—ದೇವರಿಗೆ ಸ್ತೋತ್ರವಾಗಲಿ! ಸೊಲೊಮೋನನೇ, ನಿನ್ನನ್ನು ಗೆದ್ದಿದ್ದೇನೆ! ಎಂತ, ಕೂಗಿದನು. ಯೆಹೂದ್ಯರಲ್ಲಿ ದಾವೀದ ರಾಜನ ಮಗನಾದ ಸೊಲೊಮೋನನು ಪೂರ್ವ ಕಾಲದಲ್ಲಿ ಬಹು ಸುಂದರವಾದದೊಂದು ದೇವಾಲಯವನ್ನೇರಿಸಿದ್ದನಲ್ಲವೋ? ಇದು ಸಂಸಿದ್ಧಿಸುವದಕ್ಕೆ 7 ವರುಷ ಬೇಕಾಗಿದ್ದವು[4].

## 28. ಈತಲಿಯದ ಮಿಲಾನೊ ಪಟ್ಣದ ಅಂಬ್ರೊಸಿಯನೆಂಬ ಅಧ್ಯಕ್ಷನು.

ಸುಮಾರು ಕ್ರಿ. ಶ. 334ನೇ ವರುಷ ಗಲ್ಲಿಯದಲ್ಲಿ ದೊಡ್ಡ ಕೊನ್ಸ್ತಂತೀನ ಕೈಸರನ[5] ಒಬ್ಬ ಪ್ರತಿನಿಧಿಗೆ ಅಂಬ್ರೊಸಿಯನೆಂಬ ಕುಮಾರನು ಹುಟ್ಟಿದನು. ಆ ಪ್ರತಿನಿಧಿಯು ಮೂರ್ತಿಪೂಜಕನು; ಅವನು ಸತ್ತ ಮೇಲೆ ಅವನ ವಿಧವೆಯು ತನ್ನ 3 ಮಂದಿ ಮಕ್ಕಳನ್ನು ತಕ್ಕೊಂಡು, ರೋಮಪುರಕ್ಕೆ ಹೋದಳು. ಅಂಬ್ರೊಸಿಯನ ಅಕ್ಕ ಕ್ರೈಸ್ತತ್ವಕ್ಕೆ ಮೆಚ್ಚಿ, ತನ್ನ ಈ ತಮ್ಮನಲ್ಲಿ ಸಹ ಕ್ರಿಸ್ತನ ಪ್ರೀತ್ಯಗ್ನಿ ಹೊತ್ತಿಸಿದಳು. ಅಂಬ್ರೊಸಿಯನು ಪ್ರಾಯಸ್ಥನಾಗಿ, ವಾಕ್ಚಾತುರ್ಯದಿಂದಲೂ ರಾಜನೀತಿಸಂಪತ್ತಿನಿಂದಲೂ ವಿರಾಜಿಸುತ್ತಿದ್ದದರಿಂದ 1ನೇ ವಲೆಂತೀನಿಯಾನ ಕೈಸರನು[6] ಕ್ರಿ. ಶ. 370ನೇ ವರುಷ ಅವನನ್ನು, ಮಿಲಾನೊ[7] ಪ್ರದೇಶದ ಪ್ರತಿನಿಧಿ ಎಂದು, ನೇಮಿ

1) 214ನೇ ಪಾನು. 2) 48ನೇ ಪಾನು. 3) 210ನೇ ಪಾನು. 4) 1 ಅರಸು. 6, 38.
5) 179ನೇ, 201ನೇ ಪಾನು. 6) 200ನೇ ಪಾನು. 7) 215ನೇ ಪಾನು.

ಸಿದನು. ಬಳಿಕ ಅಂಬ್ರೊಸಿಯನು ಒಬ್ಬ ಕ್ರೈಸ್ತ ಸಭಾಧ್ಯಕ್ಷನಿಗೆ ಯೋಗ್ಯವಾದಂಥ ನ್ಯಾಯ ದಯೆಗಳಿಂದ ತನ್ನ ರಾಜೋದ್ಯೋಗ ನಡಿಸುತ್ತಾ ಬರಲು, ಸರ್ವ ಪ್ರಜೆಯವರು ಅವನ ಮೇಲೆ ಪೂರ್ಣ ನಂಬಿಗೆ ಇಡುವವರಾದರು. ಅಷ್ಟರೊಳಗೆ ಮಿಲಾನೊ ಪಟ್ಣದಲ್ಲಿ ಒಬ್ಬ ಅರೀಯಾನ ಅಧ್ಯಕ್ಷನಿರುತ್ತಿದ್ದನು. ಇವನು ಕ್ರಿ. ಶ. 374ನೇದರಲ್ಲಿ ಸತ್ತ ಹಿಂದೆ ಒಬ್ಬ ಹೊಸ ಅಧ್ಯಕ್ಷನನ್ನಾರಿಸಿ ಕೊಳ್ಳ ಬೇಕಾದಲ್ಲಿ ಅರೀಯಾನರಿಗೂ ನೀಕೇನರಿಗೂ ಅಧಿಕ ತರ್ಕವು ಹತ್ತಿತು. ಅವರವರು ಒಂದು ದೇವಾಲಯದೊಳಗೆ ಕೂಡಿ ಬಂದು ವದಿಸುತ್ತಿರುವಾಗ ಅಂಬ್ರೊಸಿಯನು ತನ್ನ ಕೆಳಗಿನ ಸೈನಿಕರದೊಂದು ಗುಂಪಿನೊಂದಿಗೆ ಸಮಾಧಾನ ಕಾಪಾಡಿಸುವದಕ್ಕಾಗಿ ಒಳಗೆ ಬಂದನು. ಇನ್ನು ಕೆಲವು ಹೊತ್ತು ಗೋಷ್ಟಿಯು ನಡದ್ದು ಸಹ ಅನರ್ಥಕವಾದಂದು ಸಂಘ ನೆರದ ಆ ಜನರಲ್ಲೊಂದು ಶಿಶು, ಅಂಬ್ರೊಸಿಯನು ಅಧ್ಯಕ್ಷನಾಗ ಬೇಕು! ಎಂತ, ತನಗೆ ಬರುವಷ್ಟು ಘಟ್ಟಿಯಾಗಿ ಕೂಗಿತು; ತತ್ಕ್ಷಣವೇ ಅ ಸಂಘದವರೆಲ್ಲರೂ—ಹೌದು, ನಮ್ಮ ಅಧ್ಯಕ್ಷನು ಅಂಬ್ರೊಸಿಯನೇ! ಎಂತ, ಕೂಗ ತೊಡಗಿದರು. ಆ ಪ್ರತಿನಿಧಿಯು ಅದು ಕೇಳಿ, ಅತ್ಯಾಶ್ಚರ್ಯ ಪಟ್ಟು, ನಿಂತು ಕೊಂಡಿರಲು, ಸಮಸ್ತರು ಬಂದು, ತಮ್ಮ ಅಧ್ಯಕ್ಷನೆಂತ, ಅವನಿಗೆ ವಂದಿಸಲು, ಅವನು ಅಂದದ್ದೇನು—ಅಂಥಾ ಪರಿಶುದ್ಧ ಉದ್ಯೋಗಕ್ಕೆ ನಾನು ಹ್ಯಾಗೂ ಪಾತ್ರನಲ್ಲ, ಅದನ್ನು ನಡಿಸುವದು ನನಗೆ ಹ್ಯಾಗೂ ಬರುವದಿಲ್ಲ; ನಾನು ಹೃದಯದಲ್ಲಿ ಕ್ರಿಸ್ತನ ಭಕ್ತಿ ಇದ್ದವನಾದಾಗ್ಯೂ ನಾನು ಸ್ನಾನವನ್ನು ಸಹ ಇನ್ನು ಹೊಂದಲಿಲ್ಲ.—ಆದರೂ ಪ್ರಜೆಯ ಮನಸ್ಸು ಬೇರೆಯಾಗದಿರಲಿಕ್ಕೆ, ಅವನು ಓಡಿ, ಪಟ್ಣ ಬಿಟ್ಟು ಹೋದನು. ಆಗ ಪ್ರಜೆಯು ತಡೆಯದೆ ಅವನು ಹೋದಲ್ಲಿಗೆ ಬಂದು, ಅವನಿಗೆ ತಿರಿಗಿ ಬೇಡಿ ಕೊಂಡಿತು. ಅದರ ಹೊರ್ತು ವಲೆಂತೀನಿಯಾನ ಕೈಸರನು, ಆ ಅಧ್ಯಕ್ಷತೆಯನ್ನು ತಕೊಳ್ಳಿರೆಂತ, ಅವನಿಗೆ ಅಪ್ಪಣೆ ಕೊಟ್ಟನು. ಹೀಗಿರಲಿಕ್ಕೆ ಅವನು, ದೇವರ ಚಿತ್ತವೆಂದು, ಒಡಂಬಟ್ಟು, ಸ್ನಾನ ಪಡಕೊಂಡು, ತನ್ನ ಕುಟುಂಬದವರಿಗೆ ತನ್ನ ಬದುಕಿನಲ್ಲಿ ತಕ್ಕಷ್ಟು ಕೊಟ್ಟು, ಮಿಕ್ಕದ್ದನ್ನು ಬಡವರಿಗೆ ಹಂಚಿಸಿ, ಇತ್ಲಾಗೆ 8 ದಿವಸದ ಮೇಲೆ ಮಿಲಾನೊವಿನ ಅಧ್ಯಕ್ಷನಾದನು[1].

ಅವನು ತನ್ನ ಜೀವಿತಕಾಲದ ಪೂರ್ತಿಗೆ ಉತ್ತಮನಾದ ಕಾರ್ಯಶೀಲನು. ಅವನು ಹಗಲಿಗೆ ತನ್ನ ಹೊಸ ಉದ್ಯೋಗದ ನಾನಾ ತರದ ಕೆಲಸವನ್ನು ಜಾಗ್ರತೆಯಿಂದ ಮಾಡುತ್ತಿದ್ದದಲ್ಲದೆ ಪರಿಶುದ್ಧ ಬರಹದ ಹೊರ್ತು ಇತರ ಅನೇಕ ಗ್ರಂಥಗಳನ್ನೂ, ವಿಶೇಷವಾಗಿ ಒರೀಗೆನನವುಗಳನ್ನು[2], ಅಭ್ಯಾಸಿಸುತ್ತಾ, ಬಹಳ ಗ್ರಂಥಗಳನ್ನು ಹೇಳಿ ಬರೆಸುತ್ತಾ ಇದ್ದನು. ಇರುಳಿನೊಂದು ದೊಡ್ಡ ಪಾಲನ್ನು ಸಹ ಕೆ

1) 100ನೇ ಪಾನು. 2) 155ನೇ ಪಾನು.

ಲಸಕ್ಕೆ ಪ್ರಯೋಗಿಸುತ್ತಿದ್ದನು, ಆದರೆ ತಾನು ಹಗಲಿನಲ್ಲಿ ಇಟ್ಟು ಕೊಳ್ಳುತ್ತಿರುವ ಲೇಖಕರನ್ನು ಆ ಹೊತ್ತು ಇಟ್ಟು ಕೊಂಡಿರಲಿಲ್ಲ; ಯಾಕಂದರೆ, ಜತೆಮನುಷ್ಯರಲ್ಲಿ ಯಾವನೊಬ್ಬನಿಗೂ ನಿದ್ರೆಗೆಡುಕನಾಗ ಬಾರದೆಂಬ ಪ್ರೀತಿಯ ಮನಸ್ಸು ಅವನಲ್ಲಿತ್ತು. ಹಗಲಿರುಳು ಅವನ ಬಾಗಿಲು ತೆರೆದಿರುವದು; ಏನೂ ಒಂದು ಚಿಂತೆಯೂ ಜಂಬರವೂ ಇದ್ದವರೆಲ್ಲರು ಯಾವ ಹೊತ್ತಿನಲ್ಲಿಯೂ ಅಡ್ಡಿ ಇಲ್ಲದೆ ಅವನ ಬಳಿಗೆ ಬರ ಬಹುದು. ಅವನು ಬಡವರ ಮತ್ತು ಉಪದ್ರವವುಳ್ಳವರ ನಿಜ ಮಿತ್ರನು. ಯಾರಾದರೂ ರಾಜ್ಯದ ಶತ್ರುಗಳ ಶೆರೆಯವರಾದರೆ ಅವನು ಹಣ ಕೂಡಿಸಿ, ಕಳುಹಿಸಿ, ಅವರನ್ನು ಬಿಡಿಸುವನು[1]; ಒಮ್ಮೆ ಅದಕ್ಕೆ ಹಣ ಸಾಲದಿರಲಾಗಿ, ಅವನು ದೇವಾಲಯಗಳ ಭೂಷಣಗಳನ್ನೂ ರಾತ್ರಿಭೋಜನದ ಪಾತ್ರಗಳನ್ನೂ ದೊಡ್ಡವೆನ್ನದೆ, ಮಾರಿ, ಹೀಗೆ ಸಾಕಷ್ಟು ಹಣ ಘಳಿಸಿ[2], ಅಂಥ ಶೆರೆಯವರನ್ನು ಸಂಕಟದೊಳಗಿಂದ ತಪ್ಪಿಸಿದನು. ಅವನು ಭಕ್ತ್ಯನುರಕ್ತಿಯಿಂದ ತಾನು, ಕ್ರೈಸ್ತ ಮಠವಾಸಿಗಳಂತೆ[3], ಸ್ವದೇಹದಂಡನಕಾರನಾಗಿರುತ್ತಾ[4], ಮಠವಾಸಿತ್ವಕ್ಕೆ ಬಹಳ ಆಸ್ಪದ ಕೊಡುತ್ತಾ, ತನ್ನ ಪ್ರಸಂಗಗಳಲ್ಲಿ ಕನ್ಯೆಗಳ ಅವಿವಾಹಿತ್ವವನ್ನು ಹೆಚ್ಚಾಗಿ ಕೊಂಡಾಡುತ್ತಾ[5] ಇದ್ದನು; ಈ ಕಡೆಯ ಕಾರ್ಯದ ದೆಸೆಯಿಂದ ಅನೇಕ ಮಾತೆಗಳು ತಮ್ಮ ಕುಮಾರ್ತೆಗಳಿಗೆ, ನೀವು ಅವನ ಪ್ರಸಂಗ ಕೇಳಲಿಕ್ಕೆ ಇನ್ನೂ ಹೋಗ ಬೇಡಿರೆಂತ, ಬುದ್ಧಿ ಹೇಳ ಬೇಕಾಯಿತು. ಅಂಬ್ರೊಸಿಯನು ಹಲವು ಒಳ್ಳೇ ಗೀತಗಳನ್ನು ರಚಿಸಿದನು, ಹೊರ್ತಾಗಿ ದೇವಾಲಯದೊಳಗಣ ಆರಾಧನೆಗಳಲ್ಲಿಯ ಗಾನವನ್ನು ತಿದ್ದಿದನು. ಪೂರ್ವ ದಿಕ್ಕಿನ ಸಭೆಗಳಲ್ಲಿ ಬಹು ಕಾಲದಿಂದ ರೂಢಿಯಾಗಿದ್ದ ಗಾಯನೋತ್ತರಗಾಯನವನ್ನು ಅವನು ಪಶ್ಚಿಮ ದಿಕ್ಕಿನ ಸಭೆಗಳಲ್ಲಿ ಶೇರಿಸಿದನು; ಈ ಗಾಯನವು ಎಂಥಾದ್ದಂದರೆ, ಕೂಡಿದ ಸಭೆಯ ಒಂದು ಪಾಲಿನವರು ಹಾಡಿದ್ದಕ್ಕೆ ಮತ್ತೊಂದು ಪಾಲಿನವರು ಹಾಡಿ ಉತ್ತರ ಕೊಡುವಂಥಾದ್ದು. ಹಿಂದಗಡೆ ಪ್ರಖ್ಯಾತ ಸಭಾಬೋಧಕನಾದ ಹಿಪ್ಪೊ ಪಟ್ಟದ ಔಗುಸ್ತೀನನೆಂಬವನು ಕ್ರಿಸ್ತನ ಭಕ್ತನಾದದಕ್ಕೆ ಮುಂಚೆ ಕ್ರಿ. ಶ. 384ನೇ ವರುಷ ಸುತ್ತ ಮಿಲಾನೊವಿನಲ್ಲಿ ಇದ್ದು, ಆಗಿಂದಾಗ ಅಂಥಾದೊಂದು ಗಾಯನ ಕೇಳುತ್ತಿರಲಿಕ್ಕೆ ಸಂತೋಷಸಂಭ್ರಮದಿಂದ ಕಣ್ಣೀರು ಹಾಕುವನು.

ಅಂಬ್ರೊಸಿಯನು ಅಧ್ಯಕ್ಷನಾಗಿ ಒಂದು ವರುಷ ಹೋಗದ್ದಕ್ಕಿಂತ ಮುಂದಾಗಿ 1ನೇ ವಲೆಂತೀನಿಯಾನ ಕೈಸರನು ಸತ್ತಾಗ ಗ್ರಾತಿಯಾನನೆಂಬ ಮಗನು[6] ಅವನ ಸ್ಥಳಕ್ಕೆ ಬಂದನು. ಅಂದು ಸುಮಾರು 20 ವರುಷದವನಾದ ಈ ಹೊಸ ಕೈಸ

1) 164ನೇ ಪಾನು ಸರಿ ನೋಡು. 2) 210ನೇ ಪಾನು ಸರಿ ನೋಡು. 3) 193ನೇ, 194ನೇ ಪಾನು; 33ನೇ ಸಂಧಿ. 4) 146ನೇ, 153ನೇ, 184ನೇ ಪಾನು. 5) 34ನೇ ಸಂಧಿ. 6) 201ನೇ, 204ನೇ ಪಾನು.

ರನು ತನ್ನ ತಂದೆ ಎಂಬಂತೆ ಅಂಬ್ರೊಸಿಯನಿಗೆ ಪ್ರೀತಿ ಮಾಡುತ್ತಿದ್ದು, ಒಮ್ಮೆ ಅವನಿಗೆ ಬರೆದು ಕಳುಹಿಸಿದ್ದೊಂದು ಪತ್ರಿಕೆಯಲ್ಲಿ ಹೇಳುವದೇನಂದರೆ—ನಾನು ನಂಬಿಕೊಂಡಿರುವ ಕ್ರೈಸ್ತತ್ವದ ಸತ್ಯವನ್ನು ಪೂರಾ ತಿಳುಕೊಳ್ಳುವದಕ್ಕೆ ನನಗೆ ಬಹಳ ಆಶೆಯದೆ; ಚಂದಾಗಿ ತರ್ಕಿಸ ಬಲ್ಲವನಾಗುವದಕ್ಕೂ ನಾನು ಹೃದಂತರಂಗದೊಳಗೆ ಆರಾಧಿಸಲಭಿಲಾಷಿಸುವ ದೇವರನ್ನು ಕುರಿತು ಚಾತುರ್ಯದಿಂದ ಬಹಳ ಮಾತಾಡ ಬಲ್ಲವನಾಗುವದಕ್ಕೂ ಅಲ್ಲ, ದೇವರು ಪ್ರಕಟಿಸಿದ ಸತ್ಯವು ನನ್ನ ಹೃದಯವನ್ನು ಹೆಚ್ಚಾಗಿ ವ್ಯಾಪಿಸಿ ಕೊಳ್ಳುವದಕ್ಕೆ ಮಾತ್ರ ಆ ಆಶೆಯುಳ್ಳವನಾಗಿದ್ದೇನೆ.—ಬಳಿಕ ಅಂಬ್ರೊಸಿಯನು ಆ ಯೌವನಸ್ಥ ಕೈಸರನ ಆಶೆಯೊದಗಿಸುವದಕ್ಕೆ ತಾನು ಅವನ ಉಪಾಧ್ಯಾಯನಾದನು.

ಗ್ರಾತಿಯಾನನು ರೋಮಿಾಯ ಸಾಮ್ರಾಜ್ಯದ ಪಶ್ಚಿಮ ಭಾಗವನ್ನಾಳಲಿಕ್ಕೆ ಹತ್ತಿದಾಗ 2ನೇ ವಲೆಂತೀನಿಯಾನನೆಂಬ ಅವನ ತಮ್ಮನು[1] 4 ವರುಷಮಾತ್ರದ ಶಿಶುವಾಗಿದ್ದು, ಸಹಾಯಕೈಸರನಾಗ ಕೂಡಲಿಲ್ಲ. ಆದರೆ ಇವನ ತಾಯಿಯಾದ ಯುಸ್ತೀನಳೆಂಬವಳು ರಾಜ್ಯಕಾರ್ಯಗಳಲ್ಲಿ ತನ್ನ ಕೈ ಹಾಕಲಿಕ್ಕೆ ಹೆದರಲಿಲ್ಲ. ಅವಳು ಅರೀಯಾನತ್ವದಲ್ಲಿ ಘಟ್ಟಿಗಳಾಗಿ[2], ಅಂಬ್ರೊಸಿಯನಿಗೆ ಹಗೆ ಪಡುತ್ತಿದ್ದಳು. ಆದ್ದರಿಂದ ಅವಳು ಒಮ್ಮೆ ಆ ಅಧ್ಯಕ್ಷನಿರುವದೊಂದು ದೇವಾಲಯದ ಸುತ್ತಲು ಗೊಥರಾದ[3] ದಂಡುಗಾರರನ್ನು ನಿಲ್ಲಿಸಿ, ಈಗಲೇ ದೇವಾಲಯ ಬಿಟ್ಟು ಹೋಗಿರೆಂತ, ಅವನಿಗೆ ಹೇಳಿಸಿದಳು. ಬಳಿಕ ಅಂಬ್ರೊಸಿಯನು ಹೆದರದೆ, ಅವಳಿಗೆ—ಕ್ರಿಸ್ತನ ಕುರಿಗಳನ್ನು ನಾನು ಎಂದಿಗೂ ತೋಳಗಳ ಬಾಯಿಗೆ ಒಪ್ಪಿಸಿ ಕೊಡಲಿಕ್ಕಿಲ್ಲ; ಬೇಕಾದರೆ ನಿಮ್ಮ ಕತ್ತಿ ಈಟಿಗಳನ್ನು ಹಿಡು ಕೊಂಡು, ನನ್ನ ಮೇಲೆ ಬೀಳಿರಿ; ನಿಮ್ಮ ಆಯುಧಗಳಿಂದ ನಾನು ಸಂತೋಷವಾಗಿ ಸಾಯುವೆನೆಂತ, ತಿಳಿಸಲು, ಯುಸ್ತೀನಳು ಸುಮ್ಮನಿದ್ದಳು; ಯಾಕಂದರೆ ಎಲ್ಲಾ ಜನರೊಲಿಯುವಂಥ ಅಧ್ಯಕ್ಷನಿಗೆ ಬಹಿರಂಗದಲ್ಲಿ ದುಡುಕು ಮಾಡುವದಕ್ಕೆ ಅಂಜಿ ಕೊಂಡಳು. ಗ್ರಾತಿಯಾನನು ಕ್ರಿ. ಶ. 383ನೇ ವರುಷದಲ್ಲಿ ಸಾಯಲಾಗಿ, ಅವಳಿಗೆ ಅರೀಯಾನತ್ವವನ್ನು ವರ್ಧಿಸಲಿಕ್ಕೆ ಹೆಚ್ಚು ಅನುವಾಯಿತು. ಅಂದು ಅವಳ ಸಲಹೆಯಿಂದ 2ನೇ ವಲೆಂತೀನಿಯಾನನು[4] ಮಿಾಲಾನೊ ಪಟ್ಣಕ್ಕೆ ಒಬ್ಬ ಅರೀಯಾನ ಪಕ್ಷದ ಅಧ್ಯಕ್ಷನನ್ನು ನೇಮಿಸಿ, ಮುಖ್ಯ ದೇವಾಲಯವನ್ನೂ ಅದರ ಪಾತ್ರಗಳನ್ನೂ ಅವನಿಗೊಪ್ಪಿಸಿ ಕೊಡಿರೆಂತ, ಅಂಬ್ರೊಸಿಯನಿಗೆ ಆಜ್ಞಾಪಿಸಿದನಂತರ ಇವನು—ಕೈಸರನು ನನ್ನ ಮನೆಯನ್ನಾಗಲಿ ಭೂಮಿ

1) 188ನೇ, 201ನೇ ಪಾನು. 2) ಹಾಗಾದರೆ ಅಂದಾದರೂ ರೋಮದ ಅಧ್ಯಕ್ಷನ ಕೆಳಗೆಯೇ ಅರೀಯಾನರಿದ್ದರು; 188ನೇ, 211ನೇ, 218ನೇ ಪಾನು ಸರಿ ನೋಡು. 3) 204ನೇ ಪಾನು ಸರಿ ನೋಡು. 4) 204ನೇ ಪಾನು.

ಯನ್ನಾಗಲಿ ಬೇರೆ ಆಸ್ತಿಯನ್ನಾಗಲಿ ಕೇಳಿ ಕೊಂಡರೆ ಕೂಡಲೇ ಅದನ್ನೆಲ್ಲಾ ಕೊಡುವೆನು; ಆದರೆ ದೇವರು ನನ್ನ ಅಧ್ಯಕ್ಷತೆಯಲ್ಲಿಟ್ಟದ್ದನ್ನು ನಾನೆಂದಿಗೂ ಒಪ್ಪಿಸಿ ಕೊಡ ಕೂಡದೆಂತ, ತಾಳ್ಮೆಯಿಂದ ಉತ್ತರ ಹೇಳಿ, ಅದೇ ದಿವಸದಲ್ಲಿ ತನ್ನ ಸಭೆಯವರ ಮುಂದೆ ನುಡಿದ್ದೇನಂದರೆ—ದಂಡುಗಾರರೆದುರಿನಲ್ಲಿ ಪ್ರಾರ್ಥನೆಯೂ ಕಣ್ಣೀರೂ ನನ್ನ ಆಯುಧವು; ಅವೇ ಒಬ್ಬ ಅಧ್ಯಕ್ಷನ ಕೋಟೆಯು. ಬೇರೆ ವಿಧದಿಂದ ಎದುರಿಸುವದು ನನಗೆ ಅಯೋಗ್ಯ. ನಮ್ಮ ಕರ್ತನಾದ ಯೇಸು ಕ್ರಿಸ್ತನು ಸರ್ವತ್ರಾಣಿಯಲ್ಲವೋ? ಅವನ ಚಿತ್ತದಲ್ಲಿರುವಂಥಾದ್ದೇ ಆಗುವದು. ದೇವರ ಪರಿಪಾಲನೆಗೆ ಯಾರೂ ವಿರೋಧ ಮಾಡ ಬಾರದು!—ಆ ಮೇಲೆ ಕೈಸರನು ಅವನನ್ನು ಬೆದರಿಸಲಿಕ್ಕೆ ಹುಡುಕಿದರೂ ಅದು ಆಗಲಿಲ್ಲ. ಹೀಗಿರಲಾಗಿ, ಒಂದಾನೊಂದು ಆದಿತ್ಯವಾರ ಅಂಬ್ರೊಸಿಯನು ಪ್ರಸಂಗಿಸಿ, ಹಲವು ಜನರಿಗೆ ಸ್ನಾನ ಕೊಡಲಿಕ್ಕೆ ಸಿದ್ಧನಾದ ಸಮಯದಲ್ಲಿ, ಈಗಲೇ ಕೈಸರನು ಪಟ್ಣದ ಹೊರಗಿರುವ ಒಂದು ದೇವಾಲಯ ಹಿಡಿಸಿದ್ದಾನೆಂತ, ಅವನಿಗೆ ತಿಳಿಸಿದರು. ಅವನು ಕೇಳಿ, ಹಾಗೆಯೇ ತನ್ನ ಉದ್ಯೋಗದ ಕಾರ್ಯಗಳನ್ನು ಮುನ್ನಡಿಸುತ್ತಿರಲು,. ನಿಮ್ಮ ಸಭೆಯವರು ಒಬ್ಬ ಅರೀಯಾನ ಸಭೇ ಹಿರಿಯನನ್ನು ಬೀದಿಯಲ್ಲಿ ಹಿಡು ಕೊಂಡಿದ್ದಾರೆ, ಕಲಹವಾದೀತು! ಎಂಬ ಸುದ್ದಿಯು ಸಹ ತನಗೆ ಮುಟ್ಟಿದಾಗಲೇ ಆ ಹಿರಿಯನನ್ನು ಬಿಡಿಸಿ, ದೇವಾಲಯದೊಳಗಿನ ಪ್ರಜೆಗೆ—ಓ ಕೈಸರನೇ, ನಾವು ಜಗಳಾಡುವಂಥವರಲ್ಲ, ದೇವರಿಗೆ ಬೇಡಿಕೊಳ್ಳುವಂಥವರಷ್ಟೇ! ಎಂಬ ಭಾವವು ನಿತ್ಯದಲ್ಲಿ ನಿಮಗಿರಲಿ! ಎಂತ, ಬುದ್ಧಿ ಹೇಳಿದನು. ತನ್ಮಧ್ಯ ಅವನಿರುವ ದೇವಾಲಯದ ಸುತ್ತ ಮುತ್ತಲೂ ಸೈನಿಕರು ಕೂಡಿ, ನಿಂತು ಕೊಂಡಿರುತ್ತಿದ್ದರು; ಯಾರಿಗೂ ಹೊರಗೆ ಬರಲಿಕ್ಕಾಗಲಿ ಒಳಗೆ ಹೋಗಲಿಕ್ಕಾಗಲಿ ಅಪ್ಪಣೆ ಇರಲಿಲ್ಲ. ಆದ್ದರಿಂದ ಅಂಬ್ರೊಸಿಯನೂ ಅವನ ಸಂಗಡ ಒಳಗಿದ್ದ ಸಭ್ಯರೂ ದೇವರಿಗೆ ಪ್ರಾರ್ಥಿಸುತ್ತಲೇ ಇದ್ದು, ರಾತ್ರಿಯೆಲ್ಲವೂ ಸಹ ಗೀತ ಕೀರ್ತನೆಗಳನ್ನು ಹಾಡುತ್ತಿದ್ದರು. ದೇವರು ತನ್ನ ಮಕ್ಕಳ ಆ ಬಿನ್ನಹಗಳಿಗೆ ಒಲಿದ ಕಾರಣ ಕೈಸರನು ತನ್ನ ವೈಮನಸ್ಯ ಬಿಟ್ಟು, ಸೈನಿಕರನ್ನು ಹಿಂದಕ್ಕೆ ಕಳುಹಿಸಲಾಯಿತು. ಕಾಲಗತಿಯಲ್ಲಿ ಅವನು, ನನ್ನ ತಾಯಿಯು ನನಗೆ ಮೋಸ ಮಾಡುತ್ತಿದ್ದಳೆಂತ, ತಿಳು ಕೊಂಡು, ಅಂಬ್ರೊಸಿಯನೊಡನೆ ಒಂದೇ ಆಗಿ, ನೀವೇ ನನಗೆ ಸ್ನಾನ ಕೊಡ ಬೇಕೆಂತ, ಅವನ ಬಳಿಯಲ್ಲಿ ಬೆಸಸುವಷ್ಟು ಮಮತೆಯನ್ನಾದರೂ ಅವನ ಮೇಲೆ ಇಡುವವನಾದನು. ೨ನೇ ವಲೆಂತೀನಿಯಾನನು ಸ್ವಲ್ಪ ಕಾಲದ ಮೇಲೆ ಕ್ರಿ. ಶ. ೩೯೨ನೇ ವರುಷ ಸತ್ತದರಿಂದ[1] ಆ ಸ್ನಾನವು ಅವನಿಗೆ ಪ್ರಾಪ್ತವಾಗದೆ ಹೋಯಿತು.

---

1) 204ನೇ ಪಾನು.

ಅಷ್ಟರಲ್ಲಿ ರೋಮಾಯ ಸಾಮ್ರಾಜ್ಯದ ಪೂರ್ವ ಭಾಗದ ಕೈಸರನಾದ 1ನೇ ಥೆಯೊದೊಸಿಯನು[1] ಅಂಬ್ರೊಸಿಯನ ಪೂರ್ಣ ಮಿತ್ರನಾಗಿ ನಡಕೊಳ್ಳುತ್ತಿದ್ದನು. ಕ್ರಿ. ಶ. 390ನೇ ವರುಷಕ್ಕೆ ಏನಾಯಿತಂದರೆ—ಮಕೆದೊನಿಯದ ಥೆಸ್ಸಲೊನೀಕೆ ಪಟ್ಣದ[2] ಪ್ರಜೆಯು ಕಲಹಕ್ಕೆದ್ದು, ಥೆಯೊದೊಸಿಯನ ಒಬ್ಬ ಸೇನಾಧಿಪತಿಯನ್ನೂ ಬೇರೆ ಕೆಲವು ಮಂದಿ ಸೇನೋದ್ಯೋಗಸ್ಥರನ್ನೂ ಕೊಂದರು. ಈ ದುಷ್ಕರ್ಮದ ಸುದ್ದಿಯು ಮಿಲಾನೊ ಪಟ್ಣದಲ್ಲಿ ಈತಲಿಕ ಅಧ್ಯಕ್ಷರದೊಂದು ಸಂಘದಲ್ಲಿರುವ ಥೆಯೊದೊಸಿಯನಿಗೆ ತಿಳಿಯ ಬಂದಾಗ ಅವನು ಬಹಳ ಕ್ರೋಧವುಳ್ಳವನಾದನು. ಇದು ಅಧ್ಯಕ್ಷರ ಬಿನ್ನಹದ ಮೇಲೆ ಸ್ವಲ್ಪ ತಗ್ಗಲು, ಕೈಸರನು ಅಂಬ್ರೊಸಿಯನಿಗೆ, ಆ ಅಪರಾಧಿಗಳಿಗೆ ಮನ್ನಿಸುವೆನೆಂದು, ಮಾತು ಕೊಟ್ಟ ಈಚೆ ಕೈಸರನ ಪ್ರಧಾನಿಯಾಗಿರುವ ರೂಫೀನನೆಂಬವನು ಆ ಕ್ರೋಧವನ್ನು ತಿರಿಗಿ ಏರಿಸಿದನು. ಆದ್ದರಿಂದ ಥೆಯೊದೊಸಿಯನು ತನ್ನ ಮಾತು ತಪ್ಪಿಸಿ, ತಡೆಯಿಲ್ಲದಲೇ ಮರಣದಂಡನ ಮಾಡ ಬೇಕೆಂದು, ಅಪ್ಪಣೆ ಕಳುಹಿಸೋಣ, ದಂಡುಗಾರರು ಥೆಸ್ಸಲೊನೀಕೆಯಲ್ಲಿ ಕೊಲ್ಲಲೆಸಗಿ, ಅಪರಾಧ ನಿರಪರಾಧ ವಿಚಾರಿಸದೆ 3 ತಾಸಿನೊಳಗೆ 7000 ಜನರನ್ನು ಸಂಹರಿಸಿದರು. ಅಂಬ್ರೊಸಿಯನು ಅದು ಕೇಳಿ, ಕೈಸರನಿಗೆ ಬರೆದು ಕಳುಹಿಸಿದ್ದೊಂದು ಪತ್ರಿಕೆಯ ಕೆಲವು ಮಾತೇನಂದರೆ—ನೀವು ವಿಶ್ವಾಸಾಸಕ್ತಿಯುಳ್ಳವನೂ ದೇವರಿಗೆ ಭಯ ಪಡುವವನೂ ಆಗಿದ್ದೀರೆಂತ, ಬಲ್ಲೆನು; ಆದರೆ ನಿಮ್ಮ ಭಾವವು ಬಹಳ ಉದ್ವೇಗವುಳ್ಳದ್ದು. ತಕ್ಕ ಉಪಾಯದಿಂದ ನಿಮ್ಮ ಭಾವವನ್ನು ಶಾಂತಿ ಪಡಿಸ ಬಹುದು, ಸರಿ; ಆದರೆ ಲಗಾಮಿಲ್ಲದಿದ್ದರೆ ಅದು ಕಂಡಾಬಟ್ಟೆ ಕೇಡು ಹುಟ್ಟಿಸುವದು. ನಿಮ್ಮ ರಕ್ತಾಪರಾಧಕ್ಕೋಸ್ಕರ ಸಭೆಗೂ ನಿಮಗೂ ಈಗ ಅನ್ಯೋನ್ಯವಿರ ಕೂಡದು. ಪರಿಶುದ್ಧ ರಾತ್ರಿಭೋಜನವನ್ನಾಚರಿಸುವದಕ್ಕೆ ನೀವು ಬರ ಬೇಡಿರಿ; ಅದನ್ನು ಅಯೋಗ್ಯ ಮನಸ್ಸಾಗಿ ಆಚರಿಸಿದರೆ ಹೊಸ ಪಾಪ ಮಾಡುವಿರಲ್ಲವೋ? ಪರಿಶುದ್ಧ ರಾತ್ರಿಭೋಜನದಲ್ಲಿ ನಿಮಗೆ ಒಂದು ಪಾಲು ಕೊಡುವದಕ್ಕೆ ನನಗೆ ಧೈರ್ಯವು ಸಾಲದು. ಒಬ್ಬನೇ ನಿರಪರಾಧಿಯ ರಕ್ತವು ಚಲ್ಲಿ ಹೋದ ಪಕ್ಷದಲ್ಲಿ ನಾನು ಮಾಡ ಬೇಕಾಗುವದನ್ನು ಸಾವಿರಾರು ಮಂದಿ ನಿರಪರಾಧಿಗಳದು ಚಲ್ಲಿ ಹೋಗಿ ಪರಲೋಕದ ಕಡೆಗೆ ಕೂಗುವ ಈ ಪಕ್ಷದಲ್ಲಿ ನಾನು ಮಾಡದೆ ಇರುವದುಂಟೇ? ಆದರೂ ನಿಮಗೆ ಪ್ರೀತಿ ಮಾಡುತ್ತೇನೆ, ಮನಃಪೂರ್ವಕವಾಗಿ ಪ್ರೀತಿ ಮಾಡುತ್ತೇನೆ; ನಿಮ್ಮ ಹಿತಕ್ಕಾಗಿ ಪ್ರಾರ್ಥಿಸುತ್ತೇನೆ; ಆದರೆ ನಿಮಗಿಂತ ದೇವರೇ ನನಗೆ ಅತ್ಯುನ್ನತನು; ಇದಕ್ಕಾಗಿ ನೀವು ನನಗೆ ಮುನಿಯ ಬೇಡಿರಿ!—ತನ್ಮಧ್ಯದಲ್ಲಿ ಆ ಕೈಸರನು ತನ್ನ ಉತಾವಳಿಗೋಸ್ಕರ ತಾನೇ ಪಶ್ಚಾತ್ತಾಪ ಪಟ್ಟಿದ್ದ ಕಾರಣ ಆ ಪತ್ರಿಕೆಯ ಅ

1) 188ನೇ, 204ನೇ ಪಾನು. 2) 204ನೇ ಪಾನು.

ರ್ಥಕ್ಕೆ ಕಿಂಚಿತ್ತೂ ಕೋಪ ಪಡದೆ, ಅಂಬ್ರೊಸಿಯನು ತನಗೆ ಬಹಳ ಬೆದರಿಸಿದ್ದರೂ ಕ್ರೈಸ್ತ ಸಭೆಗಳನ್ನು ಸಲೆ ರಕ್ಷಿಸುವಂಥ ದೊಡ್ಡ ಕೈಸರನಾದ ತನ್ನ ಮೇಲೆ ಆ ಬೆದರಿಕೆಯ ಮಾತು ನಡಿಸಲಿಕ್ಕಿಲ್ಲವೆಂತ, ತನ್ನೊಳಗೆ ಆಲೋಚಿಸಿ ಕೊಂಡು, ಒಂದಾನೊಂದು ದಿವಸ ಮುಂಚಿನಂತೆ ದೇವಾಲಯಕ್ಕೆ ಬರಲಾಗಿ, ಅಂಬ್ರೊಸಿಯನು ಬಾಗಲಿನಲ್ಲಿ ನಿಂತು, ಅವನಿಗೆ ಅಡ್ಡ ಗಟ್ಟಿದನು. ಥೆಯೊದೊಸಿಯನು ಸುವಿಸ್ಮಿತನಾಗಿ, ಪೂರ್ವದಲ್ಲಿ ದಾವೀದನೆಂಬ ಅರಸನು ಸಹ ಪಾಪ ಮಾಡಿದನಲ್ಲವೋ? ಎಂತ, ಹೇಳಿದ್ದಕ್ಕೆ ಆ ಅಧ್ಯಕ್ಷನು, ಅವನು ಪಶ್ಚಾತ್ತಾಪ ಗೊಂಡಂತೆ ನೀವು ಸಹ ಪಶ್ಚಾತ್ತಾಪ ಗೊಳ್ಳಿರಿ! ಎಂತ, ಉತ್ತರ ಕೊಟ್ಟನು. ಆಗಲಾ ಕೈಸರನು ಮನಸ್ಸಾಕ್ಷಿಯಲ್ಲಿ ನೊಂದು, ಹಿಂದಿರುಗಿ, 8 ತಿಂಗಳೇ ರಾತ್ರಿಭೋಜನಕ್ಕೆ ಬಾರದೆ, ಈಚೆ ಕ್ರಿಸ್ತನ ಜನ್ಮಹಬ್ಬಕ್ಕೆ ರೂಫೀನನೆಂಬ ತನ್ನ ಪ್ರಧಾನಿಯ ಹತ್ತರ, ಭಿಕ್ಷುಕರಿಗೂ ಗುಲಾಮರಿಗೂ ತೆರೆದಿರುವ ದೇವಾಲಯವು ನನಗೆ ಮುಚ್ಚಿರ ಬೇಕಾದ್ದಕ್ಕೋಸ್ಕರ ನಿತ್ಯದಲ್ಲಿ ಕಣ್ಣೀರು ಸುರಿಸುತ್ತೇನೆಂತ, ಹಲುಬಿ, ತನ್ನ ದುಃಖ ಅರುಹಿದಾಗ ಇವನು ಅಂಬ್ರೊಸಿಯನೆಡೆಗೆ ಹೋಗಿ, ಕೈಸರನನ್ನು ತಿರಿಗಿ ಸಭೆಯಲ್ಲಿ ಶೇರಿಸುವ ಹಾಗೆ ಅವನನ್ನು ಸಮ್ಮತಿ ಪಡಿಸಲಿಕ್ಕೆ ಮಾತಾಡಿದನು. ಆ ಅಧ್ಯಕ್ಷನು ಕೇಳಿ—ನೀವು ಹೀಗೆ ಮಾತಾಡುವದಕ್ಕೆ ಕೇವಲ ಅಯೋಗ್ಯನು; ಹ್ಯಾಗಂದರೆ, ಕೈಸರನಿಗೆ ದುರ್ಬುದ್ಧಿ ಹೇಳಿ ಆ ಮಹಾ ಅಪರಾಧಕ್ಕೆ ಕಾರಣನಾದವನು ನೀವಲ್ಲವೋ? ಎಂದು, ನುಡಿಯಲು, ರೂಫೀನನು, ಅಗೋ, ಕೈಸರನು ಈಗಲೇ ಬರುತ್ತಾನೆಂದನು. ಆದರೆ ಅಂಬ್ರೊಸಿಯ ನಂಜದೆ—ನಾನವನನ್ನು ದೇವಾಲಯದ ಹೊಸ್ತಿಲ ದಾಟ ಗೊಡುವದಿಲ್ಲ; ಆಗಲವನು ಕೈಸರತ್ವದ ಅಧಿಕಾರ ತೋರಿಸ ಬೇಕಾದರೆ ಅವನಿಗೆ ನನ್ನ ಕುತ್ತಿಗೆ ಕೊಯ್ಯಲಿಕ್ಕೆ ನೀಡುವೆನೆಂತ, ಹೇಳಿ ಬಿಟ್ಟನು. ಕೈಸರನು ಈ ಉತ್ತರ ಕೇಳಿ, ಹ್ಯಾಗೂ ಬಂದು, ನೀವು ಅಪ್ಪಣೆ ಕೊಡುವದೆಲ್ಲಕ್ಕೂ ಒಳಗಾಗುವೆನೆಂದು, ಅಂಬ್ರೊಸಿಯನ ಬಳಿಯಲ್ಲಿ ಹೇಳಲು, ಇವನು—ನೀವು ದೇವಾಲಯದಲ್ಲಿ ಕೂಡಿದ ಸಭೆಯ ಮುಂದೆ ನಿಮ್ಮ ಅಪರಾಧ ನಿವೇದಿಸ ಬೇಕು; ಅದಲ್ಲದೆ, ನಿಮ್ಮ ಉದ್ವೇಗದಿಂದ ಮತ್ತೂ ಕೇಡಾಗದ ಹಾಗೆ, ಕೈಸರನ ಕಡೆಯ ಯಾವದೊಂದೂ ಮರಣಾಜ್ಞೆಯು 30 ದಿವಸ ಹೋಗದ್ದಕ್ಕಿಂತ ಮುಂಚೆ ನಡೆಯ ಬಾರದೆಂದು, ಆಜ್ಞೆ ಪ್ರಕಟಿಸ ಬೇಕು! ಎಂದು, ನೇಮಿಸಿದ್ದಕ್ಕೆ ಥೆಯೊದೊಸಿಯನು ಆಗಲೇ ಒಡಂಬಟ್ಟು, ತನ್ನ ಕೈಸರತ್ವದ ಅಂಗಿ ತೆಗೆದಿಟ್ಟು, ಸಭೆಯವರ ಮುಂದೆ ನೆಲಕ್ಕೆ ಬಿದ್ದು—ನನ್ನ ಪ್ರಾಣವು ಧೂಳಿಗೆ ಒತ್ತಿ ಅದೆ; ದೇವರೇ, ನಿನ್ನ ವಾಕ್ಯದ ಪ್ರಕಾರ ನನ್ನನ್ನು ಆದರಿಸು! ಎಂದು, ಪ್ರಾರ್ಥಿಸುತ್ತಲೇ ಅವರೆಲ್ಲರು ಅಳಲಿಕ್ಕೆ ಹತ್ತಿ, ಅವನ ಸಂಗಡ ಪ್ರಾರ್ಥಿಸುವವರಾದರು.—ಆ ಸಂಗತಿಯನ್ನು ನಾವು ಆಲೋಚಿಸಿ ಕೊಂಡರೆ, ಯಾವನಿಗೆ ಹೆಚ್ಚು ಆಶ್ಚ

ರ್ಯ ಪಡ ತಕ್ಕದ್ದು? ಅಂಥ ಕೈಸರನಿಗೋ? ಅಂಥ ಅಧ್ಯಕ್ಷನಿಗೋ?—ಹಿಂದಗಡೆ ಥೆಯೊದೊಸಿಯನು ಕೊನ್ಸ್ತಂತೀನೊಪೊಲಿಯ ಅಧ್ಯಕ್ಷನಿಗೆ ಹೇಳಿದ್ದೇನಂದರೆ—ಅಧ್ಯಕ್ಷನೆಂಬ ಹೆಸರನ್ನು ಧರಿಸಿ ಕೊಂಡಿರುವದಕ್ಕೆ ಅಂಬ್ರೊಸಿಯನೊಬ್ಬನೇ ಯೋಗ್ಯನು!—

ಕ್ರಿ. ಶ. 397ನೇ ವರುಷದಲ್ಲಿ ಅಂಬ್ರೊಸಿಯನು ತನ್ನ ಕರ್ತನಾದ ಯೇಸುವಿದ್ದಲ್ಲಿಗೆ ಹೋದನು; ಅವನು 23 ವರುಷ ಬಹಳ ಆಶೀರ್ವಾದದೊಡನೆ ತನ್ನ ಅಧ್ಯಕ್ಷತೆ ಸಾಗಿಸಿದ್ದನು.

## 29. ಕೊನ್ಸ್ತಂತೀನೊಪೊಲಿಯ ಯೋಹಾನ ಖ್ರೂಸೊಸ್ತೊಮನೆಂಬ ಅಧ್ಯಕ್ಷನು.

ಕೊನ್ಸ್ತಂತಿಯ ಕೈಸರನು ರೋಮಾಯ ಸಾಮ್ರಾಜ್ಯದ ಪೂರ್ವ ಭಾಗದ ಮೇಲೆ ಕೈಸರನಾಗಿರುವ ಕಾಲದಲ್ಲಿ[1] ಕ್ರಿ. ಶ. 347ನೇ ವರುಷ ಸುರಿಯ ದೇಶದ ಅಂತಿಯೊಖೀಯ ಪಟ್ಟದಲ್ಲಿಯ[2] ಒಬ್ಬ ಆಢ್ಯ ಸೇನೋದ್ಯೋಗಸ್ಥನಿಗೆ ಯೋಹಾನನೆಂಬ ಮಗನು ಹುಟ್ಟಿದನು. ಈ ಯೋಹಾನನು ಕಾಲಕ್ರಮೇಣ ಅತ್ಯುತ್ತಮ ಪ್ರಸಂಗಿಯಾದ್ದರಿಂದ ಅವನಿಗೆ ಖ್ರೂಸೊಸ್ತೊಮನು ಅಂದರೆ ಸುವರ್ಣಮುಖನು ಎಂಬ ಅಡ್ಡಹೆಸರು ಆಯಿತು. ಅವನು ಹುಟ್ಟಿ ಸ್ವಲ್ಪ ದಿವಸ ಹೋದನಂತರ ಅವನ ಮೂರ್ತಿಪೂಜಕ ಪಿತನು ತೀರಿದನು; ಆಗ ಅಂಥುಸಳೆಂಬ ತಾಯಿಯೊಬ್ಬಳೇ ಅವನನ್ನು ಶಿಕ್ಷಿಸುತ್ತಾ ಬರಲವಶ್ಯವಾಯಿತು. ಅವಳು ಬಹಳ ಒಳ್ಳೇ ಕ್ರೈಸ್ತಳು; ಅವಳಿಗೆ 20 ವರುಷ ಮಾತ್ರ ಪ್ರಾಯವಿದ್ದರೂ ಅನೇಕರು ಅವಳನ್ನು ಮದುವೆಗೆ ಕೇಳುತ್ತಲಿದ್ದರೂ ಅವಳು, ತನ್ನ ಮಗನ ಸುಶಿಕ್ಷೆಗೆ ತನ್ನ ಸಮಯವೆಲ್ಲಾ ಬೇಕಾಗುತ್ತದೆಂದು, ನಿರ್ವಿವಾಹಸ್ಥಿತಿಯಲ್ಲಿ ಉಳು ಕೊಂಡಿರುವಳು. ಯೋಹಾನನು, ವಾಕ್ಚಾತುರ್ಯಪಂಡಿತನಾಗುತ್ತೇನೆಂತ, ಮೂರ್ತಿಪೂಜಕನಾದ ಲಿಬನಿಯನೆಂಬ ಆ ದೊಡ್ಡ ಪಂಡಿತನ[3] ಶಾಲೆಗೆ ಹೋಗುತ್ತಾ, ಅಲ್ಲಿಂದ ಬಂದು ಮನೆಯಲ್ಲಿ ತನ್ನ ತಾಯಿಯ ಮುಖಾಂತರ ಪರಿಶುದ್ಧ ಬರಹವನ್ನು ಚಂದಾಗಿ ಅಭ್ಯಾಸಿಸುತ್ತಾ ಇದ್ದನು. ದಿನ ಗತಿಸುತ್ತಿರಲು, ಅವನು ವಾಕ್ಚಾತುರ್ಯತಾವೃತ್ತಿ[4] ನಡಿಸ ತೊಡಗಿ, ಬಹು ಯಶಸ್ಸು ಗೊಳ್ಳುವವನಾಗಿ, ಸ್ವಲ್ಪ ಕಾಲದ ಮೇಲೆ, ತನ್ನ ಉದ್ಯೋಗವೃತ್ತಿಯು ತನ್ನ ಸತ್ಯವಂತಿಕೆಗೆ ಸರಿ ಬೀಳ ಕೂಡದೆಂದು, ತಿಳು ಕೊಂಡು, ಬೇಸತ್ತು,

1) 195ನೇ ಪಾನು. 2) 198ನೇ ಪಾನು. 3) 211ನೇ ಪಾನು. 4) ಅಂದರೆ ವಾಕೀಲನ ವೃತ್ತಿ.

ಸಭಾಬೋಧಕನಾದೇನೆಂತ, ತನ್ನೊಳಗೆ ನಿಶ್ಚೈಸಿ, ತನ್ನ ಜೀವನದ 22ನೇ ವರುಷದಲ್ಲಿ ಅಂತಿಯೊಖೀಯದ ಅಧ್ಯಕ್ಷನಾದ ಮೆಲೇತಿಯನೆಂಬ ನೀಕೇನವಿಶ್ವಾಸಪ್ರಮಾಣಿಯಿಂದ ಸ್ನಾನ ಹೊಂದಿ, ಆ ಪಟ್ಟಣದ ಹತ್ತರದಲ್ಲಿರುವ ಒಂದು ಕ್ರೈಸ್ತ ಮಠದ[1] ಮುಖ್ಯಸ್ಥನಾದ ದಿಯೊದೋರನ ಶಿಷ್ಯನಾದನು. ಆ ಮಠದೊಳಗೆ ಅವನು ದೇವವಾಕ್ಯಾಧ್ಯಯನವನ್ನು ಅತಿರೇಕ ಆಸಕ್ತಿಯಿಂದ ಮಾಡಿ ಕೊಳ್ಳುತ್ತಾ, ಸ್ವಶರೀರದಂಡನಕಾರನಾಗಿರುತ್ತಾ[1] ಬರಲು, ಅನೇಕ ಸಭ್ಯರು, ಆ ಮೆಲೇತಿಯ ಅಧ್ಯಕ್ಷನು ಮಡಿದ ಹಿಂದೆ ಯೋಹಾನನು ಉತ್ತರಾಧಿಕಾರಿಯಾಗ ಬೇಕೆಂತ, ಅಪೇಕ್ಷೆಯುಳ್ಳವರಾದರು. ಇವನು ಅದು ತಿಳಿದು, ದೂರವಾದ ಬೇರೊಂದು ಮಠಕ್ಕೆ ಓಡಿ ಹೋದನು. ಅವನು ಅಲ್ಲಿ ೪ ವರುಷ ಇದ್ದ ಮೇಲೆ, ಅಧಿಕ ಅಭ್ಯಾಸ ಮೈದಂಡನಗಳಿಂದ ತನ್ನ ಕ್ಷೇಮವೆಲ್ಲವೂ ಸವೆದು ತಪ್ಪುವದೆಂದು, ಅನುಭವಿಸಿ, ಅಂತಿಯೊಖೀಯಕ್ಕೆ ತಿರಿಗಿ ಬಂದನು. ಆಗ ಕ್ರಿ. ಶ. 380ನೇ ವರುಷ ಫ್ಲಾವಿಯಾನನೆಂಬ ಅಲ್ಲಿಯ ಅಧ್ಯಕ್ಷನು ಅವನನ್ನು, ಸಭೆಯ ಸೇವಕನೆಂತ, ಹೆಕ್ಕಿ, 6 ವರುಷಕ್ಕೀಚೆ ಸಭೆಯ ಹಿರಿತನವನ್ನು ಅವನ ಕೈಗೆ ಒಪ್ಪಿಸಿ ಕೊಟ್ಟನು; ಆ ಸಮಯ ಅಂತಿಯೊಖೀಯದಲ್ಲಿ ಸುಮಾರು 1 ಲಕ್ಷ ಮಂದಿ ಸಭ್ಯರಿದ್ದರು. ಮರುವರುಷ ಆ ಪಟ್ಟಣದಲ್ಲಿ ರೋಮಾಯ ಸಾಮ್ರಾಜ್ಯದ ಮೂಡಣ ಭಾಗದ[2] 1ನೇ ಥೆಯೊದೊಸಿಯ ಕೈಸರನಿಗೆ ವಿರುದ್ಧವಾಗಿ ಒಂದು ದಂಗೆ ಹುಟ್ಟಿತು; ಹ್ಯಾಗಂದರೆ, ಪ್ರಜೆಯದೊಂದು ಪಾಲು ಅವನು ತನ್ನ ಮೇಲೆ ಹಾಕಿದ ಧಾರಾಳ ತೆರಿಗೆ ತೆರಲಾರದೆ, ಹಲವರು ಹರಟೆಗಾರರಿಂದ ಪ್ರೇರಿತವಾಗಿ, ಅವನ ಪ್ರತಿರೂಪದ್ದೊಂದು ಸ್ತಂಭ ಕೆಡವಿ, ಹಾಸ್ಯ ಮಾಡುತ್ತಾ ಬೀದಿಗಳಲ್ಲಿ ಎಳಕೊಂಡು ಹೋಗಿ, ಇನ್ನು ನಾವು ತೆರಿಗೆ ಕೊಡಲಿಕ್ಕಿಲ್ಲವೆಂದು, ಹೇಳಿ, ಕೈಸರನ ಉದ್ಯೋಗಸ್ಥರಿಗೆ ಬೈದು ಬಿಟ್ಟಿತು; ನಿರಪರಾಧಿಗಳಿಗೆ ಸಹ ಶಿಕ್ಷೆ ಬಂದೀತೆಂದು, ಅನೇಕ ನಿವಾಸಿಗಳು ಅಂಜಿ ಕೊಂಡು, ಪಟ್ಟಣ ಹೊರಟು ಬಿಟ್ಟರು. ತತ್‍ಕ್ಷಣವೇ ಫ್ಲಾವಿಯಾನ ಅಧ್ಯಕ್ಷನು ಅಂದು ರೋಮಪುರದಲ್ಲಿರುವ ಕೈಸರನ ಸನ್ನಿಧಾನಕ್ಕೆ ಪ್ರಯಾಣವಾಗಿ ಹೋಗಿ, ಅವನ ಕೋಪವಿಳಿಸಲಿಕ್ಕೆ ಪ್ರಯತ್ನ ಪಡುತ್ತಿರುವಷ್ಟರೊಳಗೆ ಅಂತಿಯೊಖೀಯದಲ್ಲುಳಿದ ಕ್ರೈಸ್ತರು ಗುಂಪುಗುಂಪಾಗಿ ಕೂಡಿ ಬರುತ್ತಿರುವಲ್ಲಿ ಖ್ರುಸೊಸ್ತೊಮನು ಪಟ್ಟಣದೊಳಗೆ ನಡೆದ ಆ ಸಂಗತಿಯನ್ನು ಆಧಾರ ಮಾಡಿ ಕೊಂಡು, ಅವರೊಳಗೆ ತಕ್ಕ ಪಶ್ಚಾತ್ತಾಪವನ್ನುತ್ಪಾದಿಸಲಿಕ್ಕೆ ಒಮ್ಮೆ ಪ್ರಸಂಗಿಸಿದ ಕೆಲವು ಮಾತು ಯಾವವಂದರೆ—ಈಗ ಒಬ್ಬ ಮಾನುಷ್ಯ ನ್ಯಾಯಾಧಿಪತಿಯು ಮುಯ್ಯಿಗೆ ಮುಯ್ಯಿ ಕೊಡಲಿಕ್ಕಿರುವದಕ್ಕೆ ನೀವು ಭಯ ತುಂಬಿದವರಾಗಿ, ನೀವು ಮಾಡಿದ ಆ ಒಂದೇ ಪಾಪಕ್ಕೋಸ್ಕರ ಬ

1) 219ನೇ ಪಾನು. 2) 204ನೇ, 205ನೇ, 222ನೇ—224ನೇ ಪಾನು.

ಹಳ ಪ್ರಾಣಮಾನಧನನಷ್ಟವು ಬರುವದೆಂದು, ದುಃಖಾಲೋಚನೆಯುಳ್ಳವರಾಗಿದ್ಧೀರಿ. ಹೀಗಾದ ಮೇಲೆ ಲೋಕನ್ಯಾಯನಿರ್ಣಯದ ಮಹಾ ದಿವಸಕ್ಕೆ ನೀವು ಎಷ್ಟೋ ನಡುಗ ಬೇಕು! ಆ ದಿವಸದಲ್ಲಿ ನಿಮ್ಮ ನಿತ್ಯ ಸ್ಥಿತಿಗತಿ ಕುರಿತ ನಿರ್ಣಯವಾಗುವದಲ್ಲವೋ? ಆ ದಿವಸದಲ್ಲಿ ನೀವು ನಿಮ್ಮ ಪೂರ್ಣ ಜೀವಿತದ ಸಕಲ ಕಾರ್ಯಗಳ ಲೆಖ್ಖವನ್ನು ಅಚಲ ನೀತಿಯುಳ್ಳ ನ್ಯಾಯಾಧಿಪತಿಗೆ ಒಪ್ಪಿಸ ಬೇಕಲ್ಲವೋ? ನಿಮ್ಮ ಅಪರಾಧಕ್ಕೆ ಮುನಿಯುವ ಕೈಸರನ ಕೋಪಾಜ್ಞೆಯನ್ನು ನಿಮಗೆ ತಪ್ಪಿಸಲಿಕ್ಕೆ ಸರ್ವ ವಿಧವಾಗಿ ಪೇಚಾಡುತ್ತೀರಲ್ಲ? ಮನೋದೀನತ್ವವನ್ನು ತೋರಿಸಿ, ಪ್ರತಿವಿಜ್ಞಾಪಕರನ್ನು ಹುಡುಕಿ ಕೊಳ್ಳುತ್ತೀರಲ್ಲ? ಹೀಗಿರಲಿಕ್ಕೆ ನೀವು ನಿಮ್ಮ ಪಾಪಗಳ ದೆಸೆಯಿಂದ ಕಳಕೊಂಡ ದೇವಾನುಗ್ರಹವನ್ನು ಅಖಂಡವಾದ ಮನೋದೀನತ್ವದಿಂದಲೂ ಪಶ್ಚಾತ್ತಾಪದಿಂದಲೂ ತಿರಿಗಿ ಪಡಕೊಳ್ಳಲಿಕ್ಕೆ ಎಷ್ಟೋ ಹೆಚ್ಚು ಚಿಂತೆ ಪಡ ಬೇಕು!—ಅವನು ಈ ಮುಂತಾದ ಪ್ರಕಾರವಾಗಿ ಪ್ರಸಂಗಿಸುತ್ತಿರಲು, ಹೇರಳ ಮಂದಿ ಸಭ್ಯರು ಹೃತ್ಪರಿಣಾಮವುಳ್ಳವರಾದರು; ಮತ್ತು ದೇವರು ಅವರ ನಿಜ ಮಾನಸಾಂತರಕ್ಕೆ ಮೆಚ್ಚಿ, ಅವರ ಅಧ್ಯಕ್ಷನ ಮುಖಾಂತರ ಥೆಯೊದೊಸಿಯನಲ್ಲಿ ಅಂತಃಕರಣ ಹುಟ್ಟಿಸಿದಂದು ಇವನು ಅಂತಿಯೊಖೀಯದವರೆಲ್ಲರಿಗೆ ಮನ್ನಿಸಿ ಬಿಟ್ಟನು. ಖ್ರುಸೊಸ್ತೊಮನು 12 ವರುಷ ಅಲ್ಲಿಯ ಸಭೆಯ ಹಿರಿಯನಾಗಿರುತ್ತಿದ್ದನು; ಅವನ ಇಂಪು ಪ್ರಸಂಗ ಕೇಳಲಿಕ್ಕೆ ಜನರು ಎಲ್ಲಾ ದಿಕ್ಕಿನಿಂದ ಬರುತ್ತಿದ್ದರು; ಅವನ ಕೀರ್ತಿಯು ಕೊನ್ಸ್ತಂತೀನೊಪೊಲಿಯಲ್ಲಿ ಸಹ ಪ್ರಬಲವಾಯಿತು.

ಹೀಗಿರಲಾಗಿ, ರೋಮಾಯ ಸಾಮ್ರಾಜ್ಯವು ಭಿನ್ನವಾದನಂತರ ಅರ್ಕದಿಯನೆಂಬ ಕೈಸರನ[1] ಆಳುವಿಕೆಯಲ್ಲಿ, ಅಂಬ್ರೊಸಿಯ ಅಧ್ಯಕ್ಷನು ಸತ್ತ ಆ ವರುಷದಲ್ಲಿ[2], ಕೊನ್ಸ್ತಂತೀನೊಪೊಲಿಯ ಅಧ್ಯಕ್ಷನು ಸಹ ಸಾಯಲು, ಖ್ರುಸೊಸ್ತೊಮನು ಅಲ್ಲಿ ಅಧ್ಯಕ್ಷನಾಗ ಬೇಕೆಂತ, ನೇಮಕವಾಯಿತು. ಅವನು ದುಃಖದಿಂದ ತನ್ನ ಪ್ರಿಯ ಸಭೆ ಬಿಟ್ಟು, ಅಲ್ಲಿಗೈದಿದನು[3]. ರೋಮದಲ್ಲಿ ಹ್ಯಾಗೋ[4], ಹಾಗೆಯೇ ಆ ದೊಡ್ಡ ರಾಜಧಾನಿಯಲ್ಲಿಯೂ ಹೆಚ್ಚು ಜನರು ಲೌಕಿಕ ಐಶ್ವರ್ಯದ ಸಂಭ್ರಮವುಳ್ಳವರಾಗಿರುತ್ತಿದ್ದರು; ಆ ಹೊಸ ಅಧ್ಯಕ್ಷನ ಪೂರ್ವಾಧಿಕಾರಿಗಳಲ್ಲಿ ಕೆಲವರು ಸಹ ಆ ಸಂಭ್ರಮದ ಶಳುವಿನಲ್ಲಿ ಶಿಕ್ಕಿ ಕೊಂಡು ಹೋಗಿದ್ದರು. ಅದು ನಿಮಿತ್ತವಾಗಿ ಅವನು, ಅದು ಕೇವಲ ಅಯುಕ್ತವೆಂತ, ಮುಖ್ಯವಾಗಿ ತನ್ನ ನಡವಳಿಯಿಂದ ತೋರಿಸಲಿಕ್ಕೆ ಹತ್ತಿ, ತನಗೆ ಹ್ಯಾಗೂ ಬೇಕಾಗುವಷ್ಟು ಖರ್ಚನ್ನು ಮಾತ್ರ ಮಾಡುತ್ತಾ, ತನ್ನ ಸಂಬಳದಲ್ಲಿ ಉಳಿಯುವದನ್ನೆಲ್ಲಾ ಬಡವರಿಗೆ ಕೊಡುತ್ತಾ, ವಾರಕ್ಕೆ

1) 206ನೇ, 215ನೇ ಪಾನು. 2) 223ನೇ ಪಾನು. 3) 100ನೇ ಪಾನು. 4) 211ನೇ, 220ನೇ ಪಾನು.

ಒಂದು ಹೊತ್ತು ಮಾತ್ರವಲ್ಲ ದಿನದಿನಕ್ಕೆ ಪ್ರಸಂಗಿಸುತ್ತಾ ಇದ್ದು, ಸಾಧಾರಣ ಸಭ್ಯರಿಗೆ ಮಾತ್ರವಲ್ಲದೆ ಉದ್ಯೋಗಶೀಲರಲ್ಲದ ಅಧ್ಯಕ್ಷರಿಗೂ ಇಂಥ ತರದ ಇತರ ಬೋಧಕರಿಗೂ ಘಟಿಂಗರಾದ ರಾಜಗೃಹದವರಿಗೂ ಧನಾಧಿಕಾರಾಭಿಮಾನಿಯಾದ ಯುದೊಕ್ಸಿಯಳೆಂಬ ಅರ್ಕದಿಯ ಕೈಸರನ ಹೆಂಡತಿಗೂ ಸಹ ಮುಖದಾಕ್ಷಿಣ್ಯವರಿಯದೆ ಬುದ್ಧಿ ಹೇಳುತ್ತಾ ಬಂದನು. ಆದ್ದರಿಂದ ಸಾಧಾರಣ ಸಭ್ಯರೂ ಸುಗುಣಿಗಳಾದ ಉದ್ಯೋಗಸ್ಥರೂ ಅವನಿಗೆ ಬಹಳ ಒಲೆಯುತ್ತಿರಲು, ಆ ರಾಣಿಯು ಮುಖ್ಯಸ್ಥಳಾದ ಬೇರೊಬ್ಬರು ಅವನಿಗೆ ಬೇಸರ ಪಟ್ಟು, ಅವನ ಉದ್ಯೋಗ ತೆಗಿಸ ಬೇಕೆಂದು, ಒಳಸಂಚು ಗೈಯುವವರಾದರು. ತನ್ಮಧ್ಯ ಖ್ರೂಸೊಸ್ತೊಮನು ಗೊಥರಲ್ಲಿ[1] ನೀಕೇನತ್ವವನ್ನು ವಿಸ್ತರಿಸಲಿಕ್ಕೆ ಪ್ರಯತ್ನಿಸುತ್ತಾ, ಅವರು ಉಪದೇಶ ಹೊಂದುವದೊಂದು ಶಾಲೆಯನ್ನು ಕೊನ್ಸ್ತಂತೀನೊಪೊಲಿಯಲ್ಲಿ ಸ್ಥಾಪಿಸಿ, ಗೊಥಿಕ ಭಾಷೆಯ ದೇವಾರಾಧನೆಗೆ ಒಂದು ಆಲಯವನ್ನು ಪ್ರತ್ಯೇಕಿಸಿ, ಗೊಥರ ಮೇಲಿನ ಪ್ರೀತಿಯು ಅರಮನೆಯಲ್ಲಿಯೂ ವರ್ಧಿಸುವ ಉದ್ದಿಶ್ಯ ಆಗಿಂದಾಗ ಗೊಥಿಕ ಬೋಧಕರಿಂದ ತಮ್ಮ ಭಾಷೆಯ ಪ್ರಸಂಗವನ್ನು ಪುರದ ಮುಖ್ಯ ದೇವಾಲಯದೊಳಗೆ ಸಹ ನಡಿಸುತ್ತಿದ್ದನು. ಅವನ ಶಾಲೆಯಲ್ಲಿ ಬಹು ಮಂದಿ ಗೊಥರು ಉಪದಿಷ್ಟರಾಗಿ, ಸುವಾರ್ತೆ ಸಾರಲಿಕ್ಕೆ ತಮ್ಮ ವಂಶಸ್ಥರ ಬಳಿಗೆ ಹೋದರು.

ತನಗೆ ಅನೇಕ ಎದುರಾಳಿಗಳಿದ್ದರೂ ಖ್ರೂಸೊಸ್ತೊಮನು ೫ವರುಷ ಕ್ರಿ. ಶ. 402ನೇದರ ವರೆಗೆ ಆ ಗ್ರೀಕ ರಾಜ್ಯದ ರಾಜಧಾನಿಯಲ್ಲಿ ಬಹಳ ಉಪದ್ರವವಿಲ್ಲದೆ ಅಧ್ಯಕ್ಷತೆ ಸಾಗಿಸುತ್ತಿದ್ದ ಮೇಲೆ ಸುಮಾರು ೮೦ ಮಂದಿ ಐಗುಪ್ತ್ಯ ಕ್ರೈಸ್ತರಾದ ಮಠವಾಸಿಗಳು[2] ಅಲ್ಲಿಗೆ ಬಂದರು; ಅಲೆಕ್ಸಂದರೀಯದ ಕುಪುರುಷನಾದ ಥೆಯೊಫಿಲನೆಂಬ ಅಧ್ಯಕ್ಷನು ಅವರನ್ನು ಐಗುಪ್ತದೊಳಗಿಂದ ಓಡಿಸಿ ಬಿಟ್ಟಿದ್ದನು. ಹ್ಯಾಗಂದರೆ, ಕ್ರಿ. ಶ. 394ನೇ ವರುಷದಿತ್ತಕಡೆ ಕೆಲವು ಮಂದಿ ಬೋಧಕರು ಅಲೆಕ್ಸಂದರೀಯದ ಆ ಪ್ರಖ್ಯಾತ ಒರೀಗೆನನನ್ನು[3] ಕುರಿತು, ಅರೀಯಾನರಿಗೆ ಆಸ್ಪದ ಕೊಡುವಂಥ ಪಾಷಂಡಿ ಎಂತ, ಚರ್ಚಿಸಲಾರಂಭಿಸಿದ್ದರು. ಅಂದಿಗೆ ಮುಂಚೆ ಬದುಕಿ ನೀಕೇನತ್ವದ ಮುಖ್ಯ ಸ್ಥಾಪಕರಾಗಿದ್ದ ಅಥನಸಿಯನು ಮುಂತಾದ ಬೋಧಕರು ಒರೀಗೆನನ ಗ್ರಂಥಗಳನ್ನು ಬಹುಶಃ ಅಭ್ಯಾಸಿಸುತ್ತಾ, ಅವುಗಳಲ್ಲಿ ಸೊಟ್ಟುಪೊಟ್ಟಾದದು ಇದ್ದರೂ ಪರಿಶುದ್ಧ ಬರಹದ ನಿಜಾರ್ಥವನ್ನು ಮೂಡಿಸುವದಕ್ಕೆ ಪ್ರಯತ್ನಪಟ್ಟವರಲ್ಲಿ ಅವನ ಸರಿ ಗಾಣೆವೆಂತ, ಹೇಳಿ ಅವನ ಮಾನವನ್ನುಳಿಸುತ್ತಾ ಬಂದಿದ್ದರು[4]; ಬಳಿಕ ಇಂಥ ಯೋಗ್ಯ ದಯೆಯುಳ್ಳ ತೀರ್ಪಿನ ಭಾವವು ಹೆಚ್ಚು ಕಡಿಮೆ ತಪ್ಪಿ ಹೋಗಿತ್ತು. ಹೀಗಾದ ಮೇಲೆ ಎರಡು ಪಕ್ಷದವರು ಉತ್ಪನ್ನರಾಗಿದ್ದರು; ಒ

1) 180ನೇ, 202ನೇ—204ನೇ ಪಾನು. 2) 225ನೇ ಪಾನು. 3) 16ನೇ ಸಂಧಿ. 4) 155ನೇ ಪಾನು.

ರೀಗೆನನ ಮಿತ್ರರು ಅಂದು ದೇವರ ಕೇವಲಾತ್ಮತ್ವ ನಿದರ್ಶಿಸುವಲ್ಲಿ ಅವನ ಪ್ರತಿಕೂಲಿಗಳು ದೇವರಲ್ಲಿ ಮಾನುಷ ರೂಪ ತೋರಿಸುವ ವಿಘ್ನಕ್ಕೊಳಗಾದರು. ಅಲೆಕ್ಸಂದರೀಯದ ಆ ಥೆಯೊಫಿಲನು ಆರಂಭದಲ್ಲಿ ಒರೀಗೆನನ ಗೆಳೆಯನೆಂಬಂತೆ ತೋರಿಸಿಕೊಂಡು, ತದನಂತರ ಹಣದ ಆಶೆಯಿಂದ ಅವನ ಮೇಲೆ ಅಮಿತ್ರತ್ವ ಹಿಡಿದು, ತನ್ನ ಅಧ್ಯಕ್ಷತಾಸ್ಥಳದೊಳಗಿರುವ ಹೇರಳ ಮಂದಿ ಕ್ರೈಸ್ತ ಮಠವಾಸಿಗಳು, ಒರೀಗೆನನು ಪಾಷಂಡಿ! ಎಂಬದಕ್ಕೆ ನಾವು ಸಮ್ಮತಿ ಪಡಲಿಕ್ಕಿಲ್ಲವೆಂತ, ಹೇಳಿದ್ದರಿಂದ ಅವರನ್ನು ಗಡಿ ದಾಟಿಸಿದನು[1]. ಕ್ರಿ. ಶ. ಆ 402ನೇ ವರುಷದಲ್ಲಿ ಕೊನ್ಸ್ತಂತೀನೊಪೊಲಿಗೆ ಬಂದ ಆ 80 ಮಂದಿಯು ಇವರ ಲೆಖ್ಖದೊಳಗಿನವರೇ. ಖ್ರೂಸೊಸ್ತೊಮನು ಅವರ ಬಡತನ ಕಂಡು, ಸರ್ವ ಕ್ರೈಸ್ತರಿಗೆ ತಕ್ಕದಾದ ಅಕ್ಕರೆಯಿಂದ ಅವರ ಶರೀರದ ಪೋಷಕನಾದರೂ ಅವರನ್ನು, ನಿರಪರಾಧಿಗಳೆಂದು, ಹೇಳದೆ, ಅವರು ಹ್ಯಾಗಾದರೂ ಈಗ ಸಭೆಯೊಳಗಿಂದ ಬಹಿಷ್ಕೃತರಾದವರೆಂತ, ಅವರನ್ನು ರಾತ್ರಿಭೋಜನಕ್ಕೆ ಬರ ಗೊಡದೆ, ಥೆಯೊಫಿಲನ ಹತ್ತರ ಅವರ ಕಾರ್ಯಕರ್ತನಾದನು. ಇವನು, ಖ್ರೂಸೊಸ್ತೊಮನಿಗೆ ತನ್ನ ದುರ್ಮಾರ್ಗತನವೆಲ್ಲಾ ಗೊತ್ತಾಯಿತೆಂತ, ನೆನಸಿ, ರೋಷಿಸಿ, ನೀನು ಸಹ ಒರೀಗೆನನ ಪಕ್ಷದ ಪಾಷಂಡಿ! ಎಂದು, ಹೇಳಿದ್ದಲ್ಲದೆ ಮರುವರುಷ ಕೊನ್ಸ್ತಂತೀನೊಪೊಲಿಗೆ ಬಂದು, ಈ ಪುರಕ್ಕೆ ಸ್ವಲ್ಪ ದೂರದಲ್ಲಿ ರೂಫೀನನೆಂಬ ಆ ಪ್ರಧಾನಿಯ[2] ಒಂದು ಮಂದಿರದಲ್ಲಿ ಖ್ರೂಸೊಸ್ತೊಮನ ವಿರೋಧಳಾದ ಯುದೊಕ್ಸಿಯಳ[3] ಸಹಾಯದಿಂದ ಒಂದು ಸಭಾಸಂಘವ ಕೂಡ ಕರೆಸಿದನು; ಪುರದ ಒಳಗೆ ಅದನ್ನು ಕೂಡಿಸಲಿಕ್ಕೆ ಹೆದರಿ ಕೊಂಡಿದ್ದನು, ಯಾಕಂದರೆ ಅದರೊಳಗಿನ ಪ್ರಜೆಯ ದೊಡ್ಡ ಪಾಲು ಖ್ರೂಸೊಸ್ತೊಮನಿಗೆ ಅತ್ಯಂತ ಪ್ರೀತಿ ಮಾಡುತ್ತಾ ಇತ್ತು. ಖ್ರೂಸೊಸ್ತೊಮನು ಅವರವರ ದುರ್ನಡತೆಗೋಸ್ಕರ ಸಭಾಶಿಕ್ಷೆ ಪಡಿಸಿದ್ದ ಅನೇಕ ಮಂದಿ ಅಧ್ಯಕ್ಷರೂ ಹಿರಿಯರೂ ಮಠವಾಸಿಗಳೂ ಆ ಸಂಘಕ್ಕೆ ಬಂದು, ತಮ್ಮ ಅಧ್ಯಕ್ಷನ ಮೇಲೆ ನಾನಾ ತರದ ಸುಳ್ಳುಮಾತಾಡಿ, ಅವನು ಕೈಸರನ ದ್ರೋಹಿ! ಎಂಬದನ್ನು ಸಹ ಉಚ್ಚರಿಸಿದರು. ಆ ತರುವಾಯ ಆ ಸಂಘದ ಸಂಬಂಧಿಗಳು ಬುದ್ಧಿ ಕಡಿಮೆಯಾದ ಕೈಸರನಿಗೆ ಆ ವ್ಯರ್ಥ ಚಾಡಿ ಎಲ್ಲಾ ತಿಳಿಸಿ, ಬಹು ವಿಧದಿಂದ ಒಡಂಬಡಿಸಲು, ಇವನು, ಖ್ರೂಸೊಸ್ತೊಮನು ಗಡಿ ದಾಟಿ ಹೋಗ ಬೇಕೆಂತ, ವಿಧಿಸಿದನು. ಪ್ರಜೆಯು ಅದನ್ನು ಕೇಳಿದ ಕ್ಷಣವೇ ಆ ಸಂಘಕ್ಕೆ ಹೋಗಲೊಲ್ಲದಿದ್ದ ತನ್ನ ಪ್ರಿಯ ಅಧ್ಯಕ್ಷನ ಮನೆಯ ಸುತ್ತ ಮುತ್ತಲೂ ನೆರೆಗೊಂಡಿತು. ಬಳಿಕ ಕೈಸರನು ಸೈನಿಕರನ್ನು ಕಳುಹಿಸೋಣ, ಪ್ರಜೆಯು ಅವರಿಗೆ

---

1) ಅವನು ಆ ಕುರಿಲ್ಲನ (216ನೇ ಪಾನು) ದೊಡ್ಡಪ್ಪನೂ ಪೂರ್ವೋದ್ಯೋಗಿಯೂ. 2) 223ನೇ ಪಾನು. 3) 227ನೇ ಪಾನು; ಯುಸ್ತೀನಳೆಂಬ ರಾಣಿಯ ಸುದ್ದಿ ಸರಿ ನೋಡು, 220ನೇ ಪಾನು.

ಮಾರ್ಮಲೆಯುವದಕ್ಕೆ ಸಿದ್ಧವಾಗುತ್ತಲೆ ಆ ಅಧ್ಯಕ್ಷನು ಅದನ್ನು ಸಂತೈಸಿ, ರಹಸ್ಯದಲ್ಲಿ ತನ್ನನ್ನು ತಾನೇ ಆ ಸೈನಿಕರ ವಶಕ್ಕೆ ಒಪ್ಪಿಸಿತ್ತನು. ಇವರು ಅವನನ್ನು ತಕ್ಕೊಂಡು ಹೋದದು ಪ್ರಜೆಗೆ ತಿಳಿದಂದು ಅದರೊಳಗಿನ ಕಲಹಭಾವವು ಹೆಚ್ಚಾಗಿ, ಖ್ರುಸೊಸ್ತೊಮನ ಶತ್ರುಗಳಲ್ಲಿ ಹಲವರು, ನಾವು ಒಂದು ದೊಡ್ಡ ತಪ್ಪು ಮಾಡಿದ್ಧೇವೆಂತ, ಪಶ್ಚಾತ್ತಾಪ ಪಡ ತೊಡಗಿದ್ದಲ್ಲದೆ ಮರುರಾತ್ರಿಯಲ್ಲಿ ಒಂದು ಮಹಾ ಭೂಕಂಪವು ರಾಜಧಾನಿಯನ್ನು ಬಹಳ ಅದರಿಸಿ, ಕೈಸರನ ಹೆಂಡತಿಯ ಮನಸ್ಸಾಕ್ಷಿಯನ್ನು ಬಹಳ ಬೆದರಿಸಿತು. ಆದ್ದರಿಂದ ಇವಳು ಬೇಗ ತನ್ನ ಗಂಡನ ಬಳಿಗೆ ಹೋಗಿ, ನಮಗಿದ್ದ ಅಧ್ಯಕ್ಷನು ತಿರಿಗಿ ಬರಲಿ! ಎಂತ, ಬೇಡಿ ಕೊಳ್ಳಲು, ಇವನು ಅವನನ್ನು ಹಿಂದಕ್ಕೆ ತರುವದಕ್ಕೆ ದೂತರನ್ನು ಪ್ರೇಷಿಸಿದನು. ಇವರ ಸಂಗಡ ಯುದೊಕ್ಸಿಯಳು ಕಳುಹಿಸಿದ್ದೊಂದು ಪತ್ರವೇನಂದರೆ — ಮಾನ್ಯ ಅಧ್ಯಕ್ಷನೇ, ಆದದಕ್ಕೆ ನಾನು ಕಿಂಚಿತ್ತೂ ಕಾರಣವಾದವಳೆಂತ, ತಾವು ನೆನಸ ಬೇಡಿರಿ! ನಾನು ನಿರಪರಾಧಿಯು; ಪೋಕರಿ ಜನರು ತಮ್ಮ ಮೇಲೆ ಒಳಸಂಚು ನಡಿಸುತ್ತಾ ಬಂದಿದ್ದರು; ನಾನು ಬೇಡಿ ಕಣ್ಣೀರು ಹಾಕುತ್ತಿರುವ ದೇವರೇ ನನ್ನ ಸಾಕ್ಷಿ! ತಾವು ನನ್ನ ಮಕ್ಕಳಿಗೆ ಸ್ನಾನ ಕೊಟ್ಟದ್ದನ್ನು ನಾನೆಂದಿಗೂ ಮರೆಯಲಿಕ್ಕಿಲ್ಲವು!—ತರುವಾಯ ಖ್ರುಸೊಸ್ತೊಮನು ಪುರ ಬಿಟ್ಟ ಇತ್ತಕಡೆಯ 3ನೇ ದಿವಸದಲ್ಲಿ ಪ್ರಜೆಯ ಮಹಾ ಹರುಷೋತ್ಸವವಾಗುವಲ್ಲಿ ಮರಳಿ ಬಂದು, ಅದರ ವಿನಂತಿಯ ಮೇಲೆ ಆಗಲೇ ಒಂದು ದೇವಾಲಯಕ್ಕೆ ಹೋಗ ಬೇಕಾಯಿತು. ಆ ವೇಳೆ ಅವನು ಪ್ರಸಂಗಿಸಲೆಸಗಿದ್ದು ಹ್ಯಾಗಂದರೆ--ದೇವರಿಗೆ ಸ್ತೋತ್ರವಾಗಲಿ! ನಾನು ನಿಮ್ಮನ್ನು ಬಿಡುವಂದು ಇವೇ ನನ್ನ ಕಡೇ ಮಾತುಗಳಾಗಿದ್ದವು; ಇವನ್ನೇ ನಿಮಗೆ ಈಗ ಮೊದಲಿಗೆ ತಿರಿಗಿ ಹೇಳುತ್ತೇನೆ; ಕರ್ತನ ಹೆಸರಿಗೆ ಎಂದೆಂದಿಗೂ ಸ್ತೋತ್ರವಾಗಲಿ! ಆಗಿನ ಕಾರ್ಯ ಬೇರೆ, ಈಗಿನ ಕಾರ್ಯ ಬೇರೆ; ಆದರೆ ಅದೇ ಸ್ತೋತ್ರವು ತಕ್ಕದ್ದು; ಬೇಸಿಗೇ ಕಾಲಕ್ಕೂ ಛಳಿಗಾಲಕ್ಕೂ ಅದೇ ತಾತ್ಪರ್ಯ, ಏನಂದರೆ ಹೊಲದ ಪೈರಿನ ವೃದ್ಧೀಕರಣವೇ. ಆದ್ದರಿಂದ ನನ್ನನ್ನು ಹೋಗಿಸಿದ ದೇವರಿಗೆ ಸ್ತೋತ್ರವಾಗಲಿ! ನನ್ನನ್ನು ಹಿಂದಕ್ಕೆ ಕರ ತಂದ ದೇವರಿಗೆ ಸ್ತೋತ್ರವಾಗಲಿ! ನಾನು ಹೀಗೆ ಹೇಳುವಾಗ, ದೇವರನ್ನು ಸ್ತುತಿಸಿರಿ! ಎಂತ, ನಿಮ್ಮನ್ನು ಬೇಡಿ ಕೊಳ್ಳುತ್ತೇನೆ.—ಅಷ್ಟರಲ್ಲಿ ಥೆಯೊಫಿಲನು ಅಂಜಿ ಕೊಂಡು, ಅಲೆಕ್ಸಂದರೀಯಕ್ಕೆ ತ್ವರೆಯಿಂದ ಓಡಿ ಹೋಗಿದ್ದನು; ಅಲ್ಲಿಯ ಸಭ್ಯರು ಅವನ ಪುನರಾಗಮನಕ್ಕೆ ದುಃಖಾರ್ತರಾಗಿರುತ್ತಿದ್ದರು.

ತದನಂತರ 2 ತಿಂಗಳು ಮಾತ್ರ ಹೋಗಲು, ಯುದೊಕ್ಸಿಯಳು ಖ್ರುಸೊಸ್ತೊಮನಿಗೆ ಮತ್ತು ಹಗೆ ಪಡುವವಳಾದಳು. ಹ್ಯಾಗಂದರೆ, ಅವಳದೊಂದು ಪ್ರತಿರೂಪಸ್ತಂಭವನ್ನು ಮಂತ್ರಿಸಭೆಯ ಮನೆಯ ಮುಂದೆ ಪುರದ ಮುಖ್ಯ ದೇವಾಲಯ

ದ ಬಳಿಯಲ್ಲಿ ನಿಲ್ಲಿಸಲಾಗುವ ಒಂದು ಕ್ರೈಸ್ತ ಹಬ್ಬದ ದಿನಕ್ಕೆ ಅವಳ ಪರಿಚಾರಕರು ನಿರ್ಲಜ್ಜೆಯಿಂದ ನಾಟ್ಯವಾಡಿ, ವಾದನ ಗಾಯನಗಳಿಂದ ಮಿತಿಯಿಲ್ಲದ ಗೌಜಿ ಎಬ್ಬಿಸುತ್ತಿರಲು, ಆ ದೇವಾಲಯದೊಳಗೆ ಖ್ರೂಸೊಸ್ತೊಮನ ಪ್ರಾರ್ಥನೆ ಆಗುತ್ತಿತ್ತು. ಇವನು ಆ ಗೌಜಿ ಕೇಳಿ, ಅದು ಕ್ರೈಸ್ತರಿಗೆ ಸರ್ವಥಾ ಅಯೋಗ್ಯವೆಂತ, ನಿರ್ಧಾರಣದಿಂದ ಸಾರಿದ್ದು ಯುದೊಕ್ಸಿಯಳಿಗೆ ಗೊತ್ತಾಯಿತು. ಅವಳು ಬಹಳ ಕೋಪ ಗೊಂಡು, ಆ ಅಧ್ಯಕ್ಷನಿಗೆ ವಿರುದ್ಧವಾಗಿ ಮತ್ತೂ ಕುತಂತ್ರ ನಡಿಸಲೆಸಗಿದ ಹಿಂದೆ ಅವನು ಸ್ನಾನಿಕನಾದ ಯೋಹಾನನ ಹಬ್ಬದಲ್ಲಿ ಮತ್ಥಾಯನ ಸುವಾರ್ತೆಯ 14ನೇ ಸಂಧಿಯ ಆರಂಭವನ್ನು ಕುರಿತು ಪ್ರಸಂಗಿಸುವಾಗ ಯೋಹಾನನೆಂಬ ತನ್ನ ಹೆಸರನ್ನು ಸೂಚಿಸಿ—ಹೇರೋದಿಯಳು[1] ತಿರಿಗಿ ರೋಷಿಸುತ್ತಿದ್ದಾಳೆ, ಅವಳು ಯೋಹಾನನ ತಲೆ ಕಡಿಸಿ ಒಂದು ತಬಕಿನಲ್ಲಿ ತರಿಸಲಿಕ್ಕೆ ತಿರಿಗಿ ನೋಡುತ್ತಿದ್ದಾಳೆ! ಎಂದು, ನುಡಿದನು. ಯುದೊಕ್ಸಿಯಳು, ಅವು ತನ್ನ ವಿಷಯವಾಗಿ ಆಡಿರುವ ಮಾತುಗಳೆಂತ, ಗ್ರಹಿಸಿ, ಆ ಪ್ರಕಾರದ ಕಠಿಣ ಶಿಕ್ಷಕನಿಂದ ಅಧ್ಯಕ್ಷತೆಯನ್ನು ಹ್ಯಾಗಾದರೂ ಬೇಗ ಪುನಃ ತೆಗಿಸ ಬೇಕೆಂತ, ತನ್ನೊಳಗೆ ನಿಶ್ಚಯ ಮಾಡಿ ಕೊಂಡಳು. ಬಳಿಕ ಅವಳ ಮತ್ತು ಆ ಥೆಯೊಫಿಲನ ದುಷ್ಪ್ರಯತ್ನದ ದೆಸೆಯಿಂದ ಅರ್ಕದಿಯನು ಕ್ರಿ. ಶ. 404ನೇ ವರುಷದ ದಿವಾರೋಹಣಹಬ್ಬದಲ್ಲಿ ಖ್ರೂಸೊಸ್ತೊಮನನ್ನು ಹಿಡಿಸಲಿಕ್ಕೋಸ್ಕರ ಸೈನಿಕರನ್ನು ಅವನಿರುವ ದೇವಾಲಯಕ್ಕೆ ಕಳುಹಿಸಿದನು. ಇವನು ಅವರನ್ನು ಕಂಡು, ತನ್ನಲ್ಲಿ ನೆರೆದಿದ್ದ ಅಧ್ಯಕ್ಷರಿಗೂ ಸಭೆಯ ಗಂಡು ಮತ್ತು ಹೆಣ್ಣು ಸೇವಕರಿಗೂ ಹಲವು ಧೈರ್ಯದ ಮಾತು ಹೇಳಿ, ಸಭ್ಯರರಿಯದಂತೆ ಒಂದು ಗಿಡ್ಡ ಬಾಗಲಿಂದ ಹೊರಟು, ಆ ಸೈನಿಕರ ಸಹಿತ ಗಮಿಸಿದನು. ಇವರು ತಡೆಯದೆ ಅವನನ್ನು ಒಂದು ಹಡಗವೇರಿಸಿ, ಸಣ್ಣ ಅಸಿಯದ ಒಂದು ಕಾಡು ಸ್ಥಳಕ್ಕೊಯಿದರು. ಇದು ತನ್ನ ಶರೀರಕ್ಕೆ ಆಗದಿದ್ದರೂ ಕಳ್ಳರು ಎಡೆ ಬಿಡದೆ ಉಪದ್ರವ ಕೊಡುತ್ತಿದ್ದರೂ ಅವನು ತಾನು ಬೇಸರದ್ದಲ್ಲದೆ ಕಾಗದ ಪತ್ರಗಳ ಮುಖಾಂತರವಾಗಿ ಕೊನ್ಸ್ತಂತೀನೊಪೊಲಿಯ ಸಭ್ಯರನ್ನಾದರಿಸುತ್ತಾ, ಮುಂಚಿನಂತೆ ಪಾರ್ಶಿಯರಿಗೂ ಗೊಥರಿಗೂ ಸುವಾರ್ತೆ ಸಾರಿಸಲಿಕ್ಕೆಚ್ಚರಿಸುತ್ತಾ ಇದ್ದನು; ಆ ಪುರದಲ್ಲಿಯ ಸ್ನೇಹಿತರು ಅವನ ಉಪಶಮನಕ್ಕಾಗಿ ಅವನಿಗೆ ಮುಟ್ಟಿಸುತ್ತಿರುವ ಪ್ರೀತಿದಾನಗಳನ್ನು ಅವನು, ತನಗೇನೂ ಕಡಿಮೆಯಿಲ್ಲವೆಂತ, ತಕ್ಕೊಂಡಿಲ್ಲ. ಯುದೊಕ್ಸಿಯಳು ಸತ್ತ ಮೇಲೆ ಏನಾಯಿತೆಂದರೆ, ಅವನ ಗೆಳೆಯರಾದ 1ನೇ ಇನ್ನೊಕೆಂತನೆಂಬ ರೋಮಪುರದ ಅಧ್ಯಕ್ಷನೂ ರೋಮಿಾಯ ರಾಜ್ಯದ ಕೈಸರನಾದ ಹೊನೋರಿಯನೂ[2] ಅವನ ವಿಷಯ ಅರ್ಕದಿಯನಿಗೆ ಬೇಡಿ ಕೊಂಡದರಿಂದಲೇ ಅವನ ಎ

1) 33ನೇ ಪಾನು. 2) 206ನೇ, 207ನೇ, 208ನೇ ಪಾನುಗಳು.

ದುರಾಳಿಗಳು ಹೆಚ್ಚು ವರ್ಮ ತೋರಿಸುವವರಾಗಲಿಕ್ಕೆ, ಖ್ರೂಸೊಸ್ತೊಮನು ಕಪ್ಪು ಸಮುದ್ರದ ಹತ್ತರ ಹೆಚ್ಚು ಕಷ್ಟವುಳ್ಳದೊಂದು ಕಾಡುಸ್ಥಳಕ್ಕೆ ಹೋಗ ಬೇಕೆಂತ, ಅರ್ಕದಿಯನ ಕಡೆಯಿಂದ ಒಂದು ಹೊಸ ಆಜ್ಞೆಯು ಹೊರಟಿತು. ಆಗ ಇಬ್ಬರು ದಂಡುಗಾರರು ಅವನನ್ನು ಅಲ್ಲಿಗೆ ತೆಕ್ಕೊಂಡು ಹೋಗುತ್ತಿರಲು, ಪ್ರಯಾಣದ ಸಂಕಟದಿಂದ ಅವನ ತ್ರಾಣವು ಅಂತ್ಯಕ್ಕೆ ಬಂದ ಹಾಗಾಯಿತು. ಆದ್ದರಿಂದ ಅವನು ಅವರಿಗೆ ವಿನಂತಿ ಮಾಡಿ ಕೊಂಡು, ಅವರಿಂದ ಒಂದು ದೇವಾಲಯಕ್ಕೆ ಹೊರಿಸಿ ಕೊಂಡು, ಮಡಿವಸ್ತ್ರಗಳನ್ನು ಧರಿಸಿ ಕೊಂಡು, ತನ್ನಲ್ಲಿದ್ದದನ್ನು ಹತ್ತರದವರಿಗೆ ಕೊಟ್ಟು, ಪರಿಶುದ್ಧ ರಾತ್ರಿಭೋಜನವನ್ನಾಸ್ವಾದಿಸಿ, ಪ್ರಾರ್ಥಿಸಿ, ತನ್ನ ನಿತ್ಯ ಪದ್ಧತಿಯ ಪ್ರಕಾರ, ಸಕಲಕ್ಕೂ ದೇವರಿಗೆ ಸ್ತೋತ್ರವಾಗಲಿ! ಎಂತ, ಉಚ್ಚರಿಸುತ್ತಲೇ ಇಹದಿಂದ ಪರಮಾನಂದವನ್ನೈದಿದನು. ಅದು ಕ್ರಿ. ಶ. 407ನೇ ವರುಷದ ಕಡೆಯ ಕಾಲದಲ್ಲಿ ಸಂಭವಿಸಿತು.

## 30. ನುಮಿದಿಯದ ಹಿಪ್ಪೊ ಪಟ್ಣದ ಅಧ್ಯಕ್ಷನಾದ ಔರೇಲಿಯ ಔಗುಸ್ತೀನನು.

ಆಫ್ರಿಕದ ಶೀಮೆಯಾದ ನುಮಿದಿಯದ[1] ತಗಸ್ತೆ ಎಂಬ ಪಟ್ಣದಲ್ಲಿ ಪತ್ರಿಕಿಯನೆಂಬ ಒಬ್ಬ ಸ್ಥಿತಿವಂತ ಮಂತ್ರಿಗೆ ಕ್ರಿ. ಶ. 354ನೇ ವರುಷ, ಕೊನ್ಸ್ತಂತಿಯನು ರೋಮಾಯ ಸಾಮ್ರಾಜ್ಯದ ಏಕ ಚಕ್ರವರ್ತಿಯಾಗಿರುವ ಕಾಲ[2], ಒಬ್ಬ ಕುಮಾರನು ಜನಿಸಿದನು; ಈ ಕುಮಾರನಿಗೆ, ಔರೇಲಿಯ ಔಗುಸ್ತೀನನೆಂತ, ಹೆಸರಿಕ್ಕಿದರು. ಹಿಂದೆ ವಿವರ ಹೇಳಿರುವ ಅಂಬ್ರೊಸಿಯನು[3] ಆ ಸಮಯದಲ್ಲಿ 20 ವರುಷದವನು, ಆದರೆ ಖ್ರೂಸೊಸ್ತೊಮನು 7 ವರುಷದ ಹುಡುಗನು[4]. ಔಗುಸ್ತೀನನ ತಂದೆಯು ವಿಗ್ರಹಾರಾಧಕನು; ಅವನು ಒಂದು ಪ್ರಕಾರದ ದಯೆಯುಳ್ಳ ಗೃಹಸ್ಥನು; ಆದರೂ ಕೋಪಕ್ಕೂ ವ್ಯಭಿಚಾರಕ್ಕೂ ಬೇಗ ಒಳಗಾಗುವನು. ಔಗುಸ್ತೀನನ ತಾಯಿಯ ಹೆಸರು ಮೊನಿಕಳೆಂಬದು; ಅವಳು ಖ್ರೂಸೊಸ್ತೊಮನ ಅಂಥುಸಳೆಂಬ ತಾಯಿಯಂತೆ[5] ಬಹಳ ಒಳ್ಳೇ ಕ್ರೈಸ್ತಳು; ದಿವಸಕ್ಕೆ 2 ಸರ್ತಿ ದೇವಾಲಯಕ್ಕೆ ಹೋಗುತ್ತಿದ್ದು, ದಾನಧರ್ಮದಿಂದಲೂ ಅಮಲನೀತಿಚರ್ಯೆಯಿಂದಲೂ ಕರ್ತನನ್ನು ಕೊಂಡಾಡುತ್ತಿರುವಳು. ತನ್ನ ಗಂಡನ ದುರ್ಮಾರ್ಗತ್ವದಿಂದ ತನಗೆ ಯಾವಾಗಲೂ ಬಹಳ ಶೋಕ ಬರುತ್ತಿದ್ದರೂ ಅವಳು ಅದನ್ನೆಲ್ಲಾ ಆಶ್ಚರ್ಯಕರವಾದ ತಾಳ್ಮೆಯಿಂದ ಸಹಿಸಿ ಕೊ

1) 85ನೇ ಪಾನು. 2) 195ನೇ ಪಾನು. 3) 28ನೇ ಸಂಧಿ. 4) 29ನೇ ಸಂಧಿ.
5) 224ನೇ ಪಾನು.

ಳ್ಳುತ್ತಾ, ಅವನು ವ್ಯಸನಗಳ ಭ್ರಮೆ ಬಿಟ್ಟು ಶಾಂತನಾದಂಥ ಹೊತ್ತಿನಲ್ಲಿ ಮಾತ್ರ ಅವನಿಗೆ ತಕ್ಕ ಬುದ್ಧಿ ಹೇಳುತ್ತಾ ಬಂದಳು. ಹೀಗಾಗುತ್ತಿರಲಿಕ್ಕಾಗಿ ಅವಳ ಗಂಡನು ತನ್ನ ಜೀವನದ ಅಂತ್ಯ ವರುಷದಲ್ಲಿ ಹೃತ್ಪರಿಣಾಮ ಪಟ್ಟು, ಕ್ರೈಸ್ತನಾದನು; ಅವನ ಹಿರೀ ಮಗನಾದ ಆ ಔಗುಸ್ತೀನನು 19 ವರುಷದವನಾದಂದು ಅದಾಯಿತು. ಬೇರೆ ಬೇರೆ ಸ್ತ್ರೀಯರು ಸೌಮನಸದ ಮೊನಿಕಳ ಹತ್ತರ ಬಂದು, ನಮ್ಮ ಪತಿಗಳು ನಮಗೆ ಹೇರಳ ಉಪದ್ರವ ಕೊಡುತ್ತಿದ್ಧಾರೆಂತ, ದುಃಖಿಸುತ್ತಿರಲು, ಅವಳು, ಅದು ನಿಮ್ಮ ನಾಲಿಗೆಯ ಕೆಟ್ಟತನದ ಫಲವೇ! ಎಂತ, ಹೇಳುತ್ತಿರುವಳು. ಪತ್ರಿಕಿಯನಿಗೆ ಔಗುಸ್ತೀನನಲ್ಲದೆ ಇನ್ನು ಒಬ್ಬ ಮಗನೂ ಒಬ್ಬ ಮಗಳೂ ಹುಟ್ಟಿದರು. ತನ್ನ ಈ ಮೂರು ಮಕ್ಕಳಲ್ಲಿ ದೇವರ ಭಯವನ್ನು ನಿರ್ಮಿಸುವದು ಮೊನಿಕಳ ಮುಖ್ಯ ಚಿಂತೆಯು. ಔಗುಸ್ತೀನನು ತನ್ನ ಜೀವಿತದ 46ನೇ ವರುಷ ಬರಕೊಂಡ ತನ್ನ ಚರಿತ್ರದಲ್ಲಿ ಅವಳನ್ನು ಕುರಿತು ಹೇಳುವದೇನಂದರೆ—ನನ್ನ ತಾಯಿಯು ನನಗೆ ಭಾಷಾತೀತವಾದ ಪ್ರೀತಿ ಮಾಡುತ್ತಿದ್ದಳು. ನನ್ನನ್ನು ಹೆರಲಿಕ್ಕೆ ಬಹಳ ವೇದನೆ ಪಟ್ಟಿದ್ದಳು, ಸರಿ; ಆದರೆ ನನ್ನನ್ನು ಇನ್ನೊಮ್ಮೆ ಆತ್ಮಿಕ ರೀತಿಯಾಗಿ ಹೆರಲಿಕ್ಕೆ ಅಂದರೆ ನನ್ನಲ್ಲಿ ದೇವರ ಭಯವುಳ್ಳ ಹೃದಯ ಹುಟ್ಟಿಸಲಿಕ್ಕೆ ಬಹಳ ಹೆಚ್ಚು ವೇದನೆ ಪಡುತ್ತಿದ್ದಳು; ಅದಲ್ಲದೆ ಅವಳು ತನ್ನ ಬಳಿಕೆಯವರೆಲ್ಲರಿಗೆ ತಾನು ತಾಯಿ ಎಂಬಂತೆ ಪ್ರೀತಿ ಸಲ್ಲಿಸುತ್ತಾ, ತಾನು ಮಗಳೆಂಬಂತೆ ವಿನಯವುಳ್ಳ ಸನ್ಮಾನ ತೋರಿಸುತ್ತಾ ಇದ್ದಳು.—

ಔಗುಸ್ತೀನನು ತನ್ನ ಬಾಲ್ಯದ ವಿಷಯ ಬರದದೇನಂದರೆ—ಮನುಷ್ಯರನ್ನು ಮೆಚ್ಚಿಸಿ ಕೊಳ್ಳುವದು ನನಗೆ ಎಲ್ಲಕ್ಕಿಂತ ದೊಡ್ಡದೆನ್ನಿಸುತ್ತಿತ್ತು; ಆಟದ ದೆಸೆಯಿಂದ ನನ್ನ ಹೆತ್ತವರಿಗೂ ಉಪಾಧ್ಯಾಯರಿಗೂ ಸುಳ್ಳಾಡುವ ಅಸಹ್ಯ ಪಾಪಕ್ಕೆ ಹೆದರದಿರುತ್ತಿದ್ದೆನು; ಹೊಟ್ಟೆಬಾಕತನದಿಂದಲೂ ನನ್ನ ಜತೆಹುಡುಗರನ್ನು ಏನಾದರೂ ಕೊಟ್ಟು ಒಲಿಸ ಬೇಕೆಂಬ ಆಶೆಯಿಂದಲೂ ನನ್ನ ತಾಯಿಯ ಉಗ್ರಾಣಕೋಣೆಯಲ್ಲಿ ಅಗಿಂದಾಗ ಕಳ್ಳತನ ಮಾಡುತ್ತಿದ್ದೆನು; ಪಗಡೇ ಆಟದಲ್ಲಿ ಗೆಲ್ಲ ಬೇಕೆಂಬ ಅಭಿಮಾನದಿಂದ ಅನೇಕ ಸರ್ತಿ ಮೋಸ ನಡಿಸುತ್ತಿದ್ದೆನು; ಬೇರೊಬ್ಬರು ಆ ಆಟದಲ್ಲಿ ಮೋಸ ನಡಿಸಿದರೆ ಹೊಟ್ಟೆಕಿಚ್ಚಿನಿಂದ ಬಹಳ ಶಿಟ್ಟು ಪಡುತ್ತಿದ್ದೆನು.—ಹಾಗಾದರೆ ಔಗುಸ್ತೀನನು ತನ್ನ ತಾಯಿಯ ಸುಶಿಕ್ಷೆಗೆ ಒಳ ಪಡಲೇ ಇಲ್ಲ. ಇದಕ್ಕೆ ಅವನ ತಂದೆಯಾದರೂ ಮೂಲ; ಹ್ಯಾಗಂದರೆ ತನ್ನ ಮಗನು ತೋರಿಸುತ್ತಿರುವ ಮಾನಾಭಿಲಾಷೆಯನ್ನು ಅವನು ಸಾಕುತ್ತಾ, ಮತ್ತೇನೂ ಬೇಡ! ನನ್ನ ಕುಮಾರನು ಒಮ್ಮೆ ವಾಕ್ಚಾತುರ್ಯಪಂಡಿತನಾಗಿ ಪರಿಶೋಭಿಸ ಬೇಕೆಂಬದೀ ಒಂದೇ ಅಪೇಕ್ಷೆಯುಳ್ಳವನಾಗಿರುತ್ತಿದ್ದನು. ಔಗುಸ್ತೀನನು ತಗಸ್ತೆಯಲ್ಲಿಯೂ ಇದರ ಹತ್ತರದಲ್ಲಿರುವ

ಒಂದು ಪಟ್ಟದಲ್ಲಿಯೂ ವಿದ್ಯಾಭ್ಯಾಸ ಮಾಡಿ, 16 ವರುಷದ ಯೌವನಸ್ಥನಾಗಿ, ತನ್ನ ಹೆತ್ತವರ ಮನೆಗೆ ತಿರಿಗಿ ಬಂದು, ಒಂದು ವರುಷ ಅವರ ಸಂಗಡ ಇರುತ್ತಿರಲು, ತನ್ನ ತಾಯಿಯನ್ನು ತನ್ನ ದುರ್ನಡತೆಯಿಂದ ಅತ್ಯಾರ್ತಿಗೊಳ್ಳಿಸುತ್ತಾ, ಅವಳ ವಿಸಂತಿಗೂ ಕಣ್ಣೀರಿಗೂ ಹಾಸ್ಯ ಗೇಯುತ್ತಾ ಇದ್ದನು. ಆ ಸಮಯವನ್ನು ಕುರಿತು ಅವನು ಹಿಂದಗಡೆ ಬರೆದದೇನಂದರೆ—ನನ್ನ ದುಷ್ಟ ಜತೆಗಾರರು, ಔಗುಸ್ತೀನನು ದುಷ್ಟತ್ವದಲ್ಲಿ ನಮಗೆ ಈಡಾಗಲಿಕ್ಕಿಲ್ಲವೆಂತ, ಹೇಳುವದಕ್ಕೆ ನಾನು ಕಾರಣ ಕಂಡಿದ್ದರೆ ಬಹಳ ನಾಚಿ ಕೊಳ್ಳುತ್ತಿದ್ದೆನು; ಆದ್ದರಿಂದ ನಾನು ಬೇರೆ ಬೇರೆ ದುಷ್ಕರ್ಮಗಳನ್ನು ಮನಸ್ಸಿನಲ್ಲಿ ಕಲ್ಪಿಸಿ ಕೊಂಡು, ಅವನ್ನು ನಡಿಸದಿದ್ದರೂ, ನಡಿಸಿದ್ದೇನೆಂತ, ಸುಳ್ಳಾಡಿ, ನನ್ನನ್ನು ಹೊಗಳಿ ಕೊಳ್ಳುತ್ತಿದ್ದೆನು. ಓ ನನ್ನ ದೇವರೇ, ನಾನು ಅದನ್ನೆಲ್ಲಾ ನೆನಪು ಮಾಡಿ ಕೊಂಡು, ಆದರಿಂದ ನರಕದಲ್ಲಿ ಬೀಳುತ್ತೇನೆಂದು ಕ್ರಿಸ್ತನ ಹೆಸರಿನ ದೆಸೆಯಿಂದ ಅಂಜ ಬೇಕಾಗದ್ದಕ್ಕಾಗಿ ಕೃತಜ್ಞತೇ ಹಂಗನ್ನು ನಿನಗೆ ಹ್ಯಾಗೆ ಸಲ್ಲಿಸ್ಯೇನು? ನೀನು ಎಲ್ಲಕ್ಕೂ ನನಗೆ ಕ್ಷಮಿಸಿದ್ದರಿಂದ ನಿನಗೆ ಪ್ರೀತಿಸಿ, ನಿನ್ನನ್ನು ಸ್ತುತಿಸುತ್ತಲಿರುವೆನು!—ತದನಂತರ ತಂದೆಯು ಅವನನ್ನು ಅಧಿಕ ವಿದ್ಯಾಭ್ಯಾಸಕ್ಕೋಸ್ಕರ ಕರ್ಥಾಗೊ ಪಟ್ಣಕ್ಕೆ ಕಳುಹಿಸಿದನು. ಕುಪ್ರಿಯಾನ ಅಧ್ಯಕ್ಷನು 100 ವರುಷಗಳ ಹಿಂದೆ ಅಮಿತಾಶೀರ್ವಾದದೊಡನೆ ಪ್ರವರ್ತಿಸಿದ್ದ[1] ಅಲ್ಲಿ ಅವನು ತನ್ನ ವಿದ್ಯಾಭಿವೃದ್ಧಿಗೂ ಇದಕ್ಕೆ ತನಗಾಗುವ ಕೀರ್ತಿಗೂ ಹೆಚ್ಚು ಸೊಕ್ಕಿ ಕೊಳ್ಳಲಿಕ್ಕೆ ಬಹಳ ಆಸ್ಪದವಾಯಿತು; ಅದಲ್ಲದೆ ಅವನು ಹೋಗುತ್ತಿರುವ ನಾಟಕದ ಆಟಗಳಿಂದಲೂ ಅವನಿಗಿರುವ ಪುಂಡುಗಾರರ ಸಂಗತಿಯಿಂದಲೂ ಅವನ ಸಂಭಾವಿತತನವು ಪೂರಾ ತಪ್ಪಿದ ಕಾರಣ ತನ್ನ 18ನೇ ವರುಷದಲ್ಲಿ ಒಬ್ಬ ಹೆಂಗಸನ್ನು ಇಟ್ಟು ಕೊಂಡನು; ಇವಳು 13 ವರುಷ ಅವನ ಬಳಿಯಲ್ಲಿರುತ್ತಿದ್ದಳು. ಅಷ್ಟರಲ್ಲಿ ಅವನ ತಾಯಿಯು ಅವನಲ್ಲಿ ನೆಟ್ಟಿದ್ದ ಕ್ರಿಸ್ತನಾಮಸನ್ಮಾನವು ಬೇರು ಧರಿಸಲೇ ಕಿತ್ತು ಹೋಗಿದ್ದಿಲ್ಲ. ಇದಕ್ಕೊಂದು ದೃಷ್ಟಾಂತವೇನಂದರೆ— ಕ್ರಿಸ್ತಶಕಕ್ಕೆ ಮುಂಚೆ ಕಿಕೆರೋನನೆಂಬವನೊಬ್ಬ ದೊಡ್ಡ ಮೂರ್ತಿಪೂಜಕ ಪಂಡಿತನು[2] ರಚಿಸಿದ್ದೊಂದು ನೀತಿಶಾಸ್ತ್ರವು ಅವನ ಕೈಗೆ ಶಿಕ್ಕಿದಾಗ ಅವನು ಕೆಲವು ಕಾಲ ಅದಕ್ಕೆ ಚೋದ್ಯ ಪಟ್ಟರೂ—ದೇವರ ಮಗನಾದ ಯೇಸು ಕ್ರಿಸ್ತನ ಹೆಸರು ಅದರಲ್ಲಿಲ್ಲ, ಈ ಹೆಸರಿಲ್ಲದ ಪಾಂಡಿತ್ಯವೂ ವಾಗಲಂಕಾರವೂ ಸತ್ಯವೂ ನನಗೆ ಯಾತಕ್ಕೆ? ಎಂದು, ಅದನ್ನು ಬಿಟ್ಟು ಬಿಟ್ಟು, ಪರಿಶುದ್ಧ ಬರಹವನ್ನೋದಲಿಕ್ಕೆ ಹತ್ತಿದನು; ಆದರೂ ಅವನ ಗರ್ವಕ್ಕಾಗಿ ಇದರ ರಕ್ಷಣಾರ್ಥವು ಅವನಿಗೆ ತಿಳಿಯದೆ ಹೋಯಿತು. ಆ ಸಮಯ ಅವನ ತಂದೆಯು ತನ್ನ ಹೆಂಡತಿಯ ಪರಿಮುಖದಿಂದ ಕ್ರಿಸ್ತನ ಭಕ್ತನಾಗಿ, ತೀರಿದನು; ಆದರೆ ಔಗುಸ್ತೀನನು ಸತ್ಯದ ಬೆಳ

1) 17ನೇ ಸಂಧಿ. 2) From B. C. 106 to B. C. 43.

ಕೆಲ್ಲಾ ನೊಂದಿದವನಾಗಿ, ಆ ವರೆಗೂ ಉಳಿದಿದ್ದ ಮಣಿಕೇಯರೆಂಬ ಪಾಷಂಡಿಗಳ[1] ಉರುಲಿನಲ್ಲಿ ಶಿಕ್ಕಿ ಕೊಂಡನು.

ಅವನು ಕರ್ಥಾಗೊವಿನಲ್ಲಿ ತನ್ನ ವಿದ್ಯಾಭ್ಯಾಸ ಮುಗಿಸಿ, 21 ವರುಷದವನಾಗಿ, ಕ್ರಿ. ಶ. 375ನೇ ವರುಷ ತನ್ನ ಸ್ವಪಟ್ಣವಾದ ತಗಸ್ತೆಗೆ ಮರಳಿ ಬಂದು, ವಾಕ್ಚಾತುರ್ಯಪಂಡಿತನಾದನು. ಮೊನಿಕಳು ತನ್ನ ಮಗನಿಗೆ ದೊರಕುವ ಮಾನ ನೋಡಿದರೂ ಏನೇನೂ ಸಂತೋಷ ಗೊಳ್ಳದೆ, ಶೋಕದಿಂದ ಸವೆದು ಹೋಗುತ್ತಾ ಇದ್ದಳು; ಯಾಕಂದರೆ, ಅವನು ದುರ್ಮಾರ್ಗತನ ಕಳೆಯದಿರುತ್ತಿದ್ದನು. ಅವಳು ಹಗಲಿರುಳು ಅವನಿಗೋಸ್ಕರ ದೇವರಿಗೆ ಪ್ರಾರ್ಥಿಸುತ್ತಾ, ದುಃಖಾಶ್ರುವಿನಿಂದ ಅವನ ಬುದ್ಧಿ ತಿದ್ದಲಿಕ್ಕೆ ಯತ್ನಿಸುತ್ತಾ ಇರುವಷ್ಟರಲ್ಲಿ ದೇವರು ಒಂದು ರಾತ್ರಿಯಲ್ಲಿ ಒಂದು ದರ್ಶನದಿಂದ ಅವಳಿಗೆ ಬಹಳ ಆದರಣೆ ಕೊಟ್ಟನು. ಹ್ಯಾಗಂದರೆ, ಅವಳು ಒಂದು ತಕ್ಕಡಿಯ ದಂಡಿಗೆಯದೊಂದು ಕಡೆಯಲ್ಲಿ ನಿಂತು, ತನ್ನ ಮಗನಿಗೆ ಅತ್ತ ಹಾಗಾಯಿತು; ಆಗ ಒಬ್ಬ ಸಂತುಷ್ಟ ಮುಖವುಳ್ಳ ಯೌವನಸ್ಥನು ಅವಳ ಬಳಿಗೆ ಬಂದು, ಯಾಕೆ ದುಃಖಿಸುತ್ತಿದ್ಧಿ? ಎಂತ, ಕೇಳಿದ್ದಕ್ಕೆ ಅವಳು ತನ್ನ ದುಃಖವನ್ನೆಲ್ಲಾ ಅವನಿಗೆ ಹೇಳಿ ಕೊಂಡಳು; ಆ ಹೊತ್ತು ಆ ಯೌವನಸ್ಥನು, ನೀನು ನಿಂತಿರುವಲ್ಲಿ ಅವನು ಸಹ ನಿಂತಿದ್ಧಾನೆ! ಎಂದು, ಹೇಳಿ, ಹೋದನು. ಅವಳು ಈ ದರ್ಶನವನ್ನು ತನ್ನ ಮಗನಿಗೆ ತಿಳಿಸಿದಂದು ಇವನು—ಒಳ್ಳೇದು, ಹಾಗಾದರೆ ನೀನು ನನ್ನ ಮತಕ್ಕೆ ಬರುವಿ ಎಂದು, ಹೇಳುತ್ತಲೇ ಅವಳು ಬೇಗ ಅಂದದ್ದೇನು—ಅಲ್ಲಲ್ಲ! ಅವನು ನಿಂತಿರುವಲ್ಲಿ ನೀನು ಸಹ ನಿಂತಿದ್ಧಿ ಎಂತ, ಅವನು ನನಗೆ ಹೇಳಿಲ್ಲ; ನೀನು ನಿಂತಿರುವಲ್ಲಿ ಅವನು ಸಹ ನಿಂತಿದ್ಧಾನೆಂತ, ಹೇಳಿದನಷ್ಟೇ!—ಆಗ ಔಗುಸ್ತೀನನು ಅವಳ ಕಟ್ಟುತ್ತರಕ್ಕೆ ವಿಸ್ಮಯಪೂರ್ಣನಾದನು. ಅದೇ ಕಾಲ ಅವಳಿಗೆ ಮತ್ತೊಂದು ತಾಪೋಪಶಮನವಾಯಿತು. ಹ್ಯಾಗಂದರೆ, ಅವಳು ಒಬ್ಬ ಅಧ್ಯಕ್ಷನಿಗೆ—ನನ್ನ ಮಗನಿರುವ ಮತವು ಸುಳ್ಳೆಂತ, ಅವನಿಗೆ ತಕ್ಕ ಕಾರಣ ತೋರಿಸಿ, ಸಿದ್ಧಾಂತ ಮಾಡಿ ಕೊಡಿರಿ! ಎಂದು, ಬೇಡಿ ಕೊಂಡಳು; ಅವನವಳಿಗೆ—ಅದು ವ್ಯರ್ಥವಾಗುವದು; ಆ ತರ್ಕಿಯೂ ಗರ್ವಿಯೂ ಆದ ಯೌವನಸ್ಥನು ಕಾರಣಗಳ ಮೇಲೆ ಲಕ್ಷ್ಯವಿಡಲಿಕ್ಕಿಲ್ಲ; ಆದರೆ ನೀವು ಮುಂಚಿನಂತೆ ದೇವರಿಗೆ ಪ್ರಾರ್ಥಿಸುತ್ತಲಿರ್ರಿ! ನಾನು ಸಹ ಮಣಿಕೇಯನಾಗಿದ್ದೆನು, ಮತ್ತು ತರ್ಕಶಾಸ್ತ್ರ ಬಲ್ಲವನೊಬ್ಬನು ನನ್ನನ್ನು ಒಡಂಬಡಿಸದಿದ್ದರೂ, ಅದು ಅಪಬೋಧನೆ ಎಂತ, ನಾನೇ ತಿಳುಕೊಂಡೆನಲ್ಲ? ಎಂದು, ತಿಳಿಸಿದನು. ಆದರೆ ಆ ಮಮತೆಯುಳ್ಳ ತಾಯಿಗೆ ಆ ಮಾತಿನಿಂದ ಶಾಂತಿ ಬರಲಿಲ್ಲ; ಅವಳು ಬಹಳ ರಾಗದಿಂದ ತಿರಿಗಿ ಅದೇ ವಿನಂತಿ ಮಾಡಲು, ಆ ದೇವಭಕ್ತನು

1) 171ನೇ ಪಾನು.

ಅವಳಿಗಂದದೇನು—ಈ ಆಲೋಚನೆ ಬಿಡಿರಿ! ಇಷ್ಟು ಕಣ್ಣೀರಿನ ಮಗನು ಕೆಟ್ಟು ಹೋಗುವದು ಅಸಾಧ್ಯವೇ, ನಿಶ್ಚಯ!—ಈ ಮಾತು ಅವಳಿಗೆ ಪರಲೋಕದಿಂದ ಬಂದ ಹಾಗೆಯೇ ಕಾಣಿಸಿತು.

ತನ್ಮಧ್ಯ ನಡೆದೊಂದು ಸಂಗತಿಯು ಔಗುಸ್ತೀನನ ಗರ್ವಕ್ಕೆ ಅತಿ ವಿರುದ್ಧವಾಯಿತು. ಏನಂದರೆ, ಅವನು ತನ್ನ ಪ್ರಾಣಗೆಳೆಯರಾದವರಲ್ಲಿ ಒಬ್ಬನನ್ನು ಕ್ರೈಸ್ತ ವಿಶ್ವಾಸದಿಂದ ಭ್ರಷ್ಟನಾಗ ಮಾಡಿದ್ದನು. ಇವನು ಫಕ್ಕನೆ ಪ್ರಚಂಡ ಜ್ವರದಲ್ಲಿ ಬಿದ್ದು, ಅರ್ಧಸ್ಮೃತಿಯವನಾಗಿರಲು, ಅವನ ಕುಟುಂಬದವರು ಅವನಿಗೆ ತ್ರಿಯೇಕ ದೇವರ ನಾಮದಲ್ಲಿ ಸ್ನಾನ ಕೊಡಿಸಿದರು. ಔಗುಸ್ತೀನನು ಅದರ ಸುದ್ದಿ ಕೇಳಿ, ಅಂಥಾ ಸ್ನಾನವು ತಾನು ಕೊಟ್ಟ ಬೋಧನೆಯನ್ನು ಹ್ಯಾಗೂ ಕಿತ್ತು ಹಾಕ ಕೂಡದೆಂದು, ನೆನಸಿದನು. ತರುವಾಯ ಎಲ್ಲರೂ ನಿರಾಶೆ ಪಟ್ಟಿರುವಲ್ಲಿ ಆ ರೋಗಿಷ್ಠನಿಗೆ ತಿರಿಗಿ ಕ್ಷೇಮವಾಗುತ್ತಲೇ ಔಗುಸ್ತೀನನು ಅವನೆಡೆಗೆ ಹೋಗಿ, ಅವನ ಸಂಗಡ ಸಂಭಾಷಿಸಿ, ಅವನಿಗಾದ ಸ್ನಾನಕ್ಕೆ ಹಾಸ್ಯ ಗೈಯ ತೊಡಗಿದನು. ತತ್ಕ್ಷಣವೇ ಇವನು, ನೀನು ಈ ತರದ ಗೋಷ್ಟಿ ಬಿಡದಿದ್ದರೆ ಇನ್ನೂ ನನ್ನ ಗೆಳೆಯನಾಗಿರ ಕೂಡದೆಂದು, ಖಂಡಿತವಾಗಿ ನುಡಿದನು. ಔಗುಸ್ತೀನನು ಬಹಳ ಬೆರಗಾಗಿ—ನಮ್ಮ ಸಂಭಾಷಣೆಯನ್ನೆಲ್ಲಾ ಬರಕೊಂಡು, ಕೆಲವು ದಿವಸದ ಮೇಲೆ ಅವನ ಮುಂದೆ ಓದುವೆನೆಂತ, ಹೋಗಿ, ತಿರಿಗಿ ಬಾರದ್ದಕ್ಕಿಂತ ಮುಂಚೆಯೇ ಆ ಸ್ನೇಹಿತನು ಮತ್ತು ಜ್ವರದವನಾಗಿ, ಸತ್ತು, ಹೀಗೆ ಅವನ ಕುಯುಕ್ತಿಗೆ ತಪ್ಪಿಸಿ ಕೊಂಡು, ಯೇಸು ರಕ್ಷಕನ ಪಾದವನ್ನೈದಿದನು. ಈ ಅನುಭವವೂ ಅವನ ತಾಯಿಯ ಪ್ರಾರ್ಥನೆ ಹಿತೋಪದೇಶಗಳೂ ಅವನ ಪ್ರಾಣವನ್ನು ಬಹುಶಃ ಕಾಡಿಸುತ್ತಿದ್ದವು. ಹೀಗಿರಲಿಕ್ಕೆ ಅವನಿಗೆ ತಗಸ್ತೆಯಲ್ಲಿ ಇನ್ನೂ ಶಾಂತಿ ಇರಲಿಲ್ಲ.

ಅದರ ನಿಮಿತ್ತ ಅವನು ಆ ಪಟ್ಣ ಬಿಟ್ಟು, ಕರ್ಥಾಗೊವಿಗೆ ಹೋಗಿ, ಒಂದು ವಾಕ್ಚಾತುರ್ಯವಿದ್ಯಾಶಾಲೆ ಸ್ಥಾಪಿಸಿದನು. ಇತ್ಲಾಗೆ ಅವನು ಆ ಮಣಿಕೇಯ ಮತದ ಕಟ್ಟಳೆಯ ಪ್ರಕಾರ ಸೂರ್ಯಚಂದ್ರರಿಗೆ ಪೂಜಿಸುತ್ತಾ, ಈ ಎರಡು ವಸ್ತುಗಳ ಹೆಸರಿನಲ್ಲಿ ಬಹಳ ಉಪವಾಸ ಮಾಡುತ್ತಾ, ಜ್ಯೋತಿಷವನ್ನು ನಡಿಸುತ್ತಾ ಇದ್ದರೂ ಮನಸ್ತೃಪ್ತಿ ಪಡದಲಿರುತ್ತಿದ್ದನು; ಅದಲ್ಲದೆ ತಾನಿರುವ ಆ ಮತದ ಮೇಲೆ ಅವನಿಗೆ ಸಂಶಯವು ಸಹ ಹುಟ್ಟಿತು. ಇದು ಬಹು ಹೆಚ್ಚಾದದ್ದು ಹ್ಯಾಗಂದರೆ, ಅವನು ತನ್ನ ಹತ್ತರದ ಮಣಿಕೇಯ ವಿದ್ವಾಂಸರಿಗೆ ಅನೇಕ ಪ್ರಶ್ನೆಗಳನ್ನು ಹಾಕುತ್ತಿರಲು, ಇವರು ತಕ್ಕ ಉತ್ತರಗಳನ್ನು ಕೊಡಲರಿಯದೆ—ನಮಗೆ ಫೌಸ್ತನೆಂಬ ಗುರುವಿದ್ಧಾನೆ, ಅವನು ನಿಮ್ಮ ಸಂಶಯವೆಲ್ಲಾ ಬಿಡಿಸುವನೆಂತ, ವದಿಸುತ್ತಿರುವಾಗಲೊಂದು ದಿನ ಆ ಗುರುವು ಕರ್ಥಾಗೊವಿಗೆ ಬಂದನು. ಬಳಿಕ ಔಗುಸ್ತೀನನು ಅ

ವನ ಬಳಿಗೈದಿ, ವಿಚಾರಿಸುವಲ್ಲಿ—ಆ ಮನುಷ್ಯನು ಅಲ್ಪ ಸ್ವಲ್ಪ ವಿದ್ಯಾಭ್ಯಾಸಿ; ಅ ಪಂಡಿತಾನಾಂ ಮೌನಮೇವ ಭೂಷಣಂ ಅಂದರೆ ಸುಮ್ಮಗಿರುವದೇ ಪಂಡಿತರಲ್ಲದವರ ಭೂಷಣವೆಂಬ ಗಾದೆಯು ಅವನಲ್ಲಿಯೂ ಒದಗಿತೆಂತ, ತಿಳಿದು, ಮಣಿಕೇಯತ್ವಕ್ಕೆ ಬೆನ್ನು ಹಾಕುವವನಾದನು.

ದೇವರಿಲ್ಲದವರಿಗೆ ಸಮಾಧಾನವಿಲ್ಲ! ಎಂಬ ಪರಿಶುದ್ಧ ಬರಹದ ವಚನದ ಹಾಗೆ ಔಗುಸ್ತೀನನು ಹೆಚ್ಚು ಹೆಚ್ಚಿಗೆ ಅನುಭವಿಸಿ, ರೋಮಪುರದಲ್ಲಿ ತನಗೆ ಸೌಖ್ಯ ಬಂದೀತೆಂತ, ನೆನಸಿ, ಅಲ್ಲಿಗೆ ಹೋಗುತ್ತೇನೆಂತ, ತನ್ನ ತಾಯಿಗೆ ಹೇಳಲು, ಅವಳು, ಅಲ್ಲಿಯ ಐಶ್ವರ್ಯಸಂಭ್ರಮಸ್ಥರಲ್ಲಿ[1] ತನ್ನ ಮಗನು ಶೇರಿದರೆ ಪೂರಾ ಕೆಟ್ಟಾನೆಂತ, ಅಂಜಿ, ಅತ್ತು, ಕಂದಾ, ಅಲ್ಲಿಗೆ ಹೋಗ ಬೇಡವೆಂತ, ನಾನಾ ಪ್ರಕಾರ ಬೇಡಿ ಕೊಂಡರೂ ಅವನು ಒಪ್ಪಲಿಲ್ಲ. ಅದಕ್ಕವಳು, ಹಾಗಾದರೆ ನಿನ್ನ ಸಂಗಡ ಬರುತ್ತೇನೆಂತ, ಹೇಳಿದಳು. ಅದು ಅವಳ ಬುದ್ಧ್ಯುಪದೇಶಕ್ಕೆ ಮೆಚ್ಚದ ಮಗನಿಗೆ ಬಹಳ ದುಃಖಕರವಾದ ಮಾತಾಯಿತು. ಕ್ರಿ. ಶ. 383ನೇ ವರುಷ ಅವರಿಬ್ಬರು ಕೂಡಿ ಬಂದರಸ್ಥಳಕ್ಕೆ ಬಂದ ಹಿಂದೆ ಅವನು—ಈಗ ಎದುರ್ಘಾಳಿ ಬೀಸುತ್ತದೆ, ಒಳ್ಳೇ ಘಾಳಿ ಬರುವನಕ ನೀವು ಈ ರಾತ್ರಿ ಸಮೀಪವಾದ ದೇವಾಲಯದೊಳಗೆ ಉಳುಕೊಳ್ಳಿರಿ; ಅಷ್ಟರಲ್ಲಿ ನಾನು ಒಬ್ಬ ಸ್ನೇಹಿತನನ್ನು ಕಂಡು ಬರುವೆನೆಂದು, ಹೇಳಿ, ತನ್ನ ತಾಯಿಯನ್ನು ನಂಬಿಸಿದಾಗ ಇವಳು ಆ ದೇವಾಲಯದೊಳಗೆ ಪ್ರವೇಶಿಸಿ, ಇರುಳೆಲ್ಲಾ ತನ್ನ ಮಗನಿಗೋಸ್ಕರ ಪ್ರಾರ್ಥಿಸುತ್ತಿರುವ ಸಮಯದಲ್ಲಿ ಅವನು ಹಡಗದ ಮೇಲೆ ಹತ್ತಿ, ಹೊರಟನು. ಅವನು ಈ ವಿಧವಾಗಿ ತನ್ನ ಪ್ರಿಯ ಮಾತೆಗೆ ಮೋಸ ಮಾಡಿದ್ದಕ್ಕಾಗಿ ಹಿಂದಗಡೆ ಬಹಳ ಮನಸ್ತಾಪ ಗೊಂಡಿರುತ್ತಿರುವನು. ಮೊನಿಕಳು ಹೊಂತುಂಟ್ಲೇ ಎದ್ದು, ಬಂದು, ಆ ಹಡಗವು ಹೋಯಿತೆಂತ, ಗೋಳಾಡಿ, ದುಃಖಿತಳಾಗಿ, ಕರ್ಥಾಗೊವಿಗೆ ತಿರುಗಿದಳು.

ಔಗುಸ್ತೀನನು ರೋಮಕ್ಕೆ ಮುಟ್ಟಿ ಸ್ವಲ್ಪ ಕಾಲ ಹೋದನಂತರ[2] ಮರಣ ಕಂಟಕದ ರೋಗದವನಾದನು; ಆದರೂ ಕ್ಷೇಮವು ಬೇಗ ಅವನ ಕಡೆಗೆ ತಿರುಗಿತು. ಅದನ್ನು ಕುರಿತು ಅವನು ತನ್ನ ಜೀವನಚರಿತ್ರದಲ್ಲಿ ಬರೆದದೇನಂದರೆ—ನಾನು ಆಗ ನನ್ನ ಪಾಪಗಳಲ್ಲಿ ಸಾಯದ್ದು ನನ್ನ ಭಕ್ತಿವಂತಳಾದ ತಾಯಿಯ ಪ್ರಾರ್ಥನೆಗಳ ಫಲವೇ, ಸರಿ!—ಅವನು ಗುಣ ಪಟ್ಟು ಬಹಳ ದಿವಸ ಕಳೆಯದ್ದಕ್ಕಿಂತ ಮುಂಚೆ, ಮಿಲಾನೊ ಪಟ್ಣಕ್ಕೆ ಬಂದು ವಾಕ್ಚಾತುರ್ಯವೃತ್ತಿ ನಡಿಸ ಬೇಕೆಂತ, ಅವನಿಗೆ ನಿರ್ದೇಶವಾಯಿತು. ಆ ವೇಳೆ ಅಂಬ್ರೊಸಿಯನು ಅಲ್ಲಿ ವೆಗ್ಗಳ ಆಶೀರ್ವಾ

---

1) 226ನೇ ಪಾನು. 2) ಆಗ ಹಿಯೆರೋನುಮ ಸಭಾಬೋಧಕನು ರೋಮದಲ್ಲಿ ಬಂದಿರುತ್ತಿದ್ದನು, 173ನೇ ಪಾನು.

ದದೊಡನೆ ಸಭಾಧ್ಯಕ್ಷತೆ ನಡಿಸುತ್ತಿದ್ದನು. ಔಗುಸ್ತೀನನು ಅಲ್ಲಿಗೆ ಹೋಗಿ, ಅವನ ಕೀರ್ತಿಯ ಸುದ್ದಿ ಕೇಳಿ, ಅವನಿಗೆ ಭೇಟಿ ಕೊಟ್ಟನು; ಅಂಬ್ರೊಸಿಯನು ಅವನಿಗೆ ಬಹಳ ವಾತ್ಸಲ್ಯ ತೋರಿಸಿದನು. ಔಗುಸ್ತೀನನು ಇದಕ್ಕೆ ಮೆಚ್ಚಿದ್ದಲ್ಲದೆ—ಆ ಅಧ್ಯಕ್ಷನು ತನ್ನ ಪ್ರಸಂಗಗಳಿಂದ ಲೋಕಪ್ರಸಿದ್ಧನಾಗಿದ್ದಾನೆ; ಅದವನಿಗೆ ಯೋಗ್ಯವೋ? ಅಲ್ಲವೋ? ವಿಚಾರಿಸ ಬೇಕೆಂತ, ದೇವಾಲಯಕ್ಕೈದಿ, ಅಂಬ್ರೊಸಿಯನ ಪ್ರಸಂಗದ ತರಕ್ಕೆ ಆಶ್ಚರ್ಯ ಪಟ್ಟು, ತದನಂತರ, ನಾನು ಸಹ ನನ್ನ ಉದ್ಯೋಗದಲ್ಲಿ ಅಂಥಾ ತರದಿಂದ ಕೀರ್ತಿ ಗೊಂಡೇನೆಂತ, ಅದನ್ನು ಕಲಿತು ಕೊಳ್ಳುವ ನಿಮಿತ್ತ ಅನೇಕಾವರ್ತಿ ಅವನ ದೇವಾಲಯಕ್ಕೆ ಗಮಿಸುತ್ತಿದ್ದನು[1]. ಹೀಗಿರಲಾಗಿ ಅವನು ಕೇಳಿದ ಪರಿಶುದ್ಧ ಬರಹದ ಮಾತುಗಳಲ್ಲಿ ಹಲವು ಅವನ ಮನಸ್ಸಾಕ್ಷಿಗೆ ಹೊಕ್ಕವು; ಇವುಗಳ ದಿವ್ಯ ಬೆಳಕಿನ ಮೂಲವಾಗಿ ಅವನು ಮಣಿಕೇಯತ್ವವನ್ನು ಪೂರಾ ವಿಸರ್ಜಿಸಿದನು. ದೇವರು ಅವನ ಹೃದಯ ಗೆಲ್ಲಲಿಕ್ಕೆ ಹಾಗೆ ಸ್ಪಷ್ಟ ಪ್ರಯತ್ನ ಗೈಯುವ ಆ ದಿವಸಗಳಲ್ಲಿ ದೇವರ ಪ್ರೇರಣೆಯಿಂದ ಸಹ ಔಗುಸ್ತೀನನ ತಾಯಿಯು ಸಮುದ್ರಪ್ರಯಾಣದ ಮೇಲೆ ತನಗಿದ್ದ ಭಯ ಕಳೆದು ಬಿಟ್ಟು, ಹಡಗವೇರಿ, ಮಹಾ ಬಿರುಘಾಳಿ ಎದ್ದಲ್ಲಿ ಧೈರ್ಯ ಗುಂದಿದ ಹಡಗದವರಿಗೆ ದೃಢ ಧೈರ್ಯ ಕೊಡಲಿಕ್ಕಾದರೂ ಸಮರ್ಥಳಾಗಿ, ಸುರಕ್ಷಿತಳಾಗಿ ಮಿಲಾನೊವಿಗೆ ಬಂದು ಮುಟ್ಟಿ, ತನ್ನ ಮಗನನ್ನು ಅಶ್ರುಧಾರೆಯೊಡನೆ ಅಪ್ಪಿ ಕೊಳ್ಳಲು, ಇವನು, ನಾನು ಇನ್ನು ಕ್ರೈಸ್ತನಾಗದಿದ್ದರೂ ಮಣಿಕೇಯನಲ್ಲದವನಾಗಿದ್ದೇನೆಂತ, ಅವಳಿಗೆ ಅರಿಕೆ ಮಾಡಿದನು. ಅಂಬ್ರೊಸಿಯನು ಮೊನಿಕಳ ದೇವಭಕ್ತಿಗೆ ವಿಸ್ಮಿತನಾಗಿ, ದೇವಾಲಯದಲ್ಲಿ ಅವಳನ್ನು ಕಾಣುವಾಗಿಂದಾಗ್ಯೆ ಸಭೆಯ ಮುಂದೆ ಅವಳನ್ನು ಕೊಂಡಾಡುವದು ಬಿಡಲಾರದಿರುವನು; ಆದರೆ ಮೊನಿಕಳಿಗೆ ಆ ಸದ್ಭಕ್ತಿಯುಳ್ಳ ಅಧ್ಯಕ್ಷನ ಸಲಿಗೆಯಿಂದ ಅಧಿಕ ಹೃದಾದರಣೆ ಪ್ರಾಪ್ತವಾಗುತ್ತಿರುವದು. ಅಷ್ಟಕ್ಕೆ ಔಗುಸ್ತೀನನ ಪ್ರಾಣಗೆಳೆಯರಲ್ಲಿಬ್ಬರು ಸಹ ಇವನ ಮೇಲಿನ ಸ್ನೇಹದಿಂದ ಮಿಲಾನೊವಿಗೆ ಬಂದರು; ಅವರು ಅವನಂಥಾ ಅನುಭವದವರೇ; ಅದೇ ಸಂಶಯವೂ ಅದೇ ನಿರ್ಬಲತ್ವವೂ ಸತ್ಯ ಕಂಡು ಕೊಳ್ಳ ಬೇಕೆಂಬ ಅದೇ ಕಾಂಕ್ಷೆಯೂ ಅವರಿಬ್ಬರಿಗೂ ಇರುತ್ತಿದ್ದವು. ಆ ಮೇಲೆ ಔಗುಸ್ತೀನನು ಮೂವರಾದ ತಮ್ಮ ಆಗಿನ ಸ್ಥಿತಿ ನೆನಸಿ—ನಾವು ಮೂವರು ಬಾಯಾರಿ ಹಶಿವೆ ಪಡುವವರಂತೆ ಒಬ್ಬರಿಗೊಬ್ಬರು ನಮ್ಮ ಸಂಕಟ ಹೇಳಿ ಕೊಳ್ಳುತ್ತಾ, ಓ ದೇವರೇ, ನೀನು ತಕ್ಕ ಕಾಲಕ್ಕೆ ಆಹಾರ ಕೊಡುವ ದಾರಿ ನೋಡಿ ಕೊಳ್ಳುತ್ತಾ ಇದ್ದೆವು! ಎಂತ, ವರ್ಣಿಸಿದನು. ಕ್ರೈಸ್ತನಾಗುವದಕ್ಕೆ ಔಗುಸ್ತೀನನಿಗೆ ಮಾಂಸದ ಇಚ್ಛೆಯು ವಿಶೇಷವಾಗಿ ಅಭ್ಯಂತರ ಹಾಕುತ್ತಿತ್ತು; ಅವನ ತಾಯಿಯು ಬೇಡಿ ಕೊ

1) 219ನೇ ಪಾನು.

ಳ್ಳುತ್ತಲೇ ಇದ್ದದರಿಂದ ಅವನು ತಾನು ಇಟ್ಟು ಕೊಂಡಿದ್ದ ಆ ಸ್ತ್ರೀಯನ್ನು[1] ತನ್ನ ಜೀವತ್ವದ 31ನೇ ವರುಷದಲ್ಲಿ ಕಳುಹಿಸಿ ಬಿಟ್ಟನು; ಆದರೆ ಅಂದೇ ಮದುವೆಗೆ ಅನುವು ಶಿಕ್ಕದಿರಲು, ಮುಂಚಿನಂತೆ ಕಾಮವೃತ್ತನಾದನು. ಮನಸ್ಸಾಕ್ಷಿಯ ಶಿಕ್ಷೆಯಿಂದ ಅವನ ಅಸಮಾಧಾನವು ದಿನದಿನಕ್ಕೆ ಏರುತ್ತಲಿತ್ತು. ಕಾಲಗತಿಯಲ್ಲಿ ದೇವರ ಕೈಯು ಅವನನ್ನು ಸಿಂಪ್ಲಿಕಿಯಾನನೆಂಬವನೊಬ್ಬ ಮುದೀ ಕ್ರೈಸ್ತನ ಬಳಿಗೆ ಕರದೊಯ್ಯಿತು; ಅಂಬ್ರೊಸಿಯನಾದರೂ ಈ ಭಕ್ತನಿಗೆ ತನ್ನ ತಂದೆಯೆಂಬಂತೆ ಮನ್ನಣೆ ಮಾಡುತ್ತಿರುವನು. ಔಗುಸ್ತೀನನು ಸಿಂಪ್ಲಿಕಿಯಾನನ ಮೇಲೆ ಅತ್ಯಂತ ವಿಶ್ವಾಸವಿಡುವವನಾಗಿ, ತನ್ನ ಇಂಗಿತವನ್ನೆಲ್ಲಾ ಅವನಿಗರುಹಿದಂದಿನಿಂದ ಆ ಮುದುಕನು ಅವನಿಗೆ ರಕ್ಷಣಾರ್ಥವುಳ್ಳ ಬುದ್ಧಿ ಹೇಳುತ್ತಿರಲು, ಒಂದು ದಿನ ವಿಕ್ತೋರೀನನೆಂಬವನೊಬ್ಬನು ಹೃತ್ಪರಿಣಾಮ ಪಟ್ಟ ಚರಿತ್ರವನ್ನು ಸಹ ಅವನ ಅನುಭವಕ್ಕಾಗಿ ವಿವರಿಸಿದನು; ಎಂತೆಂದರೆ—ವಿಕ್ತೋರೀನನೆಂಬವನು ಆಫ್ರಿಕದಲ್ಲಿ ಹುಟ್ಟಿ, ವಾಕ್ಪಟುತಾಪಂಡಿತನಾಗಿ, ರೋಮಪುರಕ್ಕೆ ಬಂದು, ಅಲ್ಲಿಯ ಶ್ರೇಷ್ಠ ನಿವಾಸಿಗಳ ಉಪಾಧ್ಯಾಯನಾಗಿದ್ದು, ಆ ವರೆಗುಳಿದಿರುವ ಮೂರ್ತಿಪೂಜಕತ್ವದ ಮುಖ್ಯ ಆಧಾರವೆನ್ನಿಸಿಕೊಳ್ಳುವವನಾದನು. ಆದ್ದರಿಂದ ರೋಮದಲ್ಲಿಯ ವಿಗ್ರಹಾರಾಧಕರು ಕ್ರಿ. ಶ. 354ನೇ ವರುಷ ಅವನ ಹೆಸರಿನ ದೊಡ್ಡಸ್ತಿಕೆಗಾಗಿ ತ್ರಾಯಾನ ಕೈಸರನ ಸಂತೆಬೈಲೆಂಬಲ್ಲಿ ಅವನ ಪ್ರತಿರೂಪದ್ದೊಂದು ಸ್ತಂಭ ರಚಿಸಿಟ್ಟರು. ಅವನು ಬಹಳ ಮುದುಕನಾದ ಹಿಂದೆ ಸರ್ವಜ್ಞಾನಾಶೆಯ ದೆಸೆಯಿಂದ ಪರಿಶುದ್ಧ ಬರಹವನ್ನು ಸಹ ಓದಲಿಕ್ಕೆ ತೊಡಗಿ, ಅದರ ದಿವ್ಯ ಅರ್ಥವು ಹೃದಂತರಂಗಕ್ಕೆ ತಾಗಿದವನಾಗಿ, ಕ್ರೂಜೆಯಲ್ಲಿ ಸತ್ತ ಕ್ರಿಸ್ತನ ಮೇಲೆ ಪ್ರೀತಿಯುಳ್ಳವನಾದನು. ಬಳಿಕ ಅವನು ನನ್ನ ಹತ್ತಿರ ಬಿಜ ಮಾಡಿ, ತನಗಾದ ಅನುಭವವನ್ನು ನನಗೆ ತಿಳಿಸಿದನು; ಆದರೆ ಬಹಿರಕ್ಕೆ ಕ್ರಿಸ್ತನ ಹೆಸರನ್ನು ನಿವೇದಿಸಲಿಕ್ಕೆ ಭಯ ಪಟ್ಟನು; ತನ್ನ ಐಶ್ವರ್ಯವಂತರಾದ ಹಿತಕರರ ಮೆಚ್ಚಿಗೆ ತಪ್ಪಿ ಹೋದೀತಲ್ಲವೋ? ನಾನು ಅವನಿಗೆ ಧೈರ್ಯ ಹೇಳಿ ಕೊಡುತ್ತಿರಲು, ಒಂದಾನೊಂದು ದಿವಸ ಅವನು ಬಂದು—ದೇವಾಲಯಕ್ಕೆ ಹೋಗೋಣ! ಯಾಕಂದರೆ ನನ್ನ ಕರ್ತನಾದ ಕ್ರಿಸ್ತನ ಹೆಸರನ್ನು ಬೈಲಾಗಿ ಅರಿಕೆ ಮಾಡುವೆನೆಂದು, ನುಡಿದನು. ಆಗ ನಾನು ಬಹು ಸಂತೋಷ ಗೊಂಡು, ಅವನನ್ನು ಒಂದು ದೇವಾಲಯಕ್ಕೆ ಕರಕೊಂಡು ಹೋದೆನು. ಮೂರ್ತಿಪೂಜಕರು ಅದು ಕೇಳಿ, ಕಂಡು, ಮಹಾ ಕೋಪದಿಂದ ಹಲ್ಲು ಕಡಿದರೂ ವಿಕ್ತೋರೀನನು ಕರ್ತನ ಮೇಲೆ ದೃಷ್ಟಿ ಇಟ್ಟು, ಶಾಂತನಾಗಿರುತ್ತಿದ್ದನು. ಅವನು ಸ್ನಾನ ಹೊಂದ ತಕ್ಕ ವೇಳೆ ಒದಗಿರಲು, ಕ್ರೈಸ್ತ ಬೋಧಕರು—ಬೇಕಾದರೆ ನೀವು ದೇವಾಲಯವಲ್ಲದ ಒಂದು ಸ್ಥಳ

---

1) 233ನೇ ಪಾನು.

ದಲ್ಲಿ ಕ್ರೈಸ್ತ ವಿಶ್ವಾಸಪ್ರಮಾಣ ಹೇಳ ಬಹುದೆನ್ನಲಿಕ್ಕೆ, ಅವನು ಹ್ಯಾಗೂ ಒಪ್ಪದೆ, ದೇವಾಲಯದೊಳಗೆಯೇ ಸಭೆಯು ಹರ್ಷಧ್ವನಿ ಗೈಯುವಲ್ಲಿ ತನ್ನ ವಿಶ್ವಾಸಾರ್ಥ ಸಾರಿ, ತದನಂತರ ತನ್ನ ವಾಕ್ಚಾತುರ್ಯಪಾಂಡಿತ್ಯದ ಉದ್ಯೋಗ ಬಿಟ್ಟು, ಪ್ರಸಂಗ ಗ್ರಂಥಗಳಿಂದ ತನ್ನ ಕರ್ತನೊಬ್ಬನಿಗೆಯೇ ಸೇವಿಸಲೆಸಗಿ, ಕ್ರಿ. ಶ. 370ನೇ ವರುಷದಲ್ಲಿ ಸಮಾಧಾನದಿಂದ ತೀರಿದನು.—ಔಗುಸ್ತೀನನು ಅದನ್ನಾಶ್ರವಿಸಿದಾಗಲೇ, ನಾನು ಸಹ ಅಂಥ ಧೈರ್ಯವುಳ್ಳ ಸಾಕ್ಷಿಗಾರನಾಗ ಬೇಕೆಂಬ ಉರಿಯು ಅವನೊಳಗೆ ಹುಟ್ಟಿತು. ಬಳಿಕ ಒಂದು ದಿನ ಅವನು ಹಿಂದೆ ಸೂಚಿಸಿರುವ ಆ ಇಬ್ಬರು ಪ್ರಾಣಮಿತ್ರರಲ್ಲಿ ಅಲೂಪಿಯನೆಂಬವನ ಸಹಿತ ಬೇರೊಬ್ಬ ಕ್ರೈಸ್ತನೆಡೆಗೆ ಹೋಗಿರಲು, ಇವನು ಹೇಳಿದ ವರ್ತಮಾನದಿಂದ ಅವನ ಮನಸ್ಸು ಪೂರಾ ಒಡೆಯಿತು; ಅದೇನೆಂದರೆ—ಗೆರ್ಮಾನಿಯದ್ದೊಂದು (ದೇಶವಾದ ಪ್ರುಸ್ಸಿಯದ) ರೈನೆಂಬ ನದಿಯ[1] ಒಂದು ಸಂಗಮಹೊಳೆಯಲ್ಲಿರುವ ತ್ರೀರೆಂಬ ಪಟ್ಣದಲ್ಲಿ ಇಬ್ಬರು ಸೈನಿಕರು ಅಕಸ್ಮಾತ್ತಾಗಿ ಬಡ ಕ್ರೈಸ್ತರದೊಂದು ಮನೆಯಲ್ಲಿ ಒಟ್ಟು ಗೂಡಿ, ಮೊದಲಿನ ಸರ್ತಿ ಪರಿಶುದ್ಧ ಬರಹದ ಒಂದು ಗ್ರಂಥ ನೋಡಿ, ಓದುತ್ತಲೆ ಅದರ ಅರ್ಥವು ಅವರಿಗೆ ಸಲೆ ಸೊಗಸಿತು. ಅದಕ್ಕಾಗಿ ಅವರಲ್ಲೊಬ್ಬನು ಅಂದದ್ದೇನು—ನಾವು ಈಗ ಅನಂತ ಕಷ್ಟ ತಾಳಿ ಹೋಗುತ್ತಿರುವ ಗುರಿ ಯಾವದು? ಕೈಸರನ ಗೆಳೆಯರಾಗ ಬೇಕೆಂಬದಲ್ಲದೆ ಬೇರೊಂದೂ ಪ್ರತೀಕ್ಷೆಯೂ ನಮಗೆ ಇರುತ್ತಿರಲಿಲ್ಲವಲ್ಲ? ಆದರೆ ನಮಗೆ ಮನಸ್ಸಿದ್ದರೆ ನಾವು ದೇವರ ಗೆಳೆಯರೇ ಆಗ ಬಹುದಲ್ಲ? ಹ್ಯಾಗೂ ನಾನು ದೇವರ ಗೆಳೆಯನಾಗುವೆನು!—ಆಗ ಮತ್ತೊಬ್ಬನು, ನೀನಿರುವಲ್ಲಿ ನಾನು ಸಹ ಇರುವೆನು! ಎಂದು, ಉತ್ತರ ಕೊಟ್ಟನು. ತತ್ಕ್ಷಣವೇ ಉಭಯತರು ಸೇನೋದ್ಯೋಗ ಕಳೆದು, ಕ್ರಿಸ್ತನ ಸೇವಕರಾದರು.—ಇದನ್ನಾಲೈಸುತ್ತಿರುವಷ್ಟರಲ್ಲಿ ಔಗುಸ್ತೀನನು ಹೃತ್ತಾಪದ ಅಗ್ನಿಯು ಮುಖಕ್ಕೇರಿದವನಾಗಿ, ಸ್ತಬ್ಧನಾಗಿ ಕೂತಿದ್ದು, ಆ ವರ್ತಮಾನ ಹೇಳಿದ್ದ ಮಿತ್ರನು ಹೋದ ತರುವಾಯ ಆ ಅಲೂಪಿಯನ ಮುಂದೆ—ಓ ಅಲೂಪಿಯನೇ, ಅದೇನು? ಅಪಂಡಿತರು ಸಹ ಮನಸ್ಸು ಹಿಡು ಕೊಂಡು, ಪರಲೋಕದ ರಾಜ್ಯವನ್ನು ಸ್ವತಂತ್ರಿಸಿ ಕೊಳ್ಳುತ್ತಾರೆ; ಆದರೆ ನಾವು ಬಹು ವಿದ್ಯೆ ಕಲಿತಿದ್ದರೂ ನಮ್ಮ ಹೃದಯವು ಕಾಷ್ಟದಂತಿದ್ದು, ನಾವು ಪಾಪದ ಕಲ್ಮಷದಲ್ಲಿ ಹೊರಳಾಡುವದೇನು? ಎಂತ, ಕೂಗುತ್ತಲೇ ಅವನನ್ನಗಲಿ, ಮನೆಯ ಹಿತ್ತಲಿನ ತೋಟಕ್ಕೆ ಓಡಿ ಹೋದನು. ಅಲೂಪಿಯನು ಅವನ ಧ್ವನಿಯ ವಿಕಾರಕ್ಕೂ ಮುಖದುರಿಗೂ ಅಂಜಿ, ತ್ವರೆಯಿಂದ ಅವನ ಬೆನ್ನಟ್ಟಿ ಕೊಂಡು ಬಂದು, ಅವನು ಅತಿರಿಕ್ತವ್ಯಸನಪೂರಿತನಾದದ್ದನ್ನು ಕಂಡನು. ಆ ಹೊತ್ತಿನ ವಿಷಯ ಔಗುಸ್ತೀನನು ಹಿಂದಗ

1) 88ನೇ ಪಾನು.

ಡೆ ಬರದದ್ದೇನಂದರೆ—ಈಗಲೇ ಆಗ ಬೇಕು! ಅಗತ್ಯವಾಗಿ ಈಗಲೇ ಆಗ ಬೇಕು! ಎಂಬ ನುಡಿಯು ಹೃದಯದೊಳಗೆ ಕೇಳಿಸಿತು; ಬಳಿಕ ನನ್ನ ಪಾಪಗಳು—ನೀನು ನಮ್ಮನ್ನು ಬಿಟ್ಟು ಬಿಡುವಿಯೋ? ನಾವು ಎಂದೆಂದಿಗೂ ಇನ್ನೂ ನಿನ್ನಲ್ಲಿ ವಾಸವಾಗಿರ ಬಾರದೋ? ಹಾಗಾದರೆ, ಸದಾಕಾಲಕ್ಕೆ ನಿನಗೆ ನಮ್ಮಿಂದ ಇನ್ನು ಆನಂದ ಬರಲಿಕ್ಕಿಲ್ಲವೆಂತ, ಚಂದಾಗಿ ಚಿಂತಿಸಿ ಕೋ! ನಾವಿಲ್ಲದೆ ನೀನು ಬದುಕುವದುಂಟೇ? ಎಂತ, ಒದರಿ, ನನ್ನ ಶರಗು ಬಿಗಿ ಹಿಡು ಕೊಂಡ ಹಾಗಾಯಿತು.—ಅವನೊಳಗಿನ ಯುದ್ಧವು ಹೆಚ್ಚು ಹೆಚ್ಚಾದ ಮೇಲೆ ಕಡೆಯಲ್ಲಿ ಅಶ್ರುಗಳ ಧಾರೆಯು ಅವನ ಕಣ್ಣಿನಿಂದ ಹೊರಟಿತು. ಆಗಲವನು ಎದ್ದು, ಮುಂದಕ್ಕೋಡಿ, ಒಂದು ಅಂಜೂರದ ಮರದಡಿಗೆ ಬಿದ್ದು ಕೊಂಡು—ಅಕಟಾ, ಕರ್ತನೇ, ಎಷ್ಟೋ ಕಾಲ! ಓ ಕರ್ತನೇ, ಎಷ್ಟೋ ಕಾಲ ಮುನಿಯುವಿ? ನಾಳೆ, ನಾಳೆ! ಎಂಥೇಳುವದು ಇನ್ನೂ ಎಷ್ಟು ಕಾಲಕ್ಕೆ? ಈಗಲೇ ಆಗ ಬಾರದೇ? ಈಗಲೇ ನನ್ನ ಅಪಮಾನವು ತೀರ ಬಾರದೇ? ಎಂದು, ದೇವರ ಕಿವಿಗೆ ಮೊರವೊರೆಯುವಲ್ಲಿ ಒಂದು ಕೂಸು—ತಕ್ಕೊಂಡು ಓದು! ತಕ್ಕೊಂಡು ಓದು! ಎಂತ, ಅನೇಕ ಸಾರಿ ಹಾಡಿ ಹೇಳಿದ ಹಾಗಾಯಿತು. ಔಗುಸ್ತೀನನು ಕಳೆಗುಂದಿ—ಮಕ್ಕಳು ಆಟದಲ್ಲಿ ಹೀಗೆ ಹೇಳುವದನ್ನು ನಾನೆಂದಿಗೂ ಕೇಳಿಲ್ಲ; ಅದು ದೇವರ ಕಡೆಯ ಮಾತೇ! ಎಂತ, ತಿಳಿದು, ಅಲೂಪಿಯನ ಬಳಿಗೆ ತಿರುಗಿ, ಅಲ್ಲಿರುವ ಪರಿಶುದ್ಧ ಬರಹದ್ದೊಂದು ಗ್ರಂಥ ಬಿಚ್ಚಿದಂದೇ ಅವನ ದೃಷ್ಟಿಗೆ ಬಿದ್ದ ಮಾತೇನಂದರೆ—ಹಗಲಿಗೆ ತಕ್ಕ ಹಾಗೆ ಯುಕ್ತವಾಗಿ ನಡೆಯುವ! ದುಂದುತನಗಳಲ್ಲಿಯೂ ಅಮಲುಗಳಲ್ಲಿಯೂ ಅಲ್ಲ, ಸೂಳೆತನಗಳಲ್ಲಿಯೂ ಬಂಡುತನಗಳಲ್ಲಿಯೂ ಅಲ್ಲ, ಜಗಳದಲ್ಲಿಯೂ ಹೊಟ್ಟೆಕಿಚ್ಚಿನಲ್ಲಿಯೂ ಅಲ್ಲ! ಆಶೆಗಳಿಗಾಗಿ ಮಾಂಸದ ಚಿಂತೆ ಮಾಡದೆ, ಕರ್ತನಾದ ಯೇಸು ಕ್ರಿಸ್ತನನ್ನು ಧರಿಸಿ ಕೊಳ್ಳಿರಿ[1]!—ಅವನು ಹೆಚ್ಚು ಓದಲಿಲ್ಲ, ಅದೇ ಅವನಿಗೆ ಸಾಕಾಯಿತು; ಕರ್ತನ ಅಪ್ಪಣೆ ಏನೆಂತ, ಅದರಿಂದಲೇ ಗ್ರಹಿಸಿದ್ದನು. ಹೀಗಿರಲಿಕ್ಕೆ ಅವನು ಶಾಂತಿಭರಿತನಾಗಿ, ಅಲೂಪಿಯನಿಗೆ ಆ ವಚನ ತೋರಿಸಲು, ಇವನು ಅದನ್ನಲ್ಲದೆ ಮುಂದಿನದನ್ನು ಸಹ ಓದಿದನು; ಅದೇನಂದರೆ—ವಿಶ್ವಾಸದಲ್ಲಿ ಬಲಹೀನನಾದವನನ್ನು (ದಯೆಯಿಂದ) ಅಂಗೀಕರಿಸಿರಿ!—ಈ ವಚನವನ್ನು ಅವನು ತನ್ನ ಧೈರ್ಯಾಭಿವೃದ್ಧಿಗೆ ಉಪಯೋಗಿಸಿ ಕೊಂಡು, ಔಗುಸ್ತೀನನಿಗೆ ತೋರಿಸಿ, ಇವನಿಗೆ ಬಂದಿರುವ ಅದೇ ಪಂಥ ಹಿಡು ಕೊಂಡನು. ಆ ಸಮಯ ಅವರಿಬ್ಬರು ಮೊನಿಕಳಿದ್ದಲ್ಲಿಗೆ ಹೋಗಿ, ನಡದ್ದು ತಿಳಿಸಿದರು. ಅವಳಿಗಾದ ಚಿದುಲ್ಲಾಸವನ್ನೂ ಅವಳಾಡಿದ ದೇವಸ್ತೋತ್ರಗಳನ್ನೂ ವರ್ಣಿಸುವದು ಅಸಾಧ್ಯ; ತಾನು ನಿಟ್ಟುಸುರು ಕಣ್ಣೀರುಗಳಿಂದ ಬೇಡಿ ಕೊಳ್ಳುತ್ತಿದ್ದದಕ್ಕಿಂತ ಹೆಚ್ಚು ತನಗೆ

1) ರೋಮಾ. 13, 13—14.

ದೊರಕಿತ್ತಲ್ಲವೋ? ಅಂದಿನಿಂದ ಔಗುಸ್ತೀನನು ಲೌಕಿಕ ಮಾನ ಲಾಭಗಳ ಆಶೆಯನ್ನೆಲ್ಲಾ ತೀರಾ ತ್ಯಜಿಸಿ, ಬಹು ಕೃತಜ್ಞತೆಯಿಂದ ಕರ್ತನೋಲಗ ಮಾಡುವವನಾದನು.

ಮರುವರುಷದಲ್ಲಿ ಅಂದರೆ ಕ್ರಿ. ಶ. 387ನೇದರಲ್ಲಿ ಅವನು 15 ವರುಷದವನಾದ ಆದೆಯೊದತನು (ದೇವರಿಂದ ದತ್ತನಾದವನು) ಎಂಬ ತನ್ನ ಮಗನ ಸಂಗಡ ಹೋಗಿ, ಅಂಬ್ರೊಸಿಯನ ಕೈಯಿಂದ ಸ್ನಾನ ಹೊಂದಿದನು. ಈ ಆದೆಯೊದತನು ತಂದೆಗೆ ಅತಿ ಪ್ರಿಯನು; ದೊಡ್ಡ ಪ್ರಾಯದ ಪಂಡಿತರಿಗಿಂತಲೂ ಅಧಿಕ ಬುದ್ಧಿಯು ಅವನಿಗಿತ್ತಲ್ಲ? ಔಗುಸ್ತೀನನು ಸ್ನಾತನಾಗಿ, ತಡ ಮಾಡದೆ, ತನ್ನ ತಾಯಿಯನ್ನೂ ಕೆಲವು ಮಂದಿ ಸ್ನೇಹಿತರನ್ನೂ ಕರಕೊಂಡು, ಆಫ್ರಿಕಕ್ಕೆ ಹೊರಡುವದಕ್ಕೆ ಒಂದು ಬಂದರಸ್ಥಳದ್ದೊಂದು ಛತ್ರದಲ್ಲಿ ಬಂದುಳು ಕೊಂಡು, ಕಿಟಕಿಯ ಹತ್ತರ ತನ್ನ ತಾಯಿಯೊಡನೆ ದಿವ್ಯ ಸಂಭಾಷಣೆ ಗೈಯುತ್ತಿರಲು, ಮೊನಿಕಳು—ನಾನು ಇಹದಲ್ಲಿ ಇನ್ನೂ ಇರುವದು ಯಾತಕ್ಕೆ? ನಾನರಿಯೆನು. ಇಹದ ಜೀವವು ನನಗೆ ಕಾಂಕ್ಷಿತವಾಗಿದ್ದದಕ್ಕೆ ಒಂದೇ ಕಾರಣ ಮಾತ್ರ ಇತ್ತು; ದೇವರ ಅಮಿತ ಕೃಪೆಯಿಂದ ಅದು ಹೋಗಿ, ನಾನು ಪ್ರತೀಕ್ಷಿಸುತ್ತಿದ್ದದು ಪ್ರಾಪಿಸಿತಲ್ಲ? ಕಂದಾ, ನೀನು ರಕ್ಷಿತನಾಗಿ, ದೇವರ ಸೇವಕನಾಗಿದ್ಧಿಯಲ್ಲ? ಹಾಗಾದರೆ ನಾನು ಇಹದಲ್ಲಿ ಇನ್ನೂ ಇರುವದು ಯಾತಕ್ಕೆ? ಎಂದು, ನುಡಿದು, ಐದಾರು ದಿವಸ ಹೋದ ಮೇಲೆ ರೋಗಿಷ್ಠಳಾಗಿ, ತನ್ನ ರೋಗದ 9ನೇ ದಿವಸದಲ್ಲಿ, ತನ್ನ ಜೀವತ್ವದ 56ನೇ ವರುಷದಲ್ಲಿ, ಸಮಾಧಾನವಾಗಿ ಪರವನ್ನೈದಿದಳು. ಔಗುಸ್ತೀನನು ಆಫ್ರಿಕಕ್ಕೆ ಹೋಗಿ ಸ್ವಲ್ಪ ಕಾಲವಾದನಂತರವೇ ಆದೆಯೊದತನೆಂಬ ಮಗನು ಸಹ ತೀರಿದನು. ಈ ಪ್ರಕಾರ ಅವನಿಗೆ ಬಹಳ ದುಃಖವಾಯಿತು; ಆದರೆ ಕರ್ತನ ವಾಕ್ಯದ ಆದರಣವು ಮಿಗಿಲಾಯಿತು. ಅವನು ತನಗೆ ಅತ್ಯವಶ್ಯವಾಗದ್ದನ್ನೆಲ್ಲಾ ಮಾರಿ, ಬಡವರಿಗೆ ಕೊಟ್ಟು, ತನ್ನ ಸ್ವಪಟ್ಣವಾದ ತಗಸ್ತೆಯ ಹತ್ತರದ ಒಂದು ಹಳ್ಳೀ ಮನೆಯಲ್ಲಿ ವಸ್ತಿ ಮಾಡಿಕೊಂಡಿರುತ್ತಿದ್ದನು. 3 ವರುಷದ ಮೇಲೆ ಹಿಪ್ಪೊ ಪಟ್ಣದ ಒಬ್ಬ ಸ್ಥಿತಿವಂತನು, ತನಗೆ ಉಪದೇಶ ಹೇಳ ಬೇಕೆಂತ, ಅವನನ್ನು ಕರಿಸಿದಾಗ ಅವನು ಅಲ್ಲಿಗೆ ಹೋದನು.

ಅಲ್ಲಿಯ ಭಕ್ತಿಯುಳ್ಳ ಅಧ್ಯಕ್ಷನಾದ ವಲೇರಿಯನು ತನ್ನೊಳಗಿನ ಸಭ್ಯರ ಕಾಂಕ್ಷೆಯ ಮೇರಿಗೆ ಕ್ರಿ. ಶ. 392ನೇ ವರುಷದಲ್ಲಿ ಅವನನ್ನು, ಸಭೆಯ ಹಿರಿಯನೆಂತ, ನೇಮಿಸಿದ ಹಿಂದೆ ಅವನ ಪ್ರಸಂಗಗಳಿಂದ ಸಭ್ಯರೆಲ್ಲರ ವಿಶ್ವಾಸವು ದಾರ್ಢ್ಯಗೊಳ್ಳುತ್ತಿರಲು, ಮುದಿತನದಿಂದ ಬಲಹೀನನಾದ ವಲೇರಿಯನು ಕ್ರಿ. ಶ. 395ನೇದರಲ್ಲಿ ಅವನನ್ನು, ತನ್ನ ಸಹಾಯಾಧ್ಯಕ್ಷನೆಂತ, ತೆಗದು ಕೊಂಡು, ಸ್ವಲ್ಪ ಕಾಲ

ಕ್ಕೀಚೆ ಸತ್ತಾಗ ಔಗುಸ್ತೀನನೇ ಹಿಪ್ಪೊ ಪಟ್ಣದ ಅಧ್ಯಕ್ಷನಾದನು[1]. ಕಾಲಗತಿಯಲ್ಲಿ ಅವನು ನಿರ್ಮಿಸಿದ ಒಂದು ಮಠವು ಬಹಳ ಪ್ರಸಿದ್ಧವಾಯಿತು; ಅದರೊಳಗೆ ಅಭ್ಯಾಸಿಸಿ ಬೋಧಕರಾಗಿ ಶೋಭಿಸುತ್ತಿದ್ದವರಲ್ಲಿ 10 ಜನರಾದರೂ ಮಾನನೀಯ ಸಭಾಧ್ಯಕ್ಷರಾದರು. ಔಗುಸ್ತೀನನು ಉಪದೇಶದಿಂದ ಹೊರ್ತು ಅನೇಕ ಗ್ರಂಥಗಳಿಂದ ಸಹ ಸಭೋಪಕಾರಿಯಾಗುತ್ತಾ ಬಂದನು. ಅಗತ್ಯವಾಗಿ ಬೇಕಾದದನ್ನು ಮಾತ್ರ ತನ್ನ ಹೊಟ್ಟೆಗೆ ಕೊಡುತ್ತಿದ್ದನು; ಅವನ ಮನೆಯ ಸಾಮಾನುಗಳೆಲ್ಲಾ ಹಳೇವು, ಯಾವದೊಂದೂ ಹೊಸದನ್ನು ಕೊಂಡು ಕೊಳ್ಳುವ ಮನಸ್ಸು ಅವನಿಗಿರುವದು ಕಡಿಮೆ; ಅವನು ಈ ರೀತಿಯಾಗಿ ತನ್ನ ಪ್ರಾಪ್ತಿಯಲ್ಲಿ ಉಳಿಸುತ್ತಿರುವದನ್ನು ದರಿದ್ರರಿಗೆ ತ್ಯಾಗ ಮಾಡುತ್ತಿದ್ದನು. ಮನೋದೀನತ್ವವೂ ಶಾಂತಿಯೂ ಅವನ ವಿಶೇಷ ಗುಣಗಳು. ಅವನಿರುವಲ್ಲಿ ಯಾರೂ ಪ್ರೀತಿ ಬಿಟ್ಟು ಮತ್ತೊಬ್ಬರ ಮಾತು ತೆಗಿಯ ಬಾರದು; ಪ್ರೀತಿ ಬಿಟ್ಟು ಮಾತಾಡುವಂಥವನೊಬ್ಬನು ನನ್ನ ಸಂಗಡ ಊಟಕ್ಕೆ ಬರ ಬಾರದೆಂಬ ನುಡಿಯು ಅವನ ಮೇಜಿನಲ್ಲಿ ಕೆತ್ತಿಸಿತ್ತು.

ತನ್ಮಧ್ಯ ಅವನು ತಾನು ಸಹ ಮೋಸಕ್ಕೆ ಬಿದ್ದಿದ್ದ ಆ ಮಣಿಕೇಯ ಮತೋಚ್ಛೇದನಕ್ಕಾಗಿ ಗ್ರಂಥಗಳನ್ನು ರಚಿಸಿ, ಪ್ರಕಟಿಸುತ್ತಿದ್ದನಂತರ ಕ್ರಿ. ಶ. 400ನೇ ವರುಷ ಒಂದು ತರದ ಕ್ರೈಸ್ತ ಶಾಖೆಯ ವಿಸ್ತರಣಕ್ಕೆ ಅಡ್ಡಗಟ್ಟುವದು ಅವನಿಗೆ, ಅಗತ್ಯವೆಂತ, ತೋಚಿತು. ಕ್ರಿ. ಶ. 250ನೇದಕ್ಕೆ ಕುಪ್ರಿಯಾನನು ಕರ್ಥಾಗೊವಿನಲ್ಲಿ ಅಧ್ಯಕ್ಷನಾಗಿರುವಾಗ ಅಲ್ಲಿ ಇನ್ನೂ ಮೊಂತಾನಿಯಾನರೆಂಬ ಕ್ರೈಸ್ತ ಶಾಖೆಯವರು ಇದ್ದರಲ್ಲ? ಮತ್ತು ಇವರಂಥವರಾದ ನೊವಾತಿಯಾನಕರೆಂಬವರು ಅಂದು ರೋಮಪುರದಲ್ಲಿದ್ದು ಎದ್ದರಲ್ಲ[2]? ಔಗುಸ್ತೀನನ ಕಾಲದಲ್ಲಿಯ ಆ ಶಾಖೆಯವರು ಇವರಂಥವರೇ. ಆಫ್ರಿಕದ ಸಮಸ್ತ ಸಭೆಗಳಲ್ಲಿ ಆ ವಿಧದವರು ವೆಗ್ಗಳವಾಗಿ ಉಳಿದಿದ್ದರು. ಅವರು ಸ್ವಲ್ಪ ವಿಷಯಗಳಲ್ಲಿ ಪರಿಶುದ್ಧ ಬರಹದ ನಿಜಾರ್ಥ ತಪ್ಪಿ[3] ಬೋಧಿಸುತ್ತಿದ್ದದೇನಂದರೆ—ದೃಶ್ಯ ಸಭೆಯೂ ಪರಿಪೂರ್ಣ ಪರಿಶುದ್ಧತ್ವದ್ದಾಗಿರ ಬೇಕು; ಸಭ್ಯರೆನ್ನಿಸಿಕೊಳ್ಳುವವರೆಲ್ಲರೂ ಕೇವಲ ನಿಷ್ಕಳಂಕರಾಗಿರ ಬೇಕು.— ಈ ಬೋಧನೆಗನುಸಾರವಾಗಿ ಅವರು ಅನೇಕಾವರ್ತಿ ಪ್ರೀತಿಯನ್ನರಿಯದ ಅತಿ ಕಠಿಣ ಸಭಾಶಿಕ್ಷೆ ನಡಿಸುತ್ತಾ ಇದ್ದರು. ಅದು ಹೊರ್ತಾಗಿ—ಕ್ರೈಸ್ತತ್ವವನ್ನು ಯಾರಿಗೂ ನಿರ್ಬಂಧಿಸಿ ಕೊಡ ತಕ್ಕದಲ್ಲ, ಅದರಲ್ಲಿ ರಾಜಪರಿಪಾಲನ ಸಲ್ಲ ತಕ್ಕದಲ್ಲ; ಆದ ಕಾರಣ ಕ್ರೈಸ್ತತ್ವವು ರಾಜ್ಯಮತವೆನ್ನಿಸ ಬಾರದೆಂದು[4], ಹೇಳುತ್ತಾ ಇದ್ದರು. ಅವರು ತಮ್ಮ ಭಾವಕ್ಕೆ ಮೆಚ್ಚದ ಅಧ್ಯಕ್ಷರೊಳಗೂ ಬಹು ಕಾಲ ಇರುತ್ತಿದ್ದನಂತರ ಕ್ರಿ. ಶ. 311ನೇ ಅಬ್ದ

1) 100ನೇ ಪಾನು. 2) 161ನೇ, 162ನೇ, 163ನೇ ಪಾನು. 3) ಮತ್ತಾ. 13, 24—30; 47—50.
4) 211ನೇ ಪಾನು.

ಸುತ್ತ ಕರ್ಥಾಗೊವಿನಲ್ಲಿ ತಮ್ಮ ಅರ್ಥವುಳ್ಳಂಥ ಅಧ್ಯಕ್ಷರನ್ನು ತಮಗೆ ಹೆಕ್ಕಿ ಕೊಳ್ಳ ಹತ್ತಿದಲ್ಲಿ ಇವರೊಳಗೆ 2ನೇವನಾದ ದೋನಾತನೆಂಬ ಘಟ್ಟಿಗನ ಮೇಲೆ ದೋನಾತಿಸ್ತರೆಂಬ ಹೆಸರು ಹೊಂದಿದ್ದರು. ಬಳಿಕ ಕುಪ್ರಿಯಾನನ ಹಾಗೆ[1] ವಿಚಿತ್ರ ಶಾಖೆಗಳನ್ನು ತಾಳಲಾರದ್ದರಿಂದ ತಾವು ಶಾಖಾಭಾವದವರಾದಂಥ ಅಧ್ಯಕ್ಷರಿಂದಲೂ ಕೈಸರರಿಂದಲೂ ಅವರಿಗೆ ನಾನಾ ತರದ ಉಪದ್ರವ ಒದಗಿ ಬರುತ್ತಿರಲು, ಅವರು ಅಂದಂದು ತಾಳ್ಮೆಗೆಟ್ಟದಕ್ಕೆ ಆಶ್ಚರ್ಯವೇನು? ಆದರೆ ಅವರಿಂದ ಹುಟ್ಟುವಂತಿರುವ ಸಭಾಶುದ್ಧೀರಕ್ಷಣವು ಆ ಪರಿ ಸಂಸಿದ್ಧಿಸ ಕೂಡದಿದ್ದದು ಮಾತ್ರವಲ್ಲದೆ ವಿವಿಧದ ತೊಂದರೆಯೂ ಉದ್ಭವಿಸುತ್ತಾ ಬಂದಿತ್ತು. ಹೀಗಿರಲಿಕ್ಕಾಗಿ ಕ್ರಿ. ಶ. ಆ 400ನೇ ವರುಷ ಔಗುಸ್ತೀನನು ಅವರನ್ನು ತಿರಿಗಿ ಸರಿ ಗೊಳ್ಳಿಸುವೆನೆಂಬ ಹಾಗೆ ಒಂದು ಮತಸಂಭಾಷಣೆಗೆ ಕರೆದನು; ಆದರೆ ಅವರು ಅವನ ಪ್ರಖ್ಯಾತ ಬುದ್ಧಿಗೆ ಶಂಕಿಸಿ, ಅದಕ್ಕೆ ತಪ್ಪಿಸಿ ಕೊಳ್ಳುತ್ತಲಿದ್ದರು. ತದನಂತರ ಅವನು ಅವರ ತಿದ್ದುಪಾಟಕ್ಕೆಂಬಂತೆ ಹಲವು ಸಭಾಸಂಘಗಳನ್ನು ಕೂಡ ಕರಿಸಿದ್ದು ಸಹ ವ್ಯರ್ಥವಾಗಲು, ಹೊನೋರಿಯನೆಂಬ ರೋಮಾಯ ರಾಜ್ಯದ ಕೈಸರನು[2] ಅವರಿಗೆ ಬಲಾತ್ಕಾರ ಮಾಡಿದರೂ ಅವರಿಗೆ ಬೇರೆ ಮನಸ್ಸು ಹುಟ್ಟದ ಕಾರಣದಿಂದ ಆ ಕೈಸರನು, ಹ್ಯಾಗಾದರೂ ಒಂದು ಮತಸಂಭಾಷಣೆಯಾಗ ಬೇಕೆಂತ, ಖಂಡಿತಾಜ್ಞೆ ಪ್ರಕಟಿಸಿದನು. ಅದು ನಿಮಿತ್ತ ಕ್ರಿ. ಶ. 411ನೇ ವರುಷದಲ್ಲಿ 279 ಮಂದಿ ದೋನಾತಿಸ್ತರೆಂಬವರಾದ ಅಧ್ಯಕ್ಷರೂ 286 ಮಂದಿ ಕಥೊಲಿಕರೆಂಬವರಾದ[3] ಅಧ್ಯಕ್ಷರೂ ಕರ್ಥಾಗೊವಿನಲ್ಲಿ ಕೂಡಿದರು; ಔಗುಸ್ತೀನನು ಕಥೊಲಿಕರ ಮುಖ್ಯಸ್ಥನು. ಅಂದಿನ ಸಂಭಾಷಣೆಯು 3 ದಿವಸ ನಡೆದ ಹಿಂದೆ ಕೈಸರನ ಪ್ರತಿನಿಧಿಯು ನ್ಯಾಯನಿರ್ಣಯ ಮಾಡುವಲ್ಲಿ, ಔಗುಸ್ತೀನನು ಸರ್ವಥಾ ಗೆದ್ದಿದ್ದಾನೆಂತ, ಹೇಳಿದನು. ಇದರಿಂದಲೂ ಕೈಸರನು ಹೊಸ್ತಾಗಿ ಬಲಾತ್ಕಾರ ನಡಿಸಿದ್ದರಿಂದಲೂ ಕಥೊಲಿಕರೆಂಬವರ ಅಸಹನ ಕ್ರಿಯೆಯಿಂದಲೂ[4] ದೋನಾತಿಸ್ತರ ಬಲವು ಹೊರಬಳಿಗೆ ಕ್ಷೀಣವಾಗುತ್ತಾ ಹೋಯಿತು; ಆದರೆ ಇನ್ನು ಮುಂದೆ ವಂದಲರೆಂಬವರ ಕಡೆಯ ಹಿಂಸೆಯೊಳಗೆ[5] ಅತ್ತಣ ಅನೇಕ ಕಥೊಲಿಕರೆಂಬವರು ರಕ್ತಸಾಕ್ಷಿಗಳಾಗ ಸಮರ್ಥರಾದ್ದಕ್ಕೆ ದೋನಾತಿಸ್ತರ ಸಂಗಡದ ಸಹವಾಸವು ಸಹ ಮೂಲವಾಗಿದ್ದಂತೆ ಕಾಣುತ್ತದೆ.

ಕ್ರಿ. ಶ. 412ನೇ ವರುಷ ಔಗುಸ್ತೀನನು ತನ್ನ ಜೀವಿತದ 58ನೇದರಲ್ಲಿ ಪೆಲಗಿಯನೆಂಬವನಿಗೆ ಎದುರಾಳಿಯಾಗ ಬೇಕಾಯಿತು. ಇವನು ಬ್ರಿತನ್ನಿಯದಲ್ಲಿ ಹುಟ್ಟಿ (?), ಬಂದು, ರೋಮಾಯ ಮಠವಾಸಿಗಳಲ್ಲಿ ಶೇರಿದಂಥವನೊಬ್ಬನು; ಅವನು ಅಂ

1) 164ನೇ, 168ನೇ ಪಾನು. 2) 206ನೇ, 207ನೇ, 208ನೇ, 230ನೇ ಪಾನು. 3) 163ನೇ ಪಾನು. 4) 216ನೇ ಪಾನು. 5) 208ನೇ ಪಾನು.

ದಿಗೆ 3 ವರುಷ ಮುಂಚೆ ರೋಮದಲ್ಲಿ, ಆ ಮೇಲೆ ಆಫ್ರಿಕದಲ್ಲಿಯೂ ಪಲೇಸ್ತೀನದಲ್ಲಿಯೂ ಒಂದು ಅಘೋರವಾದ ಪಾಷಂಡವನ್ನು ಘೋಷಿಸುತ್ತಾ ಬಂದಿದ್ದನು. ಅದೇನಂದರೆ—ಆದಮನ ಪಾಪಪತನದಿಂದ[1] ಅವನ ಮಕ್ಕಳ ಭಾವವು ಬಲಗುಂದಲೂ ಕೆಡಲೂ ಇಲ್ಲ; ಅದು ಶುದ್ಧವಾಗಿಯೇ ಉಳಿದದೆ; ಅಭಿಜಾತಪಾಪವು ಇರುವದೇ ಇಲ್ಲ; ದುರ್ಜನಸಂಗದ ಬಲದಿಂದ ಮಾತ್ರ ಪಾಪದ ಸರ್ವಸಾಧಾರಣತ್ವವು; ಅದಲ್ಲದೆ ಆದಮನು, ತಿನ್ನಬಾರದೆಂದು, ದೇವರು ಅಪ್ಪಣೆ ಕೊಟ್ಟ ಹಣ್ಣು ತಿನ್ನದಿದ್ದರೂ ಸಾಯುತ್ತಿದ್ದನು; ಈಗಲಾದರೂ ಯಾವನೊಬ್ಬ ಮನುಷ್ಯನೂ ಪೂರ್ಣ ಸ್ವತಂತ್ರವುಳ್ಳಂಥವನೇ ಆಗಿದ್ದು, ಸ್ವಂತ ಬಲದಿಂದಲೇ ದೇವರ ನ್ಯಾಯಪ್ರಮಾಣಕ್ಕೆ ಪೂರಾ ಅನುಸರಿಸಿ, ದೇವರನ್ನೊಲಿಸಿ, ಹೀಗೆ ತಾನು ತನ್ನ ಮೋಕ್ಷ ಸಂಪಾದಿಸಿ ಕೊಳ್ಳಬಹುದು; ಕ್ರಿಸ್ತನು ಉತ್ಕೃಷ್ಟ ಪುಣ್ಯ ಬೋಧಿಸಿ, ಉತ್ಕೃಷ್ಟ ಮೋಕ್ಷದ ಮಾರ್ಗ ತೋರಿಸಿದ್ದಾನಷ್ಟೆ[2]!—ಕೃಪಾಮಯವಾದ ಸುವಾರ್ತೆ ಬೇರೊಂದಿಗೆ ಕೀಳುವಂಥ ಈ ಮಹಾ ಪಾಷಂಡವು ಹುಟ್ಟಲಿಕ್ಕೆ ಮಠವಾಸಿತ್ವವು ಮುಖ್ಯ ಕಾರಣ; ಹ್ಯಾಗಂದರೆ, ಕ್ರೈಸ್ತ ಮಠಿಕರಲ್ಲಿ ಹೆಚ್ಚು ಜನರು, ತಾವು ನಡಿಸುತ್ತಿರುವ ಉಪವಾಸಾದಿ ಸ್ವಶರೀರದಂಡನದಿಂದ ವಿಶೇಷ ಪರಿಶುದ್ಧತ್ವವು ಸಿದ್ಧಿಸುವದೆಂದು, ನೆನಸುವವರಾಗಿದ್ದರು. ಪೆಲಗಿಯನ ಶಿಷ್ಯನು ಆದ ಕೊಯಿಲೆಸ್ತಿಯನೆಂಬವನೊಬ್ಬನು ಅವನ ಹಾಗೆ ರೋಮದಲ್ಲಿ ಆ ಅಪಬೋಧನೆ ಸಾರಿದ ಮೇಲೆ ಅವನ ಸಹಿತ ಕ್ರಿ. ಶ. 411ನೇ ವರುಷ ಕರ್ಥಾಗೊವಿಗೆ ಬಂದು, ಸಭೆಯ ಹಿರಿತನದ ಉದ್ಯೋಗ ಕೇಳಿ ಕೊಳ್ಳಲಾಗಿ, ಅಂಬ್ರೊಸಿಯನು 15 ವರುಷದ ಹಿಂದೆ ಮಾತ್ರ ಸತ್ತಿದ್ದ ಮಿಲಾನೊ ಪಟ್ಣದ[3] ಪೌಲೀನನೆಂಬ ಸಭಾಸೇವಕನು ಒಂದು ಕಾಗದ ಬರೆದು, ಅವನ ಮೇಲೆ ದೂರು ಹೇಳಿದ ನಿಮಿತ್ತ ಮರುವರುಷ ಕರ್ಥಾಗೊವಿನ ಒಂದು ಸಭಾಸಂಘವು ಅವನ ಮತಾರ್ಥ ವಿಚಾರಿಸಿ, ಅದು ಪರಿಶುದ್ಧ ಬರಹಕ್ಕೆ ಪ್ರತಿಕೂಲವೆಂದು, ಕಂಡು, ಅವನನ್ನು ಸಭೆಯೊಳಗಿಂದ ಬಹಿಷ್ಕರಿಸಿತು. ಅಷ್ಟರೊಳಗೆ ಪೆಲಗಿಯನು ಪಲೇಸ್ತೀನಕ್ಕೆ ಹೊರಟು ಹೋಗಿದ್ದನು. ಆದರೆ ಅಂದಿನಿಂದ ಔಗುಸ್ತೀನನು ಪೆಲಗಿಯತ್ವವನ್ನು ನಿರ್ಮೂಲ ಮಾಡುವದಕ್ಕಾಗಿ ಗ್ರಂಥಗಳನ್ನು ರಚಿಸುವವನಾದನು; ಬೆತ್ಲೆಹೇಮಿನ ಆ ಹಿಯೆರೋನುಮನು[4] ಅದೇ ಸುವೃತ್ತಿ ತೊಡಗಿಸಿದನು. ಬಳಿಕ ಆ ಪಾಷಂಡವು ರೋಮಪುರದ ಅಧ್ಯಕ್ಷನ ಅಧಿಕಾರವು ನಡಿಯುತ್ತಿರುವ ಸಭೆಗಳ ಬೋಧಕರಲ್ಲಿ ವಿಶೇಷದಿಂದ ಹೊಕ್ಕೊಳ್ಳಲಿಕ್ಕೆ, ಕ್ರಿ. ಶ. 416ನೇದರಲ್ಲಿ ಆಫ್ರಿಕದ ಅಧ್ಯಕ್ಷರು 2 ಸಾರಿ ಕೂಡಿ, ಸದ್ಬೋಧನೆಯ ಸಂರಕ್ಷಣೆಗಾಗಿ ತಿರಿತಿರಿಗಿ ಒಳ್ಳೇ ತೀರ್ಪು ಗೈದು, ರೋಮ

---

1) 1 ಮೋಶೆ. 3. 2) ಜ್ಞೋಸ್ತಿಕರ ಬೋಧನೆ ಸರಿ ನೋಡು, 169ನೇ ಪಾನು. 3) 224ನೇ ಪಾನು. 4) 173ನೇ ಪಾನು.

ದ ಆ 1ನೇ ಇನ್ನೊಕೆಂತನೆಂಬ ಅಧ್ಯಕ್ಷನಿಗೆ[1], ಪೆಲಗಿಯತ್ವಕ್ಕೆದುರಿಸ ಬೇಕೆಂತ, ಬುದ್ಧಿ ಹೇಳಿದರು. ಇವನು ಅದು ಶೋಧಿಸ ತೊಡಗಿದಾಗಲೇ ಸಾಯಲು, ಇವನ ಉತ್ತರೋದ್ಯೋಗಿಯಾದ ಜೋಸಿಮನು ಬಹಳ ಜ್ಞಾನವಿಲ್ಲದವನಾಗಿದ್ದು, ಕೊಯಿಲೆಸ್ತಿಯನ ಸಂಗಡದ ಪ್ರಶ್ನೋತ್ತರದಿಂದ ಮರುಳಾಗಿ—ಪೆಲಗಿಯನ ಪಕ್ಷದವರಿಗೆ ಯಾಕೆ ವಿರೋಧಿಸುತ್ತೀರಿ? ಅವರು ಅಪರಾಧಿಗಳಲ್ಲ, ಸದ್ಬೋಧಕರೇ! ಎಂಬಂತೆ[2] ಆಫ್ರಿಕದ ಅಧ್ಯಕ್ಷರಿಗೆ ಗದರಿಸುವಂಥ ಕಾಗದಗಳನ್ನು ಬರೆದು ಕಳುಹಿಸಿದನು. ಅದಕ್ಕವರು ದುಃಖ ಗೊಂಡು, ಅಗದೀ ಒಡಂಬಡದಿರಲಿಕ್ಕೆ, ಜೋಸಿಮನು ನಾಚಿ ಕೊಂಡು—ತನಗೆ ಮನ್ನಿಸ ಬೇಕು; ಪುನರ್ವಿಚಾರಿಸುತ್ತೇನೆಂತ, ಮಾತು ಕೊಟ್ಟನು. ಅವನಿಂದ ಮತ್ತೊಂದು ನಿರ್ಣಯ ಬಾರದ್ದಕ್ಕಿಂತ ಮುಂಚೆ ಕ್ರಿ. ಶ. 418ನೇ ವರುಷಕ್ಕೆ ಔಗುಸ್ತೀನ ಮುಂತಾದ ಆಫ್ರಿಕದ ಅಧ್ಯಕ್ಷರೆಲ್ಲರೂ ಕರ್ಥಾಗೊವಿನಲ್ಲಿ ನೆರದು, ಪೆಲಗಿಯತ್ವವು ಪಾಷಂಡವೆಂದು, ಮತ್ತೊಮ್ಮೆ ಬಹು ನಿಬಂಧವಾಗಿ ಸ್ಥಾಪಿಸಿ, ಈ ವಿಷಯದಲ್ಲಿ ಇನ್ನು ಮುಂದೆ ಸಮುದ್ರದತ್ತಣ ಸಭೆಯ ಅಂದರೆ ರೋಮಪುರದ ಅಧ್ಯಕ್ಷನ ನಿರ್ಣಯಾರ್ಥ ಕೇಳಿ ಕೊಳ್ಳುವಂಥವನು ಕ್ರೈಸ್ತ ಸಭೆಯವನಲ್ಲವೆಂತ, ನೇಮಿಸಿದರು[3]. ಅದರ ಸಲುವಾಗಿ ಜೋಸಿಮನು ಬುದ್ಧಿ ತೆಕ್ಕೊಂಡು, ಪೆಲಗಿಯತ್ವವು ಪಾಷಂಡವೆಂದು, ಹೇಳುವದೊಂದು ಪತ್ರ ಲೇಖಿಸಿ, ತನ್ನ ಅಧ್ಯಕ್ಷತೆಯೊಳಗಿನ ಸಮಸ್ತ ಅಧ್ಯಕ್ಷರು ಅದಕ್ಕೆ ಸಮ್ಮತಿಸಿ ಕೈಯೊಪ್ಪಿತ ಹಾಕ ಬೇಕೆಂತ, ಬೆಸಸಿದನು. 18 ಮಂದಿ ಈತಲಿಕ ಅಧ್ಯಕ್ಷರು ಹಾಗೆ ಮಾಡದಿರಲಾಗಿ, ಅವರ ಉದ್ಯೋಗ ತೆಗೆದನು. ಇವರಲ್ಲಿ ಹಲವರು ಕೊನ್ಸ್ತಂತೀನೊಪೊಲಿಗ್ಯೆದಿದರು. ತದನಂತರ ಕ್ರಿ. ಶ. 431ನೇ ವರುಷಕ್ಕೆ 2ನೇ ಥೆಯೊದೊಸಿಯ ಕೈಸರನು[4] ಎಫೆಸ ಪಟ್ಣದಲ್ಲಿ 3ನೇ ಸರ್ವಸಭಾಸಂಘವನ್ನು ಕೂಡಿಸಲು, ಆಗತರೆಲ್ಲರು ಪೆಲಗಿಯತ್ವಕ್ಕೆ ಅಭಿಶಪಿಸಿದಂದಿನಿಂದ ಪೆಲಗಿಯತ್ವದ ಪೂರ್ಣ ರೂಪವು ಹೋದರೂ ಅರ್ಧ ರೂಪವು ಇನ್ನೂ 100 ವರುಷಕ್ಕಿಂತ ಹೆಚ್ಚು ಕಾಲ ಸಭೆಗಳಲ್ಲಿ ಹೊರಳಾಡಿ, ತೊಂದರೆ ಹುಟ್ಟಿಸುತ್ತಾ ಇತ್ತು.

ಆದರೆ ದೇವರು ಮುಂಚೆ ಅರೀಯಾನತ್ವವೆಂಬ ಪಾಷಂಡಕ್ಕೆ ಅಥನಸಿಯನೆಂಬ ಪ್ರಖ್ಯಾತ ಭಕ್ತನನ್ನು ಎದುರಿಟ್ಟಂತೆಯೇ[5] ಅವನು ಈಗ ಪೆಲಗಿಯತ್ವವೆಂಬದಕ್ಕೆದುರಿಸಲಿಕ್ಕೆ ಔಗುಸ್ತೀನನನ್ನು ಸಿದ್ಧ ಮಾಡಿಟ್ಟದ್ದನು. ಔಗುಸ್ತೀನನು ತನ್ನ ಸಕಲ ಜೀವಿಕೆಯ ಅನುಭವದಿಂದ, ದೇವರ ಕೇವಲ ಕೃಪೆಯಿಂದಲೇ ಹೊರ್ತು

1) 230ನೇ ಪಾನು. 2) 148ನೇ, 149ನೇ, 211ನೇ ಪಾನು ಸರಿ ನೋಡು. 3) Cod. eccl. Afr. c. 28; Concil. Milevit. c. 22; Collectio canonum Carthag. c. 31; 164ನೇ, 165ನೇ ಪಾನು. 4) 215ನೇ, 216ನೇ ಪಾನು. 5) 22ನೇ ಸಂಧಿ.

ಮತ್ತು ಯಾವದರಿಂದಲೂ ರಕ್ಷಣೆ ಶಿಕ್ಕಲಿಕ್ಕಿಲ್ಲವೆಂತ, ತಿಳು ಕೊಂಡಿದ್ದನು; ಹೀಗಿರಲಿಕ್ಕೆ, ದೇವರು ಮುಖ್ಯವಾಗಿ ಅವನಿಂದ ತನ್ನ ಸುವಾರ್ತಾರ್ಥವನ್ನು ಮರಳಿ ನೆಲೆ ಗೊಳ್ಳಿಸುವದು ಸಾಧ್ಯವಾಯಿತು.

ಔಗುಸ್ತೀನನು 75 ವರುಷದವನಾದನಂತರ ಕ್ರಿ. ಶ. 429ನೇ ವರುಷದಲ್ಲಿ ವಂದಲರೆಂಬ ಆ ಅರೀಯಾನರು[1] ಆಫ್ರಿಕದ ಮೇಲೆ ಬಿದ್ದು, ರಾಜ್ಯಮತದ ಕ್ರೈಸ್ತರಿಗೆ ಸರ್ವತ್ರ ಬಾಧಿಸುತ್ತಿರಲು, ಅವನು 37 ವರುಷ ನಡಿಸುತ್ತಾ ಬಂದಿದ್ದ ಅನುಪಮ ಬೋಧಕವೃತ್ತಿಯಿಂದ ಸಹ ಅತ್ಯಾಶೀರ್ವಾದ ಹೊಂದಿರುವ ಅಲ್ಲಿಯ ನೀಕೇನ ಕ್ರೈಸ್ತರಲ್ಲನೇಕರು ರಕ್ತಸಾಕ್ಷಿಗಳಾಗಲಿಕ್ಕೂ ಶಕ್ತರಾಗಿರುತ್ತಿದ್ದರು. ವಂದಲರು ಔಗುಸ್ತೀನನಿರುವ ಹಿಪ್ಪೊ ಪಟ್ಣಕ್ಕೆ ಮುತ್ತಿಗೆ ಹಾಕಲೆಸಗಿದ ಈಚೆ ಅವನು ಬೇರೆ ಬೇರೆ ಕಡೆಯಿಂದ ತನ್ನ ಹತ್ತರ ಓಡಿ ಬಂದಿದ್ದ ಅಧ್ಯಕ್ಷರಲ್ಲಿ ಒಮ್ಮೆ ನುಡಿದ್ದೇನಂದರೆ—ನಾನು ನಮ್ಮ ಕರ್ತನ ಮುಂದೆ, ಈ ಪಟ್ಣವನ್ನು ಮುತ್ತಿಗೆಯಿಂದ ಬಿಡಿಸು! ಇಲ್ಲವೆ ನನ್ನನ್ನು ಈ ಲೋಕದಿಂದ ಕರ ಕೊಂಡು ಹೋಗೆಂದು, ಬೇಡಿ ಕೊಂಡಿದ್ಧೇನೆ.—ದೇವರು ಒಂದು ಪ್ರಕಾರ ಆ ಪ್ರಾರ್ಥನೆಯ ಹಾಗೆ ಮಾಡಿದನು. ಹ್ಯಾಗಂದರೆ, ಮುತ್ತಿಗೆಯ 3ನೇ ತಿಂಗಳಲ್ಲಿ ಔಗುಸ್ತೀನನಿಗೆ ಜ್ವರವು ಹಿಡಿಯಿತು; ಆಗ ಅವನು ದಾವೀದನ ಪಶ್ಚಾತ್ತಾಪಕೀರ್ತನೆಗಳನ್ನು ತನ್ನೆದುರಿನ ಗೋಡೆಯಲ್ಲಿ ಬರಿಸಿ ಓದುತ್ತಾ, ಬಹಳ ಪ್ರಾರ್ಥಿಸುತ್ತಾ ಇದ್ದು, ಕ್ರಿ. ಶ. 430ನೇ ವರುಷದಲ್ಲಿ, ತನ್ನ ಜೀವತ್ವದ 76ನೇದರಲ್ಲಿ, ಸಮಾಧಾನದಿಂದ ಪರಂಧಾಮುವನ್ನೈದಿದನು.

## 31. ನೆಸ್ತೊರಿಯಾನತ್ವವು.

ರೋಮಾಯ ಸಾಮ್ರಾಜ್ಯದ ಯೊವಿಯಾನನೆಂಬ ಕೈಸರನು ಆ 2ನೇ ಶಾಹ್ಪೂರನಿಗೆ ಸೋತು, ನೀಸಿಬಿಸೆಂಬ ಪ್ರಖ್ಯಾತಿ ಪಟ್ಟ ಕ್ರೈಸ್ತ ಪಟ್ಣವನ್ನು ಸಹ ಅವನ ವಶಕ್ಕೆ ಕೊಟ್ಟು ಬಿಡ ಬೇಕಾಯಿತೆಂತ, ಹಿಂದೆ ಓದಿದ್ಧೀರಿ[2]. ಬಳಿಕ ಶಾಹ್ಪೂರನು ಅದರೊಳಗಿನ ಕ್ರೈಸ್ತರಿಗೆ ಗುಳೆಯ ತೆಗಿಯಲಾಜ್ಞಾಪಿಸಿದನು. ಆಗ ಹಲವರು ಹೋಗಿ, ರಕ್ಷಿತರಾದರು; ಹಲವರು ಇದ್ದು ಕೊಂಡು, ಹಿಂಸೆಗೊಳ ಬಿದ್ದರು.

ಆ ಸಮ್ರಾಜನು ಸಾಯುವ ಸಮಯ, ತಾನು ಕ್ರೈಸ್ತರನ್ನು ಹಿಂಸೆಯಿಂದ ಕೆಡಿಸ ಕೂಡದ್ದಲ್ಲದೆ ಅದರಿಂದಲೇ ಸಾಸಾನಿದ ಸಾಮ್ರಾಜ್ಯಕ್ಕೆ ಬಹಳ ಹಾನಿ ಬಂದದೆಂತ, ತಿಳು ಕೊಂಡು, ಇನ್ನು ಮುಂದೆ ಸರ್ವ ಸಾಮ್ರಾಜ್ಯದಲ್ಲಿ ಎಲ್ಲಾ ಮತಗಳು ಉಪದ್ರವವಿಲ್ಲದಿರ ಬೇಕೆಂತ, ಪ್ರಕಟಿಸಿ, ಕ್ರಿ. ಶ. 380ನೇ ವರುಷಕ್ಕೆ ಮಡಿದ

1) 208ನೇ, 216ನೇ, 243ನೇ ಪಾನುಗಳು. 2) 199ನೇ ಪಾನು.

ನು. ತರುವಾಯ ಕ್ರೈಸ್ತರು 40 ವರುಷ ಶಾಂತಿಯನ್ನನುಭವಿಸುತ್ತಾ, ಪ್ರವೃದ್ಧಿ ಹೊಂದುತ್ತಾ ಇದ್ದರು. ಆ ಕಾಲದಲ್ಲಿ 1ನೇ ಯೆಜ್ದಜಿರ್ದನೆಂಬವನು ಕ್ರಿ. ಶ. 399ನೇದರಿಂದ 420ನೇದರ ವರೆಗೆ ಆಳುತ್ತಿದ್ದನು. ಮಗರೆಂಬ ಪೂಜಾರಿಗಳು[1] ಅವನ ಬಳಿಯಲ್ಲಿ ಕ್ರೈಸ್ತರ ಮೇಲೆ ನಾನಾ ಸುಳ್ಳಾಡುತ್ತಾ, ನಾನಾ ಒಳಸಂಚು ನಡಿಸುತ್ತಾ ಇದ್ದರೂ ಅವನು ಹಲವು ವರುಷ ಕ್ರೈಸ್ತರ ಹಿತಕರನೇ. ಇದಕ್ಕೆ ಮುಖ್ಯ ನಿಮಿತ್ತವೇನಂದರೆ—ಮೆಸೊಪೊತಮಿಯ ದೇಶದಲ್ಲಿ ತಾಗ್ರಿತ್ ಪಟ್ಣದ ಅಧ್ಯಕ್ಷನಾಗಿದ್ದು ತಾನು ಚಂದಾಗಿ ರಚಿಸಿದ ಪಾರ್ಶಿ ಕ್ರೈಸ್ತರ ಹಿಂಸಾಚರಿತ್ರದಿಂದ ಹೆಸಗೊಂಡ ಮರುಥನೆಂಬವನು ಯೆಜ್ದಜಿರ್ದನಿಗೂ ಗ್ರೇಕ ಕೈಸರನಾದ ಅರ್ಕದಿಯನಿಗೂ[2] ಮಧ್ಯಸ್ಥನಾಗಿ, ಆ ಸಮ್ರಾಜನಿಗೆ ಬಹಳ ಉಪಕಾರ ಒದಗಿಸುತ್ತಿದ್ದನು. ಆದರೆ ಇವನು 19 ವರುಷ ಆಳಿದನಂತರ ಪಾರ್ಶಿಸ್ಥಾನದ ಸೂಸ ಪಟ್ಣದಲ್ಲಿ[3] ಸಭಾಧ್ಯಕ್ಷನಾಗಿರುವ ಅಬ್ದಸನೆಂಬವನು ಕ್ರೈಸ್ತರಿಗೆ ಇರ ತಕ್ಕ ತಾಳ್ಮೆ ತಪ್ಪಿದವನಾಗಿ, ಪಾರ್ಶಿಯರದೊಂದು ಅಗ್ನಿದೇವಸ್ಥಾನವನ್ನು ಹಾಳು ಗೈದ್ದರಿಂದ ಯೆಜ್ದಜಿರ್ದನು ಆರಂಭದಲ್ಲಿ ಅವನಿಗೆ ಬುದ್ಧಿ ಹೇಳಿ, ಅದನ್ನು ತಿರಿಗಿ ನೆಟ್ಟಗೆ ಮಾಡಿಸಿರೆಂತ, ವಿಧಿಸಿದನಷ್ಟೇ; ಅಬ್ದಸನು ಇದಕ್ಕೆ ಶೇರಲೊಲ್ಲದಿರಲು, ಅವನು ಕೋಪಿಷ್ಠನಾಗಿ, ಆ ಅಧ್ಯಕ್ಷನನ್ನು ಕೊಲ್ಲಿಸಿ, ಕ್ರೈಸ್ತರ ಹಲವು ದೇವಾಲಯಗಳನ್ನು ಕೆಡವಿಸಿದನು. ಅದು ಹೊರ್ತಾಗಿ ತಡವಿಲ್ಲದೆ ಎಲ್ಲಾ ಕ್ರೈಸ್ತರಿಗೆ ತಾಗುವದೊಂದು ಹೊಸ ಹಿಂಸೆಯು ಹತ್ತಿ, 30 ವರುಷವೇ ನಡಿಯುತ್ತಿತ್ತು. ಕ್ರಿ. ಶ. 420ನೇ ವರುಷದಲ್ಲಿ ಪಟ್ಟಾಭಿಷೇಕವಾದ 5ನೇ ಬಹ್ರಾಮನೆಂಬ ಸಮ್ರಾಜನ ಆಳ್ವಿಕೆಯ ಮೊದಲಿನ ವರುಷಗಳಲ್ಲಿ ಅದು ಸರ್ವ ವರ್ಣನೆಗಿಂತ ಹೆಚ್ಚು ಕಠೋರವಾಯಿತು. ಹಲವರು ಕ್ರೈಸ್ತರನ್ನು ಚರ್ಮ ಸುಲಿದು ಕೊಂದರು; ಹಲವರ ಮುಖಚರ್ಮ ಮಾತ್ರ ಸುಲಿದು, ಅವರನ್ನು ಬಿಟ್ಟು ಬಿಟ್ಟರು; ಹಲವರ ಮೈಯಲ್ಲಿ ತುಂಬ ಮರಶಿವರುಗಳನ್ನು ಚುಚ್ಚಿ, ಅವರನ್ನು ಮುಳ್ಳುಹಂದಿಗೆ ಹೋಲಿಸಿದರು; ಬೇರೊಬ್ಬರ ಕೈ ಕಾಲು ಕಟ್ಟಿ, ಅವರನ್ನು ಭೂಮಿಯೊಳಗಿನ ಕಾಲಿವೆಗಳೊಳಗೆ ಹಾಕಿ, ಇಲಿಗಳಿಂದ ತಿನ್ನಿಸಿದರು. ಈ ಮುಂತಾದ ಬಾಧೆಯೊಳಗೆ ಅಲ್ಲಿಯ ಕ್ರೈಸ್ತರು ತಿರಿಗಿ ಅತಿರೇಕ ವಿಶ್ವಾಸಬಲದಿಂಧ ಎಸೆಯುತ್ತಿದ್ದರು. ಒಮ್ಮೆ ಯಕೋಬನೆಂಬ ಆಢ್ಯಸ್ಥಿತಿವಂತನಾದವನೊಬ್ಬ ಕ್ರೈಸ್ತನು ಬಹ್ರಾಮನ ವಾತ್ಸಲ್ಯದಿಂದ ಪ್ರೇರಿತನಾಗಿ, ಕ್ರಿಸ್ತನನ್ನು ಬಿಟ್ಟಾಡಲು, ಅವನ ಹೆಂಡತಿಯೂ ತಾಯಿಯೂ ಆ ವಿಶ್ವಾಸಭ್ರಷ್ಟತ್ವದ ಮಹಾಪರಾಧವನ್ನು ಅವನಿಗೆ ವಿವರಿಸಿ ತೋರಿಸಿದರು; ಅಂದಿನಿಂದ ಯಕೋಬನು ಕ್ರಿಸ್ತನ ಕಡೆಗೆ ಮತ್ತು ತಿರಿಗಿ ಕೊಂಡು, ಪೀಡಕರು ತನ್ನ ಅಂಗಗಳಲ್ಲಿ ಒಂದರ ಮೇಲೊಂದು ಕೀಳುತ್ತಾ

---

1) 194ನೇ ಪಾನು. 2) 206ನೇ, 227—231ನೇ ಪಾನು. 3) 194ನೇ ಪಾನು.

ಬಂದರೂ ಅವನನ್ನು ಬೊಂಕದೆ, ಒಳ್ಳೇ ರಕ್ತಸಾಕ್ಷಿಯಾಗಿ ಸತ್ತನು.—ಅದಲ್ಲದೆ ಸಮ್ರಾಜನ ವಂಶಜನೂ ದೊಡ್ಡ ಉದ್ಯೋಗಿಯ ಮಗನೂ ಆದ ಹೊರ್ಮಿಜ್ದನೆಂಬವನು ವಿಶ್ವಾಸಾತಿಶಯದಿಂದ ಪ್ರಕಾಶಿಸಿದನು. ಬಹ್ರಾಮನು ಅವನನ್ನು ತನ್ನ ಬಳಿಗೆ ಕರ ತರಿಸಿ, ಕ್ರಿಸ್ತನನ್ನಲ್ಲಗಳೆಯಿರೆಂತ, ಆಜ್ಞಾಪಿಸಲಾಗಿ, ಆ ಕ್ರೈಸ್ತನು—ನೀವು ಆಜ್ಞಾಪಿಸಿದ್ದು ನಿಮ್ಮ ನೀತ್ಯರ್ಥಕ್ಕೆ ವಿರುದ್ಧವಲ್ಲವೋ? ತನ್ನ ಪಾರಲೌಕಿಕ ರಾಜನಿಗೆ ದ್ರೋಹ ಮಾಡುವಂಥವನು ತನ್ನ ಐಹಿಕ ರಾಜನಿಗೆ ನಂಬಿಗಸ್ತನಾಗಿರುವದುಂಟೇ? ಎಂದು, ಉತ್ತರ ಕೊಟ್ಟನು. ಬಳಿಕ ಆ ಸಮ್ರಾಜನು ಅವನ ಉದ್ಯೋಗ ತೆಗದು, ಸೇನೆಯಲ್ಲಿ ಒಂಟೆಗಳನ್ನು ಹೊಡ ಕೊಳ್ಳುತ್ತಿರೆಂತ, ನಿರ್ದೇಶ ಮಾಡಿದನು. ಅಂದಿನಿಂದ ಹೊರ್ಮಿಜ್ದನು ಮಿಗಿಲಾದ ಬಿಸಿಲಿನಲ್ಲಿ ವಸ್ತ್ರವಿಲ್ಲದೆ ಆ ಸುಮಾರು ತರದ ಕೆಲಸ ನಡಿಸುವವನಾಗಿರುತ್ತಿರಲು, ಒಂದಾನೊಂದು ದಿವಸ ಆ ಧೊರೆಯು ಸೂರ್ಯತಾಪದಿಂದ ಮೈ ಸುಟ್ಟು ಧೂಳಿ ಮುಚ್ಚಿ ಕೊಂಡಿರುವಂಥವನಾದ ಅವನನ್ನು ಕಂಡು, ಅಂತಃಕರಣ ಪಟ್ಟು, ತಕ್ಕ ವಸ್ತ್ರ ಹಾಕಿಸಿ, ತನ್ನ ಹತ್ತರಕ್ಕೆ ಕರಿಸಿ, ಈಗಲಾದರೂ ಆ ಬಡಿಗೆಯವನ ಮಗನನ್ನು ಬಿಟ್ಟಾಡಿದರೆ ನಿನಗೆ ಕ್ಷಮೆ ಕೊಡುವೆನೆಂಬಂತೆ ಮಾತಾಡಿದನು. ಆದರೆ ಹೊರ್ಮಿಜ್ದನು ತನ್ನ ವಸ್ತ್ರ ಹರಿದು ಬಿಟ್ಟು—ಅಂಥಾ ಬೆಲೆಗೆ ಶಿಕ್ಕುವಂಥ ನಿಮ್ಮ ದಾನವು ನನಗೆ ಬೇಡವೇ ಬೇಡ! ಎಂತ, ಖಂಡಿತವಾಗಿ ಹೇಳಿದನು. ಆ ಮೇಲೆ ಬಹ್ರಾಮನು ಅವನನ್ನು ತನ್ನ ಬಳಿಯಿಂದ ಓಡಿಸಿ, ಕೊಲ್ಲಿಸಿದನು.—ಅದಲ್ಲದೆ ಬೆನ್ಯಮೀನನೆಂಬ ಒಬ್ಬ ಸಭಾಸೇವಕನನ್ನು ಶೆರೆಮನೆಗೆ ಹಾಕಿದರು. ಅವನು 2 ವರುಷ ಅದರೊಳಗಿದ್ದ ಹಿಂದೆ 2ನೇ ಥೆಯೊದೊಸಿಯನೆಂಬ ಗ್ರೇಕ ರಾಜ್ಯದ ಕೈಸರನ[1] ಒಬ್ಬ ರಾಯಭಾರಿಯು ಬಹ್ರಾಮನ ಅರಮನೆಗೆ ಬಂದು, ಬೆನ್ಯಮೀನನ ಸುದ್ದಿ ಕೇಳಿ, ಅವನಿಗೆ ಬಿಡುಗಡೆಯನ್ನು ದಯೆ ಮಾಡಿರೆಂತ, ಬಿನ್ನವಿಸಲು, ಆ ಸಮ್ರಾಜನು—ಅವನು, ನನಗೆ ಬಿಡುಗಡೆ ಆದರೆ ಪಾರ್ಶಿ ಮತದ ಒಬ್ಬನಿಗಾದರೂ ಸುವಾರ್ತೆಯನ್ನು ಇನ್ನು ತಿಳಿಸಲಿಕ್ಕಿಲ್ಲವೆಂತ, ಆಣೆ ಇಟ್ಟರೆ ಆದೀತೆಂದು, ನುಡಿಯಲು, ಆ ರಾಯಭಾರಿಯು ಬೆನ್ಯಮೀನನಿದ್ದಲ್ಲಿಗೆ ಗಮಿಸಿ, ಅವನನ್ನು ಅದಕ್ಕಸ್ತುಬಡಿಸಲಿಕ್ಕೆ ತೊಡಗುತ್ತಲೇ ಇವನು ಅಂದದ್ದೇನು—ಕರ್ತನು ನನ್ನೊಳಗೆ ಹಚ್ಚಿದ ಬೆಳಕನ್ನಡಗಿಸುವದು ನನಗೆ ಅಸಾಧ್ಯವು; ತಮಗೆ ಕೊಟ್ಟಿರುವ ವರಹವನ್ನು ಕೈವಸ್ತ್ರದಲ್ಲಿ ಮುಡಗಿಟ್ಟು ಕೊಳ್ಳುವಂಥವರಿಗೆ ದೊಡ್ಡ ಶಿಕ್ಷೆ! ಎಂದು, ಕರ್ತನು ಹೇಳಿದ್ಧಾನಲ್ಲ[2]?—ಹೀಗಾದರೂ ಬೆನ್ಯಮೀನನು ಬಂಧಮುಕ್ತನಾಗಿ, ಬೇಕಾದವರೆಲ್ಲರಿಗೆ ಮುಂಚಿನಂತೆ 1 ವರುಷ ಸುವಾರ್ತೆ ಸಾರುತ್ತಿದ್ದಂದು ಬಹ್ರಾಮನು ಅವನನ್ನು ಕರ ತರಿಸಿ, ಅವನು ಕ್ರೈಸ್ತತ್ವ ತ್ಯಜಿಸುವ ಹಾಗೆ

1) 215ನೇ, 245ನೇ ಪಾನು. 2) ಲೂಕ. 19, 15 — 27.

ಹೊಸ ಒತ್ತಾಯ ಸಹ ಗೈಯುವಲ್ಲಿ ಆ ವಿಶ್ವಾಸಶಾಲಿಯು, ನಿಮ್ಮ ರಾಜ್ಯವನ್ನು ಬಿಟ್ಟು ಹೋಗಿ ನಿಮ್ಮ ಶತ್ರುಗಳ ಸಂಗಡ ಒಂದೇ ಆಗುವಂಥ ಪಾತಕಿಗೆ ಯಾವ ಆಜ್ಞೆ ಮಾಡಿಸುವಿರಿ? ಎಂದು, ಕೇಳಲು, ಅವನು, ಅಂಥವನಿಗೆ ಮರಣಾಜ್ಞೆಯೇ ತಕ್ಕದ್ದು! ಎಂದು, ಉತ್ತರ ಕೊಟ್ಟನು. ಅದಕ್ಕೆ ಬೆನ್ಯಮಿನನು, ಹಾಗಾದರೆ ತನ್ನ ನಿರ್ಮಾಣಕರ್ತನನ್ನು ಬಿಟ್ಟು ಈತನೊಬ್ಬನಿಗೆಯೇ ಸಲ್ಲಲಿಕ್ಕೆ ಯೋಗ್ಯವಾದ ಮಾನವನ್ನು ತನ್ನ ಜತೆದಾಸರಲ್ಲೊಬ್ಬನಿಗೆ ಸಲ್ಲಿಸುವಂಥವನಿಗೆ ಇನ್ನೆಷ್ಟೋ ಹೆಚ್ಚಿನ ಶಿಕ್ಷೆಯು ತಾಗುವದು! ಎನ್ನಲಿಕ್ಕೆ, ಆ ಸಮ್ರಾಜನು ಮಹಾ ಕೋಪ ಗೊಂಡು, ಆ ಕ್ರೈಸ್ತನ ಕೈಕಾಲಿನುಗುರುಗಳಡಿಯಲ್ಲಿಯೂ ಮೈಯ ಉಳಿದೆಲ್ಲಾ ಮರ್ಮಸ್ಥಳಗಳಲ್ಲಿಯೂ ಮರಸಿಗುರುಗಳನ್ನು ಚುಚ್ಚಿಸಿ, ಬಳಿಕ ಅವನ್ನೆಲ್ಲಾ ತಿರಿಗಿ ಕೀಳಿಸಿ, ಮತ್ತು ಚುಚ್ಚಿಸಿದನು; ಬೆನ್ಯಮಿನನು ಅಷ್ಟನ್ನೆಲ್ಲಾ ವಿಶ್ವಾಸಬಲವದರದೆ ಸಹಿಸುತ್ತಿರಲು, ಬಹ್ರಾಮನು ಬೇಸತ್ತು, ಅವನನ್ನು ಶೂಲಕ್ಕೆ ಹಾಕಿಸಿದನು.

ಆ ವಿಪರೀತ ಹಿಂಸೆಯ ಕಾಲದಲ್ಲಿ ಅನೇಕ ಪಾರ್ಶಿ ಕ್ರೈಸ್ತರು ೨ನೇ ಥೆಯೊದೊಸಿಯನೆಂಬ ಆ ಗ್ರೇಕ ಕೈಸರನ ದೇಶದೊಳಗೆ ಪಲಾಯನ ತೆಗೆದು ಹೋಗುತ್ತಿದ್ದದರಿಂದ ಬಹ್ರಾಮನು ಆ ಕೈಸರನಿಗೆ, ಅವರನ್ನು ಹಿಂದಕ್ಕೆ ಕಳುಹಿಸ ಬೇಕೆಂತ, ಹೇಳಿಸಿದನು; ಥೆಯೊದೊಸಿಯನು ಒಲ್ಲೆನೆಂದಾಗ ಕ್ರಿ. ಶ. 422ನೇ ವರುಷ ಅವರಿಬ್ಬರಿಗೆ ಯುದ್ಧ ಹತ್ತಿತು. ಅದರಲ್ಲಿ ಗ್ರೇಕ ಸೈನ್ಯವು 7000 ಮಂದಿ ಪಾರ್ಶಿ ದಂಡುಗಾರರನ್ನು ಶೆರೆ ವೈಯಲು, ಆ ಶೆರೆಯವರಿಗೆ ಅನ್ನೋದಕವಿಲ್ಲದೆ ಬಹಳ ಸಂಕಷ್ಟ ಬಂತು. ಆಗ ಮೆಸೊಪೊತಮಿಯದಲ್ಲಿರುವ ಅಮಿದ ಪಟ್ಣದ ಅಕಾಕಿಯನೆಂಬ ಒಳ್ಳೇ ಕ್ರೈಸ್ತನಾದ ಅಧ್ಯಕ್ಷನು ಅವರಿಗೆ ಕೃಪಾನ್ವಿತನಾಗಿ, ತನ್ನ ದೇವಾಲಯದ ಒಡವೆಗಳನ್ನೆಲ್ಲಾ ಮಾರಿ[1], ಹೀಗೆ ಬಂದ ಹಣದಿಂದ ಅವರನ್ನು ಬಿಡಿಸಿ, ದಾನಧರ್ಮ ಕೊಟ್ಟು, ಸ್ವದೇಶಕ್ಕೆ ತಿರಿಗಿ ಕಳುಹಿಸಿದನು. ಬಹ್ರಾಮನು ಆ ಕೀರ್ತ್ಯ ಕಾರ್ಯಕ್ಕೆ ಬಹಳ ಮೆಚ್ಚಿ, ಕ್ರೈಸ್ತರ ಮೇಲಿನ ಹಿಂಸೆ ತಡಿಸುವವನಾದನು.

ಅಷ್ಟರೊಳಗೆ, ಗ್ರೇಕ ರಾಜ್ಯದ ಸಭೆಗಳಲ್ಲಿ, ದೇವಪುತ್ರನೆಂಬ ವಾಕ್ಯವು ಅವತರಿಸಿ ಮನುಷ್ಯನಾಗಿ ಹುಟ್ಟಿದಂಥ ಮರಿಯಳೆಂಬ ಕನ್ಯೆಯನ್ನು ಕುರಿತ ವಿಷಯವಾಗಿ ಒಂದು ಹೆಚ್ಚು ಕಡಿಮೆ ಬಿದ್ದಿತ್ತು; ಅದು ಹ್ಯಾಗಾಯಿತಂದರೆ—ಸುರಿಯ ದೇಶದ ಆ ಅಂತಿಯೊಖೀಯ ಪಟ್ಣದಲ್ಲಿ[2] ನೆಸ್ತೊರಿಯನೆಂಬವನೊಬ್ಬ ಸಭೆಯ ಹಿರಿಯನಿದ್ದನು; ಇವನು ತನ್ನ ಪ್ರಸಂಗಗಳಿಂದಲೂ ವೈರಾಗ್ಯದಿಂದಲೂ ಬಹಳ ಹೆಸರ್ಗೊಳ್ಳುತ್ತಿರಲು, ಖ್ರೂಸೊಸ್ತೊಮನ[3] ಉತ್ತರಾಧಿಕಾರಿಗಳಲ್ಲೊಬ್ಬನಾದ ಕೊನ್ಸ್ತಂತೀನೊಪೊಲಿಯ ಸಭಾಧ್ಯಕ್ಷನು ಕ್ರಿ. ಶ. 427ನೇ ವರ್ಷಕ್ಕೆ ಸತ್ತನು. ಬಳಿಕ

1) 210ನೇ, 219ನೇ ಪಾನು ಸರಿ ನೋಡು. 2) 224ನೇ ಪಾನು. 3) 29ನೇ ಸಂಧಿ.

2ನೇ ಥೆಯೊದೊಸಿಯ ಕೈಸರನು ಅದೇ ವರುಷದಲ್ಲಿ ನೆಸ್ತೊರಿಯನನ್ನು, ಅಲ್ಲಿಯ ಅಧ್ಯಕ್ಷನೆಂತ, ನೇಮಿಸಿದನು. ಇವನು ಅಲ್ಲಿಗೆ ಹೋಗಿ, ಸ್ವಲ್ಪ ಕಾಲ ಮಾತ್ರ ಕಳೆದನಂತರ ಅವನಿಗೆ ಆ ಮರಿಯಳೆಂಬವಳ[1] ಉದ್ದೇಶವಾದ ಬೋಧನೆಯ ದೆಸೆಯಿಂದ ಉಪದ್ರವವಾಯಿತು. ಹ್ಯಾಗಂದರೆ, ಕ್ರಿ. ಶ. 318ನೇ ವರುಷದಲ್ಲಿ ಅರೀಯನೆಂಬವನು[2] ಯೇಸುವಿನ ಅನಾದಿದೇವತ್ವವನ್ನಲ್ಲಗಳಿಯುವ ಪಾಷಂಡ ಪ್ರಸಂಗಿಸಲಿಕ್ಕೆ ಹತ್ತಿದ ಈಚೆ ಇವನ ಕಾಲದಲ್ಲಿ ಬದುಕುತ್ತಿದ್ದ ಯುಸೆಬಿಯನೆಂಬ ಕೈಸರೈಯದ ಅಧ್ಯಕ್ಷನೂ ಅಥನಸಿಯನೆಂಬ ಅಲೆಕ್ಸಂದರೀಯದ ಅಧ್ಯಕ್ಷನೂ ಮುಂತಾದ ಅನೇಕ ಬೋಧಕರೂ, ಯೇಸುವಿನ ಅನಾದಿದೇವತ್ವವನ್ನು ಸ್ಪಷ್ಟವಾಗಿ ತೋರಿಸುವದಕ್ಕೋಸ್ಕರ, ಯೇಸುವಿನ ತಾಯಿಯಾದ ಮರಿಯಳಿಗೆ, ದೇವರ ತಾಯಿಯೇ! ಎಂತ, ಹೆಸರಿಕ್ಕಿ, ಸಾರುತ್ತಾ ಬಂದಿದ್ದರು;—ಬಳಿಕ ಸುಮಾರು ಕ್ರಿ. ಶ. 370ನೇ ವರುಷ ಆ ದ್ವಯಾರ್ಥವುಳ್ಳ ಹೆಸರಿನ ನಿಮಿತ್ತ ಅರಬಿಸ್ಥಾನದಲ್ಲಿ[3] ಹಲವು ಮಂದಿ ನಾಮಮಾತ್ರದ ಕ್ರೈಸ್ತರಾದ ಹೆಂಗಸರು, ಮರಿಯಳು ದೇವರ ತಾಯಿಯಾದ ಮೇಲೆ ದೇವರಿಗಿಂತ ಹೆಚ್ಚಿನವಳೆಂದು, ನೆನಸಿ, ಹೇಳಿದ್ದಲ್ಲದೆ ಮೂರ್ತಿಪೂಜಕರೋಪಾದಿ ಅವಳಿಗೆ ಹೋಳಿಗೆಗಳಿಂದ ಪೂಜೆ ಮಾಡುವವರಾಗಿದ್ದರು; ಈ ವಿಕಾರವಾದ ಪೂಜೆಗೆ ಹೆಂಗಸರ ಪಾಷಂಡವೆಂಬ ಅಡ್ಡಹೆಸರು ಬಿದ್ದಿತ್ತು;—ಅದು ವಿನಹ ಖ್ರುಸೊಸ್ತೊಮನಿಗೆ ಮುಂಚೆ ಕ್ರಿ. ಶ. 380ನೇದಕ್ಕೆ ಕೊನ್ಸ್ತಂತೀನೊಪೊಲಿಯಲ್ಲಿ ಸುಮಾರು ಒಂದೇ ಅಬ್ದ ಮಾತ್ರ ಅಧ್ಯಕ್ಷನಾಗಿದ್ದ ಕಪ್ಪದೊಕಿಯದ ನಾಜಿಯಂಜು ಪಟ್ಣದ ಆ ಗ್ರೆಗೋರನು[4] ಸಹ ನೀಕೇನತ್ವದ ಹಿತಕ್ಕೆಂಬಂತೆ ಅಂಥಾ ದುಷ್ಪ್ರಯೋಗಕ್ಕೆ ಹ್ಯಾಗೂ ಅಂಜದೆ, ಮರಿಯಳು ದೇವರ ತಾಯಿಯೆಂಬ ಹೆಸರನ್ನು ಬಳಸುತ್ತಿದ್ದು, ಅದನ್ನುಚ್ಚರಿಸಲೊಲ್ಲದಂಥವರು ನಾಸ್ತಿಕರೆಂತ, ಘೋಷಿಸಿದ್ದನು[5]. ಹೀಗಿರಲಿಕ್ಕಾಗಿ, ನೆಸ್ತೊರಿಯನು ಕೊನ್ಸ್ತಂತೀನೊಪೊಲಿಯ ಅಧ್ಯಕ್ಷತೆ ಹೊಂದುವಾಗ ಅಲ್ಲಿ ಆ ಹೆಸರೂ ಅದರ ಮೇಲೆ ಬರ ಬಹುದಾದ ಅಪಪ್ರಯೋಗವೂ ಬಹಳ ರೂಢಿಯಾಗಿತ್ತು. ಅವನು ಮೆಚ್ಚದೆ, ದೇವದೂಷಣೆಗೆ ಕಾರಣವಾಗುವಂಥ ವಿಘ್ನಮಯವಾದ ದೇವಮಾತೆ ಎಂಬದಕ್ಕೆ ಬದಲಾಗಿ, ಕ್ರಿಸ್ತಮಾತೆ ಎಂತ, ಬೋಧಿಸ ತೊಡಗಿದನು.

ಕೊನ್ಸ್ತಂತೀನೊಪೊಲಿಯ ಕ್ರೈಸ್ತ ಪ್ರಜೆಯೂ ಮಠವಾಸಿಗಳೂ, ಅವನ ಆ ಪ್ರಕಾರದ ಬೋಧನೆಯಿಂದ ಕ್ರಿಸ್ತನ ದಿವ್ಯ ಭಾವವಲ್ಲದೆ ಮರಿಯಳ ಮಾನವು ಸಹ ಕುಂದೀತೆಂತ, ಹೇಳಿ, ಶಿಟ್ಟು ಪಟ್ಟರು; ಸಭೆಗಳ ಅಧ್ಯಕ್ಷರಲ್ಲಿ ಅಲೆಕ್ಸಂದರೀಯದ

1) 23ನೇ ಪಾನು. 2) 183ನೇ ಪಾನು. 3) 83ನೇ ಪಾನು. 4) 155ನೇ, 188ನೇ ಪಾನು. 5) Orat. 51, p. 738.

ಆ ಕುರಿಲ್ಲನು[1] ಅವನ ಮುಖ್ಯ ಪ್ರತಿವಾದಿಯಾದನು. ತರುವಾಯ ನಡಿಯಲಾರಂಭಿಸಿದ ಅಪ್ರಿಯ ವಾದೋತ್ತರವಾದದಲ್ಲಿ ನೆಸ್ತೊರಿಯನು ಕ್ರಿಸ್ತನೊಳಗೆ ದ್ವಿಭಾವತ್ವವನ್ನು ಅಂದರೆ ದೈವ ಪುರುಷತ್ವ ಮಾನುಷ ಪುರುಷತ್ವಗಳನ್ನು ಅಮಿಲಿತ ರೀತಿಯಿಂದಲೇ ದರ್ಶಿಸಿ, ಕ್ರಿಸ್ತನ ಆ ಎರಡು ಭಾವಗಳ ಅನ್ಯೋನ್ಯದಿಂದ ಮಾತ್ರವೇ ಸಿದ್ಧಿಸ ಕೂಡಿದ ಸರ್ವಜನರಕ್ಷಣದ ಅಸ್ತಿವಾರವನ್ನದರಿಸುವವನಂತೆ ತೋರಿ, ಒಮ್ಮೆ ರೋಮದಿಂದ ತನ್ನ ಬಳಿಗೆ ಬಂದಿದ್ದ ಪೆಲಗಿಯನ ಕೆಲವು ಪಕ್ಷಾವಲಂಬಿಗಳನ್ನು[2], ಅವರಿಂಗಿತವರಿಯದೆ, ಕಾಪಾಡಲಿಕ್ಕೆ, ಕ್ರಿ. ಶ. 431ನೇ ವರುಷ ಎಫೆಸಪಟ್ಟದಲ್ಲಿ ಆದ ಆ 3ನೇ ಸರ್ವಸಭಾಸಂಘದ[3] ನಿರ್ಣಯದ ಮೇಲೆ ಅವನು, ವಿಶೇಷವಾಗಿ ಕುರಿಲ್ಲನ ಪ್ರಯತ್ನಗಳಿಂದ, ತನ್ನ ಉದ್ಯೋಗ ಬಿಡ ಬೇಕಾಗಿ, ಹೋಗಿ, ಅಂತಿಯೊಖೀಯದ್ದೊಂದು ಮಠದಲ್ಲಿ 4 ವರುಷ ಇದ್ದು, ಬಳಿಕ ಐಗುಪ್ತದ ಒಂದು ಕಾಡುಸ್ಥಳಕ್ಕೆ ಗಡಿ ದಾಟಿ ಹೋಗ ಬೇಕಾಗಿ, ಅಲ್ಲಿ 5ವರುಷದಿತ್ತ ತೀರಿದನು. ಆದರೆ ಸುರಿಯದಲ್ಲಿಯೂ ಮೆಸೊಪೊತಮಿಯದಲ್ಲಿಯೂ ಸಣ್ಣ ಅಸಿಯದ ಪ್ರದೇಶಗಳಾದ ಕಪ್ಪದೊಕಿಯದಲ್ಲಿಯೂ ಕಿಲಿಕಿಯದಲ್ಲಿಯೂ ಬಿಥೂನಿಯದಲ್ಲಿಯೂ ನೆಸ್ತೊರಿಯಾನರು ಅಂದರೆ ನೆಸ್ತೊರಿಯನ ಶಾಖೆಯವರು ಪ್ರಬಲರಾದರು. ಕುರಿಲ್ಲನೂ ಅವನ ಮಿತ್ರರೂ ಗ್ರೇಕ ಕೈಸರನ ಸಹಾಯದಿಂದ ಅವರನ್ನಡಗಿಸಲಿಕ್ಕೊದ್ದಾಡುತ್ತಿದ್ದರೂ ಅವರು ಹೆಚ್ಚುತ್ತಿದ್ದರು. ಅವರಲ್ಲಿ ಅನೇಕರು ಉಪದ್ರವಕ್ಕೆ ತಪ್ಪಿಸಿ ಕೊಳ್ಳಲಿಕ್ಕೆ ಪಾರ್ಶಿ ಸಾಮ್ರಾಜ್ಯದ ಶರಣು ಹೊಕ್ಕರು. ಯಾಕಂದರೆ, ಬಹ್ರಾಮ ರಾಯನು ಆ ಸಮಯ ಕ್ರೈಸ್ತರಿಗೆ ಒಲೆಯುವವನಾಗಿದ್ದನಲ್ಲ[4]? ಆಗ ಗ್ರೇಕ ರಾಜ್ಯದವರ ಅಸಹನಕ್ಕೋಸ್ಕರ ಎದೆಸ್ಸ ಪಟ್ಟದ ಪ್ರಖ್ಯಾತ ಬೋಧಕಶಾಲೆಯಿಂದ[5] ಓಡಿ ಬರ ಬೇಕಾದ ಥೋಮ ಬರ್ಸೌಮನೆಂಬ ನೆಸ್ತೊರಿಯಾನ ಉಪಾಧ್ಯಾಯನು ಕ್ರಿ. ಶ. 435ನೇ ವರುಷ ನೀಸಿಬಿಸ್ ಪಟ್ಟದ ಸಭಾಧ್ಯಕ್ಷನಾದನು[6]. ಅದೇ ವರುಷದಲ್ಲಿ ಸುರಿಯದ ನೆಸ್ತೊರಿಯಾನರು ನೀಕೇನ ಸಭೆಗಳನ್ನು ಬಹಿರಕ್ಕಗಲಿ, ಒಂದು ಪ್ರತ್ಯೇಕ ಸಭೆ ಮಾಡಿ ಕೊಂಡರು. ಅದಲ್ಲದೆ ಪಾರ್ಶಿಸಾಮ್ರಾಜ್ಯ ಪ್ರವೇಶ ಮಾಡಿದ್ದ ನೆಸ್ತೊರಿಯಾನರು ನೀಸಿಬಿಸಿನಲ್ಲಿ ಕ್ರಿ. ಶ. 489ನೇ ಅಬ್ದದ ವರೆಗೆ ಅಧ್ಯಕ್ಷನಾಗಿರುತ್ತಿದ್ದ ಆ ಥೋಮ ಬರ್ಸೌಮನ ಸಹಾಯದಿಂದ ಪಾರ್ಶಿ ಕ್ರೈಸ್ತರಲ್ಲಿ ನೆಸ್ತೊರಿಯಾನತ್ವವನ್ನು ಹಬ್ಬಿಸುವವರಾದರು.

ಕ್ರಿ. ಶ. 438ನೇ ವರುಷ ಆ 5ನೇ ಬಹ್ರಾಮನ ಉತ್ತರಾಧಿಕಾರಿಯಾದ 2ನೇ ಯೆಜ್ದಜೆರ್ದನ ಕಡೆಯಿಂದ ಕ್ರೈಸ್ತರ ಮೇಲೆ ತಿರಿಗಿ ಬರುವ ಹಿಂಸೆಯು ಅವನ ಶತ್ರು

1) 216ನೇ, 228ನೇ ಪಾನು. 2) 245ನೇ ಪಾನು. 3) 245ನೇ ಪಾನು. 4) 249ನೇ ಪಾನು. 5) 73ನೇ, 74ನೇ ಪಾನು. 6) 246ನೇ ಪಾನು.

ವಾದ 2ನೇ ಥೆಯೊದೊಸಿಯ ಕೈಸರನ ರಾಜ್ಯವನ್ನು ಬಿಟ್ಟಾಗತರಾದ ನೆಸ್ತೊರಿಯಾನರಿಗಲ್ಲ, ನೀಕೇನರಿಗೆ ಅಂದರೆ ಗ್ರೇಕ ರಾಜ್ಯದೊಳಗಿನ ಕ್ರೈಸ್ತರ ಸಂಗಡ ಇನ್ನೂ ಒಂದೇ ಆಗಿರುವಂಥ ಕ್ರೈಸ್ತರಿಗೆ ವಿಶೇಷದಿಂದ ತಾಗಿತು.

ಆ ನೀಕೇನರಲ್ಲಿ ಹಲವು ಕಾಲದಾರಭ್ಯ ಬೋಧಕರ ಅವಿವಾಹಿತ್ವಾಜ್ಞೆಯೂ ಸಭ್ಯರ ಸ್ವೇಚ್ಛೇ ಅವಿವಾಹಿತ್ವವೂ ಕಠಿಣ ಶರೀರದಂಡನವೂ[1] ಮಿಗಿಲಾಗಿದ್ದದ್ದು ಪಾರ್ಶಿ ಸಮ್ರಾಜರಿಗೆ ಅಗದಿ ಒಪ್ಪದಿರುತ್ತಿತ್ತು; ಅದೆಲ್ಲವೂ ಮಗರೆಂಬ ಪಂಡಿತರ ಕಾಯಕುಟುಂಬಾಭಿವೃದ್ಧ್ಯರ್ಥವುಳ್ಳ ಬೋಧನೆಗೆ ವಿರುದ್ಧವೇ. ಬರ್ಸೌಮನು ಕಾಲಗತಿಯಿಂದ, ಎಲ್ಲಾ ನಿಮ್ಮದೇ! ಎಂಬ ದೇವವಾಕ್ಯದ ಪ್ರಕಾರ ನೆಸ್ತೊರಿಯಾನರಲ್ಲಿ ಆ ಅವಿವಾಹಿತ್ವಾಜ್ಞೆಗಳನ್ನು ಕಿತ್ತು, ಸಭಾಧ್ಯಕ್ಷರೂ ಮದಿವೆ ಮಾಡಿ ಕೊಳ್ಳ ಬಹುದೆಂದು, ನೇಮಕ ಮಾಡಿದ್ದು ಕ್ರಿ. ಶ. 461ನೇ ವರ್ಷ ಸಮ್ರಾಜನಾದ ಫೀರೂಜ್ ಎಂಬವನಿಗೆ ಅತಿ ಹಿತವಾಗಿ ಕಾಣಿಸಿತು. ಆಗ ಕೆಲವು ಮಂದಿ ನೀಕೇನ ಅಧ್ಯಕ್ಷರು ಸೆಲ್ಯುಕೀಯ ಪಟ್ಣದಲ್ಲಿಯ[2] ಬಾಬುವೆಂಬ ತಮ್ಮ ಪಕ್ಷದ ಮುಖ್ಯಾಧ್ಯಕ್ಷನನ್ನು ಒಡಂಬಡಿಸಿದ್ದರಿಂದ ಇವನು ಬರ್ಸೌಮನನ್ನು ಸಭೆಯೊಳಗಿಂದ ಬಹಿಷ್ಕರಿಸಿದನು. ಫೀರೂಜ್ ಕೇಳಿ, ಕ್ರಿ. ಶ. 465ನೇದರಲ್ಲಿ ಬಾಬುವಿನ ಬೆರಳುಗಳಿಗೆ ಹಗ್ಗ ಕಟ್ಟಿಸಿ, ಹೀಗೆ ಅವನನ್ನು ತೂಗ ಹಾಕಿಸಿ, ಬಾರುಗಳಿಂದ ಹೊಡೆಸಿ ಕೊಲ್ಲಿಸಿ, ನೀಕೇನರನ್ನು ಕ್ರೂರವಾಗಿ ಬಾಧಿಸ ತೊಡಗಿ, ನೆಸ್ತೊರಿಯಾನರು ಸರ್ವ ಸಾಮ್ರಾಜ್ಯದಲ್ಲಿ ಮನಸ್ಸು ಬಂದ ಹಾಗೆ ತಮ್ಮ ಮತಕ್ಕನುಸಾರವಾಗಿರಲೆಂದು, ಆಜ್ಞಾಪಿಸಿ, ತನ್ನ ಕೈಯ ಕೆಳಗಿನ ನೀಕೇನರಿಗೂ ನೆಸ್ತೊರಿಯಾನರಿಗೂ ಹೆಚ್ಚು ಹೆಚ್ಚು ಭೇದವಾಗುವದಕ್ಕೆ ಆಸ್ಪದ ಕೊಡುತ್ತಿದ್ದನು; ಇದರಿಂದ ಸಹ ಗ್ರೇಕ ಕೈಸರರ ಬಲ ಕುಂದಿಸ ಬೇಕೆಂಬ ಆಲೋಚನೆಯು ಅವನಿಗಿತ್ತು. ಹೀಗಿರಲಿಕ್ಕಾಗಿ, ಗ್ರೇಕ ಕೈಸರರು ತಮ್ಮ ಅಧಿಕಾರದೊಳಗಿನ ನೆಸ್ತೊರಿಯಾನರನ್ನು ಹಿಂಸಿಸುತ್ತಿರಲು, ಕ್ರಿ. ಶ. 489ನೇ ವರುಷದಲ್ಲಿ ಆ ಕೈಸರರಲ್ಲೊಬ್ಬನಾದ ಆ ಜೇನೋನನು[3] ನೆಸ್ತೊರಿಯಾನರಿಂದ ಎದೆಸ್ಸ ಪಟ್ಣದಲ್ಲಿ ಪುನಃಸ್ಥಾಪಿತವಾಗಿದ್ದ ಉಪದೇಶಿಶಾಲೆ ಕೆಡಿಸಿದನು. ಆ ಸಮಯ ಆ ಶಾಲೆಯಲ್ಲಿದ್ದ ಬೋಧಕರೂ ಶಿಷ್ಯರೂ ನೀಸಿಬಿಸ್ ಪಟ್ಣಕ್ಕೋಡಿ, ಅಲ್ಲಿ ಒಂದು ದೊಡ್ಡ ಶಾಲೆಯನ್ನುತ್ಪಾದಿಸಿದರು. ಈಚೆ ಕ್ರಿ. ಶ. 496ನೇ ವರುಷ ಬಾಬೇಯನೆಂಬವನೊಬ್ಬ ನೆಸ್ತೊರಿಯಾನನು ಕ್ತೇಸಿಫೋನ್ ಮತ್ತು ಸೆಲ್ಯುಕೀಯ ಎಂಬ ಎರಡು ಪಟ್ಣಗಳಲ್ಲಿ ನಡೆಯುತ್ತಿದ್ದ ಮುಖ್ಯಾಧ್ಯಕ್ಷತೆಗೆ ಬಂದು, ಕಥೊಲಿಕನು ಅಂದರೆ ಸರ್ವ ಪಾರ್ಶಿ ಸಭೆಗಳ ಅಧ್ಯಕ್ಷನು ಎನ್ನಿಸಿ ಕೊಂಡು, 2 ವರುಷ ಇವೆಲ್ಲವುಗಳಲ್ಲಿ ನೆಸ್ತೊರಿಯಾನತ್ವ ವಿಸ್ತರಿಸುತ್ತಿದ್ದ ಬಳಿಕ ಸೆಲ್ಯುಕೀಯದಲ್ಲಿ ಒಂದು ಸಭಾಸಂಘವ ಕೂ

1) 71, 146, 219, 227ನೇ ಪಾನು; 34ನೇ ಸಂಧಿ. 2) 194ನೇ ಪಾನು. 3) 213ನೇ ಪಾನು.

ಡ ಕರಿಸಿದಲ್ಲಿ ಪಾರ್ಶಿ ಸಾಮ್ರಾಜ್ಯದ ಸಮಸ್ತ ಸಭೆಗಳು ಗ್ರೇಕ ರಾಜ್ಯದ ನೀಕೇನಮತಸ್ಥರ ಬಹಿಃಸಂಬಂಧ ಬಿಟ್ಟು ಬಿಟ್ಟವು. ಅಂದಿನಿಂದ ಸಾಸಾನಿದರ ಕೆಳಗಿನ ಆ ಕ್ರೈಸ್ತರೆಲ್ಲರು ಪೂರ್ಣ ಶಾಂತಿಯನ್ನನುಭವಿಸುತ್ತಾ ಬಂದರು. ಅವರ ಮುಖ್ಯ ದೇಶವು ಉಫ್ರಾತು ನದಿಯ[1] ಸುತ್ತಿನ ಖಲ್ದೇಯಕ್ಕೆ ಶೇರಿದ್ದರಿಂದ ಖಲ್ದೇಯಿಕರೆಂಬ ಹೆಸರು ಸಹ ಅವರಿಗೆ ಬಿತ್ತು. ಆದರೆ ನೀಸಿಬಿಸ್ ಪಟ್ಣದ ಆ ಹೊಸ ಉಪದೇಶಿ ಶಾಲೆಯು ಬಹಳ ಕೀರ್ತಿ ಗೊಂಡು, 6ನೇ ಕ್ರಿಸ್ತ ಶತಮಾನದಲ್ಲಿ ಒಂದೇ ಕ್ರೈಸ್ತಬೋಧಕಾದಿವಿದ್ಯಾಶಾಲೆ ಎನ್ನಿಸುತ್ತಲಿತ್ತು. ಕ್ರಿ. ಶ. 544ನೇ ವರುಷಕ್ಕೆ ಕೂಡಿದ್ದೊಂದು ಪಾರ್ಶಿ ಕ್ರೈಸ್ತರ ಸಭಾಸಂಘದಲ್ಲಿ—ಕಥೊಲಿಕನೆಂಬ ಮುಖ್ಯಾಧ್ಯಕ್ಷನಲ್ಲದೆ ಬೇರೆ ಅಧ್ಯಕ್ಷರು ಕೂಡ ಅವಿವಾಹಿಗಳಾಗಿರ ಬೇಕು, ತಾವೆಲ್ಲರು ನೀಕೇನ ವಿಶ್ವಾಸ ಪ್ರಮಾಣಕ್ಕೆ ಸಹ ಏನೂ ಕುಂದಿಲ್ಲದೆ ಅನುಸರಿಸುತ್ತಿರ ಬೇಕು ಎಂಬೆರಡು ವಿಷಯಗಳು ವ್ಯವಸ್ಥಿತವಾದವು.

ಮುಂಚೆ 2ನೇ ಶಾಹ್‌ಪೂರನು ತನ್ನ ಕಾಲದಲ್ಲಿ ಹಿಂಸಿಸುತ್ತಿದ್ದ ಕ್ರೈಸ್ತರಲ್ಲನೇಕರು ನಮ್ಮ ಈ ಹಿಂದು ದೇಶಕ್ಕೆ ಓಡಿ ಬಂದು, ಪಾರ್ಶಿ ಸಾಮ್ರಾಜ್ಯದ ತಮ್ಮ ಸಹೋದರರ ಸಂಗಡ ನಿತ್ಯ ಪರಿಚಿತಿಯಾಗಿರುತ್ತಿದ್ದರೆಂಬದು ಹಿಂದೆ ಹೇಳಲಾಯಿತು[2]. ತದನಂತರ ಆ ಸಾಮ್ರಾಜ್ಯದ ಕ್ರೈಸ್ತರೆಲ್ಲರು ನೆಸ್ತೊರಿಯಾನರಾದ ಮೇಲೆ ಹಿಂದು ದೇಶದವರು ಸಹ ನೆಸ್ತೊರಿಯಾನರೆನ್ನಿಸುವವರಾದರು. ಹಿಂದೆ ಲೇಖಿತವಾದಂತೆ[3] ಕ್ರಿ. ಶ. 530ನೇ ವರುಷಕ್ಕೆ (ಮುಂಬಯಿಯ ಹತ್ತರದ?) ಕಲ್ಯಾಣಿಯ[4] ಕ್ರೈಸ್ತ ಸಭೆಯಲ್ಲಿಯೂ ಮಲಯಾಳದ್ದರಲ್ಲಿಯೂ ಲಂಕಾದ್ವೀಪದ್ದರಲ್ಲಿಯೂ ಒಬ್ಬೊಬ್ಬ ಅಧ್ಯಕ್ಷನಿದ್ದನು; ಇವರು ಪಾರ್ಶಿಯರ ಮುಖ್ಯಾಧ್ಯಕ್ಷನಿಂದ ಉದ್ಯೋಗಕ್ಕೆ ಹಸ್ತಾಧಾನ ಹೊಂದಿದ್ದರು.

ನೆಸ್ತೊರಿಯಾನರ ಉತ್ಪಾದಕನಾದ ನೆಸ್ತೊರಿಯನು ಉದ್ವೇಗತ್ವದಿಂದ ಯೇಸು ಕ್ರಿಸ್ತನ ವಾಚಾತೀತ ಭಾವವನ್ನು ಕುರಿತು ಹಲವು ಅಯೋಗ್ಯ ಮಾತುಗಳನ್ನಾಡಿದ್ದು ನಿಶ್ಚಯ; ಅದಲ್ಲದೆ ಅವನು, ಹಿಂದೆ ಹೇಳಿರುವಂತೆ, ಯೇಸು ಕ್ರಿಸ್ತನ ದೇವತ್ವವನ್ನೂ ಮನುಷ್ಯತ್ವವನ್ನೂ ವಿಷಮ ರೀತಿಯಾಗಿ ವಿಂಗಡಿಸಿ ಅವೆರಡಕ್ಕೆ ಭಾವಾನೋನ್ಯತ್ವವಿಲ್ಲವೆಂಬಂತೆ ನೆನಸಿದ್ದನ್ನು ಮರಳಿ ಅನುಮಾನಿಸದ ಹಾಗೆ ಕಾಣಿಸುತ್ತದೆ. ಹ್ಯಾಗಾದರೂ ಆ ಕುರಿಲ್ಲನು ಎಫೆಸದ ಆ ಸರ್ವಸಭಾಸಂಘದಲ್ಲಿ ರಚಿತವಾದದೊಂದು ವಿಶ್ವಾಸಪ್ರಮಾಣಕ್ಕೆ ತಾನು ಹಸ್ತಾಕ್ಷರ ಹಚ್ಚಿ, ನೆಸ್ತೊರಿಯಾ

1) 39ನೇ ಪಾನು. 2) 195ನೇ ಪಾನು. 3) 82ನೇ ಪಾನು. 4) Others have thought that this place is ಕೊಲ್ಲಂ on the Malabar coast; but the name with Cosmas is "Calliano".

ನರು ಸಹ ಅದಕ್ಕೊಡಂಬಟ್ಟಿದ್ದಾರೆಂತ, ಬರೆದನು[1]; ಅದಲ್ಲದೆ ನೆಸ್ತೊರಿಯಾನರು ನೀಕೇನ ವಿಶ್ವಾಸಪ್ರಮಾಣವನ್ನಂಗೀಕರಿಸಿದ್ದು ಹಿಂದೆ ಗೊತ್ತಾಯಿತು; ಪುನಃ, ನಾವು ಕ್ರಿ. ಶ. ಈ 1868ನೇ ವರುಷ ಪಾರ್ಶಿಸ್ಥಾನದಲ್ಲಿಯೂ ಕುರ್ದಿಸ್ಥಾನವೆಂಬ ಅಸ್ಸುರಿಯದಲ್ಲಿಯೂ ಬೆರಿಕೆಯಿಲ್ಲದುಳಿದಿರುವ ನೆಸ್ತೊರಿಯಾನರನ್ನು ನೋಡಿದರೆ, ಅವರು ನಿಜ ಸೌವಾರ್ತಿಕರಾಗಿ[2] ಕಾಣಿಸದಿದ್ದರೂ ಇಂಥವರ ಸಹವಾಸಕ್ಕೆ ಮೆಚ್ಚುವವರು ಅವರಲ್ಲಿರುವದು ಸಹ ಗೊತ್ತಾಗುತ್ತದೆ.

ಕ್ರಿ. ಶ. 444ನೇ ವರುಷ ಯುತುಖನೆಂಬ ಕೊನ್ಸ್ತಂತೀನೊಪೊಲಿಯ ಮಠವಾಸಿಗಳ ಮುಖ್ಯಸ್ಥನೊಬ್ಬನು ಕ್ರಿಸ್ತನ ಏಕಭಾವತ್ವವನ್ನು ದರ್ಶಿಸುವದಕ್ಕೋಸ್ಕರ— ಅವನ ದೈವ ಭಾವವೂ ಮಾನುಷ ಭಾವವೂ ಕೂಡುವಾಗ ಅದು ಇದನ್ನು ಪೂರ್ಣವಾಗಿ ನುಂಗಿ ಕೊಂಡಿತು, ಆದ್ದರಿಂದ ಕ್ರಿಸ್ತನು ನಿಜ ಮನುಷ್ಯನಾಗಲಿಲ್ಲವೆಂತ, ಚರ್ಚಿಸಲಿಕ್ಕೆ ಹತ್ತಲು, ಮತ್ತೊಂದು ಮಹಾ ವಾದವು ಹುಟ್ಟಿತು. ಕ್ರಿ. ಶ. 451ನೇದಕ್ಕೆ ಬಿಥೂನಿಯದ ಖಲ್ಕೇದೊನು ಪಟ್ಟದಲ್ಲಿ ನೆರೆದ 4ನೆಯ ಸರ್ವಸಭಾಸಂಘದವರೂ ಬಳಿಕ 553ನೇದಕ್ಕೆ ಕೊನ್ಸ್ತಂತೀನೊಪೊಲಿಯಲ್ಲಿ ನೆರೆದ 5ನೆಯಂಥಾದ್ದರವರೂ, ಆ ಪರಿಯ ಏಕಭಾವತ್ವವು ಕ್ರಿಸ್ತನ ವಿಮೋಚನಕಾರ್ಯಕ್ಕೆ ಅಡ್ಡವಾಗುವ ಅಪಬೋಧನೆ ಎಂತ, ನಿರ್ಣಯಿಸಿದ ಮೇಲೆಯೂ ಆ ಏಕಭಾವತ್ವವಾದವು ಏಕಚಿತ್ತತ್ವದ್ದಾಯಿತಷ್ಟೇ. ಕ್ರಿ. ಶ. 633ನೇ ವರುಷ ಹಿಡಿದು ಇದು 59 ಅಬ್ದ ನಡೆಯುತ್ತಿದ್ದು, ತೀರಿತು; ಆಗ ಕೊನ್ಸ್ತಂತೀನೊಪೊಲಿಯಲ್ಲಿ ತ್ರುಲ್ಲಾನಿಕವೆಂಬ 6ನೇ ಸರ್ವಸಭಾಸಂಘದಿಂದ[3], ಕ್ರಿಸ್ತನ ಅನ್ಯೋನ್ಯಮಯ ದ್ವಿಚಿತ್ತತ್ವವು ಸಭಾಮತವೆಂತ, ಸ್ಥಾಪಿತವಾಯಿತು.

ಕ್ರಿಸ್ತೈಕಭಾವತ್ವದರ್ಶಕರು ಹೆಚ್ಚಾಗಿ ಸುರಿಯ ಅರ್ಮಿನಿಯ ಐಗುಪ್ತ ಹಬೆಶಿ ಇವು 4 ದೇಶಗಳಲ್ಲಿ ನೆಲೆಗೊಂಡುಳಿದರು. ಸುರಿಯದವರ ಪತ್ರಿಯರ್ಖನೆಂಬ ಮುಖ್ಯ ಅಧ್ಯಕ್ಷನು ಅಂತಿಯೋಖಿಯ ಪಟ್ಟದಲ್ಲಿ ವಸ್ತಿಯಾಗಿದ್ದನು. ಐಗುಪ್ತದಲ್ಲಿ ಸುಮಾರು 50 ಲಕ್ಷ ಜನರಾದ ಸಕಲ ಕೊಪ್ತರು[4] ಅಂದರೆ ಐಗುಪ್ತದ ಸಕಲ ಮೂಲನಿವಾಸಿಗಳು ಏಕಭಾವತ್ವಮತ ಹಿಡು ಕೊಂಡಿದ್ದರು; ಅಲ್ಲಿ ಪರವಾಸಿಗಳಾಗಿರುವ ಸುಮಾರು 3,00,000 ಮಂದಿ ಗ್ರೇಕರು ಮಾತ್ರ ತ್ರುಲ್ಲಾನಿಕ ಸಂಘದ ನಿರ್ಣಯಕ್ಕೆ ಒಡಂಬಟ್ಟರು. ಏಕಚಿತ್ತತ್ವದರ್ಶನವು ಪಲೇಸ್ತೀನಕ್ಕೆ ಉತ್ತರದಲ್ಲಿ ಲಿಬನ (ಲಿಬನೋನು) ಪರ್ವತದಲ್ಲಿ[5] ಮರೋನೀತರೆಂಬ ಜನರೊಳಗೆ 12ನೇ ಕ್ರಿಸ್ತಶತಮಾನದ ವರೆಗೂ ಕಾಣಿಸುತ್ತಲಿತ್ತು.

1) Cyrill. ad Acac. apud Mansi V, 314, 315. 2) 163ನೇ ಪಾನು. 3) According to the Greeks who do not count that of A. D. 680 as a separate one. 4) 85ನೇ ಪಾನು. 5) 35ನೇ ಪಾನು.

ಇಷ್ಟನ್ನು ಹೇಳಿರುವಲ್ಲಿ ಒರೀಗೆನನೆಂಬ ಆ ಮಹಾತ್ಮನು ವಾಗ್ದೇವರಾದ ಕ್ರಿಸ್ತನನ್ನು ಕುರಿತು ಬರೆದದೊಂದು ಮಾತನ್ನು ತೆಗೆದು, ಮನುಷ್ಯನಾದ ಕ್ರಿಸ್ತನಿಗೆ ತಾಗಿಸ ತಕ್ಕದ್ದಾಗಿದೆ; ಅದೇನಂದರೆ—ಕ್ರಿಸ್ತನ ಪುರುಷತ್ವವನ್ನು ಪೂರ್ಣವಾಗಿ ತಿಳಿಯುವದು ಮನುಷ್ಯರ ಶಕ್ತಿಗೆ ಮಿಾರುವದಲ್ಲದೆ ಮನುಷ್ಯಾತೀತರಾದ ಆತ್ಮರದಕ್ಕೆ ಸಹ ಮಿಾರೀತು; ಸದಾಪಿತನೊಬ್ಬನೇ ಮಾತ್ರ ಅದನ್ನು ಪೂರ್ಣವಾಗಿ ಬಲ್ಲನು.



## 32. ಯೆರೂಸಲೇಮಿನ ಸ್ಥಿತಿಗತಿಯು.

ಯೆರೂಸಲೇಮು ಪಟ್ಟಣವು ಕ್ರಿ. ಶ. 70ನೇ ವರುಷದಲ್ಲಿ ವೆಸ್ಪಸಿಯಾನನೆಂಬ ರೋಮಿಾಯ ಕೈಸರನ ಆಳುವಿಕೆಯಲ್ಲಿ ಹಾಳಾದದ್ದು ಹಿಂದೆ ಪಠಿಸಿದ್ಧೀರಿ[1]. ಆ ಸಮಯ ಅನೇಕ ಯೆಹೂದ್ಯರು ಐಗುಪ್ತ ದೇಶಕ್ಕೆ ಓಡಿ ಹೋಗಿ, 2 ವರುಷದ ಮೇಲೆ ಅಲ್ಲಿಯ ತಮ್ಮ ವಂಶಸ್ಥರ ಸಂಗಡ ರೋಮಿಾಯರಿಗೆ ವಿರೋಧವಾಗಿ ದಂಗೆ ತೆಗೆಯಲು, ವೆಸ್ಪಸಿಯಾನನು ಆ ದಂಗೆಗಾರರಲ್ಲಿ ಹೇರಳರನ್ನು ಕೊಲ್ಲಿಸಿ, ಯೆಹೂದ್ಯರು 220 ವರುಷಕ್ಕೆ ಮುಂಚೆ ದೇವರ ಆಜ್ಞೆ ಮಿಾರಿ[2] ಮಧ್ಯ ಐಗುಪ್ತದ ಮೆಂಫಿಸ್ ಎಂಬ ಪಟ್ಟಣದ ಬಳಿಯಲ್ಲಿ ಕಟ್ಟಿದ್ದದೊಂದು ದೇವಾಲಯವನ್ನು ನಾಶ ಮಾಡಿಸಿದನು.

ಸುಮಾರು 40 ವರುಷಕ್ಕೀಚೆ ಆಫ್ರಿಕ ಖಂಡದ ಕೂರೇನೆ ಶೀಮೆಯ[3] ಯೆಹೂದ್ಯರು ಕಲಹಕ್ಕೆದ್ದು, ಅಲ್ಲಿಯ ರೋಮಿಾಯರನ್ನೂ ಗ್ರೇಕರನ್ನೂ ಅತಿ ಕ್ರೂರತ್ವದಿಂದ ಬಾಧಿಸುವವರಾದರು; ತಾವು ಶೆರೆ ಹಿಡು ಕೊಂಡವರ ಮೈಚರ್ಮವನ್ನು ಸುಲಿಯುವದರಿಂದಾಗಲಿ ಅವರ ಮೈಯನ್ನು ತುಂಡು ತುಂಡು ಕೊಯ್ಯುವದರಿಂದಾಗಲಿ ಅವರನ್ನು ಕೊಂದು, ಅವರ ರಕ್ತವನ್ನು ಹೂಸಿ ಕೊಂಡು ತಿರಿಗ್ಯಾಡಿ, ಆಗಿಂದಾಗ ಅವರ ಮಾಂಸವನ್ನು ತಿನ್ನುತ್ತಿದ್ದರು. ಈ ನೀಚ ಪ್ರಕಾರವಾಗಿ ಅಲ್ಲಿಯ ಯೆಹೂದ್ಯರು 2,20,000 ಜನರನ್ನು ಸಂಹರಿಸಿದರು; ಅದೇ ಕಾಲದಲ್ಲಿ ಅದೇ ರೀತಿಯಿಂದ ಐಗುಪ್ತದ ಯೆಹೂದ್ಯರು 2,00,000 ಜನರನ್ನೂ ಕುಪ್ರ ದ್ವೀಪದ[4] ಯೆಹೂದ್ಯರು 2,40,000 ಜನರನ್ನೂ ಹತ ಮಾಡಿದರು. ಅವರು ಅಲ್ಲಲ್ಲಿ ಸಂಹರಿಸಿದವರಲ್ಲಿ ಅನೇಕ ಕ್ರೈಸ್ತರಿದ್ದರೆಂಬ ಹಾಗೆ ಕಾಣಿಸುತ್ತದೆ. ಆಗ ತ್ರಾಯಾನನೆಂಬ ರೋಮಿಾಯ ಕೈಸರನು[5] ಯೆಹೂದ್ಯರನ್ನು ತಿರಿಗಿ ಒಳಪಡಿಸುವದಕ್ಕೆ ಅವರಲ್ಲಿ ಹೇರಳರನ್ನು ಕೊಲ್ಲಿಸ ಬೇಕಾಯಿತು. ಪೆಲ್ಲ ಎಂಬಲ್ಲಿಗೆ ಓಡಿ ಹೋಗಿದ್ದ ಕ್ರೈಸ್ತರು ಅಷ್ಟರ

1) 4ನೇ ಸಂಧಿ. 2) 5ನೇ ಮೋಶೆ. 12. 3) 84ನೇ ಪಾನು; 18ನೇ ಪಾನು ಸರಿ ನೋಡು. 4) 46ನೇ ಪಾನು ಸರಿ ನೋಡು. 5) 108ನೇ ಪಾನು.

ಲ್ಲಿ ಯೆರೂಸಲೇಮು ಪಟ್ಟವು ಮುಂಚೆ ಇದ್ದಲ್ಲಿಗೆ ತಿರಿಗಿ ಬಂದು, ನೆಲೆ ಗೊಂಡಿದ್ದರು[1].

ತ್ರಾಯಾನ ಕೈಸರನು ಮಡಿದ ಹಿಂದೆ ಅವನ ಉತ್ತರಾಧಿಕಾರಿಯಾದ ಹದ್ರಿಯಾನನು[2] ಯೆಹೂದ್ಯರ ಬಲ ನೊಂದಿಸುವದಕ್ಕೋಸ್ಕರ ಅಲ್ಲಿ ರೋಮಾಯ ಮೂರ್ತಿಪೂಜಕ ಪ್ರಜೆಯನ್ನಿಳಿಸಿ, ಯೆಹೂದ್ಯರು ಇನ್ನು ಮುಂದೆ ಪರಿಚ್ಛೇದನೆ ಮಾಡಿ ಕೊಳ್ಳ ಬಾರದೆಂತ, ಆಜ್ಞೆ ಪ್ರಕಟಿಸಲಿಕ್ಕೆ, ಅಲ್ಲಿ ಆ ಮೂರ್ತಿಪೂಜಕರದೊಂದು ಪಟ್ಟವೂ ಕೋಟೆಯೂ ಉತ್ಪನ್ನವಾಯಿತು; ಯೂಪಿತೆರ್ ಎಂಬ ರೋಮಾಯ ಮುಖ್ಯ ದೇವತೆಯ[3] ಒಂದು ಗುಡಿಯು ಆ ಪಟ್ಟದಲ್ಲಿ ಕಟ್ಟೋಣವಾಗುವದರಿಂದ ಆ ದೇವತೆಯ ಒಂದು ಹೆಸರಿನ ಮೇಲೆ ಆ ಪಟ್ಟಕ್ಕೆ ಏಲಿಯ ಕಪಿತೋಲೀನ ಎಂಬ ಹೆಸರು ಬಂತು. ಯೆಹೂದ್ಯರು ಸಹ ಆ ಗುಡಿಗೆ ಕಾಣಿಕೆ ತರ ಬೇಕೆಂತ, ರಾಜಾಜ್ಞೆಯಾಯಿತು.

ಅಷ್ಟೆಲ್ಲವಾಗಿ ಸರ್ವ ದಿಕ್ಕಿನ ಯೆಹೂದ್ಯರಲ್ಲಿ ಅತಿರೇಕ ರೋಷವು ಹುಟ್ಟಿತು. ಬಳಿಕ ಕ್ರಿ. ಶ. 131ನೇ ವರುಷಕ್ಕೆ ಪಲೇಸ್ತೀನದ ಒಬ್ಬ ಯೆಹೂದ್ಯನು, ತಾನು ದೇವರಿಂದ ವಾಗ್ದತ್ತವಾದ ಯಕೋಬನ ನಕ್ಷತ್ರ[4]! ಎಂತ, ಹೇಳಿ, ಬರ್ಕೊಖ್ಬನು ಅಂದರೆ ನಕ್ಷತ್ರದ ಮಗನು ಎಂಬ ಹೆಸರನ್ನು ತಕ್ಕೊಂಡು[5], ಸರ್ವತ್ರದ ತನ್ನ ವಂಶಸ್ಥರನ್ನೊಡಂಬಡಿಸಿ, ಒಂದು ದೊಡ್ಡ ದಂಡನ್ನು ಕೂಡಿ ಕೊಂಡು, ಪಲೇಸ್ತೀನದಲ್ಲಿಯ 950 ಊರುಗಳನ್ನೂ 50 ಪಟ್ಟಗಳನ್ನೂ ಹಿಡು ಕೊಂಡು, ಏಲಿಯ ಕಪಿತೋಲೀನವನ್ನು ಸಹ ಸಾಧಿಸಿ ಕೊಂಡನು. ಅವನು ಪಲೇಸ್ತೀನದಲ್ಲಿರುವ ಕ್ರೈಸ್ತರನ್ನು ದಂಗೆಗೂ ವಿಶ್ವಾಸಭ್ರಷ್ಟತ್ವಕ್ಕೂ ಸಮ್ಮತಿ ಪಡಿಸಲಿಕ್ಕೆ ಪೇಚಾಡಿದ್ದು ವ್ಯರ್ಥವಾಯಿತು; ಅವರು ತಮ್ಮ ಕರ್ತನ ಆಜ್ಞೆಗಳನ್ನು[6] ಜ್ಞಾಪಕ ಮಾಡಿ ಕೊಂಡು, ಆ ಸುಳ್ಳುಮೆಸ್ಸೀಯನಿಗೆ ಶೇರಿಲ್ಲ. ಆದ್ದರಿಂದ ಅವನು ಕ್ರೈಸ್ತರನ್ನು ಬಹುಶಃ ಪೀಡಿಸಲಿಕ್ಕೂ ಹಿಂಸಿಸಲಿಕ್ಕೂ ತೊಡಗಿದನು. ಹದ್ರಿಯಾನನು ಅವನಿಗಾಗಿ ಕಳುಹಿಸಿದ ಯೂಲಿಯ ಸೆವೇರನೆಂಬ ಉತ್ತಮ ದಳವಾಯಿಯು ಒಂದು ಪಟ್ಟದ ಮೇಲೊಂದನ್ನು ಅವನ ಕೈಯಿಂದ ಹಿಡಿಯುತ್ತಿದ್ದು, 2 ವರುಷದ ಮೇಲೆ ಅವನನ್ನು ಏಲಿಯ ಕಪಿತೋಲೀನದೊಳಗೋಡಿಸಿ, ಅದಕ್ಕೆ ಮುತ್ತಿಗೆ ಹಾಕಿದನು. ಬರ್ಕೊಖ್ಬನು ಶೂರತ್ವದಿಂದೆ ದುರಿಸುತ್ತಿದ್ದರೂ ಕ್ರಿ. ಶ. 134ನೇ ವರುಷ ಆ ಸ್ಥಳವು ರೋಮಾಯರಿಗೆ ವಶವಾಯಿತು. ಅಂದಿನ ಯುದ್ಧದಲ್ಲಿ ಬರ್ಕೊಖ್ಬನಲ್ಲದೆ ಪಲೇಸ್ತೀನದಲ್ಲಿ 5,80,000 ಯೆಹೂದ್ಯರೂ ಶತ್ರುಗಳ ಖಡ್ಗದಿಂದ ಸತ್ತರು; ಏಲಿಯ ಕಪಿತೋಲೀನವೊಂದರಲ್ಲಿಯೇ

---

1) 64ನೇ ಪಾನು. 2) 112ನೇ ಪಾನು. 3) 8ನೇ ಪಾನು ಸರಿ ನೋಡು. 4) 4 ಮೋಶೆ. 24, 17. 5) 112ನೇ ಪಾನು. 6) ಮತ್ತಾ. 24;—20, 21, 22, 50ನೇ ಪಾನು.

1,80,000 ಮಂದಿ ಹತರಾದರು. ಅದು ಹೊರ್ತಾಗಿ ಪಲೇಸ್ತೀನವಲ್ಲದ ಶೀಮೆಗಳಲ್ಲಿ ಬರ್ಕೊಖ್ಬನ ಪಕ್ಷಕರಾಗಿದ್ದವರೊಳಗೆ ಸುಮಾರು 5,00,000 ಯೆಹೂದ್ಯರು ಸಂಹಾರ ಪಟ್ಟರು. ಮತ್ತೆ ರೋಮಿಾಯರು ಪಲೇಸ್ತೀನದ 50 ಪಟ್ಣಗಳನ್ನೂ ಸುಮಾರು 1000 ಊರುಗಳನ್ನೂ 480 ಸಭಾಶಾಲೆಗಳನ್ನೂ ಹಾಳು ಮಾಡಿ ಬಿಟ್ಟಿದ್ದರು. ತಮ್ಮ ಕೈಶೆರೆಯಾದವರನ್ನು ಅವರು ಬೇರೆ ಬೇರೆ ಶೀಮೆಗಳಿಗೆ ಕಳುಹಿಸಿ, ದಾಸತ್ವಕ್ಕೆ ಮಾರಿದರು. ತದನಂತರ ಹದ್ರಿಯಾನನು ಯೆರೂಸಲೇಮಿನಲ್ಲಿ ಇನ್ನೂ ಉಳಿದ್ದನ್ನು ಪೂರಾ ಕೆಡಿಸಿ, ಅದು ಎಂದೂ ತಿರಿಗಿ ಏಳಲಿಕ್ಕಿಲ್ಲ! ಎಂಬಂತೆ ಅದು ಇದ್ದ ಸ್ಥಳದಲ್ಲಿ ನೇಗಿಲು ಹೊಡಿಸಿ, ಚಿಯೋನ್‌ಕೋಟೇ ಬೆಟ್ಟದಲ್ಲಿ ಹೊಲ ಮಾಡಿಸಿ[1], ಯೆಹೂದ್ಯ ದೇವಾಲಯವಿದ್ದ ಬೆಟ್ಟವನ್ನು ತಗ್ಗಿಸಿ, ಅದರಲ್ಲಿ ಯೂಪಿತೆರಿನ ಗುಡಿ ಕಟ್ಟಿಸುವದನ್ನು ತಿರಿಗಿ ಸಾಗಿಸಿ, ಯೆಹೂದ್ಯರು ಈ ಮೂರ್ತಿಸ್ಥಾನಕ್ಕೆ ಮುಂಚಿನಂತೆ ಕಾಣಿಕೆ ಕೊಡ ಬೇಕೆಂತ, ನೇಮಿಸಿದನು. ಅದಲ್ಲದೆ ಆ ಕೈಸರನು—ಯೆಹೂದ್ಯ ನಾಡಿನ ಹೊರಗಣ ಯೆಹೂದ್ಯರು ಅದರೊಳಗೆ ಪುನಃ ಪ್ರವೇಶಿಸ ಬಾರದು; ಸಕಲ ಜನ ಪರಿಚ್ಛೇದನೆಯವರಲ್ಲಿ ಯಾರಾದರೂ ಏಲಿಯ ಕಪಿತೋಲೀನಕ್ಕೆ ಸಮಿಾಪ ಬಂದರೆ ಮರಣಶಿಕ್ಷೆ ಆಗುವದೆಂತ, ಕಟ್ಟು ಮಾಡಿ, ಕ್ರೈಸ್ತರು ಪರಿಶುದ್ಧವೆಂತ ಹೇಳುವ ಸ್ಥಳಗಳಾದ ಗೊಲ್ಗೊಥವೆಂಬ ಯೇಸುವಿನ ಮರಣಸ್ಥಾನದಲ್ಲಿ ರೂಪದೇವತೆಗೊಂದು ಗುಡಿಯನ್ನೂ ಯೇಸುವಿನ ಸಮಾಧೀ ಬಂಡೆಯ ಮೇಲೆ ಯೂಪಿತೆರಿನದೊಂದು ದೊಡ್ಡ ಪ್ರತಿಮೆಯನ್ನೂ ಏರಿಸಿದನು.

ಏಲಿಯ ಕಪಿತೋಲೀನದಲ್ಲಿ ಒಂದು ಕ್ರೈಸ್ತ ಸಭೆಯು ಬೇಗ ತಿರಿಗಿ ನೆರಕೊಂಡು, ಕೈಸರನ ಆ ಆಜ್ಞೆಗನುಸಾರವಾಗಿ ಯೆಹೂದ್ಯಮತಜರಲ್ಲದ ಅಧ್ಯಕ್ಷರನ್ನು[2] ತನಗೆ ಆರಿಸಿ ಕೊಳ್ಳ ಬೇಕಾಯಿತು. ಒರೀಗೆನನು ಕ್ರಿ. ಶ. 215ನೇ ವರುಷದಲ್ಲಿ ಪಲೇಸ್ತೀನಕ್ಕೆ ಪಯಣ ಮಾಡುವಂದು ಬಹು ಕಾಲದಿಂದ ಅವನ ಮಿತ್ರನಾಗಿದ್ದ ಅಲೆಕ್ಸಂದರನೆಂಬವನೊಬ್ಬನು ಆ ಸಭೆಯ ಅಧ್ಯಕ್ಷನಾಗಿದ್ದನು[3]. ಇವನು ಮುಂಚೆ ಕಪ್ಪದೊಕಿಯದ ಒಂದು ಸಭೆ ಪರಿಪಾಲಿಸುತ್ತಿದ್ದು, ಸೆಪ್ತೆಮಿಯ ಸೆವೇರ ಕೈಸರನಿಂದಾದ ಹಿಂಸೆಯಲ್ಲಿ[4], ಕ್ರಿ. ಶ. 204ನೇ ವರುಷದಲ್ಲಿ, ಬಹಳ ಬಾಧೆ ಪಡುತ್ತಿದ್ದರೂ ಒಳ್ಳೇ ಸಾಕ್ಷಿಗಾರನಾಗಿ ಶೋಭಿಸಿ, ಕಾಲಗತಿಯಿಂದ, ಕ್ರಿಸ್ತನು ನಡೆದ ಸ್ಥಳಗಳನ್ನು ನೋಡುವೆನೆಂತ, ಏಲಿಯ ಕಪಿತೋಲೀನಕ್ಕೆ ಸಹ ಬರುವಾಗ ಅಲ್ಲಿಯ ಸಭಾಧ್ಯಕ್ಷನು ಸತ್ತಿದ್ದನು; ಹೀಗಿರಲಿಕ್ಕೆ ಆ ಸಭೆಯವರು ಅವನನ್ನು ಪುನರ್ಗಮಿಸ ಗೊಡದೆ, ತಮ್ಮ ಅಧ್ಯಕ್ಷನನ್ನು ಹೆಕ್ಕಿ ಕೊಂಡಿದ್ದರು. ದೆಕಿಯ ಕೈಸರನ ಕಡೆಯ

1) ವಿಾಕ. 3, 12; ಯೆರೆ. 26, 18. 2) 65ನೇ ಪಾನು. 3) 154ನೇ ಪಾನು. 4) 115ನೇ ಪಾನು.

ಹಿಂಸೆಯು ಹತ್ತಲು[1], ಬಹಳ ಮುದುಕನಾದ ಅಲೆಕ್ಸಂದರನನ್ನು ಹಿಡು ಕೊಂಡು ಹೋಗಿ, ಕೈಸರೈಯ ಪಟ್ಣದ ಶೆರೆಮನೆಯಲ್ಲಿಟ್ಟರು. ಅಲ್ಲಿಯ ನ್ಯಾಯಾಧಿಪತಿಯು ಅವನನ್ನು ತನ್ನ ಹತ್ತರ ಕರತರಿಸಿದಂದು ಅವನ ಮಾನ್ಯ ರೂಪ ಭಾವಗಳನ್ನು ಕಂಡು, ಅವನಿಗೆ ಮರಣಾಜ್ಞೆ ಮಾಡಿಸಲಿಕ್ಕಂಜಿ, ಅವನನ್ನು ಶೆರೆಮನೆಗೆ ತಿರಿಗಿ ವೈಯ ಹೇಳಿ, ಕಾಲಕಾಲಕ್ಕೆ ತಿರಿಗಿ ತರಿಸುತ್ತಾ, ಹೊಡಿಸುತ್ತಾ, ಪೀಡಿಸುತ್ತಾ ಇದ್ದನು. ಕಡೆಯಲ್ಲಿ ಕ್ರಿ. ಶ. 251ನೇ ವರುಷಕ್ಕೆ ಆ ಮುದೀ ಅಧ್ಯಕ್ಷನು ತಾನು ಪಡುತ್ತಿದ್ದ ಅನಂತ್ಯ ಶ್ರಮಗಳ ದೆಸೆಯಿಂದ ಬಲಹೀನನಾಗಿ, ಶೆರೆಮನೆಯೊಳಗೆ ಸತ್ತು, ತನ್ನ ಕರ್ತನ ಸ್ಥಳಕ್ಕೆ ಹೋದನು.

ಕೊನ್ಸ್ತಂತೀನ ಕೈಸರನು ಕ್ರಿ. ಶ. 323ನೇ ಅಬ್ದ ಏಕ ಚಕ್ರವರ್ತಿಯಾಗಿ, ಏಲಿಯ ಕಪಿತೋಲೀನಕ್ಕೆ ಯೆರೂಸಲೇಮೆಂಬ ಹೆಸರನ್ನು ಮತ್ತು ಕೊಟ್ಟು, ಅದರಲ್ಲಿ ಕಟ್ಟಿದ್ದ ದೇವಸ್ಥಾನಗಳನ್ನೆಲ್ಲಾ ಕೆಡವಿಸಿ[2], ಅದರಲ್ಲಿಯೂ ಇಪ್ಪೇ ಗುಡ್ಡದಲ್ಲಿಯೂ ಬೆತ್ಲೆಹೇಮಿನಲ್ಲಿಯೂ ಮಮ್ರೆ ಎಂಬ ಹೆಬ್ರೋನಿನಲ್ಲಿಯೂ ಒಂದೊಂದು ದೇವಾಲಯವನ್ನು ಕಟ್ಟಸಿದ್ದಲ್ಲದೆ—ಗಡಿ ದಾಟಿ ಹೋದ ಯೆಹೂದ್ಯರು ವರುಷಕ್ಕೊಮ್ಮೆ ಯೆರೂಸಲೇಮು ಹಾಳಾದ ದಿನದಲ್ಲಿ ತಮ್ಮ ಪರಿಶುದ್ಧ ಪಟ್ಣವು ಮುಂಚೆ ಇದ್ದ ಸ್ಥಳಗಳಿಗೆ, ಹಣ ಕೊಟ್ಟು, ಬಂದು, ಅವಲ್ಲಿ ದುಃಖಿಸಿ ಗೋಳಾಡ ಬಹುದೆಂತ, ಅಪ್ಪಣೆ ಸಾರಿಸಿದನು. ಕ್ರಿ. ಶ. 325ನೇ ವರುಷ ಯೆರೂಸಲೇಮಿನ ಮಕ್ಸಿಮನೆಂಬ ಕೀರ್ತ್ಯ ಅಧ್ಯಕ್ಷನು ಸಹ ನೀಕೇಯ ಪಟ್ಣದ ಸರ್ವಸಭಾಸಂಘಕ್ಕೆ ಬಂದನು[3].

ಪಲೇಸ್ತೀನದ ಗಡಿಪಾರಾಗಿದ್ದ ಯೆಹೂದ್ಯರು ತನ್ಮಧ್ಯ ಮುಖ್ಯವಾಗಿ ಬಬೆಲು ದೇಶದ ಫ್ರಾತು ನದಿಯ ಎಡ ದಂಡೆಯಲ್ಲಿ ಮನೆ ಕಟ್ಟಿ ಕೊಂಡಿದ್ದರು; ಪಲೇಸ್ತೀನದೊಳಗಿನವರ ರಬ್ಬಿಗಳೆಂಬ ಉಪಾಧ್ಯಾಯರು ತಿಬೇರಿಯವೆಂಬ ಪಟ್ಣದಲ್ಲಿ ಒಂದು ಶಾಲೆ ಸ್ಥಾಪಿಸಿದ್ದರು. ಸಮರೀಯದ ರಕ್ತಸಾಕ್ಷಿ ಎಂಬ ಉಪನಾಮದ ಆ ಯುಸ್ತೀನನು[4] ಸುಮಾರು ಕ್ರಿ. ಶ. 160ನೇ ವರುಷಕ್ಕೆ ಬರೆದ್ದೊಂದು ಗ್ರಂಥದಲ್ಲಿ—ನನ್ನ ಕಾಲದಲ್ಲಿ ಪಲೇಸ್ತೀನದೊಳಗಣ ಯೆಹೂದ್ಯರು ಸರ್ವ ದಿಕ್ಕಿಗೆ ದೂತರನ್ನು ಕಳುಹಿಸಿ, ಇವರಿಂದ ಕ್ರಿಸ್ತನಿಗೂ ಕ್ರೈಸ್ತರಿಗೂ ದೂಷಣೆ ಮಾಡಿಸುತ್ತಾ ಇದ್ದರೆಂತ, ಹಾಕಿದ್ಧಾನೆ. ಅದೇ ಸಮಯ ಕ್ರೈಸ್ತರನ್ನು ಶಪಿಸುವಂಥಾದೊಂದು ಪ್ರಾರ್ಥನೆಯು ಹುಟ್ಟಿತು; ಇದನ್ನು ಒಬ್ಬೊಬ್ಬ ಯೆಹೂದ್ಯನು ದಿನಾಲು ಹೇಳ ಬೇಕೆಂಬ ಕಟ್ಟಲೆಯಾಯಿತು[5]. ತಾವು ಹೋಗಿರುವಲ್ಲಿ ಎಲ್ಲಿಯೂ[6], ವಿಶೇಷವಾಗಿ ಅರಬಿಸ್ಥಾನದಲ್ಲಿ, ಯೆಹೂದ್ಯರು ಕ್ರೈಸ್ತರನ್ನು ಹಿಂಸಿಸಲಿಕ್ಕೊದ್ದಾಡುತ್ತಿದ್ದರು. ಕ್ರಿ. ಶ.

1) 118ನೇ, 119ನೇ ಪಾನು. 2) 180ನೇ ಪಾನು. 3) 185ನೇ ಪಾನು. 4) 13ನೇ ಸಂಧಿ. 5) 37ನೇ ಪಾನು ಸರಿ ನೋಡು. 6) 135ನೇ, 190ನೇ, 193ನೇ, 256ನೇ ಪಾನುಗಳು.

523ನೇ ವರುಷದಲ್ಲಿ ದ್ಜು ನೊವಾಸ್ ಎಂಬ ಯೆಹೂದ್ಯಮತಸ್ಥನು ಯೆಮೆನ್, ನಜ್ರಾನ್ ಮುಂತಾದ ಅರಬಿಸ್ಥಾನದ ಒಂದು ದೊಡ್ಡ ಭಾಗದ ಮೇಲೆ[1] ರಾಜನಾಗಿದ್ದನು; ಅವನು ಹೊಮೆರಿತರೆಂಬ ಹಿಮ್ಯರಿತರ ವಂಶಜನು; ಇವರಿಗೆ ಯೊಕ್ತಾನಿದರೆಂಬ ಹೆಸರು ಸಹ ಅದೆ[2]. ಅವನು ತನ್ನ ರಾಜ್ಯಕ್ಕೆ ಬರುತ್ತಿದ್ದ ಎಲ್ಲಾ ಕ್ರೈಸ್ತ ವ್ಯಾಪಾರಸ್ಥರನ್ನು ಕೊಲ್ಲಲಿಕ್ಕೂ ಅದರೊಳಗಿರುವ ಕ್ರೈಸ್ತರನ್ನು ಅತಿ ಕ್ರೂರ ಹಿಂಸೆಯಿಂದ ಯೆಹೂದ್ಯರಾಗ ಮಾಡಲಿಕ್ಕೂ ತೊಡಗಿರಲು, ಹಬೆಸಿ ದೇಶದ[3] ಎಲೆಸ್ಬಾವನ್ ಎಂಬ ಕ್ರೈಸ್ತ ಅರಸನು ಆ ವರ್ತಮಾನ ಕೇಳಿ, ಒಂದು ದಂಡು ಕಳುಹಿಸಿ, ದ್ಜು ನೊವಾಸನ್ನು ಜಯಿಸಿ, ಅವನ ಬದಲಾಗಿ ಅಬ್ರಹಾಮನೆಂಬ ಒಬ್ಬ ಕ್ರೈಸ್ತನನ್ನು, ರಾಜನೆಂತ, ನೇಮಿಸಿದನು. ಆದರೆ ಇವನು ಬೇಗ ಸತ್ತಾಗ ಆ ದ್ಜು ನೊವಾಸ್ ತಿರಿಗಿ ಬಲ ಹೊಂದಿ, ರಾಜ್ಯವನ್ನು ಮತ್ತೊಮ್ಮೆ ಸ್ವತಂತ್ರಿಸಿ ಕೊಂಡು, ಕ್ರೈಸ್ತರ ಮೇಲೆ ಹೊಸ ಹಿಂಸೆಯನ್ನು ತಂದು, 5000 ಮಂದಿಗಿಂತ ಹೆಚ್ಚು ಕ್ರೈಸ್ತರನ್ನು ಹತ ಮಾಡಿಸಿದಂದು ಎಲೆಸ್ಬಾವನ್ ತಾನು ಒಂದು ಸೇನೆಯೊಂದಿಗೆ ಬಂದು, ಮುಂಚಿನಂತೆ ಗೆದ್ದು, ಆ ಖಳ ಯೆಹೂದ್ಯನನ್ನು ಯುದ್ಧದಲ್ಲಿ ಸ್ವಂತ ಕೈಯಿಂದ ಕೊಂದು ಹಾಕಿದನು. ಅಂದಿನಿಂದ ಆ ಕಡೆಯಲ್ಲಿ ಹಲವು ವರುಷ ಪರ್ಯಂತ ಹಬೆಸಿ ಕ್ರೈಸ್ತ ಅಧಿಕಾರಸ್ಥರಿದ್ದರು; ಬಳಿಕ ಸಾಸಾನಿದರು ಅಲ್ಲಿ ಒಂದು ವಿಧವಾಗಿ ಆಳುವವರಾದರು.

ಬಬೆಲು ದೇಶದಲ್ಲಿ ನೆಲೆಗೊಂಡಿದ್ದ ಯೆಹೂದ್ಯರ ಉಪಾಧ್ಯಾಯರೂ ಪಲೇಸ್ತೀನದೊಳಗಿನವರೂ ಹೇರಳ ಸುಳ್ಳುಕಥೆಗಳೂ ಮಾನುಷ ಸಾಂಪ್ರದಾಯಗಳೂ ಹಳೇ ಒಡಂಬಡಿಕೆಯ ಕುರಿತು ಯೇಸು ಕ್ರಿಸ್ತನಿಗೆ ವಿರೋಧವಾದ ಟೀಕೆಗಳೂ ಇರುವಂಥ ಗ್ರಂಥಗಳನ್ನು ರಚಿಸುತ್ತಲಿದ್ದರು; ಈ ಪ್ರಕಾರವಾಗಿ ಆ ಯೆಹೂದ್ಯರು ತಮ್ಮನ್ನು ಯೇಸು ಕ್ರಿಸ್ತ ಮೆಸ್ಸೀಯನ[4] ಬಳಿಗೆ ನಡಿಸ ಯೋಗ್ಯವಾದ ಹಳೇ ಒಡಂಬಡಿಕೆಯ ಅಧ್ಯಯನವನ್ನು ತಾವೇ ಕಡಿಮೆ ಮಾಡುವವರೂ ಅದರ ಬೆಳಕನ್ನು ಕುಂದಿಸುವವರೂ ಆದರು. ಯೆಹೂದ್ಯ ಉಪಾಧ್ಯಾಯರು ಲೇಖಿಸಿದಂಥ ಪುಸ್ತಕಗಳ ಸಂಗ್ರಹಕ್ಕೆ ತಲ್ಮೂದ್ ಅಂದರೆ ಬೋಧನೆ ಎಂಬ ಹೆಸರಾಯಿತು.

ಕ್ರೈಸ್ತ ವಿಶ್ವಾಸದಿಂದ ಭ್ರಷ್ಟನಾದ ಯೂಲಿಯಾನನೆಂಬ ಕೈಸರನು ಕ್ರಿ. ಶ. 361ನೇ ವರುಷದಿಂದ 363ನೇದರ ವರೆಗೆ ಆಳುವ ಸಮಯದೊಳಗೆ ಅವನು ಯೆಹೂದ್ಯರಿಗೆ—ಪಲೇಸ್ತೀನಕ್ಕೆ ತಿರಿಗಿ ಹೋಗಿ, ಅಲ್ಲಿ ನಿಮಗಿದ್ದ ದೇವಾಲಯವನ್ನು ತಿರಿಗಿ ಕಟ್ಟಿರೆಂತ, ಆಜ್ಞಾಪಿಸುತ್ತಲೇ ಯೆಹೂದ್ಯರು ನಾನಾ ದಿಕ್ಕಿನಿಂದ ಸಮುದಾಯ ಸಮುದಾಯವಾಗಿ ಯೆರೂಸಲೇಮಿಗೆ ನೊಣಗಳಂತೆ ಮುತ್ತಿ ಬಂದು, ಕೈಸರನ ಪ್ರತಿನಿಧಿಯ ಸಹಾಯದಿಂದ ಆ ಕೆಲಸವನ್ನಾರಂಭಿಸುವವರಾಗಿ, ಅಮಿತ ಗರ್ವದಿಂ

1) 83ನೇ ಪಾನು. 2) 1 ಮೋಶೆ. 10, 25 ಇತ್ಯಾದಿ. 3) 85ನೇ ಪಾನು. 4) 20ನೇ, 256ನೇ ಪಾನು.

ದ ಅಲ್ಲಿಯ ಕ್ರೈಸ್ತರಿಗೆ ವಿಪರೀತ ಹಾಸ್ಯ ಮಾಡುತ್ತಿರುವಲ್ಲಿ ದೇವರು ಅದ್ಭುತ ರೀತಿಯಿಂದ ಆ ಯೆಹೂದ್ಯರನ್ನು ದಿಗಿಲು ಪಡಿಸಿ, ಸರ್ವ ದಿಶೆಗೆ ಚದರಿಸಿ ಬಿಟ್ಟನೆಂತ, ಹಿಂದೆ ಹೇಳಲಾಯಿತು[1]. ಆ ಸಂಗತಿಯ ಸಲುವಾಗಿ ಅಲ್ಲಿಯ ಕ್ರೈಸ್ತರ ವಿಶ್ವಾಸವು ಬಹಳ ದಾರ್ಢ್ಯ ಗೊಂಡಿತು.

ಸಾಸಾನಿದ ಸಾಮ್ರಾಜ್ಯದೊಳಗಿನ ಕ್ರೈಸ್ತರು ಕ್ರಿ. ಶ. 498ನೇ ವರುಷದಲ್ಲಿ ನೆಸ್ತೊರಿಯಾನರಾಗಿ[2] 93 ವರುಷ ಆದ ಬಳಿಕ ಸಮ್ರಾಜನಾದ 2ನೇ ಖೊಸ್ರೂವೆಂಬವನು ದೊಡ್ಡ ಪರಾಕ್ರಮಶಾಲಿಯಾಗಿ, ಕ್ರಿ. ಶ. 610ನೇದಕ್ಕೆ ಗ್ರೇಕ ರಾಜ್ಯದಲ್ಲಿ ಕೈಸರನಾದ ಹೇರಾಕ್ಲೀಯನೆಂಬವನ ರಾಜ್ಯದೊಳಗೆ ಹೊಕ್ಕು, ತನ್ನನ್ನು ದಾರಿಯಲ್ಲಿ ಕೂಡಿ ಕೊಂಡ 26,000 ಯೆಹೂದ್ಯರ ಒತ್ತಾಸೆಯಿಂದ 614ನೇದಕ್ಕೆ ಪಲೇಸ್ತೀನವನ್ನು ಹಿಡು ಕೊಂಡು, ಯೆರೂಸಲೇಮು ಪಟ್ಣವನ್ನು ಸುಟ್ಟು, ಸಾವಿರಾರು ಮಂದಿ ಬೋಧಕರನ್ನೂ ಸಭ್ಯರನ್ನೂ ಕೊಂದು, ಅಲ್ಲಿಯ ಅಧ್ಯಕ್ಷನಾದ ಜಕರೀಯನೆಂಬವನನ್ನೂ ಇತರ ಹೇರಳ ಮಂದಿ ಕ್ರೈಸ್ತರನ್ನೂ ಪಾರ್ಶಿಸ್ಥಾನಕ್ಕೆ ವೈದನು; ಅವರನ್ನಲ್ಲಿಗೆ ವೈಯುತ್ತಿರುವಾಗ ಯೆಹೂದ್ಯರ ಪ್ರೇರಣೆಯಿಂದ 90,000 ಕ್ರೈಸ್ತರನ್ನು ವಧೆ ಮಾಡಿಸಿದನು. ಖೊಸ್ರೂವಿನ ಕೈಗೆ ತಪ್ಪಿಸಿ ಕೊಂಡ ಕ್ರೈಸ್ತರಲ್ಲನೇಕರು ಅಲೆಕ್ಸಂದರೀಯ ಪಟ್ಣಕ್ಕೆ ಹೋದರು. ಧಾರ್ಮಿಕನೆಂಬ ಹೆಸಗೊಂಡ ಯೋಹಾನನು ಆ ಸಮಯದಲ್ಲಿ ಆ ಪಟ್ಣದ ಸಭಾಧ್ಯಕ್ಷನಾಗಿದ್ದನು; ಇವನು ಅವರನ್ನು ಬಹು ಪ್ರೀತಿಯಿಂದ ಅಂಗೀಕರಿಸಿ, ಅವರ ಪೋಷಕನಾಗಿ, ಯೆರೂಸಲೇಮನ್ನು ಪುನಃ ಕಟ್ಟುವದಕ್ಕೆ ಸಹ ಸಹಾಯ ಗೈದನು; ಆ ವಿಶ್ವಾಸಶಾಲಿಯು, ಲೋಕವೆಲ್ಲವೂ ಅಲೆಕ್ಸಂದರೀಯಕ್ಕೆ ಬಂದರೂ ದೇವರ ಭಂಡಾರವನ್ನು ಬರೇದು ಮಾಡ ಕೂಡದೆಂದು, ಹೇಳುತ್ತಿರುವನು. ತದನಂತರ ಹೇರಾಕ್ಲೀಯನು ವಿಶೇಷವಾಗಿ ತನ್ನ ರಾಜ್ಯದ ಕ್ರೈಸ್ತ ಬೋಧಕರ ಧರ್ಮದಾನಗಳಿಂದ ಒಂದು ದೊಡ್ಡ ಸೇನೆಯನ್ನೆತ್ತಿ ಕೊಂಡು ಹೋಗಲಿಕ್ಕೆ ಸಮರ್ಥನಾಗಿ, ಮುಂಚೆ ನಿನಿವೆ ಪಟ್ಣವಿದ್ದ ಸ್ಥಳದಲ್ಲಿ ಕ್ರಿ. ಶ. 627ನೇ ವರುಷ ಖೊಸ್ರೂವನ್ನು ಪೂರಾ ಗೆದ್ದು, ಅವನ ಮುಖ್ಯ ರಾಜಧಾನಿಯಾದ ದಸ್ತಗೇರ್ದೆಂಬದನ್ನು ತನ್ನ ವಶ ಮಾಡಿ ಕೊಂಡು, ಅವನು ಶೆರೆ ವೈದುಳಿದಿದ್ದ ಕ್ರೈಸ್ತರೆಲ್ಲರನ್ನು, ಜಕರೀಯನನ್ನು ಸಹ, ಬಿಡಿಸಿ, ಯೆರೂಸಲೇಮಿದ್ದಲ್ಲಿಗೆ ತಿರಿಗಿ ಕಳುಹಿಸಿದನು. ಅಂದಿನಿಂದ ಪಲೇಸ್ತೀನದ ಕ್ರೈಸ್ತರು 12 ವರುಷ ಶಾಂತಿಯನುಭವಿಸುತ್ತಿದ್ದರು; ಯೆರೂಸಲೇಮು ಪಟ್ಣವೂ ಹಲವು ದೇವಾಲಯಗಳೂ ಮತ್ತೂ ಕಟ್ಟಲಾಯಿತು.

---

1) 198ನೇ ಪಾನು. 2) 252ನೇ ಪಾನು.

## 33. ಮಠಿಕತ್ವವು.

ಹಿಂದೆ ರೋವಿಸಾಯ ಕೈಸರರ ಹಿಂಸೆಗಳಿಗಿತ್ತಕಡೆ ಅನೇಕಶಃ ಮಠವಾಸಿಗಳೆಂಬ ಮಠಿಕರ ಮಾತು ಬಂತಲ್ಲ[1]? ಈಗ ಅವರ ಉತ್ಪತ್ತಿಯನ್ನೂ ವಿಸ್ತರಣಕ್ರಮವನ್ನೂ ಆಲೋಚಿಸೋಣ.

ಅಪೊಸ್ತೊಲಿಕ ಕಾಲಾಂತರದೊಳಗೆ ಉಪವಾಸವು ದೇವಪ್ರಾರ್ಥನೆಗೆ ಯೋಗ್ಯವಾದ ಅನುಕೂಲೀಕರಣವು; ಮತ್ತು ಸಮಿಾಪಿಸಿದ ಸಂಕಷ್ಟಕಾಲಕ್ಕೋಸ್ಕರ ಅವಿವಾಹಿತ್ವವು ವಿಹಿತವೆನ್ನಿಸಿತು; ಆದರೆ ಅವೆರಡರಲ್ಲಿ ಒಬ್ಬೊಬ್ಬನಿಗೆ ಪರಿಪೂರ್ಣ ಸ್ವಾತಂತ್ರ್ಯವಿರ ಬೇಕು[2]. ಅಪೊಸ್ತಲರಿಗೀಚೆ ಕ್ರಿ. ಶ. 172ನೇ ವರುಷ ಸುತ್ತ ಮೊಂತಾನಿಯಾನರೆಂಬ ಶಾಖೆಯವರು ಪೌಲ ಅಪೊಸ್ತಲನ ನಿರ್ದೇಶಕ್ಕನುಗುಣವಾಗಿಯೇ ಕ್ರೈಸ್ತರಿಗೆ ಆ ವರೆಗೆ ಕುಂದಿಲ್ಲದೆ ಇರುತ್ತಿದ್ದಂಥ ಆ ಮಂಗಳ ಸ್ವಾತಂತ್ರ್ಯವನ್ನು ಕಾಲೋಚಿತಕ್ಕೆಂಬಂತೆ ವೈರಾಗ್ಯಾಜ್ಞೆಗಳಿಂದ ಒಂದು ವಿಧ ಅಪಹರಿಸ ತೊಡಗಲಿಕ್ಕೆ[3], ಇವರು ಅದನ್ನು ಕೈಕೊಂಡುಳಿಸುವ ಹಾಗೆ ಹೋರನ್ನಾಡಿ, ಮಿಗಿಲಾದ ವೈರಾಗ್ಯವು ಒಳ್ಳೇದಲ್ಲವೆಂತ, ನಿಶ್ಚಯಿಸಿದರು[4].

ಕ್ರಿ. ಶ. 185ನೇ ವರುಷದಿಂದ 254ನೇದರ ತನಕ ಬದುಕುತ್ತಿದ್ದ ಆ ಒರೀಗೆನನ ಕಾಲದಲ್ಲಿ ಬೇರೆ ಬೇರೆ ಸಭೆಗಳಲ್ಲಿ ಉಪವಾಸವ್ರತಕ್ಕೆ ಬೇರೆ ಬೇರೆ ದಿವಸಗಳು ನೇಮಿತವಾಗಿದ್ದವು; ಅದಲ್ಲದೆ ವಿಶೇಷ ನೈಮಿತ್ತಕಗಳಿಗಾಗಿ ಸಭೆಗಳನ್ನು ಸರ್ವಸಾಧಾರಣೋಪವಾಸಕ್ಕೆ ಹೇಳುವ ಪದ್ಧತಿಯು ಸಹ ಹುಟ್ಟಿತ್ತು[5]. ಕಾಲಿಕ ಪ್ರಾರ್ಥನೆ ಉಪವಾಸಗಳಿಂದಲೂ ಧನತ್ಯಾಗದಿಂದಲೂ ಅವಿವಾಹಿತ್ವಾದಿವಿಷಯಭೋಗ ವಿಸರ್ಜನೆಯಿಂದಲೂ ಅಂದರೆ ಈ ಬಹಿರಾಚಾರದಿಂದ ಉತ್ಕೃಷ್ಟವಾದಂಥ ಪುಣ್ಯಫಳಿಸಿ ಕೊಳ್ಳ ಬಹುದೆಂಬ ಅಯೋಗ್ಯ ಭಾವನೆಯು[6] ಸಹ ಆಗ ಮೂಡಿ, ಪಸರಿಸಲಿಕ್ಕೆ ಹತ್ತಿತು. ಅದು ನಿಮಿತ್ತ ಸಾಧಾರಣ ಕ್ರೈಸ್ತ ಸ್ತ್ರೀ ಪುರುಷರಲ್ಲಿ ಅನೇಕರು ವೈರಾಗಿಗಳಾದರು; ಆದಾಗ್ಯೂ ಅವರೆಲ್ಲರೂ ಅಂದು ಸ್ವೇಚ್ಛಾನುವರ್ತಿಗಳು[7]. ಆದರೆ ಹೀಗಿರಲಿಕ್ಕಾಗಿ ಸ್ವಶರೀರದಂಡನವ್ರತ ವಹಿಸುವದು ವಿಶೇಷವಾಗಿ ಸಭೋದ್ಯೋಗಿಗಳಿಗೆ ಬಹಳ ಚಲೋದಾದ ಒಪ್ಪೆಂಬ ಗ್ರಹಿಕೆಯು ಶೀಘ್ರದಿಂದುದ್ಭವಿಸಿದ್ದು ಸಹಜವೇ[8].

---

1) 173, 193, 194, 195, 201, 219, 225, 227, 228, 242, 243, 244, 250, 254ನೇ ಪಾನುಗಳು. 2) 71ನೇ ಪಾನು. 3) 146ನೇ ಮುಂತಾದ ಪಾನು. 4) Ignatius ad Polyc. C. 5; Athenagoras deprec. C. 28; Tertullian. de cultu fem. 11; de jejun. 2; Origen. in Math. comment. series §. 10; Euseb. 5, 3; Cyprian. ep. 5, 6, 62; Can. Illib. 27; Ancyr. 19; Nicaen. 3. 5) 97ನೇ ಪಾನು; Origen. hom. X in Levitic. 6) Clemen. strom.; Origen. 7) Cyprian. ep. 62; Concil. Ancyran. can. 19; 174, 175ನೇ ಪಾನು. 8) 153, 173, 184, 219, 225, 244, 252ನೇ ಪಾನುಗಳು.

ಕ್ರಿ. ಶ. 300ನೇ ವರುಷದ ವರೆಗೆ ಅಂಥಾ ವೈರಾಗಿಗಳು ತಕ್ಕ ಹಾಗೆ[1] ಬಾಹಿರ ಸಂಜ್ಞೆಗಳೇನೂ ಇಲ್ಲದೆ ಉಳಿಕಿಯ ಸಾಧಾರಣ ಕ್ರೈಸ್ತರೊಳಗೆ ಕಾಲ ಕಳೆಯುತ್ತಿದ್ದರು; ಆದರೆ ಅಂದಿನಿಂದ ಬದಲಾಯಿತು. ಹ್ಯಾಗಂದರೆ ಸುಮಾರು ಕ್ರಿ. ಶ. 250ನೇದಕ್ಕೆ ಐಗುಪ್ತ ದೇಶದ ಕೋಮವೆಂಬದೊಂದು ಊರಿನಲ್ಲಿ ಬಹು ಸಂಪತ್ತುಳ್ಳ ಒಬ್ಬ ಗೃಹಸ್ಥನಿಗೆ ಅಂತೋನಿಯನೆಂಬ ಮಗನು[2] ಜನಿಸಿದನು. ಇವನು ತನ್ನ ಜೀವಿಕೆಯ 18ನೇ ವರುಷದಲ್ಲಿ ದಿಕ್ಕಿಲ್ಲದವನಾಗಿ, ಬಳಿಕ 6 ತಿಂಗಳಿನ ಮೇಲೆ ಎಂದಿನಂತೆ ಒಮ್ಮೆ ಒಂದು ದೇವಾಲಯದೊಳಗೆ ಹೋಗಿರುವಾಗ ಮತ್ತಾಯನ ಸುವಾರ್ತಾಗ್ರಂಥದಲ್ಲಿರುವ[3] ಒಬ್ಬ ಐಶ್ವರ್ಯವಂತ ಯೌವನಸ್ಥನ ಚರಿತ್ರ ಕೇಳಿ, ಮನೋವ್ಯಥೆ ಪಟ್ಟು, ತನ್ನ ದೊಡ್ಡ ಬದುಕನ್ನೆಲ್ಲಾ ತನ್ನ ಊರಿನ ಬಡವರಿಗೆ ತ್ಯಾಗ ಮಾಡಿ ಕೊಟ್ಟು, ತನ್ನ ತಂಗಿಯನ್ನು ಕ್ರೈಸ್ತಧರ್ಮಶೀಲರಾದ ಕನ್ಯೆಗಳ ಜೋಕೆಗೊಪ್ಪಿಸಿ, ತಾನು ಊರನ್ನು ಬಿಟ್ಟು, ಸಮೀಪದ ಅರಣ್ಯದಲ್ಲಿ ಸ್ವಂತ ಕೈಯ ಕೆಲಸದಿಂದ ತನ ಗುಪ್ಪು ರೊಟ್ಟಿ ಘಳಿಸಿ ಕೊಳ್ಳುವವನಾಗಿ, ಇವೆರಡರಲ್ಲಿ ಸಹ ಕಠಿಣೋಪವಾಸದಿಂದ ತನಗೆ ಕಡಿಮೆ ಮಾಡಿ, ಉಚ್ಛಿಷ್ಟವನ್ನು ದರಿದ್ರರಿಗೀಯುತ್ತಿರಲು—ತನ್ನನ್ನು ಬಹಳ ಕೊಂಡಾಡುವ ಜನರಿಗೆ ತಪ್ಪಿಸಿ ಕೊಂಡೇನು, ತೊಂದರೆ ಇಲ್ಲದೆ ಪ್ರಾರ್ಥಿಸಿ ದೇವರ ಧ್ಯಾನ ಮಾಡಿ ಕೊಂಡೇನೆಂತ, ಸಕಲ ಜನರನ್ನಗಲಿ, ಹೋಗಿ, ಮೊದಲು ಒಂದು ಸಮಾಧಿಗುಹೆಯೊಳಗೆ ಕಾಲ ತೆಗೆದು, ಆ ಮೇಲೆ 20 ವರುಷ ಒಂದು ಹಾಳುಕೋಟೆಯಲ್ಲಿ ಉಳುಕೊಂಡಿರುತ್ತಿರುವಾಗ ಅವನ ಸ್ನೇಹಿತರು ವರುಷಕ್ಕೊಮ್ಮೆ ರೊಟ್ಟಿ ತಂದು, ಗೋಡೇ ಹೊರಗೆ ನಿಂತು, ಆ ರೊಟ್ಟಿಯನ್ನು ಒಳಗೆ ಹಾಕಿ, ಹೋಗುತ್ತಿರುವರು. ಕಾಲಕ್ರಮೇಣ ಸುಮಾರು ಕ್ರಿ. ಶ. 303ನೇ ವರುಷ ಅವನು, ತನ್ನ ಸ್ಥಿರ ವಾಸಸ್ಥಳವೆಂತ, ಒಂದು ಕಾಡುಗುಡ್ಡವಾರಿಸಿ ಕೊಂಡು, ಅಲ್ಲಿರುವ ಎರಡು ಮೂರು ಉತ್ತತ್ತಿ ಮರಗಳ ಫಲದಿಂದಲೂ ಒಂದು ಬುಗ್ಗೆಯ ನೀರಿನಿಂದಲೂ ಬದುಕುತ್ತಾ ಬಂದು, ತನ್ನ ಬಳಿಗೆ ಗಮನಾಗಮನ ಮಾಡುತ್ತಿರುವ ಜನರ ಉಪದೇಶಿಯಾದನು.

ಮಕ್ಸಿಮಿಾನನೆಂಬ ಸಹಾಯಕೈಸರನು ಕ್ರಿ. ಶ. 311ನೇ ವರುಷದಲ್ಲಿ ತನ್ನ ಕೆಳಗಿರುವ ಐಗುಪ್ತದಲ್ಲಿಯ ಕ್ರೈಸ್ತರನ್ನು ಉಪದ್ರವ ಪಡಿಸಲಿಕ್ಕೆ ಹೊಸ್ತಾಗಿ ತೊಡ

1) ಲೂಕ. 17, 20;—ಯೋಹಾ. 17, 15; 1 ಕೊರಿ. 7, 30—31;—ಲೂಕ. 18, 1; 21, 36; ಕೊಲೊ. 3, 17; ಎಫೆ. 6, 18; 1 ಥೆಸ್ಸ. 5, 17;—ಮತ್ತಾ. 6, 17. 18; ಅ. ಕ್ರಿ. 13, 3; 14, 23;—1 ಮೋಶೆ. 2, 18—24; 1 ತಿಮೊ. 4, 3;—ರೋಮಾ. 14, 17—23; 12, 1; 2 ತಿಮೊ. 4, 6; ಎಬ್ರೀ. 13, 15—16; 1 ಪೇತ್ರ. 2, 5—12;—ಮತ್ತಾ. 5, 13—16;—ರೋಮಾ. 3, 20; 4, 2; 11, 6; ಗಲ. 2, 16; 3, 10; ಎಫೆ. 2, 8—9. 2) Sozomen. h. e. I, 12, 13; Athana. vit. Anton. 3) 19, 20—23.

ಗಲು[1] ಅಂತೋನಿಯನು ಅಲೆಕ್ಸಂದರೀಯಕ್ಕೆ ಬಂದು, ನ್ಯಾಯಸ್ಥಾನಕ್ಕೆ ತಂದಿರುವ ಕ್ರೈಸ್ತರಿಗೆ ಧೈರ್ಯ ಹೇಳುತ್ತಾ, ಶೆರೆಯವರಿಗೆ ಸೇವೆ ಗೈಯುತ್ತಾ ಇದ್ದಾಗ್ಯೂ ಯಾರೂ ಅವನಿಗೆ ಕೇಡು ಮಾಡುವದಕ್ಕೆ ಕೈ ಹಚ್ಚಲಿಲ್ಲ; ಯಾಕಂದರೆ ಮೂರ್ತಿಪೂಜಕರಾದರೂ ಅವನ ಭಕ್ತಿಗೆ ವಿಸ್ಮಿತರಾಗಿರುತ್ತಿದ್ದರು. ಅವನು ತನ್ನ ವನವಾಸಕ್ಕೆ ತಿರುಗಲು, ಅನೇಕ ಕ್ರೈಸ್ತರು ಅವನ ಸಂಗಡ ವನವಾಸಿಗಳಾಗಿರಲಿಕ್ಕೆ ಬಂದರು; ಅವನಿವರನ್ನು ಮೈಗಳ್ಳರಾಗಿರ ಗೊಡದೆ, ಪ್ರಾರ್ಥನೆಗೂ ಕೈಕೆಲಸಕ್ಕೂ ಆದೇಶಿಸುತ್ತಿರುವನು. ಅದಲ್ಲದೆ ಬೇರೆ ಬೇರೆ ಕಡೆಯಿಂದ ಪಂಡಿತರೂ ಅಪಂಡಿತರೂ ಅವನಿದ್ದಲ್ಲಿಗಾಗಮಿಸಿ, ಬುದ್ಧ್ಯಾಲೋಚನೆ ಹೃದಾದರಗಳನ್ನು ಬೇಡಿ ಕೊಳ್ಳುತ್ತಿರುವರು; ದೊಡ್ಡ ಕೊನ್ಸ್ತಂತೀನ ಕೈಸರನೂ, ಅವನ ಕುಮಾರರು ಸಹ, ಅವನಿಗೆ ಸನ್ಮಾನಿಸಿ, ತಂದೆಯೆಂಬಂತೆ ಅವನೊಂದಿಗೆ ಕಾಗದಪತ್ರ ನಡಿಸುತ್ತಿರುವರು. ಇಂಥಾ ನಾನಾ ಪ್ರಕಾರದ ಮಾನವು ತನಗೆ ಪ್ರಾಪಿಸುತ್ತಿರಲು, ಅಂತೋನಿಯನು ಕ್ರಿಸ್ತನ ಸಹಾಯದಿಂದ ಮನೋದೀನತೆ ಬಿಡದೆ, ಕೊನ್ಸ್ತಂತೀನನಿಗೂ ಇಚ್ಚಕವಾಡದೆ, ಕ್ರಿಸ್ತನೇ ರಾಜಾಧಿರಾಜನೆಂತ, ಅವನಿಗೊಮ್ಮೆ ಗುರುತ್ವದಿಂದ ಬರೆದನು. ತನ್ಮಧ್ಯ ಅವನು ಕೆಂಪು ಸಮುದ್ರದ ತೀರದ ಅರಣ್ಯದಲ್ಲಿ ತನ್ನಂತೆ ಆಶ್ರಮ ಮಾಡಿ ಕೊಂಡಿರುವ ಕ್ರೈಸ್ತ ವನವಾಸಿಗಳಿಗೆ ಭೇಟಿ ಕೊಡಲು, ಅಲ್ಲಿ ತನ್ನ ತಂಗಿಯು ಕಾಯದಂಡನಾಸಕ್ತರಾದ ಕನ್ಯೆಗಳದೊಂದು ಸಮಾಜದ ಮುಖ್ಯಸ್ಥಳಾಗಿರುವದನ್ನು ಕಂಡನು. ಬಳಿಕ ಕ್ರಿ. ಶ. 351ನೇ ವರುಷಕ್ಕೆ ಅಲೆಕ್ಸಂದರೀಯದಲ್ಲಿ ಆ ಅರೀಯನ[2] ಅಪಬೋಧನೆಯು ನೆಲೆಗೊಳ್ಳುವ ಹಾಗಿರುವ ಸಮಯ ಅವನು 100 ವರುಷದ ಮುದುಕನಾಗಿ ತಿರಿಗಿ ಆ ಪಟ್ಟಣಕ್ಕೆ ಹೋಗಿ, ಆ ಪಾಷಂಡಕ್ಕಡ್ಡ ಗಟ್ಟಿದ್ದಲ್ಲದೆ ಇನ್ನೂ ಉಳಿದಿರುವ ವಿಗ್ರಹಾರಾಧಕರೊಳಗೆ ಪ್ರಸಂಗಿಸಲೆಸಗಿದನು; ಮುಂಚೆ ಸಾಧಾರಣವಾಗಿ ಒಂದು ವರುಷಕ್ಕೆ ಎಷ್ಟು ಜನರು ಅಲ್ಲಿ ಕ್ರೈಸ್ತರಾಗುತ್ತಿದ್ದರೋ, ಅಷ್ಟೇ ಜನರು ಅಂದು ಕೆಲವು ದಿವಸಗಳೊಳಗೆ ಕ್ರೈಸ್ತರಾದರಂತೆ. ಅಂತೋನಿಯನು ವಿದ್ವಾಂಸನಲ್ಲದಿದ್ದದರಿಂದ ಅವನ ಮಹಾಶೀರ್ವಾದಕರವಾದಂಥ ವೃತ್ತಿಗೆ ಹೆಚ್ಚು ಆಶ್ಚರ್ಯ ಗೊಳ್ಳ ಬೇಕಾಗುತ್ತದೆ.

ಒಂದಾನೊಂದು ದಿನಕ್ಕವನು, ತನ್ನ ವನವಾಸಿತ್ವದಿಂದ ತನಗೆ ಯಾವ ಪರಮಗತಿಯಾದೀತೆಂದು, ತನ್ನೊಳಾಲೋಚಿಸಿ ಕೊಳ್ಳುತ್ತಿರಲು, ಸ್ವಪ್ನದಲ್ಲಿ—ಪಟ್ಣದ ಹೆಬ್ಬಾಗಲಿನ ಹತ್ತರ ಒಬ್ಬ ಮೊಚ್ಚೆಗಾರನ ಮನೆ ಅದೆ; ಅಲ್ಲಿಗೆ ಹೋಗಿ, ಕೇಳೆಂತ, ಅವನಿಗಪ್ಪಣೆಯಾಯಿತು. ಅವನೆಚ್ಚತ್ತು, ಹೋಗಿ, ಆ ಮನೇ ಯಜಮಾನನಿಗೆ—ನೀವು ಪರಿಶುದ್ಧ ಭಕ್ತಿವಂತರಂತೆ; ನಿಮ್ಮ ಕಥಾಸಾರ ಹೇಳಿರೆನ್ನಲು, ಆ ಮೊಚ್ಚೆಗಾರನು—ತಾನು ಯಾತರವನು? ತಾನು ದೇವರಿಂದ ಹೊಂದುತ್ತಿರುವ ಶರೀರಾತ್ಮೋ

1) 129ನೇ, 177ನೇ ಪಾನುಗಳು. 2) 183ನೇ ಆದಿ ಪಾನುಗಳು.

ಚಿತಗಳಿಗೋಸ್ಕರ ದಾಯಕನನ್ನು ಕೊಂಡಾಡುತ್ತಾ, ಅವನ ಸನ್ನಿಧಿಯಲ್ಲಿ ಪಾಪ ಪರಿಹಾರ ಬೇಡಿ ಕೊಳ್ಳುತ್ತಾ, ಕ್ರೈಸ್ತರ ಸಭೆಯನ್ನೂ ತನ್ನ ಹೆಂಡತಿ ಮಕ್ಕಳು ಚಾಕರರನ್ನೂ ಆಶೀರ್ವದಿಸ ಬೇಕೆಂತ, ಬಿನ್ನವಿಸುತ್ತಾ, ತನ್ನ ಈ ಜನರನ್ನು ತನ್ನಿಂದಾಗುವಷ್ಟು ಸುಶಿಕ್ಷಿಸುತ್ತಾ, ವಿಶ್ವಾಸದೊಡನೆ ಸಂತುಷ್ಟನಾಗಿ ತನ್ನ ಕೆಲಸ ನಡಿಸುತ್ತಾ ಇರುವಂಥ ಬಡವನೇ! ಎಂಬಂತೆ ನುಡಿದು ಬಿಡೋಣ, ಅಂತೋನಿಯನು ಬೆರಗಾಗಿ—ಮತ್ತ್ಯೇನೂ ಇಲ್ಲ? ಸ್ವದಂಡನಜೀವಿಕೆ ನಿಮಗಿಲ್ಲವೋ? ಎಂತ, ಕೇಳಿದನು. ಅದಕ್ಕೆ ಆ ಗೃಹಸ್ಥನು—ನನ್ನ ಜೀವಿಕೆಯು ಸಾಕಷ್ಟು ಕಠಿಣವಲ್ಲವೆಂತ, ನೆನಸುತ್ತೀರೋ? ನಾನು ದಿನಾಲು ಅಧಿಕ ಕಷ್ಟ ಪಟ್ಟು ನನ್ನ ವೃತ್ತಿಯಿಂದ ನನ್ನನ್ನೂ ನನ್ನ ಹೆಂಡತಿ ಮಕ್ಕಳು ಸೇವಕರನ್ನೂ ರಕ್ಷಿಸುತ್ತಾ, ಪ್ರಜಾಧರ್ಮದ ಮೇಲೆ ಸಹ ಭಾರಾಕ್ರಾಂತನಾಗಿರುತ್ತಿರುವಾಗ ದೇವರ ಹೆಸರಿನಲ್ಲಿ ಭರವಸ ಹಿಡುಕೊಂಡು, ಪ್ರಾರ್ಥಿಸಿ, ಹೀಗೆ ತಾಳ್ಮೆಯಿಂದಿದ್ದು, ಅದನ್ನೆಲ್ಲಾ ನೀತೀ ಪ್ರಕಾರ ಸಹಿಸುತ್ತಿರುವದು ಕಠಿಣ ಜೀವಿಕೆಯಲ್ಲವೋ? ಎಂತ, ಹೇಳೋಣ, ಅಂತೋನಿಯನು—ತನ್ನ ವನವಾಸಿತ್ವ ಜೀವನವು ಸಾಧಾರಣ ಜನರದಕ್ಕಿಂತ ಪುಣ್ಯಪ್ರದವಲ್ಲವೆಂದು, ದೇವರು ತನಗರುಹಿದ್ದಾನೆಂತ, ತಿಳಿದು, ಲಜ್ಜೆಯುಳ್ಳವನಾಗಿ, ಹೋಗಿ ಬಿಟ್ಟನು. ಅವನು ಅಲೆಕ್ಸಂದರೀಯದಿಂದ ತಿರಿಗಿ ತನ್ನ ಅರಣ್ಯಸ್ಥಳಕ್ಕೆ ಹೋಗಿ, ಮರಣಕಾಲದಲ್ಲಿ ತನ್ನೊಂದಿಗಿರುವವರಿಗೆ, ಯಾರಿಗಾದರೂ ತನ್ನನ್ನು ಹುಗಿಯುವ ಸಮಾಧಿ ತೋರಿಸ ಬೇಡಿರೆಂತ, ಖಂಡಿತದಿಂದೊರೆದು, ಕ್ರಿ. ಶ. 356ನೇ ವರುಷದಲ್ಲಿ, ತನ್ನ ಜೀವಿತದ 106ನೇ ದರಲ್ಲಿ, ಮಡಿದನು. ಅವನು ತಾನು ಹೊದ್ದು ಕೊಳ್ಳುತ್ತಿದ್ದ ಕುರಿದೊಗಲಂಗಿಯನ್ನು ಅಲೆಕ್ಸಂದರೀಯದ ಆ ಅಥನಸಿಯ ಅಧ್ಯಕ್ಷನಿಗೆ[1] ಕೊಟ್ಟಿದ್ದನು. ಇವನು ಅವನ ಜೀವಿಕಾಚರಿತ್ರ ಬರೆದದಲ್ಲದೆ ಪಶ್ಚಿಮ ದಿಕ್ಕಿನ ಸಭೆಗಳಲ್ಲಿ ವನವಾಸಿತ್ವಕ್ಕೆ ಆಸ್ಪದ ಮಾಡುವವನಾದನು.

ಅಂತೋನಿಯನು ತನ್ನ ವನವಾಸಿತ್ವದ ದೆಸೆಯಿಂದ ಕ್ರೈಸ್ತ ಮಠಿಕತ್ವದ ಅಂದರೆ ಮಠವಾಸಿತ್ವದ ಸ್ಥಾಪಕನಾದನು; ಹ್ಯಾಗಂದರೆ, ಇವನ ಶಿಷ್ಯರು ಐಗುಪ್ತ, ಸುರಿಯ, ಪಲೇಸ್ತೀನ ಮುಂತಾದ ಶೀಮೆಗಳ ಅರಣ್ಯಾದಿಗಳಲ್ಲಿ ಬೇರೆ ಬೇರೆ ಕೋಣೆಗಳಿರುವ ಮನೆಗಳನ್ನು ಕಟ್ಟಿ, ಒಂದೊಂದು ಮನೆಯ ಸುತ್ತಲು ಒಂದು ದೊಡ್ಡ ಗೋಡೆಯನ್ನೇರಿಸಿ, ಅನೇಕರು ಕೂಡಿ ಅಂಥಾದೊಂದರೊಳಗೆ ಒಬ್ಬ ಅಬ್ಬಾತನ ಅಂದರೆ ಹಿರಿಯನ ಕೈಯ ಕೆಳಗಿರುವವರಾದರು. ಅಂಥ ಮನೆಯು ಮೊನಾಸ್ತೇರಿಯವು ಅಂದರೆ ಮೊನಕರ[2] ಅಥವಾ ಮೊಂಕರೆಂಬ ಏಕಸ್ಥರ ಮಠವು ಎನ್ನಿಸುವದು. ಅಂತೋನಿಯನಿಗೆ ಪಾಖೋಮಿಯನೆಂಬವನೊಬ್ಬ ಪ್ರಖ್ಯಾತ ಶಿಷ್ಯನಿದ್ದನು;

1) 186ನೇ, 187ನೇ ಪಾನು. 2) Compare the Sanscrit ಮುನಾಕ್ = the Greek "monon."

ಇನ್ನೂ ದೊಡ್ಡ ಕೊನ್ಸ್ತಂತೀನ ಕೈಸರನ ಕಾಲದೊಳಗೆ ಮಠದ ಹಿರಿಯನಾದ ಇವನ ಕೆಳಗೆ ಐಗುಪ್ತದ ಥೇಬಾಯಿಸ್ ನಾಡಿನಲ್ಲಿ[1] 7000 ಕ್ರೈಸ್ತರು ಮಠಿಕರಾಗಿ ನೆರದರು; ಇವರಿಗೆ ದೇವಪ್ರಾರ್ಥನೆ ದೈದಂಡನಗಳೊಡನೆ ಚಂದಾಗಿ ಕೈಕೆಲಸ ಮಾಡ ಬೇಕೆಂಬ ಧರ್ಮ. ಪಾಖೋಮಿಯನು ತನ್ನ ಗುರುವಿಗಿಂತ ಮಂಚೆಯೇ ಕ್ರಿ. ಶ. 348ನೇ ವರುಷ ಸತ್ತನು; ಹೀಗಿರಲಾಗಿ, ಮಠಿಕತ್ವವು ಬೇಗನೆ ವಿಸ್ತರಿಸಿತೆಂತ, ತಿಳು ಕೊಳ್ಳ ಬಹುದು. ಆ ಪಾಖೋಮಿಯನೇ ಏಕಸ್ಥ ಧರ್ಮ ಹಿಡುಕೊಂಡ ಹೆಣ್ಣು ಮಕ್ಕಳ ಮೊದಲಿನ ಮಠವನ್ನು ಸಹ ಸ್ಥಾಪಿಸಿದನು; ಮಠಿಕರಾದ ಅಂಥ ಸ್ತ್ರೀಯರು ನೊನ್ನರು ಅಂದರೆ ತಾಯಿಗಳೆನ್ನಿಸಿ ಕೊಳ್ಳುವವರಾದರು, ಅಂಥವರ ಹಿರಿಯಳ ಹೆಸರು ಅಬ್ಬಾತಿಸ್ಸಳೆಂಬದು. ದಾರಿದ್ರತ್ವ, ಕಾಮೇಂದ್ರಿಯನಿಗ್ರಹತ್ವ (ಅವಿವಾಹಿತ್ವ), ಅಬ್ಬಾತನ ಮತ್ತು ಅಬ್ಬಾತಿಸ್ಸಳ ಕೆಳಗೆ ಸಂಪೂರ್ಣ ವಿಧೇಯತ್ವ ಎಂಬ ವ್ರತಾನ್ವಿತರು ಮಾತ್ರ ಮಠಪ್ರವೇಶಾಧಿಕಾರಿಗಳು.

ಮುಖ್ಯವಾಗಿ ಅಂಥ ಮಠಿಕರು ವಿಗ್ರಹಾರಾಧಕರಿರುವಲ್ಲಿಗೈದಿ, ಅವರಿಗೆ ಸುವಾರ್ತೆ ಸಾರಿ, ಅವರ ಗುಣ ಮರ್ಯಾದೆಗಳನ್ನು ತಿದ್ದುವವರಾಗುವದಲ್ಲದೆ ಕ್ರೈಸ್ತರಿರುವಲ್ಲಿ ಪ್ರಜೋಪದೇಶ ಸಹ ಹೇಳುವವರಾದರು; ಅದು ವಿನಹ ದರಿದ್ರ ರೋಗಿಗಳನ್ನು ಪರಾಮರಿಸುವದೂ ದಾರಿಗರನ್ನು ಮಠಗಳಲ್ಲಿ ಅಂಗೀಕರಿಸಿ ಆದರಿಸುವದೂ ವಿದ್ಯೆ ಪೋಷಿಸುವದೂ ಪರಿಶುದ್ಧ ಬರಹವನ್ನು ಮತ್ತು ಪ್ರಯೋಜಕವಾದ ಬೇರೆ ಗ್ರಂಥಗಳನ್ನೆತ್ತಿ ಬರೆಯುವದೂ ಅವರ ವೃತ್ಯಂಗಗಳಾದವು. ಹೀಗಿರಲಿಕ್ಕಾಗಿ, ಅಥನಸಿಯ[2], ಅಂಬ್ರೊಸಿಯ[3], ದೊಡ್ಡ ಬಸಿಲೀಯ[4], ನಾಜಿಯಂಜಿನ ಗ್ರೆಗೋರ[5], ಖ್ರೂಸೊಸ್ತೊಮ[6], ಹಿಯೆರೋನುಮ[7], ಔಗುಸ್ತೀನ[8] ಮುಂತಾದ ಆ ಯಶಸ್ವಿಗಳಾದ ಬೋಧಕರು ಮಠಿಕತ್ವದ ಆಶ್ರಯಿಗಳಾಗಿದ್ದದಕ್ಕೆ ಬಹು ಆಶ್ಚರ್ಯ ಪಡ ಬೇಡ. ಹಿಯೆರೋನುಮನ ಕಾಲದಲ್ಲಿ ಆದರೂ ಅಧ್ಯಕ್ಷಾದಿಬೋಧಕರನ್ನು ಮಠಿಕರೊಳಗೆ ಹೆಕ್ಕಿ ಕೊಳ್ಳುವದು ನಡುವಳಿಯಾಗಿತ್ತು[9]. ಆ ಪ್ರಕಾರ ಮಠಿಕತ್ವದ ಮಾನ ಏರುತ್ತಾ ಬರಲಿಕ್ಕೆ, ಮಠಗಳನ್ನು ನಿರ್ಮಿಸುವದೂ ಮಠಿಕ ಜೀವಿಕೆಗೆ ಜನರನ್ನು ತಂದಿಡುವದೂ ಮಠಗಳಿಗೆ ಇನಾಮುಗಳನ್ನೀಯುವದೂ ಮಹಾಪುಣ್ಯೋದಯಕಾರ್ಯವೆನ್ನಿಸಲಾದದ್ದು ಹೊರ್ತಾಗಿ, ಮಠಿಕ ಜೀವಿಕೆಯು ಒಂದೇ ಸತ್‌ಕ್ರೈಸ್ತವಾದದ್ದೆಂದು[10], ನೆನಸಲಾದದ್ದು ಸಹ ಸುವಾರ್ತಾರ್ಥಕ್ಕೆ ವಿರೋಧವಾದ ಕೇವಲ ದುರಭಿಮಾನದ ಕರ್ಮಠ ಮಾರ್ಗವೇ! ಅನೇಕಾನೇಕರು ತಮ್ಮ

1) 126ನೇ ಪಾನು. 2) 264ನೇ ಪಾನು. 3) 219ನೇ ಪಾನು. 4) 155ನೇ ಪಾನು. 5) 155ನೇ, 188ನೇ, 250ನೇ ಪಾನು. 6) 225ನೇ ಪಾನು. 7) 173ನೇ ಪಾನು. 8) 242ನೇ ಪಾನು. 9) Hieron. ad Rustic. 10) Hieron. Catal. C. 11.

ಹೆಂಡರನ್ನೂ ಮಕ್ಕಳನ್ನೂ ಧನಿಗಳನ್ನೂ ಬಿಟ್ಟು, ಬೇರೆ ಅನೇಕರು ರಾಜಧರ್ಮದ ಹಂಗಿನಿಂದ ಜಾರಿ ಕೊಂಡು, ಅದಲ್ಲದೆ ಮಹಾಪರಾಧಿಗಳು, ರಾಜರ ಶಿಕ್ಷೆಗೆ ತಪ್ಪಿಸಿ ಕೊಳ್ಳ ಬಹುದೆಂದು, ಹೇಳಿ, ಮಠಿಕರಾಗುತ್ತಿರಲು, ಕೈಸರರೂ ಸಭಾಸಂಘಗಳೂ ಆಗಿಂದಾಗ ಮಠಿಕತ್ವಾಸಕ್ತಿಗೆ ಎದುರಿಸಲವಶ್ಯವಾಯಿತು.

ವನವಾಸಿಗಳಾದ ವೈರಾಗಿಗಳಲ್ಲಿ ದಂಭಾಚಾರದ ಕರ್ಮಠ ಭಾವವು ವಿಶೇಷ ದಿಂದ ಗೋಚರವಾಗುತ್ತಿರುವ ಕಾರಣ ಇಂಥವರು ಮೂಢ ಪ್ರಜೆಯಲ್ಲಿ ಮಠಿಕರಿ ಗಿಂತ ಇನ್ನೂ ಪೂಜ್ಯರೆನ್ನಿಸುವವರಾದರು. ಇವರಲ್ಲಿ ಹಲವರು ಬಹು ಭಾರವುಳ್ಳ ಕಬ್ಬಿಣದ ಸಂಕೋಲೆಗಳನ್ನು ಸುತ್ತಿ ಕೊಂಡು, ಮುಂಬೊಗ್ಗಿ, ತಿರುಗ್ಯಾಡುತ್ತಿರುವ ರು; ಮತ್ತೊಬ್ಬರು ಮೈಯೆಲ್ಲಾ ರಕ್ತವಾಗುವಂತೆ ಅಂಥವುಗಳಿಂದ ತಮ್ಮನ್ನು ಹೊ ಡ ಕೊಳ್ಳುತ್ತಿರುವರು; ಇನ್ನೊಬ್ಬರು ಹಗಲಿರುಳು ಚಿಕ್ಕುಟು ಮುಂತಾದ ಹುಳಗ ಳಿಂದ ತಮ್ಮನ್ನು ಕಚ್ಚಿಸಿ ಕೊಳ್ಳುತ್ತಿರುವರು; ಬೇರೊಬ್ಬರು ಎಡೆ ಬಿಡದಲೇ ಉಚ್ಚ ಧ್ವ ನಿಯಿಂದ ಪ್ರಾರ್ಥಿಸುತ್ತಿರುವರು. ತಿರಿಗಿ ಒಬ್ಬರು ಹಗಲಿರುಳೂ ಬೇಸಿಗೇ ಮತ್ತು ಛಳೀ ಕಾಲದಲ್ಲಿ ಶೀತೋಷ್ಣಗಳನ್ನು ಲಕ್ಷಿಸದೆ ಅನೇಕ ವರುಷ ಸ್ತಂಭೋಪರಿವಾಸಿ ಗಳಾಗಿರುತ್ತಿರುವರು; ಇಂಥವರು ಜನರಿಂದ ತಮಗೆ ಬರುವ ಆಹಾರವನ್ನು ಒಂ ದು ಹಗ್ಗದಿಂದ ತಮ್ಮೆಡೆಗೆ ಎತ್ತಿ ಕೊಂಡು, ತೆಗೆದು ಕೊಳ್ಳುತ್ತಿರುವರು; ಮೂಢ ಕ್ರೈ ಸ್ತರು ಗುಂಪುಗುಂಪಾಗಿ ಅರಣ್ಯಕ್ಕೆ ಅವರಿರುವಲ್ಲಿಗೆ ಹೋಗುತ್ತಾ, ಅವರ ಪ್ರಸಂಗ ಕೇಳುತ್ತಾ, ಆ ವಿಪರೀತ ಸಂತರೆಂಬವರಿಗೆ ಭಜಿಸುತ್ತಾ ಇರುವರು. ಇದೆಂಥಾ ಮರುಳಾಟವು! ಆ ತರದ ಭಕ್ತಿಯು ಕೇವಲ ಭಕ್ತಿಹೀನತ್ವಕ್ಕಿಂತ ಒಳ್ಳೇದೆಂತ, ಹೇ ಳ ಬರುತ್ತದಷ್ಟೇ.

ಪೂರ್ವ ದಿಕ್ಕಿನ ಸಭೆಗಳಲ್ಲಿ ಉದ್ಭವಿಸಿದ ಮಠಿಕತ್ವವನ್ನು ಕ್ರಿ. ಶ. 530ನೇ ವ ರುಷ ಸುತ್ತ ಮುಖ್ಯವಾಗಿ ಬೆನೆದಿಕ್ತನೆಂಬವನೊಬ್ಬ ಈತಲಿಕ ಮಠಿಕನು ಪಶ್ಚಿಮ ದಿಕ್ಕಿನ ಸಭೆಗಳಲ್ಲಿ ಹೆಚ್ಚು ನೆಲೆ ಗೊಳ್ಳಿಸಿದನು. ಇದ್ದ ಮಠಿಕ ವ್ರತಗಳಿಗೆ ಅವನು ಹೊಸದೊಂದನ್ನು ಕೂಡಿಸಿದನು, ಯಾವದಂದರೆ—ಮಠವಾಸಾಪೇಕ್ಷಕರು ತಾವು ಮಠವನ್ನು ಎಂದಿಗೂ ಮರಳಿ ಬಿಡುವದಿಲ್ಲವೆಂಬದಕ್ಕೆ ಹಂಗಿಗರಾಗ ಬೇಕು.—ಬ ಳಿಕ ಸ್ವಲ್ಪ ಕಾಲದ ಮೇಲೆ ಪಶ್ಚಿಮದಲ್ಲಿ ಸಹ, ಸರ್ವ ಮಠಿಕರು ವಿವಾಹಸಮ್ಮಂಧ ಬಿಡ ಬೇಕೆಂತ, ಸ್ಥಾಪಿತವಾಯಿತು; ಈ ಕಟ್ಟಳೆ ಸಹ ಮುಂಚೆ ಅಲ್ಲಿ ಇರಲಿಲ್ಲ[1]. ಆ ದರೆ ಈ ಪ್ರಕಾರ ಸೌವಾರ್ತಿಕವಾದ[2] ಕ್ರೈಸ್ತ ಸ್ವಾತಂತ್ರ್ಯವು ಹೆಚ್ಚು ಹೆಚ್ಚಿಗೆ ತಪ್ಪಿ ಹೋಯಿತು.

1) Epiph. haer. 61, §. 7; Hiero. ep. 97 ad Demetr; August. de bono viduit. 10; Concil. Chalced. can. 16; — Leo I, ep. 90; Concil. Aurelian. I, C. 21; — Conc. Turonicum II, C. 15.

2) 5ನೇ, 40ನೇ, 147ನೇ, 163ನೇ, 254ನೇ ಪಾನು.

ವನಕ್ಕೆ ಹೋಗುವದರಿಂದಾಗಲಿ ಮಠಗಳ ಗೋಡೆಯೊಳಗೆ ಶೇರುವದರಿಂದಾಗಲಿ ಲೋಕಪ್ರಚಾರ ಬಿಟ್ಟರೆ ಪಾಪಕ್ಕೆ ತಪ್ಪಿಸಿ ಕೊಳ್ಳಲಾಗದೆಂಬದನ್ನು ಒಂದೆರಡುದಾಹರಣೆಗಳಿಂದ ತೋರಿಸ ತಕ್ಕದ್ದು. ಹ್ಯಾಗಂದರೆ, ಕ್ರಿ. ಶ. 386ನೇ ವರ್ಷಕ್ಕೆ ಪಲೇಸ್ತೀನದ ಬೆತ್ಲೆಹೇಮು ಪಟ್ಣದಲ್ಲಿ ಮಠಿಕನಾದ ಆ ಹಿಯೆರೋನುಮನು[1] ಒಬ್ಬ ಸ್ನೇಹಿತನಿಗೆ ಅರಿಕೆ ಮಾಡಿದ್ದೇನಂದರೆ[2]—ನರಕದ ಭಯದಿಂದ ತನಗೆ, ಅಂಥಾ ಶೆರೆಮನೆಯಲ್ಲಿ (ಮಠದಲ್ಲಿ) ಇರ ಬೇಕೆಂತ, ಆಜ್ಞೆ ತೀರಿಸಿ ಕೊಂಡು ಚೇಳು ಮೃಗಗಳ ಜತೆಗಾರನು ಮಾತ್ರ ಆದಂಥ ನಾನು ಅನೇಕ ಸರ್ತಿ ಸ್ತ್ರೀಸಮೂಹದಲ್ಲಿದ್ದ ಹಾಗಾಯಿತು. ಉಪವಾಸದಿಂದ ನನ್ನ ಮುಖ ಕಲೆಗುಂದಿದ್ದರೂ ಹೆಣದಂತೆ ತಣ್ಣಗಾದ ಶರೀರದವನಾಗಿದ್ದರೂ ಮನಸ್ಸು ಇಚ್ಛೆಗಳಿಂದುರಿದು, ತನ್ನ ಧನಿಗಿಂತ ಮುಂಚಿತವಾಗಿ ಸತ್ತಿದ್ದಂಥ ಮಾಂಸದಲ್ಲಿ ಹೊತ್ತಿದ ಆಶೆಗಳೇ ಕುದಿಯುತ್ತಿರುವವು. ಹೀಗೆ ಸರ್ವಸಹಾಯಹೀನನಾಗಿ, ಯೇಸುವಿನ ಪಾದಕ್ಕೆ ಬಿದ್ದು, ಕಣ್ಣೀರಿನಿಂದ ಕರಗಿದವನಾಗಿ, ಬೂದಿ ಬಡ ಕೊಂಡು, ನನಗೆದುರಿಸುವ ಮಾಂಸವನ್ನು ಕೆಲವು ವಾರವಾದರೂ ಉಪವಾಸದಿಂದ ಸಂಯಮಿಸಿ ಕೊಳ್ಳುತ್ತಿದ್ದೆನು. ನಾನು ಅನೇಕಾವರ್ತಿ ಹಗಲಿರುಳೆನ್ನದೆ, ನನ್ನೆದೆ ಹೊಯಿ ಕೊಳ್ಳುತ್ತಿದ್ದು, ನನ್ನನ್ನು ಶಿಕ್ಷಿಸುವ ಕರ್ತನಿಂದ ಶಾಂತಿಯು ನನ್ನ ಕಡೆಗೆ ತಿರುಗದ್ದಕ್ಕಿಂತ ಮುಂಚೆ ಬಿಡಲಿಲ್ಲವೆಂಬದು ನನ್ನ ಜ್ಞಾಪಕದಲ್ಲಿದೆ.—ಅವನು ಮತ್ತೊಬ್ಬ ಗೆಳೆಯನಿಗೆ ಬರೆದ್ದೇನಂದರೆ[3]—ನಾನು ಯೌವನಸ್ಥನಾಗಿದ್ದು, ಏಕಾಂತತ್ವದ ಕಾಡುಸ್ಥಳಗಳು ಗೋಡೆಗಳಂತೆ ನನ್ನ ಸುತ್ತಲಿರಲು, ದುಷ್ಕರ್ಮದ ಸ್ಪೃಹೆಗಳನ್ನೂ ಸ್ವಭಾವದ ತಾಪವನ್ನೂ ಸಹಿಸಲಾರದಿರುತ್ತಿದ್ದೆನು; ನಾನು ನನ್ನ ಮನಸ್ಸನ್ನು ಬಹುಶಃ ಉಪವಾಸದಿಂದ ಜಗ್ಗಿಸುತ್ತಿದ್ದರೂ ಅದು ವಿವಿಧಾಲೋಚನೆಗಳಿಂದ ಉರಿಯುತ್ತಿರುವದು. ಹೀಗಿರಲಿಕ್ಕಾಗಿ, ಈ ಮನಸ್ಸನ್ನು ಸಾಧಿಸಿ ಕೊಳ್ಳುವೆನೆಂತ, ನಾನು ಎಬ್ರೀಯನಾಗಿದ್ದು ಕ್ರಿಸ್ತವಿಶ್ವಾಸಿಯಾದವನೊಬ್ಬ ಸಹೋದರನ ಶಿಕ್ಷೆಗೆ, ಎಬ್ರೀಯ ಅಕ್ಷರಮಾಲೆ ಕಲಿತು ಕೊಳ್ಳುವದಕ್ಕೋಸ್ಕರವೂ ಕಠಿಣವಾದ ಎಬ್ರೀಯ ವ್ಯಾಕರಣಕ್ಕೆ ಅವಧಾನ ಕೊಡುವದಕ್ಕೋಸ್ಕರವೂ, ನನ್ನನ್ನೊಪ್ಪಿಸಿದೆನು[4].—ಅದಲ್ಲದೆ ಆ ದೊಡ್ಡ ಬಸಿಲೀಯನೆಂಬವನು[5] ಒಬ್ಬ ಮಿತ್ರನಿಗೆ ಲೇಖಿಸಿದ್ದೊಂದು ಪತ್ರದಲ್ಲಿರುವದೇನಂದರೆ[6]—ಸಾವಿರಾರು ಕೆಟ್ಟತನದ ಆಸ್ಪದವೆಂತ, ನಾನು ಪಟ್ಣದ ವಾಸ ಬಿಟ್ಟು ಹೋದರೂ ನನ್ನನ್ನು ಬಿಡಲಿಕ್ಕಾಗಲಿಲ್ಲ! ಹಾಗಾದರೆ ಈ ವನವಾಸಿತ್ವದಿಂದ ನಮಗೆ ವಿಶೇಷ ಪ್ರಯೋಜನವೇನೂ ಬರಲಿಲ್ಲ.—ಪುನಃ ಕ್ರಿ. ಶ. 430ನೇ ವರುಷ ಅರಬಿ ಸೀನಾಯ ಪರ್ವತ

---

1) 173ನೇ ಪಾನು. 2) Ep. 18 ad Eustochium. 3) Ep. 95 ad Rusticum.
4) 201ನೇ ಪಾನು. 5) 265ನೇ ಪಾನು. 6) Ep. 2 ad Gregorium.

ದಲ್ಲಿ ಮಠಿಕನಾಗಿದ್ದ ನೀಲನೆಂಬವನು ಹೇಳಿದ ವರ್ತಮಾನವೇನಂದರೆ[1]—ವನವಾಸಿಗಳಲ್ಲಿ ಹಲವರು ಆಲಸ್ಯದಿಂದಲೂ ಬುದ್ಧಿಮಾಂದ್ಯದಿಂದಲೂ ಮನೋಭ್ರಮಿತರಾಗಿ, ಕತ್ತಿಯಿಂದ ತಮ್ಮನ್ನು ಕೊಯಿದು ಕೊಳ್ಳುತ್ತಿದ್ದರು; ಬೇರೆ ಹಲವರು ಅಸಹನೀಯವಾದ ಶೋಕ ನಿರಾಶೆಗಳಿಂದ ಗೃಹೀತರಾಗಿ, ಎತ್ತರ ಸ್ಥಳವೇರಿ, ಕೆಳೆಯಕ್ಕೆ ಬಿದ್ದು ಕೊಳ್ಳುತ್ತಿದ್ದರು; ಮಗುಳೊಬ್ಬರು ತಮ್ಮ ಪ್ರಧಾನಾಂಗವನ್ನು ಕಡಿದು ಬಿಟ್ಟು, ಬೇಕೆಂತ ಆತ್ಮಹತ್ಯ ಗೈದಂಥ ಜಡರಾಗಿ, ಅಪೊಸ್ತೊಲಿಕ ಶಪಥಕ್ಕೊಳಗಾಗುತ್ತಿದ್ದರು; ಇನ್ನೊಬ್ಬರು ಸೈತಾನನ ವಶರಾಗಿ, ಹೆಂಗಸರನ್ನು ಇಟ್ಟು ಕೊಳ್ಳುತ್ತಿದ್ದರು.—

ಕ್ರಿ. ಶ. 100ನೇ ವರುಷದಿಂದ ಆ 300ನೇದರ ವರೆಗೆ ವನವಾಸಿತ್ವಾದಿ ಬಹಿರ್ವೈರಾಗ್ಯವು, ಕ್ರೈಸ್ತ ಧರ್ಮದ್ವೆಂತ, ಇನ್ನು ಹ್ಯಾಗೂ ಎನ್ನಿಸದಿದ್ದದಕ್ಕೆ ಒಂದೇ ಉದಾಹರಣೆ ಸಾಕು. ಏನಂದರೆ, ಆಗ, ಕ್ರೈಸ್ತರು ನಿಷ್ಪ್ರಯೋಜಕವಾದದೊಂದು ಕುಲವೆಂತ, ಬೈಯುತ್ತಾ ಬಂದಿದ್ದ ವಿಗ್ರಹಾರಾಧಕರಿಗೆ ಪ್ರಚಂಡ ನೀತೀ ಧರ್ಮಿಗಳಾದ ಮೊಂತಾನಿಯಾನರ ಸ್ನೇಹಿತನಾದ ಆ ತೆರ್ತುಲ್ಲಿಯಾನನಾದರೂ[2] ಬರೆದ್ದೇನಂದರೆ[3]—ಅದು ಹ್ಯಾಗೆ? ನಾವು ನಿಮ್ಮೊಳಗೆಯೇ ಇದ್ದು, ಅವೇ ವ್ಯಾಪಾರಗಳನ್ನೂ ಅದೇ ದೇಶಪದ್ಧತಿಯನ್ನೂ ನಡಿಸುತ್ತಿದ್ಧೇವಲ್ಲ? ನಾವು ಬ್ರಾಹ್ಮಣರಂತೆ ಒಂದು ಪ್ರತ್ಯೇಕ ಕುಲವೆನ್ನಿಸಿ ಕೊಳ್ಳುವಂಥವರಲ್ಲ; ನಾವು ಹಿಂದು ಯೋಗಿಗಳಂತೆ ಮನುಷ್ಯರ ಜತೆಯನ್ನಗಲಿ ಹೋಗಿ ವನವಾಸ ಮಾಡುವಂಥವರಲ್ಲ. ನಮ್ಮ ನಿರ್ಮಾಣಿಕನಾದ ದೇವರು ಕೊಟ್ಟ ದಯಾವರಗಳನ್ನರಿತು ಕೊಂಡಿದ್ಧೇವೆ; ಅವನು ನಿರ್ಮಿಸಿದ್ದರಲ್ಲಿ ನಾವು ಒಂದನ್ನಾದರೂ ತುಚ್ಛೀಕರಿಸುವದಿಲ್ಲ, ಅದನ್ನೆಲ್ಲಾ ತಕ್ಕ ಮಿತಿಯಾಗಿ ಅನುಭೋಗಿಸಿ ಕೊಳ್ಳುವದು ನಮ್ಮ ಪ್ರಯತ್ನವಷ್ಟೇ! ನಿಮ್ಮ ಸಂತೇ ಬೈಲುಗಳಲ್ಲಿಯೂ ನಿಮ್ಮ ಅಂಗಡಿಗಳಲ್ಲಿಯೂ ನಿಮ್ಮ ಆಹಾರಗಟ್ಟಿಗಳಲ್ಲಿಯೂ ನಿಮ್ಮ ಸ್ನಾನಾಗಾರಗಳಲ್ಲಿಯೂ ಪ್ರವರ್ತಿಸುತ್ತಿದ್ಧೇವಲ್ಲ? ನಿಮ್ಮ ಸಂಗಡ ಸಮುದ್ರಪ್ರಯಾಣದವರಾಗುತ್ತಾ, ಕೃಷಿ ಗೈಯುತ್ತಾ, ನಿಮ್ಮೊಳಗೆ ಪಂಚಾಳರ ಕೃತ್ಯ ನಡಿಸುತ್ತಾ, ನಿಮ್ಮ ಹಾಗೆ ನಮ್ಮ ವ್ಯಾಪಾರಜೀನಸುಗಳನ್ನು ಮಾರಲಿಕ್ಕಿಡುತ್ತಾ ಇದ್ಧೇವಲ್ಲ? ಹಾಗಾದರೆ, ನಾವು ನಿಮ್ಮ ಸಂಗಡ ಬದುಕುವ ಶೀಮೆಗೆ ನಿಷ್ಪ್ರಯೋಜಕರಾಗಿದ್ಧೇರೆಂತ, ನೀವು ಹೇಳುವದು ಹ್ಯಾಗೆ?—



1) Lib. 2, ep. 140. 2) 15ನೇ ಸಂಧಿ. 3) Apologet. C. 42.

## 34. ಅವಿವಾಹಿತ್ವಾಜ್ಞೆಗಳು.

ಕಠಿಣ ವೃತ್ತಿಯಲ್ಲಿಯೂ ಸಂಕಷ್ಟದಲ್ಲಿಯೂ ಹಿಂಸೆಯಲ್ಲಿಯೂ ಹಿಂಸಾಸಂಭವ್ಯದಲ್ಲಿಯೂ ಇರುವಂಥ ಕ್ರೈಸ್ತರು ನಿರ್ವಿವಾಹಿಗಳಾಗಿದ್ದರೆ ಒಳ್ಳೇದೆಂದು, ಪೌಲ ಅಪೊಸ್ತಲನಾದರೂ, ಕ್ರಿಸ್ತನ ಬೋಧನೆಗನುಗುಣವಾಗಿ[1], ಆಲೋಚನೆ ಹೇಳಿದನು. ರೋಮಾಯ ಕೈಸರರ ಹಿಂಸೋಪದ್ರವದೊಳಗಣ ಕ್ರೈಸ್ತರು ಆ ಸದ್ಬುದ್ಧಿಯನ್ನು ಮನದೊಳಗಿಟ್ಟು ಕೊಂಡು, ಅನೇಕಶಃ ಕಾಲೋಚಿತಕ್ಕಾಗಿ ಮದಿವೆ ಇಲ್ಲದಿರುವರು. ಆದರೆ 3ನೇ ಕ್ರಿಸ್ತಶತಮಾನದಾರಭ್ಯ ಕಡು ಮೊಂತಾನಿಯಾನರಂಥವರು ದೇವವಾಕ್ಯದ ನಿಜಾರ್ಥ ಮೀರಿ[2], ನಿರ್ವಿವಾಹಿತ್ವವು ಕ್ರಿಸ್ತನ ಮಾನಕ್ಕಾಗುವ ವಿಶೇಷ ಪುಣ್ಯವೆಂದೆಣಿಸಿ, ವಿವಾಹಿಗಳನ್ನು, ಮುಖ್ಯವಾಗಿ ಬೋಧಕರೊಳಗಿನವರನ್ನು, ಲಘು ಪಡಿಸಲಿಕ್ಕೂ ಹತ್ತಿದರು[3]. ಇಂಥವರಿಗೆ ಪ್ರತಿಕೂಲವಾಗಿ ಅಂದು ಅಲೆಕ್ಸಂದರೀಯದ ಆ ಪ್ರಖ್ಯಾತ ಕ್ಲೇಮೆಂತನು[4]—ಅಂಥವರು ಅಪೊಸ್ತಲರನ್ನು (ಮತ್ತು ಬೇರೆ ಮಹಾ ಭಕ್ತರನ್ನು) ಸಹ ಅಪಲಾಪಿಸುತ್ತಾರೆ; ಹ್ಯಾಗಂದರೆ, ಪೆತ್ರನೂ[5] (ಸಭಾಸೇವಕನು ಮತ್ತು ಸುವಾರ್ತಿಕನು ಆದಂಥ) ಫಿಲಿಪ್ಪನೂ ಮಕ್ಕಳನ್ನು ಹುಟ್ಟಿಸುತ್ತಿದ್ದರು; ಫಿಲಿಪ್ಪನು ತನ್ನ ಕುಮಾರ್ತೆಗಳನ್ನು ಮದಿವೆಗೆ ಕೊಟ್ಟದ್ದು ಸಹ ಆಯಿತು; ಅದಲ್ಲದೆ (ಅಪೊಸ್ತಲನಾದ) ಪೌಲನು ಒಂದು ಪತ್ರಿಕೆಯಲ್ಲಾದರೂ ಯಾವನೊಬ್ಬನು ತನ್ನ ಸ್ತ್ರೀಯ ಸಂಗಮ ಮಾಡುವದಕ್ಕೆ ಸಂಶಯ ತೋರಿಸುವದಿಲ್ಲ; (ಸುವಾರ್ತೆ ಸಾರುವ) ಸೇವೆಯ ಹಗುರತನಕ್ಕೋಸ್ಕರ ಮಾತ್ರ ಅವನು ಅಂಥವಳನ್ನು ತನ್ನ ಸಂಗಡ ಕರಕೊಂಡು ಹೋಗಲಿಲ್ಲವೆಂದು, ಬರೆದನು. ಹ್ಯಾಗಾದರೂ, ಪೆತ್ರ ಅಪೊಸ್ತಲನೂ ಇತರ ಅಪೊಸ್ತಲರೂ ಯೇಸುನಾಥನ ಸಹೋದರರೂ[6] ಸಭಾಸೇವಕನು ಮತ್ತೆ ಸುವಾರ್ತಿಕನು ಆದ ಫಿಲಿಪ್ಪನೂ[7] ಉದ್ಯೋಗದಲ್ಲಿರುವಾಗಲೇ ವಿವಾಹಿಗಳಾಗಿದ್ದರೆಂಬದು ದೇವವಾಕ್ಯಸಿದ್ಧಾಂತವು. ಕ್ರಿಸ್ತನಿಗೂ ಅವನ ಸಭೆಗೂ ಇರುವ ಪರಿಶುದ್ಧ ಅನ್ಯೋನ್ಯಕ್ಕೆ ಸದ್ವಿವಾಹವು ಉಪಮೆಯಾಗುವಷ್ಟು ಮಂಗಳತ್ವವು ಇದರಲ್ಲುಂಟೆಂಬದು ಪೌಲನ ಸ್ಪಷ್ಟ ನಿರ್ಣಯವು[8]; ಆದ್ದರಿಂದ ಹ್ಯಾಗೂ ಸಭಾಧ್ಯಕ್ಷನಿಗೆ ಇಬ್ಬರು ಹೆಂಡರು ಕೂಡಿ ಇರ ಬಾರದು[9]. ಅವಿವಾಹಿತ್ವವಾದಿಗಳಾದ ಮೊಂತಾನಿಯಾನರೂ ದೇವರ ಹೆ

---

1) ಮತ್ತಾ. 19, 4—12; 153ನೇ ಪಾನು. 2) 1 ತಿಮೊ. 4, 1—3; 1 ಕೊರಿ. 3, 21—22; 2 ಥೆಸ್ಸ. 2, 4; ದಾನಿಯೇಲ. 11, 36—39; 1 ಮೋಶೆ. 2, 18. 3) 261ನೇ ಪಾನು ಸರಿ ನೋಡು. 4) 84ನೇ ಪಾನು; Stromata III, p. 448; Euseb. h. e. III, 30, 1 ಆದಿ. 5) 106ನೇ ಪಾನು. 6) ಮತ್ತಾ. 8, 14; ಮರ್ಕ. 1, 10; ಲೂಕ. 4, 38; 1 ಕೊರಿ. 9, 5; ಮತ್ತಾ. 13, 55; ಗಲತ. 1, 19; 2, 9; 37ನೇ ಪಾನು. 7) ಅಪೊ. ಕ್ರಿ. 6, 5; 21, 19. 8) ಎಫೆಸ. 5, 22—33. 9) 1 ತಿಮೊ. 3, 2; ತಿತ. 1, 6; 149ನೇ ಪಾನು ಸರಿ ನೋಡು.

ಸರಿನಲ್ಲಿ ಸದ್ಯಕ್ಕೆ ಆದ ವಿವಾಹಕ್ಕೆ ಅದೇ ಮಾನ ಹಚ್ಚುತ್ತಿದ್ದರು. ತೆರ್ತುಲ್ಲಿಯಾನನು ಲೇಖಿಸಿದ್ದೇನಂದರೆ[1]—ಇಬ್ಬರೂ ಕ್ರೈಸ್ತ ವಿಶ್ವಾಸಿಗಳಾದವರು ವಿವಾಹದ ಐಕ್ಯದಲ್ಲಿ ಶೇರಿ ಕೊಂಡರೆ ಎಷ್ಟೋ ಹಿತವು! ಅವರಿಬ್ಬರಿಗೂ ಅದೇ ಪ್ರತೀಕ್ಷೆಯು, ಅದೇ ಕಾಂಕ್ಷೆಯು, ಅದೇ ಜೀವಿಕೆಯ ಕ್ರಮವು, ಅದೇ ಕರ್ತೃಸೇವೆಯು ಅಲ್ಲವೋ? ಒಬ್ಬ ಸಹೋದರನೂ ಸಹೋದರಿಯೂ ಒಂದೇ ಆತ್ಮದವರೂ ಮಾಂಸದವರೂ ಆಗಿರುವದಕ್ಕಿಂತಲೂ ಹೆಚ್ಚಾಗಿ ಅವರಿಬ್ಬರು ಒಂದೇ ಆಗಿದ್ದಾರೆ; ಅವರು ಕೂಡಿ ಮೊಣಕಾಲೂರಿ, ಪ್ರಾರ್ಥಿಸಿ, ಉಪವಾಸ ಮಾಡುತ್ತಾರೆ; ಅವರು ತಮ್ಮತಮ್ಮನ್ನು ಉಪದೇಶಿಸಿ, ಎಚ್ಚರಿಸಿ, ಸಹಿಸುತ್ತಾರೆ; ಅವರು ಕೂಡಿ ದೇವಾಲಯದಲ್ಲಿಯೂ[2] ಕರ್ತನ ಭೋಜನದಲ್ಲಿಯೂ ಇರುತ್ತಾರೆ; ಅವರು ಕೂಡಿ ಸಂಕಷ್ಟ ಹಿಂಸೆ ಸಂತೋಷಗಳನ್ನು ಅನುಭವಿಸುತ್ತಾರೆ; ಅವರು ತಮತಮಗೆ ಏನೂ ಮರೆ ಮಾಡುವದಿಲ್ಲ, ತಮತಮಗೆ ಬೇಸರ ಪಡುವದಿಲ್ಲ; ಅವರು ಒಂದೇ ಮನಸ್ಸಾಗಿ ರೋಗಿಷ್ಠರಿಗೆ ನೋಡಿ, ಬಡವರಿಗೆ ಸಹಾಯ ಮಾಡುತ್ತಾರೆ; ಅವರಿಬ್ಬರು ಕೂಡಿ ಕೀರ್ತನೆಗಳನ್ನೂ ಸ್ತೋತ್ರಗೀತಗಳನ್ನೂ ಹಾಡುತ್ತಿರುವಲ್ಲಿ, ನಾನು ದೇವರಿಗೆ ಚಂದಾಗಿ ಹಾಡುತ್ತೇನೆ, ತಾನು ದೇವರಿಗೆ ಚಂದಾಗಿ ಹಾಡುತ್ತೇನೆ ಎಂಬಂತೆ ಅನುವೋದಿಸಿ ಪಂಥ ಹಾಕುತ್ತಾರೆ. ಕ್ರಿಸ್ತನು ಅಂಥಾದ್ದು ಕಂಡು, ಕೇಳಿ, ಅವರಿಗೆ ತನ್ನ ಸಮಾಧಾನ ಕಳುಹಿಸಿ ಕೊಡುತ್ತಾನೆ; ಅವರಿಬ್ಬರು ಇರುವಲ್ಲಿ ಆತನು ಸಹ ಇರುವನು, ಆತನಿರುವಲ್ಲಿ ಕೆಡಕನಿರುವದಿಲ್ಲ.—

3ನೇ ಕ್ರಿಸ್ತಶತಮಾನದೊಳಗೆ ಬೋಧಕರ ವಿವಾಹಿತ್ವವು ನೀತಿಭ್ರಷ್ಟತ್ವವೆನ್ನಿಸದ್ದು ಮಾತ್ರವಲ್ಲದೆ ಏಕ ವಿವಾಹಕ್ಕೆ ಅವರಿಗೆ ಅಭ್ಯಂತರವಿರಲಿಲ್ಲ; ಆದರೆ ಹೆಂಡತಿಯ ಮರಣದ ಮೇಲೆ ಪುನರ್ವಿವಾಹ ಮಾಡುವದು, ಮೊಂತಾನಿಯಾನರ ಪದ್ಧತಿಗನುಸಾರವಾಗಿ, ಒಂದೂ ದಿವ್ಯ ಕಾರಣವಿಲ್ಲದೆ[3] ಪಾಪವೆನ್ನಿಸಲೆಸಗಿತು. ಮತ್ತೆ, ಉದ್ಯೋಗಪ್ರತಿಷ್ಠೆಯಾದ ತರುವಾಯ ವಿವಾಹಸ್ಥಿತಿಯ ಸಭೋದ್ಯೋಗಿಗಳು ಸ್ವಸ್ತ್ರೀಸಂಗ ಬಿಡ ತಕ್ಕದ್ದೆಂತ, ನೆನಸುವ ವಿಪರೀತ ಭಾವನೆಯು[4] ಕೂಡ ಅಂದುದಯಿಸಿತು. ಆದರೂ ಇಷ್ಟೆಲ್ಲದರಲ್ಲಿ ಆಜ್ಞೆ ಏನೂ ನಡಿಯಲಿಲ್ಲ.

ಇತ್ತಗಡೆ ಕ್ರಿ. ಶ. 305ನೇ ವರುಷಕ್ಕೆ ಹಿಸ್ಪಾನಿಯ ದೇಶದ ಇಲ್ಲೀಬೆರಿ (ಎಲ್ವಿರ) ಪಟ್ಣದಲ್ಲಿ ಸಂಘ ನೆರೆದ 19 ಮಂದಿ ಸಭಾಧ್ಯಕ್ಷರು, ಸಭೆಯ ಅಧ್ಯಕ್ಷರೂ ಹಿರಿಯರೂ ಸೇವಕರೂ ನಿರ್ವಿವಾಹಿಗಳಾಗಿರ ಬೇಕೆಂದು, ಮೊದಲಿನ ಸಾರಿ ವಿಧಿಸಿ, ಉದ್ಯೋಗಪ್ರತಿಷ್ಠೆ ಹೊಂದಿರುವಂಥ ವಿವಾಹಿಗಳಾದ ಸಭೋದ್ಯೋಗಿಗಳನ್ನು

1) Ad uxor. 2, 8. 2) 94ನೇ ಪಾನು. 3) 1 ಕೊರಿ. 7, 39; 1 ತಿಮೊ. 5, 14; ಮತ್ತಾ. 19, 8—9. 4) 1 ಕೊರಿ. 7, 3.

ಕುರಿತು—ಪ್ರತಿಷ್ಠೆಯುಳ್ಳಂಥ ಅಧ್ಯಕ್ಷರೂ ಹಿರಿಯರೂ ಸೇವಕರೂ ತಮ್ಮ ಸತಿಯರಿಗೆ ಕೂಡದಿರ ಬೇಕೆಂದು, ಮೊದಲಿನ ಆಜ್ಞೆ ಕೊಡಲಾಯಿತು[1]. ಆದಾಗ್ಯೂ, ಪ್ರತಿಷ್ಠೆಗೆ ಮುಂಚಿತವಾಗಿ ಕಟ್ಟಿ ಕೊಂಡ ವಿವಾಹದ ಧರ್ಮವು ಕಿಂಚಿತ್ತೂ ಕೊರತೆಯಿಲ್ಲದೆ ಸಲ್ಲ ತಕ್ಕದ್ದೆಂಬ ನಡವಳಿಯು ಯಾವಲ್ಲಿಯೂ ಅದರಿಂದ ಕಿತ್ತು ಹೋಗಲಿಲ್ಲ. ಬಳಿಕ 20 ವರುಷಕ್ಕೀಚೆ ನೀಕೇಯ ಪಟ್ಟದ 1ನೇ ಸರ್ವಸಭಾಸಂಘದವರು ಇಲ್ಲೀಬೆರಿಯದ್ದರವರ ನಿರ್ಣಯವನ್ನು ಸರ್ವಸಾಧಾರಣ ಸಭಾಜ್ಞೆಯಾಗಲಿಕ್ಕೆ ಮಾಡ ಯೋಚಿಸಲು, ಐಗುಪ್ತದ ಆ ಕೀರ್ತ್ಯ ಅಧ್ಯಕ್ಷನಾದ ಪಫ್ನುತಿಯನು[2] ದಾರ್ಢ್ಯದೊಡನೆ ವಿರೋಧಿಸಿದ್ದರಿಂದ ಆ ಕಾರ್ಯವು ಮೂಲೆಗಣಗಿತು. ಅಧ್ಯಕ್ಷರೂ ಹಿರಿಯರೂ ಸೇವಕರೂ ಪುನರ್ವಿವಾಹದಲ್ಲಿ ಬದುಕಿರ ಬಾರದು; ಮೇಲ್ತರದ ಮೂರು ಉದ್ಯೋಗಗಳೊಂದಕ್ಕೆ ಪ್ರತಿಷ್ಠೆಯಾದವರು ವಿವಾಹ ಪಡೆಯ ಬಾರದು; ಪ್ರತಿಷ್ಠೆಗೆ ಮುಂಚೆ ಆದ ವಿವಾಹದ ವಿಷಯದಲ್ಲಿ ಪ್ರತಿ ಸಭೋದ್ಯೋಗಸ್ಥನು ಯಥೇಚ್ಛೆ ಪ್ರವರ್ತಿಸ ಬಹುದೆಂಬದು[3] ವ್ಯವಸ್ಥೆಯಾಯಿತಷ್ಟೇ; ವಿವಾಹಸ್ಥಿತಿಮಂಗಳತ್ವದ ಕಲೆಯನ್ನು ಯಾರೂ ಕುಂದಿಸಲಿಲ್ಲ. ಪೂರ್ವ ದಿಕ್ಕಿನ ಹೆಚ್ಚು ಸಭೆಗಳಲ್ಲಿ ಆ ಪ್ರಕಾರವು ಕ್ರಿ. ಶ. 528ನೇ ವರುಷದ ತನಕ ನಡೆದು ಬಂತು[4]. ಅಷ್ಟು ಕಾಲದೊಳಗೆ ಆ ಕಡೆಯಲ್ಲಿ ತಮ್ಮ ಸತಿಯನ್ನನುಭವಿಸುವಂಥ ಅನೇಕ ಮಂದಿ ವಿವಾಹಿಗಳಾದ ಅಧ್ಯಕ್ಷರಿರುತ್ತಿದ್ದರು[5]. ಇದಕ್ಕೊಂದು ನಿದರ್ಶನವೇನಂದರೆ—ಕಪ್ಪದೊಕಿಯದ ನಾಜಿಯಂಜು ಪಟ್ಟದಲ್ಲಿ ಗ್ರೆಗೋರನೆಂಬ ಅಧ್ಯಕ್ಷನಿದ್ದನು. ಅವನು ಇನ್ನು ವಿಗ್ರಹಾರಾಧಕನಾಗಿರಲು, ಅವನಿಗೆ ಅಲ್ಲಿ ಮುಖ್ಯಾಧಿಕಾರವಿತ್ತು. ಅತ್ಯುತ್ತಮ ಕ್ರೈಸ್ತಳಾದ ಅವನ ಹೆಂಡತಿಯ ಹೆಸರು ನೊನ್ನಳೆಂತ. ಇವಳ ಪ್ರಾರ್ಥನೆ ಉಪದೇಶಗಳಿಂದ ಅವನು ಕ್ರಿಸ್ತನ ಶಿಷ್ಯನಾದನು. ತದನಂತರ ಸ್ವಲ್ಪ ಕಾಲದ ಮೇಲೆ ಸಣ್ಣ ಅಸಿಯದ ಅಧ್ಯಕ್ಷರು ನೀಕೇಯದ ಆ 1ನೇ ಸರ್ವಸಭಾಸಂಘಕ್ಕೆ ಹೊರಡಲು, ತಮ್ಮ ಪ್ರಯಾಣದಲ್ಲಿ ನಾಜಿಯಂಜಿಗೆ ಬಂದೊದಗಿದಂಥವರ ಸಮಕ್ಷದಲ್ಲಿ ಅವನ ಅಧ್ಯಕ್ಷನು ಗ್ರೆಗೋರನಿಗೆ ಸ್ನಾನ ಕೊಟ್ಟನು. ತರುವಾಯ ತನ್ನ ಕ್ರಿಸ್ತನಾಥನೊಬ್ಬನಿಗೆಯೇ ಸೇವಿಸಲಿಕ್ಕಾಗಿ ಅವನು ಬಹಳ ದಿವಸ ಕಳೆಯದೆ ಬೋಧಕನಾಗಿ, ತನ್ನ ಅಧ್ಯಕ್ಷನು ಕೊಂಚ ಕಾಲದಿತ್ತ ಸತ್ತಾಗ ಅವನ ಉತ್ತರಾಧಿಕಾರಿಯಾದನು. ಆ ಸಮಯ ಅವನು ಒಂದು ಶಿಶುಜನ್ಮದ ದಾರಿ ನೋಡುತ್ತಿದ್ದನು; ಮತ್ತೆ ಇನ್ನು ಅದೇ 325ನೇ ವರುಷ ಅವನಿಗೆ ಒಬ್ಬ ಕುಮಾರನುದ್ಭವಿಸಿದನು, ಹಿಂದಗಡೆ ಮಿಗು ಪ್ರಖ್ಯಾತಿ ಗೊಂಡ ನಾಜಿಯಂಜಿನ ಗ್ರೆಗೋರನು ಇವನೇ[6]; ಅಲೆಕ್ಸಂ

1) Can. 33. 2) 185ನೇ ಪಾನು. 3) Socrat. h. e. I, 11; Sozomen. I, 23; Gelas. h. conc. Nic. 2, 23. 4) 252ನೇ, 253ನೇ ಪಾನು ಸರಿ ನೋಡು. 5) Natalis Alex. h. e. 6) 155, 188, 250, 265ನೇ ಪಾನು.

ದರೀಯದ ಅಥನಸಿಯನಂತೆ ಇವನು ಕ್ರೈಸ್ತ ಸಭೆಯ ಘಟ್ಟೆಯಾದದೊಂದು ಸ್ತಂಭವಾದನು. ಬಳಿಕ ಆ ಅಧ್ಯಕ್ಷನಾದಂಥ ಗ್ರೆಗೋರನಿಗೆ ಕೈಸರಿಯನೆಂಬ ಮತ್ತೊಬ್ಬ ಮಗನೂ ಗೊರ್ಗೊನಿಯಳೆಂಬ ಮಗಳೊಬ್ಬಳೂ ಹುಟ್ಟಿದರು.—ಆ ಮೇಲೆ ಕ್ರಿ. ಶ. 692ನೇ ವರುಷಕ್ಕೆ ಕೊನ್ಸ್ತಂತೀನೊಪೊಲಿಯ ತ್ರುಲ್ಲೊವೆಂಬ ಕೈಸರನದೊಂದು ಅರಮನೆಯಲ್ಲಿ ಕೂಡಿ ಬಂದದರಿಂದ ತ್ರುಲ್ಲಾನಿಕವೆಂಬ ಗುಣನಾಮ ಹೊಂದಿದ 6ನೇ ಸರ್ವಸಭಾಸಂಘದಿಂದ[1] ನೀಕೇಯದ್ದರ ವಿವಾಹನಿರ್ಣಯಗಳು ಮರಳಿ ಸ್ಥಾಪಿತವಾದದ್ದು ಮಾತ್ರವಲ್ಲದೆ, ಸಭಾಧ್ಯಕ್ಷರೆಲ್ಲರೂ ಕೇವಲನಿರ್ವಿವಾಹಿತ್ವದಿಂದಿರ ಬೇಕೆಂತ, ಅವಕ್ಕೆ ಕೂಡಿಸೋಣವಾಯಿತು. ಈ ಆಜ್ಞೆಯು ಪೂರ್ವ ದಿಕ್ಕಿನ ಸಭೆಗಳಲ್ಲಿ ಈ ವರೆಗೂ ಬದಲಾಗಲಿಲ್ಲ[2].

ಆದರೂ ಪಶ್ಚಿಮ ದಿಕ್ಕಿನ ಸಭೆಗಳಲ್ಲನೇಕರು, ಮುಖ್ಯವಾಗಿ ರೋಮಪುರದ ಅಧ್ಯಕ್ಷರು, ಇಲ್ಲೀಬೆರಿಯ ಆ ನಿಃಸಂಗಾಜ್ಞೆಯನ್ನು ನಡಿಸಲೊದ್ದಾಡುತ್ತಿದ್ದರು; ಅಂಬ್ರೊಸಿಯ, ಹಿಯೆರೋನುಮ, ಔಗುಸ್ತೀನ ಇವರು ಮೂವರು ಸಹ ಆ ದಿಶೆಯಲ್ಲಿ ಸಭೋದ್ಯೋಗಿಗಳಿಗೆ ಮಠಿಕ ಭಾವ ಹಚ್ಚ ಬೇಕೆಂಬ ಅಭಿಲಾಷೆಯುಳ್ಳಂಥವರಾಗಿದ್ದರು[3]. ಆದಾಗ್ಯೂ ಬೇರೆ ಹೇರಳ ಮಂದಿಯಾದ ಒಳ್ಳೇ ಸಭೋದ್ಯೋಗಿಗಳು ಅವರ ಅರ್ಥಕ್ಕೆ ಪ್ರತಿವಾದಿಗಳಾಗುತ್ತಿರುವದರಿಂದಲೂ ಅದನ್ನು ಮಿಾರುತ್ತಿರುವದರಿಂದಲೂ ಅಂಥವರ ಪ್ರಯತ್ನಗಳು ಹೆಚ್ಚಾಗಿ ನಿರರ್ಥಕವಾಗುತ್ತಿದ್ದವು. ಪಪ್ಪರೆಂಬಂಥ[4] ರೋಮಕ ಅಧ್ಯಕ್ಷರ ಅಧಿಕಾರವು ಕ್ರಿ. ಶ. 600ನೇ ವರುಷಕ್ಕೆ ಮುಂಚೆ ಶೇರದ ಇಂಗ್ಲಂದಿನಲ್ಲಿಯೂ ಸ್ಕೋತ್ಲಂದಿನಲ್ಲಿಯೂ ಐರ್ಲಂದಿನಲ್ಲಿಯೂ[5] ಸಭೋದ್ಯೋಗಿಗಳ ವಿವಾಹಿತ್ವವು ಕ್ರಿ. ಶ. 664ನೇದರ ವರೆಗೆ ಸರ್ವತ್ರ ಪ್ರಬಲವಾಗಿತ್ತು; ಇತ್ತಲಾಗೆ ಸಹ ಆ ದಿಕ್ಕಿನಲ್ಲಿಯೂ ಆ ದಿಕ್ಕಿನವರು ಸುವಾರ್ತಾಪ್ರಸಾರಕರಾದ ಗೆರ್ಮಾನಿಯದಲ್ಲಿಯೂ ಫ್ರಂಕ ದೇಶದಲ್ಲಿಯೂ ಮಾತ್ರವಲ್ಲದೆ ಸ್ಪಾನಿಯದಲ್ಲಿಯೂ ಕೂಡ ಅದು ಬಹುಶಃ ನಡೆಯುತ್ತಲಿತ್ತು. 11ನೇ ಕ್ರಿಸ್ತಶತಮಾನದಲ್ಲಿ ಮಾತ್ರ ಸಭೋದ್ಯೋಗಿಗಳ ನಿರ್ವಿವಾಹಿತ್ವವು ಪಶ್ಚಿಮ ದಿಶೆಯ ಪಪ್ಪಕವೆಂಬ[4] ಪಕ್ಷದ ಸಭೆಗಳಲ್ಲಿ ಹೆಚ್ಚು ರೂಢಿಯಾಯಿತು.



1) Conc. Quinisextum; 254ನೇ ಪಾನು. 2) 253ನೇ ಪಾನು ಸರಿ ನೋಡು. 3) 264ನೇ, 265ನೇ, 266ನೇ ಪಾನು ಸರಿ ನೋಡು. 4) 4ನೇ, 163ನೇ, 173ನೇ, 209ನೇ ಪಾನು. 5) 38ನೇ, 39ನೇ ಸಂಧಿ.

## 35. ಪಪ್ಪಕತ್ವವು.

ಅಪೊಸ್ತೊಲಿಕ ಕಾಲದ ಅಂತದಲ್ಲಿ ಸಭೇ ಹಿರಿಯರ ಕೂಟದೊಳಗೆ ಪ್ರಾಜ್ಞನಾದವನೊಬ್ಬನು, ಹಿಂದೆ ಹೇಳಿರುವಂತೆ[1], ಸಂಘಾಗ್ರಸ್ಥನಾಗಿ, ಸಾಧಾರಣ ಪಕ್ಷದಲ್ಲಿ ಸಭಾಗ್ರಸ್ಥಿಕೆ ಸಹ ಪಡದ್ದು ಸಹಜವೇ. ಈ ವಿಧಿಯು ಮೊದಲಿಗೆ ಯೆರೂಸಲೇಮು[2], ಅಂತಿಯೊಖೀಯ[3], ಸ್ಮುರ್ನ[4], ಎಫೆಸ[5], ರೋಮ[6], ಅಲೆಕ್ಸಂದರೀಯ[7] ಪ್ರಮುಖವಾದವುಗಳ ದೊಡ್ಡ ಪಟ್ಣಸಭೆಗಳಲ್ಲಿ ನೆಲೆ ಗೊಂಡಿತು. ಮುಂಚೆ ಎಲ್ಲಾ ಹಿರಿಯರಲ್ಲೊಬ್ಬೊಬ್ಬನಿಗಿರುತ್ತಿದ್ದ ಅಧ್ಯಕ್ಷನು (ಎಪಿಸ್ಕೊಪನು, ಬಿಷೊಪನು) ಎಂಬ ಹೆಸರನ್ನು ದಿನಗತಿಯಲ್ಲಿ ಆಯಾ ಸಭೆಗಳವರು ಇನ್ನು ಸಕಲ ಹಿರಿಯರಿಗಲ್ಲ, ಅಂಥ ಅಗ್ರಸ್ಥನಿಗೆ ಮಾತ್ರ ಇಡುವವರಾದರು. ಅಂಥ ಅಧ್ಯಕ್ಷರು ಸಭಾಪರಿಪಾಲನ ಮಾಡ ಬೇಕಾದ್ದು ಹೊರ್ತಾಗಿ ಕೆಲವು ಕಾಲದಿತ್ತ ಹೊಸ ಹಿರಿಯರನ್ನು ನೇಮಿಸಿ ಹಸ್ತಾಧಾನದೊಡನೆ ಉದ್ಯೋಗಪ್ರತಿಷ್ಠೆ ಗೊಳ್ಳಿಸುವ ವೃತ್ತಿಗೆ ಸಹ ಬಂದು, ಹೀಗೆ ಅಧಿಕಾರದಲ್ಲಿ ಹೆಚ್ಚುವವರಾದರು; ಆದರೂ ಹಿರಿಯರ ಸಂಘದವರ ಚಿತ್ತ ಕೇಳದಲೇ ಏನಾದರೂ ನಡಿಸುವಂಥಾ ಅಧಿಕಾರವು ಅವರಿಗಿರಲಿಲ್ಲ[8]. ದೊಡ್ಡ ಊರುಸಭೆಗಳವರು ಕೂಡ ತಮಗೆ ತಾವೇ ಅಂಥಾ ಅಧ್ಯಕ್ಷರನ್ನು ಹೆಕ್ಕಿ ಕೊಳ್ಳುವವರಾದರು; ಅಥವಾ, ವಿಶೇಷವಾಗಿ ತಾವು ಅವನ ಮೂಲಕದಿಂದ ಕ್ರೈಸ್ತತ್ವ ಹೊಂದಿರುವ ಪಕ್ಷದಲ್ಲಿ, ಹತ್ತರವಾದ ಪಟ್ಣದ ಅಧ್ಯಕ್ಷನಿಗೊಳಗಾಗಿ, ಅವನಿಂದ ಒಬ್ಬ ಹಿರಿಯನನ್ನಾಗಲಿ ಸೇವಕನನ್ನಾಗಲಿ ಪಡ ಕೊಳ್ಳುವರು. ದಿನ ಗತಿಸುತ್ತಿರಲು, ಸರ್ವ ಊರಧ್ಯಕ್ಷರು ಸಮಿಾಪದ ಪುರಾಧ್ಯಕ್ಷನ ಅಧೀನತೆಯಲ್ಲಿ ಶಿಕ್ಕಿದ ಹಾಗಾಯಿತು. ಮತ್ತೆ ಅಪೊಸ್ತಲರು ತಾವು ಉಪದೇಶಿಸುತ್ತಿದ್ದ ಪಟ್ಣಗಳ ಅಧ್ಯಕ್ಷಗಲ್ಲದೆ ರಾಷ್ಟ್ರಗಳ ರಾಜಧಾನಿಗಳವರು ಸಹ 2ನೇ ಕ್ರಿಸ್ತಶತಮಾನದ ಅಂತ್ಯ ಕಾಲ ಹಿಡಿದು ಅತಿ ಮಾನ್ಯರಾದರು; ಹ್ಯಾಗಂದರೆ, ಆ ಕಾಲದಾರಭ್ಯ ರಾಷ್ಟ್ರಸಭಾಸಂಘಗಳು ಬಹಳವಾಗಿ[9], ವರುಷಕ್ಕೆ ಒಂದೆರಡು ಸಾರಿ ರಾಜಧಾನಿಯಲ್ಲಿ ಇದರ ಅಧ್ಯಕ್ಷನ ಅಗ್ರಸ್ಥಿಕೆಯೊಳಗೆ ನೆರೆಯುತ್ತಿರುವವು. ಈ ಪ್ರಕಾರದಿಂದ ರಾಜಧಾನಿಗಳ ಅಧ್ಯಕ್ಷರು ರಾಷ್ಟ್ರಗಳ ಇತರ ಅಧ್ಯಕ್ಷರ ಮೇಲ್ವಿಚಾರಕರಾಗಿ, ಮೇತ್ರೊಪೊಲಿತಾನರೆಂತಾಗಲಿ ಮೇತ್ರಾನರೆಂತಾಗಲಿ (ಅಂದರೆ ಮಾತೃಪುರಿಯವರೆಂಬ) ಉಪನಾಮ ತೆಕ್ಕೊಂಡರು. ಪರಿಶುದ್ಧ ಬರಹದಲ್ಲಿ ಕಾಣುವ ಕೆಳ ಸಭೋದ್ಯೋಗಗಳ

1) 94ನೇ 95ನೇ ಪಾನು. 2) 37ನೇ, 45ನೇ, 65ನೇ ಪಾನು. 3) 130ನೇ ಪಾನು. 4) 66ನೇ, 133ನೇ ಪಾನು. 5) 132ನೇ ಪಾನು. 6) 54ನೇ, 58ನೇ ಪಾನು. 7) 81ನೇ, 84ನೇ ಪಾನು. 8) Conc. Carth. gener. IV, 23; Ep. Cleri Rom. ad Cypr.; Cyprian. ep. 5; 11; 13 ಇತ್ಯಾದಿ. 9) 92ನೇ ಪಾನು ಸರಿ ನೋಡು.

ಲ್ಲದ ಬೇರೆ ಐದು[1] ಶೀಘ್ರದಿಂ ದುತ್ಪನ್ನವಾದ ಮೇಲೆ ಅಧ್ಯಕ್ಷರ ಹಸ್ತಕರು ಹೆಚ್ಚಿದರು; ಆದ ಕಾರಣ ಮೇತ್ರೊಪೊಲಿತಾನರ ಅಧಿಕಾರವು ಬೆಳೆಯಲಿಕ್ಕೆ ತಿರಿಗಿ ಆಸ್ಪದವಾಯಿತು.

ಸಕಲ ಕೃಚ್ಛ್ರಗಳೂ ಸಹಾಯಹೀನರೂ, ಮುಖ್ಯವಾಗಿ ವಿಧವೆಗಳು ಮತ್ತು ಅನಾಥರು, ಸಭೋದ್ಯೋಗಿಗಳ ಶರಣು ಹೊಗುವ ಪದ್ಧತಿ ಇರುವದು. ಅಧ್ಯಕ್ಷನು ಆ ವಿಷಯದ ದಾನಧರ್ಮವನ್ನೂ ಸಭಾಭಂಡದ ಬೇರೆ ಆಡಳಿತವನ್ನೂ ತಾನು ತನ್ನ ಕೆಳಗಿನ ಸಭಾಸೇವಕರಿಂದ ಸಾಗಿಸುತ್ತಿರಲಿಕ್ಕೆ, ಅವನಿಗೆ, ಪಪ್ಪನೆಂಬ ಪಿತನು ಎಂತ, ಬಿರುದುಹೆಸರು ಪ್ರಾಪಿಸಿತು[2]. ಇದು ಕ್ರಿಸ್ತನ ಅರ್ಥಕ್ಕೆ ಪ್ರತಿಕೂಲವಾದ ವಿಘ್ನಕರ ನಾಮವಲ್ಲವೋ[3]? 4ನೇ ಶತಮಾನದೊಳಗೆ ಒಬ್ಬೊಬ್ಬ ಅಧ್ಯಕ್ಷನಿಗೆ, ವಿಶೇಷವಾಗಿ ಯೆರೂಸಲೇಮು ಅಂತಿಯೊಖೀಯ ರೋಮ ಅಲೆಕ್ಸಂದರೀಯ ಕೊನ್ಸ್ತಂತೀನೊಪೊಲಿ ಎಂಬ 5 ಪಟ್ಣಗಳವರಿಗೆ, ಪತ್ರಿಯರ್ಖ (ಪಿತರರ್ಯ ಅಥವಾ ಪಿತರರ್ಹ) ಎಂತಲೂ, ಹೆಸರು ಬಿತ್ತು[4]. ಸಭೋದ್ಯೋಗಿಗಳ ಮತ್ತು ಕಷ್ಟಿಗಳ ಜೀವನಕ್ಕೆ ಆ ಸಮಯ ಸಭ್ಯರ ಸ್ವೇಚ್ಛಾಮಿಲಿತ ಭಂಡಾರಗಳಲ್ಲದೆ ಇವರು ಮರಣಕಾಲದಲ್ಲಿ ಬಿಟ್ಟು ಕೊಡುವ ದಾನಗಳೂ ಕ್ರೈಸ್ತ ಅಧಿಕಾರಿಗಳ ಸಹಾಯವೂ ಸಹ ಇರುವವು[5].

ರೋಮಾಯ ಸಾಮ್ರಾಜ್ಯದ ಪ್ರಥಮವಾದ ಮೂರು ದೊಡ್ಡ ರಾಜಧಾನಿಗಳ ಅಧ್ಯಕ್ಷರು ಅಂದರೆ ರೋಮ ಅಲೆಕ್ಸಂದರೀಯ ಅಂತಿಯೊಖೀಯ ಪಟ್ಣಗಳ ಮೇತ್ರೊಪೊಲಿತಾನರು ವಿಸ್ತಾರವಾದ ತುಕ್ಕಡಿಗಳುಳ್ಳವರಾಗಿದ್ದು, ಇದರ ಸಲುವಾಗಿ ಶ್ರೇಷ್ಠ ಅಧ್ಯಕ್ಷರೆನ್ನಿಸುತ್ತಿದ್ದರು; ಆದಾಗ್ಯೂ 3ನೇ ಶತಮಾನದ ಮಧ್ಯದಲ್ಲಿನ್ನಾದರೂ ಕುಪ್ರಿಯಾನ[6] ಮುಂತಾದವರು—ಸಕಲ ಅಧ್ಯಕ್ಷರ ಮಾನವೂ ಅಧಿಕಾರವೂ ಸಂಪೂರ್ಣ ಒಂದೇ, ಒಬ್ಬೊಬ್ಬನು ತಾನು ತನ್ನ ತುಕ್ಕಡಿಯಲ್ಲಿ ನಡಿಸುತ್ತಿರುವ ಕಾರ್ಯಗಳಿಗೋಸ್ಕರ ದೇವರಿಗಲ್ಲದೆ ಮತ್ತ್ಯಾರಿಗೂ ಲೆಖ್ಖ ಒಪ್ಪಿಸ ಬೇಕಾಗುವದಿಲ್ಲವೆಂದು, ಸರ್ವಥಾ ಕೈಗೊಳ್ಳುತ್ತಿರುವರು[7]. ಹೀಗಿರಲಾಗಿ, ಯಾರೊಬ್ಬ ಅಧ್ಯಕ್ಷನು ಸಭಿಕ ಕ್ರಮ ಮೀರಿ ಬಿಟ್ಟರೆ ಅಂಥವನಿಗೆ ಬುದ್ಧಿ ಹೇಳಲಿಕ್ಕೂ ಸರಿ ಗೊಳ್ಳಿಸಲಿಕ್ಕೂ ಶಿಕ್ಷಿಸಲಿಕ್ಕೂ ತಮ ತಮಗೆ ಏಕ ತರದ ಅಧಿಕಾರವುಂಟೆಂತ, ಸರ್ವ ಅಧ್ಯಕ್ಷರು ನಿಶ್ಚೈಸಿ ಕೊಂಡಿರುವರು[8].

---

1) 94ನೇ ಪಾನು. 2) Tertul. de pudic. 13; Gregor. Thaum. ep. can. 1. 3) ಮತ್ತಾ. 23, 19. 4) Gregor. Nazianz. orat. 20. 32. 41; Gregor. Nyss. orat fnuebr. in Meletium. 5) 180ನೇ, 181ನೇ ಪಾನು. 6) 17ನೇ ಸಂಧಿ. 7) Cyprian. de unita. eccles; ejus ep. 52; ejus allocutio in Conc. Carthag.; ejus ep. 55, ep. 72. 8) Cyprian. ep. 67 ad Stheph. Ep. Rom.

ಸಭೋದ್ಯೋಗಗಳ ಪ್ರಚುರತೆಯು ಆ ಕಾಲದ ವರೆಗೆ ದೇವವಾಕ್ಯಕ್ಕೆ ಪೂರ್ಣ ಅನುಕೂಲವಾಗಿ ನಡೆಯದಿದ್ದರೂ ಅದಕ್ಕೆ ಪ್ರತಿಕೂಲವಾಗಿ ಸಹ ಚರಿಸಲಿಲ್ಲ. ಆದಾಗ್ಯೂ ಆ ಕಾಲಾಂತರದೊಳಗಿನ ಕೆಲವರು ಕಲ್ಯಾಣಶೀಲರಾದ ಕ್ರೈಸ್ತರೂ ಅಧ್ಯಕ್ಷರ ಅಧಿಕಾರವನ್ನು ಕುರಿತು ಅಪೊಸ್ತಲರ ಮತ್ತು ಮೂಲಕ್ರೈಸ್ತಸಭೆಯ ಅರ್ಥಕ್ಕೆ ಸರಿ ಸಮ ಬೀಳದಂಥ ನಿರ್ಣಯಗಳನ್ನುಚ್ಚರಿಸದಿರಲಿಲ್ಲ. ಹ್ಯಾಗಂದರೆ, ಆ ಸರ್ವಪ್ರಿಯ ಇಗ್ನಾತಿಯಸು[1], ಸಭೆಗಳನ್ನು ಆ ಕಾಲದ ಉತ್ತಮ ಅಧ್ಯಕ್ಷರಿಗೊಪ್ಪಿಸಿ ಜ್ಞೋಸ್ತಿಕರೆದುರಿನಲ್ಲಿ[2] ಭದ್ರ ಮಾಡುವದಕ್ಕಾಗಿ, ಬರೆದ್ದೇನಂದರೆ—ಕ್ರಿಸ್ತನು ತನ್ನ ಪಿತನಿಗೆ ವಿಧೇಯನಾದಂತೆ ನೀವೆಲ್ಲರು ಅಧ್ಯಕ್ಷನಿಗೆ ವಿಧೇಯರಾಗಿ, ಹಿರಿಯರ ಕೂಟದವರಿಗೆ ಕ್ರಿಸ್ತನ ಅಪೊಸ್ತಲರೆಂಬಂತೆ ಒಳ ಪಡುತ್ತೀರಿ. ಅಧ್ಯಕ್ಷನಿಲ್ಲದೆ ಯಾರೂ ಒಂದು ಸಭಾಕಾರ್ಯವನ್ನಾರಂಭಿಸದಿರಲಿ! ಅಧ್ಯಕ್ಷನಿಲ್ಲದೆ ಸ್ನಾನ ಕೊಡುವದೂ ಅಗಪೆಯನ್ನಾಚರಿಸುವದೂ[3] ನ್ಯಾಯವಲ್ಲ; ಆದರೆ ಅವನು ಅಸ್ತುಬಡುವದೆಲ್ಲವೂ ದೇವರಿಗೆ ಸಹ ಸುಸಮ್ಮತವಾಗುವದು. ಅಧ್ಯಕ್ಷನನ್ನು ಸನ್ಮಾನಿಸುವಂಥವನಿಗೆ ದೇವರಿಂದ ಸನ್ಮಾನ ಬರುತ್ತದೆ; ಮತ್ತು ಅಧ್ಯಕ್ಷನಿಗೆ ತಿಳಿಯದೆ ಏನೊಂದಾದರೂ ಮಾಡುವಂಥವನು ಪಿಶಾಚನ ಬಂಧನದಲ್ಲಿದ್ದಾನೆ. ಕ್ರಿಸ್ತನಾಥನೇ ಎಂಬಂತೆ ಅಧ್ಯಕ್ಷನನ್ನು ದೃಷ್ಟಿಸುವದು ನಿಮ್ಮ ಹಂಗೇ, ಸರಿ[4]!—ಆದರೂ ಅವನು, ಸರ್ವಕ್ರೈಸ್ತರೂ ರಾಜಯಾಜಕತ್ವಕುಲವೆಂತ, ಸ್ಥಾಪಿಸಿ[5], ಯೇಸು ಕ್ರಿಸ್ತನೇ ಇರುವಲ್ಲಿ ಕಥೊಲಿಕ[6] ಸಭೆಯೆಂತ, ನಿರ್ಣಯ ಹೇಳಿದನು[7]. ಪುನಃ, ಲಿಯೋನಿನ ಆ ಈರೇನೇಯನು[8]—ಅಪೊಸ್ತಲರು ತಾವು ಅಧ್ಯಕ್ಷರನ್ನು ನೇಮಿಸಿದರು[9]; ಇವರು ಅವರ ಉತ್ತರಾಧಿಕಾರಿಗಳು; ಆದ್ದರಿಂದ ಅಧ್ಯಕ್ಷರೂ ಹಿರಿಯರೂ ವಿಶೇಷವಾದದ್ದೊಂದು ಉದ್ಯೋಗವರ ಪಡದವರಾಗಿದ್ದಾರೆಂತ, ಉಚ್ಚರಿಸಿದನು[10]. ಅವರಿಬ್ಬರಿಗೀಚೆ ಕುಪ್ರಿಯಾನನು ಲೇಖಿಸಿದ್ದು—ಅಧ್ಯಕ್ಷನು ಸಭೆಯಲ್ಲಿದ್ದಾನೆ, ಸಭೆಯು ಅಧ್ಯಕ್ಷನಲ್ಲಿದೆ; ಅಧ್ಯಕ್ಷನ ಸಂಗಡಲಿರದವನ್ಯಾವನೊಬ್ಬನೂ ಸಭೆಯ ಸಂಗಡಲಿರುವದಿಲ್ಲ ಎಂತ, ನೀವು ತಿಳುಕೊಳ್ಳ ತಕ್ಕದ್ದು. ಅಧ್ಯಕ್ಷನು ಕ್ರಿಸ್ತನ ಪ್ರತಿನಿಧಿಯು[11].—ಆದಾಗ್ಯೂ, ತಾನು ಸಹ ಹೇಳಿರುವಂತೆ, ಅವನು ಹಿರಿಯರ ಮತ್ತು ಸಭಾಸೇವಕರ ಮತ್ತು ಸಭ್ಯರ ಆಲೋಚನೆ ಕೇಳದೆ ಯಾವದೊಂದೂ ವ್ಯವಸ್ಥೆಯನ್ನು ಎಂದೂ ಮಾಡಲಿಲ್ಲ[12].

---

1) 11ನೇ ಸಂಧಿ. 2) 18ನೇ ಸಂಧಿ. 3) 71ನೇ, 95ನೇ ಪಾನು. 4) Ep. ad Smyrn. c. 8; ad Trallian. c. 2; ad Ephes. 5) ad Eph. 9; 147ನೇ ಪಾನು. 6) 163ನೇ, 243ನೇ ಪಾನು. 7) ad Smyrn. 8; 163ನೇ ಪಾನು. 8) 143ನೇ ಪಾನು. 9) 70ನೇ, 93ನೇ, 94ನೇ, 273ನೇ ಪಾನು ಸರಿ ನೋಡು. 10) **3**, 3, 1; **4**, 26, 2; 93ನೇ ಪಾನು ಸರಿ ನೋಡು. 11) Ep. 69; 55; 59; 17ನೇ ಸಂಧಿಯು ಅಂತ ನೋಡು. 12) Ep. 6.

ತಮ್ಮೊಳಗಿನ ಸಭೆಗಳು ದೊಡ್ಡವಾಗುತ್ತಾ, ತಮ್ಮ ಕೆಳಗಿನ ಉದ್ಯೋಗಿಗಳು ಹೆಚ್ಚುತ್ತಾ, ಆಗಿಂದಾಗ ಬಹಿಃಸಮಾಧಾನದ ಕಾಲಗಳೊದಗುತ್ತಾ[1] ಇರಲು, ಅಧ್ಯಕ್ಷರು ಅಧಿಕ ಮಾನ ಪ್ರಾಪ್ತಿಗಳನ್ನು ಹೊಂದುವವರಾದ ಕಾರಣ ಒರೀಗೆನನ ಮತ್ತು ಕುಪ್ರಿಯಾನನ ಸಮಯದಲ್ಲಿಯೂ ಅವರಲ್ಲಿ ಹಲವರು ಗರ್ವ ಅಧಿಕಾರಾಭಿಮಾನ ಲೋಭ ಡಂಭಗಳ ಶೆಳವಿನಲ್ಲಿ ಶಿಕ್ಕಿ ಕೊಂಡರು; ಅದಕ್ಕಾಗಿ ಅವರಿಬ್ಬರು ಬಹಳ ಹಲುಬ ಬೇಕಾಯಿತು. ಬಳಿಕ ಕ್ರಿ. ಶ. 324ನೇ ವರುಷದಾರಭ್ಯ ರೋಮಿಯ ಸಾಮ್ರಾಜ್ಯದಲ್ಲಿ ಹಿಂಸೆಗಳು ಪೂರಾ ತೀರಿ, ಕ್ರೈಸ್ತತ್ವವು ರಾಜ್ಯಮತವಾಗಿ[2], ಕ್ರೈಸ್ತ ಕೈಸರರ ಪ್ರಸನ್ನತೆಯಿಂದ ಅಧ್ಯಕ್ಷಾದಿ ಸಭೋದ್ಯೋಗಿಗಳ ಮಾನವು ಬೆಳದು ಬಂದು, ಅವರು ಕಷ್ಟವುಳ್ಳ ಅನೇಕ ಪ್ರಜಾಧರ್ಮವೃತ್ತಿಯಿಂದ ಬಿಡುಗಡೆಯವರಾಗಿ, ನಿಯಮದ ಸಂಬಳದವರಾಗಿ, ಈ ಉಪಕಾರಕ್ಕೋಸ್ಕರ ಅಧಿಕಾರಸ್ಥರು[3] ಸಭೋದ್ಯೋಗಗಳಿಗೆ ಬರುವ ಐಶ್ವರ್ಯವಂತರ ಧನವನ್ನು ಬಹುಶಃ ತೆಗೆದು ರಾಜಭಂಡಾರಕ್ಕೆ ಹಾಕುವದರಿಂದ ಇನ್ನು ಸ್ವಲ್ಪ ಮಂದಿ ಸತ್ಪಂಡಿತರು ಬಹಳ ಮಂದಿ ಬಡ ಅಪಂಡಿತರು ಅಂಥ ಉದ್ಯೋಗಗಳನ್ನು ವಹಿಸುತ್ತಾ, ಸಭೋದ್ಯೋಗಿಗಳು ತಾವು ಒಂದು ವೇಳೆ ನಡಿಸುವ ರಾಜ್ಯಸಂಬಂಧವಾದ ಪಾಪಕರ್ಮಗಳ ವಿಷಯದಲ್ಲಿಯಾದರೂ ಕೈಸರರ ಪ್ರಸಾದದ ಮೇಲೆ ರಾಜಕ ವಿಚಾರಣದಿಂದ ವಿಮುಕ್ತರಾಗಿ ಅಧ್ಯಕ್ಷರಿಂದಲೂ ಸಭಾಸಂಘಗಳಿಂದಲೂ ಮಾತ್ರ ವಿಚಾರಿತರಾಗುತ್ತಾ, ಅಂದಿನಿಂದಂದು ಕೇವಲ ರಾಜಕ ವಿಚಾರಣಾರ್ಥದ್ದಾದರೂ ಅಧ್ಯಕ್ಷರ ಕೈಯೊಳಗೆ ಶಿಕ್ಕುತ್ತಾ[4], ಸಭೋದ್ಯೋಗಗಳು ಇನ್ನು ಹಿಂಸಾಪಾಯಗಳನ್ನಲ್ಲ ಮಾನಾಧಿಕಾರಗಳನ್ನೇ ಮಾತ್ರ ಕೊಡುತ್ತಾ ಇರಲಿಕ್ಕೆ, ಅನೇಕ ಜನ ಅಯೋಗ್ಯರು ಸಹ ಸಭೋದ್ಯೋಗಗಳೊಳಗೆ ಅಮರಿ ಕೊಳ್ಳಲನುವಾಯಿತು. ಆ ಪ್ರಕಾರವಾದ್ದರಿಂದ ಸಭೋದ್ಯೋಗಿಗಳಲ್ಲಿ ಕ್ರಿಸ್ತನ ನಿಜ ಹಿಂಬಾಲಕರೂ ವಿವೇಕಿಗಳೂ ಕಡಿಮೆಯಾದದಕ್ಕೂ ಮೇತ್ರೊಪೊಲಿತಾನರಲ್ಲಿ ತಮ್ಮ ತಮ್ಮ ಮಾನಾಧಿಕಾರಗಳ ದೆಸೆಯಿಂದ ಜಗಳಗಳು ಹುಟ್ಟ ತೊಡಗಿದ್ದಕ್ಕೂ ಆಶ್ಚರ್ಯವೇನು?

ಮುಖ್ಯವಾಗಿ ರೋಮಪುರದ ಮೇತ್ರೊಪೊಲಿತಾನರು, ಉಳಿದವರಿಗಿಂತ ತಮಗೆ ವಿಶೇಷವಾದ ಅಧಿಕಾರವು ತಕ್ಕದೆಂತ, ಬೇಗ ಅಂಥಾ ಜಗಳಗಳಿಗೆ ಮೂಲಕರಾದರು; ಕ್ರಿ. ಶ. 193ನೇ ವರುಷದಿಂದ 202ನೇದರ ವರೆಗೆ ಉದ್ಯೋಗದಲ್ಲಿರುತ್ತಿದ್ದ ರೋಮದ 13ನೇ ಅಧ್ಯಕ್ಷನಾದ ಆ ವಿಕ್ತೋರನಾದರೂ[5] ಇವರಲ್ಲೊಬ್ಬನು.

1) 117ನೇ, 123ನೇ ಪಾನು. 2) 100, 101, 122, 179, 180, 181, 188, 190, 211, 216, 242ನೇ ಪಾನು. 3) Constantin (320, 321), Constantius (361), Valentinian (364). 4) Conc. Tolet. 3, 18. 5) 147ನೇ, 148ನೇ ಪಾನು.

ಹ್ಯಾಗಂದರೆ, ಯೋಹಾನ ಅಪೊಸ್ತಲನು ತೀರಿ ಹೋದಾಗಲೇ, ಪೂರ್ವ ಮತ್ತು ಪಶ್ಚಿಮ ಸಭೆಗಳಲ್ಲಿ ಪಸ್ಕ ಹಬ್ಬವನ್ನು[1] ಅದೇ ಕಾಲದಲ್ಲಿ ಅದೇ ರೀತಿಯಿಂದ ಆಚರಿಸುವದು ಸುಹಿತವಲ್ಲವೋ? ಎಂತ, ಪ್ರಶ್ನೆ ಬಂತು; ಅದು ಆ ಮಟ್ಟಿಗೆ ಹಾಗಾಗಿರಲಿಲ್ಲ. ವಿಕ್ತೋರನ ಕಾಲಕ್ಕೆ ಮುಂಚೆ ಸ್ಮುರ್ನದ ಪೊಲುಕರ್ಪನು[2] ಸುಮಾರು ಕ್ರಿ. ಶ. 160ನೇದಕ್ಕೊಮ್ಮೆ ಅನೀಕೇತನೆಂಬ ರೋಮದ 10ನೇ ಅಧ್ಯಕ್ಷನಿಗೆ ಭೇಟಿ ಕೊಡಲು, ಅವರಲ್ಲಿ ಆ ಪಸ್ಕ ಹಬ್ಬದ ಮಾತು ಸಹ ನಡೆಯಿತು; ಅವರಿಬ್ಬರು ಆ ವಿಷಯದಲ್ಲಿ ಒಂದೇ ಆಗದಿದ್ದರೂ ಪರಸ್ಪರ ಸಮಾಧಾನದಿಂದುಳು ಕೊಂಡರು. ತರುವಾಯ 30 ವರುಷದಿತ್ತ ಆ ಹಬ್ಬವನ್ನು ಕುರಿತ ವ್ಯತ್ಯಾಸವು ಇನ್ನೂ ಪರಿಹಾರವಾಗದಿರಲು, ಆ ವಿಕ್ತೋರನು ಸ್ಮುರ್ನದಲ್ಲಿ ಪೊಲುಕರ್ಪನ ಉತ್ತರೋದ್ಯೋಗಿಯಾಗಿದ್ದ ಪೊಲುಕ್ರತನೆಂಬ ಮಾನ್ಯ ಮೇತ್ರೊಪೊಲಿತಾನನಿಗೆ ಸ್ವಾಭಿಮಾನವುಳ್ಳದೊಂದು ಪತ್ರ ಬರೆದು ಕಳುಹಿಸಿ, ಅದರಲ್ಲಿ, ನೀವೂ ನಿಮ್ಮ ನೆರೆಯವರೂ ರೋಮಪುರದ ಸಂಬಂಧವಾದ ಸಭೆಯಲ್ಲಿ ಬಳಿಕೆಯಾದ ಸಮಯಕ್ಕೂ ವಿಧಿಗೂ ತಕ್ಕಂತೆ ಪಸ್ಕ ಹಬ್ಬವನ್ನಾಚರಿಸದಿದ್ದರೆ ಕ್ರೈಸ್ತ ಸಭೆಯಿಂದ ಬಾಹಿರರಾದೀರೆಂತ, ಸಹ ಬೆದರಿಸಿದನು; ಪಲೇಸ್ತೀನ, ಪೊಂತ, ಗಲ್ಲಿಯ, ಅಲೆಕ್ಸಂದರೀಯ, ಕೊರಿಂಥ ಎಂಬ ಶೀಮೆ ಪಟ್ಣಗಳ ಮೇತ್ರೊಪೊಲಿತಾನರನ್ನು ಆ ಕಾಲದಲ್ಲಿ ತನ್ನ ಅಭಿಪ್ರಾಯಕ್ಕೊಡಂಬಡಿಸಲಿಕ್ಕೆ ಅವನಿಗೆ ಸಾಧ್ಯವಾಯಿತು. ಆದರೆ ಪೊಲುಕ್ರತನು ಸಣ್ಣ ಅಸಿಯದ ತನ್ನೊಳಗಿನ ಅಧ್ಯಕ್ಷರನ್ನು ಎಫೆಸ ಪಟ್ಣದಲ್ಲಿ ಕೂಡಿಸಿ, ವಿಕ್ತೋರನ ದರ್ಪಕ್ಕೊಳ ಬೀಳದಿದ್ದರೂ ವಿನಯ ಬಿಡದೆ, ಅವರ ಮತ್ತು ತನ್ನ ಹೆಸರಿನಲ್ಲಿ ವಿಕ್ತೋರನಿಗೂ ಅವನ ಮತಾವಲಂಬಿಗಳಿಗೂ ಲೇಖಿಸಿ ತಿಳಿಸಿದ್ದೇನಂದರೆ—ನನ್ನ ಸಹೋದರರೇ, 65 ವರುಷ ಕರ್ತನಿಗೆ ಸೇವಿಸುತ್ತಿದ್ದಂಥವನೂ ಪೃಥ್ವಿಯ ಸಕಲ ಸಹೋದರರೊಂದಿಗೆ ಪರಿಚಿತೆಯುಳ್ಳವನಾಗಿರುವಂಥವನೂ ಪರಿಶುದ್ಧ ಬರಹದ ಪೂರ್ತಿಯನ್ನು ಅಧ್ಯಯನ ಮಾಡಿರುವಂಥವನೂ ಆದ ನನ್ನ ಮನಸ್ಸು (ವಿಕ್ತೋರನು) ನಮಗೆ ತೋರಿಸುವ ಭಯದಿಂದ ಹ್ಯಾಗೂ ಕದಲುವದಿಲ್ಲ; ಯಾಕಂದರೆ, ಮನುಷ್ಯರಿಗಿಂತ ಹೆಚ್ಚಾಗಿ ದೇವರಿಗೆ ವಿಧೇಯರಾಗಿರ ಬೇಕೆಂತ, ನನಗಿಂತ ದೊಡ್ಡವರು[3] ಹೇಳಿದ್ದಾರೆಂದು, ಬಲ್ಲೆನು.—ವಿಕ್ತೋರನು ಆ ಪ್ರತಿಕೂಲ ವಾದದಿಂದ ಕುಪಿತನಾಗಿ, ಮೂಡಣ ದಿಕ್ಕಿನ ಸಭ್ಯರು ಪಾಷಂಡಿಗಳೆಂದು, ನಿರ್ಣಯ ಹೇಳಿ, ತಾನು ಅವರ ಸಂಗಡದ ಸಭಾನ್ಯೋನ್ಯವನ್ನು ತೆಗದು ಹಾಕಿ, ಇದಕ್ಕೆ ತನ್ನ ಕಡೆಯ ಮೇತ್ರೊಪೊಲಿತಾನರನ್ನು ಸಹ ಸಮ್ಮತಿ ಪಡಿಸಲಿಕ್ಕೊದ್ದಾಡುವವನಾದನು. ಆದರೆ ಇವರು, ಒಲ್ಲೆವೆಂತ, ಹೇಳಿ ಬಿಟ್ಟರು; ಇವರ ಹೊಟ್ಟೆಯಲ್ಲಿ ಅಸಹನವೆಂಬ ಉರಿಯು ಹತ್ತಿ ಕೊಳ್ಳಲಿಲ್ಲ. ಹೀ

1) 71ನೇ ಪಾನು.   2) 133ನೇ ಪಾನು.   3) ಅಪೊ. ಕ್ರಿ. 5, 29.

ಗಿರಲಿಕ್ಕೆ ಅವರಲ್ಲಿ ಹಲವರು, ವಿಶೇಷವಾಗಿ ಗಲ್ಲಿಯದ ಅಧ್ಯಕ್ಷರೆಲ್ಲರ ನಿರ್ದೇಶದ ಮೇಲೆ ಲಿಯೋನಿನ ಆ ಮಂಗಳ ಈರೇನೇಯನು[1], ಪತ್ರಿಕೆಗಳಿಂದ ವಿಕ್ತೋರನನ್ನು ಬಹಳ ಗದರಿಸಿದರು[2]. ಈ ಸಲುವಾಗಿ ಅವನ ಗರ್ವಿತ ಮನೋರಥವು ಭಗ್ನವಾಯಿತು. ಆ ಮೇಲೆ ವಿಕ್ತೋರನು ಸತ್ತು 123 ವರುಷ ಕಳೆದ ಹಿಂದೆ ರೋಮದ ಮೇತ್ರೊಪೊಲಿತಾನನು ಬಾರದಿದ್ದ ನೀಕೇಯದ ಆ ಸರ್ವಸಭಾಸಂಘದಲ್ಲಿ[3] ಮೂಡಣ ದಿಕ್ಕಿನ ಸಕಲ ಕ್ರೈಸ್ತ ಸಹೋದರರು—ಯೆಹೂದ್ಯರು ಪಸ್ಕವನ್ನಾಚರಿಸುವ ಕಾಲ ಬಿಟ್ಟು, ರೋಮದಲ್ಲಿಯೂ ಇದಕ್ಕಸ್ತುಬಟ್ಟಿರುವ ಇತರ ಸಭೆಗಳಲ್ಲಿಯೂ ಸಲ್ಲುತ್ತಿರುವ ಕಾಲದಲ್ಲಿಯೇ ಅದನ್ನು ಇನ್ನು ಮುಂದೆ ಆಚರಿಸೋಣ! ಎಂದು, ಏನೂ ತೊಂದರೆ ಇಲ್ಲದೆ ಒಪ್ಪಿದರು[4].

ವಿಕ್ತೋರನ 9ನೇ ಉತ್ತರೋದ್ಯೋಗಿಯಾದ ಆ ಸ್ತೈಫನನು[5] ಅವನಿಗಿಂತ ಇನ್ನೂ ದರ್ಪವುಳ್ಳವನು. ಅವನ ಸೊಕ್ಕಿನ ನಡತೆಯು ಹಿಂದೆ ಸೂಚಿಸಿ ಅದೆ. ತನಗೆ ಬೇರೆ ಎಲ್ಲಾ ಅಧ್ಯಕ್ಷರಿಗಿಂತ ಮಾನವೂ ವಿಧೇಯತ್ವವೂ ಸಲ್ಲ ಬೇಕು; ತಾನು ಅಪೊಸ್ತಲರಲ್ಲಿ ಮುಖ್ಯನಾದ ಪೇತ್ರನಿಂದ ಸ್ಥಾಪಿತವಾದ ರೋಮದ ಸಭೆಯ ಅಧ್ಯಕ್ಷನೂ ಪೇತ್ರನ ಉತ್ತರೋದ್ಯೋಗಿಯೂ ಅಲ್ಲವೋ? ಎಂಬಂತೆ ತರ್ಕಿಸುತ್ತಿದ್ದನು[6]. ಆದರೆ ಈ ಮದಾರ್ಥಕ್ಕೆ ಬೇರೆ ಅಧ್ಯಕ್ಷರು ಎಂತೂ ಒಡಗೂಡಲಿಲ್ಲ. ಸ್ತೈಫನನು ತನ್ನ ಅಧಿಕಾರ ನೆಲೆಗೊಳ್ಳಿಸುವದಕ್ಕೆ ಪೇಚಾಡುವ ಆ ಪಾಯವನ್ನು ಅಂದಿಗೆ 50 ವರುಷ ಮುಂಚೆ ಅದೇ ಗೊತ್ತಿಗೆ ಮೊದಲಿನ ಸಾರಿ ತೋರಿಸಲಾಗಿತ್ತು; ಹ್ಯಾಗಂದರೆ ಆಗ, ಅಂದರೆ ಸುಮಾರು ಕ್ರಿ. ಶ. 200ನೇ ವರುಷ, ರೋಮದಲ್ಲಿಯ ಒಬ್ಬ ಜ್ಞೋಸ್ತಿಕನು ಕ್ಲೇಮೆಂತಿಯವೆಂಬ ಅಡ್ಡಹೆಸರು ಹೊಂದಿದ ಮಿಥ್ಯಾಗ್ರಂಥಗಳನ್ನು ರಚಿಸಿ—ಪೇತ್ರನು ರೋಮದ ಸಭೆಯ ಸ್ಥಾಪಕನು, ಅವನು ಅದರ ಪ್ರಥಮಾಧ್ಯಕ್ಷನಾಗಿ ಅಲ್ಲಿ ಕಥೆದ್ರವೆಂಬ ಪೀಠದಲ್ಲಿ ಕೂತಿದ್ದವನು, ಅವನು ಅಪೊಸ್ತಲರಲ್ಲಿ ಮುಖ್ಯನು! ಎಂತ, ಬಣ್ಣಿಸಿದನು. ಈ ಕಟ್ಟುಕಥೆಯು[7] ಸತ್ಯವೆಂಬಂತೆ ಕ್ರೈಸ್ತರಲ್ಲಿ ಪಸರಿಸೋಣವಾಯಿತು. ಆದ್ದರಿಂದ, ಹಿಂದೆ ಗೊತ್ತಾದಂತೆ, ಆ ದೊಡ್ಡ ಕುಪ್ರಿಯಾನನಾದರೂ—ರೋಮವು ಪೇತ್ರನ ಲೋಕವು, ಸಭೆಯು ಕಟ್ಟಿರುವ ಪೇತ್ರನ ಪೀಠವು ಅಲ್ಲಿದೆ ಎಂದು, ಹೇಳುವ ಹಾಗಾಯಿತು[8]; ಆದಾಗ್ಯೂ ತನ್ನದೊಂದು ಶಾಖಾಭಿಪ್ರಾಯದ ಸ್ಥಾಪನೆಗಾಗಿ ಆ ಸುದ್ದಿ ಹಿಡುಕೊಂಡ ಕುಪ್ರಿಯಾನನೇ, ತಾನು ಮೊದಲಾದ ಸಕಲ ಸದಧ್ಯಕ್ಷರೂ ಪೇತ್ರನ ಸಮಮಾನ ಸಮಾಧಿಕಾರಗಳುಳ್ಳ

---

1) 275ನೇ ಪಾನು. 2) Euseb. h. e. V, 24. 3) 185ನೇ ಪಾನು. 4) Socr. h. e. I, 9. 5) 121ನೇ, 164ನೇ, 165ನೇ, 168ನೇ ಪಾನು. 6) Cyprian. ep. 75. 7) 51 ಮುಂತಾದ ಪಾನು. 8) 51ನೇ ಪಾನು; 167ನೇ, 168ನೇ ಪಾನು. Cyprian. ep. 52; 55.

ಉತ್ತರೋದ್ಯೋಗಿಗಳೆಂದು, ಸಹ ಖಂಡಿತವಾಗಿ ನಿರ್ಣಯಿಸಿದನು[1]. ಕುಪ್ರಿಯಾನನಿಗಿಂತ 4 ವರುಷ ಮುಂಚಿತವಾಗಿ ಕ್ರಿ. ಶ. 254ನೇದರಲ್ಲಿ ಮಡಿದ ಆ ಪ್ರಖ್ಯಾತ ಒರಿಗೆನನು ಅದೇ ಪ್ರಕಾರ—ಕರ್ತನ ಶಿಷ್ಯರೂ ಹಿಂಬಾಲಕರೂ ಆದವರೆಲ್ಲರೂ ಏನೂ ಸಂದೇಹವಿಲ್ಲದೆ ಸಮಮಾನದವರೇ! ಪೆತ್ರನಿಗಿದ್ದಂಥ ಘಟ್ಟಿಯಾದ ಬಂಡೆಕಲ್ಲಿನ ಭಾವದವರೆಲ್ಲರೂ ಪೆತ್ರರೇ! ಎಂದು, ದೇವವಾಕ್ಯದ ಮೇಲೆ ಸಿದ್ಧಾಂತ ಮಾಡಿದನು[2]. ಮತ್ತೆ, ಹಿಂದೆ ಹೇಳಿದಂತೆ[3], ಅಲೆಕ್ಸಂದರೀಯದ ದಿಯೊನೂಸಿಯ, ಕಪ್ಪದೊಕಿಯದ ಕೈಸರೈಯದ ಫಿರ್ಮಿಲಿಯಾನ, ಕರ್ಥಾಗೊವಿನ ಕುಪ್ರಿಯಾನ ಮುಂತಾದ ಯಶಸ್ಸುಳ್ಳ ಸರ್ವ ಅಧ್ಯಕ್ಷರು ಸ್ತೆಫನನ ಅಧಿಕಾರಾಭಿಮಾನಕ್ಕೆ ಅಡ್ಡಗಟ್ಟಿ, ಒಬ್ಬೊಬ್ಬ ಅಧ್ಯಕ್ಷನು ತನ್ನ ತನ್ನ ಸಭೆಯ ಪರಿಪಾಲನದಲ್ಲಿ ಪೂರ್ಣ ಸ್ವಾತಂತ್ರ್ಯದವನೆಂದು, ಬಹು ಸ್ಪಷ್ಟ ರೀತಿಯಿಂದ ಬೋಧಿಸಿದರು[4]. ಸ್ತೆಫನನು ಕ್ರಿ. ಶ. 257ನೇ ವರುಷ ಸತ್ತ ಕ್ಷಣವೇ ಕ್ರಿಸ್ತನ ಸಭೆಯಲ್ಲಿ ತಿರಿಗಿ ಸಮಾಧಾನ ಹುಟ್ಟಿತು. ತರುವಾಯ ಕ್ರಿ. ಶ. 325ನೇದಕ್ಕೆ ನೀಕೇಯದಲ್ಲಿ ಸ್ಪಾನಿಯದ ಕೊರ್ದೊವ ಪಟ್ಣದ ಹೋಸೀಯ ಅಧ್ಯಕ್ಷನ ಅಗ್ರಸ್ಥಿಕೆಯೊಳಗೆ 1ನೇ ಸರ್ವಸಭಾಸಂಘವಾಗಲು, ಅಲೆಕ್ಸಂದರೀಯ ರೋಮ ಅಂತಿಯೊಖೀಯ ಎಂಬ 3 ಪಟ್ಣಗಳ ಮೇತ್ರೊಪೊಲಿ

---

1) Cypr. ep. 27. 2) Orig. comment. in Matth. T. XII, §. 10—14; ಮತ್ತಾ. 16, 15—19; 18, 18; ಯೋಹಾ. 20, 21—23; 21, 15; ಮತ್ತಾ. 28, 18—20; ಅಪೊ. ಕ್ರಿ. 20, 28; 1 ಪೆತ್ರ. 5, 1—4.—ನಾವು ತಿಳುಕೊಳ್ಳ ತಕ್ಕದ್ದೇನಂದರೆ—ಪೆತ್ರನು ಪ್ರಥಮವಾದ ಪಂಚಾಶತ್ತಮದಿನಹಬ್ಬದಲ್ಲಿ ಆ ಸುವಾರ್ತಾಪ್ರಸಂಗ ಮಾಡಿದ್ದರಿಂದಲೂ ಕೊರ್ನೇಲಿಯನೆಂಬ ಅನ್ಯವಂಶಜನಾದವನನ್ನು ದೇವರದೊಂದು ವಿಶೇಷ ಆಜ್ಞೆಯ ಮೇಲೆ ಕ್ರೈಸ್ತ ಸಭೆಯಲ್ಲಿ ಶೇರಿಸಿದ್ದರಿಂದಲೂ (ಅಪೊ. ಕ್ರಿ. 10, 1 ಆದಿ; 14, 1 ಆದಿ; 15, 7) ಯೆಹೂದ್ಯರಿಗೂ ಅನ್ಯ ಜನಾಂಗಗಳಿಗೂ ವಿಶ್ವಾಸದ ಬಾಗಿಲನ್ನು ಮೊದಲೇ ತೆರೆದ ಕಾರಣ (cf. ಅಪೊ. ಕ್ರಿ. 14, 27) ಕ್ರಿಸ್ತನ ಸಭೆಗೆ ಪ್ರಸ್ತರನೆನ್ನಿಸಿ ಕೊಳ್ಳುತ್ತಾನೆ. ಯೇಸುವು, ಆ ಎರಡು ಕಾರ್ಯಗಳು ಅವನಿಂದಾಗುವವೆಂದು, ಮುಂತಿಳಿದು, ಆ ಮಾನವುಳ್ಳ ಹೆಸರನ್ನು ಅವನಿಗಿತ್ತನು; ಪೆತ್ರನು ತನ್ನ ಬಂಡೆಕಲ್ಲಿನ ಭಾವಕ್ಕೋಸ್ಕರ ಅದಕ್ಕೆ ಯೋಗ್ಯನು. ಆದರೆ ಅದೇ ಮಾನಸ್ಥಿತಿಯು ಉಳಿದ ಮಂದಿ ಅಪೊಸ್ತಲರಿಗೆ ಸಹ ಉಂಟು (ಪ್ರಕಟ. 21, 14; ಎಫೆಸ. 2, 20). ಸಭೆಯ ನಿಜವಾದದ್ದೊಂದೇ ಪ್ರಸ್ತರವು ಕ್ರಿಸ್ತನೇ! ಎಂತ, ಪೆತ್ರನು ತಾನು ಹೇಳುತ್ತಾನೆ (1 ಪೆತ್ರ. 2, 5—8; ಯೆಶಾ. 28, 16; ಮತ್ತಾ. 21, 42; ಅಪೊ. ಕ್ರಿ. 4, 10. 11; 1 ಕೊರಿ. 3, 11). ಹಿಪ್ಪೊ ಪಟ್ಣದ ಆ ಔಗುಸ್ತೀನನು (39ನೇ ಸಂಧಿ) ಮತ್ಥಾಯನ ಸುವಾರ್ತೆಯ 16ನೇ ಸಂಧಿಯ 15ನೇದು ಮುಂತಾದ ವಚನಗಳ ಟಿಪ್ಪಣಿ ಗೈದದೆಂತೆಂದರೆ—ಪೆತ್ರನು, ಕ್ರಿಸ್ತನು ಜೀವವುಳ್ಳ ದೇವರ ಮಗನೆಂತ, ನಿವೇದಿಸುವಾಗ ಕರ್ತನು ಅವನಿಗೆ, ಈ ಬಂಡೆಕಲ್ಲಿನ ಮೇಲೆ ನನ್ನ ಸಭೆಯನ್ನು ಕಟ್ಟುವೆನೆಂದು, ಹೇಳಿದನು; ಇದರ ಅರ್ಥವೇನಂದರೆ ಕರ್ತನು, ಪೆತ್ರನೆಂಬ ಪುರುಷನ ಮೇಲೆ ಅಲ್ಲ, ಇವನ ವಿಶ್ವಾಸಾರ್ಥವೆಂಬ ಬಂಡೆಕಲ್ಲಿನ ಮೇಲೆಯೇ ತನ್ನ ಸಭೆ ಕಟ್ಟುವೆನೆಂತ, ತಿಳಿಸಿದಂತಾಯಿತು; ಸಭೆಯ ಈ ಮೂಲೆಕಲ್ಲೂ ಈ ಬಂಡೆಕಲ್ಲೂ ಕ್ರಿಸ್ತನು ತಾನೇ!—(Serm. 270; Pent. retr. 1, 21.)
3) 165ನೇ ಪಾನು. 4) Cyprian. ep. 70—75; Dionys. ep. ad Sixtum II.

ತಾನರು ದೊಡ್ಡ ಹೆಸರಿನವರೆಂತ, ಹೇಳಲಾಯಿತು[1]. ಕ್ರಿ. ಶ. 418ನೇದರಲ್ಲಿ ಔಗುಸ್ತೀನನೂ ಆಫ್ರಿಕದ ಮಿಕ್ಕಾದ ಅಧ್ಯಕ್ಷರೂ ಒಬ್ಬ ರೋಮಿಾಯ ಅಧ್ಯಕ್ಷನ ಅತಿದರ್ಪಕ್ಕೆ ಎದುರಿಸ ಬೇಕಾದದ್ದು ಹಿಂದೆ ತಿಳಿದು ಬಂದದೆ[2].

ಆದರೂ, ಪಶ್ಚಿಮ ದಿಕ್ಕಿನ ಸಭೆಗಳಲ್ಲಿ (ಪೌಲನು ಮತ್ತು) ಪೇತ್ರನು ನಿರ್ಮಿಸಿದ ರೋಮದ್ದೊಂದೇ ಅಪೊಸ್ತೊಲಿಕವಾದಂಥಾದೆಂತ, ಹೇಳುವ ಆಲೋಚನೆಯ ಮೇಲೆ 4ನೇ ಕ್ರಿಸ್ತಶತಮಾನದಲ್ಲಿ ಜ್ಯೇಷ್ಠರೋಮಪುರದ ಅಧ್ಯಕ್ಷರ ಬಹಿರ್ಮಾನವು ವರ್ಧಿಸುತ್ತಲಿತ್ತು. ಅಷ್ಟರಲ್ಲಿ ಮುಖ್ಯವಾಗಿ ಕೊನ್ಸ್ತಂತೀನೊಪೊಲಿ ಪುರದ ಮೇತ್ರೊಪೊಲಿತಾನರು ಅವರ ಅಧಿಕಾರಾಭಿಲಾಷೆಗೆದುರಾಗಿ, ಕ್ರಿ. ಶ. 451ನೇ ವರುಷಕ್ಕೆ ಬಿಥೂನಿಯದ ಖಲ್ಕೇದೊನು ಪಟ್ಣದಲ್ಲಿ 4ನೇ ಸರ್ವ ಸಭಾಸಂಘವು[3] ಕೂಡುವಾಗ ಸುಮಾರು 500 ಮಂದಿ ಅಧ್ಯಕ್ಷರಿಂದ, ತಾವು ನವರೋಮಪುರದ[4] ಮೇತ್ರೊಪೊಲಿತಾನರಾದ ಕಾರಣ ತಮಗೂ ಆ ರೋಮಿಾಯ ಅಧ್ಯಕ್ಷರಿಗೂ ಒಂದೇ ಮಾನವೆಂತ, ಸ್ಥಾಪನೆ ಮಾಡಿಸಿದರು[5]. ಅಲ್ಲಿಗೆ ಬಂದಿರುವ ರೋಮದ 45ನೇ(?) ಅಧ್ಯಕ್ಷನಾದ 1ನೇ ಲೆಯೋನನೆಂಬವನ[6] ಪ್ರತಿನಿಧಿಗಳು ಬೇಡವೆಂದರೂ ಅದರಲ್ಲಿ ಬದಲಾಗಲಿಲ್ಲ. ಕ್ರಿ. ಶ. 440ನೇ ಅಬ್ದದಿಂದ 461ನೇದರ ತನಕ ಅಧ್ಯಕ್ಷೋದ್ಯೋಗದಲ್ಲಿರುತ್ತಿದ್ದ ಆ 1ನೇ ಲೆಯೋನನಲ್ಲಿಯೇ ಮತಕ ಪಪ್ಪಕತ್ವವು[7], ಅಂದರೆ ಪಪ್ಪರೆಂಬ ಅಧ್ಯಕ್ಷರೊಳಗೆ ಹಳೇ ರೋಮದವನು ಕ್ರಿಸ್ತನಾಥನ ಬದಲಿಗೆಂಬಂತೆ ಸಭೆಗಳನ್ನಾಳಲಿಕ್ಕಾಕ್ರಮಿಸಿ ಕೊಳ್ಳುವ ಪೇಚಾಟವೂ ಅನೇಕರು ಅವನಿಗೆ, ಭೂದೇವತೆ ಎಂತ, ನಡ ಕೊಳ್ಳುವ ಮರುಳಾಟವೂ ಪಶ್ಚಿಮ ದಿಕ್ಕಿನ ಸಭೆಗಳಲ್ಲಿ ಆರಂಭಿಸಿತು. ಆ ಲೆಯೋನನು—ಪೇತ್ರನು ಪ್ರಧಾನ ಅಪೊಸ್ತಲನು, ಅಪೊಸ್ತಲರಲ್ಲಿ ತಲೆಯಾದವನು; ಇವನು ರೋಮಪುರವನ್ನು ಭೂಚಕ್ರವು ಸುತ್ತು ತಿರುಗ ಬೇಕಾದಂಥಾ ನಾಭಿ ಮಾಡಿದನು; ಪೇತ್ರನ ಪ್ರಧಾನತ್ವವು ಅವನ ಉತ್ತರೋದ್ಯೋಗಿಗಳಾದ ರೋಮಕ ಪಪ್ಪರಲ್ಲಿ ಮುಂದೆ ನಡಿಯುತ್ತಾ ಅದೆ ಎಂದು, ತನ್ನ ಗ್ರಂಥಗಳಲ್ಲಿ[8] ಸಿದ್ಧಾಂತ ಪಡಿಸಲಿಕ್ಕೆ ಒದ್ದಾಡುತ್ತಿದ್ದನು. ಕ್ರಿ. ಶ. 445ನೇ ವರುಷದಲ್ಲಿ ರೋಮಿಾಯ ರಾಜ್ಯದ 3ನೇ ವಲೆಂತೀನಿಯಾನನೆಂಬ ಕೈಸರನಿಂದ[9], ರೋಮದ ಅಧ್ಯಕ್ಷನು ಪಶ್ಚಿಮ ದಿಕ್ಕಿನ ಸಕಲ ಸಭೆಗಳ ಮುಖ್ಯಸ್ಥನೆಂದು, ಆಜ್ಞೆ ಹೊರಡಿಸುವದು ಅವನಿಗನುಕೂಲವಾಯಿತು[10]. ಅದಲ್ಲದೆ ಅವನು, ಸಭೆಯ ಅಧ್ಯಕ್ಷರು

1) 185ನೇ ಪಾನು; Concil. Nicaen. can. 6. 2) 245ನೇ ಪಾನು. 3) 254ನೇ ಪಾನು. 4) 182ನೇ ಪಾನು. 5) Can. Chalced. 28. 6) 209ನೇ, 210ನೇ ಪಾನು. 7) 274, 163, 173ನೇ ಪಾನು. 8) Leon. ep. 10; 12; 1. 9) 208ನೇ, 209ನೇ, 210ನೇ ಪಾನು ನೋಡು. 10) Novell. Valentin. III, tit. 16; Leon. ep. 11.

ಹಿರಿಯರು ಸೇವಕರು ಮಾತ್ರವಲ್ಲದೆ ಕೆಳಗಿನ ತರದ ಸಭೋದ್ಯೋಗಿಗಳು ಸಹ ನಿರ್ವಿವಾಹಿಗಳಾಗಿರ ಬೇಕೆಂತ, ಆಜ್ಞಾಪಿಸಿ[1], ಕಥರರನ್ನು ಅಂದರೆ (ಕ್ರಿ. ಶ. 252ನೇ ವರುಷ ನೊವಾತಿಯಾನಕರೆಂಬವರು ಒಂದು ಪ್ರಕಾರ ಕಥೊಲಿಕವೆಂಬ ಮತಾಭಿಪ್ರಾಯದ ವಿಷಯದಲ್ಲಿ ಮಾಡಿದಂತೆ[2]) ರೋಮಕ ಅಧ್ಯಕ್ಷನ ಬೋಧನೆ ಆಚಾರಗಳಿಂದ ಜಾರುವಂಥವರೆಲ್ಲರನ್ನು, ನಿಜ ಕಥೊಲಿಕರಾದ ಸತ್ಕ್ರೈಸ್ತರನ್ನಾದರೂ, ಕೊಲ್ಲ ತಕ್ಕದೆಂತ, ನಿರ್ಣಯ ಹೇಳಿದನು[3]. ಲೆಯೋನನ ಕಾಲದಲ್ಲಿ ರೋಮಿಾಯ ರಾಜ್ಯವು ಪ್ರಚಂಡ ರೀತಿಯಿಂದ ಅಳಿಯಲಿಕ್ಕೆ ಹತ್ತಿದ್ದು ಪಪ್ಪಕತ್ವದ ಉತ್ಪತ್ತಿಗೋಸ್ಕರವೂ[4] ಶಿಕ್ಷೆಯಾಯಿತೆಂತ, ಊಹಿಸ ಬೇಕು; ಆ ರಾಜ್ಯವುಳಿದಿದ್ದರೆ ರಾಜ್ಯಮತವೆನ್ನಿಸುವ ಪಪ್ಪಕತ್ವಕ್ಕೆ ಎಷ್ಟೋ ಬಲ ಬರುತ್ತಿತ್ತು! ಕ್ರಿ. ಶ. 502ನೇ ಅಬ್ದ ಸುತ್ತ ರೋಮದ ಮೇತ್ರೊಪೊಲಿತಾನರಿಗೆ ಪಪ್ಪನೆಂಬ ಬಿರುದುಹೆಸರನ್ನು ವಿಶೇಷದಿಂದ ಇಕ್ಕೋಣವಾಯಿತು[5]; ಆದರೆ ಅಂದು ಈತಲಿಯ ದೇಶದಲ್ಲಿ ಮಾತ್ರ ಅನಕ ಹಾಗಾಯಿತು. (ಇನ್ನು ಮುಂದೆ ಈ ಗ್ರಂಥದಲ್ಲಿ ಪಪ್ಪನೆಂಬ ಮಾತು ಬಂದರೆ ಅದು ರೋಮಪುರದವನಿಗೆ ಮಾತ್ರ ತಾಗುತ್ತದೆ.) ತದನಂತರ ಒಂದು ವರುಷಕ್ಕೀಚೆ ರೋಮಕ ಸಭೆಗಳ ಒಂದು ಸಂಘದವರು, ದೇವರಲ್ಲದೆ ಮತ್ತ್ಯಾರೂ ಪಪ್ಪನನ್ನು ವಿಚಾರಿಸಲಾಗದೆಂದು ತರ್ಕಿಸಲಿಕ್ಕೆ ಮೊದಲಿನ ಸಾರಿ ಧೈರ್ಯ ಪಟ್ಟರು[6]. ಬಳಿಕ ಸ್ವಲ್ಪ ಕಾಲದ ಮೇಲೆ ಪಪ್ಪಕರು ಅಂದರೆ ಪಪ್ಪನ ಪಕ್ಷಾವಲಂಬಿಗಳು ದೇಕ್ರೇತಾಲೆಸ್ ಎಂಬ ಮಿಥ್ಯಾಗ್ರಂಥಗಳನ್ನು[7] ರಚಿಸಲೆಸಗಿ, ಪ್ರಾಚೀನ ರೋಮಿಾಯ ಅಧ್ಯಕ್ಷರವುಗಳೆಂತ, ಹೇಳಿ, ಆ ಸಂಘದವರ ಅಭಿಪ್ರಾಯಗಳನ್ನು ಅವುಗಳಿಂದ ಹಬ್ಬಿಸುವವರಾದರು[8]. ಈತಲಿಕ ಸಭೆಗಳ ಶಿಥಿಲವಾದ ನೀತಿಚರ್ಯೆಯು ಅವುಗಳ ಪಪ್ಪರ ಆ ವಿಧದ ಅತಿದರ್ಪಾರ್ಥಕ್ಕೆ ಆಸ್ಪದ ಕೊಡ ಕೂಡದ್ದು ಮಾತ್ರವಲ್ಲದೆ ಪೂರಾ ಪ್ರತಿಕೂಲವಾಗಿದ್ದು, ಅವರ ಗರ್ವವಿಳಿಸ ಬೇಕಾಗುತ್ತಿತ್ತೆಂಬದೇ ಹಿಂದೆ ತಕ್ಕ ಮಟ್ಟಿಗೆ ಕಾಣುತ್ತದೆ[9].

ಕ್ರಿ. ಶ. 587ನೇ ವರುಷದಾರಭ್ಯ ಕೊನ್ಸ್ತಂತೀನೊಪೊಲಿಯ ಮೇತ್ರೊಪೊಲಿತಾನರು ಸರ್ವ ಸಭೆಗಳ ಪತ್ರಿಯರ್ಖರೆನ್ನಿಸಿ ಕೊಳ್ಳುವವರಾದರು[10]; ಕ್ರಿ. ಶ. 590ನೇ ವರ್ಷದಿಂದ 604ನೇದರ ವರೆಗೆ ಉದ್ಯೋಗದಲ್ಲಿರುತ್ತಿದ್ದ 1ನೇ ಗ್ರೆಗೋರನೆಂಬ ರೋಮಕ ಪಪ್ಪನು[11] ಸಹ, ತಾನು ದೇವರ ಸೇವಕರ ಸೇವಕನೆಂತ ವದಿಸುವಲ್ಲಿ

---

1) Leon. ep. 14; 272ನೇ ಪಾನು ಸರಿ ನೋಡು. 2) 162ನೆ, 163ನೇ ಪಾನು. 3) Leon. ep. 15. 4) 211, 218, 220, 236, 243, 244, 245, 266, 277, 278ನೇ ಪಾನು ಸರಿ ನೋಡು. 5) Synodus III; IV (s. palmaris) sub Symmacho. 6) Syn. Palmaris. 7) 278ನೇ ಪಾನು ಸರಿ ನೋಡು. 8) Mansi I, p. 1249; II, p. 615; 164ನೇ, 165ನೇ ಪಾನು. 9) 211ನೇ, 220ನೇ, 226ನೇ, 236ನೇ ಪಾನು. 10) 274ನೇ ಪಾನು. 11) 215ನೇ ಪಾನು.

ಯೂ, ಅದಕ್ಕೆ ಮತ್ಸರ ಪಟ್ಟು, ಎದುರ್ಮಲೆತನು; ಆದಾಗ್ಯೂ ಅವನು ಮಾಕೊಂಡದ್ದು ಕೂಡ ವ್ಯರ್ಥವಾಯಿತು. ಆದರೆ ತನಗೆ ಸೇವೆ ಮಾಡಿಸಿ ಕೊಳ್ಳುವದಕ್ಕಲ್ಲ ತಾನು ಸೇವೆ ಮಾಡುವದಕ್ಕೆ ಭೂಮಿಗಿಳಿದಿದ್ದ ದೇವಪುತ್ರನಾದ ಕ್ರಿಸ್ತನಾಥನ ಸೇವಕರೆನ್ನಿಸುವಂಥ ಆಯಾ ಸಭೋದ್ಯೋಗಿಗಳೊಳಗಣ ಆ ನೀಚ ಭಾವವುಳ್ಳ ಅಧಿಕಾರಾಭಿಮಾನದ ಜಗಳವು ಎಷ್ಟೋ ಅಯೋಗ್ಯವು! ನೀವು ಹಿಂದೆ ತಿಳುಕೊಂಡಂತೆ[1] ಕ್ರಿ. ಶ. 554ನೇ ಅಬ್ದ ಗ್ರೀಕ ಕೈಸರರ ಆಳ್ತನವು ದಕ್ಷಿಣ ಈತಲಿಯದಲ್ಲಿ ಆರಂಭವಾಗಿತ್ತು. ಅಂದಿನ 1ನೇ ಯುಸ್ತೀನಿಯಾನ ಕೈಸರನಿಗೀಚೆ 4ನೆಯವನಾದ ಕೈಸರನು ಆಳುವಾಗ ಕ್ರಿ. ಶ. 602ನೇ ಅಬ್ದ ಫೋಕನೆಂಬವನೊಬ್ಬನು ರಾಜ್ಯಾಧಿಕಾರವನ್ನಾಕ್ರಮಿಸಿ ಕೊಂಡು, ಆ ಕೈಸರನನ್ನು ಅವನ ಕುಟುಂಬವನ್ನೆಲ್ಲಾ ಸಹ ನಶಿಸಿದನು. ಅವನು ಇಂಥವನಾಗಿದ್ದರೂ 1ನೇ ಗ್ರೆಗೋರ ಪಪ್ಪನು, ಹೋದರೆ ಒಂದು ಕಲ್ಲು ಬಂದರೆ ಒಂದು ಹಣ್ಣು ಎಂಬಂತೆ, ಅವನಿಗೆ, ನನ್ನ ಸ್ವಾಮಿಯೇ! ಎಂದು, ವಂದನೋಪಚಾರ ಮಾಡಿದನು. ಗ್ರೆಗೋರನಿಗೆ ಆ ರಾಜನಿಂದ ವಿಶೇಷ ಬಹುಮಾನ ಬರಲಿಲ್ಲ; ಆದರೆ ಕ್ರಿ. ಶ. 607ನೇ ಅಬ್ದ ಅವನ 3ನೇ ಉತ್ತರೋದ್ಯೋಗಿಯಾದ 4ನೇ ಬೊನಿಫಕಿಯನೆಂಬವನಿಗೆ ಫೋಕನಿಂದ ಒಂದು ಶಾಸನದ ಮೂಲವಾಗಿ ವಿಶ್ವದ ಅಧ್ಯಕ್ಷನೆಂಬ ಬಿರುದು ಶಿಕ್ಕಿತು. ಕ್ರಿ. ಶ. 610ನೇ ಅಬ್ದ ಪ್ರಜೆಯು ಆ ನೀಚ ಫೋಕನನ್ನು ವಸ್ತ್ರದಂತೆ ತುಂಡು ತುಂಡಾಗಿ ಹರಿದು, ಅವನ ಪಕ್ಷಕರನ್ನು ನಿರ್ಮೂಲಿಸಿ ಬಿಟ್ಟಿತು; ಅಂದು ಆ ಹೇರಾಕ್ಲೀಯನೆಂಬವನಿಗೆ[2] ಪಟ್ಟ ಕಟ್ಟೋಣವಾಯಿತು.

ತನ್ಮಧ್ಯ ಫ್ರಂಕರೆಂಬ ಗೆರ್ಮಾನರ ವಂಶಜನಾದ ಖ್ಲೋದ್ವೀಗನು ಕ್ರಿ. ಶ. 486ನೇ ವರುಷ ಮೊದಲು ಗೊಂಡು ಗಲ್ಲಿಯದಲ್ಲಿಯೂ ಗೆರ್ಮಾನಿಯದಲ್ಲಿಯೂ ಫ್ರಂಕವೆಂಬದೊಂದು ಮಹಾ ರಾಜ್ಯವನ್ನು ನಿರ್ಮಿಸಿದ್ದನೆಂತ, ಹಿಂದೆ ಓದಿದ್ಧೀರಿ[3]. ಅದು ಕಾಲಗತಿಯಲ್ಲಿ 3 ಭಾಗಗಳಾದಂದಿನಿಂದ ಇವುಗಳ ರಾಜರು ತಮ್ಮ ತಮ್ಮ ಮೇಲೆ ಕದನವಾಡುತ್ತಿದ್ದರು; ಇದಲ್ಲದೆ ಅವರು ಸುಖಭೋಗಾಸಕ್ತಿಯಿಂದ ತಾವು ರಾಜ್ಯದ ಕಾರ್ಯಗಳನ್ನು ಗೈಯದೆ, ತಮ್ಮ ಪ್ರಧಾನ ಮಂತ್ರಿಗಳ ಕೈಗೆ ಒಪ್ಪಿಸಿ ಬಿಟ್ಟರು.

ಆ ಪ್ರಧಾನ ಮಂತ್ರಿಗಳಲ್ಲೊಬ್ಬನು ಪಿಪ್ಪೀನನೆಂಬವನು. ಇವನು ಕ್ರಿ. ಶ. 687ನೇ ವರ್ಷಕ್ಕೆ ಪ್ರಜೆಯ ಸಲಹೆಯಿಂದ ಆ ಫ್ರಂಕ ರಾಷ್ಟ್ರಗಳಲ್ಲಿ ತಿರಿಗಿ ಒಬ್ಬನೇ ರಾಜನನ್ನು ಸ್ಥಾಪಿಸಿ, ಆ ಸಾಮ್ರಾಜ್ಯದ ಏಕ ಪಾರುಪತ್ಯಗಾರನಾಗಿ, ರಾಜ್ಯಕಾರ್ಯಾಧಿಪತ್ಯವು ತನ್ನ ಕುಟುಂಬದಲ್ಲಿ ನಿತ್ಯ ಕ್ರಮದಿಂದ ನಡಿಯುತ್ತಿರ ಬೇಕೆಂತ,

1) 214ನೇ ಪಾನು. 2) 260ನೇ ಪಾನು. 3) 211ನೇ ಪಾನು.

ವಿಧಿಸುವ ರಾಜಾಜ್ಞೆ ಪಡೆದನು. ಅವನ ಕುಮಾರನು ಕರ್ಲ ಮರ್ತೆಲ್ಲನೆಂಬವನು. ಇವನ ಕುಮಾರನ ಹೆಸರು ಪಿಪ್ಪೀನನೆಂತ; ತನ್ನ ಶರೀರಾಕೃತಿಯ ಮೇಲೆ ಇವನಿಗೆ ಗಿಡ್ಡನೆಂಬ ಉಪನಾಮವು ಬಂತು. ಆ ಗಿಡ್ಡ ಪಿಪ್ಪೀನನು—ತನ್ನ ಅರಸನು ಹೆಸರಿಗೆ ಮಾತ್ರ ಇದ್ದಾನೆ, ತಾನೊಬ್ಬನೇ ಕಾರುಭಾರವೆಲ್ಲಾ ನಡಿಸುವಂಥವನು; ಆದ್ದರಿಂದ ತಾನು ಅರಸನೆನ್ನಿಸಿ ಕೊಳ್ಳ ತಕ್ಕವನಲ್ಲವೋ? ಎಂದು, ತನ್ನೊಳಾಲೋಚಿಸಿ ಕೊಳ್ಳುವವನಾಗಿ, ಆಗಿನ ಪಪ್ಪನಾದ ಜಕರೀಯನೆಂಬವನ ಬಳಿಗೆ ದೂತರನ್ನು ಕಳುಹಿಸಿ—ಅರಸನಾಗ ಬೇಕಾದವನು ಯಾವನು? ಸರ್ವಾಧಿಕಾರವಿರುವವನೋ? ಹೆಸರು ಮಾತ್ರ ಇರುವವನೋ? ಎಂತ, ಕೇಳಿಸಲು, ಆ ಪಪ್ಪನು ಲಘು ಮನಸ್ಸಿನಿಂದ, ಸರ್ವಾಧಿಕಾರವಿರುವವನೇ! ಎಂತ, ನಿರ್ಣಯಿಸಿದನು. ಅದು ಕಾರಣ ಪಿಪ್ಪೀನನು ಕ್ರಿ. ಶ. 752ನೇ ವರುಷ ಮಂದ ಬುದ್ಧಿಯುಳ್ಳ ಫ್ರಂಕರಾಜನನ್ನು ಒಂದು ಮಠದೊಳಗೆ ಮುಚ್ಚಿ ಬಿಟ್ಟು, ಗೆರ್ಮಾನಿಯದ ಮೈಂತ್ಸ (ಮೆಂತ್ಸ) ಪಟ್ಣದ ಪಪ್ಪಕ ಪ್ರಧಾನಾಧ್ಯಕ್ಷನಾದ ಬೊನಿಫಕಿಯನೆಂಬವನಿಂದ ರಾಜಪಟ್ಟ ಕಟ್ಟಿಸಿ ಕೊಂಡನು.

ಜಕರೀಯ ಪಪ್ಪನ ಉತ್ತರೋದ್ಯೋಗಿಯಾದ 2ನೇ ಸ್ತೆಫನನೆಂಬವನು ಈತಲಿಯ ದೇಶದ ಬಡಗು ಭಾಗವನ್ನಾಳುತ್ತಿರುವ ಲೊಂಗೊಬರ್ದರಿಂದ (ಲೊಂಬರ್ದರಿಂದ)[1] ಉಪದ್ರವ ಪಡುತ್ತಿರಲಿಕ್ಕೆ, ಅವನು ಗಿಡ್ಡ ಪಿಪ್ಪೀನನ ಸಹಾಯ ಬೇಡಿ ಕೊಂಡನು. ಆ ರಾಜನು ತನಗೆ ಜಕರೀಯ ಪಪ್ಪನಿಂದಾದ ಉಪಕಾರವರಿತು, ದಂಡೊಡನೆ ಬಂದು, ಕ್ರಿ. ಶ. 755ನೇ ವರುಷ ಲೊಂಗೊಬರ್ದರನ್ನು ಪೂರಾ ಜಯಿಸಿ, ಅವರು ಈತಲಿಯದ ಮಧ್ಯದಲ್ಲಿ ಹಿಡು ಕೊಂಡಿದ್ದ ಶೀಮೆಯನ್ನು ತೆಕ್ಕೊಂಡು, ಪಪ್ಪನಿಗೆ, ಉಚಿತವೆಂತ, ಕೊಟ್ಟನು. ಹೀಗೆ ಪಪ್ಪಕ ರಾಷ್ಟ್ರವೆಂಬದರ ಆರಂಭವಾಯಿತು; ಅಂದಿನಿಂದ ಪಪ್ಪನೆಂಬವನು ಲೌಕಿಕ ಅಧಿಪತಿಯು ಸಹ ಆದನು. ಸರ್ವೋಪಾಸ್ಯನಾದ ಕ್ರಿಸ್ತನಾಥನ ತಲೆಯಲ್ಲಿ ಮುಳ್ಳಿನದೊಂದು ಕಿರೀಟವಿತ್ತಲ್ಲವೇ[2]? ಆದರೆ ಆ ಸಮಯ ಪಪ್ಪನು ತನ್ನ ತಲೆಯಲ್ಲಿ ಸುವರ್ಣಮಯ ಕಿರೀಟವನ್ನಿಟ್ಟು ಕೊಂಡನು. ಹೀಗೆ ರಾಜಕ ಪಪ್ಪಕತ್ವ[3] ಅಂದರೆ ಪಪ್ಪನು ಭೂರಾಜರಲ್ಲೊಬ್ಬನೂ ಆಗಿ ಆಳುವ ಅವಸ್ಥೆ ಹುಟ್ಟಿತು.



1) 214ನೇ ಅದಿ ಪಾನು. 2) ಮತ್ತಾ. 27, 29. 3) 280ನೇ ಪಾನು (ಮತಕ ಪಪ್ಪಕತ್ವ).

## 36. ಬಹಿಃಶಾಂತಿಕಾಲದ ದೃಶ್ಯನಾದ ಕ್ರೈಸ್ತ ಸಭೆಯ ಅಂತಃಸ್ಥಿತಿಗತಿಯು.

ಕ್ರಿ. ಶ. 323ನೇ ವರುಷದಿಂದ 600ನೇದರ ವರೆಗೆ ಕ್ರೈಸ್ತ ಸಭೆಯ ದೊಡ್ಡ ಭಾಗವು ರಾಜ್ಯಮತದ್ದಾಗಿದ್ದು[1], ಮೊದಲು ರೋಮಾಯ ಸಾಮ್ರಾಜ್ಯದಲ್ಲಿ, ಆ ಮೇಲೆ ರೋಮಾಯ ಮತ್ತು ಗ್ರೇಕ ರಾಜ್ಯಗಳಲ್ಲಿ 277 ವರುಷ ಬಹಿಃಶಾಂತಿಯನ್ನನುಭವಿಸುತ್ತಾ ಬಂದಿತ್ತು. ತನ್ಮಧ್ಯ ನ್ಯಾಯದಿಂದಾಗಲಿ ಅನ್ಯಾಯದಿಂದಾಗಲಿ ಕ್ರೈಸ್ತರೆನ್ನಿಸುವಂಥವರ ಸಂಖ್ಯೆಯು ಹೆಚ್ಚಿದ್ದರೂ, ಕ್ರಿಸ್ತನ ಮೇಲಿನ ನಿರ್ಮಲ ಪ್ರೀತಿ ಭಕ್ತಿಗಳು ಸಹ ಅದರಂತೆ ಹೆಚ್ಚಿದ್ದವೆಂತ, ಹೇಳಲಾಗದ್ದು ಮಾತ್ರವಲ್ಲದೆ ದೃಶ್ಯ ಸಭೆಗೆ ಮಾತ್ರ ಶೇರಿದಂಥವರಲ್ಲಿ ಅವೆರಡರ ಕೊರತೆಯೂ ಬಹುಶಃ ತೋರಿದ್ದು ನಿಶ್ಚಯ; ಮುಖ್ಯವಾಗಿ ಸಭೋದ್ಯೋಗಿಗಳಲ್ಲನೇಕರು ಅಪಾತ್ರರಾಗಿದ್ದರೆಂತ, ಕಾಣುತ್ತದೆ[2]. ಅದೃಶ್ಯವೂ ನಿಜವೂ ಆದ ಸಭೆಗಿಂತ ದೃಶ್ಯವಾದ ಸಭೆಯು ಬಹು ದೊಡ್ಡದಾದ ಹಾಗಾಗಿತ್ತು[3]. ಅದು ಹೊರ್ತಾಗಿ ಹೇರಳ ಮಂದಿ ಕ್ರೈಸ್ತರ ಭಕ್ತಿಯು ಸೌವಾರ್ತಿಕ[4] ಪಾಯ ತಪ್ಪಿ ವೈರಾಗ್ಯ[5], ದೇಹದಂಡನ[6], ಮಠಿಕತ್ವ[7], ಅಸಹನ[8], ಶೋಧನಾತೀತ ಬೋಧನಾರ್ಥವನ್ನು ಕುರಿತ ವಾದ[9] ಮುಂತಾದ ಬಾಹಿರ ಕ್ರಿಯೆಗಳಲ್ಲಿ ಹೊರಳಾಡುವಂಥಾದ್ದಾಗಿತ್ತು. ಪಾಪಿಷ್ಠರ ವಿಮೋಚಕನೂ ಪುಣ್ಯನಿಧಿಯೂ ಆದ ಕ್ರಿಸ್ತನಿಗೆ ನಂಬಿ ಸತ್ಕ್ರಿಯೆಗಳಿಂದ ಹೃದ್ಯ ಕೃತಜ್ಞತೆ ತೋರಿಸುವದಕ್ಕೆ ಬದಲಾಗಿ ಕರ್ಮಠ ಮಾರ್ಗದಲ್ಲಿ ಸ್ವಂತ ಪ್ರಯತ್ನಗಳಿಂದ ನೀತಿ ಘಳಿಸಿಕೊಳ್ಳ ಬೇಕೆಂಬ ಸುವಾರ್ತಾಪ್ರತಿಕೂಲವಾದ ಭಾವವು ಬಹುಶಃ ಹುಟ್ಟಿತ್ತು. ಆದಾಗ್ಯೂ ರಾಜೋದ್ಯೋಗಿಗಳಲ್ಲಿಯೂ[10] ಸಭೋದ್ಯೋಗಿಗಳಲ್ಲಿಯೂ[11] ಸಾಧಾರಣ ಸಭ್ಯರಲ್ಲಿಯೂ[12] ಸ್ತ್ರೀ[13] ಪುರುಷರಲ್ಲಿಯೂ ಬಹಳ ಬಹಳ ಜನ ನಂಬಿಗಸ್ತರಾದ ಭಕ್ತರು ಪರಿಶೋಭಿಸದಿರಲಿಲ್ಲ. ಅದಲ್ಲದೆ, ರಂಗಸ್ಥಳಗಳಲ್ಲಿ ದ್ವಂದ್ವಯುದ್ಧಗಳೂ[14] ನಾಚಿಕೆ ಗೆಟ್ಟ ನಟನಗಳೂ ನಡೆಯ ಬಾರದೆಂದು, ರಾಜಾಜ್ಞೆ ಹೊರಟು, ನಡೆಯುತ್ತಿತ್ತು; ವಿಧವೆ ಅನಾಥರಿಗೆ ರಾಜಭಂಡದ ಸಹಾಯ ಶಿಕ್ಕುತ್ತಿತ್ತು; ದಾಸರ

---

1) 276ನೇ ಪಾನು. 2) 183, 188, 211, 216, 226, 227, 228, 228, 230, 276, 281, 282, 283ನೇ ಪಾನು. 3) 1ನೇ ಪಾನು. 4) 266ನೇ ಪಾನು. 5) 173, 249, 261, 262, 266, 268ನೇ ಪಾನು; 33ನೇ, 34ನೇ ಸಂಧಿ. 6) 261ನೇ ಪಾನು. 7) 33ನೇ ಸಂಧಿ. 8) 195, 200, 201, 205, 214, 220, 227 ಆದಿ, 243, 247, 251, 252, 277, 278, 281ನೇ ಪಾನುಗಳು. 9) 184, 202, 227, 250 ಆದಿ, 254ನೇ ಪಾನುಗಳು. 10) 191, 192, 217, 220, 223ನೇ ಪಾನು. 11) 75, 86, 155, 173, 184, 185, 186, 188, 201, 202, 210, 227, 234, 241, 242, 244, 247, 248, 249, 260, 271ನೇ ಪಾನು; 28, 29, 30ನೇ ಸಂಧಿ. 12) 203, 227, 228, 229, 238, 239, 247, 263ನೇ ಪಾನು. 13) 75, 193, 212, 217, 224, 231, 271ನೇ ಪಾನು. 14) 14, 64, 102, 115ನೇ ಪಾನು.

(ಗುಲಾಮರ) ಆಶ್ರಯಹೀನ ಸ್ಥಿತಿಯು[1] ಪರಿಹಾರವಾಗಿತ್ತು; ಇನ್ನೂ ವಿವಾಹದ ಕಟ್ಟೆ ಮಿಾರುವವರು[1] ರಾಜಶಿಕ್ಷೆಗೂ ಒಳಗಾಗುವರು; ಸ್ತ್ರೀಯರು ತಕ್ಕ ಮಾನಕ್ಕೆ ಬರುತ್ತಿದ್ದರು. ಯೋಗ್ಯರೂ ಅಯೋಗ್ಯರೂ[2] ಸೇರುತ್ತಿರುವ ಬಹಿಃಸಭೆಯ ಶುದ್ಧತೆಯನ್ನು ಳಿಸುವದಕ್ಕೆ ದೋನಾತಿಸ್ತರೆಂಬವರು[3] ಎದ್ದರು; ಮುಂಚೆ ಮೊಂತಾನಿಯಾನರಿಗೂ ನೊವಾತಿಯಾನರಿಗೂ ಇದ್ದಂಥ ಅಭಿಪ್ರಾಯವು ಅವರಿಗೆ ಸಹ ಇತ್ತು; ಆದರೆ ಅವರ ಅಸಹನಕ್ಕೋಸ್ಕರವೂ ಕಥೊಲಿಕರೆಂಬವರದಕ್ಕೋಸ್ಕರವೂ ಅದು ಬಹಳ ಸಾಗಲಿಲ್ಲ.

ಮುಂಚಿನದರಂತೆ ಆಗಿನ ಸಭೆಯು ಸಹ ಬಹಿಃಸುಖದ ಅನುಭೋಗವನ್ನು ಕ್ರಿಸ್ತನ ಮೇಲಿನ ಪ್ರೀತಿಯುರಿಯು ಕಡಿಮೆಯಾಗದೆ ಮಾಡ ಕೂಡದಿತ್ತು. ಕ್ರೈಸ್ತ ಪ್ರಜೆಯ ನೀತಿಚರ್ಯೆ ಬಾಡಿಸಲಿಕ್ಕೆ ಆ ಕಾಲದಲ್ಲಿ 3 ವಿಶೇಷ ಹೊರಕಾರ್ಯಗಳು ಕೂಡ ಇದ್ದವು; ಯಾವವಂದರೆ—ಕ್ರೈಸ್ತತ್ವವು ರಾಜ್ಯಮತದ ಸ್ಥಿತಿಯನ್ನೈದಿರುವ ರೋಮಾಯ ಸಾಮ್ರಾಜ್ಯದಲ್ಲಿಯೂ ರೋಮಾಯ ಮತ್ತು ಗ್ರೀಕ ರಾಜ್ಯಗಳಲ್ಲಿಯೂ ಸಭೆಯು ಅಧೀನವಾಗಿರ ಬೇಕಾದ ರೋಮದ ಮತ್ತು ಕೊನ್ಸ್ತಂತೀನೊಪೊಲಿಯ ಅರಮನೆಯವರ ಅಯೋಗ್ಯತೆ ನೀಚತನಗಳು[4], ಸಭೋದ್ಯೋಗಿಗಳ ಬಹುಶಃ ಶುಷ್ಕವಾದಂಥ ಪರಸ್ಪರ ತರ್ಕವಾದಗಳು, ಆ ತರುವಾಯ ಗೊಥರ ಮತ್ತು ಹೂಣರ ಮತ್ತು ವಂದಲರ ಅಭಿಯೋಗಗಳು. ತಾವು ಸತ್ಯವಾದ ಪುಣ್ಯ ಸಿದ್ಧಿಸುವಂಥವರೆಂದು ಸಾರುತ್ತಿರುವ ಮಠಿಕರಿಂದಲೂ ಸಭೆಗೆ ಒಂದು ಪ್ರಕಾರ ಅನಾಶೀರ್ವಾದವಾಯಿತು; ಹ್ಯಾಗಂದರೆ, ಮೂಢರಾದಂಥ ಸಾಧಾರಣ ಕ್ರೈಸ್ತರು—ಸಂಸಾರದ ಕಷ್ಟದಲ್ಲಿ ವಿಶೇಷವಾದ ಪರಿಶುದ್ಧತೆ ಹೊಂದುವದು ತಮ್ಮಿಂದಾಗುವದಿಲ್ಲ, ಪಾರಮಾರ್ಥಿಕ ಜೀವಿಕೆಯಿಂದಿರುವದು ಮತ್ತೆ ದೇವವಾಕ್ಯಾಧ್ಯಯನ ಮಾಡುವದು ಮಠಿಕರಿಗೂ ಇವರಂಥ ಸಭೋದ್ಯೋಗಿಗಳಿಗೂ ಮಾತ್ರ ಬಂದೀತೆಂದು, ನೆನಸುವವರಾಗಿ, ಅದರಂತೆ ನಡಿಯಲಿಕ್ಕೂ ಹತ್ತಿದರು[5]. ಹೀಗಿರಲಾಗಿ, ಔಗುಸ್ತೀನ ಖ್ರುಸೊಸ್ತೊಮ ಮೊದಲ್ಗೊಂಡ ಸರ್ವ ಸಭಾಸದ್ಬೋಧಕರು, 1ನೇ ಗ್ರೆಗೋರ ಪಪ್ಪನೂ ಕೂಡ[6], ಸಭ್ಯರೆಲ್ಲರೂ ಪರಿಶುದ್ಧ ಬರಹವನ್ನೋದುತ್ತ ಅಭ್ಯಾಸಿಸುತ್ತ ಇರ ಬೇಕೆಂತ, ಅತಿಖಂಡಿತವಾಗಿ ಘೋಷಿಸುತ್ತಿದ್ದದ್ದು[7] ಬಹಳ ಸಫಲವಾಗಲಿಲ್ಲ.

1) 15ನೇ ಪಾನು. 2) 195, 206, 211, 216, 217, 226, 227ನೇ ಪಾನುಗಳು. 3) 243ನೇ ಪಾನು. 4) 188ನೇ ಪಾನು;— 209, 210, 220, 221, 243ನೇ ಪಾನುಗಳು;—2[illegible]7, 213, 214, 227, 228, 229, 230, 231, 251, 252, 282ನೇ ಪಾನುಗಳು. 5) Ambros. sermon. 6) Gregor. magn. ep. 40. 7) August. Hom. III; Hom. XXIV; L. c. T. IV; In Ps. 66; Chrysost. Proem. in ep. ad Rom. T. IX; 172ನೇ ಪಾನು ಸರಿ ನೋಡು; ಯೆಶಾಯ. 34, 16; ಅಪೊಕ್ರಿ. 17, 11; ಕೊಲೊ. 3, 16.

ಬೋಧಕೋದ್ಯೋಗಿಗಳು ಪ್ರತ್ಯೇಕವಾದದೊಂದು ಜಾತಿ, ಅಂದರೆ ಸರ್ವ
ಥಾ (ಮಹಾ ಪಾತಕಗಳಿಂದಾದರೂ) ಅನಾಶಿಯಾದ ಉದ್ಯೋಗಭಾವವನ್ನು
ಅಧ್ಯಕ್ಷರ ಪ್ರತಿಷ್ಠೆಯಿಂದ ಹೊಂದಿದ್ದೊಂದು ಜಾತಿ[1] ಎಂಬ ಭಾವನೆಯು ಮಿಗಿ
ಲಾಯಿತು; ಅವರು ಆತ್ಮಿಕ ಪಿತರಾದ್ದರಿಂದ ಅವರಿಗೆ ಶಾರೀರಕ ತಂದೆ ತಾಯಿಗಳಿ
ಗಿಂತಲೂ ರಾಜ್ಯಾಧಿಕಾರಸ್ಥರಿಗಿಂತಲೂ ಹೆಚ್ಚು ಮಾನ ಸಲ್ಲ ತಕ್ಕದ್ದೆಂಬಂತೆ ಹೇ
ಳುವದೂ ನಡೆಯುವದೂ ಆಯಿತು[2]. ಅದಕ್ಕನುಸಾರವಾಗಿ ಆ ಉದ್ಯೋಗಿಗಳ
ಲ್ಲನೇಕರು ತಮ್ಮ ಸ್ಥಿತಿಯ ಆತ್ಮೀಯವಾದ ಸೌವಾರ್ತಿಕ[3] ವಿಧವನ್ನಿನ್ನೂ ಅರಿಯ
ದೆ, ಹಳೇ ಒಡಂಬಡಿಕೆಯ ಪ್ರಮಾಣದ ಯೆಹೂದ್ಯ ಯಾಜಕರೋಪಾದಿಯಲ್ಲೂ
ವಿಗ್ರಹಾರಾಧಕ ಯಾಗಿಗಳೋಪಾದಿಯಲ್ಲೂ ದೇವಾರಾಧನೆಯ ಸಂಬಂಧವಾದ
ಕ್ರಿಯೆಗಳಲ್ಲಿ ಪ್ರತ್ಯೇಕ ತರದ ಅಸಾಧಾರಣವಾದ ವಿವಿಧವರ್ಣದ ವಸ್ತ್ರಗಳನ್ನು
ಧರಿಸಿ ಕೊಳ್ಳುವದು ಪದ್ಧತಿಯಾಯಿತು; ಅವರೂ ಮಠಿಕರೂ ಐಗುಪ್ತ ದೇಶದ ಸೆ
ರಾಪಿಸೆಂಬ ದೇವತೆಯ[4] ಪೂಜಾರಿಗಳ ಮರ್ಯಾದೆ ಹಿಡಿದು ತಮ್ಮ ತಲೆನೆತ್ತಿಯ
ಕೂದಲನ್ನು ಒಂದು ಪರಿಯಾಗಿ ಕ್ಷೌರ ಮಾಡಿಸಿ ಕೊಳ್ಳುವದು ಬೆತ್ಲೆಹೇಮಿನ
ಹಿಯೆರೋನುಮನ[5] ಕಾಲದಲ್ಲಿ ಆರಂಭಿಸಿದ್ದಿಲ್ಲ.

ನಾನಾ ವಿಧದ ಅಲಂಕಾರವುಳ್ಳ ಮಹಾ ದೊಡ್ಡ ದೇವಾಲಯಗಳು[6] ಕಟ್ಟಿ
ದ್ದವು. ಅವುಗಳೊಳಗೆ ಆರಾಧನೆ ನಡೆಯುತ್ತಿರಲು, ಇಲ್ಲೀಬೆರಿಯ ಸಭಾಸಂಘದ
ವರ[7] ನಿರ್ಣಯಕ್ಕೆ ವಿರೋಧವಾಗಿಯೇ, ಆಗಿಂದಾಗ ಹಗಲಿನಲ್ಲಿಯಾದರೂ ದೀ
ಪಗಳನ್ನು ಹಚ್ಚುವವರಾಗಿರುತ್ತಿದ್ದರು; ಪ್ರಾಚೀನ ಕ್ರೈಸ್ತರು ತಮ್ಮ ಕಾಲಾವಸ್ಥೆ
ನೋಡಿ, ದೆವ್ವಗಳ ಪೂಜೆಯದು ಮಾತ್ರವೆಂತ, ಹೇಳಿದ[8] ಧೂಪವನ್ನು ಸಹ 4ನೇ
ಕ್ರಿಸ್ತಶತಮಾನಕ್ಕಿತ್ತ ಕಡೆ ದೇವಾರಾಧನೇ ಹೊತ್ತಿನಲ್ಲಿ ಸುಡಲಿಕ್ಕೆ ಹತ್ತಿದ್ದರು.
ಅದು ವಿನಹ, ಯುಸೆಬಿಯನೆಂಬ ಆ ಸಭಾಚರಿತ್ರಗಾರನ ಕಾಲದಲ್ಲಾದರೂ[9] ದೇ
ವಪ್ರಾರ್ಥನೆಗೆ ಆತ್ಮಶುದ್ಧಿ ಬೇಕೆಂಬದಕ್ಕೆ ಉಪಮೆಯಾಗಿ ದೇವಾಲಯಗಳ ಪ್ರಾ
ಕಾರದಲ್ಲಿ ಕೈ ತೊಳೆಯುವ ಜಲಪಾತ್ರಗಳಿಟ್ಟಿದ್ದವು; ಆದರೆ ಆ ಮೇಲೆ 6ನೇ ಕ್ರಿಸ್ತ
ಶತಮಾನದಲ್ಲಿ ಅನೇಕರು ಸಭೋದ್ಯೋಗಿಗಳು ಆ ಪಾತ್ರಗಳ ನೀರಿಗೆ ಸ್ವಸ್ತಿವಾಚ
ನ ಹೇಳಿ—ಅದು ಶಾಂತ್ಯುದಕವಾಯಿತು, ಅದ್ಭುತಗಳು ಸಹ ಅದರಿಂದ ಆಗುವ

---

1) 1ಪೇತ್ರ. 2, 5—9, ರೋಮಾ. 12, 3—8, ಅಪೊ. ಕ್ರಿ. 1, 15—26, 147ನೇ ಪಾನು ಸರಿ ನೋಡಿ, ಆ ಭಾವನೆಯು ಅಯೋಗ್ಯತೆ ಸ್ವಲ್ಪ ತಿಳುಕೊಳ್ಳ ಬಹುದು. 2) Chrysostom. homil; Const. apost. II, 26—34. 3) 266ನೇ ಪಾನು. 4) 205ನೇ ಪಾನು. 5) 173ನೇ ಪಾನು; Hieron. ad Ezech. 44, 20. 6) 217ನೇ, 258ನೇ ಪಾನು. 7) 270, 271, 272ನೇ ಪಾನು. 8) Tert. apol. c. 20; de cor. mil. c. 10. 9) h. c. 10, 4; 186ನೇ ಪಾನು.

ವೆಂತ, ಬೋಧಿಸುವವರಾಗಿದ್ದರು; ಕ್ರಿ. ಶ. 682ನೇ ವರ್ಷದಿಂದ 685ನೇದರ ವರೆಗೆ ಪಪ್ಪನಾಗಿರುತ್ತಿದ್ದ 2ನೇ ಲೆಯೋನನು ಅಂಥಾ ನೀರನ್ನು ವಸ್ತ್ರಾದಿಗಳಿಗೆ ಚಿಮಿಕಿಸುವ ನಡಾವಳಿಯನ್ನು ಸ್ವಸಭೆಗಳಲ್ಲಿ ಮೊದಲಿಗೆ ಶೇರಿಸಿದನು. ಪುನಃ, ಕ್ರೈಸ್ತರೆನ್ನಿಸುವ ಹೇರಳರು ಕ್ರೂಜೆಯಲ್ಲಿ ಸತ್ತ ಕ್ರಿಸ್ತನನ್ನು ಇಗ್ನಾತಿಯನಂತೆ[1] ಹೃತ್ತಿನೊಳಗೆ ಧರಿಸಿ ಕೊಳ್ಳುವದಕ್ಕೆ ಬದಲಾಗಿ ಕ್ರೂಜೆಯದೊಂದು ಆಕೃತಿಯನ್ನು ಕೊರಳಿಗೆ ಧರಿಸಿ ಕೊಳ್ಳುವವರಾಗಿರುತ್ತಿದ್ದರು.

ದೇವೋಪಾಸನೆಯು ಮುಂಚಿನಂತೆ[2] 2 ಭಾಗದ್ದು. ಆರಂಭದಲ್ಲಿ ದೇವವಾಕ್ಯವನ್ನೋದಿ, ಪ್ರಸಂಗಿಸುವದು; ಇದಕ್ಕೆ ಮೂರ್ತಿಪೂಜಕರು, ಸ್ನಾನೋಪದೇಶ ಪಡೆಯುವವರು, ಸಭಾಶಿಕ್ಷೆಯೊಳಗಿನವರು ಸಹ ಬಂದು ಇರ ಬಹುದು; ಆ ಮೇಲೆ ಈ ಮೂರು ತರದ ಜನರಿಗೆ ಮಿಸ್ಸವು ಅಂದರೆ ಹೋಗಲಿಕ್ಕೆ ಅಪ್ಪಣೆಯು ಆಗುವದು. ತದನಂತರ 2ನೇ ಭಾಗವು ಬರುವದು; ಇದರಲ್ಲಿ ಸಹೋದರಮುದ್ದು, ಸರ್ವ ಸದ್ವಿಷಯದ ಪ್ರಾರ್ಥನೆಯು, ಪರಿಶುದ್ಧ ರಾತ್ರಿಭೋಜನವು ನಡೆಯುವವು. ಮೂರ್ತಿಪೂಜಕಾದಿ ಜನರಿಗೆ ಹೋಗಿರೆಂಬ ಅಪ್ಪಣೆಯು ಅಂದರೆ ಮಿಸ್ಸವು ಆದಂದೇ ಮುಖ್ಯ ದೇವಾರಾಧನೆಯೆನ್ನಿಸುವಂಥಾದ್ದು ಹತ್ತುವ ನಿಮಿತ್ತ ದಿನಗತಿಯಿಂದ ಇದಕ್ಕೆ ಮಿಸ್ಸವೆಂಬ ಹೆಸರು ಬಿತ್ತು; ಇತ್ತಲಾಗೆ ರಾತ್ರಿಭೋಜನದ ಸಹಿತದ ಪ್ರತಿ ದೇವಾರಾಧನೆಯು ಮಿಸ್ಸವೆನ್ನಿಸಿತು.

4ನೇ ಕ್ರಿಸ್ತಶತಮಾನದಲ್ಲಿ ಪ್ರಖ್ಯಾತ ರಕ್ತಸಾಕ್ಷಿ ದೇವದೂತ[3] ಮುಂತಾದ ಸಂತರೆಂಬ[4] ದೊಡ್ಡ ಭಕ್ತರ ಅರ್ಚನಕ್ಕಾಗಿ ಹಬ್ಬಗಳನ್ನು ಮಾಡುವದು ಬಹಳ ರೂಢಿಯಾಗಿತ್ತು[5]; ಅದಲ್ಲದೆ, ಅವರು ಕ್ರಿಸ್ತನಿಗೂ ಸಭೆಗೂ ಮಧ್ಯಸ್ಥರೆಂತ, ಹೇಳಿ, ಅವರ ಸಹಾಯ ಬೇಡುವದು ಆವಾಗ ತೊಡಗಿತು[6]. ಬಳಿಕ ನೆಸ್ತೊರಿಯಾನ ವಾದಗಳಿಗೀಚೆ[7] ಮರಿಯಳೆಂಬವಳು ಪೂಜ್ಯರಾದ ಸಂತರೊಳಗೆ ಶ್ರೇಷ್ಠಳಾದಳು[8]; ಸತ್ತ ವನವಾಸಿ ಮಠಿಕರನ್ನು ಸಹ ಅವರ ಲೆಖ್ಖದಲ್ಲಿ ಕೂಡಿಸೋಣವಾಯಿತು[9]. ಪುನಃ, ಅದೇ 4ನೇ ಶತಮಾನದ ಕಡೆಯಲ್ಲಿ ಮೃತಾವಶಿಷ್ಟಪೂಜೆಯು ನಡಿಯಲೆಸಗಿತು; ಹ್ಯಾಗಂದರೆ, ಅಪವಿಶ್ವಾಸಕ್ಕೊಳ ಬಿದ್ದಂಥ ಅನೇಕ ಕ್ರೈಸ್ತರು ಸತ್ತವರು ಬಿಟ್ಟ ಎಲುಬು ವಸ್ತ್ರ ಸಾಮಾನು ಇತ್ಯಾದಿ ತಂದು, ಪೂಜಿಸಿ, ಅದರಿಂದ ರೋಗಪರಿಹಾರ ಮುಂತಾದ ಮಹಾಶ್ಚರ್ಯಗಳಾಗುವವೆಂತ, ನೆನಸುವವರಾದರು. ಮತ್ತೆ ಸಂತರೆಂಬವರ ಚಿತ್ರ ಪ್ರತಿಮೆಗಳ ಮೇಲಿನ ಅಸಹನವು ಅಂದು ತೀರಿ ಹೋಯಿತು; ಮುಂಚೆ

1) 131ನೇ ಪಾನು. 2) 94, 95ನೇ ಪಾನು. 3) ಪ್ರಕಟ. 19, 10; 22, 8—9. 4) 266ನೇ ಪಾನು. 5) Lex Zenonis. 6) Ambros. de vid. c. 9; — 1 ತಿಮೊ. 2, 5. 7) 250ನೇ, 251ನೇ ಪಾನು. 8) Ambros. de vid. c. 9. 9) Joh. Cassian. Collat. 6, 1.

ಅಲೆಕ್ಸಂದರೀಯದ ಕ್ಲೇಮೆಂತ ಮತ್ತು ಕರ್ಥಾಗೊವಿನ ತೆರ್ತುಲ್ಲಿಯಾನ ಇವರಿಬ್ಬರ ಕಾಲದಲ್ಲಿ ಅಂಥಾ ಚಿತ್ರ ಪ್ರತಿಮೆಗಳೆರಡರ ಒಂದೇ ಕುರುಹಾದರೂ ಕ್ರೈಸ್ತ ಸಭೆಯಲ್ಲಿರಲಿಲ್ಲ[1]; ತರುವಾಯ ಅವರಿಬ್ಬರ ಮರಣಕ್ಕೆ 85 ವರುಷ ಈಚೆ ಕ್ರಿ. ಶ. 305ನೇದಕ್ಕೆ ಆ ಇಲ್ಲೀಬೆರಿಯ ಸಂಘದವರು ಗೈದ ಪ್ರತ್ಯೇಕವಾದ್ದೊಂದು ವ್ಯವಸ್ಥೆಗೂ[2] ಪ್ರತಿಕೂಲವಾಗಿ ದೇವಾಲಯಗಳೊಳಗೆ ಚಿತ್ರಗಳನ್ನು ಗೋಡೆಯಲ್ಲಿ ಬರೆಯುವದಾಗಲಿ ಪ್ರತಿಮೆಗಳನ್ನು ತಂದಿಕ್ಕುವದಾಗಲಿ ಪದ್ಧತಿಯಾಗಿ, ಅವುಗಳನ್ನು ಪೂಜಿಸುವದಾದರೂ ಆರಂಭಿಸಿತು[3]; ಅವು ಮುಖ್ಯವಾಗಿ ಕ್ರಿಸ್ತನ ಮತ್ತು ಮರಿಯಳ ಮತ್ತು ದೇವದೂತರ ಮತ್ತು ಇತರ ಬೇರೆ ಬೇರೆ ಸಂತರವುಗಳು. ಪಲೇಸ್ತೀನದೇಶ ಸೀನಾಯ ಪರ್ವತ[4] ಮುಂತಾದ ಕೀರ್ತಿ ಗೊಂಡ ಸ್ಥಳಗಳಿಗೂ ರಕ್ತಸಾಕ್ಷಿಗಳ ಸಮಾಧಿಗಳಿಗೂ ಅವರ ಅವಶಿಷ್ಟಗಳು ಇಟ್ಟು ಕೊಂಡಿರುವ ಸ್ತೂಪಗಳಿಗೂ ಯಾತ್ರೆ ಮಾಡುವದು ಅತಿ ಪುಣ್ಯಕರವೆನ್ನಿಸುವ ಹಾಗಾಯಿತು;—ಪಲೇಸ್ತೀನದ ಭೂಮಿಯಿಂದ ಅದ್ಭುತಗಳಾಗುವದುಂಟು[5], ರೋಮದಲ್ಲಿ ಪೆತ್ರನಿಗೆ ಹಾಕಿದ್ದ ಸಂಕೋಲೆಯದೆಂತ ಹೇಳುವದೊಂದು ಗೊಣಸಿನಲ್ಲಿ ಸರ್ವ ಪಾಪ ವಿಮೋಚಿಸುವಂಥ ಶಕ್ತಿಯುಂಟು[6]! ಇತ್ಯಾದಿ ದುಃಖಕರವಾದ ಮಾತುಗಳು ಕೇಳಿಸದಿರಲಿಲ್ಲ. ಆಗಿನ ಕೀರ್ತ್ಯರಾದಂಥ ಕ್ರೈಸ್ತರು ಕ್ರಿಸ್ತನ ಬೋಧನಾಪಭ್ರಂಶವಾದ ಆ ಕರ್ಮಠ ಮಾರ್ಗದ ಕ್ರಿಯೆಗಳಿಗೂ ಸಂತರ ಮತ್ತು ಸಂತಾವಶಿಷ್ಟಗಳ ಪೂಜೆ ಮುಂತಾದ ದುರ್ಮತಾಚಾರಗಳಿಗೂ ದೇವವಾಕ್ಯಾಯುಧಗಳಿಂದ ಯೋಗ್ಯವಾದಂತೆ ಎದುರಿಸದಿದ್ದದಕ್ಕೆ ಈಗಿನ ಸತ್ಯಪ್ರಿಯರಿಗೆ ಬಹು ಹೃತ್ತಾಪವು ಹುಟ್ಟ ಬೇಕು.

ಆ ಕಾಲಕ್ಕೆ ಹ್ಯಾಗಾಯಿತಂದರೆ, ಪೂರ್ವದ ಕ್ರೈಸ್ತರು ಬಹಳ ಅಸಹ್ಯ ಪಟ್ಟು ವಿಗ್ರಹಾರಾಧಕರಿಗೆ ಕಠಿಣ ರೀತಿಯಿಂದ ಬುದ್ಧಿ ಹೇಳಿದಂಥಾ ಮೃತರ ಪೂಜೆ ಎಂಬ ಅಪಧರ್ಮವನ್ನು 4ನೇ ಶತಮಾನದ ಕ್ರೈಸ್ತರು ಹಿಡುಕೊಳ್ಳಲಿಕ್ಕೋಸ್ಕರ ವಿಗ್ರಹಾರಾಧಕರು ಇವರಿಗೆ ಕಠಿಣ ಹಾಸ್ಯ ಮಾಡುವ ಕಾರಣವನ್ನು ಕಂಡು ಕೊಳ್ಳುವವರಾದರು[7].

ಮೃತಾವಶಿಷ್ಟಗಳಿಂದ ಅದ್ಭುತಗಳಾಗುತ್ತವೆಂಬದಕ್ಕೆ ಅನುಕೂಲವಾದ ಮಾತೂ ಆಚಾರವೂ ಒಂದೂ 2ನೇ ಮತ್ತು 3ನೇ ಶತಮಾನಗಳ ಕ್ರೈಸ್ತರಲ್ಲಿರಲಿಲ್ಲ. ಅತಿ ಪ್ರಾಚೀನದಲ್ಲಿ ಎಲೀಷನೆಂಬ ದೇವಭಕ್ತನ ಎಲುಬುಗಳಿಂದ ಒಂದು ಹೆಣಕ್ಕೆ ತಿರಿಗಿ ಜೀವವು ಬಂತೆಂತ, ದೇವರ ವಾಕ್ಯವು ಹೇಳುತ್ತದೆ[8]; ಆದರೂ ಅದನ್ನು ಕಂಡ

---

1) Clem. Alex. paedag. 3; Tertull. de pudic. 7; 102. 103ನೇ ಪಾನು. 2) Can. 36. 3) Leontii Neapol. apologia. 4) 154, 173, 180, 257, 267ನೇ ಪಾನು ಸರಿ ನೋಡು. 5) Augustin. de civ. Dei 22, 8. 6) Gregor. mag. ep. 122. 7) Julian. ap. Cyrill. adv. Jul. X. 8) 2 ಅರಸು. 13, 20.

ಯೆಹೂದ್ಯರಿಗೆ ಬೇರೆ ಹೆಣಗಳಿಗೆ ಸಹ ಅದೇ ಪ್ರಕಾರ ಪುನರ್ಜೀವ ಕೊಡಿಸ ಬೇಕೆಂಬ ಆಲೋಚನೆ ಹುಟ್ಟಲಿಲ್ಲ; ಅವರ ವಿಶ್ವಾಸವು ತಕ್ಕ ಹಾಗೆ ದೇವರ ಮೇಲೆಯೇ ನೆಲೆ ಗೊಂಡಿತ್ತು. ಯೇಸುವಿನ ಮತ್ತು ಪೌಲ ಅಪೊಸ್ತಲನ ವಸ್ತ್ರಗಳಿಂದ ಅದ್ಭುತಗಳಾದದ್ದು ಕೂಡ ದೇವವಾಕ್ಯದಲ್ಲಿ ಅದೆ[1]; ಆದರೆ ಅದು ಮೃತಾವಶಿಷ್ಟಗಳಿಂದಾದ ಅದ್ಭುತಗಳ ಸುದ್ದಿಯಲ್ಲ; ಹ್ಯಾಗಂದರೆ, ಕ್ರಿಸ್ತನಾಥನೂ ಅವನ ಸೇವಕನೂ ಆಗ ಇನ್ನು ಐಹಿಕ ಜೀವದಲ್ಲಿದ್ದರು.

ಸಭಾಶಿಕ್ಷೆಯು ಆಗಿಂದಾಗ ಪ್ರಚಂಡವಾಗಿ ನಡಿಯುತ್ತಿತ್ತು[2]. ಆದರೆ, ಯಾರೂ ಒಂದು ಮಹಾ ಪಾತಕ ಮಾಡಿ, ಇದು ಸಭೆಗೆ ಮರೆಯಾಗಿ ಉಳಿದ ಪಕ್ಷದಲ್ಲಿ ಅದನ್ನು ಬಹಿರಂಗದಲ್ಲಿ ನಿವೇದಿಸುವದಕ್ಕೆ ಬದಲಾಗಿ ಅಂತರಂಗದಲ್ಲಿ ಒಬ್ಬ ಸಭೇ ಹಿರಿಯನಿಗೆ (ಪ್ರೀಸ್ತನಿಗೆ) ಮಾತ್ರ ಅರುಹಿದರೆ ಮೋಕ್ಷವಾಗುವದೆಂಬ ನಿರ್ಣಯವು ಸಹ ಉದ್ಭವಿಸಿತ್ತು[3]. ಬೇರೆ ಪಕ್ಷದಲ್ಲಿ ಒಂದು ಮಹಾ ಪಾತಕಕ್ಕೆ ಸಭಾಶಿಕ್ಷೆಯೊಂದೇ ಪ್ರಾಯಶ್ಚಿತ್ತವೆನ್ನಿಸುತ್ತಿತ್ತು[4]. 1ನೇ ಲೆಯೋನ ಪಪ್ಪನು, ದೇವರಿಂದ ಪಾಪವಿಮೋಚನೆ ಹೊಂದ ಬೇಕಾದರೆ ಅಧ್ಯಕ್ಷರಿಗಿರುವ ಬಂಧಮೋಕ್ಷಾಧಿಕಾರವು[5] ನಡೆದರೆ ಹೊರ್ತು ಅದನ್ನು ಹ್ಯಾಗೂ ಹೊಂದ ಕೂಡದೆಂದು, ಚರ್ಚಿಸಿದನು[6].

ಸಾಧ್ಯವಾದರೆ ಪರಿಶುದ್ಧ ಸ್ನಾನವನ್ನು ಬಹಳ ದಿವಸಗಳ ಮೇಲೆ ಕೊಡುತ್ತಿರುವರು; ಹಿಪ್ಪೋವಿನ ಔಗುಸ್ತೀನನಿಗೀಚೆ ಮಾತ್ರ ಶಿಶುಸ್ನಾನವು[7] ಸರ್ವಸಾಧಾರಣವಾಯಿತು.

ಕ್ರಿ. ಶ. 100ನೇ ವರುಷದಿಂದ 323ನೇದರ ವರೆಗೆ ಇದ್ದ ಕಾಲಾಂತರದೊಳಗೆ ಪರಿಶುದ್ಧ ರಾತ್ರಿಭೋಜನವು ಒಂದು ಅರ್ಪಣೆಯೆನ್ನಿಸುತ್ತಿತ್ತು; ಹ್ಯಾಗಂದರೆ ಸಭ್ಯರು ಅದರಲ್ಲಿ, ವಿಶ್ವನಿರ್ಮಾಣಕ್ಕೋಸ್ಕರವಾದ ಕೃತಜ್ಞತೆಯ ಸಂಜ್ಞೆಗಳೆಂತ, ರೊಟ್ಟಿ ದ್ರಾಕ್ಷಾರಸಗಳನ್ನರ್ಪಿಸುತ್ತಿದ್ದದಲ್ಲದೆ ಕ್ರಿಸ್ತನಲ್ಲಿಯಾದ ರಕ್ಷಣಕ್ಕೋಸ್ಕರ ಸ್ತೋತ್ರ ಪ್ರಾರ್ಥನೆಗಳನ್ನು ಸಹ ಅರ್ಪಿಸುತ್ತಿದ್ದರು; ಆದ್ದರಿಂದ ರಾತ್ರಿಭೋಜನಕ್ಕೆ ಯುಖರಿಸ್ತಿಯವು ಅಂದರೆ ಕೃತಜ್ಞತಾಪ್ರಶಂಸೆಯು ಎಂಬ ಹೆಸರು ಸಹ ಅಂದು ಬಿದ್ದಿತ್ತು[8]. ಅದಲ್ಲದೆ ಆ ಕಾಲಾಂತರದವರು—ರಾತ್ರಿಭೋಜನದಿಂದ ಕ್ರಿಸ್ತನ ವಿಮೋಚನಾಯಜ್ಞಫಲವನ್ನು ತಿರಿಗಿ ತಿರಿಗಿ ನಮ್ಮದು ಮಾಡಿ ಕೊಳ್ಳುತ್ತೇವೆ; ಕ್ರಿಸ್ತನು

---

1) ಲೂಕ. 8, 43 ಆದಿ; ಅಪೊ. ಕ್ರಿ. 19, 12; (5, 15). 2) 186ನೇ, 189ನೇ, 187ನೇ, 198ನೇ, 223ನೇ, 228ನೇ, 242ನೇ ಪಾನು. 3) Leo. M. ep. 168. 4) August. serm. 351. 5) 70, 98, 149, 182ನೇ ಪಾನು. 6) Leo. M. ep. 108, c. 2. 7) 96, 97, 146, 147, 164, 212ನೇ ಪಾನು ಸರಿ ನೋಡು. 8) 95ನೇ ಪಾನು.

ಆಗ ತನ್ನ ಮರಣದಲ್ಲಿ ನಿತ್ಯ ಕಾಲಕ್ಕೂ ಒಮ್ಮೆ ಗೈದ ಯಜ್ಞವನ್ನು ಪಿತೃದೇವರ ಮತ್ತು ನಮ್ಮ ಕಣ್ಣೆದುರಿಗೆ ಮರಳಿ ಇಟ್ಟು, ಅವನಿಗೂ ನಮಗೂ ಜ್ಞಾಪಕ ಹಚ್ಚಿ, ಈ ವಿಧದಿಂದಲೂ ಅರ್ಪಿಸಿ, ಮೃತ್ಯುವಿನ ವಿಷವೂ ಅಮರತ್ವದ ಔಷಧವೂ ಕಿಸ್ತನಲ್ಲಿಯ ಜೀವವೂ ಆದಂಥಾದ್ದನ್ನು ಸ್ವಾದಿಸುತ್ತೇವೆಂತ, ಹೇಳುತ್ತಿದ್ದರು[1]. ಬಳಿಕ ಅದಕ್ಕಿತ್ತ ಆ ರಾತ್ರಿಭೋಜನದ ರಹಸ್ಯವಾದ ಆಶೀರ್ವಾದದ ರೀತಿಯನ್ನು ನಾನಾ ಪ್ರಕಾರದಿಂದ ವರ್ಣಿಸಲೊದ್ದಾಡುವವರಾದರು; 1ನೇ ಗ್ರೆಗೋರ ಪಪ್ಪನು[2] ಮುಂತಾದವರು—ರಾತ್ರಿಭೋಜನದಲ್ಲಿ ರೊಟ್ಟಿ ದ್ರಾಕ್ಷಾರಸಗಳು ವಸ್ತುಪರಿಣಾಮ ಪಟ್ಟು, ಕ್ರಿಸ್ತನ ಶರೀರ ರಕ್ತಗಳಾಗುವವು! ಎಂದು, ಉಚ್ಚರಿಸಲಿಕ್ಕಂಜಲಿಲ್ಲ[3]. ಹೀಗೆ ರಾತ್ರಿಭೋಜನಾಚಾರವು ಮಿಸ್ಸಯಾಗವೆಂಬ ಒಂದು ಜೀವಯಾಗವಾಯಿತು; ಅದು ಆಗುವ ಮೇಜು ಒಂದು ಯಾಗವೇದಿಯಾಯಿತು; ಅದನ್ನು ಕೊಡುವವರು ಯಾಜಕರಾದರು.

ಹಿಪ್ಪೋವಿನ ಔಗುಸ್ತೀನನಾರಭ್ಯ—ಮರಣಕ್ಕೂ ಪುನರುತ್ಥಾನಕ್ಕೂ ನಡುವೆ ಶುದ್ಧೀಕರಣಾಗ್ನಿ ಎಂಬದೊಂದು ಸ್ಥಳವದೆ, ಪರಿಶುದ್ಧ ಸ್ನಾನ ಹೊಂದಿದ ಮೇಲೆಯೂ ಪಾಪ ಗೈದು ಮೃತರಾದ ಕ್ರೈಸ್ತರ ವಿಮೋಚನೀಯ ಪಾಪಗಳು ಅದರಲ್ಲಿ ನಾನಾ ದಂಡನಗಳಿಂದ ಬಿಡುಗಡೆಯಾಗುವವು ಎಂತ, ಹೇಳುವದೊಂದು ಸೌವಾರ್ತಿಕವಲ್ಲದ ದಂಡನಪ್ರಾಯಶ್ಚಿತ್ತಮಯ ಅಪಬೋಧನೆಯೂ, ಪರಿಶುದ್ಧರಾತ್ರಿಭೋಜನಾರ್ಪಣೆಯಿಂದ ಮೃತಪ್ರಾಣಿಗಳ ವೇದನೆಗಳು ಕೊಂಚ ಗುಣವಾಗುವವೆಂತ, ಹೇಳುವ ಮತ್ತೊಂದು ಅಪಬೋಧನೆಯೂ ಉತ್ಪನ್ನವಾದವು. ಪ್ರಾಣಿದಂಡನೋಪಶಮನದ ಇಂಥ ಅರ್ಪಣೆಗಳಿಗೆ, ಪ್ರಾಣಿಮಿಸ್ಸಗಳೆಂತ, ಹೆಸರು ಬಿತ್ತು. 1ನೇ ಗ್ರೆಗೋರ ಪಪ್ಪನು ಆ 2 ಅಪಬೋಧನೆಗಳನ್ನು ತನ್ನೊಳಗಿನ ಸಭೆಗಳಿಗೆ, ಸದ್ಧರ್ಮವೆಂತ, ನೇಮಿಸಿದನು[4].

ಈ ಪ್ರಕಾರವಾಗಿ ಕ್ರೈಸ್ತ ಸಭೆಗಳು ಬಹಿರಕ್ಕೆ ಕಥೊಲಿಕ[5] ಭಾವವನ್ನು ಕಳೆದು ಬಿಡಲೆಸಗಿದ್ದವು; ಕಥೊಲಿಕವೆಂಬ ಹೆಸರನ್ನು ಇನ್ನೂ ದೃಶ್ಯ ಸಭೆಗಳಿಗಿಡಲಿಕ್ಕೆ ಬಹುಶಃ ಕೂಡದೆ ಹೋಯಿತು; ಹಿಂದೆ ಹೇಳಿದ ಅಪಧರ್ಮವೆಲ್ಲಾ ತೀವಿ ಬಹು ವಿಕಾರವಾದಂಥ ಪಪ್ಪಕ ಕ್ರೈಸ್ತತ್ವವೆಂಬ ಪಕ್ಷವು[6] ಅನೇಕ ಪಶ್ಚಿಮ ಸಭೆಗಳಲ್ಲಿ ಬೇರೂರಿತ್ತು. ಇನ್ನೂ ಬಹಿರಕ್ಕೂ ಕಥೊಲಿಕವೆನ್ನಿಸ ತಕ್ಕ ದೃಶ್ಯ ಸಭೆಗಳು ಹೆಚ್ಚಾಗಿ

1) Tertul. de exhort. castit. 11; Cyprian. ep. 63; Euseb. Evang. Apo. 1, 10; Ignat. Eph. 20. 2) 215, 281, 282, 285ನೇ ಪಾನುಗಳು. 3) Greg. M. in evang. L. I, hom. 14, 1. 4) Dial. 4, 39; 4, 55. 5) 163, 164, 180, 187, 188, 243, 275, 281ನೇ ಪಾನುಗಳು. 6) 273—283ನೇ ಪಾನು.

ಇಂಗ್ಲಂದಿನಲ್ಲೂ ಸ್ಕೋಕ್ತ್ಲಂದಿನಲ್ಲೂ[1] ಉಳಿದು, ಅಲ್ಲಲ್ಲಿಂದ ಐರ್ಲಂದಿಗೂ ಫ್ರಂಕ ದೇಶಕ್ಕೂ ಗೆರ್ಮಾನಿಯಕ್ಕೂ ಪಸರಿಸಿ ಹೋಗಿದ್ದವು[2].

ನಾವು ವರ್ಣಿಸಿದ ಈ ಕಾಲಾಂತರದಲ್ಲಿ ನೀತಿಯೂ ಪುಣ್ಯವೂ ರಕ್ಷಣವೂ ಎನ್ನಿಸ ತೊಡಗಿದ ಬಹಿರಾಚಾರಗಳನ್ನೂ ಬಹಿಷ್ಕರ್ಮಗಳನ್ನೂ ಬಹಿರ್ವಸ್ತ್ವಭಿಮಾನಗಳನ್ನೂ ನೋಡಿ, ಧ್ಯಾನಿಸುವಾಗ—ಕರ್ಮಗಳನ್ನೆಂತೂ ಕೇಳದೆ ಬರೇ ಕೃಪೆಯಿಂದ ಸಂಪೂರ್ಣ ನೀತಿಯನ್ನೂ ಅನಂತ ಜೀವವನ್ನೂ ಕೊಡುವಂಥ ಸುವಾರ್ತೆಯು ಆ ಪ್ರಕಾರದ ಧರ್ಮದವರಿಗೆ ಯಾತಕ್ಕೆ? ಮನುಷ್ಯರು ಸ್ವಂತ ಬಲದಿಂದ ರಕ್ಷಿತರಾಗ ಬಹುದೆಂತ ತರ್ಕಿಸಿದ ಆ ಪೆಲಗಿಯನ ಬೋಧನೆಯು[3] ಕ್ರೈಸ್ತರೆಂಬವರದಾಗಿತ್ತಲ್ಲವೋ? ಎಂತ, ಕೇಳುವದು ಸಹಜವೇ. ಆದರೆ ವಿಶೇಷವಾಗಿ ಹಿಪ್ಪೋವಿನ ಆ ಔಗುಸ್ತೀನ ಇತ್ಯಾದಿ ಭಕ್ತರು ಪೆಲಗಿಯನ ಮತವನ್ನು ಖಂಡಿಸಿದ್ದರಿಂದ ತಿಳಿದು ಕೊಳ್ಳ ಬೇಕಾದ್ದೇನಂದರೆ—ರಾಶಿಯಾಗಿ ಬೆಳೆಯುತ್ತಿರುವ ಆ ಕರ್ಮಠ ವ್ಯವಹಾರದ ಅಭಿಮಾನವೆಂಬ ಕಸದೊಳಗೆ ಸುವಾರ್ತಾಮಣಿಯು ಪೂರಾ ಮುಚ್ಚಿಹೋಗದೆ ಇನ್ನೂ ಹೊಳೆಯುತ್ತಿತ್ತು.—ಮಾನುಷ ಸತ್ಕರ್ಮಗಳಿಂದಲಾದರೂ ಪುಣ್ಯಸಂಪಾದನೆ ಏನೂ ಇಲ್ಲ! ಎಂಬದೇ ಔಗುಸ್ತೀನನ ಮುಖ್ಯ ಬೋಧನೆಯು[4].



1) 90, 208, 213, 215, 272ನೇ ಪಾನು. 2) 38, 39, 40ನೇ ಸಂಧಿಗಳು. 3) 245ನೇ ಪಾನು.
4) De grat. Christ. 34; Op. imperf. I, 133; Euch. 32; de perfect. justit. hom. 44.

# IV. ಕ್ರೈಸ್ತ ಸಭೆಯು ಪೂರ್ವದಲ್ಲಿ ತಗ್ಗಿ

# ಪಶ್ಚಿಮದಲ್ಲಿ ಹಿಗ್ಗಿದ್ದು.

(ಕ್ರಿಸ್ತಶಕದ 600ನೇ ವರುಷದಿಂದ 1000ನೇದರ ವರೆಗೆ.)

## 37. ಮೊಹಮ್ಮದನು.

ಅಪೊಸ್ತೊಲಿಕ ಕಾಲದಲ್ಲಿ ಕ್ರೈಸ್ತರ ಮುಖದಿಂದ ಏಕದೇವತ್ವವೂ ಸುವಾರ್ತೆಯೂ ಅರಬಿಸ್ಥಾನದ ವಿಗ್ರಹಾರಾಧಕರೊಳಗೆ ಪ್ರಸಂಗಿಸಲಾದವು[1]; ಅದಲ್ಲದೆ ಯೆಹೂದ್ಯರು ಅವರೊಳಗೆ, ಏಕ ದೇವರೆಂತ, ಸಾರಿದ್ದರು. ಆದಾಗ್ಯೂ ಹೆಚ್ಚಾಗಿ ಕೆಂಪು ಸಮುದ್ರದ ತೀರದಲ್ಲಿಯ ಹಿಜಾಜ್ ಎಂಬ ಶೀಮೆಯಲ್ಲಿ 6ನೇ ಕ್ರಿಸ್ತಶತಮಾನಕ್ಕೆ ಬಹಳ ಮಂದಿ ವಿಗ್ರಹಾರಾಧಕರು ಉಳಿದಿದ್ದರು. ಅಲ್ಲಿರುವ ಮೆಕ್ಕ (ಮಕ್ಕ) ಎಂಬ ಪಟ್ಣದಲ್ಲಿ ಅವರಿಗೆ ಅಲ್ ಕಾಬಾ ಅಂದರೆ ಲತ್ತದ ಆಕೃತಿಯುಳ್ಳದ್ದು ಎಂಬ ದೇವಸ್ಥಾನವಿತ್ತು[2]; ಇದರಲ್ಲಿ ಕ್ರಿ. ಶ. 570ನೇ ವರುಷಕ್ಕೆ 360 ಮೂರ್ತಿಗಳಿದ್ದವು. 5ನೇ ಕ್ರಿಸ್ತಶತಮಾನದಲ್ಲಿ ಅರಬಿ ಬೆದ್ವಿನರದು ಒಂದು ಗೋತ್ರದವರಾದ ಕುರೈಷರು (ಕೊರೇಶರು) ಮೆಕ್ಕದ ಅಗ್ರಹಾರದ ಪಾರುಪತ್ಯಗಾರರಾಗಿದ್ದರು; ಅದರ ದೇವತೆಗಳೊಳಗೆ ಹುಬಾಳ್ ಎಂಬದು ಅವರ ಇಷ್ಟ ದೇವತೆಯಾಗಿತ್ತು. ಆ ಕುರೈಷ ಗೋತ್ರದ ಹಾಷಿಮ್ ಎಂಬ ಕುಟುಂಬದಲ್ಲಿ ಕ್ರಿ. ಶ. ಆ 570ನೇ ವರುಷ ಅಬ್ದ್ ಅಲ್ಲಾ ಎಂಬವನಿಗೆ ಮೆಕ್ಕದಲ್ಲಿ ಒಬ್ಬ ಮಗನು ಹುಟ್ಟಿದನು; ಇವನು ಮೊಹಮ್ಮದನು.

---

1) 85ನೇ ಪಾನು. 2) ಅದರಲ್ಲಿ ಒಂದು ಕಪ್ಪು ಕಲ್ಲು ಅದೆ; ಇಷ್ಮಯೇಲನು (1 ಮೋಶೆ. 16; 21; 25.) ಇದನ್ನು ಒಂದು ಜ್ಞಾಪಕಚಿನ್ಹೆಯಾಗಿಟ್ಟು (1 ಮೋಶೆ. 28, 18; 31, 45; 35, 14), ಬಳಿಕ ಅದಿರುವಲ್ಲಿ ಆ ಕಾಬಾ ಕಟ್ಟಿದನಂತೆ. 6ನೇ ಕ್ರಿ. ಶತಮಾನ ಅದಕ್ಕೆ ಪೂಜೆ ಸಲ್ಲುವದು. 7ನೇ ಕ್ರಿ. ಶತಮಾನದ ಆರಂಭ ಮೊಹಮ್ಮದನ 35ನೇ ವಯಸ್ಸಿನಲ್ಲಿ ಕಾಬಾ ಎಂಬದನ್ನು ಹೊಸದಾಗಿ ಕಟ್ಟುವಾಗ ಮೆಕ್ಕದ ಶ್ರೇಷ್ಠರು, ತಮ್ಮಲ್ಲಿ ಯಾವನು ಆ ಕಲ್ಲನ್ನು ತಕ್ಕ ಸ್ಥಳದಲ್ಲಿರಿಸ ಬೇಕೆಂದು, ವಾಗ್ವಾದ ಮಾಡಲು, ಮೊಹಮ್ಮದನು ಅದನ್ನು ಹಿಡಿದಿರಿಸಿ ಬಿಟ್ಟನು. (Rev. Dr. T. Muehleisen Arnold's Ishmael).

ಮೊಹಮ್ಮದನು 25 ವರುಷದವನಾಗಿರಲು, ಒಬ್ಬ ವರ್ತಕನ ಧನಿಕಳಾದ ಖದೀಜಳೆಂಬ ಮುದೀ ವಿಧವೆಯನ್ನು ಮದಿವೆ ಮಾಡಿ ಕೊಂಡನು. ತಮ್ಮ ಚೊಚ್ಚಲು ಮಗನಿಗೆ, ಅಲ್ ಕಾಸಿಮ್ ಎಂತ, ಹೆಸರಿಕ್ಕಿದರು; ಅದರ ತುಸಕ ಮೊಹಮ್ಮದನಿಗೆ ಅಬ್ ಉಲ್ ಕಾಸಿಮ್ ಅಂದರೆ ಅಲ್ ಕಾಸಿಮುನ ತಂದೆಯು ಎಂಬ ಅಡ್ಡಹೆಸರು ಬಿತ್ತು. ತನ್ನ 2ನೇ ಮಗನ ಜನ್ಮಕಾಲಕ್ಕೆ ಮೊಹಮ್ಮದನು ಇನ್ನೂ ಮೂರ್ತಿಪೂಜಕನು; ಹ್ಯಾಗಂದರೆ ಇವನಿಗೆ, ಅಬ್ದ್ ಮನಾಫ್ ಅಂದರೆ ಮನಾಫ್ ಎಂಬ ದೇವತೆಯ[1] ಸೇವಕನೆಂತ, ಹೆಸರು ಹಾಕಿದನು. ಈ ಮಗನು ಚಿಕ್ಕ ಕೂಸಾಗಿ ಸತ್ತನು.

ಮೊಹಮ್ಮದನಿಗೆ ಸುಮಾರು 40ನೇ ವರುಷ ಸಲುವಾಗ ರೋಮಪುರದ ಅಧ್ಯಕ್ಷನು ವಿಶ್ವದ ಅಧ್ಯಕ್ಷನೆಂಬ ಬಿರುದು ವಹಿಸಿ ಕೊಳ್ಳುವ ಸಮಯ[2] ಅವನು ವಿಗ್ರಹಾರಾಧಕರ ಬಹುದೇವತ್ವದ ಮೇಲೆಯೂ ಕ್ರೈಸ್ತರ ತ್ರಿಯೇಕದೇವತ್ವದ ಮೇಲೆಯೂ ಬಹಳ ಅಸಹ್ಯ ಹಿಡು ಕೊಂಡವನ ಹಾಗೆ ತೋರಿಸಿ ಕೊಳ್ಳುವವನಾದನು. ಅವನು, ಕ್ರೈಸ್ತರು ಸಹ ಬಹುದೇವತ್ವದವರೆಂದು, ನೆನಸುವದನ್ನು ಸುಳ್ಳು ಮಾಡುವದಕ್ಕೆ ಹತ್ತರದಲ್ಲಿ ಸತ್‌ಕ್ರೈಸ್ತರ್‍ಯಾರೂ ಇರಲಿಲ್ಲ. ಅವನು ಕ್ರೈಸ್ತರನ್ನು ಕುರಿತು ಹೇಳಿದ್ದೊಂದು ಮಾತೇನೆಂದರೆ—ಏಕ ದೇವರಿಗೆ ಭಜಿಸಿರೆಂತ, ಅವರಿಗೆ ಆಜ್ಞೆ ಕೊಟ್ಟದ್ದರೂ ಅವರು ದೇವರನ್ನೂ ಮರಿಯಳ ಮಗನಾದ ಕ್ರಿಸ್ತನನ್ನೂ ಅಲ್ಲದೆ ತಮ್ಮ ಬೋಧಕರನ್ನೂ ಮಠವಾಸಿಗಳನ್ನೂ ಕೂಡ, ಕರ್ತರೆಂತ, ಮಾಡಿ ಕೊಂಡಿದ್ದಾರೆ[3].—ಅವನು ಯೆಹೂದ್ಯರ ಮತ್ತು ಕ್ರೈಸ್ತರ ಹಳೇ ಹೊಸ ಒಡಂಬಡಿಕೆಗಳೆಂಬ ಪರಿಶುದ್ಧ ಬರಹವನ್ನು ಸ್ವೀಕರಿಸಿದರೂ ಅದನ್ನು ಅನೇಕ ವಿಧವಾಗಿ ಬದಲಿಸಿ ಕೆಡಿಸಿದನು[4]. ಅವನು ಯೇಸು ಕ್ರಿಸ್ತನನ್ನು ಕುರಿತು—ಮರಿಯಳೆಂಬ ಕನ್ಯೆಯು ಗಬ್ರಿಯೇಲನೆಂಬ ದೇವದೂತನ ಶ್ವಾಸದಿಂದ ಗರ್ಭಿಣಿಯಾಗಿ, ಯೇಸುವನ್ನು ಹೆತ್ತಳು[5]; ಮರಿಯಳ ಮಗನಾದ ಯೇಸುವು ದೇವರ ಅಪೊಸ್ತಲನು (ರಸೂಲ್), ದೇವರ ಪ್ರವಾದಿಯು, ದೇವರು ಮರಿಯಳೊಳಗೆ ಇಟ್ಟ ದೇವವಾಕ್ಯವು, ದೇವರಾತ್ಮವು ಆಗಿದ್ದಾನೆ[6]; ಕ್ರೈಸ್ತರು, ಮರಿಯಳ ಮಗನಾದ ಕ್ರಿಸ್ತನು ದೇವರೆಂತ, ಹೇಳುವದರಿಂದ ಅವರು ಅವಿಶ್ವಾಸಿಗಳೇ[7]! ಎಂದು, ಒಂದಕ್ಕೊಂದು ಗಂಟು ಬೀಳುವ ಮಾತುಗಳನ್ನಾಡಿದನು. ಜ್ಯೋಸ್ತಿಕರಿಗನುಸಾರವಾಗಿ[8] ಅವನು ಹೇಳಿದ್ದೇನಂದರೆ—ಯೆ

1) ಸೂರ 53; Al Beidâwi; Halaby; Mawâhib; Sprenger I, 200; Muir II, 26.
2) 282ನೇ ಪಾನು. ಆ ಸಮಯ ಕ್ರೈಸ್ತ ಸಭೋದ್ಯೋಗಿಗಳಲ್ಲಿ ವಾಚಾತೀತ ವಿಷಯಗಳ ಶುಷ್ಕವಾಗ್ವಾದವು ಬಹಳ; 284ನೇ ಪಾನು ಸರಿ ನೋಡು. 3) 9ನೇ ಸೂರ. 4) 2, 4, 5, 11, 14, 17, 21, 22, 27, 28, 61ನೇ ಸೂರಗಳು. 5) 19ನೇ ಸೂರ; Yahya; Al Beidâwi. 6) ಸೂರ 190 v. 32; 4, 169; 3, 39; 5, 119; 6, 58; 40. 7) 5ನೇ ಸೂರ. 8) 169ನೇ ಪಾನು.

ಹೂದ್ಯರು ಕ್ರಿಸ್ತನನ್ನು ವಾಸ್ತವ್ಯವಾಗಿ ಕೊಲ್ಲಲೂ ಇಲ್ಲ, ಕ್ರೂಜೆಗೆ ಹಾಕಲೂ ಇಲ್ಲ; ದೇವರು ಅವನನ್ನು ತನ್ನ ಕಡೆಗೆ ಎತ್ತಿ ಕೊಂಡನು[1].—

ಇಸ್ಲಾಮ್ (ಮುಸ್ಲೀಮ್) ಅಂದರೆ ದೇವರ ಚಿತ್ತಕ್ಕೊಳ ಬೀಳುವದು ಎಂಬಂಥ ತನ್ನ ಬೋಧನೆಯನ್ನು ಅವನು, ಹಿಂದೆ ಹೇಳಿದಂತೆ, ಕ್ರಿ. ಶ. 609ನೇ ವರುಷಕ್ಕೆ ಹಬ್ಬಿಸ ತೊಡಗಿದನು. 114 ಸೂರಗಳೆಂಬ ಸಂಧಿಗಳಿರುವ ಖುರಾನಿನಲ್ಲಿ ಅದು ಉಳಿದದೆ. ಅದು ಎರಡು ಭಾಗದ್ದು. 1ನೇದು ಇಮಾವ್ ಅಂದರೆ ವಿಶ್ವಾಸವೆಂಬದು; ಇದರ ತಾತ್ಪರ್ಯವು—ಲಾ ಎಲಾಹ ಇಲ್ಲ್ ಅಲ್ಲಾ, ವ ಮುಹಮ್ಮೆದ್ ರಸೂಲ್ ಅಲ್ಲಾ ಅಂದರೆ ಅಲ್ಲಾ ಹೊರ್ತಾಗಿ ಮತ್ತೊಂದು ದೇವರಿಲ್ಲಾ, ಮತ್ತು ಮೊಹಮ್ಮದನು ಅಲ್ಲನ ಅಪೊಸ್ತಲನು! ಎಂತ, ಅದೆ. 2ನೇದು ದೀನ್ ಅಂದರೆ ಆಚಾರವೆಂಬದು; ಇದರ ಕರ್ಮಾಭಿಮಾನಮಯ 8 ಮುಖ್ಯ ವಿಷಯಗಳು—ಸ್ನಾನಗಳು, ಜಪಗಳು, ದಾನಧರ್ಮಗಳು, ಉಪವಾಸಗಳು, ಮೆಕ್ಕದ ಯಾತ್ರೆ, ಮತಯುದ್ಧಧರ್ಮ, ಅನ್ನಪಾನವ್ರತ, ಸುನ್ನತಿ ಎಂಬ ಪರಿಚ್ಛೇದನ, ಇವಿಷ್ಟು.

ಮತಯುದ್ಧಕ್ಕೆ, ಅಂದರೆ ವಿಗ್ರಹಾರಾಧಕಾದಿ ಅವಿಶ್ವಾಸಿಗಳ ಮೇಲೆ ಸ್ವಮತ ವೃದ್ಧಿಗೋಸ್ಕರ ಯುದ್ಧ ಮಾಡುವದಕ್ಕೆ, ಮೊಹಮ್ಮದನು ತನ್ನ ಪಕ್ಷಾವಲಂಬಿಗಳನ್ನು ಬಹುಶಃ ಪ್ರೀತಿಯರಿಯದಂದದಿಂದ ಎಚ್ಚರಿಸಿ, ಅಂಥವರನ್ನು ಕತ್ತಿಯಿಂದ ಕೊಲ್ಲ ಬೇಕೆಂತ, ನೇಮಿಸಿ[2], ಇಸ್ಲಾಮಿನ ಹಿತಕ್ಕೆ ಆಯುಧ ಹಿಡು ಕೊಳ್ಳುವಂಥವರಿಗೆ ಆಗಲೇ ಪರದೈಸಿನಲ್ಲಿ ಪ್ರವೇಶವೆಂತ, ಸಾರಿದ್ಧಾನೆ[3]. ಆ ಪರದೈಸನ್ನು ಅವನು ವಿಷಯಲಂಪಟರಿಗೆ ಸರಿಯಾಗಿ ಈ ಪ್ರಕಾರ ಬಣ್ಣಿಸಿದನು—ಅಲ್ಲಿ ಹಾಲು, ದ್ರಾಕ್ಷಾರಸ, ಜೇನುತುಪ್ಪ ಇವುಗಳ ನದಿಗಳೂ ನೆರಳು ಕೊಡುವ ಮರ, ಉತ್ತತ್ತಿ ದಾಳಿಂಬ ಮುಂತಾದ ಎಲ್ಲಾ ತರದ ಹಣ್ಣು ಇವುಗಳ ತೋಟಗಳೂ; ಮುಸಲ್ಮಾನರು ಶೃಂಗಾರವಾದ ಮಂಚಗಳಲ್ಲಿ ಮಲಗುವರು, ಮುಂಚೆ ಯಾರೂ ಬೊಗ್ಗಿಸದುಳಿದು ಮಾಣಿಕ್ಯ ಮುತ್ತುಗಳಿಂದ ಶೋಭಿಸುತ್ತಿರುವಂಥ ಹೌರಿಗಳೆಂಬ ಸ್ತ್ರೀಯರು ಅವರನ್ನಂಗೀಕಾರ ಮಾಡುವರು; ಕಪ್ಪು ಕಣ್ಣುಗಳುಳ್ಳ ಬೇರೆ ಅಂಥ ಸ್ತ್ರೀಯರು ಮಂಟಪಗಳಲ್ಲಿದ್ಧಾರೆ, ಇವುಗಳಲ್ಲಿ ಮುಸಲ್ಮಾನರು ಹಸುರು ಇಂಬುಗಳಲ್ಲಿಯೂ ಚಲೋ ರತ್ನಕಂಬಳಿಗಳಲ್ಲಿಯೂ ಮಲಗಿ ಕೊಂಡು ಮೋದವ ಪಡಕೊಳ್ಳುವರು[4].—ಮೊಹಮ್ಮದನು ತನ್ನ ಮತದ ವಿಸ್ತರಣಕ್ಕಾಗಿ ತಾನು ಒಟ್ಟಿಗೆ 75 ಚಿಕ್ಕ ದೊಡ್ಡ ಕದನಗಳಾಡಿದನು[5].

ಒಬ್ಬ ಮುಸಲ್ಮಾನನು ಖುರಾನಿನ ಮೇಲೆ ನಾಲ್ವರು ಹೆಂಡರನ್ನು ಮಾಡಿ ಕೊ

1) 34ನೇ ಸೂರ. 2) 4, 8, 9, 17, 22, 47, 61 ಆದಿ ಸೂರಗಳು. 3) 2, 3, 47, 61ನೇ ಸೂರಗಳು. 4) 13, 47, 55ನೇ ಸೂರಗಳು. 5) Abulfidâ.

ಳ್ಳ ಬಹುದು[1]; ಆದರೆ ಮೊಹಮ್ಮದನು, ತನಗೆ ಮನಸ್ಸು ಬಂದಷ್ಟರನ್ನು ಮಾಡಿ ಕೊಳ್ಳುವದಕ್ಕೆ ದೇವರು ತನಗೆ ಅಪ್ಪಣೆ ಕೊಟ್ಟನೆಂತ, ಹದಿನೈವರನ್ನು ಮಾಡಿ ಕೊಂಡನು; ಅವನು ಸಾಯುವ ಸಮಯ ಅವನಿಗೆ 9 ಮಂದಿ ಉಳಿದಿದ್ದರು[2]; ತಾನು ಸ್ತ್ರೀಗಳಲ್ಲಿಯೂ ಸುಗಂಧಗಳಲ್ಲಿಯೂ ಆನಂದ ಪಡುತ್ತೇನೆಂತ, ಅವನು ಹೇಳುತ್ತಿದ್ದನು[3]. ಒಂದು ವೇಳೆ ಈ ಕಾರಣಕ್ಕೋಸ್ಕರ ಸಹ ಅವನು, ತನ್ನ ಪಾಪಗಳಿಗಾಗಿ ಕ್ಷಮೆ ಬೇಡಿ ಕೊಳ್ಳ ಬೇಕೆಂತ ದೇವರು ತನಗೆ ಬುದ್ಧಿ ಹೇಳಿದನೆಂದು, ಖುರಾನಿನಲ್ಲಿ ಬರೆಸಿದ್ಧಾನೆ[4]. ಅವನು ಅದ್ಭುತಗಳನ್ನು ನಡಿಸಿದನೆಂಬ ಸುದ್ದಿಯು ಖುರಾನಿನ ಮೇಲೆ ಅಬದ್ಧವೆನ್ನಿಸುತ್ತದೆ[5].

ಅವನು ಕ್ರಿ. ಶ. 632ನೇ ವರುಷಕ್ಕೆ ಯುದ್ಧೋಪಾಯದಿಂದ ವಿಶಿಷ್ಟ ಅರಬಿಸ್ಥಾನದ ಒಡೆಯನಾದ ಹಿಂದೆ ಇನ್ನು ಅದೇ ವರುಷ ಮೆದೀನವೆಂಬ ಪಟ್ಣದಲ್ಲಿ ಮಡಿದನು; ಅಲ್ಲಿಯೇ ಅವನನ್ನು ಹುಗಿದು ಬಿಟ್ಟರು.

ತದನಂತರ ಅವನ ಮಾವನಾದ ಅಬೂ ಬೆಕ್ರ್ ಎಂಬವನು ಅವನ ಖಲೀಫನು ಅಂದರೆ ಉತ್ತರಾಧಿಕಾರಿಯು ಆದನು. ಇವನು ಉಫ್ರಾತಿನಲ್ಲಿ ಇರಾಕ್ ಎಂಬ ಸಾಸಾನಿದ ರಾಜ್ಯಕ್ಕೆ[6] ಶೇರಿದದೊಂದು ರಾಷ್ಟ್ರವನ್ನು ಸಾಧಿಸಿ ಕೊಂಡು, ಗ್ರೀಕ ರಾಜ್ಯದ ಕೈಸರನಾದ ಹೇರಾಕ್ಲೀಯನೆಂಬವನಿಂದ[7] ಸುರಿಯ ದೇಶದ್ದೊಂದು ಪಾಲನ್ನು ಕಸು ಕೊಂಡನು. ಕ್ರಿ. ಶ. 634ನೇ ವರುಷಕ್ಕೆ ಒಮರ್ (ಉಮರ್) ಎಂಬವನು ಖಲೀಫನಾಗಿ, 636ನೇದಕ್ಕೆ 80,000 ಜನ ಕ್ರೈಸ್ತರನ್ನು ಹತ ಮಾಡಿದಲ್ಲಿ ಪೂರ್ಣ ಸುರಿಯ ದೇಶವನ್ನು ಹಿಡು ಕೊಂಡು, 639ನೇದಕ್ಕೆ, ಕ್ರೈಸ್ತರು ಏನೂ ಅಡ್ಡಿ ಇಲ್ಲದೆ ತಮ್ಮ ಮತಾನುಸಾರವಾಗಿ ಇರ ಬಹುದೆಂದು, ಮಾತು ಕೊಟ್ಟು, ಯೆರೂಸಲೇಮಿನವರನ್ನು[8] ಕೌಲಿಗಿಳಿಸಿದನು; ಮುಂಚೆ ಸೊಲೊಮೋನ ರಾಜನು[9] ಕಟ್ಟಿದ ದೇವಾಲಯವಿದ್ದಲ್ಲಿ ಅವನು ಒಂದು ಮಸೀದಿಯನ್ನೇರಿಸಿದನು. ಹೇರಾಕ್ಲೀಯ ಕೈಸರನು ಸತ್ತ ಕ್ರಿ. ಶ. 641ನೇ ವರುಷದಲ್ಲಿ ಐಗುಪ್ತವೂ[10] ಕೊಪ್ತರೆಂಬವರ ಸಹಾಯದಿಂದ ಅವನ ವಶವಾಯಿತು; ಹ್ಯಾಗಂದರೆ, ಇವರು ಏಕಭಾವತ್ವಮತಾವಲಂಬಿಗಳಾಗಿರುವದರಿಂದ[11] ಆ ಮತಕ್ಕೆ ಮೆಚ್ಚದ ಗ್ರೀಕ ರಾಜ್ಯದವರು ಅವರಿಗೆ ತಂಟೆ ಕೊಡುತ್ತಾ ಬಂದಿದ್ದ ಕಾರಣ ಇವರ ಅಧಿಕಾರಕ್ಕೆ ಅವರು ಬೇಸತ್ತಿದ್ದರು. ಒಮರ್ ಐಗುಪ್ತದಲ್ಲಿ 1,000ಕ್ಕಿಂತ ಹೆಚ್ಚು ಕ್ರೈಸ್ತ ದೇವಾಲಯಗಳನ್ನು ಹಾಳು ಗೈದು,

1) 4ನೇ ಸೂರ. 2) Abulfidâ. 3) Ismaîl ibn Alî. 4) 47ನೇ ಸೂರ. 5) 6, 13, 17ನೇ ಸೂರಗಳು. 6) 189, 259ನೇ ಪಾನು. 7) 260ನೇ, 282ನೇ ಪಾನುಗಳು. 8) 260ನೇ ಪಾನು. 9) 217ನೇ ಪಾನು. 10) ಆಫ್ರಿಕದಲ್ಲಿ ಕ್ರೈಸ್ತ ಸಭೆಗಳವರು ಸಂಖ್ಯೆಯಲ್ಲಿ ಕೊಂಚವಾಗಿದ್ದವು, 216ನೇ, 254ನೇ ಪಾನು. 11) 254ನೇ ಪಾನು.

ಅವರೊತ್ತಾಸೆಯ ಸಲುವಾಗಿ ಕೊಪ್ತರಿಗೆ ತಮ್ಮ ಮತಾಚಾರಸ್ವಾತಂತ್ರ್ಯದಲ್ಲಿರಲೀಸಿದನು; ಆದರೂ ಈ ಸ್ವಾತಂತ್ರ್ಯವು ಅವರಿಗೆ ಬಹಳ ದಿವಸ ಉಳಿಯಲಿಲ್ಲ. ಕ್ರಿ. ಶ. 642ನೇ ವರ್ಷ ಒಮರ್ ಸಮಸ್ತ ಸಾಸಾನಿದ ಸಾಮ್ರಾಜ್ಯವನ್ನು ಇಸ್ಲಾಮಿನವರಿಗೆ ಒಳ ಪಡಿಸಿದನು. ಅವನಾಳ್ತನದೊಳಗೆ ಮುಸಲ್ಮಾನರು ಒಟ್ಟಿಗೆ 4,000 ಕ್ರೈಸ್ತ ದೇವಾಲಯಗಳನ್ನು ಕೆಡಿಸಿ ಬಿಟ್ಟರು. ಒಮರಿನ ಈಚೆಯ ಖಲೀಫರು ಕ್ರಿ. ಶ. 675ನೇದಕ್ಕೆ ಕರ್ಥಾಗೊವನ್ನೂ ಆಫ್ರಿಕದ ಮಿಕ್ಕ ಬಡಗು ತೀರವನ್ನೂ, 693ನೇದಕ್ಕೆ ಅರ್ಮಿನಿಯ ದೇಶವನ್ನು[1] ಸ್ವತಂತ್ರಿಸಿ ಕೊಂಡರು. ಅವರಲ್ಲೊಬ್ಬನು 7 ವರುಷ ಕೊನ್ಸ್ತಂತೀನೊಪೊಲಿಗೆ ಮುತ್ತುತ್ತಿದ್ದರೂ ಅದನ್ನು ಸಾಧಿಸಲಾಗಲಿಲ್ಲ. 5ನೇ ಖಲೀಫನು ಮೂಸನೆಂಬ ತನ್ನ ದಳವಾಯಿಯನ್ನು ಆಫ್ರಿಕದಿಂದ ಸಮುದ್ರದಾಚೆಗೆ ಸ್ಪಾನಿಯ ದೇಶಕ್ಕೆ[2] ಸೇನೆಯ ಸಹಿತ ಕಳುಹಿಸಿ, ಕ್ರಿ. ಶ. 711ನೇ ಅಬ್ದಕ್ಕೆ ಅಂದು ಪ್ರಜಾಭೇದದಿಂದ ಬಲ ಕುಂದಿದ ಅಲ್ಲಿಯ ಪಶ್ಚಿಮ ಗೊಥರ[3] ರಾಜನಾದ ರೋದೆರೀಕನೆಂಬವನನ್ನು ಅವನ ಮೂಲಕ ಜಯಿಸಿ, ಸ್ಪಾನಿಯದ ದೊಡ್ಡ ಪಾಲನ್ನು ಅರಬಿ ಸಾಮ್ರಾಜ್ಯದ ಒಂದು ರಾಷ್ಟ್ರವಾಗ ಮಾಡಿದನು. ಕ್ರೈಸ್ತತ್ವವು ಪರಿಶೋಭಿಸಿದ್ದ ಈ ಪ್ರದೇಶಗಳೆಲ್ಲಾ ಮುಸಲ್ಮಾನರಿಗೆ ಪ್ರಾಪಿಸಿದ್ದು 80 ವರುಷದೊಳಗೆ ಮಾತ್ರ ಸಂಭವಿಸಿತು. ಸ್ಪಾನಿಯದಲ್ಲಿ ಅರಬಿಯರಿಗೆ ಮೌರರೆಂಬ ಹೆಸರಾಯಿತು[4], ಯಾಕಂದರೆ ಅವರು ಆಫ್ರಿಕದ ಉತ್ತರಪಶ್ಚಿಮ ತೀರದಲ್ಲಿರುವ ಮೌರೀತಾನಿಯವೆಂಬ ಶೀಮೆಯಿಂದ ಅಲ್ಲಿಗೆ ಬಂದಿದ್ದರು.

ಕ್ರಿ. ಶ. 732ನೇ ವರುಷ ಅವರು ಅಂದು ಗೆರ್ಮಾನಿಯಕ್ಕೆ ಶೇರಿದಂಥ ಫ್ರಂಕ ದೇಶದೊಳ ಹೊಕ್ಕರು. ಆಗ ಫ್ರಂಕರ ಸಾಮ್ರಾಜ್ಯದ ಪಾರುಪತ್ಯಗಾರನಾದ ಕರ್ಲ ಮರ್ತೆಲ್ಲನೆಂಬವನು[5] ಒಂದು ಚಿಕ್ಕ ದಂಡಿನೊಡನೆ ಮೌರರ ಮಹಾ ಸೇನೆಗೆದುರಾಗಲು, ತೂರ್ (ತೂರ್ಜ್) ಎಂಬ ಪಟ್ಣದ ಸಮೀಪದಲ್ಲಿ 6 ದಿವಸ ಸ್ವಲ್ಪ ಹೊಡದಾಟವಾಗಿ, 7ನೇದರಲ್ಲಿ ದೊಡ್ಡ ಯುದ್ಧವಾಯಿತು. ಮುಸಲ್ಮಾನರು ಅಲ್ಲನನ್ನೂ ಪರದೈಸಿನಲ್ಲಿ ತಮಗೆ ವಾಗ್ದತ್ತವಾದ ವಿಷಯಭೋಗಮಯಾನಂದಗಳನ್ನೂ ನೆನಸಿ, ಜೀವದಾಶೆ ಇಲ್ಲದೆ ಕಾದುತ್ತಿರುವಲ್ಲಿ ಫ್ರಂಕರು ತಮ್ಮ ಕರ್ತನಾದ ಕ್ರಿಸ್ತನ ಸಹಾಯ ಕಾದು ಕೊಂಡು, ನಿರ್ಭೀತರಾಗಿ ಮಲೆತರು; ರಾತ್ರಿಯ ಕಾರ್ಗತ್ತಲೆ ಮುಸುಕುವನಕ ಆ ಪ್ರಾಣಾಪಾಯಕರ ಯುದ್ಧವು ನಡೆಯಿತು; ಆ ಯುದ್ಧಶಾಲಿಗಳಾದ ಫ್ರಂಕರು ಶತ್ರುಗಳ ಅಭಿಯೋಗಗಳನ್ನು ಸ್ಥೈರ್ಯದೊಡನೆ ಸಹಿಸಿದ್ದಲ್ಲದೆ ಅವನ್ನೆಲ್ಲಾ ತೊಲಗಿಸಿದ್ದರು; ಸಾವಿರಾರು ಮಂದಿ ಮೊಹಮ್ಮದಿಯರು ರಣದಲ್ಲಿ ಬಿದ್ದಿದ್ದರು;

1) 199ನೇ, 254ನೇ ಪಾನು. 2) 87ನೇ ಪಾನು. 3) 207ನೇ, 208ನೇ ಪಾನುಗಳು 4) 216ನೇ, 217ನೇ ಪಾನು. 5) 283ನೇ ಪಾನು.

ಫ್ರಂಕರ ಸೇನಾವನದಲ್ಲಿ ಸಹ ಬಹಳ ಮಂದಿ ಶೂರರೆಂಬ ವೃಕ್ಷಗಳು ಕಡೆದಿದ್ದವು. ಮರುದಿವಸ ಯುದ್ಧವು ತಿರಿಗಿ ಉರಿಯಲೆಸಗುವದೆಂದು, ಫ್ರಂಕರು ನಂಬಿ, ರಾತ್ರಿಯೆಲ್ಲಾ ಆಯುಧ ಬಿಡದೆ, ತಮ್ಮ ಕ್ರಿಸ್ತ ಕರ್ತನಿಗೆ ವಿನಂತಿ ಮಾಡುತ್ತಿದ್ದರು. ಆದರೆ ಹೊಂತುಂಟ್ಲೇ ಇಬ್ಬನಿಯಾರಿದಾಗ ಮಾರ್ಬಲವು ಪಾಳ್ಯವನ್ನು ಬಿಟ್ಟು ಓಡಿ ಹೋಗಿದ್ದದನ್ನು ಕಂಡು, ಎಷ್ಟೋ ಪ್ರಮುದಿತರಾದರು! ಮೌರರು ಸ್ಪಾನಿಯಕ್ಕೆ ಹಿಮ್ಮೆಟ್ಟಿ, ತಿರಿಗಿ ಬರಲಿಲ್ಲ. ಕ್ರಿ. ಶ. 756ನೇ ವರುಷಕ್ಕೆ ಅವರು ಅಲ್ಲಿ ಕೊರ್ದೊವವೆಂಬ ಪಟ್ಣದಲ್ಲಿ[1] ಒಂದು ಉಪಖಲೀಫಾತನ್ನು ಅಂದರೆ ಬಾಗ್ದಾದು ಪಟ್ಣದಲ್ಲಿಯ[2] ಮುಖ್ಯ ಖಲೀಫನ ಒಬ್ಬ ಪ್ರತಿನಿಧಿಯ ಸ್ಥಳವನ್ನು ಸ್ಥಾಪಿಸಿ, ದಿನಕ್ರಮದಿಂದ ಕ್ಷೀಣಿಸುತ್ತಾ ಬಂದರು. ಕ್ರಿ. ಶ. 1492ನೇ ವರುಷಕ್ಕೆ ಅವರಿಗಲ್ಲಿ ಉಳಿದಿದ್ದ ಬಲವು ತೀರಾ ತಪ್ಪಿ ಹೋಯಿತು.

ಮುಸಲ್ಮಾನರಲ್ಲಿ ವಿವಿಧ ಸ್ವಮತಶಾಖಾಯುದ್ಧಗಳು ನಡೆದನಂತರ ಕ್ರಿ. ಶ. 750ನೇ ವರುಷ ಅವರ ಪ್ರಧಾನ ಖಲೀಫಾತು ತಿಗ್ರಿಸ್ ಎಂಬ[3] ನದಿಯಲ್ಲಿರುವ ಆ ಬಾಗ್ದಾದು ಪಟ್ಣದಲ್ಲಿ ಸ್ಥಾಪಿತವಾಯಿತು. ಅದು ಆ ಮೇಲೆ ಒಡೆದು, ಹಲವು ಚಿಕ್ಕ ರಾಷ್ಟ್ರಗಳಾಗಿರಲು, ಇವೆಲ್ಲವೂ ಕ್ರಿ. ಶ. 1058ನೇ ವರುಷ ಸೆಲ್ಜುಕರೆಂತ ತುರ್ಕರೆಂತ[4] ಸರಸೇನರೆಂತ[5] ಹೆಸರು ಗೊಂಡವರ ವಶವಾದವು; ಇವರು ಅಸಿಯದ ಮಧ್ಯದಿಂದ ಬಂದದೊಂದು ಜನಾಂಗ; ಕ್ರಿ. ಶ. 950ನೇ ವರುಷ ಹಿಡಿದು, ಇಸ್ಲಾಮಿನವರಾಗಿದ್ದರು. ಇವರಲ್ಲಿ ಉಸ್ಮಾನಿಕ ತುರ್ಕರೆನ್ನಿಸುವಂಥವರು ಮೇಲಾಧಿಕಾರ ಪಡೆದು, ಕ್ರಿ. ಶ. 1326ನೇ ವರುಷಕ್ಕೆ ಸುಲ್ತಾನನೆಂಬ ಹೆಸರು ಬಳಿಸುವಂಥವರಾಗಿ, ಆ ವರುಷದಾರಭ್ಯ ಪೂರ್ಣ ಸಣ್ಣ ಅಸಿಯವನ್ನು ಹಿಡು ಕೊಳ್ಳುತ್ತಾ ಬಂದು, 31 ವರುಷಕ್ಕೀಚೆ ಯುರೋಪ ಖಂಡದಲ್ಲಿ ಥ್ರಾಕಿಯವನ್ನೂ[6] ಇದಕ್ಕೆ ನೆರೆಯಾದ ಹಲವು ನಾಡುಗಳನ್ನೂ ಸಾಧಿಸಿ ಕೊಳ್ಳಲಾರಂಭಿಸಿದರು. ತಾವು ತಮ್ಮೊಳಗೆ ಮಾಡಿಕೊಂಡ ದೇಶಗಳಲ್ಲಿ ಕ್ರೈಸ್ತತ್ವವನ್ನು ಬೇರೊಂದಿಗೆ ಕಿತ್ತು ಹಾಕಲಿಕ್ಕೆ ಮುಸಲ್ಮಾನರು ಪೇಚಾಡುತ್ತಿದ್ದರೂ ಅವರಿಂದದಾಗಲಿಲ್ಲ; ಆಯಾ ದೇಶಗಳಲ್ಲಿ ಇಂದಿನ ವರೆಗೂ ಕೆಲವು ಪ್ರಯುತ ಸಂಖ್ಯೆಯ ಕ್ರೈಸ್ತರು ಮಿಕ್ಕಿದ್ದಾರೆ.

ಮೊಹಮ್ಮದಿಯರಲ್ಲಿ ಸುನ್ನತರೆಂಬದೊಂದು ಶಾಖೆಯೂ ಸಿಯ್ಯಿತರೆಂಬದೊಂದೂ ಅವೆ. ಸುನ್ನತರೆಂದರೆ ಖುರಾನಿಗಲ್ಲದೆ ಸುನ್ನವೆಂಬ ಸಾಂಪ್ರದಾಯಿಕ ಪ್ರಮಾ

---

1) 185ನೇ ಪಾನು. 2) 39ನೇ ಪಾನು. 3) 39ನೇ ಪಾನು. 4) ತುರ್ಕರೆಂಬುದು ಸಂಸ್ಕೃತ ಗ್ರಂಥಗಳಲ್ಲಿಯ ತುಃಖಾರ, ತುಖಾರ, ತುಷಾರ ಎಂಬ ಭುಃಖಾರ ದೇಶದಲ್ಲಿಯದೊಂದು ಜನಾಂಗಕ್ಕೆ ಸರಿ ಎಂತ, ಕಾಣಿಸುತ್ತದೆ; 201ನೇ ಪಾನು. 5) ಗ್ರೇಕ ಭಾಷೆಯಲ್ಲಿ ಸರಕೇನರೆನ್ನಿಸುತ್ತಾರೆ. 6) 7, 48, 178, 181, 203, 206ನೇ ಪಾನು.

ಣಕ್ಕೆ ಸಹ ಅನುಸರಿಸುವಂಥವರು; ಸಿಯ್ಯಿತರೆಂಬ ಭೇದಕರು ಅಂದರೆ ಖುರಾನಿನ ಮೇಲೆ ಮಾತ್ರ ವಿಶ್ವಾಸವಿಡುವಂಥವರು. ತುರ್ಕರೂ ಅರಬಿಯರೂ ಆಫ್ರಿಕದವರೂ ಸುನ್ನತರೂ; ಪಾರ್ಶಿಯರು ಸಿಯ್ಯಿತರು.

ಅನೇಕಾನೇಕ ಕೀರ್ತ್ಯ ಕ್ರೈಸ್ತರಿದ್ದು ವೃತ್ತಿ ನಡಿಸಿದಂಥ ಆ ಬೇರೆ ಬೇರೆ ದೇಶಗಳನ್ನು ದೇವರು ಮೊಹಮ್ಮದಿಯರ ಕೈಗೊಪ್ಪಿಸಿ ಅವರಿಂದ ಇಸ್ಲಾಮು ಅಲ್ಲಲ್ಲಿ ನೆಲೆಗೊಳ್ಳಲೀಸಿದ್ದು ಯಾತಕ್ಕೆ? ಎಂದು, ಕೇಳುವದು ನ್ಯಾಯ. ಇದಕ್ಕೆ ಅಲ್ಲಲ್ಲಿಯ ಕ್ರೈಸ್ತರನ್ನೂ ಬೇರೆ ಸ್ಥಳಗಳಂಥವರನ್ನೂ ಕುರಿತು ಉತ್ತರವಾಗ ತಕ್ಕದ್ದೇನಂದರೆ—1) ಪರಿಶುದ್ಧ ನ್ಯಾಯೇಶನಾದ ದೇವರು ರೋಮಿಾಯ ರಾಜ್ಯದ ಕ್ರೈಸ್ತರೆಂಬವರ ಅಕ್ರಮಗಳನ್ನು ಕಂಡು, ಗೆರ್ಮಾನ ಹೂಣ ವಂದಲರೆಂಬ ಜನರ ಅಭಿಯೋಗಗಳಿಂದಲೂ ಇತರ ಪ್ರಕಾರಗಳಿಂದಲೂ ಅವರನ್ನು ದಂಡಿಸಿದಂತೆಯೇ[1] ಗ್ರೇಕ ರಾಜ್ಯದ ಕ್ರೈಸ್ತರೆಂಬವರನ್ನು ಆ ಕ್ರೂರ ಮೊಹಮ್ಮದಿಯರಿಂದ ದಂಡಿಸುವದಕ್ಕೆ ತನ್ನ ಚಿತ್ತವಿತ್ತು; ಕ್ರೈಸ್ತ ಬಹಿಃಸಭೆ ಎಂಬ ವೃಕ್ಷವು ಒಂದು ವೇಳೆ ಹೊಸದಾಗಿ ಚಿಗಿತು, ಸರಿಬೆರಿಕೆಯಾದಂಥ ಫಲಗಳನ್ನು ತೊಲಗಿಸಿ ಬಿಟ್ಟು, ಉತ್ತಮವೂ ಅಧಿಕವೂ ಆದ ಫಲಕ್ಕೆ ಬಂದೀತೆಂತ, ದೇವರು ಅದಕ್ಕೆ ಕಸಿ ಮಾಡಿದ ಹಾಗೆ ಆಯಿತು. 2) ಮುಸಲ್ಮಾನರಲ್ಲಿ ವಿಗ್ರಹಾರಾಧನೆಯ ಮೇಲೆ ನ್ಯಾಯವಾಗಿ ದೊಡ್ಡ ಹಗೆ ಇತ್ತು; ಅಂದು ಬಹಳ ಅಪಾಯಕರವಾದ ಪ್ರತಿಮಾಪೂಜೆ ಸಂತಪೂಜೆಗಳೊಳಗೆ ಸಿಕ್ಕಿದ ಕ್ರೈಸ್ತರೆಂಬವರಿಗೆ ದೇವರು ಅದನ್ನು ತೋರಿಸಿ, ಅದರಿಂದ ಹಂಗಿಸಿ, ಹೀಗೆ, ತನ್ನವರೆನ್ನಿಸುವ ನೀವು ವಿಗ್ರಹಾರಾಧನೆಯ ಛಾಯೆಯನ್ನಾದರೂ ಬಿಟ್ಟು ಬಿಡಿರೆಂತ, ಪ್ರಚಂಡವಾಗಿ ಬುದ್ಧಿ ಕಲಿಸಲಿಕ್ಕೆ ಯತ್ನಿಸಿದನು. 3) ಮುಸಲ್ಮಾನರು ರಾಜ್ಯಮತದ[2] ಹಮ್ಮುಳ್ಳ ಕ್ರೈಸ್ತರ ದೇಶಗಳನ್ನೂ ಮತವನ್ನೂ ಅವರ ಕೈಯಿಂದ ಕಸು ಕೊಳ್ಳ ಬೇಕೆಂಬ ಮನಸ್ಸು ನಿತ್ಯದಲ್ಲಿ ತೋರಿಸುತ್ತಾ ಬೆದರಿಸುತ್ತಾ ಇರುವಲ್ಲಿ ಕ್ರೈಸ್ತರು ಸ್ವಂತ ಬಲಕ್ಕೆ ನಂಬಲರಿಯದೆ, ಪರಾತ್ಪರನಾದ ತನ್ನ ಮೇಲೆಯೂ ತನ್ನ ಸಹಾಯದ ಮೇಲೆಯೂ ನಿರಂತರ ದೃಷ್ಟಿ ಇಟ್ಟು, ಪ್ರಾರ್ಥಿಸುತ್ತಿರ ಬೇಕೆಂಬದು ದೇವರ ಅಭಿಪ್ರಾಯವಿತ್ತು. 4) ದೇವರು—ಕ್ರಿಸ್ತನ ಮೂಲಕವಾದ ರಕ್ಷಣಶ್ರೇಯಸ್ಸಿನ ವಿಷಯದಲ್ಲಿ ಕ್ರೈಸ್ತರೆಂಬವರ ಪ್ರೀತಿಯಾರಿತು; ಮೊಹಮ್ಮದಿಯರು ತಮ್ಮ ಇಸ್ಲಾಮಿನಲ್ಲಿ ಪ್ರಕಟಿಸುವ ಮಹಾಸಕ್ತಿಯಿಂದ ಅಂಥಾ ಕ್ರೈಸ್ತರನ್ನು ನಾಚಿಸಿ, ಅವರ ಪ್ರೀತ್ಯಗ್ನಿಯನ್ನು ನೆರೆ ಉರಿಸಬೇಕೆಂದು, ಸಂಕಲ್ಪಿಸಿದನು[3]. 5) ಮತ್ತೆ ಆ ಕಾಲದಲ್ಲಿ ಕ್ರೈಸ್ತ ಬಹಿಃಸಭೆಯ ಮೇರೆಯನ್ನು ಪೂರ್ವ ದಿಕ್ಕಿನಲ್ಲಿ ತಗ್ಗಿಸಿ ಪಶ್ಚಿಮ ದಿಕ್ಕಿನಲ್ಲಿ ಗೆರ್ಮಾನರು ಮುಂತಾದವರೊ

---

1) 281, 293ನೇ ಪಾನೂ 36ನೇ ಸಂಧಿಯೂ ಸರಿ ನೋಡು. 2) 284ನೇ ಪಾನು. 3) cf. also ನ್ಯಾಯಾಧಿಪತಿ. 2, 11—23; 3, 1—2.

ಳಗೆ ಹಿಗ್ಗಿಸ ಬೇಕೆಂಬದು ಸರ್ವಜ್ಞ ದೇವರ ಸಂಕಲ್ಪವು. ಹ್ಯಾಗಂದರೆ, ಪೂರ್ವ ದಿಕ್ಕಿನ ಆ ಗ್ರೇಕರು ರೋವಿರಾಯರ ಕೂಡ ಅನೇಕ ಶತಮಾನಗಳಾರಭ್ಯ ಅತಿರಿಕ್ತ ನಾಗರಿಕತ್ವ ಐಶ್ವರ್ಯ ಕಲಾಕೌಶಲ್ಯಗಳ ಬಲುಮೆಯಿಂದ ಬದುಕುತ್ತಾ ಬಂದು, ಈ ರೀತಿಯಾಗಿ ಸ್ವಭಾವದ ಮೇಲೆ ತಮಗಿದ್ದ ಒಳ್ಳೇ ಆತ್ಮಿಕ ಶಕ್ತಿಯ ಸ್ಥೈರ್ಯವು ಬಹುಶಃ ತಪ್ಪಿದಂಥವರಾಗಿದ್ದರು. ಹೀಗಿರಲಾಗಿ, ಅವರು ಕ್ರೈಸ್ತರಾದ ಬಳಿಕವಾದರೂ—ಅವರು ಸದ್ಭಕ್ತಿಯಲ್ಲಿ ಕುಂದದಂತೆ ಬಹಿಃಶಾಂತಿಯ ಸುಖಾನುಭೋಗದಿಂದಿರ ಕೂಡದೆ, ವಿಧವಿಧದ ಅಡ್ಡಮಾರ್ಗಕ್ಕೆ ಹಾಯುತ್ತಿದ್ದಾರೆಂತ, ಬೇಗ ಗೋಚರವಾಯಿತು. ಅದು ಕಾರಣ ಹೆಚ್ಚು ಕಾಲಕ್ಕೆ ಕ್ರೈಸ್ತ ಸಭೆಗಳನ್ನಾಳುವದಕ್ಕೆ ಅವರು ರೋವಿರಾಯರಂತೆ ಅಯೋಗ್ಯರಾದರು; ಅವರು ಇವರು ಹಾಗೆಯೇ ಭೂಪತಿಗಳಾಗಿ ಉಳಿದಿದ್ದರೆ ತಮ್ಮ ಅನಿಷ್ಟ ಆಚಾರಗಳನ್ನು[1] ಅಡ್ಡಿ ಇಲ್ಲದೆ ಎಲ್ಲಿಯೂ ಹಬ್ಬಿಸುತ್ತಿದ್ದರಲ್ಲ? ಆದ್ದರಿಂದ ದೇವರು, ಮುಂಚೆ ತಾನು ಗೆರ್ಮಾನರ ಮೂಲಕ ರೋವಿರಾಯರನ್ನು ಕುರಿತು ಒಂದು ವಿಧವಾಗಿ ಮಾಡಿದಂತೆ[2], ಮೊಹಮ್ಮದಿಯರ ಮೂಲಕ ಗ್ರೇಕರ ಬಹಿರ್ಬಲವನ್ನು ಕಡಿಮೆ ಮಾಡಿ, ಯುರೋಪದ ಪಶ್ಚಿಮ ಭಾಗದಲ್ಲಿರುವ ಒಂದೇ ವಂಶಜರಾದ ಕೆಲ್ತರ[3] ಮತ್ತು ಗೆರ್ಮಾನರು ಮುಂತಾದ ತ್ಯುತೊನರ[3] ಅಂತರ್ಬಲವನ್ನು ಬರಬರ ಕ್ರೈಸ್ತತ್ವದಿಂದ ಪ್ರವರ್ಧಿಸಿ, ಇವರನ್ನವರವರಿಗೆ ಸರಿ ತೂಗಿ ಬಿಟ್ಟನು. ಐರ್ಲಂದು, ಸ್ಕೋತ್ಲಂದು, ಇಂಗ್ಲಂದು, ಗೆರ್ಮಾನಿಯ ಪ್ರಮುಖ್ಯ ದೇಶಗಳಲ್ಲಿಯ ಆ ಕೆಲ್ತರ ಮತ್ತು ತ್ಯುತೊನರ ಸ್ವಭಾವಜವಾದ ಆತ್ಮಿಕ ಶಕ್ತಿಯು ಪ್ರಚಂಡವಾಗಿ ಉಳಿದಿತ್ತು; ಅವರು ಕ್ರೈಸ್ತತ್ವಕ್ಕೆ ಒಂದು ಅತ್ಯುತ್ಕೃಷ್ಟ ಭೂಮಿ ಎಂಬಂತೆ. ಅಂದಿನ ಗ್ರೇಕರಿಗಿಂತಲೂ ರೋವಿರಾಯರಿಗಿಂತಲೂ ಅಧಿಕವೂ ನಿರ್ಮಲವೂ ಆದಂಥ ವಿಶ್ವಾಸಾಗ್ನಿಯು ಆ ಕೆಲ್ತ ತ್ಯುತೊನರಲ್ಲಿ ಕಾಲಗತಿಯಿಂದ ಹತ್ತಿ ಬಾಳುತ್ತಿರುವದೆಂದು, ದೇವರು ಮುಂದಾಗಿ ತಿಳಿದು, ಇವರನ್ನು ಬಲ ಪಡಿಸಿ[4], ಇವರ ಕೈಗೆ ತನ್ನ ಸಭೆಯ ರಾಜತ್ವವನ್ನು ಒಪ್ಪಿಸಿದನು.

ಹಿಂದೆ ವರ್ಣಿಸಿರುವ ದೇವರ ಆ ದಯಾಸಂಕಲ್ಪವು ಈ ವರೆಗೆ ಪೂರಾ ಒದಗದಿದ್ದರೂ ಹ್ಯಾಗೂ ಭಾಗಶಃ ಸಂಭವಿಸಿತು.



1) 36ನೆ ಸಂಧಿ; 281ನೇ ಪಾನು. 2) 211ನೇ ಪಾನು. 3) 48ನೇ, 87ನೇ ಪಾನು. 4) 296ನೇ, 297ನೇ ಪಾನು ಸರಿ ನೋಡು; 27ನೇ ಸಂಧಿ.

## 38. ಐರ್ಲಂದಿನಲ್ಲಿ ಪತ್ರಿಕಿಯನು ಸಾವಾರ್ತಿಕ ವೃತ್ತಿ ನಡಿಸಿದ್ದು.

ಐರ್ಲಂದಿನಲ್ಲಿ ಕೆಲ್ತರ[1] ವಂಶಜರಾದ ಸ್ಕೋತರೂ ಪಿಕ್ತರೂ ವಾಸವಾಗಿದ್ದರು; ಇವರಲ್ಲಿ ಒಂದು ಭಾಗವು ಸಮುದ್ರ ದಾಟಿ ಹೋಗಿ, ಸ್ಕೋತ್ಲಂದಿನಲ್ಲಿ ನೆಲೆಗೊಂಡಿತ್ತು[2]. ಸ್ಕೋತ್ಲಂದಿನ ತೆಂಕಣ ಪಾಲಿನಲ್ಲಿ ಬ್ರಿತನ್ನರ[3] ಮೂಲವಾಗಿ ಕ್ರೈಸ್ತತ್ವವು ಶೇರಿರುವಂದು ಐರ್ಲಂದಿನ ಮೇಲೆ ವಿಗ್ರಹಾರಾಧನೆ ಎಂಬ ಕಾರುಗತ್ತಲೆ ಇನ್ನು ನಿಬಿಡವಾಗಿ ಕವಿದಿತ್ತು.

ಹೀಗಿರಲಿಕ್ಕೆ, ಸುಮಾರು ಕ್ರಿ. ಶ. 400ನೇ ವರುಷ ಸ್ಕೋತ್ಲಂದಿನ ಗ್ಲಸ್ಗೋವೆಂಬ ಪಟ್ಣಕ್ಕೆ ಸಮೀಪವಿರುವ ಬೊನೇವಿಸ್ ಎಂಬ ಊರಲ್ಲಿ (?) ಒಬ್ಬ ಕ್ರೈಸ್ತ ಸಭಾಸೇವಕನಿಗೆ[4] ಸಕ್ಕಾಥನೆಂಬ ಕುಮಾರನು ಹುಟ್ಟಿದನು; ಇವನಿಗೆ ಪತ್ರಿಕಿಯನೆಂತಲೂ ಹೆಸರಾಯಿತು, ಆದ್ದರಿಂದ ಅವನ ಊರಿಗೆ ಈಗ, ಕೆರ್ಕ್ ಪತ್ರಿಕ್ ಎಂತ, ಹೇಳುತ್ತಿದ್ದಾರೆ. ಅವನ ತಂದೆಯು ಅವನನ್ನು ಕ್ರೈಸ್ತ ಮತದ ವಿಷಯ ಚನ್ನಾಗಿ ಉಪದೇಶಿಸಿದನು; ಆದರೂ, ಇವನು ಮುಂದಿನ ಕಾಲದಲ್ಲಿ ತಾನು ನಿವೇದಿಸಿದಂತೆ, ಕ್ರೈಸ್ತತ್ವವು ಅವನ ತಲೆ ಮಾತ್ರ ಹೊಕ್ಕೊಂಡು, ಅವನ ಹೃತ್ತು ಮುಟ್ಟದೆ ಬದಲಿಸಲಿಲ್ಲ. ಅದು ಕಾರಣ ತರ ತರದ ಕಷ್ಟದ ಮಾರ್ಗದಲ್ಲಿ ಅವನನ್ನು ಶಿಕ್ಷಿಸಿ ಹೃತ್ಪರಿಣಾಮ ಪಡಿಸುವದುಚಿತವೆಂದು, ದೇವರು ನಿರ್ಣಯಿಸಿದನು. ಹೀಗಿರಲಾಗಿ, ಪತ್ರಿಕಿಯನು 16 ವರುಷದವನಾದಾಗ ಸ್ಕೋತ ಸಮುದ್ರಗಳ್ಳರು ಅವನನ್ನು ಹಿಡಿದು, ಐರ್ಲಂದಿಗೊಯಿದು, ಒಬ್ಬ ರಾಜನಿಗೆ ಮಾರಿ ಬಿಟ್ಟರು; ಇವನು ತನ್ನ ಹಿಂಡುಗಳನ್ನು ಮೇಯಿಸಲಿಕ್ಕೆ ಅವನನ್ನಿಟ್ಟನು. ಆ ದುಃಖಜೀವಿತದಲ್ಲಿ ಅವನು ತರಹರಿಸುತ್ತಾ ಬಂದು, ಏಕಾಂತದಲ್ಲಿ ತನ್ನ ಸೇವೆ ನಡಿಸುತ್ತಿರಲು, ದೇವರ ಧ್ಯಾನ ಮಾಡುವದೇ ಅವನಿಗೆ ತಕ್ಕದಾಯಿತು. ಈ ಪ್ರಕಾರವಾಗಿ ಅವನು ತನ್ನ ಪಾಪಿಷ್ಠ ಭಾವವನ್ನು ಇದ್ದಂತೆಯೇ ತಿಳಿದು, ಮನಃಪೂರ್ವಕದಿಂದ ಸುವಾರ್ತೆಗೆ ಶರಣಾದನು. ಅವನು 6 ವರುಷ ಆ ಶೆರೆಯಲ್ಲಿದ್ದನಂತರ ಒಂದಾನೊಂದು ದಿನ ಅವನಿಗೆ—ಸಮುದ್ರದ ದಂಡೆಗೆ ಓಡಿ ಹೋಗು! ಅಲ್ಲಿರುವದೊಂದು ಹಡಗು ನಿನ್ನನ್ನು ತಕ್ಕೊಂಡು, ಸ್ವದೇಶಕ್ಕೆ ತಿರಿಗಿ ಮುಟ್ಟಿಸುವದೆಂದು, ಎರಡು ಸಾರಿ ಸ್ವಪ್ನದಲ್ಲಿ ಕೇಳಿಸಿತು. ತನಗೆ ಸಂಶಯವಿದ್ದರೂ ತನ್ನ ಮುಂದೆಯಗಲಿ, ಹೋಗಿ, ಬ್ರಿತನ್ನರದಾದ ಆ ಹಡಗ ಕಂಡನು; ಇದು ಅವನನ್ನು ಸ್ವಜನರಲ್ಲಿ ವೈದೊಪ್ಪಿಸಿದ್ದು ಸಹ ಒದಗಿತು. 10 ವರುಷ

1) 299ನೇ ಪಾನು. 2) 209ನೇ ಪಾನು. 3) 208ನೇ ಪಾನು. 4) ಆ ಕಡೆಯಲ್ಲಿ ಅವಿವಾಹಿತ್ವಾಜ್ಞೆಗಳಿರಲಿಲ್ಲ, 272ನೇ, 291ನೇ ಪಾನುಗಳು; ಕ್ರಿ. ಶ. ಆ 400ನೇ ವರುಷ ಹಿಪ್ಪೊವಿನ ಔಗುಸ್ತೀನನು ದೋನಾತಿಸ್ತರೆಂಬ ಶಾಖೆಯುವರಿಗೆದುರಿಸುವವನಾದನು, 242ನೇ ಪಾನು. For Patrik's history his own "Confessio" is the only *safe* guide.

ಕ್ಕೀಜೆ ಸ್ಕೋತ ಸಮುದ್ರಗಳ್ಳರು ಅವನನ್ನು ತಿರಿಗಿ ಹಿಡಿದು, ಗಲ್ಲಿಯಕ್ಕೆ ತಕ್ಕೊಂಡು ಹೋಗಿ, ಕ್ರಯವರಿಸಿದರು. ಆದರೆ ಸ್ವಲ್ಪ ಕಾಲದ ಬಳಿಕ ಕೆಲವು ಮಂದಿ ವರ್ತಕರು, ಆ ದಾಸನು ವಿಶ್ವಾಸಪ್ರಮಾಣದ ಮೇಲೆ ತಮ್ಮ ಸಹೋದರನೆಂತ, ಅರಿತು, ಹಣ ಕೊಟ್ಟು ಅವನನ್ನು ಬಿಡಿಸಿ, ಸ್ಕೋತ್ಲಂದಿಗೆ ಮರಳಿ ಕಳುಹಿಸಿದರು. ಅಲ್ಲಿ ಅವನು ಬಹು ದಿವಸ ಮನಸ್ಸೌಖ್ಯದಿಂದಿರಲಿಲ್ಲ; ಹ್ಯಾಗಂದರೆ, ತಾನು ಐರ್ಲಂದಿನ ದುರವಸ್ಥೆಯ ವಿಗ್ರಹಾರಾಧಕರನ್ನು ಪುನಃ ಪುನಃ ನೆನಸಿ ದುಃಖಗೊಂಡದ್ದಲ್ಲದೆ, ತಾನು ಅವರಿಗೆ ಸುವಾರ್ತೆ ಸಾರ ಬೇಕೆಂಬದು ದೇವರ ಚಿತ್ತವೆಂತ, ಚಿಂತಿಸಿ ಕೊಂಡನು. ಅವನು ಈ ಚಿಂತೆಯನ್ನು ತನ್ನ ನೆಂಟರಿಷ್ಟರಿಗರುಹಲು, ಇವರು ಅಂಥಾ ಪ್ರಯತ್ನದ ದೊಡ್ಡ ವಿಘ್ನವನ್ನು ಅವನಿಗೆ ತೋರಿಸಿ, ಅಂಜಿಸಲೆಸಗಿದರೂ ಅವನ ಮನಸ್ಸು ಬೇರೆಯಾಗಲಿಲ್ಲ. ಐರ್ಲಂದಿನವರ ಭಾಷೆಯೂ ಪದ್ಧತಿಯೂ ತನಗೆ ಆಗ ರೂಢಿಯಾಗಿತ್ತು; ಆದರೆ ಶುದ್ಧವಾದ ಕ್ರೈಸ್ತ ಮತದ ವಿಸ್ತರಣಕ್ಕೆ ಹೆಚ್ಚು ಪಾತ್ರನಾಗುವಂತೆ ಅವನು ತನ್ನ ದೇಶಕ್ಕೆ ಬರುತ್ಹೋಗುತ್ತಿರುವ ಗ್ರೇಕ ವ್ಯಾಪಾರಿಗಳಿಂದ ಹೊಸ ಒಡಂಬಡಿಕೆಯ ಮೂಲಭಾಷೆಯಾದ ಗ್ರೇಕವನ್ನು ಸಹ ಇನ್ನು ಕಲಿತು ಕೊಂಡು, ತದನಂತರ ಕ್ರಿ. ಶ. 434ನೇ ವರುಷದಲ್ಲಿ ಐರ್ಲಂದಿಗೆ ಹೊರಟನು.

ಅವನು ಅಲ್ಲಿಗೆ ಮುಟ್ಟಿದ ಮೇಲೆ ಡಂಗುರ ಹೊಯ್ಯಿಸಿ, ವಿಗ್ರಹಾರಾಧಕ ಪ್ರಜೆಯ ಸಮೂಹಗಳನ್ನು ಬೈಲಿನಲ್ಲಿ ನೆರೆಸಿ, ಬಹು ಭೋಳೇತನದ ಮಾತಿನಲ್ಲಿ ಕ್ರಿಸ್ತನ ಚರಿತ್ರವನ್ನು ಹೇಳುವವನಾದನು; ಅದು ಭಾವಾರ್ಥಿಗಳಾದ ಆ ಜನರಿಗೆ ಸಲೆ ಮೆಚ್ಚಿಗೆಯಾದ್ದರಿಂದ ಅನೇಕರು ಸ್ನಾನ ಹೊಂದಿದರು. ದ್ರುವಿದರೆಂಬ ಯಾಜಕರು[1], ರಾಜರು ಸಹ, ಬಹಳ ಸರ್ತಿ ಅವನಿಗೆದುರಾಗಿ, ಅವನ ವೃತ್ತಿಯನ್ನು ನಿಷ್ಫಲವಾಗ ಮಾಡಲೊದ್ದಾಡುತ್ತಿದ್ದಾಗ್ಯೂ ಅವನ ವಿಶ್ವಾಸಧೈರ್ಯವು ಕಡಿಮೆಯಾಗಲಿಲ್ಲ; ಅವನು ಕೆಲವು ಸಾರಿ ತನ್ನನ್ನು ಕೊಲ್ಲಲಿಕ್ಕೆ ಬಂದವರ ಕೈಗೆ ದೇವರ ಸಹಾಯದಿಂದ ತಪ್ಪಿಸಿ ಕೊಂಡನು. ಅವನು ಒಂದು ಕಡೆಯಲ್ಲಿ ತಕ್ಕಷ್ಟು ಮಂದಿಯನ್ನು ಮಾನಸಾಂತರ ಪಡಿಸಿ, ಸ್ನಾನ ಕೊಟ್ಟ ತರುವಾಯ ಅವರನ್ನೂ ಅವರ ಕುಟುಂಬಗಳನ್ನೂ ಕರಕೊಂಡು, ವಿಗ್ರಹಾರಾಧಕರು ಮಾತ್ರ ಇರುವಂಥ ಮತ್ತೊಂದು ಕಡೆಗೆ ಹೋಗಿ, ಕ್ರೈಸ್ತರಾದಂಥ ರಾಜರು ಅಲ್ಲಿ ಇನಾಮಾಗಿ ಕೊಟ್ಟ ಸ್ಥಳದಲ್ಲಿ ಅವರದೊಂದು ನೆಲೆ (ಕ್ಷೇತ್ರ) ಮಾಡಿ, ಇದರ ಮಧ್ಯದಲ್ಲಿ ಮರದಿಂದ ಒಂದು ದೇವಾಲಯ ಕಟ್ಟಿ, ಸುತ್ತಲಿನವರಿಗೆ ಶಾಲೆಗಳ ಮೂಲಕ ಸಹ ಉಪದೇಶಿಸಿ, ಬಳಿಕ ಅಲ್ಲಿಂದ, ಸುವಾರ್ತಾಪ್ರಸಾರಣದ ಹೊಸ ನೆಲೆಗಳನ್ನು ಹುಟ್ಟಿಸಲಿಕ್ಕೆ, ವಿಶ್ವಾಸಿಗಳ

1) 89ನೇ ಪಾನು.

ನ್ನು ಅಂದರೆ ಹಿರಿಯರೂ ಸಾಧಾರಣ ಸಭ್ಯರೂ ಆದ 12 ಜನ ಭಕ್ತರನ್ನು ಒಬ್ಬ ಮುಖ್ಯಸ್ಥನ ಸಹಿತ ಕಳುಹಿಸಿ, ಹೀಗೆ ಸಮಸ್ತ ಐರ್ಲಂದಿನ ಮೇಲೆ ಒಂದು ಬಲೆಯೊಡ್ಡಿದಂತೆ ಕ್ರೈಸ್ತ ನೆಲೆಗಳನ್ನು ತೀವಿಸುತ್ತಿದ್ದನು. ದೇವರು ಅವನಿಂದ ಅನೇಕ ಸಾವಿರ ಮಂದಿ ವಿಗ್ರಹಾರಾಧಕರನ್ನು ಕ್ರೈಸ್ತ ಸಭ್ಯರಾಗ ಮಾಡಿಸಿದನು. ಕೆಲ್ ದೇಯಿ ಅಂದರೆ ದೇವರ ಕುಲವೆನ್ನಿಸುವ ಅಂಥ ಐರಿಷ ಸಭ್ಯರು ದೇವಪ್ರಾರ್ಥನೆಯಲ್ಲಿ ಬಹಳ ಕುತೂಹಲ ತೋರಿಸುತ್ತಾ, ಬಡವರಿಗೂ ರೋಗಿಗಳಿಗೂ ಮಿಗು ಪ್ರೀತಿ ಗೈಯುತ್ತಾ, ಆಗಿಂದಾಗ ವಿಶ್ವಾಸಬಲದಿಂದ ಪ್ರಾರ್ಥನೆ ಹಸ್ತಾಧಾನಗಳೊಡನೆ ರೋಗಗಳನ್ನು ಪರಿಹರಿಸುತ್ತಾ ಇದ್ದು, ಈ ಮುಂತಾದ ಅಪೊಸ್ತೊಲಿಕ ಕ್ರಿಯೆಗಳಿಂದ ಪರಿಶೋಭಿಸುತ್ತಿದ್ದರು. ಹಿಂದೆ 36ನೇ ಸಂಧಿಯ ಪ್ರಕಾರ ಗ್ರೇಕ ಮತ್ತು ರೋಮಿಾಯ ಬಹಿಃಸಭೆಗಳೊಳಗೆ ಉದ್ಭವಿಸಿದ ಅಪಧರ್ಮದಲ್ಲಿ ಕಿಂಚಿತ್ತೂ ಅವರಲ್ಲಿಲ್ಲ; ಅವರು ಸೌವಾರ್ತಿಕರಾದ[1] ಅಂದರೆ ಸುವಾರ್ತಾನುವರ್ತಿಗಳಾದ ಕ್ರೈಸ್ತರೇ.

ಸುವಾರ್ತಾಪ್ರಸಂಗದಿಂದಲ್ಲದೆ ಬೇರೆ ವಿಧದಿಂದ ಸಹ ಪತ್ರಿಕಿಯ ಐರ್ಲಂದಿನವರಿಗೆ ಉಪಕಾರಸ್ಥನಾದನು; ನಿದರ್ಶನಕ್ಕಾಗಿ ಅವನು ಅವರ ಭಾಷೆಗೆ ಒಂದು ಅಕ್ಷರಮಾಲೆ ನಿರ್ಮಿಸಿ, ಅವರಿಗೆ ಚಂದ ಕ್ರೈಸ್ತ ಗೀತಕೃತಿಗಳನ್ನು ಸಹ ಸಂಗ್ರಹಿಸಿ ಕೊಟ್ಟನು. ಸಭ್ಯರು ತಮ್ಮ ಬೋಧಕರಿಂದ ತಮ್ಮ ಭಾಷೆಯಲ್ಲಿ ರಚಿತವಾಗಿರುವ ಪರಿಶುದ್ಧ ಬರಹವನ್ನು ಉದ್ಯಮದಿಂದಲೂ ಕ್ರಮದಿಂದಲೂ ಓದುತ್ತಿರುವ ಹಾಗೆ ಅವನೂ ಅವನ ಜತೆಬೋಧಕರೂ ಅವರನ್ನು ಪ್ರೇರಿಸುತ್ತಿದ್ದರು.

ಒಂದಾನೊಂದು ದಿನ ಅವನು ಒಬ್ಬ ಸ್ಥಿತಿವಂತನ ಮನೆಯಲ್ಲಿ ಸುವಾರ್ತೆ ತಿಳಿಸಲು, ಆ ಮನೆತನದವರೆಲ್ಲರೂ ನಂಬಿ, ಸ್ನಾತರಾದ ಬಳಿಕ ಆ ಗೃಹಸ್ಥನ ಕಿರಿಮಗನು ಪತ್ರಿಕಿಯನ ಮೇಲೆ ಬಹು ಪ್ರೀತಿಯುಳ್ಳವನಾಗಿ, ಅವನನ್ನು ಬಿಟ್ಟರಲೊಲ್ಲದೆ, ಅವನ ಸಂಗಡ ಹೋಗಿ, ಸಕಲ ಕಷ್ಟ ಗಂಡಾಂತರಗಳೊಳಗೆ ಅವನ ನಂಬಿಗಸ್ತ ಜೊತೆಗಾರನಾದನು. ಪತ್ರಿಕಿಯನು ಅವನ ಮೃದು ಗುಣ ಕಂಡು, ಅವನಿಗೆ, ಬೆನಿಜ್ಞನೆಂದು, ಹೆಸರಿಟ್ಟನು; ಅದರ ಅರ್ಥವು ಮೃದುಗುಣಿಯೆಂತ. ತನ್ನ ಬೋಧಕನು ತೀರಿ ಹೋದನಂತರ ಬೆನಿಜ್ಞನು ಅವನ ಕೆಲಸವನ್ನು ಮುಂದಕ್ಕೆ ಸಾಗಿಸಿದನು.

ಪತ್ರಿಕಿಯನು ಬ್ರಿತನ್ನಿಯದಲ್ಲಿರುವ ತನ್ನ ಮಿತ್ರರನ್ನು ಇನ್ನೊಮ್ಮೆ ನೋಡಲಿಕ್ಕೆ ಅತಿ ಕಾಂಕ್ಷೆ ಪಡುತ್ತಿದ್ದರೂ ಇದಕ್ಕವಕಾಶ ಕೊಡದೆ, ಅನೇಕ ವರುಷ ಐರ್ಲಂದಿನಲ್ಲಿದ್ದ ಮೇಲೊಮ್ಮೆ—ನಾನು ನನ್ನ ಜೀವಾಂತದ ತನಕ ಇಲ್ಲಿ ದೇವರ ದೃಢವ್ರತನಾದ ಸಾಕ್ಷಿಯಾಗಿರುವಂತೆ ಅವನು ನನಗೆ ಬುದ್ಧಿ ಕೊಡ ಬೇಕೆಂತ, ಬೇಡಿ ಕೊಳ್ಳುತ್ತಿದ್ದೇನೆಂದು, ಹೇಳಿದನು. ಅದೇ ಪ್ರಕಾರವಾಯಿತು.

1) 286ನೇ ಪಾನು.

ಅವನು ಸುಮಾರು 30 ವರುಷ ಅಲ್ಲಿ ಕಳದಿರಲು, ಕ್ರಿ. ಶ. 464ನೇದರಲ್ಲಿ ಕರ್ತನೆಡೆಗೆ ಹೋದನು.

ಅವನ ಮರಣದಿತ್ತ ಅವನ ಶಿಷ್ಯರು ಅದೇ ಆಶೀರ್ವಾದದಿಂದ ಸುವಾರ್ತೆ ಸಾರುತ್ತಾ ಇದ್ದದರಿಂದ ಒಂದೇ ಶತಮಾನದೊಳಗೆ ಆ ಪೂರ್ಣ ದೇಶದಲ್ಲಿ ಕ್ರೈಸ್ತ ಮತವು ಬೇರೂರಿತು; ಹೀಗಿರಲಾಗಿ ಅದಕ್ಕೆ ಸಂತರ ಅಂದರೆ ಸದ್ಭಕ್ತರ ದ್ವೀಪವೆಂಬ ಅಡ್ಡಹೆಸರು ಬಿತ್ತು. ಅದು ಹೊರ್ತಾಗಿ ಐರ್ಲಂದಿನ ಕ್ರೈಸ್ತರು ದಕ್ಷಿಣ ಸ್ಕೋತ್ಲಂದಿಗೂ ವೇಲ್ಜಿಗೂ ಅಂಗ್ಲರ ಮತ್ತು ಸಕ್ಸರ ರಾಷ್ಟ್ರಗಳಿಗೂ ಸುವಾರ್ತಿಕರನ್ನು ಕಳುಹಿಸಿ, ಅಲ್ಲಲ್ಲಿಯ ಕ್ರೈಸ್ತ ಸಹೋದರರಿಗೆ ಅವರ ಶ್ರಮಾವಸ್ಥೆಯಲ್ಲಿ[1] ಆದರಣೆ ಕೊಡಲಿಕ್ಕೂ ದೇವರ ರಾಜ್ಯ ವಿಸ್ತರಿಸಲಿಕ್ಕೂ ಸಮರ್ಥರಾದರು. ಕ್ರಿ. ಶ. 565ನೇ ಅಬ್ದ ಜ್ಯೇಷ್ಠನೆಂಬ ಉಪನಾಮವುಳ್ಳ ಕೊಲುಂಬನು ಐರ್ಲಂದಿನಿಂದ ಉತ್ತರ ಸ್ಕೋತ್ಲಂದಿಗೆ ಗಮಿಸಿ, ಕಾಡರಾದ ಪಿಕ್ತರಿಗೆ ಕ್ರಿಸ್ತನ ನಾಮ ಸಾರಿದನು; ಆದ ಕಾರಣ ಇವರು ವಿಶ್ವಾಸಿಗಳಾಗಿ, ತಮ್ಮ ಶೀಮೆಯ ಪಶ್ಚಿಮ ತೀರಕ್ಕೆ ಸಮೀಪ ಹೈ ಎಂಬ ಚಿಕ್ಕ ದ್ವೀಪವನ್ನು, ಉಚಿತವೆಂತ, ಅವನಿಗಿತ್ತರು. ಇದರಲ್ಲಿ ಕೊಲುಂಬನು ಸ್ಥಾಪಿಸಿದ ಕ್ಷೇತ್ರದ ಅಧ್ಯಕ್ಷನು ದೇವರ ಕುಲವೆಂಬ ಅತ್ತಣ ಕ್ರೈಸ್ತರೆಲ್ಲರ ಮೇಲ್ವಿಚಾರಕನಾದನು.

ಕಾಲಗತಿಯಿಂದ ಇವರು ಫ್ರುಂಕರ ಸಾಮ್ರಾಜ್ಯಕ್ಕೆ[2] ಸಹ ಉಪದೇಶಿಗಳನ್ನು ಕಳುಹಿದರು; ಯಾಕಂದರೆ, ಅದರೊಳಗೂ ಅದರ ಹೊರಗಿನ ನಿಜ ಗೆರ್ಮಾನಿಯವೆಂಬ ಭಾಗದಲ್ಲಿಯೂ ಇನ್ನು ಹೇರಳ ಮಂದಿ ವಿಗ್ರಹಾರಾಧಕರಿದ್ದರು. ಆ ಪ್ರೇಷಿತರಲ್ಲೊಬ್ಬನಾದ ಪ್ರೀದೊಲ್ನನು (ಪ್ರೀದೊಲೀನನು) ಖ್ಲೋದ್ವೀಗ ರಾಜನ[3] ಅಪ್ಪಣೆ ಪಡೆದು, 6ನೇ ಕ್ರಿಸ್ತಶತಮಾನದ ಆರಂಭಕ್ಕೆ ತನ್ನ ಸಂಗಡಿಗರೊಡನೆ ಪಶ್ಚಿಮ ಗೊಥರನ್ನು ನೀಕೇನರಾಗಲಿಕ್ಕೆ ಅಸ್ತುಬಡಿಸಿ[4], ಬಳಿಕ ಲೊರ್ರ್ರೇನೆಂಬ ಲೊಥ್ರಿಂಗೆನಿನಲ್ಲಿಯೂ ಬುರ್ಗುಂದಿನಲ್ಲಿಯೂ[5] ಅಲ್ಸಾಸಿನಲ್ಲಿಯೂ ಸ್ವಿತ್ಸೆರ್ಲಂದಿನಲ್ಲಿಯೂ ಪ್ರಸಂಗಿಸಿದನು. ಕ್ರಿ. ಶ. 595ನೇ ವರುಷ ಅನುಜನೆಂಬ ಉಪನಾಮವುಳ್ಳಂಥ ಕೊಲುಂಬನು (ಕೊಲುಂಬಾನನು) 12 ಮಂದಿ ಸಂಗಾತಿಗಳೊಂದಿಗೆ ಐರ್ಲಂದಿನಿಂದ ಪೊರಮಟ್ಟು, ಮೊದಲು 12 ವರುಷ ಅಲ್ಸಾಸು ಶೀಮೆಯ (ಅಂದರೆ ವೊಸೆಗ ಶೀಮೆಯ) ವೋಘ್ಝ್ (ವೊಗೇಸೆನ್) ಎಂಬ ಬೆಟ್ಟಗಳಲ್ಲಿಯ ಸ್ವೇವರೊಳಗೆ[6] ಮಿಗಿಲಾಶೀರ್ವಾದದಿಂದ ಪ್ರಸಂಗವೃತ್ತಿ ಮಾಡಿದನು. ಆ ಸಮಯ ಫ್ರುಂಕ ಸಾಮ್ರಾಜ್ಯದ ಪೂರ್ವ ಭಾಗವೆನ್ನಿಸುವ ಲೊಥ್ರಿಂಗೆನು ಬುರ್ಗುಂದು ಥೂರಿಂಗೆನು ಎಂಬ 3 ರಾಷ್ಟ್ರಗಳ ಪತಿ

1) 208ನೇ, 209ನೇ ಪಾನು. 2) 282ನೇ ಪಾನು. 3) 211ನೇ, 281ನೇ ಪಾನು. 4) 208ನೇ, 213ನೇ ಪಾನು. 5) 189ನೇ, 212ನೇ ಪಾನುಗಳು. 6) 114ನೇ, 189ನೇ ಪಾನು.

ಗಳು ಕಠಿಣ ಪಪ್ಪಕರಾಗಿ[1], ಐರ್ಲಂದಿನವರಾದ ಬೋಧಕರು ವಿವಾಹಿಗಳಾಗಿದ್ಧಾರೆಂಬ[2] ಮುಂತಾದ ಅವರ ಸೌವಾರ್ತಿಕ ನಡತೆಯನ್ನು ಕಂಡು, ಒಬ್ಬನೇ ಮಾತ್ರ ಸಭೆಯ ಶಿರಸ್ಸು; ರೋಮದ ಅಧ್ಯಕ್ಷನಲ್ಲ, ಕ್ರಿಸ್ತನೇ! ಎಂಬ ಮುಂತಾದ ಅವರ ಸೌವಾರ್ತಿಕ ಬೋಧನೆಯನ್ನು ಕೇಳಿ, ಪಪ್ಪಕ ಧರ್ಮಕ್ಕೆ ವಿರೋಧವೆಂದು, ಸಹಿಸಲಾರದೆ, ಕೊಲುಂಬನನ್ನೂ ಅವನ ಆ ಗೆಳೆಯರನ್ನೂ ಹಿಡಿಸಿ, ಫ್ರಂಕ ರಾಜ್ಯದ ಪಶ್ಚಿಮ ತೀರಕ್ಕೆ ಸಾಗಿಸಿ, ಅವರನ್ನು ಅಲ್ಲಿಂದ ಐರ್ಲಂದಿಗೆ ತಕ್ಕೊಂಡು ಹೋಗ ಬೇಕೆಂದು, ಒಬ್ಬ ಹಡಗಿನವನಿಗೆ ಅಪ್ಪಣೆ ಕೊಟ್ಟರು. ಆದರೆ ನೀರು ದೊಡ್ಡ ಭರ್ತವಾಗಿ, ಥೆರೆನೊರೆಯುಬ್ಬಲು, ಆ ಹಡಗು ಬಂದರವನ್ನು ಬಿಡಲಾರದಂತಾಯಿತು. ಅದರ ಧನಿಯು, ಅದು ದೇವರು ತಂದ ಅಪಾಯವೆಂದು, ತಿಳಿದು, ಆ ಶೆರೆಯವರನ್ನು ಬಿಚ್ಚಿ, ಧಡಕ್ಕಿಳಿಸಿ ಬಿಟ್ಟನು. ಆ ಮೇಲೆ ಇವರು ಫ್ರಂಕ ಸಾಮ್ರಾಜ್ಯದ ಪಶ್ಚಿಮ ಭಾಗವನ್ನಾಳುವ 2ನೇ ಖ್ಲೋತಾರಿ (ಹ್ಲೊತಾರಿ) ಎಂಬ ರಾಜನ ಬಳಿಗೆ ಓಡಿ ಹೋದರು; ಇವನು ಒಳ್ಳೇ ಸೌವಾರ್ತಿಕ ಕ್ರೈಸ್ತನಾಗಿದ್ದು, ಅವರನ್ನು ಒಲುಮೆಯಿಂದ ಅಂಗೀಕರಿಸಿದನು. ಅವನ ಆಶ್ರಯದೊಳಗೆ ಕೊಲುಂಬನು ಗೆರ್ಮಾನಿಯಕ್ಕೆ ಗಮಿಸಿ, ರೈನು ನದಿಯ ಮ್ಯೆಂತ್ಸು ಪಟ್ಣದಲ್ಲಿ[3] ಪ್ರಸಂಗಿಸಿ, ತರುವಾಯ ಆ ನದೀ ತೀರ ಹಿಡಿದು, ದಕ್ಷಿಣಕ್ಕೆ ಸ್ವೀತ್ಸೆರ್ಲಂದಿಗೆ, ಚುಯಿರಿಖು ಸರೋವರದ ಅತ್ತ ಕಡೆಯ ದಂಡೆಯ ವರೆಗೆ, ಸುವಾರ್ತೆ ಸಾರುತ್ತಾ ಹೋಗಿ, ಮುಖ್ಯವಾಗಿ ಗ್ಲಾರುಸ್ ಎಂಬ ಪ್ರದೇಶದ ವಿಗ್ರಹಾರಾಧಕರಾದ ಅಲೆಮನ್ನರಲ್ಲಿ[4] ಬಹು ಆಶೀರ್ವಾದಕರ ವೃತ್ತಿ ಗೈದನು; ತದನಂತರ ಬೋದೆನ್ಸೇ ಎಂಬ ಸರಸಿನಲ್ಲಿದ್ದ ಅಲೆಮನ್ನರಿಗೆ 3 ವರುಷ ಬೋಧಕನಾದನು. ಕ್ರಿ. ಶ. 612ನೇ ವರುಷಕ್ಕೆ ಅವನು ಈತಲಿಯ ದೇಶದ ಉತ್ತರ ಭಾಗದಲ್ಲಿರುವ ಲೊಂಗೊಬರ್ದರೊಳಗೆ[5] ಶೇರಿ, ಅರೀಯಾನರಾದ ಇವರನ್ನು ಸೌವಾರ್ತಿಕ ಕ್ರೈಸ್ತತ್ವಕ್ಕೆ ಸಮ್ಮತಿ ಪಡಿಸುವವನಾದನು. ಅವನು ಬಿಟ್ಟು ಬಂದಿದ್ದ ಬೇರೆ ಬೇರೆ ನೆಲೆಗಳಲ್ಲಿ ಅವನು ತನ್ನ ಶಿಷ್ಯರಲ್ಲೊಬ್ಬೊಬ್ಬನನ್ನು ನಿಲ್ಲಿಸಿರುವಲ್ಲಿ ಇವರು ತಮ್ಮ ಬೋಧಕನಂತೆ ಕ್ರಿಸ್ತನ ನಾಮವನ್ನು ಸಾರುತ್ತಿರುವರು; ಸ್ವೀತ್ಸೆರ್ಲಂದಿನಲ್ಲಿ ಇವರೊಳಗೊಬ್ಬನು ಗಲ್ಲನೆಂಬವನು. ಆದರೆ, ಹಿಂದೆ ಗೊತ್ತಾದಂತೆ[6], ಆ ವೇಳೆ ಲೊಂಗೊಬರ್ದರಲ್ಲಿ ಅಗಿಲುಲ್ಫ ರಾಯನೂ ಅವನ ಪ್ರಜೆಯಲ್ಲಿ ಅನೇಕರೂ ಅಥನಸಿಕ[7] ವಿಶ್ವಾಸಪ್ರಮಾಣಿಗಳಾದರು. ಸ್ವಲ್ಪ ಕಾಲಕ್ಕೀಚೆ ಕ್ರಿ. ಶ. 615ನೇ ವರುಷ ಕೊಲುಂಬನು ತೀರಿ ಹೋದನು. ಆ ಮೇಲೆ ಐರ್ಲಂದಿನವನಾದ ಕಿಲ್ಲೆನನು (ಕೀಲಿಯಾನನು) 12 ಮಂದಿ ಜೊತೆಗಾರರನ್ನು ಕರ ಕೊಂಡು ಬಂದು,

---

1) 282ನೇ, 290ನೇ ಪಾನು. 2) 300ನೇ ಪಾನು. 3) 283ನೇ ಪಾನು. 4) 196 ನೇ, 212ನೇ ಪಾನು. 5) 214ನೇ, 215ನೇ, 283ನೇ ಪಾನು. 6) 215ನೇ ಪಾನು. 7) 215ನೇ ಪಾನು.

ಗೆರ್ಮಾನಿಯದ ಮೈನು ನದಿಯ ಧಡದಲ್ಲಿರುವ ಫುಂಕರಲ್ಲಿ ಕ್ರೈಸ್ತತ್ವ ಶೇರಿಸಿ, ಒಬ್ಬ ಮಾಂಡಲಿಕನಿಗೆ ಸಹ ಸ್ನಾನ ಕೊಡಲು, ಇವನ ಹೆಂಡತಿಯು ಅವನ ನೀತಿಪ್ರಸಂಗಕ್ಕೆ ಕೋಪಿಷ್ಠಳಾಗಿ, ಕ್ರಿ. ಶ. 689ನೇ ವರುಷ ತನ್ನ ಗಂಡನು ಯುದ್ಧಕ್ಕೆ ಹೋಗಿರುವದೊಂದು ಸಮಯ ಕಿಲ್ಲೆನನನ್ನು ಕೊಲ್ಲಿಸಿದಳು; ಆ ದುಷ್ಕರ್ಮಕ್ಕಾಗಿ ಅವಳು ಹುಚ್ಚು ಹಿಡಿದು ಸತ್ತಳು. ಬೇರೊಬ್ಬರಾದ ಐರ್ಲಂದಿನವರು ಬೈಯೆರ್ನ್ (ಬವೇರಿಯ) ಎಂಬ ದೇಶದಲ್ಲಿಯೂ ಸ್ವರ್ತ್ಸ್ವಲ್ದು (ಕಾಳಾರಣ್ಯ) ಎಂಬ ಪರ್ವತಶೀಮೆಯಲ್ಲಿಯೂ ಹೆಸ್ಸೆನೆಂಬ ಶೀಮೆಯಲ್ಲಿಯೂ ಫ್ರೀಸ್ಲಂದಿನಲ್ಲಿಯೂ ಕ್ರೈಸ್ತ ಮತವನ್ನು ಹಬ್ಬಿಸುತ್ತಾ ಬಂದರು. ಕ್ರಿ. ಶ. 690ನೇ ವರುಷ ಐರ್ಲಂದಿನ ಕ್ರೈಸ್ತರು ವಿಲಿಬ್ರೊರ್ದನೆಂಬವನನ್ನು 12 ಮಂದಿ ಸಹಾಯಕರೊಡನೆ ಫ್ರೀಸರ (ಫ್ರೀಸಿಯರ) ದೇಶವಾದ ಆ ಫ್ರೀಸ್ಲಂದಿಗೆ ಕಳುಹಿಸಿದರು; ಇವನು ಇಂಗ್ಲಂದಿನಲ್ಲಿ ಹುಟ್ಟಿದವನು. ಫ್ರೀಸರ ಪ್ರಜೆಯಲ್ಲನೇಕರು ಮಾತ್ರವಲ್ಲದೆ ಅವರ ಮಹಾರಾಜನಾದ ರದ್ಬೊದನೆಂಬವನು ಸಹ ಕ್ರೈಸ್ತತ್ವಕ್ಕೆ ಮೆಚ್ಚುವವರಾಗಿರುವಾಗ ರದ್ಬೊದನಿಗೂ ಸ್ನಾನ ತಕ್ಕೊಳ್ಳುವ ಮನಸ್ಸು ಹುಟ್ಟಿತು. ಆದರೆ ಅವನು ಒಂದು ಹೊಳೆಗೆ ಬಂದು, ಒಂದು ಕಾಲನ್ನು ಅದರಲ್ಲಿ ಅದ್ದಿರುವಂದು, ನನ್ನ ಪಿತೃಗಳು ಎಲ್ಲಿಗೆ ಹೋಗಿದ್ದಾರೆಂತ, ವಿಚಾರಿಸಿದನು. ಒಬ್ಬ ಬೋಧಕ, ನರಕಕ್ಕೆಂದು, ಹೇಳಲು, ಅವನು ನೀರೊಳಗದ್ದಿದ ಕಾಲನ್ನು ಹಿಂದಕ್ಕೆಳದು, ತನ್ನ ಕಾಡುಗುಣಕ್ಕನುಸಾರವಾಗಿ, ಹಾಗಾದರೆ ನನ್ನ ಪಿತೃಗಳೊಡನಿರುವೆನೆಂದು, ಕೂಗಿ, ಹೋಗಿ ಬಿಟ್ಟನು.—

ಹಾಗಾದರೆ ನಿಜ ಗೆರ್ಮಾನಿಯದ ಜನಾಂಗಗಳೊಳಗೆ ಕ್ರೈಸ್ತತ್ವದ ವಿಶಾಲವಾದ ನೆಲೆಗಟ್ಟು ಹಾಕಿದವರು ಐರ್ಲಂದಿನ ಪಪ್ಪಕರಲ್ಲದಂಥ ಸೌವಾರ್ತಿಕ ಕ್ರೈಸ್ತರೇ.

---

## 39. ಇಂಗ್ಲಂದಿನಲ್ಲಿ ಔಗುಸ್ತೀನನು ಪಪ್ಪಕ ವೃತ್ತಿ ನಡಿಸಿದ್ದು.

ಐರ್ಲಂದಿನಲ್ಲಿ ಮತ್ತೆ ಸ್ಕೋತ್ಲಂದಿನಲ್ಲಿ ಕ್ರೈಸ್ತತ್ವವು ಜಯಪ್ರದವಾಗಿ ಶೋಭಿಸುತ್ತಿರುವಷ್ಟರಲ್ಲಿ ಇಂಗ್ಲಂದಿನ ಕ್ರೈಸ್ತ ಸಭೆಗೆ, ನೀವು ಹಿಂದೆ ಓದಿರುವಂತೆ[1], ಅಂಗ್ಲಸಕ್ಸ ಯುಯಿತರೆಂಬವರಿಂದ ಬಹಳ ಕೇಡು ಬರುತ್ತಲಿತ್ತು. ಅಡವೀ ಪಾಲಾದ ಆ ವಿಗ್ರಹಾರಾಧಕರು ಸಕಲ ಕ್ರೈಸ್ತ ದೇವಾಲಯಗಳನ್ನು ಹಾಳು ಮಾಡಿ, ಅನೇಕ ಬೋಧಕರನ್ನೂ ಸಭ್ಯರನ್ನೂ ಓಡಿಸಿದರು.

ಕ್ರಿ. ಶ. 596ನೇ ವರುಷದಲ್ಲಿ ಏನಾಯಿತಂದರೆ, ಆ ಅಂಗ್ಲ ಸಕ್ಸರ ಏಳ್ವರು ರಾ

---

1) 208ನೇ, 209ನೇ, 303ನೇ ಪಾನು.

ಜರಲ್ಲಿ ಪ್ರಧಾನನಾದ ಕೆಂತು ನಾಡಿನ ಎಥೆಲ್ಬೆರ್ತನೆಂಬವನು ಗಲ್ಲಿಯದ ಫರೀಸು ಪಟ್ಣದ[1] ಫ್ರಂಕನಾದ ಕ್ರೈಸ್ತ ರಾಜನ ಬೆರ್ಥಳೆಂಬ ಕುಮಾರ್ತೆಯನ್ನು ಮದುವೆಗೆ ಕೇಳಿ ಕೊಳ್ಳಲು—ನೀವು ಬೆರ್ಥಳಿಗೂ ಅವಳ ಪರಿಚಾರಕರಿಗೂ ತಮ್ಮ ಕ್ರೈಸ್ತ ದೇವಾರಾಧನೆಯನ್ನು ಅಡ್ಡಿಯಿಲ್ಲದೆ ಮಾಡ ಗೊಡಿಸಿ, ಫ್ರಂಕ ಕ್ರೈಸ್ತ ಬೋಧಕರನ್ನು ನಿಮ್ಮ ಶೀಮೆಗೆ ಬರಲೀಸಿದರೆ ಹೊರ್ತು ಅದಾಗಲಿಕ್ಕಿಲ್ಲವೆಂತ, ಉತ್ತರ ಹೇಳಿದರು. ಆಗ ಎಥೆಲ್ಬೆರ್ತನು ಅದಕ್ಕೆ ಅಸ್ತುಬಟ್ಟನು. ಆ ಸಮಯ 1ನೇ ಗ್ರೆಗೋರನೆಂಬವನು[2] ಪಪ್ಪನಾಗಿದ್ದನು. ಇವನು ಆ ಉದ್ಯೋಗಕ್ಕೆ ಬರುವದಕ್ಕಿಂತ ಮುಂಚೆ ತಾನು ಬರೇ ಮಠಿಕನಾಗಿರುವಾಗ ರೋಮಪುರದ ಸಂತೇ ಬೈಲಿನಲ್ಲಿ ಒಮ್ಮೆ ಅಡ್ಡಾಡುತ್ತಿರಲು, ದಾಸತ್ವಕ್ಕೆ[3] ಮಾರಲಿಟ್ಟಿರುವ ಚಲೋ ರೂಪವುಳ್ಳ ಇಬ್ಬರು ಯೌವನಸ್ಥರನ್ನು ಕಂಡು, ಅವರು ಯಾವ ದೇಶದವರೆಂತ, ವಿಚಾರಿಸಿದನು. ಅವರು ಬ್ರಿತನ್ನಿಯದವರೆಂದರು.—ಆ ದ್ವೀಪದವರು ಕ್ರೈಸ್ತರೋ? ವಿಗ್ರಹಾರಾಧಕರೋ?—ವಿಗ್ರಹಾರಾಧಕರು.—ಐಯ್ಯಯ್ಯೋ! ಅಂಧಕಾರಾಧಿಪತಿಯು ಇಂಥ ತೇಜೋಮುಖವುಳ್ಳವರನ್ನು ಆಳುವದ್ಯಾತಕ್ಕೆ? ಇಂಥ ವಿಶಾಲ ಭಾಳಗಳು ಅನಂತ ಕೃಪೆಯರಿಯದ ಪ್ರಾಣಗಳಿಗಿರುವದೇನು? ಆ ಜನರ ಹೆಸರೇನು?—ಅಂಗ್ಲರು.—ಇಷ್ಟು ಮಾತಾದ ಮೇಲೆ ಗ್ರೆಗೋರನು ಆ ಜನರ ಹೆಸರು ಹಿಡಿದು ಶ್ಲೇಷಾಲಂಕಾರದಿಂದ ಅಂಗ್ಲರೆಂಬದಕ್ಕೆ[4] ಅನುಗಲರು (ಅನುಗರರು, ಅಂಗೆಲ್ಲರು) ಅಂದರೆ ದೂತರು ಎಂಬ ಅರ್ಥ ಕಟ್ಟಿ, ನುಡಿದ್ದೇನಂದರೆ—ನಿಶ್ಚಯವಾಗಿ ಅವರ ಆಕಾರವು ದೇವದೂತರದೇ! ಅವರು ಸ್ವರ್ಗದಲ್ಲಿ ದೇವದೂತರ ಸಮಬಾಧ್ಯಸ್ಥರು ಆಗದಿದ್ದರೆ ದೊಡ್ಡ ನಷ್ಟವೇ! ಇತ್ಯಾದಿ.—ಅಂದಿನಿಂದ ಬ್ರಿತನ್ನರಿಗೆ ತನ್ನ ತರದ ಕ್ರೈಸ್ತತ್ವ ಸಂಪಾದಿಸಿ ಕೊಡ ಬೇಕೆಂಬ ಮನಸ್ಸು ಅವನಲ್ಲಿ ಹುಟ್ಟಿ ಉಳಿದಿತ್ತು; ಅದಲ್ಲದೆ ಅವನು, ಬ್ರಿತನ್ನಿಯದಲ್ಲಿ ಸೌವಾರ್ತಿಕ[5] ಕ್ರೈಸ್ತರಿದ್ಧಾರೆಂತ, ಕೇಳಿ, ಅವರನ್ನು ಪಪ್ಪಕರಾಗ ಮಾಡಲಿಕ್ಕೆ ಅಂದರೆ ಪಪ್ಪನ ಆಳ್ತನ, ಬೋಧಕರ ಅವಿವಾಹಿತ್ವ, ಸಂತರ ಮತ್ತು ಸಂತಾವಶಿಷ್ಟಗಳ ಪೂಜೆ ಮುಂತಾದ ಹಿಂದೆ ವಿವರಿಸಿರುವಂಥ ದುಃಪದ್ಧತಿಯನ್ನು[6] ಅವರಲ್ಲಿ ಹಾಕಲಿಕ್ಕೆ ಬಹು ಆಶೆ ಗೊಂಡನು. ಇಂತಿರಲಾಗಿ, ಎಥೆಲ್ಬೆರ್ತ ಪ್ರಭುವು ಕ್ರೈಸ್ತತ್ವಕ್ಕೊಲಿಯುತ್ತಾನೆಂತ, ಸುದ್ದಿಯಾದಾಗಲೇ ಅವನು ಬೆನೆದಿಕ್ತೀನರ ಅಂದರೆ ಆ ಬೆನೆದಿಕ್ತನ[7] ಪಕ್ಷಕರಾದ ಮಠಿಕರ ಒಬ್ಬ ಅಬ್ಬಾತನಾದ[8] ಔಗುಸ್ತೀನನನ್ನೂ ಅಂಥ 40 ಮಂದಿ ಸಾಧಾರಣ

---

1) 87ನೇ ಪಾನು. 2) 215, 281, 282, 285, 290ನೇ ಪಾನುಗಳು. 3) ಪಪ್ಪರು ಇಂಥ ದಾಸವ್ಯಾಪಾರ ಪೂರಾ ನಿಲ್ಲಿಸ ಬೇಕಾಗುತ್ತಿತ್ತಲ್ಲವೋ? 285ನೇ ಪಾನು ಸರಿ ನೋಡು. 4) ಅಂಗ್ಲರು ಅಂದರೆ ಅಂಕದಿಂದ ಮೀನು ಹಿಡಿಯುವವರು? 5) 163ನೇ ಪಾನು. 6) 33, 34, 35, 36ನೇ ಸಂಧಿಗಳು. 7) 266ನೇ ಪಾನು. 8) 264ನೇ ಪಾನು.

ಮಠಿಕರನ್ನೂ ಇಂಗ್ಲಂದಿಗೆ ಕಳುಹಿಸಿದನು; ಗ್ರೆಗೋರ ಪಪ್ಪನು ತಾನು ಸಹ ಬೆನೆದಿಕ್ತೀನ ಮಠಿಕರ ಧರ್ಮದವನು. ಆ ಮಠಿಕರು ಹೊರಟು, ಹೆಚ್ಚು ಜನ ಅಂಗ್ಲ ಸಕ್ಸರು ಮಹಾಕಾಡುಮನುಷ್ಯರೆಂದು, ತಿಳಿದು, ಹೇಡಿಗಳಾಗಿ, ಅರ್ಧ ಮಾರ್ಗದಲ್ಲಿಂದ ತಿರಿಗಿ ಬರುವ ಹಾಗೆ ಮನಸ್ಸು ತೋರಿಸಲಿಕ್ಕೆ, ಗ್ರೆಗೋರನು ಅವರಿಗೆ ತನ್ನ ಉದ್ಯೋಗಾಧಿಕಾರದಿಂದ ಬೆದರಿಸ ಬೇಕಾಯಿತು. ಆದ್ದರಿಂದ ಅವರು ಹಡಗು ಹತ್ತಿ, ಮುಂದರಿಸಿ; ಕ್ರಿ. ಶ. 597ನೇ ವರುಷ ಕೆಂತು ನಾಡಿಗೆ ಮುಟ್ಟಿ, ತಾವು ಬಂದದ್ದನ್ನು ಎಥೆಲ್ಬೆರ್ತನಿಗೆ ತಿಳಿಸಿ, ವೈಯಾರದ ಮೆರವಣಿಗೆಯೊಡನೆ ಅವನಿಗೆದುರ್ಗೊಂಡರು. ಆ ರಾಯನು, ಅವರು ಮಾಟಗಾರರೆಂತ, ಭಾವಿಸಿ, ಒಂದು ಮನೆಯೊಳಗೆ ಅವರ ಸಂಗಡ ಸಂಭಾಷಿಸಿದರೆ ತನಗೆ ಕೇಡು ಮಾಡ್ಯಾರೆಂತ, ಅಂಜಿ, ಮೊದಲು ಬೈಲಿನಲ್ಲಿ ಪ್ರಕಟವಾಗಿ ಭೇಟಿ ಕೊಟ್ಟನು; ಆದರೆ ಬರ ಬರ ಅವನ ಭಯವು ಹೋಗಲು, ತನ್ನ ಸಮಸ್ತ ರಾಜ್ಯದಲ್ಲಿ, ಕಂತರ್ಬೆರಿ ಎಂಬ ತನ್ನ ರಾಜಧಾನಿಯಲ್ಲಿ ಸಹ, ತಮ್ಮ ಮತದ ಪ್ರಸಂಗ ಮಾಡಲಪ್ಪಣೆಯಿತ್ತು, ತಾನು ಅವರ ಮತ ಶೋಧಿಸಿ, ಸ್ವಲ್ಪ ಕಾಲದ ಮೇಲೆ ಸ್ನಾನ ಹೊಂದಿದನು. ಅದಲ್ಲದೆ ಬಹಳ ತಡವಿಲ್ಲದೆ ಸುಮಾರು 10,000 ಮಂದಿ ಕೆಂತಿನವರಿಗೆ, ಇನ್ನು ಅದೇ 597ನೇ ವರುಷದಲ್ಲಿ, ಸ್ನಾನ ಕೊಡೋಣವಾಯಿತು. ಆಗ ಔಗುಸ್ತೀನನು ಗಲ್ಲಿಯಕ್ಕೆ ಹೋಗಿ, ಆರ್ಲ್ ಪಟ್ಣದ[1] ಅಧ್ಯಕ್ಷನಿಂದ ಕಂತರ್ಬೆರೀ ಸಭೆಯ ಅಧ್ಯಕ್ಷತೆಯನ್ನು ತನಗೆ ಕೊಡಿಸಿಕೊಂಡು, ಹಿಂದಿರುಗಿ, ನಡೆದ ವೃತ್ತಾಂತವನ್ನೆಲ್ಲ ಗ್ರೆಗೋರ ಪಪ್ಪನಿಗೆ ಬರೆದು ತಲಪಿಸಿದನು. ಇವನು ಅವನನ್ನು ಆ ಉದ್ಯೋಗದಲ್ಲಿ ಸ್ಥಾಪಿಸಿ, ಅಂಗ್ಲ ಸಕ್ಸ ರಾಷ್ಟ್ರಗಳಲ್ಲಿಯ ದೇವರ ಕುಲವೆಂಬ ಸೌವಾರ್ತಿಕ ಕ್ರೈಸ್ತರನ್ನು ತನ್ನೊಳ ಪಡಿಸುವ ಉದ್ದಿಶ್ಯ ಅವನಿಗೆ ಬುದ್ಧಿ ಹೇಳಿದ್ದೇನಂದರೆ—ನೀನು ಅನಕ ನಮ್ಮ ರೋಮುಕ ಸಭೆಗಳ ಆಚಾರಗಳ ವಿಷಯದಲ್ಲಿ ಸ್ವಲ್ಪ ಸಡಿಲು ಬಿಡ ಬಹುದು; ಬೇಕಾದರೆ ಆ ಸೌವಾರ್ತಿಕರ ಬೋಧಕರು ವಿವಾಹಿಗಳಾಗುವದಕ್ಕೆ ಅಭ್ಯಂತರ ಮಾಡದಿರು.—ಈಗಿನ ಪಪ್ಪಕ ಧರ್ಮಕ್ಕೆ ಪ್ರತಿಕೂಲವಾಗಿ ಅವನು ಔಗುಸ್ತೀನನ ಬಳಿಗೆ ದೇವವಾಕ್ಯದ ಹಲವು ಪ್ರತಿಗಳನ್ನು ಸಹ ಜನೋಪಕಾರಕ್ಕಾಗಿ ಕಳುಹಿಸಿ ಕೊಟ್ಟನು[2].

ತದನಂತರ ಔಗುಸ್ತೀನನು ಬ್ರಿತನ್ನಿಯದಲ್ಲಿಯ ಸೌವಾರ್ತಿಕ ಕ್ರೈಸ್ತರನ್ನೂ ತನ್ನ ಮೂಲಕ ಉಂಟಾದ ಪಪ್ಪಕರನ್ನೂ ಒಂದೇ ಮಾಡಲಿಕ್ಕೆ ಪೇಚಾಡುವವನಾದನು. ಅವನು ಎಥೆಲ್ಬೆರ್ತ ರಾಯನ ಸಹಾಯದಿಂದ ವೆಸ್ಸೆಕ್ಸೆಂಬ ನೆರೆರಾಷ್ಟ್ರದಲ್ಲಿಯ ಸೌವಾರ್ತಿಕರನ್ನು ಒಂದು ಸಂಭಾಷಣೆಗೆ ಕೂಡ ಕರಿಸಿ—ನೀವು ಇನ್ನು ಮುಂದೆ ಕಥೊಲಿಕ (ಅಂದರೆ ಪಪ್ಪಕ)[3] ಸಭೆಯ ಸಮಾಧಾನ ಕೆಡಿಸ ಬೇಡಿರಿ! ತನ್ನ

1) 90, 165ನೇ ಪಾನು. 2) 285ನೇ ಪಾನು. 3) 290ನೇ ಪಾನು.

ಅಧ್ಯಕ್ಷತೆಗೆ ಒಳಗಾಗಿರಿ! ಎಂದು, ವಿಪರೀತವಾದ ಗರ್ವದಿಂದ ನುಡಿಯಲು, ಆ ಯಥಾರ್ಥದ ಕ್ರೈಸ್ತರು ಬಹಳ ಆಶ್ಚರ್ಯಗೊಂಡು, ತಮ್ಮ ಮಾಂಗಲ್ಯ ಸ್ವಾತಂತ್ರ್ಯವನ್ನು ಬಿಟ್ಟುಕೊಡಲಿಕ್ಕೆ ಏನೂ ಮನಸ್ಸು ತೋರಿಸದಿರುವಲ್ಲಿ ಅವನು ಬೈಗಳನ್ನು ಪಯೋಗಿಸಲಿಕ್ಕೂ ಹೆದರಲಿಲ್ಲ. ಆದರೂ ಇವು ಸಹ ಸಾರ್ಥಕವಾಗಲಿಲ್ಲ; ಆ ಸೌವಾರ್ತಿಕರು ಆ ರಾಯನಿಗೆ, ಒಂದು ಸಭಾಸಂಘವು ಆಗ ಬೇಕೆಂತ, ಬೇಡಿ ಕೊಂಡರಷ್ಟೇ. ಎಥೆಲ್ಬೆರ್ತನು, ಅದು ವೇಲ್ಜ್ ಶೀಮೆಯ ಬಂಗೊರೆಂಬ ಸೌವಾರ್ತಿಕ ಕ್ರೈಸ್ತರದೊಂದು ಅಗ್ರಹಾರದಲ್ಲಿ ನೆರೆಯಲೆಂದು, ವಿಧಿಸಲಾಗಿ, ಔಗುಸ್ತೀನನು ವಿಲಂಬ ಮಾಡದೆ, ತನ್ನ ಪಕ್ಷಕರೊಂದಿಗೆ ಅಲ್ಲಿಗೆ ಬಂದನು. ಆ ಸೌವಾರ್ತಿಕರು ಮುಂಚಿತವಾಗಿ ತಮ್ಮವನೊಬ್ಬ ವೃದ್ಧ ಬೋಧಕನ ಹತ್ತರ ಹೋಗಿ, ಅವನ ಜ್ಞಾನಾಲೋಚನೆ ಕೇಳಿದರು; ಆಗಲಿವನು—ಔಗುಸ್ತೀನನು ದೇವಪುರುಷನಾಗಿದ್ದರೆ ಅವನಿಗೆ ಶೇರಿರಿ; ಅವನು ನಮ್ರತೆ ತೋರಿಸಿದರೆ, ಅಂಥವನೆಂತ, ತಿಳುಕೊಳ್ಳಿರಿ! ಎಂದು, ಉತ್ತರ ಕೊಟ್ಟನು. ಬಳಿಕ ಏಳ್ವರು ವೇಲ್ಜಿನ ಪೂರ್ವ ಸಭೆಯ ಅಧ್ಯಕ್ಷರೂ ಅನೇಕರಾದ ವಿದ್ಯಾವಂತ ಬೋಧಕರೂ ಪಪ್ಪಕರು ನೆರೆದು ಕೂತಿರುವ ಕೋಣೆಯೊಳಗೆ ಪ್ರವೇಶಿಸುವಾಗ ಔಗುಸ್ತೀನನು, ಅವನ ಸಂಗಡಲಿದ್ದ ಬೆನೆದಿಕ್ತೀನರ ಗುಂಪು ಸಹ, ಅವರಿಗೆ ವಂದಿಸಲಿಕ್ಕಾದರೂ ಏಳದ್ದು ಮಾತ್ರವಲ್ಲದೆ ಅವನು ಡಂಭಾಚಾರದ ಮಾತಿನಿಂದ—ಪಪ್ಪಕ ಆಚಾರಕ್ಕೆ ಒಳಗಾಗಿರಿ! ನಾ ನಿಮ್ಮ ಅಧ್ಯಕ್ಷನೆಂತ, ಒಪ್ಪಿ ಕೊಳ್ಳಿರಿ! ಎಂದು, ಒದರಲಿಕ್ಕೆ, ಅವರು ಆ ನರೆತ ಬೋಧಕನ ಬುದ್ಧಿಯ ಮಾತು ನೆನಸಿ, ಖಂಡಿತವಾಗಿ, ನಾವೊಲ್ಲೆವೆಂತ, ಹೇಳಿ ಬಿಟ್ಟು, ಹೀಗೆ ಸದ್ಯಕ್ಕೆ ಗೆದ್ದರು. ಆದರೆ ಕಾಲಗತಿಯಿಂದ ಪಪ್ಪಕರು ಇಂಗ್ಲಂದಿನಲ್ಲಿಯೂ ಸ್ಕೋತ್ಲಂದಿನಲ್ಲಿಯೂ ಐರ್ಲಂದಿನಲ್ಲಿಯೂ ಅಧಿಕಾರ ಹೊಂದುತ್ತಾ ಬರುವದರಿಂದ 8ನೇ ಕ್ರಿಸ್ತಶತಮಾನದ ಆರಂಭಕ್ಕೆ ಇಲ್ಲಲ್ಲಿಯ ಪೂರ್ವ ಸಭೆಗಳು ಹ್ಯಾಗೂ ಬಹಿರಕ್ಕೆ ಅವರಿಗನುವರ್ತಿಸ ಬೇಕಾಯಿತು. ಆದಾಗ್ಯೂ ಚಿಕ್ಕ ಅಂಶಗಳು ಕೆಲವು ಕಡೆಯಲ್ಲಿ ಹಾಗೆಯೇ ಉಳಿದವು; ಇವುಗಳೊಳಗೊಂದು ಬಾಳುತ್ತಿರುವಲ್ಲಿ ಕ್ರಿ. ಶ. 1324ನೇ ವರುಷಕ್ಕೆ ವಿಕ್ಲಿಫನು ಹುಟ್ಟಿದನು; ಕ್ರೈಸ್ತ ಸೌವಾರ್ತಿಕ ಸಭೆಯ ಪುನಃಸ್ಥಾಪಕರಲ್ಲಿ ಒಬ್ಬ ಯಶಸ್ಸುಳ್ಳ ಅಗ್ರಗಾಮಿಯಾದವನು ಇವನೇ.

ಆದರೆ ಔಗುಸ್ತೀನನು ಕ್ರಿ. ಶ. 605ನೇ ವರುಷಕ್ಕೆ ಸತ್ತ ಮೇಲೆ ಲೌರೆಂತಿಯನೆಂಬವನು ಕೆಂತು ರಾಷ್ಟ್ರದ ಮುಖ್ಯಾಧ್ಯಕ್ಷನಾದನು. ಅಷ್ಟರಲ್ಲಿ ಎಥೆಲ್ಬೆರ್ತನು ಸಹ ಮಡಿದು, ಎಡ್ಬಲ್ಡನೆಂಬ ಕುಮಾರನು ಉತ್ತರಾಧಿಕಾರಿಯಾಗಿದ್ದನು. ಇವನು ನೀಚಗುಣಿಯಾಗಿ, ತನ್ನ ತಂದೆಯ ವಿಧವೆಯನ್ನು ಇಟ್ಟು ಕೊಂಡು, ತಿರಿಗಿ ವಿಗ್ರಹಾರಾಧಕನಾದನು; ಮತ್ತೆ ಅವನ ಪ್ರಜೆಯಲ್ಲನೇಕರು ಕೂಡ ಮೂರ್ತಿಪೂ

ಜಾಧರ್ಮವನ್ನು ಮರಳಿ ಹಿಡು ಕೊಂಡರು. ಎಸ್ಸೆಕ್ಸೆಂಬ ನೆರೆರಾಷ್ಟ್ರದ ಪಪ್ಪಕ ಕ್ರೈಸ್ತನಾಗಿದ್ದಂಥ ರಾಜನು ಸಹ ಮೃತನಾದ ತರುವಾಯ ಅಡಿವೇ ಪಾಲಿನವರಾದಂಥ ಅವನ ಮೂವರು ಕುಮಾರರು ಅದೇ ದುರ್ಧರ್ಮಕ್ಕೆ ತಿರುಗಿ, ಅಲ್ಲಿಯ ಪಪ್ಪಕ ಬೋಧಕರನ್ನೋಡಿಸಲು, ಇವರು ಲೌರೆಂತಿಯನ ಬಳಿಗೆ ಬಂದು, ಅಲ್ಲಿಂದ ಫ್ರಂಕ ರಾಜ್ಯಕ್ಕೆ ಹೋದರು. ಅದೇ ಪ್ರಕಾರ ವೆಸ್ಸೆಕ್ಸಿನಲ್ಲಿ ಸಂಭವಿಸಿತು. ಆಗ ಲೌರೆಂತಿಯನು ಎದೆಯೊಡೆದು, ತಾನು ಆ ಬೋಧಕರ ಬೆನ್ನು ಹಿಡಿದು ಪಲಾಯನ ಮಾಡ ಬೇಕೆಂದು, ನಿಶ್ಚಯಿಸಿದ ದಿವಸದಲ್ಲಿ ಇನ್ನೊಮ್ಮೆ ಎದ್ಬಲ್ದನಿಗೆ ಅವನ ಮಹಾ ಪಾತಕಗಳಿಗೋಸ್ಕರ ಮಿಗೆ ಬೆದರಿಸಲಿಕ್ಕೆ, ಇವನು ಮಾನಸಾಂತರದವನಾಗಿ, ಕೆಂತು ರಾಷ್ಟ್ರದಲ್ಲಿ ಪಪ್ಪಕ ಕ್ರೈಸ್ತತ್ವವನ್ನು ಪುನಃಸ್ಥಾಪಿಸಿದನು. ತದನಂತರ ಕ್ರಿ. ಶ. 636ನೇ ವರುಷಕ್ಕೆ ನೊರ್ಥಂಬರ್ಲಂದಿನ ಒಸ್ವಲ್ದನೆಂಬ ರಾಜನ ಬಿನ್ನಹದ ಪ್ರಕಾರ ಸ್ಕೋತ್ಲಂದಿನಿಂದ ಬಂದ ಏಯಿದನನೆಂಬ ಸೌವಾರ್ತಿಕ ಬೋಧಕನ ಮೂಲಕ ಆ ವೇಳೆ ಪ್ರಧಾನ ರಾಷ್ಟ್ರವಾದಂಥ ನೊರ್ಥಂಬರ್ಲಂದಿನಲ್ಲಿ ಸೌವಾರ್ತಿಕ ಕ್ರೈಸ್ತತ್ವವು ನೆಲೆ ಗೊಂಡಂದಿನಿಂದ ಅದು ಅಡಿಗಡಿಗೆ ಇತರ ಅಂಗ್ಲ ಸಕ್ಸ ಎಲ್ಲ ರಾಷ್ಟ್ರಗಳ ಮೇಲೆ ವಿಸ್ತರಿಸಿ ಹೋಯಿತು. ತರುವಾಯ ಪಪ್ಪಕ ಸಭೋದ್ಯೋಗಿಯಾದ ವಿಲ್ಫ್ರೀದನೆಂಬವನೊಬ್ಬ ಠಕ್ಕು ಗುಣವುಳ್ಳ ಇಂಗ್ಲಿಷನ ಮುಖದಿಂದ ನೊರ್ಥಂಬರ್ಲಂದಿನ ಒಸ್ವಿನನೆಂಬ ರಾಜನು ಪ್ರೇರಿತನಾಗಿ, ಕ್ರಿ. ಶ. 664ನೇ ಅಬ್ದ[1] ಒಂದು ಸಭಾಸಂಘ ಕೂಡಿದಲ್ಲಿ, ದೇವರ ಕುಲದವರೆಂಬವರು ಪಪ್ಪನ ಅಧಿಕಾರಕ್ಕೊಳ ಬೀಳಬೇಕೆಂದು, ವಿಧಿಸಿ, ವಿಲ್ಫ್ರೀದನನ್ನು ತನ್ನ ರಾಜ್ಯದಲ್ಲಿ, ಅಧ್ಯಕ್ಷನೆಂದು, ನೇಮಿಸಿಟ್ಟನು.

ಅದಾದರೂ ಪಪ್ಪಕತ್ವವು ಬ್ರಿತನ್ನಿಯದ ಮೂಲಕ್ರೈಸ್ತರ ದೆಸೆಯಿಂದ ತನ್ನ ಪೂರ್ಣ ಅವಗುಣವನ್ನು ಮೆಲ್ಲ ಮೆಲ್ಲಗೆ ಮಾತ್ರ ತೋರಿಸ ಕೂಡಿತು; ದೇವವಾಕ್ಯವು ಪಪ್ಪಕ ಸಭೆಗಳೊಳಗೆ ಆರಂಭದಲ್ಲಿ ಪ್ರಬಲವಾಗಿದ್ದದ್ದು[2] ಸಹ ಅದಕ್ಕೆ ಬೀಜವು. ಆ ಸಭೆಗಳಲ್ಲೊಂದರಲ್ಲಿ ಕ್ರಿ. ಶ. 672ನೇ ವರುಷಕ್ಕೆ ದರ್ಹಮೆಂಬ ಪಟ್ಣದ ಹತ್ತರ ಬೀದನೆಂಬವನು ಜನಿಸಿದರು. ಇವನು ಒಂದು ಮಠದಲ್ಲಿ ಉಪದಿಷ್ಟನಾಗಿ, ತನ್ನ ಜೀವಿತದ 30ನೇ ವರುಷಕ್ಕೆ ಒಂದು ಸಭೆಯ ಹಿರಿಯನಾಗಿ, ಒಂದು ಸಭಾಚರಿತ್ರವನ್ನು ರಚಿಸಿದ್ದಲ್ಲದೆ ದೇವವಾಕ್ಯವನ್ನು ಅಂಗ್ಲ ಸಕ್ಸರ ಭಾಷಾಂತರ ಮಾಡಿದನು. ಇವನು ಪಪ್ಪಕನಾಗಿದ್ದರೂ ಆ ಚರಿತ್ರದಲ್ಲಿ ಸ್ವಶೀಮೆಯ ಸೌವಾರ್ತಿಕ ಸಭೆಗಳನ್ನೂ ಬೋಧಕರನ್ನೂ ಸಲೆ ಹೊಗಳಿ[3], ತನ್ನ ಕಾಲದ ಪಪ್ಪಕ ಸಭೆಗಳ ವಿಷಯ ದುಃಖ ಪಟ್ಟು ಬರೆದ್ದೇನಂದರೆ[4]—ಕರ್ತನ ಸಭೆ ಎಂಬ ಹಿಂಡು, ಅದರ ಪಾಲಕರೆಂ

1) 272ನೇ ಪಾನು. 2) 307ನೇ ಪಾನು. 3) 3, 3; 3, 4; 3, 5. 4) 1, 14.

ಬ ಬೋಧಕರು ಸಹ, ಕ್ರಿಸ್ತನ ಹಗುರಾದ ನೊಗವನ್ನು ಕೆಳಗೆ ಹಾಕಿ, ತಮ್ಮ ಕೊರಳನ್ನು ಮದ್ಯಕ್ಕೂ ಶಿಟ್ಟಿಗೂ ವಾದಕ್ಕೂ ಜಗಳಕ್ಕೂ ಹೊಟ್ಟೆಗಿಚ್ಚಿಗೂ ಮುಂತಾದ ಈ ತರದ ದುಷ್ಕರ್ಮಗಳಿಗೆ ಒಪ್ಪಿಸಿ ಕೊಟ್ಟು ನಡಿಯುತ್ತಾರೆ.—

## 40. ಗೆರ್ಮಾನಿಯದಲ್ಲಿ ವಿನ್ಫ್ರೀದನು ಸೌವಾರ್ತಿಕ ಮತ ಕಿತ್ತು ಪಪ್ಪಕತ್ವ ಸ್ಥಾಪಿಸಿದ್ದು.

ಗೆರ್ಮಾನಿಯದಲ್ಲಿ ಸುವಾರ್ತೆಯು ಬೇಗ ಶೇರಿದ್ದು ಹಿಂದೆ ಗೊತ್ತಾಯಿತು[1]. ಜನಾಂಗಸಂಚಾರವು[2] ತೊಡಗಲಾಗಿ ಇತ್ತತ್ತ ತಿರುಗುತ್ತಿರುವಂಥ ಗೆರ್ಮಾನ ಗೋತ್ರಗಳಾದ ಗೊಥರಲ್ಲಿ, ವಂದಲರಲ್ಲಿ, ಸ್ವೇವರದೊಂದು ಭಾಗದಲ್ಲಿ, ಲೊಂಗೊಬರ್ದರಲ್ಲಿ, ಬುರ್ಗುಂದರಲ್ಲಿ ಕ್ರೈಸ್ತ ಮತವು ತಾರತಮ್ಯಾನುಗುಣವಾಗಿ ಹೊಕ್ಕಿತು[3]; ಆ ಮೇಲೆ ಅದು ಫ್ರಂಕರಲ್ಲಿ ನೆಲೆಗೊಂಡಿತು[4]. ಸುಮಾರು ಕ್ರಿ. ಶ. 500ನೇ ವರುಷದಾರಭ್ಯ ಐರ್ಲಂದಿನ ದೇವರ ಕುಲದವರೆಂಬವರು ಗೆರ್ಮಾನಿಯದೊಳಗಿನ ಅಲೆಮನ್ನ, ಫ್ರಂಕ, ಬೈಯೆರ, ಹೆಸ್ಸ, ಫ್ರೀಸ ಮುಂತಾದ ಜನರಿಗೆ ಸುವಾರ್ತೆ ಸಾರಲಿಕ್ಕೆ ಹತ್ತಿದರು[5]; 130 ಅಬ್ದಕ್ಕೀಚೆ ಕೆಲವರು ಫ್ರಂಕ ಸಭಾಧ್ಯಕ್ಷರು ಸಹ ತಮ್ಮ ರಾಜರಿಗೆ ಗೆರ್ಮಾನಿಯದಲ್ಲಿ ವಶರಾದವರಿಗೆ, ಮುಖ್ಯವಾಗಿ ಬೈಯೆರ್ನಿನಲ್ಲಿ ಮತ್ತು ಔಸ್ತ್ರಿಯದಲ್ಲಿರುವವರಿಗೆ, ಕ್ರೈಸ್ತತ್ವ ಸಂಪಾದಿಸಿ ಕೊಡಲಿಕ್ಕೆ ಸ್ವಲ್ಪ ಚಿಂತಿಸುವವರಾದರು. ಆದಾಗ್ಯೂ ಹೆಚ್ಚಾಗಿ ಸಕ್ಸರಲ್ಲಿಯೂ ಫ್ರೀಸರಲ್ಲಿಯೂ 8ನೇ ಕ್ರಿಸ್ತಶತಮಾನಕ್ಕೆ ಇನ್ನೂ ಹೇರಳ ಮಂದಿ ವಿಗ್ರಹಾರಾಧಕರು ಉಳಿದಿದ್ದರು. ನೀವು ಹಿಂದೆ ಪಠಿಸಿರುವಂತೆ[6] ಕ್ರಿ. ಶ. 690ನೇ ವರುಷ ವಿಲಿಬ್ರೊರ್ದನು ಐರ್ಲಂದಿನಿಂದ ಫ್ರೀಸರ ದೇಶವಾದ ಫ್ರೀಸಿಯಕ್ಕೆ ಬಂದು, ಫ್ರಂಕ ಸಾಮ್ರಾಜ್ಯದ ಪ್ರಧಾನ ಮಂತ್ರಿಯಾದ ಪಿಪ್ಪೀನನೆಂಬ ಕರ್ಲ ಮರ್ತೆಲ್ಲನ ತಂದೆಯು[7] ಸಾಧಿಸಿ ಕೊಂಡ ಫ್ರೀಸಿಯದ ಪಶ್ಚಿಮ ಭಾಗದಲ್ಲಿ 6 ವರುಷ ಬಹಳ ಆಶೀರ್ವಾದದೊಡನೆ ಸುವಾರ್ತಾಪ್ರಸಂಗ ಗೈಯುತ್ತಿದ್ದನಂತರ, ಆ ದೇಶದ ಪರಾಜಿತವಾದ ಭಾಗದಲ್ಲಿಯೂ ತಾನು ವೃತ್ತಿ ನಡಿಸ ಬೇಕೆಂತ, ಕಾಂಕ್ಷಿಸಿ, ಪಿಪ್ಪೀನನ ಹತ್ತರ, ಅಲ್ಲಿಯ ರಾಜನಾದ ರದ್ಬೊದನಿಗೆ ತೋರಿಸಲಿಕ್ಕೆ ತನಗೊಂದು ರಾಜಶಾಸನ ದಯೆ ಪಾಲಿಸಿರೆಂತ, ಬಿನ್ನವಿಸಿದನು. ಇವನು, ಅದೇ ಹೆಸರಿನ ತನ್ನ ಮೊಮ್ಮಗನಂತೆ[8], ಫ್ರಂಕ ಸಾಮ್ರಾಜ್ಯದ ಅರಸುತ

1) 88ನೇ ಪಾನು. 2) 201ನೇ ಪಾನು. 3) 88ನೇ ಪಾನು; 189, 201, 204ನೇ ಪಾನುಗಳು. 4) 27ನೇ ಸಂಧಿ. 5) 303ನೇದಾದಿ ಪಾನು. 6) 305ನೇ ಪಾನು. 7) 282, 296ನೇ ಪಾನುಗಳು. 8) 283ನೇ ಪಾನು.

ನದ ಆಶೆ ತಾಳಿ, ಅದರಿಂದ ತಾನು ಪಪ್ಪರಿಗೆ ಮೆಚ್ಚಿಸ ಬೇಕೆಂತ, ಆಲೋಚಿಸಿ ಕೊಂಡು, ವಿಲಿಬ್ರೊರ್ಡನಿಗೆ— ನೀನು ರೋಮಕ್ಕೆ ಹೋಗಿ, ಪಪ್ಪನಿಂದ ನಿನಗೆ ಅಧ್ಯಕ್ಷಪ್ರತಿಷ್ಠೆ ದೊರಕಿಸಿ ಕೊಂಡರೆ ಆದೀತೆಂತ, ಅಪ್ಪಣೆ ಕೊಟ್ಟನು. ಆ ಸೌವಾರ್ತಿಕ ಬೋಧಕನು ಅತಿರೇಕ ದುಃಖಗೊಂಡರೂ, ಸುವಾರ್ತಾವಿಸ್ತರಣಕ್ಕೆ ಈ ವಿಷಯದಿಂದ ಏನೂ ಅಭ್ಯಂತರವಾಗದಿರಲೆಂತ, ತನ್ನೊಳು ವ್ಯವಸ್ಥೆ ಮಾಡಿ, ರೋಮದಲ್ಲಿ ಆಗ ಪಪ್ಪನಾಗಿರುವ 1ನೇ ಸೆರ್ಗಿಯನೆಂಬವನ ಕೂಡೆ ಹೋಗಿ, ಫ್ರೀಸಿಯದ ಮೇಲಣ ಅಧ್ಯಕ್ಷತೆಯನ್ನು ಅವನಿಂದ ಪಡ ಕೊಂಡನು. ಅಷ್ಟರಲ್ಲಿ ವಿಲಿಬ್ರೊರ್ಡನ ಸಹಾಯಕರು ರದ್ಬೊದ ರಾಯನ ಸ್ವತಂತ್ರದಲ್ಲಿರುವ ಫ್ರೀಸಿಯದ ಪೂರ್ವ ಭಾಗದೊಳಗೆ ಸಹ ಕ್ರೈಸ್ತತ್ವ ನೆಡುವ ಪ್ರಯತ್ನವನ್ನಾರಂಭಿಸಿದ್ದರು. ರದ್ಬೊದನೂ ಮೊದಲು ಮಿತ್ರನಾಗಿ, ಆ ಮೇಲೆ, ಹಿಂದೆ ಹೇಳಿರುವಂತೆ, ಸ್ನಾನವಲ್ಲಗಳೆದು, ತಿರಿಗಿ ಮತಿಗೆಡಲು, ಅವನೊಳಗಿನ ಪ್ರಜೆಯು ಸಹ ಅದೇ ಪಾಲಿಗೆ ಬಂತು.

ಕ್ರಿ. ಶ. ಆ 696ನೇ ಅಬ್ದಕ್ಕೆ ಇಂಗ್ಲಂದಿನ ವೆಸ್ಸೆಕ್ಸ[1] ಎಂಬ ರಾಷ್ಟ್ರದ ದೆವನ್ಶೀರ್ ಎಂಬ ನಾಡಿನಲ್ಲಿ ಪಪ್ಪಕ ಕ್ರೈಸ್ತತ್ವದ ಒಬ್ಬ ಆಢ್ಯನಿಗೆ 16 ವರುಷದವನೊಬ್ಬ ಕುಮಾರನಿದ್ದನು; ಇವನ ಹೆಸರು ವಿನ್ಫ್ರೀದನು. ಇವನು ಬೆನೆದಿಕ್ತೀನರ 2 ಮಠಗಳಲ್ಲಿ ಅಭ್ಯಾಸಿಸಿ, ತನ್ನ ಜೀವಿಕೆಯ 30ನೇ ವರುಷದಲ್ಲಿ ಬೋಧಕಪ್ರತಿಷ್ಠೆ ಹೊಂದಿದನು. ತಾನು ತನ್ನ ವಂಶಸ್ಥರಾದ ಅಂಗ್ಲ ಸಕ್ಸರ ಮೂಲದೇಶವಾದ ಗೆರ್ಮಾನಿಯಕ್ಕೆ ಹೋಗಿ, ಅಲ್ಲಿ ತನ್ನ ತರದ ಕ್ರೈಸ್ತತ್ವವನ್ನೂರ ಬೇಕೆಂದು, ಯಾವಾಗಲೂ ಅಭಿಲಷಿಸುತ್ತಿದ್ದು, ಕ್ರಿ. ಶ. 715ನೇ ಅಬ್ದ ತನ್ನ ದೇಶದವನಾದ ಆ ವಿಲಿಬ್ರೊರ್ಡನ ಸಹಾಯಕನಾಗುವದಕ್ಕೆ ಫ್ರೀಸಿಯಕ್ಕೆ ಗಮಿಸಿದನು. ವಿಲಿಬ್ರೊರ್ಡನು ಪಿಪ್ಪೀನನ ನಿರ್ದೇಶದ ಮೇಲೆ ತನ್ನ ಅಧ್ಯಕ್ಷತಾಸ್ಥಳ ಮಾಡಿದ್ದ ಫ್ರೀಸಿಯದ ಊತ್ರೆಖ್ತು ಪಟ್ಣವನ್ನು ಆಗ ಬಿಟ್ಟು ಹೋಗಿದ್ದನು; ಯಾಕಂದರೆ ರದ್ಬೊದನು ಕರ್ಲ ಮರ್ತೆಲ್ಲನ ಸಂಗಡ ಯುದ್ಧಕಾರಿಯಾಗಿ, ಅವನನ್ನು ಗೆದ್ದು, ತನಗಿದ್ದ ದೇಶವನ್ನೆಲ್ಲಾ ತಿರಿಗಿ ತೆಕ್ಕೊಂಡು, ಕರ್ಲ ಮರ್ತೆಲ್ಲನ ಕೆಳಗೆ ಅಲ್ಲಿದ್ದ ಕ್ರೈಸ್ತರು ಸಹ ತನಗೆ ಅಮಿತ್ರರೆಂದೆಣಿಸಿ, ಜಯರೋಷದಲ್ಲಿ ಹೇರಳ ಕ್ರೈಸ್ತ ನೆಲೆಗಳನ್ನು ನಶಿಸಿದ್ದನು. ಹೀಗಿರಲಿಕ್ಕೆ ವಿನ್ಫ್ರೀದನು ಕ್ರಿ. ಶ. 717ನೇ ಅಬ್ದದಲ್ಲಿ ಇಂಗ್ಲಂದಿಗೆ ಮರಳಿದನು. ಆದರೆ ಮರುವರುಷ ಅದೇ ಪ್ರಯತ್ನ ನಡಿಸಲಿಕ್ಕೆ ಮುಂಗೊಂಡು, ಹೊರಟು, ಈ ಸರ್ತಿ ಮೊದಲು ರೋಮಕ್ಕೆ ಹೋಗಿ, ಅಂದಿನ 2ನೇ ಗ್ರೆಗೋರ ಪಪ್ಪನ ಬಳಿಯಲ್ಲಿ ಒಂದು ರಾಯಸವನ್ನು ಬೇಡಿದನು. ಇವನು ಅವನನ್ನು ಪ್ರೀತಿಯಿಂದ ಮನ್ನಿಸಿ, ಸರ್ವ ವಿಗ್ರಹಾರಾಧಕರಾದಂಥ ಗೆರ್ಮಾನರಲ್ಲಿ ಪಪ್ಪನ ಆಜ್ಞೆಗಳ ಪ್ರಕಾರವೇ ಕ್ರೈಸ್ತ ಮತ ಹಬ್ಬಿಸ ಬಹುದೆಂ

1) 307ನೇ, 309ನೇ ಪಾನುಗಳು. 2) 424ನೇ ಪಾನು.

ಬ ಪತ್ರ ಕೊಟ್ಟು, ಬೊನಿಫಕಿಯನು ಅಂದರೆ ಉಪಕಾರಿ ಎಂತ, ಹೆಸರಿಕ್ಕಿ, ಪ್ರೇಷಿಸಿದನು.

ವಿನ್ಫ್ರೀದನು ಪ್ರಥಮದಲ್ಲಿ ಥೂರಿಂಗೆನು ಶೀಮೆಗೆ[1] ಹೋದನು. ಅಲ್ಲಿ ಕ್ರಿಸ್ತನ ಹೆಸರು 5ನೇ ಶತಮಾನದಾರಭ್ಯ ತಿಳಿದು ಬಂದಿತ್ತು; ಅದಕ್ಕೀಚೆ ಐರ್ಲಂದಿನವರು ಅಲ್ಲಿ ಹೇರಳ ಸಭೆಗಳನ್ನು ನೆಟ್ಟಿದ್ದರು; ಇವು ವಿಲಿಬ್ರೊರ್ದನ ಪರಿಪಾಲನದೊಳಗೆ ಅರಳುತ್ತಿದ್ದವು. ವಿನ್ಫ್ರೀದನು ಅಲ್ಲಿ ತನ್ನ ಪಪ್ಪಕತ್ವಕ್ಕೋಸ್ಕರ ಯಾರಿಂದಲೂ ಅಂಗೀಕೃತನಾಗದೆ, ಕೆಲವು ದಿವಸ ಮಾತ್ರ ತಡೆದನು. ತನ್ಮಧ್ಯ ರದ್ಬೊದನು ಸತ್ತು, ಫ್ರೀಸಿಯವು ಪುನಃ ಕರ್ಲ ಮರ್ತೆಲ್ಲನದಾದ ಕಾರಣ ಅವನು ಅಲ್ಲಿಗೆ ಮುಂದರಿಸಿ, ಊತ್ರೆಖ್ತು ಪಟ್ಣಕ್ಕೆ ತಿರಿಗಿದ ಆ ಮುದುಕನಾದ ವಿಲಿಬ್ರೊರ್ದನನ್ನು, ತಾನು ಪಪ್ಪಕನೆಂದು, ನಿವೇದಿಸದೆ, ಶೇರಿ ಕೊಂಡನು. ಕ್ರಿ. ಶ. 720ನೇ ವರುಷದಿಂದ 723ನೇದರ ವರೆಗೆ ಅವರಿಬ್ಬರು ಕರ್ಲ ಮರ್ತೆಲ್ಲನ ಆಶ್ರಯದೊಳಗೆ ವೃತ್ತಿ ಮಾಡುತ್ತಿದ್ದ ತರುವಾಯ ವಿಲಿಬ್ರೊರ್ದನು ತನ್ನ ಸಂಗಡಿಗನ ಮೇಲೆ ಬಹಳ ನಂಬಿಕೆ ಹಿಡಿದು, ತನ್ನ ಬದಲಿನವನಾಗೆಂತ, ಹೇಳಲು, ಇವನು—ಅದಾಗಲಿಕ್ಕಿಲ್ಲ! ತಾನು ಪಪ್ಪನ ಸೇವಕನು; ಪಪ್ಪನ ಕೈಯಿಂದಲೇ ಅಧ್ಯಕ್ಷತೆ ತನಗೆ ಪ್ರಾಪಿಸ ಬೇಕೆಂಬಂತೆ ಚರ್ಚಿಸಲಿಕ್ಕೆ, ಸೌವಾರ್ತಿಕನಾದ ವಿಲಿಬ್ರೊರ್ದನು, ಹಾಗಾದರೆ ದಯೆ ಮಾಡೆಂತ, ಅವನನ್ನು ಕಳುಹಿಸಿ ಬಿಟ್ಟನು. ಬಳಿಕ ವಿನ್ಫ್ರೀದನು ಕೆಲವು ಸಂಗಡಿಗರನ್ನು ಕರಕೊಂಡು, ಹೆಸ್ಸರ ಶೀಮೆಗೆ ಹೋದನು. ಅಲ್ಲಿ 4ನೇ ಶತಮಾನದಲ್ಲಿಯೂ ಕ್ರಿಸ್ತನ ಸುವಾರ್ತೆ ಪ್ರಸಂಗಿಸಿತ್ತು; ವಿನ್ಫ್ರೀದನು ಅಲ್ಲಿಗೆ ಬರುವಾಗ ದೇವರ ಕುಲದವರೆಂಬವರು[2] ಅಲ್ಲಿ ಉಳಿದಿರುವ ವಿಗ್ರಹಾರಾಧಕರಿಗೆ ಸುವಾರ್ತೆ ತಿಳಿಸುತ್ತಿದ್ದರು. ಆಗಲವನು ವಿಲಿಬ್ರೊರ್ದನ ಅಪ್ಪಣೆ ಎಂಬಂತೆ ನುಡಿದು, ಅವರನ್ನು ಪಪ್ಪಕತ್ವಕ್ಕೆಳೆದು, ಅವರ ಮೂಲಕ ಕ್ರಿಸ್ತನ ವಿಶ್ವಾಸಿಗಳಾದ ಹಲವು ಸಾವಿರ ಮಂದಿ ಹೆಸ್ಸರಿಗೆ ಪರಿಶುದ್ಧ ಸ್ನಾನವಿತ್ತು, ಗೆರ್ಮಾನಿಯದಲ್ಲಿ ಮೊದಲಿನ ತನ್ನ ಅಮನಬುರ್ಗವೆಂಬ ಬೆನೆದಿಕ್ತೀನ ಮಠವನ್ನು ಅಲ್ಲಿ ಕಟ್ಟಿದನು.

ತರುವಾಯ ಅವನು 2ನೇ ಗ್ರೆಗೋರ ಪಪ್ಪನಿಗೆ ತನ್ನ ವೃತ್ತಿಯ ಸಮಾಚಾರವನ್ನು ಚನ್ನಾಗಿ ಬಣ್ಣಿಸಿ ತಿಳಿಸಲು, ಇವನು, ತನ್ನ ಹತ್ತರದ ಸಂಭಾಷಣೆಗಾಗಿ ರೋಮಕ್ಕೆ ಬರ ಬೇಕೆಂತ, ಆಜ್ಞಾಪಿಸಿದ್ದಕ್ಕೆ ಅವನು 2ನೇ ಸಾರಿ ಅಲ್ಲಿಗೆ ಹೋಗಿ, ಅವನಿಂದ ಅಧ್ಯಕ್ಷತೋದ್ಯೋಗ ಹೊಂದಿದ್ದು ಹೊರ್ತಾಗಿ—ಪಪ್ಪಕರ ವಿಶ್ವಾಸಾರ್ಥದಲ್ಲಿಯೂ ರೋಮುಕ ಸಭೆಗಳ ಆಚಾರದಲ್ಲಿಯೂ ತಾನು ನಿತ್ಯ ನೆಲೆ ಗೊಂಡಿದ್ದು, ತನ್ನಿಂದುದ್ಭವಿಸಿದ ಸಕಲ ಹೊಸ ಸಭೆಗಳನ್ನೂ (?) ಅವುಗಳ ಬೋಧಕಾದಿ

1) 303ನೇ ಪಾನು. 2) 305, 310ನೇ ಪಾನು.

ಉದ್ಯೋಗಿಗಳನ್ನೂ ಪಪ್ಪನ ಅಧಿಕಾರಕ್ಕೊಳ ಪಡಿಸುವೆನೆಂತ, ಆಣೆ ಇಟ್ಟು ಮಾತು ಕೊಟ್ಟು, ಕರ್ಲ ಮರ್ತೆಲ್ಲ ಮುಂತಾದ ರಾಜರಿಗೂ ಥೂರಿಂಗೆನಿನ ಪ್ರಜೆಗೂ ತೋರಿಸಲಿಕ್ಕೆ ಅನೇಕ ರಾಯಸಗಳನ್ನು ಪಪ್ಪನಿಂದ ಬರೆಸಿ ಕೊಂಡು, ಕ್ರಿ. ಶ. 724ನೇ ವರುಷ ಗೆರ್ಮಾನಿಯಕ್ಕೆ ಮರಳಿ ಬಂದನು.

ಆಗಲವನು ಮೊದಲು ಕರ್ಲ ಮರ್ತೆಲ್ಲನ ಸನ್ನಿಧಿಗೆ ಹೋಗಿ, ಅವನ ಕೈಯಿಂದ ಫ್ರಂಕ ಸಾಮ್ರಾಜ್ಯದೊಳಗಿನ ಸಕಲ ಅಧಿಕಾರಸ್ಥರನ್ನೂ ಬೋಧಕರನ್ನೂ ಕುರಿತ ರಾಜಶಾಸನಗಳನ್ನು ಹೊಂದಿ, ಇಂಗ್ಲಂದಿನಿಂದ ದೇವವಾಕ್ಯದ ಹಲವು ಪ್ರತಿಗಳನ್ನು ಸಭೆಗಳ ಹಿತಕ್ಕಾಗಿ ತರಿಸಿ, ಹೆಸ್ಸೆನಿಗೂ ಥೂರಿಂಗೆನಿಗೂ ಮುಂದರಿಸಿ, ಒಮ್ಮೆ ಹೆಸ್ಸೆನಿನ ಮೂರ್ತಿಪೂಜಕರಿಗೆ ಕ್ರೈಸ್ತತ್ವದ ದಿವ್ಯತೆಯನ್ನೂ ಮೂರ್ತಿಪೂಜೆಯ ಅಸಹ್ಯತೆಯನ್ನೂ ವರ್ಣಿಸುವಾಗ ಸಮಿಾಪದಲ್ಲಿ ಹಳೇದೊಂದು ಮಹಾ ದ್ರುಮವಿತ್ತು. ಅದು ಥೊನರನು (ತನಯಿತ್ನು) ಎಂಬ ಗುಡುಗುದೇವತೆಗೆ ಬಿಟ್ಟಿತ್ತು; ದೂರಾದೂರದ ಅಜ್ಞಾನಿಗಳು, ಸಾವಿರಾರು ಮಂದಿಯೊಟ್ಟುಗೂಡಿ, ಅಲ್ಲಿಗೆ ಬಂದು ನೆರೆದು, ಯಾಗಗಳನ್ನು ಮಾಡುತ್ತಿರುವರು. ಬೊನಿಫಕಿಯನು, ಅದು ಆ ದಿಕ್ಕಿನ ವಿಗ್ರಹಾರಾಧನೆಯ ಮುಖ್ಯ ಸ್ತಂಭವೆಂತ, ತಿಳಿದು, ತನ್ನ ಸುತ್ತಲು ನಿಂತಿರುವ ದೊಡ್ಡ ಪ್ರಜಾಸಮೂಹವನ್ನು ಆ ದ್ರುಮದ ಬುಡಕ್ಕೆ ಕರ ತಂದು—ನಿಮ್ಮ ದೇವತೆಗಳು ಏನೂ ಅಲ್ಲದವರೆಂತ, ಈ ಮರ ನಶಿಸಿ ಪ್ರಮಾಣಿಸುವೆನೆಂದು, ಹೇಳಿ, ಹತ್ತಿರದಲ್ಲಿದ್ದ ಕೆಲವರು ಹೊಸಬರಾದ ಕ್ರೈಸ್ತರಿಗೆ ಅದನ್ನು ಕಡಿಯಲಾಜ್ಞಾಪಿಸಲು, ಇವರು, ಆ ಥೊನರನು ತನ್ನ ವಜ್ರದಿಂದ ತಮ್ಮನ್ನು ಕೊಂದಾನೆಂತ, ಧೈರ್ಯ ಗುಂದಿರಲು, ವಿನ್ಫ್ರೀದನು ತಾನು ಕೊಡಲಿ ಹಿಡಿದು, ಆ ಮರ ಕಡಿಯಲಿಕ್ಕೆ ಹತ್ತಿದನು. ಆಗ ಆ ಕಡಿಯೋಣದ ಶಬ್ದವು ಆ ವನದಲ್ಲಿ ಘನವಾಗಿ ಕೇಳಿಸುತ್ತಿರುವೆಡೆ ಆ ಪ್ರಜೆಯು ಮೌನವಾಗಿ, ಶಿಡಿಲು ಬೀಳುವದಿಲ್ಲವೋ? ಎಂದು, ಭಯಾಭೀತವಾಗಿ, ಒಮ್ಮೆ ಆ ಪ್ರಸಂಗಿಕನ ಮೇಲೆ ಮತ್ತೊಮ್ಮೆ ಆಕಾಶದ ಮೇಲೆ ದೃಷ್ಟಿ ಚಲಿಸುತ್ತಲಿರಲು, ಬೊನಿಫಕಿಯನು, ತನಗೆ ಯಾರೂ ಅಡ್ಡಿ ಮಾಡುವದಿಲ್ಲವೆಂತ, ಸಂತೋಷಪಟ್ಟು, ಹೆಚ್ಚುತ್ತಿರುವ ಧಾವತಿಯಿಂದ ಕಡೆಯುತ್ತಾ ಬಂದ ಕಡೆಯಲ್ಲಿ ಆ ಮರವು ಮಹಾ ರವದಿಂದುರುಳಿ ಬಿತ್ತು. ಆ ಪ್ರಸಂಗಿಕನು ಸ್ವಸ್ಥನಾಗಿ ನಿಂತಿದ್ದನು. ಆ ಕ್ಷಣ ಆ ವಿಗ್ರಹಾರಾಧಕರು ತಮ್ಮ ದೇವತೆಗಳ ನೈರರ್ಥ್ಯವನ್ನು ಗ್ರಹಿಸಿ, ಅನೇಕರಾಗಿ ಕ್ರೈಸ್ತ ದೇವರ ಹೆಸರಿನಲ್ಲಿ ಸ್ನಾನ ತೆಗೆದು ಕೊಂಡರು.

ಅದೇ ಯುಕ್ತಿ ಧೈರ್ಯಗಳೊಡನೆ ಬೊನಿಫಕಿಯನು ಹೆಸ್ಸೆನಲ್ಲಿಯೂ ಥೂರಿಂಗೆನಲ್ಲಿಯೂ ಬೇರೆ ಬಹಳ ಮೂರ್ತಿಸ್ಥಾನಗಳನ್ನು ಕೆಡಿಸಿ, ಕರ್ಲ ಮರ್ತೆಲ್ಲನ ಸಹಾಯದಿಂದ ಅಲ್ಲಲ್ಲಿಯ ಸೌವಾರ್ತಿಕ ಸದ್ಭಕ್ತರ ಬಲ ಕಿತ್ತು, ಇವರು ಥೂರಿಂಗೆನಲ್ಲಿ,

ಕ್ರೈಸ್ತತ್ವದ ಆಧಾರಗಳೂ ಪ್ರಜೆಯ ವಿವಿಧೋಪದೇಶಸ್ಥಾನಗಳೂ ಎಂದು, ಕಟ್ಟಿದ್ದ ಶಾಲೆಗಳನ್ನೂ ದೇವಾಲಯಗಳನ್ನೂ ತಾನು ಇಂಗ್ಲಂದಿನಿಂದ ಕರೆಸಿದ ಬೆನೆದಿಕ್ತೀನ ಮಠಿಕರಿಗೊಪ್ಪಿಸಿದನು.

ಕ್ರಿ. ಶ. 731ನೇ ವರುಷಕ್ಕೆ 2ನೇ ಗ್ರೆಗೋರನು ಸತ್ತು, 3ನೇ ಗ್ರೆಗೋರನು ಪಪ್ಪನಾದ ಮೇಲೆ ಬೊನಿಫಕಿಯನು ತನ್ನ ಕೆಲಸದ ಸುದ್ದಿಯನ್ನೆಲ್ಲ ಅವನಿಗೆ ಬರೆದರಿಸಿ, ತಾನು ಅವನಿಗೆ ಬಹು ನಂಬಿಕೆಯಾಗಿ ನಡಕೊಳ್ಳುವೆನೆಂದು, ವಚನವಿತ್ತನು. ಅದರ ತುಸಕ ಗ್ರೆಗೋರನು ಅವನನ್ನು ಕೊಂಡಾಡಿ, ಪುಣ್ಯಕ್ಕೆ ಸಂಬಳವೆಂದು, ಅವನಿಗೆ ಪ್ರಧಾನಾಧ್ಯಕ್ಷತೆಯನ್ನೂ ಪಪ್ಪನ ಪ್ರತಿನಿಧಿಯಾಗಿ ಮನಸ್ಸು ಬಂದಂತೆ ಅಧ್ಯಕ್ಷರನ್ನು ಮಾಡುವ ಅಧಿಕಾರವನ್ನೂ ಕೊಟ್ಟು, ಇದಕ್ಕೆ ತಕ್ಕ ಅಂಗಿಯಾದ ಪಲ್ಲಿಯವೆಂಬದನ್ನು ಸಹ ಪ್ರೀತಿಯಿಂದ ಕಳುಹಿಸಿದನು. ತದನಂತರ ಬೊನಿಫಕಿಯನು ಹಲವು ಮಠ ದೇವಾಲಯಗಳನ್ನೂ ಅಧ್ಯಕ್ಷತಾಸ್ಥಳಗಳನ್ನೂ ನಿರ್ಮಿಸಿ, ಕ್ರಿ. ಶ. 738ನೇ ವರುಷಕ್ಕೆ 3ನೇ ಸಾರಿ ರೋಮಕ್ಕೆ ಹೋಗಿ, ಅಲ್ಲಿ 1 ವರುಷ ತಡೆದು, ಕೆಲವು ಹೊಸ ರಾಯಸಗಳನ್ನು ಪಡೆದು, ಮೊದಲು ಬೈಯೆರ್ನ್ರ ಶೀಮೆಗೆ[1] ಬಂದು, ಅಲ್ಲಿ ವಿರಾಜಿಸುತ್ತಿರುವ ಸೌವಾರ್ತಿಕ ಸಭೆಗಳನ್ನು ಬಾಧಿಸಲೆಸಗಿ, 4 ಮುಖ್ಯವಾದ ಪಪ್ಪಕ ಅಧ್ಯಕ್ಷತಾಸ್ಥಾನಗಳನ್ನು ಹುಟ್ಟಿಸಿದನು.

ಕ್ರಿ. ಶ. 741ನೇ ವರುಷ ಕರ್ಲ ಮರ್ತೆಲ್ಲನು ಮಡಿದಂದು ಕರ್ಲ್ಮನ್ನನು ಗಿಡ್ಡ ಪಿಪ್ಪೀನನು ಎಂಬವರಿಬ್ಬರು ಕುಮಾರರು ಉತ್ತರೋದ್ಯೋಗಿಗಳಾಗಿ, ವಿನ್ಫ್ರೀದನಿಗೆ ಹೆಚ್ಚಾದ ಆಶ್ರಯ ಕೊಡುವವರಾದರು. ಇವನ ಮತ್ತು ಅಂದಿನ ಪಪ್ಪನಾದ ಜಕರೀಯನ[2] ಸಲಹೆಯಿಂದ ಅವರು ಬೈಯೆರ್ನಿನ ಕ್ರೈಸ್ತರಿಗೆ ಬಹು ಹಿಂಸಿಸಿ, ಅವರನ್ನು ಹೊರಬಳಿಗೆ ಪಪ್ಪಕರಾಗ ನಡಿಸಿದ್ದನ್ನು ವಿವರಿಸುವದು ಪ್ರಯೋಜನಕರವಲ್ಲ. ಆದರೆ ಅಷ್ಟರಲ್ಲಿ ವಿನ್ಫ್ರೀದನು ಬೈಯೆರ ಜನರಿಗಂಜಿ, ಹೋಗಿ, ನಿಜ ಫ್ರಂಕ ರಾಜ್ಯದೊಳಗಿನ ಸೌವಾರ್ತಿಕ ಮತವನ್ನು[3] ನಿರ್ಮೂಲಿಸ ನೋಡಿದನು.

ಕ್ರಿ. ಶ. 745ನೇ ಅಬ್ದಕ್ಕೆ ಅವನು ಗೆರ್ಮಾನಿಯಕ್ಕೆ ಹಿಂದಿರುಗಿ, ಮೈಂತ್ಸ ಪಟ್ಟದ ಸೌವಾರ್ತಿಕ ಅಧ್ಯಕ್ಷನ ಉದ್ಯೋಗ ತೆಗೆದು, ಪಿಪ್ಪೀನನ ಮತ್ತು ಜಕರೀಯ ಪಪ್ಪನ ಅಪ್ಪಣೆಯ ಮೇರೆಗೆ ಆ ಪಟ್ಣವನ್ನು, ಮುಖ್ಯ ಅಧ್ಯಕ್ಷತಾಸ್ಥಳವೆಂದು, ನೇಮಿಸಿ, ತಾನು ಅಲ್ಲಿ ಪ್ರಧಾನಾಧ್ಯಕ್ಷನಾಗಿರುವಲ್ಲಿ 14 ಉಪಾಧ್ಯಕ್ಷಸ್ಥಳಗಳನ್ನು ನೋಡುವವನಾದನು. 7 ವರುಷದಿತ್ತ ಕಡೆ ಅವನು ಪಿಪ್ಪೀನನಿಗೆ ಅಲ್ಲಿ ಫ್ರಂಕ ರಾಜ್ಯದ ಮೇಲೆ ಪಟ್ಟಾಭಿಷೇಕ ಮಾಡಿದನೆಂತ, ಹಿಂದೆ ತಿಳಿಸಲಾಯಿತಲ್ಲವೇ[4]?

---

1) 305, 310ನೇ ಪಾನುಗಳು. 2) 283ನೇ ಪಾನು. 3) 302, 304, 305, 306, 307, 308, 310, 312ನೇ ಪಾನು ಸರಿ ನೋಡು. 4) 283, 304ನೇ ಪಾನು.

ಅವನು 73 ವರುಷದ ಮುದುಕನಾಗಿ, ಪ್ರಧಾನಾಧ್ಯಕ್ಷತೆಯನ್ನು, ಪಿಪ್ಪೀನ ನ ಮತ್ತು ಪಪ್ಪನಾಜ್ಞೆ ಬೇಡಿ, ಲುಲ್ಲನೆಂಬ ತನ್ನ ಗೆಳೆಯರಲ್ಲೊಬ್ಬನಿಗೆ ಕೊಟ್ಟು, ಇನ್ನೊಮ್ಮೆ ಅಧ್ಯಕ್ಷವ್ಯವಹಾರಕ್ಕೋಸ್ಕರ ಫ್ರೀಸರ ಶೀಮೆಗೆ ಹೋದನು. ಆ ಕೀರ್ತ್ಯ್ ವಿಲಿಬ್ರೋರ್ದನು ಅಲ್ಲಿ ತೀರಿ 15 ವರುಷ ಕಳೆದಿದ್ದವು. ಬೊನಿಫಕಿಯನು ತನ್ನ ಪಪ್ಪಕ ಸಂಗಾತಿಗಳಲ್ಲಿ ಕೆಲವರನ್ನು, ಬೋಧಕರೆಂತ, ಅಲ್ಲಲ್ಲಿಟ್ಟು, ಪ್ರಸಂಗಿಸುತ್ತಾ ತಿರುಗಲು, ಒಮ್ಮೆ ಉತ್ತರಸಮುದ್ರತೀರಕ್ಕೆ ಸಮಿಾಪವಾದ ದೊಕ್ಕುಮೆಂಬ ಗ್ರಾಮದಲ್ಲಿ ಪ್ರವರ್ತಿಸುವಾಗ ಕ್ರಿ. ಶ. 755ನೇ ವರುಷ ನೇಮಿಸಿದ್ದೊಂದು ದಿವಸದಲ್ಲಿ ಹೊಸತಾಗಿ ಸ್ನಾನ ಹೊಂದಿದವರದೊಂದು ದೊಡ್ಡ ಪ್ರಜಾಸಮೂಹಕ್ಕೆ ಮುದ್ರಾಂಕನ ಮಾಡಲಿಕ್ಕೆ ಯೋಚಿಸಿದನು; ಹ್ಯಾಗಂದರೆ, ಸ್ನಾತರಿಗೆ ಹಸ್ತಾಧಾನ ಕೊಟ್ಟು, ಅವರ ಹಣೆ ಬಾಯಿ ಕಿವಿ ಎದೆಗಳಿಗೆ ಎಣ್ಣೆ ಹಚ್ಚಿ[1], ಹೀಗೆ, ಅವರು ನಿಜ ಸಭ್ಯರೆಂದು, ಒಂದು ಮುದ್ರೆ ಹಾಕಿದ ಹಾಗೆ ಆಗುವದೆಂದು, ಪಪ್ಪಕರಲ್ಲಿ ಒಂದು ಪದ್ಧತಿ ಹುಟ್ಟಿತ್ತು[2]. ಬೊನಿಫಕಿಯನು ಆ ದಿನದ ಪ್ರಾತಃಕಾಲದಲ್ಲಿ ಇನ್ನು ನಿದ್ರೆ ಹತ್ತಿ ಮಲಗಿರಲು, ಒಂದು ಜನಘೋಷವು ಅವನನ್ನು ಎಬ್ಬಿಸಿತು. ಅವನು, ಅದು ಆ ಸ್ನಾತರದೆಂದು, ಮುದಿತನಾಗಿ, ತನ್ನ ಉದ್ಯೋಗದುಡಿಗೆ ತೊಟ್ಟು, ದೇವವಾಕ್ಯದ್ದೊಂದು ಪುಸ್ತಕ ತಕ್ಕೊಂಡು, ಡೇರೆಯಿಂದ ಹೊರಡಲಾಗಿ—ಆ ಜನರು ವಿಶ್ವಾಸಿಗಳಲ್ಲ, ತಮ್ಮ ವಿಗ್ರಹಗಳನ್ನು ಕೆಡವಿದವನಾದ ತನ್ನಲ್ಲಿ ತಮ್ಮ ಹಗೆ ತೀರಿಸಲಿಕ್ಕೆ ಬಂದ ವಿಗ್ರಹಾರಾಧಕ ಸಕ್ಸರೆಂತ[3], ತಿಳಿದನು. ಇವರು ಅವನನ್ನು ಕಂಡಾಗಲೇ ಅವನ ಮೇಲೆಯೂ ಅವನ ಪರಿಚರರ ಮೇಲೆಯೂ ಕವಿಯಲು, ಆ ಪರಿಚರರು ಕತ್ತಿ ಹಿಡಿದು, ಅವರಿಗೆದುರಾಗಲಿಕ್ಕೆ ಸನ್ನದ್ಧರಾದರು; ಆದರೆ ಬೊನಿಫಕಿಯನು ದೇವರ ಹೆಸರಿನಲ್ಲಿ ಅವರನ್ನು ತಡಿಸುವಂದು ಆ ಶತ್ರುಗಳು ಅವನನ್ನು ಮಾತ್ರವಲ್ಲದೆ ಅವನ ಪರಿಚರರಲ್ಲಿ 52 ಜನರನ್ನು ಸಹ ಕೊಂದು, ಹೇರಳ ದ್ರವ್ಯ ಶಿಕ್ಕುವದೆಂದು, ಗುಡಾರಗಳೊಳ ಹೊಕ್ಕು, ಪುಸ್ತಕಗಳನ್ನೂ ಮೃತಾವಶಿಷ್ಟಗಳನ್ನೂ[4] ಸ್ವಲ್ಪ ಬೆಲೆಯ ಸಾಮಾನುಗಳನ್ನೂ ಹೊರ್ತು ಇನ್ನೇನನ್ನೂ ನೋಡದೆ, ತಮಗಾಗದಂಥ ಅವನ್ನು ಅತ್ತಿತ್ತ ಒಕ್ಕೊಡುತ್ತಿರುವಾಗ ಕ್ರೈಸ್ತರು ಬಂದು, ಅವರಿಗೆ ತಕ್ಕ ಪ್ರತಿಫಲ ಹೊಂದಿಸಿದರು. ಆದರೆ ಬೊನಿಫಕಿಯನ ಶಿಷ್ಯರು ತಮ್ಮ ಗುರುವಿನ ಹೆಣವ ಹೆಸ್ಸ ಶೀಮೆಗೆ ಒಯ್ದು, ಅವನು ಅಲ್ಲಿ ಕಟ್ಟಿದ್ದ ಫುಲ್ದವೆಂಬ ಅವನ ಇಷ್ಟ ಮಠದಲ್ಲಿ ಹುಗಿದರು.

ಬೊನಿಫಕಿಯನ ಕೆಳಗಿದ್ದ ದೇವಾಲಯ ಮಠಗಳಲ್ಲಿ ಬೋಧಕವಿದ್ಯೆ ನಡೆ

1) 96ನೇ ಪಾನು ಸರಿ ನೋಡು. 2) ಸೌವಾರ್ತಿಕರಲ್ಲಿ ಇದರ ಬದಲಾಗಿ ದೃಢೀಕರಣವೆಂಬ ಪದ್ಧತಿ ಇರುವದು; 31ನೇ ಪಾನು ಸರಿ ನೋಡು. 3) 310ನೇ ಪಾನು. 4) 287ನೇ ಪಾನು.

ಯುವದಲ್ಲದೆ ಬಾಲಕರಿಗೆ ಮತ್ತು ಯೌವನಸ್ಥರಿಗೆ ಓದುವದು ಬರೆಯುವದು ಗಣಿಸುವದು ಪಂಚಾಳರ ವೃತ್ತಿ ಮಾಡುವದು ಇವಿಷ್ಟು ಸಹ ಕಲಿಸುತ್ತಿರುವರು. ಆ ಮಠಗಳೊಳಗೆ ಆಗಿಂದಾಗ ಹೇರಳ ಮಂದಿ ಮಠಿಕರಿರುವರು; ಫುಲ್ದವೆಂಬದೊಂದರಲ್ಲಿ ಅಂಥ 4,000 ಜನರಿದ್ದರು. ಈ ಮಠಿಕರು ಪಂಚಾಳತ್ವ ನಡಿಸುತ್ತಾ, ಕೃಷಿ ಮಾಡುತ್ತಾ, ತೋಟಗಳನ್ನು ಗೈಯುತ್ತಾ ಬರುತ್ತಿರಲಿಕ್ಕೆ, ಕಲಾಕುಶಲರಲ್ಲದ ಗೆರ್ಮಾನರು ದಿನಗತಿಯಿಂದ ಈ ವಿಷಯದಲ್ಲಿಯೂ ಅವರಿಗನುಸರಿಸಿ, ನಾಗರಿಕತನ ಘಳಿಸುವವರಾದರು. ಹೀಗೆ ಗೆರ್ಮಾನಿಯದ ಮಹಾ ವನಗಳು ತೋರದೆ ಹೋದವು; ದೊಡ್ಡ ಪ್ರದೇಶಗಳನ್ನು ಹಸನ ಮಾಡೋಣವಾಯಿತು[1]. ವಿಶೇಷವಾಗಿ ಹೀಥ್ (ಹೈದೆ) ಎಂಬ ಅಘೋರ ಅರಣ್ಯಗಳಲ್ಲಿ ವಾಸಿಸುವವರಿಗೆ ಮಾತ್ರ ಕ್ರೈಸ್ತತ್ವವು ತಡೆದು ಮುಟ್ಟುವ ಕಾರಣ ಅಲ್ಲಿ ವಿಗ್ರಹಾರಾಧನೆಯು ಇನ್ನೂ ದೀರ್ಘ ಕಾಲಕ್ಕೆ ಉಳಿಯಿತು; ಆದ್ದರಿಂದ ವಿಗ್ರಹಾರಾಧಕರಿಗೆ ಹೀಥನ್ ಅಂದರೆ ಅರಣ್ಯಕರು ಎಂಬ ಹೆಸರು ರೂಢಿ ಬಿತ್ತು.

## 41. ದೊಡ್ಡನೆಂಬ ಕರ್ಲನು.

ಗಿಡ್ಡನೆಂಬ ಪಿಪ್ಪೀನನು ಕ್ರಿ. ಶ. 768ನೇ ವರುಷಕ್ಕೆ ಸತ್ತ ಮೇಲೆ ಕರ್ಲ, ಕರ್ಲ್ಮನ್ನ ಎಂಬವರಿಬ್ಬರು ಕುಮಾರರು ಉತ್ತರಾಧಿಕಾರಿಗಳಾದರು. 3 ವರುಷಕ್ಕೀಚೆ ಕರ್ಲ್ಮನ್ನನು ತೀರಿ ಹೋದನು; ಆಗ ಕರ್ಲನು ಮಹಾ ಫ್ರಂಕ ಸಾಮ್ರಾಜ್ಯದ ಏಕ ಚಕ್ರವರ್ತಿಯಾದನು.

ಆ ಸಮಯದ ತನಕ ಸಕ್ಸರೆಂಬ ಗೆರ್ಮಾನರು[2] ಫ್ರಂಕರ ಅಧಿಕಾರಕ್ಕೂ ಕ್ರೈಸ್ತತ್ವದ ಸ್ವೀಕಾರಕ್ಕೂ ಎದುರ್ಮಲೆಯುತ್ತಿದ್ದು, ಫ್ರಂಕ ರಾಜ್ಯದೊಳ ಹೊಕ್ಕು ಕೊಳ್ಳೆ ಗೊಳ್ಳುತ್ತಾ, ತರ ತರದ ತೊಂದರೆ ಕೊಡುತ್ತಿದ್ದರು. ಹೀಗಿರಲಿಕ್ಕೆ ಕರ್ಲನು ಸಿಂಹಾಸನಾರೂಢನಾದಾಗಲೇ ಕ್ರಿ. ಶ. 772ನೇ ವರುಷ ಗೆರ್ಮಾನಿಯದ ವೊರ್ಮ್ಸ್ ಎಂಬ ಪಟ್ಣದಲ್ಲಿ ರಾಜ್ಯದ ಸಕಲ ಮತಕ ಮತ್ತು ರಾಜಕ ಪ್ರಭುಗಳನ್ನು[3] ರಾಜ್ಯಸಭಾಸದಸಿಗೆ ಕೂಡಿಸುವಲ್ಲಿ—ಸಕ್ಸರ ಮೇಲೆ ಯುದ್ಧ ಮಾಡಿ, ಕತ್ತಿ ಬೆಂಕಿಗಳ ಭಯದಿಂದ ಕ್ರೈಸ್ತತ್ವವನ್ನು ಅವರಲ್ಲಿ ನೆಡ ಬೇಕೆಂದು, ವ್ಯವಸ್ಥೆಯಾಯಿತು. ಬಳಿಕ ಕರ್ಲನು ವಾಯುವೇಗದಿಂದ ಅವರ ಶೀಮೆಯ ಮೇಲೆ ಬಿದ್ದು, ಅವರ ಮುಖ್ಯ ದುರ್ಗವಾದ ಏರೆಸ್ಬುರ್ಗವನ್ನೂ (ಅಂದರೆ ಆರ್ಯಪುರವನ್ನೂ) ಅವರ ಮುಖ್ಯ ಪೂಜಾಮೂರ್ತಿಯಾದ ಇರ್ಮನ್ಸೂಲವನ್ನೂ (ಅಂದರೆ ಅರ್ಯಮಶೂಲವ

1) 265, 314ನೇ ಪಾನು ಸರಿ ನೋಡು. ಗೆರ್ಮಾನಿಯದಲ್ಲಿದ್ದ ಸೌವಾರ್ತಿಕರು ಈ ವಿಷಯವಾಗಿ ಆರಂಭಿಸಿದ್ದನ್ನು ಪಪ್ಪಕರು ಮುನ್ನಡಿಸಿದರಷ್ಟೇ. 2) 315ನೇ ಪಾನು. 3) 319ನೇ ಪಾನು.

ನ್ನೂ) ನಶಿಸಿ, ಸಕ್ಸರನ್ನು ಕಪ್ಪ ತೆರುವ ಕಟ್ಟಳೆಗೊಳ ಪಡಿಸಿ, ಬೊನಿಫಕಿಯನ ಶಿಷ್ಯನೂ ಸ್ವದೇಶದವನೂ ಆದಂಥ ವಿಲಿಹೆದನೆಂಬ ಮುಂತಾದ ಪಪ್ಪಕ ಮಠಿಕರನ್ನು ಅವರಲ್ಲಿ ನೆಲೆ ಗೊಳ್ಳಿಸಿ, ಶೀಮೆಯ ಭದ್ರತೆಗೋಸ್ಕರ ಸೈನಿಕರದೊಂದು ಠಾಣ್ಯವನ್ನಿಟ್ಟು, ಹಿಂದಿರುಗಿ ಬಂದನು. ಬಳಿಕ ಕರ್ಲನು ಆಗಿನ 1ನೇ ಹದ್ರಿಯಾನ ಪಪ್ಪನನ್ನು ಲೊಂಗೊಬರ್ದರ[1] ತಂಟೆಯಿಂದ ಬಿಡಿಸಲಿಕ್ಕಾಗಿ ಈತಲಿಯ ದೇಶಕ್ಕೆ ಹೋಗಿ, ಅವರ ರಾಜನನ್ನು ಗೆದ್ದು, ಇವನ ಕಬ್ಬಿಣದ ಕಿರೀಟವನ್ನು ತನ್ನ ತಲೆಗಿಟ್ಟುಕೊಂಡು, ಪಪ್ಪಕ ರಾಷ್ಟ್ರವನ್ನು[2] ಪುನಃಸ್ಥಾಪಿಸುವ ಕ್ರಿ. ಶ. 774ನೇ ವರುಷದಲ್ಲಿ ಸಕ್ಸರು ತಮ್ಮ ನಾಯಕನಾದ ವಿದುಕಿಂದನ ಕೆಳಗೆ ಕಲಹಕ್ಕೆದ್ದರು. ಕರ್ಲನು ಶಿಡಿಲೋಪಾದಿ ತಿರಿಗಿ ಬಂದು, ಸಕ್ಸರನ್ನು 2ನೇ ಸಾರಿ ಸಾಧಿಸಿ ಕೊಂಡನು. ಆದರೆ ಅವನು ಹೊರಡುತ್ತಲೇ ಅವರು ಫ್ರಂಕರ ಅಧಿಕಾರಕ್ಕೆ ತಪ್ಪಿಸಿ ಕೊಳ್ಳಲಿಕ್ಕೆ ಮರಳಿ ಪ್ರಯತ್ನ ಮಾಡಿದರು. ಕರ್ಲನು 3ನೇ ಸಾರಿ ಪುನರಾಗಮಿಸಿ, ಅವರನ್ನು ಮತ್ತೊಮ್ಮೆ ಅಪಜಯ ಪಡಿಸಿದಂದು ಅವನು ಪಾದೆರ್ಬೊರ್ನೆಂಬ ಪಟ್ಟಣದಲ್ಲಿ ಕೂಡ ಕರಿಸಿದ ಒಂದು ರಾಜ್ಯಸಭಾಸದಸಿಗೆ ಅನೇಕ ಸಕ್ಸರು ಬಂದು, ಅವನಿಗೆ, ಅರಸೆಂದು, ವಂದಿಸಿ, ಕ್ರೈಸ್ತ ಸ್ನಾನವನ್ನಂಗೀಕರಿಸಿದರು. ಆದರೆ ವಿದುಕಿಂದ ನಾಯಕನು ಅಲ್ಲಿಗೆ ಬಾರದೆ, ಕರ್ಲನಿಗೆ ವಿಧೇಯನಾಗುವದಕ್ಕೆ ತಾನು ಹಂಗಿಗನಲ್ಲವೆಂದು, ಪ್ರಜೆಯನ್ನು ಮತ್ತು ಮತ್ತು ಕಲಹ ತೆಗೆಯುವಂತೆ ಕೆದರಿಸುತ್ತಾ ಇದ್ದನು; ಆಗ ಕರ್ಲನು 4ನೇ ಸಾರಿ ಸಕ್ಸೆನಿನೊಳಗಭಿಯೋಗಿಸಿ, ಕ್ರೈಸ್ತರಾಗಲೊಲ್ಲದವರಲ್ಲಿ ಹೇರಳ ಸಕ್ಸರನ್ನು ಹೊಳೆಗೆ ದೂಡಿ, ಸ್ನಾನ ಕೊಡಿಸಿ, ಹೋಗಿ ಬಿಟ್ಟ ತರುವಾಯ ಸಕ್ಸರು ಕ್ರಿ. ಶ. 782ನೇ ಅಬ್ದ ಮಗುಳೆದ್ದು, ಕ್ರೈಸ್ತ ದೇವಾಲಯಗಳನ್ನು ಹಾಳು ಗೈದ ಈಚೆ ಆ ರಾಜನು 4,500 ಮಂದಿಯನ್ನು ಶೆರೆ ಹಿಡಿದು, ವಧನಿರ್ದೇಶ ಕೊಟ್ಟದರಿಂದ ಆ ಜನಾಂಗದವರ ಹಗೆಯು ವೆಗ್ಗಳವಾಯಿತು. ಆದರೆ ಇತ್ತ ಕಡೆ ಕೆಲವು ಕದನಗಳಲ್ಲಿ ಸುಮಾರು 80,000 ಸಕ್ಸರು ಹತರಾಗಲು, ವಿದುಕಿಂದನು—ತನ್ನ ಪ್ರಜೆಯು ಫ್ರಂಕರ ಮಿಗಿಲಾದ ಬಲಕ್ಕೆದುರಾಗಿ ಇನ್ನೂ ನಿಲ್ಲಲಿಕ್ಕಾಗುವದಿಲ್ಲ, ತಾನು ತನ್ನ ದೇವತೆಗಳಿಗೆ ಅನೇಕ ಕ್ರೈಸ್ತರನ್ನು ಮೇಧ ಮಾಡಿ ಕೊಟ್ಟಿದ್ದರೂ ಅವು ತನಗೆ ಕಿಂಚಿತ್ತೂ ಒತ್ತಾಸೆ ಗೈಯಲಿಲ್ಲವೆಂತ, ವ್ಯಥೆ ಪಟ್ಟು, ತನ್ನ ಪ್ರಜಾರಕ್ಷಣಕ್ಕಾಗಿ ಕರ್ಲನ ವಿನಂತಿಯ ಮೇಲೆ ಬಹಳ ಜನ ಆಢ್ಯರಾದ ಸಕ್ಸರನ್ನು ಕರಕೊಂಡು, ಫ್ರಂಕರ ಪಾಳ್ಯಕ್ಕೆ ಬಂದು, ಸಲ್ಲಕ್ಕೊಪ್ಪಿದನು. ಆಗ ಆ ಫ್ರಂಕರಾಜನು ಸಕ್ಸರಿಗೆ ಮನ್ನಿಸಿ, ಅವರ ರಾಜಧರ್ಮಶಾಸ್ತ್ರಾದಿಗಳನ್ನು ಉಳಿಸಿದ್ದಲ್ಲದೆ ಅವರಿಗೆ ಹೆಚ್ಚು ನೈರಾತಂಕ್ಯವನ್ನು ಸಹ ಕೊಟ್ಟು, ವಿದುಕಿಂದನನ್ನು ಅವರ ಮೇಲಿನ ಪ್ರಭುತ್ವದಲ್ಲಿ ಸ್ಥಾಪಿಸಿದನು.

1) 283ನೇ ಪಾನು. 2) 283ನೇ ಪಾನು.

ಅದಾದ ಕ್ರಿ. ಶ. 785ನೇ ವರುಷದಲ್ಲಿ ವಿದುಕಿಂದನು ಸ್ನಾನ ತೆಗೆದು ಕೊಳ್ಳ ಲು, ಸಾವಿರಾರು ಸಕ್ಸರು ಅವನಂತೆಯೇ ಮಾಡಿದರು; ಬಳಿಕ ಅವರ ಶೀಮೆಯಲ್ಲಿ ದೇವಾಲಯ ಮಠ ಅಧ್ಯಕ್ಷತಾಸ್ಥಳಗಳನ್ನು ಹೆಚ್ಚು ಕಡಿಮೆ ಪಪ್ಪಕವಾದಂಥ ಕ್ರೈಸ್ತ ತ್ವದ ಹಬ್ಬುವಿಕೆಗಾಗಿ ಮಾಡಲಾಯಿತು. ಆದರೆ ಅದನ್ನು ತಿರಿಗಿ ಬಲಾತ್ಕಾರದಿಂ ದ ಅವರಲ್ಲಿ ಶೇರಿಸಿರುವ ನಿಮಿತ್ತ ಅದನ್ನು ಆರಂಭದಲ್ಲಿ ಬಲಾತ್ಕಾರದಿಂದಲೇ ಕಾ ಪಾಡುವ ಅವಶ್ಯವು ಬಂತು. ಆದರೆ ಕರ್ಲನಲ್ಲಿದ್ದು ತೋರಿದ ಕ್ರೈಸ್ತತ್ವವಿಸ್ತಾರಣದ ಇಂಥ ವಿಪರೀತವಾದ ಆಸಕ್ತಿಯು ಕ್ರೈಸ್ತರಿಗೆ ಹ್ಯಾಗೂ ಅಯೋಗ್ಯವು; ಒಂದು ಪ್ರಕಾರದ ಪಪ್ಪಕತ್ವದ ಭಾವವು ಅವನಲ್ಲಿಲ್ಲದಿದ್ದರೆ ಅಂಥಾದ್ದು ಅವನಿಗೆ ದೂರವಾ ಗಿರುತ್ತಿದ್ದದ್ದು ನಿಶ್ಚಯ.

ಆದರೂ ಅವನು, ನಾನಾ ಜಯಗಳಿಂದ ತನ್ನೊಳಗೆ ಮಾಡಿ ಕೊಂಡ ಮಹಾ ಸಂಖ್ಯೆಯ ಪ್ರಜೆಗೆ ಸುಖ ಕೊಡ ಬೇಕೆಂದು, ಮನಃಪೂರ್ವಕವಾಗಿ ಹಾರೈಸುತ್ತಿ ದ್ದನು. ಹೀಗಿರುವದರಿಂದ ಅವನು ವಿದ್ಯಾಶಾಲೆಗಳನ್ನು ಕಟ್ಟಿಸಿ, ತಾನು ಸಹ ಅ ನೇಕಾವರ್ತಿ ಅವುಗಳೊಳಗೆ ಹೋಗಿ, ಕಲಿಯುವವರನ್ನು ಪರೀಕ್ಷಿಸಿ, ಒಬ್ಬರಿಗೆ ಹೊಗಳುತ್ತಾ ಮತ್ತೊಬ್ಬರಿಗೆ ಹೇಲನ ಮಾಡುತ್ತಾ ಇರುವನು. ಅವನ ರಾಜ್ಯದ ಲ್ಲಿ ಸಕಲ ವಿದ್ಯೆಗಳ ಭಾಷೆಯು ಲತೀನವೆಂಬದು ಒಂದೇ. ತಾನು ಚಿಕ್ಕ ಪ್ರಾಯ ದಲ್ಲಿ ವಿದ್ಯಾಭ್ಯಾಸ ಗೇಯದ್ದರಿಂದ ಅವನು ಪ್ರಾಯಸ್ಥನಾದ ಮೇಲೆ ಇನ್ನಾದರೂ ಓದಲಿಕ್ಕೂ ಬರೆಯಲಿಕ್ಕೂ ಕಲಿತು, ಬಹಳ ಮಂದಿ ವಿದ್ವಾಂಸರನ್ನು ತನ್ನ ಅರಮ ನೆಗೆ ಕರಿಸಿ, ಅವರ ಸಂಗತಿಗೆ ಅತಿರೇಕ ಪ್ರೀತಿ ಗೊಂಡಿರುವನು. ಅದು ಹೊರ್ತಾ ಗಿ ಅವನು ಗೆರ್ಮಾನ ಭಾಷೆಯನ್ನು ಚೊಕ್ಕ ಮಾಡಿ, ತನ್ನ ಪ್ರಜೆಯದಾದ ಇದನ್ನು ಲತೀನ ಭಾಷೆಗೆ ಬದಲಾಗಿ ದೇವಾರಾಧನೆಯಲ್ಲಿ ಶೇರಿಸಲಪೇಕ್ಷಿಸಿದನು; ಹ್ಯಾಗೂ ಒಂದೊಂದು ಆದಿತ್ಯವಾರಕ್ಕೆ ಪ್ರಜಾಭಾಷೆಯಿಂದ ಪ್ರಸಂಗವಾಗ ಬೇಕು. ಒಂ ದೊಳ್ಳೇ ಪ್ರಸಂಗ ಕಟ್ಟುವದಕ್ಕೆ ಪಪ್ಪಕರಾದಂಥ ಅನೇಕ ಬೋಧಕರು[1] ಅಸಮ ರ್ಥರಾಗಿದ್ದದಲ್ಲದೆ ಮೈಗಳ್ಳರಾಗಿರುವ ಉದ್ದಿಶ್ಯ ಕರ್ಲನು ಲತೀನ ಪೂರ್ವಸಭಾ ಪಿತರ ಪ್ರಸಂಗಗಳ ಸಾರಸಂಗ್ರಹವನ್ನು ಮಾಡಿಸಿ, ಕೆಲವುಗಳ ಗೆರ್ಮಾನ ಭಾಷಾಂ ತರ ಸಹ ಗೇಯಿಸಿ, ಬರೆಸಿ, ಸಭ್ಯರ ಮುಂದೆ ಓದ ಬೇಕೆಂದು, ಬೋಧಕರಿಗೆ ನಿ ರ್ದೇಶಿಸಿದನು. ಪುನಃ ಅವನು ತನ್ನ ಪ್ರಜೆಯ ಹಿತಕ್ಕಾಗಿ ದೇವವಾಕ್ಯದ ಹಲವು ಭಾಗಗಳ ಗೆರ್ಮಾನ ಭಾಷಾಂತರ ರಚನೆಯಾದದ್ದಕ್ಕೆ ಕಾರಣನಾದನು. ಓದಲ ರಿಯದಂಥ ಬೋಧಕರು ಅವನ ಅಪ್ಪಣೆಯ ಮೇರೆಗೆ ಅದನ್ನು ಕಲಿಯ ಬೇಕು; ಚರ್ಯೆಯಲ್ಲಿ ತಿದ್ದುಪಾಟವಾಗದಂಥವರ ಉದ್ಯೋಗ ತೆಗೆಯುತ್ತಿರುವನು. ತನ್ನ

1) ಅಂಥವರನ್ನು ಕುರಿತು 310ನೇ ಪಾನು ಸಹ ನೋಡು.

ಘುಂಕರ ಗಾಯನವು ವ್ಯಾಪ್ತಿ ಗರ್ದಭಗಳದರಂತೆ ಇರುವದರಿಂದ ಅವನು ದೇವಾರಾಧನೆಯೊಳಗಿನ ಗಾಯನ ಸರಿ ಗೊಳ್ಳಿಸುವದಕ್ಕೋಸ್ಕರ ಈತಲಿಯದಿಂದ ಗಾಯಕರನ್ನೂ ಒರ್ಗೆನೆಂಬ ಸ್ವರಮುಂಡಲಗಳನ್ನೂ ತರಿಸಿದನು. ಸದ್ಭಕ್ತರಾಗಿ ಸತ್ತ ಸ್ತ್ರೀ ಪುರುಷರ ಜ್ಞಾಪಕವು ತಪ್ಪಿ ಹೋಗದಿರಲೆಂದು, ಅವನು ಅವರ ಚರಿತ್ರಗಳನ್ನು ಕಟ್ಟಿಸಿ, ಅವರ ಚಿತ್ರಗಳನ್ನು, ಶೃಂಗಾರಕ್ಕೆಂದು, ದೇವಾಲಯಗಳಲ್ಲಿ ತೂಗಹಾಕಿಸಿದನು; ಆದರೆ ನಿಜ ಪಪ್ಪಕರಂತೆ ಅಂಥ ಚಿತ್ರಗಳಿಗೆ ಪೂಜಿಸುವದು ಅವನಿಗೆ ಅತ್ಯಸಹ್ಯವೆನ್ನಿಸಿದ್ದಕ್ಕೋಸ್ಕರ ಅಂದಿನ 1ನೇ ಹದ್ರಿಯಾನ ಪಪ್ಪನು ಬಹಳ ರೋಷಗೊಂಡನು[1]. ಅದಲ್ಲದೆ ಕರ್ಲನು ಘಂಟಾಸ್ನಾನ, ಯಕ್ಷಿಣಿಗಳು (ಯಾತುಧಾನಿಗಳು) ಎಂಬ ಮಿಥ್ಯಾಕಲ್ಪನೆ ಹಚ್ಚಿದ ಸ್ತ್ರೀಗಳ ಸಜೀವದಹನ, ಮಾಟ ಇತ್ಯಾದಿ ನಾನಾ ತರದ ಅಪವಿಶ್ವಾಸಕರ ಕರ್ಮಗಳನ್ನು ನಿಲ್ಲಿಸಿ ಬಿಡಲಿಕ್ಕೆ ಪ್ರಯತ್ನ ಪಡುತ್ತಿರುವನು. ಸಭೋದ್ಯೋಗಿಗಳ ಜೀವನಕ್ಕೋಸ್ಕರ ಸಭ್ಯರು ತಮ್ಮ ಹುಟ್ಟುವಳಿಯಲ್ಲಿ ದಶಾಂಶವನ್ನು ತೆರ ಬೇಕೆಂಬದು ಅವನ ನೇಮವು. ಅದರ ಹೊರ್ತು ಅವನ ದಶೆಯಲ್ಲಿ ಪಪ್ಪಕ ಸಭಾಧ್ಯಕ್ಷರು ರಾಜ್ಯೋದ್ಯೋಗಗಳನ್ನೂ ಹೊಂದಿ, ಪ್ರಭುಗಳೆಂದು, ಹೆಸರು ಪಡೆದರು; ರಾಜಕ ಅಂದರೆ ರಾಜಸೇವೆಯೊಂದೇ ಗೈಯುವಂಥ ಪ್ರಭುಗಳ ಮತ್ತು ಮತಕ ಅಂದರೆ ರಾಜಸೇವೆಯಲ್ಲದೆ ಪಪ್ಪಸೇವೆಯ ಸಹ ಗೈಯುವಂಥ ಪ್ರಭುಗಳ ವ್ಯತ್ಯಾಸವು ಅಂದು ಹೆಚ್ಚಾಗಿ ಉದ್ಭವಿಸಿತು[2].

ಕ್ರಿ. ಶ. 799ನೇ ವರುಷದಲ್ಲಿ 3ನೇ ಲೆಯೋನನೆಂಬ ಪಪ್ಪನು ಕೆಲವರು ರೋಮುಪುರದ ಗೃಹಸ್ಥರಿಗೆ ಮರಣಾಜ್ಞೆ ಮಾಡಲಿಕ್ಕೆ, ಆ ಪುರದವರು ಅವನನ್ನು ಬೀದಿಯಲ್ಲಿ ಕುದುರೆಯಿಂದ ಕೆಡವಿ ಹಾಕಿ, ಹೊಡೆದು, ಓಡಿಸಿ, ಗಡಿ ದಾಟಿಸಿದರು. ಆಗಲಿವನು ಗೆರ್ಮಾನಿಯಕ್ಕೆ, ಪಾದೆರ್ಬೊರ್ನೆಂಬ ಪಟ್ಣದಲ್ಲಿ[3] ಕೂಡಿದ ರಾಜ್ಯಸಭಾಸದಸಿಗೆ ಬಂದು, ಕರ್ಲನ ಸಹಾಯ ಬೇಡಿದನು. ಈ ಮಹಾರಾಯನು ಅವನಿಗೆ ತನ್ನ ಪ್ರಸಾದವ ಕೊಟ್ಟು, ಅವನನ್ನು ದೊಡ್ಡದೊಂದು ದಂಡಿನ ಸಂಗಡ ರೋಮುಕ್ಕೆ ತಿರಿಗಿ ಕಳುಹಿಸಿ, ಅವನ ರಾಷ್ಟ್ರದಲ್ಲಿ ಮತ್ತು ನೆಲೆ ಗೊಳ್ಳಿಸಿದ ಈಚೆ ಮರುವರುಷ ತಾನೂ ಅಲ್ಲಿಗೆ ಹೋಗಿ, ತಾನು ಪಪ್ಪಕತ್ವದ ಆಶ್ರಯದಾಯಕನಾದ್ದರಿಂದ ಪೆತ್ರದೇವಾಲಯದೊಳಗೆ ವಿಚಾರಿಸುವಲ್ಲಿ ಲೆಯೋನನು, ತಾನು ನಿರಪರಾಧಿ ಎಂದು, ಆಣೆಯಿತ್ತ ಮೇಲೆ ಕರ್ಲನು ಆ ತಂಟಿಗಾರರನ್ನು ಶಿಕ್ಷಿಸಿ, ಕ್ರಿಸ್ತಜನ್ಮಹಬ್ಬದ ಪ್ರಥಮ ದಿನ ಆ ದೇವಾಲಯದೊಳಗೆ ದೇವಾರಾಧನೆ ಮಾಡುತ್ತಿರಲು, ಪಪ್ಪನು ಬಂದು, ಅವನ ತಲೆಗೆ ಚಿನ್ನದ್ದೊಂದು ಕಿರೀಟವಿಟ್ಟು, ಒಂದು ಕೈಯಿಂದ ತನ್ನ ತುಟಿಗಳನ್ನು, ಮತ್ತೊಂದು ಕೈಯಿಂದ ಕರ್ಲನ ಕೈಯನ್ನು ಮುಟ್ಟಿ, ಕೈಸರನೆಂದು,

1) 287ನೇ ಪಾನು; 317ನೇದು; Mansi. XIII. 2) 316ನೇ ಪಾನು. 3) 317ನೇ ಪಾನು.

ನಮಸ್ಕರಿಸುವಾಗ ನೆರೆದ ಸಕಲ ಪ್ರಜೆಯು ಸಹ ಉತ್ಸವಧ್ವನಿಯಿಂದ, ರೋಮಿಾಯ ಕೈಸರನಿಗೆ ಶುಭವಾಗಲೆಂದು, ಅವನಿಗೆ ವಂದಿಸಿತು. 324 ವರುಷಗಳ ಹಿಂದೆ[1] ಒಬ್ಬ ಗೆರ್ಮಾನನು ನಶಿಸಿದ ರೋಮಿಾಯ ಕೈಸರತ್ವವು ಆಗ ಒಬ್ಬ ಗೆರ್ಮಾನನಲ್ಲಿ ತಿರಿಗಿ ಉದ್ಭವಿಸಿ, ಕ್ರಿ. ಶ. 1806ನೇದರ ವರೆಗೆ 1006 ವರುಷ ಉಳಿಯಿತು. ಆದರೆ ಕ್ರಿ. ಶ. ಆ 800ನೇ ವರುಷದಂದಿನಿಂದ ಪಪ್ಪರು ಅಂಥಾ ಹೊಸ ಕೈಸರರಿಗೆ, ನಂಬಿಗಸ್ತರಾಗಿರುವೆವೆಂತ, ಪ್ರಮಾಣಿಸಿ, ಅವರು ಲೌಕಿಕ ವಿಷಯಗಳಲ್ಲಿ ತಮ್ಮ ನಾಥರೂ ನ್ಯಾಯಾಧಿಪತಿಗಳೂ ಎಂತ, ಒಪ್ಪಿಕೊಳ್ಳ ಬೇಕಾಯಿತು; ಅದಲ್ಲದೆ ಪಪ್ಪರು, ಒಬ್ಬೊಬ್ಬ ಕೈಸರನನ್ನು ತಾವು ಕಿರೀಟವಿಟ್ಟು ಅಧಿಕಾರದಲ್ಲಿ ಸ್ಥಾಪಿಸ ಬೇಕೆಂದು, ಹೇಳುತ್ತಿರುವಲ್ಲಿ ಕೈಸರರು, ತಮ್ಮ ಅಪ್ಪಣೆ ಇಲ್ಲದೆ ಯಾವನೊಬ್ಬನೂ ಪಪ್ಪತ್ವಕ್ಕೆ ಬರ ಕೂಡದೆಂದು, ಹೇಳುತ್ತಿರುವರು. ಈ ವಿಧದ ಧರ್ಮವು ಕಾಲಗತಿಯಲ್ಲಿ ಪಪ್ಪರ ಅತ್ಯಾಶೆಯಿಂದ ನಿತ್ಯ ಜಗಳಕ್ಕೆ ಕಾರಣವಾಯಿತು.

ಕೈಸರನಾದ ಕರ್ಲನು, ಅವನ ಪೂರ್ವಾಧಿಕಾರಿಗಳು ವಿನ್ಫ್ರೀದನ ಪ್ರೇರಣೆಯ ಮೇಲೆ ಆರಂಭಿಸಿದಂತೆ[2], ತನ್ನ ಸಾಮ್ರಾಜ್ಯದಲ್ಲೆಲ್ಲಿಯೂ ಪಪ್ಪಕ ಕ್ರೈಸ್ತತ್ವವನ್ನು ಬೇರೂರಿಸಿ, ರಾಜ್ಯಮತವಾಗ ಮಾಡಿ[3], ಕ್ರಿ. ಶ. 814ನೇ ವರುಷದಲ್ಲಿ 70 ವರುಷದ ಮುದುಕನಾಗಿ ಮಡಿದನು. ಕ್ರಿ. ಶ. 1165ನೇ ವರುಷಕ್ಕೆ 3ನೇ ಪಸಾಲಿ ಎಂಬ ಪಪ್ಪನು ಅವನನ್ನು ಸಂತರ ಲೆಖ್ಖದಲ್ಲಿ ಶೇರಿಸಿದನು[4].

ಕ್ರಿ. ಶ. 727ನೇ ವರುಷ ಬ್ರಿತನ್ನಿಯದಲ್ಲಿ ಏಗ್ಬೆರ್ತನೆಂಬ ರಾಯನು ಸಕಲ ಅಂಗ್ಲ ಸಕ್ಸ ರಾಷ್ಟ್ರಗಳನ್ನು ತನ್ನೊಬ್ಬನೊಳಗೆಯೇ ಕೂಡಿಸಿ, ಅವಕ್ಕೆ, ಇಂಗ್ಲಂದು (ಅಂಗ್ಲಂದು) ಎಂತ, ಹೆಸರಿಟ್ಟನು. ಕ್ರಿ. ಶ. 871ನೇ ವರುಷದಿಂದ 901ನೇದರ ವರೆಗೆ ಅಲ್ಫ್ರೇದನು (ಅಲ್ಫ್ರಾತನು) ಎಂಬವನು ಆ ಹೊಸ ರಾಜ್ಯವನ್ನಾಳುತ್ತಿದ್ದನು; 4ನೇ ಲೆಯೋನ ಪಪ್ಪನು ಅವನಿಗೆ ಪಟ್ಟಾಭಿಷೇಕ ಮಾಡಿದ್ದನು. ಈ ಅಲ್ಫ್ರೇದನು ದೊಡ್ಡನೆಂಬ ಕರ್ಲನಿಗೆ ಬಹಳವಾಗಿ ಹೋಲುವಂಥವನು. ಅವನು, ಕರ್ಲನಂತೆ, ತನ್ನ ಪ್ರಜೆಯನ್ನು ಸೌಖ್ಯದಲ್ಲಿಡ ಬೇಕೆಂದು, ಕ್ರೈಸ್ತತ್ವದ ಮತ್ತು ವಿದ್ಯೆಯ ಪ್ರಸರಣಕ್ಕೋಸ್ಕರ ಅನೇಕ ಮಠಗಳನ್ನೂ ಶಾಲೆಗಳನ್ನೂ ನಿರ್ಮಿಸಿ, ಅನೇಕ ಪಟ್ಣ ಊರುಗಳನ್ನು ಕಟ್ಟಿ, ಕೃಷಿ ವ್ಯಾಪಾರ ಪಂಚಾಳತ್ವಗಳನ್ನು ಪ್ರವರ್ಧಿಸಲಿಕ್ಕೆ ಬಹು ವಿಧದಿಂದ ಪ್ರಯತ್ನಿಸುತ್ತಿದ್ದನು. ಅವನಿಗೆ ಸಹ ದೊಡ್ಡನೆಂಬ ಉಪನಾಮವು ಪ್ರಾಪಿಸಿತು. ಅವನು ಪಪ್ಪಕನಲ್ಲದಿದ್ದರೆ ಎಷ್ಟೋ ಒಳ್ಳೇದಾಗುತ್ತಿತ್ತು.



1) 210, 211ನೇ ಪಾನು. 2) 40ನೇ ಸಂಧಿ. 3) 179, 309ನೇ ಪಾನು ಸರಿ ನೋಡು.
4) 183, 206, 287ನೇ ಪಾನು ಸರಿ ನೋಡು.

## 42. ಅನ್ಸ್ಕಾರನು ನೊರ್ಮನ್ನರಲ್ಲಿ ವೃತ್ತಿ ನಡಿಸಿದ್ದು.

ಫ್ರಂಕ ಮಹಾ ಸಾಮ್ರಾಜ್ಯದ ಉತ್ತರ ದಿಕ್ಕಿನಲ್ಲಿ ದೇನೆಮರ್ಕು ಸ್ವೇದೆನು ನೊರ್ವೇಗೆನು ಎಂಬ 3 ದೇಶಗಳಿದ್ದವು; ಇವುಗಳಲ್ಲಿಯ ನಿವಾಸಿಗಳ ಹೆಸರು ನೊರ್ಮನ್ನರೆಂತ; ಅವರು ಗೆರ್ಮಾನವಂಶಸ್ಥರು. ಅವರು ಬಹಳ ಕ್ರೂರ ಗುಣದವರಾಗಿದ್ದು, ಫ್ರಂಕ ಸಾಮ್ರಾಜ್ಯದೊಳಗೂ ಇಂಗ್ಲಂದಿನೊಳಗೂ ಎಡೆ ಬಿಡದೆ ಅಭಿಯೋಗಿಸುತ್ತಾ, ಕೊಳ್ಳೆ ಮಾಡುತ್ತಾ, ಶೆರೆಯವರನ್ನೊಯ್ಯುತ್ತಾ ಇದ್ದು, ಅಮಿತವಾದ ಉಪದ್ರವ ಕೊಡುತ್ತಾ ಇದ್ದರು. ಕ್ರೈಸ್ತತ್ವವೆಂಬದು ಉಂಟೆಂದು, ಅವರಿಗೆ ಆ ಶೆರೆಯವರಿಂದಲ್ಲದೆ ವರ್ತಕರಿಂದ ಸಹ ತಿಳಿದು ಬಂದಿದ್ದಾಗ್ಯೂ ಅದು ಅವರಲ್ಲಿ ನೆಲಸಲಿಲ್ಲ.

ಹೀಗಿರಲಾಗಿ ಕ್ರಿ. ಶ. 826ನೇ ವರುಷ ದೇನೆಮರ್ಕಿನ ಪ್ರಜೆಯು ತನ್ನ ಅರಸನಾದ ಹಾರಲ್ದನ ಮೇಲೆ ದ್ರೋಹವೆಬ್ಬಿಸಲು, ಇವನು ಆಗಿನ ಗೆರ್ಮಾನ ಕೈಸರನಾದ ಲೂದ್ವಿಗನ (ಹ್ಲೂದೊವಿಂಗನ) ಸನ್ನಿಧಾನಕ್ಕೆ, ಮೈಂತ್ಸೆಂಬ ಪಟ್ಣಕ್ಕೆ[1], ಬಹಳ ಮಂದಿ ಪರಿಚಾರಕರೊಡನೆ ಓಡಿ ಬಂದು, ಅವನ ಶರಣು ಹೊಗುವಾಗ ಸದ್ಭಕ್ತನೆಂಬ ಹೆಸರು ಗೊಂಡ ಇವನು ಅವನನ್ನು ದಯೆಯಿಂದ ಶೇರಿಸಿ ಕೊಂಡು, ಕ್ರೈಸ್ತಸ್ನಾನವನ್ನು ಅಂಗೀಕರಿಸುವದಕ್ಕೆ ಅವನನ್ನೊಡಂಬಡಿಸಿದನು. ಅಂದು ಆ ರಾಜನೇ ಹೊರ್ತಾಗಿ 400 ಮಂದಿ ದೇನರು ಸ್ನಾತರಾದರು. ಇವರಲ್ಲನೇಕರು ಬಹಿರಕ್ಕೆ ಮಾತ್ರ ಕ್ರೈಸ್ತತ್ವವನ್ನು ಅವಲಂಬಿಸಿದ್ದು ಒಂದೇ ದೃಷ್ಟಾಂತದಿಂದ ಗೊತ್ತಾದೀತು. ಹ್ಯಾಗಂದರೆ, ಆ ಸಮಯದಲ್ಲಿ ಸ್ನಾನಕ್ಕೆ ಬಂದಂಥವರಿಗೆ ಬಿಳೇ ಅಂಗಿಗಳನ್ನು ಕೊಟ್ಟು ತೊಡಿಸುವ ಪದ್ಧತಿ ಇರುವದು. ಆ ದೇನೆಮರ್ಕಿನವರ ಸ್ನಾನಸಂಸ್ಕಾರದಲ್ಲಿ ಅಂಥಾ ಅಂಗಿಗಳು ಸಾಲದೆ ಹೋಗಲಿಕ್ಕೆ, ಕೈಸರನು ಒಬ್ಬನಿಗೆ ಕಸೋದಿ ತೆಗೆದ್ದೊಂದು ತುಂಡಂಗಿ ಕೊಡಿಸುವಲ್ಲಿ ಇವನು ಕುಪಿತನಾಗಿ—20 ಸಾರಿಯಾದರೂ ನಾನು ಅಂಥಾ ಸ್ನಾನ ಮಾಡಿಸಿ ಕೊಂಡೆನು, ಆಗ ಒಂದೊಂದು ಸಾರಿ ಒಂದೊಂದು ಬಿಳೇ ಅಂಗಿಯೇ ನನಗೆ ಶಿಕ್ಕಿತ್ತು; ಈಗ ಕೊಟ್ಟ ಗೋಣಿಯು ಯುದ್ಧಸ್ಥರಿಗಲ್ಲ ಸೂಕರಪಾಲಕರಿಗೆ ಸಲ ತಕ್ಕದ್ದೇ! ನನ್ನ ಅಂಗಿಯನ್ನು ನನ್ನಿಂದ ತೆಗಿಸಿದಿರಿ; ಬತ್ತಲೆತನಕ್ಕೆ[2] ನಾನು ನಾಚದಿದ್ದರೆ ಈ ನಿಮ್ಮದನ್ನು ತಿರಸ್ಕರಿಸಿ, ನಿಮ್ಮ ಕ್ರಿಸ್ತನೊಂದಿಗೆ ಈ ಹರಕನ್ನು ಸಹ ನಿಮಗೆ ಹಿಂದಕ್ಕೆ ಕೊಡುತ್ತಿದ್ದೆನು.—ಇಷ್ಟು ಕಾಡುತನವು ಆ ಜನರಲ್ಲಿತ್ತು.

ಬಳಿಕ ಆ ಕೈಸರನು ಫ್ರಂಕ ದೇಶದಲ್ಲಿ ಹುಟ್ಟಿದ ಅನ್ಸ್ಕಾರನೆಂಬ ಮಠಿಕನನ್ನು

1) 314ನೇ ಪಾನು.

ಹಾರಲ್ದನಿಗೆ ಕೊಟ್ಟು, ಇವನನ್ನು ಅದೇ ವರ್ಷ ದೇನೆಮರ್ಕಿಗೆ ಮರಳಿಸಿ, ರಾಜತ್ವದಲ್ಲಿ ಪುನಃ ಸ್ಥಾಪಿಸಿದನು. ಆದರೆ ಹಾರಲ್ದನು ಅನ್ಸ್ಕಾರನಿಗೆ ಏನೂ ಒತ್ತಾಸೆ ಮಾಡದದರಿಂದ ಇವನು ಬಡ ಜನರ ಹಲವು ಮಕ್ಕಳಿಗೆ ಕ್ರೈಸ್ತ ಮತ ಕಲಿಸುವದಲ್ಲದೆ ಮತ್ತೇನೂ ಅನುಕೂಲವಾಗಲಿಲ್ಲ. ಎರಡು ವರುಷಕ್ಕೀಚೆ ಹಾರಲ್ದನು ತಿರಿಗಿ ಪಲಾಯನ ತೆಗೆಯ ಬೇಕಾದ ಮೇಲೆ ಅನ್ಸ್ಕಾರನು ಸಹ ಆ ದೇಶ ಬಿಡಲವಶ್ಯವಾಯಿತು.

ಆವಾಗ ಕ್ರಿ. ಶ. 829ನೇ ವರುಷಕ್ಕೆ ಏರೀಕನೆಂಬ ಸ್ವೇದೆನು ದೇಶದ ಅರಸು ಲೂದ್ವೀಗ ಕೈಸರನ ಬಳಿಗೆ ರಾಯಭಾರಿಗಳನ್ನು ಕಳುಹಿಸಿ, ತನಗೆ ಕ್ರೈಸ್ತ ಬೋಧಕರನ್ನು ದಯೆ ಪಾಲಿಸ ಬೇಕೆಂತ, ಬಿನ್ನಹ ಮಾಡಲು, ಆ ಕೈಸರನು ಅನ್ಸ್ಕಾರನನ್ನು ಪ್ರೇಷಿಸಿದನು. ಇವನು ಒಬ್ಬ ಜತೆಗಾರನನ್ನು ಕರಕೊಂಡು ಹೋಗಿ, ವರ್ತಕರದೊಂದು ಹಡಗ ಹತ್ತಿ, ಸ್ವೇದೆನಿನ ತೀರಕ್ಕೆ ಮುಟ್ಟಿದ ಕ್ಷಣವೇ ಸಮುದ್ರಗಳ್ಳರು ಅವರ ಮೇಲೆ ಕವಿದು, ಅವರಿಗಿದ್ದದೆಲ್ಲವನ್ನು, ಕೈಸರನು ಆ ರಾಯನಿಗೆ ಕಳುಹಿಸಿದ ಉಚಿತಗಳನ್ನು ಸಹ, ಸುಲು ಕೊಂಡು ಹೋದರು. ಅನ್ಸ್ಕಾರನು ದಿಂಡು ಗೆಡದೆ ಮುಂದರಿಸಿ, ಏರೀಕ ರಾಯನ ಹತ್ತರ ಬಂದಾಗ ಇವನು ಅವನನ್ನು ಮನ್ನಿಸಿ, ತನ್ನ ರಾಜ್ಯದಲ್ಲೆಲ್ಲಿಯೂ ಪ್ರಸಂಗಿಸ ಬಹುದೆಂದು, ಅಪ್ಪಣೆ ಕೊಟ್ಟನು. ಅನ್ಸ್ಕಾರನು ಅಲ್ಲಿ ಒಂದೂವರೆ ವರುಷ ತಕ್ಕ ಆಶೀರ್ವಾದದ ಸಹಿತ ವೃತ್ತಿ ನಡಿಸಿದ ಹಿಂದೆ—ತನಗೆ ಹೆಚ್ಚು ಸಹಾಯಕರು ಬೇಕು; ಅದಲ್ಲದೆ ನೊರ್ಮನ್ನರಲ್ಲಿ ಕ್ರೈಸ್ತತ್ವವನ್ನು ಚಂದಾಗಿ ವಿಸ್ತರಿಸುವ ಹಾಗೆ ಒಂದು ಪ್ರಧಾನ ಕಾರುಭಾರುಸ್ಥಳ ನೇಮಿಸ ಬೇಕೆಂದು, ಲೂದ್ವೀಗ ಕೈಸರನ ಸನ್ನಿಧಿಗೆ ಹಿಂದಿರುಗಿ, ಇವನ ಮತ್ತು 4ನೇ ಗ್ರೆಗೋರ ಪಪ್ಪನ ಆಜ್ಞೆಯ ಮೇಲೆ ಹಂಬುರ್ಗ್ ಎಂಬಲ್ಲಿ ನೊರ್ಮನ್ನರಿಗೆ ಪ್ರಧಾನಾಧ್ಯಕ್ಷನಾದನು.

ತದನಂತರ ಅವನು ಗೌತ್ಸ್ಬೆರ್ತನೆಂಬವನೊಬ್ಬನಿಗೆ ಅಧ್ಯಕ್ಷತಾಪ್ರತಿಷ್ಠೆ ಗೈದು, ಅವನನ್ನು ಸ್ವೇದೆನಿಗೆ ಕಳುಹಿಸಿ, ತಾನು ದೇನೆಮರ್ಕಿನಲ್ಲಿ ತಿರಿಗಿ ಕ್ರೈಸ್ತ ಮತ ಸಾರಲಿಕ್ಕೆ ತೊಡಗಿದನು. ಆಗ ಈ ದೇಶದಲ್ಲಿ ಹೋರೀಕನೆಂಬ ಅರಸು ಆಳುತ್ತಿದ್ದು, ಕ್ರೈಸ್ತರ ಅಮಿತ್ರನಾಗಿರುವ ಕಾರಣ ಅನ್ಸ್ಕಾರನು ಮುಂಚಿನಂತೆ ಬೇರೇನೂ ಗೇಯ ಕೂಡದೆ, ಕೆಲವರು ಬಾಲಕರಿಗೆ ಕ್ರೈಸ್ತತ್ವದಲ್ಲಿ ಉಪದೇಶಿಸುತ್ತಿದ್ದನು. ಬಳಿಕ ಕ್ರಿ. ಶ. 840ನೇ ವರುಷ ಹೋರೀಕನು ಹಂಬುರ್ಗೆಂಬ ಆ ಪ್ರಧಾನ ಕಾರುಭಾರುಸ್ಥಳವನ್ನು ಹಾಳು ಮಾಡಿ, ಸುಟ್ಟಾಗ ಅನ್ಸ್ಕಾರನು ಕಂಗಾಲಾಗಿ, ಓಡಿ ಹೋಗ ಬೇಕಾಯಿತು. ಅಷ್ಟರಲ್ಲಿ ಸದ್ಭಕ್ತನೆಂಬ ಲೂದ್ವೀಗನ ಸ್ಥಳದಲ್ಲಿ ಗೆರ್ಮಾನನೆಂಬ ಲೂದ್ವೀಗನು ಕೈಸರನಾಗಿ, ಅನ್ಸ್ಕಾರನನ್ನು ಪೋಷಿಸುವದಕ್ಕಾಗಿ ಬ್ರೇಮೆನೆಂಬ ಬಹು ಸಂಪತ್ತಿನ ಅಧ್ಯಕ್ಷತಾಸ್ಥಳವನ್ನು ಅವನ ಜೋಕೆಯಲ್ಲಿಡಲು, ಇವನು ಮತ್ತೂ ದೇನೆಮರ್ಕಿನಲ್ಲಿ ವೃತ್ತಿ ನಡಿಸುವವನಾಗಿ, ಹೋರೀಕ ರಾಯನನ್ನು ಉಚಿತಗಳಿಂದಲೂ

ಸಹಾಯದಿಂದಲೂ ನಂಬಿಸಿ, ಹೀಗೆ ಅವನ ರಾಜ್ಯದಲ್ಲಿ ಸ್ವೇಚ್ಛೆಯ ಪ್ರಕಾರ ಕ್ರೈಸ್ತತ್ವ ಬೆಳಿಸುವದಕ್ಕೆ ಅಪ್ಪಣೆ ಪಡೆದನು.

ತನ್ಮಧ್ಯ ಗೌಸ್ಕೈರ್ತ ಅಧ್ಯಕ್ಷನ ವೃತ್ತಿಯು ಆ 840ನೇ ವರುಷದ ತನಕ ಸ್ವೇದೆನಿನಲ್ಲಿ ಫಲಿಸುತ್ತಿದ್ದ ಮೇಲೆ ಅವನು ಅಲ್ಲಿಯ ಯಾಜಕರ ಹಗೆಯ ತುಸಕ ಪಲಾಯನದವನಾಗಿ, ತಿರಿಗಿ ಅಲ್ಲಿಗೆ ಹೋಗಲಿಕ್ಕೆ ಧೈರ್ಯವಿಲ್ಲದಿರಲು, ಅನ್ಸ್ಗಾರನು ಹೋರೀಕನಿಂದ ಒಂದು ರಾಯಸವ ಬರೆಸಿ ಕೊಂಡು, ಮತ್ತೊಮ್ಮೆ ಸ್ವೇದೆನಿಗೆ ಗಮಿಸಿ, ಅದನ್ನು ಅಲ್ಲಿಯ ರಾಜನಾದ ಓಲೊಫನಿಗೆ ತೋರಿಸುವಾಗಲವನು ಆರಂಭದಲ್ಲಿ ಸಂದೇಹ ಗೊಂಡು, ಬಳಿಕ, ಚೀಟು ತೆಗೆಯುವ ದ್ವಾರಾ ದೇವತೆಗಳ ಪ್ರಸಾದ ನೋಡೋಣ! ಎಂದು, ಅಪ್ಪಣೆ ಕೊಡಲಾಗಿ, ಅನ್ಸ್ಗಾರನು ಅದಕ್ಕೆ ನೇಮಿಸಿರುವ ದಿನದ ವರೆಗೆ ಉಪವಾಸದೊಡನೆ ದೇವರಿಗೆ ಪ್ರಾರ್ಥಿಸುತ್ತಿರುವಲ್ಲಿ, ಕ್ರೈಸ್ತ ವಿಶ್ವಾಸದ ಪ್ರಸಂಗವಾಗಲಿ! ಎಂಬ ಚೀಟು ಬಂತು. ಆಗ ಅನ್ಸ್ಗಾರನು ಹೊಸ ಧಾವತಿಯಿಂದ ತನ್ನ ಕೆಲಸವನ್ನಾರಂಭಿಸಿ, ಹಲವು ಕಾಲಕ್ಕೀಚೆ ನಂಬಿಗಸ್ತ ಬೋಧಕರನ್ನು ಅಲ್ಲಿರಿಸಿ, ತನ್ನ ಪ್ರಧಾನಾಧ್ಯಕ್ಷತೆಯ ಸ್ಥಳಕ್ಕೆ ಪುನರಾಗಮಿಸಿ, 64 ವರುಷದವನಾಗಿ ಕ್ರಿ. ಶ. 865ನೇದರಲ್ಲಿ ತೀರಿದನು.

ಸುಮಾರು ಕ್ರಿ. ಶ. 1000ನೇ ವರುಷಕ್ಕೆ ಪಪ್ಪಕ ಕ್ರೈಸ್ತತ್ವವು ದೇನೆಮರ್ಕಿನಲ್ಲಿಯೂ ಸ್ವೇದೆನಿನಲ್ಲಿಯೂ ಇಬ್ಬರು ಕ್ರೈಸ್ತ ಅರಸುಗಳ ಮೂಲಕ ರಾಜ್ಯಮತವಾಯಿತು. ದಿನ ಕ್ರಮಿಸುತ್ತಿರಲು, ಅದು ಸ್ವೇದೆನಿನಿಂದ ಹೊರಟು, ನೊರ್ವೇಗೆನಿಗೂ ಈಸ್ಲಂದಿಗೂ ಗ್ರೊಯಿನ್ಲಂದಿಗೂ ಮುಟ್ಟಿತು.

ಅವೇ 9ನೇ ಮತ್ತು 10ನೇ ಶತಮಾನಗಳಲ್ಲಿ ಕ್ರೈಸ್ತ ಮತವು ಯುರೋಪ ಖಂಡದ ಮೂಡಣ ದೇಶಗಳಲ್ಲಿರುವ ಬುಲ್ಗಾರ, ಮೇರ, ಬೋಯಿಮ, ಪೊಮ್ಮೆರ, ಪೋಲ ಇತ್ಯಾದಿ ಸ್ಲಾವರೆಂಬ ಜನರಲ್ಲಿ ಶೇರಲೆಸಗಿತು; ಈಸ್ಲಾವಿಕ ಜನರು ಸಹ ತ್ಯುತೊನರ ವಂಶದವರು. ಈ ಮತಪ್ರಸರಣಾರಂಭವು ಕ್ರಿ. ಶ. 862ನೇ ವರುಷ ಮೇರೆನೆಂಬ ಮೇರರ ಶೀಮೆಯಲ್ಲಿ ಆಯಿತು. ಹ್ಯಾಗಂದರೆ, ಆ ಸಮಯ ರತಿಸ್ಲಾವನೆಂಬ ಅಲ್ಲಿಯ ಅರಸು ಗೆರ್ಮಾನನೆಂಬ ಉಪನಾಮದ ಲೂದ್ವೀಗ ಕೈಸರನ[1] ಅಧಿಕಾರಕ್ಕೆ ತಪ್ಪಿಸಿ ಕೊಳ್ಳುವಂತೆ ಗ್ರೇಕ ರಾಜ್ಯದ[2] ಕೈಸರನ ಸಂಗಡ ಒಂದೊಡಂಬಡಿಕೆ ಮಾಡಿ ಕೊಂಡು, ಇವನಿಂದ ಮೆಥೊದಿಯ ಮತ್ತು ಕುರಿಲ್ಲ ಎಂಬ ಇಬ್ಬರು ಮಠಿಕರನ್ನು ತರಿಸಿದನು. ಇವರು ಆಶೀರ್ವಾದಕರ ಉಪದೇಶಿಗಳಾಗಿ, ಮೇರರಿಗೆ ಒಂದು ಅಕ್ಷರಮಾಲೆ ಕಲ್ಪಿಸಿ ಕೊಟ್ಟು, 4 ಸುವಾರ್ತಾಗ್ರಂಥಗಳನ್ನು ಅವರ ಭಾಷಾಂತರ ಮಾಡಿ, ಲತೀನ ಭಾಷೆಗೆ ಬದಲಾಗಿ[3] ಅವರ ಭಾಷೆಯನ್ನೇ ದೇವಾರಾ

1) 322ನೇ ಪಾನು. 2) 295ನೇ ಪಾನು. 3) 318ನೇ ಪಾನು ಸರಿ ನೋಡು.

ಧನೆಯಲ್ಲಿ ಶೇರಿಸುವವರಾದರು. ಆ ಮೇಲೆ ರತಿಸ್ಲಾವನು ರಾಜನೀತಿಯ ಕಾರಣಗಳಿಂದ ತಿರಿಗಿ ಗೆರ್ಮಾನ ಕೈಸರನ ಗೆಳೆಯನಾಗಲು, ಆ ಇಬ್ಬರು ಮಠಿಕರು ರೋಮಕ್ಕೆ ಹೋಗಿ, ಪಪ್ಪನ ಉದ್ಯೋಗಪ್ರತಿಷ್ಠೆ ಹೊಂದಿ ಬಂದರು. ಅದಕ್ಕೆ ಮುಂಚೆ ಅವರು ಕೊಂಸ್ತಂತೀನೊಪೊಲಿಯ ಪತ್ರಿಯರ್ಖನ[1] ಕೆಳಗಿದ್ದವರು.

14ನೇ ಕ್ರಿಸ್ತಶತಮಾನದ ಅಂತದಲ್ಲಿ ರುಸ್ಸರಲ್ಲದುಳಿದ ಸಕಲ ಸ್ಲಾವರು ಹೆಚ್ಚು ಕಡಿಮೆಯಾಗಿ ಪಪ್ಪಕ ಕ್ರೈಸ್ತರಾಗಿದ್ದರು. ಆ ರುಸ್ಸರು ಹಿಂದೆ ವರ್ಣಿತವಾದ ಆ ಕಾಲಾಂತರದೊಳಗೆ ಗ್ರೇಕ ಮತಪಕ್ಷದ ಕ್ರೈಸ್ತರಾದದ್ದು ಬೇರೆ ಕಡೆಯಲ್ಲಿ ವಿವರಿಸಲಾಗುವದು.



1) 274, 281ನೇ ಪಾನು.

# V. ರಾತ್ರಿಯೂ ಅರುಣೋದಯವೂ.

(ಕ್ರಿಸ್ತಶಕದ 1000ನೇ ವರುಷದಿಂದ 1517ನೇದರ ವರೆಗೆ.)



## 43. ರಾಜಕ ಮತ್ತು ಮತಕ (ಪಪ್ಪಕ) ಬಲಗಳ ಪರಸ್ಪರ ಜಗಳಗಳು[1].

ಕ್ರಿ. ಶ. 843ನೇ ವರುಷದಾರಭ್ಯ ಫ್ರಂಕ ದೇಶವು ಗೆರ್ಮಾನಿಯದಿಂದ ಹೆಚ್ಚು ಹೆಚ್ಚಿಗೆ ವಿಂಗಡವಾಗಲಿಕ್ಕೆ ಹತ್ತಿತು. 44 ವರುಷಕ್ಕೀಚೆ ಕ್ರಿ. ಶ. 877ನೇದರಲ್ಲಿ ಫ್ರಂಕ ದೇಶವು (ಗಲ್ಲಿಯವು) ಒಂದು ಪ್ರತ್ಯೇಕ ರಾಜ್ಯವಾಯಿತು; ಅದರ ಹೆಸರು ಈಗ ಫ್ರಂಚು ಎಂತ.

ಕ್ರಿ. ಶ. 911ನೇ ವರುಷ ದೊಡ್ಡನೆಂಬ ಕರ್ಲನ ಕಡೇ ಕುಟುಂಬಸ್ಥನು ಸತ್ತ ಮೇಲೆ ಗೆರ್ಮಾನಿಯದಲ್ಲಿ ಕ್ರಮಾಗತರಾಜತ್ವಧರ್ಮ ತೀರಿ, ಪ್ರಜಾಸ್ವೀಕಾರರಾಜಧರ್ಮ ಸ್ಥಾಪಿತವಾಯಿತು; ಅಂದರೆ ಗೆರ್ಮಾನ ಪ್ರಭುಗಳು ತಮ್ಮೊಳಗೆ ಯಾರೊಬ್ಬನನ್ನು, ತಮ್ಮ ಕೈಸರನೆಂದು, ಆರಿಸಿ ಕೊಳ್ಳುವವರಾದರು. ಆ ಸಮಯದಲ್ಲಿ ಪಪ್ಪರ ಅಧಿಕಾರಕ್ಕೆ ಬಹಳ ಬೆಳವಣಿಗೆ ಬಂದಿದ್ದರೂ ಅವರು ಮುಂಚಿನಂತೆ ಇನ್ನೂ ಸುಮಾರು 160 ವರುಷವಾದರೂ ಗೆರ್ಮಾನ ಕೈಸರರ ಅಧಿಕಾರಕ್ಕೊಳ ಬೊಗ್ಗಿಕೊಂಡಿದ್ದು, ರಾಜಶೋಧನಕಾರ್ಯದಲ್ಲಿ[2] ಸಹ ತಮ್ಮ ಅಭಿಪ್ರಾಯವನ್ನು ನಡಿಸಕೂಡದವರಾಗಿರುತ್ತಿದ್ದರು. ಸಭೋದ್ಯೋಗಿಗಳು ಪಪ್ಪನ ಉದ್ಯೋಗಕ್ಕೆ ಆರಿಸಿದವನೊಬ್ಬನು ತಮಗೆ ಅಸಮ್ಮತನಾದರೆ ಕೈಸರರು ಅಂಥವನನ್ನು ತಳ್ಳುತ್ತಿದ್ದರು; ಕೈಸರರ ಪ್ರತಿನಿಧಿಗಳೇ ಪಪ್ಪಕ ರಾಷ್ಟ್ರದಲ್ಲಿ ನ್ಯಾಯಾಧಿಪತಿಗಳಾಗಿರುತ್ತಿದ್ದರು; ಪಪ್ಪರ ಯಾವದೊಂದೂ ಹೊಸ ಆಜ್ಞೆಯನ್ನು ಕೈಸರರ ಅಪ್ಪಣೆ ಇಲ್ಲದೆ ಗೆ

1) ಪಪ್ಪರ ಸಂಬಂಧವಾದ ಇದು ಮುಂತಾದಂಥ ಸಂಗತಿಗಳನ್ನು ಸೂಚಿಸುವದು ಕ್ರೈಸ್ತ ಸಭೆಯ ಚರಿತ್ರದಲ್ಲಿ ಪಪ್ಪಕ ಕುಪಕ್ಷದ್ದು (290ನೇ ಪಾನು) ಮಾತ್ರ ಆದಾಗ್ಯೂ ಪಪ್ಪಕತ್ವದ ಲಕ್ಷ್ಯ ತೋರಿಸುವದಕ್ಕೆ ಆವಶ್ಯಕವಾಗಿದೆ. 2) 320ನೇ ಪಾನು ಸರಿ ನೋಡು.

ರ್ಮಾನಿಯದಲ್ಲಿ ಪ್ರಕಟಿಸ ಬಾರದೆಂಬ ನ್ಯಾಯವು ನಡೆಯುತ್ತಿತ್ತು; ಅದಲ್ಲದೆ ಕೈಸರರು ಆಗಿಂದಾಗ್ಯೆ ಅಯೋಗ್ಯ ಪಪ್ಪರನ್ನು ವಿಚಾರಿಸಿ, ಅವರ ಉದ್ಯೋಗ ತೆಗೆಯುತ್ತಿದ್ದರು. ಇದಕ್ಕೊಂದು ಸಾದೃಶ್ಯವೇನಂದರೆ, ಕ್ರಿ. ಶ. 956ನೇ ವರುಷದಲ್ಲಿ 12ನೇ ಯೋಹಾನನೆಂಬವನು ಪಪ್ಪನಾಗಿ, ಅವಾಚ್ಯ ಪಟಿಂಗತನ ನಡಿಸುತ್ತಾ, ದೇವರಿಗೆ ನಾನಾ ಹಾಸ್ಯ ಮಾಡುತ್ತಾ, ಒಮ್ಮೆ ಸುಳ್ಳಾಣೆಯನ್ನಾದರೂ ಕೊಟ್ಟು, ಹೀಗೆ ಕ್ರೈಸ್ತ ಸಭೆಗೆ ಭಾಷಾತೀತ ಅಪಮಾನ ಗೆಯ್ಯುತ್ತಿರಲಿಕ್ಕೆ, 1ನೇ ಒತ್ತೋನನೆಂಬ ಕೈಸರನು ಕ್ರಿ. ಶ. 963ನೇ ವರುಷ ಅವನನ್ನು ಪಪ್ಪಕ ಪೀಠದಿಂದ ತಳ್ಳಿ, 8ನೇ ಲೆಯೋನನೆಂಬ ಒಬ್ಬ ಗೃಹಸ್ಥನನ್ನು ಅದರ ಮೇಲೆ ಕುಂಡ್ರಿಸಿದನು. ತರುವಾಯ 1039ನೇ ವರುಷ 3ನೇ ಹೈನ್ರಿಕನು ಕೈಸರನಾದನು; ಇವನು 1ನೇ ಒತ್ತೋನನ ಉತ್ತರಾಧಿಕಾರಿಗಳಲ್ಲಿ 5ನೇಯವನು. ಅವನ ಕಾಲದಲ್ಲಿ ಒಮ್ಮೆಯೇ ಮೂವರು[1] ಪಪ್ಪರಿದ್ದರು. 1024ನೇ ವರುಷ ಉದ್ಯೋಗಕ್ಕೆ ಬಂದ 19ನೇ ಯೋಹಾನನು ಅವರಲ್ಲೊಬ್ಬನು. 9ನೇ ಬೆನೆದಿಕ್ತನು ಮತ್ತೊಬ್ಬನು; ಇವನು 1033ನೇ ವರುಷ ತಾನು 12 ವರುಷದ ಹುಡುಗನಾಗಿರುವಾಗ ಪಪ್ಪನಾಗಿ, ಅಪಮಾನವೂ ಲಜ್ಜೆಗೇಡೂ ಶಾಪವೂ ಉಳ್ಳಂಥ ಕ್ರಿಯೆಗಳನ್ನು ಮಾಡುತ್ತಿರುವನು; ಎಲ್ಲಾ ತರದ ಕೊಳ್ಳೆ ಕೊಲೆ ಮತ್ತು ಪಟಿಂಗತನಗಳು ಅವನ ದಿನಚರ್ಯೆಯು; 1044ನೇ ವರುಷದಲ್ಲಿ ಅವನು ಓಡಿ ಹೋಗ ಬೇಕಾದರೂ ಬೇಗ ಹಿಂದಿರುಗಿ, ತನ್ನ ಪಪ್ಪೋದ್ಯೋಗವನ್ನು ಒಬ್ಬ ಪ್ರೀಸ್ತನಿಗೆ (ಯಾಜಕನಿಗೆ[2] ಅಂದರೆ ಪೂರ್ವದಲ್ಲಿ ಸಭೆಯ ಹಿರಿಯರೆನ್ನಿಸಿದ ಉದ್ಯೋಗಿಗಳಲ್ಲೊಬ್ಬನಿಗೆ) ಹಣಕ್ಕೆ ಮಾರಿ, ಅವನನ್ನು, 6ನೇ ಗ್ರೆಗೋರನೆಂದು, ಪಪ್ಪಪೀಠವನ್ನೇರಿಸಿದನು; ಆದಾಗ್ಯೂ ಅವನು ತನ್ನ ಆ ಮಾರಾಟವ ಲಕ್ಷಿಸದೆ, ತಿರಿಗಿ ಪಪ್ಪತನವನ್ನೂ ನಡಿಸುತ್ತಿರುವನು. ಈ ಪ್ರಕಾರ ಮೂವರು ಪಪ್ಪರು ಕೂಡಿ ಸಭೆಯನ್ನಾಳುತ್ತಿದ್ದರು. ಆಗ 3ನೇ ಹೈನ್ರಿಕ ಕೈಸರನು ಒಂದು ದಂಡು ತಕ್ಕೊಂಡು, ಈತಲಿಯಕ್ಕೆ ಗಮಿಸಿ, ಆ ಮೂವರನ್ನು ಉದ್ಯೋಗದಿಂದ ಕಿತ್ತು ಹಾಕಿ, ಒಬ್ಬ ಗೆರ್ಮಾನ ಅಧ್ಯಕ್ಷನನ್ನು, 2ನೇ ಕ್ಲೇಮೆಂತನೆಂದು, ಪಪ್ಪತನದಲ್ಲಿಟ್ಟನು. ಆ ಮೇಲೆ ಅವನು ಇನ್ನೂ ಮೂವರು ಗೆರ್ಮಾನ ಅಧ್ಯಕ್ಷರನ್ನು ಒಬ್ಬನ ಹಿಂದೆ ಒಬ್ಬನನ್ನಾಗಿ ಪಪ್ಪಕ ಪೀಠದಲ್ಲಿ ಇರಿಸುತ್ತಿದ್ದನು. ಇವರಲ್ಲಿ 2ನೇಯವನಾದ 9ನೇ ಲೆಯೋನನೆಂಬವನ ಕಾಲದಲ್ಲಿ ಹಿಲ್ದೆಬ್ರಂದನೆಂಬವನೊಬ್ಬ ಮಠಿಕನು ಫ್ರಂಚು[3] ದೇಶದ ಬೆನೆದಿಕ್ತೀನರದೊಂದು ಮಠದಿಂದ[4] ರೋಮಕ್ಕೆ ಬಂದನು; ಅವನು ಒಬ್ಬ ಕಮ್ಮಾರನ ಮಗನು. ಈ ಹಿಲ್ದೆಬ್ರಂದನು ಆ ಪಪ್ಪನ ನಂಬಿಕೆಯನ್ನಲ್ಲದೆ ಅವನ ಉ

1) 162ನೇ, 188ನೇ ಪಾನುಗಳನ್ನು ಸರಿ ನೋಡು. 2) 290ನೇ ಪಾನು; 93, 289ನೇದು.
3) 208, 211, 325ನೇ ಪಾನು. 4) 306, 307, 308, 311, 312ನೇ ಪಾನು.

ತ್ರರೋದ್ಯೋಗಿಗಳಾದ ಬೇರೆ ನಾಲ್ವರದನ್ನು ಕೂಡ ಪೂರ್ಣ ಘಳಿಸಿ ಕೊಂಡು, ರೋಮದಲ್ಲಿ ಸಭೆಯ ಪ್ರಧಾನ ಸೇವಕನೂ ಪ್ರಧಾನ ಮುತ್ಸದ್ದಿಯೂ ಆದನು.

ಅಷ್ಟರೊಳಗೆ ಕ್ರಿ. ಶ. 1056ನೇ ವರುಷ 3ನೇ ಹೈನ್ರಿಕನು ಸತ್ತಿದ್ದನು. ಅವನ ಮರಣಕ್ಕೀಚೆ ರಾಜಕ ಮತ್ತು ಪಪ್ಪಕ ಬಲಗಳ ಅಂದರೆ ರಾಜರ ಮತ್ತು ಪಪ್ಪರ ಆ ಮಹಾ ಜಗಳವು[1] ತೊಡಗಿ, ಸುಮಾರು 200 ವರುಷ ನಡೆಯುತ್ತಲಿತ್ತು. ಹ್ಯಾಗಂದರೆ, 3ನೇ ಹೈನ್ರಿಕನು ತೀರುವಾಗ 4ನೇ ಹೈನ್ರಿಕನೆಂಬ ಅವನ ಕುಮಾರನು 6 ವರುಷದವನು ಮಾತ್ರ. ಹೀಗಿರಲಾಗಿ ಒಳ್ಳೇ ಕ್ರೈಸ್ತ ಭಕ್ತಳಾದ ಅವನ ತಾಯಿಯು ಆರಂಭದಲ್ಲಿ ಅವನನ್ನು ಇನ್ನೂ ಶಿಕ್ಷಿಸುತ್ತಾ, ಅವನ ಬದಲಿಗೆ ರಾಜ್ಯಭಾರ ಮಾಡುತ್ತಾ ಇರಲು, ಗೆರ್ಮಾನ ಪ್ರಭುಗಳು ಈ ಸ್ತ್ರೀಪರಿಪಾಲನಕ್ಕೊಳಿಯದೆ, ಗುಣುಗುಟ್ಟುವ ಸಮಯ ಹನ್ನೊನೆಂಬ ಕೊಯಿಲ್ನು ಪಟ್ಣದ ಪ್ರಧಾನಾಧ್ಯಕ್ಷನು ರಾಜ್ಯದಾಡಳಿತೆಯನ್ನೂ[2] ಆ ಶ್ರೀಮಂತನ ಶಿಕ್ಷೆಯನ್ನೂ ಅಪಹರಿಸಿ ಕೊಂಡು, ಪಪ್ಪನ ಸೇವಕನಾಗಲೆಂತ, ಇವನಿಗೆ ಮಠಿಕ ವಿದ್ಯೆ ಕಲಿಸುತ್ತಾ ಮೂರು ವರುಷ ಕಳೆದ ಮೇಲೆ ಬ್ರೇಮೆನು[3] ಪಟ್ಣದ ಆದಲ್ಬೆರ್ತ ಪ್ರಧಾನಾಧ್ಯಕ್ಷನು ಆ ರಾಜಕುಮಾರನನ್ನು ಕಸುಕೊಂಡು ಹೋಗಿ, ಉಪದೇಶಿಸುವಲ್ಲಿ ಅವನ ಮನಸ್ಸಿನೊಳಗೆ ದರ್ಪಿಗಳಾದಂಥ ಪಪ್ಪರ ಮೇಲಿನ ಹಗೆಯನ್ನೂ ಸಕ್ಸರ[4] ಮೇಲಿನ ಅವಿಶ್ವಾಸವನ್ನೂ ಬಿತ್ತಿದನು. ಆ ವೇಳೆ ಗೆರ್ಮಾನ ರಾಜ್ಯವು ಶಿಥಿಲವಾದ ಸ್ಥಿತಿಯಲ್ಲಿತ್ತು.

ಇಂತಿರಲಿಕ್ಕೆ ಪಪ್ಪರಿಗೆ ಹೆಚ್ಚು ಸ್ವಾತಂತ್ರ್ಯವು ದೊರಕಿತು. ಆದ ಕಾರಣ ಆ 9ನೇ ಲೆಯೋನನ 3ನೇ ಉತ್ತರೋದ್ಯೋಗಿಯಾದ 2ನೇ ನೀಕೊಲಾವನು ಹಿಲ್ದೆಬ್ರಂದನ ಬುದ್ಧಿವಂತಿಕೆಯ ಮೇರೆಗೆ ಕ್ರಿ. ಶ. 1059ನೇ ವರುಷ ರೋಮದಲ್ಲಿ ಒಂದು ಸಭಾಸಂಘ ಕೂಡಿಸಿ—ಇನ್ನು ಮುಂದೆ ರೋಮಪುರದೊಳಗಣ ಸಭೆಯ ಉದ್ಯೋಗಿಗಳಾದ ಏಳ್ವರು ಕರ್ದಿನಾಲ್ ಅಧ್ಯಕ್ಷರೂ 28 ಮಂದಿ ಕರ್ದಿನಾಲ್ ಪ್ರೀಸ್ತರೂ[5] ಮಾತ್ರ ಪಪ್ಪರನ್ನು ಆರಿಸಿ ಕೊಳ್ಳ ಬೇಕು; ಕೈಸರರು ಅಡ್ಡಗಟ್ಟದೆ ಇವರ ವ್ಯವಸ್ಥೆಗೆ ಶೇರ ತಕ್ಕದ್ದು! ಎಂದು, ನಿರ್ಣಯ ಮಾಡಿಸಿದನು. ಬಳಿಕ ಕ್ರಿ. ಶ. 1073ನೇ ವರುಷದಲ್ಲಿ ಹಿಲ್ದೆಬ್ರಂದನು ತಾನು ಪಪ್ಪನಾಗಿ, 7ನೇ ಗ್ರೆಗೋರನು ಎನ್ನಿಸಿ ಕೊಂಡನು. ನೀತಿಚರ್ಯೆ ಬಾಡಿದ[6] ಪಪ್ಪಕ ಸಭೆಯನ್ನು ತಿದ್ದುವದೂ ಸಭೋದ್ಯೋಗಿಗಳನ್ನು ಪಪ್ಪರ ಪೂರ್ಣ ಸ್ವಾಧೀನತೆಯಲ್ಲಿಡುವದೂ ಸಭೆಯನ್ನು

---

1) 230 (276) ನೇ ಪಾನು. 2) 319ನೇ ಪಾನು ಸರಿ ನೋಡು. 3) 322ನೇ ಪಾನು. 4) 318ನೇ ಪಾನು. 5) 326ನೇ ಪಾನು; ಕರ್ದಿನಾಲ್ ಅಂದರೆ ಮುಖ್ಯ. 6) 281, 318, 326ನೇ, ಪಾನು ಸರಿ ನೋಡು.

ರಾಜರ ಸ್ವಾತಂತ್ರ್ಯದೊಳಗಿಂದ ಪೂರಾ ಬಿಡಿಸುವದೂ ಸಕಲ ಭೂರಾಜರ ಮೇಲೆ ಇರುವದೊಂದು ದೊಡ್ಡ ಮತಕ ರಾಜ್ಯ ನಿರ್ಮಿಸುವದೂ ಇಷ್ಟೆಲ್ಲಾ ಅವನ ಮನೋಭಿಪ್ರಾಯವು; ದ್ವಿವಿಧಾರಿಕಾರದ ಕಿರೀಟ[1] ಸಾಕೆನ್ನದೆ, ತ್ರಿಕ ಕಿರೀಟವನ್ನು ಅಂದರೆ ಮತಕ ಸ್ವರಾಷ್ಟ್ರೀಯ ಸರ್ವಭೌಮ ಎಂಬೀ ಮೂರು ಅಧಿಕಾರ ಕೊಡುವಂಥಾದ್ದನ್ನು ಬಯಸಿದನು.

ಹೀಗಿರುವದರಿಂದ ಅವನು ಕ್ರಿ. ಶ. 1074ನೇ ವರುಷ ರೋಮದಲ್ಲಿ ಒಂದು ಸಭಾಸಂಘವ ನೆರೆಸಿ, ಸಿಮೋನೀಯವನ್ನು[2] ಅಂದರೆ ಸಭೋದ್ಯೋಗಿಗಳ ವ್ಯಾಪಾರವನ್ನು ನಿಲ್ಲಿಸುವದಕ್ಕೆ ಕಠಿಣ ಆಜ್ಞೆ ಮಾಡಿದನು; ಯಾಕಂದರೆ ಈತಲಿಯದ ಮತ್ತು ಫ್ರಂಚು ದೇಶದ ಮತ್ತು ಗೆರ್ಮಾನಿಯದ ರಾಜಕ ಮತಕ ಪ್ರಭುಗಳು ಒಳ್ಳೇ ಸಂಪತ್ತಿನ ಅಧ್ಯಕ್ಷಸ್ಥಳಗಳನ್ನೂ ಅಬ್ಬಾತಸ್ಥಳಗಳನ್ನೂ[3] ಬೇಕಾದವರಿಗೆ ಗುತ್ತಿಗೆಗಾಗಲಿ ದರಕಾಸ್ತಿಗಾಗಲಿ ಕೊಡುತ್ತಿದ್ದರು. ಅದಲ್ಲದೆ ಗ್ರೆಗೋರನು ಆಗ—ಸಿಮೋನೀಯದ ಮೇಲೆ ಸಭೋದ್ಯೋಗಕ್ಕೆ ಬಂದವರ ಆ ಉದ್ಯೋಗದ ಸಂಬಂಧವು ಹೋಯಿತು; ಪಪ್ಪನೇ ಸರ್ವ ಸಭೋದ್ಯೋಗಿಗಳನ್ನು ಆರಿಸಿಡ ಬೇಕು; ಇವನಿಗೆ ಮಾತ್ರ ಅವರು, ನಂಬಿಗಸ್ತರಾಗಿರುವೆವೆಂತ, ಪ್ರಮಾಣ ಮಾಡಿ ಹೇಳ ಬೇಕು! ಎಂದು, ನೇಮಿಸಿ, ಈ ಪ್ರಕಾರ ಸಭೋದ್ಯೋಗಿಗಳನ್ನು ಅಧಿಕಾರಿಗಳ ಅಧೀನತೆಯಿಂದ ವಿಮೋಚಿಸಿ, ಆ ಅಧಿಕಾರಿಗಳ ಬಲವನ್ನು ಕುಂದಿಸಿದನು. ಅದು ಹೊರ್ತಾಗಿ ಅವನು ಅಂದು ಕೊಯಿಲಿಬಾತಿನ ಅಂದರೆ ಸಭೋದ್ಯೋಗಿಗಳ ಅವಿವಾಹಿತ್ವದ ವಿಪರೀತ ಆಜ್ಞೆಗಳನ್ನು[4] ಪುನಃಸ್ಥಾಪಿಸಿ, ವಿವಾಹಿಗಳಾದ ಪ್ರೀಸ್ತರೆಲ್ಲರೂ ಇವರು ನಡಿಸುವ ದೇವಾರಾಧನೆಯ ಆಚಾರಗಳಿಗೆ ಹೋಗುವವರೂ ಸಭೆಯಿಂದ ಬಹಿಷ್ಕೃತರೇ! ಎಂತ, ಕೂಡಿಸಿದನು. ಕಡೆಯ ಈ ಅಪ್ಪಣೆಯಿಂದ ಬಹಳ ತೊಂದರೆ ಹುಟ್ಟಿತು; ಹ್ಯಾಗಂದರೆ, ಅಂದಾದರೂ ಮುಖ್ಯವಾಗಿ ಗೆರ್ಮಾನಿಯದಲ್ಲಿಯೂ ಇಂಗ್ಲಂದಿನಲ್ಲಿಯೂ ಉತ್ತಮ ತರದ ಸಭೋದ್ಯೋಗಿಗಳಲ್ಲನೇಕರು ವಿವಾಹಿಗಳಾಗಿದ್ದರು[5]. ಆದರೆ ಗ್ರೆಗೋರನು—ವಿವಾಹಿಗಳಾದಂಥ ಸಭೋದ್ಯೋಗಿಗಳು ತಮ್ಮ ಕುಟುಂಬರಕ್ಷಣಕ್ಕೋಸ್ಕರ ಯಾವಾಗಲೂ ತಮ್ಮ ತಮ್ಮ ದೇಶದ ಲೌಕಿಕ ಅಧಿಕಾರಿಗಳನ್ನು ಮೆಚ್ಚಿಸುತ್ತಾ, ಅವರ ಪ್ರಸಾದ ಸಂಪಾದಿಸಿ ಕೊಳ್ಳುವದಕ್ಕೆ ಪೇಚಾಡುತ್ತಾ ಇರುವರು; ಹೀಗಾಗ ಬಾರದು; ಸಭೋದ್ಯೋಗಿಗಳು ಮದುವೆಯಾಗದೆ, ಹೀಗೆ ಯಾವದೂ ಒಂದು ದೇಶದ ಮತ್ತು ಯಾರೂ ಒಬ್ಬ ಅಧಿಕಾರಿಯ ಲಕ್ಷ್ಯ

1) 283ನೇ ಪಾನು. 2) ಅಪೊ.ಕ್ರಿ. 8, 18 ಆದಿ. 3) 264, 265, 306ನೇ ಪಾನು.
4) 34ನೇ ಸಂಧಿ; 281ನೇ ಪಾನು. 5) 272, 300, 304, 307ನೇ ಪಾನುಗಳು.

ವಿಲ್ಲದೆ, ಪಪ್ಪರೊಬ್ಬರ ಅಖಂಡ ಸೇವೆಗೆ ಸಿದ್ಧರಾಗಿರ ಬೇಕೆಂದು[1], ತನ್ನೊಳಾಲೋಚಿಸಿ ಕೊಂಡು, ವಿವಾಹಿಗಳಾದ ಸಭೋದ್ಯೋಗಿಗಳೆಲ್ಲರು ಜಾರರೂ ಮೂರ್ತಿಪೂಜಕರೂ ಆಗಿದ್ದಾರೆ! ಎಂದು, ಒದರಿ, ಏನೂ ಗಣ್ಯ ಮಾಡದೆ, ತನ್ನ ದರ್ಪಾರ್ಥವನ್ನು ನಡಿಸುವವನಾಗಿ, ಮದುವೆಯಾಗಿರುವಂಥ ಸಭೋದ್ಯೋಗಿಗಳು ತಮ್ಮ ಹೆಂಡರನ್ನೂ ಮಕ್ಕಳನ್ನೂ ತ್ಯಜಿಸಿ ಬಿಟ್ಟ ಹೊರ್ತು ತಮ್ಮ ಉದ್ಯೋಗಗಳಲ್ಲಿ ಉಳಿಯಬಾರದೆಂದು, ಅವರ ಮೇಲೆ ಅಂಕೆಯನ್ನಿಟ್ಟನು. ತದನಂತರ ಗ್ರಿಗೋರನು ಮರುವರುಷ ರೋಮದಲ್ಲಿ ಮತ್ತೊಂದು ಸಭಾಸಂಘ ಕೂಡ ಕರಿಸಿ, ರಾಜಕ ಇನ್ವೆಸ್ತಿತೂರನ್ನು ಅಂದರೆ ರಾಜನಿಂದಾಗುವ ಉದ್ಯೋಗಚಿನ್ಹೆಗಳ ದಾನವನ್ನು ಮಟ್ಟು ಮಾಡಿದನು; ಹ್ಯಾಗಂದರೆ, ದೇಶಾಧಿಪತಿಗಳು, ಸಭೆಯ ಸಂಗಡ ಆತ್ಮೀಯ ವಿವಾಹವಾಯಿತೆಂತ, ಒಂದು ಉಂಗುರವನ್ನೂ[2], ಸಭೆ ಎಂಬ ಹಿಂದಿನ ಪಾಲಕರೆಂತ, ಒಂದು ಕೋಲನ್ನೂ ಅಧ್ಯಕ್ಷರಿಗೆ ಮತ್ತು ಅಬ್ಬಾತರಿಗೆ ಕಳುಹಿಸಿ ಕೊಟ್ಟು, ಇಂತು ಅವರನ್ನು ಆಯಾ ಉದ್ಯೋಗದಲ್ಲಿ ನೆಲೆ ಗೊಳ್ಳಿಸುವ ಕ್ರಮವು ಉತ್ಪನ್ನವಾಗಿತ್ತು. ತಾನು ಇದನ್ನು ಮಟ್ಟು ಪಡಿಸಿದ್ದರಿಂದ ಆ ಪಪ್ಪನು ರಾಜಾಧಿಕಾರಕ್ಕೆ ತಿರಿಗಿ ಪ್ರಚಂಡ ವಿರೋಧಿಯಾದನು. ಅದೇ ಸಂಘದಲ್ಲಿ ಅವನು ಸಿಮೋನೀಯದ ಮೇಲೆ ಅಧ್ಯಕ್ಷರಾದ ಹಲವರು ಗೆರ್ಮಾನರನ್ನು ಉದ್ಯೋಗದಿಂದ ತೆಗೆದು ಹಾಕಿ, ಪಪ್ಪಕ ರಾಷ್ಟ್ರದಲ್ಲಿ ಅಂಥ ಉದ್ಯೋಗದ ವ್ಯಾಪಾರ ನಡಿಸಿದ್ದವರಾದಂಥ ಕೈಸರನ ಐವರು ಮಂತ್ರಿಗಳನ್ನು ಹೊರಗೆ ತಳ್ಳುವದಕ್ಕಂಜಲಿಲ್ಲ. ಪ್ರಧಾನಾಧ್ಯಕ್ಷೋದ್ಯೋಗ ಬಯಸುವಂಥವರು ಪಪ್ಪರಿಗೆ, ಅಧೀನರಾಗಿರೋಣವೆಂತ, ಪ್ರಮಾಣ ಮಾಡಿ, ಪಲ್ಲಿಯವೆಂಬದನ್ನು[3] ಅವರ ಕೈಯಿಂದ ಪಡ ಕೊಂಡ ಹೊರ್ತು ಅಂಥ ಉದ್ಯೋಗವು ದೊರಕಲರಿಯದೆಂಬ ನಿಯಮವು ಮುಖ್ಯವಾಗಿ ಅವನಿಂದ ಘಟ್ಟಿಯಾಯಿತು. ದಿನ ಗತಿಸುತ್ತಾ, ಅವನು ನ್ಯಾಯಾನ್ಯಾಯಗಳಿಂದ ತನ್ನ ಆ ಹೊಸ ವ್ಯವಸ್ಥೆಗಳನ್ನು ಪಪ್ಪಕ ಸಭೆಯಲ್ಲೆಲ್ಲಿಯೂ ಪ್ರವರ್ತಿಸಲಿಕ್ಕೆ ಹೇರಳ ಪ್ರಯತ್ನಗೈಯುತ್ತಾ ಬಂದನು.

ಅವನು ಅದಕ್ಕೆ ಹೆಚ್ಚಾಗಿ ಉಪಯೋಗಿಸುತ್ತಿದ್ದ ಉಪಾಯಗಳು ಎರಡು; ಯಾವವೆಂದರೆ—ಮೊದಲಿನದು ಬನ್ನಿನ (ಭಣನದ) ಅಂದರೆ ಬಹಿಷ್ಕಾರಾಜ್ಞೆಯ

1) ಅದು ಹೊರ್ತಾಗಿ, ಸಭೋದ್ಯೋಗಿಗಳು ಮದುವೆಯಾಗಿ ಸಂತಾನದವರಾದರೆ ಮಕ್ಕಳು ಹೆತ್ತವರ ಬಾಧ್ಯಸ್ಥರಾಗುವದು ಸಹಜವಲ್ಲವೇ? ಇದು ಸಹ ಪಪ್ಪರಿಗೆ ಅಸಮ್ಮತ; ಯಾಕಂದರೆ ತಮ್ಮ ಕೆಳಗಿನ ಸಭೋದ್ಯೋಗಿಗಳ ಧನವೆಲ್ಲವೂ ತಮಗೆ ಬೇಕೆಂಬದೇ ಅವರ ಆಶೆ. ಅದು ಕಾರಣ ಪಪ್ಪರು ಕ್ರಿ. ಶ. 1020ನೇ ಅಬ್ದ ಸುತ್ತ ಆಜ್ಞಾಪಿಸಿದ್ದೇನಂದರೆ—ಎಲ್ಲಾ ಸಭೋದ್ಯೋಗಿಗಳ ಕುಮಾರರೂ ಕುಮಾರ್ತೆಯರೂ ಇವರಿಗಿರುವದೆಲ್ಲಾ ಸಹಿತವಾಗಿ ತಮ್ಮ ನಿತ್ಯ ಸೇವೆಗೆ ಮಾತ್ರ ಇರ ಬೇಕು.—(Mansi XIX.) 2) 98ನೇ ಪಾನು ಸರಿ ನೋಡು. 3) 314ನೇ ಪಾನು.

ಭಯವು; ಮತ್ತೊಂದು ಇಂತೆರ್ದಿಕ್ತಿನ ಅಂದರೆ ನಿಷೇಧಾಜ್ಞೆಯ ಭಯವು; ಈ ನಿಷೇಧಾಜ್ಞೆಯು ಹೊರಟು ಹೋದ ಒಂದು ರಾಜ್ಯದಲ್ಲಿ ಸಭ್ಯರನ್ನು ಸಭಾರೀತಿಯಾಗಿ ಹುಗಿಯ ಬಾರದು, ಕೂಸುಗಳಿಗೆ ಸ್ನಾನ ಕೊಡ ಬಾರದು, ದೇವಾಲಯದಲ್ಲಿ ಆರಾಧನೆ ನಡಿಯ ಬಾರದು, ಯಾಗವೇದಿಯಲ್ಲಿ[1] ಏನೂ ಭೂಷಣವಿರ ಬಾರದು, ಮದುವೆಗಳಲ್ಲಿ ಸಭೋದ್ಯೋಗಿಗಳ ಆಶೀರ್ವಾದ ಸಲ್ಲ ಬಾರದು, ಸಾಯುವವರಿಗೆ ಸ್ವರ್ಗ ಪ್ರಾಪಿಸುವ ಅಂತ್ಯತೈಲಾಭಿಷೇಕವೆಂಬದೊಂದು ಪಪ್ಪಕ ಸಂಸ್ಕಾರವನ್ನೀಯ ಬಾರದು, ಇತ್ಯಾದಿ.

ತನ್ಮಧ್ಯ 4ನೇ ಹೈನ್ರೀಕನು[2] ಕ್ರಿ. ಶ. 1065ನೇ ವರುಷದಲ್ಲಿ ಸಿಂಹಾಸನಾರೂಢನಾಗಿ, ತಾನು ಬಹಳ ಸಂಶಯ ಗೊಂಡಿರುವ ಸಕ್ಸರಿಗೆ ಮತಕ ವಿಷಯದಲ್ಲಿಯೂ ಬಹು ತಂಟೆ ಕೊಡುತ್ತಿದ್ದ ಹಿಂದೆ ಅವರು ಇನ್ನು ಸಹಿಸಲಾರದೆ, ಕ್ರಿ. ಶ. 1075ನೇ ಅಬ್ದ ಅವನ ಮೇಲೆ ಪಪ್ಪನ ಬಳಿಯಲ್ಲಿ ದೂರು ಹೇಳಿದರು. ಆಗ ಗ್ರೆಗೋರನು ಕೈಸರನನ್ನು ರೋಮಕ್ಕೆ ತನ್ನ ವಿಚಾರಣಸ್ಥಾನಕ್ಕೆ ಕರೆಸಿದನು. ಇವನು, ಬರಲೊಲ್ಲೆನೆಂದು, ಎದುರಿಸುವಾಗ ಪಪ್ಪನು ಉನ್ಮತ್ತನಾಗಿ, ಮರುವರುಷಕ್ಕೆ ಅವನ ಮೇಲೆಯೂ ಅವನ ಪಕ್ಷಕರ ಮೇಲೆಯೂ ಒಂದು ವಜ್ರದಂತೆ ಬನ್ನೆಂಬ ಬಹಿಷ್ಕಾರಾಜ್ಞೆ ಜಡಿದು, ಅವನ ಕೈಸರತ್ವ ತೆಗೆದು, ಅವನ ಪ್ರಜೆಯವರು, ನಂಬಿಗಸ್ತರೂ ವಿಧೇಯರೂ ಆಗಿರುವೆವೆಂದು, ಅವನಿಗೆ ಕೊಟ್ಟ ಆಣೆ ತಳ್ಳಿ ಬಿಟ್ಟನು[3]. ಹೈನ್ರೀಕನು ತನ್ನ ದುರ್ನಡತೆಯಿಂದ ಹೇರಳ ಗೆರ್ಮಾನ ಪ್ರಭುಗಳಿಗೆ ಮೆಚ್ಚದಿರಲಿಕ್ಕೆ, ಇವರು, ನೀವು ಒಂದು ವರುಷದೊಳಗೆ ಬಹಿಷ್ಕಾರಾಜ್ಞೆಯಿಲ್ಲದವರಾಗದಿದ್ದರೆ ಬೇರೊಬ್ಬ ಕೈಸರನನ್ನು ಸ್ವೀಕರಿಸುವೆವೆಂತ, ಬೆದರಿಸಿದ ಕಾರಣ ಇವನು ಮಧ್ಯ ಹಿಮಕಾಲದ ಕಷ್ಟದಲ್ಲಿ ಈತಲಿಯಕ್ಕೆ ಗಮಿಸಿ, ಆ ಸಮಯ ಅದರ ಉತ್ತರ ಭಾಗದಲ್ಲಿ ಕನೊಸ್ಸವೆಂಬ ಕೋಟೆಯೊಳಗೆ ಇರುವ ಪಪ್ಪನ ಹತ್ತರ ಜನ ಕಳುಹಿಸಿ, ಪ್ರಾಯಶ್ಚಿತ್ತ ಹೊಂದುವೆನೆಂದು, ದೈನ್ಯ ಪಟ್ಟು ಬೇಡಿ ಕೊಳ್ಳಲು, ಅವನಿಗೆ ಬಂದ ಪಪ್ಪನ ಅಪ್ಪಣೆಯ ಮೇಲೆ ಅವನು ಕ್ರಿ. ಶ. 1077ನೇ ವರುಷದ ಪ್ರಥಮ ಮಾಸದ ಕಠಿಣ ಶೀತದಲ್ಲಿ ತಲೆ ಕಾಲುಗಳು ಬರೆವಾಗಿ ಬಿಟ್ಟು, ಕೈಸರತ್ವದ ಗುರ್ತುಗಳಿಲ್ಲದೆ, ಬಹು ತರಕಲಾದದೊಂದು ಕಂಬಳಿ ಮಾತ್ರ ಹೊದ್ದು ಕೊಂಡು, ನಿರಾಹಾರಿಯಾಗಿ, ಪ್ರಾತಃಕಾಲದಿಂದ ಸಾಯಂಕಾಲದ ತನಕ 3 ದಿವಸ ಕೋಟೆಯ ಒಳಬೈಲಿನಲ್ಲಿ ಬಿದ್ದು ಕೊಂಡಿರ ಬೇಕಾಯಿತು. 4ನೇ ದಿವಸದಲ್ಲಿ ಆ ಪಪ್ಪನು, ನೀವು ಹೀಗೆ ಮಾಡುವದು ಕ್ರಿಸ್ತನ ಆಜ್ಞೆಗೆ ವಿರೋಧವಾದ ಅಸಹ್ಯ ಕ್ರೂರತನವೇ! ಎಂತ, ತನಗೆ ಬುದ್ಧಿ ಹೇಳುತ್ತಿರುವ ತನ್ನ ಗೆಳೆಯರ ಮಾತು ಕೇಳಿ ಕೊಂಡು, ಹೈನ್ರೀಕನನ್ನು ತನ್ನ ಸನ್ನಿ

---

1) 103ನೇ ಪಾನು. 2) 327ನೇ ಪಾನು. 3) 283, 326ನೇ ಪಾನು ಸರಿ ನೋಡು.

ಥಾನಕ್ಕೆ ಬರಲೀಸಿ—ಗೆರ್ಮಾನಿಯದಲ್ಲಿ ನೆರೆಯ ತಕ್ಕದೊಂದು ರಾಜ್ಯಸಭಾಸದಸಿನಲ್ಲಿ ನನ್ನಿಂದಲೂ ಪ್ರಭುಗಳಿಂದಲೂ ಹೆಚ್ಚು ನಿರ್ಣಯವಾಗುವನಕ ನೀ ಕೈಸರತ್ವ ನಡಿಸ ಬೇಡ; ಇದಕ್ಕೊಡಂಬಡುತ್ತಿಯೋ? ಹೇಳೆಂದು, ಬೆಸಸಲು, ಅವನು ಹೊಸ ಕಷ್ಟಕ್ಕಂಜಿ, ಒಡಂಬಡಲು, ಪಪ್ಪನು ಅವನನ್ನು ತಿರಿಗಿ ಸಭೆಯಲ್ಲಿ ಶೇರಿಸಿದನು.

ಆದರೆ ಹೈನ್ರೀಕನು, ತಾನು ಬಯಸಿದಂತೆ ಆಗಲಿಲ್ಲವೆಂತ, ಮನೋರೋಷವುಳ್ಳವನಾಗಿ, ಪಪ್ಪನನ್ನು ಬಿಟ್ಟು ಹೋಗಿ, ಲೊಂಬರ್ದಿಕ (ಲೊಂಗೊಬರ್ದಿಕ) ಪ್ರಭುಗಳ[1] ಸಂಗಡ ಅವನನ್ನು ತಗ್ಗಿಸುವದಕ್ಕೆ ಒಂದು ಒಪ್ಪಂದ ಮಾಡಿ ಕೊಳ್ಳುವಷ್ಟರಲ್ಲಿ ಗೆರ್ಮಾನ ಪ್ರಭುಗಳು ಸ್ವಾಬೆನಿನ (ಸ್ವೇವೆನಿನ) ರೂದೊಲ್ಫನೆಂಬವನನ್ನು, ಪ್ರತಿಕೈಸರನೆಂದು, ಆರಿಸಿ ಕೊಂಡರು. ಅದಕ್ಕೆ ಹೈನ್ರೀಕನು ಬೇಗ ಗೆರ್ಮಾನಿಯಕ್ಕೆ ಹಿಂದಿರಿಗಿ, ಆ ರೂದೊಲ್ಫನಿಗೆದುರಾಗಿ ಕದನವಾಡಲು, ಇವನು ಹತನಾದನು. ಬಳಿಕ ಹೈನ್ರೀಕನು ಗೆರ್ಮಾನಿಯದ ಅಧ್ಯಕ್ಷರನ್ನು ಕೂಡಿಸಿ, ಗ್ರೆಗೋರನ ಉದ್ಯೋಗ ತೆಗೆಸಿ, 3ನೇ ಕ್ಲೇಮೆಂತನೆಂಬವನಿಗೆ ಕೊಡಿಸಿ, ಈ ಪ್ರತಿಪಪ್ಪನ ಸಹಿತ ಈತಲಿಯಕ್ಕೆ ಹೋಗಿ, ರೋಮಪುರಕ್ಕೆ ಮುತ್ತುವವನಾಗಿ, 3 ವರುಷಕ್ಕೀಚೆ ಕ್ರಿ. ಶ. 1084ನೇದಕ್ಕೆ ಅದನ್ನು ಸಾಧಿಸಿ, ಕ್ಲೇಮೆಂತನಿಂದ ಕೈಸರಾಭಿಷೇಕ ಹೊಂದಿ, ಗ್ರೆಗೋರನು ಹೊಕ್ಕೊಂಡ ಎಂಗೆಲ್ಸ್ಬುರ್ಗಿಗೆ ಸುತ್ತು ಹಾಕಿದನು; ಇದು ರೋಮಪುರದಲ್ಲಿ ಆ ಹದ್ರಿಯಾನ ಕೈಸರನ[2] ಸಮಾಧಿಯಾದದೊಂದು ಕೋಟೆಯು. ಆ ಸಮಯ ಈತಲಿಯದ ದಕ್ಷಿಣ ಭಾಗದಲ್ಲಿ ನೊರ್ಮನ್ನರು[3] ನೆಲೆ ಗೊಂಡಿದ್ದರು; ಅವರು ಕ್ರಿ. ಶ. 912ನೇ ವರುಷಕ್ಕೆ ಫ್ರಂಚು ದೇಶದ ಉತ್ತರ ತೀರದಲ್ಲಿ ಒಂದು ಪ್ರದೇಶ ಪಡ ಕೊಂಡು, ಅಲ್ಲಿಂದ ಈತಲಿಯಕ್ಕೆ ಬಂದು, ಕ್ರಿ. ಶ. 1021ನೇದಕ್ಕೆ 2ನೇ ಹೈನ್ರೀಕನೆಂಬ ಗೆರ್ಮಾನ ಕೈಸರನ ಕೈಯ ಕೆಳಗೆ ದಕ್ಷಿಣ ಈತಲಿಯದಲ್ಲಿ ಗ್ರೇಕರನ್ನು ಭಂಗ ಪಡಿಸಿ[4], ಗ್ರೆಗೋರನ ಗೆಳೆಯರಾಗಿದ್ದರು. ಅವರು ಗ್ರೆಗೋರನ ಇಕ್ಕಟ್ಟು ಕಂಡು, ದೊಡ್ಡ ಸೇನೆಯಾಗಿ ಸಮಿಾಪಿಸಲು, 4ನೇ ಹೈನ್ರೀಕನು ತಿರಿಗಿ ಬನ್ನಿನೊಳಗಿನವನಾಗಿ, ಗೆರ್ಮಾನಿಯಕ್ಕೆ ಮರಳ ಬೇಕಾಯಿತು. ತದನಂತರ ಆ ನೊರ್ಮನ್ನರು ಗ್ರೆಗೋರನನ್ನು ಬಿಡಿಸಿ, ರೋಮಪುರದವರ ಹಗೆಗೋಸ್ಕರ ಅವನನ್ನು ಪಪ್ಪಕ ರಾಷ್ಟ್ರದ ಗಡಿಯ ಹೊರಗಿನ ತಮ್ಮ ಶೀಮೆಗೊಯಿದರು. ಅಲ್ಲಿ ಅವನು ಮರುವರುಷ ಅಂದರೆ ಕ್ರಿ. ಶ. 1085ನೇದರಲ್ಲಿ ಸತ್ತನು.

ಆ ಗ್ರೆಗೋರನ ಉನ್ಮತ್ತ ಗರ್ವವನ್ನು[5] ಹೆಚ್ಚಾಗಿ ತಿಳಕೊಳ್ಳುವದಕ್ಕೋಸ್ಕರ ಅವನು ಬರೆದ ಮಾತುಗಳಲ್ಲಿ ಒಂದೆರಡು ಹೇಳೋಣ; ಯಾವವಂದರೆ—ಪಪ್ಪನು

---

1) 317ನೇ ಪಾನು ಸರಿ ನೋಡು. 2) 256ನೇ ಪಾನು. 3) 321ನೇ ಪಾನು. 4) 214, 282ನೇ ಪಾನು. 5) ಮತ್ತಾ. 20, 25—28; 23, 8. 10; ಯೋಹಾ. 18, 36; ಲೂಕ. 17, 20.

ಭೂಮಿಯಲ್ಲಿ ಕ್ರಿಸ್ತನ ಪ್ರತಿನಿಧಿಯು, ಆದ್ದರಿಂದ ಸಕಲ ಲೌಕಿಕ ಅಧಿಕಾರದ ಮೇಲೆಯೂ ಸರ್ವ ಕೈಸರ ರಾಜರುಗಳ ಮೇಲೆಯೂ ಅವನಿಗೆ ವಿಚಾರಣಾಧಿಕಾರವುಂಟು; ಪಪ್ಪನ ಅಧಿಕಾರವೊಂದೇ ದೇವರಿಂದ ಬಂದಂಥಾದ್ದು; ಬೇರೆಲ್ಲಾ ಅಧಿಕಾರವು, ಚಂದ್ರನಿಗೆ ಸೂರ್ಯನಿಂದ ಪ್ರಕಾಶ ಬರುವಂತೆ, ಪಪ್ಪನಿಂದ ಬರುವಂಥಾದ್ದು; ಅದು ಕಾರಣ ಪಪ್ಪನು ಮಾತ್ರ ನ್ಯಾಯಪ್ರಮಾಣಗಳನ್ನು ಕೊಡ ಶಕ್ತನು, ನ್ಯಾಯಪ್ರಮಾಣಗಳಿಂದ ಬಿಡಿಸ ಶಕ್ತನು; ಅವನೊಬ್ಬನೇ ಮಾತ್ರ ಯಾವದೊಂದು ನ್ಯಾಯಪ್ರಮಾಣದೊಳಗೂ ಇರುವದಿಲ್ಲ. ರೋಮಕ ಸಭೆಯು (ಅಂದರೆ ಪಪ್ಪನು) ಎಂದಿಗೂ ಒಂದು ತಪ್ಪು ಮಾಡಲಿಲ್ಲ, ಮತ್ತು ಎಂದೆಂದಿಗೂ ಒಂದು ತಪ್ಪು ಮಾಡಲಿಕ್ಕಿಲ್ಲ; ಯಾಕಂದರೆ ರೋಮಕ ಪಪ್ಪನು ಪರಿಶುದ್ಧನು, ಯಾಕಂದರೆ ಒಂದೇ ಹೆಸರು ಮಾತ್ರ(ಅಂದರೆ ಪಪ್ಪನದೇ ಮಾತ್ರ[1]) ಲೋಕದಲ್ಲಿದೆ.—

ದೊಡ್ಡನೆಂಬ ಅಲ್ಫ್ರೇದನ[2] ಮರಣಕ್ಕೀಚೆ ಕ್ರಿ. ಶ. 901ನೇ ವರುಷದಿಂದ ಇಂಗ್ಲಂದಿನಲ್ಲಿ ದೇನರು (ನೊರ್ಮನ್ನರು) ಅಡಿಗಡಿಗೆ ಹೆಚ್ಚು ಹೆಚ್ಚು ಅಧಿಕಾರ ಪಡಕೊಳ್ಳುತ್ತಿದ್ದರು; 1016ನೇ ವರುಷದಲ್ಲಿ ಕ್ನೂತನೆಂಬ ಅವರ ಅರಸು ಇಂಗ್ಲಂದಿನಲ್ಲಿಯೂ ಸ್ಕೋತ್ಲಂದಿನಲ್ಲಿಯೂ ಅರಸಾದ ಮೇಲೆ ಅವನು, ಅವನ ದೇನರು ಸಹಿತ, ಕ್ರೈಸ್ತರಾದರು. ಬಳಿಕ 1042ನೇ ವರುಷ ಅಂಗ್ಲಸಕ್ಸವಂಶಜನಾದ 3ನೇ ಎದ್ವರ್ದನು ರಾಜನಾದನು. ತರುವಾಯ 1066ನೇದಕ್ಕೆ ನೊರ್ಮನ್ನರು ಫ್ರಂಚು ದೇಶದಿಂದ[3] ಇಂಗ್ಲಂದಿಗೆ ಬಂದು, ಅಭಿಯೋಗಿಸಿ, ಅದನ್ನು ಸಾಧಿಸಿ ಕೊಂಡರು. ಇವರ ಅರಸಾದ 1ನೇ ವಿಲ್ಲಿಯಮನು ಕ್ರಿ. ಶ. ಆ 1066ನೇ ವರ್ಷದಿಂದ 1087ನೇದರ ತನಕ ಅಲ್ಲಿ ಆಳುತ್ತಿದ್ದ ಕಾಲದೊಳಗೆ ಆ 7ನೇ ಗ್ರೆಗೋರನು ಪಪ್ಪತನ ಮಾಡುತ್ತಿದ್ದನಲ್ಲ? ಇವನು ಒದ್ದಾಡುತ್ತಿದ್ದರೂ ತನ್ನದಾದ ಆ ಸಭೋದ್ಯೋಗಿಗಳ ಅವಿವಾಹಿತ್ವಾಜ್ಞೆಯನ್ನು[4] ಇಂಗ್ಲಂದಿನಲ್ಲಿ ಪೂರಾ ಸಾಗಿಸಲಿಕ್ಕೆ ಅಸಮರ್ಥನಾಗಿದ್ದನು. ಅವನು ರಾಜಕ ಇನ್ವೆಸ್ತಿತೂರನ್ನು[5] ಅಲ್ಲಿ ಕೀಳಲಿಕ್ಕೆ ಕೈ ಹಚ್ಚಿ, ಯಾರೂ ಈ ವಿಷಯದಲ್ಲಿ ಅವನ ಅಪ್ಪಣೆ ಲಕ್ಷಿಸದ್ದರಿಂದ ಅಲ್ಲಿಯ ಅಧ್ಯಕ್ಷರಿಗೆ, ತನ್ನ ಹತ್ತರ ಬರ ಬೇಕೆಂದು, ಆಜ್ಞಾಪಿಸಲು, ವಿಲ್ಲಿಯಮನು ಅಡ್ಡ ಬಂದು, ಆ ಪಪ್ಪನಿಗೆ—ನಿನಗೆ ನಂಬಿಗಸ್ತನಾಗಿರುವದಕ್ಕೆ ನನಗೆ ಎಂದೂ ಮನಸ್ಸಿರಲಿಲ್ಲ, ಅದಕ್ಕೆ ಈಗಲೂ ನನಗೆ ಮನಸ್ಸಿಲ್ಲ; ಹ್ಯಾಗಂದರೆ, ನಿನಗೆ ನಂಬಿಕೆ ತೋರಿಸುವೆನೆಂದು, ನಾನು ಪ್ರಮಾಣಿಸಲಿಲ್ಲ; ಮತ್ತೆ, ನನ್ನ ಪೂರ್ವಾಧಿಕಾರಿಗಳಲ್ಲಿ ಯಾರೂ ಹಾಗೆ ಮಾಡಿದರೆಂದು, ನನಗೆ ಸುದ್ದಿ ಇಲ್ಲ.—ಗ್ರೆಗೋರನು ಆ ಕಾಗದ ಓದಿ, ಸುಮ್ಮಗಿರ ಬೇಕಾಯಿತು.

1) ಅಪೊ. ಕ್ರಿ. 4, 12. 17 ಎಂತ, ಸರಿ ನೋಡು. 2) 320ನೇ ಪಾನು. 3) 331ನೇ ಪಾನು. 4) 328ನೇ ಪಾನು. 5) 329ನೇ ಪಾನು.

ಗ್ರೆಗೋರನು ಸತ್ತ ಮೇಲೆ ಗೆರ್ಮಾನಿಯದ 4ನೇ ಹೈನ್ರೀಕನ ಆ ಮುಖ್ಯ ಎದುರಾಳಿಯು ಇಲ್ಲದೆ ಹೋಗಿದ್ದರೂ ಕೈಸರನು ಅವನ ಪಕ್ಷದ ಪಪ್ಪರ ದೆಸೆಯಿಂದ ಇನ್ನೂ ಬನ್ನಿನೊಳಗಿದ್ದುಳಿದನು. ಒಬ್ಬ ಹೊಸ ಪ್ರತಿಕೈಸರನು ಗೆಲ್ಲದೆ, ಅಡಗಿ ಹೋದಾಗ್ಯೂ 2ನೇ ಪಷಾಲಿಯೆಂಬ ಪಪ್ಪನು ಹೈನ್ರೀಕ ಕೈಸರನ ಸ್ವಂತ ಕುಮಾರನಾದ ಹೈನ್ರೀಕನನ್ನು ಪಿತನ ಮೇಲೆ ಕಲಹ ಗೈಯಲಿಕ್ಕೆ ಪ್ರೇರಿಸುವಂಥ ನೀಚತನಕ್ಕೆ ಹೆದರದಿರಲಾಗಿ, ಆ ಕುಮಾರನು ಕಪಟೋಪಾಯದಿಂದ ತನ್ನ ವೃದ್ಧ ಪಿತನನ್ನು ಶೆರೆ ಹಿಡಿದು, ಸಿಂಹಾಸನ ಬಿಡುತ್ತೇನೆಂದು, ಹೇಳುವದಕ್ಕೋಸುಗ ಅವನಿಗೊತ್ತಾಯ ಪಡಿಸಿ, ಹೀಗೆ ತಾನು 5ನೇ ಹೈನ್ರೀಕನೆಂಬ ಕೈಸರನೆನ್ನಿಸಿ ಕೊಳ್ಳುವವನಾದನು. 4ನೇ ಹೈನ್ರೀಕನು ಕ್ರಿ. ಶ. 1106ನೇ ವರುಷ ದೀನ ಸ್ಥಿತಿಯಲ್ಲಿ ತೀರಿದನು. ಆದರೆ ಅವನು ಯೌವನದಲ್ಲಿ ಬುದ್ಧಿಗೆಟ್ಟವನಾಗಿದ್ದರೂ ಆ ಮೇಲೆ ಒಳ್ಳೇ ಗುಣಸ್ಥನಾಗಿದ್ದನು; ಅವನ ಮೇಜಿಗೆ ಯಾವಾಗಲೂ ಬಡವರೂ ತರತರದ ರೋಗಿಗಳೂ ಬರುತ್ತಿದ್ದರು; ಕುಂಟರನ್ನೂ ಕುರುಡರನ್ನೂ ವಕ್ರಾಂಗರನ್ನೂ ತನ್ನ ಕೋಣೆಗಳೊಳಗೆ ಜೋಕೆ ಮಾಡುತ್ತಿದ್ದನು; ತನ್ನ ಆದಾಯದಲ್ಲಿ ಒಂದು ಅಂಶವನ್ನು ದರಿದ್ರರ ಪೋಷಣಕ್ಕೋಸ್ಕರವೇ ನೇಮಿಸಿಟ್ಟಿದ್ದನು; ಅವನು ತಾನು ಅನಾಥರ ಹತ್ತರ ಹೋಗಿ, ಅವರ ಸುಖದುಃಖ ವಿಚಾರಿಸಿ ಕೊಳ್ಳುತ್ತಿದ್ದನು; ಬರಗಾಲದಲ್ಲಿ ಅವನು ಸಾವಿರಾರು ಜನರನ್ನು ಸಾಕುತ್ತಿದ್ದನು. ಅವನು ಈ ಪ್ರಕಾರ ಹೃತ್ಪರಿಣಾಮ ಪಟ್ಟವನಾಗಿ ಸತ್ತಿದ್ದಾಗ್ಯೂ ಅವನ ಮೇಲಿನ ಬನ್ನನ್ನು ಪಪ್ಪನು ತೆಗೆಯಲಿಲ್ಲ; ಸಮಾಧಿಸ್ಥಳಗಳೆಲ್ಲವೂ ಪಪ್ಪನ ಪುಣ್ಯಾಹವಾಚನದೊಳಗಿರುವದರಿಂದ ಬಹಿಷ್ಕೃತನಾದಂಥ ಅವನ ಹೆಣವು ಐದು ವರುಷ ಭೂಮಿಯ ಮೇಲೆ ನಿಂತಿದ್ದ ಬಳಿಕ, ಆಗಿನ ಆ 2ನೇ ಪಷಾಲಿ ಪಪ್ಪನು ಬಹಿಷ್ಕಾರಾಜ್ಞೆ ತೆಗೆದು, ಹುಗಿಯಲಾಯಿತು.

5ನೇ ಹೈನ್ರೀಕನು ಪಪ್ಪರ ತೊಂದರೆ ಇಲ್ಲದೆ ಸಿಂಹಾಸನದಲ್ಲಿ ಕೂತು ಕೊಳ್ಳಲಿಲ್ಲ; ಅವರ ಸಂಗಡ ಇನ್ವೆಸ್ತಿತೂರಿನ ತುಸಕ ಅನೇಕ ಜಗಳ ನಡೆದನಂತರ ಕ್ರಿ. ಶ. 1122ನೇ ವರುಷ ವೊರ್ಮ್ಸ್ ಎಂಬ ಪಟ್ಟಣದಲ್ಲಿ[1] 2ನೇ ಕಲಿಕ್ಸ್ತ ಪಪ್ಪನ ಸಂಗಡ ಒಪ್ಪಂದವಾದದ್ದೇನಂದರೆ—ಇನ್ನು ಮುಂದೆ ಕೈಸರನ ಅಥವಾ ಅವನ ಒಬ್ಬ ಪ್ರತಿನಿಧಿಯ ಸನ್ನಿಧಾನದಲ್ಲಿ ಸಭಾಧ್ಯಕ್ಷರನ್ನಾರಿಸ ಬೇಕು; ಪಪ್ಪನು ಅವರಿಗೆ ಉಂಗರವನ್ನೂ ಕೋಲನ್ನೂ ಕಳುಹಿಸಿ ಕೊಡ ಬೇಕು; ಕೈಸರನು ರಾಜಕ ಅಧಿಕಾರದ ಸೌಜ್ಞೆಗಾಗಿ[2]

1) 316ನೇ ಪಾನು. 2) ಹಿಂದೆ ಗೊತ್ತಾದಂತೆ (319ನೇ ಪಾನು) ದೊಡ್ಡನೆಂಬ ಕರ್ಲ ಕೈಸರನ ಕಾಲದಾರಭ್ಯ ಪಪ್ಪಕ ಸಭಾಧ್ಯಕ್ಷರು ದೊಡ್ಡ ರಾಜೋದ್ಯೋಗಗಳನ್ನು ವಹಿಸಿ ಕೊಳ್ಳುವ ಪದ್ಧತಿ ಹುಟ್ಟಿತ್ತು; ಬಳಿಕ ಅಂಥ ಸಭಾಧ್ಯಕ್ಷರೆಲ್ಲರೂ ರಾಜ್ಯದ ಪ್ರಭುಗಳಲ್ಲಿ ಶೇರಿ, ಮಾಂಡಲಿಕರೆನ್ನಿಸುವವರಾಗಿದ್ದರು; ದಂಡಿಟ್ಟು ಕೊಂಡು ಯುದ್ಧಕ್ಕೆ ಹೊರಡುವದು ಸಹ ಅವರಲ್ಲಿ ಬಹು ರೂಢಿ. ಕ್ರಿ. ಶ. 1256 ಅಬ್ದುಕ್ಕೀಚೆ ಮೂವರು ಮತಕ ಪ್ರಭುಗಳೂ ನಾಲ್ವರು ರಾಜಕ ಪ್ರಭುಗಳೂ ರಾಜಶೋಧಕಕಾರ್ಯ ನಡಿಸುವವರಾದರು.

ಒಂದು ರಾಜದಂಡವೆಂಬ ಕೋಲನ್ನು ಅವರ ಕೈಯಲ್ಲಿಡ ಬೇಕು.—2ನೇ ಕಲಿಕ್ಸ್ತನ ಉತ್ತರೋದ್ಯೋಗಿಯ ಹಿಂದೆ ಕ್ರಿ. ಶ. 1130ನೇ ಅಬ್ದ ಸುತ್ತ ಕರ್ದಿನಾಲ್ ಉದ್ಯೋಗಿಗಳ[1] ಮತಿಭೇದದ ದೆಸೆಯಿಂದ ಒಂದೇ ಹೊತ್ತಿಗೆ ಇಬ್ಬರು ಪಪ್ಪರು[2] 8 ವರುಷವೇ ಅಧಿಕಾರದಲ್ಲಿದ್ದಂತಾಯಿತು.

5ನೇ ಹೈನ್ರೀಕನಿಗೀಚೆ ಇಬ್ಬರು ಕೈಸರರು ಆಳಿದ ಮೇಲೆ ಕ್ರಿ. ಶ. 1152ನೇ ವರುಷ ಬರ್ಬರೊಸ್ಸನು (ಕೆಂಗಡ್ಡದವನು) ಎಂಬ 1ನೇ ಫ್ರೀದೆರೀಕನು ಗದ್ದುಗೆಯನ್ನೇರಿದನು. ಇವನು 4ನೇ ಹದ್ರಿಯಾನ ಮುಂತಾದ ಪಪ್ಪರೆದುರಿಗೆ ತನ್ನ ಅಧಿಕಾರವನ್ನು ಸ್ಥಾಪಿಸುವದಕ್ಕೂ ನಂಬಿಗೆ ಗೆಟ್ಟ ಲೊಂಬರ್ದರನ್ನು[3] ಶಿಕ್ಷಿಸುವದಕ್ಕೂ 5 ಸಾರಿ ದಂಡಿನೊಡನೆ ಈತಲಿಯಕ್ಕೆ ಗಮಿಸುತ್ತಿದ್ದಾಗ್ಯೂ ಬಹಳ ಫಲ ದೊರಕಲಿಲ್ಲ.

ಬರ್ಬರೊಸ್ಸನು ಗೆರ್ಮಾನಿಯವನ್ನು ಪರಿಪಾಲಿಸುತ್ತಿರುವ ಸಮಯದಲ್ಲಿ 2ನೇ ಹೆನ್ರಿಯು (ಹೈನ್ರೀಕನು) ಇಂಗ್ಲಂದನ್ನಾಳುತ್ತಿದ್ದನು. ಪಪ್ಪರು ನಡಿಸುತ್ತಲೇ ಬಂದ ಅಧಿಕಾರಾಭಿಮಾನವುಳ್ಳ ಪ್ರಯತ್ನಗಳ ಮೂಲಕ ಇಂಗ್ಲಂದಿನ ಸಭೋದ್ಯೋಗಿಗಳು ರಾಜರ ಅಧೀನತೆಯೊಳಗಿಂದ ಪೂರ್ಣ ಬಿಡುಗಡೆಯಾಗಿದ್ದರು. ಹೆನ್ರಿಯು ಅದಕ್ಕೊಪ್ಪದೆ, ಕ್ರಿ. ಶ. 1164ನೇ ವರುಷ ಒಂದು ಪ್ರಜಾಸಂಘದೊಳಗೆ—ಪೂರ್ವದಲ್ಲಿ ನ್ಯಾಯವಿದ್ದಂತೆ ರಾಜನು ತಿರಿಗಿ ಮುಖ್ಯ ಸಭೋದ್ಯೋಗಿಗಳನ್ನಾರಿಸಿ, ಲೌಕಿಕ ಕಾರ್ಯಗಳಲ್ಲಿ ಸಕಲರ ಮೇಲೆಯೂ ವಿಚಾರಣೆ ಮಾಡ ಬೇಕು[4]; ಪಪ್ಪರು ರಾಜೋದ್ಯೋಗಿಗಳಿಗೆ ಬಹಿಷ್ಕಾರಾಜ್ಞೆ ಮಾಡ ಬಾರದು; ಯಾರಾದರೂ ರಾಜನದೊಂದು ತೀರ್ಪಿನ ಮೇಲೆ ಪಪ್ಪನೊಡನೆ ಪುನರ್ವಿಚಾರಣಕ್ಕಾಗಿ ದೂರು ಹೇಳ ಬಾರದು! ಎಂತ, ನಿರ್ಣಯಿಸಿದನು; ಆಗ ಅವನ ಪ್ರಧಾನ ಮಂತ್ರಿಯೂ ಅವನ ಮುಖದಿಂದಲೇ ಕಂತರ್ಬೆರಿಯ[5] ಪ್ರಧಾನಾಧ್ಯಕ್ಷನೂ ಆಗಿರುವ ಬೆಕ್ಕೆತನೆಂಬವನು ಉಳಿದ ಸಭೋದ್ಯೋಗಸ್ಥರ ಸಂಗಡ ಅವನ ನಿರ್ಣಯಗಳಿಗೆ ಅಸ್ತುಬಟ್ಟು, ಪ್ರಮಾಣಿಸಿದನು. ಬಳಿಕ ಆ ಬೆಕ್ಕೆತನು ಒಮ್ಮಿಂದೊಮ್ಮೆ ಬೇರೆ ಮನಸ್ಸಿನವನಾಗಿ, ಅಂದಿನ 3ನೇ ಅಲೆಕ್ಸಂದರನೆಂಬವನೊಬ್ಬ ಪಪ್ಪನ[6] ಬಾಯಿಯಿಂದ ತನ್ನ ಪ್ರಮಾಣವನ್ನು ಒಂದು ಚಂಡಿನಂತೆ ತಳ್ಳಿಸಿ ಕೊಂಡಂದು[7] ನಾಲ್ವರು ಸೇನೋದ್ಯೋಗಿಗಳು ಅವನನ್ನು ಕೊಂದರು. ತರುವಾಯ ಪಪ್ಪಕರು, ರಾಜನು ಕೊಲ್ಲಿಸಿದ ಬೆಕ್ಕೆತನ ಹೆಣವು ಹುಗಿದಿರುವ ಸಮಾಧಿಯಿಂದ ನಾನಾ ತರದ ಅದ್ಭುತಗಳಾಗುತ್ತ

1) 327ನೇ ಪಾನು. 2) 326ನೇ ಪಾನು ಸರಿ ನೋಡು. 3) 331ನೇ ಪಾನು. 4) 181ನೇ ಪಾನು. 5) 307ನೇ ಪಾನು. 6) ಇವನು ಮಾತ್ರವಲ್ಲದೆ 4ನೇ ವಿಕ್ತೋರನೆಂಬವನು ಸಹ ಆಗ ಪಪ್ಪನಾಗಿರುತ್ತಿದ್ದನು; ಈ ಪಾನಿನ ಮೇಲ್ಗಡೆ ನೋಡು. 7) 283, 326, 330, 333ನೇ ಪಾನುಗಳನ್ನು ಸರಿ ನೋಡು.

ವೆಂತ, ಸುದ್ದಿ ಹುಟ್ಟಿಸಲು, ಮೂಢ ಪ್ರಜೆಯು ನಂಬಿ, ಅರಸನಿಗೆ ಇನ್ನು ಒಲಿಯದೆ, ಮೊರಮೊರೆದು, ಅವನ ಮಕ್ಕಳು ಸಹ ಅವನಿಗೆದುರಾಗಿ ಕಲಹ ತೆಗೆದ ಕಾರಣ ಹೆನ್ರಿಯು ಕ್ರಿ. ಶ. 1174ನೇ ವರುಷ ಸಭೋದ್ಯೋಗಿಗಳ ಅಪ್ಪಣೆಯಿಂದ ಆ ಸಮಾಧಿಯಲ್ಲಿ ಅಪಮಾನಕರವಾದ ಪ್ರಾಯಶ್ಚಿತ್ತ ಹೊಂದಿ, ತನ್ನ ಆ ನಿರ್ಣಯಗಳನ್ನು ಕಿತ್ತು ಹಾಕುವ ಅವಶ್ಯವಾಯಿತು; ಆದರೆ ಪಪ್ಪನು ಆ ಬೆಕ್ಕೆತನನ್ನು ದೊಡ್ಡ ಸಂತರೊಳಗೆ ಒಟ್ಟಿದನು[1].

ಕ್ರಿ. ಶ. 1198ನೇ ವರುಷದಿಂದ 1216ನೇದರ ವರೆಗೆ ಪಪ್ಪಪೀಠದಲ್ಲಿ ಕೂತುಕೊಂಡಿರುತ್ತಿದ್ದ ಅತಿ ಕ್ರೂರನಾದ[2] 3ನೇ ಇನ್ನೊಕೆಂತನು ಗರ್ವದಲ್ಲಿ 7ನೇ ಗ್ರೆಗೋರನಿಗೆ ಹ್ಯಾಗೂ ಸರಿಯಾದವನು; ಅವನು, ಗ್ರೆಗೋರನಂತೆ[3], ಪಪ್ಪರ ಅಧಿಕಾರವನ್ನು ಕುರಿತು ನುಡಿದ ದರ್ಪದ ಮಾತುಗಳು ಕ್ರಿಸ್ತನ ದ್ರೋಹವೇ ನಿಶ್ಚಯ. ಅವನು ಚರ್ಚಿಸಿ ನೇಮಿಸಿದ್ದರಲ್ಲಿ ಒಂದು ವಿಷಯವೇನಂದರೆ—ಪಪ್ಪರು ಸರ್ವ ಲೋಕಕ್ಕೆ ಎರವು ಕೊಡುವವರು; ಕೈಸರರು ಮುಂತಾದ ಸಕಲ ರಾಜರು ತಮ್ಮ ರಾಜ್ಯಗಳನ್ನು ಅವರಿಂದ ಎರವು ಕೊಂಡಂಥವರಾಗಿರುವದರಿಂದ ಅವರು ಪಪ್ಪರಿಗೆ ಪ್ರತಿ ವರುಷ ಎರವಿನ ಬಡ್ಡಿ ತೆರುವದಕ್ಕೆ ಹಂಗಿಗರಾಗಿದ್ದಾರೆ.—ಅವನು ಬರ್ಬರೊಸ್ಸನ 3ನೇ ಉತ್ತರಾಧಿಕಾರಿಯಾದ 4ನೇ ಒತ್ತೊನನೆಂಬ ಕೈಸರನ ಮೇಲೆ ಬನ್ನೆಂಬ ಶಾಪವಿಟ್ಟು, ತನ್ನ ಶಿಷ್ಯನಾದ 2ನೇ ಫ್ರೀದೆರೀಕನಿಗೆ ಕೈಸರತ್ವವನ್ನು ಕೊಟ್ಟನು; ಫ್ರಂಚು ದೇಶದ ಆಗಿನ 2ನೇ ಫಿಲಿಪ್ಪನೆಂಬ[4] ರಾಜನು ತನ್ನ ಹೆಂಡತಿಯನ್ನು ಒಳ್ಳೇ ಕಾರಣವಿಲ್ಲದೆ ಬಿಟ್ಟು, ಮತ್ತೊಬ್ಬಳನ್ನು ಮದುವೆ ಮಾಡಿ ಕೊಂಡಿರಲು, ಅವನು ಬನ್ನಿನ ಮತ್ತು ಇಂತೆರ್ದಿಕ್ತಿನ ಭಯ ತೋರಿಸಿ, ತನ್ನ ಮೊದಲಿನ ರಾಣಿಯನ್ನು ತಿರಿಗಿ ಅಂಗೀಕರಿಸುವದಕ್ಕೆ ಅವನಿಗೆ ಒತ್ತಾಯ ಮಾಡಿದನು; ಸ್ಪಾನಿಯ ದೇಶದ ಮತ್ತು ಇದಕ್ಕೆ ನೆರೆಯಾದ ಪೊರ್ತುಗಲು ದೇಶದ ರಾಜರನ್ನು ಆ ಎರವಿನ ಬಡ್ಡಿಯನ್ನು ಸಲ್ಲಿಸಲಿಕ್ಕೆ ಪ್ರೇರಿಸಿದನು; ಯುರೋಪದ ಎಲ್ಲಾ ರಾಜ್ಯಕಾರ್ಯಗಳಲ್ಲೂ ತನ್ನ ಕೈ ಹಾಕಲಿಕ್ಕೆ ಪೇಚಾಡುತ್ತಿದ್ದನು.

ಅವನ ಕಾಲದಲ್ಲಿ ಯೋಹಾನನೆಂಬ ವಿಕಾರಗುಣಿಯಾದವನು ಇಂಗ್ಲಂದನ್ನಾಳುತ್ತಿದ್ದನು. ಕಂತರ್ಬೆರಿಯ[5] ಪ್ರಧಾನಾಧ್ಯಕ್ಷತೆಗೆ ತಕ್ಕವನೊಬ್ಬನನ್ನು ಆರಿಸಿಡಬೇಕಾದ ಸಮಯ ಇನ್ನೊಕೆಂತನು ಕ್ರಿ. ಶ. 1207ನೇ ವರುಷ ಯೋಹಾನನ ಚಿತ್ತ ಕೇಳದೆ, ಒಬ್ಬನನ್ನು ಆ ಉದ್ಯೋಗಕ್ಕೆ ನೇಮಿಸಲು, ಯೋಹಾನನು ಬಹಳ ಎದುರಾಟ ಮಾಡುವವನಾದನು. ತತ್‌ಕ್ಷಣವೇ ಆ ಪಪ್ಪನು ಸರ್ವ ಇಂಗ್ಲಂದಿನ ಮೇ

1) 320ನೇ ಪಾನು ಸರಿ ನೋಡು. 2) 48ನೇ, 49ನೇ ಸಂಧಿಗಳನ್ನು ನೋಡು. 3) 332ನೇ ಪಾನು. 4) ಫಿಲಿಪ್ಪ ಔಗುಸ್ತ. 5) 334ನೇ ಪಾನು.

ಲೆ ಇಂತೆರ್ದಿಕ್ತನ್ನು, ರಾಜನ ಮೇಲೆ ಬನ್ನನ್ನು[1] ಜಡಿದು ಬಿಟ್ಟನು. ಯೋಹಾನನು ಆ ಇಂತೆರ್ದಿಕ್ತನ್ನು ನಡಿಸುವ ಸಭೋದ್ಯೋಗಿಗಳನ್ನು ಕ್ರೂರತ್ವದಿಂದ ದಂಡಿಸಲೆಸಗಿದಾಗ ಇನ್ನೊಕೆಂತನು, ನಿನ್ನ ರಾಜತ್ವ ಹೋಯಿತೆಂದು, ಹೇಳಿ, ಇಂಗ್ಲಂಡನ್ನು ಫ್ರಂಚು ದೇಶದ ಆ 2ನೇ ಫಿಲಿಪ್ಪ ರಾಜನಿಗೆ, ಇನಾಮೆಂದು, ಕೊಡಲಿಕ್ಕೆ ಹಿಂದೆಗೆಯಲಿಲ್ಲ. ಇವನು ಅದನ್ನು ತಕ್ಕೊಳ್ಳಲಿಕ್ಕೆ ಸೌರಿಸಿ ಕೊಳ್ಳುವಂದು ಯೋಹಾನನು ಭೀತನಾಗಿ, ರೋಮಕ್ಕೆ ಹೋಗಿ, ದೈನ್ಯ ಪಟ್ಟು—ಪಪ್ಪನು ದಯೆ ಮಾಡಿ, ತನಗೆ ಇಂಗ್ಲಂದು ರಾಜ್ಯವನ್ನು ಎರವಾಗಿ ಕೊಡ ಬೇಕೆಂದು, ಬೇಡಿದನು. ಅದಕ್ಕೆ ಅವನ ಕೆಳಗಣ ಲೌಕಿಕ ಪ್ರಭುಗಳಲ್ಲದೆ ಮತಕ ಪ್ರಭುಗಳು ಕೂಡ ಶಿಟ್ಟು ಗೊಂಡು, ಪಪ್ಪನ ಸಂಗಡ ಸಹ ವಾದಿಸಿದ್ದು ನಿರರ್ಥಕವಾಗಲು, ಕ್ರಿ. ಶ. 1215ನೇ ಅಬ್ದ ಅವರು ಯೋಹಾನನನ್ನು ತಮಗೆ ಮಗ್ನ ಚಾರ್ತವೆಂಬ ನ್ಯಾಯಪ್ರಮಾಣವನ್ನು ಕೊಡುವದಕ್ಕೊಡಂಬಡಿಸಿದರು; ಇದರ ಪ್ರಕಾರ ಮೇಲಧಿಕಾರವು ರಾಜರಿಗೆ ತಪ್ಪಿ, ರಾಜಕ ಮತಕ ಪ್ರಭುಗಳ[2] ಮತ್ತು ಸಾಧಾರಣ ಗೃಹಸ್ಥರ ಸಭೆಯಾದ ಪಾರ್ಲಿಮೆಂತಿಗೂ ಪ್ರಜೆಗೂ ವಶವಾಯಿತು. ಹಾಗಾದರೆ ಸ್ವಾಧಿಕಾರವನ್ನಾಕ್ರಮಿಸಿ ಕೊಳ್ಳ ನೋಡಿದ ಇನ್ನೊಕೆಂತನ ಅಭಿಪ್ರಾಯವು ಆ ಕಡೆಯಲ್ಲಿ ಚನ್ನಾಗಿ ಸಾಗದೆ ಹೋಯಿತು.

ಆದರೆ ಕ್ರಿ. ಶ. ಆ 1215ನೇ ವರುಷ ಅವನು ರೋಮದಲ್ಲಿ ಒಂದು ದೊಡ್ಡ ಸಭಾಸಂಘವನ್ನು[3] ನೆರೆಸಿದನು; ಅದಕ್ಕೆ ಸುಮಾರು 40 ಪ್ರಧಾನಾಧ್ಯಕ್ಷರೂ 412 ಅಧ್ಯಕ್ಷರೂ 800 ಅಬ್ಬಾತರೂ ಕ್ರೈಸ್ತರೆಂಬ ಸುಮಾರು ಎಲ್ಲಾ ರಾಜರ ರಾಯಭಾರಿಗಳೂ ಕೂಡಿ ಬಂದರು. ಹೀಗಿರಲಾಗಿ ಪಪ್ಪಕತ್ವವು ಆಗ ಗಗನಕ್ಕೇರಿದ ಹಾಗಾಯಿತು; ಅದು ಆ ಮೇಲೆ ಫಕ್ಕನೆ ಹಿಸಿದು ಬೀಳುವದು ದಿವ್ಯ ನ್ಯಾಯವೇ[4]. ಇನ್ನೊಕೆಂತನು ಸತ್ತಾಗ ಆ 2ನೇ ಫ್ರಿದೆರೀಕ ಕೈಸರನು[5], ಬರ್ಬರೊಸ್ಸನೆಂಬ ತನ್ನ ಅಜ್ಜನ ಹಾಗೆ, ಪಪ್ಪರ ಅತ್ಯಧಿಕಾರ ಮುರಿಯಲಿಕ್ಕೂ ಲೊಂಬರ್ದಿಯದಲ್ಲಿ ತನ್ನ ಅಧಿಕಾರ ಪುನಃಸ್ಥಾಪಿಸಲಿಕ್ಕೂ ತೊಡಗಿದ್ದರಿಂದ ನಷ್ಟ ಬಂತಷ್ಟೇ; ಪಪ್ಪರು ಕುಪಿತರಾಗಿ, ಇನ್ನು ಮುಂದೆ ಫ್ರಂಚು ದೇಶದ ರಾಜರ ಸಹಾಯದಿಂದ ಈತಲಿಯದಲ್ಲಿ ಗೆರ್ಮಾನ ಕೈಸರರ ಬಲವನ್ನು ಕುಂದಿಸುತ್ತಾ ಬಂದನು. ಆದರೆ ಈ ಸಂಗತಿಯಿಂದಲೇ ಪಪ್ಪರು ಫ್ರಂಚು ದೇಶಾಧಿಪತಿಗಳಿಗೆ ಪೂರಾ ಅಧೀನರಾದರು.

3ನೇ ಇನ್ನೊಕೆಂತನ 17ನೇ ಉತ್ತರಾಧಿಕಾರಿಯಾಗಿ 1294ನೇ ವರುಷದಿಂದ 1303ನೇ ವರುಷದ ವರೆಗೆ ಆಳುತ್ತಿದ್ದ 8ನೇ ಬೊನಿಫಕಿಯನೆಂಬ ಪಪ್ಪನು ಸುಂದರ[6]

---

1) 329, 330ನೇ ಪಾನು. 2) 333ನೇ ಪಾನು. 3) IV Conc. Lateran. 4) ಅಪೊ. ಕ್ರಿ. 12, 21—23. 5) 335ನೇ ಪಾನು. 6) ಅಥವಾ 4ನೇ ಫಿಲಿಪ್ಪ.

ನೆಂಬ ಅಡ್ಡಹೆಸರು ಗೊಂಡ ಫಿಲಿಪ್ಪನೆಂಬ ಫ್ರುಂಚು ದೇಶದ ರಾಜನಿಗೆ ನಿಷ್ಕಾರಣ ವಾಗಿ ಹೇರಳ ಗರ್ವ ತೋರಿಸಿ, ಇದಕ್ಕೆ ಒಳ ಪಡದ ಅವನ ಅವಿಧೇಯತ್ವ ಕಂಡು, ಬೈಯುತ್ತಾ ಬೆದರಿಸುತ್ತಾ ಇದ್ದದೆಲ್ಲವೂ ಪ್ರಯೋಜನಕ್ಕೆ ಬೀಳದೆ ಹೋದ ಮೇಲೆ ಕಡೆಯಲ್ಲಿ ಆ ಅರಸನಲ್ಲೆದ್ದ ರೋಷಕ್ಕಂಜಿ, ರೋಮವನ್ನು ಬಿಟ್ಟು ಓಡಲು, ಆ ರಾಯನ ಪ್ರಭುಗಳಲ್ಲಿಬ್ಬರು ಅವನನ್ನು ಹಿಡಿದು, ಬಂಧಿಸಿದರು; ಅವನು ತಿರಿಗಿ ಬಿಡುಗಡೆಯವನಾದರೂ ಬೇಗ ಸತ್ತನು.

ಅವನಿಗಿತ್ತಕಡೆ ಪಪ್ಪಕತ್ವವು ತಡೆಯದಲೇ ಕ್ಷೀಣವಾಗುತ್ತಾ ಬಂತು. ಪಪ್ಪರು ಹೆಚ್ಚು ಹೆಚ್ಚಾಗಿ ಫ್ರುಂಚಿನ ರಾಜರಿಗೆ ಒಳಗಾಗುತ್ತಿದ್ದರು. ಕ್ರಿ. ಶ. 1305ನೇ ವರುಷಕ್ಕೆ ಪಪ್ಪನಾದ 5ನೇ ಕ್ಲೇಮೆಂತನು ಆ ಫಿಲಿಪ್ಪ ರಾಯನ ಇಚ್ಛೆಯ ಮೇಲೆ ರೋಮಪುರ ಬಿಟ್ಟು, ಫ್ರುಂಚಿನ ಅವಿಜ್ಞೋನು ಎಂಬ ಪಟ್ಟದಲ್ಲಿ ವಾಸಿಸುವದಕ್ಕೆ ಬರಬೇಕಾಯಿತು. ಅಂದಿನಿಂದ 73 ವರುಷಗಳ ಪರ್ಯಂತ ಪಪ್ಪರು ಆ ಪಟ್ಟದಲ್ಲಿಯೇ ಉಳಿದಿದ್ದರು. ಆ ಕಾಲವು, ಪಪ್ಪರ ದೇಶನಿರ್ವಾಸಕಾಲವೆಂತ, ಹೇಳುತ್ತಾರೆ. ಆ ಕಾಲದಲ್ಲಿ 2ನೇ ಫ್ರೀದೆರೀಕ ಕೈಸರನ 7ನೇ ಉತ್ತರಾಧಿಕಾರಿಯಾದ ಬೈಯೆರ್ನಿನ ಲೂದ್ವಿೀಗನೆಂಬವನು ಆಳುವಾಗ ಕ್ರಿ. ಶ. 1338ನೇ ವರುಷಕ್ಕೆ ಗೆರ್ಮಾನಿಯದ ರಾಜಶೋಧಕ ಪ್ರಭುಗಳು ರೆನ್ಸೆ ಎಂಬ ಪಟ್ಟದಲ್ಲಿ ಕೂಡಿ, ಗೆರ್ಮಾನಿಯದ ರಾಜನು ರಾಜಶೋಧಕ ಪ್ರಭುಗಳಿಂದಲ್ಲದೆ ಮತ್ತ್ಯಾರಿಂದಲೂ ರಾಜತನವನ್ನೂ ಅಧಿಕಾರವನ್ನೂ ಹೊಂದುವದಿಲ್ಲವೆಂದು, ನಿರ್ಣಯಿಸಿ, ಆಗಿನ ಪಪ್ಪನಿಗೆ ತಿಳಿಸಿದ ಮೇಲೆ ಅದು ಮರುವರ್ಷ ಕೈಸರನ ಪರಿಪಾಲನದಿಂದ ನಿತ್ಯ ರಾಜ್ಯಾಜ್ಞೆಯಾಯಿತು. ಪಪ್ಪರು ಲೌಕಿಕ ಅಧಿಕಾರಿಗಳ ಮೇಲೆ ಆಕ್ರಮಿಸಿ ಕೊಂಡಿದ್ದ ಅಧಿಕಾರವು ಅಂದು ತೀರಿ ಹೋಯಿತು; ಅದಲ್ಲದೆ ಪಪ್ಪರ ಬನ್ನು ಇಂತೆರ್ದಿಕ್ತುಗಳ ಕೊಂಡಿಯು ಸಹ ಮೊಂಡಾಯಿತು. ಈ ಪ್ರಕಾರ ದೇವರ ಸುಸಂಕಲ್ಪದ ಮೇಲೆ ಪಪ್ಪಕತ್ವವೆಂಬ ನಾವೆಯು ಪಡುವಣ ತ್ಯುತೊನರೆಂಬ ಪ್ರಸ್ತರಕ್ಕೆ ಅಡಚಿ, ಭಂಗವಾದ ಹಾಗಾಯಿತು[1].

ಬಳಿಕ ಕ್ರಿ. ಶ. 1378ನೇ ವರುಷದಲ್ಲಿ ಈತಲಿಯದ ಪ್ರಜೆಯವರು ಪಪ್ಪರನ್ನು ಫ್ರುಂಚಿನವರ ವಶದಿಂದ ಬಿಡಿಸುವದಕ್ಕಾಗಿ ರೋಮದಲ್ಲಿ 6ನೇ ಉರ್ಬಾನನೆಂಬವನನ್ನು, ಪಪ್ಪನೆಂದು, ಆರಿಸಿ ಕೊಂಡರು; ಆದರೆ ಇವನು ಕರ್ದಿನಾಲ್ ಸಭೋದ್ಯೋಗಿಗಳಿಗೆ[2] ಸಹ ಒಪ್ಪಿಗೆಯಾಗದಿರಲಿಕ್ಕೆ, ಇವರು ಮತ್ತೆ ಫ್ರುಂಚ ರಾಜನ ಪಕ್ಷಕರು 7ನೇ ಕ್ಲೇಮೆಂತನನ್ನು ಪಪ್ಪತನಕ್ಕೆ ನೇಮಿಸಿದರು. ಆಗ ಈ ಕ್ಲೇಮೆಂತನು ಅವಿಜ್ಞೋನು ಪಟ್ಟದಲ್ಲಿ ವಸ್ತಿ ಮಾಡುವವನಾದನು. ಅವರಿಬ್ಬರು ಪಪ್ಪರಲ್ಲಿ ಪೆತ್ರನ ಉ

1) 299ನೇ ಪಾನು. 2) 327ನೇ, 334ನೇ ಪಾನು.

ತ್ರರಾಧಿಕಾರಿಯು ನಾನು ತಾನೆಂಬ ಜಗಳವು ತಡವಿಲ್ಲದೆ ಹುಟ್ಟಿತು[1]. ಅದಕ್ಕಾಗಿ ಅವರು ಪಕ್ಷಕರೊಡಗೂಡಿ, ಬನ್ನೆಂಬ ವಜ್ರಾಯುಧದಿಂದ ಪರಸ್ಪರ ಹೊಡ ಕೊಳ್ಳುವವರಾದರು. ಅವರಿಬ್ಬರು ಸತ್ತ ಮೇಲೆಯೂ ಆ ಜಗಳ ಅವರವರ ಉತ್ತರಾಧಿಕಾರಿಗಳಿಂದ ಮುನ್ನಡಿಯುತ್ತಿತ್ತು. ಕ್ರಿ. ಶ. 1409ನೇ ವರುಷಕ್ಕೆ ಈತಲಿಯದ ಪೀಸವೆಂಬ ಪಟ್ಣದಲ್ಲಿ ನೆರೆದ ಸಭಾಸಂಘದವರು ಆಗಿನ ಇಬ್ಬರು ಪಪ್ಪರನ್ನು ಹಾರಿಸಿ, ಬೇರೊಬ್ಬನನ್ನೂರಲು, ಆ ಇಬ್ಬರು ಅಧಿಕಾರವ ಬಿಡಲೊಲ್ಲದ ಕಾರಣ ಮತ್ತೊಬ್ಬನು ಅವರಿಗೆ ಕೂಡಿದ ಹಾಗಾಯಿತು; ಅಂದು ಅವರು ಮೂವರೂ ತಮ್ಮ ತಮ್ಮೊಳಗೆ ಶಪಿಸಿ ಕೊಳ್ಳುತ್ತಿದ್ದರು; ಅವರೊಳಗೊಬ್ಬನು 23ನೇ ಯೋಹಾನನೆಂಬ ಮಹಾ ನೀಚನು. ಆ ಉತ್ಕಟ ಸಂಗತಿಗೆ ಪಪ್ಪರ ಭೇದವೆಂಬ ಹೆಸರು.

ಬಳಿಕ ಬೈಯೆರ್ನಿನವನಾದ ಲೂದ್ವೀಗ ಕೈಸರನ 3ನೇ ಉತ್ತರಾಧಿಕಾರಿಯಾದ ಸೀಗಿಸ್ಮುಂದನೆಂಬವನು ಕ್ರಿ. ಶ. 1414ನೇ ವರುಷಕ್ಕೆ ಗೆರ್ಮಾನಿಯದ ಕೊಸ್ತ್ನಿತ್ಸು ಎಂಬ ಪಟ್ಣದಲ್ಲಿ ಒಂದು ದೊಡ್ಡ ಸಭಾಸಂಘವನ್ನು ಕೂಡಿಸಿದಲ್ಲಿ ಮತಕ ಮತ್ತು ರಾಜಕ ಪ್ರಭುಗಳು[2] ಆ ಮೂವರು ಪಪ್ಪರನ್ನು ಉದ್ಯೋಗದಿಂದ ತಳ್ಳಿ, ಬೇರೊಬ್ಬನನ್ನು ನೇಮಿಸಿಟ್ಟರು.

ಆ ಸಮಯದಲ್ಲಿ ಪಪ್ಪರ ಅಧಿಕಾರವನ್ನು ಕಡಿಮೆ ಮಾಡುವದಕ್ಕೆ ಮತ್ತೊಂದು ಗೋಚರವಾಯಿತು; ಅದೇನಂದರೆ, ಪಪ್ಪರು ಹಲವು ಕಾಲ ಸಭಾಸಂಘಗಳ ಮೇಲೆ ಇರುವ ಹಾಗಾಗಿತ್ತು; ಆದರೆ ಪಪ್ಪರ ದೇಶನಿರ್ವಾಸಕಾಲಕ್ಕೀಚೆ, ಸಭಾಚರಿತ್ರದ ಅಭ್ಯಾಸದ ಮೇರೆಗೆ[3], ಪೂರ್ವ ಸಭಾನಿಯಮದ ಪ್ರಕಾರ ಪಪ್ಪರಿಗಲ್ಲ ಸರ್ವ ಸಭಾಸಂಘಗಳಿಗೆಯೇ ಸಭೆಯಲ್ಲಿ ಪ್ರಧಾನಾಧಿಕಾರವೆಂತ, ಹೇಳುವ ನಿರ್ಣಯವು ಪ್ರಬಲವಾಗುತ್ತಾ ಬಂತು. ಹೀಗಿರಲಾಗಿ ಕ್ರಿ. ಶ. 1409ನೇ ವರುಷಕ್ಕೆ ಆ ಪೀಸ ಪಟ್ಣದಲ್ಲಿ ನೆರೆದ ಸಭಾಸಂಘದವರೂ ಇತ್ತಲಾಗೆ ಆ ಕೊಸ್ತ್ನಿತ್ಸಿನಲ್ಲಿಯದರವರೂ, ಸಭಾಸಂಘಗಳು ಪಪ್ಪರ ಮೇಲೆ ಅವೆಂತ, ಸ್ಪಷ್ಟ ವ್ಯವಸ್ಥೆ ಮಾಡಿ, ಅದರಂತೆ ನಡೆದರು. ಇದರಿಂದ ಪಪ್ಪಕತ್ವವು ಮತ್ತಷ್ಟು ಬರಡಾಯಿತು.

## 44. ಗ್ರೀಕ ಸಭೆಗೂ ರೋಮಕ (ಪಪ್ಪಕ) ಸಭೆಗೂ ಅತಿ ಭೇದ ಹುಟ್ಟಿದ್ದು.

ಕ್ರಿ. ಶ. 610ನೇ ವರುಷದಿಂದ 641ನೇದರ ವರೆಗೆ ಹೇರಾಕ್ಲೀಯನೆಂಬ ಕೈಸರನು ಕೊನ್ಸ್ತಂತೀನೊಪೊಲಿಯಲ್ಲಿ ಗ್ರೇಕ ರಾಜ್ಯದ ಕಾರುಭಾರು ಮಾಡುತ್ತಿದ್ದು,

1) 326, 334ನೇ ಪಾನುಗಳನ್ನು ಸರಿ ನೋಡು. 2) 333ನೇ ಪಾನು. 3) 92ನೇ ಪಾನು; 22ನೇ ಸಂಧಿ; 273ನೇ, 275ನೇದು ಮುಂತಾದ ಪಾನುಗಳನ್ನು ಸರಿ ನೋಡು.

ಪಾರ್ಶಿಯರ ಮತ್ತು ಅರಬಿಯರ ಸಂಗಡ ಕದನವನ್ನಾಡಿದನೆಂದು, ಹಿಂದೆ ಓದಿದ್ದೇವೆ[1]. ಅವನ 8ನೇ ಉತ್ತರಾಧಿಕಾರಿಯಾದ 3ನೇ ಲೆಯೋನನೆಂಬವನು ಕರ್ಲ ಮರ್ತೆಲ್ಲನು ಫ್ರಂಕ ಸಾಮ್ರಾಜ್ಯದ ಪಾರುಪತ್ಯಗಾರನಾಗಿರುವ ಸಮಯದಲ್ಲಿ[2] ಆಳುತ್ತಿದ್ದನು.

ಈ 3ನೇ ಲೆಯೋನನು ದೇವವಾಕ್ಯದರ್ಥವನ್ನು ಚನ್ನಾಗಿ ತಿಳುಕೊಂಡದ್ದಲ್ಲದೆ ಮೊಹಮ್ಮದಿಯರಿಗೆ ಮೂರ್ತಿಪೂಜೆಯ ಮೇಲಿದ್ದ ಹಗೆಗೋಸ್ಕರ ಚಿಂತಾಕ್ರಾಂತನಾಗಿ[3], ತನ್ನ ರಾಜ್ಯದಲ್ಲಿಯೂ ನೆಲೆ ಗೊಂಡಿದ್ದ ಕ್ರೈಸ್ತಧರ್ಮಭ್ರಂಶವಾದ ಸಂತರ ಮತ್ತು ಮೂರ್ತಿಗಳ ಪೂಜೆಗೆ ಅಸಹ್ಯ ಹಿಡಿದವನಾಗಿ, ಕ್ರಿ. ಶ. 726ನೇ ವರುಷ, ಅಂಥ ಮೂರ್ತಿಗಳ ಪೂಜೆ ಮಾಡ ಬಾರದೆಂದು, ಆಜ್ಞೆ ಹೊರಡಿಸಿ, 4 ವರುಷಕ್ಕೀಚೆ, ಅವುಗಳೆಲ್ಲವನ್ನು ದೇವಾಲಯಗಳೊಳಗಿಂದ ಹೊರಗೆ ಹಾಕ ಬೇಕೆಂದು, ವಿಧಿಸಿದನು. ಈ ವಿಧಿಗೆ ಮೂಡಣ ರಾಜ್ಯದಲ್ಲಿ ಬಹಳ ಎದುರಾಟವಾಗಲಿಲ್ಲ; ಆದರೆ ರೋಮದ 2ನೇ ಗ್ರೆಗೋರನೆಂಬ ಆಗಿನ ಪಪ್ಪನು[4] ಕೈಸರನಿಗೆ ಬರದು ಕಳುಹಿಸಿದ ನಿರ್ಲಜ್ಜಾರ್ಥವುಳ್ಳ ಪತ್ರಿಕೆಗಳಿಂದ ಪ್ರತಿಕೂಲಿಯಾಗಿ, ದೇವವಾಕ್ಯಕ್ಕೆ ವಿರೋಧ ಮಾಡಿ[5]—ನಾವು ಪೂಜಿಸುವ ಗೊಂಬೆಗಳು ವಿಗ್ರಹಾರಾಧಕರವುಗಳಂತೆ ಇಲ್ಲದಂಥ ಕಲ್ಪಿತ ವಸ್ತುಗಳವಲ್ಲ, ವಾಸ್ತವ್ಯವಾಗಿ ಬದುಕಿದವರವೇ! ಅದು ಹೊರ್ತಾಗಿ ದೇವರಿಗೆ ಮಾತ್ರ ಯೋಗ್ಯವಾದ ಆರಾಧನೆಗೂ ರಾಜರಿಗೆ ಸಹ ತಕ್ಕದಾದ ಮೊಣಗಾಲೂರೋಣದ ಪೂಜೆಗೂ ಇರುವ ವ್ಯತ್ಯಾಸ ತಿಳಿಯ ಬೇಕೆಂದು, ತರ್ಕಿಸಿದನು[6]. ಆದರೂ ಲೆಯೋನ ಕೈಸರನ 1ನೇ ಉತ್ತರಾಧಿಕಾರಿಯು ಸಹ ಅವನ ಹಾಗೆ ಮೂರ್ತಿಪೂಜೆಗೆದುರಿಸುತ್ತಿದ್ದು, ಕ್ರಿ. ಶ. 754ನೇ ವರುಷ ಕೊನ್ಸ್ತಂತೀನೊಪೊಲಿಯಲ್ಲಿ ಒಂದು ಸಭಾಸಂಘ ಕೂಡಿಸಿ, ಅದಕ್ಕೆ ಬಂದ 338 ಮಂದಿ ಅಧ್ಯಕ್ಷರ ಬಾಯಿಯಿಂದ, ಸಕಲ ಮೂರ್ತಿಗಳನ್ನು ವರ್ಜಿಸಿ ಬಿಡ ಬೇಕೆಂದು, ವ್ಯವಸ್ಥೆಗೇಯಿಸಿದನು. ಇದಕ್ಕೆ ಮುಖ್ಯವಾಗಿ ಮಠಿಕರೂ ಪಪ್ಪರೂ ಒಡಂಬಡದುಳಿದರು. 3ನೇ ಲೆಯೋನನ 2ನೇ ಉತ್ತರಾಧಿಕಾರಿಯು ಕೂಡ ಅವನ ಅಭಿಪ್ರಾಯವುಳ್ಳಂಥವನೇ; ಆದರೆ ಇವನ ಹೆಂಡತಿಯಾದ ಈರೇನೆ ಎಂಬವಳು ಗುಪ್ತದಲ್ಲಿ ಮೂರ್ತಿಪೂಜಕಳಾಗಿದ್ದು, ತನ್ನ ಗಂಡನು ಸತ್ತು ಕುಮಾರನು ಅಪ್ರಾಯಸ್ಥನಾಗಿರುವಾಗ

1) 295ನೇ ಪಾನು. 2) 283, 296, 310,—314ನೇ ಪಾನು. 3) 293, 298ನೇ ಪಾನು. 4) (331), 311—314ನೇ ಪಾನು. 5) 2 ಮೋಶೆ. 20, 4-5; ಪ್ರಕಟ. 19, 10; 6, 11; ಮತ್ತಾ. 23, 8. 10; 1 ತಿಮೊ. 2, 5. 6) ಪಪ್ಪಕರು ದೇವರಿಗೆ ಹ್ಯಾಗೋ, ಹಾಗೆಯೇ ಮೂರ್ತಿಗಳಿಗೆ ಸಹ ಆರಾಧನೆ (latreiya) ಮಾಡುತ್ತಾರೆಂಬದೇ ಅವರ ಸಭಾಗ್ರಂಥಗಳ ಮೇಲೆ ಸಿದ್ಧಾಂತವಾಗಿದೆ (cf. for instance the Bombay Guardian, Dec. 26, 1868); ಆ ಪಪ್ಪನ ತರ್ಕವು ಕಾಲೋಚಿತಕ್ಕೆ ಹಿಡು ಕೊಂಡದ್ದೇ ಮಾತ್ರ.

ತಾನು 10 ವರುಷ ಕ್ರಿ. ಶ. 790ನೇದರ ವರೆಗೆ ರಾಜ್ಯದ ಕಾರುಭಾರು ನಡಿಸುತ್ತಿರಲು, ಮೂರ್ತಿಪೂಜಾಪಕ್ಷಕರು ತಿರಿಗಿ ಗೆಲ್ಲುವವರಾದರು. ಹೀಗಿರುವವರಾಗಿ, ಕ್ರಿ. ಶ. 787ನೇ ವರುಷಕ್ಕೆ ನೀಕೇಯ ಪಟ್ಟದಲ್ಲಿ ನೆರೆದ್ದೊಂದು ಸಭಾಸಂಘವು, ಮೂರ್ತಿಪೂಜೆಯು ಮರಳಿ ಸಾಗಲೆಂದು, ನಿರ್ಣಯಿಸಿದ್ದು ಅತಿ ದುಃಖಕರವಾದದ್ದೇ. ಆ ವೇಳೆ 1ನೇ ಹದ್ರಿಯಾನನೆಂಬ ಅಂದಿನ ಪಪ್ಪನು[1] ಆ ದುರ್ನಿರ್ಣಯಕ್ಕೆ ಬಲ ಕೊಡುವ ಹಾಗೆ ಈರೇನೆ ರಾಣಿಗೆ—ನಿಮ್ಮ ಮನೋರಥವು ಯೋಗ್ಯವೇ; ಯಾಕಂದರೆ ಪೆತ್ರ ಅಪೊಸ್ತಲನಿಂದ ತನ್ನ ಉತ್ತರೋದ್ಯೋಗಿಗಳಿಗೆ ಸ್ವಮುಖೋಪದಿಷ್ಟವಾಗಿ ಬಂದ ಅಪ್ಪಣೆಯಲ್ಲಿ[2], ಮೂರ್ತಿಗಳಿಗೆ ಪೂಜೆ ಮಾಡ ಬೇಕೆಂಬದುಂಟು! ಎಂತ, ಬರೆದನು. ಆ 787ನೇ ವರ್ಷದಾರಭ್ಯ ಇಂದಿನ ವರೆಗೂ ಗ್ರೇಕಮತಸ್ಥರಲ್ಲೂ ಮೂರ್ತಿಪೂಜೆಯು ಧಾರಾಳವಾಗಿ ನಡೆದು ಬಂತು. ಆ ಗ್ರೇಕ ಸಭಾಪಕ್ಷಕರಿಗೆ—ಉಳಿಯಿಂದ ಕೆತ್ತಿದ ಮೂರ್ತಿಗಳಿಗೆ ಅಲ್ಲ, ಬಣ್ಣದಿಂದ ರಚಿಸಿದ ಚಿತ್ರಗಳಿಗೆ ಮಾತ್ರ ಪೂಜಿಸ ಬೇಕೆಂದು, ಈಗ ಇರುವ ನಿರ್ಣಯವು ನೀಕೇಯದ್ದಕ್ಕಿಂತ ಇತ್ತಾಗಿನದೇ. ಆದರೆ ಆ ಮೂರ್ತಿಪೂಜಾವಾದವು ಅಂದು ಗೆರ್ಮಾನಿಯ ದೇಶಕ್ಕೂ ಬಂದು ಮುಟ್ಟಿತು; ಆಗ ಹೆಚ್ಚಾಗಿ ದೊಡ್ಡನೆಂಬ ಕರ್ಲನು ನೀಕೇಯದ ಆ ವ್ಯವಸ್ಥೆಗೆ ಒಂದು ಗ್ರಂಥದಿಂದ ಮಾತ್ರವಲ್ಲದೆ ತಾನು ಕೂಡ ಕರಿಸಿದ ಒಂದು ಸಭಾಸಂಘದ ನಿರ್ಣಯದಿಂದ ಸಹ ಅಡ್ಡ ಗಟ್ಟಿದನು[3]; ಆದರೆ ಕಡೆಯಲ್ಲಿ ಪಪ್ಪರು ತಮ್ಮ ಪಾಪಿಷ್ಠ ಮನಸ್ಸನ್ನು ನಡಿಸುವದಕ್ಕೆ ಸಮರ್ಥರಾದರು.

ಅಷ್ಟರೊಳಗೆ ಕೊನ್ಸ್ತಂತೀನೊಪೊಲಿಯ ಪತ್ರಿಯರ್ಖರಿಗೂ ರೋಮದ ಪಪ್ಪರಿಗೂ ಇರುವ ಮತ್ಸರವು ತೀರದೆ ಹೊಗೆಯುತ್ತಿತ್ತು; ಯಾಕಂದರೆ ಪಪ್ಪರು ಅವರನ್ನು ತಮ್ಮೊಳಗೆ ಮಾಡಿ ಕೊಳ್ಳುವ ಪ್ರಯತ್ನ ಬಿಡಲಿಲ್ಲ[4]. ಈ ತೊಂದರೆಗೆ ಆಚಾರ ಮತಾಭಿಪ್ರಾಯಗಳ ವಾದಗಳೂ ಶೇರಿದವು; ಹ್ಯಾಗಂದರೆ ಗ್ರೇಕರು, ಪರಿಶುದ್ಧಾತ್ಮನೆಂಬವನು ಪಿತೃದೇವರಿಂದ ಮಾತ್ರ ಹೊರಡುತ್ತಾನೆಂದು, ಚರ್ಚಿಸುವಲ್ಲಿ ಪಪ್ಪಕರು, ಅವನು ಪಿತನಿಂದಲೂ ಕುಮಾರನಿಂದಲೂ ಹೊರಡುತ್ತಾನೆಂದು, ಹೇಳುತ್ತಿರುವರು; ಮತ್ತೆ ಗ್ರೇಕರು—ಶನಿವಾರದಲ್ಲಿ ಉಪವಾಸ ಮಾಡ ಬಾರದು, ರಕ್ತವನ್ನೂ ಕೊರಳು ಹಿಸಿಕಿ ಸತ್ತ ಜೀವಿಗಳ ಮಾಂಸವನ್ನೂ ತಿನ್ನ ಬಾರದು[5] ಎಂತ, ಪ್ರಮಾಣಿಸುವಲ್ಲಿ ಪಪ್ಪಕರು, ಇವೆರಡಕ್ಕೂ ಚಿಂತೆಯಿಲ್ಲವೆಂತ, ಒದರುತ್ತಿರುವರು; ಅದು ವಿನಹ ಗ್ರೇಕರು, ಅಧ್ಯಕ್ಷರು ಮಾತ್ರ ಉಳಿದು ಬೇರೆಲ್ಲ ಸಭೋದ್ಯೋಗಿಗಳೂ ವಿವಾಹಿಗಳಾಗ ತಕ್ಕದೆಂದು[6], ನಿರ್ಣಯಿಸುವಲ್ಲಿ ಪಪ್ಪಕರು, ಸರ್ವ ಸಭೋದ್ಯೋ

1) 317ನೇ, 319ನೇ ಪಾನು. 2) 281ನೇ ಪಾನು ಸರಿ ನೋಡು. 3) 319ನೇ ಪಾನು.
4) 281ನೇ, 282ನೇ ಪಾನುಗಳು. 5) 40ನೇ ಪಾನು. 6) 272ನೇ ಪಾನು.

ಗಿಗಳೂ ನಿರ್ವಿವಾಹಿಗಳಾಗಿರ ಬೇಕೆಂದು[1], ಆಜ್ಞಾಪಿಸುತ್ತಿರುವರು; ಪುನಃ ಗ್ರೇಕ ಸಭೆಯಲ್ಲಿ ಪರಿಶುದ್ಧ ರಾತ್ರಿಭೋಜನಕ್ಕೆ (ಮಿಸ್ಸಯಾಗಕ್ಕೆ)[2] ಹುಳಿ ಹಾಕಿದ ಸಾಧಾರಣ ರೊಟ್ಟಿ ತೆಗೆಯುವ ಪದ್ಧತಿಯು ನಡೆಯುತ್ತಿರುವಲ್ಲಿ ಪಪ್ಪಕರು, ಹುಳಿ ಹಾಕದ ರೊಟ್ಟಿ ಬೇಕೆಂತ, ಒರಟು ಮಾಡುತ್ತಿರುವರು.

ಇವಿಷ್ಟರಲ್ಲೂ ಮಿತ್ರಭೇದವಾಗುವದಕ್ಕೆ ತಕ್ಕ ಕಾರಣಗಳಿಲ್ಲದಿದ್ದರೂ ಆ ಭೇದವು ಬೇಗ ಒದಗಿತು. ಕ್ರಿ. ಶ. 850ನೇ ವರುಷದಲ್ಲಿ ಇಗ್ನಾತಿಯನೆಂಬವನು ಕೊನ್ಸ್ತಂತೀನೊಪೊಲಿಯಲ್ಲಿ ಪತ್ರಿಯರ್ಖನಾಗಿದ್ದನು; ಅವನು ಒಬ್ಬ ಕೈಸರನ ಮಗನು. ಅವನು ಕ್ರಿಸ್ತನ ಮೇಲೆ ಬಹಳ ಪ್ರೀತಿಯುಳ್ಳವನಾಗಿ, ಗ್ರೇಕ ಅರಮನೆಯವರ ದುರ್ನಡತೆಗೆ[3] ಎದುರಾಟ ಮಾಡುತ್ತಿದ್ದು, ಅಪ್ರಾಯಸ್ಥನಾದ ಶ್ರೀಮಂತನ ಬದಲಿಗೆ ರಾಜ್ಯವನ್ನಾಳುತ್ತಿರುವ ತನ್ನ ದೊಡ್ಡಪ್ಪನಿಗೊಮ್ಮೆ—ನೀವು ಸನ್ಮಾರ್ಗದವರಲ್ಲ, ಆದ್ದರಿಂದ ಪರಿಶುದ್ಧ ರಾತ್ರಿಭೋಜನಕ್ಕೆ ಬರ ಬೇಡಿರಿ! ಎಂದು, ಅಡ್ಡಗಾಲು ಹಾಕಲು, ಆ ದೊಡ್ಡಪ್ಪನು ಕ್ರಿ. ಶ. 858ನೇ ವರುಷ ಅವನ ಉದ್ಯೋಗ ತೆಗೆದು, ಅವನನ್ನು ಗಡಿ ದಾಟಿಸಿ, ಅವನ ಸ್ಥಳದಲ್ಲಿ ಫೋತಿಯನೆಂಬವನನ್ನು ಇಡಿಸಿದನು. ಇದರಿಂದ ಸಭೆಯಲ್ಲಿ ದೊಡ್ಡ ಗದ್ದಲ ಹುಟ್ಟಲಿಕ್ಕೆ, 1ನೇ ನೀಕೊಲಾವ ಪಪ್ಪನ ತೀರ್ಪನ್ನು ಕೇಳಲಾಯಿತು. ಇವನು ಆ ಸಂಗತಿ ವಿಚಾರಿಸುವದಕ್ಕೆ ಇಬ್ಬರಧ್ಯಕ್ಷರನ್ನು, ತನ್ನ ಕಾರ್ಯಕರ್ತರೆಂತ, ಕೊನ್ಸ್ತಂತೀನೊಪೊಲಿಗೆ ಕಳುಹಿಸಿದ ಮೇಲೆ ಅಲ್ಲಿ ಒಂದು ಸಭಾಸಂಘವಾದಲ್ಲಿ ನೆರೆದ ಅಧ್ಯಕ್ಷರೂ ಆ ಪಪ್ಪಕ ದೂತರೂ ಕೂಡಿ ಇಗ್ನಾತಿಯನ ದೊಡ್ಡಪ್ಪನ ಮತ್ತು ಆ ಚಿಕ್ಕ ಕೈಸರನ ಚಿತ್ತಕ್ಕೊಡಂಬಟ್ಟು, ಇಗ್ನಾತಿಯನನ್ನು ಮರಳಿ ತಳ್ಳಿ, ಫೋತಿಯನನ್ನು ಮರಳಿ ಸ್ಥಾಪಿಸಿದರು. ಆದರೆ ನೀಕೊಲಾವ ಪಪ್ಪನು ತಾನು ಇಂಥಾದ್ದಕ್ಕೆ ಮೆಚ್ಚದೆ, ಫೋತಿಯನ ಮೇಲೆಯೂ ಅವನ ಪಕ್ಷಕರ ಮೇಲೆಯೂ ಬನ್ನೆಂಬ ಬಹಿಷ್ಕಾರಾಜ್ಞೆ ಜಡಿಯಲು, ಇವನು ಪಪ್ಪನಿಗೆ ಪ್ರತಿಕೂಲಾಜ್ಞೆ ಮಾಡಿ, ಗ್ರೇಕ ಮತಕ್ಕೆ ಸರಿ ಬೀಳದಂಥ ಪಪ್ಪಕ ಮತದ ಬೋಧನೆ ಆಚಾರಗಳನ್ನು, ಪಾಷಂಡಗಳೆಂದು, ಕಠಿಣ ರೀತಿಯಿಂದ ವರ್ಣಿಸಿದ ಬಳಿಕ ಗ್ರೇಕ ಮತ್ತು ರೋಮಕ ಸಭೆಗಳ ಅಧ್ಯಕ್ಷರೊಳಗೆ ಬಹು ಅಪಮಾನಕರವಾದೊಂದು ವಾದವು ಉದ್ಭವಿಸಿತು. ಅದು 184 ವರುಷ ಹೆಚ್ಚು ಕಡಿಮೆಯಾಗಿ ನಡಿಯುತ್ತಿದ್ದ ತರುವಾಯ ಕ್ರಿ. ಶ. 1050ನೇ ವರುಷ ಮಿಖಯೇಲ ಕೇರುಲಾರಿಯನೆಂಬ ಆಗಿನ ಪತ್ರಿಯರ್ಖನು ಕೊನ್ಸ್ತಂತೀನೊಪೊಲಿಯಲ್ಲಿ ಪಪ್ಪಕ ಕ್ರೈಸ್ತರ ಮಠ ದೇವಾಲಯಗಳನ್ನೆಲ್ಲಾ, ಪಪ್ಪಕರು ಪಾಷಂಡಿಗಳೆಂದು, ಮುಚ್ಚಿಸುವಂದು ಆಗಿನ ಗ್ರೇಕ ಕೈಸರನು, ತಿರಿಗಿ ಸಮಾಧಾನವಾಗಲಿ! ಎಂದು, ಅಪೇಕ್ಷಿಸುವ ಕಾರಣ 9ನೇ ಲೆಯೋನ ಪಪ್ಪನ[4] ಕಡೆಯಿಂದ ದೂತರು ಆ ಪುರಕ್ಕೆ ಬಂದರು. ಆ

1) 281ನೇ ಪಾನು. 2) 290ನೇ ಪಾನು; 46ನೇ ಸಂಧಿ. 3) 285ನೇ ಪಾನು. 4) 326, 327ನೇ ಪಾನು.

ದರೆ ಆ ದೂತರು ತೋರಿಸಿದ ಗರ್ವದ ದೆಸೆಯಿಂದ ಮತ್ತು ಆ ಕೈಸರನು ಪಪ್ಪಕ ಸಭೆಗೆ ತೋರಿಸುವ ವಾತ್ಸಲ್ಯದ ದೆಸೆಯಿಂದ ಮಿಖಯೇಲ ಪತ್ರಿಯರ್ಖನೂ ಇತರ ಸಮಸ್ತ ಗ್ರೇಕ ಸಭೋದ್ಯೋಗಿಗಳೂ ಗ್ರೇಕ ಪ್ರಜೆಯೂ ಕೋಪಿಷ್ಠರಾದರು. ಹೀಗೆ ಸಂಧಾನವಾಗದಿರಲು, ಆ ಪಪ್ಪನ ದೂತರು ಸೊಫಿಯ ದೇವಾಲಯದ[1] ಮುಖ್ಯ ವೇದಿಯ[2] ಮೇಲೆ ಮಿಖಯೇಲನಿಗೆ ವಿರೋಧವಾದ ಒಂದು ಮಹಾಬಹಿಷ್ಕಾರಾಜ್ಞಾಶಾಪವುಳ್ಳ ಕಾಗದವನ್ನಿಟ್ಟು ಬಿಟ್ಟು, ಹೊರಟರು; ತದನಂತರ ಪತ್ರಿಯರ್ಖನು ಅದೇ ಅರ್ಥವುಳ್ಳ ಒಂದು ಬನ್ನನ್ನು ಪಪ್ಪನಿಗೆ ಹಾಕಿ ಬಿಟ್ಟನು. ಅದು ಕ್ರಿ. ಶ. 1054ನೇ ವರುಷದಲ್ಲಿ ಆಯಿತು. ಸುರಿಯ ದೇಶದ ಅಂತಿಯೊಖೀಯ ಪಟ್ಟದ ಪತ್ರಿಯರ್ಖನೂ[3] ಬುಲ್ಗಾರ ದೇಶದ ಪ್ರಧಾನಾಧ್ಯಕ್ಷನೂ[4] ಆಗಿನ ತರ್ಕದ ವಿಷಯದಲ್ಲಿ ತಡೆಯದೆ ಮಿಖಯೇಲನ ಪಕ್ಷಾವಲಂಬಿಗಳಾದರು. ಅಂದು ಪಪ್ಪಕ ಮತ್ತು ಗ್ರೇಕ ಸಭಾಪಕ್ಷಗಳಿಗೆ ಇನ್ನೂ ತುದಿ ಮುಟ್ಟದ ಭೇದವು ಬಂತು. ಲಿಬನೋನು ಪರ್ವತದ ಮರೋನೀತರು[5] ಕ್ರಿ. ಶ. 1182ನೇ ವರ್ಷ ಪಪ್ಪಕರಿಗೆ ಕೂಡಿ ಕೊಂಡರು.

ಕಾಲಗತಿಯಲ್ಲಿ ಗ್ರೇಕ ರಾಜ್ಯವು ಹೆಚ್ಚಾಗಿ ಹೀನ ತರದವರಾದ ಕೈಸರರೊಳಗಿರುತ್ತಾ, ಪಪ್ಪಕರಿಂದಲೂ ತುರ್ಕರಿಂದಲೂ ಇಕ್ಕಟ್ಟು ಪಡುತ್ತಾ, ಮೂರ್ತಿಪೂಜೆಗೋಸ್ಕರವೂ ಶುಷ್ಕ ಆಚಾರವುಳ್ಳ ಮಠಿಕತ್ವಕ್ಕೋಸ್ಕರವೂ ಜ್ಞೋಸ್ತಿಕಪಕ್ಷೋದ್ಭವಕ್ಕೋಸ್ಕರವೂ ನೀತಿಚರ್ಯೆಗೆಟ್ಟ ಅರಮನೆಯಿಂದ ಹೊರಡುತ್ತಿರುವ ದುರ್ಮಾರ್ಗತನಕ್ಕೋಸ್ಕರವೂ[6] ಬಲ ಗುಂದುತ್ತಾ ಇರಲು, ಅದು ನಾಶವಾಗುವ ದಿನವು ಸಮೀಪಿಸುತ್ತಲಿತ್ತು. ತುರ್ಕರು ಒರ್ಖಾನನೆಂಬ ತಮ್ಮ ಪ್ರಥಮ ಸುಲ್ತಾನನ[7] ಕೆಳಗೆ, ಕ್ರಿ. ಶ. 1330ನೇ ವರುಷದಿಂದ 1336ನೇದರ ವರೆಗೆ, ಸಣ್ಣ ಅಸಿಯದ ನೀಕೇಯ ನೀಕೊಮೇದೀಯ ಸ್ಮುರ್ನ ಎಫೆಸ ಎಂಬ ಪ್ರಖ್ಯಾತ ಪಟ್ಟಗಳನ್ನೂ ಮೂಸಿಯ ಶೀಮೆಯನ್ನೂ ತಕ್ಕೊಂಡು, ಅಲ್ಲಲ್ಲಿಯ ಕ್ರೈಸ್ತ ದೇವಾಲಯಗಳನ್ನು ಮಸೀದಿಗಳನ್ನಾಗ ಮಾಡಿ, ಯುರೋಪ ಖಂಡಕ್ಕೆ ಸಹ ಹೋಗಿ, 1ನೇ ಮೊರಾದನೆಂಬ 2ನೇ ಸುಲ್ತಾನನ ಕೆಳಗೆ ಸುಮಾರು ಕ್ರಿ. ಶ. 1360ನೇ ವರುಷ ಹದ್ರಿಯಾನೊಪೊಲಿಯನ್ನು[8], ತಮ್ಮ ರಾಜಧಾನಿ ಎಂದು, ನೇಮಿಸಿ ಕೊಂಡರು; ಆ ಪಟ್ಟವು ಕೊನ್ಸ್ತಂತೀನೊಪೊಲಿಗೆ 2 ದಿನಗಳ ದಾರಿ ದೂರ ಮಾತ್ರವಿರುವದು. ಬಳಿಕ 2ನೇ ಮೊಹಮ್ಮದನೆಂಬ ಸುಲ್ತಾನನು ಕ್ರಿ. ಶ. 1453ನೇ ವರುಷಕ್ಕೆ ಹದ್ರಿಯಾನೊಪೊಲಿಯಿಂದ 2,00,000 ಸಂಖ್ಯೆಯ ದಂಡನ್ನು ಕಟ್ಟಿ ಕೊಂಡು, ಹೊರಟು, ಕೊನ್ಸ್ತಂತೀನೊಪೊಲಿಗೆ ಹೋ

1) 217ನೇ ಪಾನು. 2) 103ನೇ ಪಾನು. 3) 274ನೇ ಪಾನು. 4) 323ನೇ ಪಾನು. 5) 254ನೇ ಪಾನು. 6) 341ನೇ ಪಾನು. 7) 297ನೇ ಪಾನು. 8) 178ನೇ, 204ನೇ ಪಾನು.

ಗಿ, ಭೂಜಲಮಾರ್ಗವಾಗಿ ಅದಕ್ಕೆ ಮುತ್ತುವವನಾದನು. ಆಗ ಕೊನ್ಸ್ತಂತೀನೊಪೊಲಿಯಲ್ಲಿ 1,00,000 ನಿವಾಸಿಗಳಿದ್ದರೂ ಅವರೊಳಗೆ 4000 ಮಂದಿ ಮಾತ್ರ ಯುದ್ಧಸ್ಥರು. ಆದಾಗ್ಯೂ ಅಂದಿನ ಉತ್ತಮಗುಣಿಯಾದ 11ನೇ ಕೊನ್ಸ್ತಂತೀನನೆಂಬ ಗ್ರೇಕ ಕೈಸರನು ಧೈರ್ಯ ಬಿಡದೆ, ಕೌಲಿಗಿಳಿಯಲೊಲ್ಲದೆ, ಪಟ್ಟವನ್ನು ಬೇಗದಿಂದ ಕೂಡುವಷ್ಟು ಭದ್ರ ಮಾಡಿ, ಮಾರ್ಬಲದವರ ಹಡಗಗಳು ಒಳ ಶೇರದಂತೆ ರೇವಿನ ಮುಖಕ್ಕೆ ದಪ್ಪವಾದದೊಂದು ಕಬ್ಬಿಣದ ಸಂಕೋಲೆ ಜೋಡಿಸಿದನು. ತುರ್ಕರ ದಳವಾಯಿಗಳು ತಮ್ಮ ಕೆಳಗಿನವರನ್ನು ಚಬುಕಿನಿಂದ ಹೊಡೆದು ಕವಿಸುತ್ತಿದ್ದರೂ ಆರಂಭದಲ್ಲಿ ಕ್ರೈಸ್ತರು ಅವರ ಎಲ್ಲ ಅಭಿಯೋಗಗಳನ್ನು ವ್ಯರ್ಥ ಪಡಿಸುತ್ತಿದ್ದರು. ಆದರೂ ಆ ಪಟ್ಣವು ಬಹಳ ಕಾಲ ಆ ಮಿಗಿಲಾದ ಮಾರ್ಬಲಕ್ಕೆದುರಿಸಲರಿಯದಿತ್ತು. ಮುತ್ತಿಗೆಯು $1\frac{3}{4}$ ತಿಂಗಳು ನಡೆದ ತರುವಾಯ ತುರ್ಕರು ಕೊನ್ಸ್ತಂತೀನೊಪೊಲಿಯನ್ನು ಅದೇ ವರುಷದ ಮೇ ತಿಂಗಳಿನೊಳಗೆ ಸಾಧಿಸಿ ಕೊಳ್ಳುವಲ್ಲಿ ಆ ಕೈಸರನು ಶೂರತ್ವದಿಂದ ಕದನವಾಡಿ, ಮಡಿದನು.

ತದನಂತರ ಮೊಹಮ್ಮದನು ಆ ಪಟ್ಣವನ್ನು ತುರ್ಕ ರಾಜ್ಯದ ಮುಖ್ಯ ಸ್ಥಳವೆಂದಾರಿಸಿ, ಕೈಸರನ ಅರಮನೆಯಲ್ಲಿ ಉಳುಕೊಳ್ಳುವವನಾಗಿ, ಆ ಸೊಫಿಯ ದೇವಾಲಯವನ್ನು[1] ಗುಲಾಬಿನ ಅತ್ತಾರಿನಿಂದ ಶುದ್ಧೀಕರಿಸಲಿಕ್ಕೆ ಹೇಳಿ, ಮಸೀದಿ ಮಾಡಿ ಕೊಂಡನು. ಸ್ವಲ್ಪ ಜನ ಗ್ರೇಕ ಕ್ರೈಸ್ತರು ಮಾತ್ರ ಅಲ್ಲಿ ಉಳಿದು, ತಮ್ಮ ಮತಾಚಾರಕ್ಕೆ ಬೇರೊಂದು ದೇವಾಲಯ ಪಡ ಕೊಂಡರು; ಹೆಚ್ಚು ಕ್ರೈಸ್ತರು, ಬಹು ಜನ ದೊಡ್ಡ ಪಂಡಿತರು ಸಹ, ಈತಲಿಯಕ್ಕೆ, ತಮ್ಮ ಪೂರ್ವಿಕರು ಆಳಿದ್ದ[2] ಸ್ಥಾನಗಳಿಗೆ, ಓಡಿ ಹೋದರು. ಕೊನ್ಸ್ತಂತೀನೊಪೊಲಿಯ ಪತ್ರಿಯರ್ಖನು ಇನ್ನೂ ಕೆಲವು ಕಾಲ ಗ್ರೇಕ ಪಕ್ಷಸಭೆಯ ಪ್ರಧಾನಾಧ್ಯಕ್ಷನೆನ್ನಿಸಿ ಕೊಳ್ಳುತ್ತಿದ್ದರೂ ರುಸ್ಸಿಯ ರಾಜ್ಯದ[3] ಮೊಸ್ಕಾವು ಎಂಬ ಪಟ್ಣದ ಪ್ರಧಾನಾಧ್ಯಕ್ಷನಿಗೆದುರಾಗಿ ಅವನ ಅಧಿಕಾರವು ವಿಲಂಬವಿಲ್ಲದೆ ಕುಂದಲಾರಂಭಿಸಿತು.



## 45. ತುರ್ಕರಿಗೆ ವಿರೋಧವಾದ ಕ್ರೂಜೆಯುದ್ಧಗಳು.

ವಿಶೇಷವಾಗಿ ದೊಡ್ಡನೆಂಬ ಕೊನ್ಸ್ತಂತೀನ ಕೈಸರನ ಕಾಲದಾರಭ್ಯ ಅನೇಕ ಕ್ರೈಸ್ತರು, ಕರ್ತನು ಸಂಚರಿಸಿದ ಸ್ಥಳಗಳನ್ನು ನೋಡ ಬೇಕೆಂತ, ಪಲೇಸ್ತೀನ ದೇಶಕ್ಕೆ ಯಾತ್ರೆ ಮಾಡುತ್ತಿದ್ದರು[4]. ಬಳಿಕ ಅಂಥ ಯಾತ್ರೆಗಳು ಪುಣ್ಯೋದಯವೆಂಬ

1) 342ನೇ ಪಾನು. 2) 331ನೇ ಪಾನು. 3) 324ನೇ ಪಾನು. 4) 154ನೇ, 173ನೇ, 180ನೇ, 257ನೇ ಪಾನು ಸರಿ ನೋಡು.

ಮರುಳು ಭಾವನೆಯು ಸಹ ಹುಟ್ಟಿದ್ದು ಹಿಂದೆ ತಿಳಿದು ಬಂತಲ್ಲ[1]? ಅಂದಿನಿಂದ ಪಪ್ಪಕ ಮತ್ತು ಗ್ರೇಕ ಪಕ್ಷದ ಸಭೋದ್ಯೋಗಿಗಳು ಮಹಾ ಪಾತಕಿಗಳಿಗೆ, ಅಲ್ಲಿಗೆ ಹೋಗುವ ಯಾತ್ರೆಯು ನಿಮಗೆ ತಕ್ಕ ಪ್ರಾಯಶ್ಚಿತ್ತವಾಗಲಿ! ಎಂತ, ಅಪ್ಪಣೆ ಕೊಡುವವರಾದರು. ಪಲೇಸ್ತೀನವು ಗ್ರೇಕ ರಾಜ್ಯದ್ದೊಂದು ಭಾಗವಾಗಿರುವ ಸಮಯ ಯಾತ್ರಸ್ಥರಿಗೆ ಅಲ್ಲಿಯ ಕ್ರೈಸ್ತರಲ್ಲಿ ಒಳ್ಳೇ ಉಪಚಾರವಾಗುತ್ತಿತ್ತು; ಅರಬಿಯರು[2] ಆ ದೇಶವನ್ನು ಸ್ವತಂತ್ರಿಸಿ ಕೊಂಡ ಮೇಲೆಯೂ ಯಾತ್ರಸ್ಥರಿಗೆ ಬಹಳ ಉಪದ್ರವ ಬರಲಿಲ್ಲ. ಆದರೆ ಈಚೆ ಕ್ರಿ. ಶ. 1073ನೇ ವರುಷದಲ್ಲಿ ಆ ಕಾಡುಗುಣಿಗಳಾದ ತುರ್ಕರು[3] ಆ ದೇಶವನ್ನು ತಮ್ಮದು ಮಾಡಿ ಕೊಂಡಂದಿನಿಂದ ಕ್ರೈಸ್ತ ಯಾತ್ರಿಕರಿಗೆ ಮಾತ್ರವಲ್ಲದೆ ಅಲ್ಲಿ ನೆಲೆಗೊಂಡಿರುವಂಥ ಕ್ರೈಸ್ತರಿಗೂ ಬಹಳ ಅಡಚಣೆಯಾಯಿತು. ಅಲ್ಲಿಂದ ಹಿಂದಿರುಗಿದವರು ಅನೇಕಾವರ್ತಿ ಅದಕ್ಕಾಗಿ ಪಪ್ಪರ ಮುಂದೆ ಹಲುಬುತ್ತಾ ಬಂದರು.

ಹೀಗಿರಲಾಗಿ ಫ್ರಂಚು ದೇಶದ ಆಮಿಯೆಜ್ ಪಟ್ಣದವನಾದ ಪೆತ್ರನೆಂಬವನೊಬ್ಬ ವನವಾಸಿಯು ಕ್ರಿ. ಶ. 1095ನೇ ವರುಷಕ್ಕೆ ಪಲೇಸ್ತೀನದಿಂದ ಮರಳಿ ಬಂದು, 7ನೇ ಗ್ರೆಗೋರನ[4] 2ನೇ ಉತ್ತರೋದ್ಯೋಗಿಯಾದ 2ನೇ ಉರ್ಬಾನ ಪಪ್ಪನಿಗೆ ಅಲ್ಲಿಯ ಕ್ರೈಸ್ತರ ಕಷ್ಟವನ್ನು ಬಣ್ಣಿಸಿ, ಯೆರೂಸಲೇಮಿನ ಆಗಿನ ಪತ್ರಿಯರ್ಖನು ಕಳುಹಿಸಿದ್ದೊಂದು ಪತ್ರಿಕೆಯನ್ನು ಸಹ ಅವನ ಕೈಯಲ್ಲಿ ಕೊಟ್ಟು—ತಾನು ಎಷ್ಟರವನು? ಆದರೆ ಯೇಸುನಾಥನು ತನಗೆ ಸ್ವಪ್ನದಲ್ಲಿ ಕಾಣಿಸಿ ಕೊಂಡು, ನಿನ್ನ ದೇಶಕ್ಕೆ ಹೋಗಿ ಕ್ರೈಸ್ತರು ಅವಿಶ್ವಾಸಿಗಳೆದುರಿಗೆ ಯುದ್ಧಪ್ರಯಾಣ[5] ಮಾಡುವಂತೆ ಅವರನ್ನೆಚ್ಚರಿಸೆಂದು, ತನಗೆ ಆಜ್ಞಾಪಿಸಿದನೆಂತ, ಹೇಳಿದನು. ಆಗಲಾ ಪಪ್ಪನು ಅವನನ್ನು ಹೊಗಳಿ—ತುರ್ಕರಿಗೆ ವಿರೋಧವಾಗಿ ಯುದ್ಧಪ್ರಯಾಣಕ್ಕೆ ಹೊರಡ ಬೇಕೆಂದು, ಎಲ್ಲೆಲ್ಲಿಯೂ ಸಾರೆಂತ, ನಿರ್ದೇಶಿಸಿದನು.

ಪೆತ್ರನು ಆ ಅಪ್ಪಣೆಯ ಪ್ರಕಾರವಾಗಿ ಈತಲಿಯದಲ್ಲಿಯೂ ಫ್ರಂಚಿನಲ್ಲಿಯೂ ತಿರಿಗ್ಯಾಡುತ್ತಾ, ಸಾವಿರಾರು ಜನರು ನೆರೆದಲ್ಲಿ ತನ್ನ ಕಥಾಸಾರ ಪುನಃಪುನಃ ಹೇಳುತ್ತಾ ಇರಲು, ಪಪ್ಪಕ ಪ್ರಜೆಯೆಲ್ಲವು ಅಂಥ ಪ್ರಯಾಣಕ್ಕೆ ಮಹಾ ಸಂತೋಷಪಡುವದಾಯಿತು. ಆ ಪ್ರಜೆಗೆ ಆ ಪಲೇಸ್ತೀನವು ಮೋಕ್ಷ ಕೊಡುವಂಥ ಪುಣ್ಯಭೂಮಿ ಎನ್ನಿಸಿತಲ್ಲ? ಮತ್ತೆ ತುರ್ಕರು ಅದನ್ನು ತುಳಿದು ಅಶುದ್ಧ ಮಾಡುತ್ತಿದ್ದರಲ್ಲ? ಪಪ್ಪನು ಆ ಪ್ರಜಾಕುತೂಹಲ ಕಂಡು, ಫ್ರಂಚಿನ ಕ್ಲೆರ್ಮೊಜ್ ಪಟ್ಣದಲ್ಲಿ ಒಂದು ದೊಡ್ಡ ಸಭಾಸಂಘ ಕೂಡಿಸಿದನು; ಅದಕ್ಕೆ 14 ಮಂದಿ ಪ್ರಧಾನಾಧ್ಯಕ್ಷರು,

1) 288ನೇ ಪಾನು. 2) 295ನೇ ಪಾನು. 3) 297ನೇ ಪಾನು. 4) 327—332, 335ನೇ ಪಾನು. 5) ಇಂಥಾದ್ದು ಮುಸಲ್ಮಾನರಿಗೂ ಮತಧರ್ಮವೆನ್ನಿಸುತ್ತದೆ, 294ನೇ ಪಾನು.

225 ಮಂದಿ ಅಧ್ಯಕ್ಷರು, 400 ಮಂದಿ ಅಬ್ಬಾತರು, ಬೇರೆ ಬೇರೆ ಸ್ಥಿತಿಯ ಮಹಾ ಸಂಖ್ಯೆಯ ಸಭ್ಯರು ಸಹಿತವಾಗಿ ಬಂದರು. ಅಂದು ಪಪ್ಪನು ಮತ್ತು ಆ ವನವಾಸಿಯು ಆ ಸಂಘದವರನ್ನು ತಮ್ಮ ಪ್ರಸಂಗಗಳಿಂದುರಿಸಿ, ಹಂಗಿಸುತ್ತಿರಲು, ಪಪ್ಪನು ಕಡೆಯಲ್ಲಿ—ಒಬ್ಬೊಬ್ಬನು ತನ್ನನ್ನು ಬೊಂಕಿ, ತನ್ನ ಕ್ರೂಜೆಯನ್ನೆತ್ತಿ ಕೊಂಡು, ಕ್ರಿಸ್ತನನ್ನು ಘಳಿಸಿ ಕೊಳ್ಳಲಿ! ಎಂತ, ಕೂಗುತ್ತಲೇ ಕೇಳಿದವರೆಲ್ಲರೂ, ದೇವರ ಚಿತ್ತವೇ! ದೇವರ ಚಿತ್ತವೇ! ಎಂದು, ಘೋಷಿಸಿದರು. ಬಳಿಕ ಆ ಪ್ರಯಾಣಕ್ಕೆ ಹೋಗಲಪೇಕ್ಷಿಸುವಂಥವರು ತಮ್ಮ ಬಲಹೆಗಲಿಗೆ ಕೆಂಪು ಕಂಬಳಿಯದೊಂದು ಕ್ರೂಜೆ ಹೊಲಿಸಿ ಕೊಂಡು[1], ಮನೆಗೋಡಿ ಹೋಗಿ, ಯುದ್ಧಸೌರಣೆ ಮಾಡುವವರಾದರು; ಇವರಲ್ಲಿ ಪ್ರಭುಗಳೂ ನಾಯಕರೂ ರಾವುತರಾದಂಥ ಪಾಳೆಗಾರರೂ ಹೇಳಿದ ಈಯಿೂ ಧನಿಗಳ ಸಾಮಂತರೆಂಬ[2] ದಾಸರೂ, ಹೆಂಡರು ಮಕ್ಕಳು ಸಹ, ಇದ್ದರು. ಗೆರ್ಮಾನಿಯದವರು ಆಗಿನ ಪ್ರವರ್ತನೆಗೆ ಶೇರಲಿಲ್ಲ; ಯಾಕಂದರೆ ಅವರು 3ನೇ ಕ್ಲೇಮೆಂತನೆಂಬ ಆ ಪ್ರತಿಪಪ್ಪನ ಪಕ್ಷದವರು[3].

ಪ್ರಜೆಗೆ ಆ ಪಾಳೆಗಾರರು ಮುಂತಾದವರ ಸನ್ನಾಹಕಾರ್ಯವು ಬಹಳ ಉದ್ದಕ್ಕೆ ಹಾಕಿದ ಹಾಗೆ ಕಾಣಿಸುವದರಿಂದ ಅದು ಆ ಪೆತ್ರ ವನವಾಸಿಯ ಮತ್ತು ನಾದಾರಿ ಎಂಬ ಉಪನಾಮವುಳ್ಳ ಪಾಳೆಗಾರನಾದ ವಾಲ್ತೆರನ (ವಲ್ತೆರಿಯ) ಮುಖ್ಯಸ್ಥಿಕೆಯೊಳಗೆ ಕ್ರಿ. ಶ. 1096ನೇ ವರುಷದ ವಸಂತಕಾಲದಲ್ಲಿ ಹೊರಟು, ಗೆರ್ಮಾನಿಯವನ್ನೂ ಹೂಂಗರಿಯವನ್ನೂ ಗ್ರೇಕ ರಾಜ್ಯವನ್ನೂ ದಾಟುತ್ತಾ, ಆಹಾರಕ್ಕಾಗಿ ಲೂಟಿ ಮಾಡುತ್ತಾ, ಅಸಿಯದ ಕಡೆಗೆ ಹೋಯಿತು; ಆದರೆ ಸಾಕಷ್ಟು ಅನ್ನೋದಕವೂ ಆಯುಧಗಳೂ ತಕ್ಕ ದಳವಾಯಿಗಳೂ ಅದಕ್ಕಿರದ ಕಾರಣ ದಾರಿಯಲ್ಲಿ ಒಂದು ದೊಡ್ಡ ಪಾಲು ಸತ್ತಿತು. ಗ್ರೇಕ ಕೈಸರನು[4] ತನ್ನ ಹತ್ತರ ಬಂದವರನ್ನು, ತನಗಿವರ ಉಪದ್ರವ ಬೇಡವೆಂದು, ತೀವ್ರದಿಂದ ಅಸಿಯಕ್ಕೆ ದಾಟಿಸಿದನು. ಅಸಿಯದಲ್ಲಿ ಅವರ ಸಂಕಟ ಅತಿರೇಕವಾಯಿತು; ಹಸಿವೆ ರೋಗಗಳು ಅವರನ್ನು ಸಂಹರಿಸಿದ್ದಲ್ಲದೆ ತುರ್ಕರು ವಾಲ್ತೆರನನ್ನೂ ಇತರ ಅನೇಕರನ್ನೂ ಹೊಡೆದು ಹಾಕಿದರು. ಹೀಗೆ ಸುಮಾರು 80,000 ಜನರಲ್ಲಿ ಕೆಲವು ನೂರು ಮಂದಿ ಮಾತ್ರವೇ ಉಳಿದಿರಲು, ಪೆತ್ರನು ಇವರನ್ನು ಕರಕೊಂಡು, ಕೊಸ್ತಂತೀನೊಪೊಲಿಗೆ ಓಡಿ, ಅಲ್ಲಿ ಬರುವ ಪಾಳೆಗಾರರ ದಾರಿ ನೋಡುತ್ತಿದ್ದನು.

ಈ ಪಾಳೆಗಾರರು ಅದೇ ವರುಷದಲ್ಲಿ ಲೊಥ್ರಿಂಗೆನು ಶೀಮೆಯ[5] ಒಬ್ಬ ನಾಯ

1) ಮರ್ಕ. 8, 34 ಸರಿ ನೋಡು; 287ನೇ ಪಾನು. 2) ಸಾಮಂತ=Vasall, Vassal. 3) 331ನೇ ಪಾನು. 4) ಗ್ರೇಕ ಸಭೆಯುವರಿಗೂ ಪಪ್ಪರ ಸಭೆಯುವರಿಗೂ ಮಿತ್ರಭೇದವಾಗಿ 42 ವರುಷ ಗತಿಸಿದ್ದವು, 342ನೇ ಪಾನು. 5) 303ನೇ ಪಾನು.

ಕನಾದ ಬುಲ್ಲಿಯೊಜ್ ಪಟ್ಟದ ಗೊತ್ಫ್ರೀದನೆಂಬವನಿಂದ ನಡಿಸಿ ಕೊಂಡು, 1ನೇ ಕ್ರೂಜೆಯುದ್ಧಕ್ಕೆ ಹೊರಟು, ಬೇರೆ ಬೇರೆ ಮಾರ್ಗಗಳಲ್ಲಿ ಕೊನ್ಸ್ತಂತೀನೊಪೊಲಿಗೆ ಗಮಿಸುತ್ತಾ, ಅಲ್ಲಿಂದ ಸಣ್ಣ ಅಸಿಯವನ್ನೂ ಸುರಿಯವನ್ನೂ ದಾಟಿ ಪಲೇಸ್ತೀನಕ್ಕೆ ಮುಂದರಿಸುತ್ತಾ ಇದ್ದರು. ಈ ಕಷ್ಟವುಳ್ಳ ಪ್ರಯಾಣಕ್ಕೆ ಸುಮಾರು 3 ವರುಷ ಹಿಡಿಯಿತು; ಹ್ಯಾಗಂದರೆ, 1099ನೇ ವರುಷದ ಮಧ್ಯದಲ್ಲಿ ಅವರು ಯೆರೂಸಲೇಮಿಗೆ ಬಂದು ಮುಟ್ಟಿದರು. ಆದರೆ ಹೊರಟ 6,00,000 ಯುದ್ಧಸ್ಥರೊಳಗೆ 20,000 ಜನರು ಮಾತ್ರ ಮಿಕ್ಕಿದ್ದರು; ಯಾಕಂದರೆ ಪರದೇಶದಲ್ಲಿ ಆಹಾರ ಶಿಕ್ಕದ್ದರಿಂದಲೂ ವ್ಯಾಧಿ ಬಂದದರಿಂದಲೂ ಕೆಲವು ದುರ್ಗಗಳನ್ನು ತೆಕ್ಕೊಳ್ಳುವಲ್ಲಿ ಹೇರಳರು ಹತರಾದ್ದರಿಂದಲೂ ಆ ಸೈನ್ಯವು ಬಹಳ ಬಡವಾಗಿತ್ತು.

ಆ ಕ್ರೂಜೆಯುದ್ಧಸ್ಥರು ಯೆರೂಸಲೇಮಿಗೆ ಮುಟ್ಟಿ, ಒಂದು ತಿಂಗಳು ಕಳೆದ ಮೇಲೆ ಅದನ್ನು ಸಾಧಿಸಿ ಕೊಂಡು, ಅನೇಕ ತುರ್ಕರನ್ನು ದಯೆಯಿಲ್ಲದೆ ಕೊಂದು, ಬುಲ್ಲಿಯೊಜಿನ ಗೊತ್ಫ್ರೀದನನ್ನು, ಯೆರೂಸಲೇಮಿನ ಅರಸೆಂದು, ಆರಿಸಲು, ಇವನು ನಮ್ರತೆಯಿಂದ—ಅಲ್ಲಿಯ ಅರಸುತನವು ತನಗೆ ಬೇಡ, ತಾನು ಪರಿಶುದ್ಧ ಸಮಾಧಿಯ ಪಾಲಕನಷ್ಟೇ! ಎಂತ, ಹೇಳಿ, ಮರುವರ್ಷದಲ್ಲಿ ಮಡಿದನು. ಆಗ ಬಲ್ದ್ವಿನನೆಂಬ ಅವನ ಸಹೋದರನು ಅವನ ಬದಲಿಯವನಾಗಿ, ರಾಜಬಿರಿದು ವಹಿಸಿ ಕೊಂಡನು.

ಹೀಗೆ ನಿರ್ಮಿತವಾದ ಹೊಸ ರಾಜ್ಯವು ಸುಮಾರು 50 ವರುಷ ಶಾಂತಿಯಿಂದಿದ್ದ ತರುವಾಯ ತುರ್ಕರು ಅದರೊಳ ಹೊಕ್ಕು, ಅದರದೊಂದು ಪ್ರಾಂತಪಟ್ಣವಾದ ಎದೆಸ್ಸವನ್ನು[1] ಕ್ರಿ. ಶ. 1147ನೇದಕ್ಕೆ ಹಿಡುಕೊಂಡು, 46,000 ಪ್ರಾಣಿಗಳನ್ನು ಸದೆ ಬಡಿದರು. ಇದರ ಸುದ್ದಿಯು ಯುರೋಪದವರಲ್ಲಿ ಬಹಳ ಕಂಪ ಹುಟ್ಟಿಸಿತು. ಅಂದಿನ 3ನೇ ಯುಗೆನನೆಂಬವನೊಬ್ಬ ಪಪ್ಪನು ಫ್ರಂಚಿನ ಕ್ಲೇರ್ವೊ ಎಂಬ ಪಟದ ಒಬ್ಬ ಕೀರ್ತಿಯುಳ್ಳ ಅಬ್ಬಾತನಾದ ಬೆರ್ನ್ಹರ್ದನೆಂಬವನನ್ನು ಕಳುಹಿಸಿ, ಅವನ ಮೂಲಕ ಫ್ರಂಚಿನ 7ನೇ ಲೂದ್ವೀಗ ಅರಸನನ್ನೂ ಗೆರ್ಮಾನಿಯದ 3ನೇ ಕೊನ್ರಾದ (ಕುವೊನ್ರಾತ) ಕೈಸರನನ್ನೂ 2ನೇ ಕ್ರೂಜೆಪ್ರಯಾಣಕ್ಕೆ ಪ್ರೇರೇಪಿಸಲಾಗಿ, ಅವರಿಬ್ಬರು ಒಂದೊಂದು ದಂಡು ಕಟ್ಟಿ ಕೊಂಡು, ಅದೇ ವರುಷದಲ್ಲಿ ಪಲೇಸ್ತೀನಕ್ಕೆ ಗಮಿಸ ತೊಡಗಿದರು; ಆದರೆ ಅಸಂಖ್ಯ ಕಷ್ಟಕ್ಕೋಸ್ಕರ ಅವರು ಮರುವರುಷದಲ್ಲಿ ಅಪ್ರಾಪ್ತಕಾರ್ಯದವರಾಗಿ ಹಿಂದಿರುಗ ಬೇಕಾಯಿತು. ಗ್ರೇಕ ಕೈಸರನು ಅವರಿಂದ ಏನೂ ಲಾಭ ಹೊಂದದ ಕಾರಣ ಅವರಿಗೆ ಸಹಾಯ ಮಾಡಲಿಕ್ಕೆ ಹಿಂದೆಗೆದನು.

---

1) 251ನೇ, 252ನೇ ಪಾನುಗಳು.

40 ವರುಷದಿತ್ತ ಐಗುಪ್ತದ ವಜೀರನಾದ ಸಲಹದ್ದೀನನು ಯೆರೂಸಲೇಮನ್ನು ತನ್ನ ವಶ ಮಾಡಿ ಕೊಂಡು, ಅಲ್ಲಿಯ ಕ್ರೈಸ್ತ ಅರಸುತನವನ್ನು ಹಾಳು ಗೈದ ಮೇಲೆ ಕ್ರಿ. ಶ. 1189ನೇ ವರುಷ 3ನೇ ಕ್ರೂಜೆಪ್ರಯಾಣವು ಸಿದ್ಧಿಸಿತು. ಆ ವೇಳೆ 70 ವರುಷದವನಾದ ಪ್ರೀದೆರೀಕ ಬರ್ಬರೊಸ್ಸನೆಂಬ ಗೆರ್ಮಾನ ಕೈಸರನು[1] ಮುಂದರಿಸಿ, ಸಣ್ಣ ಅಸಿಯದಲ್ಲಿ ತುರ್ಕರದೊಂದು ಮಹಾ ಸೈನ್ಯಕ್ಕೆ ಅಪಜಯ ಪಡಿಸಿ, ಕ್ರಿ. ಶ. 1190ನೇ ವರುಷ ಕಿಲಿಕಿಯ ನಾಡಿನ ಸೆಲ್ಯುಕೀಯವೆಂಬದೊಂದು ಪಟ್ಣಕ್ಕೆ ಬಂದೊದಗಿ, ಒಂದು ಹೊಳೆ ದಾಟುವಷ್ಟರಲ್ಲಿ ನೀರ ಶೆಳವಿಗೊಳ ಸಿಕ್ಕಿ, ಮುಣುಗಿ, ಸತ್ತನು. ತನ್ಮಧ್ಯ ಫ್ರಂಚಿನ ಅರಸನಾದ 2ನೇ ಫಿಲಿಪ್ಪನೂ[2] ಇಂಗ್ಲಂದಿನಲ್ಲಿ ಯೋಹಾನನ[3] ಪೂರ್ವಾಧಿಕಾರಿಯಾದ ಸಿಂಹಹೃದನೆಂಬ ರಿಚಾರ್ದ ರಾಜನೂ ಜಲಮಾರ್ಗವಾಗಿ ಪಲೇಸ್ತೀನಕ್ಕೆ ಬಂದವರಾಗಿ, ಹಲವು ಕೋಟೆಗಳನ್ನು ಹಿಡುಕೊಂಡರೂ ಮಿತ್ರಭೇದ ಮುಂತಾದ ಕಾರಣಗಳಿಂದ ಕಾರ್ಯಸಾಧಕರಾಗದೆ, ಮರಳಿದರು; ಯೆರೂಸಲೇಮು ಸಲಹದ್ದೀನನ ಕೈಯೊಳಗುಳಿಯಿತು.

ಕ್ರಿ. ಶ. 1204ನೇ ವರುಷಕ್ಕೆ 4ನೇ ಕ್ರೂಜೆಪ್ರಯಾಣವು, 1217ನೇದಕ್ಕೆ 5ನೇದು ನಡೆದನಂತರ 2ನೇ ಪ್ರೀದೆರೀಕ ಕೈಸರನು[4], ತಾನು 9ನೇ ಗ್ರೆಗೋರನೆಂಬ ಕ್ರೂರ[5] ಪಪ್ಪನ ಬಹಿಷ್ಕಾರಾಜ್ಞೆಯೊಳಗಿದ್ದಾಗ್ಯೂ, ಕ್ರಿ. ಶ. 1228ನೇದಕ್ಕೆ 6ನೇ ಕ್ರೂಜೆಪ್ರಯಾಣಕ್ಕೆ ಹೊರಟು, ಯೆರೂಸಲೇಮನ್ನು ತನ್ನ ವಶ ಮಾಡಿ ಕೊಂಡು, ಅಲ್ಲಿ ಕ್ರೈಸ್ತರ ಅರಸುತನವನ್ನು ಪುನಃಸ್ಥಾಪಿಸಿ, ತಾನು ಅದರ ಕಿರೀಟವನ್ನಿಟ್ಟು ಕೊಂಡಾಗಲೇ ಪಪ್ಪನ ಸಂಗಡದ ವ್ಯಾಜ್ಯದ ತುಸಕ ಬೇಗ ಹಿಂದಕ್ಕೋಡಿ ಬರಲವಶ್ಯವಾದ ಕಾರಣ ಆ ಪಟ್ಣವು 14 ವರುಷಕ್ಕೀಚೆ ತಿರಿಗಿ ತುರ್ಕರದಾಯಿತು.

ತದನಂತರ ಫ್ರಂಚಿನ 9ನೇ ಲೂದ್ವೀಗ ರಾಯನ ಕೆಳಗೆ ಕ್ರಿ. ಶ. 1248ನೇ ವರುಷ 7ನೇ ಕ್ರೂಜೆಯುದ್ಧವು ಸಂಭವಿಸಿತು; ಇವನು ದಂಡಿನೊಡನೆ ಐಗುಪ್ತಕ್ಕೆ ಹೋಗಿ, ಮೊದಲಲ್ಲಿ ಗೆದ್ದರೂ ಆ ಮೇಲೆ ಕಾಹಿರೋ ಪಟ್ಣದಲ್ಲಿ ಶೆರೆಯವನಾಗಿ, ಬಹಳ ಹಣ ಕೊಟ್ಟು ಬಿಡಿಸಿ ಕೊಂಡು, ತಿರಿಗಿ, 22 ವರುಷದಿತ್ತ ಇನ್ನೊಮ್ಮೆ ಆಫ್ರಿಕದಲ್ಲಿ ಅಭಿಯೋಗಿಸಿ, ತೂನಿಸ್ ಎಂಬ ಪಟ್ಣಕ್ಕೆ[6] ಮುತ್ತಿರುವ ಸಮಯ ಮಾರಿರೋಗದಿಂದ ಸತ್ತನು.

20 ವರುಷದ ಬಳಿಕ ತುರ್ಕರು ಆ ವರೆಗೆ ಪಲೇಸ್ತೀನದಲ್ಲಿ ಕ್ರೈಸ್ತರೆಂಬವರ ವಶದಲ್ಲುಳಿದಿದ್ದ ಕಡೆಯ ಕೋಟೆಯಾದ ಪ್ಟೊಲೆಮಾಯಿ ಎಂಬ ಪಟ್ಣವನ್ನು ಸಹ ತಮ್ಮದು ಮಾಡಿ ಕೊಂಡರು. ಆದರೆ ಮತ್ತೊಂದು ಕ್ರೂಜೆಪ್ರಯಾಣವು ಆಗಲಿಲ್ಲ.

1) 334—336ನೇ ಪಾನು. 2) 335ನೇ, 336ನೇ ಪಾನುಗಳು. 3) 335—336ನೇ ಪಾನು. 4) 335—337ನೇ ಪಾನು. 5) 48ನೇ, 49ನೇ ಸಂಧಿಗಳು. 6) 85ನೇ ಪಾನು.

ಸುಮಾರು 200 ವರುಷ ಮೂಢ ಭಕ್ತಿಯ ಕುತೂಹಲದಿಂದ ನಡೆಯುತ್ತಿದ್ದ ಆ ಕ್ರೂಜೆಪ್ರಯಾಣಗಳಿಂದ ಪಶ್ಚಿಮ ದಿಕ್ಕಿನವರಿಗೆ ಅನೇಕ ನಷ್ಟ ಬಂತು; ಹ್ಯಾಗಂದರೆ, ಅವುಗಳಲ್ಲಿ ಪಶ್ಚಿಮ ದಿಕ್ಕಿನ 60 ಲಕ್ಷ ಜನರು ವ್ಯರ್ಥವಾಗಿ ಅಳಿದರು; ಮತ್ತೆ ಹಿಂದಕ್ಕೆ ಬರುವವರು ಮೈಲೆ, ಮಾರಿ, ಕುಷ್ಠ ರೋಗಗಳನ್ನಲ್ಲದೆ ತುರ್ಕರಲ್ಲಿಯೂ ಅರಬಿಯರಲ್ಲಿಯೂ ಇದ್ದು ತೋರಿದ ಹಲವು ದುರ್ವ್ಯಸನಗಳನ್ನು ಸಹ ತಂದು ಬಿತ್ತಿದರು; ಅದು ಹೊರ್ತಾಗಿ ಆ ಪ್ರಯಾಣಗಳಲ್ಲಿ ಪೂರ್ವದವರಿಗೂ ಪಶ್ಚಿಮದವರಿಗೂ ಉದ್ಭವಿಸಿದ ಹೊಸ ವ್ಯಾಪಾರದ ಸಂಬಂಧದಿಂದ ಪಶ್ಚಿಮದವರು ವೈಭವಭೋಗಾನ್ವಿತರಾಗಿ[1], ಮುಂಚಿನ ಯಥಾರ್ಥತೆಯ ಮರ್ಯಾದೆಯನ್ನು ಬಹುಶಃ ಮೀರಿ ಬಿಟ್ಟರು; ಅದಲ್ಲದೆ ಪಪ್ಪರು (ಕ್ಷಮಾವಿಕ್ರಯದ ವಿಷಯದಲ್ಲೂ)[2] ಆ ಪ್ರಯಾಣಗಳ ಮೇಲ್ವಿಚಾರಕರಾಗಿ ಎಣೆಯಿಲ್ಲದ ದಾನ ದಕ್ಷಿಣೆಗಳನ್ನು ಹೊಂದುವದರಿಂದ ಅವರ ಮತ್ತು ಪಪ್ಪಕ ಸಭೋದ್ಯೋಗಿಗಳೆಲ್ಲರ ಅಧಿಕಾರವೂ ಐಶ್ವರ್ಯವೂ ಅನಕ ಮಿತಿ ತಪ್ಪಿ ಮಿಗಿಲಾಯಿತು.—ಆದರೂ ಆ ಪ್ರಯಾಣಗಳಿಂದ ಪಶ್ಚಿಮದವರಿಗೆ ಕೆಲವು ಬಹಿಃಪ್ರಯೋಜನಗಳು ಹುಟ್ಟದಿರಲಿಲ್ಲ; ಹ್ಯಾಗಂದರೆ, ರೋಮಪುರವು ಭೂಚಕ್ರದ ನಾಭಿ ಎಂಬ ಭಾವನೆಯು ಬಹು ದೇಶಗಳನ್ನು ನೋಡಿ ಬಂದಂಥ ಅನೇಕರಲ್ಲಿ ಪರಿಹಾರವಾಯಿತು; ಅವರು ಗ್ರೇಕ ರಾಜ್ಯದವರ ಮತ್ತು ಅರಬಿಯರ ಮುಖದಿಂದ ತಕ್ಕಷ್ಟು ವಿದ್ಯೆ ಕಲಾಕುಶಲತ್ವಗಳನ್ನು ಕಲಿತು ಕೊಂಡು ಹಿಂದಿರುಗಿದರು; ಹ್ಯಾಗೂ ಆ ಹೊಸ ವ್ಯಾಪಾರದಿಂದ ರಾಜ್ಯಗಳೂ ಪಟ್ಣಗಳೂ ಸಂಪತ್ತುಳ್ಳವುಗಳಾದವು; ಇತ್ಯಾದಿ.

ಆದರೆ ಒಂದು ದೊಡ್ಡ ಪ್ರಮಾಣವಾಯಿತು; ಯಾವದಂದರೆ, ಕರ್ತನಾದ ಕ್ರಿಸ್ತನು ತನ್ನನ್ನು ತ್ಯಜಿಸಿದ ಯೆಹೂದ್ಯರಿಗೆ—ಇಗೋ, ನಿಮ್ಮ ಮನೆಯು (ಅಂದರೆ ದೇವಾಲಯವೂ ಪಟ್ಣವೂ) ನಿಮಗೆ ಹಾಳಾಗಿ ಬಿಡಲ್ಪಡುವದು; ಯಾಕಂದರೆ ನಿಮಗೆ ಹೇಳುತ್ತೇನೆ, ಇಂದಿನಿಂದ, ಕರ್ತನ ಹೆಸರಿನಲ್ಲಿ ಬರುವವನಿಗೆ ಸ್ತೋತ್ರವಾಗಲಿ! ಎಂದು, ನೀವು ಹೇಳುವ ಪರ್ಯಂತ ನನ್ನನ್ನು ನೋಡದೆ ಇರುವಿರಿ! ಎಂತ, ನುಡಿದ ಪ್ರವಾದನೆಯನ್ನು[3] ಯಾರಾದರೂ ಹ್ಯಾಗೂ, ಅದರ ನಿರ್ಣಯ ಲಕ್ಷಿಸದೆ, ಒದಗಿಸಲಾರರು[4].

---

1) 299ನೇ ಪಾನು ಸರಿ ನೋಡು. ದೃಷ್ಟಾಂತಕ್ಕಾಗಿ ಮುಂಚೆ ಗೆರ್ಮಾನಿಯದಲ್ಲಿ ಅತ್ಯಪೂರ್ವವಾಗಿದ್ದ ಸುವರ್ಣಾಭರಣಗಳೂ ರೇಶ್ಮೆಯ ವಸ್ತ್ರ ಮುಂತಾದ ಜಿನುಗು ವಸ್ತ್ರಗಳೂ ಸಕಲಸುಗಂಧವರ್ಗಗಳೂ ಅಗತ್ಯವಾಗಿ ಬೇಕೆಂತಾಯಿತು. ಬಟ್ಟಿ ಇಳಿಸಿ ಸಾರಾಯ ಮಾಡುವ ವಿದ್ಯೆಯನ್ನು ಸಹ ಕ್ರೂಜೆಯುದ್ಧಸ್ಥರು ಮೂಡಲಲ್ಲಿಂದ ತಕ್ಕೊಂಡು ಬಂದರಂತೆ. 2) 46ನೇ ಸಂಧಿ. 3) ಮತ್ತಾ. 23, 38. 39; ಲೂಕ. 13, 35. 4) 259, 260ನೇ ಪಾನು ಸರಿ ನೋಡು.

## 46. ರೋಮಕ (ಪಪ್ಪಕ) ಮತ್ತು ಗ್ರೀಕ ಮತದವರ ಅಂತಃಸ್ಥಿತಿಗತಿಯು.

ಈ ಸಂಧಿಯನ್ನು ಹೃತ್ತು ಭಿನ್ನವಾಗುವಂಥ ವ್ಯಥೆಯಿಂದ ಬರೆಯಲಾಯಿತೆಂತ, ಮುಂದಾಗಿ ತಿಳಿಸ ತಕ್ಕದ್ದು; ಹ್ಯಾಗಂದರೆ—

ಕ್ರಿ. ಶ. 323ನೇ ವರುಷಕ್ಕೂ 600ನೇದಕ್ಕೂ ನಡುವೆ ಇರುವ 277 ವರುಷಗಳೊಳಗೆ ರಾಜ್ಯಮತದ ದೃಶ್ಯವಾದ[1] ಕ್ರೈಸ್ತ ಸಭೆಯವರ ಸದ್ಭಕ್ತಿಯೂ ಸದಾಚಾರವೂ ಲಯವಾಗಲಿಕ್ಕೆ ಹತ್ತಿದವೆಂತ, ಹಿಂದೆ ತೋರುತ್ತದೆ. ಆಗ ಸ್ವಕ್ರಿಯೆಗಳಿಂದ ನಿತ್ಯ ರಕ್ಷಣ ಘಳಿಸಿ ಕೊಳ್ಳ ಬಹುದೆಂಬ ಮಿಥ್ಯಾಭಾವನೆಯ ದೆಸೆಯಿಂದ ಅವಿವಾಹಿತ್ವಾಜ್ಞೆಗಳು[2], ವನವಾಸಿ ಮಠಿಕರ ಧರ್ಮವು[3], ಸಭೋದ್ಯೋಗಿಗಳ ಬಂಧಮೋಕ್ಷಾಧಿಕಾರದ ಮೇಲಿನ ಅಯೋಗ್ಯವಾದ ವಿಶ್ವಾಸವು[4], ಯಾತ್ರೆಗಳು[5], ಪುಣ್ಯಾದಕ್ಷಿಣೆಗಳು[6] ಹುಟ್ಟಿದವು; ಅದಲ್ಲದೆ ಏಕ ಮಧ್ಯವರ್ತಿಯಾದ ಕ್ರಿಸ್ತನ[7] ವಿಷಯದ ಜ್ಞಾನಾಲ್ಪತ್ವದ ದೆಸೆಯಿಂದಲೂ ಪಿಶಾಚನ ಮೋಹಕ ಕಾರ್ಯದ ದೆಸೆಯಿಂದಲೂ ಸಂತರ ಮತ್ತು ಸಂತಾವಶಿಷ್ಟಗಳ ಮತ್ತು ಚಿತ್ರ ಮೂರ್ತಿಗಳೆರಡರ ಪೂಜೆಯೂ[8] ಶಾಂತ್ಯುದಕದ ಮೋಸವೂ[9] ಸಹ ಉದ್ಭವಿಸಿದವು; ಪುನಃ ದೇವವಾಕ್ಯದ ರಸಾಸ್ವಾದನೆಯ ಕೊರತೆಯ ದೆಸೆಯಿಂದ ದೀಪ ಧೂಪ ವಸ್ತ್ರಾದಿಗಳಿಂದ ಭೂಷಿತವಾದ ದೇವಾರಾಧನಾಚಾರವು[10] ಉಂಟಾಯಿತು; ಅದು ಹೊರ್ತಾಗಿ ಆ ಕಾಲಾಂತರದೊಳಗೆ ಶುದ್ಧೀಕರಣಾಗ್ನಿ, ಪ್ರಾಣಿಮಿಸ್ಸ[11], ವಸ್ತುಪರಿಣಾಮ[12] ಎಂಬ 3 ಅಪಬೋಧನೆಗಳೂ ಪಪ್ಪಕತ್ವವೂ[13] ಉದಯಿಸಿದವು. ಇಷ್ಟೆಲ್ಲಾ ಪಾಷಂಡವೂ ಅದರ ದುಷ್ಫಲಗಳೂ ಗ್ರೀಕ ಮತ್ತು ರೋಮಕ (ಪಪ್ಪಕ) ಪಕ್ಷಸಭೆಗಳಲ್ಲಿ ಕುಷ್ಠ ರೋಗದಂತೆ ಕ್ರಿ. ಶ. 600ನೇ ವರುಷದಿಂದ 1517ನೇದರ ವರೆಗೆ ಇರುವ ಕಾಲದೊಳಗೆ ಹೆಚ್ಚು ಹೆಚ್ಚಿಗೆ ಹತ್ತಿ ಕೊಳ್ಳುತ್ತಿದ್ದವು; ಆ ಕಾಲದೊಳಗೆ ರಾಜ್ಯಮತಗಳೆನ್ನಿಸುವ ದೃಶ್ಯವಾದ ಅವೆರಡು ಪಕ್ಷಸಭೆಗಳು ಮಹಾಂಧಕಾರದ ರಾತ್ರಿಯಲ್ಲಿ ಮುಳುಗಿದ ಬಳಿಕ ಅವು ಕ್ರಿಸ್ತನವಲ್ಲವೆಂಬದಕ್ಕೆ ಏನೂ ಸಂಶಯವಿಲ್ಲ; ಪಪ್ಪಕ ಮತವು ಶೇರಿಕೊಂಡ[14] ತ್ಯುತೊನರಿಗೆ ಸ್ವಭಾವದ ಮೇಲೆ ಮನಸ್ಸಾಕ್ಷಿಯ ಮಂಗಲಕರವಾದ ಬಹು ಬಲವಿಲ್ಲದಿದ್ದರೆ[15] ಅವರು ಅದಕ್ಕಾಗಿಯೇ ಕೆಟ್ಟು ಹೋಗುತ್ತಿದ್ದರು.

ಹ್ಯಾಗಂದರೆ, ಅವಿವಾಹಿತ್ವಾಜ್ಞೆಯ ಮೇಲೆ ಏನಾಯಿತಂದರೆ, ಆ ಪಕ್ಷಸ

1) 284ನೇ ಪಾನು. 2) 34ನೇ ಸಂಧಿ. 3) 33ನೇ ಸಂಧಿ. 4) 289ನೇ ಪಾನು. 5) 343, 344ನೇ ಪಾನು. 6) 265ನೇ ಪಾನು. 7) 1 ತಿಮೋ. 2, 5. 8) 339 ಆದಿ ಪಾನು. 9) 286ನೇ ಪಾನು. 10) 286ನೇ, 314ನೇ ಪಾನುಗಳು. 11) 270ನೇ ಪಾನು. 12) 290ನೇ ಪಾನು. 13) 35ನೇ, 43ನೇ ಸಂಧಿಗಳು. 14) 39, 40, 41, 42ನೇ ಸಂಧಿ. 15) 299ನೇ ಪಾನು.

ಭೋದ್ಯೋಗಿಗಳೊಳಗೆ ವಿವಾಹಿಗಳಾಗದಂಥವರಲ್ಲಿ ಹೆಚ್ಚು ಜನರು ಜಾರರಾಗಿ, ತಮ್ಮ ಸಭ್ಯರ ಸ್ತ್ರೀಯರನ್ನೂ ಕುಮಾರ್ತೆಯರನ್ನೂ ಮೋಸಗೊಳ್ಳಿಸುತ್ತಾ ಇರುವದಕ್ಕೂ ಅಂಜದಿರುತ್ತಾ ಇದ್ದರು[1].

ಮಠಿಕ ಕುಲದವರ ಹೆಚ್ಚು ಮಠಗಳೊಳಗಿಂದ ವಿದ್ಯೆಯು ಬೇಗ ಹೊರಗಾಯಿತು; ಹೆಣ್ಣು ಗಂಡು ಮಕ್ಕಳ ಅನೇಕ ಮಠಗಳು ಸೂಳೆಮನೆಗಳಾದವಷ್ಟೇ[2]. ಅಂಥಾ ನೀಚತನಕ್ಕೆ ಅಡ್ಡಗಟ್ಟುವದಕ್ಕೋಸ್ಕರ ಪಪ್ಪಕರಲ್ಲಿ ವಿಧವಿಧದ ಹೊಸ ಮಠಿಕ ಕುಲಗಳು, ಕ್ಲುನಿಯಕೆನ್ಸರು ಕಿಸ್ತೆರ್ಕಿಯೆನ್ಸರು ಕರ್ತೂಸಿಯಾನರು ಕರ್ಮೆಲೀತರು ಔಗುಸ್ತೀನರು ದೊಮಿನಿಕಾನರು ಫ್ರಂಕ್ಸಿಸ್ಕಾನರು ಮುಂತಾದವರವುಗಳು, ಎದ್ದವು; ಆದರೆ ಅವು ಸುಮಾರು ಎದ್ದಂದೇ ಹೆಚ್ಚು ಕಡಿಮೆ ಕೆಟ್ಟವು. ಮುಖ್ಯವಾಗಿ ದೊಮಿನಿಕಾನರಿಗೂ ಫ್ರಂಕ್ಸಿಸ್ಕಾನರಿಗೂ—ಕಥರರನ್ನು[3] ಅಂದರೆ ಪಪ್ಪಕ ಮತಕ್ಕೆ ಒಳ ಬೀಳಲೊಲ್ಲದಂಥವರನ್ನು, ನಿಜ ಕ್ರೈಸ್ತರನ್ನು ಸಹ, ತರ್ಕದಿಂದಾಗಲಿ ಬಲಾತ್ಕಾರದಿಂದಾಗಲಿ ಒಳ ಪಡಿಸ ಬೇಕು ಇಲ್ಲವೆ ಕೆಡಿಸ ಬೇಕೆಂದು, ಹೇಳುವ ಅಭಿಪ್ರಾಯವಿರುವದರಿಂದ ಪಪ್ಪರು ಅವರಿಗೆ ಬಹಳ ಇಂಬು ಕೊಡುತ್ತಿದ್ದರು.

ಮಠೋದ್ಯೋಗಿಗಳು (ಅಂದರೆ ಸಭೋದ್ಯೋಗಿಗಳು)—ದೇವರಿಗೂ ಮನುಷ್ಯರಿಗೂ ಅನ್ಯೋನ್ಯ ಉಂಟು ಮಾಡುವದಕ್ಕೆ ತಾವು ಅಗತ್ಯವಾಗಿ ಬೇಕು, ದೇವರ ಸಮಕ್ಷದಲ್ಲಿ ಪಾಪಗಳನ್ನು ತೊಲಗಿಸಲಿಕ್ಕೆ ತಮಗೆ ಮಾತ್ರವೇ ಅಧಿಕಾರವದೆ; ಆದ್ದರಿಂದ ಮೋಕ್ಷಾರ್ಥಿಗಳಾದ ಸಮಸ್ತರೂ, ಮುಖ್ಯವಾಗಿ ಪರಿಶುದ್ಧ ರಾತ್ರಿಭೋಜನಕ್ಕೆ (ಮಿಸ್ಸಯಾಗಕ್ಕೆ)[4] ಬರುವಂಥವರು, ತಮ್ಮ ಪಾಪಗಳನ್ನು ತಮಗರುಹಿ, ತಮ್ಮಿಂದ ಪ್ರಾಯಶ್ಚಿತ್ತಗಳನ್ನು ಹೊಂದ ಬೇಕೆಂದು, ಚರ್ಚಿಸಿ, ಹೀಗೆ ತಮ್ಮ ಸಭ್ಯರ ಮೇಲೆ ಬಹಳ ಅಧಿಕಾರ ಆಕ್ರಮಿಸಿ ಕೊಂಡರು. ಇದರ ಮೂಲವಾಗಿ ಮಠೋದ್ಯೋಗಿಶ್ರವನಿವೇದನವೆಂಬ ದುಷ್ಟ ಕಟ್ಟಳೆ ಹುಟ್ಟಿತು[5]; ಏನಂದರೆ, ಸಭ್ಯರು ತಮ್ಮ ಪಾಪಗಳನ್ನು ಅರಿಕೆ ಮಾಡುವಲ್ಲಿ ಹ್ಯಾಗೂ ಒಂದೊಂದು ಪಾಪವನ್ನು ಪ್ರತ್ಯೇಕವಾಗಿ ಮಠೋದ್ಯೋಗಿಯ ಕಿವಿಯಲ್ಲಿ ವಿವರಿಸಿ ನಿವೇದಿಸ ಬೇಕು. ಹೀಗಿರಲಾಗಿ ಇತರವಾದ ಬೇರೆ ಬೇರೆ ಅನರ್ಥಕ್ಕಲ್ಲದೆ ಅನಂತ ಕಪಟಕ್ಕೆ ಸಹ ಹಾದಿ ಮಾಡಿಟ್ಟಂತಾಯಿತು; ಹ್ಯಾಗಂದರೆ, ಪಾಪನಿವೇದನಕ್ಕೆ ಬರುವಂಥವರು—ಎಲ್ಲವ

1) 310, 318, 326, 327ನೇ ಪಾನುಗಳನ್ನು ಸರಿ ನೋಡು. 2) Concil. Troslej.; Muratori antiq. Ital. med. aevi, 6; Nic. de Clamengis de ruina eccl.; Greg. XII ep. ad Frisic. abbat.; Theobald. sermo in Conc. Const.; Buschi. de reform. monast. 1, 4; etc. 3) 281ನೇ ಪಾನು. 4) 290, 340ನೇ ಪಾನು. 5) ಕೀರ್ತ. 32, 5 ಸರಿ ನೋಡು; ಪಾಪನಿವೇದನದ ತಕ್ಕ ಸೌವಾರ್ತಿಕ ಕ್ರಮವು ಯಕೋಬನ ಪತ್ರಿಕೆಯ 5ನೇ ಸಂಧಿಯ 16ನೇ ವಚನದಲ್ಲಿ ಕಾಣಿಸುತ್ತದೆ.

ನ್ನು ತಿಳಿಸುವದು ಅಸಾಧ್ಯವೂ ಅನುಚಿತವೂ, ಸ್ವಲ್ಪ ಹೆಚ್ಚು ಕಡಿಮೆಯಾದರೇನು? ಎಂತ, ಆಲೋಚಿಸಿ, ಚಿಕ್ಕ ತಪ್ಪುಗಳನ್ನು ಮಾತ್ರ ಅರಿಸಿ, ಮಹಾ ಪಾತಕಗಳನ್ನು ಮರೆ ಮಾಜಿ, ಕ್ಷಮಾವಾಚನ ಪಡೆದು, ಹೋಗುತ್ತಿದ್ದರು.

ಪಾಪನಿವೇದಕರಿಗೆ ನಿವೇದನಶ್ರೋತರಿಂದ ನಾನಾ ತರದ ಪ್ರಾಯಶ್ಚಿತ್ತಗಳು ನೇಮಕವಾದವು; ಯಾವವಂದರೆ, ಉಪವಾಸ ಯಾತ್ರೆ ದಾನಧರ್ಮ ಮತೋದ್ಯೋಗಿಸಭೆಗೆ ತಕ್ಕ ಸಂಭಾವನೆ ನೈಮಿತ್ತಿಕ ಪ್ರಾರ್ಥನೆ ಮುಂತಾದದ್ದು. ಅಂಥಾ ಪ್ರಾರ್ಥನೆಗೆ ಒಬ್ಬೊಬ್ಬನಿಗೆ ಒಂದೊಂದು ಜಪಮಾಲಿಕೆ ಇರುವದು; ಅದು ಚಿಕ್ಕ ದೊಡ್ಡ ಮಣಿಗಳು ಪವಣಿಸಿರುವದೊಂದು ಧಾರ; ಮೊದಲು 9 ಸಣ್ಣ ಮಣಿಗಳು ಬಂದ ಮೇಲೆ 1 ದೊಡ್ಡದು ಬರುವದು; ಪದಕಕ್ಕೆ ಬದಲಾಗಿ ಕೆಳಗೆ ಒಂದು ಕ್ರೂಜೆಯಾಕೃತಿ[1] ಕಟ್ಟಿರುವದು; ಒಂದೊಂದು ಚಿಕ್ಕ ಮಣಿಯಲ್ಲಿ ಮರಿಯಳೆಂಬವಳಿಗೆ ಲತೀನ ಭಾಷೆಯದೊಂದು ಅವೆ ಮರಿಯ ಎಂಬ ಪ್ರಾರ್ಥನೆಯನ್ನೂ ಒಂದೊಂದು ದೊಡ್ಡದರಲ್ಲಿ ಅದೇ ಭಾಷೆಯ ಪತೆರ್ ನೊಸ್ತೆರ್ ಎಂಬ ಪರಲೋಕದಲ್ಲಿರುವ ನಮ್ಮ ತಂದೆಯೇ! ಎಂದು ಮೊದಲಾದ ಪ್ರಾರ್ಥನೆಯನ್ನೂ ಆ ಕ್ರೂಜೆಯಲ್ಲಿ ಅದೇ ಭಾಷೆಯ ಅಪೊಸ್ತೊಲಿಕ ವಿಶ್ವಾಸಪ್ರಮಾಣವನ್ನೂ ಜಪಿಸುತ್ತಿರ ಬೇಕು; ನಿವೇದನಶ್ರೋತನು, ಇಷ್ಟಿಷ್ಟು ಸಾರಿ ಜಪಮಾಲಿಕಾವರ್ತನೆ ಗೈಯ ಬೇಕೆಂದು, ನೇಮಿಸುವನು. ಇಂಥಾ ಪ್ರಾಯಶ್ಚಿತ್ತಪ್ರಾರ್ಥನೆಯು ಕ್ರಿಸ್ತನ ಚಿತ್ತಕ್ಕೆ ಎಷ್ಟೋ ವಿರೋಧ![2] ಪುನಃ, ರಕ್ತ ಸೋರುವಂತೆ ತಮ್ಮ ಬರೇ ಮೈಯನ್ನು ತಾವೇ ಹೊಡ ಕೊಳ್ಳುವದೂ ನಿವೇದನಶ್ರೋತನಿಂದ ಹೊಡೆಸಿ ಕೊಳ್ಳುವದೂ ಬರೇ ಮೊಣಗಾಲಿಂದ ಒಂದು ದೇವಾಲಯದ ಪಾವಟಿಗೆ ಹತ್ತುವದೂ ಇತ್ಯಾದಿ ಸಹ ಪ್ರಾಯಶ್ಚಿತ್ತವೆನ್ನಿಸಲಾಯಿತು. ನಿವೇದನಶ್ರೋತನಿಗೆ ತಕ್ಕಷ್ಟು ಹಣ ಕೊಟ್ಟರೆ ತನ್ನ ಮನಸ್ಸಿಗೆ ತೋರಿದಂಥಾದೊಂದು ಪ್ರಾಯಶ್ಚಿತ್ತ ಆರಿಸಿ ಕೊಳ್ಳ ಬಹುದು; ಅದು ಹೊರ್ತಾಗಿ ಹಣದ ಮೂಲಕದಿಂದ ಸಕಲ ಪ್ರಾಯಶ್ಚಿತ್ತಗಳಿಗೆ ತಪ್ಪಿಸಿ ಕೊಳ್ಳ ಬಹುದು. ಆಗಿಂದಾಗ ಮತೋದ್ಯೋಗಿಗಳು ಒಬ್ಬ ಮನುಷ್ಯನ ಆಯುಷ್ಯ ಅಂದರೆ 100 ವರುಷ ಮಿಾರುವಂಥ ಪ್ರಾಯಶ್ಚಿತ್ತ ಹೊಂದಿಸಿ, ಅಂಥ ಪ್ರಾಯಶ್ಚಿತ್ತ ಹೊಂದಿರುವವನು ಮಹಾದಾನ ಕೊಡದಿದ್ದರೆ ಮರಣದಾಚೆಯೂ ಮತೋದ್ಯೋಗಿಗಳ ಶಾಪದೊಳಗುಳಿಯುವನೆಂಬಂತೆ ನಡೆಯುವದು. ಸ್ಥಿತಿಯಲ್ಲಿ ಆಢ್ಯರಾದವರನ್ನು ತಮ್ಮ ಅಧೀನ ಮಾಡಿ ಕೊಳ್ಳುವದಕ್ಕೆ, ಹಿಂದೆ ಗೊತ್ತಾದಂತೆ[3], ಬನ್ನು ಮತ್ತು ಇಂತೆರ್ದಿಕ್ತು ಕಲ್ಪಿತವಾದವು. ಒಂದು ಬನ್ನಿನ ಅರ್ಥವನ್ನು ಸ್ವಲ್ಪ ತೋರಿಸುವದಕ್ಕೋಸ್ಕರ 22ನೇ ಯೋಹಾನ ಪಪ್ಪನೆಂಬವನು ಬೈಯೆರ್ನಿನ ಲೂದ್ವಿಗನೆಂಬ ಗೆರ್ಮಾ

1) 345ನೇ ಪಾನು. 2) ಮತ್ತಾ. 6, 7. 3) 329—333, 335—338, 341, 342ನೇ ಪಾನು.

ನಿಯದ ಒಳ್ಳೇ ಕೈಸರನ[1] ಮೇಲೆ ಕ್ರಿ. ಶ. 1324ನೇ ವರುಷಕ್ಕೆ ಹಾಕಿದದರ ಕೆಲವು ಮಾತು ತಿಳಿಸೋಣ; ಏನಂದರೆ—ದೇವರು ಕೈಸರನನ್ನು ಮರುಳುತನದಿಂದಲೂ ಕಠಿಣ ಹುಚ್ಚಿನಿಂದಲೂ ದಂಡಿಸಲಿ! ಪರಲೋಕವು ತನ್ನ ಪೂರ್ಣ ದ್ವೇಷವನ್ನು ಅವನ ಮೇಲೆ ಬಡೆಯಲಿ! ಪರಿಶುದ್ಧರಾದ ಪೇತ್ರ ಪೌಲರ ಕೋಪವು ಅವನಿಗೆ ಇಹದಲ್ಲಿಯೂ ಪರದಲ್ಲಿಯೂ ತಾಗಲಿ! ಪ್ರಥಮ ಪ್ರಜೆಯಲ್ಲಿಯೇ (ಅಂದರೆ ಚೊಚ್ಚಲುಮಗನಲ್ಲಿಯೇ) ಅವನ ಹೆಸರು ಇಲ್ಲದೆ ಹೋಗಲಿ! ಭೂಮಿಯಲ್ಲಿ ಅವನ ಜ್ಞಾಪಕವು ಅಳಿದು ಹೋಗಲಿ! ಸರ್ವ ಭೂತಗಳು ಅವನಿಗೆ ಮುನಿಯಲಿ! ಅವನ ಮಕ್ಕಳು ಶತ್ರುಗಳ ಕೈಗೆ ಶಿಕ್ಕಿ, ತಂದೆಯ ಕಣ್ಣೆದುರಿನಲ್ಲಿಯೇ ಹಿಂಸೆ ಪಡಲಿ! ಇತ್ಯಾದಿ.—ಇಂಥಾ ನೀಚ ಮಾತುಗಳು ಪಿಶಾಚಿಗೆ ಮಾತ್ರ ತಕ್ಕವಲ್ಲವೋ[2]? ಅದು ಹೊರ್ತಾಗಿ, ಪಪ್ಪರು ರಾಜರ ತಲೆಗೆ ಹೊಡೆಯುವ ಬನ್ನುಗಳಲ್ಲಿ ಮತ್ತೊಂದು ಮಹಾ ಪಾತಕವಿರುವದೇನಂದರೆ, ಪ್ರಜೆಯು ಆಯಾ ರಾಜರಿಗೆ, ನಿತ್ಯಕ್ಕೂ ನಂಬಿಗಸ್ತರಾಗಿರುವೆವೆಂತ, ದೇವರ ನಾಮದಲ್ಲಿ ಮಾಡಿದ ಪ್ರಮಾಣವನ್ನು ಪಪ್ಪರು ಕಿತ್ತುಹಾಕಿ, ಪ್ರಜೆಯನ್ನು ಪ್ರಮಾಣಭಂಗಕ್ಕೆ ನಡಿಸುವದೇ[3].

ಹಣ ಕೊಟ್ಟು ಪ್ರಾಯಶ್ಚಿತ್ತಗಳನ್ನು ತಪ್ಪಿಸಿ ಕೊಳ್ಳ ಬಹುದೆಂಬ ಕಟ್ಟಳೆ ಹಿಂದೆ ಸೂಚಿಸಿ ಅದೆ; ಪಪ್ಪಕ ಮತೋದ್ಯೋಗಿಗಳು ಈ ರೀತಿಯಿಂದ ಪಾಪಕ್ಷಮೆಯನ್ನು ವಿಕ್ರಯಿಸುವದು ಇಂದುಲ್ಗೆಂತಿಯ (ಇಂದಲ್ಜೆನ್ಸ್) ಎನ್ನಿಸುತ್ತದೆ. ಈ ಕ್ಷಮಾವಿಕ್ರಯದಲ್ಲಿ ಅಂಗಡಿಯ ಮತ್ತು ಭಂಡಶಾಲೆಯ ವ್ಯಾಪಾರವೆಂಬಂತೆ ಆಗುವದು. ಪಪ್ಪನಾಗಲಿ ಪಪ್ಪಕನಾದ ಒಬ್ಬ ಅಧ್ಯಕ್ಷನಾಗಲಿ—ನೀವು ಒಂದು ಕ್ರೂಜೆಪ್ರಯಾಣಕ್ಕೆ ಹೊರಡುವ ಪಕ್ಷದಲ್ಲಿ, ಅಥವಾ ಅದಕ್ಕೆ ಹಣ ಕೊಡುವ ಪಕ್ಷದಲ್ಲಿ[4], ಅಥವಾ ಕಥರರನ್ನು[5] ಹಿಂಸಿಸುವ ಪಕ್ಷದಲ್ಲಿ, ಅಥವಾ ರೋಮಕ್ಕೆ ಯಾತ್ರೆ ಮಾಡಿ ಪಾಪ ನಿವೇದಿಸುವ ಪಕ್ಷದಲ್ಲಿ, ಅಥವಾ ಅಂಥ ಯಾತ್ರೆಯ ಖರ್ಚು ತಂದಿಕ್ಕುವ ಪಕ್ಷದಲ್ಲಿ, ನಮಗುಚಿತವೆನ್ನಿಸುವ ಇತರ ಬೇರೆ ಬೇರೆ ಪಕ್ಷದಲ್ಲಿ ಸಹ, ನಿಮ್ಮ ಪಾಪವು ಇಂತಿಷ್ಟು ವರುಷಗಳ ವರೆಗೆ, 100 ವರುಷಗಳ ವರೆಗೂ, ಕ್ಷಮಿಸಲಾಗುವದೆಂದು, ಸಭ್ಯರೊಳಗೆ ಎಲ್ಲಿಯೂ ಸಾರಿಸಿದರೆ ಅದು ಭಂಡಶಾಲೆಯ ವ್ಯಾಪಾರದಂತೆ ಆಗುವದು; ಅಂಗಡೀ ವ್ಯಾಪಾರದಂಥ ಕ್ಷಮಾವಿಕ್ರಯವನ್ನು ಪಪ್ಪನಾಜ್ಞೆಯೊಳಗೆ ಒಬ್ಬೊಬ್ಬ ಪ್ರೀಸ್ತನು ನಡಿಸುತ್ತಿರುವನು. ಕ್ಷಮಾಪತ್ರವಿಕ್ರಯಕಾರರು ಶೀಮೆಗಳನ್ನು ತಿರುಗು

1) 337, 338ನೇ ಪಾನು. 2) ಮತ್ತಾ. 5, 44; ಲೂಕ. 6, 28; ರೋಮಾ. 12, 14; 1 ಕೊರಿ. 4, 12 ಸರಿ ನೋಡು. 3) Decret. IV Concil. Lateran.; 382, 326, 330, 332—336ನೇ ಪಾನು; ನಿದರ್ಶನಕ್ಕಾಗಿ ಇಂಗ್ಲಂದಿನ ಧನಿಗಳಾದ ಆ ಯೋಹಾನನಿಗೂ (336ನೇ ಪಾನು) 8ನೇ ಹೆನ್ರಿಗೂ ಇಲಿಜಬೆಥಳಿಗೂ ಪಪ್ಪರು ಜಡಿದ ಬನ್ನನ್ನೋದಿದರೆ ಸಹ ಬಹು ಸ್ಪಷ್ಟವಾಗುವದು. 4) 348ನೇ, 351ನೇ ಪಾನು ಸರಿ ನೋಡು. 5) 350ನೇ ಪಾನು.

ವವರಾದರು. ಬೇಕಾದವರು ತಾವು ಮಾಡಲಿಕ್ಕೆ ಯೋಚಿಸುವ ಪಾಪಗಳ ಕ್ಷಮೆಗೋಸ್ಕರ ಒಂದು ವರುಷ ಮುಂಚಿತವೇ ಕ್ಷಮಾಪತ್ರಗಳನ್ನು ಕೊಂಡು ಕೊಳ್ಳ ಬಹುದು. ಇಂಥ ಕ್ಷಮಾವಿಕ್ರಯವನ್ನು ಸತ್ತವರಿಗೂ ತಾಗಿಸಲಾಯಿತು; ಹ್ಯಾಗಂದರೆ, ಶುದ್ಧೀಕರಣಾಗ್ನೀ ಬೋಧನೆಗೆ ಕೂಡಿಸಲಾದ್ದೇನಂದರೆ—ಪಪ್ಪನು ಮೋಕ್ಷ ವಾಚನ ನುಡಿಯದ ಸಭ್ಯರೆಲ್ಲರೂ ಶುದ್ಧೀಕರಣಾಗ್ನಿಗೆ ಹೋಗ ಬೇಕು; ಆದರೆ ಸಭೋದ್ಯೋಗಿಗಳಿಗೆ ತಕ್ಕಷ್ಟು ಹಣ ಸಂದರೆ ಅಲ್ಲಿಗೆ ಹೋದಂಥವರಿಗೆ ಮುಕ್ತಿ ಸಿದ್ಧಿಸುವದೆಂಬದೇ.

ತಾವು ಆ ಪ್ರಕಾರ ಹಣದ ಮೂಲವಾಗಿ ಪಾಪವನ್ನು ಕ್ಷಮಿಸಿ, ಐಹಿಕ ಆಮುಷ್ಮಿಕ ಶಿಕ್ಷೆಯಿಂದ ವಿಮೋಚಿಸಿ, ದೇವರ ದಯೆ ದೊರಕಿಸ ಬಹುದೆಂಬದಕ್ಕೆ ಮತೋದ್ಯೋಗಿಗಳು, ತಮ್ಮ ವಶದಲ್ಲಿ ಒಂದು ಸತ್ಕ್ರಿಯಾನಿಕ್ಷೇಪವುಂಟೆಂದು[1], ಕಲ್ಪಿಸಿ, ವ್ಯವಸ್ಥೆ ಮಾಡಿದ್ದೇನಂದರೆ—ಸಂತರು[2] ಸ್ವಂತ ರಕ್ಷಣಕ್ಕೆ ಬೇಕಾಗುವವುಗಳಿಗಿಂತ ಹೆಚ್ಚು ಸತ್ಕ್ರಿಯೆಗಳನ್ನು ನಡಿಸಿದ್ದಾರೆ, ಆದ್ದರಿಂದ ಸತ್ಕ್ರಿಯೆಗಳದೊಂದು ಅತಿಶಯವು ಹುಟ್ಟಿ ಅದೆ; ಕ್ರಿಸ್ತನ ಪ್ರತಿನಿಧಿಗಳಾದ ಪಪ್ಪರು ಆ ನಿಕ್ಷೇಪದಲ್ಲಿ ತಕ್ಕಷ್ಟು ತೆಗೆದು, ಸತ್ಕ್ರಿಯೆ ಕಡಿಮೆಯಾದವನೊಬ್ಬನಿಗೆ ಕೊಟ್ಟು ಬಿಡಲಿಕ್ಕೆ ಶಕ್ತರಾಗಿದ್ದಾರೆ; ಆ ಸತ್ಕ್ರಿಯಾನಿಕ್ಷೇಪಪಾಲಕರು ಪಪ್ಪರೇ ಮತ್ತು ಇವರು ಅಧಿಕಾರವಿತ್ತವರೇ!—

ಪರಿಶುದ್ಧ ರಾತ್ರಿಭೋಜನದ ವಿಷಯದಲ್ಲಿ, ಆ ವಸ್ತುಪರಿಣಾಮವು ಕ್ರೈಸ್ತ ಧರ್ಮಾರ್ಥವೆಂದು, ಕ್ರಿ. ಶ. 1215ನೇ ವರುಷಕ್ಕೆ ಪಪ್ಪಕರದೊಂದು ಸಭಾಸಂಘದಲ್ಲಿ ನಿರ್ಣಯವಾಯಿತು. ಆ ಮೇಲೆ ಮಿಸ್ಸಯಾಗವೆಂಬದು ಬಹು ನೆಲೆ ಗೊಂಡಿತು. ಹ್ಯಾಗಂದರೆ, ಮಿಸ್ಸವೆಂಬ ಹೆಸರು[3] ಕಾಲಕ್ರಮೇಣ ಪರಿಶುದ್ಧರಾತ್ರಿಭೋಜನಾಚಾರಕ್ಕೆ ಮಾತ್ರ ಉಳಿಯಿತು; ಇದಕ್ಕೆ ಜೀವಯಾಗದ ಅಭಿಪ್ರಾಯವು ಬಂದನಂತರ—ಒಂದೊಂದು ಮಿಸ್ಸದಲ್ಲಿ ಮತೋದ್ಯೋಗಿಯ ಪುಣ್ಯಾಹವಾಚನದಿಂದ ರೊಟ್ಟಿಯೂ ದ್ರಾಕ್ಷಾರಸವೂ ಕ್ರಿಸ್ತನ ದೇಹವೂ ರಕ್ತವೂ ಆಗುತ್ತವೆ; ಆ ಪ್ರಕಾರ ಕ್ರಿಸ್ತನು ಒಂದೊಂದು ಮಿಸ್ಸದಲ್ಲಿ ತಿರಿಗಿ ರಕ್ತಮಾಂಸಲನಾಗಿ ಜನಿಸಿ, ಮರಣ ಪಡುತ್ತಾನೆಂದು, ಮಹಾ ದುರ್ಭಾವವಾಗುವಂಥ[4] ಮಿಸ್ಸಯಾಗವು ತೊಡಗಿತ್ತು. ಹೀಗಿರಲಿಕ್ಕೆ, ಪ್ರೀಸ್ತರು ಮರಿಯಳೆಂಬ ಕನ್ಯೆಗಿಂತ ಹೆಚ್ಚಿನವರು; ಯಾಕಂದರೆ ಪ್ರೀಸ್ತರು ಕ್ರಿಸ್ತನನ್ನು ದಿನಾಲು ಹುಟ್ಟಿಸುತ್ತಿರುವಾಗ ಮರಿಯಳು ಅವನನ್ನು ಒಮ್ಮೆ ಮಾತ್ರವೇ ಹೆತ್ತಳೆಂಬ ವಾದವು ಕೂಡ ಪ್ರಸಿದ್ಧಿಯಾಯಿತು. ಬಳಿಕ

1) ಕೃಪಾನಿಕ್ಷೇಪವೆಂತಲೂ ಹೇಳುತ್ತಾರೆ. 2) 1 ಯೋಹಾ. 1, 7 ಸರಿ ನೋಡು. 3) 287ನೇ ಪಾನು. 4) ಎಬ್ರೀ. 9, 26—28; 10, 10—14. 18. 26 ಸರಿ ನೋಡು.

ಮಿಸ್ಸಯಾಗದಲ್ಲಿ ಹೊಸ್ತಿಯವು ಅಂದರೆ ಶಸನ ಮಾಡ ತಕ್ಕದ್ದು ಎಂತ ಹೆಸರು ಬಿದ್ದ ಪುಣ್ಯಾಹವಾಚನದ ರೊಟ್ಟಿಗೆ ಅಥವಾ ರೊಟ್ಟೀ ಬಿಲ್ಲೆಗಳಿಗೆ ಪೂಜೆ ಮಾಡುವದು ರೂಢಿಯಾಯಿತು; ಪ್ರೀಸ್ತರು ಅದನ್ನು ಮೊನ್‌ಸ್ತ್ರಂತ್ಸೆಂಬದೊಂದು ಚಲೋಭರಣಿಯೊಳಗಿಟ್ಟು, ಅದನ್ನೆತ್ತಿ ಪ್ರಜೆಗೆ ತೋರಿಸುವಲ್ಲಿ ಪ್ರಜೆಯು ಅದಕ್ಕೆ ಪೂಜಿಸುವದು. ಅಂಥಾ ರೊಟ್ಟಿಯು ಶಾಂತ್ಯುದಕದಂತೆ ರೋಗಗಳನ್ನು ಪರಿಹರಿಸಲಿಕ್ಕೂ ಕ್ಷಾಮಡಾಂಬರಗಳನ್ನು ನಿವಾರಿಸಲಿಕ್ಕೂ ದೆವ್ವಗಳನ್ನು ಹೊರಡಿಸಲಿಕ್ಕೂ ಮುಂತಾದ ಅದ್ಭುತಗಳಿಗೆ ಯೋಗ್ಯವೆಂದು, ಹೇಳುತ್ತಿರುವರು. ಕ್ರಿಸ್ತರಕ್ತಪರಿಣಾಮ ಪಟ್ಟಂಥ ದ್ರಾಕ್ಷೇ ರಸದ ಪಾತ್ರದಲ್ಲಿ ಸಭ್ಯರಿಗೆ ಕುಡಿಯಲೀಸಿದರೆ ಆ ರಕ್ತದಲ್ಲಿ ಒಂದು ಹನಿ ಚಲ್ಲಿ ಹೋದೀತಲ್ಲ? ಅವರಿಗೆ ರೊಟ್ಟಿಯನ್ನು ಮಾತ್ರ[1] ಕೊಟ್ಟರೆ ಮಾಂಸವಾದ ಇದರಲ್ಲಿ ರಕ್ತ ಸಹ ಇದೆಯಲ್ಲ? ಎಂಬ ಆಲೋಚನೆಯಿಂದ ಮಿಸ್ಸದಲ್ಲಿ ಸಭ್ಯರಿಗೆ ಪಾತ್ರದೊಳು ಕುಡಿಯ ಗೊಡದ ದುರ್ಮಾರ್ಗ ಬಿತ್ತು; ಇದಕ್ಕೆ ಪಾತ್ರಾಪಹರಣವೆಂಬ ಹೆಸರು. 1ನೇ ಲೆಯೋನನೆಂಬ ಆ ಪ್ರಥಮ ಪಪ್ಪನಾದರೂ[2] ತನ್ನ ಕಾಲದಲ್ಲಿ ಪಾತ್ರಾಪಹರಣ ಚಿಂತಿಸುವವರಿಗೆ ಅಗದೀ ಒಡಂಬಡದೆ, ಪಾತ್ರಾಪಹರಣವು ಮಣಿಕೇಯತ್ವದ್ದೇ[3]! ಎಂದು, ತೀರಿಸಿದ್ದನು[4]. ಪ್ರಜೆಯು ಈ ಅಪಹರಣಕ್ಕೆ ಶಿಟ್ಟು ಪಡುವ ಸಮಯ ಪ್ರೀಸ್ತರು ವಂಚಿಸಿ, ತಾವು ಕುಡಿದ ದ್ರಾಕ್ಷಾರಸದ ಪಾತ್ರದಲ್ಲಿ ನೀರು ಹಾಕಿ, ಕದಲಿಸಿ, ಹೀಗೆ ಆ ಪ್ರಜೆಗೆ ಧೌತೋದಕಪಾತ್ರವೆಂಬದನ್ನೇ ಕೊಡುವರು. ಇಂತು ಅವರು, ಸಭ್ಯರಿಗೆ ಬದಲಾಗಿ ಆ ರಕ್ತ ಕುಡಿಯುವದಕ್ಕೆ ತಾವು ಅರ್ಹರೆಂತ, ಹೇಳಿ, ಇದರಿಂದಲೂ ತಮ್ಮ ದೊಡ್ಡಸ್ತಿಕೆ ಬೆಳಸಿ ಕೊಳ್ಳಲಿಕ್ಕೆ ಯೋಚಿಸಿದರು. ಅದಲ್ಲದೆ ಪರಿಶುದ್ಧರಾತ್ರಿಭೋಜನಾಸ್ವಾದಕ್ಕೆ ಬದಲಾಗಿ ಕೇವಲ ಮಿಸ್ಸಯಾಗವು ನಡೆಯುವದು ಪದ್ಧತಿ ಬಿತ್ತು. ಕ್ರಿ. ಶ. 1264ನೇ ವರುಷದಲ್ಲಿ 4ನೇ ಉರ್ಬಾನನೆಂಬ ಪಪ್ಪನು ಮಿಸ್ಸದಲ್ಲಿ ಪುನಃ ಪುನಃ ಯಾಗವಾಗುತ್ತಿರುವ ಕ್ರಿಸ್ತನ ದೇಹಕ್ಕೋಸ್ಕರ ಕೊರ್ಪೊರಿಸ್ ಕ್ರಿಸ್ತಿ (ಅಂದರೆ ಕ್ರಿಸ್ತನ ದೇಹದ) ಹಬ್ಬವನ್ನು ತನ್ನ ಪಕ್ಷಕರೆಲ್ಲರಿಗೆ ನೇಮಿಸಿದನು; ಇದರಿಂದ ಬೇರೆ ಎಲ್ಲಾ ಹಬ್ಬಗಳ ಕಲೆಯು ಕುಂದಿ ಹೋಯಿತು.—ಸಭ್ಯರಲ್ಲಿ ಯಾರೂ ಬಾರದಿದ್ದರೂ ಆ ಮಿಸ್ಸಯಾಗವು ಪ್ರೀಸ್ತರಿಂದ ಆಗುತ್ತಿರುವದು; ಹ್ಯಾಗಂದರೆ, ಪ್ರೀಸ್ತರು ಮಾಟಗಾರರಂತೆ ಅದರ ಮೂಲಕ ಸಹ ಸಭ್ಯರ ಭಕ್ತಿಕಾರ್ಯಗಳನ್ನೆಲ್ಲಾ ಸರಿ ಗೊಳ್ಳಿಸಿ ಅವರಿಗೂ ದೇವರಿಗೂ ಪ್ರೀತಿ ಹುಟ್ಟಿಸ ಬಹುದೆಂಬ ಮರುಳು ಭಾವವೂ ಉದ್ಭವಿಸಿತ್ತು. ಅದಲ್ಲದೆ, ಮಿಸ್ಸಯಾಗವು ದೇವರನ್ನೊಲಿಸುವದೊಂದು ಪುಣ್ಯ ಕಾರ್ಯವೆಂದು, ಭಾ

1) ಮತ್ತಾ. 26, 26 ಆದಿ; ಮರ್ಕ. 14, 22 ಆದಿ; ಲೂಕ. 22, 14 ಆದಿ; 1 ಕೊರಿ. 11, 23—29; 10, 16 ಆದಿ ಎಂಬಲ್ಲಿ ಕ್ರಿಸ್ತನ ಆಜ್ಞೆ ಅದೆ. 2) 280ನೇ ಪಾನು. 3) 234ನೇ ಪಾನು. 4) Sermo 41.

ವಿಸುವದು ಸಾಧಾರಣಕ್ಕೆ ಬಿತ್ತು; ಹೀಗಿರುವದರಿಂದ ಯಾರಾದರೂ ರೋಗಿಗಳಾಗಿರುವ ಸಮಯದಲ್ಲಿ ಆಗಲಿ ಒಂದು ಪ್ರಯಾಣದಲ್ಲಿರುವ ಸಮಯದಲ್ಲಿ ಆಗಲಿ ಯಾವದೊಂದು ದೊಡ್ಡ ಕೆಲಸ ಮಾಡುವ ಸಮಯದಲ್ಲಿ ಆಗಲಿ, ಶುಭವಾಗಲೆಂದು, ಪ್ರೀಸ್ತನಿಗೆ ಹಣ ಕೊಟ್ಟು, ಒಂದೆರಡು ಮಿಸ್ಸಗಳನ್ನು ಮಾಡಿಸುತ್ತಿದ್ದರು. ಪುನಃ, ಸಭ್ಯರು ಶುದ್ಧೀಕರಣಾಗ್ನಿಬಾಧೆಯೊಳಗಿದ್ದಾರೆಂತ ನೆನಸುವಂಥ ತಮ್ಮ ನೆಂಟರಿಷ್ಟರಿಗೋಸ್ಕರ ಪ್ರಾಣಿಮಿಸ್ಸಗಳನ್ನು[1] ಗೈಯಿಸುವದಕ್ಕಾಗಿ ಹೇರಳ ಧನ ಬಳಿಸುತ್ತಿದ್ದರು. ಮತ್ತೆ ಪ್ರೀಸ್ತರು, ಅಂಥಾದ್ದು ತಮಗೆ ಬಹು ಲಾಭಕರವಾದ ಜಂಬರವೇ ಎಂದು, ಮಿಸ್ಸ ಕುರಿತ ಎಲ್ಲಾ ಅಪವಿಶ್ವಾಸವನ್ನು ಚಂದಾಗಿ ಸಾಕುತ್ತಿದ್ದರು. ಇಂತಿರಲು, ಅನೇಕ ಜನ ಐಶ್ವರ್ಯವಂತರು—ರಕ್ಷಣೆ ಹೊಂದುವದು ಏನೂ ಕಷ್ಟವಲ್ಲ, ಪ್ರಾಣಿಮಿಸ್ಸಗಳಿಗಾಗಿ ನಮಗೆ ಹಣ ಕಡಿಮೆಯೇ? ಎಂತ, ಹೇಳಿ, ಕಂಡ ಹಾಗೆ ದುರ್ಮಾರ್ಗದಲ್ಲಿ ನಡೆದು, ಸಾಯುವಾಗ ತಮ್ಮ ರಕ್ಷಣಾರ್ಥಕ್ಕೋಸ್ಕರ ಮತೋದ್ಯೋಗಿಸಭೆಗೆ ಒಂದು ಮಹಾ ದಾನವೀಯುತ್ತಿರುವರು. ಸುಮಾರು ಕ್ರಿ. ಶ. 1000ನೇ ಅಬ್ದ ಸರ್ವಪ್ರಾಣಿಮಿಸ್ಸಯಾಗವೆಂಬ ಹಬ್ಬವು ಹುಟ್ಟಿತು.

ಸಂತರ ಮತ್ತು ಸಂತಾವಶಿಷ್ಟಗಳ ಪೂಜೆಯು ಮೇರೆ ಇಲ್ಲದೆ ಬೆಳೆಯಿತು. ಹೆಚ್ಚಾಗಿ ಮರಿಯಳ ಮಾನವೇರಿತು. ಕ್ರಿಸ್ತನಾಥನ ಮಾನಾಪಹಾರವಾಗುವಂತೆ, ಪರಲೋಕದಲ್ಲೂ ಭೂಲೋಕದಲ್ಲೂ ಸರ್ವಾಧಿಕಾರವು ನಿನಗೆ ಕೊಟ್ಟದೆಂತ[2], ಅವಳನ್ನು ಸ್ತುತಿಸುತ್ತಿದ್ದರಲ್ಲದೆ ಅವಳಿಗೆಲ್ಲಿಯೂ ಜಪಾಲಯ ಗುಡಿಗಳನ್ನೇರಿಸಲಾಯಿತು; ಅವಳು ಪಾಪವಿಲ್ಲದ ರೀತಿಯಿಂದ ಗರ್ಭದಲ್ಲಿ ಹುಟ್ಟಿದವಳೆಂದು, ವಿಶೇಷವಾಗಿ ಫ್ರಂಚ್ಸಿಸ್ಕಾನರೆಂಬ ಮಠಿಕ ಕುಲದವರು ಒದರುತ್ತಿದ್ದರು. ಎಲ್ಲಾ ಸಂತರನ್ನೂ ಸಂತಾವಶಿಷ್ಟಗಳನ್ನೂ ಇನ್ನು ಎಣಿಸಲಾರದೆ ಹೋಯಿತು. ಕ್ರೂಜೆಯುದ್ಧಗಳಿಗೀಚೆ ತೋರಲಾರಂಭಿಸಿದ ಸಂತಾವಶಿಷ್ಟಗಳಲ್ಲಿ ಕೆಲವು ಯಾವವಂದರೆ—ದೇವರು ಆದಿಮನುಷ್ಯನನ್ನು ರೂಪಿಸಿದ ಹೊಲದ ಕಲ್ಲುಗಳು, ಐಗುಪ್ತ ದೇಶವನ್ನು ಒಮ್ಮೆ ಕವಿದಿದ್ದ ಅಂಧಕಾರವು, ಮೋಶೆಯ ಮುಂದೆ ಸುಟ್ಟಂತೆ ಕಂಡ ಪೊದೆಯ 25 ತುಂಡುಗಳು, ಯೆಸ್ಸೆಯೆಂಬ ಬೇರಿನದೊಂದು ತುಂಡು[3], ಕ್ರಿಸ್ತಶಿಶುವಿನ ಹತ್ತರ ಮೂಡಣದಿಂದ ಬಂದ ಮೂವರು ಜ್ಞಾನಿಗಳ ಎಲುಬುಗಳು,.ಕ್ರಿಸ್ತಶಿಶು ಮಲಗಿದ ಹುಲ್ಲಿನ ಕಡ್ಡಿಗಳು, ಕ್ರಿಸ್ತಶಿಶುವಿನ ಪರಿಚ್ಛೇದನ ಮಾಡುವಲ್ಲಿ ತೆಗೆದ ಮುಂದೊಗಲು, ಮರಿಯಳು ಕ್ರಿಸ್ತನನ್ನು ಹೆತ್ತ ವಸ್ತ್ರದ ತುಂಡುಗಳು, ಮರಿಯಳ ಕೂದಲು, ಕ್ರಿಸ್ತನದೊಂದು ಹಲ್ಲು, ಕ್ರಿ

---

1) 290, 349ನೇ ಪಾನುಗಳು. 2) ಮತ್ತಾ. 28, 18; ಪ್ರೀಸ್ತರ ಕುರಿತು 353ನೇ ಪಾನು ಸರಿನೋಡು. 3) ಯೆಶಾಯ. 11, 1; ಪ್ರಕಟ. 5, 5.

ಸ್ತನು ನೀರು ಮಾರ್ಪಡಿಸಿ ಮಾಡಿದ ದ್ರಾಕ್ಷೇ ರಸದ ಉಚ್ಛಿಷ್ಟವು, ಸ್ನಾನಿಕನಾದ ಯೋಹಾನನು ಕ್ರಿಸ್ತನ ಕಡೆಗೆ ಹಿಡಿದು ತೋರಿಸಿದ ಬೆರಳು, ಅವನ ತಲೆಬುರುಡೆಯು, ಥೋಮನು ಕ್ರಿಸ್ತನ ಪಕ್ಕ ಮುಟ್ಟಿದ ಬೆರಳು, ಕ್ರಿಸ್ತನ ಅಂಗಿಯು, ಅವನ ಕ್ರೂಜೆಯ ಮರತುಂಡುಗಳು, ಅದರ ಮೊಳೆಗಳು ಇತ್ಯಾದಿ. ಈ ಮುಂತಾದ ಸಾಮಾನುಗಳನ್ನೆಲ್ಲಾ ಗೆರ್ಮಾನಿಯದ ಮೈಂತ್ಸು ಪಟ್ಣದ[1] ಪ್ರಧಾನಾಧ್ಯಕ್ಷನಾದ ಅಲ್ಬ್ರೆಖ್ತನೆಂಬವನೊಬ್ಬನೇ ಕ್ರಿ. ಶ. 1517ನೇ ವರುಷಕ್ಕೆ ತನ್ನಲ್ಲಿಟ್ಟು ಕೊಂಡಿದ್ದನು; ಅವುಗಳೆಲ್ಲವೂ ಶೇರಿ ಎಣಿಕೆಗೆ 8,133 ಆಗುವದಲ್ಲದೆ ಇನ್ನು 42 ಪೂರ್ಣ ಶವಗಳು ಮಿಗುತ್ತವೆ; ಆ ಸಮಸ್ತ ಅವಶಿಷ್ಟಗಳ ಬಲದಿಂದ 930 ಸಾವಿರಾವರ್ತಿ ಸಾವಿರ 200 ಆವರ್ತಿ ಸಾವಿರ 45 ಆವರ್ತಿ ಸಾವಿರ 120 ವರುಷಕ್ಕೂ 220 ದಿನಕ್ಕೂ ಪಾಪಕ್ಷಮೆ ಶಿಕ್ಕುವದಂತೆ. ಅಷ್ಟೆಲ್ಲಾ ಸಾಮಾನುಗಳು ಮೋಸದವುಗಳು, ಜಡ ಬುದ್ಧಿಯಿಂದಾಗಲಿ ಕುಯುಕ್ತಿಯಿಂದಾಗಲಿ ಸಂಗ್ರಹವಾದವುಗಳೆಂದು, ವಿವೇಕಿಗಳಾದ ಕ್ರೈಸ್ತರೆಲ್ಲರಿಗೆ ಗೊತ್ತು ಇದೆ. ಅಂಥಾ ಸಂತಾವಶಿಷ್ಟಗಳ ವಿಷಯದಲ್ಲಿ ನಗೆಗೆ ಎಷ್ಟು ಆಸ್ಪದವಾಗುತ್ತದೆಂತ, ಇನ್ನು ಒಂದೆರಡು ದೃಷ್ಟಾಂತದಿಂದ ತೋರಿಸೋಣ—ಸ್ನಾನಿಕನಾದ ಯೋಹಾನನದೊಂದು ತಲೆಯನ್ನು ಕೊನ್ಸ್ತಂತೀನೊಪೊಲಿಯಲ್ಲಿ, ಮತ್ತೊಂದನ್ನು ಫ್ರಂಚು ದೇಶದ ಅಂಘೋರು ಪಟ್ಣದಲ್ಲಿ ತೋರಿಸುತ್ತಿದ್ದರು; ಕ್ರಿಸ್ತನ ಗೆಳೆಯನಾದ ಲಾಜರನ ಒಂದು ತಲೆಯನ್ನು ಅಲ್ಲಿಯ ಮರ್ಸೇಲ್ಲು ಪಟ್ಣದಲ್ಲಿ, ಇನ್ನೊಂದನ್ನು ಓತಬ್ ಪಟ್ಣದಲ್ಲಿ, ಮತ್ತೊಂದನ್ನು ಅವಲೊಬ್ ಪಟ್ಣದಲ್ಲಿ ಪೂಜಿಸುತ್ತಿದ್ದರು; ಲಾಜರನ ಸಹೋದರಿಯಾದ ಮರಿಯಳ ಶವವು ಎರಡು ಪಟ್ಣಗಳಲ್ಲಿತ್ತು; ಸೆಬಸ್ತಿಯಾನನೆಂಬ ಒಬ್ಬ ಸಂತನ ನಾಲ್ಕು ಪೂರ್ಣ ಶವಗಳನ್ನಲ್ಲದೆ ಇನ್ನೆರಡು ತಲೆಬುರುಡೆಗಳನ್ನು ಪ್ರತ್ಯೇಕವಾಗಿ ಕಾಣಿಸುತ್ತಿದ್ದರು; ಉರ್ಸುಲಳೆಂಬ ಒಬ್ಬ ಸಂತಳ ಒಂದು ಅಖಂಡ ಶವವಲ್ಲದೆ ಇನ್ನು ನಾಲ್ಕು ತಲೆಬುರುಡೆಗಳು ಪ್ರತ್ಯೇಕವಾಗಿ ಶಿಕ್ಕಿದ್ದವು; ಕ್ರಿಸ್ತನ ಅಂತ್ಯ ಪಸ್ಕಹಬ್ಬದ ಕುರಿಮರಿಯನ್ನು ಬಡಿಸಿದ್ದ ಥರಾತನ್ನು ಒಮ್ಮಿಗೆ ಮೂರು ಬೇರೆ ಬೇರೆ ಸ್ಥಳಗಳಲ್ಲಿ ದರ್ಶಿಸುತ್ತಿದ್ದರು; ಈಗಿನ ಕಾಲದಲ್ಲಿ ಪಪ್ಪಕರು ಕ್ರಿಸ್ತನ ಹೊಲಿಗೆ ಇಲ್ಲದ ಅಂಗಿಯನ್ನು ಒಮ್ಮಿಗೆ ಕೆಲವು ಅಂದರೆ 20 ದೇವಾಲಯಗಳಲ್ಲಿ ತೋರಿಸುತ್ತಿದ್ದಾರೆ; ಮತ್ತೆ ಅವರು ಈಗ ತೋರಿಸುತ್ತಿರುವ ಕ್ರಿಸ್ತನ ಕ್ರೂಜೆಯ ಶಿಗುರುಗಳನ್ನು ಒಟ್ಟುಗೂಡಿಸಿದರೆ ಅಂಥಾ ಅನೇಕಾನೇಕ ಕ್ರೂಜೆಗಳನ್ನು ಮಾಡ ಬಹುದು. ಅಂಥಾ ಸಂತಾವಶಿಷ್ಟಗಳನ್ನು ಅವರು ಸ್ವರ್ಣರತ್ನಾದಿಗಳಿಂದ ಲಂಕರಿಸಿ, ಮೆರವಣಿಗೆ ಮಾಡುವಲ್ಲಿ ಪ್ರಜೆಯು ಆ ಎಲುಬು ಮುಂತಾದ ನಿರ್ಜೀವ ವಸ್ತುಗಳಿಗೆ ಅಡ್ಡ ಬಿದ್ದು—ಪರಿಶುದ್ಧ ವಸ್ತ್ರಗಳೇ! ಮೊಳೆಗಳೇ! ನಮಗೋಸ್ಕರ ಪ್ರಾ

1) 283, 304, 314ನೇ ಪಾನುಗಳು.

ರ್ಥಸಿರಿ! ಇತ್ಯಾದಿ ಕೂಗಿ ಬೇಡುತ್ತಿರುವದು. 3ನೇ ಗ್ರೆಗೋರ ಪಪ್ಪನು[1] ಸರ್ವಸಂತರ ಹಬ್ಬವೆಂಬದನ್ನು ನಿರ್ಮಿಸಿಟ್ಟನು.

ಪಪ್ಪಕರು ತಮ್ಮ ಪಾಷಂಡಗಳನ್ನು, ಸತ್ಯವೆಂತ, ಸ್ಥಾಪಿಸುವದಕ್ಕೋಸ್ಕರ ತ್ರಾದಿತಿಯೋನುಗಳೆಂಬದನ್ನು ಕಲ್ಪಿಸಿ ಕೊಂಡರು; ತ್ರಾದಿತಿಯೋನುಗಳೆಂದರೆ ಮುಖೋಪದಿಷ್ಟವಾದ ಸಾಂಪ್ರದಾಯಿಕ ಮಾತುಗಳು[2]; ಅಪೊಸ್ತಲರೂ ಸಭಾಪಿತರೂ ಬಾಯಿಂದ ಇಂತಿಂತು ಹೇಳಿದರೆಂಬಂತೆ. ಅದಲ್ಲದೆ ಅದೇ ಸ್ಥಾಪನೆಯ ತುಸಕ ಅವರು, ಸಭಾಸಂಘಗಳ ನಿರ್ಣಯಗಳೆಲ್ಲಾ ದಿವ್ಯ ಸತ್ಯವೇ, ಸರಿ! ಎಂಥೇಳಿ, ಚರ್ಚಿಸುತ್ತಿದ್ದರು. ಈ ವಿಷಯದಲ್ಲಿ ಪಪ್ಪರು ಯಾವದೊಂದು ಅನೃತಕ್ಕೂ ಅಂಜಲಿಲ್ಲ. ಆದರೆ ಇಷ್ಟು ಪ್ರಯತ್ನದಿಂದಲೂ ಅವರು ದೇವವಾಕ್ಯದೆದುರಿಗೆ ತಮ್ಮ ಪಾಷಂಡಗಳನ್ನಡಗಿಸಲಾರದ ಕಾರಣ ಅವರು—ತಮ್ಮ ಸಭ್ಯರು ಹಳೆ ಮತ್ತು ಹೊಸ ಒಡಂಬಡಿಕೆಗಳಾದ ದೇವವಾಕ್ಯವನ್ನು, ಲತೀನ ಭಾಷಾಂತರವಾದ್ದನ್ನಾಗಲಿ ದೇಶೀಯ ಭಾಷಾಂತರವಾದ್ದನ್ನಾಗಲಿ, ಓದ ಬಾರದ್ದಲ್ಲದೆ ಅದರದೊಂದು ಪ್ರತಿಯನ್ನು ಇಟ್ಟು ಕೊಳ್ಳುವದಾದರೂ ಆಗದೆಂದು, ಆಜ್ಞೆ ಕೊಟ್ಟರು[3]. ದೇವವಾಕ್ಯಾಧ್ಯಯನನಿಷೇಧವುಳ್ಳ ಇಂಥಾ ಮೊದಲಿನ ಆಜ್ಞೆಯು[4] ಕ್ರಿ. ಶ. 1229ನೇ ವರುಷ 9ನೇ ಗ್ರೆಗೋರ ಪಪ್ಪನ[5] ಅಪ್ಪಣೆಯ ಮೇಲೆ ಫ್ರಂಚಿನ ತುಲೂಸು ಎಂಬ ಪಟ್ಟದಲ್ಲಿ[5] ಕೂಡಿದ ಪಪ್ಪಕ ಸಭಾಸಂಘದವರಿಂದ ಹೊರಟಿತು. ತರುವಾಯ ಕ್ರಿ. ಶ. 1234ನೇ ಅಬ್ದ ಸ್ಪಾನಿಯ ದೇಶದ ತರ್‍ರಕೋನ ಪಟ್ಣದಲ್ಲಿ ಅವನೇ ಪಪ್ಪನ ಕೆಳಗೆ ನೆರೆದ ಸಭಾಸಂಘದವರು, ಸಭೋದ್ಯೋಗಿಗಳಾದರೂ ದೇಶೀಯ ಭಾಷಾಂತರವಾಗಿರುವಂಥ ಪರಿಶುದ್ಧ ಬರಹವನ್ನು ಪಠಿಸ ಬಾರದೆಂತ, ವ್ಯವಸ್ಥೆ ಗೈದರು.

ಕ್ರಿಸ್ತನಾಥನು ತಾನು ನೇಮಿಸಿಟ್ಟ ರಾತ್ರಿಭೋಜನ ಮತ್ತು ಸ್ನಾನವೆಂಬ ಎರಡು ಪರಿಶುದ್ಧ ಸಂಸ್ಕಾರಗಳಿಗೆ ಪಪ್ಪಕರು ತಮ್ಮ ಕಲ್ಪನೆಯ ಮೇಲೆ ಬೇರೆ ಐದನ್ನು ಪೂರಾ ಈಡು ಮಾಡಿ, ಕೂಡಿಸಿದರು; ಯಾವವಂದರೆ—1) ಮುದ್ರಾಂಕನವು[6]. 2) (ಸಭೋದ್ಯೋಗಿಗಳೆಲ್ಲರಿಗೆ ಖಂಡಿತವಾಗಿ ನಿಷೇಧಿಸಿರುವ) ವಿವಾಹವು. 3) ಪ್ರೀಸ್ತಶ್ರವನಿವೇದನವು. 4) ಅಂತ್ಯ ತೈಲಾಭಿಷೇಕವು ಅಂದರೆ ಮರಣಕಾಲದಲ್ಲಿ ಸ್ವರ್ಗಪ್ರಾಪ್ತಿಗಾಗಿ ಎಣ್ಣೆಯಿಂದ ಅಭಿಷೇಕಿಸುವದು; ಇದು ಯಕೋಬ ಅಪೊಸ್ತಲನ ಸ್ಪಷ್ಟಾಜ್ಞೆಗೆ ವಿರೋಧವಾದದ್ದು[7]. 5) ಪ್ರೀಸ್ತಪ್ರತಿಷ್ಠೆಯು[8].

---

1) 314ನೇ ಪಾನು. 2) 281, 340ನೇ ಪಾನು. 3) ಯೋಹಾ. 5, 39; ಅಪೊ. ಕ್ರಿ. 17, 11; ರೋವಿಶಾ. 15, 4; 2 ತಿಮೊ. 3, 15—17; 2 ಪೇತ್ರ. 1, 19—21; ಪ್ರಕಟ. 19, 13 ಸರಿ ನೋಡು. 4) ಮುಂಚೆ ಇಂಥಾದ್ದು ಇಲ್ಲದಿದ್ದದು 82, 85, 86, 172, 173, 202, 285, 302, 307, 309, 318, 323ನೇ ಪಾನುಗಳಲ್ಲಿ ಕಾಣಿಸುತ್ತದೆ. 5) 87, 207ನೇ ಪಾನು. 6) 315ನೇ ಪಾನು. 7) ಯಕೋಬ. 5, 14. 15; ಮರ್ಕ. 6, 13. 8) 286ನೇ ಪಾನು.

ಗ್ರೀಕ ಪಕ್ಷಕರು ಪಪ್ಪಕ ಪಕ್ಷಕರಿಗೆ ಎಲ್ಲಾ ವಿಷಯದಲ್ಲಿ ಸಮ್ಮತಿಸಲಿಲ್ಲ; ಅದರ ವಿಷಯ ಹಿಂದೆ ಸ್ವಲ್ಪ ಹೇಳಿ ಅದೆ[1]; ಇನ್ನು ಅದಕ್ಕೆ ಕೂಡಿಸ ತಕ್ಕದ್ದೇನಂದರೆ—ಗ್ರೀಕರ ಸಮಸ್ತ ಮತದಲ್ಲಿ ಪಾತ್ರಾಪಹರಣವೂ ದೇವವಾಗಧ್ಯಯನನಿಷೇಧವೂ ಇಲ್ಲ; ಅದು ಹೊರ್ತಾಗಿ ರುಸ್ಸಿಯದ್ದಲ್ಲದೆ[2] ಉಳಿದ ಗ್ರೀಕ ಸಭೆಗಳಲ್ಲಿ ಕ್ಷಮಾವಿಕ್ರಯವೂ ಪ್ರಾಣಿಮಿಸ್ಸವೂ ಶುದ್ಧೀಕರಣಾಗ್ನಿಯೂ ಶೇರಲಿಲ್ಲ; ಆ ಅಂತ್ಯ ತೈಲಾಭಿಷೇಕಕ್ಕೆ ಬದಲಾಗಿ ಗ್ರೇಕರಿಗೆ ಆರೋಗ್ಯಾಭಿಷೇಕವೆಂಬದಿರುವದು. ಆದರೆ, ಕೊನ್ಸ್ತಂತೀನೊಪೊಲಿಯ ಪತ್ರಿಯರ್ಖನ ಕೆಳಗಿರುವ ಗ್ರೀಕ ಮತಪಕ್ಷಕರು ಹೆಚ್ಚಾಗಿ ಅರಮನೆಯವರ ದುರ್ವ್ಯಸನಗಳಿಂದ[3] ಬಹುಶಃ ಅಂತರ್ಯದಲ್ಲಿ ಸಹ ಕೊಳೆತ ಕಾರಣವೂ ಪಪ್ಪಕ ಮತಪಕ್ಷಕರಲ್ಲಿ ಗೆರ್ಮಾನರು ಮೊದಲಾದ ತ್ಯುತೊನರು ಇರುವಂತೆ[4] ಕೇಡನ್ನು ತಡಿಸುವಂಥವರು ಅವರಲ್ಲಿರದ ಕಾರಣವೂ ದೇವರು ತನ್ನ ನಾಮದ ಮಹಿಮೆಯನ್ನುಳಿಸುವದಕ್ಕೋಸ್ಕರ ಅರಬಿಯರಿಂದ ಅವರನ್ನು ಮೊದಲು ಬೆದರಿಸಿ, ತರುವಾಯ ಕ್ರಿ. ಶ. 1453ನೇ ವರುಷಕ್ಕಾದರೂ ಪ್ರಚಂಡ ಶಿಕ್ಷೆಯ ನಿಮಿತ್ತವಾಗಿ ಗ್ರೀಕ ರಾಜ್ಯದವರನ್ನು ತುರ್ಕರ ವಶಕ್ಕೊಪ್ಪಿಸಿದನೆಂದು, ಹಿಂದೆ ಪಠಿಸಿದ್ಧೀರಿ[5].

ಪಪ್ಪಕರೊಳಗೆ ದೇವಾರಾಧನೆಯಾಗುವಲ್ಲಿ ಅದು ಲತೀನ ಭಾಷೆಯಿಂದಲೇ ಆಗುತ್ತಿರುವದು[6]; ಅದು ಅಡಿಗಡಿಗೆ ಸಭ್ಯರಿಗೆ ಅಗದೀ ಗೊತ್ತಿಲ್ಲದಂಥ ಭಾಷೆಯಾಗಿ ಹೋಗಿತ್ತು[7]. ಮತ್ತು, ಪ್ರಸಂಗವೇನಾಯಿತೆಂತ, ವಿಚಾರಿಸಿದರೆ ಒಂದೇ ಮಾತಿನಿಂದ ತಿಳಿದೀತು; ಯಾವದಂದರೆ, ಮತೋದ್ಯೋಗಿಗಳಲ್ಲಿ ಹೆಚ್ಚು ಮಂದಿಯು ಆ ಸಣ್ಣ ಅಪೊಸ್ತೊಲಿಕ ವಿಶ್ವಾಸಪ್ರಮಾಣವನ್ನಾದರೂ[8] ಅರಿಯದವರಾಗಿದ್ದರು; ಅಂಥವರಿಗೆ ದೇವವಾಕ್ಯದ ತಿಳುವಿಕೆಯು ಬಹು ದೂರದಲ್ಲಿತ್ತು. ಆಗಿಂದಾಗ ಪ್ರಜಾಭಾಷೆಯಲ್ಲಿ ಆಗುವ ಪ್ರಸಂಗಗಳು ಲತೀನ ಸಭಾಪಿತರವುಗಳ ಭಾಷಾಂತರಗಳು[9]; ಅದಲ್ಲದೆ ಸಂತರ ಮತ್ತು ಸಂತಾವಶಿಷ್ಟಗಳ ಮಿಥ್ಯಾಕಥೆಗಳನ್ನು, ಪರಿಹಾಸ್ಯದವುಗಳನ್ನು ಸಹ, ಹೇಳುವ ಪದ್ಧತಿ ಇರುವದು. ಇದು ಮುಖ್ಯವಾಗಿ ಪಸ್ಕಹಬ್ಬದಲ್ಲಿ ನಡೆಯುವದು; ಆಗ ಮತೋದ್ಯೋಗಿಗಳು—ಪಸ್ಕಹಬ್ಬಕ್ಕೆ ಮುಂಚಿನ ಉಪವಾಸಕಾಲದಲ್ಲಿ ಸಭ್ಯರು ಪ್ರಾಯಶ್ಚಿತ್ತದಂಡನ ಹೊಂದಿ, ಕರ್ತನ ಶ್ರಮವಾರದಲ್ಲಿ ಅವನ ಸಂಗಡ ಶ್ರಮ ಪಟ್ಟವರಾಗಿದ್ಧಾರಲ್ಲ? ಆದ್ದರಿಂದ ಅವರನ್ನೀಗ ನಗಿಸಿ, ಆದರಿಸ ಬೇಕೆಂದು, ಕುಚೋದ್ಯದಿಂದ ಹೇಳುವಲ್ಲಿ ಅವರೊಳಗೊ

1) 340, 341ನೇ ಪಾನು. 2) 343ನೇ ಪಾನು. 3) 285ನೇ, 341ನೇ ಪಾನುಗಳು. 4) 299, 349ನೇ ಪಾನು. 5) 342ನೇ, 343ನೇ ಪಾನು. 6) 318ನೇ, 323ನೇ, 351ನೇ ಪಾನುಗಳನ್ನು ಸರಿ ನೋಡು. 7) 1 ಕೊರಿ. 14, 9 ಅದಿ. 8) 150, 351ನೇ ಪಾನು. 9) 318ನೇ ಪಾನು ಸರಿ ನೋಡು.

ಬ್ಬನು ಮೃಗ ಪಶು ಪಕ್ಷಿಗಳಂತೆ ಸಪ್ಪಳ ಮಾಡುವನು; ಮತ್ತೊಬ್ಬನು—ಪೇತ್ರನು ಒಮ್ಮೆ ಒಬ್ಬ ಛತ್ರಗಾರನಿಗೆ ಊಟದ ಕ್ರಯ ಕೊಡದೆ ಓಡಿ ಹೋದನೆಂದು, ಮೊದಲಾದಂಥ ಕಟ್ಟುಕಥೆಯೊದರುವನು; ಇನ್ನೊಬ್ಬನು—ಕ್ರಿಸ್ತ ಕರ್ತನು ನರಕದ ದ್ವಾರಗಳನ್ನು ವೇಗದಿಂದ ದೂಡಿ ತೆಗೆದು ಹಾಕುವಾಗ ಎರಡು ಪಿಶಾಚಿಗಳ ಉದ್ದಾನ ಮೂಗುಗಳು ಜಜ್ಜಿ ಹೋದವೆಂದು, ನಾಚಿಕೆಗೆಟ್ಟು, ಬೊಗಳುವನು; ಇತ್ಯಾದಿ. ಇದೆಂಥಾ ಹುಚ್ಚಾಟ!

ಮತೋದ್ಯೋಗಿಗಳಲ್ಲಿ ಅನೇಕಾನೇಕರು ನೀತಿಚರ್ಯೆ ಗೆಟ್ಟವರಾಗಿರುತ್ತಿದ್ದರೆಂತ, ಹಿಂದೆ ಸೂಚಿಸಿದೆ[1]. ಗ್ರೇಕ ಪಕ್ಷಸಭೆಯಲ್ಲಿ ಅರಮನೆಯವರಿಂದ ಹ್ಯಾಗೋ, ಹಾಗೆಯೇ ರೋಮಕ ಪಕ್ಷಸಭೆಯಲ್ಲಿ ಹೆಚ್ಚಾಗಿ ಪಪ್ಪರಿಂದ, ಒಂದು ಮಲಿನ ಹೊಳೆಯಂತೆ, ದುರ್ಮಾರ್ಗತನವು ಹೊರಟು, ಎಲ್ಲಾ ದಿಕ್ಕಿಗೆ ಹರಿಯುತ್ತಲಿತ್ತು[2]. ಪರಸ್ಥಳದವರು ರೋಮಕ್ಕೆ ಬಂದು, ಪಪ್ಪರು ಪರಿಶುದ್ಧ ನಡತೆಯವರೆಂದು, ನೆನಸುವಲ್ಲಿ, ಆ ಪಪ್ಪರು ಲಜ್ಜೆ ಇಲ್ಲದೆ ಸಕಲ ತರದ ದುಷ್ಕ್ರಿಯೆಗಳನ್ನು ನಡಿಸುತ್ತಿದ್ಧಾರೆಂದು, ತಾವು ಕಂಡು, ಕೇಳುತ್ತಿದ್ದರು.

---

1) 310, 318, 326, 327, 350ನೇ ಪಾನುಗಳನ್ನು ಸರಿ ನೋಡು; ಅವರು ಪ್ರಮಾಣಗಳನ್ನು ಕಿತ್ತು ಇತರ ದಿವ್ಯ ಋಣಗಳನ್ನು ಹಾರಿಸಿ ಬಿಟ್ಟದ್ದನ್ನು ಕುರಿತು 283, 326, 330, 332, 333, 334, 335, 336, 352ನೇ ಪಾನುಗಳನ್ನು ಸರಿ ನೋಡು. 2) ಈ ಕಡೆಯಲ್ಲೂ ಬೇರೆ ಕಡೆಯಲ್ಲೂ ಪಪ್ಪರ ಜೀವಿತದ ಪಾಪಗಳನ್ನು ಸೂಚಿಸುವದು ಆಜ್ಞೆ ನಿರ್ಣಯಿಸುವ ಭಾವದಿಂದ ಆಗುವದೇ ಇಲ್ಲ; ಪುಸ್ತಕಗಳಲ್ಲಿ ಲಿಖಿತವಾದವುಗಳ ಮೇಲೆ ತಮ್ಮ ಕ್ರಿಯೆಗಳ ಪ್ರಕಾರವಾಗಿ ಮೃತರು ಕ್ರಿಸ್ತನಾಥನ ಮುಖದಿಂದ ನ್ಯಾಯನಿರ್ಣಯಿತರಾಗುವರಲ್ಲವೇ? (ಪ್ರಕಟ. 20, 12. 13; ರೋವಿಾ. 2, 16; ಅಪೊ. ಕ್ರಿ. 17, 31.)

ಹಾಗಾದರೆ ಅಂಥಾ ಸಂಗತಿಗಳನ್ನು ಸಹ ಸೂಚಿಸಿ ಹೇಳುವದಕ್ಕೆ ಹಿತ ಕಾರಣಗಳು ಯಾವವಂದರೆ—

1) ಅಂಥಾ ಸಂಗತಿಗಳು ಪಪ್ಪಕ ಸಭೆಯು ಆಗಾಗಿನ ಸ್ಥಿತಿಗತಿ ತೋರಿಸುವದಕ್ಕೆ ಅಗತ್ಯ; ಉದ್ಯೋಗಕ್ಕೆ ಬರುವ ಅಧ್ಯಕ್ಷರು ಪಿಶಾಚನ ನಿಂದೆಯಲ್ಲೂ ಉರ್ಲಲ್ಲೂ ಬೀಳದ ಹಾಗೆ ಒಳ್ಳೇ ಸಾಕ್ಷಿ ಹೊಂದಿದವರಾಗಿರ ಬೇಕೆಂಬ ಮಹಾ ಪ್ರಮಾಣವು (ಅಪೊ. ಕ್ರಿ. 6, 3; 1 ತೀಮೊ. 3, 7; ಎಫೆಸ. 5, 3) ನಡೆಯುದಷ್ಟು ಹೀನತೆಯಾದರೂ ಅಂದಂದು ಆ ಸಭೆಯಲ್ಲಿದ್ದದ್ದೂ ನಿಜ ಸಭಾಶಿಕ್ಷೆ ಎಂತೂ ಸಾಗದ್ದೂ ಅವುಗಳ ಮೇಲೆ ಗೋಚರಿಸುತ್ತದೆ.

2) ಅವಿವಾಹಿತ್ವಾಜ್ಞೆಗಳ ಸಹಜವಾದ ದುಷ್ಫಲಗಳು ಪಪ್ಪಕ ಸಭೆಯ ಪ್ರಧಾನೋದ್ಯೋಗಿಗಳಲ್ಲಿಯೂ ಹುಟ್ಟದಿರಲಿಲ್ಲವೆಂತ, ಅವು ಕಾಣಿಸುತ್ತವೆ.

3) ಯಾವತ್ತೂ ಮಾನಾಧಿಕಾರಾಶೆಯು ಸಕಲ ಕೇಡುಳ್ಳ ಕ್ರಿಯೆಗಳ ಮೂಲವಾಗುತ್ತಿರುವದೆಂಬದು ಅವುಗಳ ಮೇಲೆ ಪ್ರಮಾಣವಾಗುತ್ತದೆ.

4) ಯಥಾ ರಾಜಾ ತಥಾ ಪ್ರಜಾ ಎಂಬದಕ್ಕೆ ಅವು ಭೀಕರವಾದ್ದೊಂದು ಸಾಕ್ಷ್ಯವಾಗಿವೆ.

5) ಹೀಗಿರಲಾಗಿ, ಪಪ್ಪಕತ್ವದಲ್ಲಿರುವ ಮಹಾ ಅಯೋಗ್ಯತೆಯೂ ಕ್ರಿಸ್ತನಾಥನೊಬ್ಬನೇ ತನ್ನ ಸಭೆಯ ತಲೆಯಾಗಿರ ಬೇಕೆಂಬ ಮಹಾ ಯೋಗ್ಯತೆಯೂ ಅವುಗಳ ಮೇಲೆ ಸತ್ಯಪ್ರಿಯರೆಲ್ಲರ ಅನುಭವಕ್ಕೆ ಬರುವದು.

ಕ್ರಿ. ಶ. 904ನೇ ವರುಷದಿಂದ 963ನೇದರ ವರೆಗೆ ಪಪ್ಪಕ ಪೀಠದಲ್ಲಿ ಸೂಳೆಯರರಸುತನವೆಂಬದು ಸುಮಾರು 60 ವರುಷ ಕೂತಿರುತ್ತಿತ್ತು; ಹ್ಯಾಗಂದರೆ, ಆ ಕಾಲದಲ್ಲಿ ಆಢ್ಯವಂಶಜಳಾದ ಥೆಯೊದೋರಳೆಂಬ ಒಬ್ಬ ಸೂಳೆಯೂ ಅದೇ ಗುಣದವರಾದ ಅವಳ ಇಬ್ಬರು ಹೆಣ್ಣುಮಕ್ಕಳೂ ಪಪ್ಪರನ್ನು ಊರುತ್ತಾ ಕೀಳುತ್ತಾ ಇದ್ದರು. ಆ ಪಪ್ಪರ ಆವಳಿಯಲ್ಲಿ ಕಡೆಯವನಾದ 12ನೇ ಯೋಹಾನನ ಸುದ್ದಿಯು ತಕ್ಕಷ್ಟು ಬೈಲಿಗೆ ತಂದದೆ[1]. ಅವನ ಸಮಯದಲ್ಲಿ ಹೆಣ್ಣು ಯಾತ್ರಿಕರು ತಮ್ಮ ಮಾನವನ್ನುಳಿಸಿ ಕೊಳ್ಳಲಿಕ್ಕೋಸ್ಕರ ರೋಮಪುರಕ್ಕೆ ತಪ್ಪಿಸಿ ಕೊಂಡು ಹೋಗಬೇಕಾಯಿತು. ಕ್ರಿ. ಶ. 1039ನೇ ವರುಷ ಪಪ್ಪತ್ವ ಹೊಂದಿದ 9ನೇ ಬೆನೆದಿಕ್ತನ ಅಶುದ್ಧತೆಯ ವಿಷಯವನ್ನು ಸಹ ಹಿಂದೆ ತಿಳಿದಿದ್ಧೀರಿ[2].

ಕ್ರಿ. ಶ. 1410ನೇ ವರುಷಕ್ಕೆ 23ನೇ ಯೋಹಾನನು[3] ಪಪ್ಪನಾದನು; ಇವನ ಮೂಲ ಹೆಸರು ಬಲ್ಥಾಸರ ಕೊಸ್ಸನೆಂತ; ತನ್ನ ಯೌವನದಲ್ಲಿ ಅವನು ದೊಡ್ಡ ಸಮುದ್ರಗಳ್ಳನಾಗಿದ್ದನು; ಆಗ ಅವನ ಶೀಮೆಯಲ್ಲಿ ಯಾರೊಬ್ಬನೂ ಒಬ್ಬ ನೀಚ ಮನುಷ್ಯನನ್ನು ವರ್ಣಿಸ ಬೇಕಾದರೆ ಇವನ ದೃಷ್ಟಾಂತ ಕೊಡುತ್ತಿದ್ದನು. ಅವನು ನಾನಾ ವಿಧದ ದುರುಪಾಯಗಳಿಂದ ಕರ್ದಿನಾಲಾಗಿ[4], ಅಂದಿನ ಪಪ್ಪನನ್ನು ವಿಷ ಕೊಟ್ಟು ಕೊಂದು, ತಾನು ಪಪ್ಪತ್ವಕ್ಕೆ ಬಂದು, ಬಳಿಕ ಕೊಸ್ನಿತ್ಸ ಪಟ್ಣದ[5] ಆ ಸಭಾಸಂಘದಲ್ಲಿ ಜಾರತ್ವ ಕೊಲೆ ಗರದತ್ವ ಸಿಮೋನೀಯ[6] ಅವಿಶ್ವಾಸ ಪರಿಶುದ್ಧಾಚಾರಗಳ ಪರಿಹಾಸಕತ್ವ ಮುಂತಾದ ಅನೇಕ ನೀಚಾಪರಾಧಗಳಿಂದ ಆಪಾದಿತನಾಗಿರಲು, ಅವನುದ್ಯೋಗ ತೆಗದರು.

ಕ್ರಿ. ಶ. 1464ನೇ ವರುಷ ಪಪ್ಪನಾದ 2ನೇ ಪೌಲನು ಅಂದಿಗೆ 33 ವರ್ಷಗಳ ಹಿಂದೆ ಸ್ವೀತ್ಸೆರ್ಲಂದಿನ ಬಾಸೆಲು ಪಟ್ಣದ ಒಂದು ಸಭಾಸಂಘದವರಲ್ಲಿ ಒಬ್ಬ ಮಂತ್ರಿಯಾಗಿರುವಾಗ, ತನಗೆ ಸೂಳೆಯಿಂದ ಒಬ್ಬ ಮಗನು ಹುಟ್ಟಿದನೆಂದು, ಅಮಿತೋತ್ಸಾಹದಿಂದ ತನ್ನ ತಂದೆಗೆ ಕಾಗದ ಬರೆದು ತಿಳಿಸಿದನು.

ಅವನ ಉತ್ತರೋದ್ಯೋಗಿಯಾದ 4ನೇ ಸಿಕ್ಸ್ತನು ಮಹಾ ಸಿಮೋನೀಯ ಧಾನ್ಯಮೌಲ್ಯವರ್ಧನ ಇತ್ಯಾದಿ ದುಷ್ಟತ್ವವನ್ನು ನಡಿಸಲಿಕ್ಕೆ ಹಿಂದೆಗೆಯಲಿಲ್ಲ.

ಅವನ ಈಚೆಯ ಪಪ್ಪನಾದ 8ನೇ ಇನ್ನೊಕೆಂತನಿಗೆ ಏಳ್ವರು ಜಾರಜರು ಹುಟ್ಟಿದರು; ಅವನು ಅದಕ್ಕೆ ನಾಚದ್ದು ಮಾತ್ರವಲ್ಲದೆ ಬಹಿರಂಗದಲ್ಲಿ ತನ್ನನ್ನು ಹೊಗಳಿ ಕೊಳ್ಳುತ್ತಿದ್ದನು.

ಕ್ರಿ. ಶ. 1492ನೇ ವರುಷ ಅವನ ಬದಲಿಯವನಾದ 6ನೇ ಅಲೆಕ್ಸಂದರನು

---

1) 326ನೇ ಪಾನು. 2) 326ನೇ ಪಾನು. 3) 338ನೇ ಪಾನು. 4) 337ನೇ ಪಾನು. 5) 338ನೇ ಪಾನು. 6) 328, 329ನೇ ಪಾನು.

ಅವನಿಗಿಂತಲೂ ಬಹಳ ತುಚ್ಛನಾದವನು; ಅವನು ತನ್ನ ಪಪ್ಪೋದ್ಯೋಗ ವಹಿಸಿಕೊಳ್ಳುವಾಗಲಾದರೂ ಅವನಿಗೆ 4 ಗಂಡು 1 ಹೆಣ್ಣು ಹೀಗೆ ಐವರು ಮಕ್ಕಳಿದ್ದರು[1]. ಅವನ ಜೀವಿತದ ಮಹಾಪರಾಧಗಳನ್ನು ಈ ಗ್ರಂಥದಲ್ಲಿ ವಿವರಿಸುವದಕ್ಕೆ ಮಾನವು ಅಡ್ಡಗಟ್ಟುತ್ತದೆ. ಹೀಗಿರಲಾಗಿ ಅವನು ಕರ್ದಿನಾಲುದ್ಯೋಗಗಳಲ್ಲಿ ಶ್ರೇಷ್ಠರನ್ನು ವಿಷದಿಂದ ಕೊಂದು, ಅವರ ಆಸ್ತಿಯಿಂದ ತನ್ನನ್ನೂ ತನ್ನ ಜಾರಜರನ್ನೂ ಐಶ್ವರ್ಯವಂತರಾಗ ಮಾಡಿ, ತನ್ನ ಕುಮಾರರಲ್ಲಿ ಬಂಧುಹತ್ಯ ಗೈದಿದ್ದವನೊಬ್ಬನನ್ನು ಕರ್ದಿನಾಲುದ್ಯೋಗದಲ್ಲಿಟ್ಟನೆಂದು, ಹೇಳುತ್ತೇವಷ್ಟೇ. ಅವನು ಕ್ರಿ. ಶ. 1503ನೇ ವರುಷ ಒಬ್ಬ ಧನವಂತನಾದಂಥ ಕರ್ದಿನಾಲುದ್ಯೋಗಿಗೆ ವಿಷವಿಕ್ಕುವ ಹಾಗಿರುವಾಗ ಅವನ ಸೇವಕನ ತಪ್ಪಿನಿಂದ ಪಾತ್ರಗಳು ಬದಲಾಗಿ, ಅವನಿಗೆ ಆ ವಿಷಪಾತ್ರ ಪ್ರಾಪ್ತವಾದ ಕಾರಣ ಅವನು ಸತ್ತು ಹೋದನು.

ಅವನ ಉತ್ತರಾಧಿಕಾರಿಯಾಗಿ, ಕ್ರಿ. ಶ. 1503ನೇ ವರುಷದಿಂದ 1513ನೇದರ ಮಟ್ಟಿಗೆ ಪಪ್ಪೋದ್ಯೋಗದಲ್ಲಿರುತ್ತಿದ್ದ 2ನೇ ಯೂಲಿಯನೆಂಬವನು ಕಲಾಕುಶಲನಾದ ರಾಜನೂ ಯುದ್ಧಗಳಲ್ಲಿ ಸ್ವಂತ ಕೈಯಿಂದ ಬಹಳ ಶೂರತ್ವ ತೋರಿಸುವಂಥವನೂ ಆಗಿದ್ದನು; ಅವನು ಮದ್ಯಪಾನ ಮಾತ್ರ ಬಿಡಲೊಲ್ಲನು. ಆ ವೇಳೆ ಮಕ್ಸಿಮಿಲಿಯಾನನೆಂಬವನು ಗೆರ್ಮಾನಿಯ ದೇಶದ ಕೈಸರನು; ಇವನು ತುದಿಬೆಟ್ಟದ ಜಿಂಕೆಯ ಬೇಟೆಗೆ ಮನವೆಳಸುವವನಾಗಿದ್ದು, ಒಮ್ಮೆ ತನ್ನನ್ನು ಮತ್ತು ಆ ಪಪ್ಪನನ್ನು ಕುರಿತು ಚೇಷ್ಟೆಯಿಂದ ನುಡಿದ್ದೇನಂದರೆ—ಲೋಕಪರಿಪಾಲನದಲ್ಲಿ ದೇವರು ಹೆಚ್ಚು ಜಾಗ್ರತೆ ತಕ್ಕೊಳ್ಳದಿದ್ದರೆ ಬಹಳ ಕೇಡಾದೀತು; ಹ್ಯಾಗಂದರೆ ಲೌಕಿಕ ರಾಜತ್ವವು ಒಬ್ಬ ಜಿಂಕೆಬೇಟೆಗಾರನ ಕೈಯಲ್ಲಿ, ಮತ್ತು ಮತಕ ರಾಜತ್ವವು ಒಬ್ಬ ಅಮಲುಖೋರ ಪಪ್ಪನದರಲ್ಲಿ ಉಂಟಲ್ಲ?—

ಆ ಪಪ್ಪರ ಮಾದರಿಯ ಪ್ರಕಾರ ಅಧ್ಯಕ್ಷರೂ ಪ್ರೀಸ್ತರೂ ಅಬ್ಬಾತರೂ ಸಾಧಾರಣ ಮಠಿಕರೂ ನಡೆಯುತ್ತಿದ್ದರು; ಭಯಂಕರವಾದ ಅಜ್ಞಾನವೂ ಅವಿದ್ಯೆಯೂ ಅವರಲ್ಲಿ ತೋರುತ್ತಿತ್ತು. ಅವರಲ್ಲನೇಕರು ದಿನಾಲು ಸೂಳೆಮನೆ ಇತ್ಯಾದಿ ನೀಚ ಅಂಗಡಿಗಳಲ್ಲಿ ಬಿದ್ದು ಕೊಂಡಿದ್ದು, ತಿನ್ನುತ್ತಾ, ಕುಡಿಯುತ್ತಾ, ಅನುಭೋಗಿಸುತ್ತಾ, ಪಗಡೆಯಾಟವಾಡುತ್ತಾ ಕಾಲ ಕಳೆಯುತ್ತಿದ್ದರು; ಅಮಲು ಹತ್ತಿದ ಮೇಲೆ ಕೂಗು ಹಾಕಿ, ಹುಚ್ಚರಂತೆ ಗದ್ದಲವೆಬ್ಬಿಸಿ, ಹೊಡದಾಡುತ್ತಾ ಇದ್ದರು. ತಮ್ಮ ವೇಶ್ಯೆಗಳ ಸಮ್ಮೇಲನದಲ್ಲಿಂದ ಮಿಸ್ಸಯಾಗವೇದಿಗೆ ಬರುತ್ತಿದ್ದರು; ಇತ್ಯಾದಿ, ಇತ್ಯಾದಿ. ಮಾನಸ್ಥರು ಉಚ್ಚರಿಸ ಬಾರದಷ್ಟನ್ನೆಲ್ಲಾ ಹೆಚ್ಚು ವಿವರಿಸುವದ್ಯಾತಕೆ? ಪೌಲ ಅಪೊಸ್ತಲನು ರೋಮಾಯರಿಗೆ ಬರೆದ ಪತ್ರಿಕೆಯ ಪ್ರಥಮ ಅಧ್ಯಾ

1) ಸಕಲ ಪಪ್ಪಕ ಸಭೋದ್ಯೋಗಿಗಳು ನಿರ್ವಾಹಿಗಳಾಗಿರ ಬೇಕೆಂದು, ನೆನಪು ಮಾಡ ತಕ್ಕದ್ದು.

ಯದ 27ನೇ ವಚನದಿಂದ 32ನೇದರ ವರೆಗೆ ಹೇಳಿರುವ ಅಜ್ಞಾನಿಗಳ ದುಷ್ಟತ್ವವೆಲ್ಲಾ ಅವರಲ್ಲಿ ಪ್ರಬಲವಾಗಿತ್ತು.

ಆದರೆ ಅಂಥಾ ಪಪ್ಪರು, ಇತರರಾದ ಅಂಥಾ ಮತೋದ್ಯೋಗಿಗಳು, ಅಂಥಾ ಮಠಿಕರು ತಮಗೆ ಬೊಗ್ಗದ ದೇವರ ಸದ್ಭಕ್ತರನ್ನಾದರೂ[1] ಅತಿ ಕಠೋರ ರೀತಿಯಿಂದ ಹಿಂಸಿಸುತ್ತಿದ್ದರು.

ಹೀಗಿರುವದರಿಂದ ಪಪ್ಪಕ ಸಭ್ಯರ ಸ್ಥಿತಿ ಗತಿಗಳ ಹೀನತೆಯನ್ನು ಭಾವಿಸಿಕೊಳ್ಳ ಬಹುದು; ಆದರೆ ಅವು ಕನಿಷ್ಠವಾಗಿದ್ದರೂ ಆ ಪಪ್ಪಕ ಮತವೂ ಮತೋದ್ಯೋಗಿಗಳೂ ಕೆಲ್ತ ಜನಾಂಗದವರ ಮತ್ತು ತ್ಯುತೊನವಂಶಜರಾದ ಗೆರ್ಮಾನ ಮತ್ತು ಫ್ರಂಕ ಮತ್ತು ನೊರ್ಮನ್ನ ಜನಾಂಗಗಳವರ ಸಹಜವಾದಂಥ ನೀತ್ಯಾಸಕ್ತಿಯನ್ನು ಪೂರಾ ಕೆಡಿಸಲೂ ಅವರನ್ನು ರಾತ್ರಿಯೊಳಗೆ ಪೂರಾ ಮುಳುಗಿಸಲೂ ಆಗಲಿಲ್ಲ[2]. ಇದು ಮುಖ್ಯವಾಗಿ ಗೋಚರವಾದದ್ದು ಯಾತರಲ್ಲಂದರೆ, ಆ ತ್ಯುತೊನ ಸಭ್ಯರು ಪಪ್ಪಕ ಸಭೋದ್ಯೋಗಿಕುಲಕ್ಕೆ ಬಹಳ ಅಸಹ್ಯ ಪಡುತ್ತಿದ್ದರು; ಆ ಸಭ್ಯರು ತಾವು ರಕ್ಷಣಕ್ಷುಧೆಯುಳ್ಳವರಾಗಿ, ದೇವದ್ರೋಹಿಗಳಾದವರ ಆ ಕುಲವನ್ನುಪೇಕ್ಷಿಸುತ್ತಿದ್ದರು. ಆದರೆ ಅವರು ಬೇರೆ ರಕ್ಷಣಮಾರ್ಗವನ್ನರಿಯದೆ, ಮಹಾ ರಕ್ಷಣಾಭಿಲಾಷೆಯಿಂದ ಆ ಪಪ್ಪಕ ಮತದ ಕರ್ಮಠ ಭಾವವನ್ನು ಬಿಗಿ ಹಿಡಿದು, ಪಾಪಕ್ಷಮೆ ಸ್ವರ್ಗಲಾಭಗಳಿಗೋಸ್ಕರ ವಾಚಾತೀತ ಕಷ್ಟ ವಹಿಸುತ್ತಿದ್ದರು. ಇದಕ್ಕೆ ಅವರ ಕ್ರೂಜೆಪ್ರಯಾಣಗಳೂ ಅವರು ರೋಗಿಗಳಿಗೆ ಮತ್ತು ಬಡವರಿಗೆ ಕಟ್ಟುತ್ತಿದ್ದ ಅಪಾರ ಮನೆಗಳೂ ಮಹಾ ದೇವಾಲಯಗಳೂ ಪ್ರಚಂಡ ಸಾಕ್ಷಿಗಳು. ಮುಯಿನ್ಸ್ತೇರುಗಳು (ಮೊನಾಸ್ತೇರಿಯಗಳು)[3] ಅಥವಾ ದೋಮಗಳು ಅಥವಾ ಕಥೆದ್ರಾಲೆಗಳೆಂಬ ಅಂಥಾ ಮಹಾ ದೇವಾಲಯಗಳನ್ನು ಕಟ್ಟಿಸುವದಕ್ಕಾಗಿ ಪಪ್ಪರು ಪಾಪಕ್ಷಮಾವಿಕ್ರಯ ಮಾಡಿ, ಹೀಗೆ ಅಮಿತ ಹಣ ಕೂಡಿಸಿದ್ದಲ್ಲದೆ ಸಕಲ ಸ್ಥಿತಿಯ ಸಭ್ಯರಾದ ಸ್ತ್ರೀ ಪುರುಷರು, ದೊಡ್ಡ ಪುಣ್ಯವೆಂದು, ಗುಂಪು ಗುಂಪುಗಳಾಗಿ ನೆರೆದು, ಕಷ್ಟಕ್ಕೆ ಬಳಿಸದಿದ್ದ ಮೃದು ಮೈಯುಳ್ಳಂಥವರಾದರೂ ಬಂಡಿ ಮಣ್ಣು ಕಲ್ಲು ಮರ ಮುಂತಾದವುಗಳ ಕಠಿಣ ಕೆಲಸಕ್ಕೆ ಒಳಗಾಗುವ ಹಾಗೆ ಕಾರಣರಾಗ ಕೂಡಿತು.



---

1) 1 ಯೋಹಾ. 4, 1—3; 281, 350, 352, 366, 368ನೇ ಪಾನುಗಳು. 48ನೇ, 49ನೇ, 50ನೇ, 51ನೇ, 52ನೇ, 53ನೇ, 54ನೇ ಸಂಧಿಗಳು. 2) 299ನೇ, 358ನೇ ಪಾನು ಸರಿ ನೋಡು. 3) 264ನೇ ಪಾನು; ಮೊನಾಸ್ತೇರಿಯುಗಳೆಂಬ ಮಠಗಳ ಸಂಬಂಧದ ದೆಸೆಯಿಂದ ಒಂದು ತರದ ಆಕೃತಿಯುಳ್ಳ ದೇವಾಲಯುಗಳಿಗೆ ಈ ಹೆಸರು ಬಿದ್ದುಳಿದದೆ.

## 47. ಕ್ಲೇರ್ವೊ ಪಟ್ಣದ ಬೆರ್ನ್ಹರ್ದನು.

ಪಪ್ಪಕ ಮತ್ತು ಗ್ರೀಕ ಮತಗಳೂ ಮತಸ್ಥರೂ ಬಹಿರಕ್ಕೆ ದೇವವಾಕ್ಯಾನುಕೂಲವಾದ ಕ್ರೈಸ್ತತ್ವ ಬಿಟ್ಟಿದ್ದರೂ[1], ಬಹಿರ್ದೃಷ್ಟಿಗೆ ಆ ಮತಸ್ಥರು ಆತ್ಮೀಯ ನಿಬಿಡಾಂಧಕಾರದವರಾಗಿ ನೌಭಂಗ ಪಟ್ಟ ಸ್ಥಿತಿಯಲ್ಲಿದ್ದರೂ ಆಗಿಂದಾಗ ಅಲ್ಲಲ್ಲಿ ಹಲವರು, ತಾವು ಆ ಮತಗಳಿಗೆ ಅನುಸರಿಸುವದರಿಂದಲ್ಲ ಆ ಕಾರ್ಮುಗಿಲಿನ ಪಾರಾಗಿ ಕ್ರಿಸ್ತಸೂರ್ಯನನ್ನು ಕಂಡು ಪ್ರೀತಿಸುವದರಿಂದಲೇ, ಕಾಡಿನಲ್ಲಿ ದಿಶೆಗೆಡದೆ, ನಾಶನಕರವಾದ ಕಡಲುಥೆರೆಗಳಲ್ಲಿ ಈಚಾಡ ಶಕ್ತರಾಗಿ, ಹೀಗೆ ತಮ್ಮ ಪ್ರಾಣಗಳನ್ನು ರಕ್ಷಿಸಿ ಕೊಳ್ಳುತ್ತಿದ್ದರು. ಅಂಥವರು ಪಪ್ಪಕರ ಮತ್ತು ಗ್ರೀಕರ ಬಹಿಃಸಂಬಂಧದಲ್ಲಿ ಇದ್ದರೂ, ಆ ಕಾಲದ ಅಪವಿಶ್ವಾಸದ ಮಹಾ ಬಲದಿಂದ ಅವರೊಳಗಿನ ಕೆಲವು ಅಬದ್ಧಾರ್ಥಗಳಿಗೆ ಒಳ ಜಡಿದಿದ್ದರೂ ಅವರು ನಿಜವಾದ ಅದೃಶ್ಯ[2] ಕ್ರಿಸ್ತಸಭೆಯ ಅಂಗಗಳೇ, ನಿಶ್ಚಯ! ಇಂಥವರಲ್ಲಿ ಫ್ರಂಚು ದೇಶದ ಕ್ಲೇರ್ವೊ ಪಟ್ಣದ ಬೆರ್ನ್ಹರ್ದನೆಂಬವನು ಒಬ್ಬನು[3].

ಕ್ರಿ. ಶ. 1091ನೇ ವರುಷಕ್ಕೆ ಬುರ್ಗುಂದು ಶೀಮೆಯಲ್ಲಿ[4] ಒಬ್ಬ ಆಢ್ಯ ಪಾಳೆಗಾರನಿಗೆ 3ನೇ ಕುಮಾರನು ಜನಿಸಿದನು; ಇವನಿಗೆ ಸ್ನಾನಸಂಸ್ಕಾರದಲ್ಲಿ ಬೆರ್ನ್ಹರ್ದನೆಂಬ ಹೆಸರಿಟ್ಟರು. ಶಾತಿಲ್ಲ್ಯೊಬ್ ಎಂಬ ಪಟ್ಣದ ದೇವಾಲಯದ ಅಗ್ರಹಾರದಲ್ಲಿ ಅವನಿಗೆ ಬಾಲಬೋಧೆಯಾಯಿತು. ಅವನ ಮನಸ್ಸು ಪರಲೋಕವಿಷಯವನ್ನಾಲೋಚಿಸುತ್ತಿತ್ತು; ಅವನ ಸ್ವಭಾವದಲ್ಲಿ ಅಂತಃಕರಣವು ಪ್ರಶಸ್ತವಾಗಿರುವದರಿಂದ ತನಗಿದ್ದದನ್ನು ಗೋಪ್ಯವಾಗಿ ಬಡವರಿಗೆ ಕೊಡುತ್ತಿದ್ದನು.

ಅವನು ಯೌವನಸ್ಥನಾದಾಗ ಅವನ ಗುಣವತಿಯಾದ ತಾಯಿಯು ತೀರಿ ಹೋದಳು; ಇದರಿಂದ ಅವನ ಹೃದಾಶೆಯು ದೇವರ ಮೇಲೆ ಮತ್ತಷ್ಟು ನೆಲೆ ಗೊಂಡಿತು. ಅವಳ ನೆನಪಿನಿಂದ ಅವನು ಮಾಂಸಿಕವಾದ ಅನೇಕಾನೇಕ ಶೋಧನೆಗಳಿಗೆ ತಪ್ಪಿಸಿ ಕೊಳ್ಳುತ್ತಾ ಬಂದನು. ಬಳಿಕ ತನ್ನ ಜೀವಿತದ 22ನೇ ವರುಷದಲ್ಲಿ ಅವನು ವೈರಾಗ್ಯಧರ್ಮ ಹಿಡಿದು, ಕಿಸ್ತೆರ್ಕಿಯೆನ್ಸರ ಮಠಿಕ ಕುಲದಲ್ಲಿ[5] ಶೇರಿ ಕೊಂಡನು. ಆ ಕುಲದವರು ಬೆನೆದಿಕ್ತೀನರದನ್ನು[6] ತಿದ್ದಲಿಕ್ಕೋಸ್ಕರ ಕ್ರಿ. ಶ. 1098ನೇ ವರುಷದಲ್ಲಿ ಎದ್ದಿದ್ದರು; ಅವರ ವಸ್ತ್ರಗಳು ಬಿಳೀವು, ಕಥರರಿಗೆ[7] ಎದುರಿಸುವದು ಅವರ ತಾತ್ಪರ್ಯದಲ್ಲಿ ಮುಖ್ಯವಾದದ್ದು ಒಂದು. ಬೆರ್ನ್ಹರ್ದನು ಅವರಿಗೆ ಕೂಡುವಾಗ ಅವರಲ್ಲಿ ಇನ್ನು ತಕ್ಕಷ್ಟು ನೀತಿಪ್ರಯತ್ನವು ಉಳಿದಿತ್ತು.

ಅವನು ಮನಃಪೂರ್ವಕದ ವೈರಾಗಿಯಾದನು; ಅವನ ಸ್ವದೇಹದಂಡನವು ಮಿ

1) 46ನೇ ಸಂಧಿ. 2) 284ನೇ ಪಾನು. 3) 346ನೇ ಪಾನು. 4) 303ನೇ ಪಾನು. 5) 350ನೇ ಪಾನು. 6) 306—308, 311, 312, 314, 326ನೇ ಪಾನು. 7) 162, 163, 281, 350, 352ನೇ ಪಾನು.

ತಿ ಮಿೀರಿತು. ಕಡೆಯ ಈ ವಿಷಯಕ್ಕೆ ಅವನು ಕಾಲಗತಿಯಲ್ಲಿ ಬಹಳ ಪಶ್ಚಾತ್ತಾಪ ತಾಳುವವನಾದನು; ಅದರಿಂದ ತನ್ನ ದೇಹಕ್ಷೇಮವು ಕುಂದಿತಲ್ಲ? ತಾನು ಅದರಿಂದ ದೇವಸೇವೆಗೆ ಬೇಕಾಗಿದ್ದ ಬಲವನ್ನು ಕಡಿಮೆ ಮಾಡಿದ್ದನಲ್ಲ? ಅವನು ಆ ಮೈದಂಡನದಿಂದ ಪಟ್ಟ ನಿತ್ರಾಣವು ಜೀವಾಂತದ ವರೆಗೂ ಪರಿಹಾರವಾಗಲಿಲ್ಲ.

3 ವರುಷಕ್ಕೀಚೆ ಕ್ರಿ. ಶ. 1115ನೇದಕ್ಕೆ ಅವನು ಕ್ಲೇರ್ವೊ ಎಂಬಲ್ಲಿ ಸ್ಥಾಪಿತವಾದದೊಂದು ಮಠದ ಅಬ್ಬಾತನಾದನು; ಅವನ ಸುವೃತ್ತಿಯಿಂದ ಅದು ಬೇಗ ಮಠಿಕತ್ವದ ಪ್ರಧಾನ ಮಾದರಿಯಾಯಿತು. ಹೊಸ ಮಠಗಳನ್ನು ನಿರ್ಮಿಸಲಿಕ್ಕೂ ಹಳೆಯವನ್ನು ತಿದ್ದಲಿಕ್ಕೂ ಬೆರ್ನ್ಹರ್ದನು ಯುರೋಪ ಖಂಡದ ಸಕಲ ಶೀಮೆಗಳಿಗೆ ತನ್ನ ಕೆಳಗೆ ಶಿಕ್ಷೆ ಹೊಂದಿದ ಮಠಿಕರನ್ನು ಕಳುಹಿಸುವದಕ್ಕೆ ಹಂಗಿಗನಾದನು; ಅವನು ಸಾಯುವಂದು ಅವನ ಕಟ್ಟಳೆಯುಳ್ಳ 160 ಮಠಗಳುತ್ಪನ್ನವಾಗಿದ್ದವು. ವರುಷ ವರುಷಕ್ಕೆ ಅವನ ಮಾನವು ಏರುತ್ತಾ ಬಂತು; ರಾಜರೂ ಅಧ್ಯಕ್ಷರೂ ಪಪ್ಪರೂ ಅವನ ಆಲೋಚನೆ ಕೇಳುವವರಾದರು. ದೊಡ್ಡ ಸಂಪತ್ತುಳ್ಳ ಸ್ಥಳಗಳಲ್ಲಿ ಅಧ್ಯಕ್ಷತೆಗೆ ಬರುವ ಹಾಗೆ ತನಗೆ ಉಪಾಯಗಳಿರುತ್ತಿದ್ದರೂ ಉಪೇಕ್ಷಿಸುತ್ತಿದ್ದನು. ತನ್ನ ಕಾಲದ ಮಠೋದ್ಯೋಗಿಗಳ ಕಂಟಕಕರವಾದ ಅವಸ್ಥೆಯನ್ನು ಅವನು ಪೂರಾ ತಿಳುಕೊಂಡು, ಹಲುಬಿದ್ದೇನಂದರೆ—ಪ್ರೀಸ್ತರು ಹ್ಯಾಗೋ, ಹಾಗೆಯೇ ಸಭ್ಯರು! ಎಂತ, ಹೇಳುವದಾದರೂ ಇನ್ನು ಕೂಡದು; ಹ್ಯಾಗಂದರೆ, ಸಭ್ಯರು ಪ್ರೀಸ್ತರಷ್ಟರ ಮಟ್ಟಿಗೆ[1] ಕೆಟ್ಟು ಹೋಗಲಿಲ್ಲ. (ಪಪ್ಪಕ) ಸಭೆ ಎಂಬ ಪೂರ್ಣ ದೇಹವನ್ನು ಕೊಳಕುರೋಗವು ವ್ಯಾಪಿಸಿ ಕೊಂಡದೆ; ಮಠೋದ್ಯೋಗಿಗಳು ಕ್ರಿಸ್ತನ ಸೇವಕರೆನ್ನಿಸಿ ಕೊಂಡರೂ ಅಂತಿಕ್ರಿಸ್ತನಿಗೆ (ಕ್ರಿಸ್ತವಿರೋಧಿಗೆ)[2] ಸೇವಿಸುತ್ತಿದ್ದಾರೆ; ಅವರಲ್ಲಿ ಜಾರರ ಭಾವವೂ ನಟರ ಪದ್ಧತಿಯೂ ಉಂಟು. ತನ್ನ ಕೆಳಗಿನವರ ಚೀಲದ ಹಣವನ್ನು ಘಳಿಸಿ ಕೊಳ್ಳುವದಕ್ಕಿಂತ ಹೆಚ್ಚಾಗಿ ಅವರ ದುರ್ವ್ಯಸನಗಳನ್ನು ಕೀಳುವದಕ್ಕೆ ಚಿಂತಿಸುವಂಥ ಒಬ್ಬನೇ ಮಠೋದ್ಯೋಗಿಯನ್ನಾದರೂ ಯಾರೊಬ್ಬನಾದರೂ ನನಗೆ ತೋರಿಸ್ಯಾನೇ?—

ಕ್ರಿ. ಶ. 1130ನೇ ವರುಷಕ್ಕೆ ಇಬ್ಬರು ಪಪ್ಪರು ಕೂಡಿ ಪೀಠವೇರಲು[3], ಅವರಲ್ಲೊಬ್ಬನಾದ 2ನೇ ಇನ್ನೊಕೆಂತನು ಫ್ರಂಚಿಗೆ ಓಡಿ ಹೋಗಿ, ಅಲ್ಲಿ ಬೆರ್ನ್ಹರ್ದನ ಸಹಾಯದಿಂದ ಮಾನ್ಯನಾಗಿ, ತನ್ನ ಪ್ರತಿಪಪ್ಪನ ಮರಣದಿತ್ತ ಕ್ರಿ. ಶ. 1138ನೇ ವರುಷ ಏಕ ಪಪ್ಪನಾದನು. ಆ ವೇಳೆ ಬೆರ್ನ್ಹರ್ದನು—ನೀತಿಯು ಸಭೆಯಲ್ಲಿ ಕೆಡುತ್ತಾ ಅದೆ, ಬಂಧಮೋಕ್ಷಾಧಿಕಾರವು ನಶಿಸುತ್ತಾ ಅದೆ, ಅಧ್ಯಕ್ಷರ ಮಾನವು

1) 359 ಆದಿ ಪಾನುಗಳು. 2) 107ನೇ ಪಾನು. 3) 334ನೇ ಪಾನು ನೋಡು; 326, 337, 338, 345ನೇ ಪಾನುಗಳನ್ನು ಸರಿ ನೋಡು.

ಕುಂದುತ್ತಾ ಅದೆ; ಹ್ಯಾಗಂದರೆ, ಒಬ್ಬ ಅಧ್ಯಕ್ಷನಾದರೂ ತನ್ನ ಸ್ವಂತ ತುಕ್ಕಡಿಯಲ್ಲಿಯೂ ಕೆಟ್ಟದ್ದಕ್ಕೆ ಇನ್ನು ಶಿಕ್ಷಿಸ ಬಾರದು ಎಂತ, ತಮ್ಮ ಸಭೆಗಳನ್ನು ಜೋಕೆಯಿಂದ ನೋಡುವವರೆಲ್ಲರೂ ಅನುಭವಿಸಿ ಹೇಳುತ್ತಾರೆ; ಇಷ್ಟೆಲ್ಲವು ಪಪ್ಪನಾದ ನಿಮ್ಮ ಮತ್ತು ನಿಮ್ಮ ಪುರದ ಮತೋದ್ಯೋಗಿಗಳ ಅಪರಾಧವೆಂತ, ನಿರ್ಣಯಿಸುತ್ತಾರೆ; ಯಾಕಂದರೆ, ಅಧ್ಯಕ್ಷರು ಏನೊಂದೂ ಒಳ್ಳೇ ನಿಯಮ ಮಾಡಿದರೆ ಅದು ನಿಮ್ಮಲ್ಲಿ ತಿರಿಗಿ ಕಿತ್ತು ಹೋಗುವದಂತೆ, ಅದಲ್ಲದೆ ಅವರು ನ್ಯಾಯದ ಮೇಲೆ ಕಿತ್ತು ಹಾಕಿದ್ದು ನಿಮ್ಮಲ್ಲಿ ತಿರಿಗಿ ನಿಯಮವಾಗುವದಂತೆ; ಅವರು ಬಹಿಷ್ಕರಿಸಿದ ದುಷ್ಟರೂ ಜಗಳಗಂಟಿಗರೂ ಆಧಂಥ ಸಭ್ಯರು ಮತೋದ್ಯೋಗಿಗಳು ಮಠಿಕರು ರೋಮಕ್ಕೆ ಹೋಗಿ, ಅಲ್ಲಿ ಆಶ್ರಯ ಪಡೆದು, ಸುಖದಿಂದಿರುವರಂತೆ! ಎಂದು, ಅವನಿಗೆ ಬರೆದು ಕಳುಹಿಸಿ, ಶಿಕ್ಷಿಸಿದನು.

2ನೇ ಇನ್ನೊಕೆಂತನು ಕ್ರಿ. ಶ. 1143ನೇ ವರುಷದಲ್ಲಿ ಸತ್ತನು. ತರುವಾಯ ಇಬ್ಬರು ಉತ್ತರಾಧಿಕಾರಿಗಳು ಒಬ್ಬನ ಹಿಂದೆ ಒಬ್ಬನು ಆಳಿದ ಮೇಲೆ 3ನೇ ಯುಗೆನನು[1] ಕ್ರಿ. ಶ. 1145ನೇ ವರುಷಕ್ಕೆ ಪಪ್ಪನಾದನು. ಅಷ್ಟರಲ್ಲಿ ಕ್ರಿ. ಶ. 1140ನೇ ವರುಷದಾರಭ್ಯ ಉತ್ತರ ಈತಲಿಯದ ಪಟ್ಣವಾದ ಬ್ರೆಸ್ಕಿಯದ ಆರ್ನೊಲ್ದನೆಂಬ ಒಬ್ಬ ಸಭೋದ್ಯೋಗಿಯ ಪ್ರಸಂಗದಿಂದ ಈತಲಿಯದವರು ಪ್ರೇರಿತರಾಗಿ—ಸಭೆಯ ಸೇವಕರಾದ ಸಭೋದ್ಯೋಗಿಗಳು ಲೌಕಿಕ ಪ್ರಭುಗಳಲ್ಲ! ಅವರಿಗೆ ಲೌಕಿಕ ಅಧಿಕಾರವೂ ಧನವೂ ಬೇಡ! ಎಂದು, ಹೇಳಿ, 1146ನೇ ವರುಷ ಯುಗೆನನನ್ನು ಫ್ರುಂಚಿಗೆ ಓಡಿಸಿದರು. ಹ್ಯಾಗಂದರೆ, ಆ ಆರ್ನೊಲ್ದನು ಕೊಂಚ ಸೌವಾರ್ತಿಕ[2] ತಾತ್ಪರ್ಯದವನಾಗಿದ್ದು, ಪಟ್ಣಪಟ್ಣಕ್ಕೆ ಹೋಗಿ, ಪಪ್ಪರ ದರ್ಪಕ್ಕೂ ಮತೋದ್ಯೋಗಿಗಳೆಲ್ಲರ ವಿಷಯಲಾಂಪಟ್ಯಕ್ಕೂ ಹೇರಳ ಸಾಹಸದಿಂದ ವಿರೋಧಿಸುತ್ತ ಬಂದಿದ್ದನು. ಕ್ಲೇರ್ವೊವಿನ ಬೆರ್ನ್ಹರ್ದನು ಹ್ಯಾಗೂ ಮತಕ ಭಾವದ ಪಪ್ಪತ್ವವೆಂಬ ಧರ್ಮಕ್ಕೆ ಸಮ್ಮತಿಸುವಂಥವನಾದ್ದರಿಂದ ಅವನಾದರೂ ಆರ್ನೊಲ್ದನ ಶತ್ರುವಾಗಿ, ಅವನ ಇಂಗಿತವನ್ನು ಚನ್ನಾಗಿ ಅರಿಯದೆ, ಮತೋದ್ಯೋಗಿಕುಲವನ್ನು ಕೀಳಲಿಕ್ಕೆ ನೋಡುವಂಥವನೆಂದು, ಸುದ್ದಿಯೆಬ್ಬಿಸಿ, ಜನರೊಳಗೆ ಅವನ ಹೆಸರಿಗೆ ದುರ್ಗಂಧ ಹಚ್ಚುವವನಾಗಿದ್ದನು. ಆದಾಗ್ಯೂ ಪಪ್ಪಕ ರಾಷ್ಟ್ರದ ಪ್ರಜೆಯವರು ಕ್ರಿ. ಶ. ಆ 1140ನೇ ಅಬ್ದ ಈ ರಾಷ್ಟ್ರದ ಆಡಳಿತೆಯನ್ನು ತಮ್ಮದು ಮಾಡಿ ಕೊಂಡು, ಪಪ್ಪರ ಎದುರ್ಚಂಡಿ ಎಲ್ಲಾ ಗೆದ್ದು, ಆರ್ನೊಲ್ದನನ್ನು, ತಮ್ಮಲ್ಲಿ ಒಳ್ಳೇ ರಾಜ್ಯನೀತಿಯನ್ನೂರುವದಕ್ಕೆ ಸಹಾಯಕನಾಗ ಬೇಕೆಂದು, ತಮ್ಮ ಬಳಿಗೆ ಕರೆಸಿದರು. ಆ ತರುವಾಯ ಯುಗೆನನು ಪಲಾಯನ ತೆಗೆದನು. ಆದರೆ ಆರ್ನೊಲ್ದನು ಕೆಲವು ವರುಷ

---

1) 346ನೇ ಪಾನು. 2) 302ನೇ ಪಾನು.

ಪ್ರಜೋಪಕಾರಿಯಾಗಿ ಒಪ್ಪುತ್ತಿದ್ದ ಮೇಲೆ ಕ್ರಿ. ಶ. 1154ನೇ ಅಬ್ದ ಬರ್ಬರೊಸ್ಸ ನೆಂಬ ಆ ಗೆರ್ಮಾನ ಕೈಸರನು[1] 3ನೇ ಯುಗೆನನ ಉತ್ತರಾಧಿಕಾರಿಯಾದ 4ನೇ ಹದ್ರಿಯಾನನನ್ನು[2] ಒಂದು ಪ್ರಕಾರ ಮೆಚ್ಚಿಸುವದಕ್ಕಾಗಿ ಆರ್ನೊಲ್ಡನನ್ನು ಹಿಡಿದು, ಅವನ ಕೈಶೆರೆಯಲ್ಲಿಟ್ಟನು. ಈ ಪಪ್ಪನು ಮರುವರುಷ ರೋಮಪುರದ ಸುತ್ತಲಿನ ಗೋಡೆಯ ಹೊರಗಡೆಯಲ್ಲಿ ಆರ್ನೊಲ್ಡನಿಗೆ ಉರ್ಲು ಹಾಕಿಸಿ, ಸುಡಿಸಿ, ಪ್ರಜೆಯು ತನ್ನ ಹಿತಕಾರಿಯ ಭಸ್ಮಕ್ಕೆ ಮಾನ ತೋರಿಸದಂತೆ ಅದನ್ನು ತಿಬೆರಿ ಹೊಳೆಗೆ ಬೀರಿಸಿ ಬಿಟ್ಟನು.

ತನ್ಮಧ್ಯ ಬೆರ್ನ್ಹರ್ದನು ಫ್ರಂಚಿಗೆ ಪಲಾಯನವಾಗಿ ಬಂದ ಯುಗೆನನಿಗೆ ಆಶ್ರಯ ಕೊಟ್ಟು, ಅವನಿಗೆ ಮನ್ನಣೆ ಪಡಿಸುವದಕ್ಕೆ ಅವನ ಹೆಸರಿನಲ್ಲಿ ಫ್ರಂಚಿನಲ್ಲಿಯೂ ಗೆರ್ಮಾನಿಯದಲ್ಲಿಯೂ ಕ್ರೂಜೆಯುದ್ಧಪ್ರಸಂಗಗಳನ್ನು ಮಾಡಲೆಸಗಿದನು; ಹೀಗೆ ಕ್ರಿ. ಶ. 1147ನೇದರಲ್ಲಿ 2ನೇ ಕ್ರೂಜೆಪ್ರಯಾಣವು ಸಿದ್ಧಿಸಿತು[3]. ಬೆರ್ನ್ಹರ್ದನು ಸರ್ವೋತ್ಕೃಷ್ಟ ಜಯವನ್ನು ಪ್ರವಾದಿಸಿದ್ದರೂ ಅದು ಸಾರ್ಥಕವಾಗದಿರಲಿಕ್ಕೆ, ಅವನು ಮಾತಿನ ವಾಸಿಗೆ ಗುರಿಯಾದನು. ಆಗಲವನು—ಕ್ರೂಜೆಯುದ್ಧಸ್ಥರ ಪಾಪಗಳು ಸತ್ಫಲಕ್ಕೆ ಅಡ್ಡಿ ಮಾಡಿದವು; ದೇವರು ತನ್ನ ಶೋಧನಾತೀತ ಸಂಕಲ್ಪದ ಪ್ರಕಾರ ಆಪತ್ತುಗಳನ್ನು ಸಹ ಜನರ ಹಿತಕ್ಕಾಗಿ ಕಳುಹಿಸ ಬಹುದೆಂದು, ನುಡಿದನು. ಕ್ರಿ. ಶ. 1149ನೇ ಅಬ್ದದ ತನಕ ಆ ಯುಗೆನ ಪಪ್ಪನು ಬೆರ್ನ್ಹರ್ದನ ಶಿಷ್ಯನಾಗಿರುತ್ತಿದ್ದನು; ಬೆರ್ನ್ಹರ್ದನು ಅವನನ್ನು—ಲೌಕಿಕ ನಡತೆಗೆ ದೂರವಾಗಿರ ಬೇಕು; ಲೌಕಿಕ ಅಧಿಕಾರದಾಶೆಯನ್ನು ತ್ಯಜಿಸಿ ಬಿಡ ಬೇಕೆಂದು, ನಾನಾ ವಿಧದಿಂದ ಎಚ್ಚರಿಸುತ್ತಿದ್ದನು. ಪಪ್ಪೋದ್ಯೋಗವೆಂಬದು ದಿವ್ಯವಾದದ್ದೆಂಬ ಭಾವನೆಯು ಬೆರ್ನ್ಹರ್ದನಲ್ಲಿ ದೃಢವಾಗಿತ್ತು; ಪಪ್ಪನ ಕೈಯಲ್ಲಿ ರಾಜಕ ಮತ್ತು ಮತಕ ಖಡ್ಗಗಳೆರಡೂ ಇರ ತಕ್ಕದ್ದೆಂತ, ಉಚ್ಚರಿಸಲಿಕ್ಕೂ ಹೆದರಲಿಲ್ಲ; ಆದರೂ ಪಪ್ಪನಲ್ಲಿ ಕ್ರಿಸ್ತನ ಸುಗುಣಗಳಿಲ್ಲದಿದ್ದರೆ ಅವನು ಪಪ್ಪತ್ವಕ್ಕೆ ಎಂತೂ ಯೋಗ್ಯನಲ್ಲವೆಂಬದು ಸಹ ಅವನ ಅಚಲ ಹೃದಭಿಪ್ರಾಯವು. ಅಷ್ಟರಲ್ಲಿ ರೋಮದ ಕರ್ದಿನಾಲುದ್ಯೋಗಿಗಳು ಬೆರ್ನ್ಹರ್ದನ ಬಳಿಯಲ್ಲಿ ಆ ಪಪ್ಪನು ಸುಬೋಧೆ ಕಲಿತು ಕೊಳ್ಳುವದಕ್ಕೋಸ್ಕರ ಬಹಳ ಮುನಿಯುತ್ತಿದ್ದರು. ಅದು ಕಾರಣ ಯುಗೆನನು ಸಿಕಿಲಿಯ ದ್ವೀಪದ[4] ನೊರ್ಮನ್ನನಾದ[5] ರಾಯನ ಸಹಾಯದಿಂದ ಕ್ರಿ. ಶ. 1149ನೇದರಲ್ಲಿ ತಿರಿಗಿ ರೋಮಕ್ಕೆ ಬಂದ ಮೇಲೆ ಅವರು ಮರಳಿ ತಮ್ಮ ದುರ್ಬುದ್ಧಿಯನ್ನು ಅವನಲ್ಲಿ ಬಿತ್ತಲಿಕ್ಕೆ ಹತ್ತಿದರು. ಆ ಸಮಯ ಬೆರ್ನ್ಹರ್ದನು ಒಂದು ಗ್ರಂಥದ ಮೂಲವಾಗಿ, ಆ ತೋ

1) 334—336, 347ನೇ ಪಾನುಗಳು. 2) 334ನೇ ಪಾನು. 3) 346ನೇ ಪಾನು.
4) 197ನೇ ಪಾನು. 5) 321, 322, 331ನೇ ಪಾನು.

ಳಗಳಿಗೆ ಭದ್ರವಾಗಿರ ಬೇಕು! ಎಂದು, ಹೇಳಿ, ಅವನನ್ನು ಜಾಗ್ರತೆಯಲ್ಲಿಡಲಿಕ್ಕೆ ಯತ್ನಿಸಿದನು. ಆ ಗ್ರಂಥದ ಬೇರೆ ಕೆಲವು ಮಾತು ಯಾವವಂದರೆ—ನಾನು ನಿನ್ನ ಅಧಿಕಾರಕ್ಕೋಸ್ಕರ ಹೊಟ್ಟೆಕಿಚ್ಚು ಪಡುವದಿಲ್ಲ; ಯಾಕಂದರೆ ನೀನು ಈಗ ಎಷ್ಟು ಉನ್ನತನಾಗಿದ್ದರೂ ನಿನ್ನನ್ನು ಸುವಾರ್ತೆಯಿಂದ ಹುಟ್ಟಿಸಿದವನು ನಾನಲ್ಲವೋ? ಸಭೆಯಿಂದ ನೀನೇನೂ ಆಶಿಸದಿರು; ಬೇಕಾದರೆ ನಿನ್ನ ಜೀವವನ್ನೂ ಅದಕ್ಕಾಗಿ ಬಿಡು! ಕ್ರಿಸ್ತನು ನಿನ್ನನ್ನು ಕಳುಹಿಸಿದ್ದರೆ ಸೇವೆ ಮಾಡಿಸಿ ಕೊಳ್ಳುವದಲ್ಲ ಸೇವೆ ಮಾಡುವದೇ[1] ನಿನ್ನ ಮನಃಕಾಂಕ್ಷೆಯಾಗಿರುವದು. ಪೌಲ ಅಪೊಸ್ತಲನ ನಿಜ ಹಿಂಬಾಲಕನಾದವನೊಬ್ಬನು ಇವನ ಸಂಗಡ—ನಿಮ್ಮ ವಿಶ್ವಾಸದ ಮೇಲೆ ಧೊರೆತನ ಮಾಡುತ್ತೇವೆಂತಲ್ಲ, ನಿಮ್ಮ ಸಂತೋಷಕ್ಕೆ ಸಹಾಯಕರಾಗಿದ್ದೇವೆ! ಎಂದು[2], ಸಭ್ಯರನ್ನು ಕುರಿತು ಹೇಳುವನು; ತಿರಿಗಿ ಪೌಲನ ಹಿಂಬಾಲಕನೊಬ್ಬನು—(ದೇವರ) ಬಾಧ್ಯತೆಯ ಮೇಲೆ ಧೊರೆತನ ಮಾಡುವವರಾಗಿ ಅಲ್ಲ, (ಸಭೆ ಎಂಬ) ಮಂದೆಗೆ ಮಾದರಿಗಳಾಗಿಯೇ ಮಂದೆಯನ್ನು ನೋಡಿ ಮೇಯಿಸಿರಿ! ಎಂದು[3], ಪೇತ್ರನು ನುಡಿದ ಮಾತನ್ನು ಸಹ ಕೇಳಿ ಕೊಳ್ಳುವನು. ನಾನು ನಡುಗುತ್ತಾ ಸಂತೋಷ ಪಡುತ್ತೇನೆ; ನಾನು ನಿನ್ನನ್ನು ಕುರಿತು ತಂದೆಯೆಂಬ ಹೆಸರನ್ನು ಈಗ ಬಳಿಸ ಕೂಡದಿದ್ದರೂ ಒಬ್ಬ ತಂದೆಯ ಪ್ರೀತಿಯೂ ಭಯವೂ ಚಿಂತೆಯೂ ನಿನ್ನನ್ನು ಕುರಿತು ನನ್ನಲ್ಲುಂಟು; ನಾನು ನಿನ್ನ ಈಗಿನ ಉನ್ನತಿಯನ್ನು ನೆನಸಿ, ಪತನ ಸಂಭವಿಸೀತೋ? ಏನೆಂದು, ಹೆದರುತ್ತೇನೆ; ನಿನ್ನ ಅಧಿಕಾರವೇರಿದ ಮಹಾ ಎತ್ತರವಾದ ಕೊನೆಯನ್ನು ನೆನಸಿ, ಅದರ ಹತ್ತರವಿರುವ ಅಮಿತ ಆಳವಾದ ಪ್ರಪಾತವನ್ನು ಕಂಡು, ನಡುಗುತ್ತೇನೆ. ಬೆಳ್ಳಿ ಭಂಗಾರಗಳು ನನಗಿಲ್ಲವೆಂತ[4] ಹೇಳಿದಂಥವನ ಉತ್ತರೋದ್ಯೋಗಿಯಾಗಿದ್ದಿ ಎಂದು, ಜ್ಞಾಪಕ ಮಾಡಿ ಕೊಳ್ಳು! ಅಪೊಸ್ತಲರು ಬೆಳ್ಳಿ ಭಂಗಾರಗಳಿಗಲ್ಲ ಪ್ರಾಣಿಗಳಿಗೆ ತಮ್ಮ ಬಲೆಗಳನ್ನೊಡ್ಡುತ್ತಿದ್ದಂಥ[5] ಆ ಪೂರ್ವ ಕಾಲದ ದೇವಸಭೆಯನ್ನು ನಾನು ಸಾಯುವದಕ್ಕಿಂತ ಮುಂಚೆ ನೋಡುವದಾದರೆ ಎಷ್ಟೋ ಚಲೋದು! ನಿನ್ನ ಬೆಳ್ಳಿಯು ನಿನ್ನ ಸಂಗಡ ನಾಶವಾಗಲಿ! ಎಂದು[6] ಹೇಳಿದವನ ನುಡಿಯು ನಿನಗೆ ದೊರಕುವ ಹಾಗೆ ನನಗೆಷ್ಟೋ ಅಭಿಲಾಷೆಯು! ಹಾ, ಶಿಡಿಲು ನುಡಿಯೇ! ಚಿಯೋನಿನ (ಅಂದರೆ ಕ್ರಿಸ್ತಸಭೆಯ) ಅಹಿತ ಬಯಸುವವರೆಲ್ಲರೂ ನಿನ್ನ ಶಬ್ದದಿಂದ ಹಾಳಾಗಲಿ!—ಬೆರ್ನ್ಹರ್ದನ ಈ ಮಾತುಗಳು ನವ ಕಾಲದ ಅಂದರೆ ಪಪ್ಪಕ ಮತ ತೀರಿ ಸುವಾರ್ತೆ ತಿರಿಗಿ ಸ್ಥಾಪನೆಯನ್ನೈದುವ ಕಾಲದ ಸೂರ್ಯೋದಯದ ಮುಂಬೆಳಗಲ್ಲವೋ? ಬೆರ್ನ್ಹರ್ದನಲ್ಲಿ ಇತರ ಸೌವಾರ್ತಿಕ ಜ್ಞಾನವು ಸಹ ಮೂಡಿತ್ತೆಂದು,

1) ಮತ್ತಾ. 20, 28. 2) 2 ಕೊರಿ. 1, 24. 3) 1 ಪೇತ್ರ. 5, 3. 4) ಅಪೊ. ಕ್ರಿ. 3, 6. 5) ಮತ್ತಾ. 4, 19. 6) ಅಪೊ. ಕ್ರಿ. 8, 20.

ಅವನ ಗ್ರಂಥಗಳ ಅನೇಕ ಕಡೆಯಲ್ಲಿ ಕಾಣುತ್ತದೆ; ಅವನು ಪಪ್ಪಕ ಮತದ ಕರ್ಮಠ ಭಾವವೆಂಬ ಪೆಲಗಿಯತ್ವ[1] ಬಿಟ್ಟು ಬೋಧಿಸಿದ್ದೇನಂದರೆ—ಪಾಪಪತನದ ಮೂಲಕ ಮನುಷ್ಯರ ಚಿತ್ತವು ಪಾಪದ ದಾಸನಾಯಿತು; ಯಾರೂ, ಮರಿಯಳಾದರೂ[2], ಈ ಪ್ರಮಾಣದ ಹೊರಗೆ ಇರುವದಿಲ್ಲ; ಜನರ ರಕ್ಷಣವು ದೇವಕೃಪೆಯ ಕಾರ್ಯವೇ; ಮನುಷ್ಯರಲ್ಲಿ ಸ್ವಾರ್ಜಿತ ಪುಣ್ಯವು ಇಲ್ಲ; ಸ್ವಾರ್ಜಿತ ಪುಣ್ಯ ಉಂಟೆಂತ, ಹೇಳುವಂಥವರು ಕೃಪೆಯ ಬೆಲೆ ಕುಂದಿಸುತ್ತಾರೆ. ಎಲ್ಲರೂ ಪಾಪಿಷ್ಠರು; ತನ್ನ ಪಾಪಗಳಿಂದ ಸಂತಪ್ತನಾಗಿ, ನೀತಿಗೆ ಹಸಿದು ನೀರಡಿಸುವಂಥವನೊಬ್ಬನು ಭಕ್ತಿಹೀನನಿಗೆ ನೀತಿನಿರ್ಣಯಿಸುವವನಲ್ಲೇ ವಿಶ್ವಾಸವಿಡಲಿ[3]; ಆಗ ವಿಶ್ವಾಸದಿಂದ ಮಾತ್ರ ನೀತಿನಿರ್ಣಯ ಪಟ್ಟು, ದೇವರ ಸಂಗಡ ಸಮಾಧಾನವಾಗಿರುವನು[4]. ಯೆಹೋವನು ಯಾವನಿಗೆ ಅಕ್ರಮವನ್ನು ಎಣಿಸುವದಿಲ್ಲವೋ, ಆ ಮನುಷ್ಯನು ಮಾತ್ರ ಭಾಗ್ಯವಂತನು[5]; ಪಾಪವು ಹೆಚ್ಚಿದಲ್ಲಿ ಕೃಪೆಯು ಮತ್ತೂ ಹೆಚ್ಚಿತು[6]; ಇತ್ಯಾದಿ.—ಮರಿಯಳ ನಿಷ್ಪಾಪೋತ್ಪತ್ತಿಯ ಬೋಧನೆಯು ಕ್ರಿ. ಶ. 1140ನೇ ವರುಷದಲ್ಲಿ ಏಳುವ ಹಾಗಿರುವಾಗ[7] ಅವನು ಅದಕ್ಕೆ ಉತ್ಕಟ ಎದುರಾಳಿಯಾದನು. ಪರಿಶುದ್ಧ ರಾತ್ರಿಭೋಜನದಲ್ಲಿ ವಸ್ತುಪರಿಣಾಮವು[8] ಇಲ್ಲ, ಅದು ಅದೃಶ್ಯ ಕೃಪೆಯ ದೃಶ್ಯವಾದದೊಂದು ಚಿನ್ಹೆಯೆಂದು, ಅವನ ಸ್ಥಿರ ವಿಶ್ವಾಸವು.

ಆದರೂ ಅವನು, ಮರಿಯಳು ಮುಂತಾದ ಸಂತರು ಮನುಷ್ಯರಿಗೂ ದೇವರಿಗೂ ಮಧ್ಯವರ್ತಿಗಳೆಂದು, ಹೇಳುವಲ್ಲಿ ಪಪ್ಪಕ ಮತದ ಅಪವಿಶ್ವಾಸಬಂಧದಿಂದ ತನ್ನನ್ನು ಪೂರ್ಣ ಬಿಡಿಸಿ ಕೊಳ್ಳದವನಾಗಿ ತೋರುತ್ತಾನೆ. ಅದಲ್ಲದೆ ಮಿಕ್ಕಾದ ಕಿಸ್ತೆರ್ಕಿಯೆನ್ಸರ[9] ಓಪಾದಿ ಅವನು ಸಹ ಪಪ್ಪಕ ಸಭೆಯ ಹೊರಗಿನ ನಿಜ ಸೌವಾರ್ತಿಕ ಕ್ರೈಸ್ತರನ್ನಾದರೂ ಸಹಿಸಲಾರದ್ದು ಅವನದೊಂದು ಅವಗುಣವು.

ಅವನು ಬಲಹೀನಶರೀರಿಯಾಗಿದ್ದರೂ[10] 63 ವರುಷದವನಾದನು. ಅವನು ತೀರುವದಕ್ಕೆ ಕೆಲವು ದಿವಸ ಮುಂಚೆ ಒಬ್ಬ ಗೆಳೆಯನಿಗೆ ಬರೆಸಿದ್ದೊಂದು ಕಾಗದದಲ್ಲಿರುವದೇನಂದರೆ—ನೀನು ಕಳುಹಿಸಿದ ಕಾಗದವನ್ನು ಪ್ರೀತಿಯಿಂದ ಹೊಂದಿದೆನು; ಸಂತೋಷದಿಂದಲೆಂತ, ಹೇಳುವದಕ್ಕಾಗದು; ಹ್ಯಾಗಂದರೆ ನನ್ನ ಅವಸ್ಥೆಯುಳ್ಳಂಥ ಒಬ್ಬ ಮನುಷ್ಯನು ಸಂತೋಷ ಪಡುವದು ಹ್ಯಾಗೆ? ಗುರು ಆಹಾರ ಬಿಡುವದು ನನ್ನ ಗತಿಯನ್ನು ಸ್ವಲ್ಪ ಸ್ವಲ್ಪ ಸಹ್ಯ ಮಾಡುವದಕ್ಕೆ ಒಂದೇ ಮಾರ್ಗವು. ನನ್ನ ಸೂಕ್ಷ್ಮ ಬಲವು ಏನೊಂದೂ ಸುಖಾನುಭೋಗಕ್ಕೆ ಸಾಲದು; ನಿದ್ರೆಯು ನನ್ನ

---

1) 244, 245, 291ನೇ ಪಾನು. 2) 315ನೇ ಪಾನು. 3) ರೋಮಾ. 4, 5. 4) ರೋಮಾ. 3, 28; 5, 1. 5) ಕೀರ್ತ. 32, 2. 6) ರೋಮಾ. 5, 20; 6, 1. 7) 315ನೇ ಪಾನು. 8) 290, 349, 353, 354ನೇ ಪಾನು. 9) 350ನೇ ಪಾನು. 10) 364ನೇ ಪಾನು.

ಕಣ್ಣು ತೊಲಗಿ ಹೋದ್ದರಿಂದ ನನ್ನ ಬೇನೆಯಲ್ಲಿ ಹೆಚ್ಚು ಕುಂದು ಆಗುವದಿಲ್ಲ; ಅನ್ನಕೋಶದ ನಿರ್ಬಲತ್ವವು ನನ್ನ ಸಂಕಟದ ಮುಖ್ಯ ಕಾರಣವು. ನನ್ನ ಚಿಂತೆಯುಳ್ಳ ಗೆಳೆಯನಿಗೆ ಏನೂ ಮಾಜದಂತೆ—ಆತ್ಮವು ಸಿದ್ಧವಾಗಿದೆ, ಆದರೆ ಮಾಂಸವು ಬಲಹೀನವಾಗಿದೆ ಎಂದು[1], ನನ್ನ ಅಂತರ್ಮನುಷ್ಯನನ್ನು ಕುರಿತು ಅರಿಕೆ ಮಾಡುತ್ತೇನೆ. ದುಷ್ಟನ ಮರಣದಲ್ಲಿ ಸಂತೋಷ ಪಡದ ಆ ರಕ್ಷಕನ[2] ಮುಂದೆ ನನಗೋಸ್ಕರ ಪ್ರಾರ್ಥಿಸು! ಹೊಂಚುತ್ತಿರುವ ಶತ್ರುವು[3] ತನ್ನ ಹಲ್ಲಿನಿಂದ ಕಚ್ಚಿ ಘಾಯ ಮಾಡುವ ಒಂದು ಸ್ಥಳವೂ ಅವನಿಗೆ ಶಿಕ್ಕದ ಹಾಗೆ ಬಡ ಅಯೋಗ್ಯ ಜೀವಿಯಾದ ನನ್ನನ್ನು ನಿನ್ನ ಪ್ರಾರ್ಥನೆಯಿಂದ ಬಲಗೊಳ್ಳಿಸು!—ಇಂಥಾ ನಮ್ರತೆಯುಳ್ಳ ಹೃದಯದವನಾಗಿ ಅವನು ಕ್ರಿ. ಶ. 1153ನೇ ವರುಷದ ಅಂತ್ಯಭಾಗದಲ್ಲಿ ಸಮಾಧಾನದಿಂದ ತನ್ನ ಕರ್ತನೆಡೆಗೆ ಹೋದನು.

## 48. ವಲ್ದೆನ್ಸರು.

ರೋಮಕ (ಪಪ್ಪಕ) ಮತ್ತು ಗ್ರೀಕ ಮತದ ಸಭೆಗಳು, ಮುಖ್ಯವಾಗಿ 7ನೇ ಗ್ರೆಗೋರನೆಂಬವನು ಪಪ್ಪನಾದ ಕ್ರಿ. ಶ. 1073ನೇ ವರುಷದಿತ್ತ[4] ಅವು ಕಣ್ಣಿಗೆ ಕಾಣುವಂತೆ, ಕ್ರಿಸ್ತನವುಗಳಲ್ಲವೆಂತ, ಹಿಂದೆ ಹೇಳಿದ ಮೇಲೆ[5], ಹಾಗಾದರೆ ಸುವಾರ್ತೆಯ ಸಭೆಯು ಅಂದರೆ ಕ್ರಿಸ್ತನ ನಿಜ ಸಭೆಯು ಎಲ್ಲಿ ಉಳಿದಿತ್ತು? ಎಂತ, ಕೇಳುವದು ಸಹಜವೇ. ರೋಮಕ ಮತ್ತು ಗ್ರೀಕ ಮತಗಳ ಪಕ್ಷಕರಲ್ಲಿ ಆಗಾಗ ಹಲವರು, ಅವರು ಬಹಿರ್ದೃಷ್ಟಿಯ ಪ್ರಕಾರ ಅದದನ್ನು ಶೇರಿ ಕೊಂಡಿದ್ದರೂ, ಅವರಿಗಿದ್ದ ತಕ್ಕ ಸೌವಾರ್ತಿಕ ಜ್ಞಾನದ ದೆಸೆಯಿಂದ ನಿಜ ಕ್ರೈಸ್ತರಾಗಿದ್ದರೆಂದು, ಕ್ಲೇರ್ವೊವಿನ ಮಠದ ಬೆರ್ನ್ಹರ್ದನ ದೃಷ್ಟಾಂತದಿಂದ ತೋರಿಸಲಾಯಿತು. ಹಾಗಾದರೆ ಆ ಉಭಯ ಮತದ ಪಕ್ಷಕರಲ್ಲಿಯೂ ಕ್ರಿಸ್ತನ ಸಭೆಯು ಅಡಗಿತ್ತೆಂಬದು ನಿಶ್ಚಯ; ಅದು ಹ್ಯಾಗೆ ಕೂಡಿತಂದರೆ, ಆ ಗ್ರೀಕರು ಮತ್ತು ಪಪ್ಪಕರು ಕ್ರಿಸ್ತನ ಜನ್ಮ ಮರಣಗಳ ವಿಮುಕ್ತಿಕರವಾದ ರಕ್ಷಣಕ್ರಿಯೆಗಳನ್ನು ಪೆಲಗಿಯತ್ವದ ಮೂಲಕ[6] ಮುಚ್ಚಿ ಕೊಂಡಿದ್ದರೂ ಅವನ್ನು, ಸುಳ್ಳೆಂದು, ಕಿತ್ತು ಹಾಕಿರಲಿಲ್ಲ. ಅದಲ್ಲದೆ, ಮಠಿಕರಾದ ಆ ಔಗುಸ್ತೀನನೆಂಬವನ[7] ಮತ್ತು ಬೊನಿಫಕಿಯನೆಂಬವನ[8] ಕಾಲದಲ್ಲಿಯೂ ಅವರಿಗೆ ಮುಂಚೆಯೂ[9] ಗೆರ್ಮಾನಿಯ ಫ್ರಂಚು ಈತಲಿಯ ಐರ್ಲಂದು

1) ಮತ್ತಾ. 26, 41. 2) ಎಜೇಕೆ. 33, 11. 3) 1 ಪೇತ್ರ. 5, 8. 4) 327ನೇ ಪಾನು. 5) 349, 363ನೇ ಪಾನು. 6) 368ನೇ ಪಾನು. 7) 39ನೇ ಸಂಧಿ. 8) 40ನೇ ಸಂಧಿ. 9) 38ನೇ ಸಂಧಿ; 290, 291, 308, 309, 328ನೇ ಪಾನುಗಳನ್ನು ಸರಿ ನೋಡು.

ಸ್ಕೋಚ್ಲಂದು ಇಂಗ್ಲಂದು ಮುಂತಾದ ಸ್ಥಳಗಳಲ್ಲಿ ಸುವಾರ್ತಾಪ್ರಸಂಗಿಕರಾದ ಬೋಧಕರಿರುತ್ತಿದ್ದರಲ್ಲ? ಈ ಬೋಧಕರಿಂದ ಉತ್ಪನ್ನರಾದ ಸೌವಾರ್ತಿಕರು ಅಂದರೆ ಅಪೊಸ್ತೊಲಿಕ ಕಾಲದವರ ಹಾಗೆ ಕ್ರಿಸ್ತನ ಸುವಾರ್ತೆಗೆ ಮಾತ್ರ ಅನುಸರಿಸಿಕೊಳ್ಳುವಂಥ ಕ್ರೈಸ್ತರು[1] ಔಗುಸ್ತೀನ ಬೊನಿಫಕಿಯರ ಕಾಲದಲ್ಲಿ ಆಗಲಿ ಕಾಲಕ್ಕೀಚೆ ಆಗಲಿ ಮುಖ್ಯವಾಗಿ ಬಲಾತ್ಕಾರದಿಂದ ಬಹಿರಕ್ಕೆ ಪಪ್ಪಕರಾಗ ಬೇಕಾದಲ್ಲಿಯೂ ಹಾಗೆಯೇ ಬಹುಶಃ ಅಂತರಂಗದೊಳುಳಿದು ಬಂದಲ್ಲಿಯೂ ನಿಜವಾದ ಕ್ರೈಸ್ತ ಸಭೆಯು ಇದ್ದೇ ಇರುತ್ತಿತ್ತು. ಕಾಲಗತಿಯಿಂದ ಈ ನಿಜ ಕ್ರೈಸ್ತ ಸಭೆಯು ತಿರಿಗಿ ಹೆಚ್ಚು ಹೆಚ್ಚಿಗೆ ಕಲ್ಯಾಣಕರ ಅರುಣೋದಯದಂತೆ ಗೋಚರಿಸ ಹತ್ತಿತು. ಅದನ್ನೀಗ ಸ್ವಲ್ಪ ವಿವರಿಸೋಣ.

ಸ್ಕೋಚ್ಲಂದಿನ ಒಬ್ಬ ಸೌವಾರ್ತಿಕ ಬೋಧಕನ ಶಿಷ್ಯರಲ್ಲೊಬ್ಬನಾದ ಸ್ಪಾನಿಯ ದೇಶದ ಕ್ಲಾದಿಯನೆಂಬವನು ಕ್ರಿ. ಶ. 817ನೇ ವರುಷ ತೂರೀನ ಪಟ್ಣದಲ್ಲಿ ಅಧ್ಯಕ್ಷನಾದನು; ಇದು ಈತಲಿಯದ ಉತ್ತರಪಶ್ಚಿಮ ಭಾಗದಲ್ಲಿರುವ ಪಿಯೆಮೊಂತೆ ಎಂಬ ಶೀಮೆಯ ಪ್ರಧಾನ ಪಟ್ಣವು. ಮೊದಲಲ್ಲಿ ಅವನು ದೊಡ್ಡ ಕರ್ಲ ಕೈಸರನ ಕುಮಾರನೂ ಉತ್ತರಾಧಿಕಾರಿಯೂ ಆದ ಸದ್ಭಕ್ತನೆಂಬ ಲೂದ್ವೀಗನ[2] ಸ್ವಕೀಯ ಪ್ರಸಂಗಿಕನಾಗಿದ್ದನು. ಈ ಲೂದ್ವೀಗನು, ತನ್ನ ಪಿತನ ಹಾಗೆ[3], ಮುಖ್ಯವಾಗಿ ಈತಲಿಕ ಸಭೆಗಳಲ್ಲಿ ಒಂದು ಮಹಾ ನದಿಯಂತೆ ಹೆಚ್ಚಾಗಿ ಬೀಳುತ್ತಿರುವ ಮೂರ್ತಿಪೂಜೆಗೆ ಅಡ್ಡಗಟ್ಟುವವನಾಗಿ, ಅಲ್ಲಿ ಸೌವಾರ್ತಿಕ ಕ್ರೈಸ್ತರನ್ನು ಸಭೋದ್ಯೋಗಗಳಲ್ಲಿರಿಸಲಿಕ್ಕೆ ಪ್ರಯತ್ನ ಪಡುತ್ತಿದ್ದನು. ಹೀಗಿರಲಾಗಿ ಅವನು ತನ್ನ ಪ್ರಿಯ ಪ್ರಸಂಗಿಕನಾದ ಕ್ಲಾದಿಯನನ್ನು ತೂರೀನದ ಅಧ್ಯಕ್ಷತೆಗೆ ನೇಮಿಸುವದಕ್ಕೆ ತನ್ನ ಸ್ವಾರ್ಥವನ್ನಾದರೂ ಅಲ್ಲಗಳೆದನು. ಕ್ಲಾದಿಯನ ಮುಖ್ಯ ಅಭ್ಯಾಸವು ಪರಿಶುದ್ಧ ಬರಹದ್ದೇ; ಅವನು ಅದರ ವಿಷಯ ರಚಿಸಿದ ಅನೇಕ ಟೀಕಾಗ್ರಂಥಗಳಲ್ಲಿ, ವಿಶ್ವಾಸದಿಂದ ಮಾತ್ರ ನೀತಿ ಬರುತ್ತದೆಂಬ ಸುವಾರ್ತೆಯನ್ನು ಅವನು ಅಖಂಡವಾಗಿ ತಿಳಿದನುಭವಿಸುತ್ತಿದ್ದನೆಂತ[4], ಸ್ಪಷ್ಟವಾಗಿ ಕಾಣುತ್ತದೆ. ಅವನು ಪ್ರಚಂಡ ಧೈರ್ಯದಿಂದ ಸಂತರ ಮತ್ತು ಮೂರ್ತಿಗಳ ಪೂಜೆಗೆ ವಿರೋಧಿಸುತ್ತಾ, ರೋಮದಲ್ಲಿಯ ಪೇತ್ರನ ಸಮಾಧಿ ಎಂಬದಕ್ಕೆ ಮಾಡುವ ಯಾತ್ರೆಗಳು ನಿಷ್ಪ್ರಯೋಜಕವೆಂತ, ಸಾರುತ್ತಾ ಇದ್ದನು; ಅದಲ್ಲದೆ—ಬಂಧಮೋಕ್ಷಾಧಿಕಾರವು ಕ್ರಿಸ್ತನ ನಿಜ ಸೇವಕರಾದವರೆಲ್ಲರಿಗೂ ಒಪ್ಪಿಸಲಾಯಿತು[5]; ಒಂದು ಅಪೊಸ್ತೊಲಿಕ ಪೀಠದಲ್ಲಿ (ಅಂದರೆ ಮುಂಚೆ ಅಪೊಸ್ತಲರಲ್ಲೊಬ್ಬನು ಇದ್ದ ಸ್ಥಳದಲ್ಲಿ) ಕೂತಿರುವವನಲ್ಲ, ಒಬ್ಬ ಅಪೊಸ್ತಲನ ಕಾರ್ಯಗಳ

1) 40, 163, 266, 286, 302, 304, 367ನೇ ಪಾನು. 2) 321ನೇ, 322ನೇ ಪಾನು. 3) 340ನೇ ಪಾನು. 4) 368ನೇ ಪಾನು ಸರಿ ನೋಡು. 5) 70, 167, 279ನೇ ಪಾನು.

ನ್ನು ನಂಬಿಕೆಯಿಂದ ನಡಿಸುವಂಥವನೇ ಅಪೊಸ್ತೊಲಿಕ ಪುರುಷನು; ಹಾಗೆ ನಡಿಸದಂಥವನಿಗೆ, ಮೋಶೆಯ ಪೀಠದ ಮೇಲೆ (ಕಪಟಿಗಳಾದ) ಶಾಸ್ತ್ರಿಗಳೂ ಫರಿಸಾಯರೂ ಕೂತು ಕೊಂಡಿದ್ದಾರೆ ಎಂದು, ಕರ್ತನುಚ್ಚರಿಸಿದ ವಾಕ್ಯವು[1] ತಾಗುತ್ತದಷ್ಟೇ; ಕರ್ತನು ಮತ್ತಾಯನ ಸುವಾರ್ತೆಯ 16ನೇ ಸಂಧಿಯಲ್ಲಿ—ನೀನು ಪೇತ್ರನು, ಮತ್ತು ಈ ಬಂಡೆಯ ಮೇಲೆ ನನ್ನ ಸಭೆಯನ್ನು ಕಟ್ಟುವೆನು ಎಂದು, ಮುಂತಾಗಿ ನುಡಿದ್ದು ಪೇತ್ರನ ಭೂಜೀವನದ ಕಾಲಕ್ಕೆ ಮಾತ್ರವೇ ಸಂಬಂಧಿಸುತ್ತದೆ; ಮತ್ತೆ ಪೇತ್ರನಿಗೆ ಯೆಹೂದ್ಯಕ್ರೈಸ್ತರ ಮೇಲೆ ಮಾತ್ರ ಪ್ರಧಾನತ್ವವು ದೊರಕಿತು, ಪೌಲನಿಗೆ ಗಲತರ ಪತ್ರಿಕೆಯ 2ನೇ ಸಂಧಿಯ 7ನೇ ವಚನದ ಪ್ರಕಾರ ಪರಜನಾಂಗಕ್ರೈಸ್ತರ ಮೇಲಿನದು ದೊರಕಿತೆಂಬದು ಅವನ ಬೋಧನಾಭಿಪ್ರಾಯವು[2]. ಅದು ಕಾರಣವಾಗಿ ಪಪ್ಪಕರು ಬಹಳ ಶಿಟ್ಟು ತಾಳಿ, ವಿವಿಧ ಗ್ರಂಥಗಳಿಂದ ಅವನಿಗೆದುರಿಸಿದರು; ಆದರೆ ಹಿಂಸಿಸಲಿಕ್ಕೆ ಅವರಿಗೆ ಇಂಬು ಶಿಕ್ಕಲಿಲ್ಲ, ಯಾಕಂದರೆ ಲೂದ್ವಿಗ ಕೈಸರನು ಅವನನ್ನು ಕಾಪಾಡುತ್ತಿದ್ದನು. ಕ್ಲಾದಿಯನು ತನ್ನ ಕ್ರಿಸ್ತನಾಥನಿಗೆ ಬಹಳ ವರುಷ ಚನ್ನಾಗಿ ಸೇವಿಸುತ್ತಿದ್ದನಂತರ ಕ್ರಿ. ಶ. 839ನೇದಕ್ಕೆ ತನ್ನ ಅಧ್ಯಕ್ಷತಾಸ್ಥಳದಲ್ಲಿ ಶಾಂತಿಯಿಂದ ಪರಂಧಾಮವನ್ನೈದಿದನು.

ಅವನ ಸೌವಾರ್ತಿಕ ವೃತ್ತಿಯು ನಿಷ್ಫಲವಾಗಲಿಲ್ಲ; ಅವನ ಸುವಾರ್ತಾಪ್ರಸಂಗವು ಕೇಳಿಸಿದ್ದಲ್ಲಿ ಅದು ಒಳ್ಳೇ ಬೀಜದಂತೆ ಎಡೆ ಬಿಡದೆ ಬೆಳೆಯುತ್ತಿತ್ತು. ಅದರಿಂದ ಅಭಿವೃದ್ಧಿಯಾದ ಸೌವಾರ್ತಿಕ ಕ್ರೈಸ್ತರ ಸಭೆಯು ಪಪ್ಪಕರೆಂಬ ಶತ್ರುಗಳ ಕಣ್ಣಿಗೆ ಹೆಚ್ಚು ಕಡಿಮೆ ಮರೆಗೊಂಡಿರ ಬೇಕಾದರೂ ಅದು ಬಾಳುತ್ತಲೇ ಇರುತ್ತಿತ್ತು. ಆ ಕ್ರೈಸ್ತರದೊಂದು ಪಾಲು ಕ್ರಿ. ಶ. 1022ನೇ ವರುಷ ಪಿಯೆಮೊಂತೆಗೆ ಹತ್ತರವಾದ ಫ್ರಂಚಿನ ದಕ್ಷಿಣ ಭಾಗದಲ್ಲಿ ಗೋಚರವಾಗಿ, ಪಪ್ಪಕರಿಂದ, ಪೂರ್ವದಲ್ಲಿ ಲಿಯೋನ್ ಮತ್ತು ವಿಯೆನ್ ಎಂಬ ಪಟ್ಣಗಳ ಸೌವಾರ್ತಿಕರೋಪಾದಿ[3], ತಮ್ಮ ಸೌವಾರ್ತಿಕ ವಿಶ್ವಾಸಾರ್ಥಕ್ಕೋಸ್ಕರ ಹಿಂಸೆ ಪಟ್ಟಿತು; ಆ ಸಮಯ ಬಡ ದೊಡ್ಡ ಪ್ರಜೆಯವರಲ್ಲದೆ ಅನೇಕ ಸತ್ಪಂಡಿತರಾದ ಬೋಧಕರು ಸಹ ಆ ಸತ್ಕ್ರೈಸ್ತರಲ್ಲಿ ಶೋಭಿಸಿದರು. 3 ವರುಷಕ್ಕೀಚೆ ಅವರಿಗಲ್ಲಿ ತಿರಿಗಿ ಹಿಂಸೆಯಾಯಿತು; ಆದರೆ ಅವರಲ್ಲಿ ಯಾರೂ ಪಪ್ಪಕತ್ವವನ್ನವಲಂಬಿಸಲಿಲ್ಲ. 5 ವರುಷಕ್ಕೀಚೆ ಅವರಿಗೆ ತೂರೀನದಲ್ಲಿ ಪಪ್ಪಕರಿಂದ ಬಹಳ ಉಪದ್ರವವು ಬಂತು. ಬಳಿಕ 74 ವರುಷದಿತ್ತ ಕಡೆ ಕ್ರಿ. ಶ. 1104ನೇದರಿಂದ 1142ನೇದರ ವರೆಗೆ ಅವರು ಫ್ರಂಚಿನಲ್ಲಿ ಬೈಲಿಗಿಳಿದು, ಪ್ರಜೆಯೊಳಗೆ ಪ್ರಸಂಗಿಸಲೆಸಗಿ, ಇದು ಕೆಲವು ಕಾಲದ ತನಕ ಪಪ್ಪಕತ್ವವನ್ನು ತ್ಯಜಿಸಿ ಬಿಡುವ ಹಾಗೆ ಮೂ

1) ಮತ್ತಾ. 23, 2. 2) 45ನೇ ಪಾನು ಸರಿ ನೋಡು; ಅಪೊ. ಕ್ರಿ. 9, 15; ಗಲ. 2, 7. 8.
3) 14ನೇ ಸಂಧಿ.

ಲಕರಾದರು. ಅದೇ ವೇಳೆ ಬ್ರೆಸ್ಕಿಯ ಪಟ್ಣದ ಆ ಆರ್ನೊಲ್ಡನೆಂಬವನ[1] ಪ್ರಸಂಗದ ದೆಸೆಯಿಂದ ಈತಲಿಯದಲ್ಲಿ ಹೇರಳರು ಅವರನ್ನೊಡಗೂಡಿದರು. ಆದರೂ ಅಲ್ಲಲ್ಲಿಯ ಸೌವಾರ್ತಿಕರು ಮಹಾ ಬಲಾತ್ಕಾರಕ್ಕೆ ಸೋತು, ಈಚೆ ತಿರಿಗಿ ಕ್ರಿ. ಶ. 1170ನೇ ವರೆಗೆ 30 ವರುಷ ಅಂತರಂಗದಲ್ಲಿ ಬದುಕ ಬೇಕಾಯಿತು. ಆವಾಗ ಅನೇಕ ಮಂದಿ ಆಧ್ಯರೂ ಪ್ರೀಸ್ತರೂ ಅವರನ್ನು ಶೇರುತ್ತಿದ್ದದು ಮಾತ್ರವಲ್ಲದೆ ಪ್ರಜೆಎಲ್ಲವೂ ಕಂಡಲ್ಲಿ ಅವರಿಗೊಲಿದು, ಉತ್ತಮ ಪುರುಷರೆಂದು[2], ಮಾನ ತೋರಿಸುತ್ತಿತ್ತು.

ಪಿಯೆಮೊಂತೆ ಶೀಮೆಗೆ ಸಮಿಾಪವಾದ ಆ ಫ್ರುಂಚಿನ (ಗಲ್ಲಿಯದ) ದಕ್ಷಿಣ ಭಾಗದಲ್ಲಿ ಲಿಯೋನೆಂಬ ಆ ಪ್ರಖ್ಯಾತ ಪಟ್ಣವು ಅದೆ. ಅದರಲ್ಲಿ ಫ್ರುಂಚಿನ ಪ್ರಥಮ ಸೌವಾರ್ತಿಕ ಸಭೆ ಇತ್ತಲ್ಲ[3]? ಕ್ರಿ. ಶ. 1160ನೇ ವರುಷ ಅಲ್ಲಿ ಪೆತ್ರ ವಲ್ದನೆಂಬ ಒಬ್ಬ ಧನವಂತ ಗೃಹಸ್ಥನಿದ್ದನು. ಅವನು ಸೌವಾರ್ತಿಕ ಕ್ರೈಸ್ತರ ಗೆಳೆಯನು; ಹೀಗಿರುವದರಿಂದ, ಪಪ್ಪಕ ಸಭೆಯಲ್ಲಿ ಬಹಳ ಅಂಧಕಾರವಿದೆ ಎಂದು[4], ಅವನಿಗೆ ತಿಳಿಯಿತು. ಒಂದಾನೊಂದು ದಿವಸ ಅವನು ತನ್ನ ಗೆಳೆಯರಲ್ಲಿ ಹಲವರ ಸಂಗಡ ಊಟದಲ್ಲಿ ಕೂತಿರುವೆಡೆ ರೋಮಕ ಸಭೆಯೊಳಗಿನ ದುಃಖಕರವಾದ ಶಿಥಿಲತ್ವದ ಮಾತು ಸಹ ನಡೆಯುತ್ತಿರಲು, ಆ ಗೆಳೆಯರಲ್ಲೊಬ್ಬನು ಅಂಥಾ ಶಿಥಿಲತ್ವಕ್ಕೆ ಬಹು ವ್ಯಸನ ಪಟ್ಟು, ಎದೆ ಒಡೆದು, ಫಕ್ಕನೆ ನೆಲಕ್ಕೆ ಬಿದ್ದು, ಸತ್ತನು. ಅದಕ್ಕಾಗಿ ಎಲ್ಲರೂ, ಹೆಚ್ಚಾಗಿ ಪೆತ್ರ ವಲ್ದನು, ಕಂಗೆಟ್ಟು, ಮಹಾಚಿಂತಾಗ್ರಸ್ತರಾದರು. ಅಂದಿನಿಂದ ಪೆತ್ರ ವಲ್ದನು ತನ್ನ ಪ್ರಾಣದ ರಕ್ಷಣ ಘಳಿಸಿ ಕೊಳ್ಳುವದಕ್ಕೆ ಅಧಿಕಾಧಿಕ ಯತ್ನ ಮಾಡಿ, ಪರಿಶುದ್ಧ ಬರಹವನ್ನು ಚನ್ನಾಗಿ ತಿಳು ಕೊಳ್ಳಲಪೇಕ್ಷೆಗೊಂಡನು. ಆದರೆ ಅವನ ಬಳಿಯಲ್ಲಿ ಅದರದೊಂದು ಪ್ರತಿ ಇರಲಿಲ್ಲ; ಮತ್ತು ಅಂಥಾದೊಂದು ಸಂಪಾದಿಸಿ ಕೊಳ್ಳುವದು ಬಹಳ ಕಷ್ಟ. ಹ್ಯಾಗಂದರೆ, ಅಂದು ಪರಿಶುದ್ಧಬರಹಾಧ್ಯಯನನಿಷೇಧವು[5] ಪಪ್ಪನಿಂದ ಇನ್ನು ಹೊರಡದಿದ್ದರೂ ದೇವವಾಕ್ಯಗ್ರಂಥಗಳ ಪ್ರತಿಗಳು ಬಹು ಅಮೂಲ್ಯ; ಯಾಕಂದರೆ ಛಾಪೆ ಹಾಕುವ ವಿದ್ಯೆಯು ಆಗಲೂ ತಿಳಿಯ ಬಾರದಿದ್ದು, ಸಕಲ ಪ್ರತಿಗಳನ್ನು ಕೈಯಿಂದಲೇ ಬರೆಯ ಬೇಕಾಗಿತ್ತು; ಅದು ಹೊರ್ತಾಗಿ ಲತೀನ ಭಾಷೆಯದೊಂದು ಪ್ರತಿ ಅವನಿಗಿದ್ದಿದ್ದರೂ ಆ ಭಾಷೆಯು ಅವನಿಗರಿವಿಲ್ಲದ್ದರಿಂದ ಕೆಲಸಕ್ಕೆ ಬರುತ್ತಿದ್ದಿಲ್ಲ. ಇಂತಿರಲಿಕ್ಕೆ ಅವನು ತನ್ನ ಮಿತ್ರರಾದ ಇಬ್ಬರು ಸಭೋದ್ಯೋಗಿಗಳ ಹತ್ತರ ಹೋಗಿ—ದಯೆ

---

1) 355, 366ನೇ ಪಾನು. 2) bonnes gens, boni homines. 3) 87ನೇ ಪಾನು.
4) 364ನೇ, 365ನೇ, 366ನೇ, 367ನೇ ಪಾನು ಸಹ ನೋಡು. 5) 357, 358ನೇ ಪಾನು.

ಮಾಡಿ, ತನಗೆ ಹ್ಯಾಗಾದರೂ 4 ಸುವಾರ್ತೆ ಮುಂತಾದ ಕೆಲವು ಅತ್ಯವಶ್ಯವಾದ ದೇವವಾಕ್ಯಭಾಗಗಳನ್ನೂ ಮುಖ್ಯ ಸಭಾಪಿತರ ಗ್ರಂಥಗಳ ಸಾರವನ್ನೂ ಫ್ರಂಚ ಭಾಷಾಂತರ ಗೈದು, ಬರೆದು, ಕೊಡ ಬೇಕು; ಅದಕ್ಕೆ ತಕ್ಕ ಕಾಣಿಕೆ ಸಹ ನಿಮಗೆ ಶಿಕ್ಕುವದೆಂದು, ಬಿನ್ನವಿಸಲು, ಅವರು ಪ್ರೇಮದಿಂದ ಒಡಂಬಟ್ಟು, ಬೇಕಾದದನ್ನೆಲ್ಲಾ ಬರೆದು, ಕೊಡೋಣ, ಪೆತ್ರ ವಲ್ದನು ಅತಿ ಕುತೂಹಲದೊಡನೆ ಆ ಗ್ರಂಥಗಳನ್ನೋದಿ ಓದಿ, ಬಾಯಿಪಾಠ ಬರುವ ತನಕ ಬಿಡಲಿಲ್ಲ.

ಬಳಿಕ ಅವನ ಹೃದಯ ತುಂಬಿದ ಸುವಾರ್ತಾಮೃತವನ್ನು ತನ್ನೊಳಗೆ ಮುಚ್ಚಿಕೊಳ್ಳುವದು ಅವನಿಗೆ ಅಸಾಧ್ಯವಾಯಿತು; ಆದ್ದರಿಂದ ಅವನು ಪರಿಶುದ್ಧ ಸುವಾರ್ತಾರ್ಥವನ್ನು ವಿಶೇಷವಾಗಿ ಬಡ ಪ್ರಜೆಯಲ್ಲಿ ಸಾರುವದಕ್ಕೆ ಒಂದು ಸಮಾಜ ಸ್ಥಾಪಿಸಿ, ತನ್ನ ದೇವವಾಕ್ಯಭಾಷಾಂತರಗಳ ಹೇರಳ ಪ್ರತಿಗಳನ್ನೆತ್ತಿಸುವದಕ್ಕೆ ಸ್ವಧನದಲ್ಲಿ ಹೆಚ್ಚು ವೆಚ್ಚ ಗೈದು, ಮಿಕ್ಕಿದ್ದನ್ನು ಬಡವರಿಗೆ ತ್ಯಾಗ ಮಾಡಿ, ತಾನು ಆ ಸಮಾಜದ ಅಭಿಪ್ರಾಯದಂತೆ ಊರೂರಿಗೆ ಹೋಗುತ್ತಾ ದೇವಾಲಯಗಳಲ್ಲಿಯೂ ಸುವಾರ್ತೆ ಪ್ರಸಂಗಿಸಿ ಸ್ಥಾಪಿಸಲಿಕ್ಕೆ ಹತ್ತಿದನು. ಆಗ ಸರ್ವ ಸ್ಥಿತಿಯವರ, ಮುಖ್ಯವಾಗಿ ಒಕ್ಕಲಿಗರ, ದೊಡ್ಡ ಸಮುದಾಯವು ಅವನಲ್ಲಿ ನೆರೆಯುತ್ತಿದ್ದು, ಅಭಿಲಾಷೆಯಿಂದ ಆಲೈಸುತ್ತಿರುವದು. ಪೆತ್ರ ವಲ್ದನಿಗೆ ಸುವಾರ್ತಾಪ್ರಸಂಗದಲ್ಲಿ ಬೇಗ ಸಾಕಷ್ಟು ಮಂದಿ ಸಹಾಯಕರು ದೊರಕಿದರು. ಆದರೆ ಅವನ ಪ್ರಸಂಗ ಕೇಳಿದ ಕೆಲವರು ಕಠಿಣ ಪಪ್ಪಕರು ಲಿಯೋನ್ ಪಟ್ಣದ ಪ್ರಧಾನಾಧ್ಯಕ್ಷನಿಗೆ ಅದನ್ನೆಲ್ಲಾ ತಿಳಿಸುತ್ತಲೇ ಇವನು ಪೆತ್ರ ವಲ್ದನಿಗೂ ಅವನ ಮಿತ್ರರಿಗೂ—ಉದ್ಯೋಗಪ್ರತಿಷ್ಠೆ ಇಲ್ಲದಂಥ ನೀವು ಇನ್ನೂ ಪ್ರಸಂಗಿಸ ಬಾರದು, ದೇವವಾಕ್ಯದ ಟೀಕೆ ಮಾಡ ಬಾರದು! ಎಂದು, ಅಪ್ಪಣೆ ಕೊಟ್ಟನು. ಆದರೆ ಇವರು ಅಪೊಸ್ತಲರಂತೆ, ಮನುಷ್ಯರಿಗಿಂತ ದೇವರಿಗೆ ಹೆಚ್ಚಾಗಿ ವಿಧೇಯರಾಗಿರ ಬೇಕೆಂದು[1], ನುಡಿದು, ಎಂದಿನಂತೆ ಎಲ್ಲಿಯೂ ಸುವಾರ್ತೆ ಸಾರುತ್ತಲೇ ಇದ್ದರು. ಅದಕ್ಕೋಸ್ಕರ ಲಿಯೋನಿನ ಪಪ್ಪಕ ಸಭೋದ್ಯೋಗಿಗಳು ಆ ಸೌವಾರ್ತಿಕ ಕ್ರೈಸ್ತರಲ್ಲಿ ಶ್ರೇಷ್ಠರನ್ನು ಪಟ್ಣದೊಳಗಿಂದ ಓಡಿಸಿ ಬಿಟ್ಟರು. ಆ ಸಮಯ 3ನೇ ಅಲೆಕ್ಸಂದರನೆಂಬವನು[2] ಪಪ್ಪನಾಗಿದ್ದನು. ಇವನು ಕ್ರಿ. ಶ. 1179ನೇ ವರುಷ ಪೆತ್ರ ವಲ್ದನನ್ನು, ರೋಮಪುರದ ಒಂದು ಸಭಾಸಂಘಕ್ಕೆ ಬರ್ರಿ! ಎಂತ, ಕರೆಸಲು, ಅವನು, ಬೇರೆ ಪ್ರಕಾರ ನಿರ್ವಾಹವಿಲ್ಲವೆಂದು, ತನ್ನ ಗೆಳೆಯರಲ್ಲಿ ಕೆಲವರನ್ನು ಕಳುಹಿಸಿ, ತನ್ನ ದೇವವಾಕ್ಯಭಾಷಾಂತರದ್ದೊಂದು ಪ್ರತಿಯನ್ನು ಪಪ್ಪನಿಗೆ ಕಾಣಿಸಿ, ತನ್ನ ಸಮಾಜದ ಉದ್ದಿಶ್ಯವನ್ನು ಪೂರಾ ತಿಳಿಸಿದನು. ತದನಂತರ ಪಪ್ಪನು ವಿಚಾರಣಕ್ಕಾಗಿ ಪ್ರೇಷಿಸಿದ್ದ ಒಬ್ಬ ಸಭೋದ್ಯೋಗಿ

1) ಅಪೊ. ಕ್ರಿ. 5, 29. 2) 334ನೇ ಪಾನು.

ಯು ವಲ್ಡೆನ್ಸರೆಂಬ ಹೆಸರು ರೂಢಿ ಬಿದ್ದಿದ್ದ[1] ಆ ಪೆತ್ರ ವಲ್ದನ ಗೆಳೆಯರನ್ನು ನೋಡಿದ ಕ್ಷಣವೇ ಮಂದ ಗರ್ವದಿಂದ ಅವರನ್ನು ತುಚ್ಛೀಕರಿಸಿ, ಬಂದು, ಪಪ್ಪನಿಗೆ ತನ್ನ ಸ್ವಾರ್ಥವುಳ್ಳ ನಿರ್ಣಯ ವಿವರಿಸಲು, ಇವನು, ವಲ್ಡೆನ್ಸರು ಹ್ಯಾಗೂ ಪ್ರಸಂಗಿಸ ಬಾರದೆಂದು, ಖಂಡಿತವಾಗಿ ವಿಧಿಸಿದನು. ಆದಾಗ್ಯೂ ಆ ವಲ್ಡೆನ್ಸರು ಮುಂಚಿನ ಹಾಗೆಯೇ ತಮ್ಮ ಸೌವಾರ್ತಿಕ ವೃತ್ತಿ ನಡಿಸುವ ನಿಮಿತ್ತ 3ನೇ ಲೂಕಿಯ ಪಪ್ಪನು ಕ್ರಿ. ಶ. 1184ನೇ ವರುಷ, ಕಥರರೆಂದು, ಅವರೆಲ್ಲರ ಮೇಲೆ ಬನ್ನು[2] ಹಾಕಿದನು.

ಇದು ಮಹಾ ಅನ್ಯಾಯವಲ್ಲವೋ? ಆದರೆ ಹೀಗಿರಲಿಕ್ಕೆ, ಸೌವಾರ್ತಿಕ ಕ್ರೈಸ್ತರಾದ ಆ ವಲ್ಡೆನ್ಸರು ದೇವವಾಕ್ಯದ ಪ್ರಕಟನಗ್ರಂಥದ 13ನೇ ಸಂಧಿಯಲ್ಲಿ 11ನೇ ವಚನ ಹಿಡಿದಿರುವ ದುಷ್ಟ ಮೃಗದ ವರ್ಣನೆಯನ್ನು ಪಪ್ಪರಿಗೆ ತಾಗಿಸಿದ್ದಕ್ಕೆ ಆಶ್ಚರ್ಯವೇನು?

ಆ ವಲ್ಡೆನ್ಸರು ಅಪೊಸ್ತೊಲಿಕ ಕಾಲದ ತಮ್ಮ ಸಹೋದರಕ್ರೈಸ್ತರಂತೆ ಕ್ರಿಸ್ತನ ಸುವಾರ್ತೆಗೆ ಮಾತ್ರ ಅನುಸರಿಸುವಂಥವರಾಗಿ, ಪಪ್ಪಕರ ಕರ್ಮಠ ಮಾರ್ಗದ ಆ ಪಾಷಂಡಗಳನ್ನೆಲ್ಲ[3] ವಿಸರ್ಜಿಸಿ, ತಮ್ಮ ಒಬ್ಬನೇ ಹೊಣೆಗಾರನಾಗಿದ್ದ ಯೇಸು ಕ್ರಿಸ್ತನು ಪಟ್ಟ ವಿಮೋಚನಕರವಾದ ಮರಣದ ಮೇಲೆಯೂ ಸಲ್ಲಿಸಿದ ನೀತಿಯ ಮೇಲೆಯೂ ಮಾತ್ರ ನಂಬಿಗೆ ಇಡುವಂಥವರೇ. ದೇವರ ವಾಕ್ಯವು ಅವರ ವಿಶ್ವಾಸದ ಒಂದೇ ಅಸ್ತಿವಾರ. ಅವರೊಳಗಿನ ಸಾಧಾರಣ ಹೆಣ್ಣು ಗಂಡು ಸಭ್ಯರಾದರೂ ದೇವವಾಕ್ಯಾಧ್ಯಯನದಲ್ಲಿ ಅತ್ಯಾಸಕ್ತರಾದ ಕಾರಣ ಅವರಲ್ಲಿ ಹಲವರಿಗೆ ಪೂರ್ಣ ದೇವವಾಕ್ಯವು ಬಾಯಿಪಾಠ ಬಂದಿರುವದು. ಹೀಗಿರುವದರಿಂದ ಪಪ್ಪಕ ಸಭೋದ್ಯೋಗಿಗಳು ಅವರ ಸಂಗಡ ತರ್ಕಿಸಲಂಜಿದ್ದಲ್ಲದೆ ಆಗಿಂದಾಗ್ಯೆ ತಾವು ಪಾಷಂಡಿಗಳಿಗೆದುರಿಸ ಬೇಕಾದ ಸಮಯ ಅವರ ಸಹಾಯ ತೆಕ್ಕೊಳ್ಳುತ್ತಿದ್ದರು[4]. ವಲ್ಡೆನ್ಸರು ನಿರ್ಮಿಸಿದ ತಮ್ಮ ಬಹಿಃಸಭೆಯಲ್ಲಿ ಅಧ್ಯಕ್ಷರು ಹಿರಿಯರು ಸೇವಕರು ಎಂಬ ಉದ್ಯೋಗಿಗಳಿರುವರು; ಸಭ್ಯರೂ ಸಭೋದ್ಯೋಗಿಗಳೂ ಕೂಡುವ ಸಂಸದಸ್ಸುಗಳೆಂಬ ಸಂಘಗಳಾಗುವವು; ಸಭೋದ್ಯೋಗಿಗಳು ಮುಖ್ಯವಾಗಿ ದೇವವಾಕ್ಯ ಬಲ್ಲವರಾಗಿರ ಬೇಕು; ಸಭ್ಯಾತ್ಮಪರಿಪಾಲನ ಮಾಡಲಿಚ್ಛೈಸುವ ಯಾವನೊಬ್ಬನೂ ಕ್ರಿಸ್ತನನ್ನು ತನ್ನೊಳಗೆ ವಹಿಸಿ ಕೊಂಡು[5], ತನ್ನ ನಡತೆಯಲ್ಲಿ ಅವನ ರೂ

---

1) ಕೆಲವು ಗ್ರಂಥಗಳಲ್ಲಿ, ವಲ್ಡೆನ್ಸರೆಂಬ ಹೆಸರು ಪೆತ್ರ ವಲ್ದನ ಮೇಲೆಯೇ ಹುಟ್ಟಿತೆಂತ, ಹೇಳಿದೆ; ಬೇರೆ ಅವುಗಳಲ್ಲಿ—ಹಾಗಲ್ಲ, ಆ ಹೆಸರು ಸೌವಾರ್ತಿಕರಲ್ಲಿ ಮುಂದಾಗಿ ಹುಟ್ಟಿತ್ತು; ಪೆತ್ರ ವಲ್ದನು ಅಂಥವರ ಮಿತ್ರನಾದ್ದರಿಂದಲೇ ಅವನಿಗೆ ವಲ್ದನೆಂಬ ಅಡ್ಡಹೆಸರು ಬಂದಿತ್ತೆಂತ, ಉಂಟು.
2) 351, 352ನೇ ಪಾನು. 3) 46ನೇ ಸಂಧಿ. 4) Guilelmus de Podio Laurentii.
5) 131, 287ನೇ ಪಾನು ಸರಿ ನೋಡು.

ಪವೇ ಮೂಡಿಸ ಬೇಕೆಂಬದು ವಲ್ದೆನ್ಸರ ನಿಶ್ಚಲ ನಿರ್ಣಯಾರ್ಥವು. ಅವರು ಕ್ರಿಸ್ತನ ಮತ್ತು ಅಪೊಸ್ತಲರ ಮತ್ತು ಪೂರ್ವ ಸಭಾಪಿತರ ವಾಕ್ಯಗಳನ್ನು ವಿಷಯ ಮಾಡಿ, ಕಾಲೋಚಿತಕ್ಕಾಗಿ ಯಾವಾಗಲೂ ಎಲ್ಲಿಯೂ ಸಾರುತ್ತಿದ್ದದೇನಂದರೆ—ನಿರ್ಮಲತ್ವ ನಮ್ರತೆ ಮೊದಲಾದ ಸದ್ಗುಣಗಳಿಗೆ ಹಿಂದಟ್ಟಿ, ದುರ್ಗುಣಗಳಿಗೆ ದೂರವಾಗಿರ್ರಿ! ಎರಡು ಮಾರ್ಗಗಳೇ ಮಾತ್ರ ಅವೆ; ಸ್ವರ್ಗಕ್ಕೆ ಹೋಗುವಂಥಾದ್ದು ಒಂದು, ನರಕಕ್ಕೆ ಹೋಗುವಂಥಾದ್ದು ಮತ್ತೊಂದು!—ವಲ್ದೆನ್ಸರ ಬೋಧನೆಯು ಶುದ್ಧವಾಗಿದ್ದದಲ್ಲದೆ ಅವರ ಚರ್ಯೆಯು ಸಹ ಅದಕ್ಕನುಕೂಲವಾಗಿತ್ತು. ಅವರು ಜೀವಿತದ ಸರ್ವ ವಿಷಯದಲ್ಲಿ ಮಿತಸ್ಥರೂ ವಿನಯವುಳ್ಳವರೂ; ಅಗತ್ಯವಾಗಿ ಬೇಕಾದದೊಂದೇ ಸಾಕೆಂದು, ಐಶ್ವರ್ಯದ ವೈಭವಕ್ಕೆ ಹೇಸುತ್ತಿರುವರು; ಪ್ರಮಾಣವಿಡಲೊಲ್ಲದೆ, ಸುಳ್ಳಾಡುವದು ಮರಣಪಾತಕವೆಂದು, ಹೇಳಿ, ಕೊಟ್ಟ ಮಾತನ್ನು ತಪ್ಪಿಸದೆ, ಸರ್ವಥಾ ಸತ್ಯವಂತರಾಗಿರುವರು; ಆದ್ದರಿಂದ ಆಢ್ಯ ಸ್ಥಿತಿಯವರೊಡನೆಯೂ ಅವರಿಗೆ ಬಹಳ ಬಳಿಕೆ. ಅವರು ಸಂಭಾವಿತರಾಗಿ, ವಿವಾಹವನ್ನು, ಪರಿಶುದ್ಧವೆಂತ, ಮನ್ನಿಸಿ ಕೊಂಡು, ನೆರೆಯವರ ಸಂಗತಿಯಲ್ಲಿ ಅತಿರೇಕ ಮೃದುತ್ವ ಪ್ರೀತಿಗಳನ್ನು ತೋರಿಸುತ್ತಾ, ಶತ್ರುಗಳಿಗೂ ದೈನ್ಯ ಪಡುತ್ತಾ ಇರುವರು. ಅವರು ಮದ್ಯಪಾನ ಮಾಡದೆ, ಕೆಲಸದಲ್ಲಿ ಬಹು ಜಾಗರೂಕತೆಯುಳ್ಳವರಾದ ಕಾರಣ ಸಿತಿವಂತರು ತಮಗೆ ಆವಶ್ಯಕರಾದ ಸೇವಕರನ್ನು ಅವರೊಳಗಿಂದ ಹೆಕ್ಕಿ ಕೊಳ್ಳುತ್ತಿರುವರು. ಲೌಕಿಕ ಅಧಿಕಾರಕ್ಕೆ ಚನ್ನಾಗಿ ಒಳ ಪಡುತ್ತಿರುವರು; ಈ ಕಡೆಯ ವಿಷಯದಲ್ಲಿ 12ನೇ ಲೂದ್ವಿಗನೆಂಬ ಫ್ರಂಚಿನ ರಾಜನು ಕ್ರಿ. ಶ. 1501ನೇ ವರುಷ ಒಮ್ಮೆ ನುಡಿದ್ದೇನಂದರೆ—ಅವರು ನನಗಿಂತಲೂ ನನ್ನ ಬೇರೆ ಪ್ರಜೆಗಿಂತಲೂ ಉತ್ತಮರಾದ ಜನರು!—ಅವರ ಚರ್ಯೆಯು ನಿಷ್ಕಲಂಕವೇ!

ವಲ್ದೆನ್ಸರನ್ನು ಕುರಿತು ಹೇಳಿದ ಈ ಮಾತುಗಳು ಪಪ್ಪಕರ ಗ್ರಂಥಗಳಿಂದಲೇ[1] ತೆಗೆದವುಗಳು. ಪಪ್ಪನಿಗೂ ಅವನ ಧರ್ಮಕ್ಕೂ ವಿರೋಧಿಗಳಾಗಿದ್ದಾರೆಂಬದೊಂದೇ ಅಪರಾಧ ಅವರಲ್ಲಿ ಪಪ್ಪಕರಿಗೆ ತೋರುತ್ತಿರುವದು. ಇಂಥಾ ಸಜ್ಜನರ ಮೇಲೆಯೇ ಆ ಪಪ್ಪನು ಬನ್ನು ಜಡಿದನು. ಇದರಿಂದ ಆ ಕ್ರೈಸ್ತರು ಅಧಿಕಾರಸ್ಥರ ಮತ್ತು ಅಮಿತ್ರರ ದುರಪೇಕ್ಷೆಗೆ ಗುರಿಯಾದರು. ಪೆತ್ರ ವಲ್ದನೂ ಅವನ ಗೆಳೆಯರಲ್ಲನೇಕರೂ ಗಡಿ ದಾಟಿ ಹೋಗ ಬೇಕಾಗಿ, ಬೇರೆ ಬೇರೆ ಶೀಮೆಗಳಿಗೆ ಬೀರಿ ಹೋದರು. ಆದರೆ ದೇವರ ಸುಸಂಕಲ್ಪದ ಮೇಲೆ, ಅಪೊಸ್ತೊಲಿಕ ಕಾಲದಲ್ಲಿ ಆದಂತೆ[2], ಈಗಲೂ ಆ ಕ್ರೈಸ್ತರ ದೇಶನಿರ್ವಾಸದಿಂದ ಬಹಳ ಉಪಕೃತಿ ಬಂತು; ಯಾಕಂದ

1) Alanus de Ryssel, Yoonet, Claudius Seyffel, de Thou, Bernhard Girard, etc.

2) 31, 121ನೇ ಪಾನು.

ರೆ ಅವರು ಸುವಾರ್ತಾರ್ಥವನ್ನು ತಾವು ಶೇರಿದಲ್ಲೆಲ್ಲಿಯೂ, ಹೆಚ್ಚಾಗಿ ಗೆರ್ಮಾನಿಯದಲ್ಲಿ, ಪ್ರಸರಿಸುವವರಾದರು. ಅವರಿಗೆ ಅಲ್ಲಲ್ಲಿ ಸಹ ಉಪದ್ರವವೊದಗಿದರೂ ಕಾಲಕ್ರಮೇಣ ಪಪ್ಪಕ ಮತೋದ್ಯೋಗಿಗಳು ಅವರಲ್ಲಿ ಹೇರಳರನ್ನು ಕತ್ತಿಯಿಂದಾಗಲಿ ಬೆಂಕಿಯಿಂದಾಗಲಿ ಸಂಹರಿಸುತ್ತಾ ಇದ್ದರೂ ಅವರು ಬಿತ್ತುತ್ತಿರುವ ಒಳ್ಳೇ ಬೀಜವು ಹ್ಯಾಗೂ ಗೋಪ್ಯವಾಗಿ ಫಲಿತಕ್ಕೆ ಬಂತು. ಪೆತ್ರ ವಲ್ದನು ತಾನು ಓಡಿಹೋದ ಬೋಯಿಮೆನು ಶೀಮೆಯಲ್ಲಿ[1] ಸುಮಾರು 16 ವರುಷ ವಿಶೇಷ ತೊಂದರೆಯಿಲ್ಲದೆ ಬಹಳ ಆಶೀರ್ವಾದದೊಡನೆ ಸುವಾರ್ತಾಪ್ರಸಂಗದ ವೃತ್ತಿ ನಡಿಸುತ್ತಿದ್ದ ತರುವಾಯ ಕ್ರಿ. ಶ. 1200ನೇ ವರುಷದಲ್ಲಿ ಸಮಾಧಾನದಿಂದ ತೀರಿದನು.

ಅಷ್ಟರೊಳಗೆ ಕ್ರಿ. ಶ. 1198ನೇ ವರುಷ ಪಪ್ಪನಾದ ಆ 3ನೇ ಇನ್ನೊಕೆಂತನು[2] ವಲ್ದೆನ್ಸರ ಕಠಿಣ ವೈರಿಯಾಗಿದ್ದು, ತನ್ನ ಪೂರ್ವೋದ್ಯೋಗಿಗಳು 14 ವರುಷ ಅವರನ್ನು ಹಿಂಸಿಸುತ್ತಿದ್ದದ್ದು ಅನರ್ಥಕವಾಯಿತೆಂದು, ತಿಳಿದು, ಆರಂಭಕ್ಕೆ ಫ್ರುಂಚಿನವರಿಗೆ ಸಲುಗೆ ತೋರಿಸಿ, ಹೀಗೆ ಅವರನ್ನು ತನ್ನೊಳಗೆ ಮಾಡಿ ಕೊಳ್ಳುವ ಹಂಚಿಗೆ ಹಿಡುಕೊಂಡನು; ಆದಾಗ್ಯೂ ಆ ಕ್ರೈಸ್ತರು ತಮ್ಮ ಕ್ರಿಸ್ತನಾಯಕನನ್ನು ಬಿಡದೆ, ಎಂದಿನಂತೆ ಅವನ ಸುವಾರ್ತೆ ಘೋಷಿಸುತ್ತಿರಲಿಕ್ಕೆ, ಮುಂಚಿಗಿಂತ ಅಧಿಕಾಧಿಕವಾದ ಹಿಂಸೆ ಹತ್ತಿತು. ಫ್ರುಂಚಿನವರ ಮೇಲೆಯೂ, ಹಿಂದೆ ಸೂಚಿಸಿದ ಪ್ರಕಾರ, ಬೇರೆ ಸ್ಥಳದವರ ಮೇಲೆಯೂ ಬಂದ ಈ ಹಿಂಸೆಯೊಳಗೆ ವಲ್ದೆನ್ಸರು ಖಡ್ಗಪೆಟ್ಟುಗಳಲ್ಲಿಯೂ ಪೀಡಾಯಂತ್ರಗಳಲ್ಲಿಯೂ ಚಿತ್ರವಧೆಯಲ್ಲಿಯೂ ತಮ್ಮ ವಿಶ್ವಾಸವನ್ನತಿಗಳೆಯದೆ ಇರುವರು. ಅಂದಿನಿಂದಂದು ಹಲವರು ಪಪ್ಪಕರು ಆ ಪೀಡಿತರ ಸ್ಥೈರ್ಯಧೈರ್ಯಗಳನ್ನು ಕಂಡು, ಬೆರಗಾಗಿ, ಅವರ ಸಭೆಯೊಳು ಶೇರಿದರು. ಆದರೆ ಆಗಿನ ಹಿಂಸಾಗ್ನಿಯ ದೊಡ್ಡ ಒಲೆಯನ್ನು ಸ್ವಲ್ಪ ಸೂಚಿಸುವ!

ಹ್ಯಾಗಂದರೆ, ಆ ಸೌವಾರ್ತಿಕ ಕ್ರೈಸ್ತರಲ್ಲನೇಕರು ಆ 3 ಪ್ರಖ್ಯಾತ ಪಟ್ಣಗಳಾದ ಲಿಯೋನ್ ವಿಯೆನ್ ಆರ್ಲ್[3] ಎಂಬವುಗಳಿರುವ ರೋನು ನದಿಯ ತಗ್ಗಿಗೆ ಪಶ್ಚಿಮದಲ್ಲಿ ಹೊಂದಿರುವ ಸೆವೆನ್ನೆಸ್ ಎಂಬ ಪರ್ವತಗಳನ್ನೇರಿ, ಮುಂಚೆ ಅಲ್ಬಿಜ್ವಾ ಈಗ ಲಂಗೆದೊಕ್ ಎಂದು ಹೆಸರಿರುವ ಪ್ರದೇಶದಲ್ಲಿ ಕೆಲವರು ಬಲವುಳ್ಳ ಮಾಂಡಲಿಕರ ರಾಷ್ಟ್ರಗಳಲ್ಲಿ ಆಶ್ರಯ ಗೊಂಡಿದ್ದರು. ಆ ಪರ್ವತಪ್ರದೇಶದ ಪಶ್ಚಿಮ ತಪ್ಪಲಲ್ಲಿ ಅಲ್ಬಿ ಎಂಬ ಪಟ್ಣವದೆ; ಇದು ತುಲೂಸು ಪಟ್ಣದ[4] ಒಬ್ಬ ಮಾಂಡಲಿಕನಾದ ರಯಿಮುಂದನೆಂಬವನದ್ದಾಗಿತ್ತು. ವಿಶೇಷವಾಗಿ ಇವನು, ತಾನು ಪಪ್ಪಕನಾಗಿದ್ದರೂ, ಓಡಿ ಬಂದ ವಲ್ದೆನ್ಸರ ಆಶ್ರಯದಾತನಾದನು; ಅವರು ನಂಬಿಗಸ್ತ ಪ್ರಜೆ ಎಂಬ ಹೆಸರು ಗೊಂಡವರಲ್ಲವೋ? ವಲ್ದೆನ್ಸರಿಗೆ ಮುಂಚೆ ಅಲ್ಲಿದ್ದು, ಅಲ್ಬಿಗೆನ್ಸರೆಂಬ ಹೆಸರು

1) 323ನೇ ಪಾನು. 2) 335, 336ನೇ ಪಾನು. 3) 90, 165, 307ನೇ ಪಾನು. 4) 357ನೇ ಪಾನು.

ಹೊಂದಿದ ಸೌವಾರ್ತಿಕ ಕ್ರೈಸ್ತರಿಗೂ ಅವರಿಗೂ ವಿಲಂಬವಿಲ್ಲದೆ ಐಕ್ಯವಾಯಿತು; ಬಳಿಕ ಅವರೆಲ್ಲರಿಗೂ ವಲ್ದೆನ್ಸರೆಂಬ ಉಪನಾಮವು ಬಂತು. ಆ ಕಡೆಯಲ್ಲಿದ್ದ ಅಲ್ಬಿಗೆನ್ಸರೆಂಬವರದೊಂದು ಪಾಷಂಡ ಸಭೆಯನ್ನೂ ಆ ಸೌವಾರ್ತಿಕ ಕ್ರೈಸ್ತರನ್ನೂ ಅರಿಯದೆ ಬದಲಿಸ ಬಾರದು; ಅವರಿಗೂ ಇವರಿಗೂ ಏನೂ ಸಮ್ಮಂಧವಿಲ್ಲದಿದ್ದದಲ್ಲದೆ ಈ ಕ್ರೈಸ್ತರು ಅವರ ಪಾಷಂಡಗಳನ್ನು ಕಂಡು, ದೆವ್ವಗಳವೆಂದು, ನಿರ್ಣಯಿಸಿ, ಅವರನ್ನು ಹೃತ್ಪರಿಣಾಮ ಪಡಿಸಲಿಕ್ಕೆ ಬಹಳ ಪೇಚಾಡುತ್ತ ಬಂದಿದ್ದರು. ಆ 3ನೇ ಇನ್ನೊಕೆಂತ ಪಪ್ಪನು ವಲ್ದೆನ್ಸರನ್ನು ಫುಸಲಾಯಿಸಿ ಪಪ್ಪಕತ್ವಕ್ಕೆ ಒಡಂಬಡಿಸಲಾರದೆ ಹೋದ ಮೇಲೆ ಅವನು ಆ ತುಲೂಸು ಪಟ್ಣದ ರಯಿಮುಂದ ಮುಂತಾದ ಪ್ರಭುಗಳಿಗೆ, ಅವರನ್ನು ಜಜ್ಜ ಬೇಕೆಂದು, ತಿಳಿಸಲು, ಇವರು ಒಲ್ಲೆವೆಂದರು. ಸ್ವಲ್ಪ ಕಾಲದಿತ್ತ ಕ್ರಿ. ಶ. 1208ನೇ ವರುಷಕ್ಕೆ ರಯಿಮುಂದನ ರಾಷ್ಟ್ರದಲ್ಲಿ ಇನ್ನೊಕೆಂತನ ಒಬ್ಬ ದೂತನು, ಯಾರಿಂದಲೋ? ಹತನಾಗಲು, ಪಪ್ಪನು, ರಯಿಮುಂದ ಪ್ರಭುವು ಅವನನ್ನು ಕೊಂದನೆಂದು, ಸುಳ್ಳಾಡಲಿಕ್ಕೆ ಒಳಗಾದನು; ಕಾಲಗತಿಯಲ್ಲಿ ಅವನು ಈ ಸುಳ್ಳನ್ನು ತಾನು ಒಂದು ಪತ್ರಿಕೆಯಲ್ಲಿ ನಿವೇದಿಸಿದನು[1]. ಆದರೂ ಅಂದು ಅವನು ಆ ಮಿಥ್ಯಾಪವಾದ ಹೊರಿಸಿ, ತುರ್ಕರಿಗಿಂತಲೂ ಕೆಟ್ಟವರಾದ ರಯಿಮುಂದ ಮುಂತಾದ ಪ್ರಭುಗಳಿಗೂ ವಲ್ದೆನ್ಸರಿಗೂ ವಿರೋಧವಾಗಿ ಒಂದು ಕ್ರೂಜೆಯುದ್ಧ[2] ಮಾಡ ಬೇಕೆಂದು, ಸಾರಿ, ತನ್ನ ಕಡೆಯ ಒಬ್ಬ ದೂತನಾದ ಆರ್ನೊಲ್ದನೆಂಬವನನ್ನು, ಕ್ರೂಜೆಯುದ್ಧಸ್ಥರ ನಾಯಕನೆಂದು, ನೇಮಿಸಿದನು.

ಕ್ರಿ. ಶ. 1209ನೇ ವರುಷ ಆ ಕ್ರೂಜೆದಂಡು ಬೆಜಿಯೇರು ಎಂಬದೊಂದು ಪಟ್ಣಕ್ಕೆ ಮುತ್ತಿ, ಅದನ್ನು ತೆಕ್ಕೊಳ್ಳುವಾಗ ಆ ದಂಡಿನವರು—ನಾವೇನು ಮಾಡುವ? ಈ ಪಟ್ಣದಲ್ಲಿ ನಮ್ಮ ಮತದ ಜನರು ಸಹ ಇದ್ಧಾರೆ, ಆದರೆ ನಾವು ಅವರನ್ನೂ ಆ ಕಥರರನ್ನೂ[3] ವಿಂಗಡಿಸ ಕೂಡದೆಂದು, ಆರ್ನೊಲ್ದನಿಗೆ ಹೇಳಲು, ಇವನು—ಎಲ್ಲರನ್ನೂ ಕೊಲ್ಲಿರಿ! ದೇವರು ತನ್ನವರನ್ನು ಬಲ್ಲನಲ್ಲವೋ? ಎಂದು, ವಿಧಿಸಿ ಬಿಟ್ಟನು. ತರುವಾಯ ಆ ವಿಧಿಯ ಪ್ರಕಾರ ಆದ ಮೇಲೆ ಅವನು ಪಪ್ಪನಿಗೆ ಬರೆದು ಹೊಗಳಿಕೊಂಡದ್ದೇನೆಂದರೆ—ನಮ್ಮವರು ಸ್ಥಿತಿಯನ್ನೂ ಲಿಂಗವನ್ನೂ ಆಯುಸ್ಸನ್ನೂ ಲಕ್ಷಿಸದೆ ಸುಮಾರು 20,000 ಜನರನ್ನು ಕತ್ತಿಯಿಂದ ಕೊಂದಿದ್ಧಾರೆ; ಪಟ್ಣವೆಲ್ಲವೂ ಸುಲುಕೊಂಡು, ಸುಟ್ಟದೆ.—ಇಂತು ಆ ಕ್ರೂಜೆಯುದ್ಧವು 20 ವರುಷವೇ ನಡಿಯುತ್ತಿರುವಲ್ಲಿ ಪಟ್ಣ ಊರು ಹಳ್ಳಿಗಳು ನೆಲಸಮವಾಗಿ, ಶೀಮೆಯೆಲ್ಲಾ ಹಾಳು ಬಿತ್ತು. ಕ್ರಿ. ಶ. 1229ನೇ ವರುಷದಲ್ಲಿ ಆ ನಿರ್ಮೂಲನಕರ ಯುದ್ಧವು ತೀರಿದನಂತರ 9ನೇ ಗ್ರೆ

1) Lib. XV, epist. 102. 2) 344, 345ನೇ ಪಾನು ನೋಡು. 3) ಅಂದರೆ ಸೌವಾರ್ತಿಕರನ್ನೂ.

ಗೋರ ಪಪ್ಪನು[1] ಅಲ್ಲಿಯೂ ಬೇರೆ ಕಡೆಯಲ್ಲಿಯೂ ಗುಪ್ತವಿಚಾರಣವೆಂಬ[2] ತನ್ನ ಧರ್ಮವನ್ನು ಸ್ಥಾಪಿಸಿ, ಇದರಿಂದ ಆ ವಲ್ದೆನ್ಸರನ್ನು ತಿರಿಗಿ ಪೀಡಿಸುವವನಾದನು. ಆದಾಗ್ಯೂ, ಪಾತಾಳದ್ವಾರಗಳು ಅದನ್ನು ಜಯಿಸಲಾರವು ಎಂಬ ಕ್ರಿಸ್ತನ ವಾಗ್ದತ್ತವು[3] ಅವರ ಸಭೆಯಲ್ಲಿ ಸತ್ಯವಾಯಿತು. ಆ ವಲ್ದೆನ್ಸರು ಅನೇಕ ಕಡೆಯಲ್ಲುಳಿದು, ಬಹುಶಃ ಗೋಪ್ಯದಲ್ಲಿ ಬಾಳುತ್ತಾ ಬಂದು, ದೇವವಾಕ್ಯದ ಜ್ಞಾನ ಹಬ್ಬಿಸುತ್ತಿರಲು, ಆಗಿನ ಕೊಳಿಯುವ ಭಾವದ ಪಪ್ಪಕ ಸಭ್ಯರಲ್ಲಿ ಸತ್ವವೆಲ್ಲಾ ಕೆಡದಿರುವದಕ್ಕೆ ಉಪ್ಪಿನಂತಾದರು. ಅವರ ಮಕ್ಕಳಲ್ಲಿ ವಲ್ದೆನ್ಸರೆಂಬ ಹೆಸರು ತಪ್ಪಿ ಹೋಗದಂಥವರು ಇಂದಿನ ವರೆಗೂ ಮುಖ್ಯವಾಗಿ ಪಿಯೆಮೊಂತೆ ಶೀಮೆಯ ಪರ್ವತಗಳ ಒಳಬೈಲುಗಳಲ್ಲಿ ಇದ್ದಾರೆ.

## 49. ಇಂಕ್ವೀಸೀತಿಯೋನೆಂಬ ಗುಪ್ತವಿಚಾರಣವು.

ಅಪೊಸ್ತೊಲಿಕ ಕಾಲದ ಕ್ರೈಸ್ತ ಸಭೆಯೆಂಬ ಮಾತೆಯ ನಿಜ ಮಕ್ಕಳಾದ ಆ ವಲ್ದೆನ್ಸರು ಮುಂತಾದ ಸೌವಾರ್ತಿಕ ಸತ್‌ಕ್ರೈಸ್ತರು ಹೊರಬಳಿಗೂ ಬೆಳೆಯುತ್ತಿರುವದರಿಂದಲೂ ಪಪ್ಪಕ ಪಕ್ಷಸಭೆಯಿಂದ ಆಗಾಗ್ಯೆ ಭೇದಗಳಾಗುತ್ತಿರುವದರಿಂದಲೂ ಪಪ್ಪರು ರೋಷಿಸಿ, ಗುಪ್ತವಿಚಾರಣವೆಂಬದನ್ನು ಸ್ಥಾಪಿಸಿ, ಇದರಿಂದ ಸಕಲ ಕಥರರನ್ನು ಅಂದರೆ ಪಪ್ಪಕ ಪಾಷಂಡಗಳಿಂದ ಭೇದವಾಗಿ ಬೇರೆ ಪಾಷಂಡಗಳಲ್ಲಿ ಶೇರಿದವರನ್ನು ಮಾತ್ರವಲ್ಲದೆ ಪಪ್ಪಕ ಪಾಷಂಡಗಳಿಂದ ಭೇದವಾಗಿ ಸೌವಾರ್ತಿಕ ಕ್ರೈಸ್ತರಿಗೆ ಸಂಪರ್ಕರಾದವರನ್ನು ಕೂಡ, ಸೌವಾರ್ತಿಕ ಕ್ರೈಸ್ತರೆಲ್ಲರನ್ನೂ ಸಹ ಬೇರೊಂದಿಗೆ ಕಿತ್ತು ಹಾಕಲಿಕ್ಕೆ ಯೋಚಿಸಿದರು; ಇನ್ನು ಮುಂದೆ ಕಥರರು ಅಕಸ್ಮಾತ್ತಾಗಿ ಬೈಲಾದಲ್ಲಿ ಅವರನ್ನು ಶಿಕ್ಷಿಸುವ ಹೊರ್ತು ಅವರನ್ನು ಜಾಗ್ರತೆಯಿಂದ ಹೊಂಚಿ, ಹುಡುಕಿ, ಶಿಕ್ಷಿಸ ಬೇಕೆಂಬದೇ ಆ ಗುಪ್ತವಿಚಾರಣದ ಉದ್ದಿಶ್ಯವು. 3ನೇ ಇನ್ನೊಕೆಂತ ಪಪ್ಪನ ಮುಖ್ಯಸ್ಥಿಕೆಯೊಳಗೆ ಕ್ರಿ. ಶ. 1215ನೇ ವರುಷ ರೋಮದಲ್ಲಿ ಕೂಡಿದ ಆ ಸಭಾಸಂಘದವರು[4], ಮುಖ್ಯವಾಗಿ ಕಥರರನ್ನು ಹ್ಯಾಗೆ ನಿರ್ಮೂಲ ಮಾಡ ಬಹುದೆಂದು, ಆಲೋಚಿಸಿ, ಗುಪ್ತವಿಚಾರಣದ ಅಭಿಪ್ರಾಯ ನಡಿಸುವದು ಅಧ್ಯಕ್ಷರ ಆವಶ್ಯಕ ಹಂಗೆಂದು, ನೇಮಿಸಿದರು; ಕಥರರು ತುರ್ಕರಿಗಿಂತ ಕಡೆ! ಎಂ

1) 347, 357ನೇ ಪಾನು; ಕ್ರಿ. ಶ. 1215ನೇ ವರುಷ 3ನೇ ಇನ್ನೊಕೆಂತನು ರೋಮದಲ್ಲಿಯದೊಂದು ಸಭಾಸಂಘದಿಂದ (336ನೇ ಪಾನು), ಕಥರತ್ವವೆಂಬ ಅಪರಾಧ ಸ್ಥಾಪಿತವಾದವರೆಲ್ಲರನ್ನೂ ಕೊಲ್ಲ ಬೇಕೆಂತ, (IV can. 3) ಆಜ್ಞೆ ಮಾಡಿಸಿ, ಮರುವರುಷ ಸತ್ತಿದ್ದನು; ಬಳಿಕ 3ನೇ ಹೊನೋರಿಯನೆಂಬವನು 11 ವರುಷ ಪಪ್ಪನಾಗಿದ್ದ ಮೇಲೆ 9ನೇ ಗ್ರೆಗೋರನು ಉತ್ತರೋದ್ಯೋಗಿಯಾಗಿದ್ದನು. 2) 49ನೇ ಸಂಧಿ. 3) ಮತ್ತಾ. 16, 18; 279ನೇ ಪಾನು ಸರಿ ನೋಡು. 4) ಈ ಪಾನಿನ 1ನೇ ಸೂಚನೆ.

ತ, ಆ ಪಪ್ಪನು ಒದರಿದನಲ್ಲ[1]? ಬಳಿಕ 9ನೇ ಗ್ರೆಗೋರನೆಂಬ ಪಪ್ಪನು[2] ತುಲೂಸು ಪಟ್ಣದಲ್ಲಿ ಕ್ರಿ. ಶ. 1229ನೇದಕ್ಕೆ ನೆರೆಸಿದ ಸಭಾಸಂಘದಿಂದ[3] ವ್ಯವಸ್ಥೆಯಾದದ್ದೇನಂದರೆ—ಒಂದೊಂದು ಅಧ್ಯಕ್ಷತಾಸ್ಥಳಕ್ಕೆ ಶೇರಿದ ತುಕ್ಕಡಿಯಲ್ಲಿ ತಕ್ಕ ಜನರನ್ನಾರಿಸ ಬೇಕು; ಇವರು ಕಥರರನ್ನು ಸಕಲ ಸಂಧಿ ಮೂಲೆಗಳಲ್ಲಿ ಶೋಧಿಸಿ, ಹಿಡುಕೊಂಡು, ಶೀಘ್ರದಿಂದ ಶಿಕ್ಷೆಗೊಪ್ಪಿಸ ಬೇಕು; ಕಥರರಿಗೆ ಆಶ್ರಯ ಕೊಡುವ ಒಬ್ಬೊಬ್ಬ ಪ್ರಭುವಾಗಲಿ ಧನಿಯಾಗಲಿ ತನ್ನ ಶೀಮೆಯನ್ನೂ ಬದುಕನ್ನೂ ಕಳಕೊಳ್ಳುವನು; ಒಬ್ಬ ಕಥರನನ್ನು ಉಳಿಸುವ ಒಬ್ಬ ಅಧ್ಯಕ್ಷನಾಗಲಿ ಒಬ್ಬ ನ್ಯಾಯಾಧಿಪತಿಯಾಗಲಿ ತನ್ನ ಉದ್ಯೋಗ ಹೋಗಾಡಿಸುವನು; ಒಬ್ಬ ಕಥರನದಾದದೊಂದು ಮನೆಯಾಗಲಿ ಅಂಥವನನ್ನು ಅಂಗೀಕರಿಸಿದ್ದೊಂದಾಗಲಿ ಕೆಡವಿ, ಮಣ್ಣಿಗೆ ಮಣ್ಣು ಕೂಡಿಸ ಬೇಕು; 14 ವರುಷ ಪ್ರಾಯ ಬಂದ ಗಂಡಸರೂ 12ಕ್ಕೆ ಮುಟ್ಟಿದ ಹೆಣ್ಣುಗಳೂ ಆದ ಸಮಸ್ತ ಸಭ್ಯರು ಎರಡು ವರುಷಕ್ಕೊಮ್ಮೆ ತಮ್ಮ ಅಧ್ಯಕ್ಷನ ಬಳಿಗೆ ಬಂದು, ತಮ್ಮ ವಿಶ್ವಾಸಾರ್ಥ ಹೇಳಿ—ಪಪ್ಪನಿಗೆ ನಂಬಿಗಸ್ತರಾಗಿರೋಣ! ಕಥರರನ್ನು ಹಿಂಸಿಸೋಣ! ಎಂತ, ಪ್ರಮಾಣಿಸ ಬೇಕು; ಈ ಆಜ್ಞೆಗೆ ಅನುಸರಿಸದಂಥವರ ಮೇಲೆ ಹೊರ್ತು ವರುಷದ ಮೂರು ದೊಡ್ಡ ಹಬ್ಬಗಳಲ್ಲಿ ಮಿಸ್ಸಕ್ಕೆ ಬಾರದಂಥವರೆಲ್ಲರ ಮೇಲೆ ಸಹ ಕಥರರಾಗಿದ್ದಾರೆಂಬ ದೊಡ್ಡ ಸಂಶಯವು ಇದ್ದ ಹಾಗೆ ಆಯಿತು; ಅಂಥವರನ್ನು ವಿಚಾರಣಸ್ಥಾನಕ್ಕೆ ಕರೆಸ ಬೇಕು; ಒಬ್ಬ ಕಥರನಾಗಲಿ ಕಥರತ್ವದ ಸಂಶಯ ಆಪಾದಿತನಾಗಲಿ ಅಸಾಧ್ಯ ರೋಗದಲ್ಲಿಯೂ ಬಿದ್ದಿರುವಲ್ಲಿಗೆ ವೈದ್ಯರಾಗಲಿ ಅಂಥ ಅಪರಾಧದವರಾಗಲಿ ಹೋಗ ಬಾರದು; ಪ್ರೀಸ್ತರು ಮಾತ್ರ ಹೋಗಿ, ಬುದ್ಧಿ ಹೇಳುವದರಿಂದಲೂ ಶಿಕ್ಷೆಯ ಭಯ ತೋರಿಸುವದರಿಂದಲೂ ಅವರ ಪ್ರಾಣಗಳನ್ನು ರಕ್ಷಿಸಲಿಕ್ಕೆ (?) ಪ್ರಯತ್ನಿಸ ಬೇಕು; ಮತೋದ್ಯೋಗಿಗಳ ನ್ಯಾಯಸ್ಥಾನದಲ್ಲಿ ತನ್ನ ಕಥರತ್ವವನ್ನು ಅರಿಕೆ ಗೈದು, ಇನ್ನು ಮುಂದೆ ಸನ್ಮಾರ್ಗದಲ್ಲಿರುವೆನೆಂತ, ಮಾತು ಕೊಟ್ಟಂಥವನನ್ನು ಸಂಶಯದ ದುರ್ವಾಸನೆಯುಳ್ಳದ್ದಾದ ಅವನ ಸ್ವಸ್ಥಳದ ಗಡಿ ದಾಟಿಸಿ, ಅವನ ಮೈಯ ಮೇಲೆ ಅಸಾಧಾರಣವಾದ ವಸ್ತ್ರ ಹೊದಿಸಿ, ಪಪ್ಪನು ಬಿಡಿಸಲಿಕ್ಕೆ ದಯೆ ಮಾಡುವ ತನಕ ಅವನನ್ನು, ಪ್ರಜಾಸ್ವಾತಂತ್ರ್ಯವಿಲ್ಲದವನೆಂದು, ಎಣಿಸ ಬೇಕು.—

ಈ ಹಿಂಸಾಜ್ಞೆಯನ್ನು ನಡಿಸುವ ಹಂಗಿಗರಾದ ಅಧ್ಯಕ್ಷರೂ ನ್ಯಾಯಾಧಿಪತಿಗಳೂ ಪ್ರಜೆಯ ಮೇಲಿನ ಅಂತಃಕರಣದಿಂದ ಸಡಿಲು ಬಿಟ್ಟ ಕಾರಣ ಆ ಪಪ್ಪನು ಕಥರರ ನಿರ್ಮೂಲನಕ್ಕಾಗಿ ಬೇರೆ ಬೇರೆ ಕುಲದ ಮಠಿಕರನ್ನಾರಿಸಿ, ಇವರ ಕಥರ ವಿಚಾರಣಸ್ಥಾನಗಳನ್ನು ನಿರ್ಮಿಸಿದನು; ಸ್ವಲ್ಪ ಕಾಲದನಂತರ ಇವೆಲ್ಲವೂ ದೊ

1) 377ನೇ ಪಾನು. 2) 378ನೇ ಪಾನು. 3) 357ನೇ ಪಾನು.

ಮಿನಿಕಾನರೆಂಬ ಮಠಿಕರ[1] ಕೈಯೊಳಗಾದವು. ಇವರು ಅಮಿತ ಅಧಿಕಾರದವರಾಗಿ, ಪಪ್ಪನಿಗಲ್ಲದೆ ಇನ್ನು ಯಾರಿಗೂ ಲೆಖ್ಖ ಕೊಡ ತಕ್ಕದ್ದಿಲ್ಲ. ಆ ವಿಚಾರಣಸ್ಥಾನಗಳು ಸ್ಥಾಪಿತವಾದಲ್ಲಿ ಯಾರಿಗಾದರೂ ಜೀವವೂ ಆಸ್ತಿಯೂ ಭದ್ರವಾಗಿ ಉಳಿಯಲಿಲ್ಲ; ಯಾರ ಮೇಲಾದರೂ ಸಂದೇಹಕರವಾದ ಯಾವದೊಂದೂ ಕ್ರಿಯೆಯಿಂದ ಒಮ್ಮಿಂದೊಮ್ಮೆ ಕಥರತ್ವದ ಅನುಮಾನವು ಹುಟ್ಟುತ್ತಿರುವದು. ದೇವವಾಕ್ಯ ಓದುವವನಾಗಲಿ ಇಟ್ಟು ಕೊಂಡವನಾಗಲಿ ಮಹಾ ಕಥರನೆನ್ನಿಸುವನು[2]. ಆ ವಿಚಾರಣಸ್ಥಾನಗಳಿಗೆ ಚಾಡಿ ಹೇಳುವದಕ್ಕೆ ಬರುವಂಥವರ ಹೆಸರನ್ನು ಮುಚ್ಚಿಡ ಬೇಕೆಂಬ ಪ್ರತ್ಯೇಕ ಆಜ್ಞೆ ಇರುವದು. ಬಹು ನೀಚರು ಬಂದು ದೂರು ಹೇಳಿವಾದಿಸುವ ಪಕ್ಷದಲ್ಲಿಯೂ ಆಪಾದಿತನು ಪ್ರತಿವಾದ ಮಾಡ ಬಾರದು; ಆದ್ದರಿಂದ ವಿಚಾರಣಸ್ಥಾನದವರ ಕೈಗೆ ಬಿದ್ದವನೊಬ್ಬನು ಜೀವದಿಂದುಳಿಯುವದು ಬಹಳ ಅಪರೂಪ. ತಾವು ಕಥರತ್ವದವರೆಂಬ ಅಪರಾಧಸ್ಥರೆಂತ, ತಾವಾಗಿ ಅರಿಕೆ ಮಾಡಿ, ಇನ್ನು ಮುಂದೆ ಒಳ್ಳೆಯವರಾಗಿರುವೆವೆಂತ, ಆಣೆ ಇಡುವಂಥವರು ಮಾನಭಂಗಕರ ಪ್ರಾಯಶ್ಚಿತ್ತ ಹೊಂದಿ, ತಮ್ಮ ಆಸ್ತಿ ಕಳಕೊಳ್ಳುತ್ತಿರುವರು. ತಾವಾಗಿ ಅಂಥ ಅಪರಾಧದರಿಕೆ ಮಾಡದಂಥವರು—ಕಥರರಾದರೇನು? ಅಲ್ಲದವರಾದರೇನು?—ವಿಚಾರಕನು ಕೇಳುವದನ್ನೆಲ್ಲಾ ಅರಿಸುವ ವರೆಗೆ ಅವರನ್ನು ವಾಚಾತೀತ ಕ್ರೂರತ್ವದೊಡನೆ ತರ ತರದ ಪೀಡಾಯಂತ್ರಗಳಿಂದ ಬಾಧಿಸುತ್ತಿರುವರು. ತಾವು ಕಥರರೆಂತ, ನಿವೇದಿಸಿ, ತಮ್ಮ ಕಥರತ್ವವನ್ನು, ಅದು ಸೌವಾರ್ತಿಕ ಕ್ರೈಸ್ತತ್ವವಾಗಿದ್ದರೂ, ಬಿಡಲೊಲ್ಲದಂಥವರೆಲ್ಲರನ್ನು ಚಿತಿಯಲ್ಲಿ ಸಜೀವವಾಗಿ ಸುಟ್ಟು ಬಿಡುತ್ತಿರುವರು. ಅಂಥ ಗುಪ್ತವಿಚಾರಣಸ್ಥಾನಗಳು ಹೆಚ್ಚಾಗಿ ಫ್ರಂಚು ಈತಲಿಯ ಸ್ಪಾನಿಯ ದೇಶಗಳಲ್ಲಿ ಉದ್ಭವಿಸಿ ಉಳಿದವು; ಗೆರ್ಮಾನಿಯದಲ್ಲಿ ಹುಟ್ಟಿದ್ದೊಂದು ಅತಿ ಕಠಿಣವಾಗಿದ್ದರೂ ಸಕಲ ಪ್ರಜೆಯ ಎದುರಾಟದಿಂದ ಬೇಗ ಅಂದರೆ 13 ವರುಷದೊಳಗೆ ತೀರಿತು.—ಆದರೆ ಗುಪ್ತವಿಚಾರಕರಿಗೆ ತಪ್ಪಿಸಿ ಕೊಳ್ಳುವಂತೆ ವಲ್ದೆನ್ಸರು[3] ಚಿಲ್ಲರೇ ಅಂಗಡಿಯವರ ವ್ಯವಹಾರ ತೆಕ್ಕೊಂಡು, ವಿವಿಧದ ಜಿನಸುಗಳನ್ನು ಮಾರಲಿಕ್ಕೆ ತರುವಲ್ಲಿ ತಾವು ಪರಿಶುದ್ಧ ಬರಹದ ವಚನಗಳನ್ನು ಬರೆದಿದ್ದ ಕಾಗದತುಂಡುಗಳನ್ನು ಸಹ ತಂದು ಕೊಡುವರು; ಅವರ ಸಭೋದ್ಯೋಗಿಗಳು ಸಾಧಾರಣ ವಸ್ತ್ರ ಧರಿಸಿಕೊಂಡು, ಪರಿಶುದ್ಧ ಬರಹದ್ದೊಂದು ಪ್ರತಿಯನ್ನು ಕಿಶೆಯೊಳಗೆ ಹಾಕಿ ಕೊಂಡು, ಎಲ್ಲೆಲ್ಲಿ ಸಂದರ್ಭವಾಗುವದೋ ಗುಹೆ ಕಾನನ ಗೃಹಗಳಲ್ಲಿ ಪ್ರಸಂಗಿಸುವರು; ತಮ್ಮ ತಮ್ಮ ಗೊತ್ತು ತಮಗೆ ಶಿಕ್ಕುವ ಹಾಗೆ ಚತುರಶ್ರವಾದ ಒಂದು ಸೂಜಿಯನ್ನಿಟ್ಟು ಕೊಂಡು ಒಬ್ಬರಿಗೊಬ್ಬರು ತೋರಿಸುವರು.—ಕ್ರಿ. ಶ. 1324ನೇ ವರುಷದಲ್ಲಿ

1) 350ನೇ ಪಾನು. 2) 357, 374ನೇ ಪಾನು ಸರಿ ನೋಡು. 3) 378ನೇ ಪಾನು.

22ನೇ ಯೋಹಾನನೆಂಬ ಜಗಳಗಂಟಿಗನಾದ ಪಪ್ಪನು[1] ಇಂಗ್ಲಂದು ರಾಜ್ಯದೊಳಗಿನ ಸೌವಾರ್ತಿಕರಾದ ಸತ್‍ಕ್ರೈಸ್ತರನ್ನು[2] ಸಹ, ಕಥರರೆಂದು, ಹಿಂಸಿಸಲಾಜ್ಞಾಪಿಸಿದನು. ಯುರೋಪ ಭೂಖಂಡದಲ್ಲಿ 600 ವರುಷವೇ ತಮ್ಮ ದುಷ್ಕ್ರಿಯೆಗಳನ್ನು ನಡಿಸುತ್ತಲಿರುವ ಆ ಗುಪ್ತವಿಚಾರಕರು ಆ ಖಂಡದ ಮುಖ್ಯವಾಗಿ ಮಹಾ ಗುಣವಂತರೂ ಸನ್ಮಾರ್ಗಶೀಲರೂ ದೊಡ್ಡ ಪಂಡಿತರೂ ಆದ ಜನರಲ್ಲಿ ಹಲವು ಪ್ರಯುತ ಸಂಖ್ಯೆಯವರನ್ನು ನಶಿಸಿದರು. ಗುಪ್ತವಿಚಾರದ ಅಧಿಪತಿಗಳಾದ ಪಪ್ಪರು ಮುಂತಾದ ಮತಕ ಉದ್ಯೋಗಿಗಳೂ ಮಠಿಕರೂ ರಾಜ್ಯಾಧಿಕಾರಿಗಳನ್ನು ಬನ್ನು ಇಂತೆರ್ದಿಕ್ತುಗಳ[3] ಭಯದಿಂದೊತ್ತಿ, ಹೀಗೆ ಅವರಿಂದ ಕಥರರನ್ನು ಕೊಲ್ಲಿಸುತ್ತಾ ಇದ್ದಲ್ಲಿ ತಾವು ತೀರಾ ದಡ್ಡರಿಗೆ ಮಾತ್ರವೇ ನಿಸ್ಪೃಹರಾಗಿ ತೋರಿಸಿ ಕೊಳ್ಳ ಬಹುದು.

ಗುಪ್ತವಿಚಾರಕರು ತಾವು, ಔತೋ ದಾ ಫೇಗಳು ಅಂದರೆ ವಿಶ್ವಾಸದ ಕ್ರಿಯೆಗಳು ಎಂತ, ಹೇಳುವ ಆ ಸಜೀವದಹನಗಳನ್ನು ವಿಶೇಷವಾಗಿ ಆದಿತ್ಯವಾರಗಳಲ್ಲಿ ಮಾಡಿಸುತ್ತಿರುವರು. ಅಂಥಾದ್ದೊಂದು ದಿವಸದ ಪ್ರಾತಃಕಾಲದಲ್ಲಿ ಸಕಲ ದೇವಾಲಯಗೋಪುರಗಳ ದೊಡ್ಡ ಘಂಟೆಗಳನ್ನು ಬಾರಿಸುತ್ತಲೇ ಗುಪ್ತವಿಚಾರಣಗೃಹದಿಂದ ಒಂದು ಮೆರವಣಿಗೆ ಹೊರಟು, ದೇವಾಲಯಕ್ಕೆ ಹೋಗುತ್ತಿರುವದು; ಮೊದಲು ದೊಮಿನಿಕಾನರು ಬರುವರು, ಅವರಲ್ಲೊಬ್ಬನು ನ್ಯಾಯವೂ ಅಂತಃಕರಣವೂ ಎಂಬ ಮಾತುಗಳನ್ನು ಬರೇ ಪರಿಹಾಸ್ಯಕ್ಕೊಳಗಾಗುವಂತೆ ಚಿತ್ರಿಸಿರುವದೊಂದು ಪತಾಕೆ ಹಿಡಿದು ಮುಂದರಿಸುವನು; ಅವರನ್ನು ಪಶ್ಚಾತ್ತಾಪಿಗಳು ಹಿಂಬಾಲಿಸುವರು, ಇವರ ಮೈಯ ಮೇಲೆ ಹಳದೀ ಬಣ್ಣದ ಪ್ರಾಯಶ್ಚಿತ್ತವಸ್ತ್ರಗಳು, ಇವುಗಳಲ್ಲಿ ಪಿಶಾಚಿಯ ಮುಖಗಳು ಬರೆದಿರುವವು; ಬಳಿಕ ದಹನಾಜ್ಞೆ ಪಟ್ಟವರು ಬರುವರು, ಇವರಿಗೆ ಸಹ ಅದೇ ತರದ ವಸ್ತ್ರಗಳು; ಅವರ ಹಿಂದೆ ಜ್ವಾಲೆಗಳನ್ನೂ ಪಿಶಾಚಿಗಳನ್ನೂ ಬಿಡಿಸಿದ ಶವಪೆಟ್ಟಿಗೆಗಳನ್ನು ಹೊರುವರು, ಇವುಗಳೊಳಗೆ ಓಡಿ ಹೋದ ಕಥರರ ರೂಪಗಳಾಗಲಿ ಮುಂಚಿತವಾಗಿ ಸತ್ತವರ ಎಲುಬುಗಳಾಗಲಿ ಇಟ್ಟಿರುವವು, ಇಷ್ಟೆಲ್ಲವನ್ನೂ ಕಿಚ್ಚಿಗೆ ಹಾಕ ಬೇಕಾಗುವದು; ಕಡೆಯಲ್ಲಿ ಪ್ರೀಸ್ತರೂ ಬೇರೆ ಬೇರೆ ಮಠಿಕರೂ ನಡೆಯುತ್ತಿರುವರು. ದೇವಾಲಯದೊಳಗೆ ಒಂದು ಪ್ರಸಂಗವಾದನಂತರ ಆಜ್ಞೆಯನ್ನೋದಿ ತಿಳಿಸುವರು; ತರುವಾಯ ನೊಂದಿಸಿದ್ದೊಂದು ಮೇಣದ ಬತ್ತಿಯನ್ನು ಕೈಯೊಳು ಹಿಡಿದಿರುವ ಆಜ್ಞಾಪಾದಿತನೆದೆಗೆ ಪ್ರಧಾನ ಗುಪ್ತವಿಚಾರಕನು ಒಂದು ಪೆಟ್ಟು ಹೊಡೆದು, ಹೀಗೆ ಅವನನ್ನು ರಾಜ್ಯಾಧಿಕಾರಸ್ಥರ ಶಿಕ್ಷೆಗೆ ಒಪ್ಪಿಸಿ ಕೊಡುತ್ತಲೇ ಸಜೀವದಹನವು ತೊಡಗುವದು.

ಅಂಥಾ ವಿಶ್ವಾಸಕ್ರಿಯೆಗಳೇ ಕ್ರೈಸ್ತತ್ವವಾಗಿದ್ದರೆ ಕ್ರೈಸ್ತತ್ವವನ್ನೇ ಚಿತಿಗೊಪ್ಪಿಸ

1) 351ನೇ ಪಾನು. 2) 308, 370ನೇ ಪಾನು. 3) 329, 330, 351ನೇ ಪಾನು.

ಬೇಕಾದೀತಲ್ಲ? ಪೂರ್ವದಲ್ಲಿ ರೋಮಿಾಯ ಕೈಸರರು ತಮ್ಮ ಕಾಲದ ಸೌವಾರ್ತಿಕ ಕ್ರೈಸ್ತರನ್ನು ಬಾಧಿಸುತ್ತಿದ್ದದ್ದೇ ಈಗಲೂ ಅಂಥಾ ವಿಶ್ವಾಸಕ್ರಿಯೆಗಳಿಂದ ಸಂಭವಿಸಿತಲ್ಲವೋ? ಮೊಹಮ್ಮದಿಯರಿಗೂ ಇಂಥಾ ಪಪ್ಪಕರಿಗೂ ಇನ್ನು ಹೆಚ್ಚು ಕಡಿಮೆ ಏನು? ಆದರೆ ಕ್ರಿಸ್ತನಾಥನು ತನ್ನ ಶಿಷ್ಯರನ್ನು ಕುರಿತು ನುಡಿದ್ದು[1] ಈ ಹಿಂಸೆಯಿಂದಲೂ ತಿರಿಗಿ ಒದಗಿತು; ಏನಂದರೆ—ಅವರು ನನ್ನನ್ನು ಹಿಂಸಿಸಿದ ಮೇಲೆ ನಿಮ್ಮನ್ನೂ ಹಿಂಸಿಸುವರು!

## 50. ಯೋಹಾನ ವಿಕ್ಲಿಫನು.

22ನೇ ಯೋಹಾನ ಪಪ್ಪನು[2], ಬ್ರಿತನ್ನಿಯದ ಸೌವಾರ್ತಿಕ ಕ್ರೈಸ್ತರನ್ನು ಸಹ ಹಿಂಸಿಸ ಬೇಕೆಂದು, ಆಜ್ಞೆ ಕೊಟ್ಟ ಕ್ರಿ. ಶ. ಆ 1324ನೇ ವರುಷವೇ ಇಂಗ್ಲಂದಿನಲ್ಲಿರುವ ಶೀಮೆಯಾದ ಯೊರ್ಕ್ಷೀರಿನ ರಿಚ್ಮೊಂದು ಪಟ್ಣದ ಸವಿಾಪ ವಿಕ್ಲಿಫೆಂಬ ಊರಲ್ಲಿ ಯೋಹಾನ ವಿಕ್ಲಿಫನೆಂಬವನು[3] ಹುಟ್ಟಿದನು. ಆ ಊರು ಆಢ್ಯ ಸ್ಥಿತಿಯವನಾದ ಅವನ ತಂದೆಯದು; ವಿಕ್ಲಿಫನು ತನ್ನ ಯೌವನಕಾಲದಲ್ಲಿ ಪಪ್ಪರೂ ಮಠಿಕರೂ ಪ್ರಜೆಗೆ ಅತಿ ಪ್ರಿಯರಾದಂಥ ಸೌವಾರ್ತಿಕ ಕ್ರೈಸ್ತರಿಗೆ ಬಾಧೆ ಕೊಡುವದನ್ನು ಕಂಡು, ದುಃಖಿಸುತ್ತಿರುವನು; ಅದಲ್ಲದೆ ಅದೇ ಸಮಯದಲ್ಲಿ ಇಂಗ್ಲಿಷರಾದ ಮತೋದ್ಯೋಗಿಗಳೂ ಆಢ್ಯರೂ ಪ್ರಭುಗಳೂ ಪಪ್ಪರ ಲೌಕಿಕ ಅಧಿಕಾರದ ಅಭಿಮಾನಕ್ಕೆ ತಾವು ಕೋಪ ತಾಳಿ, ಆಗ ಇಂಗ್ಲಂದಿನ ಉತ್ತಮ ರಾಜನಾದ 3ನೇ ಎದ್ವರ್ದನನ್ನು ಅದಕ್ಕೆ ಸ್ಥೈರ್ಯದಿಂದ ಎದುರಾಗಲಿಕ್ಕೆ ಒಡಂಬಡಿಸಿದ್ದು ಸಹ ನಡೆಯುವದರಿಂದ ಆಢ್ಯರಲ್ಲೊಬ್ಬನಾದಂಥ ವಿಕ್ಲಿಫನಿಗೆ ಸಂತೋಷ ಬರುತ್ತಿರುವದು.

ಕ್ರಿ. ಶ. 1340ನೇ ವರುಷ ಅವನ ಹೆತ್ತವರು ಅವನನ್ನು ಒಕ್ಸ್ಫೋರ್ದು ಪಟ್ಣಕ್ಕೆ ರಾಜನೀತಿ ದೇವನೀತಿಗಳನ್ನು ಕಲಿಯುವದಕ್ಕೋಸ್ಕರ ಕಳುಹಿಸಿ, ಸ್ವಲ್ಪ ಕಾಲ ಕಳೆದನಂತರ ಅವನು ಅಲ್ಲಿಯ ಮೆರ್ತೊನ್ ಕೊಲ್ಲೆಜ್ ಎಂಬ ವಿದ್ಯಾಶಾಲೆಯಲ್ಲಿ ಶೇರಿ, ಬೇಗ ಶ್ರೇಷ್ಠ ವಿದ್ವಾಂಸರಲ್ಲೊಬ್ಬನಾದನು. ವಿಶೇಷವಾಗಿ ಅವನು ಮೂಲಭಾಷೆಯದೊಂದು ದೇವವಾಕ್ಯಗ್ರಂಥದ ಅಭ್ಯಾಸ ಮಾಡ ತೊಡಗಿದಂದಿನಿಂದ ಪಪ್ಪಕತ್ವದ ಭಾವವು ಅವನಿಗೆ ಹೆಚ್ಚು ಅನ್ಯಾಯವಾಗಿ ತೋರಿತು. ಆ ವೇಳೆ ಬೇರೆ ಕಡೆಯಲ್ಲಿ ಹ್ಯಾಗೋ, ಹಾಗೆಯೇ ಆ ಕಡೆಯಲ್ಲಿ ಸಹ ಪಪ್ಪಕ ಮತೋದ್ಯೋಗಿಗಳಲ್ಲಿ ದೇವವಾಕ್ಯದ ಮೂಲಭಾಷೆಯ ತಿಳುವಿಕೆಯು ಪೂರಾ ಇಲ್ಲದೆ ಹೋಗಿತ್ತು[4]; ಇಂತಿರಲಿಕ್ಕೆ ಅವನು ಅದರ ಮೂಲಭಾಷೆಯ ಆ ಪ್ರತಿಯನ್ನು ಒಬ್ಬರೇ

1) ಯೋಹಾ. 15, 20. 2) 381ನೇ ಪಾನು. 3) 308ನೇ ಪಾನು. 4) 318, 358ನೇ ಪಾನು.

ವಿದ್ಯಾವಂತರಾಗಿ ಉಳಿದಿದ್ದ ಸೌವಾರ್ತಿಕ ಕ್ರೈಸ್ತರಿಂದ[1] ಪಡ ಕೊಂಡಿದ್ದನೆಂಬಂತೆ ಕಾಣಿಸುತ್ತದೆ. ಅಷ್ಟರಲ್ಲಿ ಕ್ರಿ. ಶ. 1345ನೇ ವರುಷಕ್ಕೆ ಅಸಿಯ ಖಂಡದ ತಾತರಿ ದೇಶದಿಂದ ಮಾರಿಬೇನೆಯಂಥಾದೊಂದು ಮಹಾ ವಿಷರೋಗವು ಹೊರಟು, ಯುರೋಪ ಖಂಡಕ್ಕೆ ಬಂದು, 2 ವರುಷಕ್ಕೀಚೆ ಇಂಗ್ಲಂದಿನಲ್ಲಿಯೂ ಅಘೋರ ಹಾನಿ ಮಾಡಿತು. ಆಗ ಇಂಗ್ಲಂದಿನಲ್ಲಿ ಎಲ್ಲಾ ಕೆಲಸ ನಿಂತು ಹೋಯಿತು; ನ್ಯಾಯಸ್ಥಾನಗಳನ್ನು ಮುಚ್ಚಲಾಯಿತು; ಪ್ರಜೆಯ ಸುಮಾರು ಅರ್ಧ ಪಾಲು ಸತ್ತು ತೀರಿತು. ಈ ಸಂಗತಿಯಿಂದ ವಿಕ್ಲಿಫನು ಬಹಳ ವ್ಯಾಕುಲನಾಗಿ, ದೇವರು ಜನರನ್ನು ಹೃತ್ಪರಿಣಾಮಕ್ಕೆ ಎಚ್ಚರಿಸುವದೊಂದು ಶಬ್ದವಿದೆ ಎಂದು, ತಿಳಿದು, ಅವರು ಅದನ್ನು ಲಕ್ಷಿಸದೆ ತುದಿ ಮೊದಲಿಲ್ಲದ ಸ್ವಾರ್ಥಸುಖಭೋಗದಿಂದಿರುವದನ್ನು ಸಹಿಸಲಾರದೆ, ತನ್ನ ಜೀವಿತದ 32ನೇ ವರುಷದಲ್ಲಿ ತನ್ನ ಪ್ರಥಮ ಗ್ರಂಥವನ್ನು ಇಂಗ್ಲಿಷ ಭಾಷೆಯಾಗಿ ಬರೆದು, ಪ್ರಕಟಿಸಿದನು; ಅದರ ಸಾರಾಂಶವೇನಂದರೆ—ಯೇಸುನಾಥನು ಶೀಘ್ರದಿಂದ ಬಂದು, ನ್ಯಾಯನಿರ್ಣಯ ಮಾಡುವನೆಂಬದಕ್ಕೆಯೇ ಆ ವಿಷರೋಗವು ಸೂಚನೆ; ಪಪ್ಪಕ ಮತೋದ್ಯೋಗಿಗಳು ಮೋಸದಿಂದಲೂ ಲೋಭದಿಂದಲೂ ವಿಷಯಲಾಂಪಟ್ಯದಿಂದಲೂ ಸಕಲ ಕ್ರೈಸ್ತರನ್ನು ಭ್ರಮೆ ಗೊಳ್ಳಿಸಿ, ಕೆಡಿಸಿ, ಹೀಗೆ, ಪೂರ್ವದಲ್ಲಿ ಯೆಹೂದ್ಯ ಮತೋದ್ಯೋಗಿಗಳು ಯೆರೂಸಲೇಮಿನ ಮೇಲೆ ನ್ಯಾಯನಿರ್ಣಯ ಬರುವದಕ್ಕೆ ಕಾರಣರಾದಂತೆಯೇ, ಅವರ ಮೇಲೆ ಅದು ಬಂದು ಬೀಳುವದಕ್ಕೆ ಕಾರಣರಾಗಿದ್ದಾರೆ.—ಅಂದು ದೊಮಿನಿಕಾನರೂ ಫ್ರಂಕ್ಸಿಸ್ಕಾನರೂ[2] ಇಂಗ್ಲಂದಿನಲ್ಲಿ ಸಹ ಬಹಳ ಸೊಕ್ಕು ತೋರಿಸುತ್ತಿದ್ದರು. ಆ 2 ಮಠಿಕ ಕುಲಗಳಿಗೆ ಭಿಕ್ಷೆ ಎತ್ತಿ ಬದುಕುವದೇ ಧರ್ಮವು; ಆದರೆ ಅವು ಬೇಗ ಮಹಾ ಸಂಪತ್ತುಳ್ಳವುಗಳಾಗಿರಲಿಕ್ಕೆ, ಭಿಕ್ಷೆ ಬೇಡುವದು ಬಹಿರ್ವಿಡಂಬನಕ್ಕೆ ಮಾತ್ರವಾಗಿತ್ತು. ಆ 2 ಕುಲದ ಮಠಿಕರು ಒಕ್ಸ್ಫೋರ್ದಿನಲ್ಲಿಯ ವಿದ್ಯಾಶಾಲೆಯ ಉದ್ಯೋಗಗಳಲ್ಲಿ ಪ್ರವೇಶಿಸಲಿಕ್ಕೆ ನಿರ್ಲಜ್ಜೆಯಿಂದ ಒದ್ದಾಡುವವರಾದರು. ಆಗ ವಿಕ್ಲಿಫನು ಆ ಶಾಲೆಯ ನಂಬಿಗಸ್ತ ಶಿಷ್ಯನಾಗಿದ್ದು, ಕ್ರಿ. ಶ. 1360ನೇ ವರುಷ ಅದರ ಸ್ವಾತಂತ್ರ್ಯಗಳನ್ನು ಸ್ಥಾಪಿಸುವದಕ್ಕಾಗಿ ಹಲವು ಚಂದ ಕೃತಿಗಳನ್ನು ರಚಿಸಿ, ಆ ಮಠಿಕರಿಗೆ ಹೆದರದೆ—ನೀವು ಸೋಮಾರಿತನದ ಹೊಟ್ಟೆಗಳು[3], ಯೇಸುವು ಭಿಕ್ಷೆ ಬೇಡುವದನ್ನಲ್ಲ ಕೆಲಸ ಮಾಡುವದನ್ನೇ ವಿಧಿಸಿದ್ದಾನೆ; ಕ್ರಿಸ್ತನ ಪುಣ್ಯ ಬಿಟ್ಟು ಸ್ವಾರ್ಜಿತ ಪುಣ್ಯದ ಮೇಲೆಯೂ ಸಂತರ ಪ್ರತಿವಿಜ್ಞಾಪನೆಯ ಮೇಲೆಯೂ ನಂಬಿಕೆ ಇಡ ಬೇಕೆಂದು, ನೀವು ಪ್ರಜೆಗೆ ಬೋಧಿಸುತ್ತಿರುವಲ್ಲಿ ಕ್ರೈಸ್ತಮತಾರ್ಥವನ್ನು ಸೊಟ್ಟ ಮಾಡುತ್ತೀರಿ! ಇತ್ಯಾದಿ ಅವರಿಗೆ ತಿಳಿಸಿದನು.

---

1) 301, 302ನೇ ಪಾನು. 2) 350, 355, 380, 381ನೇ ಪಾನು. 3) ತಿತ. 1, 12.

ಅವನ ಈ ಕೃತಿಗಳಿಗಾಗಿ ಬಡ ದೊಡ್ಡ ಜನರು ಬಹಳ ಸಂತೋಷ ಗೊಂಡರು. ಆ ವಿದ್ಯಾಶಾಲೆಯವರು ಅವನನ್ನು, ಅದರ ವಿಚಾರಕರಲ್ಲೊಬ್ಬನೆಂದು, ಮಾಡಿಟ್ಟರು; ಆದರೆ ಮದದಾನೆಗಳಂತೆ ಅತಿ ರೋಷ ಗೊಂಡ ಆ ಮಠಿಕರು ಕಂತರ್ಬೆರಿಯ[1] ಲಂಘಮನೆಂಬ ಪ್ರಧಾನಾಧ್ಯಕ್ಷನ ಸಹಾಯದಿಂದ ಕ್ರಿ. ಶ. 1366ನೇ ಅಬ್ದ ಅವನನ್ನು ಆ ಶಾಲೆಯಿಂದ ತೊಲಗಿಸಲಿಕ್ಕೆ ಸಮರ್ಥರಾದರು. ಆಗ ಅವಿಜ್ಞೊನು ಪಟ್ಣದ[2] 5ನೇ ಉರ್ಬಾನ ಪಪ್ಪನಿಗೂ 3ನೇ ಎದ್ವರ್ದ ರಾಜನಿಗೂ ಭೇದ ಹುಟ್ಟಿತು; ಹ್ಯಾಗಂದರೆ, ಹಿಂದೆ ಮಾತು ಬಂದಿರುವ ಯೋಹಾನ ರಾಜನ[3] ಕಾಲಾರಭ್ಯ ಇಂಗ್ಲಂದಿನ ಒಂದೊಂದು ಮನೆಯವರು, ಆ ರಾಜನ ಅಸ್ವಾತಂತ್ರ್ಯದ ಮೂಲಕವಾಗಿ, ಪ್ರತಿ ವರುಷ ಪೆತ್ರನ ಪೀಠಕ್ಕೆ ಅಂದರೆ ಪಪ್ಪರಿಗೆ ಪೆತ್ರತೆರಿಗೆ ಎಂಬ ಹಣವನ್ನು ಸಲ್ಲಿಸ ಬೇಕಾಯಿತು; ದೇಶಭಾರವಾದ ಇದಕ್ಕೆ ಎದ್ವರ್ದನು ಮುನಿದೆದುರಿಸಿ, ಪಾರ್ಲಿಮೆಂತೆಂಬ ಸಭೆಯವರ[4] ನಿರ್ಣಯದಿಂದ ಅದನ್ನು ಕಿತ್ತು ಹಾಕಿದನು. ವಿಕ್ಲಿಫನು ಆ ಪ್ರಕಾರದ ನಿರ್ಣಯದ ನ್ಯಾಯವನ್ನು ಸ್ಪಷ್ಟವಾಗಿ ದರ್ಶಿಸುವ ಕಾರಣ ಪಪ್ಪನ ಹಗೆಯು ಅವನಿಗಂಟುವಲ್ಲಿ ರಾಜನೂ ಅರಮನೆಯವರೆಲ್ಲರೂ ಅವನಿಗೆ ಮುಂಚಿಗಿಂತ ಹೆಚ್ಚು ಒಲಿಯುವವರಾದರು. ಹೀಗಿರಲಿಕ್ಕೆ, ರಾಜನು ಕ್ರಿ. ಶ. 1372ನೇ ಅಬ್ದ ಅವನನ್ನು ಒಕ್ಸ್ಫೋರ್ದಿನಲ್ಲಿ, ದೇವಪರಿಜ್ಞಾನವಿದ್ಯೆಯ ಪಂಡಿತನೆಂದು, ನೇಮಿಸಿ, ಸೌವಾರ್ತಿಕ ಬೋಧಕನೆಂತ, ಬಿರುದನ್ನಿತ್ತನು. 4 ವರುಷದಿತ್ತ ವಿಕ್ಲಿಫನು ರಾಜನ ಅಪ್ಪಣೆಯ ಮೇಲೆ ರಾಜಪ್ರೇಷಿತರದೊಂದು ಸಮಾಜದೊಡನೆ ಪಪ್ಪನ ಪ್ರತಿನಿಧಿಗಳ ಸಂಗಡದ ಒಪ್ಪಂದಕ್ಕಾಗಿ ನೀದೆರ್ಲಂದಿನ ಬ್ರುಗ್ಗೆ ಎಂಬ ಪಟ್ಣಕ್ಕೆ ಹೋಗಿರಲು, ಉರ್ಬಾನನ ಉತ್ತರೋದ್ಯೋಗಿಯಾದ ಅವಿಜ್ಞೊನು ಪಟ್ಣದ 11ನೇ ಗ್ರೆಗೋರನು—ಆ ಪೆತ್ರತೆರಿಗೆಯು ತನಗಿನ್ನು ಬೇಡ, ಇಂಗ್ಲಂದಿನ ಸಭೋದ್ಯೋಗಿಗಳನ್ನು ನೇಮಿಸುವ ಅಧಿಕಾರವ ಸಹ ತಾನು ಬಿಟ್ಟಿದ್ದೇನೆಂತ, ಒಪ್ಪಿ ಕೊಂಡನು. ವಿಕ್ಲಿಫನು ಅಲ್ಲಿಂದ ತಿರಿಗಿ ಬಂದ ಬಳಿಕ ರಾಜನು ಅವನಿಗೆ ಲೆಸ್ತ್ರಷೀರು ನಾಡಿನ ಲತ್ತರ್ವರ್ಥೆಂಬ ಊರಿನಲ್ಲಿ ಬೋಧಕೋದ್ಯೋಗವನ್ನೊಪ್ಪಿಸಿ ಕೊಟ್ಟನು. ಆದರೆ ವಿಕ್ಲಿಫನು ಆ ಬ್ರುಗ್ಗೆ ಪಟ್ಣದಲ್ಲಿ ಪಪ್ಪಕ ಪಕ್ಷಕರ ಲೋಭವನ್ನೂ ಅಧಿಕಾರಾಭಿಮಾನವನ್ನೂ ಮುಂಚಿಗಿಂತ ಬಹು ಹೆಚ್ಚಾಗಿ ನೋಡಿದ್ದರಿಂದ ಪಪ್ಪಕರ ವಿಧ ವಿಧದ ಪಾಷಂಡ ದುರಾಚಾರಗಳಿಗೆ[5] ಹೆಚ್ಚು ಕಠಿಣ ಮಾತುಗಳಿಂದ ವಿರೋಧಿಸಲಿಕ್ಕೆ ಹತ್ತಿ, ಪಪ್ಪನನ್ನು, ಅಂತಿಕ್ರಿಸ್ತನೆಂದು[6], ಕರಿಯಲಿಕ್ಕೆ ಶಕ್ತನಾದನು. ಆ ವೇಳೆ, ದೃಷ್ಟಾಂತಕ್ಕಾಗಿ, ಲೊಂದನು ಪಟ್ಣದ ಸುಮಾರು ಸಕಲ ನಿವಾಸಿಗಳು ಸೌವಾರ್ತಿಕ

1) 307, 334, 335 ನೇ ಪಾನುಗಳು. 2) 337ನೇ ಪಾನು. 3) 335, 336, 352ನೇ ಪಾನು. 4) 336ನೇ ಪಾನು. 5) 46ನೇ ಸಂಧಿ. 6) 364ನೇ ಪಾನು; 107ನೇ ಪಾನು ಸರಿ ನೋಡು.

ಕ್ರೈಸ್ತರಾಗಿದ್ದರು; ಪಪ್ಪಕರು ಅವರನ್ನು, ಕಥರರೆಂತ, ಮಾತ್ರವಲ್ಲದೆ, ಲೊಲ್ಲರ್ದರೆಂತಲೂ, ಬೈಯುತ್ತಿದ್ದರು. ಲೊಲ್ಲರ್ದನಂದರೆ ಮೃದು ಸ್ವರದಿಂದ ಹಾಡಿ ಪ್ರಾರ್ಥಿಸುವವನು; ಇದು ಅನೇಕ ಶೀಮೆಗಳಲ್ಲಿ ಆಗ ಸೌವಾರ್ತಿಕರಿಗೆ ತಾಗಿಸಿದ್ದೊಂದು ಉಪನಾಮವು. ವಿಕ್ಲಿಫನು ಅಂದು ಇವರ ಪ್ರತ್ಯಕ್ಷ ಮಿತ್ರನಾದ ಹಿಂದೆ ಅವನಿಗೆ ಸಹ ಆ ಹೆಸರು ಹಚ್ಚಲಾಯಿತು.

ತನ್ಮಧ್ಯ ಮಠಿಕರು ಅವನನ್ನು ಕೆಡಿಸಲಿಕ್ಕೆ ತಿರಿ ತಿರಿಗಿ ಉಪಾಯಗಳನ್ನು ಹುಡುಕುತ್ತಿದ್ದದಕ್ಕೆ ಆಶ್ಚರ್ಯವೇನು? ಒಮ್ಮೆ ಅವರು ಅವನ ಗ್ರಂಥಗಳಲ್ಲಿಯೂ ವಾಗ್ನಿರೂಪಣಗಳಲ್ಲಿಯೂ ಪಪ್ಪಕ ಮತಕ್ಕೆ ಸರಿ ಬೀಳದ ಅನೇಕ ವಚನಗಳನ್ನಾರಿಸಿ, ಬರೆದು, ಪಪ್ಪನಿಗೆ ಕಳುಹಿಸಿ, ವಿಕ್ಲಿಫನು ಮಹಾ ಕಥರನೆಂತ, ದೂರು ಹಾಕಿದರು. ಆ 11ನೇ ಗ್ರೆಗೋರ ಪಪ್ಪನು ತಡೆಯದೆ, ಕ್ರಿ. ಶ. 1377ನೇ ವರುಷ ಕಂತರ್ಬೆರಿಯ[1] ಪ್ರಧಾನಾಧ್ಯಕ್ಷನಿಗೂ 3ನೇ ಎದ್ವರ್ದನ ಉತ್ತರಾಧಿಕಾರಿಯಾದ 2ನೇ ರಿಚಾರ್ದ ರಾಜನಿಗೂ ಒಕ್ಸ್ಫೋರ್ದಿನ ವಿದ್ಯಾಶಾಲೆಗೂ ಇತರ ಕಡೆಗೂ ಒಂದೊಂದು ಬುಲ್ಲವನ್ನು ಒಟ್ಟಿಗೆ 5 ಬುಲ್ಲಗಳನ್ನು ಕಳುಹಿಸಿದನು. ಬುಲ್ಲವೆಂದರೆ, ಪಪ್ಪರು ಒಂದು ಪತ್ರಿಕೆಯ ಸಂಗಡ ಬುಲ್ಲವೆಂಬದೊಂದು ಶೀಸದ ಪೆಟ್ಟಿಗೆಯೊಳಗೆ ಮುದ್ರೆಯನ್ನು ಪ್ರತ್ಯೇಕವಾಗಿ ಕಳುಹಿಸಲಾಗುತ್ತಿರುವದರಿಂದ ಕಾಲಗತಿಯಲ್ಲಿ ಒಂದು ಪತ್ರಿಕೆಯ ಅರ್ಥಕ್ಕೆಯೇ ಬುಲ್ಲವೆಂಬ ಹೆಸರು ಬಿದ್ದಿತ್ತು; ಹಾಗಾದರೆ ಬುಲ್ಲವೆಂದರೆ ಪಪ್ಪನದೊಂದು ಪತ್ರಿಕೆಯೊಳಗಿನ ನಿರ್ಣಯವೇ. ವಿಕ್ಲಿಫನನ್ನು ತ್ವರೆಯಾಗಿ ಶೆರೆಯಲ್ಲಿಟ್ಟು, ಅವನ ಕಾರ್ಯ ವಿಚಾರಿಸ ಬೇಕೆಂದು, ಆ ಪಪ್ಪನ ಬುಲ್ಲಗಳ ಅಭಿಪ್ರಾಯವು. ಅದು ಕಾರಣ ಮರುವರುಷ ಲೊಂದನಿನ ಪೌಲದೇವಾಲಯದಲ್ಲಿ ಮತೋದ್ಯೋಗಿಗಳು ವಿಚಾರಣಕ್ಕೆ ಕೂಡಿದರು. ಆಗ ವಿಕ್ಲಿಫನು ತನ್ನ ಬೋಧನಾರ್ಥವನ್ನು ಒಳ್ಳೇ ವಾಕ್ಚಾತುರ್ಯದಿಂದ ಸ್ಥಾಪಿಸುತ್ತಿರುವಲ್ಲಿ ನೆರೆದ ಪಟ್ಣದ ಪ್ರಜೆಯು ಮೆಚ್ಚಿಗೆ ತೋರಿಸಿದ್ದಲ್ಲದೆ ಅಪ್ರಾಪ್ತಕಾಲದ ರಾಜನ ಕಾರ್ಯಕರ್ತನಾದ ಲಂಕಸ್ತೆರಿನ ಪ್ರಭು ಮುಂತಾದ ಆಢ್ಯರು ಅವನಿಗೆ ಶರಣ ಕೊಟ್ಟರು. ಅದು ನಿಮಿತ್ತವಾಗಿ ಅವನಿಗೆ ವಿರೋಧವಾದ ವ್ಯವಸ್ಥೆಯಾಗಲಿಲ್ಲ. ಅವನ ಗೆಳೆಯರಲ್ಲಿ ಅನೇಕ ಭೂಪ್ರಖ್ಯಾತ ಗೃಹಸ್ಥರು ಸಹ ಇರುತ್ತಿದ್ದರು.

ಆ ಕಾಲದಲ್ಲಿಯೇ ದೇವಶಿಕ್ಷೆ ಎಂಬಂತೆ ಆ ಪಪ್ಪರ ಭೇದವೆಂಬದು[2] ಹುಟ್ಟಿತು. ಅಂದು ವಿಕ್ಲಿಫನ ಶತ್ರುಗಳ ಬಲ ಕುಂದುವಲ್ಲಿ ಅವನು ಬಹು ಧೈರ್ಯವುಳ್ಳವನಾಗಿ, ಒಂದು ಗ್ರಂಥದಲ್ಲಿ ತನ್ನ ಕ್ರೈಸ್ತ ಸಹೋದರರಿಗೆ ಬರೆದ್ದೇನಂದರೆ—ಕ್ರಿಸ್ತನ ಸಹಾಯದ ಮೇಲೆ ವಿಶ್ವಾಸವಿಡೋಣ! ಅವನು ಈಗ ಅಂತಿಕ್ರಿಸ್ತನ ತಲೆಯೊಡೆದು, ಎರ

1) 307, 334, 335, 384ನೇ ಪಾನುಗಳು. 2) 338ನೇ ಪಾನು.

ಡು ಹೋಳುಗಳು ಒಂದರ ಸಂಗಡಲೊಂದು ಜಗಳವಾಡುವ ಹಾಗೆ ಮಾಡಿದ್ದರಿಂದ ನಮಗೆ ಕರುಣಿಸಿ, ಸಹಾಯ ಮಾಡಲೆಸಗಿದ ಹಾಗಾಯಿತಲ್ಲವೋ?—

ಇಂತಿರುವ ಸಮಯ ಅವನಿಗೆ ಒಕ್ಸ್ಫೋರ್ದಿನಲ್ಲಿ ಒಂದು ಕಠಿಣ ರೋಗ ಬಂತು. ತತ್ಕ್ಷಣವೇ ಆ ಭಿಕ್ಷಾಕುಲದ ಮಠಿಕರು[1] ಬಹಳ ಉಲ್ಲಾಸ ಪಟ್ಟು, ಬಹಳ ಉತ್ಸಾಹದಿಂದ, ತಡೆಯದಲೇ ಸಾಯುವನೆಂದು, ಕೂಗಲಿಕ್ಕೆ ಹತ್ತಿ, ಅವರಲ್ಲಿ ನಾಲ್ವರು ವಿಕ್ಲಿಫನು ಮಲಗಿರುವ ಹಾಸಿಗೆಕೋಣೆಯೊಳಗೂ ಹೊಕ್ಕು, ತೀರುವದಕ್ಕಿಂತ ಮುಂಚೆ ನಿಮ್ಮ ಪಾಷಂಡಗಳನ್ನಲ್ಲಗಳೆಯಿರಿ! ಎಂತ, ಅವನನ್ನೊತ್ತಾಯ ಗೈದರು. ಆಗಲವನು ತನ್ನ ಸೇವಕರ ಮೈಗೆ ಒರಗಿ, ಹಾಸಿಗೆಯಲ್ಲಿ ಕೂತು ಕೊಂಡಿರುವೆಡೆ—ನಾನು ಸಾಯಲಿಕ್ಕಿಲ್ಲ! ನಾನು ಜೀವದಿಂದುಳಿದು, ಹೊಸತಾಗಿ ಮಠಿಕರ ದುಷ್ಕ್ರಿಯೆಗಳನ್ನು ಪ್ರಕಟಿಸುವೆನು! ಎಂದು, ಮಹಾ ಶಬ್ದದೊಡನೆ ಘೋಷಿಸುತ್ತಲೇ ಆ ನಾಲ್ವರು ವೇಗದಿಂದ ಹೊರಟು ಹೋದರು.

ವಿಕ್ಲಿಫನು ಸ್ವಸ್ಥನಾಗಿ, ಬಡ ದೊಡ್ಡ ಪ್ರಜೆಯವರು ತನಗೆ ಮಾಡುತ್ತಿರುವ ಪ್ರೀತಿಗೆ ತಕ್ಕ ಪ್ರತಿಪ್ರೀತಿಯನ್ನು ಮಾಡ್ಯೇನೆಂದು, ದೇವವಾಕ್ಯವನ್ನು ಅವರಿಗೆ ಇಂಗ್ಲಿಷ ಭಾಷಾಂತರ ರಚಿಸಿ ಕೊಡಲಿಕ್ಕೆ ತೊಡಗಿದನು; ಅದಲ್ಲದೆ ಅವನು ಪಟ್ಣ ಊರು ಹಳ್ಳಿಗಳನ್ನು ತಿರುಗಿ ಸುವಾರ್ತೆ ಸಾರುವವನಾದನು. ಕ್ರಿ. ಶ. 1380ನೇ ವರುಷಕ್ಕೆ ಅವನ ದೇವವಾಕ್ಯಭಾಷಾಂತರವು ಪ್ರಚುರವಾಗಲಿಕ್ಕೆ ಹೊರಟಿತು; ಅವನು ಬೆತ್ಲೆಹೇಮಿನ ಆ ಹಿಯೆರೋನುಮನಂತೆ[2] ಅಪೊಕ್ರುಫಗಳನ್ನು ಅಂದರೆ ಮೋಸದಿಂದ ದೇವವಾಕ್ಯವೆನ್ನಿಸುವ ಗ್ರಂಥಗಳನ್ನು ತನ್ನ ಭಾಷಾಂತರಕ್ಕೆ ಕೂಡಿಸಲಿಲ್ಲ. ದೇವವಾಕ್ಯಪ್ರಸಂಗವನ್ನು ದೇಶದಲ್ಲೆಲ್ಲಿಯೂ ಸಾಗಿಸುವದಕ್ಕೋಸ್ಕರ ಅವನು ಒಂದು ಸಮಾಜವನ್ನು ಸಹ ನಿರ್ಮಿಸಿದನು. ಅಧ್ಯಕ್ಷರು ಮುಂತಾದ ಪಪ್ಪಕ ಮತೋದ್ಯೋಗಿಗಳು ತನಗೆ ಇಷ್ಟೆಲ್ಲಾದರಲ್ಲಿ ಬಹಳ ಎದುರಾಟ ಮಾಡುತ್ತಿದ್ದರೂ[3] ಅವನು, ಸಭ್ಯರೆಲ್ಲರಿಗೂ ಪರಿಶುದ್ಧ ಬರಹವನ್ನೋದುವ ಅಧಿಕಾರವು ಉಂಟೆಂದು, ಮತ್ತು ಮತ್ತು ಸ್ಥಾಪಿಸುತ್ತಿರುವನು. ಆ ವೇಳೆ ಸುವಾರ್ತೆಯ ಜ್ಞಾನವು ಸಾಧಾರಣ ಜನರಿಗೆ, ಸ್ತ್ರೀಯರಿಗೆ ಸಹ, ಅನೇಕ ಪಪ್ಪಕ ಮತೋದ್ಯೋಗಿಗಳಿಗಿಂತಲೂ ಬಹು ಹೆಚ್ಚು ತಿಳಿದಂತಾಯಿತು[4]; ರಾಜಮಾರ್ಗದಲ್ಲಿ ಇಬ್ಬರನ್ನು ಕಂಡರೆ ಹ್ಯಾಗೂ ಅವರೊಳಗೊಬ್ಬನು ವಿಕ್ಲಿಫನ ಶಿಷ್ಯನಾಗಿರುವನು.

ಅಂದು ವಿಕ್ಲಿಫನಿಗೆ, ಮಿಸ್ಸದ ವಸ್ತುಪರಿಣಾಮದ[5] ಬೋಧೆಯು ಬಹಳ ದೊಡ್ಡ ಕೇಡೆಂದು, ಗೋಚರಿಸಲಿಕ್ಕೆ, ಅವನು, ಪರಿಶುದ್ಧ ರಾತ್ರಿಭೋಜನದಲ್ಲಿ ಕ್ರಿಸ್ತ

1) 383ನೇ ಪಾನು. 2) 173ನೇ ಪಾನು. 3) 357, 358, 380ನೇ ಪಾನುಗಳನ್ನು ಸರಿ ನೋಡು. 4) 374ನೇ ಪಾನು ಸರಿ ನೋಡು. 5) 368ನೇ ಪಾನು.

ನು ಆತ್ಮೀಯ ರೀತಿಯಾಗಿ ಮಾತ್ರ ಇರುತ್ತಾನೆಂದು, ಪ್ರಚಂಡವಾಗಿ ಬೋಧಿಸಲೆಸಗಿದನು. ಇದರಿಂದ ಅವನಿಗೆ ಮುಂಚೆಗಿಂತ ಮಿಗು ಕಷ್ಟ ಬಂತು; ಪಪ್ಪಕ ಪಕ್ಷದವರು ಅವನನ್ನು ಚಿತೆಯಲ್ಲಿ ಸುಡಲಿಕ್ಕೆ ಯೋಚಿಸುವವರಾದರು. ಆದರೆ ಪ್ರಜೆಗೆ ಅವನ ಮೇಲಿರುವ ಮೆಚ್ಚಿಗೆ ಕುಂದದಿರುವದಲ್ಲದೆ ರಾಜನು ಅವನ ಆಶ್ರಯದನಾಗಿ ಉಳಿಯುವ ಕಾರಣ ಅವನು ಒಕ್ಸ್ಫೋರ್ದಿನ ವಿದ್ಯಾಶಾಲೆಯನ್ನು ಬಿಟ್ಟು ಹೋಗ ಬೇಕಾದರೂ ತನ್ನ ಜೀವಾಂತದ ವರೆಗೆ ಲತ್ತರ್ವರ್ಥೆಂಬಲ್ಲಿ[1] ತನ್ನ ಬೋಧಕ ವೃತ್ತಿಯನ್ನು ಸಮಾಧಾನದಿಂದ ಮುನ್ನಡಿಸಲಿಕ್ಕೆ ಅಡ್ಡಿಯಾಗಲಿಲ್ಲ. ಅವನ ಮರಣಕ್ಕೆ ಎರಡು ವರುಷ ಮುಂಚೆ ಅವನಿಗೆ ತೀಕ್ಷ್ಣವಾದ ವಾತರೋಗ ಹಿಡಿಯಿತು. ಅದೇ ಸಮಯ ಪಪ್ಪರ ಭೇದದವನೊಬ್ಬನಾದ 6ನೇ ಉರ್ಬಾನ ಪಪ್ಪನು[2] ಅವನನ್ನು, ತನ್ನ ಬಳಿಗೆ ರೋಮಕ್ಕೆ ಬರ ಬೇಕೆಂದು, ಕರೆಸಲು, ಅವನು ಆ ಪಪ್ಪನಿಗೆ ಬರೆದ್ದರಲ್ಲಿ ಒಂದೆರಡು ಮಾತು ಯಾವವಂದರೆ—ನಾನು ರೋಗದ ದೆಸೆಯಿಂದ ಬರಲಾರೆನು; ಇದಕ್ಕಾಗಿ ದುಃಖಿಸುತ್ತೇನೆ, ಹ್ಯಾಗಂದರೆ ವಿಶೇಷವಾಗಿ ಪಪ್ಪನ ಸಮಕ್ಷದಲ್ಲಿ ನನ್ನ ವಿಶ್ವಾಸಾರ್ಥವನ್ನು ನಿವೇದಿಸಲಿಕ್ಕೆ ಉತ್ಕರ್ಷ ಪಡುತ್ತೇನೆ. ನನ್ನ ವಿಶ್ವಾಸದ ಒಂದು ಪ್ರಮಾಣವೇನೆಂದರೆ, ಭೂಮಿಯಲ್ಲಿ ಯಾರೂ ಪಪ್ಪನಿಗಾಗಲಿ ಸಂತರಿಗಾಗಲಿ ಅಲ್ಲ, ಕ್ರಿಸ್ತನಿಗೆಯೇ ಹಿಂಬಾಲಿಸುವ ಹಂಗಿನಲ್ಲಿದ್ದಾರೆ!—

ಅವನು ಇನ್ನು ಒಂದು ದೊಡ್ಡ ಗ್ರಂಥದಲ್ಲಿ ತನ್ನ ಸೌವಾರ್ತಿಕವಿಶ್ವಾಸಪ್ರಮಾಣವನ್ನು ವಿವರಿಸಿದ ಬಳಿಕ ಕ್ರಿ. ಶ. 1384ನೇ ವರುಷದ ಕಡೇ ದಿನದಲ್ಲಿ ತನ್ನ ಕರ್ತನೆಡೆಗೆ ಹೋದನು. ಅವನು ಸತ್ತು 22 ವರುಷ ಹೋದಾಗ ಒಕ್ಸ್ಫೋರ್ದಿನ ವಿದ್ಯಾಶಾಲೆಯವರು ಅವನನ್ನು ಕುರಿತು ಪ್ರಕಟಿಸಿದೊಂದು ಸಾಕ್ಷಿಪತ್ರವೇನಂದರೆ—ವಿಕ್ಲಿಫನ ಜೀವಿತದ ನಡತೆ ಎಲ್ಲಾ ಯಥಾರ್ಥತ್ವವುಳ್ಳದ್ದೂ ಸರ್ವಸಮ್ಮತವಾದದ್ದೂ ಆಗಿತ್ತು. ಬಾಲ್ಯದಿಂದ ಮರಣದ ತನಕ ಅವನ ಚರ್ಯೆಯು ಕೀರ್ತ್ಯವೂ ನೈಷ್ಕಪಟವೂ ಆಗಿದ್ದದರಿಂದ ಒಂದು ಸಮಯದಲ್ಲ್ಯಾದರೂ ಸಂದೇಹದ ಒಂದು ಅಣುವಾದರೂ ಅವನ ಮೇಲೆ ಬೀಳಲಿಲ್ಲ. ಪರಿಶುದ್ಧ ಬರಹದ ಬಲದಿಂದ ಅವನು ಕ್ರಿಸ್ತಮತದೂಷಕರೆಲ್ಲರನ್ನು ಜಯಿಸಿದನು[3]. ನ್ಯಾಯದರ್ಶನ ತತ್ವದರ್ಶನ ದೇವಜ್ಞಾನದರ್ಶನ ನೀತಿಚರ್ಯಾದರ್ಶನ ಉಪಮಾನವಿವೇಕದರ್ಶನಗಳನ್ನು ಕುರಿತು ಸಮಸ್ತರಿಗಿಂತಲೂ ಅಧಿಕ ಚನ್ನಾಗಿ ಕೃತಿಗಳನ್ನು ರಚಿಸಿ ಬರೆದಂಥಾ ಅವನಿಗೆ, ಪಾಷಂಡಿ ಎಂದು, ಆಜ್ಞೆನಿರ್ಣಯಿಸುವದನ್ನು ದೇವರು ನಮ್ಮ ಮತೋದ್ಯೋಗಿಗಳಿಗೆ ದೂರದಲ್ಲಿಡಲಿ!—ತಿರಿಗಿ 22 ವರುಷದ ಈಚೆ ಕ್ರಿ. ಶ. 1428ನೇ ವರುಷದಲ್ಲಿ

1) 384ನೇ ಪಾನು. 2) 337ನೇ ಪಾನು. 3) 374, 377ನೇ ಪಾನುಗಳನ್ನು ಸರಿನೋಡು.

5ನೇ ಮರ್ತೀನ ಪಪ್ಪನು ಕಾಡುಮೃಗದಂತೆ, ಕೊನ್ಸ್ಟನ್ಸಿನ[1] ಆ ಸಭಾಸಂಘದವರ ಒಂದು ವ್ಯವಸ್ಥೆಗನುಸಾರ, ಪಾಷಂಡಿಯದೆಂದು, ವಿಕ್ಲಿಫನ ಹೆಣವನ್ನು ತಿರಿಗಿ ಸಮಾಧಿಯೊಳಗಿಂದ ಬಗಿದು ತೆಗೆಸಿ, ಅವನ ಅನೇಕ ಗ್ರಂಥಗಳ ಸಂಗಡ ಮೆರವಣಿಗೆಯೊಡನೆ ಸುಡಿಸಿದನು. ಆದರೆ ಇಂಗ್ಲಿಷರಲ್ಲಿ ದೇವವಾಕ್ಯಾಧ್ಯಯನವೂ ಪಪ್ಪಕ ದುಶ್ಚರ್ಯೆಯ ಮೇಲಿನ ಅಸಹ್ಯತೆಯೂ ಬೆಳೆಯುತ್ತಲಿದ್ದವು. ಇಂತು ಇಂಗ್ಲಂದಿನಲ್ಲೂ ಹೊಸ ಕಾಲಕ್ಕೋಸ್ಕರ ಆದ ಅರುಣೋದಯದ ಪ್ರಕಾಶವು[2] ಮಿಗಿಲೇರುತ್ತಲಿತ್ತು.



## 51. ಕೊಬ್ಬಮಿನ ಪ್ರಭುವು.

2ನೇ ರಿಚಾರ್ಡನು[3] ಕ್ರಿ. ಶ. 1399ನೇ ವರುಷದ ವರೆಗೆ ಆಳುತ್ತಿರಲು, ಇಂಗ್ಲಂದಿನ ಸೌವಾರ್ತಿಕ ಕ್ರೈಸ್ತರಿಗೆ ಸುಮಾರು ತರದ ಸುಖವಿರುತ್ತಿತ್ತು; ರಾಜ್ಯಾಧಿಕಾರಸ್ಥರು ಪಪ್ಪಕ ಮತೋದ್ಯೋಗಿಗಳ ದರ್ಪಕ್ಕೊಳಗಾಗದಿರುತ್ತಿದ್ದರು. ಹೀಗಿರುವಾಗ ಆ ಸೌವಾರ್ತಿಕ ಕ್ರೈಸ್ತರು ಕ್ರಿ. ಶ. 1395ನೇ ವರುಷ ರಾಜನಿಗೂ ಪಾರ್ಲಿಮೆಂತಿನವರಿಗೂ[4]—ದಯೆ ಮಾಡಿ, ವಿಕ್ಲಿಫನ ವಿಶ್ವಾಸಪ್ರಮಾಣಕ್ಕನುಕೂಲವಾಗಿ ಪಪ್ಪಕ ಪಕ್ಷದ ರಾಜ್ಯಸಭೆಯನ್ನು[5] ನವೀಕರಿಸ ಬೇಕೆಂದು, ಬಿನ್ನವಿಸಿದರು; ಅದು ಸಾರ್ಥಕವಾಗದಿದ್ದರೂ ಅವರ ಧೈರ್ಯಕ್ಕೋಸ್ಕರ ಶಿಕ್ಷೆ ಏನೂ ಬರಲಿಲ್ಲ. ಆ ರಾಯನ ಮರಣದಿತ್ತ ವಿಕ್ಲಿಫನ ಗೆಳೆಯನಾಗಿದ್ದಂಥ ಆ ಒಳ್ಳೇ ಲಂಕಸ್ತೆರಿನ ಪ್ರಭುವಿನ[6] ಹೀನ ಮಗನಾದ 4ನೇ ಹೆನ್ರಿಯು ಅನ್ಯಾಯವುಳ್ಳ ಉಪಾಯಗಳಿಂದ ಉತ್ತರಾಧಿಕಾರಿಯಾದನು. ಇವನು, ಆಳುವಿಕೆಯಲ್ಲಿ ತನ್ನ ವಂಶಾವಳಿಯನ್ನೇ ಘಟ್ಟಿ ಮಾಡುವದಕ್ಕೆ ಪಪ್ಪಕ ಮತೋದ್ಯೋಗಿಗಳ ಸಹಾಯವೇ ಬೇಕೆಂತ, ಆಲೋಚಿಸಿ ಕೊಂಡು, 2 ವರುಷದ ಹಿಂದೆ ಸ್ವಾಮಿದ್ರೋಹದ ಅಪರಾಧ ಬಂದು ಇಂಗ್ಲಂದಿನ ಗಡಿ ದಾಟಿ ಹೋಗ ಬೇಕಾಗಿದ್ದ ಅರಂದೆಲನೆಂಬ ಪ್ರಧಾನಾಧ್ಯಕ್ಷನನ್ನು ತಿರಿಗಿ ಬರಿಸಿ, ಮನ್ನಿಸಿ, ಅವನಿಂದ ತನಗೆ ರಾಜಕಿರೀಟವನ್ನಿಡಿಸಿ ಕೊಂಡು, ತಾನು ಸೌವಾರ್ತಿಕರಿಗೆದುರಾಗಿ ಪಪ್ಪಕ ಸಭೆಯ ಆಶ್ರಯದಾತನೆಂದು, ಸಾರಿಸಿದನು. ಬಳಿಕ ಪಪ್ಪಕ ಮತೋದ್ಯೋಗಿಗಳ ಆಶೆಯ ಪ್ರಕಾರ ಅವನು ಆಜ್ಞಾಪಿಸಿದ್ದೇನೆಂದರೆ—ಒಬ್ಬ ಪಪ್ಪಕ ಮತೋದ್ಯೋಗಿಯ ಪ್ರತಿಷ್ಠೆ ಇಲ್ಲದೆ ಪ್ರಸಂಗಿಸುವಂಥವನೊಬ್ಬನಾಗಲಿ ಕಥರತ್ವದ ಗ್ರಂಥಗಳನ್ನು ಇಟ್ಟು ಕೊಂಡಿರುವಂಥವನೊಬ್ಬನಾಗಲಿ ಕಥರರ

1) 338ನೇ, 360ನೇ ಪಾನು. 2) 367, 370ನೇ ಪಾನು ಸರಿ ನೋಡು. 3) 385ನೇ ಪಾನು. 4) 336, 384ನೇ ಪಾನು. 5) 284, 349ನೇ ಪಾನುಗಳು. 6) 385ನೇ ಪಾನು.

ಬೋಧನೆ ಪಸರಿಸುವಂಥವನೊಬ್ಬನಾಗಲಿ ಅವರ ಸಂಘಗಳಿಗೆ ಹೋಗುವಂಥವನೊಬ್ಬನಾಗಲಿ ಶಿಕ್ಷಾರ್ಹನು; ಅಂಥವನೊಬ್ಬನನ್ನು ಅಧ್ಯಕ್ಷನು ಸೆರೆಯಲ್ಲಿಟ್ಟು, ಅವನು 3 ತಿಂಗಳೊಳಗೆ ತನ್ನ ಕಥರತ್ವವನ್ನತಿಗಳೆಯದಿದ್ದರೆ ಅವನನ್ನು ನ್ಯಾಯಾಧಿಕಾರಿಯ ಕೈಗೆ ಬಹಿರಂಗವಾದ ಸಜೀವದಹನಕ್ಕೋಸ್ಕರ ಒಪ್ಪಿಸ ಬೇಕು[1].—ಆ ಕಥರತ್ವವುಳ್ಳ ಗ್ರಂಥಗಳ ನಿರ್ಘಂಟಪತ್ರದಲ್ಲಿ ಮೊದಲಿನದು ಯಾವದಂದರೆ—ದೇವವಾಕ್ಯವೇ[2]!—ತದನಂತರ ಕ್ರಿ. ಶ. 1408ನೇ ವರುಷ ಆ ಅರಂದೆಲನು—ಪಪ್ಪನು ದೇವರ ಸ್ಥಳದವನು; ಅವನಿಗೆ ವಿಧೇಯನಾಗದವನು ದೇವದ್ರೋಹಿಯೇ; ದೇವವಾಕ್ಯವನ್ನು ಇಂಗ್ಲಿಷ ಭಾಷಾಂತರ ಮಾಡುವಂಥವನಿಗಾಗಲಿ ವಿಕ್ಲಿಫನ ಭಾಷಾಂತರವನ್ನೋದುವಂಥವನಿಗಾಗಲಿ ಬನ್ನೆಂಬ ಕಂಟಕವು[3] ಬರುವದು ಎಂದು, ನೇಮಿಸಿದನು.

ತತ್ಕ್ಷಣವೇ ಸೌವಾರ್ತಿಕರಿಗೆ ಮಹಾ ಜೀವಹಿಂಸೆಯು ಆರಂಭಿಸಿತು; ಸುವಾರ್ತೆಯವಲಂಬಿಸಿ ಕೊಂಡಿರುವವರೊಳಗೆ ಅನೇಕ ಶತ ಸಂಖ್ಯೆಯ ಜನರು ಸತ್ಸಾಕ್ಷಿಗಳಾಗಿ, ತರುವಾಯ ಚಿತಿಗಳಲ್ಲಿ ಅಳಿದರು; ಅನೇಕ ಸಹಸ್ರ ಸಂಖ್ಯೆಯವರು ಓಡಿ ಹೋದರು; ಬಹಿರಕ್ಕೆ ಮಾತ್ರ ಸೌವಾರ್ತಿಕರಿಗೆ ಸೇರಿದವರಲ್ಲಿ ಹೇರಳರು ಮರಣಭಯದಿಂದ ಹಿಮ್ಮೆಟ್ಟಿ, ತಿರಿಗಿ ಪಪ್ಪಕರಾದರು. ಆದರೂ ನಿಜ ಸೌವಾರ್ತಿಕರ ಸಮೂಹವು ದಿನಾಲು ವರ್ಧಿಸುತ್ತಲಿತ್ತು; ಅದಲ್ಲದೆ ಎಲ್ಲಾ ಪ್ರಜೆಯ ಪ್ರೀತಿಯು ಪಪ್ಪಕ ಮತೋದ್ಯೋಗಿಗಳನ್ನು ಬಿಟ್ಟು ಹೋಯಿತು.

ಪಪ್ಪಕರ ಕಡೆಯ ಆ ಹಿಂಸೆಯಲ್ಲಿ ಪೀಡಿತರಾದವರೊಳಗೆ ಕೊಬ್ಬಮಿನ ಪ್ರಭುವಾದ ಜೊನ್ ಓಲ್ಡ್ ಕಸ್ಸಲ್ ಎಂಬವನೊಬ್ಬನು. ಈ ಪ್ರಭುವು ಪ್ರಖ್ಯಾತ ಯುದ್ಧಶಾಲಿಯೂ 4ನೇ ಹೆನ್ರಿ ರಾಜನ ನಂಬಿಗಸ್ತ ಸೇವಕನೂ; ತನ್ನ ರಾಷ್ಟ್ರದಲ್ಲಿ ಅವನು ಸೌವಾರ್ತಿಕರನ್ನು ಚನ್ನಾಗಿ ರಕ್ಷಿಸುತ್ತಿರುವನು. ಹೆನ್ರಿಯು ಜೀವದಿಂದಿರುವಾಗ ಆ ತನ್ನ ಉತ್ತಮ ಸೇವಕನನ್ನು ಕಾಪಾಡುತ್ತಿದ್ದನು; ಆದರೆ ತನ್ನ ಬಾಲ್ಯವನ್ನು ಪಟಿಂಗತನದಿಂದ ಕಳೆಯ ಗೊಟ್ಟ 5ನೇ ಹೆನ್ರಿ ಎಂಬವನು ಕ್ರಿ. ಶ. 1413ನೇ ವರುಷ ಗದ್ದುಗೆಯನ್ನೇರಿ, ತನ್ನ ನಿವೇದನಶ್ರೋತನಾದ ಒಬ್ಬ ಕರ್ಮೆಲೀತ ಮಠಿಕನ[4] ವಶ ಶಿಕ್ಕಿದ ಮೇಲೆ ಹಿಂಸೆಯು ಮತ್ತಷ್ಟು ಉರಿಯಲಿಕ್ಕೆ ಹತ್ತಲು, ವೈರಿಗಳು—ಜೊನ್ ಓಲ್ಡ್ ಕಸ್ಸಲ್ ಪ್ರಭುವು ಬಹಳ ಸ್ವಧನ ಮುಟ್ಟಿಸಿ ಸೌವಾರ್ತಿಕ ಪ್ರಸಂಗಿಕರನ್ನು ದೇಶದಲ್ಲಿ ತಿರಿಗಿಸುತ್ತಿದ್ದಾನೆ, ವಿಕ್ಲಿಫನ ಗ್ರಂಥಗಳನ್ನೆತ್ತಿಸಿ ಹಬ್ಬಿಸುತ್ತಿದ್ದಾನೆ ಎಂದು, ಬಹು ಕಾಲದಾರಭ್ಯ ತಿಳಿದಿದ್ದು, ಇಂತಾದ ಅಪರಾ

1) 380, 381, 387ನೇ ಪಾನುಗಳನ್ನು ಸರಿ ನೋಡು. 2) 357, 358, 372, 380ನೇ ಪಾನುಗಳು. 3) 374ನೇ ಪಾನು. 4) 350ನೇ ಪಾನು.

ಧವನ್ನು ಆ ಹೊತ್ತು ಅರಸನ ಮುಂದೆ ಆವನ ಮೇಲೆ ಹೊರಿಸಿದರು. ಅದಕ್ಕೆ ಅರಸನು ತಾನಿರುವ ಲೊಂದನಿಗೆ[1] ಅವನನ್ನು ಕರ ತರಿಸಿ, ಪಪ್ಪಕ ಮತೋದ್ಯೋಗಿಗಳಿಗೆ ಒಳ ಪಡಿರೆಂದು, ನಾನಾ ವಿಧದಿಂದ ಬೋಧಿಸುವಲ್ಲಿ ಅವನಂದದ್ದೇನು—ರಾಜಶ್ರೀಯವರೇ, ನ್ಯಾಯದ ಖಡ್ಗ ಹಿಡಿದಿರುವ ದೇವರ ಸೇವಕನಾದ ತಮಗೆ ಎಂದಿನಂತೆ ವಿಧೇಯನಾಗಿರುವದು ನನ್ನ ಮನೋರ್ಥವೇ! ನನ್ನ ನಿತ್ಯ ನ್ಯಾಯಾಧಿಪತಿಗೆ ವಂದಿಸಿದನಂತರ ನನ್ನ ಪೂರ್ಣ ವಿಧೇಯತ್ವವು ತಮ್ಮದೇ! ನನ್ನ ಜೀವವನ್ನೂ ನನಗೆ ಈ ಲೋಕದಲ್ಲಿರುವ ಬದುಕನ್ನೂ ತಮ್ಮ ಚಿತ್ತಕ್ಕೆ ಒಳ ಪಡಿಸುತ್ತೇನೆ; ಪರಂತು ಪಪ್ಪನನ್ನೂ ಅವನು ತನ್ನದೆಂತ ಹೇಳುವ ಮತಕ ಅಧಿಕಾರವನ್ನೂ ಕುರಿತಾದರೆ, ಅವನಿಗೆ ಒಂದೇ ಸೇವೆ ಮಾಡುವದಕ್ಕಾದರೂ ನಾನು ಹಂಗಿಗನೆಂತ, ನಂಬುವದಿಲ್ಲ; ಮತ್ತು ಅವನಿಗೆ ಸೇವೆ ಮಾಡಲಾರೆನು; ಕಾರಣವೇನಂದರೆ, ನಿತ್ಯನಿರಂತರಕ್ಕೂ ಸತ್ಯವಾದಂಥ ದೇವವಾಕ್ಯದ ಪ್ರಕಾರ ಪಪ್ಪನು ಅಂತಿಕ್ರಿಸ್ತನೂ ನಾಶನದ ಮಗನೂ[2] ಆಗಿದ್ದಾನೆಂದು, ನನಗೇನೂ ಸಂಶಯವಿಲ್ಲ!—ಬಳಿಕ ಕೊಬ್ಬಮಿನ ಪ್ರಭುವನ್ನು ತವರ್ ಎಂಬ ಕೋಟೆಗೊಯಿದು, ಶೆರೆಯಲ್ಲಿಟ್ಟರು. ಅರಂದೆಲನೆಂಬ ಪ್ರಧಾನಾಧ್ಯಕ್ಷನು ಅವನೆಡೆಗೆ ಹೋಗಿ, ಅವನ ಬಾಯಿಯಿಂದ ಬೇರೆ ಮಾತು ಹುಟ್ಟಿಸಲಿಕ್ಕೆ ಪ್ರಯತ್ನಿಸಿದ್ದೆಲ್ಲಾ ನಿರರ್ಥಕವಾಯಿತು; ಆ ಪ್ರಭುವು—ನಿಮ್ಮ ಕೈಯಲ್ಲಿದ್ದೇನೆ, ನಿಮ್ಮ ಇಚ್ಛೆಯಿದ್ದಂತೆ ಮಾಡಿರಿ! ಎಂತ, ನುಡಿದು, ಬಿಟ್ಟನು. ಕ್ರಿ. ಶ. 1413ನೇ ವರುಷದ ಅಂತ್ಯಭಾಗದಲ್ಲಿ ಅವನನ್ನು ಅರಂದೆಲನ ಮುಖ್ಯಸ್ಥಿಕೆಯೊಳಗೆ ಲೊಂದನಿನ ಪೌಲ ದೇವಾಲಯದಲ್ಲಿ[3] ಕೂಡಿದ ಪಪ್ಪಕ ಮತೋದ್ಯೋಗಿಗಳ ಸಂಘಕ್ಕೆ ಕರಕೊಂಡು ಬಂದಾಗ ಪಪ್ಪಕ ಅಧ್ಯಕ್ಷರು, ಪ್ರಧಾನಾಧ್ಯಕ್ಷನ ಸಂಗಡ ಮರಳಿ ಒಂದೇ ಆಗಿರೆಂತ, ಹೇಳಿದ್ದಕ್ಕೆ ಅವನು, ನಾನು ಅವನ ವಿಷಯ ಒಂದೇ ತಪ್ಪಿತವನ್ನಾದರೂ ಎಂದೂ ಮಾಡಲಿಲ್ಲವೆಂದು, ಉತ್ತರ ಕೊಟ್ಟು, ಮೊಣಗಾಲೂರಿ—ನಿತ್ಯಜೀವಿಯಾದ ನನ್ನ ದೇವರೇ! ನಿನ್ನನ್ನಾದರೂ ನಾನು ನನ್ನ ಯೌವನಕಾಲದಲ್ಲಿ ಗರ್ವದಿಂದಲೂ ಶಿಟ್ಟಿನಿಂದಲೂ ಹೊಟ್ಟೆಬಾಕತನದಿಂದಲೂ ಲೋಭದಿಂದಲೂ ಅಶುಚಿಯಿಂದಲೂ ದುಃಖ ಗೊಳಿಸುತ್ತಿದ್ದೆನೆಂದು, ಇಲ್ಲಿ ನಿವೇದಿಸುತ್ತೇನೆ; ಅನೇಕ ಮನುಷ್ಯರಿಗೆ ಶಿಟ್ಟಿನಲ್ಲಿ ಅನ್ಯಾಯ ಗೈದದ್ದು ಮುಂತಾದ ಭೀಕರ ಪಾಪಗಳನ್ನು ಸಹ ನಡಿಸಿದ್ದೇನೆ. ಓ ಕರುಣಾಳು ಕರ್ತನೇ! ನಿನ್ನ ಕೃಪೆ ಬೇಡಿ ಕೊಳ್ಳುತ್ತೇನೆ! ಎಂದು, ಕೂಗಿ, ನೆರೆದ ಪ್ರಜೆಯ ಕಡೆಗೆ ಮುಖ ತಿರುಗಿಸಿ, ಹೇಳಿದ್ದೇನಂದರೆ—ಅಗೋ, ಪ್ರಜೋತ್ತಮರೇ, ನಾನು ದೇವರ ನ್ಯಾ

---

1) 90, 384ನೇ ಪಾನುಗಳು. 2) ಯೋಹಾ. 17, 12; 107, 364, 384ನೇ ಪಾನು. 3) 385ನೇ ಪಾನು.

ಯಪ್ರಮಾಣವನ್ನು ಮೀರಿದ್ದರಿಂದ ಈ ಜನರು ಎಂದಾದರೂ ನನ್ನನ್ನು ಹಿಂಸಿಸಲಿಲ್ಲ; ಆದರೆ ತಮ್ಮ ಸ್ವಂತ ನ್ಯಾಯಪ್ರಮಾಣಗಳ ದೆಸೆಯಿಂದ ನನಗೂ ಇತರರಿಗೂ ಅತಿರೇಕ ಕ್ರೂರತ್ವ ಮಾಡುತ್ತಿದ್ದಾರೆ!—ತದನಂತರ ಆ ಮತೋದ್ಯೋಗಿಗಳು, ನೀವು ವಿಕ್ಲಿಫನ ಶಿಷ್ಯರಲ್ಲೊಬ್ಬನೆಂದು, ಅಪರಾಧ ಹೊರಿಸಲು, ಅವನು—ನಾನು ಅವನನ್ನೂ ಅವನ ಬೋಧನೆಯನ್ನೂ ಅರಿಯದಿರುವಂದು ಪಾಪಕ್ರಿಯೆಗಳಿಗೆ ಹೆದರದಿರುತ್ತಿದ್ದೆನು; ನಾನು ಅವನ ಮೂಲವಾಗಿ, ದೇವರ ಭಯವೇನೆಂತ, ತಿಳುಕೊಂಡಾಗಲೇ ನನ್ನ ಸ್ವಭಾವವು ಬೇರೆಯಾಯಿತು! ಎಂತ, ನುಡಿದನು. ರೋಮಪುರವು ಅಂತಿಕ್ರಿಸ್ತನ ನಿಜ ಗೂಡು, ಅಲ್ಲಿಂದ ಅಂತಿಕ್ರಿಸ್ತನ ಸಕಲ ಶಿಷ್ಯರು ಬರುತ್ತಿದ್ದಾರೆಂಬದನ್ನು ಸಹ ಅಲ್ಲಿಯೂ ಧೈರ್ಯದಿಂದ ನಿವೇದಿಸಿದನು. ಕಡೆಯಲ್ಲಿ ಆ ಮತೋದ್ಯೋಗಿಗಳು, ನೀವು ಚಿತಿಯಲ್ಲಿ ದಗ್ಧರಾಗ ಬೇಕು! ಎಂತ, ಆಜ್ಞೆ ಮಾಡಲಿಕ್ಕೆ, ಅವನು—ಈ ಆಜ್ಞೆಯು ನನ್ನ ಶರೀರಕ್ಕೆ ತಾಗುತ್ತದಷ್ಟೇ! ನನ್ನ ಪ್ರಾಣವನ್ನು ನಿರ್ಮಿಸಿದವನು ತನ್ನ ಅಮಿತ ಅಂತಃಕರಣದ ಪ್ರಕಾರವೂ ತನ್ನ ವಾಗ್ದತ್ತದ ಪ್ರಕಾರವೂ ಅದನ್ನು ರಕ್ಷಿಸುವನು! ಎಂತ, ಹೇಳಿ, ವಿಶ್ವಾಸಶೀಲನಾಗಿ ಶೋಭಿಸಿದನು.

ಆದರೆ ಆ ಆಜ್ಞಾನಿರ್ಣಯವು ಹೆನ್ರಿ ರಾಜನು ಆ ಮತೋದ್ಯೋಗಿಗಳಿಗೆ ಕೊಟ್ಟಿದ್ದ ಅಧಿಕಾರದ ಮೇರೆಯನ್ನು ದಾಟಿದ ಹಾಗೆ ಕಾಣುತ್ತದೆ; ಹೀಗಿರಲಾಗಿ, ಅದು ಬಹು ಕಾಲ ನಡೆಯದಿರಲು, ಕೊಬ್ಬಮಿನ ಪ್ರಭುವು, ಬೇರೆ ಜನರ ಸಹಾಯದಿಂದಾಗಲಿ ಸ್ವಪ್ರಯತ್ನದಿಂದಾಗಲಿ, ಆ ತವರಿನೊಳಗಿಂದ ತಪ್ಪಿಸಿ ಕೊಂಡು ಹೋಗಿ, ಇಂಗ್ಲಂದಿನ ತೀರಪ್ರದೇಶದಲ್ಲಿ ಒಂದು ಆಶ್ರಯಸ್ಥಳ ಕಂಡು ಕೊಂಡನು. ತರುವಾಯ ಪಪ್ಪಕರು ಸೌವಾರ್ತಿಕ ಕ್ರೈಸ್ತರ ಮೇಲೆ ರಾಜನ ಹಗೆಯನ್ನೇರಿಸುವದಕ್ಕಾಗಿ ಕ್ರಿ. ಶ. 1414ನೇ ಅಬ್ದದಾದಿಯಲ್ಲಿ—ಅವರಲ್ಲಿ ಒಂದು ಲಕ್ಷ ಜನರು ಸಾಯುಧರಾಗಿ ಕೊಬ್ಬಮಿನ ಪ್ರಭುವಿನ ಕೈಯ ಕೆಳಗೆ ಪಟ್ಣದ ಹೊರಗೆ ಸೇಂತ್ ಜೈಲ್ಸ್ ಎಂಬ ವನದಲ್ಲಿ ಕೂಡಿ ಬಂದಿದ್ದಾರೆ; ಒಳನುಗ್ಗಿ, ಪಟ್ಣದ ದೊಡ್ಡ ಮನೆಗಳಿಗೆ ಬೆಂಕಿ ಹಚ್ಚಿ, ಅರಸನನ್ನು ಕೊಲ್ಲಲಿಕ್ಕೆ ನೋಡುತ್ತಾರೆ ಎಂತ, ಸುದ್ದಿ ಹುಟ್ಟಿಸಿದರು. ಆಗ ಅಲ್ಲಿಗೈದಿ ನೋಡಲು, ಸೌವಾರ್ತಿಕರ ಮುಖ್ಯ ಎದುರಾಳಿಯಾದ ವೊಲ್ಸಿಂಘಮನ ಚರಿತ್ರಗ್ರಂಥದ ಪ್ರಕಾರವಾದರೂ ಅಲ್ಪ ಸ್ವಲ್ಪ (ನಿರಾಯುಧರಾದ) ಜನರು ಮಾತ್ರ ತೋರಿದರು; ಸುಮಾರು 100 ಮಂದಿಯಾದ ಅವರು ಬೇರೆ ಬೇರೆ ಕಡೆಯಿಂದ ಅನ್ಯೋನ್ಯ ದೇವಾರಾಧನೆಗೋಸ್ಕರ ಆ ಏಕಾಂತ ಸ್ಥಳದಲ್ಲಿ ನೆರೆದಿದ್ದರು. ಆದರೂ ಅಂದಿನಿಂದ ಹಿಂಸಕರು ಕಾರಣವಿಲ್ಲದೆ ಸರ್ವ ಕಥರರನ್ನು ಕುರಿತು ರಾಜದ್ರೋಹಿಗಳೆಂಬ ಹೆಸರನ್ನು ಬಳಿಸ ತೊಡಗಿದರು. 2 ವರುಷದಿತ್ತ ಕೊಬ್ಬಮಿನ ಪ್ರಭು ಶತ್ರುಗಳ ಕೈಗೆ ಶಿಕ್ಕಿದನು. ಆಗಲವರು ಅವನನ್ನು ಲೊಂದನಿಗೆ ತೆಕ್ಕೊಂಡು ಬಂದು,

ಪಪ್ಪಕ ಮತೋದ್ಯೋಗಿಗಳ ಆಜ್ಞೆಯ ಮೇರೆಗೆ ಆ ನಿರಪರಾಧಿಯನ್ನು ಸೇಂತ್ ಜೈಲ್ಜ್ ಎಂಬಲ್ಲಿಗೆಳದೊಯ್ದರು. ಅದು ಲೊಂದನಿನ ಹತ್ತರ ಆಗ ಇರುತ್ತಿದ್ದ ಒಂದು ಕಾಡು; ಈಗ ಅದು ಬದಲಾಗಿ, ಲೊಂದನು ಪಟ್ಣದ್ದೊಂದು ಭಾಗವಾಯಿತು. ಅಲ್ಲಿ ಅವನನ್ನು ಸಂಕೋಲೆಯಿಂದ ತೂಗ ಹಾಕಿ, ಕೆಳಗೆ ಕಿಚ್ಚು ಹೊತ್ತಿಸಿ, ಹೀಗೆ ಅವನನ್ನು ಮೆಲ್ಲ ಮೆಲ್ಲಗೆ ಸುಟ್ಟು ಕೊಂದರು. ಕೊಬ್ಬಮ ಪ್ರಭುವೆಂಬ ಆ ರಕ್ತಸಾಕ್ಷಿಯು ಕ್ರಿಸ್ತನಾಥನ ಮೇಲಿನ ಧ್ಯಾನದಿಂದ ಶಾಂತನಾಗಿದ್ದು, ಅವನ ಸನ್ನಿಧಿಗೆ ಹೋದನು.

ಬಳಿಕ, ದೇವವಾಕ್ಯದ ಪ್ರಕಟನಗ್ರಂಥದಲ್ಲಿ[1] ವರ್ಣಿತಳಾದ ಆ ಜಾರಸ್ತ್ರೀಯು ಪರಿಶುದ್ಧರ ರಕ್ತದಿಂದಲೂ ಯೇಸುವಿನ ಸಾಕ್ಷಿಗಳ ರಕ್ತದಿಂದಲೂ ಮತ್ತಳಾಗಿದ್ದಂತೆಯೇ, ಪಪ್ಪಕ ಸಭೆಯವರು ತಾವು ಮಾಡಿದ ಹಿಂಸೆಯಿಂದ ಪ್ರಮತ್ತರಾದರು. 100ಕ್ಕಿಂತ ಹೆಚ್ಚು ವರುಷವೇ ಅವರು ಸೌವಾರ್ತಿಕ ಕ್ರೈಸ್ತರನ್ನು ಬೆಂಕಿಯಿಂದ ಕೊಲ್ಲುತ್ತಾ ಹೋದರು. ಆದಾಗ್ಯೂ ಅವರು ಹಚ್ಚುತ್ತಿರುವ ಚಿತಿಗಳ ಜ್ವಾಲೆಗಿಂತ ಸುವಾರ್ತೆಯ ಜ್ವಾಲೆಯು ಸದ್ಭಕ್ತರ ಹೃದಯದಲ್ಲಿ ಅಧಿಕವಾಗಿ ಬೆಳೆಯಿತು.

## 52. ಯೋಹಾನ ಹುಸನು.

ಸೌವಾರ್ತಿಕ ಕ್ರೈಸ್ತರ ಬಲವು ಈತಲಿಯದಲ್ಲಿಯೂ ಫ್ರುಂಚಿನಲ್ಲಿಯೂ[2] ಇಂಗ್ಲಂದಿನಲ್ಲಿಯೂ ಪ್ರವರ್ಧಿಸುತ್ತಿದ್ದದು ಹಿಂದೆ ಓದಿದ್ದೀರಿ. ಈಗ ಗೆರ್ಮಾನಿಯ ದೇಶದ್ದೊಂದು ಭಾಗದಲ್ಲಿಯವರ ಸ್ಥಿತಿಗತಿಯನ್ನು ಸ್ವಲ್ಪ ನೋಡುವ!

ಗೆರ್ಮಾನಿಯಕ್ಕೆ ಶೇರಿದ ಶೀಮೆಗಳಲ್ಲಿ ಬೋಯಿಮೆನೆಂಬದು ಒಂದು[3]. ಇದರಲ್ಲಿ ಗ್ರೇಕ ಮಠಿಕರ ಮೂಲಕವಾಗಿ ಗ್ರೇಕ ಮತದ ಕ್ರೈಸ್ತತ್ವವು ಉದ್ಭವಿಸಿತ್ತು. ಹೀಗಿರುವದರಿಂದ ಆ ಬೋಯಿಮೆನವರು ಬಹು ಕಾಲ ಪಪ್ಪರ ಅಧಿಕಾರಾಭಿಮಾನಕ್ಕೆದುರಿಸುತ್ತಿದ್ದು, ಬಹು ಕಾಲದ ಮಟ್ಟಿಗೆ ಸರ್ವಸಭೋದ್ಯೋಗಿನಿರ್ವಿವಾಹಿತ್ವ ಪಾತ್ರಾಪಹರಣ ಮುಂತಾದ ಕೆಲವು ಪಪ್ಪಕ ಆಚಾರಗಳಿಲ್ಲದವರಾಗಿ ಉಳಿದರು. ಕ್ರಿ. ಶ. 1184ನೇದಕ್ಕೀಚೆ ಪೆತ್ರ ವಲ್ದನು[4] ಮೊದಲಾದ ಸತ್‌ಕ್ರೈಸ್ತರು ಅಲ್ಲಿ ಅನೇಕ ವರುಷ ಸುವಾರ್ತೆ ಸಾರುತ್ತಾ ಬಂದ ಕಾರಣ ಪಪ್ಪಕ ಮತೋದ್ಯೋಗಿಗಳಲ್ಲಿಯೂ ಆಗಿಂದಾಗ ಹಲವರೆದ್ದು, ಇತರರಾದ ಪಪ್ಪಕ ಮತೋದ್ಯೋಗಿಗಳನ್ನು ಅವರ ದುಶ್ಚರ್ಯೆಗೋಸ್ಕರ ಗದರಿಸಿದ್ದಲ್ಲದೆ, ಪಪ್ಪಕ ಸಭೆಯಲ್ಲಿ ಅಯೋಗ್ಯ ಬೋಧನೆ ಆಚಾರಗಳು ಅವೆ ಎಂತ, ಬೋಧಿಸಲಿಕ್ಕೆ ಧೈರ್ಯ ಗೊಂಡರು; ನಿದರ್ಶನಕ್ಕಾಗಿ ಕ್ರಿ. ಶ.

1) 17, 1—6. 2) 48 ನೇ ಸಂಧಿ. 3) 323ನೇ ಪಾನು. 4) 376ನೇ ಪಾನು.

1360ನೇ ವರುಷಕ್ಕೂ 1493ನೇದಕ್ಕೂ ನಡುವೆ ಕೊನ್ರಾದ ಸ್ತ್ರೀಕ್ನನು, ಯೋಹಾನ ಮಿಲಿತ್ಸನು, ಯಾನೊವಿನ ಮತ್ಥಿಯನು ಎಂಬ ಮೂವರು ಸಭೋದ್ಯೋಗಿಗಳು ಪ್ರಾಗೆಂಬ ರಾಜಧಾನಿಯಲ್ಲಿ ಅಂಥ ಸೌವಾರ್ತಿಕ ಬೋಧನೆಯ ಭಾವದಿಂದ ವಿರಾಜಿಸುತ್ತಿದ್ದರು. ಕ್ರಿ. ಶ. 1420ನೇ ವರುಷಕ್ಕೆ ಥೂರಿಂಗೆನಲ್ಲಿಯೂ[1] ಮೇರೆನಲ್ಲಿಯೂ[2] ಬೋಯಿಮೆನಲ್ಲಿಯೂ ಔಸ್ತ್ರಿಯದಲ್ಲಿಯೂ[3] ಹೂಂಗರಿಯದಲ್ಲಿಯೂ ಸಾವಿರಾರು ಜನರು ಸೌವಾರ್ತಿಕ ಕ್ರೈಸ್ತರಿದ್ದದ್ದು ಪ್ರಸಿದ್ಧವು.

ಇಂತಾದ ಸಮಯ ಬೋಯಿಮೆನ ಹುಸಿನೆಕೆಂಬ ಗ್ರಾಮದಲ್ಲಿ ಕ್ರಿ. ಶ. 1373ನೇ ವರುಷ ಒಬ್ಬ ಬಡ ಒಕ್ಕಲಿಗನಿಗೆ ಯೋಹಾನ ಹುಸನು (ಅಂದರೆ ಹಂಸನು) ಹುಟ್ಟಿದನು. ಒಬ್ಬ ಪ್ರಭುವು ಆ ಹುಡುಗನ ಬುದ್ಧಿಚಾತುರ್ಯ ಕಂಡು, ಅವನನ್ನು ಸಾಕಿದನು. ಹುಸನು ಬಹಳ ಚಟವಟಿಕೆಯಿಂದ ವಿದ್ಯೆ ಕಲಿತು, ತನ್ನ ಜೀವಿತದ 16ನೇ ವಯಸ್ಸಿನಲ್ಲಿ ದೇವಜ್ಞಾನವಿದ್ಯೆಯನ್ನಭ್ಯಾಸಿಸುವದಕ್ಕೋಸ್ಕರ ಪ್ರಾಗು ಪಟ್ಣದ ಮಹಾ ವಿದ್ಯಾಶಾಲೆಗೆ ಹೋಗಿ, ತನ್ನ 25ನೇ ವಯಸ್ಸಿನಲ್ಲೇ ತಾನು ಆ ಶಾಲೆಯ ಒಬ್ಬ ಪಂಡಿತನಾದನು. ಅಷ್ಟರಲ್ಲಿ ಇಬ್ಬರು ಆಢ್ಯರಾದ ಕ್ರೈಸ್ತರು ಆ ಪಟ್ಣದಲ್ಲಿ ಒಂದು ದೇವಾಲಯವನ್ನು ಕಟ್ಟಿಸಿ, ಅದರಲ್ಲಿ ಪ್ರಜೆಗೆ ಜೀವದ ರೊಟ್ಟಿ ಎಂಬ ದೇವವಾಕ್ಯವನ್ನು ಬೋಯಿಮು ಭಾಷೆಯಿಂದಲೇ ಸಾರ ಬೇಕೆಂದು, ನೇಮಿಸಿ, ಇದರ ಸಂಜ್ಞೆಗಾಗಿ ಅದಕ್ಕೆ ಬೆತ್ಲೆಹೇಮು ಅಂದರೆ ರೊಟ್ಟಿಯ ಮನೆ ಎಂತ, ಹೆಸರಿಟ್ಟಿದ್ದರು. ಹುಸನು ತನ್ನ ಸನ್ಮಾರ್ಗತನದಿಂದಲೂ ವಾಕ್ಚತುರತೆಯಿಂದಲೂ ಕೀರ್ತಿ ಗೊಂಡ ಕಾರಣ ಕ್ರಿ. ಶ. 1402ನೇ ವರುಷ ಅವನನ್ನು, ಆ ದೇವಾಲಯದ ಬೋಧಕನೆಂತ, ಆರಿಸಿ ಕೊಂಡರು. ಬಳಿಕ ಅವನು ಸಭ್ಯರನ್ನು ಮಾತ್ರವಲ್ಲದೆ ಕಾಲಗತಿಯಿಂದ ಸಭೋದ್ಯೋಗಿಗಳನ್ನು ಸಹ ತಕ್ಕ ಹಾಗೆ ಅವರ ದುರ್ನಡತೆಗೋಸ್ಕರ ತನ್ನ ಪ್ರಸಂಗಗಳಲ್ಲಿ ಬಹಳ ಗದರಿಸುತ್ತ ಬರಲಿಕ್ಕೆ, ಪ್ರಾಗಿನ ಪ್ರಧಾನಾಧ್ಯಕ್ಷನಾದ ಸ್ಬಿಂಕೊನೆಂಬವನು ವೆಂತ್ಸೆಲನೆಂಬ ಬೋಯಿಮೆನ ಅರಸನ ಬಳಿಯಲ್ಲಿ ಅವನ ಚರ್ಜೆ ತೆಗೆದನು; ಆಗಲಾ ರಾಜನು—ಹುಸ ಸ್ವಾಮಿಯು ನಮ್ಮಂಥ ಸಾಧಾರಣ ಸಭ್ಯರಿಗೆ ಮಾತ್ರ ಬುದ್ಧಿ ಹೇಳುತ್ತಿರುವಂದು ನೀವು ಅನುಮೋದಿಸುತ್ತಿದ್ದಿರಿ; ಈಗಲೊಮ್ಮೆ ನಿಮ್ಮ ಸರ್ತಿ ಸಹ ಬಂದ ಮೇಲೆ ಸಂತೋಷದಿಂದಿರ್ರಿ! ಎಂತ, ಉತ್ತರ ಕೊಟ್ಟನು. ಹೀಗಾದ ತುಸಕ ಹುಸನಿಗೂ ಸ್ಬಿಂಕೊನಿಗೂ ಆಗ ಮಿತ್ರಭೇದವಾಗಲಿಲ್ಲ; ಅವರಿಬ್ಬರು ಕೂಡಿ ಆ ಸಮಯದಲ್ಲೇ ಅಪವಿಶ್ವಾಸದ ಮತ್ತು ಮೋಸದ ಒಂದು ಕ್ರಿಯೆಗೆ ಎದುರಿಸುವವರಾದರು. ಹ್ಯಾಗಂದರೆ, ಸ್ಲೇಸಿಯೆನು ಶೀಮೆಯ ಪ್ರೀಗ್ನಿತ್ಸೆಂಬದೊಂದು ನಾಡಿನಲ್ಲಿ ಒಬ್ಬ ಪುಂಡು ಪಾಳೆಗಾರನು ದೇವಾಲಯ ಕೆಡಿಸಿ, ಯಾಗವೇದಿಯೊಂದ

1) 303, 312, 313ನೇ ಪಾನುಗಳು. 2) 323ನೇ ಪಾನು. 3) 310ನೇ ಪಾನು.

ನ್ನೇ ಉಳಿಸಿರುವಲ್ಲಿ ಅದರ ಮೇಲೆ ಕ್ರಿಸ್ತನ ರಕ್ತದಿಂದ ಕೆಂಪಾದ 3 ಹೊಸ್ತಿಯಗಳು[1] ಶಿಕ್ಕಿದವಂತೆ. ಇವುಗಳಿಂದ ಅನೇಕ ರೋಗಿಷ್ಠರಿಗೆ ಕ್ಷೇಮ ಬರುತ್ತದೆಂತ, ಅಲ್ಲಿಯ ಪಪ್ಪಕ ಮತೋದ್ಯೋಗಿಗಳು ಒದರುತ್ತಿದ್ದರು. ಗೆರ್ಮಾನಿಯದ ಸರ್ವ ಕಡೆಯಿಂದ ಸಾವಿರಾರು ಮಂದಿ ಯಾತ್ರಿಕರು ಆ ಅದ್ಭುತವೆಂಬದು ನೋಡಿ ಅನುಭವಿಸಲಿಕ್ಕೆ ಆಗಮಿಸುತ್ತಿದ್ದರು. ಈ ಪ್ರಕಾರದ ಕೆಲಸವು ದೀರ್ಘ ಕಾಲ ನಡೆದನಂತರ ಪ್ರಾಗು ಪಟ್ಣದ ಒಬ್ಬ ಗೃಹಸ್ಥನು ಸಹ ತನ್ನ ಮೋಟು ಕೈಯ ಪರಿಣಾಮಕ್ಕಾಗಿ ಅಲ್ಲಿಗೆ ಹೋಗಿ, ಮುಂದಾಗಿ ಆ ಮತೋದ್ಯೋಗಿಗಳಿಗೆ ಬೆಳ್ಳಿಯದೊಂದು ಕೈಯನ್ನು ಹರಿಕೆ ಕೊಟ್ಟು, ಕೆಲವು ತಿಂಗಳುಗಳ ವರೆಗೂ ತನ್ನ ಪರಿಣಾಮದ ದಾರಿ ನೋಡುತ್ತಿದ್ದನು. ಆಗ ಒಬ್ಬ ಮತೋದ್ಯೋಗಿಯು, ಆ ಅಸ್ವಸ್ಥನು ತನ್ನ ಸ್ಥಳಕ್ಕೆ ತಿರಿಗಿ ಹೋಗಿ ಬಹಳ ದಿವಸವಾಯಿತೆಂತ, ನೆನಸಿ, ಒಮ್ಮೆ ಪ್ರಸಂಗಪೀಠವೇರಿ, ನೆರೆದ ಪ್ರಜೆಗೆ—ಮತ್ತೊಂದು ಮಹಾದ್ಭುತವಾಯಿತು, ಪ್ರಾಗಿನ ಒಬ್ಬ ಗೃಹಸ್ಥನಿಗೆ ಸಹ ಕ್ಷೇಮ ಬಂತು! ಎಂದು, ಹೇಳಿ, ಆ ಗೃಹಸ್ಥನು ಕೃತಜ್ಞತೆಯಿಂದ ಆ ದೇವಾಲಯದವರಿಗೆ ಮುಂದಾಗಿ ಕೊಟ್ಟಿದ್ದ ಬೆಳ್ಳಿಯ ಕೈಯನ್ನೆತ್ತಿ, ಪ್ರಮಾಣಕ್ಕಾಗಿ ತೋರಿಸಿದನು. ಆದರೆ ಮೋಸ ಪಟ್ಟ ಆ ಗೃಹಸ್ಥನು ತಾನು ಆ ಪ್ರಜೆಯೊಳಗಿದ್ದು, ಸಹಿಸಲಾರದೆ, ರೋಷದಿಂದ—ಪ್ರೀಸ್ತನೇ, ನೀನು ಸುಳ್ಳಾಡುತ್ತಿ! ಇಗೋ, ನನ್ನ ಕೈಯು ಮುಂಚಿನಂತೆ ಇನ್ನೂ ಮೋಟೇ! ಎಂದು, ಕೂಗಿ, ನಿರಾಶೆಯಿಂದ ಪ್ರಾಗಿಗೆ ಮರಳಿದನು. ಬಳಿಕ ಹುಸನು ಸ್ಬಿಂಕೊ ಅಧ್ಯಕ್ಷನ ಆಜ್ಞೆಯ ಮೇಲೆ ಅಲ್ಲಿಗೆ ಹೋಗಿ, ವಿಚಾರಿಸಿ, ಆ ಪ್ರಬಲ ಮೋಸವನ್ನು ಇದ್ದ ಹಾಗೆಯೇ ಕಂಡು, ಒಂದು ಗ್ರಂಥದಿಂದ ಬೈಲಿಗೆ ತರಲು, ಆ ಅಧ್ಯಕ್ಷನು, ಇನ್ನು ಮುಂದೆ ಯಾರೂ ಅಲ್ಲಿಗೆ ಯಾತ್ರೆ ಮಾಡ ಬಾರದೆಂದು, ವಿಧಿಸಿದನು.

ಸ್ವಲ್ಪ ಕಾಲಕ್ಕೀಚೆ ಹುಸನಿಗೆ ಅರಮನೆಯ ಒಬ್ಬ ಪಾಳೆಗಾರನಾದ ಪ್ರಾಗಿನ ಹಿಯೆರೋನುಮನೆಂಬವನ ಪರಿಚಿತೆಯಾಯಿತು; ಇವನು ಇಂಗ್ಲಂದಿನ ಒಕ್ಸ್ಫೋರ್ದ್ ಪಟ್ಣದಲ್ಲಿ[2] ದೇವಜ್ಞಾನವಿದ್ಯೆಯ ಅಭ್ಯಾಸ ಮಾಡಿ, ವಿಕ್ಲಿಫನ ಬೋಧನಾರ್ಥದವನಾಗಿ, ಬಂದಿದ್ದನು. ಹ್ಯಾಗಂದರೆ, ಬೋಯಿಮೆನಿನ ಸೌವಾರ್ತಿಕ ಕ್ರೈಸ್ತರಿಗೂ ಇಂಗ್ಲಂದಿನವರಿಗೂ ಸದಾ ಬಳಿಕೆ ಇರುವದು; ನಿದರ್ಶನಕ್ಕಾಗಿ, ಆ 2ನೇ ರಿಚಾರ್ದ ರಾಜನ[3] ಪತ್ನಿಯೂ ವಿಕ್ಲಿಫನ ಶರಣಳೂ ಆಗಿದ್ದ ಅನ್ನಳೆಂಬವಳು ಬೋಯಿಮೆನಿನವಳು; ಅವಳು ಆ ಯೋಹಾನ ಮಿಲಿತ್ಸನ[4] ಶಿಷ್ಯರಲ್ಲೊಬ್ಬಳಾಗಿರುವಲ್ಲಿ ತಕ್ಕಷ್ಟು ಸೌವಾರ್ತಿಕ ಜ್ಞಾನ ಪಡ ಕೊಂಡು, ಕ್ರಿ. ಶ. 1382ನೇ ವರುಷ ಇಂಗ್ಲಂ

1) 354ನೇ ಪಾನು. 2) 382, 383, 384, 385, 386, 387ನೇ ಪಾನುಗಳು. 3) 385, 388ನೇ ಪಾನು. 4) 393ನೇ ಪಾನು.

ದಿಗೆ ಹೋಗಿದ್ದಳು; ಅವಳು ಬೋಯಿಮ ಮತ್ತು ಗೆರ್ಮಾನ ಮತ್ತು ಲತೀನ ಭಾ
ಷೆಗಳದೊಂದೊಂದು ದೇವವಾಕ್ಯಗ್ರಂಥವನ್ನಿಟ್ಟು ಕೊಂಡು, ಜಾಗರೂಕತೆಯಿಂ
ದೋದುತ್ತಿದ್ದಳು. ಪುನಃ, ಕ್ರಿ. ಶ. 1400ನೇದರ ಸುತ್ತ ಕೊಬ್ಬಮಿನ ಪ್ರಭುವು ವಿ
ಕ್ಲಿಫನ ಕೃತಿಗಳಲ್ಲನೇಕಗಳನ್ನು ಬೋಯಿಮೆನಿಗೆ ಕಳುಹಿಸ ತೊಡಗಿದ್ದನು. ಇಂತಿ
ರಲಿಕ್ಕೆ, ಕ್ರಿ. ಶ. 1404ನೇ ಅಬ್ದ ಇಬ್ಬರು ಯೌವನಸ್ಥರಾದ ಸೌವಾರ್ತಿಕ ಕ್ರೈಸ್ತರು
ಇಂಗ್ಲಂದಿನಿಂದ ಪ್ರಾಗಿನ ಪ್ರಖ್ಯಾತ ವಿದ್ಯಾಶಾಲೆಗೆ ಆಗತರಾಗಿ, ಅಭ್ಯಾಸಿಸಿದ್ದಲ್ಲದೆ
ವಿಕ್ಲಿಫನ ಬೋಧನಾಭಿಪ್ರಾಯವನ್ನು ಪ್ರಬಲೀಕರಿಸುವವರಾದರು. ಅದರಿಂದ ವಾ
ಕ್ಕಲಹ ಹುಟ್ಟಿ, ಆ ವಿದ್ಯಾಶಾಲೆಯ ಪಂಡಿತರಲ್ಲಿಯೂ ವಿದ್ಯಾರ್ಥಿಗಳಲ್ಲಿಯೂ ಶೇ
ರಿತು; ಬೋಯಿಮೆನಿನವರು ವಿಕ್ಲಿಫನ ಅನುಕೂಲವಾದಿಗಳಾಗುವಲ್ಲಿ ಪರಸ್ಥಳದವ
ರು ಪ್ರತಿಕೂಲವಾದಿಗಳಾದರು. ಆಗ ಹುಸನು ವಿಕ್ಲಿಫನ ಕೃತಿಗಳನ್ನು ಚನ್ನಾಗಿ
ಅಧ್ಯಯನ ಮಾಡಿ, ಕಡೆಯಲ್ಲಿ ತಾನು ಸಹ ಅವುಗಳ ಅರ್ಥಕ್ಕೆ ಒಡಂಬಟ್ಟು ನು
ಡಿದನು.

ಆ ಸಮಯ ಆ ವಿದ್ಯಾಶಾಲೆಯಲ್ಲಿ ಮುಖ್ಯವಾಗಿ ನಾಲ್ಕು ಜನಾಂಗದವರಿ
ದ್ದರು; ಯಾರಂದರೆ ಬೋಯಿಮೆನಿನವರು, ಬೈಯೆರ್ನಿನವರು[1], ಸಸ್ಕೆನಿನವರು[2],
ಪೋಲಂದಿನವರು[3]. ಆ ಶಾಲೆಯನ್ನು ಕುರಿತ ಸಕಲ ವ್ಯವಸ್ಥಾಕಾರ್ಯಗಳಲ್ಲಿ ಒಂ
ದೊಂದು ಜನಾಂಗಕ್ಕೆ ಒಂದೊಂದು ಸಮತುಲ್ಯವಾದ ಅಧಿಕಾರವಿರುವದರಿಂದ ಆ
ವಾಕ್ಕಲಹದಲ್ಲಿ ಬೋಯಿಮರು ಸೋತರು. ಹೀಗಿರಲಾಗಿ, ವಿಕ್ಲಿಫನ ಬೋಧನೆ
ಯು ಪಾಷಂಡವಾದ ಕಥರತ್ವವೆಂದು, ವಿದ್ಯಾಶಾಲೆಯವರ ನಿರ್ಣಯವಾಯಿತು.
ಆಗ ಹುಸನು ವೆಂತ್ಸೆಲ ರಾಯನ ಸನ್ನಿಧಿಯಲ್ಲಿ—ಇನ್ನು ಮುಂದೆ ಬೋಯಿಮೆನಿನ
ವರಿಗೆ ಮೂರು ಅಧಿಕಾರ, ಪರ ಜನಾಂಗದವರಿಗೆ ಒಂದೇ ಅಧಿಕಾರ ಎಂಬಂತೆ ನ
ಡೆಯಲಿ! ಎಂದು, ಬಹಳ ಬೇಡಿ ಕೊಂಡ ಕಾರಣ ಅರಸನು ಆ ಪ್ರಕಾರದ ಆಜ್ಞೆ
ಕೊಟ್ಟನು. ಅದು ನಿಮಿತ್ತವಾಗಿ ಸಾವಿರಾರು ಪರಸ್ಥಳದ ವಿದ್ಯಾರ್ಥಿಗಳು ತಮ್ಮ
ಪಂಡಿತರೊಡನೆ ಪ್ರಾಗನ್ನು ಬಿಟ್ಟದ್ದು ಸಹಜ. ಆದರೆ ಪಪ್ಪಕರೆಲ್ಲರೂ ಅಂಥಾ ರಾ
ಜಾಜ್ಞೆಗೆ ಮೂಲಕನಾದ ಹುಸನಿಗೆ ಕೋಪ ಪಟ್ಟು, ವಿಕ್ಲಿಫನಂಥ ಕಥರನೆಂದು, ಅ
ಪಲಾಪಿಸುವವರಾದರು; ಅದು ಹೊರ್ತು ಸ್ಬಿಂಕೊ ಪ್ರಧಾನಾಧ್ಯಕ್ಷನು ಸಹ, ತನ್ನ
ಪಪ್ಪಕವಿಶ್ವಾಸಶುದ್ಧತೆಯ ಕೀರ್ತಿ ಕುಂದೀತೆಂತ, ಅಂದು ಹುಸನ ಎದುರಾಳಿ
ಯಾದನು.

ಆದರೆ ಹುಸನು ಅದನ್ನೆಲ್ಲಾ ಲಕ್ಷಿಸದೆ, ಎಂದಿನಂತೆ ಸುವಾರ್ತಾಪ್ರಸಂಗ
ಮಾಡುತ್ತಾ, ಪಪ್ಪಕ ಮತೋದ್ಯೋಗಿಗಳ ದುರ್ನಡತೆಗೆ ಹೆಚ್ಚು ಹೆಚ್ಚಿಗೆ ನಿಂದಿಸು

---

1) 305, 310, 314, 337ನೇ ಪಾನು. 2) 317, 330ನೇ ಪಾನುಗಳು. 3) 323ನೇ ಪಾನು.

ತ್ತಾ, ವಿಕ್ಲಿಫನ ಬೋಧನೆಯನ್ನು ದೇವಾಲಯದಲ್ಲಿಯೂ ವಿದ್ಯಾಶಾಲೆಯಲ್ಲಿಯೂ ಸಾರುತ್ತಾ ಇರಲಿಕ್ಕೆ, ಆ ಪ್ರಧಾನಾಧ್ಯಕ್ಷನು ಅವನ ಮೇಲೆ ಅಂದಿನ 5ನೇ ಅಲೆಕ್ಸಂದರ ಪಪ್ಪನ ಹತ್ತರ ಚಾಡಿ ಹೇಳಿಸಿದನು. ಆದ್ದರಿಂದ ಇವನು ಆ ಅಧ್ಯಕ್ಷನಿಗೆ— ವಿಕ್ಲಿಫನ ಗ್ರಂಥಗಳನ್ನೆಲ್ಲಾ ತರ ಹೇಳಿ, ಅವನ್ನು ಸುಡಿಸಿ, ಹುಸನು ಇನ್ನು ಪ್ರಸಂಗಿಸ ಬಾರದೆಂದು, ವಿಧಿಸಿರೆಂತ, ಆಜ್ಞಾಪಿಸಿದನು.

ಹುಸನು ಆ ವಿಧದ ಆಜ್ಞೆ ತಿಳಿದು, ಮಿಥ್ಯಾವಾದ ಮುಟ್ಟಿದಂಥ ಪಪ್ಪನ ಬದಲಿಗೆ ಸತ್ಯವಾದ ಮುಟ್ಟಿದಂಥವನೇ ತೀರ್ಪು ಮಾಡಲಿ! ಎಂತ, ನುಡಿದನು. ಆದಾಗ್ಯೂ ಅವನು, ಅವನ ಗೆಳೆಯರು ಸಹಿತ, ಸಮಾಧಾನವನ್ನುಳಿಸುವದಕ್ಕೋಸ್ಕರ ವಿಕ್ಲಿಫನ ಗ್ರಂಥಗಳನ್ನು ತಂದು, ಅಧ್ಯಕ್ಷನ ಕೈಗೆ ಕೊಟ್ಟರು. ಬಳಿಕ ಪ್ರಜೆಯಲ್ಲನೇಕರು ಇವನಿಗೆ, ಅವುಗಳನ್ನು ಸುಡಿಸ ಬೇಡಿರೆಂತ, ಹೇಳಿದರೂ ಅವನು ಕೇಳದೆ, 200ಕ್ಕಿಂತ ಹೆಚ್ಚು ಕಿಚ್ಚಿಗೆ ಹಾಕಿಸಲಾಗಿ, ಅವುಗಳ ಮಾಲೀಕರು ತಮಗಾದ ನಷ್ಟವನ್ನು ಬೆಸ ಗೊಂಡರು; ಪ್ರಧಾನಾಧ್ಯಕ್ಷನು ಅದನ್ನು ಕೊಡಲೊಲ್ಲೆನೆಂಬಲ್ಲಿ ಅರಸನು ಅವನಿಂದಲೂ ಇತರ ಮತೋದ್ಯೋಗಿಗಳಿಂದಲೂ ಬಲಾತ್ಕಾರದೊಡನೆ ಎತ್ತುಗಡೆ ಮಾಡಿಸಿ, ಕೊಟ್ಟನು. ಸುವಾರ್ತಾಪ್ರಸಂಗವನ್ನು ಹುಸನು ಇತ್ತಲೂ ಕಿಂಚಿತ್ತೂ ಬಿಡಲಿಲ್ಲ; ಅದು ದೇವರು ತನಗೆ ಒಪ್ಪಿಸಿರುವ ಕಾರ್ಯವೆಂದು, ಅವನ ದೃಢ ಅಭಿಪ್ರಾಯವು. ಆದರೆ ಅವನಿಗೆ ಉಪದ್ರವವು ಬಂದೊದಗಲಿಲ್ಲ; ಅವನು ನೀಚ ಚರ್ಯೆಯ ಪಪ್ಪಕ ಮತೋದ್ಯೋಗಿಗಳನ್ನು ನಿತ್ಯದಲ್ಲಿ ಶಿಕ್ಷಿಸುತ್ತಿದ್ದದಕ್ಕೆ ವೆಂಕ್ಸೆಲನು ಸಂತೋಷಿಸುತ್ತಿದ್ದು, ಅವನನ್ನು ತನ್ನ ಆಶ್ರಯದಲ್ಲಿ ಇಟ್ಟು ಕೊಂಡಿರುವನು. ಬಳಿಕ ಶತ್ರುಗಳು ಹುಸನ ಮೇಲೆ 23ನೇ ಯೋಹಾನನೆಂಬ ಆ ದುಷ್ಟ ಪಪ್ಪನ[1] ಹತ್ತರ ಪಾಷಂಡಾಪರಾಧವನ್ನಾಪಾದಿಸಲು, ಹುಸನು ರೋಮಕ್ಕೆ ಬರಬೇಕೆಂತ, ಅಪ್ಪಣೆ ಬಂತು; ಆದರೆ ವೆಂಕ್ಸೆಲ ಅರಸನು—ಹಾಗಾಗ ಬಾರದು! ಹುಸನು ಅಲ್ಲಿಗೆ ಹೋದ ಮೇಲೆ ಎಂದಿಗೂ ತಿರಿಗಿ ಬರಲಿಕ್ಕಿಲ್ಲವೆಂದು, ತನ್ನೊಳಾಲೋಚಿಸಿ, ಅವನನ್ನು ಹೋಗ ಗೊಡಲಿಲ್ಲ.

ಸ್ವಲ್ಪ ಕಾಲಕ್ಕೀಚೆ ಕ್ರಿ. ಶ. 1412ನೇ ವರುಷ ಆ ಯೋಹಾನ ಪಪ್ಪನು ತನ್ನ ಪ್ರತಿಪಪ್ಪರಲ್ಲೊಬ್ಬನಾದ 12ನೇ ಗ್ರೆಗೋರನೆಂಬವನ ಪಕ್ಷಕನಾಗಿರುವ ಈತಲಿಯ ದೇಶದ ನೆಯಾಪೊಲಿ ಪಟ್ಣದ ಲಾದಿಸ್ಲಾವನೆಂಬ ಅರಸನಿಗೆ ವಿರೋಧವಾಗಿ ಎಲ್ಲೆಲ್ಲಿಯೂ, ಬೊಯಿಮೆನಿನಲ್ಲಿ ಸಹ, ಒಂದು ಕ್ರೂಜೆಯುದ್ಧ[2] ಸಾರಿಸಿ, ತನಗೆ ಇದರಲ್ಲಿ ಹಣದಿಂದಾಗಲಿ ಸ್ವಂತ ಕೈಯಿಂದಾಗಲಿ ಸಹಾಯ ಮಾಡುವವರೆಲ್ಲರಿಗೆ ಪೂರ್ಣ

1) 338, 360ನೇ ಪಾನುಗಳು. 2) 377ನೇ ಪಾನು ಸರಿ ನೋಡು.

ಪಾಪಕ್ಷಮೆಯಾಗುವದೆಂದು[1], ಒಂದು ಬುಲ್ಲದಿಂದ[2] ಪ್ರಕಟಿಸಿದನು. ತತ್ಕ್ಷಣವೇ ಹುಸನು ತನ್ನ ಸರ್ವ ಶಕ್ತಿಯಿಂದ ಅಂಥ ಅತಿ ನೀಚ ಪಾಪಕ್ಷಮಾವಿಕ್ರಯಕ್ಕೆ ಪ್ರಸಂಗದ ಮೂಲಕ ಅಡ್ಡಗಟ್ಟಲೆಸಗಿದನು; ಅದು ವಿನಹ ಪ್ರಜೆ ಎಲ್ಲವು ಆ ಪಪ್ಪಕ ದುರಾಚಾರಕ್ಕೆ ಮುನಿಯಲಾಯಿತು. ಆದರೆ ಪ್ರಾಗಿನ ಹಿಯೆರೋನುಮನು ಆ ಪಪ್ಪನ ಬುಲ್ಲಕ್ಕೋಸ್ಕರ ವಾಂತಿಯಾಗುವವನ ಹಾಗೆ ಅಸಹ್ಯ ಪಟ್ಟು, ತಾಳಲಾರದೆ, ಪ್ರಾಗಿಗೆ ಬಂದ ಬುಲ್ಲವನ್ನು ಒಬ್ಬ ಜಾರೆಯ[3] ಕೊರಳಿಗೆ ಕಟ್ಟಿಸಿ, ಪಟ್ಣದೊಳಗೆ ಮೆರವಣಿಗೆ ಮಾಡಿಸಿ, ಅದನ್ನು ಸುಡಿಸಿದನು; ಅದಲ್ಲದೆ ಆ ಪುರದ ಸಕಲ ಪ್ರಜೆಯು ಕ್ಷಮಾಪತ್ರವಿಕ್ರಯಕಾರರಿಗೆ ಹಾಸ್ಯ ಮಾಡ ಮುಂಗೊಂಡಿತು. ಹೀಗಿರಲಿಕ್ಕೆ, ಯೋಹಾನ ಪಪ್ಪನು ಕ್ರಿ. ಶ. 1413ನೇ ವರುಷ ಹುಸನ ಮೇಲೆ ಬನ್ನು ಜಡಿದನು; ಆಗಲಿವನು ತನ್ನ ಕಾರ್ಯವನ್ನು ಕ್ರಿಸ್ತನ ಕೈಗೆ ಒಪ್ಪಿಸಿ, ಪ್ರಾಗಿನಿಂದ ಹೊರಟು, ಬೇರೆ ಕಡೆಯಲ್ಲಿ ಆಢ್ಯರಾದ ತನ್ನ ಮಿತ್ರರ ಬೀಡುಗಳಲ್ಲಿ ವಸ್ತಿ ಗೊಳ್ಳುವವನಾದನು.

ನೀವು ಹಿಂದೆ ಓದಿರುವಂತೆ[4] ಆ ವೇಳೆ ಮೂವರು ಪಪ್ಪರು ಇರುತ್ತಿದ್ದರಲ್ಲ? ಪಪ್ಪರ ಭೇದವೆಂಬ ಇದರಿಂದಲೂ ಪಪ್ಪರ ಮತ್ತು ಇತರ ಪಪ್ಪಕ ಮತೋದ್ಯೋಗಿಗಳ ಅನೇಕಾನೇಕ ದುರಾಚಾರಗಳಿಂದಲೂ ಪಪ್ಪಕ ಸಭ್ಯರಲ್ಲಿ ಸಹ ಪ್ರಬಲವಾದ ದುಷ್ಕ್ರಿಯೆಗಳಿಂದಲೂ ಈ ಪಪ್ಪಕ ಸಭ್ಯರಲ್ಲಿ ಹೇರಳರಿಗೂ ವ್ಯಥೆ ಇರುತ್ತಿರುವದು; ಇಂಥಾ ಸಭ್ಯರಲ್ಲಿ—ಶಿರಾದಿಪಾದಾಂತವಾದ ಅಂದರೆ ಪಪ್ಪನೆಂಬ ತಲೆಯನ್ನು ಹಿಡಿದು ಮತೋದ್ಯೋಗಿಗಳನ್ನೂ ಸಭ್ಯರನ್ನೂ ಮುಟ್ಟುವ ನವೀಕರಣವೆಂಬ ಪುನಃಸ್ಥಾಪನೆಯು ಬೇಕೆಂಬ ಕಾಂಕ್ಷೆಯು ಪ್ರತ್ಯಕ್ಷವಾಗುತ್ತಿತ್ತು. ಈ ಕಾಂಕ್ಷೆಯ ಮೇಲೆ ಸಹ ಸೀಗಿಸ್ಮುಂದನೆಂಬ ಗೆರ್ಮಾನಿಯದ ಕೈಸರನು ಕ್ರಿ. ಶ. 1414ನೇ ಅಬ್ದ ಕೊಸ್ತ್ನಿತ್ಸೆಂಬ ಪಟ್ಣದಲ್ಲಿ[5] ಆ ಸರ್ವಸಭಾಸಂಘವನ್ನು ಕೂಡ ಕರಿಸಿ, ಹುಸನಿಗೂ, ಬನ್ನಿರೆಂತ, ತಿಳಿಸಿ—ಬಂದು ತಿರಿಗಿ ಹೋಗುವದರಲ್ಲಿ ನಿಮಗೇನೂ ಕೇಡು ಬಾರದು, ನಾನು ನಿಮ್ಮನ್ನು ಕಾಪಾಡುವೆನೆಂದು, ತನ್ನ ಹಸ್ತುಬರಹ ಹಾಕಿದ್ದೊಂದು ರಾಯಸಪತ್ರ ಕಳುಹಿಸಿ ಕೊಟ್ಟನು. ಇದರಿಂದಲೂ ಸಕಲ ದುರಾಚಾರಗಳ ವಿರೋಧಿಯಾದ ತನಗೆ ಅಂಥಾ ಸಂಘದಲ್ಲಿ ಮನ್ನಣೆಯಾಗುವದಷ್ಟೇ! ಎಂಬ ಆಲೋಚನೆಯಿಂದಲೂ ದೇವವಿಶ್ವಾಸದಿಂದಲೂ ಅವನು ಧೈರ್ಯವುಳ್ಳವನಾಗಿ, ಹೊರಟು, ದಾರಿಯಲ್ಲಿರುವಾಗ ತನ್ನ ನಿರ್ಣಯ ಕೇಳುವವನೊಬ್ಬ ಬೋಧಕನಿಗೆ, ಪರಿಶುದ್ಧ ರಾತ್ರಿಭೋಜನದಲ್ಲಿ ಸಾಧಾರಣ ಸಭ್ಯರಿಗೂ ಪಾತ್ರದಲ್ಲಿ ಕುಡಿಸ ಬಹುದೆಂದು, ಅ

---

1) 352ನೇ ಪಾನು. 2) 385ನೇ ಪಾನು. 3) 392ನೇ ಪಾನು. 4) 338, 385ನೇ ಪಾನು. 5) 338, 360, 388ನೇ ಪಾನು.

ರಿಕೆ ಮಾಡಿ, ನೊವಂಬರ್ ತಿಂಗಳಿನ 3ನೇ ದಿನದಲ್ಲಿ ಕೊಸ್ನಿತ್ಸಿಗೆ ಮುಟ್ಟಿದ ಬಳಿಕ 23ನೇ ಯೋಹಾನನೆಂಬ ಆ ಕಪಟಸ್ಥ ಪಪ್ಪನು[1] ಶುಷ್ಕ ಶಬ್ದಗಳಿಂದಲೇ ಅವನನ್ನು ಮನ್ನಿಸಿ, ಮೊದಲು ಅಂತರಂಗದಲ್ಲಿ ವಿಚಾರಿಸಲು, ಹುಸನು, ಪರಿಶುದ್ಧ ಬರಹ ವೊಂದೇ ಪ್ರಮಾಣವೆಂದು[2], ನಿರ್ಧಾರವಾಗಿ ತಿರಿ ತಿರಿಗಿ ನುಡಿದ್ದಕ್ಕೋಸ್ಕರ ಮಾತ್ರ ಆ ಪಪ್ಪನಿಗೂ ಕರ್ದಿನಾಲುದ್ಯೋಗಿಗಳಿಗೂ ಇವನು ಕಣ್ಣಿನಲ್ಲಿ ಬಿದ್ದ ಕಸದಂತಾದನು. ಅವನ ನೀತಿಚರ್ಯಾಭಾವವು ಅವರಿಗೆ ಇನ್ನೊಂದು ತೊಡಕು ಕೊಟ್ಟಿತೆಂಬದಕ್ಕೆ ಆಶ್ಚರ್ಯ ಪಡುವದೇನು? ಹ್ಯಾಗಂದರೆ, ಕೊಸ್ನಿತ್ಸಿಗೆ ಸರ್ವ ಪಪ್ಪಕ ಸಭೆಗಳಿಂದ ಬಂದ ಮತಕ ರಾಜಕ ಪ್ರಭುಗಳು ತಮ್ಮ ವಿನೋದಕ್ಕಾಗಿ 1000 ಮಂದಿ ಸೂಳೆಯರನ್ನೂ 346 ನಟರನ್ನೂ ತಕ್ಕೊಂಡು ಬಂದಿದ್ದರಲ್ಲ? ಅಂಥವರ ದೃಷ್ಟಿಯಲ್ಲಿ ಇಂಥ ನೀತಿಯುತನಾದ ಹುಸನಿಗೆ ದಯೆ ದೊರಕುವದೇ?

ಅವನ ಮೇಲೆ ಅಪರಾಧ ಹೊರಿಸುವದಕ್ಕೆ ಬೇರೆ ಉಪಾಯ ಶಿಕ್ಕದಿರಲು, ಅವನು ಪಲಾಯನದ ಪ್ರಯತ್ನ ಮಾಡಿದನೆಂದು, ಸುಳ್ಳು ಹುಟ್ಟಿಸಿ, ಅವನನ್ನು ಹಿಡಿದು ಬಂಧಿಸಲಿಕ್ಕೆ ಅದು ಸಾಕೆಂದು, ಹೇಳಿ, ನೊವಂಬರಿನ 28ನೇ ದಿನದಲ್ಲಿ ಅವನನ್ನು ಪಪ್ಪನಿರುವ ಬೀಡಿನೊಳಗೆ ಫುಸಲಾಯಿಸಿ ಕರ ತಂದು, ಶೆರೆ ಹಿಡಿದು, ದೇವಾಲಯದ ಒಬ್ಬ ಸ್ಥಾನಿಕನ ಮನೆಯೊಳಗೆ 8 ದಿವಸದ ವರೆಗೆ ಇಟ್ಟು, ಆ ಮೇಲೆ, ಕೈಸರನು ಬೇಡವೆಂದರೂ, ದೊಮಿನಿಕಾನರದೊಂದು[3] ಮಠದೊಳಗೆ ಕೊಳಚಿ ನೀರಿನ ಮಹಾ ದುರ್ಗಂಧವೂ ಅಂಧಕಾರವೂ ಉಳ್ಳದ್ದೊಂದು ಶೆರೆಗುಹೆಯೊಳಗೆ ದೂಡಿ, ಮುಚ್ಚಿ ಬಿಟ್ಟರು. ತರುವಾಯ ಸಂಘದವರಲ್ಲಿ ಇಬ್ಬರು ಮತಕರಾದ ಮುಖ್ಯಸ್ಥರು ಸಹ ಅವನ ಬಳಿಗೆ ಬಂದು, ನಿಮ್ಮ ಕಥರತ್ವಕ್ಕೋಸ್ಕರ ನಿಮ್ಮ ಮೇಲೆ ವಿಚಾರಣವಾಗುವದೆಂದು, ಹೇಳುವಲ್ಲಿ ಅವನು, ಹಾಗಾದರೆ ಒಬ್ಬ ವಾಕ್ಸಹಾಯಕನನ್ನು ನನಗೆ ದಯೆ ಮಾಡಿರೆಂತ, ಬೇಡಲು, ಅವರು, ಒಬ್ಬ ಕಥರನಿಗೆ ಅಂಥವನು ಬೇಡವೆಂದು, ಹೇಳಿ, ತೀರಿಸಿದರು. ಅವನು ಆ ಕೊಳಕು ಗುಹೆಯೊಳಗೆ ಕಠಿಣ ರೋಗದಲ್ಲಿ ಬಿದ್ದನಂತರ ಅವನು ಚಿತಿಯಲ್ಲಲ್ಲದೆ ಬೇರೊಂದು ಸ್ಥಳದಲ್ಲಿ ಸಾಯದ ಹಾಗೆ ಅವನನ್ನು ಸ್ವಲ್ಪ ಗುಣಕರವಾದ ಶೆರೆಮನೆಗೊಯಿದರು. ತನಗೆ ಅಲ್ಲಿ ಸಹ ಬಹಳ ಸಂಕಟವಿರುತ್ತಿದ್ದಾಗ್ಯೂ ನಿರಪರಾಧಿಯಾದ ತನ್ನ ಮೇಲೆ ಹಾಕಿರುವ ಅಪರಾಧವನ್ನು ತಳ್ಳುವಂಥ ಗ್ರಂಥಗಳನ್ನೂ ತನ್ನ ಗೆಳೆಯರಿಗೆ ಕಳುಹಿಸುವ ಸ್ನೇಹಪತ್ರಗಳನ್ನೂ, ದೇವವಾಕ್ಯದ ಭಾಷ್ಯಕೃತಿಯನ್ನು ಸಹ, ಬರೆಯುತ್ತಿದ್ದನು. ತನ್ನ ಗೆಳೆಯರಲ್ಲೊಬ್ಬನಿಗೆ ಅವನು ಆಗ ಬರೆದ್ದರಲ್ಲಿ ಪ್ರವಾದನೆಯ ಕೆಲವು ಮಾತುಗಳು ಯಾ

1) 396ನೇ ಪಾನು  2) 374, 386ನೇ ಪಾನು ಸರಿ ನೋಡು.  3) 350, 380, 381, 383ನೇ ಪಾನುಗಳು.

ವವಂದರೆ—ದುಷ್ಟರು ಹಂಸಪಕ್ಷಿಗೆ[1] (ಅಂದರೆ ಹುಸನಿಗೆ) ಕೃತ್ರಿಮದ ಬಲೆಗಳ ನ್ನೊಡ್ಡಿದ್ದಾರೆ; ಸಾಧು ಪಕ್ಷಿಯೂ ಗಗನಕ್ಕೆ ಬಹಳ ಏರಾಗಿ ಹಾರಲಾರದ ಜೀವಿ ಯೂ ಆದಂಥ ಅದು ಅವರ ಬಲೆಗಳನ್ನು ಹರಿದು ಬಿಡಲಿಕ್ಕೆ ಕೂಡದಂಥಾದ್ದಾಗಿ ದ್ದರೂ ಉನ್ನತಾಕಾಶಕ್ಕೇರುವಂಥಾ ಬೇರೆ ಪಕ್ಷಿಗಳು ಅಧಿಕ ಬಲದಿಂದ ಇನ್ನು ಮುಂ ದೆ ಅಂಥವುಗಳನ್ನು ಹರಿದು ಬಿಡುವವು.—

ತರುವಾಯ ಕ್ರಿ. ಶ. 1415ನೇ ವರುಷದ ಆರಂಭಕಾಲದಲ್ಲಿ 23ನೇ ಯೋ ಹಾನ ಪಪ್ಪನ ಮೇಲೆ ಮರಣಶಿಕ್ಷಾರ್ಹವಾದ ಎಣಿಕೆಯಿಲ್ಲದ ಅಸಹ್ಯಕ್ರಿಯಾಪ ರಾಧಗಳ ಸ್ಥಾಪನೆಯಾಗಲಿಕ್ಕೆ, ಇವನು ಮಾರ್ಚು ತಿಂಗಳಿನ 21ನೇ ದಿನದಲ್ಲಿ ಓ ಡಿ ಹೋದ ಹಿಂದೆ ಇವನಿಗೆ ಮರಣಕಾಲದ ತನಕವೂ ದೊಡ್ಡ ಜೀವನಾಂಶವು ನೇ ಮಕವಾಯಿತು. ಆದರೆ ಅಂದೇ ಕೊಸ್ನಿತ್ಸಿನ ಅಧ್ಯಕ್ಷನು ನಿರ್ದೋಷಿಯಾದ ಹು ಸನನ್ನು ಮೊದಲು ಒಂದು ಕೋಟೆಯೊಳಗೆ ಕಠಿಣ ಬಂಧನದಲ್ಲಿಟ್ಟು, ಜೂನು ತಿಂ ಗಳಿನ 5ನೇದರಲ್ಲಿ ತರಿಸಿದಾಗ ಅವನನ್ನು ಕುರಿತ ಪ್ರಥಮ ಬಹಿರಂಗವಾದ ವಿಚಾ ರಣೆಯಾಯಿತು; ಆದರೆ ಅವನನ್ನು ಮಾತಾಡ ಗೊಡಲಿಲ್ಲ. ಎರಡು ದಿವಸದಿತ್ತ ಅ ವನು—ಪಪ್ಪನು ಶಪಥ ಕಟ್ಟಿದ ವಿಕ್ಲಿಫನ ಅನೇಕ ಬೋಧನಾಸೂತ್ರಗಳನ್ನು, ಸತ್ಯ ವೆಂತ, ಹೇಳ ಬೇಕು; ತನ್ನ ಪ್ರಾಣವು ಇನ್ನು ಮುಂದೆ ವಿಕ್ಲಿಫನದು ಇರುವಲ್ಲಿಗೆ ಹೋಗ ಬೇಕೆಂತ, ತನಗೆ ಬಹಳ ಅಭಿಲಾಷೆ ಎಂದು, ನಿವೇದಿಸಲಾಗಿ, ಪಪ್ಪಕ ಮ ತೋದ್ಯೋಗಿಗಳಲ್ಲಿ ಪರಿಹಾಸವುಳ್ಳ ಗದಗದ ನಗೆ ಹುಟ್ಟಿತು; ಅದಕ್ಕೀಚೆ ಅವನು— ಕ್ರಿಸ್ತನಿಗೆ ಮೊರೆ ಇಟ್ಟು, ನನ್ನ ಕಾರ್ಯವನ್ನೊಪ್ಪಿಸಿ ಕೊಡುತ್ತೇನೆಂದು, ನುಡಿದದ ಕ್ಕೆ ಅದೇ ನಗೆ ತಿರಿಗಿ ಬಂತು. ಮರುದಿನದಲ್ಲಿ ಪಪ್ಪಕರು ಅವನದೊಂದು ಗ್ರಂಥದ 26 ಸೂತ್ರಗಳನ್ನು ಅವನ ಮುಂದೆ ತೆಗೆದಿಟ್ಟು—ಅವು ಕಥರತ್ವದವುಗಳೆಂದು, ಹೇಳಿ ರೆಂತ, ವದಿಸುವಾಗ ಅವನು—ನಾನು ನನ್ನ ಮನಸ್ಸಾಕ್ಷಿಯ ಎದುರಾಟವಿಲ್ಲದೆಯೂ ನಿತ್ಯನಾಶನಾಜ್ಞೆಯ ವಿಘ್ನವಿಲ್ಲದೆಯೂ ಮಾಡ ಕೂಡದಂಥಾದಕ್ಕೆ ನನ್ನನ್ನು ಒ ತ್ತಾಯ ಪಡಿಸ ಬೇಡಿರಿ! ಎಂದು, ನಿಮ್ಮನ್ನು ದೇವರ ಹೆಸರಿನಲ್ಲಿ ಬೇಡಿ ಕೊಳ್ಳುತ್ತೇ ನೆಂತ, ನುಡಿದು ಬಿಟ್ಟನು. 7 ದಿವಸದ ಮೇಲೆ ಆ ಸಂಘದವರು, ಪರಿಶುದ್ಧ ರಾತ್ರಿ ಭೋಜನದಲ್ಲಿ ಸಭ್ಯರು ಸಹ ಪಾತ್ರದೊಳು ಕುಡಿಯ ಬೇಕೆಂಬದು ಪಾಷಂಡವೆಂ ದು, ನಿರ್ಣಯ ಮಾಡಿದರು. ಅಷ್ಟರಲ್ಲಿ ಪಪ್ಪಕ ಮತೋದ್ಯೋಗಿಗಳು ಸೀಗಿಸ್ಮುಂ ದ ಕೈಸರನ ಯಥಾರ್ಥ ಮನಸ್ಸನ್ನು ಕೆಡಿಸುತ್ತಾ ಬಂದಿದ್ದ ಕಾರಣ ಅವನಲ್ಲಿ ಸಹ ಹುಸನು ಮಹಾ ಕಥರನೆಂಬ ಭಾವವು ಉದ್ಭವಿಸಿತ್ತು; ಆದರೂ, ರಾಯಸಪತ್ರದ ಲ್ಲಿ ತಾನು ಕೊಟ್ಟ ಮಾತನ್ನು ತಪ್ಪಿಸ ಬಾರದೆಂದು, ಅವನು ತಿರಿ ತಿರಿಗಿ ಹೇಳುವಲ್ಲಿ

1) 393ನೇ ಪಾನು.

ಕಡೆಗೆ ಸ್ಪಾನಿಯ ದೇಶದ ಅರಗೋನಿಯ ನಾಡಿನ 1ನೇ ಫೆರ್ದಿನಂದ ರಾಜನು, ಆ ರಾಯಸದ ದೆಸೆಯಿಂದ ಒಬ್ಬ ಕಥರನನ್ನು ಶಿಕ್ಷೆಗೆ ತಪ್ಪಿಸ ಬಾರದೆಂದು, ಮತ್ತೂ ಮತ್ತೂ ಮಾತಾಡಲಿಕ್ಕೆ, ಅವನ ಮನಸ್ಸು ಬದಲಾಗಿ, ವಚನಭ್ರಷ್ಟನಾದನು. ಈ ಮಹಾ ಪಾತಕವನ್ನು ತಳ್ಳುವ ನೀಚ ಪ್ರಯತ್ನದಿಂದ ಆ ಸರ್ವಸಭಾಸಂಘದವರು ಒಬ್ಬ ಕಥರನಿಗೆ ಕೊಟ್ಟ ಮಾತನ್ನು ನಡಿಸುವದು ಅವಶ್ಯವಿಲ್ಲವೆಂಬ ಪ್ರತ್ಯೇಕ ವ್ಯವಸ್ಥೆ ಮಾಡಿದರು[1].

ದೃಢವಿಶ್ವಾಸಿಯಾದ ಹುಸನನ್ನು ಜುಲಾಯಿ ತಿಂಗಳ 6ನೇ ದಿನದಲ್ಲಿ, ಅವನ 42ನೇ ಜನ್ಮದಿನದಲ್ಲೇ, ಕೊಸ್ತ್ನಿತ್ಸಿನ ದೋಮದೊಳಗೆ[2] ಕಡೆಯ ಸಾರಿ ವಿಚಾರಿಸಲಾಯಿತು. ಅವನು—ಕ್ರಿಸ್ತನಿಗೆ ಮೊರೆ ಇಟ್ಟು, ಅವನ ನಿರ್ಣಯದೊಳಗೆ ಆಶ್ರಯಗೊಳ್ಳುತ್ತೇನೆಂದು, ಅರಿಸಲು, ವಿಚಾರಕರು, ಅದು ಮತೋದ್ಯೋಗಿಗಳ ನಿರ್ಣಯಗಳಿಗೆ ಪರಿಹಾಸ ಗೈದ ಹಾಗಾಯಿತೆಂದು, ತೀರ್ಪು ಮಾಡುವಲ್ಲಿ ಅವನಂದದ್ದೇನು—ಓ ಕ್ರಿಸ್ತನೇ, ಯಾವನ ವಾಕ್ಯವನ್ನು ಈ ಸಂಘದವರು ಬಹಿರಂಗದಲ್ಲಿ, ಸುಳ್ಳೆಂದು, ಹೇಳುತ್ತಾರೋ, ಆ ನೀನಾದವನಿಗೆ ಇನ್ನೊಮ್ಮೆ ಮೊರೆ ಇಟ್ಟು, ಅಂಥವನ ಮೇಲೆ (ನಿನ್ನ ಮೇಲೆ) ನನ್ನ ಕಾರ್ಯವನ್ನು ಹಾಕುತ್ತೇನೆ! ನಿನ್ನ ಶತ್ರುಗಳು ನಿನ್ನನ್ನು ಬಾಧಿಸುತ್ತಿದ್ದಲ್ಲಿ ನೀನು ಸಹ ನಿನ್ನ ಕಾರ್ಯವನ್ನು ಆ ನೀತಿಯುಕ್ತ ನ್ಯಾಯಾಧಿಪತಿಗೆ (ಅಂದರೆ ದೇವರಿಗೆ) ಒಪ್ಪಿಸಿ ಕೊಟ್ಟೆಯಲ್ಲ?—ಬಳಿಕ ಹುಸನು ಹಟಿಯಾಗಿ ಕಲ್ಲಿನಂತಿರುವಂಥ ಕಥರನೆಂಬ ಅರ್ಥವುಳ್ಳ ನಿರ್ಣಯವು ಅವನ ಮುಂದೆ ಓದಲಾಯಿತು; ಅದರ ಪ್ರಕಾರ ಅವನ ಮತೋದ್ಯೋಗವನ್ನು ತೆಗೆದದ್ದು ಮಾತ್ರವಲ್ಲದೆ, ಅವನು ಚಿತೆಯಲ್ಲಿ ಸಜೀವವಾಗಿ ದಗ್ಧನಾಗ ಬೇಕೆಂದು, ವ್ಯವಸ್ಥೆಯಾಯಿತು. ಆಗಲವನು ಮೊಣಗಾಲೂರಿ—ಕ್ರಿಸ್ತನೇ, ನನ್ನ ಶತ್ರುಗಳಿಗೆ ಕ್ಷಮಿಸೆಂದು, ಪ್ರಾರ್ಥಿಸಿದನು. ತದನಂತರ ಏಳ್ವರು ಅಧ್ಯಕ್ಷರು ಶಪಥವಾಕ್ಯಗಳೊಡನೆ ಅವನ ಮತೋದ್ಯೋಗದ ಒಂದೊಂದು ವಸ್ತ್ರವನ್ನು ಅವನಿಂದ ಶೆಳಕೊಂಡು, ಪಿಶಾಚಿಯ ಮುಖಗಳೂ ಪಾಷಂಡಿಗಳ ವ್ಯಾಘ್ರನೆಂಬ ಬರಹವೂ ಚಿತ್ರಿಸಿರುವದೊಂದು ಟೋಪಿಯನ್ನು ಅವನ ತಲೆಗಿಟ್ಟು, ಈಗ ನಿನ್ನ ಪ್ರಾಣವನ್ನು ಪಿಶಾಚಿಗೆ ಕೊಟ್ಟು ಬಿಡುತ್ತೇವೆಂತ, ಒದರಿದರು. ಆದರೆ ಹುಸನು—ಯೇಸು ಕ್ರಿಸ್ತನೇ, ನನ್ನನ್ನು ರಕ್ಷಿಸಿದವನೇ, ನಾನು ಅದನ್ನು ನಿನ್ನ ಕೈಯಲ್ಲಿ ಒಪ್ಪಿಸಿ ಕೊಡುತ್ತೇನೆ! ಎಂದು, ನುಡಿದನು. ಒಡನೇ ಆಳುಗಳು ಅವನನ್ನು ಹೊರಗೆ ತಕ್ಕೊಂಡು ಹೋದರು. ಅವನು ದೋಮದ ಬಾಗಲಿನ ಮುಂದೆ ಪಪ್ಪಕರು ತನ್ನ ಗ್ರಂಥಗಳನ್ನು ಸುಡುವದು ಕಾಣು

1) In their 19th session, 23rd Sept. 1415; 352ನೇ ಪಾನು ಸರಿ ನೋಡು.
2) 362ನೇ ಪಾನು.

ವಾಗ ಅವನ ಮುಖದಲ್ಲಿ ಎಳೆ ನಗೆ ದೋರಿತು. ಹನನಸ್ಥಾನಕ್ಕೆ ಬರುತ್ತಲೇ ಅವನು ಮೊಣಗಾಲೂರಿ, ದೇವವಾಕ್ಯದ 37ನೇ ಮತ್ತು 53ನೇ ಕೀರ್ತನೆಗಳನ್ನು ಹಾಡಿ— ಯೆಹೋವನೇ, ನಿನ್ನ ಕೈಗೆ ನನ್ನಾತ್ಮವನ್ನೊಪ್ಪಿಸುತ್ತೇನೆ! ಸತ್ಯದ ದೇವರಾದ ಯೆ ಹೋವನೇ, ನೀನು ನನ್ನನ್ನು ವಿಮೋಚಿಸಿದ್ಧಿ[1]! ಎಂದು, ಹೇಳಿ, ಏಳುವಷ್ಟರಲ್ಲಿ— ಯೇಸುನಾಥನೇ! ನಿನ್ನ ವಾಕ್ಯದ ಪ್ರಸಂಗಕ್ಕೋಸ್ಕರ ನಾನು ಪಡ ಬೇಕೆಂದು ನಿರ್ಣ ಯವಾದ ಕ್ರೂರವೂ ಅಪಮಾನಕರವೂ ಆದಂಥ ಈ ಮರಣವನ್ನು ನಾನು ನಿನ್ನ ಮತ್ತು ನಿನ್ನ ಪಿತನ ಸಹಾಯದಿಂದ ಸ್ಥೈರ್ಯವುಳ್ಳ ಹೃದಯದೊಡನೆ ಸಹಿಸುವಂತೆ ನನ್ನ ಸಂಗಡಲಿರು! ಎಂದು, ಬೇಡಿದನು. ಅವನನ್ನು ಚಿತೆಯ ಯೂಪಕ್ಕೆ ಸಂಕೋ ಲೆಯಿಂದ ಬಿಗಿದ ಮೇಲೆ ಅವನು—ನನಗಿಂತ ಅಮಿತ ಕಷ್ಟ ಪಟ್ಟ ಕ್ರಿಸ್ತನ ತುಸಕ ಈ ಸಂಕೋಲೆ ಹೊತ್ತು, ಅನುಮೋದಿಸುತ್ತೇನೆ. ಅತ್ಯುನ್ನತನೂ ಅತಿನೀತಿಯು ಕ್ತನೂ ಆದಂಥ ಸರ್ವತ್ರಾಣಿಯಾದ ದೇವರಿಗೆ ಇನ್ನೊಂದು ಸಲ ಮೊರೆ ಇಡು ತ್ತೇನೆ. ಅವನ ಮುಂದೆ ನೀವು 100 ವರುಷದೊಳಗೆ ನನಗೆ ತಕ್ಕ ಉತ್ತರ ಕೊಡ ಬೇಕೆಂಬದನ್ನೇ ಬಲ್ಲೆನು. ಸುವಾರ್ತೆಯ ಸತ್ಯಕ್ಕನುಸಾರವಾಗಿಯೂ ಪೂರ್ವ ಸಭಾ ಪಿತೃಗಳ ಟೀಕೆಗನುಸಾರವಾಗಿಯೂ ಮಾನಸಾಂತರವನ್ನೂ ಪಾಪಪರಿಹಾರವನ್ನೂ ಸಾರುವದಕ್ಕೆ ನನ್ನ ಬೋಧನೆಯ ಅಭಿಪ್ರಾಯವಿರುತ್ತಿದ್ದದರಿಂದ ಧೀರ ಹೃದಯ ದಿಂದಳಿಯಲಿಕ್ಕೆ ಸಿದ್ಧನಾಗಿದ್ದೇನೆ! ಎಂತ, ಹೇಳಿ, ಅಮಿತ್ರರು ಬೆಂಕಿ ಹೊತ್ತಿಸುವಂ ದು—ಯೇಸು ಕರ್ತನೇ, ದೇವಪುತ್ರನೇ, ನನಗೆ ಕರುಣಿಸು! ಎಂದು, ಮಹಾ ಶಬ್ದ ದಿಂದ ಕೂಗಿ, ಜ್ವಾಲೆಗಳಿಂದ ತನ್ನ ಶ್ವಾಸವು ಕಟ್ಟಿದಂತಾಗುವಲ್ಲಿ 3ನೇ ಸರ್ತಿ ಹಾ ಗೆಯೇ ಕೂಗಿ, ತೀರಿದನು. ಪಪ್ಪಕರಾದ ಶತ್ರುಗಳು ಆ ಚಿತಾಭಸ್ಮವನ್ನು ಸಮಿಾ ಪದ ರೈನು ನದಿಗೆ[2] ಹಾಕಿ ಬಿಟ್ಟರು[3].

## 53. ಪ್ರಾಗಿನ ಹಿಯೆರೋನುಮನು.

ಪ್ರಾಗು ಪಟ್ಣದ ಆ ಹಿಯೆರೋನುಮನು[4], ತನ್ನ ಪ್ರಾಣಗೆಳೆಯನಾದ ಹುಸ ನನ್ನು ಶೆರೆಮನೆಯಲ್ಲಿಟ್ಟರೆಂತ, ಕೇಳುತ್ತಲೇ ಅವನಿಗೆ ಸಹಾಯಕನಾಗುವಂತೆ ಕೊ ಸ್ನಿಟ್ಸಿಗೆ ಓಡಿ ಬಂದು, ತನಗಲ್ಲಿ ಭದ್ರ ಸ್ಥಿತಿ ಇಲ್ಲವೆಂತ, ತಿಳಿದು, ತನಗೆ ಬಂದು ಹೋಗೋಣದರಲ್ಲಿ ಕೇಡಾಗದೆಂಬಂತೆ ಒಂದು ರಾಯಸವನ್ನು ದಯೆ ಮಾಡಿರೆಂದು, ಪತ್ರಮುಖಾಂತರ ಸೀಗಿಸ್ಮುಂದ ಕೈಸರನ ಹತ್ತರವೂ ಸರ್ವಸಭಾಸಂಘದ ಇತರರ

1) ಕೀರ್ತನೆ. 31, 6. 2) 239, 304ನೇ ಪಾನುಗಳು. 3) ವಿಗ್ರಹಾರಾಧಕರೆಂಬವರು ಹಾಗೆಯೇ ಮಾಡಿದರು, 143ನೇ ಪಾನು; 366ನೇದು. 4) 394, 397ನೇ ಪಾನು.

ಹತ್ತರವೂ ಬೇಡಿ ಕೊಂಡನು; ಆದರೆ ಅವನ ವಿನಂತಿ ಪೂರೈಸಲಿಲ್ಲ. ಅದು ಕಾರಣ ಅವನು ತನ್ನ ಜೀವವನ್ನುಳಿಸುವದಕ್ಕಲ್ಲದೆ ಬೋಯಿಮೆನಿನಲ್ಲಿ ಹುಸನಿಗಿರುವ ಅನೇಕ ಮಂದಿ ಮಿತ್ರರಿಂದ ಇವನಿಗೆ ಒತ್ತಾಸೆ ತರುವದಕ್ಕೆ ಸಹ ಪ್ರಾಗಿಗೆ ಹಿಂದಿರುಗುತ್ತಿರಲು, ದಾರಿಯಲ್ಲಿ ಅವನನ್ನು ಹಿಡಿದು, ಬೇಡಿ ಹಾಕಿ, ಕೊಸ್ನಿತ್ಸಿಗೆ ಹಿಂದಕ್ಕೊಯಿದರು. ಬಳಿಕ ಕ್ರಿ. ಶ. 1415ನೇ ವರುಷದ ಮೇ ತಿಂಗಳಲ್ಲಿ ಅವನನ್ನು ಮೊದಲಿನಾವರ್ತಿ ವಿಚಾರಿಸುವಾಗ ಅವನು ಹುಸನ ಮತ್ತು ತನ್ನ ಕಾರ್ಯದ ನ್ಯಾಯವನ್ನು ದೊಡ್ಡ ಬಲದಿಂದಲೂ ನಿರ್ಭಯದಿಂದಲೂ ತೋರಿಸಿ, ತನ್ನ ವಿಶ್ವಾಸಾರ್ಥಕ್ಕಾಗಿ ಸಂತೋಷದಿಂದ ಸತ್ತೇನೆಂತ, ನುಡಿದನು. ಆದರೂ ಅದಕ್ಕೀಚೆ ಅವನು ಅರ್ಧ ವರುಷ ಮಲಿನವಾದ್ದೊಂದು ಶೆರೆಮನೆಯೊಳಗೆ ಕಠಿಣ ಬಂಧನದಲ್ಲಿದ್ದು, ಅಷ್ಟರಲ್ಲಿ ಹುಸನಿಗೆ ಆದ ಭಯಂಕರ ಗತಿಯ ಸುದ್ದಿ ಕೇಳಿದ ಮೇಲೆ ಅವನು ಅಂದಿನ ವರೆಗೆ ಹೆಚ್ಚಾಗಿ ಆತು ಕೊಂಡಿದ್ದ ಸ್ವಬಲವು ಮುರಿದು ಹೋಯಿತು. ಹೀಗಿರಲಿಕ್ಕೆ 2ನೇ ವಿಚಾರಣದಲ್ಲಿ ಅವನು, ತಾನು ಪಾಷಂಡಿಯೆಂದು, ಒಪ್ಪಿದ್ದಲ್ಲದೆ, ವಿಕ್ಲಿಫ ಹುಸರನ್ನು ಪಾಷಂಡಿಗಳೆಂದು ನಿರ್ಣಯಿಸಿ ಆಜ್ಞೆ ಮಾಡಿಸಿದ್ದು ಸಮವೇ ಎಂದು, ಹೇಳಿದನು. ಈ ಪ್ರಕಾರದ ನಿವೇದನವು ಬೇಡುವಿಕೆ ಬೆದರಿಸುವಿಕೆ ಬಂಧಿಸುವಿಕೆಗಳ ಮೂಲಕ ಮಾತ್ರ ಅವನ ಬಾಯ್ಯಿಂದ ಹೊರಟತ್ತೆಂಬದು ಆ ಸಂಘದವರೆಲ್ಲರಿಗೂ ಚಂದಾಗಿ ಗೊತ್ತು. ಆದ್ದರಿಂದ ಅವರು, ಅವನನ್ನು ಬಿಡಿಸುವದು ವಿಹಿತವಲ್ಲವೆಂದು, ಆಲೋಚಿಸಿ, ತಿರಿಗಿ ಅರ್ಧ ವರುಷ ಶೆರೆವಾಸ ಮಾಡಿಸಿದರು. ತನ್ಮಧ್ಯ, ಆ ಅಬದ್ಧ ನಿವೇದನವು ಮಹಾ ಪಾತಕವಾಯಿತೆಂತ, ಅವನು ಅನುಭವದಲ್ಲಿ ತಂದು, ಸಭಾಸಂಘದವರೆಲ್ಲರೂ ಕೂಡಿರುವೆಡೆ ಮತ್ತೊಮ್ಮೆ ಬಹಿರಂಗದಲ್ಲಿ ತನ್ನ ವಿಚಾರಣವು ನಡೆಯಲೆಂದು, ಬಿನ್ನವಿಸಲು, ಕ್ರಿ. ಶ. 1416ನೇದರ ಮೇ ತಿಂಗಳಲ್ಲಿ ಹಾಗೆಯೇ ಆಯಿತು. ವಿಚಾರಕರು, ತನ್ನ ಬಿಡುಗಡೆ ಕೇಳಿ ಕೊಳ್ಳುವನೆಂತ, ನೆನಸುವಲ್ಲಿ ಅವನು ಕ್ರಿಸ್ತನಿಂದ ಪಡಕೊಂಡ ಮಹಾತ್ಮೀಯ ಶಕ್ತಿಯಿಂದ ಅವರು ತನ್ನಲ್ಲಿಟ್ಟ ಅಪರಾಧಗಳನ್ನೆಲ್ಲ ಖಂಡಿಸಿ, ಗಂಭೀರ ಸ್ವರದೊಡನೆ—ಪ್ರಾಚೀನದಲ್ಲಿ ಸಹ ಅನೇಕ ಘನಸ್ಥರಾದ ಜನರನ್ನು ಸುಳ್ಳುಸಾಕ್ಷಿಗಳಿಂದ ಕೆಡಿಸಿ, ಅನ್ಯಾಯದಿಂದ ಆಜ್ಞೆ ಮಾಡಿಸಲಾಯಿತೆಂದು, ನಾನು ಅರಿಯದವನಲ್ಲ. ಮೋಶೆಯ ವಂಶಜರಾದ ಸಹೋದರರು ಅವನ ಮೇಲೆ ಕೆಟ್ಟ ಸುದ್ದಿ ಹುಟ್ಟಿಸಿದರಲ್ಲ[1]? ಯೋಸೇಫನನ್ನು ಹೊಟ್ಟೆಕಿಚ್ಚಿನಿಂದ ಮಾರಿ, ಹಿಂದಗಡೆ ಸುಳ್ಳುಸುದ್ದಿಯಿಂದ ಶೆರೆಮನೆಯಲ್ಲಿಡಲಾಯಿತಲ್ಲ? ಪುನಃ ಯೆಶಾಯ ದಾನಿಯೇಲ ಮುಂತಾದ ಸುಮಾರು ಎಲ್ಲಾ ಪ್ರವಾದಿಗಳನ್ನು ಸಹ ಅನ್ಯಾಯದಿಂದ ಹಿಂಸಿಸುತ್ತಿದ್ದರು. ಬಳಿಕ ಸ್ನಾನಿಕನಾದ ಯೋಹಾನನನ್ನೂ

1) 2 ಮೋಶೆ. 2.

ಸದಾಪ್ರಿಯ ಯೇಸು ಕ್ರಿಸ್ತ ಕರ್ತನನ್ನೂ ಅವನ ಅಪೊಸ್ತಲರಲ್ಲಿ ಹೇರಳರನ್ನೂ, ಅ ಭಕ್ತರೂ ದ್ರೋಹಿಗಳೂ ಆದ ಜನರೆಂತ, ಕೊಂದು ತೀರಿಸಿದರಲ್ಲ? ದೇವವಾಕ್ಯವಲ್ಲದ ಬೇರೆ ಅನೇಕ ಪುಸ್ತಕಗಳಲ್ಲಿಯೂ ಅದೇ ಪ್ರಕಾರದ ಸಂಗತಿಗಳುಂಟು. ಸೋಕ್ರತ[1], ಪ್ಲತೋ[2] ಅನಕ್ಸಗೊರ, ಜೇನೋ ಮುಂತಾದ ಅನೇಕರನ್ನು[3] ನೆನಪಿಗೆ ತರ್ರಿ! ಇತ್ಯಾದಿ ಘೋಷಿಸಿ, ಕಡೆಯಲ್ಲಿ—ತಾನು ಮಾಡಿದ ಸಕಲ ಪಾಪಗಳಲ್ಲಿ ಹಿಂದೆ ಸೌವಾರ್ತಿಕ ವಿಶ್ವಾಸವನ್ನತಿಗಳೆದದ್ದೇ ದೊಡ್ಡದು; ವಿಕ್ಲಿಫನಿಗೂ ಹುಸನಿಗೂ ಆಜ್ಞೆ ನಿಣಯಿಸಿದ್ದು ಮಹಾ ಅನ್ಯಾಯ; ತಾನು ಅವರಿಬ್ಬರ ಬೋಧನಾರ್ಥವನ್ನು ಮರಣದ ವರೆಗೂ ನಂಬಿಕೆಯಿಂದ ಕೈಗೊಂಡಿರುವೆನೆಂದು, ನಿರ್ಧರಿಸಿದನು. ಅವನು ಬೇರೆ ತರದ ಮಾತಾಡದಿರಲು, ಅವನಿಗೆ ಮರಣಾಜ್ಞೆಯಾಯಿತು. ಆಗಲವನು ಅಂದದ್ದೇನು—ನಿರಪರಾಧಿಯಾದ ನನ್ನನ್ನು ಈ ಪ್ರಕಾರ ಕೊಲ್ಲಿಸಲಿಕ್ಕೆ ಮನಸ್ಸು ಮಾಡಿ ಕೊಂಡಿದ್ಧೀರಿ; ಆದರೆ, ನನ್ನ ಮರಣದ ಮೇಲೆ ನೀವು ಎಂದಿಗೂ ನಿವರ್ತಿಸಲಾಗದಂಥ ಒಂದು ಕೊಂಡಿಯೂ ಕೊರಿಯುವದೊಂದು ಹುಳವೂ ನಿಮ್ಮ ಮನಸ್ಸಾಕ್ಷಿಯಲ್ಲಿ ಉಳಿಯುವದು. ಸರ್ವ ಲೋಕದ ಮಹೋನ್ನತ ನ್ಯಾಯಾಧಿಪತಿಯ ಬಳಿಗೆ ನಿಮ್ಮನ್ನು ಕರೆಸುತ್ತೇನೆ. ಅವನ ಮುಂದೆ ನೀವು ನಿಲ್ಲುವವರಾಗಿ, ನನಗೆ ತಕ್ಕ ಉತ್ತರವೀಯ ಬೇಕಾಗುವದು!—

ತರುವಾಯ ಮೇ ತಿಂಗಳ 30ನೇ ದಿನದಲ್ಲಿ ಅವನನ್ನು ಹುಸನು ರಕ್ತಸಾಕ್ಷಿಯಾದ ಸ್ಥಳಕ್ಕೊಯ್ಯುವವರಾದರು. ಅವನ ಮುಖದಲ್ಲಿ ಸಂತೋಷದ ಹೊಳಪು ಮೂಡಿರುತ್ತಿತ್ತು. ಅವನು ಅನೇಕ ಆದರಕರ ಗೀತಕೃತಿಗಳನ್ನೂ ಅಪೊಸ್ತೊಲಿಕ ವಿಶ್ವಾಸಪ್ರಮಾಣವನ್ನೂ ಹಾಡುತ್ತಿದ್ದು, ಬೆನ್ನು ಹತ್ತುವ ಪ್ರಜೆಗೆ—ಪ್ರಿಯ ಮಕ್ಕಳೇ, ಇದೇ ನನ್ನ ವಿಶ್ವಾಸವು, ಬೇರೇನೂ ಅಲ್ಲ! ಹುಸನಿಗೆ ನ್ಯಾಯದಿಂದ ಆಜ್ಞೆಯಾಯಿತೆಂಬದಕ್ಕೆ ನಾನು ಸಮ್ಮತಿಸಲೊಲ್ಲದೊಂದೇ ಕಾರಣ ನಾನು ಸಾಯುತ್ತೇನೆ; ಅವನು ಸುವಾರ್ತೆಯ ನಿಜ ಪ್ರಸಂಗಿಕನೆಂತ, ನಾನು ಸ್ಪಷ್ಟವಾಗಿ ಬಲ್ಲೆನೆಂದು, ಹೇಳಿ, ದೇವಪ್ರಾರ್ಥನೆಯೊಡನೆ ಹನನಸ್ಥಳಕ್ಕೆ ಸಮೀಪಿಸುತ್ತಿರಲು, ಒಬ್ಬ ಒಕ್ಕಲಿಗನು ಆ ಮಹಾ ಕಥರನನ್ನು ಸುಡಲಿಕ್ಕೆ ತಾನು ಸಹ ತಕ್ಕ ಸಹಾಯಕನಾಗ ಬೇಕಲ್ಲವೋ? ಎಂಬಂತೆ ಸೌದೆಯದೊಂದು ಕಟ್ಟು ಹಿಡು ಕೊಂಡು, ಬೇಗ ಬೇಗನೆ ಚಿತೆಗೆ ಹೋಗಿ, ಅದಕ್ಕೆ ಕೂಡಿಸಿಡುವಂದು ಹಿಯೆರೋನುಮನು ಅದನ್ನು ನೋಡಿ, ಎಳೆ ನಗೆಯ ಮುಖದವನಾಗಿ—ಓ ಪರಿಶುದ್ಧ ಭೋಳೇತನವೇ, ನಿನ್ನನ್ನು ಮೋಸ ಗೊಳ್ಳಿಸುವಂಥವನಿಗೆ ಸಾವಿರ ಪಾಲು ಪಾಪವಿರುವದು! ಎಂತ, ನುಡಿದನು. ಅ

1) 11ನೇ ಪಾನು. 2) 11, 15ನೇ ಪಾನುಗಳು. 3) ಸೆನೆಕನ ಸುದ್ದಿ ನೋಡಿರಿ, 15, 19, 105ನೇ ಪಾನು.

ವನನ್ನು ಯೂಪಕ್ಕೆ ಕಟ್ಟಿದ ಮೇಲೆ ಮಾರಕರು ಅವನ ಬೆನ್ನುಗಡೆ ಬಂದು, ಬೆಂಕಿ ಹಚ್ಚುವ ಹಾಗಿರಲು, ಹಿಯೆರೋನುಮನು, ನನ್ನ ಕಣ್ಣೆದುರಿಗೆಯೇ ಅದನ್ನು ಹಚ್ಚೆಂದು, ಬೆಸಸಿ, ಕರ್ತನೇ, ನಿನ್ನ ಕೈಗೆ ನನ್ನಾತ್ಮವನ್ನೊಪ್ಪಿಸಿ ಕೊಡುತ್ತೇನೆಂದು, ಕೂಗಿ, ಪ್ರಾರ್ಥಿಸಿದನು. ಧೂಮದಿಂದ ಅವನ ಉಸುರು ಕಟ್ಟಿ ಹೋಗದಿರುವಲ್ಲಿ ಜ್ವಾಲೆಗಳು ಅವನನ್ನು ಮೆಲ್ಲ ಮೆಲ್ಲಗೆ ತಿನ್ನುತ್ತಾ ನಶಿಸುವಂದು ಅವನು—ಓ ಕರ್ತನೇ, ಸರ್ವಪ್ರಾಣಿದೇವರೇ! ನನಗೆ ಕರುಣಿಸಿ, ನನ್ನ ಪಾಪಗಳನ್ನು ಕ್ಷಮಿಸು! ಎಂದು, ಅನೇಕಾವರ್ತಿ ದೊಡ್ಡ ಶಬ್ದದಿಂದ ಮೊರೆಯಿಟ್ಟದ್ದು ಕೇಳಿಸಿತು. ಅವನು ಇಂಥಾ ನಮ್ರತಾಭಾವದಿಂದೊಪ್ಪಿ ಮಡಿಯುವ ವರೆಗೂ ಹೃತ್ಪ್ರಾರ್ಥನೆಯಿಂದ ಅವನ ತುಟಿಗಳು ಕುಣಿದಾಡುತ್ತಿದ್ದವು. ವೈರಿಗಳಾದ ಪಪ್ಪಕರು ಅವನ ಬೂದಿಯನ್ನು ಸಹ ಕೂಡಿಸಿ, ಅದೇ ರೈನು ನದಿಗೆ ಚೆಲ್ಲಿದರು[1].

ಹಿಯೆರೋನುಮನ ವಿಚಾರಣವಾಗುವಾಗ ಪೊಗ್ಗಿಯೊ ಬ್ರಕ್ಕಿಯೊಲೀನಿ ಎಂಬವನು ಕೂಡ ಅಲ್ಲಿರುತ್ತಿದ್ದನು; ಇವನು ಪಪ್ಪಕನಾಗಿ, ಆ 23ನೇ ಯೋಹಾನ ಪಪ್ಪನ[2] ಪ್ರಧಾನಲೇಖಕನಾಗಿದ್ದನು; ಅವನು ಈತಲಿಯ ದೇಶದ ಫ್ಲೋರೆಂತಿಯವೆಂಬ ಪಟ್ಟದವನು. ಅವನು ಪ್ರಾಗಿನ ಹಿಯೆರೋನುಮನು ಅಂದಿನ ವಿಚಾರಣದಲ್ಲಿ ತೋರಿದ ಸ್ವಭಾವವನ್ನು ವರ್ಣಿಸಿದ್ದರಲ್ಲಿ ಮುಖ್ಯಾಂಶವೇನಂದರೆ—ಹಿಯೆರೋನುಮನು ತನ್ನ ಪ್ರತಿಕೂಲಿಗಳಿಗೆ ಉತ್ತರ ಕೊಡುತ್ತಿರುವ ಪ್ರಸಂಗದ ಬಲವನ್ನೂ ವಾಕ್ಚತುರತೆಯನ್ನೂ ಪ್ರಚಂಡ ತರ್ಕವನ್ನೂ ಕೇಳುವ ನನಗೆ ಮಹದಾಶ್ಚರ್ಯವಾಯಿತು; ಅದಲ್ಲದೆ ಅವನ ರೀತಿಯ ಶ್ರೇಯಸ್ಸನ್ನೂ ಅವನ ಚೇಷ್ಟೆಯ ಗಾಂಭೀರ್ಯವನ್ನೂ ಅವನ ಸಕಲ ಭಾವದ ಸ್ಥೈರ್ಯ ದಾರ್ಢ್ಯಗಳನ್ನೂ ಕಂಡು, ನಾನು ಅದೇ ಚೋದ್ಯಪಟ್ಟೆನು; ಅವನಲ್ಲಿ ಆರೋಪಿಸಿದ ಅಪರಾಧವು ನ್ಯಾಯವೋ? ಅನ್ಯಾಯವೋ? ದೇವರೊಬ್ಬನೇ ಬಲ್ಲ. ಆ ಸಭಾಸಂಘದವರು ಗದ್ದಲ ಮಾಡುತ್ತಾ, ನಿರ್ಲಜ್ಜೆ ತೋರಿಸುತ್ತಾ ಇದ್ದಾಗ್ಯೂ ಆ ಬಂಧನಸ್ಥನು ಕೊಡುತ್ತಿದ್ದ ಚುರುಕಾದ ಉತ್ತರಗಳೂ ಪ್ರತಿಕೂಲಿಗಳ ವಾಗ್ಬಾಣಗಳನ್ನೆಲ್ಲಾ ನಿಪಾತ ಗೈಯುತ್ತಿದ್ದ ಆಶ್ಚರ್ಯಕರ ಚಮತ್ಕಾರವೂ ಗ್ರಹಿಕೆಗೆ ಮೀರುವಂಥವುಗಳು. ಅವನ ಸಮಸ್ತ ಭಾವವು ಸನ್ಮಹಿಮೆಯೂ ಸದ್ಭಕ್ತಿಯೂ ಉಳ್ಳದ್ದಾಗಿತ್ತು. ಆ ರಸಿಕನಾದ ಪ್ರಸಂಗಿಕನಿಗೆ ಕಿವಿ ಗೊಡುವಾಗ ಪ್ರತಿ ಅಂತಃಕರಣವೂ ದ್ರವಿಸದಿರ ಕೂಡದಿತ್ತು; ಪ್ರತಿ ಶ್ರೋತ್ರವೂ ಅತ್ಯಾಶೆ ಗೊಳ್ಳುತ್ತಿತ್ತು; ಪ್ರತಿ ಹೃದಯವೂ ಉತ್ಸಾಹ ಪಡುತ್ತಿತ್ತು. ದೃಢನೂ ನಿರ್ಭಯನೂ ಶಾಂತನೂ ಮರಣಕ್ಕೆ ಚಿಂತೆ ಪಡದಿರುವವನು ಮಾತ್ರವಲ್ಲದೆ ಅದನ್ನು ಬರಲೆಂಬುವವನೂ ಆಗಿ, ಆ ಸಭಾಸಂಘದ ಮುಂದೆ ಮೆರೆಯುತ್ತಿದ್ದನು. ಲೋಕಚರಿತ್ರದಲ್ಲಿ

1) 401ನೇ ಪಾನು. 2) 399ನೇ ಪಾನು.

ಎಂತೂ ನ್ಯಾಯ ನಡೆದರೆ ಭವಿಷ್ಯ ಕಾಲದವರೆಲ್ಲರೂ ಈ ಪುರುಷನಿಗೋಸ್ಕರ ಆಶ್ಚರ್ಯ ಪಡುತ್ತಲಿರುವರು. ನಾನು, ಅವನು ಮಹಾದ್ಭುತ ಪುರುಷನೆಂತ, ಹೇಳಿದರೆ ಅದೊಂದು ಹೆಚ್ಚಿನ ಮಾತಲ್ಲ!—

ಹುಸ ಹಿಯೆರೋನುಮರೆಂಬ ಅಂಥಾ ದೈವಿಕ ಪುರುಷರನ್ನು ಸಜೀವವಾಗಿ ಸುಡಿಸಿದಂಥ ಸಭಾಸಂಘದವರಿಗೆ ಪಪ್ಪಕ ಪಕ್ಷಸಭೆಯಲ್ಲಿ ಪುನಃಸ್ಥಾಪನೆಯನ್ನು[1]) ಉತ್ಪಾದಿಸಲಿಕ್ಕೆ ಅಳವಲ್ಲವೆಂಬದು ಸ್ಪಷ್ಟ. ಅವರು ಆಗಿನ ಮೂವರು[2]) ಪಪ್ಪರನ್ನು ಉದ್ಯೋಗದಿಂದ ತಳ್ಳಿದ ಮೇಲೆ ಸೀಗಿಸ್ಮುಂದ ಕೈಸರನು ಮುಂತಾದ ಗೆರ್ಮಾನರು, ಇಂಗ್ಲಂದಿನವರು ಸಹ, ಒಬ್ಬ ಹೊಸ ಪಪ್ಪನನ್ನು ಆರಿಸಿಡುವದಕ್ಕಿಂತ ಮುಂಚೆಯೇ ಆ ಶಿರಾದಿಪಾದಾಂತವಾದ ಪುನಃಸ್ಥಾಪನೆಯಾಗ ಬೇಕೆಂದು, ಬೆಸಸಿದರು, ಸರಿ; ಒಬ್ಬ ಹೊಸ ಪಪ್ಪನು ಅದರ ಪ್ರಯತ್ನವನ್ನು ನಿರರ್ಥಕ ಮಾಡುವನೆಂಬದು ಅವರಿಗೆ ಸಿದ್ಧಾಂತ. ಆದರೂ ಕರ್ದಿನಾಲುದ್ಯೋಗಿಗಳೂ ಫ್ರಂಚರೂ ಈತಲಿಯದವರೂ ಅವರಿಗೆ ಉಗ್ರದಿಂದ ಎದುರಿಸಲಿಕ್ಕೆ, ಇಷ್ಟೇ ಮಾತ್ರ ನೇಮಕವಾಯಿತು, ಏನಂದರೆ—5 ವರುಷದ ಮೇಲೆ, ಬಳಿಕ 7 ವರುಷದ ಮೇಲೆ, ತದನಂತರ ಹತ್ತು ಹತ್ತು ವರುಷಕ್ಕೊಮ್ಮೆ ಒಂದು ಸಭಾಸಂಘವು ಕೂಡ ಬೇಕು.—ಕ್ರಿ. ಶ. 1417ನೇ ವರುಷದಲ್ಲಿ 5ನೇ ಮರ್ತೀನನನ್ನು[3]), ಪಪ್ಪನೆಂದು, ನೇಮಿಸಿಟ್ಟರು. ಇವನು ಮರುವರುಷ ಕೆಲವು ಬಹಿಃಕಾರ್ಯಗಳನ್ನು ಕುರಿತ ಬಡವಾದ ಪುನಃಸ್ಥಾಪನಾಪತ್ರವನ್ನು ಆ ಸಭಾಸಂಘದವರ ಮುಂದೆ ಓದಿದ ಹಿಂದೆ ಫ್ರಂಚರು ಸೀಗಿಸ್ಮುಂದ ಕೈಸರನ ಸನ್ನಿಧಿಗೆ ಬಂದು—ದಯೆ ಮಾಡಿ, ಮರ್ತೀನ ಪಪ್ಪನು ಹೆಚ್ಚಿನದೊಂದು ಪುನಃಸ್ಥಾಪನೆಯನ್ನು ನಿರ್ಮಿಸುವಂತೆ ಅವನನ್ನು ಬೇಡಿ ಕೊಳ್ಳಿರೆಂದು, ನಾನಾ ಪ್ರಕಾರದಿಂದ ಬಿನ್ನವಿಸಲಾಗಿ, ಕೈಸರನಂದದ್ದೇನು—ಪಪ್ಪನನ್ನು ಆರಿಸಿಡುವದಕ್ಕಿಂತ ಮುಂಚೆ ಪುನಃಸ್ಥಾಪನೆ ಸಾಗಿಸ ಬೇಕೆಂದು, ನಾನು ನಿಮ್ಮ ಹತ್ತರ ಬೆಸಸುವಲ್ಲಿ ನೀವು ಒಲ್ಲೆವೆಂದಿರಿ. ಈಗ ನಿಮಗೊಬ್ಬ ಪಪ್ಪನಿದ್ದಾನೆ; ಅವನಿಗೆ ಮೊರೆಯಿಡಿರಿ!—ಬಳಿಕ ಆ ಕೊಸ್ತಿತ್ಸ ಪಟ್ಣದ ಸಂಘದ ಅಂತದಲ್ಲಿ ಕ್ರಿ. ಶ. 1418ನೇ ಅಬ್ದ ಆ ಪಪ್ಪನು ಸರ್ವ ಕಥರರಿಗೆ, ಸೌವಾರ್ತಿಕ ಸತ್‌ಕ್ರೈಸ್ತರಿಗೆ ಸಹ, ಮಹಾ ಭಯಂಕರ ಶಾಪ ಹಾಕುವಂಥಾದ್ದೊಂದು ಬುಲ್ಲವನ್ನು ರಚಿಸಿ[4]), ಅದನ್ನು ವರುಷ ವರುಷಕ್ಕೆ ಕ್ರಿಸ್ತನ ಶ್ರಮವಾರದ ಬೃಹಸ್ಪತಿವಾರದಲ್ಲಿ ರೋಮದೊಳಗೆ ನೆರೆದ ಪ್ರಜೆಯ ಮುಂದೆ ಓದ ಬೇಕೆಂದು, ನಿತ್ಯಕ್ಕೂ ನೇಮಿಸಿದನು.

ಆದರೆ ಬೋಯಿಮೆನು ದೇಶದ ಸೌವಾರ್ತಿಕ ಕ್ರೈಸ್ತರೂ ಪಪ್ಪಕರಿಂದ ಹುಸನ

---

1) 367, 388, 397ನೇ ಪಾನು. 2) 338ನೇ ಪಾನು. 3) 388ನೇ ಪಾನು. 4) Bulla in coena Domini.

ಮೇಲೆ ಹುಸೀತರೆಂಬ ಉಪನಾಮ ಹೊಂದಿದ ಅವರ ಅನೇಕ ಮಂದಿ ಗೆಳೆಯರೂ—ಕೊಸ್ತ್ನಿತ್ಸಿನ ಸಂಘದ ಪಪ್ಪಕ ಮತೋದ್ಯೋಗಿಗಳು ದೇವವಾಕ್ಯಾಧಿಕಾರಕ್ಕೂ ಪಪ್ಪಕ ಪಕ್ಷಸಭೆಯೊಳಗಿನ ನಿಜ ಪುನಃಸ್ಥಾಪನೆಗೂ ಕೇವಲ ವಿರೋಧ ಮಾಡಿದರು, ಸೀಗಿಸ್ಮುಂದ ಕೈಸರನು ಮೊದಲಾದವರು ವಚನಭಂಗರಾದರು, ಸಂಘದವರು ಆ ಇಬ್ಬರು ಮಹಾತ್ಮರನ್ನು ಸಜೀವವಾಗಿ ದಹಿಸಿದರು ಎಂತ, ಹೇಳಿ, ಅತಿ ದುಃಖಗೊಂಡರು. ಆ ಹುಸೀತರಲ್ಲಿ ಎರಡು ಶಾಖೆಯವರು. ಒಂದನೆಯವರು—ಪಾತ್ರಾಪಹರಣವು ತಮಗೆ ಬೇಡ, ಪರಿಶುದ್ಧ ರಾತ್ರಿಭೋಜನವು ದ್ರಾಕ್ಷಾರಸ ರೊಟ್ಟಿಗಳೆಂಬ ಸಾಹಿತ್ಯದ್ವಯದಿಂದ ನಡಿಯ ಬೇಕು; ದೇವವಾಕ್ಯಪ್ರಸಂಗವು ಅಭ್ಯಂತರವಿಲ್ಲದೆ ಪ್ರಜಾಭಾಷೆಯಿಂದ ಆಗ ಬೇಕು; ಮತೋದ್ಯೋಗಿಗಳ ಲೌಕಿಕಾಧಿಕಾರವನ್ನು ಕಿತ್ತು ಹಾಕ ಬೇಕು; ಮತೋದ್ಯೋಗಿಗಳಿಗೂ ಸಭ್ಯರಿಗೂ ಬಿಗಿಯಾದ ಸಭಾಶಿಕ್ಷೆ ನಿರ್ಮಿಸ ಬೇಕು ಎಂದು, ಬಯಸುವಂಥವರು; ಅವರಿಗೆ ಕಲಿಕ್ಸ್ತೀನರು ಅಂದರೆ ಪಾತ್ರಾಪೇಕ್ಷಕರೆಂಬ ಅಡ್ಡಹೆಸರು; ಇವರಲ್ಲಿ ಮುಖ್ಯವಾಗಿ ಬಹಳ ಮಂದಿ ಆಢ್ಯರು. ಎರಡನೆಯವರು, ತಮಗೆ ಪಪ್ಪಕರ ಸಂಗಡದ ಸಮ್ಮಂಧವು ಇನ್ನು ಹ್ಯಾಗೂ ಬೇಡ! ಎಂತ, ಹೇಳುವಂಥವರು; ಅವರಿಗೆ ತಾಬೊರೀತರು ಅಂದರೆ ಗುಡಾರದವರು ಎಂಬ ಅಡ್ಡಹೆಸರು ಬಂತು; ಹ್ಯಾಗಂದರೆ, ಅವರು ಪರಿಶುದ್ಧ ರಾತ್ರಿಭೋಜನವನ್ನು ತಮ್ಮ ಸೌವಾರ್ತಿಕ ಅಭಿಪ್ರಾಯಕ್ಕನುಗುಣವಾಗಿ ಆಚರಿಸುವದಕ್ಕೋಸ್ಕರ ಒಂದು ದೇವಾಲಯದ ಬದಲಿಗೆ ಬೋಯಿಮ ಭಾಷೆಯಲ್ಲಿ, ತಾಬೊರು ಎಂತ, ಹೇಳುವದೊಂದು ದೊಡ್ಡ ಗುಡಾರ ಕಟ್ಟಿದ್ದರು.

ಹುಸೀತರಾದ ಆ ಕಲಿಕ್ಸ್ತೀನರೂ ತಾಬೊರೀತರೂ ಪಪ್ಪಕರಿಂದ ಅನೇಕ ಬಾಧೆ ಪಟ್ಟು, ಕ್ರಿ. ಶ. 1419ನೇ ವರುಷ ಪ್ರಾಗಿನಲ್ಲಿಯ ಮಂತ್ರಿಸಭೆಯವರ ಬಳಿಯಲ್ಲಿ, ತಮಗೆ ದೇವವಾಕ್ಯಕ್ಕನುಗುಣವಾದ ವಿಶ್ವಾಸಸ್ವಾತಂತ್ರ್ಯವು ಬೇಕೆಂದು, ಬೇಡಲು, ಆ ವಿನಂತಿ ಹಾರಿಸಿ ಬಿಡಲಾಯಿತು; ಅದು ಹೊರ್ತಾಗಿ ಸೀಗಿಸ್ಮುಂದ ಕೈಸರನ ಸಹೋದರನಾದ ವೆಂತ್ಸೆಲನೆಂಬ[1] ಸಹನಗುಣವುಳ್ಳ ರಾಜನು ಒಂದು ತಿಂಗಳಿಗೀಚೆ ಸತ್ತನಂತರ ಪ್ರಜೆಯು ಬೋಯಿಮೆನಿನ ರಾಜಪಟ್ಟಕ್ಕೆ ಬರುವ ಹಾಗಾದ ಆ ಕೈಸರನಿಗೆ ವಂದಿಸಲೊಲ್ಲದು. ಇಂತಿರಲಿಕ್ಕೆ ಹುಸೀತರಿಗೂ ಪಪ್ಪಕರಿಗೂ ದುಃಖಕರವಾದದೊಂದು ಯುದ್ಧವು ಹತ್ತಿತು; ಕ್ರಿ. ಶ. 1420ನೇ ವರುಷ ಸೀಗಿಸ್ಮುಂದನು ಪಪ್ಪನ ಒಬ್ಬ ದೂತನಿಂದ ಹುಸೀತರ ಮೇಲಿನ ಕ್ರೂಜೆಯುದ್ಧ[2] ಸಾರಿಸಿದಂದಿನಿಂದ 1434ನೇದರ ವರೆಗೆ ಅದು 14 ವರುಷವೇ ನಡೆಯುತ್ತಿತ್ತು. ಹುಸೀತರು ವಚನಭ್ರಷ್ಟನಾದಂಥ ಸೀಗಿಸ್ಮುಂದನನ್ನು ಎಲ್ಲಿಯೂ ಜಯಿಸುತ್ತಿದ್ದರು.

1) 393, 395, 396ನೇ ಪಾನು. 2) 377, 396ನೇ ಪಾನು.

ತನ್ಮಧ್ಯ ಕೊಸ್ಟ್ನಿಕ್ಸಿನ ಸಭಾಸಂಘದವರು ಕ್ರಿ. ಶ. 1417ನೇ ಅಬ್ದ ಪಪ್ಪತ್ವಕ್ಕೆ ನೇಮಿಸಿಟ್ಟದ್ದಂಥ ಆ 5ನೇ ಮರ್ತೀನನು[1] ಪುಂಡುಗಾರನಾಗಿ ತೋರಿಸಿ ಕೊಳ್ಳುತ್ತಿದ್ದನು; ಅವನು ದೊಡ್ಡ ಸಿಮೋನೀಯವನ್ನಲ್ಲದೆ[2] ಒತ್ತಾಯದ ವಂತಿಗೆ ಸಹ ಮಾಡುತ್ತಿದ್ದನು. ಅವನ ಅರಮನೆಯಲ್ಲಿದ್ದ ಗೆರ್ಮಾನರಾದ ರಾಜಪ್ರೇಷಿತರು ಹಲುಬಿದ್ದೇನಂದರೆ—ಹಣವಿದ್ದರೆ ಸ್ನೇಹ, ಅದಿಲ್ಲದಿದ್ದರೆ ಸ್ನೇಹವಿಲ್ಲವೆಂಬಂತೆ ರೋಮದಲ್ಲಿ ರೂಢಿಯು. ರೋಮದಲ್ಲಿ ಲೋಭತ್ವವು ಆಳುತ್ತಿದ್ದು, ದಿನದಿನಕ್ಕೆ ಹೊಸ ತಂತ್ರ ಉಪಾಯಗಳ ಮೂಲಕ ಗೆರ್ಮಾನಿಯದಿಂದ ಹಣ ಎಳೆಯುತ್ತಾ ಇದೆ. ಪಪ್ಪನೂ ರೋಮದಲ್ಲಿಯ ಅವನ ಪರಿಚಾರಕರೆಲ್ಲರೂ ನಡಿಸುವದೆಲ್ಲವೂ ಚೋರತ್ವ ಲೋಭತ್ವ ಕಪಟತ್ವ ದರ್ಪತ್ವಗಳದ್ದಾಗಿದೆ.—ಈ ಪ್ರಕಾರ ಸರ್ವ ಜನರು ಪಪ್ಪನಿಗೂ ಪಪ್ಪಕ ಮತೋದ್ಯೋಗಿಗಳಿಗೂ ಹೆಚ್ಚು ಹೆಚ್ಚು ಮುನಿಯುವವರಾಗಿ, ಶಿರಾದಿಪಾದಾಂತವಾದ ಪುನಃಸ್ಥಾಪನೆಯ ಅಧಿಕ ನಿರೀಕ್ಷೆಯುಳ್ಳವರಾಗಿ, ಕಾಣಿಸುತ್ತಿದ್ದರು. ಕೊಸ್ಟ್ನಿಕ್ಸಿನಲ್ಲಿ ನೇಮಕವಾದಂತೆ ಮರ್ತೀನ ಪಪ್ಪನು ಕ್ರಿ. ಶ. 1431ನೇ ವರುಷ ಮತ್ತೊಂದು ಸಭಾಸಂಘವನ್ನು ಕೂಡ ಕರಿಸ ಬೇಕಾಯಿತು; ಅದು ಬಾಸೆಲು ಪಟ್ಣದಲ್ಲಿ[3] ನೆರೆಯಿತು. ಮರ್ತೀನನು ಅದೇ ವರುಷ ಸಾಯಲು, 4ನೇ ಯುಗೆನನು ಪಪ್ಪನಾಗಿ, ಕ್ರಿ. ಶ. 1447ನೇದರ ವರೆಗೆ ಆ ಉದ್ಯೋಗದಲ್ಲಿರುತ್ತಿದ್ದನು. ಆದರೆ ಆ ಬಾಸೆಲಿನ ಸಭಾಸಂಘದವರು ಒಂದು ಅಪೂರ್ವವಾದದ್ದನ್ನು ಮಾಡಿದರು; ಅದೇನಂದರೆ, ಕೊಸ್ಟ್ನಿಕ್ಸಿನ ಸಂಘದವರು ಸುಡಿಸಿದಂಥ ಹುಸನು ತಲೆಯಾಗಿದ್ದ ಹುಸೀತರೆಂಬ ಆ ಕಥರರೊಂದಿಗೆ ಅವರು ಸಂಧಾನಕ್ರಿಯೆಗಳನ್ನು ನಡಿಸುವವರಾದರು. ಅವರು ಕ್ರಿ. ಶ. ಆ 1431ನೇ ಅಬ್ದದ ಅಂತದಲ್ಲಿ ಬೋಯಿಮೆನಿಗೆ ಅವರ ಹತ್ತರ ಬಿನ್ನವತ್ತಲೆ ಕಳುಹಿಸಿ—ನೀವು ಬಂದರೆ ನಿಮ್ಮ ಮನೋಭಿಪ್ರಾಯವನ್ನು ಇದ್ದಂತೆಯೇ ಹೇಳ ಬಹುದು, ಆಗಮ ಗಮನಗಳಲ್ಲಿ ನಿಮಗೇನೂ ಕೇಡಾಗದೆಂದು, ಮಾತು ಕೊಟ್ಟರು. ಬಳಿಕ ಕ್ರಿ. ಶ. 1433ನೇದಕ್ಕೆ ಹುಸೀತರ 300 ಮಂದಿ ಪ್ರತಿನಿಧಿಗಳು ಬಾಸೆಲಿಗೆ ಬಂದರು. ಅವರಲ್ಲಿಯ ಕಲಿಕ್ಸ್ತೀನರು ಹಿಂದೆ ಹೇಳಿದ ಆ ನಾಲ್ಕು ಸಂಗತಿಗಳನ್ನು ಕೇಳಿ ಕೊಂಡಾಗ 50 ದಿವಸಕ್ಕೆ ಅವುಗಳನ್ನು ಕುರಿತು ವಾದ ನಡೆದ ಮೇಲೆಯೂ ಸಂಧಾನವಾಗದಿರಲು, ಹುಸೀತರೆಲ್ಲರೂ ಹಾಗೆಯೇ ಮರಳಿದರು. ಆದರೂ ಆ ಸಭಾಸಂಘದವರು ಶೀಘ್ರದಿಂದ ಅವರ ಹಿಂದೆ ದೂತರನ್ನು ಕಳುಹಿಸಿ, ಆ ಕಲಿಕ್ಸ್ತೀನರಿಗೆ, ನೀವು ಬಯಸಿದಂತೆ ಆಗಲಿ! ಎಂದು, ತಿಳಿಸಿದ ಕಾರಣ ಕಲಿಕ್ಸ್ತೀನರು ಈ ವಾಕ್ಕಿನ ಮೇಲೆ ಪಪ್ಪಕರ ಸಂಗಡ ತಿರಿಗಿ ಸ್ನೇಹವೆಸಗಿ, ಮಹಾ ಪ್ರಮಾಣದಿಂದ ಬಾಸೆಲಿನ ಈ ಒಪ್ಪಂದಕ್ಕೆ ಒಡಂಬಟ್ಟ ಸೀಗಿಸ್ಮುಂದ ಕೈಸರ

1) 405ನೇ ಪಾನು. 2) 328, 329, 360ನೇ ಪಾನು. 3) 360ನೇ ಪಾನು.

ನನ್ನು, ಬೋಯಿಮೆನ ಅರಸನೆಂದು, ತೆಕ್ಕೊಂಡರು. ಆದರೆ ತಾಬೋರೀತರು, ಆ ಒಪ್ಪಂದವು ತಮಗೆ ಬೇಡವೇ ಬೇಡವೆಂತ, ನಿವಾರಿಸಿ ಬಿಡಲಿಕ್ಕೆ, ಕಲಿಕ್ಸ್ತೀನರು ಮುರುವರುಷ ಪಪ್ಪಕರ ದಂಡನ್ನು ಕೂಡಿ, ಅವರ ಮೇಲೆ ಬಿದ್ದು, ಅವರನ್ನು ಗೆದ್ದು, ಬಹಳ ಹಾನಿ ಮಾಡಿದರು.

ಪಪ್ಪಕರು ಆ ವಿಧವಾಗಿ ಕಲಿಕ್ಸ್ತೀನರ ಸಹಾಯದಿಂದ ತಾಬೋರೀತರ ಬಲ ಕುಂದಿಸಿದ ತರುವಾಯ ಕಲಿಕ್ಸ್ತೀನರನ್ನು ಸಹ ಹಿಂಡಲಿಕ್ಕೆ ಸುಲಭವಾಯಿತು. ಅವರು ತಡೆಯದೆ, ಕಲಿಕ್ಸ್ತೀನರು ಮಹಾ ಕಥರರೆಂದು, ನಿರ್ಣಯಿಸಿದರು; ಪಪ್ಪನೂ ಕೈಸರನೂ ಬಾಸೆಲಿನ ಆ ಒಪ್ಪಂದವನ್ನು ಗಣಿಸದೆ, ತಳ್ಳಿ ಬಿಟ್ಟರು[1]; ಕುಯುಕ್ತಿಯಿಂದಲೂ ಬಲಾತ್ಕಾರದಿಂದಲೂ ಪಪ್ಪಕ ಮತವು ಕಲಿಕ್ಸ್ತೀನರಲ್ಲಿ ತಿರಿಗಿ ಶೇರಿಸಲಾಯಿತು.

ಆದರೆ ಆ ತಾಬೋರೀತರಲ್ಲಿ ಉಳಿದವರು ಬಹಳ ಬಾಧೆ ಪಡುತ್ತಿದ್ದರೂ ಇರುತ್ತಲಿದ್ದರು; ಬಾಧೆಯಿಂದ ಅವರಿಗೆ ಲಾಭವೇ ಆಯಿತು; ಅವರು ಅದರಿಂದ ಪುಟಕ್ಕೆ ಹಾಕಿದ ಚಿನ್ನದಂತಾದರು. ಅದಲ್ಲದೆ ಗೋಪ್ಯ ಕಲಿಕ್ಸ್ತರಲ್ಲನೇಕರು ಅವರನ್ನು ಕೂಡಿ ಕೊಂಡರು. ಬಳಿಕ ಅವರು ಒಟ್ಟಾಗಿ ಕ್ರಿ. ಶ. 1457ನೇ ವರುಷ ಸುತ್ತ ಗೆರ್ಮಾನಿಯದಲ್ಲಿಯೂ ಅದರ ಹೊರಗೂ ಇರುವ ಸೌವಾರ್ತಿಕ ಕ್ರೈಸ್ತರ ಸಭೆಯ[2] ಅಂಗಗಳಾದರು. ಆ ಸೌವಾರ್ತಿಕ ಕ್ರೈಸ್ತರ ಸಭೆಯ ಕಟ್ಟಳೆಗಳು ಅಪೊಸ್ತೊಲಿಕ ಸಭೆಗಳವಕ್ಕೆ ಸರಿಯಾಗಿದ್ದವು; ಅವರ ದೇವಾಲಯಗಳಲ್ಲಿ ಏನೂ ಬಹಿಃಶೃಂಗಾರವಿರಲಿಲ್ಲ; ಅವರ ದೇವಾರಾಧನೆಯು ಬಹಿರಾಡಂಬರವಿಲ್ಲದೆ ನಡೆಯುವದು; ಅವರ ಸಭಾಶಿಕ್ಷೆಯು ಬಿಗಿ; ಅವರ ನಡತೆಯು ದೇವರ ನಿಜ ಭಯವುಳ್ಳದ್ದು; ಅವರ ಪರಸ್ಪರ ಸಹೋದರಪ್ರೀತಿಯು ಹೃದ್ಯವಾದದ್ದು; ಅವರ ಪ್ರಸಂಗವು ದೇವವಾಕ್ಯಕ್ಕನುಸಾರವಾದದ್ದು. ಬೋಯಿಮೆನಿನಲ್ಲಿಯೂ ಮೇರೆನಿನಲ್ಲಿಯೂ ಅವರು ಬೋಯಿಮ ಮೇರ ಸಹೋದರರ ಸಭೆ ಎನ್ನಿಸುತ್ತಿದ್ದರು; ಇವರಿಗೆ ಕ್ರಿ. ಶ. 1517ನೇ ವರುಷಕ್ಕೆ ಸುಮಾರು 200 ದೇವಾಲಯಗಳಿದ್ದವು. 1618ನೇ ವರುಷದಾರಭ್ಯ ಆ ಸೌವಾರ್ತಿಕ ಕ್ರೈಸ್ತರಿಗೆ ಬೋಯಿಮೆನು ಮೇರೆನು ದೇಶಗಳಲ್ಲಿ ಪಪ್ಪಕರಿಂದ ಅತಿರೇಕ ಹಿಂಸೆ ಬಂದೊದಗಲು, ಅವರೊಳಗಿನ ನೂರಾರು ಆಢ್ಯ ಕುಟುಂಬಗಳು ಓಡಿ, ಸ್ಲೇಸಿಯೆನು[3] ಸಕ್ಸೆನು ಪೋಲಂದು[4] ನೀದೆರ್ಲಂದು[5] ಹೂಂಗರಿಯ[6] ಮುಂತಾದ ದೇಶಗಳಿಗೆ ಹೋಗಿ, ಆಶ್ರಯ ಗೊಂಡವು.

ಆದರೆ ಅಷ್ಟರಲ್ಲಿ ಬಾಸೆಲಿನ ಸಭಾಸಂಘದವರು, ಯುಗೆನ ಪಪ್ಪನು ತಮಗೆ

1) 400ನೇ ಪಾನು ಸರಿ ನೋಡು. 2) 369, 370, 374ನೇ ಪಾನು. 3) 393ನೇ ಪಾನು. 4) 395ನೇ ಪಾನು. 5) 384ನೇ ಪಾನು. 6) 393ನೇ ಪಾನು.

ಎದುರಿಸುತ್ತಿದ್ದಾಗ್ಯೂ, ಒಂದು ತರದ ಪುನಃಸ್ಥಾಪನೆಯನ್ನು ಸಾಧಿಸಲಿಕ್ಕೊದ್ದಾಡುತ್ತಿದ್ದರು; ಅದು ಬರೇ ಬಾಹ್ಯ ವಿಷಯಗಳನ್ನು ಕುರಿತಾದದ್ದು ಆಶ್ಚರ್ಯವಲ್ಲ; ದೇವರ ಆತ್ಮವು ಅವರೊಳಗಾಳಲಿಲ್ಲ. ಅವರು ವ್ಯವಸ್ಥೆ ಮಾಡಿದ್ದೇನಂದರೆ—ಪಪ್ಪರು ತಾವು ಹೊಸತಾಗಿ ಉದ್ಯೋಗಪ್ರತಿಷ್ಠೆ ಕೊಟ್ಟ ಪ್ರೀಸ್ತರಿಂದಲೂ ಬದಲಿಯದೊಂದು ಅಧ್ಯಕ್ಷತಾಸ್ಥಳಕ್ಕೆ ಹಾಕಿದ ಅಧ್ಯಕ್ಷರಿಂದಲೂ ಹೊಸತಾಗಿ ಪ್ರತಿಷ್ಠೆ ಕೊಟ್ಟ ಅಬ್ಬಾತರಿಂದಲೂ ಅವರವರ ಪ್ರಥಮ ವರುಷದ ಪೂರ್ಣ ಪ್ರಾಪ್ತಿಯನ್ನಾಗಲಿ ಅದರ ದೊಡ್ಡ ಪಾಲನ್ನಾಗಲಿ, ತಮ್ಮ ತೆರಿಗೆ ಎಂದು, ಎತ್ತಿ ಕೊಳ್ಳುತ್ತಿದ್ದದ್ದು ಇನ್ನು ಮುಂದೆ ನಡೆಯ ಬಾರದು; ಅದರ ಹೊರ್ತು, ಅಧ್ಯಕ್ಷರು ತಾವು ಒಂದು ತುಕ್ಕಡಿಯ ಮೇಲೆ ಹೊಸತಾಗಿ ಇಟ್ಟ ಪ್ರೀಸ್ತರಿಂದ ಅದೇ ಪ್ರಕಾರ ಹಣವೆತ್ತಿ ಕೊಳ್ಳುತ್ತಿದ್ದ ಪಪ್ಪರ ಬೊಕ್ಕಸಕ್ಕೆ ಶೇರಿಸ ಬೇಕಾಗುತ್ತಿದ್ದದ್ದು ರದ್ದಾಯಿತು; ಪುನಃ, ಮತೋದ್ಯೋಗಿಗಳು ಬಹಿರಂಗದಲ್ಲಿ ಹೆಂಗಸರನ್ನಿಟ್ಟು ಕೊಂಡಲ್ಲಿ ಅವರ ಉದ್ಯೋಗ ಹೋಗುವದು; ಇಂತೆರ್ದಿಕ್ತೆಂಬ ಕ್ರಿಯೆಯು ವಿರಳವಾಗಿ ನಡಿಯ ಬೇಕು; ಸ್ವೀಕೃತನಾದ ಒಬ್ಬೊಬ್ಬ ಪಪ್ಪನಿಗೆ ವಂದಿಸುವದಕ್ಕಿಂತ ಮುಂಚೆ ಅವನು—ಸರ್ವಸಭಾಸಂಘಗಳನ್ನು ಕ್ರಮವಾಗಿ ನಡಿಸುವೆನು, ಸತ್ಯದ ಪುನಃಸ್ಥಾಪನೆಯ ಚಿಂತೆ ಗೊಂಡಿರುವೆನು ಎಂದು, ಪ್ರಮಾಣಿಸ ಬೇಕು; ಇಂಥಾ ಪ್ರಮಾಣಪತ್ರಿಕೆಯನ್ನು ಅವನು ವರುಷಕ್ಕೊಮ್ಮೆ ಬಹಿರಂಗದಲ್ಲಿ ಓದ ಬೇಕು.—ಯುಗೆನ ಪಪ್ಪನು ಆ ವಿಧದ ವ್ಯವಸ್ಥೆಗಳನ್ನು ಎಡೆ ಬಿಡದೆ ತಳ್ಳುತ್ತಿದ್ದದಲ್ಲದೆ ಆ ಸಭಾಸಂಘದವರ ಮೇಲೆ ಬನ್ನು ಸಹ ಜಡಿದನು; ಆದರೂ ಅವು ಫ್ರಂಚು ದೇಶದಲ್ಲಿ ಶೇರಿಸಲಾಗುವದನ್ನು ನಿರರ್ಥಕ ಮಾಡುವದು ಅವನಿಗಸಾಧ್ಯವಾಯಿತು; ಗೆರ್ಮಾನಿಯದಲ್ಲಿ ಅವನ ಕುತಂತ್ರಗಳಿಂದ ಸಮಸ್ತವೂ ಪೂರ್ವದಂತೆಯೇ ಉಳಿಯಿತು. ಆ ಸಭಾಸಂಘದ ಆತ್ಮೀಯವಾದದೊಂದು ಫಲವು ಎಲ್ಲಿಯೂ ಮೂಡಲಿಲ್ಲ. ಆ ಸಂಘವು 17 ವರುಷವೇ ಕ್ರಿ. ಶ. 1449ನೇ ವರುಷದ ತನಕ ಮುಖ್ಯವಾಗಿ ಪಪ್ಪನ ದೆಸೆಯಿಂದ ವ್ಯರ್ಥವಾಗಿ ಹೋದಂಥ ಪುನಃಸ್ಥಾಪನಾಪ್ರಯತ್ನಗಳನ್ನು ಪಡುತ್ತಾ ಇದ್ದನಂತರ ಬಿಚ್ಚಿ ಹೋಯಿತು.



## 54. ಪಪ್ಪಕ ಪಕ್ಷಸಭೆಯೊಳಗೆ ಹೊಸ ಕಾಲದ ಮೇಲೆ ಗೋಚರಿಸುತ್ತಿದ್ದ ಪ್ರತೀಕ್ಷೆಯು.

15ನೇ ಕ್ರಿಸ್ತಶತಮಾನದಲ್ಲಿ ಪಪ್ಪಕ ಸಭೆಯೊಳಗೆ ಶಿರಾದಿಪಾದಾಂತವಾದ ನವೀಕರಣವೆಂಬ ಪುನಃಸ್ಥಾಪನೆಯ ಅಭಿಲಾಷೆಯು ಪ್ರಬಲವಾಯಿತೆಂದು, ಹಿಂ

ದೆ[1] ಹೇಳಿ ಅದೆ; ಪುನಃ, ಹೆಚ್ಚಾಗಿ ಪಪ್ಪರು ಅಂಥ ಪುನಃಸ್ಥಾಪನೆಗೆ ವಿರೋಧಿಸುತ್ತಿದ್ದರೆಂದು, ಸಹ ಸೂಚಿಸಲಾಯಿತು. ಪುನಃಸ್ಥಾಪನೆಯ ಆ ವಿಧದ ಅಭಿಲಾಷೆಯು ಕ್ಲೇರ್ವೊ ಮಠದ ಬೆರ್ನ್ಹರ್ದನಲ್ಲಿಯಾದರೂ[2] ನಮ್ಮ ಕಣ್ಣಿಗೆ ಬಿತ್ತಲ್ಲ? ಇಂಗ್ಲಂದಿನಲ್ಲಿ ವಿಕ್ಲಿಫನು ಮತ್ತೆ ಗೆರ್ಮಾನಿಯದಲ್ಲಿ ಹುಸನು ಸೌವಾರ್ತಿಕ ಕ್ರೈಸ್ತರ ಪ್ರಾಣಮಿತ್ರರಾದದು ಆ ಅಭಿಲಾಷೆಯದೊಂದು ಫಲವು. ಪಪ್ಪಕ ಪಕ್ಷದ ಹೊರಗಿನ ಸೌವಾರ್ತಿಕ ಕ್ರೈಸ್ತರು ಮಾತ್ರವಲ್ಲದೆ ಅದರ ಒಳಗೆ ಇವರಂಥವರಾಗಿರುವವರು ಸಹ ಆ ಅಭಿಲಾಷೆಯನ್ನೇ ಸಾಕುತ್ತಿದ್ದು, ಅದರ ಅರ್ಥವನ್ನು ಪ್ರತೀಕ್ಷಿಸಿ, ದೇವರಿಗೆ ಬೇಡಿ ಕೊಳ್ಳುತ್ತಿದ್ದರು. ಪಪ್ಪಕ ಪಕ್ಷದೊಳಗಿನ ಅಂಥವರಲ್ಲಿ ಮುಸ್ತಿಕರು (ಅಂದರೆ ಪರಮಾರ್ಥವಿಚಾರಪರರು) ಎಂತಲೂ ದೇವಮಿತ್ರರೆಂತಲೂ ಹೆಸರು ಗೊಂಡಂಥ ಭಕ್ತರು ಕೂಡ ಶೇರಿದವರು. ಕ್ರಿ. ಶ. 1290ನೇ ವರುಷದಲ್ಲಿ ಹುಟ್ಟಿ 1361ನೇದರಲ್ಲಿ ತೀರಿ ಬಹಿರಕ್ಕೆ ದೊಮಿನಿಕಾನ ಮಠಿಕಕುಲದವನಾಗಿದ್ದ ಯೋಹಾನ ತೌಲೆರನೆಂಬವನು ಮುಸ್ತಿಕರಲ್ಲಿ ಮೆರೆದವನೊಬ್ಬನು; ಅಲ್ಸಾಸು[3] ಶೀಮೆಯದೊಂದು ಪಟ್ಣವಾದ ಸ್ತ್ರಾಸ್ಬುರ್ಗು ಎಂಬದು ಅವನ ವೃತ್ತಿಯ ಮುಖ್ಯ ಸ್ಥಳವು; ಅಲ್ಲಿ ಅವನು ಪಪ್ಪಕ ಸಭೋದ್ಯೋಗಿಗಳಿಂದ ವಿವಿಧೋಪದ್ರವ ತಾಳುವೆಡೆ ಯೇಸು ಕ್ರಿಸ್ತನ ಮೇಲಣ ಪ್ರೀತಿಯನ್ನು ಪ್ರಜೆಯೊಳಗೆ ಊರುತ್ತಿದ್ದನು. ಬಾಸೆಲು ಪಟ್ಣದಲ್ಲಿ[4] ಅವನಿಗೆ ನೀಕೊಲಾವನೆಂಬ ನಂಬಿಗಸ್ತ ಗೆಳೆಯನಿದ್ದನು; ಇವನು ಪಪ್ಪಕ ಪಕ್ಷದ ಹೊರಗಿರುವ ಸೌವಾರ್ತಿಕ ಕ್ರೈಸ್ತರಿಗೆ ಸಹ ಬಹಳ ಪ್ರೇಮಿಸುತ್ತಾ, ಒಮ್ಮೆ ಫ್ರಂಚು ದೇಶದ ವಿಯೆನ್ ಪಟ್ಣದ[5] ಅಂಥವರಿಗೆ ಭೇಟಿ ಮಾಡಲಿಕ್ಕೆ ಪ್ರಯಾಣದಲ್ಲಿರುವಾಗ ಗುಪ್ತವಿಚಾರಕರು ಅವನನ್ನೂ ಅವನ ಸಂಗಡಿಗರಾದ ಇಬ್ಬರು ಕ್ರೈಸ್ತ ಸಹೋದರರನ್ನೂ ಹಿಡಿದು, ಸಜೀವವಾಗಿ ದಹಿಸಿ ಬಿಟ್ಟರು. ನೀದೆರ್ಲಂದಿನಲ್ಲಿ[6] ತೌಲೆರನಿಗೆ ರೆಯುಸ್ಬ್ರುಕನೆಂಬ ಮತ್ತೊಬ್ಬ ಜೀವಸಖನು; ಇವನು ಔಗುಸ್ತೀನರ[7] ಮಠದ ಒಬ್ಬ ಅಬ್ಬಾತನು. ಈ ರೆಯುಸ್ಬ್ರುಕನ ಶಿಷ್ಯರು ಅನ್ಯೋನ್ಯಜೀವಭ್ರಾತೃಗಳೆಂಬ ಸಮಾಜವನ್ನು ಸ್ಥಾಪಿಸಿದರು. ಈ ಸಮಾಜದವರು ನೀದೆರ್ಲಂದಿನಲ್ಲಿ ಅಲ್ಲದೆ ಮುಖ್ಯವಾಗಿ ಗೆರ್ಮಾನಿಯದಲ್ಲಿಯೂ ಬಹು ನೆಲೆ ಗೊಂಡರು; ದೇವವಾಕ್ಯದ ಪ್ರತಿಗಳನ್ನೆತ್ತಿ ಬರೆದು, ಪ್ರಜೆಗೆ ಸ್ವಭಾಷೆಯಿಂದಲೇ ಅದನ್ನುಪದೇಶಿಸುವದು ಅವರ ಅಭಿಪ್ರಾಯಗಳಲ್ಲೊಂದು. ಔಗುಸ್ತೀನರ ಸಮಸ್ತ ಮಠಿಕ ಕುಲದಲ್ಲಿ ಅವರ ಉದ್ದೇಶ್ಯವು ಹೆಚ್ಚು ಕಡಿಮೆ ಶೇರಿತು; ಹೀಗಿರಲಾಗಿ ಆ ಕುಲದವರು ಸಹ ದೇವವಾಕ್ಯ

1) 397, 405, 407, 409ನೇ ಪಾನುಗಳು. 2) 367ನೇ ಪಾನು. 3) 303ನೇ ಪಾನು. 4) 360, 407, 408ನೇ ಪಾನು. 5) 371, 376ನೇ ಪಾನು. 6) 384, 408ನೇ ಪಾನುಗಳು. 7) 350ನೇ ಪಾನು.

ದ ಮತ್ತು ಹಿಪ್ಪೊ ಪಟ್ಣದ ಆ ಔಗುಸ್ತೀನನ ಸೌವಾರ್ತಿಕ ಬೋಧೆಯ[1] ವಿಸ್ತಾರಕರಾದರು. ಕಡು ಭಿಕ್ಷುಕಮಠಿಕರು[2] ಅವರನ್ನು ನಾನಾ ಪರಿ ಕಾಡುತ್ತಿರುವರು. ಆ ಅನ್ಯೋನ್ಯಜೀವಭ್ರಾತೃಗಳಲ್ಲಿ ಅತಿ ಕೀರ್ತಿ ಗೊಂಡವನೊಬ್ಬನು ಕೆಂಪೆನಿನ ಥೋಮನು; ರೈನು ನದಿಯ ತೀರದಲ್ಲಿ ಕೊಯಿಲ್ನು ಪಟ್ಣದ[3] ಹತ್ತರ ಒಂದು ಚಿಕ್ಕ ಪಟ್ಣವಾದ ಆ ಕೆಂಪೆನಿನಲ್ಲಿ ಅವನು ಕ್ರಿ. ಶ. 1380ನೇ ವರುಷ ಜನಿಸಿ, ಕ್ರಿಸ್ತನ ಹಿಂಬಾಲನ್ನು ಕುರಿತು ನಾಲ್ಕು ಗ್ರಂಥಗಳನ್ನು ರಚಿಸಿದನು; ಇವು ಪೂರ್ಣ ಸೌವಾರ್ತಿಕ ಬೋಧನೆಯುಳ್ಳಂಥವುಗಳು; ಅವು ಅನೇಕ ಭಾಷಾಂತರಗಳಾಗಿ, ಈಗಲಿನ್ನೂ ಓದುವಂಥವರಿಗೆ ಆಶೀರ್ವಾದ ಕೊಡುತ್ತವೆ. ಥೋಮನು ತನ್ನ ಕೃತಿಗಳಲ್ಲಿ ಒಂದೇ ಸರ್ತಿ ಮಾತ್ರ ಪಪ್ಪನನ್ನು ಕುರಿತು ಒಂದು ನಿರ್ಣಯ ಮಾಡಿದ್ಧಾನೆ; ಅದೇನಂದರೆ[4]—ಪಪ್ಪನೂ ಅವನ ಶೀಸದ ಬುಲ್ಲಗಳೂ[5] ಬೇರೆ ಎಲ್ಲಾ ಲೌಕಿಕ ವಿಷಯಗಳಂತೆ ಅನರ್ಥಕವೇ!—ಅವನ ಶಿಷ್ಯರಲ್ಲಿ ಯೋಹಾನ ವೆಸ್ಸೆಲನೆಂಬವನು ಬಹು ಯಶಸ್ಸು ಗೊಂಡನು. ಅವನು ಕ್ರಿ. ಶ. 1419ನೇ ವರುಷಕ್ಕೆ ಹೊಲ್ಲಂದು ದೇಶದ ಗ್ರೊಯ್ನಿಂಗೆನು ಪಟ್ಣದಲ್ಲಿ ಜನಿಸಿ 1489ನೇದಕ್ಕೆ ತೀರಿದವನು. ದೊಡ್ಡ ಸಭಾಪುನಃಸ್ಥಾಪಕನೆಂತ ನೀವು ಇನ್ನು ಮುಂದೆ ಓದಿ ತಿಳು ಕೊಳ್ಳುವ ಲುಥರನೆಂಬವನು ಒಮ್ಮೆ ಅವನ ಗ್ರಂಥಗಳನ್ನು ಪಠಿಸಿ, ಬರೆದದೇನಂದರೆ—ನಾನು ಸಭಾಪುನಃಸ್ಥಾಪನೆಯನ್ನಾರಂಭಿಸುವದಕ್ಕಿಂತ ಮುಂಚೆ ವೆಸ್ಸೆಲನ ಕೃತಿಗಳನ್ನು ಓದಿದ್ದರೆ ನನ್ನ ಎದುರಾಳಿಗಳು—ಅಗೋ, ಅವನ ಅರ್ಥವನ್ನು ಕದ್ದು ಕೊಂಡು, ಸಾರಿದನಷ್ಟೇ! ಎಂತ, ಭಾವಿಸಿ ಕೊಂಡು, ಹೇಳ್ಯಾರು; ಇಷ್ಟರ ಮಟ್ಟಿಗೂ ಅವನ ಅಭಿಪ್ರಾಯವು ನನ್ನದಕ್ಕೆ ಸರಿ ಬೀಳುತ್ತದೆ.—16ನೇ ಕ್ರಿಸ್ತುಶತಮಾನದಾರಂಭದಲ್ಲಿ ಆ ಭ್ರಾತೃಗಳ ಸಮಾಜದವನೊಬ್ಬನಾದ ಯೋಹಾನ ಸ್ಟೌಪಿತ್ಸನೆಂಬ ದೊಡ್ಡ ಪಂಡಿತನು ಗೆರ್ಮಾನಿಯದ ಔಗುಸ್ತೀನರ ಮಠಗಳ ಮುಖ್ಯಸ್ಥನಾಗಿದ್ದನು; ಗೆರ್ಮಾನಿಯದ ರಾಜಸ್ವೀಕಾರ ಅಂದರೆ ರಾಜಶೋಧಕ[6] ಪ್ರಭುಗಳಲ್ಲೊಬ್ಬನಾದ ಸಕ್ಸೆನು ದೇಶದ ಜ್ಞಾನಿ ಎಂಬ ಉಪನಾಮದ ಪ್ರೀದೇರೀಕನು ಕ್ರಿ. ಶ. 1502ನೇ ವರುಷ, ಅನ್ಯೋನ್ಯಭ್ರಾತೃಗಳಂಥ ಜನರಿಗೆ ತಕ್ಕ ಸ್ಥಳವೆಂದು, ಆ ಪಂಡಿತನ ಸಹಾಯದಿಂದ ತನ್ನ ದೇಶದ ವಿತ್ತೆನ್ಬೆರ್ಗೆಂಬ ಪಟ್ಣದಲ್ಲಿ ಒಂದು ಮಹಾ ವಿದ್ಯಾಶಾಲೆಯನ್ನು ನಿರ್ಮಿಸಿದನು; ಸ್ಟೌಪಿತ್ಸನು ಕ್ರಿ. ಶ. 1524ನೇ ಅಬ್ದ ಶಾಂತ ಸ್ಥಿತಿಯಲ್ಲಿ ಸತ್ತನು. ಈತಲಿಯ ದೇಶದಲ್ಲಿ ಶಿರಾದಿಪಾದಾಂತವಾದ ಪುನಃಸ್ಥಾಪನೆ ಬಯಸುವಂಥವರಲ್ಲಿ ಫ್ಲೋರೆಂತಿಯ ಪಟ್ಣದ[7] ಹಿಯೆರೋನುಮ ಸವೊನರೋಲನೆಂಬವನು ವಿರಾಜಿಸುತ್ತಿದ್ದನು; ತೌಲೆರನಂತೆ ಅವ

1) 291ನೇ ಪಾನು. 2) 383ನೇ ಪಾನು. 3) 327ನೇ ಪಾನು. 4) Hortul. Rosar. 4, 3. 5) 385ನೇ ಪಾನು. 6) 333ನೇ ಪಾನು. 7) 404ನೇ ಪಾನು.

ನೂ ಹೊರಬಳಿಗೆ ದೊಮಿನಿಕಾನ ಮಠಿಕಕುಲದವನೊಬ್ಬನು; ಆದರೆ ಹಿಪ್ಪೊವಿನ ಔಗುಸ್ತೀನನ ಗ್ರಂಥಗಳ ಮತ್ತು ದೇವವಾಕ್ಯದ ಅಭ್ಯಾಸದಿಂದ ಅವನಿಗೆ ಸೌವಾರ್ತಿಕ ಜ್ಞಾನವು ಬಂತು. ಅವನು ತನ್ನ ಕಾಲದಲ್ಲಿ ಈತಲಿಯದೊಳು ನಡೆಯುತ್ತಿರುವ ಪಾಪಕೃತ್ಯಗಳನ್ನು ಚರ್ಚಿಸಿ ಮಿಗೆ ಖಂಡಿಸುತ್ತಾ, ತನಗೆ ಅವುಗಳ ಮೇಲಿರುವ ಅಸಹ್ಯತೆಯನ್ನು ಅಡಿಗಡಿಗೆ ತೋರಿಸುತ್ತಾ, ಪಪ್ಪನಿಗಿಂತ ಹೆಚ್ಚಾಗಿ ದೇವರಿಗೆ ವಿಧೇಯರಾಗಿರ ಬೇಕೆಂತ, ಸಾರುತ್ತಾ[1], ಕ್ರಿಸ್ತನ ಮೇಲಿನ ವಿಶ್ವಾಸವೊಂದರಿಂದಲೇ ನೀತಿನಿರ್ಣಯವು ಪ್ರಾಪಿಸುತ್ತದೆಂದು, ಬೋಧಿಸುತ್ತಾ[1] ಇರುವ ನಿಮಿತ್ತ 6ನೇ ಅಲೆಕ್ಸಂದರನೆಂಬ ಪೋಕರಿ ಪಪ್ಪನು[2] ಕ್ರಿ. ಶ. 1497ನೇ ವರುಷ, ಕಥರನೆಂದು, ಅವನ ಮೇಲೆ ಬನ್ನು ಹಾಕಿ, ಮರುವರ್ಷ ಚಿತಿಯಲ್ಲಿ ಸಜೀವವಾಗಿ ಸುಡಿಸಿದನು; ಸವೊನರೋಲನು ಕ್ರಿಸ್ತನಲ್ಲಿ ಸ್ಥಿರ ದೃಷ್ಟಿ ಇಟ್ಟು, ಆನಂದದಿಂದ ಪರಮ ಪದವಿಯನ್ನೈದಿದನು.

ಪಪ್ಪಕ ಪಕ್ಷಸಭೆಯೊಳಗೆ ಇದ್ದರೆಂದು ಹಿಂದೆ ಹೆಸರು ಹೇಳಿದ ಆ ಸೌವಾರ್ತಿಕ ಕ್ರೈಸ್ತರಲ್ಲದೆ ಅವರಂಥ ಇತರರನೇಕರು ಹೃದ್ಯವಾದ ಸೌವಾರ್ತಿಕ ಕ್ರೈಸ್ತತ್ವದ ಪುನಃಸ್ಥಾಪನೆಗಾಗಿ ನಾನಾ ತರದ ಕೃತಿಗಳನ್ನು ಬರೆದರು. ಬಳಿಕ ಇವುಗಳನ್ನು ಹೇರಳ ಪ್ರತಿಗಳಾಗಿ ಸರ್ವ ದಿಕ್ಕಿನ ಸರ್ವ ಸ್ಥಿತಿಯವರಲ್ಲಿ ವಿಸ್ತರಿಸಲಿಕ್ಕೆ ಕ್ರಿ. ಶ. 1440ನೇ ವರುಷ ಒಂದು ನವಕಲ್ಪನವಾಯಿತು; ಅದೇನಂದರೆ, ಮುದ್ರಾಯಂತ್ರವು; ಅದು ಆಗ ಗೆರ್ಮಾನಿಯದ ಮೈಂತ್ಸ ಪಟ್ಣದಲ್ಲಿ[3] ಕಲ್ಪಿತವಾಯಿತು[4]. ಕ್ರಿ. ಶ. 1457ನೇ ವರುಷ ಛಾಪಿಸಿದ ಪ್ರಥಮ ಗ್ರಂಥವು ಲತೀನ ಭಾಷಾಂತರವಾದ ದೇವವಾಕ್ಯದ ದಾವೀದಕೀರ್ತನೆಗಳದೇ. ತರುವಾಯ ಮುದ್ರಿತವಾದಂಥ ದೇವವಾಕ್ಯದ್ದೊಂದು ಪ್ರತಿಯ ಕ್ರಯವು ಬಹಳ ಕಡಿಮೆಯಾಯಿತು; ಮುಂಚೆ ವುಲ್ಗಾತವೆಂಬ ದೇವವಾಕ್ಯದ ಲತೀನ ಭಾಷಾಂತರದ್ದೊಂದು ಲಿಖಿತ ಪ್ರತಿಗೆ 450 ರೂಪಾಯಿ ಬೀಳುವಲ್ಲಿ ಈಗ ಸ್ವಲ್ಪ ಕಾಲಕ್ಕೀಚೆ 90 ರೂಪಾಯಿ[5] ಮಾತ್ರ ಬಿತ್ತು.

ಪಪ್ಪಕರೊಳಗಿನ ಸೌವಾರ್ತಿಕ ಭಕ್ತಿಯುಳ್ಳ ಕ್ರೈಸ್ತರ ಹೊರ್ತು ಅನೇಕ ವಿದ್ವಾಂಸರು ಸಹ ಮುಖ್ಯವಾಗಿ ಮಠೋದ್ಯೋಗಿಗಳಲ್ಲಿಯೂ ಮಠಿಕರಲ್ಲಿಯೂ ಇರುವ ದುರಾಚಾರಕ್ಕೆದುರಿಸುತ್ತಿದ್ದು, ವ್ಯಂಗೋಕ್ತಿ ಮುಂತಾದ ಕುಚೋದ್ಯಕರ ಮತ್ತು ಬುದ್ಧಿಯುಕ್ತ ಗ್ರಂಥಗಳ ಮೂಲಕ ಅಂಥವರನ್ನು ಚುಚ್ಚುತ್ತಿದ್ದರು; ದೃಷ್ಟಾಂತಕ್ಕಾಗಿ ಕ್ರಿ. ಶ. 1508ನೇ ವರುಷದಲ್ಲಿ ನೀದೆರ್ಲಂದಿನಲ್ಲಿಯ ರೊತ್ತೆರ್ದಮು ಪಟ್ಣದ

1) 373ನೇ ಪಾನು;—368, 370, 383ನೇ ಪಾನು. 2) 361ನೇ ಪಾನು. 3) 283, 304, 314, 356ನೇ ಪಾನು. 4) ನವಕಲ್ಪಕರ ಹೆಸರುಗಳು ಯಾವವಂದರೆ—Guttenberg, Faust, Schöffer. 5) 1 Thaler=1½ Rupee.

ಎರಸ್ಮನೆಂಬ ಪಂಡಿತನು ಮಾನುಷಭ್ರಮೆಯ ಕೃತಿ ಎಂಬ ಗ್ರಂಥ ರಚಿಸಿ, ಹಾಗೆ ಮಾಡಿದನು. ಅದಲ್ಲದೆ ಕ್ರಿ. ಶ. 1516ನೇದರಲ್ಲಿ ಭಿಕ್ಷುಕ ಕುಲದ ಮಠಿಕರಿಗೆ ವಿರೋಧವಾಗಿ ಕಾಳ ಪುರುಷರ ಪತ್ರಿಕೆಗಳೆಂಬ ಬಹು ಕೀರ್ತಿ ಗೊಂಡ ಮತ್ತೊಂದು ಪ್ರಕಟನವಾಯಿತು; ಈ ಗ್ರಂಥದ ಕರ್ತನ ಹೆಸರು ಪೂರ್ಣ ನಿಶ್ಚಯವಾಗಿ ತಿಳಿಯ ಬರಲಿಲ್ಲ.

ಪುನಃ, ಯುರೋಪ ಖಂಡದ ಪಶ್ಚಿಮ ಭಾಗದಲ್ಲಿರುವ ದೇವವಾಕ್ಯಪ್ರಿಯರಿಗೆ ದೇವವಾಕ್ಯವನ್ನು ಗ್ರೀಕ ಮತ್ತು ಎಬ್ರೀಯ ಎಂಬ ಎರಡು ಮೂಲಭಾಷೆಗಳಿಂದೋದಿ ಅನುಭವ ಪಡಕೊಳ್ಳುವದು ಕ್ರಿ. ಶ. 1453ನೇ ವರುಷಕ್ಕೀಚೆ[1] ಸುಲಭವಾಯಿತು; ಹ್ಯಾಗಂದರೆ, ಆಗ ಕೊನ್ಸ್ತಂತೀನೊಪೊಲಿಯು ತುರ್ಕರ ವಶವಾದ ಬಳಿಕ ಅಲ್ಲಿದ್ದ ದೊಡ್ಡ ಪಂಡಿತರು ಈತಲಿಯಕ್ಕೋಡಿ ಬಂದು, ಅಲ್ಲಿ ಪೂರ್ವ ಕಾಲದ ಚರಿತ್ರ ಭಾಷೆಗಳೆರಡರ ಪರಿಶ್ರಮ ಮಾಡುವ ಕುತೂಹಲ ಹುಟ್ಟಿಸಿ, ಅನೇಕ ಶಿಷ್ಯರನ್ನು ಪಡಕೊಂಡರು. ಹೀಗಿರಲಾಗಿ, ಆ ಅನ್ಯೋನ್ಯಜೀವಭ್ರಾತೃಗಳು ಸಹ ತಮ್ಮೊಳಗಿನವರನ್ನು, ಎಬ್ರೀಯ ಮತ್ತು ಗ್ರೀಕ ಭಾಷೆಗಳ ಅಭ್ಯಾಸದ ಮೂಲಕ ಪರಿಶುದ್ಧ ಬರಹದ ಮೂಲಭಾಷೆಯನ್ನೋದಿ ಚನ್ನಾಗಿ ಗ್ರಹಿಸ ಬಲ್ಲವರಾಗುವಂತೆ, ಅಲ್ಲಿಗೆ ಕಳುಹಿಸಿದರು. ಕಾಲಗತಿಯಿಂದ ಕ್ರಿ. ಶ. 1520ನೇ ವರುಷಕ್ಕೆ ಯೋಹಾನ ರೆಯುಖ್ಲೀನನೆಂಬ ಗೆರ್ಮಾನ ಪಂಡಿತನು ಶುದ್ಧವಾದದೊಂದು ಎಬ್ರೀಯ ವ್ಯಾಕರಣವನ್ನು ರಚಿಸಿದ್ದಲ್ಲದೆ ಹಿಂದೆ ಹೇಳಿದ ಆ ರೊತ್ತೆರ್ದಮಿನ ಎರಸ್ಮನು ಹೊಸ ಒಡಂಬಡಿಕೆಯನ್ನು ಗ್ರೀಕ ಭಾಷೆಯಲ್ಲಿ ಮುದ್ರಿಸಿ, ಪ್ರಕಟಿಸಿದನು.

ಮತ್ತೆ, ಮುದ್ರಾಯಂತ್ರದ ಆ ನವಕಲ್ಪನವಲ್ಲದ ಬೇರೆ ಎರಡು ಘನ ಬಹಿಃಸಂಗತಿಗಳಿಂದ ದೇವರು ಪಪ್ಪಕ ಸಭೆಯವರೊಳಗೆ, ಸಭಾಪುನಃಸ್ಥಾಪನೆಯ ಆಶೆಯು ಇವುಗಳಿಂದ ಹೆಚ್ಚದಿದ್ದರೂ, ಹ್ಯಾಗೂ ಹೊಸ ಕಾಲದ ನಿರೀಕ್ಷೆಯನ್ನು ವರ್ಧಿಸಿದ್ದನು; ಅವೆರಡು ಬೇರೆ ದೊಡ್ಡ ಸಂಗತಿಗಳ್ಯಾವವೆಂದರೆ, ಕ್ರಿ. ಶ. 1492ನೇ ವರುಷಕ್ಕೆ ಅಮೆರಿಕ ಖಂಡವು ನವದರ್ಶನವಾದದ್ದೂ ಬಳಿಕ ಯುರೋಪದಿಂದ ಹಿಂದುದೇಶಕ್ಕೆ ಗಮಿಸುವ ಜಲಮಾರ್ಗವು ಕ್ರಿ. ಶ. 1498ನೇದಕ್ಕೆ ನವದರ್ಶನವಾದದ್ದೂ.

ಇಂತಿರಲಿಕ್ಕೆ, 16ನೇ ಕ್ರಿಸ್ತಶತಮಾನದಾದಿ ಯುರೋಪದ ಪಶ್ಚಿಮ ದೇಶಗಳಲ್ಲೆಲ್ಲಾ ಒಂದು ಪ್ರಕಾರದ ಸಮಯ ಒದಗಿತ್ತು. ಪಪ್ಪಕ ಪಕ್ಷದ ಸಭೆಯಲ್ಲಿ ಶಿರಾದಿಪಾದಾಂತವಾದ[2] ಪುನಃಸ್ಥಾಪನೆಯಾಗ ಬೇಕೆಂಬದು ಪಪ್ಪಕರೊಳಗೆ ಅಂತರಂಗದಲ್ಲಾಗಲಿ ಬಹಿರಂಗದಲ್ಲಾಗಲಿ ಸೌವಾರ್ತಿಕ ಕ್ರೈಸ್ತರಾಗಿರುವವರ ಅಭಿಲಾಷೆಯು ಮಾತ್ರವಲ್ಲ, ಅದು ರಾಜರಲ್ಲಿ ಮತ್ತು ಪ್ರಜೆಯಲ್ಲಿ ಸ್ವಸ್ಥ ಬುದ್ಧಿಯುಳ್ಳ ಸಮ

1) 342, 343ನೇ ಪಾನು. 2) ಯೆಶಾಯ. 1, 5—6.

ಸ್ತರದು ಸಹ ಆಗಿತ್ತು; ಅಂದಿನ ವರೆಗೆ ಪಪ್ಪರೂ ಅವರೊಳಗಿನ ಮತೋದ್ಯೋಗಿಗಳೂ ನಡಿಸುತ್ತಿದ್ದ ಒತ್ತಾಯ ಧನಾಪಕರ್ಷಣ ಪೋಕರಿತನ ಮೋಸ ದರ್ಪ ಇತ್ಯಾದಿಗಳು[1] ಅಸಹ್ಯಗಳಾದ್ದರಿಂದ ನಿಂತು ಹೋಗ ಬೇಕೆಂದು, ಸ್ವಸ್ಥ ಬುದ್ಧಿಗೆ ತಿಳಿಯದಿದ್ದದುಂಟೇ? ಗೆರ್ಮಾನಿಯದಲ್ಲಿದ್ದ ದುರವಸ್ಥೆಗಳಿಗೆ ಮತ್ತೊಂದು ಸೇರಿತ್ತು; ಏನೆಂದರೆ, ದೊಡ್ಡ ಕರ್ಲ ಕೈಸರನು ಕಿತ್ತು ಹಾಕಿದ್ದ ಯಕ್ಷಿಣೀಸಜೀವದಹನವೆಂಬ[2] ದುಷ್ಕರ್ಮವನ್ನು 8ನೇ ಇನ್ನೊಕೆಂತನೆಂಬ ಆ ನೀಚ ಪಪ್ಪನು[3] ಅಲ್ಲಿ ತಿರಿಗಿ ನೆಲೆಗೊಳ್ಳಿಸಿದ್ದನು; ಅದರಿಂದ ನಿರಪರಾಧಿಗಳಾದ ಹೇರಳ ಜನರನ್ನು ಸಜೀವದಹನಕ್ಕೊಪ್ಪಿಸಲಾಗುತ್ತಿತ್ತು. ಗೆರ್ಮಾನರು ಪಪ್ಪರ ಅತಿಕ್ರಮಕರ್ಮಗಳಿಗಾಗಿ ಬಹಿರಂಗದಲ್ಲೂ ಗುಣುಗುಟ್ಟದಿರಲಿಲ್ಲ. ಆ ಮಕ್ಸಿಮಿಲಿಯಾನ ಕೈಸರನು[4]—ತನ್ನನ್ನೇ ಪಪ್ಪನಾಗ ಮಾಡಿ ಕೊಂಡು, ಪಪ್ಪತ್ವವನ್ನೂ ಕೈಸರತ್ವವನ್ನೂ ಒಟ್ಟುಗೂಡಿಸ ತಕ್ಕದೆಂದು, ಆಲೋಚಿಸುತ್ತಿದ್ದನು. ಅದಕ್ಕೆ ಮುಂಚೆ ಕ್ರಿ. ಶ. 1429ನೇ ವರುಷದಲ್ಲಿ ಆದರೂ ರೋಮದೊಳಗಿನ ಗೆರ್ಮಾನ ದೇಶದವನೊಬ್ಬ ರಾಜಪ್ರೇಷಿತನು ಬರೆದದೇನಂದರೆ[5]—ಈತಲಿಯದಲ್ಲಿ ರಾಜರಾಗಲಿ ಪ್ರಭುಗಳಾಗಲಿ ಪಟ್ಣಗಳವರಾಗಲಿ ಪಪ್ಪರ ಅನ್ಯಾಯವುಳ್ಳ ಬನ್ನುಗಳೆಂಬ ವಜ್ರಾಯುಧಗಳಿಗೆ ಇನ್ನು ಹೆದರದೆ, ಸ್ವಲ್ಪ ಮಾತ್ರ ಲಕ್ಷ್ಯವಿಡುತ್ತಾರೆ. ಬಡ ಗೆರ್ಮಾನರಾದ ನಾವು ಮಾತ್ರ, ಪಪ್ಪನು ಒಬ್ಬ ಭೂದೇವತೆಯೆಂತ, ಇನ್ನಾದರೂ ಭಾವಿಸಿ ಕೊಳ್ಳುತ್ತೇವೆ; ಅವನು ಭೂದೇವ್ವನೆಂತ, ನಾವು ಭಾವಿಸಿ ಕೊಂಡರೆ ವಿಹಿತವಾದೀತು; ಹ್ಯಾಗಂದರೆ ಅವನು ಅಂಥವನೇ, ನಿಶ್ಚಯ!— 16ನೇ ಕ್ರಿಸ್ತಶತಮಾನದಾರಂಭದಲ್ಲಿ ಆ ಎರಸ್ಮ ಪಂಡಿತನು—ಪರಿಶುದ್ಧ ವಿಷಯಗಳಿಗೆ ಹಾಸ್ಯ ಗೈಯುವಂಥ ಜನರು ರೋಮದಲ್ಲಿ ಹೆಚ್ಚೆಂದು, ತಾನು ಅನುಭವಿಸಿದೆನೆಂತ, ತನ್ನ ಗ್ರಂಥಗಳಲ್ಲಿ ಲೇಖಿಸಿದ್ದಾನೆ. ದೊಡ್ಡ ಅಧಿಕಾರದ ಪಪ್ಪಕ ಮತೋದ್ಯೋಗಿಗಳಲ್ಲದೆ ಪಪ್ಪರು ತಾವು ಸಹ ಅಂಜಲೆಸಗಿಸಿದ ಗುಪ್ತವಿಚಾರಣಧರ್ಮದವರು[6] ಕ್ರಿ. ಶ. 1483ನೇ ವರುಷದಿಂದ 1517ನೇದರ ವರೆಗಿರುವ 34 ವರುಷಗಳೊಳಗೆ ಸ್ಪಾನಿಯ ದೇಶ ಒಂದರಲ್ಲೇ 12,200 ಜನರನ್ನು ಸಜೀವವಾಗಿ ದಹಿಸುತ್ತಾ ಬಂದಿದ್ದರು; ಪಪ್ಪನಾಳುವಲ್ಲೆಲ್ಲಿಯೂ ಗೋಳಾಟವು ಕೇಳಿಸುತ್ತಿತ್ತಷ್ಟೇ. ತನ್ಮಧ್ಯ

---

1) ದೃಷ್ಟಾಂತಕ್ಕಾಗಿ 328—333, 335—337, 342, 351, 352, 362, 374, 377—382, 389, 396, 397, 407ನೇ ಪಾನು; 348, 352, 355, 360, 364, 367, 384, 407, 409ನೇ ಪಾನು; 359—361, 364, 365, 409ನೇ ಪಾನು; 359, 400, 405, 408ನೇ ಪಾನು; 328, 331, 332, 335, 337, 383, 407ನೇ ಪಾನು. 2) 519ನೇ ಪಾನು. 3) 360ನೇ ಪಾನು. ಈ ದುಷ್ಕರ್ಮವು 18ನೇ ಕ್ರಿಸ್ತಶತಮಾನದ ಆರಂಭದ ವರೆಗೆ ಗೆರ್ಮಾನಿಯದಲ್ಲಿ ಸಹ ತಿರಿಗಿ ನಡೆಯುತ್ತಿತ್ತು; ಆಗ ಅದು ಅಲ್ಲಿಂದ ಕಿತ್ತು ಹೋಯಿತು (especially by the clever speeches of Chr. Thomasius, 1684—1728). 4) 361ನೇ ಪಾನು. 5) 407ನೇ ಪಾನು. 6) 49ನೇ ಸಂಧಿ.

ಕೊಸ್ನಿತ್ಸು ಮತ್ತು ಬಾಸೆಲು ಪಟ್ಣಗಳ ಸಭಾಸಂಘದವರಿಗೆ ಪಪ್ಪರ ಮಹಾ ಎದುರಾಟ ಒದಗುವಲ್ಲಿ ಒಂದೇ ತಕ್ಕ ಆಯುಧವಾದ ದೇವವಾಕ್ಯದ ಪ್ರಯೋಗವಿಲ್ಲದಿದ್ದ ಕಾರಣ ಅವರಿಂದಾದಂಥ ಪುನಃಸ್ಥಾಪನಾಪ್ರಯತ್ನಗಳು ವ್ಯರ್ಥವಾದದ್ದು ಗೋಚರಿಸಿತ್ತು.

ಆದರೆ ಸುಳ್ಳೂ ಅನ್ಯಾಯವೂ ತುಂಬಿರುವ ಮಹೋಚ್ಚವಾದ ದುರ್ಗದ ಮೇಲೆ ಸುಧೈರ್ಯದಿಂದ ಬಿದ್ದು ಭೀಕರವಾದ ಯುದ್ಧದಲ್ಲಿ ಜೈಸ ಶಕ್ತನಾದ ಶೂರನ ದಾರಿಯನ್ನು ಎಲ್ಲರೂ ನೋಡುತ್ತಿದ್ದರು; ಮತ್ತೆ ಹುಸನೆಂಬ ರಕ್ತಸಾಕ್ಷಿಯು ಕ್ರಿ. ಶ. 1415ನೇ ವರುಷ ಪಪ್ಪಕರ ಮುಂದೆ, 100 ವರುಷದೊಳಗೆ ದೇವರ ಆಜ್ಞಾನಿರ್ಣಯವು ನಿಮ್ಮ ಮೇಲೆ ಬರುವದೆಂದು, ಪ್ರವಾದಿಸಿದ್ದೇ[1] ಸತ್ಯವಾಗುತ್ತಾ ಬಂತು. 16ನೇ ಕ್ರಿಸ್ತಶತಮಾನದಾದಿಯಲ್ಲಿ ದೇವರು ಗೆರ್ಮಾನರಲ್ಲಿ[2] ಅಂಥಾ ಜಯಕ್ಕೂ ನಿರ್ಣಯಕ್ಕೂ ಆಗಿ ಲುಥರನೆಂಬ ಮಹಾ ಪುನಃಸ್ಥಾಪಕನನ್ನೆಬ್ಬಿಸಿದನು.



1) 399, 401ನೇ ಪಾನು. 2) 299ನೇ ಪಾನು.

# VI. ಪುನಃಸ್ಥಾಪನೆಯು.

(ಕ್ರಿ. ಶ. 1517ನೇ ವರುಷದಿಂದ 1648ನೇದರ ವರೆಗೆ.)

## 55. ಲುಥರನು.

ಕ್ರಿ. ಶ. 1483ನೇ ವರುಷ ಗೆರ್ಮಾನಿಯದ ಸಕ್ಸೆನು[1] ದೇಶದಲ್ಲಿರುವ ಐಸ್ಲೇಬೆನೆಂಬ ಪಟ್ಣದಲ್ಲಿ ಮರ್ತೀನ ಲುಥರನು ಹುಟ್ಟಿದನು; ಲೋಹಕಣಿಮೇ ಕೆಲಸದವನೊಬ್ಬನಾದ ಅವನ ತಂದೆಯ ಮತವು ಪಪ್ಪಕತ್ವದ್ದೇ. ಮರ್ತೀನನು ಬುದ್ಧಿಯೂ ಜಾಗರೂಕತೆಯೂ ಉಳ್ಳಂಥ ಹುಡುಗನಾದ ಕಾರಣ ತಂದೆಯು ಅವನಿಗೆ ವಿದ್ಯಾಭ್ಯಾಸ ಮಾಡಿಸಿದನು. ತನ್ನ ಜೀವಿತದ 18ನೇ ವರುಷದಲ್ಲಿ ಮರ್ತೀನ ಲುಥರನು ಏರ್ಫೂರ್ತೆಂಬ ಪಟ್ಣದ ಪ್ರಖ್ಯಾತ ವಿದ್ಯಾಶಾಲೆಗೆ ಹೋಗಿ, ರಾಜಕ ಮತಕ ನೀತಿಗಳ ವಿದ್ಯೆಯನ್ನು ಸಂಪಾದಿಸಿ ಕೊಳ್ಳಲಾಲೋಚಿಸಿ, ಅಂದು ಪದ್ಧತಿ ಬಿದ್ದಂತೆ ಮೊದಲು ತತ್ವದರ್ಶನವನ್ನೂ ಪೂರ್ವದಲ್ಲಿ ಗ್ರೇಕ ಮತ್ತು ರೋಮಾಯ ವಿಗ್ರಹಾರಾಧಕರಾದ ಪಂಡಿತರು ರಚಿಸಿದ್ದ ವಿದ್ಯಾಗ್ರಂಥಗಳನ್ನೂ ಓದುತ್ತಿರಲು, ಒಮ್ಮೆ ಆ ವಿದ್ಯಾಶಾಲೆಯ ಪುಸ್ತಕಸಂಗ್ರಹಕೋಣೆಯಲ್ಲಿ ದೇವವಾಕ್ಯವೆನ್ನಿಸುವಂಥಾದ್ದೊಂದು ಲತೀನ ಭಾಷೆಯ ಗ್ರಂಥವನ್ನು ಕಂಡು ಕೊಂಡನು; ಆಗ ಅವನಿಗೆ, ದೇವವಾಕ್ಯವೆಂಬದುಂಟೆಂದು, ಮಟ್ಟಮೊದಲಿಗೆ ತಿಳಿಯಿತು. ಅವನು ಬಹು ಕುತೂಹಲದಿಂದ ಅದನ್ನು ಅಧ್ಯಯನ ಮಾಡುತ್ತಾ, ದೇವರೇ, ಅಂಥಾದೊಂದನ್ನು ನನಗೊಮ್ಮೆ ದಯೆ ಮಾಡ ಬೇಕೆಂತ, ಬೇಡುತ್ತಾ ಇದ್ದನು. 4 ವರುಷಕ್ಕೀಚೆ ಅವನು ಆ ಶಾಲೆಯಲ್ಲಿ ತತ್ವದರ್ಶನಬೋಧಕನಾದ ಮೇಲೆ ರಾಜಕ ಮತಕ ನೀತಿಗಳನ್ನು ಸಹ ಅಭ್ಯಾಸಿಸಲಾರಂಭಿಸಿದನು. ಅಂದು ದೇವರು ಒಂದು ಅಪೂರ್ವ ಸಂಗತಿಯಿಂದ ಅವನಲ್ಲಿ ಮತೋದ್ಯೋಗದ ಅಪೇಕ್ಷೆಯನ್ನು ಹುಟ್ಟಿಸಿದನು. ಹ್ಯಾಗೆಂದರೆ, ಲುಥರನು ರಜೆ ಇರುವ ದಿನಗಳಲ್ಲಿ ಪ್ರಯಾಣಕ್ಕೆ ಹೋಗಿ, ಅಲೆಕ್ಸಿಯನೆಂಬ ಒಬ್ಬ

---

1) 317, 395, 408ನೇ ಪಾನು.

ಗೆಳೆಯನ ಜೊತೆಯಲ್ಲಿ ಏರ್ಫೂರ್ತಿಗೆ ಹಿಂದಿರುಗುತ್ತಿರುವ ಸಮಯ ದೊಡ್ಡದೊಂದು ಗುಡುಗುಮಳೆಯಾಗಿ, ಶಿಡಿಲು ಬಿದ್ದು, ಲುಥರನ ಪಕ್ಕದಲ್ಲಿರುವ ಅಲೆಕ್ಸಿಯನನ್ನು ಕೊಂದು, ಲುಥರನಿಗೆ ಘಾತು ತಪ್ಪಿಸಿತು. ಅವನು ತರಹರಿಸಿ ಕೊಂಡು, ನಡೆದ ಈ ಸಂಗತಿಯಿಂದ ಮಾನುಷ ಜೀವದ ಹೀನತೆಯನ್ನು ತಿಳಿದ ಬಳಿಕ, ನಿಜ ರಕ್ಷಣೆಯನ್ನು ಹೊಂದುವದಕ್ಕೆ ನಾನೇನು ಮಾಡಲಿ? ಎಂತ, ಹೇಳುವ ಯೋಚನೆ ಬಂದದ್ದು ತೊಲಗಿ ಹೋಗಲೇ ಇಲ್ಲ. ಹೀಗೆ ಅವನು ಚಿಂತಾಕ್ರಾಂತನಾಗಿರಲು, ಕ್ರಿ. ಶ. 1505ನೇ ವರುಷ ಮಠಿಕನಾಗುವ ಹಾಗೆ ಏರ್ಫೂರ್ತಿನ ಔಗುಸ್ತೀನರ ಮಠದೊಳಗೆ ಶೇರಿದನು.

ತರುವಾಯ ಅವನು ಅಧಿಕ ಜಾಗ್ರತೆಯಿಂದ ಆ ಮಠದ ಕ್ರಮಗಳನ್ನೆಲ್ಲಾ ತಪ್ಪಿಲ್ಲದೆ ನಡಿಸುತ್ತಾ, ತುಚ್ಛ ತರದ ಸೇವೆಯನ್ನು ಸಹ ಮಾಡುತ್ತಾ, ಮಠಕ್ಕೋಸ್ಕರ ಭಿಕ್ಷೆ ಬೇಡಲಿಕ್ಕೆ ಜೋಳಿಗೆ ಹಾಕಿ ಕೊಂಡು ನಾಡನ್ನು ತಿರುಗುತ್ತಾ ಇದ್ದನು. ಆದರೆ ಅಂಥಾ ಕಠಿಣ ಕಷ್ಟದಿಂದಲೂ ಸ್ವದೇಹದಂಡನದಿಂದಲೂ ಅವನ ಕ್ಷೇಮವು ಕೆಟ್ಟು ಹೋದ ಕಾರಣ[1] ಔಗುಸ್ತೀನರ ಮಠಗಳ ಮುಖ್ಯಸ್ಥನಾದ ಆ ಯೋಹಾನ ಸ್ಟೌಪಿತ್ಸನು[2] ಅವನನ್ನು ಮಠಸೇವೆಯಿಂದ ಪೂರಾ ಬಿಡಿಸಿದನು. ಅಂದಿನಿಂದ ಲುಥರನು ವಿದ್ಯಾಭ್ಯಾಸ ಮಾಡುತ್ತಾ ಕಾಲ ಕಳೆದು, ಮಠದ ಪುಸ್ತಕಸಂಗ್ರಹಶಾಲೆಯಲ್ಲಿ ತನಗೆ ಶಿಕ್ಕಿದ ದೇವವಾಕ್ಯದ್ದೊಂದು ಗಾತ್ರವಾದ ಪ್ರತಿಯನ್ನು ಸಹ ಓದುತ್ತಿದ್ದು, 2 ವರುಷದಿತ್ತ ಪ್ರೀಸ್ತಪ್ರತಿಷ್ಠೆ ಹೊಂದಿ, ಮಿಸ್ಸ ನಡಿಸುವವನೂ ನಿವೇದನಶ್ರೋತನ ಕೆಲಸ ಮಾಡುವವನೂ ಆದನು.

ಆದಾಗ್ಯೂ ಮಠದಲ್ಲಿ ಅವನ ಹೃದಯಕ್ಕೆ ಸಮಾಧಾನ ಬರಲಿಲ್ಲ. ಅವನು ಎಂದಿನಂತೆ ಮಠದ ಕ್ರಮಗಳಿಗೆ ಯಥಾಪ್ರಕಾರ ಅನುಸರಿಸುತ್ತಾ, ಉಪವಾಸ ನಿತ್ಯನೈಮಿತ್ತಿಕ ಪ್ರಾರ್ಥನೆಗಳ ಮೂಲಕ ಶುದ್ಧಿಯಂನ್ನೈದಲಿಕ್ಕೆ ಪೇಚಾಡುತ್ತಾ ಇದ್ದರೂ ದಿನ ದಿನಕ್ಕೆ ಹೆಚ್ಚು ದುಃಖಿತನಾಗುತ್ತಿದ್ದನು; ಯಾಕಂದರೆ, ಸ್ವಕ್ರಿಯೆಗಳಿಂದ ದೇವರೊಲುಮೆಯನ್ನು ಹೊಂದುವದಾಗಲಿಕ್ಕಿಲ್ಲವೆಂಬ ಅನುಭವವು ಅವನಿಗೆ ದೊರಕಿತ್ತು. ತನಗೆ ನಿಜ ಮೋಕ್ಷ ಎಂದಿಗೂ ಬರಲಾರದೆಂದು, ನಿರಾಶೆಯಾಗಿ, ಪ್ರಾಣಸಂಕಟ ಹುಟ್ಟಿ, ದೇಹಬಲ ತಪ್ಪಿ, ಅನೇಕಾವರ್ತಿ ಹಲವು ತಾಸುಗಳ ವರೆಗೂ ಅರೆ ಜೀವಿಯಾಗಿ ಬಿದ್ದು ಕೊಂಡಿರುತ್ತಿದ್ದನು. ಇಂತಾಗುತ್ತಿರಲು, ಒಂದು ದಿನ ಸ್ಟೌಪಿತ್ಸನೆಂಬ ಆ ಸೌವಾರ್ತಿಕ ಅರ್ಥದ ಪಂಡಿತನು ಅವನೆಡೆಗೆ ಬಂದು—ನಿಮ್ಮ ದೇಹಾತ್ಮಗಳನ್ನು ಪೀಡಿಸುತ್ತಿರುವ ಮಾರ್ಗ ಬಿಟ್ಟು, ಯೇಸು ಕ್ರಿಸ್ತನ ವಿಮೋಚನಕರವಾದ ಮರಣದಲ್ಲಿ ನಂಬಿಕೆಯನ್ನಿಡಿರಿ! ಕ್ರಿಸ್ತನಲ್ಲಿ ಉದಯಿಸಿದ ಕೃಪೆಗೆ ಶರಣು ಹೊ

1) 225, 364ನೇ ಪಾನು. 2) 411ನೇ ಪಾನು.

ಕ್ಕೊಳ್ಳಿರಿ! ದೇವವಾಕ್ಯವನ್ನೋದುವ ಹೊತ್ತು ಮುಖ್ಯವಾಗಿ ಪೌಲ ಅಪೊಸ್ತಲನ ಪತ್ರಿಕೆಗಳನ್ನು ಧ್ಯಾನಿಸಿ ಕೊಳ್ಳಿರಿ! ಎಂತ, ಅವನನ್ನಾದರಿಸಿ, ಎಚ್ಚರಿಸಿ, ಅವನಿಗೆ ಒಂದು ದೇವವಾಕ್ಯಪ್ರತಿಯನ್ನು, ಉಚಿತವೆಂದು, ಕೊಟ್ಟನು.

ಆದರೆ ಸ್ಟೌಪಿಟ್ಸನು—ಲುಥರನು ಅಮಾನುಷ ಪುರುಷನು, ಅವನು ಈ ಮಠದಲ್ಲಿ ಜೀವಿಸಿದರೆ ಅವನ ಸದ್ಬುದ್ಧಿಯು ಅವನಲ್ಲಿಯೇ ಜೀರ್ಣವಾಗಿ ಹೋದೀತೆಂತ, ತನ್ನೊಳಾಲೋಚಿಸಿ ಕೊಂಡು, ಜ್ಞಾನಿ ಫ್ರೀದೆರೀಕನೆಂಬ ಆ ರಾಜಶೋಧಕ ಪ್ರಭುವಿನ[1] ಬಳಿಗೆ ಬಿಜಂಗೈದು, ವಿತ್ತೆನ್ಬೆರ್ಗಿನಲ್ಲಿ ಹೊಸ್ತಾಗಿ ನಿರ್ಮಿತವಾದ ಮಹಾ ವಿದ್ಯಾಶಾಲೆಯಲ್ಲಿ ತತ್ವದರ್ಶನದ ಪಾಂಡಿತ್ಯಕ್ಕೆ ಲುಥರನನ್ನು ನೇಮಿಸ ಬೇಕೆಂದು, ಬಿನ್ನವಿಸಲಿಕ್ಕೆ, ಕ್ರಿ. ಶ. 1508ನೇ ವರುಷ ಹಾಗೆಯೇ ಆಯಿತು. ಲುಥರನು ಅಲ್ಲಿಗೆ ಹೋಗಿ, ಅಲ್ಲಿ ಸಹ ಇರುವದೊಂದು ಔಗುಸ್ತೀನರ ಮಠದೊಳಗೆ ವಸ್ತಿ ಮಾಡಿಕೊಂಡು, ತತ್ವದರ್ಶನನಿರೂಪಣಗಳನ್ನು ಹೇಳುವವನಾದನು. ಆದಾಗ್ಯೂ ಅವನ ಅಪೇಕ್ಷೆಯು ಹೆಚ್ಚಾಗಿ ದೇವಜ್ಞಾನವಿದ್ಯೆಯ ಮೇಲೆ ಹೋಗುತ್ತಲಿತ್ತು. ಅದು ಕಾರಣ ಅವನು ಮರುವರುಷದಲ್ಲಿ ದೇವಜ್ಞಾನದರ್ಶನೋಪಾಧ್ಯಾಯತ್ವಕ್ಕೆ ಪರೀಕ್ಷೆ ಕೊಟ್ಟು, ಬಳಿಕ ಈ ದರ್ಶನದ ನಿರೂಪಣಗಳನ್ನು ಹೇಳುತ್ತಿರುವಲ್ಲಿ ಅನೇಕ ಮಹಾ ಪಂಡಿತರೂ ಬಂದು, ಸಾವಧಾನದೊಡನೆ ಆಲೈಸುತ್ತಿದ್ದರು. ಸ್ಟೌಪಿಟ್ಸನ ಸಂಗಡ ವಿತ್ತೆನ್ಬೆರ್ಗಿನ ಮಹಾ ವಿದ್ಯಾಶಾಲೆ ಸ್ಥಾಪಿಸಿದ್ದ ಮೆಲ್ಲೆರ್ಸ್ಟತ್ತನೆಂಬ ಯಶಸ್ವಿಯಾದ ಪಂಡಿತನು ಆಗಲೊಮ್ಮೆ ಲುಥರನನ್ನು ಕುರಿತು ನುಡಿದ್ದೇನಂದರೆ—ಈ ಮಠಿಕನ ಶಿರಸ್ಸಿನೊಳು ಉತ್ಕೃಷ್ಟ ಮೇಧೆಯುಂಟು; ಇವನಿನ್ನು ಮುಂದೆ ಸಕಲ ಪಂಡಿತರನ್ನು ಭಂಗ ಪಡಿಸಿ, ಹೊಸದೊಂದು ಬೋಧೆಯನ್ನುತ್ಪಾದಿಸಿ, ಸಮಸ್ತ ರೋಮಕ ಸಭೆಯನ್ನು ಸತ್ಯದಲ್ಲಿ ಪುನಃಸ್ಥಾಪಿಸುವನು; ಯಾಕಂದರೆ ಪ್ರವಾದಿಗಳ ಮತ್ತು ಅಪೊಸ್ತಲರ ಗ್ರಂಥಗಳ ಮೇಲೆ ಪೂರ್ಣ ಲಕ್ಷ್ಯವಿಟ್ಟು, ಯೇಸು ಕ್ರಿಸ್ತನ ವಾಕ್ಯದಲ್ಲಿ ಸ್ಥಿರ ನೆಲೆಗೊಂಡಿದ್ದಾನೆ; ಮತ್ತೆ ಈ ವಾಕ್ಯವನ್ನು ಯಾರೂ ಕೆಡಹಲೂ ಖಂಡಿಸಲೂ ಕೂಡದು!—ತರುವಾಯ ಲುಥರನು ಮಠದ ಚಿಕ್ಕ ದೇವಾಲಯದೊಳಗೆ ಪ್ರಸಂಗಿಸುವದನ್ನು ಸಹ ನಡಿಸಲೆಸಗಿ, ಸ್ವಲ್ಪ ಕಾಲಕ್ಕೀಚೆ ಸ್ಟೌಪಿಟ್ಸನೆಂಬ ತನ್ನ ಗೆಳೆಯನ ಅಭಿಲಾಷೆಯ ಮೇರೆಗೆ ವಿತ್ತೆನ್ಬೆರ್ಗು ಪಟ್ಣದ ದೊಡ್ಡ ದೇವಾಲಯದೊಳಗೂ ಪ್ರಸಂಗಿಸುವವನಾದನು.

ಕ್ರಿ. ಶ. 1510ನೇ ವರುಷ ಲುಥರನು ಸ್ಟೌಪಿಟ್ಸನ ಆಜ್ಞೆಯ ಪ್ರಕಾರ ಔಗುಸ್ತೀನ ಮಠಿಕಕುಲದವರ ಪ್ರತಿನಿಧಿಯಾಗಿ, ಆ ಕುಲದ್ದೊಂದು ವಿಷಯದ ತುಸಕ ರೋಮಪುರಕ್ಕೆ[2] ಹೋಗುವ ಪ್ರಯಾಣಕ್ಕೆ ಹೊರಟನು; ಈ ಪ್ರಯಾಣದಿಂದ ಅ

1) 411ನೇ ಪಾನು. 2) ಆಗ ಆ 2ನೇ ಯೂಲಿಯನೆಂಬವನು ಪಪ್ಪನಾಗಿದ್ದನು, 361ನೇ ಪಾನು.

ವನಿಗೂ ಲೋಕಕ್ಕೂ ಮಿಗೆ ಮೇಲು ಆಯಿತು. ಲುಥರನು—ಪಪ್ಪನು ಭೂಮಿಯಲ್ಲಿ ದೇವರ ಪರಿಶುದ್ಧ ಪ್ರತಿನಿಧಿಯು, ರೋಮವು ಸಕಲ ಪರಿಶುದ್ಧತ್ವದ ವಾಸಸ್ಥಳವು; ಅಲ್ಲಿ ತನ್ನ ಹೃದಯಕ್ಕೆ ಪೂರ್ಣ ಸಮಾಧಾನ ಪ್ರಾಪಿಸುವದೆಂತ, ನೆನಸಿ, ಬಹು ಸಂತೋಷದಿಂದ ಪ್ರಯಾಣಸ್ಥನಾಗಿದ್ದನು; ಆದರೆ, ತಾನು ನೆನಸಿದ್ದು ವಿಪರೀತವೆಂತ, ದಾರಿಯಲ್ಲಿಯೇ ಅವನ ಅನುಭವಕ್ಕೆ ಬಂತು. ಅವನು ರೋಮಕ್ಕೆ ಹ್ಯಾಗೆ ಹ್ಯಾಗೆ ಸಮಿಪಿಸುತ್ತಾ ಇದ್ದನೋ, ಹಾಗೆ ಹಾಗೆಯೇ ಜನರಲ್ಲಿ ಭಕ್ತಿಹೀನತೆಯು ಪ್ರಬಲವಾಗುತ್ತಿದ್ದದ್ದು ತೋರಿತು. ಅವನು ರೋಮಕ್ಕೆ ಮುಟ್ಟಿರಲು, ಅಲ್ಲಿಯವರು ಪಪ್ಪರನ್ನು ಕುರಿತು ಹೇಳುವ ಅಪರಾಧಗಳಿಂದಲೂ ನಿರ್ಲಜ್ಜಾಕರ್ಮಗಳಿಂದಲೂ ಅವನಿಗೆ ರೋಮಾಂಚನವಾಯಿತು; ಅದಲ್ಲದೆ, ಅಲ್ಲಿಯ ಮತೋದ್ಯೋಗಿಗಳು ಕೇವಲ ವಿದ್ಯಾಹೀನರೂ ಮಹಾ ಅಪವಿಶ್ವಾಸಿಗಳೂ ಆಗಿದ್ಧಾರೆ, ಅವರನೇಕರಲ್ಲಿ ಅವಿಶ್ವಾಸವೂ ಮತಪರಿಹಾಸವೂ ಉಂಟೆಂದು, ಅವನು ತಾನು ಕಂಡುಕೊಂಡನು.

ರೋಮದ ಮೇಲೆಯೂ ಪಪ್ಪನ ಮೇಲೆಯೂ ಲುಥರನಿಗೆ ಇದ್ದ ಅಭಿಮಾನವು ಅಂಥಾ ದುಃಖಕರವಾದ ಅನುಭವಗಳಿಂದ ಬಹಳ ಕುಂದಿ ಹೋಯಿತು. ಆದರೆ ಸ್ವಲ್ಪ ದಿನಕ್ಕಿತ್ತ ಹೃತ್ಸಮಾಧಾನವು ಅವನಿಗೆ ಪ್ರಾಪ್ತವಾಯಿತು; ರೋಮದಲ್ಲಿ ವಸಿಸಿದ್ದರಿಂದಲ್ಲ, ಅದನ್ನು ಬಿಟ್ಟು ಮರಳುವ ಪ್ರಯಾಣದಲ್ಲಿ ದೇವವಾಕ್ಯದೊಂದು ವಚನದಿಂದಲೇ! ಹ್ಯಾಗಂದರೆ, ನೀತಿವಂತನು ತನ್ನ ವಿಶ್ವಾಸದಿಂದ ಬದುಕುವನು ಎಂಬ ಪರಿಶುದ್ಧ ಬರಹವಚನವನ್ನು[1] ಅವನು ಅನೇಕಾವರ್ತಿ ಓದಿ, ಧ್ಯಾನಿಸಿದ್ದರೂ ಚನ್ನಾಗಿ ಗ್ರಹಿಸದಿದ್ದನು; ಆದರೆ ಅವನು ಅಂದು ರೋಮದಿಂದ ಮನೆಗೆ ತಿರುಗುವ ಪ್ರಯಾಣದಲ್ಲಿ ಪ್ರಾಣಕಂಟಕರೋಗದಲ್ಲಿ ಬಿದ್ದಿರಲು, ಆ ವಚನವು ಪುನಃ ಅವನ ಮನಸ್ಸಿನಲ್ಲಿ ಮೂಡಿ, ಒಮ್ಮಿಂದೊಮ್ಮೆ ಅವನಿಗೆ ಸ್ಪಷ್ಟವಾಯಿತು;—ಮನುಷ್ಯನು ದೇವರ ಮುಂದೆ ಸ್ವಯಂಕೃತ ಕ್ರಿಯೆಗಳಿಂದಲ್ಲ, ಕ್ರಿಸ್ತನ ಮೇಲಿನ ವಿಶ್ವಾಸದಿಂದಲೇ ನೀತಿವಂತನಾಗುತ್ತಾನೆಂತ[2], ತಿಳುಕೊಂಡನು. ಮುಂಚೆ ಸಹ ಅವನಿಗೆ ಅತಿ ಪ್ರಿಯವಾಗಿದ್ದ ದೇವವಾಕ್ಯವು ಅಂದು ಅವನಿಗೆ ಅಮೂಲ್ಯ ನಿಕ್ಷೇಪವಾಯಿತು; ಅದರಲ್ಲಿ ಆ ಪ್ರಕಾರ ತನ್ನ ರಕ್ಷಣೆ ದೃಷ್ಟಿಸಿ ಕೊಂಡದರಿಂದ ಅದನ್ನು ಮತ್ತಷ್ಟು ಕುತೂಹಲದಿಂದ ಓದುವವನಾದನು.

ಕ್ರಿ. ಶ. 1512ನೇ ಅಬ್ದ ಅವನು ದೇವಜ್ಞಾನದರ್ಶನದ ಮಹಾ ಪಂಡಿತನಾದನು. ಆಗಲವನು ವಿತ್ತೆನ್ಬೆರ್ಗಿನ ಮಹಾ ವಿದ್ಯಾಶಾಲೆಯ ಸಕಲ ಪಂಡಿತರ ಮುಂ

---

1) ಹಬಕೂಕ. 2, 4; ಯೋಹಾ. 3, 36; ರೋಮಾ. 1, 17; ಗಲ. 3, 11; ಫಿಲಿಪ್ಪಿ. 3, 9; ಎಬ್ರೀ. 10, 38. 2) 291, 368, 370, 383, 412ನೇ ಪಾನು.

ದೆಯೂ ಇತರರಾದ ಹೇರಳ ಮಂದಿ ಸಾಕ್ಷಿಗಳ ಮುಂದೆಯೂ—ನನ್ನ ಜೀವದ ಪೂರ್ತಿಗೆ ದೇವವಾಕ್ಯವನ್ನು ಜಾಗ್ರತೆಯಿಂದ ಅಭ್ಯಾಸಿಸುತ್ತಾ, ಅದನ್ನು ನಂಬಿಕೆಯಿಂದಲೂ ನಿರ್ಮಲತ್ವದಿಂದಲೂ ಪ್ರಸಂಗಿಸುತ್ತಾ, ಬೋಧಿಸುತ್ತಾ, ಯಾವದೊಂದೂ ವಿರುದ್ಧತ್ವದೆದುರಿನಲ್ಲಿ ಸಿದ್ಧಾಂತ ಪಡಿಸುತ್ತಾ ಇರುವೆನೆಂದು, ದೇವರಾಣೆ ಕೊಟ್ಟು, ಪ್ರಮಾಣಿಸ ಬೇಕಾಯಿತು; ಇಂಥಾ ಪ್ರಮಾಣಾರ್ಥದಿಂದ ಅವನ ಹೃದಯವು ಬಹಳ ಹಿಗ್ಗಿತು. ಅದೇ ಸಮಯ ವಿತ್ತೆನ್ಬೆರ್ಗಿನ ಆಲೋಚನಾಸಭೆಯವರು ಅವನನ್ನು, ಸಭಾಬೋಧಕನೆಂತ, ನೇಮಿಸಿದರು. ಹೀಗಿರಲಾಗಿ, ಮಹಾ ಪಂಡಿತನಾಗಿಯೂ ಸಭಾಬೋಧಕನಾಗಿಯೂ ಉಭಯ ಮಾರ್ಗಗಳಿಂದ ಏಕ ಸುವಾರ್ತೆಯನ್ನೇ ಸಾರುವದಕ್ಕೆ ಹೊಣೆಯಾದನು; ಮತ್ತು ಆ ಎರಡು ಮಾರ್ಗಗಳಲ್ಲಿ ಪರಿಶುದ್ಧ ಆಸಕ್ತಿಯಿಂದ ನಡೆಯುತ್ತಿದ್ದನು. ಕಿ. ಶ. 1516ನೇ ವರುಷ ಸ್ತೌಪಿತ್ಸನು, ಸಕ್ಸೆನಿನ ಔಗುಸ್ತೀನ ಮಠಿಕರ ಮಠಗಳನ್ನು ಪರೀಕ್ಷಿಸ ಬೇಕೆಂದು, ಲುಥರನಿಗೆ ಅಪ್ಪಣೆ ಮಾಡಿದನು; ಅದಕ್ಕೆ ಅವನು ಹೋಗಿ, ಪರೀಕ್ಷಿಸುವೆಡೆ ಮಠಿಕರಲ್ಲಿಯೂ ಪ್ರಜೆಯಲ್ಲಿಯೂ ಅತಿರೇಕ ಅಜ್ಞಾನವನ್ನೂ ಅಭಕ್ತಿಯನ್ನೂ ಕಂಡು, ಅವುಗಳ ನಿವೃತ್ತಿಗೋಸ್ಕರ ಅನೇಕಾನೇಕ ಶಾಲೆಗಳನ್ನೂರಿ, ಮಠಿಕರನ್ನು ದೇವವಾಕ್ಯಾಧ್ಯಯನಕ್ಕೂ ನೀತಿಚರ್ಯೆಗೂ ಎಚ್ಚರಿಸಿ, ಬಂದನು.

ಆದರೆ ಆ ನಮ್ರತೆಯುಳ್ಳ ಸೌವಾರ್ತಿಕ ಪುರುಷನು ಪಪ್ಪಕ ಪಕ್ಷಸಭೆಯೊಳಗಣ ದುರ್ಮಾರ್ಗತನಕ್ಕೆ ಬಹಿರಂಗದಲ್ಲಿ ಎದುರಿಸಿ ಕ್ರಿಸ್ತನ ಸಭೆ ಎಂಬ ದೇವಾಲಯವನ್ನು ಶುಚಿಕರಿಸ[1] ಬೇಕಾದ ಕಾಲವು ಬೇಗದಿಂದ ಒದಗುತ್ತಲಿತ್ತು.

ಕ್ರಿ. ಶ. 1513ನೇ ವರುಷಕ್ಕೆ 10ನೇ ಲೆಯೋನ ಪಪ್ಪನು ಉದ್ಯೋಗಕ್ಕೆ ಬಂದಿದ್ದನು; ಅವನು ರೋಮದಲ್ಲಿ ಮಹೋತ್ಸವದಿಂದ ಪ್ರವೇಶಿಸುವದೊಂದಕ್ಕೆ $1\frac{1}{2}$ ಲಕ್ಷ ರೂಪಾಯಿಗಳನ್ನು ಬಳಿಸಿ ಬಿಟ್ಟನು. ಇದನ್ನು ತಕ್ಕ ಹಾಗೆ ಗ್ರಹಿಸುವಂತೆ, ಆಗಿನ ಮತ್ತು ಈಗಿನ ಧಾರಣೆ ಸರಿ ನೋಡಿದರೆ ಈಗ ಏಳರಷ್ಟು ಹೆಚ್ಚು ಅಂದರೆ $10\frac{1}{2}$ ಲಕ್ಷ ರೂಪಾಯಿ ಬೇಕಾದೀತೆಂತ, ಹೇಳ ಬಹುದು. ಆ ಪಪ್ಪನು ಹೀಗೆ ಮಹಾ ಡಂಭಾಚಾರಿಯಾದದ್ದಲ್ಲದೆ ಅವನ ಭಕ್ತಿಯ ಸುದ್ದಿ ಸಹ ಒಳ್ಳೇದಲ್ಲ; ಒಂದಾನೊಂದು ದಿನ ಅವನು ಬೆಂಬೊನೆಂಬ ತನ್ನ ಪ್ರಧಾನ ಲೇಖಕನ ಹತ್ತರ—ಕ್ರಿಸ್ತನ ವಿಷಯದ ಈ ಕಟ್ಟುಕಥೆಯಿಂದ (ಅಂದರೆ ಸುವಾರ್ತೆಯಿಂದ) ನಮಗೂ ನಮ್ಮವರಿಗೂ ಪ್ರಯೋಜನವೇನಾಯಿತೆಂತ, ಸಕಲ ಕುಲಗಳಿಗೆ ಸಾಕಷ್ಟು ಗೊತ್ತಾಯಿತು! ಎಂದು, ಹೇಳಿದನಂತೆ. ಕ್ರಿ. ಶ. 1516ನೇ ವರುಷಕ್ಕೆ ಆ ಮಂದ ಗರ್ವಿಯು ರೋಮದಲ್ಲಿ ಒಂದು ಸಭಾಸಂಘವನ್ನು ಕೂಡಿಸಿ, ಸರ್ವಸಭಾಸಂಘಗಳ ಅಧಿಕಾ

1) ಮತ್ತಾ. 21, 13; ಲೂಕ. 19, 46.

ರವು ಪಪ್ಪನ ಮೇಲೆ ಅದೆ! ಎಂತ ಪೀಸದ ಮತ್ತು ಕೊಸ್ತ್ನಿತ್ಸಿನ ಮತ್ತು ಬಾಸೆಲಿನ ಸಂಘಗಳಿಂದಾದ ವ್ಯವಸ್ಥೆಯನ್ನು[1] ಕಿತ್ತು, ಪಪ್ಪನ ಅಧಿಕಾರವು ಎಲ್ಲಾ ಸಭಾಸಂಘಗಳ ಮೇಲೆ ಅದೆ! ಎಂದು, ನಿರ್ಣಯ ಮಾಡಿಸಿದನು.

ಅಂದೇ ಅವನು, ರೋಮದೊಳಗಣ ಪೆತ್ರದೇವಾಲಯವನ್ನು[2] ಕಟ್ಟಿ ಪೂರ್ತಿ ಮಾಡುವದಕ್ಕೆ ತನಗೆ ಬಹಳ ಹಣ ಬೇಕೆಂದು, ಸರ್ವಸಾಧಾರಣವಾದದೊಂದು ಪಾಪಕ್ಷಮೆಮಾರಾಟವನ್ನು ಸಾರಿಸಿ, ಗೆರ್ಮಾನಿಯದಲ್ಲಿ ಅದನ್ನು ಮೈಂತ್ಸ ಪಟ್ಣದ ಅಲ್ಬ್ರೆಖ್ತ ಪ್ರಧಾನಾಧ್ಯಕ್ಷನಿಗೆ[3] ಒಪ್ಪಿಸಿ, ಚನ್ನಾಗಿ ಸಾಗಿಸಿದರೆ ಅರೆವಾಶಿ ಹಣ ನಿಮಗೆ ಶಿಕ್ಕುವದೆಂದು, ಆಶೆ ತೋರಿಸಿದನು. ಆ ಅಧ್ಯಕ್ಷನು ಮಿಗು ವೈಭವದಿಂದ ಬದುಕಿದ ಕಾರಣ ದೊಡ್ಡ ಸಾಲ ಬಂದು, ಕುತ್ತಿಗೆಗೆ ಅಮರಿತ್ತು. ಅದರ ತುಸಕ ಅವನು ಆ ಮಾರಾಟದಿಂದ ಬಹಳ ಲಾಭ ಬರುವ ಹಾಗೆ ಒದ್ದಾಡಿ, ಲಜ್ಜೆಗೆಟ್ಟಂಥ ಮಠಿಕರ ಮೂಲಕ ಕ್ಷಮಾಪತ್ರವಿಕ್ರಯವನ್ನು ಮಾಡಿಸುವವನಾದನು. ನಾಡು ನಾಡುಗಳನ್ನು ತಿರುಗ ಬೇಕಾದ ಈ ಮಠಿಕರಲ್ಲಿ ಯೋಹಾನ ತೆತ್ಸೆಲನೆಂಬವನು ಪ್ರಮುಖನು; ಅವನು ದೊಮಿನಿಕಾನ ಮಠಿಕಕುಲದವನಲ್ಲದೆ ಪಪ್ಪಕರಲ್ಲಿಯ ದೇವಜ್ಞಾನದ ಮಹಾ ಪಂಡಿತನು; ಹಿಂದಿನ ಕಾಲದಲ್ಲಿ ಮಕ್ಸಿಮಿಲಿಯಾನ ಕೈಸರನು[4], ಅವನು ನೀಚಸ್ವಭಾವಿಯೂ ವ್ಯಭಿಚಾರಿಯೂ ಎಂತ, ತಿಳಿದು—ಅವನನ್ನು ಒಂದು ಗೋಣಿಯೊಳಗೆ ಹಾಕಿ, ಕಟ್ಟಿ, ಹೊಳೆಗೆ ಬಿಸಾಡಿರಿ! ಎಂದು, ವಿಧಿಸಿದ್ದಲ್ಲಿ ಆ ಮೃದುಗುಣಿಯಾದ ಜ್ಞಾನಿ ಫ್ರೀದೆರೀಕ ಪ್ರಭುವು[5] ಅವನನ್ನು ಶಿಕ್ಷೆಗೆ ತಪ್ಪಿಸಿದ್ದನು; ತೆತ್ಸೆಲನು ಅಲ್ಬ್ರೆಖ್ತ ಪ್ರಧಾನಾಧ್ಯಕ್ಷನಿಗೆ ಕ್ಷಮಾವಿಕ್ರಯಕ್ಕೋಸ್ಕರ ಆವಶ್ಯಕನಾದ ಸಮಯ ಅವನು ತನ್ನ ದುರ್ನಡತೆಯ ದೆಸೆಯಿಂದ ಸಕ್ಸೆನಿನ ಲೈಪ್ಸಿಗು ಪಟ್ಣದಲ್ಲಿ ಬಂಧನದಲ್ಲಿದ್ದನು; ಆದ್ದರಿಂದ ಅಲ್ಬ್ರೆಖ್ತನು ಅವನನ್ನು ಬಿಡಿಸಿ, ಸಕ್ಸೆನು ದೇಶದಲ್ಲಿ ಪಾಪಕ್ಷಮೆಯನ್ನು ಮಾರೆಂದು, ಅವನಿಗೆ ನಿರ್ದೇಶಿಸಿದನು.

ತೆತ್ಸೆಲನು ಕ್ರಿ. ಶ. 1517ನೇ ವರುಷದಾರಭ್ಯ ಸಕ್ಸೆನಿನಲ್ಲಿ ಗ್ರಾಮ ಗ್ರಾಮಕ್ಕೆ ತನ್ನ ದೊಡ್ಡ ಭಂಡಾರದೊಡನೆ ಹೋಗುತ್ತಾ, ತನ್ನ ಮಾರಾಟವನ್ನು ಹೇರಳ ಲಾಭಕರವಾಗಿ ನಡಿಸುತ್ತಾ ಇರಲು, ವಿತ್ತೆನ್ಬೆರ್ಗ ಪಟ್ಣದವರು ಸಹ ಮೂಢ ಭಕ್ತಿಯಿಂದ ಅವನ ಬಳಿಗೆ ಬಂದು, ತಮ್ಮ ನಿತ್ಯ ಜೀವವನ್ನು ಹಣದಿಂದಲೇ ಸಂಪಾದಿಸಿ ಕೊಳ್ಳಲಿಕ್ಕೆ ನೋಡಿದರು. ಆಗ ಲುಥರ ಸಭಾಬೋಧಕನು ತನ್ನ ನಿವೇದನಶ್ರೋತೃತ್ವವೆಂಬ ಉದ್ಯೋಗದ ಮೇಲೆ ಆ ವ್ಯಾಪಾರದ ದುಷ್ಫಲಗಳನ್ನರಿತು, ಅ

1) 338, 409ನೇ ಪಾನುಗಳು. 2) 319ನೇ ಪಾನು. 3) 356ನೇ ಪಾನು. 4) 414ನೇ ಪಾನು. 5) 418ನೇ ಪಾನು.

ದಕ್ಕೆ ತನ್ನ ಪ್ರಸಂಗಗಳಿಂದ ಎದುರಿಸುವವನಾದನು[1]. ಅದು ಪ್ರಯೋಜನಕ್ಕೆ ಬೀಳದಿರಲು, ಅವನು ಹಲವು ಮಂದಿ ದೊಡ್ಡ ಮತೋದ್ಯೋಗಿಗಳಿಗೆ ಪತ್ರಮುಖಾಂತರ ದೂರು ಹೇಳಿದನು. ಇವರು ಕಿವಿ ಗೊಡದ ಕಾರಣ ಲುಥರನು ಕ್ರಿ. ಶ. 1517ನೇ ವರುಷದ ಒಕ್ಟೋಬರ್ ತಿಂಗಳಲ್ಲಿ, ಹುಸನು ರಕ್ತಸಾಕ್ಷಿಮರಣ ಪಟ್ಟದಕ್ಕೆ ಸುಮಾರು 100 ವರುಷ ಈಚೆ, ವಿತ್ತೆನ್ಬೆರ್ಗಿನ ಅರಮನೇ ದೇವಾಲಯದ ಹೆಬ್ಬಾಗಿಲಿಗೆ ಲತೀನ ಭಾಷೆಯಲ್ಲಿ 95 ಸೂತ್ರಗಳನ್ನು ಹಚ್ಚಿದನು; ಅವುಗಳಲ್ಲಿ ಅವನು, ಹಣಕ್ಕೆ ಪಾಪಪರಿಹಾರಗಳನ್ನು ವಿಕ್ರಯಿಸುವದಕ್ಕೆ ಯಾರಿಗೂ, ಪಪ್ಪನಿಗೆ ಸಹ, ಅಧಿಕಾರವಿಲ್ಲೆಂತ, ದೇವವಾಕ್ಯದ ಮೇಲೆ ವ್ಯಕ್ತ ಮಾಡಿದನು. ಬಹು ಕಾಲದಿಂದ ಹಾರೈಸುತ್ತಿದ್ದ ಪುನಃಸ್ಥಾಪನೆಯ ಅಂದರೆ ಪಪ್ಪಕರಲ್ಲಿ ಸೌವಾರ್ತಿಕ ಸತ್ಯವನ್ನು, ಸೌವಾರ್ತಿಕ ಸತ್ಯದಲ್ಲಿ ಪಪ್ಪಕರನ್ನು ತಿರಿಗಿ ನೆಡುವ ಕಾರ್ಯದ ಆರಂಭವು ಅದೇ.

ಮರುದಿವಸ ಅಲ್ಲಿ ಸಹ ಸರ್ವ ಸಂತರ ಹಬ್ಬವೆಂಬ ಪಪ್ಪಕ ಹಬ್ಬವು[2] ಆಚರಿಸಲಾಗುವ ಕಾರಣ ಅನೇಕ ಜನರು ನೆರೆದು, ಆ ಸೂತ್ರಗಳನ್ನು ಓದಿದರು. ಬಳಿಕ ದೊಡ್ಡ ಗುಬಾರು ಎದ್ದಿತು; ಮುದ್ರಾಯಂತ್ರದ ಮೂಲಕ ಆ ಸೂತ್ರಗಳ ಅರ್ಥವು 14 ದಿವಸದೊಳಗೆ ಸುಮಾರು ಸಕಲ ಗೆರ್ಮಾನಿಯಕ್ಕೆ ಗೊತ್ತಾಯಿತು; ಸ್ವಲ್ಪ ಕಾಲದಿತ್ತ ಅದು ಪಪ್ಪಕ ಮತದ ಇತರ ಶೀಮೆಗಳಿಗೆಲ್ಲಾ ಹಬ್ಬಿ ಹೋಯಿತು. ಆ ಮಠಿಕನ ಧೈರ್ಯಕ್ಕಾಗಿ ಸರ್ವತ್ರ ಮಹಾ ಸಂತೋಷ ಉದ್ಭವಿಸಿತು.

ಲೆಯೋನ ಪಪ್ಪನು ಅದರ ಸುದ್ದಿ ಕೇಳಿ, ಅದು ಮಠಿಕರ ಶುಷ್ಕ ಗೋಷ್ಟಿ ಎಂತ, ನೆನಸಿ, ಮೊದಲಲ್ಲಿ ಅದನ್ನು ಗಣಿಸಲಿಲ್ಲ; ಆದರೆ ತೆಕ್ಸೆಲನು, ಲುಥರನ ಸೂತ್ರಗಳಿಂದ ತನ್ನ ಕ್ಷಮಾಪತ್ರವಿಕ್ರಯಕ್ಕೆ ಬಹು ನಷ್ಟವಾಯಿತೆಂತ, ತಿಳಿದು, ಅವನ ಮೇಲೆ ಪಪ್ಪನ ಹತ್ತರ, ದೊಡ್ಡ ಕಥರನೆಂತ, ಚಾಡಿ ಹೇಳಿದ ಹಿಂದೆ ಆ ಪಪ್ಪನು ಲುಥರನನ್ನು ರೋಮಕ್ಕೆ ಕರೆಸಿದನು. ಆಗ ಜ್ಞಾನಿ ಪ್ರೀದೆರೀಕ ಪ್ರಭುವು ಅವನನ್ನು ಹೋಗ ಗೊಡದ್ದು[3] ಅಲ್ಲದೆ, ಈ ಸಂಗತಿಯು ಗೆರ್ಮಾನಿಯದ ಔಗ್ಸ್ಬುರ್ಗ ಪಟ್ಣದ ರಾಜ್ಯಸದಸ್ಸಿನಲ್ಲಿ ವಿಚಾರಣವಾಗ ತಕ್ಕದೆಂದು, ಪಪ್ಪನನ್ನೊಡಂಬಡಿಸಿದನು. ಅದು ಕ್ರಿ. ಶ. 1518ನೇ ವರುಷ ಕೂಡಿ ಬಂದಂದು ಲುಥರನಿಗೂ ಪಪ್ಪಪ್ರೇಷಿತನಾದ ಕಯೆತಾನನೆಂಬ ಕರ್ದಿನಾಲುದ್ಯೋಗಿಗೂ ಕ್ಷಮಾವಿಕ್ರಯವ ಕುರಿತು ತರ್ಕವಾಗ್ವಾದವಾಯಿತು; ಅದರಿಂದ ಸಂಧಾನವಾಗದೆ, ಲುಥರನು, ಹುಸನಂತೆಯೇ[4], ಅಲ್ಪೋಪದಿಷ್ಟ ಪಪ್ಪನ ಬಿಟ್ಟು ಬಹೂಪದಿಷ್ಟನಾದವಗೆ ದೂರು ಹೇಳುತ್ತೇನೆಂತ, ನುಡಿದು ಬಿಡಲು, ಕ್ಷಮಾವಿಕ್ರಯವನ್ನು ಅಂದು ನಡೆಯುವ ಹಾಗೆಯೇ ಸ್ಥಾಪಿಸು

1) 397ನೇ ಪಾನು ಸರಿ ನೋಡು. 2) 357ನೇ ಪಾನು. 3) 396ನೇ ಪಾನು ಸರಿ ನೋಡು. 4) 396ನೇ ಪಾನು.

ವ ಬುಲ್ಲವು ರೋಮದಿಂದ ಬಂತಷ್ಟೇ. ಮರುವರುಷ ಯೋಹಾನ ಎಕ್ಕನೆಂಬ ಪಪ್ಪಕ ಪಂಡಿತನು ಲುಥರನನ್ನೂ ವಿತ್ತೆನ್ಬೆರ್ಗಿನ ಮಹಾ ವಿದ್ಯಾಶಾಲೆಯವರಲ್ಲಿ ಲುಥರನ ಗೆಳೆಯನಾದ ಕರ್ಲ್ ಸ್ತತ್ತನೆಂಬ ಒಬ್ಬ ಪಂಡಿತನನ್ನೂ ಮತ್ತೊಂದು ವಾಗ್ವಾದಕ್ಕೋಸ್ಕರ ಲೈಪ್ಸಿಗು ಪಟ್ಣಕ್ಕೆ ಕರೆಸಿದನು. ಅಲ್ಲಿ 3 ವಾರದ ಕಾಲ ಮಹಾ ಪಂಡಿತರ ಮತ್ತು ವಿದ್ಯಾರ್ಥಿಗಳ ಮತ್ತು ಇತರ ಅನೇಕ ಆಧ್ಯರಾದ ಜನರ ಸಮಕ್ಷದಲ್ಲಿ ತರ್ಕವ್ಯವಹಾರ ನಡೆಯುತ್ತಿತ್ತು; ಪಪ್ಪಕತ್ವಕ್ಕೆ ಲೌಕಿಕ ಮೂಲವೇ! ಎಂಬದು ಲುಥರನ ಮುಖ್ಯ ನಿರ್ಧಾರಣಾಂಶವು. ವಿತ್ತೆನ್ಬೆರ್ಗಿನಲ್ಲಿಯ ತತ್ವದರ್ಶನದ ಮತ್ತು ಗ್ರೇಕ ಭಾಷೆಯ ಮಹಾ ಪಂಡಿತನಾದ ಫಿಲಿಪ್ಪ ಮೆಲಂಖ್ಥೋನನೆಂಬವನು ಲುಥರನ ಪ್ರಾಣಮಿತ್ರನಾದದ್ದು ಆ ವಾಗ್ವಾದದ ಶ್ರೇಷ್ಠ ಫಲವು. ರೆಯುಖ್ಲೀನನ[1] ಶಿಷ್ಯರಲ್ಲೊಬ್ಬನಾದ ಆ ಮೆಲಂಖ್ಥೋನನು ಬಳಿಕ ದೇವಜ್ಞಾನದ ಪಾಂಡಿತ್ಯಕ್ಕೆ ಬಂದು, ಪುನಃಸ್ಥಾಪನಾಕಾರ್ಯದಲ್ಲಿ ಲುಥರನ ಬಹು ನಂಬಿಗಸ್ತ ಸಹಾಯಕನಾಗಿ ಪರಿಶೋಭಿಸುತ್ತಿದ್ದನು.

ಲುಥರನು ಆ ಲೈಪ್ಸಿಗಿನ ವಾಗ್ವಾದದಲ್ಲಿ ಪಪ್ಪಕ ಪಕ್ಷಸಭೆಯ ಕೆಡಕು ಸ್ಥಿತಿಯನ್ನು ಸ್ಪಷ್ಟ ತೋರಿಸಿ, ಪಪ್ಪಕ ಅಧಿಕಾರಕ್ಕೆ ಎದುರಾಗಿ ಮಾಜದೆ ನುಡಿದ ನಿಮಿತ್ತ ಪಪ್ಪಕರು ವಿಷದಿಂದಲೂ ಕೊಲೆಗಾರರಿಂದಲೂ ಅವನನ್ನು ನಶಿಸಲಿಕ್ಕೆ ನೋಡಿದರು; ಆದರೆ ಲುಥರನು ಭಯ ಗೊಳ್ಳದೆ, ತನ್ನ ಕಾರ್ಯವನ್ನು ಸರ್ವತ್ರಾಣಿಯೂ ಸದಾಸತ್ಯವಂತನೂ ಆದ ದೇವರ ಮೇಲಿಟ್ಟನು. ಸ್ವಲ್ಪ ಕಾಲಕ್ಕೀಚೆ ಕ್ರಿ. ಶ. 1520ನೇ ವರುಷ ಅವನು 2 ಪ್ರಖ್ಯಾತ ಗ್ರಂಥಗಳನ್ನು ರಚಿಸಿ, ಪ್ರಕಟಿಸಿದನು; ಯಾವವಂದರೆ, ಗೆರ್ಮಾನ ಜನಾಂಗದವರ ಶ್ರೀ ಕೈಸರನಿಗೂ ಕ್ರೈಸ್ತ ಆಧ್ಯರಿಗೂ ಸಭ್ಯರ ನವೀಕರಣವೆಂಬ ಪುನಃಸ್ಥಾಪನೆಯನ್ನು ಕುರಿತು ತಿಳಿಸುವಂಥಾದ್ದು ಒಂದು; ಪಪ್ಪರೊಳಗಿನ ಕ್ರೈಸ್ತರ ಈ ಶೆರೆಯನ್ನೂ ಬಬೆಲು ದೇಶದ ರಾಜನಾಗಿದ್ದ ನೆಬುಕದ್ನೇಚರನೊಳಗಿನ ಇಸ್ರಯೇಲ್ಯರ ಆ ಶೆರೆಯನ್ನೂ ಸರಿ ಹೋಲಿಸಿ ನೋಡುವಂಥಾದ್ದು ಮತ್ತೊಂದು. ಮೊದಲಿನದರಲ್ಲಿ ಅವನು, ಸರ್ವ ಕ್ರೈಸ್ತರು ರಾಜಯಾಜಕತ್ವದವರೇ! ಎಂತ[2], ಪೂರಾ ಲಯವಾಗಿದ್ದ ಆ ಸೌವಾರ್ತಿಕ ಬೋಧನೆಯನ್ನು ತಿರಿಗಿ ಸ್ಥಾಪಿಸಿದನು; ಪಪ್ಪನು ನಿಜ ಅಂತಿಕ್ರಿಸ್ತನೆಂತ[3], ಅದರಲ್ಲಿ ನಿರ್ಣಯಿಸಲಂಜಲಿಲ್ಲ. ಎರಡನೇ ಗ್ರಂಥದಲ್ಲಿ ಅವನು ಏಳು ಒಂದಕ್ಕೊಂದೀಡಾದ ಪರಿಶುದ್ಧ ಸಂಸ್ಕಾರಗಳವೆ ಎಂಬ ಬೋಧನೆಯ[4] ಹೀನತೆಯನ್ನು ನಿದರ್ಶಿಸಿ—ದೇವರಿಗೂ ಮನುಷ್ಯರಿಗೂ ನಡುವೆ ಪ್ರೀಸ್ತರ ಮಧ್ಯಸ್ಥಿಕೆ[5] ಬೇಡ; ಮಾನುಷ ಮಧ್ಯಸ್ಥಿಕೆ ಏನೂ ಇಲ್ಲದೆ ಸ್ವಾತಂತ್ರ್ಯ

1) 413ನೇ ಪಾನು. 2) 70, 93, 96, 147, 148, 275ನೇ ಪಾನು. 3) 364, 384, 385, 390, 391ನೇ ಪಾನುಗಳು. 4) 357ನೇ ಪಾನು. 5) 350 ಆದಿ ಪಾನು.

ವಾಗಿ ಕ್ರಿಸ್ತನ ಹೆಸರಲ್ಲಿ ದೇವರ ಬಳಿಗೆ ಹೋಗಿ ಸಂರಕ್ಷಣೆ ಪಡಕೊಳ್ಳುವ ಭಕ್ತಿ ವಿಶ್ವಾಸ ಒಂದೇ ಸಾಕು! ಎಂದು, ಪುನಃಸ್ಥಾಪಿಸಿದನು[1].

ಆ ತರುವಾಯ ಲೆಯೋನ ಪಪ್ಪನು ಲುಥರನಿಗೆ ಬನ್ನಿನ ಭಯ ತೋರಿಸುವ ಒಂದು ಬುಲ್ಲನ್ನು ರಚಿಸಿ, ಅವನ ಗ್ರಂಥಗಳನ್ನು ಸುಡ ಬೇಕೆಂತ, ಅದರಿಂದ ವಿಧಿಸಿ, ಬುಲ್ಲಿನ ಹಲವು ಪ್ರತಿಗಳನ್ನು ಆ ಎಕ್ಕ ಪಂಡಿತನ ಕೈಯಲ್ಲಿ ಕೊಟ್ಟು, ಗೆರ್ಮಾನಿಯಕ್ಕೆ ಕಳುಹಿಸಿದನು. ಆದರೆ ಗೆರ್ಮಾನ ಪ್ರಜೆಯೊಳಗೆ ಪುನಃಸ್ಥಾಪನೆಯ ಅಭಿಲಾಷೆಯು ಬಹು ಮಿಗಿಲಾಗಿರುವ ದೆಸೆಯಿಂದ ಎಕ್ಕನಿಗೆ ಬೇರೆ ಬೇರೆ ಕಡೆಯಿಂದ ಹಾಸ್ಯ ಬಂದದ್ದಲ್ಲದೆ ಪ್ರಜೆಯು ಕೆಲವು ಬುಲ್ಲಗಳನ್ನು ಹಿಡಿದು, ಹರಿದು ಬಿಟ್ಟಿತು; ಅದು ಹೊರ್ತಾಗಿ ಕೆಲವರು ಅಧಿಕಾರಸ್ಥರು ಆ ಬುಲ್ಲುಗಳ ಪ್ರಕಟನಕ್ಕೆ ತಡೆ ಮಾಡಿದರು. ಆದರೆ ಲುಥರನು ದಶಂಬರ್ ತಿಂಗಳಿನ 10ನೇ ದಿನ ಪ್ರಾತಃಕಾಲಕ್ಕೆ ಮಹಾ ವಿದ್ಯಾಶಾಲೆಯ ಅನೇಕ ಪಂಡಿತರೂ ವಿದ್ಯಾರ್ಥಿಗಳೂ ಪ್ರಜೆಯ ಮಹಾ ಸಮೂಹವೂ ಕೂಡಿರುವಲ್ಲಿ, ವಿತ್ತೆನ್ಬೆರ್ಗ್ ಪಟ್ಣದ ಒಂದು ಬಾಗಲಿನ ಮುಂದೆ, ಅಲ್ಲಿಗೆ ಬಂದಿದ್ದ ಬುಲ್ಲವನ್ನೂ ಬೇರೆ ಪಪ್ಪಕ ಸಭಾನಿಯಮದ ಗ್ರಂಥಗಳನ್ನೂ ದೇವರ ಹೆಸರಿನಲ್ಲಿ ಕಿಚ್ಚಿಗೆ ಹಾಕಿದನು. ಅಂದೇ ಪಪ್ಪನಿಗೂ ಲುಥರನಿಗೂ ಇದ್ದ ಸಮ್ಮಂಧವು ಪೂರ್ಣ ಬಿಚ್ಚಿ ಹೋಯಿತು; ಅಂದಿನಿಂದಲೇ ಲುಥರನು, ಪಪ್ಪಕ ಪಕ್ಷಸಭೆಯಲ್ಲಿ ಸುವಾರ್ತೆಯ ಬೆಳಕನ್ನೂ ಸತ್ಯವನ್ನೂ ಪುನಃಸ್ಥಾಪಿಸುವದೇ ತನ್ನ ದಿವ್ಯ ಋಣವೆಂದು, ಆ ಪಕ್ಷಕವಾದ ಪಪ್ಪಕ ಸಭೆಯನ್ನು ತಿರಿಗಿ ಕಥೊಲಿಕವಾದ[2] ಸೌವಾರ್ತಿಕ[3] ಸಭೆಯಾಗಲಿಕ್ಕೋಸ್ಕರ ಮಾರ್ಪಾಟು ಗೈಯುವದಕ್ಕೆ ಸರ್ವ ಶಕ್ತಿಯಿಂದ ಪ್ರವರ್ತಿಸುವವನಾದನು.

ಮಕ್ಸಿಮಿಲಿಯಾನನೆಂಬ ಆ ಗೆರ್ಮಾನ ಕೈಸರನು[4] ಕ್ರಿ. ಶ. 1519ನೇ ವರುಷಕ್ಕೆ ಸತ್ತಿದ್ದನು. ಆಗ ರಾಜಶೋಧಕ ಪ್ರಭುಗಳು ಕೂಡಿ, ತಮ್ಮಲ್ಲೊಬ್ಬನಾದ ಆ ಜ್ಞಾನಿ ಪ್ರೀದೆರೀಕನಿಗೆ ಕೈಸರತ್ವದ ಪಟ್ಟ ಕಟ್ಟಲಿಕ್ಕೆ ಬರಲು, ಇವನು ಒಲ್ಲೆನೆನ್ನಲು, ಕ್ರಿ. ಶ. 1520ನೇದರಲ್ಲಿ ಸ್ಪಾನಿಯ ದೇಶದ 20 ವರುಷಪ್ರಾಯದವನಾದ ರಾಜನನ್ನು, ಕೈಸರನೆಂದು, ಆರಿಸಿ ಕೊಂಡರು; 5ನೇ ಕರ್ಲನೆಂಬ ಇವನು ಮಕ್ಸಿಮಿಲಿಯಾನನ ಮೊಮ್ಮಗನು; ಅವನು ಕ್ರಿ. ಶ. 1556ನೇ ವರುಷದ ತನಕ ಆಳುತ್ತಿದ್ದನು.

ಬಳಿಕ, ಜ್ಞಾನಿ ಪ್ರೀದೆರೀಕನ ಮತ್ತು ಇತರರಾದ ಗೆರ್ಮಾನ ರಾಜಕ ಪ್ರಭುಗಳ[5] ವಿನಂತಿಯ ಪ್ರಕಾರ, ಮರುವರುಷ ಲುಥರನ ಕಾರ್ಯವು ವೊರ್ಮ್ಸ್ ಪಟ್ಣದಲ್ಲಿ[6] ಕೂಡ ತಕ್ಕ ರಾಜ್ಯಸದಸ್ಸಿನಲ್ಲಿ ವಿಮರ್ಶನವಾಗುವದೆಂದು, ನೇಮಿಸ

1) 1ತಿಮೊ. 2, 5. ಎಬ್ರೀ. 4, 16. 2) 163, 290ನೇ ಪಾನು. 3) 266, 284, 367, 374, 408ನೇ ಪಾನು. 4) 421ನೇ ಪಾನು. 5) 101 Gravamina! 6) 316, 333ನೇ ಪಾನುಗಳು.

ಲಾಯಿತು. ಲುಥರನು ಪಪ್ಪನ ಬನ್ನಿನೊಳಗೂ ಇಂತೆರ್ದಿಕ್ತಿನೊಳಗೂ ಇದ್ದು[1], ಮುಂಚೆ ಹುಸನಿಗಾದ್ದನ್ನು[2] ತಿಳಿದಿದ್ದಾಗ್ಯೂ ಯಾವ ವಿಷಯಕ್ಕೂ ಅಂಜದೆ, ಕ್ರಿಸ್ತ ಕರ್ತನ ಹೆಸರಿನಲ್ಲಿ ವೊರ್ಮ್ಸಿಗೆ ಗಮಿಸಿ, ಆ ಸದಸ್ಸಿಗೆ ನಡೆದು ಹೋಗುತ್ತಿರುವ ಹೊತ್ತು ಬೀದಿಗಳಲ್ಲಿಯೂ ಕಿಟಕಿಗಳಲ್ಲಿಯೂ ಮಾಳಿಗೆಗಳಲ್ಲಿಯೂ ಮಾಡುಗಳಲ್ಲಿಯೂ ಸಾವಿರಾರು ಜನರು, ಆ ಪ್ರಖ್ಯಾತ ಮಠಿಕನನ್ನು ನೋಡ ಬೇಕೆಂತ, ಮುತ್ತಿ ಕೊಂಡಿದ್ದರು; ಆದರೆ ಆ ಮಹಾ ಸದಸ್ಸಿನಲ್ಲಿ ಅನೇಕ ಮಂದಿ ರಾಜರೂ ಅಧ್ಯಕ್ಷರೂ ಅಲ್ಲದೆ ನೂರಾರು ಜನ ಪ್ರಭುಗಳೂ ಆಧ್ಯರೂ ಪಂಡಿತರೂ ಸಹ ಕೂತು ಕೊಂಡಿದ್ದರು. ಒಂದು ಕಾಲುಮಣಿಯ ಮೇಲೆ ಲುಥರನ ಗ್ರಂಥಗಳೆಲ್ಲಾ ಇಟ್ಟಿದ್ದವು. ಅವನ್ನು ಬರೆದವರು ನೀವೋ? ಎಂದು, ಕೇಳುವಲ್ಲಿ ಲುಥರನು ಹೌದೆಂದನು. ಹಾಗಾದರೆ ಅವುಗಳೊಳಗಿನ ಅರ್ಥವನ್ನು ಅಲ್ಲಗಳೆಯಿರಿ! ಎಂದು, ಹೇಳಲು, ವಿನಯಪರನಾದ ಅವನು, ತನಗೆ ಚಿಂತನೆಗೋಸ್ಕರ ಒಂದು ದಿನದ ಸಮಯ ಬೇಕೆಂದು, ಬಿನ್ನವಿಸಿದನು. ಮರುದಿವಸವೇ ಲುಥರನನ್ನು ತಿರಿಗಿ ಕರ ತಂದು—ಈಗ ನೀವು ಅಲ್ಲಗಳೆಯುತ್ತೀರೋ? ಇಲ್ಲವೋ? ಸ್ಪಷ್ಟ ಹೇಳಿರಿ! ಎಂತ, ಅವನನ್ನೊತ್ತಲು, ಅವನು ನುಡಿದ್ದೇನಂದರೆ—ನೀವು ನನ್ನನ್ನು ಪರಿಶುದ್ಧ ಬರಹದ ಸಾಕ್ಷಿವಾಕ್ಯಗಳಿಂದ ಜಯಿಸಿ, ಒಡಂಬಡಿಸಿದರೆ ಹೊರ್ತು ನಾನೇನೂ ಅತಿಗಳೆಯುವದಕ್ಕೆ ಮಾರ್ಗವೂ ಮನಸ್ಸೂ ಇಲ್ಲ; ಯಾಕಂದರೆ, ಮನಃಸಾಕ್ಷಿಗೆ ವಿರೋಧವಾಗಿ ಏನಾದರೂ ಮಾಡುವದು ಒಳ್ಳೇದೂ ಅಲ್ಲ ಉಚಿತವೂ ಅಲ್ಲ! ಇಲ್ಲಿ ನಿಂತಿದ್ದೇನೆ, ನಾನು ಬೇರೇನೂ ಮಾಡಲಾರೆನು; ದೇವರು ನನಗೆ ಸಹಾಯ ಮಾಡಲಿ! ಆಮೆನ್!—ತದನಂತರ ಲುಥರನನ್ನು ತಿರಿಗಿ ಬಿಡಾರಕ್ಕೆ ಕರದೊಯಿದು, ಪಟ್ಣದಿಂದ ಹೊರಡಲೀಸಿದರು. ಆದರೂ ಆ ರಾಜ್ಯಸದಸ್ಸಿನವರಿಗೆ ಲುಥರನ ಕಾರ್ಯವನ್ನು ಪೂರಾ ತಮ್ಮದು ಮಾಡಿ ಕೊಳ್ಳುವ ಹಾಗೆ ಧೈರ್ಯ ಸಾಲಲಿಲ್ಲ; ಅದಲ್ಲದೆ ಸ್ವೇಚ್ಛಾಧಿಕಾರಾಭಿಮಾನಿಯಾದ 5ನೇ ಕರ್ಲನು, ಲುಥರನಂಥ ಮಠಿಕನಿಗೆ ತಾನು ಬೊಗ್ಗುವದಿಲ್ಲವೆಂದು, ಹೇಳಿದ ಹೊರ್ತು, ರಾಜ್ಯಪ್ರಭುಗಳ ಅಧೀನತೆಯಿಂದ ತಾನು ತಪ್ಪಿಸಿ ಕೊಳ್ಳಲಿಕ್ಕೆ ಪ್ರಯತ್ನಿಸುವವನಾಗಿ ಅಂದೇ ತೋರಿ, ಹಲವರು ಪ್ರಭುಗಳು ತಮ್ಮ ಶೀಮೆಗಳಿಗೆ ಹಿಂದಿರುಗಿದ ಮೇಲೆ ಉಳಿದವರು ತನಗೆ ಬೀಳ್ಕೊಳ್ಳುವ ಸಮಯ ಅವರಲ್ಲಿ ಯಾರಿಗೂ ಏನೂ ಗೊತ್ತಿಲ್ಲದಿದ್ದ ಒಂದು ನಿರ್ಣಯಪತ್ರವನ್ನೋದಿದನು; ಪಪ್ಪನ ಪ್ರೇಷಿತನಾದ ಅಲೆಯಂದೆರನೆಂಬವನು ಅದನ್ನು ರಚಿಸಿದ್ದನು. ವೊರ್ಮ್ಸಿನ ನಿರ್ಣಯವೆಂಬ ಆ ಪತ್ರವು ಲುಥರನ ಮೇಲೆಯೂ ಅವನ ಮಿತ್ರರ ಮೇಲೆಯೂ ಅನಾಥತ್ವಾಜ್ಞೆ ಹಾಕುವಂಥಾದ್ದೇ, ಅಂದರೆ ಯಾರಾದರೂ ಲುಥರನ

1) 424ನೇ ಪಾನು. 2) 400ನೇದಾದಿ ಪಾನು.

ನ್ನೂ ಅವನವರನ್ನೂ ಹ್ಯಾಗೂ ಕೊಂದರೆ ಅವರಿಗೆ ಶಿಕ್ಷೆ ಬಾರದು! ಎನ್ನುವಂಥಾದ್ದೇ[1].

ಲುಥರನನ್ನು ರಕ್ಷಿಸುವದಕ್ಕೋಸ್ಕರ ಜ್ಞಾನಿ ಫ್ರೀದೆರೀಕ ಪ್ರಭುವು ಮಾರ್ಗದಲ್ಲಿ ಅವನನ್ನು ಗೋಪ್ಯವಾಗಿ ಹಿಡಿಸಿ, ಮಹಾ ಕಾಡಿನಲ್ಲಿರುವ ವರ್ತ್ಬುರ್ಗೆಂಬ ತನ್ನದೊಂದು ಕೋಟೆಯೊಳಗೆ ಮುಚ್ಚಿಟ್ಟನು; ಆದರೆ ಪಪ್ಪನು, ಲುಥರನು ತನಗೆ ಶಿಕ್ಕಲಿಲ್ಲವೆಂತ, ದುಃಖಿಸಿ, 2 ತಿಂಗಳಿಗೀಚೆ ರೋಮದಲ್ಲಿ ಅವನದೊಂದು ರೂಪವನ್ನು ಸುಟ್ಟು ಬಿಟ್ಟನು. ವರ್ತ್ಬುರ್ಗಿನಲ್ಲಿ ಲುಥರನು 10 ತಿಂಗಳು ಕಳಿಯುತ್ತಿರಲು, ಶತ್ರುಗಳು ಅವನನ್ನು ಕೊಂದರೆಂತ, ಹೇಳುವ ಸುದ್ದಿಯು ಗೆರ್ಮಾನಿಯದಲ್ಲಿ ಪ್ರಬಲವಾಯಿತು. ಮೈಂತ್ಸಿನ ಅಲ್ಬ್ರೆಖ್ತನು[2] ಸಹ ಅದು ಕೇಳಿ, ಮುಂಚಿನಂತೆ ತನ್ನ ಪಾಪಕ್ಷಮಾವಿಕ್ರಯಕರನ್ನು ಶೀಮೆಯ ಮೇಲೆ ಸುತ್ತ್ಯಾಡಿಸುವವನಾದನು. ತತ್ಕ್ಷಣವೇ ಲುಥರನು ಅವನಿಗೆ ಒಂದು ಪತ್ರದ ಮುಖಾಂತರ ಬುದ್ಧಿ ಹೇಳಿದ್ದರಿಂದ ಅವನು ಹೆದರಿ, ಮನ್ನಿಸಿರೆಂಬಂತೆ ವಿನಯವುಳ್ಳ ಪ್ರತಿಪತ್ರವ ಬರೆದು ಮುಟ್ಟಿಸಿದನು. ಆದರೆ ಲುಥರನು ವರ್ತ್ಬುರ್ಗಿನಲ್ಲಿ ಮಾಡಲವಶ್ಯವಾದ ವಸ್ತಿಯು ಲೋಕಕ್ಕೆ ಅತಿ ಹಿತಕರವಾಯಿತು; ಹ್ಯಾಗಂದರೆ, ದೇವವಾಕ್ಯವನ್ನು ರಮಣೀಯ ಗೆರ್ಮಾನ ಭಾಷಾಂತರ ಗೈಯಲೆಸಗುವದಕ್ಕೆ ಅಲ್ಲಿ ಅನುವ ಕಂಡನು.

ಅವನು ಇನ್ನು ಆ ಕೋಟೆಯೊಳಗಿರುವಾಗ ವಿತ್ತೆನ್ಬೆರ್ಗಿನ ಔಗುಸ್ತೀನ ಕುಲದ ಮಠಿಕರು ಸಭೆ ಶೇರಿ, ಮಿಸ್ಸಯಾಗವನ್ನೂ ಮಠಿಕತ್ವವನ್ನೂ ನಿವರ್ತಿಸಿ, 13 ಮಂದಿಯಾದ ಅವರು ಮಠವನ್ನು ಬಿಟ್ಟು ಬಿಟ್ಟರು. ಲುಥರನು ಕೇಳಿ, ಮೋದ ಗೊಂಡರೂ, ವ್ಯರ್ಥ ಗದ್ದಲವೆಬ್ಬಿಸ ಬೇಡಿರಿ! ಎಂತ, ಅವರನ್ನೆಚ್ಚರ ಪಡಿಸಿದನು.

---

1) ಎರಸ್ಮನೆಂಬ ಆ ಪಂಡಿತನು (413, 414ನೇ ಪಾನು) ಆರಂಭದಲ್ಲಿ ಪುನಃಸ್ಥಾಪನೆಯ ಕಾರ್ಯವನ್ನು ಸಾಗಿಸುವದರಲ್ಲಿ ಒತ್ತಾಸೆ ಗೈಯುತ್ತಿದ್ದನು; ಆದರೆ ತಾನು ನೆನಸಿದ್ದಕ್ಕೆ ಪ್ರತಿಕೂಲವಾಗಿ ವೊರ್ಮ್ಸನ ನಿರ್ಣಯವೆಂಬದು ಲುಥರನ ಮೇಲೂ ಇವನ ಸ್ನೇಹಿತರ ಮೇಲೂ ಅನಾಥತ್ವಾಜ್ಞೆ ಹಾಕಿದನಂತರ ಅವನು, ಅನೇಕ ಮನುಷ್ಯರಲ್ಲಿ ತನ್ನ ಮಾನ ಕುಂದೀತಲ್ಲದೆ ತನ್ನ ಸೌಖ್ಯಜೀವಿಕೆ ತಪ್ಪೀತೆಂತ, ಹೆದರಲಿಕ್ಕೆ ಹತ್ತಿ, ಎರಡು ನಾಲಿಗೆಯವನಾದನು. ಇದರ ಸಲುವಾಗಿ ಪುನಃಸ್ಥಾಪಕರ ಮೈತ್ರಿಗೆ ಅವನನ್ನು ಬಿಟ್ಟು ಹೋಗುತ್ತಿರುವಂದು ಇಂಗ್ಲಂದಿನ ರಾಜನಾದ 8ನೇ ಹೆನ್ರಿಯು ತನಗೆ ಬುದ್ಧಿ ಹೇಳಿದ ಲುಥರನಿಗೆ ಕೋಪ ಪಟ್ಟು (58ನೇ ಸಂಧಿ), ಎರಸ್ಮನಿಗೆ ಫುಸಲಾಯಿಸಿ, ತನ್ನ ಹೆಸರಿನಲ್ಲಿ ಲುಥರನಿಗೆ ಪ್ರತಿಕೂಲವಾದ್ದೊಂದು ಕೃತಿ ಬರೆದು ಪ್ರಕಟಿಸ ಬೇಕೆಂತ, ಬೇಡಿಕೊಂಡನು. ಆದ ಕಾರಣ ಎರಸ್ಮನು ಕ್ರಿ. ಶ. 1524ನೇ ಅಬ್ದ ಲುಥರನಿಗೆ ವಿರೋಧವಾಗಿ ಸ್ವತಂತ್ರಮಯಚಿತ್ತಸಂಬಂಧವಾದ್ದೆಂಬದನ್ನು ಹೊರಡಿಸಿ, ಅದರಲ್ಲಿ ಪೆಲಗಿಯತ್ವದ (369ನೇ ಪಾನು) ಸತ್ಯವ ಸ್ಥಾಪಿಸಲೊದ್ದಾಡಿ, ಹಿಪ್ಪೊ ಪಟ್ಣದ ಆ ಪ್ರಖ್ಯಾತ ಔಗುಸ್ತೀನನ (291ನೇ ಪಾನು) ಅಭಿಪ್ರಾಯ ತಕ್ಕಷ್ಟು ತೋರಿಸುವ ಲುಥರನಿಗೆ ಅಪಲಾಪನ ಮಾಡಿದನು. ಅದಕ್ಕಿವನು ಅಂದು ಸರ್ವಲೋಕರೂಢಿಯಾದ ಕಡದು ಭಾಷೆಯಿಂದ ಅವನಿಗೆ ಸದುತ್ತರ ಬರೆದು ಕೊಡುತ್ತಲೇ ಎರಸ್ಮನು ಲುಥರನಿಗಲ್ಲದೆ ಸುವಾರ್ತಾಕಾರ್ಯಕ್ಕೂ ಪ್ರಚಂಡ ವೈರಿಯಾದನು. 2) 421ನೇ ಪಾನು.

ಆದರೆ ಹಾಗೆ ಆರಂಭಿಸಿದ ಪುನಃಸ್ಥಾಪನೆಯ ಕಾರ್ಯವು ಸರ್ವತ್ರ ಸಮಾಧಾನದಿಂದ ನಡೆಯಲಾಗಲಿಲ್ಲ. ಅನೇಕ ಶತಮಾನಗಳೇ ಪಪ್ಪನ ಕಠಿಣ ಬಂಧನದಲ್ಲಿರುತ್ತಿದ್ದ ಪ್ರಜೆಯು ಎಲ್ಲೆಲ್ಲಿಯೂ ಅಂಥಾ ಬಂಧಗಳನ್ನು ಕಡಿದು ಬಿಡಲಿಕ್ಕೆ ಅಂದು ಹತ್ತಲು, ಅದಕ್ಕೆ ಸ್ವಾತಂತ್ರ್ಯವನ್ನು ಕ್ರಮದಿಂದುಪಯೋಗಿಸುವ ಶಕ್ತಿ ಇರಲಿಲ್ಲ. ಇಂತಿರಲಿಕ್ಕೆ, ಬಹು ದಿವಸ ಲಾಯದೊಳಗೆ ಕಟ್ಟಿದ್ದ ಜಾತ್ಯಶ್ವವನ್ನು ಬಿಚ್ಚಿದ ಮೇಲೆ ಅದು ಕೆಲವು ಕಾಲ ನಲಿದಾಟ ಮಾಡದ ಹೊರ್ತು ಸಾಧುವಾಗದಂತೆಯೇ, ಆ ಪ್ರಜೆಯದೊಂದು ಪಾಲು ಹೊಸತಾಗಿ ಬಂದ ಸ್ವಾತಂತ್ರ್ಯದಲ್ಲಿ ಮಿತಿ ಮೀರಿ ಕುಣಿದಾಡಿತು. ಇದಕ್ಕೆ ದೃಷ್ಟಾಂತವೇನಂದರೆ, ಸಕ್ಸೆನು ದೇಶದ ತ್ಸ್ವಿಕೌಕ್ವೆಂಬ ಪಟ್ಣದಲ್ಲಿಯೂ ಇತರ ಹಲವು ಸ್ಥಳಗಳಲ್ಲಿಯೂ ಅನಬಪ್ತಿಸ್ತರು ಅಂದರೆ ಪುನಃಸ್ನಾನಿಕರು ಎದ್ದರು; ಇವರು, ಬಾಲ್ಯದಲ್ಲಿ ಕ್ರೈಸ್ತ ಸ್ನಾನ ಹೊಂದಿದವರಿಗೆ ಇನ್ನೊಮ್ಮೆ ಪ್ರಾಯದಲ್ಲಿ ಆ ಪರಿಶುದ್ಧ ಸಂಸ್ಕಾರ ಮಾಡ ಬೇಕೆಂತ, ಚರ್ಚಿಸಿದ್ದು ಮಾತ್ರವಲ್ಲದೆ, ಕ್ರಿಸ್ತನೊಬ್ಬನೇ ಆಳ ಬೇಕೆಂತ, ಪಪ್ಪನಿಗೆ ಹೊರ್ತಾಗಿ ಲೌಕಿಕ ಸಕಲ ಅಧಿಕಾರಸ್ಥರಿಗೂ ವಿರೋಧಿಸುವವರಾದರು; ಅವರಲ್ಲೊಬ್ಬನಾದ ಥೋಮ ಮುಯಿಂಚರನೆಂಬವನು ತಮ್ಮ ಧನಿಗಳಿಗೆ ಅಲ್ಲಲ್ಲಿ ಎದುರೆದ್ದು ಬಿಗಿ ದಾಸತ್ವದಿಂದ ಬಿಡಿಸಿ ಕೊಳ್ಳಲೊದ್ದಾಡುವ ಗೆರ್ಮಾನ ರಯಿತರ ಪಕ್ಷದವನಾಗಿ, ಗುಲ್ಲು ಹುಟ್ಟಿಸಿದನು. ಆದರೆ ಲುಥರನು ಮೊದಲಾದ ಪುನಃಸ್ಥಾಪಕರ ಮತ್ತು ರಾಜರ ಕಾಲೋಚಿತವಾದ ಬಲು ಪ್ರಯತ್ನಗಳಿಂದ ಕ್ರಿ. ಶ. 1525ನೇ ವರುಷದಲ್ಲೂ 1535ನೇದರಲೂ ಅಂಥಾ ಕಲಹಗಳು ವಿಲಂಬವಿಲ್ಲದೆ ಅಣಗಿ ಹೋದವು; ಸುರಸದ ಮೇಲೆ ತೆರೆಯು ಕಟ್ಟಿ ಇದು ಬಿಸುಟ ಹೊರ್ತು ಆ ಸುರಸವು ಹ್ಯಾಗೆ ನಿರ್ಮಲವಾಗುವದಿಲ್ಲವೋ, ಹಾಗೆಯೇ ದೇವರು ತನ್ನ ಪುನಃಸ್ಥಾಪನಾಕಾರ್ಯದ ಶುದ್ಧಿಗಾಗಿ ಆ ಕಲಹಗಳೆಂಬ ತೆರೆಯು ಕಟ್ಟಲೀಸಿ, ಬಳಿಕ ಸತ್ಯದ ಮತ್ತು ನೀತಿಯ ಬಲದಿಂದ ಅದನ್ನು ಪರಿಹರಿಸಿದಂತಾಯಿತು.

ಕ್ರಿ. ಶ. 1522ನೇ ವರುಷ ಲುಥರನು ವರ್ತ್ಬುರ್ಗನ್ನು ಬಿಟ್ಟು, ವಿತ್ತೆನ್ಬೆರ್ಗಿಗೆ ತಿರುಗಿದ ಹಿಂದೆ ಅವನು ಹೊಸ ಒಡಂಬಡಿಕೆಯ ತನ್ನ ಗೆರ್ಮಾನ ಭಾಷಾಂತರವನ್ನು ಮುಖ್ಯವಾಗಿ ಮೆಲಂಖ್ಥೋನನ[1] ಸಹಾಯದೊಡನೆ ಇನ್ನೊಮ್ಮೆ ಸ್ಫುಟ ಮಾಡಿ, ತಡೆಯದೇ ಛಾಪೆಗೆ ಕೊಟ್ಟನು. ಆಗ ಮುದ್ರಿತವಾದ 3000 ಪ್ರತಿಗಳು ಸ್ವಲ್ಪ ತಿಂಗಳೊಳಗೆ ಮಾರಿ ಹೋದವು; 10 ವರುಷದಿತ್ತ ಆ ಭಾಷಾಂತರದ 50ಕ್ಕಿಂತ ಹೆಚ್ಚು ಮುದ್ರಾವರ್ತನೆಗಳು ಆಗಿದ್ದವು. ಕಾಲಗತಿಯಿಂದ ಲುಥರನು ಮೆಲಂಖ್ಥೋನ ಮುಂತಾದ ಕೆಲವರು ಗೆಳೆಯರ ಒತ್ತಾಸೆಯಿಂದ ಹಳೆಯೊಡಂಬಡಿಕೆ

1) 423ನೇ ಪಾನು.

ಯನ್ನು ಭಾಷಾಂತರೀಕರಿಸಿದಂದು ಕ್ರಿ. ಶ. 1544ನೇ ವರುಷಕ್ಕೆ ಸಂಪೂರ್ಣ ಪರಿಶುದ್ಧ ಬರಹವು ಮೊದಲಿನ ಸಾರಿ ಗೆರ್ಮಾನ ಭಾಷೆಯಲ್ಲಿ ಮುದ್ರಿಸಲಾಯಿತು; 40 ವರುಷದೊಳಗೆ ಒಂದೇ ಮುದ್ರಾಶಾಲೆಯಿಂದ ದೇವವಾಕ್ಯದ 1,00,000 ಪ್ರತಿಗಳು ಹೊರಟವು. ಕ್ರಿ. ಶ. 1521ನೇ ವರುಷದಲ್ಲಿಯಾದರೂ ಮೆಲಂಖ್ಥೋನನು ದೇವವಾಕ್ಯಕ್ಕನುಗುಣವಾಗಿ ರಕ್ಷಣಕ್ರಮವನ್ನು ಒಂದು ಗ್ರಂಥದಲ್ಲಿ ಬರೆದು, ಅದನ್ನು ಪ್ರಕಟಿಸಿದ್ದನು.

ಅದೇ ವರುಷದಲ್ಲಿ 10ನೇ ಲೆಯೋನ ಪಪ್ಪನು ಸತ್ತು, 6ನೇ ಹದ್ರಿಯಾನನು ಅವನ ಉತ್ತರೋದ್ಯೋಗಿಯಾದನು. ಇವನು, ತನ್ನ ಸಭೆಯಲ್ಲಿ ಹ್ಯಾಗೂ ಅನೇಕ ಬಾಹಿರವಾದ ಅಪಕಾರ್ಯಗಳು ನಡೆಯುತ್ತವೆಂತ, ಅರಿತು, ಅವನ್ನು ಪರಿಹರಿಸಬೇಕೆಂಬಂತೆ ಗೆರ್ಮಾನಿಯದ ನುಯಿರ್ನ್ಬೆರ್ಗ್ ಪಟ್ಣದಲ್ಲಿ ಕೂಡಿದ ರಾಜ್ಯಸಭಾಸದಸಿನವರಿಗೆ ತಿಳಿಸಲು, ಅವರು—ಅಷ್ಟು ಮಾತ್ರ ಸಾಲದು, ಹೆಚ್ಚು ತಿದ್ದುಪಾಟವಾಗ ಬೇಕು! ಎಂದು, ಬೆಸಸಿದರು. ತರುವಾಯ ಆ ಪಪ್ಪನು, ವೊರ್ಮ್ಸಿನ ನಿರ್ಣಯವನ್ನು ಯಾಕೆ ನಡಿಸಲಿಲ್ಲವೆಂತ, ಕೇಳುವಾಗ ಅವರು—ಒಳ್ಳೇ ಕಾರಣವಿಲ್ಲದೆ ಅದನ್ನು ನಡಿಸದಿರುವದಿಲ್ಲ; ಗೆರ್ಮಾನ ಜನಾಂಗದವರ ಸಕಲ ಸ್ಥಿತಿಯವರಿಗೆ ರೋಮದ ನಾನಾ ವಿಧವಾದ ದುರಾಚಾರಗಳಿಂದ ಅಸಹ್ಯ ಭಾರವಾಯಿತು; ಅವರಿಗೆ ಈಗ ಲುಥರನ ಗ್ರಂಥಗಳ ಮೂಲಕ ಹೆಚ್ಚು ಬುದ್ಧಿ ಬಂದದೆ; ಒತ್ತಾಯದಿಂದ ಸೌವಾರ್ತಿಕ ಸತ್ಯವನ್ನು ಅಣಗಿಸ ಗೊಡುವದಕ್ಕೆ ತಮಗೆ ಮನಸ್ಸಿಲ್ಲ! ಎಂದು, ಉತ್ತರ ಕೊಟ್ಟರು. ಆದರೆ ಪಪ್ಪಕ ಮತೋದ್ಯೋಗಿಗಳು ಅಲ್ಪ ಪುನಃಸ್ಥಾಪನೆಯ ಕಾಂಕ್ಷೆ ತೋರಿಸಿದಂಥ ಆ ಹದ್ರಿಯಾನನಿಗೂ ಮುನಿಯುವವರಾಗಿರಲು, ಹ್ಯಾಗೋ ಬೇಗನೇ ಮಡಿದನು. ಅವನಿಗೀಚೆ ಪಪ್ಪತ್ವಕ್ಕೆ ಬಂದು, ಕ್ರಿ. ಶ. 1534ನೇ ವರುಷದ ವರೆಗೆ ಅದರಲ್ಲಿರುತ್ತಿದ್ದ 7ನೇ ಕ್ಲೇಮೆಂತನು ಅದೇ ಪಟ್ಣದ ರಾಜ್ಯಸಭಾಸದಸಿನವರಿಗೆ, ಸೌವಾರ್ತಿಕರೆಂಬ ಕಥರರನ್ನು ಹ್ಯಾಗೂ ಕಾಣದಂತೆ ಮಾಡ ಬೇಕೆಂದು, ವಿಧಿಸಿದನು; ಅದಕ್ಕವರು ಉತ್ತರ ಕೊಟ್ಟದ್ದೇನು—ವೊರ್ಮ್ಸಿನ ನಿರ್ಣಯವನ್ನು ತಮ್ಮಿಂದಾಗುವಷ್ಟರ ಮಟ್ಟಿಗೆ ಕೈಕೊಂಡಿರುವೆವು; ಅಷ್ಟರಲ್ಲಿ ಕೀಳಿನ ಸಂಗಡ ಮೇಲು ಸಹ ಕೆಡದ ಹಾಗೆ ದೇವರ ವಾಕ್ಯದ ಸುವಾರ್ತೆಯು ನಿಜ ಸದಭಿಪ್ರಾಯಕ್ಕನುಗುಣವಾಗಿ ಪ್ರಸಂಗವಾಗ ಬೇಕು.—

ಹೀಗಿರಲಾಗಿ, ಗೆರ್ಮಾನಿಯ ರಾಜ್ಯದಲ್ಲಿ ಪುನಃಸ್ಥಾಪನೆಯ ಕಾರ್ಯಕ್ಕೆ ಆಗ ಎಂತೂ ಅಡ್ಡಿಯಾಗಲಿಲ್ಲ; ಮುಖ್ಯವಾಗಿ ಅನ್ಯೋನ್ಯಜೀವಭ್ರಾತೃಗಳ ಸಮಾಜಗಳಿರುವ[1] ಪಟ್ಣಗಳಲ್ಲಿ ಅದು ನೆಲೆಗೊಂಡಿತು; ಇಂತು ಸರ್ವ ದಿಕ್ಕಿನ ರಾಜ್ಯಪಟ್ಣಗ

1) 410, 411, 413ನೇ ಪಾನು.

ಳೆಂಬ ಬಲು ಸ್ವಾತಂತ್ರ್ಯವುಳ್ಳಂಥ ಪಟ್ಣಗಳಲ್ಲಿ ಪುನಃಸ್ಥಾಪನೆಯನ್ನು ಆಯಾ ಪಟ್ಣವಾಸಿಸಂಘದವರ ಆಜ್ಞೆಯ ಮೇಲೆ ಶೇರಿಸಲಾಯಿತು. ಇಂಥಾ ಕಡೆಗಳಲ್ಲಿ ದೇವವಾಕ್ಯದ ಪ್ರಸಂಗವು ಗೆರ್ಮಾನ ಭಾಷೆಯಿಂದ ಆಗುವದು; ಪಪ್ಪನ ಅಧಿಕಾರ ತಳ್ಳಿ ಹೋಯಿತು; ಸಭೋದ್ಯೋಗಿನಿರ್ವಿವಾಹಿತ್ವಾಜ್ಞೆ ತೆಗೆಯಲಾಯಿತು; ಸಭೋದ್ಯೋಗಿಗಳು ತಾವು ಇಟ್ಟು ಕೊಂಡ ಸ್ತ್ರೀಯರನ್ನು ಬಿಡಿಸಿ, ನೀತಿಚರ್ಯೆಗನುಸರಿಸ ಬೇಕು; ಮಿಸ್ಸಯಾಗವು ಇಲ್ಲವಾಯಿತು; ಪರಿಶುದ್ಧ ರಾತ್ರಿಭೋಜನವನ್ನು ಉಭಯ ಸಾಹಿತ್ಯವಾಗಿ ಕೊಡುವರು; ಸಂತರ ಪೂಜೆಯು ಮಟ್ಟಾಯಿತು; ಇತ್ಯಾದಿ.

ವಿಶೇಷವಾಗಿ ಜ್ಞಾನಿ ಫ್ರೀದೆರೀಕ ಪ್ರಭುವಿನ ರಾಜ್ಯವಾದ ಸಕ್ಸೆನಿನಲ್ಲಿ ಪುನಃಸ್ಥಾಪನೆಯ ಕಾರ್ಯವು ಬೇಗ ಸಾಗುತ್ತಾ ಬಂತು. ತನ್ನ ಮಠಿಕಕುಲದವರು ಮಠವನ್ನು ಬಿಟ್ಟ ಮೇಲೆ ಲುಥರನು ಸಹ ಕ್ರಿ. ಶ. 1524ನೇ ವರುಷ ಮಠಿಕತ್ವವನ್ನಗಲಿ, ವಿತ್ತೆನ್ಬೆರ್ಗಿನ ಮಠದ ಅಗ್ರಹಾರ ಆಸ್ತಿಗಳೆರಡನ್ನು ಫ್ರೀದೆರೀಕನ ಕೈಗೆ ಒಪ್ಪಿಸಿದನು. ಆ ಬಳಿಕ ಬೇರೆ ಶೀಮೆಗಳ ಹೇರಳ ಮಂದಿ ಗಂಡು ಹೆಣ್ಣು ಮಠಿಕರು ಸಹ ತಮ್ಮ ತಮ್ಮ ಮಠಗಳಿಂದ ಹೊರಟು, ಪ್ರಯೋಜನಕರವಾದ ಗೃಹಸ್ಥ ಧರ್ಮಕ್ಕೆ ತಿರುಗಿದರು. ತದನಂತರ ಲುಥರನ ಹಲವರು ಮಿತ್ರರು, ಹೆಚ್ಚಾಗಿ ಅವನ ತಂದೆಯು, ಒಳ್ಳೇ ದೃಷ್ಟಾಂತಕ್ಕೋಸ್ಕರ ಮದಿವೆ ಮಾಡಿ ಕೊಳ್ಳೆಂದು, ಲುಥರನನ್ನು ಬೇಡಿ ಕೊಳ್ಳುತ್ತಿದ್ದರು. ಮಠೋದ್ಯೋಗಿಗಳ ಅವಿವಾಹಿತ್ವದ ನಿಯಮವು ಅತಿರೇಕ ನೀತಿನಷ್ಟಕ್ಕೆ ಮೂಲವೆಂಬದು ಲುಥರನಿಗೆ ಅನುಭವದ ಮೇಲೆ ಬಹು ಕಾಲದಿಂದ ತಿಳಿದಿತ್ತು; ಅದಲ್ಲದೆ, ಮಠೋದ್ಯೋಗಿಗಳು ವಿವಾಹಸ್ಥಿತಿಯಲ್ಲಿಯೂ ಸಭ್ಯರಿಗೆ ಉತ್ಕೃಷ್ಟ ಮಾದರಿ ತೋರಿಸ ಬೇಕೆಂತ, ಅವನಿಗೆ ದೇವವಾಕ್ಯದ ಮೇಲೆ[1] ಸಿದ್ಧಾಂತವಾಗಿತ್ತು. ಹೀಗಿರಲಾಗಿ ಅವನು ಕ್ರಿ. ಶ. 1525ನೇ ಅಬ್ದ ಬೋರದ ಕಥರೀನಳನ್ನು ವಿವಾಹ ಮಾಡಿ ಕೊಂಡು, 21 ವರುಷವೇ ದೇವರ ದಯೆಯಿಂದ ಅವಳೊಡನೆ ಸುಖಿಯಾಗಿ ಬದುಕುತ್ತಾ, ತೆರ್ತುಲ್ಲಿಯಾನ ಸಭಾಪಿತನು[2] ವರ್ಣಿಸಿದ ವಿವಾಹಸ್ಥಿತಿಗತಿಯ ಚಂದ ಮಾದರಿಯನ್ನು ತೋರಿಸುತ್ತಾ ಇದ್ದನು[3].

---

1) 1 ತಿಮೊ. 3, 1—6; 11—12. 2) 270ನೇ ಪಾನು. 3) ಮಹಾ ಪುಣ್ಯವುಳ್ಳ ಭಕ್ತಿ ಎಂತ, ಹೇಳಿ ಕ್ರಿಸ್ತನಾಥನ ಹೆಸರಿನಲ್ಲಿ ಅವಿವಾಹಿತ್ವಾಜ್ಞಾವ್ರತಪ್ರಮಾಣಗಳನ್ನಾಗಲಿ ಮಠವ್ರತಪ್ರಮಾಣಗಳನ್ನಾಗಲಿ ಮಾಡುವದು ಕ್ರಿಸ್ತವಾಕ್ಯಕ್ಕೆ ಪ್ರತಿಕೂಲವಾದದಾಗಿದೆ, ಅಂಥಾದ್ದರಿಂದ ಕ್ರಿಸ್ತನ ಆತ್ಮವನ್ನು ದುಃಖ ಪಡಿಸುವ ಹಾಗಾಗುತ್ತದೆ (cf. ಮತ್ತಾ. 11, 11); ಯಾವ ಯಾವ ಸ್ಥಿತಿಯವನಾದರೂ ಒಬ್ಬೊಬ್ಬ ಸತ್ಕ್ರೈಸ್ತನು ದೇವರಿಗೆ ಒಂದೇ ರೀತಿಯಾಗಿ ಮೆಚ್ಚುತ್ತಾನೆ, ಇದರಲ್ಲಿ ಒಂದಿಷ್ಟು ಹೆಚ್ಚುಕಡಿಮೆ ಇಲ್ಲ; ಅದು ಹೊರ್ತಾಗಿ ದೇವರ ಭಕ್ತಿಯು ಆತ್ಮೀಯವಾದ್ದು (ಯೋಹಾ. 4, 21—24; 6, 63; 1, 17; 2 ಕೊರಿ. 3, 6—8. 17). ಹೀಗಿರುವದರಿಂದ ತಮಗೆ ಸಜ್ಜ್ಞಾನದ ಕೊರತೆ ಇದ್ದ ಕಾಲ ಕ್ರಿಸ್ತನ ನಾಮದಲ್ಲಿ ಹಿಂದೆ ಹೇಳಿದ ಪ್ರಮಾಣಗಳಲ್ಲೊಂದನ್ನಾಗಲಿ ಅವೆರಡನ್ನಾಗಲಿ

ಅವನು ವಿವಾಹಸ್ಥಿತಿಯಲ್ಲಿ ಶೇರುವದಕ್ಕೆ ಸ್ವಲ್ಪ ಕಾಲ ಮುಂಚೆ ಜ್ಞಾನಿ ಪ್ರೀದೆರೀಕನು ಪರಿಶುದ್ಧ ರಾತ್ರಿಭೋಜನವನ್ನು ಉಭಯ ಸಾಹಿತ್ಯಗಳಿಂದಾಸ್ವಾದಿಸಿಕೊಂಡು, ತೀರಿದ್ದನು; ಆಗ ದೃಢವ್ರತ ಯೋಹಾನನೆಂಬ ಅವನ ತಮ್ಮನು ರಾಜಸ್ವೀಕಾರ ಪ್ರಭುವಾದನು. ಇವನು ಬಹಿರಂಗದಲ್ಲಿ ಸೌವಾರ್ತಿಕ ಕ್ರೈಸ್ತನಾಗಿ, ತನ್ನ ದೇಶದಲ್ಲಿ ಸೌವಾರ್ತಿಕವಾದ್ದೊಂದು ಹೊಸ ದೇವಾರಾಧನಾಕ್ರಮವನ್ನು ನಿರ್ಮಿಸಿಡ ಬೇಕೆಂದು, ಆಜ್ಞಾಪಿಸಿದನು. ಆದ್ದರಿಂದ ಲುಥರನು ಅಂಥಾದ್ದೊಂದನ್ನು ಪರಿಶುದ್ಧ ಬರಹದ ಮೇಲೆ ರಚಿಸಿ ಕೊಟ್ಟನು. ಅದರ ಪ್ರಕಾರ ಲತೀನ ಭಾಷೆಯು ದೇವಾಲಯಗಳಿಂದ ಹೋಯಿತು; ಮಿಸ್ಸಯಾಗಕ್ಕೆ ಬದಲಾಗಿ ಸರ್ವರಿಗೂ ಉಭಯ ಸಾಹಿತ್ಯಗಳುಳ್ಳ ರಾತ್ರಿಭೋಜನವು ತಿರಿಗಿ ಸ್ಥಾಪಿತವಾಯಿತು; ಸುವಾರ್ತಾಪ್ರಸಂಗವೇ ವಿಶೇಷವಾಯಿತು. ಎರಡು ವರುಷಕ್ಕೀಚೆ ಅಂದರೆ ಕ್ರಿ. ಶ. 1528ನೇದರಲ್ಲಿ ಲುಥರನೂ ಇತರ ಕೆಲವು ಮಂದಿ ರಾಜಕ ಮತಕ ಧನಿಗಳೂ ಯೋಹಾನ ಪ್ರಭುವಿನ ಅಪ್ಪಣೆ ಪಡೆದು, ಸರ್ವ ಸಕ್ಸೆನಿನಲ್ಲಿಯ ಸಭೆಗಳನ್ನೂ ಶಾಲೆಗಳನ್ನೂ ಪರೀಕ್ಷಿಸುವಾಗ ಅಲ್ಲಲ್ಲಿ ವಿವಿಧದ ಕುಂದು ಕೊರತೆಗಳಿರುವದು ಕಂಡು ಬಂತು. ಈ ದುಃಸ್ಥಿತಿಯನ್ನು ಪರಿಹರಿಸಲಿಕ್ಕೆ ಲುಥರನು ಬೋಧಕರಿಗೂ ಉಪಾಧ್ಯಾಯರಿಗೂ ಒಂದು ದೊಡ್ಡ ಬೋಧನಾಗ್ರಂಥವನ್ನು, ಸಭ್ಯರಿಗೂ ಬಾಲರಿಗೂ ಒಂದು ಸಣ್ಣದನ್ನು ಬರೆದು ಕೊಟ್ಟನು; ಇವೆರಡು ಪ್ರಶಸ್ತವಾದ ಗ್ರಂಥಗಳಿಂದಲೂ ದೇವವಾಕ್ಯದ ಗೆರ್ಮಾನ ಭಾಷಾಂತರದಿಂದಲೂ ಅತಿಶಯ ಆಶೀರ್ವಾದ ಬಂತು. ಅದಲ್ಲದೆ ಮಠಿಕರ ಮಠಗಳಿದು ಅನಾಯಕವಾದ ಸೊತ್ತು ಲುಥರನು ಕಟ್ಟಿದ್ದೊಂದು ಶಾಲಾಕ್ರಮದ ಮೇರೆಗೆ ಹೊಸ ಶಾಲೆಗಳ ನಿರ್ಮಾಣಕ್ಕೂ ಉಪಾಧ್ಯಾಯರ ಸಂಬಳಕ್ಕೂ ನೇಮಕವಾಯಿತು.

---

ಇಟ್ಟಂಥವನು ಕ್ರಿಸ್ತನಾತ್ಮದ ಸಹಾಯದಿಂದ ಸಜ್ಞಾನೋದಯ ಕಂಡಾಗಲೇ ದುಃಖ ಪಟ್ಟು, ಮನೋವಾಕ್ಕಾಯದಿಂದ ತಮ್ಮ ತಪ್ಪನ್ನು ನಿವೇದಿಸ ಬೇಕು; ಹಾಗೆ ಮಾಡದಿದ್ದರೆ ಅವರ ಪ್ರಮಾಣವು ಹೇರೋದ ಅಂತಿಪನದರಂತಾಗುವದು (ಮತ್ತಾ. 14, 1 — 13; 33ನೇ ಪಾನು). ತಮ್ಮ ತಮ್ಮ ತಪ್ಪನ್ನರಿಸುವದಕ್ಕೂ ಇನ್ನು ಮುಂದೆ ಸುವಾರ್ತೆಗೆ ಪೂರಾ ಅನುಸರಿಸುವದಕ್ಕೂ (ಕ್ರೈಸ್ತರಾಗುವ ವಿಗ್ರಹಾರಾಧಕರಾಗಲಿ ಮೊಹಮ್ಮದಿಯರಾಗಲಿ ಯೆಹೂದ್ಯರಾಗಲಿ ಒಂದು ವಿಧವಾಗಿ ಮಾಡ ಬೇಕಾಗುವಂತೆ) ಲುಥರನೂ ಅವನ ಜ್ಞಾನವುಳ್ಳ ಬೇರೆ ಮಂದಿ ಬೋಧಕರೂ ಗಂಡು ಮತ್ತು ಹೆಣ್ಣು ಮಠಿಕರೂ ಪಪ್ಪಕಧರ್ಮಪ್ರಮಾಣವನ್ನಗಲಿ, ಮಠಗಳೊಳಗಿಂದ ಹೊರಟು, ಅವಿವಾಹಿತ್ವಾಜ್ಞೆಗಳನ್ನು ತೊಲಗಿ ಬಿಟ್ಟರು; ಇಂತು ನಡೆಯುವದಕ್ಕೆ ಅವರವರನ್ನು. ಪರಿಶುದ್ಧ ಬರಹಕ್ಕೆ ಪ್ರತಿಕೂಲವಾದ ಧರ್ಮದಿಂದ ಅನಿಷ್ಟ ಫಲಗಳು ರಾಶಿರಾಶಿಯಾಗಿ ಹುಟ್ಟುತ್ತವೆಂತ, ಹೇಳುವ ದೀರ್ಘಕಾಲದ ಸ್ವಾನುಭವವು ಕೂಡ ಪ್ರೇರಿಸಿತು.— ಲುಥರನು ತಡೆದು ಔಗುಸ್ತೀನರ ಮಠ ಬಿಟ್ಟು ಹೋದದು ತೋರಿಸುವದೇನಂದರೆ — ಈ ಮಠಿಕರು ಅಷ್ಟು ಕೆಟ್ಟವರಾಗಿರಲಿಲ್ಲವೆಂಬದೊಂದು (410ನೇ ಪಾನು); ಸತ್ಯವೇನೆಂತ ಕಂಡು ಕೊಳ್ಳಲಿಕ್ಕೆ ನಿತ್ಯದಲ್ಲಿ ಪ್ರಯತ್ನಿಸುತ್ತಿರುವ ಲುಥರನ ಜ್ಞಾನವು ಅಡಿಗಡಿಗೆ ಅರಳುತ್ತಿತ್ತೆಂಬದು ಮತ್ತೊಂದು.

ಲುಥರನೂ ಅವನ ಸಹಾಯಕರೂ ಮಾಡಿದ ಒಂದು ಹೊಸ ಸಭಾಪರಿಪಾಲನಕ್ರಮವನ್ನು ಕುರಿತು ಹೇಳ ತಕ್ಕದ್ದೇನಂದರೆ, ಸರ್ವ ಕ್ರೈಸ್ತರ ಯಾಜಕತ್ವವು[1] ತಿರಿಗಿ ಸ್ಥಾಪಿತವಾಯಿತು; ಸಭೋದ್ಯೋಗಿಗಳು ಸಭೆಗಳ ಧನಿಗಳಾಗಿರುವದು ತೀರಿತು, ಅವರು ಮರಳಿ ಅವುಗಳ ಸೇವಕರಾದರು[2]; ಅವರ ಲೌಕಿಕ ಅಧಿಕಾರವು ಹೋಯಿತು; ಸುವಾರ್ತೆಯನ್ನು ಸಾರುವದೂ ಅದರ ಆಧಾರದಿಂದಲೇ ಪಾಪಪರಿಹಾರವನ್ನು ವಾಕ್ಕಿನಲ್ಲಿ ತಿಳಿಸುವದೂ ಸ್ನಾನ ರಾತ್ರಿಭೋಜನಗಳೆಂಬ ಪರಿಶುದ್ಧ ಸಂಸ್ಕಾರಗಳೆರಡನ್ನು ಕ್ರಿಸ್ತನಿಂದ ನಿರ್ಮಿತವಾದಂತೆಯೇ ಕೊಡುವದೂ ಸೌವಾರ್ತಿಕ ಬೋಧನೆಯನ್ನು ಶುದ್ಧತೆಯಿಂದುಳಿಸುವದೂ ತಿದ್ದುಪಾಟವಾಗದಂಥ ದುಷ್ಟರನ್ನು ದೇವವಾಕ್ಯ ಆಧಾರವನ್ನೀಯುವ ಪ್ರಕಾರ ಬಹಿಷ್ಕರಿಸುವದೂ ಇಷ್ಟು ಅವರ ಭಕ್ತಿಯುಕ್ತವಾದ ಸೇವಾರ್ಥವು. ಮಠಿಕತ್ವದ ಮತ್ತು ಸಭೋದ್ಯೋಗಿಗಳ ಅವಿವಾಹಿತ್ವದ ಆಜ್ಞೆಗಳನ್ನು ಬೇರೊಂದಿಗೆ ಕೀಳಲಾಯಿತು.—ದೇವಾಲಯ ಶಾಲೆ ಸಭೆಗಳಲ್ಲಿ ಸಲ್ಲ ತಕ್ಕ ಆ 3 ಕ್ರಮಗಳ ರಕ್ಷಣೆಕ್ಕೋಸ್ಕರ ಸಕ್ಸೆನು ದೇಶದಲ್ಲೂ ಸುವಾರ್ತೆ ತಿರಿಗಿ ಶೇರಿದ ಬೇರೆ ದೇಶಗಳಲ್ಲೂ ರಾಜನ ಸಹಾಯವನ್ನಪೇಕ್ಷಿಸುವದು ಅಂದು ಅವಶ್ಯವಾಯಿತು; ಶಾಲೆ ದೇವಾಲಯಗಳನ್ನು ಕಟ್ಟುವದಕ್ಕೂ ಮಕ್ಕಳಿಗೆ ಕ್ರೈಸ್ತ ಉಪದೇಶ ಹೇಳಿಸುವದಕ್ಕೂ ಬೋಧಕರಿಗೆ ಮತ್ತು ಉಪಾಧ್ಯಾಯರಿಗೆ ಸಂಬಳ ಕೊಡುವದಕ್ಕೂ ಆದಿತ್ಯವಾರವನ್ನು, ಕರ್ತನ ದಿವಸವೆಂದು, ಶುದ್ಧೀಕರಿಸುವದಕ್ಕೂ ದರಿದ್ರಪೋಷಣವನ್ನು ಮಾಡುವದಕ್ಕೂ ಈ ಮೊದಲಾದ ಬಾಹಿರವಾದ ಕ್ರೈಸ್ತ ಹಂಗುಗಳನ್ನು ತೀರಿಸುವದಕ್ಕೆ ತನ್ನ ಪ್ರಜೆ ನಡಿಸುವ ಅಧಿಕಾರವನ್ನು ಆಯಾ ದೇಶದ ರಾಜನಿಗೊಪ್ಪಿಸಲಾಯಿತು; ದೊಡ್ಡ ಕೊನ್ಸ್ತಂತೀನ ಕೈಸರನ ಕಾಲದಲ್ಲಿ ಉದ್ಭವಿಸಿದ ಕ್ರಮದೋಪಾದಿಯಲ್ಲಿ[3] ರಾಜರು ಹಾಗೆ ಪ್ರಧಾನಾಧ್ಯಕ್ಷರೆಂಬಂತೆ ಮೇಲ್ವಿಚಾರಕರಾದರೂ ಅವರು ಸಭೋದ್ಯೋಗಿಗಳ ಆಲೋಚನೆ ಕೇಳಿ, ತಮ್ಮ ಪಾಲಿಗೆ ಬಂದ ಸಭಾಪರಿಪಾಲನ ಗೈಯ ಬೇಕು. ಈ ಉದ್ದಿಶ್ಯಕ್ಕಾಗಿ ಒಂದೊಂದು ದೇಶದಲ್ಲಿ ಒಂದು ಕೊನ್ಸಿಸ್ತೋರಿಯವೆಂಬ ಸಭೆಯು ನಿರ್ಮಿತವಾಯಿತು. ಈ ಸಭಾಜನರದೊಂದು ಭಾಗದವರು ಗೆನೆರಾಲ್ ಸುಪೆರಿಂತೆಂದೆಂತರು ಅಂದರೆ ಸರ್ವಸಾಧಾರಣ ಅಧ್ಯಕ್ಷರೆಂಬ ಮತಕ ಉದ್ಯೋಗಿಗಳು, ಮತ್ತೊಂದು ಭಾಗದವರು ರಾಜಕ ಉದ್ಯೋಗಿಗಳು; ಈ ಕೊನ್ಸಿಸ್ತೋರಿಯದವರು ನಿರ್ಣಯಿಸುವದನ್ನು ಸುಪೆರಿಂತೆಂದೆಂತರೆಂಬ ಒಳಅಧ್ಯಕ್ಷರು ನಡಿಸುತ್ತಾ, ಶಾಲೆ ಸಭೆಗಳನ್ನು ಪರೀಕ್ಷಿಸುತ್ತಾ, ಕೆಳಗಿನ ಸಭೋದ್ಯೋಗಿಗಳ ಪ್ರತಿಷ್ಠೆ ಮುಂತಾದ ಕೆಲವು ಮತಕ ಪ್ರತಿಷ್ಠೆಗಳನ್ನು ಗೈಯುತ್ತಾ ಇರ ಬೇಕು. ಕೊನ್ಸಿಸ್ತೋರಿಯದವರ ಹತ್ತರ ಬೋಧನೆಯನ್ನೂ ದೇ

1) 423ನೇ ಪಾನು. 2) 367ನೇ ಪಾನು. 3) 181ನೇ ಪಾನು.

ವಾರಾಧನಾಕ್ರಮವನ್ನೂ ಬೋಧಕೋದ್ಯೋಗಿಗಳ ಮತ್ತು ಸಭೆಗಳ ನೀತಿಚರ್ಯೆಯನ್ನೂ ಬೋಧಕೋದ್ಯೋಗಿಗಳ ಹಕ್ಕು ಹಂಗುಗಳನ್ನೂ ವಿವಾಹವ್ಯವಹಾರಗಳನ್ನೂ ಸಂದೇಹಕರವಾದ ಸಭಾಶಿಕ್ಷೆಯನ್ನೂ ಮುಂತಾದದ್ದನ್ನು ಕುರಿತು ಸಹ ಹುಟ್ಟುವ ಪ್ರಶ್ನೆಗಳು ಹೋಗ ಬೇಕು. ಕೊನ್ಸಿಸ್ತೋರಿಯದವರು ಅಂಗೀಕಾರಕ್ಕಿಟ್ಟ ಬೋಧಕರಲ್ಲಿ ರಾಜನು ತನಗೆ ಸರಿ ಬೀಳುವಂಥವನನ್ನು ಆರಿಸಿರಿಸ ಬೇಕು; ಸಭ್ಯರು ಕೊನ್ಸಿಸ್ತೋರಿಯದವರ ಅಂಗೀಕಾರಕ್ಕೆ ತಾವು ಆರಿಸಿ ಕೊಂಡ ಒಬ್ಬನನ್ನಿಟ್ಟು, ಅವರಿಂದ ಸ್ಥಾಪನೆ ಮಾಡಿಸಿ ಕೊಳ್ಳುವದು ಸಹ ಒಂದೊಂದು ಕಡೆಯಲ್ಲಿ ನಡಿಯುವದು. ಇಂಥಾದ್ದು ಶೇರಿದ್ದೊಂದು ಸಭಾಪರಿಪಾಲನಕ್ರಮವು ಕೊನ್ಸಿಸ್ತೋರಿಯಾಲವಾದದ್ದೆನ್ನಿಸುತ್ತದೆ.

ಲುಥರನೂ ಅವನ ಸಂಗಡಿಗರೂ ರಾಜಾಧಿಕಾರ ಸಹ ಹೊಕ್ಕ ಆ ಪ್ರಕಾರದ ಸಭಾಪರಿಪಾಲನವನ್ನು ಕಟ್ಟುವಲ್ಲಿ ಪೂರ್ಣ ತೃಪ್ತಿ ಪಡಲಿಲ್ಲ; ಅವರು ತತ್ಕಾಲಕ್ಕೆ ಅದನ್ನು ನಡಿಯ ಗೊಟ್ಟರು. ಅವರು ಹೇಳುತ್ತಿದ್ದದೇನಂದರೆ—ಕ್ರೈಸ್ತ ಸಭೆಯ ಅಂತರಂಗವನ್ನು ಮೊದಲು ಶುದ್ಧ ಮಾಡಿರಿ, ಆ ಮೇಲೆ ಬಹಿರಾಕಾರವು ತಾನೇ ಶುದ್ಧವಾಗುವದು; ಸುವಾರ್ತೆಯು ಬಲ ಹೊಂದುತ್ತಾ ಬರಲು, ಸಭಾಪರಿಪಾಲನವು ತಾನೇ ತಿದ್ದುವಿಕೆಗೆ ಬರುವದಲ್ಲ?—ಲುಥರನ ಅಧ್ಯಕ್ಷತೆಯಲ್ಲುದ್ಭವಿಸಿದ ಸಭಾಪರಿಪಾಲನದ ಮೇರೆಗೆ ಸಾಧಾರಣ ಸಭ್ಯರ ಆಲೋಚನೆಗಳಿಗೆ ಬಹಳ ಇಂಬು ಶಿಕ್ಕದ್ದರಿಂದ ಈ 19ನೇ ಕ್ರೈಸ್ತ ಶತಮಾನ ಗೆರ್ಮಾನಿಯದಲ್ಲಿ ಅವರೊಳಗೆ ಹಿರಿಯರೆಂಬವರನ್ನು ಹೆಕ್ಕಿ, ಇವರ ಕೂಟಗಳನ್ನು ನಿರ್ಮಿಸಿ, ತಕ್ಕಂಥ ಅಧಿಕಾರ ಕೊಡ ತೊಡಗಿದ್ದಾರೆ.

ಮೊದಲು ಸಕ್ಸೆನಿನಲ್ಲಿ ಸ್ಥಾಪಿತವಾದ ಹೊಸ ದೇವಾರಾಧನಾಕ್ರಮ ಶಾಲಾಕ್ರಮ ಸಭಾಪರಿಪಾಲನಕ್ರಮಗಳ ಮತ್ತು ಅವುಗಳ ಸಂಬಂಧದಲ್ಲಿರುವ ಸುವಾರ್ತಾಬೋಧನೆಯ ಸುಫಲವು ಬೇಗನೆ ಎರಡು ವರುಷ ಮಾತ್ರ ಕಳೆದಂದು ಮಿಗಿಲೇರಿತು. ಪುನಃ ಆಗ ಸೌವಾರ್ತಿಕ ಭಕ್ತಿ ಜ್ಞಾನಗಳನ್ನು ಸಭ್ಯರ ಹೃದದೊಳಗೆ ಪಸರಿಸುವಂಥಾದ್ದು ಇನ್ನೊಂದು ಯಾವದಂದರೆ, ಲುಥರನೂ ಇತರ ದೇವಭಕ್ತರೂ ಗೃಹ ಶಾಲೆ ದೇವಾಲಯಗಳ ದೇವಾರಾಧನೆಗೋಸ್ಕರ ಮಾಡಿದ ಅತ್ಯುತ್ತಮ ಗೀತಕೃತಿಗಳೇ.

ಕಾಲಕ್ರಮೇಣ ಗೆರ್ಮಾನಿಯದ ಬಡಗು ಭಾಗದ ಹೆಚ್ಚು ದೇಶಗಳಲ್ಲಿಯೂ ದೇನೆಮರ್ಕಿನಲ್ಲಿಯೂ ಸ್ವೇದೆನಿನಲ್ಲಿಯೂ ನೊರ್ವೇಗೆನಿನಲ್ಲಿಯೂ ಇನ್ನು ಬೇರೆ ಕಡೆಯಲ್ಲಿ ಸಹ ಸಕ್ಸೆನು ದೇಶದ ಆ 3 ಹೊಸ ಕ್ರಮಗಳ ಮುಖ್ಯಾಂಶ ನೆಡಲಾದ್ದರಿಂದ ಅಲ್ಲಲ್ಲಿ ನಡೆಯುತ್ತಿರುವ ಪುನಃಸ್ಥಾಪನೆಗೆ ಅಧಿಕ ಆಸ್ಪದವಾಯಿತು.

ಆದರೆ ಅಪೊಸ್ತೊಲಿಕ ಕಾಲದಿಂದಲೇ ಉಳಿದಿದ್ದ ಸೌವಾರ್ತಿಕ ಕ್ರೈಸ್ತರೂ ಮುಂದಾಗಿ ಇವರನ್ನು ಶೇರಿದವರೂ[1]—ಅಷ್ಟು ಬಹಳ ದೇಶಗಳಲ್ಲಿ ವೊಬ್ಬು ಹರಿದು, ಜನರ ಇಹಪರದ ರಕ್ಷಣೆಗಾಗಿ ಸುವಾರ್ತೆಯ ಬೆಳಕು ತಿರಿಗಿ ಪ್ರಕಾಶಿಸಲೆಸಗಿತು; ಪಪ್ಪಕ ಪಕ್ಷಸಭೆಯಲ್ಲಿದ್ದ ಅನೇಕಾನೇಕರು ಸೌವಾರ್ತಿಕವಾದ ಅಪೊಸ್ತೊಲಿಕ ಕ್ರೈಸ್ತತ್ವವನ್ನು ತಿರಿಗಿ ಅವಲಂಬಿಸುತ್ತಿದ್ಧಾರೆಂದು, ಕಂಡು, ಎಷ್ಟೋ ಉಲ್ಲಾಸಗೊಂಡರು!—

ಈ ಕಡೆ ಲುಥರನ ಜೀವಿತವನ್ನು ಇನ್ನೂ ಒಂದಿಷ್ಟು ಹೇಳುವ. ಅವನಲ್ಲಿ ತ್ಯಾಗಗುಣವು ಬಹಳ; ತನ್ನ ಪ್ರಾಪ್ತಿಯು ಕೊಂಚ ಮಾತ್ರ ಇದ್ದರೂ ಅನೇಕ ಜನ ಬಡವರಿಗೆ ಸಹಾಯ ಮಾಡುತ್ತಿರುವನು; ತನ್ನ ಕುಟುಂಬದ ರಕ್ಷಣಕ್ಕುಳಿದಿರುವ ಕಡೇ ರೂಪಾಯಿಯನ್ನಾದರೂ ಆಗಿಂದಾಗ ಕೃಚ್ಛ್ರಗಳಿಗೆ ಕೊಡುತ್ತಿರುವನು. ಒಮ್ಮೆ ಅಂಥವನೊಬ್ಬನು ತನ್ನ ಬಳಿಗೆ ಬಂದು ಬೇಡುವಲ್ಲಿ ಕೊಡಲಿಕ್ಕೆ ಬೇರೇನೂ ಕಾಣದೆ ತನಗೆ ಬಹು ಪ್ರೀತಿ ಇದ್ದದೊಂದು ಬೆಳ್ಳೀ ಪಾತ್ರವನ್ನೂ ತಂದು ಕೊಟ್ಟನು; ಮತ್ತೊಮ್ಮೆ ಅಂಥ ವೇಳ್ಯದಲ್ಲಿ ತನ್ನ ಹೆಂಡತಿಗೆ ಸುದಾಯವಾಗಿ ಶಿಕ್ಕಿದ್ದದೊಂದು ಚಲೋ ವಸ್ತುವನ್ನೂ ಇತ್ತು ಬಿಟ್ಟನು; ಇನ್ನೊಂದು ಸಮಯ ಒಬ್ಬ ದರಿದ್ರನು ಲುಥರನ ಮುಂದೆ ತನ್ನ ಕಷ್ಟ ಹೇಳಿ ಕೊಳ್ಳಲು, ಇವನು ಮನೆಯಲ್ಲಿ ಇತ್ತತ್ತು ಹುಡುಕಿ ಹುಡುಕಿ, ಕಡೆಯಲ್ಲಿ ಒಂದು ಭರಣಿಯೊಳಿರುವ ಯೊವಕೀಮ ರಾಜನ ಮುದ್ರೆಯದೊಂದು ರೂಪಾಯಿ ಕಂಡು, ಅತಿ ಸಂತುಷ್ಟನಾಗಿ—ಯೊವಕೀಮನೇ, ಹೊರಗೆ ಬಾ! ಕ್ರಿಸ್ತರಕ್ಷಕನು (ಆ ದರಿದ್ರನ ರೂಪ ಎತ್ತಿ ಕೊಂಡು) ಬಂದಿದ್ಧಾನೆ! ಎಂತ, ಉಚ್ಚರಿಸಿ, ತಕ್ಕೊಂಡು ಹೋಗಿ, ದಾನ ಮಾಡಿದನು. ಅಷ್ಟರಲ್ಲಿ ಅವನು ಎಲ್ಲಾ ವಿಷಯದಲ್ಲೂ ಮಿತಸ್ಥನು; ಅನೇಕಾವರ್ತಿ ಅವನು ತನ್ನ ಗೆಳೆಯರ ಉಚಿತಗಳನ್ನು ಮಾತ್ರವಲ್ಲದೆ ತನ್ನ ರಾಜಸ್ವೀಕಾರ ಪ್ರಭುವಿನವುಗಳನ್ನು ಸಹ ಅಂಗೀಕರಿಸಲೊಲ್ಲದೆ ಹೋದನು. ಮುದ್ರಾಕ್ಷರಶಾಲೆಯವರು, ತಾವು ಛಾಪಿಸಿ ಮಾರುವ ಲುಥರನ ಕೃತಿಗಳಿಂದ ತಮಗೆ ವೆಗ್ಗಳ ಲಾಭ ಬರುತ್ತದೆಂತ, ತಿಳಿದು, ಇವನ ಹತ್ತರ, ವರುಷ ವರುಷ ನಿಮಗೆ 600 ರೂಪಾಯಿ ಪ್ರತಿ ಕೊಡುವೆವೆಂದು, ನುಡಿಯುವಾಗ ಲುಥರನು—ತನಗೇನೂ ಬೇಡ, ತಾನು ತನ್ನ ಕೃತಿಗಳನ್ನು ಪ್ರೀತಿಯಿಂದ ಮಾಡಿ ಕೊಡುವವನಲ್ಲದೆ ಮಾರುವವನಲ್ಲವೆಂತ, ಹೇಳಿ ಬಿಟ್ಟನು. ಅದು ಹೊರ್ತಾಗಿ ಅವನು ಮಹಾ ವಿದ್ಯಾಶಾಲೆಯಲ್ಲಿ ವಾಗ್ನಿರೂಪಣಗಳನ್ನು ಕೊಡುತ್ತಿರುವದಕ್ಕಾದರೂ ಹಣ ತೆಕ್ಕೊಳ್ಳಲಿಲ್ಲ.

---

1) 370, 377, 382, 392, 393, 408ನೇ ಪಾನು ಸರಿ ನೋಡು.

## 56. ಊಲ್ರೀಕ ಚ್ವಿಂಗ್ಲಿಯೂ ಯೋಹಾನ ಕಲ್ವೀನನೂ.

ದೇವರು ಲುಥರನ ಮುಖದಿಂದ ಗೆರ್ಮಾನಿಯದಲ್ಲಿ ಪುನಃಸ್ಥಾಪನೆ ತೊಡಗಿಸಿದಾಗಲೇ ಸ್ವಿತ್ಸೆರ್ಲಂದಿನಲ್ಲಿ (ಸ್ವೈಚ್ಚು ದೇಶದಲ್ಲಿ) ಸಹ ಅಂಥಾ ಪುನಃಸ್ಥಾಪಕನನ್ನೆಬ್ಬಿಸಿದ್ದನು; ಅವನ್ಯಾರೆಂದರೆ, ಊಲ್ರೀಕ ಚ್ವಿಂಗ್ಲಿಯು.

ಊಲ್ರೀಕ ಚ್ವಿಂಗ್ಲಿಯು ಕ್ರಿ. ಶ. 1484ನೇ ವರುಷ, ಲುಥರನು ಹುಟ್ಟಿದ್ದಕ್ಕೆ 52 ದಿವಸ ಈಚೆ, ಸ್ವಿತ್ಸೆರ್ಲಂದಿನಲ್ಲಿರುವ ಸಂಕ್ತ್ ಗಲ್ಲೆನೆಂಬ ತಾಲೂಕಿನ[1] ವಿಲ್ಧಾಸು ಎಂಬದೊಂದು ಊರಲ್ಲಿ ಹುಟ್ಟಿದನು; ಅವನ ತಂದೆಯು ಆ ಊರಿಗೆ ಗೌಡನು. ಊಲ್ರೀಕನು ಪಪ್ಪಕಸಭೋದ್ಯೋಗಿಯಾಗ ಬೇಕೆಂಬದು ತಂದೆಯ ನಿರೀಕ್ಷೆಯು. ಇಂತಿರಲಿಕ್ಕೆ, ಬೋಧಕೋದ್ಯೋಗಿಯಾದ ಅವನ ಪಿತೃವ್ಯನು ಊಲ್ರೀಕನಿಗೆ ತಕ್ಕಷ್ಟು ವಿದ್ಯೆ ಕಲಿಸಿದ ಮೇಲೆ ಇವನು ಬಾಸೆಲು ಪಟ್ಟದ, ಬಳಿಕ ಬೆರ್ನು ಪಟ್ಟದ ಶಾಲೆಗಳಲ್ಲಿ ಹೆಚ್ಚು ಅಭ್ಯಾಸ ಮಾಡಿ, ತರುವಾಯ ದೇವಜ್ಞಾನದರ್ಶನದ ಪೂರ್ಣಸಾಧನೆಗೋಸ್ಕರ ಗೆರ್ಮಾನಿಯದಲ್ಲಿಯ ಔಸ್ತ್ರಿಯ ರಾಜ್ಯದ ಪ್ರಧಾನ ಪಟ್ಣವಾದ ವೀನೆಂಬಲ್ಲಿಗೆ ಹೋಗಿ, ಪ್ರಾಪ್ತಕಾರ್ಯನಾಗಿ ತಿರಿಗಿ ಬಂದು, ಕೆಲವು ವರುಷ ಬಾಸೆಲಿನಲ್ಲಿ ಬೋಧಕವೃತ್ತಿ ನಡಿಸಿ, ಕ್ರಿ. ಶ. 1506ನೇ ವರುಷಕ್ಕೆ ಗ್ಲಾರುಸ್[2] ಎಂಬ ಪಟ್ಣದಲ್ಲಿ ಪ್ರಸಂಗೋದ್ಯೋಗಿಯಾದನು. ಅಂದಿನಿಂದ ಅವನು ದೇವವಾಕ್ಯವನ್ನೂ ಪೂರ್ವ ಸಭಾಪಿತರ ಮುಖ್ಯ ಗ್ರಂಥಗಳನ್ನೂ ಜಾಗರೂಕತೆಯಿಂದೋದುವವನಾಗಿರಲು, ಪಪ್ಪಕ ಪಕ್ಷಸಭೆಯ ಶಿಥಿಲತ್ವವು ಅವನ ಚುರುಕು ಬುದ್ಧಿಗೆ ಸ್ಪಷ್ಟ ತೋರುವಂತಾಯಿತು.

ಕ್ರಿ. ಶ. 1516ನೇ ವರುಷ ಅವನು ಸ್ವಿತ್ಸೆರ್ಲಂದಿನ ಐನ್ಸೀದೆಲ್ನು ಎಂಬಲ್ಲಿ ಪ್ರಸಂಗೋದ್ಯೋಗಿಯಾದನು; ಅಲ್ಲಿ ದೇವಾಲಯದೊಳು ಮರಿಯಳದೊಂದು ಪ್ರತಿಮೆ ಇತ್ತು; ಅದು ಅದ್ಭುತಗಳನ್ನು ತೋರಿಸುತ್ತದೆಂತ, ಹೇರಳ ಮಂದಿ ಯಾತ್ರಿಕರು ಅಲ್ಲಿಗೆ ಬರುತ್ತಿರುವರು. ಆಗಲಾದರೂ ಚ್ವಿಂಗ್ಲಿಯು ಈ ದುರಾಚಾರಕ್ಕೂ ಸಂತರ ಮತ್ತು ಸಂತಾವಶಿಷ್ಟಗಳ ಪೂಜೆಗೂ ಎದುರಿಸಲೆಸಗಿ, ದೇವಾಲಯದ ಬಾಗಲಿನ ಮೇಲಗಡೆ ಚಿತ್ರಿಸಿದ್ದು, ಇಲ್ಲಿ ಸರ್ವ ಪಾಪಗಳ ಪೂರ್ಣ ಕ್ಷಮೆಯು ಶಿಕ್ಕುತ್ತದೆಂತ, ಹೇಳುವ ಬರಹವನ್ನು ಗೋಪ್ಯದೊಡನೆ ಅಳಿಸಿ ಬಿಟ್ಟನು.

ಆ ಸಮಯ ಸ್ವಿತ್ಸೆರ್ಲಂದಿನಲ್ಲಿ ಪರರಾಜಸೇವೆ ಎಂಬದು ಉದ್ಭವಿಸಿತ್ತು; ಅದರ ಪ್ರಕಾರ ಸ್ವಿತ್ಸೆರ್ಲಂದಿನವರಲ್ಲನೇಕರು ಬೇರೆ ಬೇರೆ ಪರದೇಶಗಳ ರಾಜರ ದಂಡಿನಲ್ಲಿ ಸಂಬಳಕ್ಕೆ ನಿಂತು, ಸೇವಿಸುತ್ತಿದ್ದರು. ಆ ಜನರು ಹಾಗೆ ನಾನಾ ದೇಶಗಳ

---

1) ಅಲ್ಲಿ ಗಲ್ಲನೆಂಬ ಸೌವಾರ್ತಿಕ ಪ್ರಸಂಗಿಕನು ವೃತ್ತಿ ನಡಿಸಿದ್ದನು, ಆದ್ದರಿಂದ ಈ ಹೆಸರು. 304ನೇ ಪಾನು. 2) 304ನೇ ಪಾನು.

ನ್ನು ತಿರಿಗ್ಯಾಡಿ ಗುಣ ಮರ್ಯಾದೆ ತಪ್ಪಿ ಹೋಗುವಂಥವರಾದ ಕಾರಣ ಜ್ವಿಂಗ್ಲಿಯು ಸ್ವದೇಶಕ್ಕೆ ಹಿತ ಬಯಸಿ, ಅಂಥ ಪದ್ಧತಿಗೆ ಅಡ್ಡ ಕಟ್ಟುವಲ್ಲಿ ಅನೇಕರು ಅವನ ಅಮಿತ್ರರಾದರೂ ಅನೇಕರು ಅವನಿಗೆ ಮಿತ್ರರು ಸಹ ಆದರು. ಹೀಗಿರಲಾಗಿ, ಅವನಂತೆ ಆ ಪದ್ಧತಿಗೆ ಎಂತೂ ಮೆಚ್ಚದ ಜುಯಿರಿಖು ಪಟ್ಣದವರು[1] ಕ್ರಿ. ಶ. 1519ನೇ ವರುಷ ಅವನನ್ನು, ತಮ್ಮ ಪಟ್ಣದ ಪ್ರಸಂಗೋದ್ಯೋಗಿ ಎಂದು, ನೇಮಿಸಿ, ಕರಿಸಿದರು. ತರುವಾಯ ಅವನು ಆ ಪಟ್ಣದ ಮಂತ್ರಿಸಭೆಯ ಅಪ್ಪಣೆ ಪಡೆದು, ದೇವವಾಕ್ಯದ ಪೆರಿಕೊಪೆಗಳೆಂಬ ಪಾರಾಯಣಾಂಶಗಳನ್ನು ಮಾತ್ರ ಹಿಡಿದು ಪ್ರಸಂಗಿಸುವದು ಅಲ್ಲದೆ ಹೊಸ ಒಡಂಬಡಿಕೆಯನ್ನೆಲ್ಲಾ ಸಹ ಆರಂಭದಿಂದ ತುದಿಯ ವರೆಗೆ ಪ್ರಸಂಗಗಳಿಂದ ವಿವರಿಸುವವನಾದನು.

ಅಷ್ಟರಲ್ಲಿ 10ನೇ ಲೆಯೋನ ಪಪ್ಪನು ಆ ನೀಚ ಪಾಪಕ್ಷಮಾವಿಕ್ರಯವನ್ನು ಸಾರಿಸಿದ್ದನು. ಅದಕ್ಕೋಸ್ಕರ ಬೆರ್ನರ್ದೀನ ಸಂಸೊನನು ಎಂಬವನೊಬ್ಬ ಫ್ರಂಶಿಸ್ಕಾನ ಮಠಿಕಕುಲದವನು ಸ್ವೀತ್ಸೆರ್ಲಂದಿನಲ್ಲಿ ಕ್ಷಮಾವಿಕ್ರಯಕನಾಗಿ, ಪಾಪಗಳ ಕ್ಷಮೆಯನ್ನು ಆ ತೆತ್ಸೆಲನಿಗಿಂತಲೂ[2] ಅಘ್ಘವಾಗಿ ಮಾರುತ್ತಿದ್ದನು. ಅವನು ಜುಯಿರಿಖಿಗೂ ಬಂದನು. ಜ್ವಿಂಗ್ಲಿಯು ಅಂಥಾ ವಿಕ್ರಯಕ್ಕೆ ತನ್ನ ಪ್ರಸಂಗಗಳಿಂದ ಮಹಾ ಬಲದೊಡನೆ ವಿರೋಧಿಸುವಲ್ಲಿ ಪ್ರಜೆ ಎಲ್ಲವೂ ಬಹಳ ಒಲುಮೆ ಪಟ್ಟಿತು. ಹೀಗಿರಲಾಗಿ, ಜುಯಿರಿಖಿನ ಮಂತ್ರಿಸಭೆಯವರು, ಸಭಾನವೀಕರಣವೆಂಬ ಪುನಃಸ್ಥಾಪನೆಯು ಬೇಕೆಂತ, ಅರಿತು, ಜ್ವಿಂಗ್ಲಿಯ ಬೋಧನಾರ್ಥವ ಶೋಧಸಿ, ಅದು ದೇವವಾಕ್ಯಕ್ಕನುಸಾರವಾದ ಸೌವಾರ್ತಿಕವಾದದ್ದೇ! ಎಂತ, ತಿಳಿದ ಕ್ಷಣವೇ ಕ್ರಿ. ಶ. 1520ನೇ ವರುಷ ತಮ್ಮೊಳಗಿನ ಸಕಲ ಪ್ರಸಂಗಿಕರಿಗೆ—ಇಂದಿನಿಂದ ನೀವು ಎಲ್ಲಾ ಮಾನುಷ ಸಾಂಪ್ರದಾಯಗಳನ್ನು ಬಿಟ್ಟು ಬಿಟ್ಟು, ಪರಿಶುದ್ಧ ಬರಹದ ಪ್ರಕಾರ ಸುವಾರ್ತೆಯನ್ನೇ ನಿರ್ಮಲವಾಗಿ ಸಾರ ಬೇಕೆಂತ, ಆಜ್ಞೆ ಹೊರಡಿಸಿತ್ತರು. ಆ ಕಾಲದಾರಭ್ಯ ಜ್ವಿಂಗ್ಲಿಯು ಪಪ್ಪಕ ಸಭೆಯ ದುರ್ಬೋಧನೆ ದುರಾಚಾರಗಳಿಗೆ ಹೆಚ್ಚುಹೆಚ್ಚಾಗಿ ಎದುರಿಸಲಿಕ್ಕೆ ಹತ್ತಿದನು.

ಪಪ್ಪಕ ವಿಶ್ವಾಸಪ್ರಮಾಣದಲ್ಲಿ ಇನ್ನೂ ಆಸಕ್ತರಾಗಿ ಉಳಿದಿರುವವರಿಗೋಸ್ಕರ ಮಂತ್ರಿಸಭೆಯವರು ಸತ್ಯಪ್ರತಿಪಾದನೆಗಾಗಿ ಕ್ರಿ. ಶ. 1523ನೇ ವರುಷ ಜ್ವಿಂಗ್ಲಿಗೂ ಪಪ್ಪಕರಾದ ವಿರೋಧಿಗಳಿಗೂ ಬಹಿರಂಗದಲ್ಲಿ ಒಂದು ತರ್ಕವ್ಯವಹಾರ ಮಾಡಿಸಿದರು; ಅದು ಮುಖ್ಯವಾಗಿ ಪಾಪಕ್ಷಮಾವಿಕ್ರಯವನ್ನೂ ಪ್ರತಿಮಾಪೂಜೆಯನ್ನೂ ಮಿಸ್ಸಯಾಗವನ್ನೂ ಕುರಿತದ್ದು. ದೇವವಾಕ್ಯಾಧಾರದ ಮೇಲೆ ಜ್ವಿಂಗ್ಲಿಗೆ ಅಂದು ಗೇಲು ಬಂತು. ತದನಂತರ ಮತ್ತೊಂದು ತರ್ಕವ್ಯವಹಾರದಿಂದ ಅ

---

1) 304ನೇ ಪಾನು. 2) 421, 422ನೇ ಪಾನು.

ದೇ ಫಲವಾಯಿತು. ಆದ್ದರಿಂದ ಮತ್ತಷ್ಟು ಮಂದಿ ಪಪ್ಪಕರು ಸೌವಾರ್ತಿಕ ಬೋಧನೆಯನ್ನವಲಂಬಿಸಿ ಕೊಂಡರು. ಆಗ ಜ್ವಿಂಗ್ಲಿಯು ಮಂತ್ರಿಸಭೆಯವರ ಅಪ್ಪಣೆಯ ಮೇರೆಗೆ ಪ್ರಸಂಗಿಕರ ಹಿತಕ್ಕಾಗಿ ಸೌವಾರ್ತಿಕ ಬೋಧನೆಯದೊಂದು ಸಂಕ್ಷೇಪ ಸೂಚಕಗ್ರಂಥವನ್ನು ರಚಿಸಿದನು. ಅದಲ್ಲದೆ ಸ್ವಲ್ಪ ಕಾಲದಿತ್ತ ಒಂದು ಹೊಸ ದೇವಾರಾಧನಕ್ರಮವು ಪ್ರಕಟಿಸಲಾಯಿತು; ಅದರಂತೆ ಸಂತರ ಪ್ರತಿಮೆಗಳನ್ನೂ ಕ್ರೂಜಾಕೃತಿಗಳನ್ನೂ ಅಯೋಗ್ಯವಾದ ಬಹಿರ್ವಿಡಂಬನವೆಂಬಂತೆ ಸ್ವರಮಂಡಲಗಳನ್ನೂ ದೇವಾಲಯಗಳೊಳಗಿಂದ ಹೊರಗೆ ತೆಗೆದು, ಯಾಗವೇದಿಗಳ ಬದಲಿಗೆ ಸಾಧಾರಣ ಮೇಜುಗಳನ್ನಿಟ್ಟು, ಮಿಸ್ಸಯಾಗವನ್ನು ತಳ್ಳಿ, ಪರಿಶುದ್ಧ ರಾತ್ರಿಭೋಜನದ ಸಾಮಾನ್ಯ ತರದ ಆಚಾರವನ್ನು ಸ್ಥಾಪಿಸಿದರು. ರಾತ್ರಿಭೋಜನದ ಈ ಆಚಾರದ ಮೇಲೆ ರೊಟ್ಟಿಯನ್ನೂ ದ್ರಾಕ್ಷಾರಸವನ್ನೂ ಮರದ ಪಾತ್ರಗಳಲ್ಲಿ ತರುವರು; ಪ್ರಸಂಗಿಕೋದ್ಯೋಗಿಯು ರಾತ್ರಿಭೋಜನಾಪೇಕ್ಷಕರಿಗೆ ಸ್ವಲ್ಪ ಮಾತಿನಿಂದ ತಕ್ಕ ವಿವೇಕ ಹೇಳಿ, ಸಾಲು ಸಾಲಾಗಿ ಕೂತಿರುವವರಲ್ಲಿ ಮೊದಲು ಮೊದಲಿನವನಿಗೆ ರೊಟ್ಟಿಯನ್ನು ಕೊಟ್ಟನಂತರ ಇವರು ತಾವು ತೆಗೆದು ಕೊಂಡು, ತಮ್ಮ ತಮ್ಮ ಸಾಲಿನಲ್ಲಿ ಕೂತಿರುವವರೆಲ್ಲರಿಗೂ ಶಿಕ್ಕಲಿಕ್ಕಾಗಿ ಆ ರೊಟ್ಟಿಯ ಪಾತ್ರವನ್ನು ಮುನ್ನಡಿಸುವರು; ಸಭಾಸೇವಕರು ಅದೇ ಪ್ರಕಾರ ದ್ರಾಕ್ಷೆಯ ರಸವನ್ನು ಕೊಟ್ಟು, ನಡಿಸುವರು.

ಪ್ರಜೆಯಲ್ಲಿ ಸೌವಾರ್ತಿಕ ಜ್ಞಾನವನ್ನು ಪ್ರವರ್ಧಿಸುವದಕ್ಕಾಗಿ ಜ್ವಿಂಗ್ಲಿಯು ದೇವವಾಕ್ಯವನ್ನು ಸ್ವೀತ್ಸ ಭಾಷಾಂತರ ಮಾಡಿದನು; ಕ್ರಿ. ಶ. 1529ನೇ ವರುಷಕ್ಕೆ ಇಂಥಾದರ ಪೂರ್ಣ ಪ್ರತಿಯು ಛಾಪೆಯಾಯಿತು.

ಸತ್ಯದೇವಾರಾಧನೆಯ ಪುನಃಸ್ಥಾಪನೆಯ ಸಂಗಡ ಒಳ್ಳೇ ಸಭಾಶಿಕ್ಷೆಯು ಸಹ ಚುಯಿರಿಖಿನಲ್ಲಿ ಉತ್ಪನ್ನವಾಯಿತು; ಸೂಳೆಯರನ್ನೂ ವ್ಯಭಿಚಾರಿಗಳನ್ನೂ ತಾಲೂಕಿನೊಳಗಿಂದ ಹೊರಗೆ ದೊಬ್ಬಿದರು; ತಮ್ಮ ನಡಾವಳಿಯಿಂದ ಬಹಿರಂಗದಲ್ಲಿ ದುರ್ಗಂಧವೆಬ್ಬಿಸಿದವರೆಲ್ಲರಿಗೆ ಕಠಿಣ ಶಿಕ್ಷೆ ಬರುವದು; ಅಪೊಸ್ತೊಲಿಕ ಸಭೆಗಳಲ್ಲಿಯೂ ಅವುಗಳ ಮಕ್ಕಳಾದ ವಲ್ದೆನ್ಸ ಅಲ್ಬಿಗೆನ್ಸ ಲೊಲ್ಲರ್ದ[1] ಮೊದಲಾದ ಸೌವಾರ್ತಿಕ ಕ್ರೈಸ್ತರಲ್ಲಿಯೂ ಮಾತ್ರ ಕಾಣುವ ನೀತಿಚರ್ಯೆಯು ಗೋಚರವಾಯಿತು; ದಂಡಿನಲ್ಲಿ ಸಹ ಅದು ಬೇಗ ಪ್ರವೇಶಿಸಿತು. ಮಠಗಳನ್ನು ತೆಗೆದು ಹಾಕಿದರು; ವೃದ್ಧ ಮಠಿಕರಿಗೆ ಮರಣದ ವರೆಗೆ ಜೀವನಾಂಶವು ನೇಮಕವಾಯಿತು; ಪ್ರಾಯದ ಮಠಿಕರಿಗೆ ಯೋಗ್ಯತಾನುಗುಣವಾದ ಕೆಲಸ ಕೊಡೋಣವಾಯಿತು; ಮಠಗಳ ಸೊತ್ತು ಶಾಲೆಗಳ ಪ್ರಯೋಜನಕ್ಕೊಪ್ಪಿಸಿದರು.

ಬಳಿಕ ಚುಯಿರಿಖಿನಿಂದ ಪುನಃಸ್ಥಾಪನೆಯು ಸ್ವೀತ್ಸೆರ್ಲಂದಿನ ಬಾಸೆಲು ಬೆರ್ನು

---

1) 385ನೇ ಪಾನು.

ಮುಂತಾದ ಕಂತೋನುಗಳೆಂಬ ತಾಲೂಕುಗಳಲ್ಲಿ ಸಹ ಶೇರುವಲ್ಲಿ ಬೇರೆ ಕಂತೋನುಗಳವರು ಅಂದರೆ ಸ್ವೀತ್ಸ್ ಊರಿ ಉಂತೆರ್ವಲ್ದೆನು ತ್ಸೂಗು ಲುತ್ಸೆರ್ನು ಸೋಲೊಥುರ್ನು ಫ್ರೈಬುರ್ಗು ಎಂಬವುಗಳವರು ಪಪ್ಪಕತ್ವದಲ್ಲಿ ಉಳು ಕೊಂಡರು. ಸೌವಾರ್ತಿಕರಿಗೂ ಈ ಪಪ್ಪಕರಿಗೂ ಹೀಗೆ ಮತಭೇದವಾದದಲ್ಲದೆ ಆ ಪರರಾಜಸೇವೆಯಿಂದಲೂ ಅವರಿವರಿಗೆ ಹೆಚ್ಚು ಕಡಿಮೆ ಬಿತ್ತು; ಸೌವಾರ್ತಿಕರು ಸ್ವದೇಶದ ಹಿತವನ್ನು ಕಾಂಕ್ಷಿಸಿ, ಅದು ಬೇಡವೆಂತ, ಹೇಳುತ್ತಿದ್ದರು; ಪಪ್ಪಕರು—ಅದು ಲಾಭಕರವಾದದ್ದು, ಆದ್ದರಿಂದ ಅದು ಬೇಕೆಂತ, ಚರ್ಚಿಸುತ್ತಿದ್ದರು. ಇಷ್ಟು ಮಾತ್ರವಲ್ಲದೆ ಪಪ್ಪಕರು ಮುಂಚೆ ಸ್ವೀತ್ಸೆರ್ಲಂದಿನ ಕಡು ಬಾಧಕರಾಗಿದ್ದ ಔಸ್ತ್ರೀಯ ರಾಜ್ಯದವರ ಸಂಗಡ ಸೌವಾರ್ತಿಕರಿಗೆ ವಿರೋಧವಾಗಿ ಒಂದು ಒಡಂಬಡಿಕೆ ಕಟ್ಟಿ ಕೊಂಡು, ತಮ್ಮಲ್ಲಿಯ ಸೌವಾರ್ತಿಕ ಬೋಧಕರಿಗೂ ಸಭ್ಯರಿಗೂ ಜೀವಹಿಂಸೆ ಸಹ ಮಾಡುತ್ತ ಬರಲಿಕ್ಕೆ, ಚುಯಿರಿಖಿನವರು ತಮ್ಮ ಗೆಳೆಯರೊಂದಿಗೆ ಪಪ್ಪಕರೆದುರಾಟಕ್ಕೆ ಸೌರಿಸಿ ಕೊಂಡರು. ಹೀಗಿರಲಾಗಿ ಪಪ್ಪಕರು ಸಂಧಾನದ ಆಶೆ ತೋರಿಸುವ ನಿಮಿತ್ತ ಸೌವಾರ್ತಿಕರು ಯುದ್ಧದ ಚಿಂತೆ ಬಿಟ್ಟಿರುವಂದೇ ಕ್ರಿ. ಶ. 1531ನೇ ವರ್ಷ ಅವರು ಇವರ ಮೇಲೆ ಬಿದ್ದರು. ಆಗ ತ್ಸೂಗು ಪಟ್ಣದ ಹತ್ತರ ಕಪ್ಪೆಲೆಂಬಲ್ಲಿ ಕದನವಾಯಿತು. ಸೌವಾರ್ತಿಕರು ವೀರತ್ವದಿಂದ ಕಾದಿದರೂ ಕಡೆಯಲ್ಲಿ ನಾಲ್ಮಡಿ ದೊಡ್ಡದಾದ ಮಹಾ ಮಾರ್ಬಲಕ್ಕೆ ಸೋತರು; ಸೇನಾಪ್ರಸಂಗಿಕನಾಗಿ ಸೇನೆಯ ಸಂಗಡ ಇದ್ದ ಚ್ವಿಂಗ್ಲಿಯು ಸಹ ಹತನಾದನು. ಪಪ್ಪಕರು ಅವನ ಹೆಣ ಕಂಡು, ಸುಟ್ಟು, ಬೂದಿಯನ್ನು ಘಾಳಿಗೆ ಹಾರಿಸಿದರು.

ಆದರೆ ಚ್ವಿಂಗ್ಲಿಯಿಂದ ಆರಂಭವಾದ ಪುನಃಸ್ಥಾಪನೆಯ ಕಾರ್ಯವು ಅಳಿಯಲಿಲ್ಲ; ಅವನಂಥವರಾದ ಬೇರೆ ಪುರುಷರು ಅದನ್ನು ಮುನ್ನಡಿಸಿ, ತೀರಿಸಿದರು. ಇವರಲ್ಲಿ ಯೋಹಾನ ಕಲ್ವೀನನೆಂಬವನು ಪ್ರಮುಖನು. ಅವನು ಕ್ರಿ. ಶ. 1509ನೇ ವರುಷ ಫ್ರಂಚು ದೇಶದಲ್ಲಿ ಹುಟ್ಟಿದವನು; ಒಬ್ಬ ಸಭಾಧ್ಯಕ್ಷನ ಪ್ರಧಾನ ಲೇಖಕನಾದ ಅವನ ಪಿತನು ಅವನನ್ನು ಮತೋದ್ಯೋಗಕ್ಕೆ ನೇಮಿಸಿದ್ದರಿಂದ ಅವನು ದೇವಜ್ಞಾನದರ್ಶನವನ್ನಭ್ಯಾಸಿಸಿ, 18 ವರುಷದ ಯೌವನಸ್ಥನಾದಂದು ಒಂದು ಬೋಧಕೋದ್ಯೋಗವನ್ನು ಪಡ ಕೊಂಡನು. ಅಷ್ಟರಲ್ಲಿ ಗೆರ್ಮಾನಿಯದ ಸೌವಾರ್ತಿಕ ಕ್ರೈಸ್ತರು ಫ್ರಂಚಿನಲ್ಲಿಯೂ ಸುವಾರ್ತೆ ಎಂಬ ದೀಪವನ್ನು ತಿರಿಗಿ ಪ್ರಜ್ವಲಿಸಲಾರಂಭಿಸಿದ್ದರು; ಅದನ್ನು ನೊಂದಿಸುವದಕ್ಕಾಗಿ ಕ್ರಿ. ಶ. 1521ನೇ ವರುಷ ಪರೀಸು ಪಟ್ಣದ ಸೊರ್ಬೊನ್ ಎಂಬ ಮಹಾ ವಿದ್ಯಾಶಾಲೆಯವರು ಲುಥರನ ಗ್ರಂಥಗಳನ್ನು ಸುಡಿಸಿದ್ದರು. ಆದರೆ ಕಲ್ವೀನನು ಸುವಾರ್ತೆಯ ಜ್ವಾಲೆಯನ್ನು ಕಂಡು, ತನ್ನ ಪಪ್ಪಕ ಉದ್ಯೋಗವನ್ನು ಬಿಟ್ಟು ಬಿಟ್ಟು, ರಾಜಕ ನೀತಿಯ ಅಭ್ಯಾಸ ಮಾಡುವವನಾಗಿ, ದೇವವಾಕ್ಯಾ

ಧ್ಯಯನದಲ್ಲಿ ಬಹಳ ಜಾಗರೂಕನಾಗಿರುತ್ತಾ, ಸೌವಾರ್ತಿಕ ವಿಶ್ವಾಸದವನಾದನು. ತರುವಾಯ ಅವನು ಮುಂಚಿಗಿಂತ ಅತ್ಯಧಿಕವಾದ ಕುತೂಹಲದೊಡನೆ ಮರಳಿ ದೇವಜ್ಞಾನದರ್ಶನಾಭ್ಯಾಸವನ್ನೆಸಗಿ, ತನ್ನ ಸೌವಾರ್ತಿಕ ವಿಶ್ವಾಸಾರ್ಥವನ್ನು ಬೈಲಿನಲ್ಲಿ ಸಹ ಅರುಹಿದನು. ಅವನ ದೇಶದ ಗುಪ್ತವಿಚಾರಕರು ಅದನ್ನು ತಿಳಿದು, ಅವನಿಗೆ ಹಿಂಸಿಸಲಿಕ್ಕೆ, ಅವನು ಕ್ರಿ. ಶ. 1533ನೇ ವರುಷ ಓಡಿ, 3 ವರುಷ ಬೇರೆ ಬೇರೆ ಕಡೆಯಲ್ಲಿ ಅಲೆದಾಡುತ್ತಾ, ಒಂದು ಪ್ರಸಿದ್ಧ ಗ್ರಂಥಕೃತಿಯಿಂದಲೂ ಸುವಾರ್ತೆ ಪ್ರಸಾರಿಸುತ್ತಾ ಇದ್ದ ಬಳಿಕ ಒಮ್ಮೆ ಫ್ರಂಚ ಭಾಷೆ ನಡಿಯುವಂಥ ಸ್ವೀತ್ಸೆರ್ಲಂದಿನ ಭಾಗಕ್ಕೆ ಹೋಗಿ, ಗೆನ್ಫ ಎಂಬ ಪಟ್ಣದಲ್ಲಿ ಒಂದು ದಿವಸ ವಸ್ತಿ ಮಾಡಿಕೊಂಡನು. ಅಲ್ಲಿ ಫ್ರಂಚು ದೇಶದಿಂದ ಬಂದಿದ್ದ ಫಾರೆಲನೆಂಬ ಬೋಧಕನ ಮುಖಾಂತರ ಪುನಃಸ್ಥಾಪನೆಯು ಬಹಿರಂಗಕ್ಕೆ ನೆಲಸಿತ್ತು; ಆದರೆ ಪ್ರಜೆಯಲ್ಲಿ ನೀತಿ ಗೆಟ್ಟದೊಂದು ದೊಡ್ಡ ಪಾಲು ಅವನು ನಿರ್ಮಿಸಿದ ಬಿಗಿ ಸಭಾಶಿಕ್ಷೆಗೆ ಒಳಗಾಗಲೊಲ್ಲದಿರುತ್ತಿತ್ತು. ಹೀಗಿರಲಾಗಿ, ಫಾರೆಲನು, ಕಲ್ವೀನನು ಬಂದಿದ್ಧಾನೆಂತ, ಕೇಳುತ್ತಲೇ ಅವನಿಗೆ ಭೇಟಿ ಕೊಟ್ಟು, ದೇವರ ಹೆಸರಿನಲ್ಲಿ ಅವನ ಸಹಾಯ ಬೇಡಿ, ಪಡಕೊಂಡನು. ಕಲ್ವೀನನು ಸಹ ಅವನ ಮನೋಭಿಪ್ರಾಯವನ್ನೇ ದಾರ್ಢ್ಯದಿಂದ ತೋರಿಸುವ ಉದ್ದಿಶ್ಯ ಎದುರ್ಮಲೆಯುವಂಥ ಆ ಪ್ರಜೆಯವರು ಕ್ರಿ. ಶ. 1538ನೇ ವರುಷ ಅವನನ್ನು ಗಡಿ ದಾಟಿಸಿದರು; ಆದರೂ ಇತ್ತ ಕಡೆ ಅವನ ಮಿತ್ರರು ಗೆದ್ದು, ಕ್ರಿ. ಶ. 1541ನೇದರಲ್ಲಿ ಅವನನ್ನು ಹಿಂದಕ್ಕೆ ಕರೆಸಿದರು.

ಆ ಮೇಲೆ ಕಲ್ವೀನನು ಗೆನ್ಫಿನಲ್ಲಿ ಸಾಮಾನ್ಯ ತರದ್ದೊಂದು ದೇವಾರಾಧನೆಯ ವಿಧಿಯನ್ನೂ ಬಲವಾದ ಸಭಾಶಿಕ್ಷೆಯನ್ನೂ ಶೇರಿಸಿ, ಪ್ರೆಸ್ಬುತೆರಿಯಾಲವೆಂಬ[1] ಸಭಾಪರಿಪಾಲನಕ್ರಮವನ್ನು ಉಂಟು ಮಾಡಿದನು. ಪ್ರೆಸ್ಬುತೆರಿಯಾಲವೆಂದರೆ ಪ್ರೆಸ್ಬುತೆರಿಯವೆಂಬ ಹಿರಿಯರ ಸಭೆಯ[2] ಸಮ್ಮಂಧವಾದದ್ದು; ಆ ಪ್ರೆಸ್ಬುತೆರಿಯವೆಂಬ ಪರಿಪಾಲನಸಭೆಯ ಅಂಗಗಳಾದ ಪ್ರಸಂಗಿಕರೂ ಪ್ರಸಂಗಿಕೋದ್ಯೋಗದ ಅಪೇಕ್ಷಕರಿಗೆ ಉಪದೇಶಿಸುವಂಥ ಮಹಾ ಪಂಡಿತರೂ ಸಾಧಾರಣ ಸಭ್ಯರಾದ ಹಿರಿಯರೂ ದಿಯಾಕೊನರೆಂಬ ದರಿದ್ರಪೋಷಕೋದ್ಯೋಗಿಗಳೂ[3] ನಾಲ್ಕು ತರದ ಇವರೆಲ್ಲರೂ ಒಂದೇ ಸಮಾನ ಅಧಿಕಾರದವರು. ಕ್ರಿಸ್ತನ ಸಭೆಯನ್ನು ಒಳಗಿನ ವಿಷಯಗಳಲ್ಲಿ ಕೂಡುವಷ್ಟರ ಮಟ್ಟಿಗೆ ಲೌಕಿಕ ಅಧಿಕಾರಸ್ಥರ ವಿಚಾರಣದಿಂದ ಬಿಡಿಸುವದೇ ಕಲ್ವೀನನ ಅಪೇಕ್ಷೆಯು. ಲುಥರನು ಪುನಃಸ್ಥಾಪನೆಗೆ ಕಾರಣನಾದ ಗೆರ್ಮಾನ ಮೊದಲಾದ ದೇಶಗಳಲ್ಲಿ[4] ಸಕ್ಸೆನಿನ ಆ ಕೊನ್ಸಿಸ್ತೋರಿಯಾಲ ಸಭಾಪರಿಪಾಲ

1) 161ನೇ ಪಾನು. 2) 69, 93, 94ನೇ ಪಾನು. 3) 30, 31, 35, 69, 93ನೇ ಪಾನುಗಳು. 4) 432ನೇ ಪಾನು.

ನಕ್ರಮದರ್ಥವು ಹ್ಯಾಗೆ ಶೇರಿತೋ, ಹಾಗೆಯೇ ಗೆನ್ಫಿನ ಪ್ರೆಸ್ಬುತೆರಿಯಾಲವಾದ್ದರದು ಹೆಚ್ಚಾಗಿ ಕಲ್ವೀನನ ಮೂಲಕ ಪುನಃಸ್ಥಾಪಿತರಾದ ಸ್ವೀತ್ಸ, ಫ್ರಂಚ, ಸ್ಕೋತ, ನೀದೆರ್ಲಂದಿಕ ದೇಶಸ್ಥರಿಗೆ ತಕ್ಕ ಮಾದರಿಯಾಯಿತು. ಕಲ್ವೀನನು ಗೆನ್ಫಿನಲ್ಲಿ ನೆಟ್ಟ ವಿದ್ಯಾಶಾಲೆಯಲ್ಲಿ ಅನೇಕಾನೇಕ ಬೋಧಕರು ಸುಶಿಕ್ಷಿತರಾದರು.

ಅವನು ಮಹಾ ಕಾರ್ಯಶೀಲನು; ಆದರೆ, ಅವನು ಸಕಲ ಮನುಷ್ಯರಿಗಿಂತ ಶರೀರದಲ್ಲಿ ನಿರ್ಬಲನೆಂದು, ಹೇಳಿದರೆ ಮತ್ತಷ್ಟು ಆಶ್ಚರ್ಯ ಪಡ ಬೇಕು. ವಾತರೋಗ ಅಶ್ಮರಿ ಉದರಶೂಲಿ ಮೂಲವ್ಯಾಧಿ ಮೂತ್ರಕೃಚ್ಛ್ರ ಕುರ ಕಾಲುನರಹಿಡುಕು ಅಗ್ನಿಮಾಂದ್ಯ ಈ 8 ರೋಗಗಳ ಸಮೂಹವು ಅವನನ್ನು ಕಾಡಿಸುತ್ತಿತ್ತು. ಇಂತಿರಲಿಕ್ಕೆ ಅವನು 10 ವರುಷವೇ ದಿನಕ್ಕೊಮ್ಮೆ ಸ್ವಲ್ಪ ಮಾತ್ರ ತೀನಿ ತಕ್ಕೊಳ್ಳಲಾಗುವದು; ಅನೇಕಾವರ್ತಿ 36 ತಾಸು ಹಶಿದಿರುವನು. ಆದರೂ ಅಷ್ಟೆಲ್ಲಾ ಕಷ್ಟವನ್ನು ಅವನು ತನ್ನ ಕ್ರಿಸ್ತನಾಥನ ಹೆಸರಲ್ಲಿ ಬಹು ತಾಳ್ಮೆಯಿಂದ ಸಹಿಸುತ್ತಿದ್ದದಲ್ಲದೆ ದೇವವಾಕ್ಯಭಾಷ್ಯ ಮೊದಲಾದ ಪ್ರಖ್ಯಾತ ಕೃತಿಗಳನ್ನು ಕಟ್ಟುತ್ತಿದ್ದನು. ಅವನ ಗೆಳೆಯರು ಬಂದು, ಕೊಂಚ ವಿಶ್ರಮಿಸಿ ಕೊಳ್ಳಿರೆಂತ, ಬುದ್ಧಿ ಹೇಳುವಂದು ಅವನು—ಕರ್ತನು ನನ್ನನ್ನು, ಮೈಗಳ್ಳನೆಂದು, ಕಾಣ ಬೇಕೆಂತ, ಚಿಂತಿಸುತ್ತೀರೋ? ಎಂದು, ಉತ್ತರ ಕೊಡುತ್ತಿದ್ದನು. ಕ್ರಿ. ಶ. 1564ನೇ ವರುಷದ ಆರಂಭದಲ್ಲಿ ಅವನು ಕಡೇ ಸಾರಿ ಪ್ರಸಂಗಿಸುತ್ತಿರಲು, ಕುಗ್ಗಿದ ಸ್ವರದಿಂದ ಮಾತ್ರ ಮಾತಾಡ ಕೂಡಿತು. ಬಳಿಕ ಅವನು ಇನ್ನು ಸುಮಾರು 3 ತಿಂಗಳು ಫಾರೆಲ ಮುಂತಾದ ತನ್ನ ಮಿತ್ರರೊಂದಿಗೆ ತನ್ನ ಕೋಣೆಯೊಳಗೆ ಸ್ನೇಹಸಂಭಾಷಣೆ ನಡಿಸುತ್ತಿದ್ದು, ಒಂದಾನೊಂದು ದಿವಸದಲ್ಲಿ, ನನ್ನ ಶರೀರವು ನಿಮಗೆ ದೂರವಾದ ಮೇಲೆಯೂ ಆತ್ಮೀಯವಾಗಿ ನಿಮ್ಮೊಳಗಿರುವದಕ್ಕೆ ಈ ಗೋಡೆಯು ಅಡ್ಡ ಕಟ್ಟದೆಂದು, ಸಂತೋಷಯುಕ್ತ ಶಬ್ದದಿಂದ ನುಡಿದು, ಕೆಲವು ದಿವಸಕ್ಕೀಚೆ ಅತಿ ಸಮಾಧಾನದೊಡನೆ ತನ್ನ ದೇಹದಿಂದ ತೊಲಗಿದನು. ಆಗ ಪಟ್ಣದೊಳಗಿನ ಸಮಸ್ತರಿಗೆ ವೆಗ್ಗಳವಾದ ದುಃಖವು ಹುಟ್ಟಿತು.

ದೇವವಾಕ್ಯದ ಆಧಾರವುಳ್ಳದ್ದೆಂತ, ಕಲ್ವೀನನು ನೆನಸಿ ಹಿಡು ಕೊಂಡದ್ದೊಂದು ಆಲೋಚನೆಯನ್ನು ಇಲ್ಲಿ ಹೇಳ ತಕ್ಕದ್ದು; ಅದು ಯಾವದಂದರೆ, ಸರ್ವತ್ರಾಣಿಯೂ ರಾಜಾಧಿರಾಜನೂ ಆದ ದೇವರು ಅನಾದಿಯಿಂದ ಕೆಲವರು ಮನುಷ್ಯರನ್ನು ನಿತ್ಯ ರಕ್ಷಣಕ್ಕೆ ಕೆಲವರನ್ನು ನಿತ್ಯ ನಾಶನಕ್ಕೆ ಮುನ್ನೇಮಿಸಿದನೆಂಬದು; ಇದು ಪ್ರೇದೆಸ್ತಿನಾತಿಯೋನು ಅಂದರೆ ಪುರಾವಸ್ಥಾಪನೆ ಎನ್ನಿಸುತ್ತದೆ; ಕಲ್ವೀನನಿಗೆ ಮುಂಚೆ ಹಿಪ್ಪೊ ಪಟ್ಣದ ಯಶಸ್ಸುಳ್ಳ ಆ ಔಗುಸ್ತೀನನು ಸಹ ಹೀಗೆಯೇ ಸಾರಿದ್ದನು. ಈ ವಿಷಯದಲ್ಲಿಯೂ ತಾನು ಪರಿಶುದ್ಧ ರಾತ್ರಿಭೋಜನದ ವಿಶೇಷ

ಆಶೀರ್ವಾದವನ್ನು ಕುರಿತು ಆಲೋಚಿಸಿದ ವಿಷಯದಲ್ಲಿಯೂ ಅವನಿಗೂ ಚ್ವಿಂಗ್ಲಿಗೂ ಹೆಚ್ಚು ಕಡಿಮೆಯುಂಟು; ಆದರೆ ರಕ್ಷಣಸಂಪಾದನಪ್ರಮಾಣದಲ್ಲಿ ಅವರು ಅಭೇದದವರು. ಚ್ವಿಂಗ್ಲಿಗೆ ಹ್ಯಾಗೋ, ಹಾಗೆಯೇ ಲುಥರನಿಗೆ ಸಹ ಅಂಥಾ ಪುರಾವಸ್ಥಾಪನೆಯ ಬೋಧನೆಯು ದೂರದಲ್ಲಿತ್ತು; ಆದರೆ ಪರಿಶುದ್ಧ ರಾತ್ರಿಭೋಜನದ ಆಶೀರ್ವಾದವಿಧವನ್ನು ಕುರಿತು ಕಲ್ವಿನನಿಗಿದ್ದ ಆಲೋಚನೆಯು ಲುಥರನದಕ್ಕೆ ಬಹುಶಃ ಸರಿ ಬೀಳುತ್ತದೆ.

ನಾವು ಚ್ವಿಂಗ್ಲಿಯ ಮತ್ತು ಲುಥರನ ಬೋಧನೆಗಳನ್ನು ಸಮ ತೂಗಿ ನೋಡಿದರೆ, ಇವರಲ್ಲಿಯೂ ರಕ್ಷಣಸಂಪಾದನಪ್ರಮಾಣವು ಏಕ ಭಾವದ್ದೆಂತ, ಕಾಣುತ್ತದೆ. ಅವರಿಬ್ಬರೂ ಹಾಕಿದ ಅಚಲವಾದ ಪಾಯವೇನಂದರೆ—ದೇವವಾಕ್ಯವೆಂಬ ಪರಿಶುದ್ಧ ಬರಹವು ವಿಶ್ವಾಸದ ಮತ್ತು ಜೀವಿಕೆಯ ಒಂದೇ ಆಧಾರವಾದದ್ದು[1]; ನ್ಯಾಯಪ್ರಮಾಣದ (ಮತ್ತು ಪಪ್ಪಕ ಸಭೋದ್ಯೋಗಿಗಳು ನೇಮಿಸುವ ಪ್ರಾಯಶ್ಚಿತ್ತಗಳ) ಕ್ರಿಯೆಗಳಿಂದಲ್ಲ ಕ್ರಿಸ್ತರಕ್ಷಕನ ಮೇಲಿನ ವಿಶ್ವಾಸದಿಂದ ಮಾತ್ರವೇ ಮನುಷ್ಯರು ದೇವರ ಮುಂದೆ ನೀತಿನಿರ್ಣಯದವರಾಗುತ್ತಾರೆ[2]; ಸತ್‌ಕ್ರೈಸ್ತರಿಂದಾಗುತ್ತಲೇ ಇರುವ ಸುಕ್ರಿಯೆಗಳು ಸ್ವಯಂಕೃತವಲ್ಲ ವಿಶ್ವಾಸದ ಫಲವೇ[3].— ಇವು ಮೂರು ವಿಷಯಗಳು ಕ್ರೈಸ್ತತ್ವದ ಅಸ್ತಿವಾರಗಳೇ! ಎಂತ, ಯಥಾರ್ಥ ಹೃದಯವುಳ್ಳ ಪ್ರತಿ ಮನುಷ್ಯನು ದೇವವಾಕ್ಯವನ್ನೋದುತ್ತಲೇ ತಿಳುಕೊಳ್ಳುವನು. ಲುಥರ ಚ್ವಿಂಗ್ಲಿ ಈ ಉಭಯತರು ರಾತ್ರಿಭೋಜನದ ಆಚಾರವನ್ನು ಪರಿಶುದ್ಧ ಬರಹಕ್ಕನುಗುಣವಾಗಿ ಪುನಃಸ್ಥಾಪಿಸಿ—ಸಭ್ಯರು ಕ್ರಿಸ್ತನಾಥನ ಸ್ಥಾಪನಾವಾಕ್ಯಗಳೊಡನೆ ಭಯಭಕ್ತಿಯಿಂದ ಆ ಭೋಜನವನ್ನಾಸ್ವಾದಿಸಿ, ಅವನು ಅದರಲ್ಲಿ ದಯೆ ಪಾಲಿಸುವ ತನ್ನ ರಕ್ತ ಶರೀರಗಳ ಅನ್ಯೋನ್ಯವೆಂಬ ರಹಸ್ಯ ಮಹಾಶೀರ್ವಾದಕ್ಕೆ[4] ಹೃದ್ವಾರವನ್ನು ತೆರೆದು, ಅದನ್ನೊಳ ಶೇರಲೀಸಲಿ! ಎಂದು, ವಿಧಿಸಿ, ಸಾಕೆನ್ನ ಬೇಕಾಗುತ್ತಿತ್ತು; ಅಷ್ಟರಲ್ಲಿ ಅವರು ಆ ರಹಸ್ಯಾರ್ಥದ ವಿಧವನ್ನು ಕುರಿತು ತಮ್ಮಷ್ಟಕ್ಕೆ ತಕ್ಕ ಪರ್ಯಾಲೋಚನೆ ಮಾಡಿ ಕೊಂಡು, ತಮ್ಮದೆಂತ, ದೈನ್ಯದಿಂದುಚ್ಚರಿಸಲಿಕ್ಕೆ ಅಭ್ಯಂತರವಿರುತ್ತಿದ್ದಿಲ್ಲ. ಆದರೆ ಅವರಿಬ್ಬರು ಆ ವಾಚಾತೀತ[5] ಅರ್ಥವ ಕುರಿತು ತಮ್ಮ ಸ್ವಂತ ವ್ಯಾಖ್ಯಾನ ಆಲೋಚನೆಗಳನ್ನು ಹೆಚ್ಚು ಕಡಿಮೆಯಾಗಿ ರಕ್ಷಣವಿಶ್ವಾಸಪ್ರಮಾಣಕ್ಕೆ ಕೂಡಿಸಿ

---

1) 172, 374ನೇ ಪಾನು; ಕೀರ್ತನೆ. 119, 103. 104. 105. 130. 137. 140. 160; ಯೆಶಾ. 40 8; ಯೆರೆಮಿ. 22, 29; ಲೂಕ. 11, 28; ಯೋಹಾ. 5, 39. 2) ರೋಮಿ. 3, 20. 28; 4, 3. 16; 11, 6; 2 ಕೊರಿ. 5, 21; ಗಲಾತ. 2, 16; 3, 10; ಎಫೆಸ.2, 8. 9; 2 ತಿಮೋ. 1, 9; ತಿತ. 3, 5; 419ನೇ ಪಾನು. 3) ಗಲಾ. 5, 6; ಯಕೋಬ. 2, 26; 1 ಯೋಹಾ. 4, 19; 2 ಕೊರಿ. 5, 14. 15. 4) 1 ಕೊರಿ. 10, 15. 16. 5) 183, 255ನೇ ಪಾನು ನೋಡು.

ದ್ದರಿಂದ ರಾತ್ರಿಭೋಜನದ ಅಂಥ ಅರ್ಥಕ್ಕೋಸ್ಕರ ದುಃಖಕರವಾದದ್ದೊಂದು ವಾಗ್ವಾದವು ಉದ್ಭವಿಸಿತು. ಅದು ನನ್ನ ಶರೀರವಾಗಿದೆ ಎಂತ, ಕ್ರಿಸ್ತನು ಹೇಳಿದ್ದರಲ್ಲಿ ಆಗಿದೆ ಎಂಬ ಮಾತಿನ ದೆಸೆಯಿಂದ ಆ ವಾದವು ಹತ್ತಿತು. ಜ್ವಿಂಗ್ಲಿಯು—ಆಗಿದೆ ಎಂಬದಕ್ಕೆ ಉಪಮೆ ಕೊಡುತ್ತದೆಂಬ ಅರ್ಥವಿದೆ; ರೊಟ್ಟಿಯೂ ದ್ರಾಕ್ಷೇ ರಸವೂ ಕ್ರೂಜೆಯಲ್ಲಿ ಮನುಷ್ಯರ ಪಾಪವಿಮೋಚನಕ್ಕಾಗಿ ಮುರಿದ ಕ್ರಿಸ್ತನ ದೇಹದ ಮತ್ತು ಚಲ್ಲಿದ ಅವನ ರಕ್ತದ ಉಪಮೆಯು ಮಾತ್ರವಾಗಿದ್ದು, ಈ ಪ್ರಕಾರದಿಂದ ವಿಶ್ವಾಸಿಗಳ ಹೃದಯಕ್ಕೆ ಆ ವಿಮೋಚಕ ಕಾರ್ಯದ ಜ್ಞಾಪಕ ಹಚ್ಚಿ, ಅದನ್ನಾದರಿಸುತ್ತವೆಂತ, ಚರ್ಚಿಸುತ್ತಿದ್ದನು; ಆದರೆ ಲುಥರನು—ಅಷ್ಟು ಮಾತ್ರವಲ್ಲ; ಆಗಿದೆ ಎಂಬದು ಹೆಚ್ಚು ಅರ್ಥ ಗುಂಭಿತವಾದದ್ದು, ಅದರಲ್ಲಿ ತತ್ವಭಾವದ ಅಭಿಪ್ರಾಯವು ಸಹ ಉಂಟು; ಕ್ರಿಸ್ತನ ಮಹಿಮಾಕೃತ ಶರೀರದ ಸನ್ನಿಧಾನವು ರಾತ್ರಿಭೋಜನದಲ್ಲಿ ಇರುವದು; ರೊಟ್ಟಿ ದ್ರಾಕ್ಷಾರಸಗಳ ಒಳಗೂ ಸಂಗಡಲೂ ಉಪಮೆಯಲ್ಲಿಯೂ ಕ್ರಿಸ್ತನ ಮಹಿಮಾಕೃತ ಶರೀರವನ್ನೂ ರಕ್ತವನ್ನೂ ಆಸ್ವಾದಿಸಲಾಗುವದು; ಅವಿಶ್ವಾಸಿಗಳಾದರೂ[1] ಪರಿಶುದ್ಧ ರಾತ್ರಿಭೋಜನಕ್ಕೆ ಬಂದರೆ ಆಜ್ಞಾನಿರ್ಣಯಕ್ಕಾಗಿ ಅವೆರಡನ್ನು ಹೊಂದುವರು; ವಸ್ತುಸಂಯೋಗವಾಗುವದು[2]! ಎಂತ, ಘೋಷಿಸುತ್ತಿದ್ದನು.—ಲುಥರನಿಗೆ ಕ್ರಿಸ್ತನ ಮಹಿಮಾಕೃತ (ದೇವೀಕೃತ) ದೇಹದ ಸರ್ವತ್ರತ್ವವು ಸಿದ್ಧಾಂತವೆನ್ನಿಸಿತು; ಜ್ವಿಂಗ್ಲಿಯ ಗ್ರಹಿಕೆಗೆ ಅದು ಸರಿ ಬೀಳಲಿಲ್ಲ.—ಕಲ್ವೀನನು, ಅಯೋಗ್ಯರಾದ ಅವಿಶ್ವಾಸಿಗಳು ರಾತ್ರಿಭೋಜನಕ್ಕೆ ಬಂದಾಗ್ಯೂ ಕ್ರಿಸ್ತನ ಮಾಂಸರಕ್ತಗಳ ಸಂಗಡದ ಎಂತೂ ಆಶೀರ್ವಾದಮಯವಾದ[3] ಅನ್ಯೋನ್ಯಕ್ಕೆ ಬರಲಾರರೆಂತ, ಹೇಳುವದೇ ಅವನಿಗೂ ಲುಥರನಿಗೂ ಪರಿಶುದ್ಧ ರಾತ್ರಿಭೋಜನವನ್ನು ಕುರಿತಿರುವ ಆಲೋಚನಾವ್ಯತ್ಯಾಸದ ಮುಖ್ಯ ವಿಷಯವು.

ಸೌವಾರ್ತಿಕ ಬೋಧಕರೂ ಪಂಡಿತರೂ ತಮ್ಮ ತಮ್ಮ ತಿಳುವಿಕೆಯಾದಂತೆ ಒಂದು ಪಾಲಾಗಿ ಲುಥರನ ಅಭಿಪ್ರಾಯವನ್ನು, ಮತ್ತೊಂದು ಪಾಲಾಗಿ ಜ್ವಿಂಗ್ಲಿಯದನ್ನು ಹಿಡು ಕೊಂಡು, ಪ್ರವರ್ಧಿಸಲಿಕ್ಕೆ ಯತ್ನಿಸುವದರಿಂದ ವಿಘ್ನಕರ ಭೇದವು ತೊಡಗುವಂದು ಹೆಸ್ಸೆನು ದೇಶದ[4] ಫಿಲಿಪ್ಪನೆಂಬ ಸೌವಾರ್ತಿಕ ಮಾಂಡಲಿಕನು[5], ಪಪ್ಪಕರೆದುರಾಗಿ ಸೌವಾರ್ತಿಕ ಕ್ರೈಸ್ತರು ಐಕ್ಯ ತಪ್ಪಿದವರಾದರೆ ಪುನಃಸ್ಥಾಪನಾಕಾರ್ಯಕ್ಕೆ ಆತಂಕವಾಗುವದೆಂದು, ದುಃಖಿಸಿ, ಬಿಗಿ ಅನ್ಯೋನ್ಯವನ್ನು ತಿರಿಗಿ ಹುಟ್ಟಿ

---

1) 1 ಕೊರಿ. 11, 27—30. 2) ಅಂದರೆ ರೊಟ್ಟಿ ದ್ರಾಕ್ಷಾರಸಗಳಾದ ವಸ್ತುಗಳೊಡನೆ ಕ್ರಿಸ್ತನ ಶರೀರವು ಬಂದು ಕೂಡಿರುವದು. 3) ಯೋಹಾ. 6, 32 ಆದಿ. 4) 305, 313ನೇ ಪಾನು.
5) ಮಾಂಡಲಿಕ is the German "Graf", ಪ್ರಾತ್ಯಂತಿಕ "Markgraf"; vid. Weber's I. Studien X, 2, p. 197.

ಸಲಿಕ್ಕೋಸ್ಕರ ಆ ಎರಡೂ ಸೌವಾರ್ತಿಕ ಶಾಖೆಗಳ ಮುಖ್ಯಸ್ಥರನ್ನು ಕ್ರಿ. ಶ. 1529ನೇ ವರುಷ ತನ್ನ ದೇಶದ ಮರ್ಬುರ್ಗ್‌ಎಂಬ ಪಟ್ಣಕ್ಕೆ ಮತಸಂಭಾಷಣಕ್ಕಾಗಿ ಕರೆಸಿದನು. ಆಗ ಲುಥರ ಜ್ವಿಂಗ್ಲಿ ಮುಂತಾದವರು ಸರ್ವಸಾಧಾರಣ ರಕ್ಷಣವಿಶ್ವಾಸಪ್ರಮಾಣದ ವಿಷಯ ಪೂರಾ ಒಡಂಬಟ್ಟರೂ ರಾತ್ರಿಭೋಜನದ ವಿಷಯವಾದ ಅವರವರ ಆಲೋಚನೆಗಳು ಮುಂಚಿನಂತೆ ಉಳಿದವು. ಆದಾಗ್ಯೂ ಆ ಸಮಯ ರಚಿತವಾದ 15 ಸೂತ್ರಗಳ ಕಡೆಯದರಲ್ಲಿ ಅವರವರು ನಿರ್ಣಯಿಸಿ ಹೇಳಿದ್ದೇನಂದರೆ—ಕ್ರಿಸ್ತನ ನಿಜ ಶರೀರ ರಕ್ತಗಳು ಸಾಕ್ಷಾತ್ತಾಗಿ ರೊಟ್ಟಿಯೊಳಗೂ ದ್ರಾಕ್ಷಾರಸದೊಳಗೂ ಇರುತ್ತವೋ? ಇಲ್ಲವೋ? ಎಂಬ ಪ್ರಶ್ನೆಯನ್ನು ಕುರಿತು ಈ ಹೊತ್ತು ಒಪ್ಪಂದವಾಗದಿದ್ದರೂ ಒಂದು ಶಾಖೆಯವರು ಮತ್ತೊಂದರವರಿಗೆ, ಒಬ್ಬೊಬ್ಬನ ಮನಃಸಾಕ್ಷಿಯು ಆಸ್ಪದವನ್ನು ಕೊಡುವಷ್ಟರ ಮಟ್ಟಿಗೆ, ಹ್ಯಾಗೂ ಕ್ರೈಸ್ತ ಪ್ರೀತಿಯನ್ನು ತೋರಿಸುತ್ತಾ ಇರ ಬೇಕಾದದ್ದಲ್ಲದೆ ಉಭಯ ಶಾಖೆಗಳವರು ಸರ್ವತ್ರಾಣಿಯಾದ ದೇವರ ಸನ್ನಿಧಿಯಲ್ಲಿ, ನಿನ್ನ ಆತ್ಮದಿಂದ ನಮ್ಮನ್ನು ಸತ್ಯಜ್ಞಾನದಲ್ಲಿ ನೆಲೆಗೊಳ್ಳಿಸೆಂದು, ಜಾಗರೂಕತೆಯಿಂದ ಬೇಡಿ ಕೊಳ್ಳುತ್ತಿರ ಬೇಕು. ಆಮೆನ್!—

ಜ್ವಿಂಗ್ಲಿಯು ಸತ್ತು, ಕಲ್ವೀನನು ಗೆನ್ಫಿಗೆ ಬಂದ ಮೇಲೆ ಇವನೂ ಬೇರೆ ಅನೇಕರೂ ಪರಿಶುದ್ಧ ರಾತ್ರಿಭೋಜನವನ್ನು ಕುರಿತು ಜ್ವಿಂಗ್ಲಿಗಿದ್ದ ಆಲೋಚನೆಯನ್ನು ಇನ್ನು ಕೈಕೊಳ್ಳದೆ—ದೇವರ ಬಲಪಾರ್ಶ್ವಕ್ಕೇರಿ ಹೋಗಿರುವ ಕ್ರಿಸ್ತನ ದೇಹದಿಂದ ಹೊರಡುವ ಶಕ್ತಿಯ ಮೂಲಕ ವಿಶ್ವಾಸಿಯು ಆತ್ಮೀಯ ರೀತಿಯಿಂದ[1] ವಾಸ್ತವ್ಯವಾಗಿ ಕರ್ತನ ಮಾಂಸ ರಕ್ತಗಳನ್ನಾಸ್ವಾದಿಸುತ್ತಾನೆ; ಕ್ರಿಸ್ತನ ಶರೀರವು ರೊಟ್ಟಿ ದ್ರಾಕ್ಷೇ ರಸಗಳೊಳಗೆ ಇರದಿದ್ದರೂ ಕ್ರಿಸ್ತನು ರಾತ್ರಿಭೋಜನದಲ್ಲಿ ಎಂತಾದರೂ ಸಭೆ ಎಂಬ ತನ್ನ ಮದುಮಗಳ ಮದುವಣಿಗನೆಂದು, ಬೋಧಿಸ ತೊಡಗಿದ ಬಳಿಕ ಅಂಥಾ ವ್ಯಾಖ್ಯಾನವು ಲುಥರನದಕ್ಕೆ ಪೂರ್ಣ ಸರಿಯಾಗದಿದ್ದಾಗ್ಯೂ ಕ್ರಿ. ಶ. 1537ನೇ ವರುಷ ಕೊಂಕೊರ್ದಿಯವೆಂಬ ಸಭಾಸಮಾಧಾನವು ಆಯಿತು. ಅಂದು ಲುಥರನು ಸ್ವೀಚ್ಸೆರ್ಲಂದಿನವರಿಗೆ ಬರೆದ್ದೊಂದು ಪತ್ರಿಕೆಯಲ್ಲಿರುವದೇನಂದರೆ—ರಾತ್ರಿಭೋಜನದ ರಹಸ್ಯ ಆಶೀರ್ವಾದದ ವಿಷಯದಲ್ಲಿ ನಮಗೆ ಪೂರ್ಣ ಐಕ್ಯವಾದ ಗ್ರಹಿಕೆಯು ಸದ್ಯಕ್ಕೆ ಇಲ್ಲದಿದ್ದರೂ ಒಬ್ಬರಿಗೊಬ್ಬರು ಸ್ನೇಹಭಾವದಿಂದಿದ್ದು, ಒಬ್ಬೊಬ್ಬರ ಕಡೆಯಿಂದ ಯಾವಾಗಲೂ ಶುಭವನ್ನೆದುರು ನೋಡುವದು ಅತಿ ಯುಕ್ತವಾಗಿದೆ; ಪರಿಶುದ್ಧಾತ್ಮದ ವೃತ್ತಿಗೆ ಸ್ಥಳ ಶಿಕ್ಕುವಂತೆ ನಮ್ಮ ನಮ್ಮ ಹೃದಯಗಳನ್ನು ಒಂದು ಗೂಡಿಸಿ, ಸಕಲ ಮನೋವೈಕಲ್ಯ ಬಿಟ್ಟು ಬಿಡೋಣ!—ಲುಥರನು ತಿರಿಗಿ ಬಿಡದ ಈ ಭಾವವು ಬಹಳ ರಮ್ಯವು; ಪರಿಶುದ್ಧ ರಾತ್ರಿಭೋಜನವು ಕ್ರೈಸ್ತ

1) 387ನೇ ಪಾನು.

ರನ್ನು ಬೇರೆ ಬೇರೆ ಮಾಡುವದಕ್ಕಲ್ಲ ಒಂದೇ ಮಾಡುವದಕ್ಕೆ ಸ್ಥಾಪಿತವಾಯಿತಲ್ಲವೋ[1]? ಆದರೆ ವಿಶೇಷವಾಗಿ ಪರಿಶುದ್ಧ ರಾತ್ರಿಭೋಜನದ ರಹಸ್ಯಾರ್ಥದ ವ್ಯಾಖ್ಯಾನಕ್ಕೋಸ್ಕರವೂ ಪುರಾವಸ್ಥಾಪನೆಯೆಂಬದಕ್ಕೋಸ್ಕರವೂ ಸೌವಾರ್ತಿಕರೊಳಗೆ ಸತ್ಯಶೋಧನಾರ್ಥದಲ್ಲಿ ಉತ್ಪನ್ನವಾದ ಲುಥರಿಕ (ಲುಥರೀಯ) ಚ್ವಿಂಗ್ಲಿಕ ಕಲ್ವೀನಕ ಎಂಬ ಮೂರು ಶಾಖೆಗಳವರು ಲುಥರನ ಮರಣದಿತ್ತ ಅನೇಕ ವರುಷ ತಿರಿತಿರಿಗಿ ತಮ್ಮ ತಮ್ಮ ಶಾಖೆಗೆ ಕಾರಣವಾಗಿದ್ದಂಥ ಆಯಾ ಆಲೋಚನಾವಿಷಯಗಳಿಗಾಗಿ ಪ್ರೀತಿ ಬಿಟ್ಟಂಥ ಬಹಳ ವಾಗ್ವಾದ ನಡಿಸುತ್ತಿದ್ದದ್ದು ತೀರ ಅಯೋಗ್ಯವೇ! ವಿವೇಕಿಗಳಾದ ಕ್ರೈಸ್ತರು ಸರ್ವತ್ರ ಸರ್ವದಾ ತಿಳು ಕೊಳ್ಳ ತಕ್ಕದ್ದೇನಂದರೆ— ದೇವವಾಕ್ಯದ ಸ್ಪಷ್ಟಾಸ್ಪಷ್ಟ ಅರ್ಥಗಳೆರಡನ್ನು ಜ್ಞಾನವೂ ಬುದ್ಧಿಯೂ ಯುಕ್ತವಾದ ಅರ್ಥವಾದದಿಂದ ದರ್ಶಿಸಿ, ಹೀಗೆ ಒಂದು ಧರ್ಮಪ್ರಸ್ಥಾನ ಕಟ್ಟುವ ಪ್ರಯತ್ನಗೈಯುವದು ಬಹು ವಿಹಿತ; ಆದರೂ ಅಂಥಾ ಪ್ರಸ್ಥಾನವು ಮುಖ್ಯವಾದ್ದಲ್ಲ, ಗೌಣವಾದ್ದು; ಎಲ್ಲಾ ಬುದ್ಧಿಯನ್ನು ಕ್ರಿಸ್ತನ ಮತ್ತು ಅವನ ಆಜ್ಞೆ ಪ್ರಕಟನಗಳೆರಡರ ವಿಧೇಯತ್ವಕ್ಕೆ ಶೆರೆ ಹಿಡಿದು, ತಂದೆಯ ಮಾತು ನಂಬಿ ಕೊಳ್ಳುವ ಮಕ್ಕಳಂತೆ, ಪಿತೃದೇವಾನಾದಿವಾಕ್ಕಾದಂಥ ಯೇಸು ಕ್ರಿಸ್ತನು ಮಾಂಸದಲ್ಲಿ ಬಂದನೆಂತ[2], ತ್ರಿಯೇಕ ದೇವರ ವಾಕ್ಯದಲ್ಲಿಯ ಸ್ಪಷ್ಟ ರಕ್ಷಣಾಂಶ ನಂಬಿ ಕೊಂಡು, ಇದಕ್ಕೆ ಬಿಗಿಯಾಗಿ ಸಂಬಂಧಿಸಿರುವ ಎರಡು ಪರಿಶುದ್ಧ ಸಂಸ್ಕಾರಗಳನ್ನು ವಿನಯಭಕ್ತಿಯೊಡನೆ ಆಚರಿಸುವದೇ ಮುಖ್ಯ. ಅತಿ ಶ್ರೇಷ್ಠ ಮಾರ್ಗವು ಪ್ರೀತಿಯೇ[3]!—

## 57. ಔಗ್ಸ್ಬುರ್ಗ್ ಪಟ್ಣದ ಮತಸಂಧಾನವು.

ಕ್ರಿ. ಶ. 1521ನೇ ವರುಷದಲ್ಲಿ ವೊರ್ಮ್ಸಿನ ನಿರ್ಣಯವೆಂಬದು ಸೌವಾರ್ತಿಕ ಕ್ರೈಸ್ತರ ಮೇಲೆ ರಾಜ್ಯದಲ್ಲಿ ಅನಾಥತ್ವವನ್ನು ಹಾಕಿದಂದಿನಿಂದ[4] ಗೆರ್ಮಾನಿಯದ ಹೊರಗೆ ಪಪ್ಪಕ ಅಧಿಕಾರ ಕುಂದದಾಳುವಂಥ ಕೆಲವು ದೇಶಗಳಲ್ಲಿ ಸೌವಾರ್ತಿಕರಿಗೆ ಕಠೋರ ಹಿಂಸೆ ಬಂದೊದಗಿದರೂ ಗೆರ್ಮಾನಿಯದಲ್ಲಿ ಎಂದಿನಂತೆ[5] ಪುನಃಸ್ಥಾಪನಾಕಾರ್ಯವನ್ನಡಗಿಸುವದಕ್ಕೆ ವಿಶೇಷವಾದದ್ದು ಸಂಭವಿಸಲಿಲ್ಲ; ಹ್ಯಾಗಂದರೆ, ಗೆರ್ಮಾನಿಯದ ಸಕಲ ಸ್ಥಿತಿಯವರಲ್ಲಿ ಪುನಃಸ್ಥಾಪನೆಯ ಕಾಂಕ್ಷೆಯು ಇನ್ನೂ ದೊಡ್ಡದಾಗಿ ಉಳಿದಿತ್ತು; ಅದು ಹೊರ್ತಾಗಿ, 5ನೇ ಕರ್ಲ ಕೈಸರನಿಗೆ, ತಾನು ತನ್ನೊಳಗಿರುವ ನೀದೆರ್ಲಂದಿನಲ್ಲಿಯೂ ಸ್ಪಾನಿಯದಲ್ಲಿಯೂ ಮಾಡುವಂತೆ[6], ಒಂ

1) 1 ಕೊರಿ. 10, 16. 17. 2) 1 ಯೋಹಾ. 4, 2. 3) 1 ಕೊರಿ. 13. 4) 425ನೇ ಪಾನು. 5) 428ನೇ ಪಾನು. 6) 60ನೇ ಸಂಧಿ ನೋಡು.

ದು ವೇಳೆ ಗೆರ್ಮಾನಿಯದಲ್ಲಿ ಸಹ ಕ್ರೌರ್ಯದಿಂದ ಪುನಃಸ್ಥಾಪನೆಗೆದುರಿಸುವ ಮ
ನಸ್ಸಿದ್ದರೆ ಫ್ರಂಚಿನ 1ನೇ ಫ್ರಂಚ ರಾಜನ ಸಂಗಡಲೂ ತುರ್ಕರ ಸಂಗಡಲೂ ಯುದ್ಧ
ವಿರುವದರಿಂದ ತನಗೆ ಆ ಎರಡು ಯುದ್ಧಕ್ಕೂ ಸೌವಾರ್ತಿಕರಾದ ಗೆರ್ಮಾನ ರಾ
ಜರ ಸಹಾಯವು ಅತ್ಯಗತ್ಯವಾದ ಕಾರಣ ಆ ವಿಧದಿಂದ ಎದುರಿಸ ಕೂಡಲಿಲ್ಲ;
ಅದು ವಿನಹ, ಗೆರ್ಮಾನಿಯವು ಅಂದು ಲೋಕದಲ್ಲಿ ಶ್ರೇಷ್ಠ ದೇಶವೂ ಕರ್ಲನ ರಾ
ಜತ್ವದ ಪ್ರಾಮುಖ್ಯ ಆಧಾರವೂ ಎನ್ನಿಸುವದರಿಂದ ಅವನು, ಅಂಥಾದ್ದರಲ್ಲಿ ಎಲ್ಲರಿ
ಗೂ ಅದೇ ನ್ಯಾಯ ತೋರಿಸುವದೇ ವಿಹಿತವೆಂದು, ತಿಳುಕೊಂಡಿದ್ದನು.

ಹೀಗಿರಲಾಗಿ ಕ್ರಿ. ಶ. 1529ನೇ ವರುಷ ಆ ಕೈಸರನು ವಿಶೇಷವಾಗಿ ತುರ್ಕರ
ಮೇಲಿನ ಭಯದಿಂದ ಸ್ಪೈಯೆರೆಂಬ ಗೆರ್ಮಾನ ಪಟ್ಣದಲ್ಲಿ ಒಂದು ರಾಜ್ಯಸದಸ್ಸನ್ನು
ನೆರೆಸಿದನು. ಕಠಿಣ ಪಪ್ಪಕರು ಅದರಲ್ಲಿ ಮಿಗಿಲಾಗಿದ್ದದರಿಂದ ಒರ್ಮ್ಸಿನ ನಿರ್ಣಯ
ವು ತಿರಿಗಿ ಸ್ಥಾಪಿಸಲಾಯಿತು. ಆಗ ಅಲ್ಲಿದ್ದ 5 ಜನ ಸೌವಾರ್ತಿಕ ರಾಜರೂ 14 ರಾ
ಜ್ಯಪಟ್ಣಗಳ[1] ಪ್ರೇಷಿತರೂ ಬೇರೆ ಉಪಾಯ ಕಾಣದೆ—ವಿಶ್ವಾಸದ ವಿಷಯಗಳಲ್ಲಿ
ಹೆಚ್ಚು ಸಂಖ್ಯೆಯವರು ಏನೂ ನಿಯಮ ಮಾಡಲಾಗದು, ಒಬ್ಬೊಬ್ಬ ಕ್ರೈಸ್ತನು ತನ್ನ
ತನ್ನ ಮನಃಸಾಕ್ಷಿಯ ಮೇಲೆ ನಡೆಯ ಬೇಕೆಂದು, ಹೇಳಿ, ಹೀಗೆ ಆ ನಿರ್ಣಯಕ್ಕೆ
ವಿರೋಧವಾಗಿ ಪ್ರೋತೆಸ್ತು ಎಂಬ ಪ್ರತಿಕೂಲ ವಾದ ಗೈದು, ಆ ನಿರ್ಣಯವು ಅ
ನ್ಯಾಯವಾದದ್ದೂ ಸಲ್ಲ ಬಾರದ್ದೂ! ಎಂತ, ತೋರಿಸಿದರು. ಅದರ ದೆಸೆಯಿಂದ
ಸೌವಾರ್ತಿಕ ಕ್ರೈಸ್ತರಿಗೆ ಪ್ರೋತೆಸ್ತಂತರು ಅಂದರೆ ಪಪ್ಪಕರಿಂದಾಗುವ ಬಲಾತ್ಕಾರ
ದ ಅನ್ಯಾಯನಿರ್ಣಯಗಳ ಪ್ರತಿಕೂಲವಾದಿಗಳೆಂಬ ಉಪನಾಮವು ಬಿತ್ತು. ಆ
ದರೆ ಪ್ರಜಾಭೇದನಿವಾರಣಕ್ಕೋಸ್ಕರ ಆ ಸದಸ್ಸಿನವರಲ್ಲಿ ಹೆಚ್ಚು ಮಂದಿಗೆ, ಕೈಸರ
ನಿಗೆ ಸಹ, ಸರ್ವರಿಗೂ ಏಕ ಭಾವದ ಸ್ವತಂತ್ರವಿರುವಂಥಾದ್ದೊಂದು ಸರ್ವಸಭಾ
ಸಂಘದಿಂದ ಮತಕಾರ್ಯಗಳನ್ನೆಲ್ಲಾ ಸರಿ ಗೊಳಿಸ ಬೇಕೆಂತ, ಹೇಳುವ ಅಪೇಕ್ಷೆ
ಇದ್ದು, ತೋರಿತು; ಅಧಿಕ ಸಂಖ್ಯೆಯವರಾದ ಪಪ್ಪಕರು, ಅಂದು ಗೆಲ್ಲುವವರು ತಾ
ವೇ ಎಂತ, ಏನೂ ಸಂಶಯ ಪಡಲಿಲ್ಲ.

ಮರುವರುಷ ಅಂದರೆ ಕ್ರಿ. ಶ. 1530ನೇದಕ್ಕೆ ಔಗ್ಸ್ಬುರ್ಗ ಪಟ್ಣದಲ್ಲಿ ಮತ್ತೊಂ
ದು ರಾಜ್ಯಸದಸ್ಸು ಆಯಿತು. ಸೌವಾರ್ತಿಕರು, ತಮ್ಮ ಬೋಧನಾರ್ಥವು ದೇವ
ವಾಕ್ಯಕ್ಕನುಗುಣವಾದದ್ದೆಂದು, ಕೈಸರನಿಗೂ ಸರ್ವ ರಾಜ್ಯದ ಪ್ರತಿನಿಧಿಗಳಿಗೂ ತಿ
ಳಿಸುವದಕ್ಕೋಸ್ಕರ ತಮ್ಮದೊಂದು ವಿಶ್ವಾಸಪ್ರಮಾಣವನ್ನು ರಚಿಸಿ, ತಂದು, ಆ
ಸದಸ್ಸಿನಲ್ಲಿ ಗೆರ್ಮಾನ ಭಾಷೆಯಿಂದ ಓದಿದರು; ಕ್ರಿಸ್ತನೂ ಅವನ ಪುಣ್ಯವೂ ರಕ್ಷ
ಣೆಯ ಒಂದೇ ಆಸ್ತಿವಾರವೆಂಬದು ಅದರ ಮುಖ್ಯ ತಾತ್ಪರ್ಯವು; ಪರಿಶುದ್ಧ ಬರ

1) 428. 429ನೇ ಪಾನು.

ಹಕ್ಕೊ ಅಪೊಸ್ತೊಲಿಕ[1] ನೀಕೇನ[2] ಅಥನಸಿಕ[2] ಎಂಬ ಪ್ರಾಚೀನ ಕಥೊಲಿಕವಾದ[3] ನ್ಯಾಯಪ್ರಮಾಣತ್ರಯಗಳಿಗೂ ಅನುಸರಿಸಿಯೇ ಅದು ಕಟ್ಟಿತ್ತು. ಅವರು ಅದನ್ನಲ್ಲಿ ಸರ್ವ ರಾಜ್ಯದವರ ಸಮಕ್ಷದೊಳು ಓದಿದ ಹಿಂದೆ ಅವರ ವಿಶ್ವಾಸಾರ್ಥವು ಸರ್ವತ್ರ ವಿಶದವಾಯಿತು. ಆದರೆ ಆ ವಿಶ್ವಾಸಪ್ರಮಾಣಕ್ಕೆ, ಔಗ್ಸ್ಬುರ್ಗಿನ ಕೊನ್ಫೆಸ್ಸಿಯೋನು ಎಂತಲೂ, ಔಗುಸ್ತಾನ ಎಂತಲೂ, ಹೆಸರಾಯಿತು. ಕರ್ಲ ಕೈಸರನು, ತಾನು ಕೃಪಾನ್ವಿತ ಮೆಚ್ಚಿಗೆಯೊಡನೆ ನಿಮ್ಮ ವಿಶ್ವಾಸಾರ್ಥದ ನಿವೇದನವನ್ನಾಲೈಸಿ ಕೊಂಡಿದ್ಧೇನೆಂತ, ಸೌವಾರ್ತಿಕರಿಗೆ ಹೇಳಿದನು; ಆದಾಗ್ಯೂ ಕಡು ಪಪ್ಪಕರಾದ ಮತೋದ್ಯೋಗಿಗಳ ವೈಮನಸ್ಸಿನಿಂದ ಪ್ರೇರಿತನಾಗಿ, ಇನ್ನು ಅಲ್ಲಿಯೇ ಸ್ವಲ್ಪ ಕಾಲದಿತ್ತ ಕಡೆ—ತಾನು ಪ್ರೋತೆಸ್ತಂತರಿಗೆ ಅರ್ಧ ವರುಷದ ಸಮಯ ಕೊಡುತ್ತೇನೆ; ಅಷ್ಟರೊಳಗೆ ಒಂದು ಸರ್ವಸಭಾಸಂಘವು ನೆರೆಯುವಲ್ಲಿ ನೀವು ಪಪ್ಪಕರ ಸಂಗಡ ತಿರಿಗಿ ಕೂಡಿ ಕೊಳ್ಳ ಬೇಕು; ತಾನು ಸಭೆಯ ಆಶ್ರಯದಾಯಕನಾದ ಮೇಲೆ ಗೆರ್ಮಾನಿಯದಲ್ಲಿ ಸಭಾಭೇದವಾಗಲೀಸುವದಿಲ್ಲ! ಎಂಬಂತೆ ಮಾತಾಡಿ, ಶತ್ರುತ್ವ ಕಾಣಿಸಿದನು. ತದನಂತರ ಸೌವಾರ್ತಿಕರಾದ 9 ಮಂದಿ ರಾಜರೂ 11 ರಾಜ್ಯಪಟ್ಣಗಳೂ ಒಂದಾಗಿ, ಮರುವರುಷ ಹೆಸ್ಸೆನಿನ ಪಟ್ಣವಾದ ಸ್ಮಲ್ಕಲ್ದೆನಿನಲ್ಲಿ 6 ವರುಷ ಸಲ್ಲ ತಕ್ಕದ್ದೊಂದು ಒಡಂಬಡಿಕೆಯನ್ನು ಮಾಡಿ ಕೊಂಡರು. ಹೀಗೆ ಕೈಸರನ ಕೈ ಕಟ್ಟಿದಂತಾಯಿತು; ಅವನು ಗೆರ್ಮಾನಿಯದ ಸೌವಾರ್ತಿಕರಿಗೆ ಮತ್ತೂ ಪ್ರಸಾದ ಕೊಡುವವನಾದನು. ಕ್ರಿ. ಶ. 1532ನೇದಕ್ಕೆ ವುಯಿರ್ತೆಂಬೆರ್ಗು ದೇಶದ ಪ್ರಭುವಾದ ಊಲ್ರೀಕನೆಂಬವನು ಅಲ್ಲಿ ಬ್ರೆಂತ್ಸನೆಂಬ ಯಶಸ್ವಿಯಾದ ಬೋಧಕನಿಂದ ಉದ್ಭವಿಸಿದ್ದ ಪುನಃಸ್ಥಾಪನೆಯನ್ನು ಸ್ಥಿರ ಪಡಿಸಿ, ಸ್ಮಲ್ಕಲ್ದೆನಿನ ಒಡಂಬಡಿಕೆಗೆ ಶೇರಿ ಕೊಂಡನು.

ಕ್ರಿ. ಶ. 1546ನೇ ಅಬ್ದದಾರಂಭಕ್ಕೆ ಲುಥರನು ತನ್ನ ಜನ್ಮಸ್ಥಳವಾದ ಐಸ್ಲೇಬೆನಿನಲ್ಲಿ 63 ವರುಷದವನಾಗಿ ಸಮಾಧಾನದಿಂದ ತೀರಿದನು. ತಾನು ಸಾಯುವದಕ್ಕಿಂತ ಸ್ವಲ್ಪ ನಿಮಿಷಗಳಿಗೀಚೆ ಮಾತ್ರ ಅವನು 3 ಸಾರಿ ಶ್ರದ್ಧೆಯೊಡನೆ, ಪಿತನೇ, ನಿನ್ನ ಕೈಗೆ ನನ್ನ ಆತ್ಮವನ್ನೊಪ್ಪಿಸಿ ಕೊಡುತ್ತೇನೆಂತ, ಕೂಗಿ, ಕಣ್ಣು ಮುಚ್ಚಿ ಕೊಂಡು, ಯಾವದಕ್ಕೂ ಉತ್ತರವೀಯದಿರಲು, ಸಕ್ಸೆನಿನ ಹಲ್ಲೆ ಪಟ್ಣದ ಸುಪೆರಿಂತೆಂದೆಂತನೆಂಬ ಒಳಅಧ್ಯಕ್ಷನಾದ ಯೋನನೆಂಬ ಮಹಾ ಪಂಡಿತನು ದೊಡ್ಡ ಸ್ವರದಿಂದ—ಮಾನ್ಯ ತಂದೆಯೇ, ಕ್ರಿಸ್ತನ ಮೇಲೆಯೂ ನೀವು ಪ್ರಸಂಗಿಸುತ್ತಿದ್ದ ಬೋಧನೆಯ ಮೇಲೆಯೂ ನೆಲಸಿ ಕೊಂಡಿದ್ದು, ಸಾಯುತ್ತೀರೋ? ಎಂತ, ಕೇಳುವಾಗ ಲುಥರನು ಘಟ್ಟಿಯಾಗಿ, ನೆರೆದವರೆಲ್ಲರ ಕಿವಿಗೆ ಬೀಳುವಂತೆ, ಹೌದು! ಎಂತ, ಸು

1) 97ನೇ ಪಾನು. 2) 186ನೇ ಪಾನು. 3) 187ನೇ ಪಾನು.

ಡಿದು, ಪಾವು ತಾಸು ಶಾಂತಿಸುಖನಿದ್ರೆಯೊಳಿದ್ದು, ಕೂಡಲೇ ತನ್ನ ಅಂತ್ಯ ಶ್ವಾಸವನ್ನು ಬಿಟ್ಟು ಕಳೆದು, ಪರಂಧಾಮವನ್ನೈದಿದನು.—ಸೌವಾರ್ತಿಕ ಕ್ರೈಸ್ತರು ತನ್ನ ಹೆಸರಿಗೆ ಹೆಚ್ಚು ಬೆಲೆ ಕಟ್ಟದಂತೆ ಲುಥರನಿಗೆ ನಿತ್ಯ ಅಪೇಕ್ಷೆ ಇರುತ್ತಿತ್ತು; ಆದ್ದರಿಂದ ಅವನು ಒಮ್ಮೆ ಹೇಳಿದ್ದೇನಂದರೆ—ನೀನು ಲುಥರಿಕನೆನ್ನಿಸಿ ಕೊಳ್ಳ ಬಾರದು! ಲುಥರನು ಎಷ್ಟರವನು? ಸೌವಾರ್ತಿಕ ಬೋಧನೆಯು ನನ್ನದಲ್ಲವಲ್ಲವೋ? ಇಂತಿರಲಿಕ್ಕೆ ಜನರು ನನ್ನ ಹೆಸರನ್ನು ಅಡಗಿಸಿಟ್ಟು, ಲುಥರಿಕರೆಂತಲ್ಲ ಕ್ರೈಸ್ತರೆಂತಲೇ ಕರೆಸಿ ಕೊಳ್ಳ ಬೇಕೆಂದು, ಬೇಡಿ ಕೊಳ್ಳುತ್ತೇನೆ. ಪಕ್ಷಕ್ಕಾಸ್ಪದವಾಗ ಬಹುದಾದಂಥ ಹೆಸರುಗಳನ್ನು ಅಳಿಸಿ ಬಿಡುವ! ಯಾವನ ಬೋಧನೆಯು ನಮಗುಂಟೋ, ಕ್ರಿಸ್ತನಾದ ಅವನ ಆಧಾರದ ಮೇಲೆ ಕ್ರೈಸ್ತರೆನ್ನಿಸಿ ಕೊಳ್ಳುವ! ನಾನು ಯಾರ ಯಜಮಾನನೂ ಅಲ್ಲ, ಮತ್ತು ಯಾರ ಯಜಮಾನನಾಗಲೂ ಒಲ್ಲೆನು!—ಅವನು ಬರೆದ ನೂರಾರು ಪ್ರಖ್ಯಾತ ಗ್ರಂಥಗಳನ್ನು ಕುರಿತು ಅವನು ಅದೇ ನಮ್ರತೆಯಿಂದ, ನನ್ನ ಹಿಂದೆ ಬರುವವರು ನನ್ನವುಗಳಿಗಿಂತ ಚಲೋ ಕೃತಿಗಳನ್ನು ರಚಿಸುವರೆಂದು, ಹೇಳಿದನು.—

ಅಷ್ಟರೊಳಗೆ ಕ್ರಿ. ಶ. 1534ನೇ ವರುಷ ಆ 7ನೇ ಕ್ಲೇಮೆಂತ ಪಪ್ಪನ[1] ಸ್ಥಳದಲ್ಲಿ 3ನೇ ಪೌಲನೆಂಬವನು ಬಂದಿದ್ದನು; ಇವನಿಗೊಬ್ಬ ಪಟಿಂಗ ಮಗನಿದ್ದದರಿಂದಲೇ[2] ಅವನ ಗುಣವನ್ನು ತಕ್ಕಷ್ಟು ತಿಳುಕೊಳ್ಳ ಬಹುದು; ಕ್ರಿ. ಶ. 1542ನೇದಕ್ಕೆ ಆ ಪಪ್ಪನು ಈತಲಿಯದಲ್ಲಿ ತೊಡಗಿರುವ ಪುನಃಸ್ಥಾಪನಾಕಾರ್ಯವನ್ನು ನಿರ್ಮೂಲ ಮಾಡುವ ಉದ್ದಿಶ್ಯ ಗುಪ್ತವಿಚಾರಣವನ್ನು ಅಲ್ಲಿ ಶೇರಿಸಿದನು. ತನ್ಮಧ್ಯ ಕರ್ಲ ಕೈಸರನು ಫ್ರಂಚರ ಸಂಗಡಲೂ ತುರ್ಕರ ಸಂಗಡಲೂ ಸಮಾಧಾನದವನಾಗಿ, ಆ ಪಪ್ಪನಿಗೆ, ಮತಕಾರ್ಯಗಳನ್ನು ನಿಮ್ಮ ಮನಸ್ಸಿನ ಪ್ರಕಾರ ಸರಿ ಗೊಳ್ಳಿಸುವಂತೆ ಈಗ ಆ ಸರ್ವಸಭಾಸಂಘವಾಗ ಬೇಕೆಂದು[3], ಬಿನ್ನವಿಸಲು, ಆ ಪಪ್ಪನು ಲುಥರನ ಮರಣಕ್ಕೆ ಎರಡು ತಿಂಗಳು ಮುಂಚೆ ಕೈಸರನ ಆಜ್ಞೆಯ ಪ್ರಕಾರ ಗೆರ್ಮಾನಿಯದ ತಿರೋಲು ಶೀಮೆಯ ತ್ರಿಯೆಂತೆಂಬ ಪಟ್ಣದಲ್ಲಿ ಅದನ್ನು ಕೂಡಲಿಕ್ಕೆ ಹೇಳಿದನು. ಆದರೆ ಕೈಸರನ ಇಚ್ಛೆಗೆ ಸಹ ಪ್ರತಿಕೂಲವಾಗಿ ಅದು ಸರ್ವಸಭಾಸಂಘವಾಗದೆ, ಈತಲಿಯದ ಮತ್ತು ಸ್ಪಾನಿಯದ ದೊಮಿನಿಕಾನ ಮಠಿಕಕುಲದವರ ದಾಯಿತಷ್ಟೇ; ಆರಂಭದಲ್ಲೇ, ಗೆರ್ಮಾನಿಯದ ಕಥರರೆಂಬ ಸೌವಾರ್ತಿಕರಲ್ಲಿ ಯಾರೂ ಬರ ಬಾರದೆಂತ, ಹೇಳುವಂಥ ವ್ಯವಸ್ಥೆಯು ಆ ಸಂಘದವರಿಂದ ಹೊರಟಿತು. ಪಪ್ಪನ ಮನೋರ್ಥ ಒಂದೇ ಸಲ್ಲುವದೆಂಬದು ಸ್ಪಷ್ಟ ತಿಳಿಯಿತು. ಕರ್ಲ ಕೈಸರ

1) 428ನೇ ಪಾನು. 2) Peter Aloys Farnese ಎಂಬವನು. 3) 444, 445ನೇ ಪಾನುಗಳು.

ನ ತಮ್ಮನಾದ ಫೇರ್ದಿನಂದ ರಾಜನು ವೀನೆಂಬ ಪಟ್ಣದಿಂದ[1] ತ್ರಿಯೆಂತಿಗೆ ಕಳುಹಿಸಿದ ದೂದಿಥನೆಂಬ ಪಪ್ಪಕ ಅಧ್ಯಕ್ಷನು ವೀನಿಗೆ ಆ ಸಂಘವನ್ನು ಕುರಿತು ಬರೆದು ತಲಪಿಸಿದ್ದೊಂದು ಪತ್ರಿಕೆಯಲ್ಲಿರುವದೇನಂದರೆ—ಹೆಚ್ಚು ಮಂದಿ ವಿಾಶೆ ಬಾರದಿದ್ದ ಮತ್ತು ಅತಿವ್ರಯದಿಂದ ಕೆಟ್ಟ ಯೌವನಸ್ಥರಾದ ಪಪ್ಪನರಮನೆಯ ಉಪಜೀವಿಗಳೂ ಬಡವರೂ ಆಗಿರುವಂಥ ಅಧ್ಯಕ್ಷರು ಪಪ್ಪನ ಅಭಿಪ್ರಾಯಕ್ಕೆ ಸಮ್ಮತಿಸುವದಕ್ಕೋಸ್ಕರ ತ್ರಿಯೆಂತಿಗೆ ಹಾದು ಬರುತ್ತಿರುವದು ದಿನಾಲು ಕಾಣುತ್ತದೆ; ಅವರು ಅವಿದ್ವಾಂಸರೂ ದಡ್ಡರೂ ಆಗಿದ್ದಾಗ್ಯೂ ತಮ್ಮ ನಿರ್ಲಜ್ಜೆಯಿಂದಲೂ ಅಸಾಧಾರಣ ಧೈರ್ಯದಿಂದಲೂ ಪ್ರಯೋಜನಕ್ಕೆ ಬೀಳುತ್ತಿದ್ದಾರೆ. ಹಾಗಾದರೆ ಸಭೆಯ ವಿಷಯಗಳನ್ನು ಕುರಿತು ಅಧ್ಯಕ್ಷರಿಂದಲ್ಲ ಅಂಥಾ ಬೊಂಬೆಗಳಿಂದಲೇ ವ್ಯವಸ್ಥೆಯಾಗುವಂತೆ ನಡೆಯುತ್ತಿದೆ. ಈ ಸಂಘಕ್ಕೂ ಪರಿಶುದ್ಧಾತ್ಮಕ್ಕೂ ಏನೂ ಸಂಬಂಧವಿಲ್ಲ. ರೋಮದವರು ಸಂಘವನ್ನಾಳ ತಕ್ಕ ಪರಿಶುದ್ಧಾತ್ಮವನ್ನು ಹಸಬೆಚೀಲದೊಳು ತುಂಬಿಸಿ, ಕಳುಹಿಸುತ್ತಿದ್ದಾರೆ; ಒಮ್ಮೆ ಹಲವು ಹೊಳೆಗಳು ಹೆಚ್ಚಾಗಿ ಬಿದ್ದಿರುವಂದು ತಿರಿಗಿ ಮುಂಚಿನಂತಾಗುವನಕ ಆ ಆತ್ಮವು ಬರ ಕೂಡದಿತ್ತು. ಅಂಥಾ ಸಂಘದವರ ಮಟ್ಟಮೊದಲಿನ ವ್ಯವಸ್ಥೆ ಏನಂದರೆ—ಅಪೊಕ್ರುಫಗಳೆಂಬ ದೇವವಾಕ್ಯವಲ್ಲದ ಗ್ರಂಥಗಳು[2] ದೇವವಾಕ್ಯವೇ! ವುಲ್ಗಾತವೆಂಬ ಭಾಷಾಂತರವೇ[3] ದೇವವಾಕ್ಯದ ಒಂದೇ ನಿಜವಾದ ವ್ಯಾಖ್ಯಾನವು! ಪರಿಶುದ್ಧ ಬರಹದ ಸಂಗಡ ತ್ರಾದಿತಿಯೋನುಗಳೇ[4] ವಿಶ್ವಾಸಪ್ರಮಾಣದ ಮತ್ತೊಂದು ಬುಗ್ಗೆಯು!—ಅದಲ್ಲದೆ, ಸೌವಾರ್ತಿಕ ಕ್ರೈಸ್ತರೆಲ್ಲರ ಮೇಲೆ ಶಾಪ ಹಾಕಲಾಯಿತು. ಅಂಥಾ ಸಭಾಸಂಘವು ಸೌವಾರ್ತಿಕರಲ್ಲಿ ಯಾರಿಗೂ ಒಪ್ಪದ್ದು ಸಹಜ. ಕ್ರಿ. ಶ. 1545ನೇ ವರ್ಷದಿಂದ 1563ನೇದರ ವರೆಗೆ ಹಲವು ಸರ್ತಿ ಬಿಚ್ಚಿ ಹೋಗಿ ತಿರಿಗಿ ನೆರೆಯುತ್ತಿದ್ದ ಆ ಸಂಘದ ಇತರ ವಿಷಯವನ್ನು ಮುಂದಾಗಿ ಈ ಕಡೆಯಲ್ಲಿ ಹೇಳೋಣ.

ಮೊದಲಿನ ಸರ್ತಿ 3ನೇ ಪೌಲ ಪಪ್ಪನ ಕೆಳಗೆ ಕೂಡಿದ ಅದು ಅವನ ಮನೋಭಯದ ದೆಸೆಯಿಂದ 1548ನೇದರಲ್ಲಿ ಹೀರಿ ಹೋಯಿತು; ಹ್ಯಾಗಂದರೆ, ಕರ್ಲ ಕೈಸರನು, ತನ್ನ ಗೆರ್ಮಾನ ಸಾಮ್ರಾಜ್ಯವು ಪೂರ್ಣ ಐಕ್ಯದಲ್ಲಿದ್ದು ಭದ್ರವಾಗಿರಲೆಂದು, ಅಭಿಲಾಷಿಸಿ—ಆ ಸಭಾಸಂಘದವರು ಪುನಃಸ್ಥಾಪನೆಯ ಅಲ್ಪವಾದ್ದೊಂದು ಕಾರ್ಯದಿಂದಲಾದರೂ ಗೆರ್ಮಾನ ಸೌವಾರ್ತಿಕ ರಾಜರನ್ನೂ ಪ್ರಜೆಯವರನ್ನೂ ಪುಸಲಾಯಿಸದೆ, ಒಮ್ಮಿಂದೊಮ್ಮೆ ಅವರಿಗೆ ಶಪಿಸಿ, ಹೀಗೆ ರಾಜ್ಯದೊಳಗಿನ ನಿತ್ಯ ಮತಭೇದಕ್ಕೆ ಕಾರಣರಾದರೆಂತ, ತಿಳಿದು, ರೋಷ ಗೊಂಡಿದ್ದನು. ಪೌಲನು ಎರಡು ವರುಷದಿತ್ತ ಸಾಯಲು, 3ನೇ ಯೂಲಿಯನು ಪಪ್ಪನಾದನು. ಇವನು ಸಹ

1) 434ನೇ ಪಾನು. 2) 386ನೇ ಪಾನು. 3) 173, 412ನೇ ಪಾನು. 4) 357ನೇ ಪಾನು.

ಒಳ್ಳೇ ಮನುಷ್ಯನಲ್ಲ; ದೃಷ್ಟಾಂತಕ್ಕಾಗಿ ಅವನು ಒಮ್ಮೆ 16 ವರುಷದವನೊಬ್ಬ ಕಪಿಪಾಲಕನಿಗೆ ಕರ್ದಿನಾಲುದ್ಯೋಗ ಕೊಟ್ಟಾಗ ತನಗೆ ಗದರಿಸಿದವರಿಗೆ—ನೀವು ನನ್ನನ್ನು, ಪಪ್ಪನೆಂತ, ಆರಿಸಿಟ್ಟದ್ದಕ್ಕೆ ನನ್ನಲ್ಲಿ ನಿಮಗೆ ಯಾವ ಸುಗುಣಗಳು ಕಂಡಿದ್ದವು? ಎಂತ, ಕೇಳಿದನು. ಅವನ ಆಡಳಿತೆಯಲ್ಲಿ ಆ ಸಂಘವು ಕ್ರಿ. ಶ. 1551ನೇ ವರುಷದಿಂದ 1552ನೇದರ ತನಕ ಮರಳಿ ತ್ರಿಯೆಂತಿನಲ್ಲಿ ಕೂಡಿತು. ಬಳಿಕ 3 ವರುಷಕ್ಕೀಚೆ 4ನೇ ಪೌಲನೆಂಬ ಕ್ರೂರನು ಪಪ್ಪೋದ್ಯೋಗಕ್ಕೆ ಬಂದನು. ಅವನ ಮೇಲ್ವಿಚಾರಣದಲ್ಲಿ ಗುಪ್ತವಿಚಾರಣಧರ್ಮವು ಈತಲಿಯದಲ್ಲಿಯೂ[1] ಸ್ಪಾನಿಯದಲ್ಲಿಯೂ ನಿಜ ಸೌವಾರ್ತಿಕರಿಗೆ ವಿರೋಧವಾಗಿ ಮಾತ್ರವಲ್ಲದೆ ಯಾವದೊಂದೂ ಸೌವಾರ್ತಿಕ ಆಲೋಚನೆಯನ್ನುಚ್ಚರಿಸುವವರೆಲ್ಲರಿಗೆ ವಿರೋಧವಾಗಿ ಸಹ ಅಘೋರ ರೀತಿಯಿಂದ ನಡೆಯಿತು. ಅವನು ಸೌವಾರ್ತಿಕರಾದ ಗೆರ್ಮಾನರಿಗೆ ಅಂದೂ ಒಲುಮೆ ತೋರಿಸುತ್ತಿರ ಬೇಕಾದಂಥ ಕರ್ಲ ಕೈಸರನ ಪ್ರಚಂಡ ವೈರಿಯು; ಇವನ ತಮ್ಮನಾದ ಆ ಫೆರ್ದಿನಂದನು[2] ಕ್ರಿ. ಶ. 1556ನೇ ವರುಷ ಉತ್ತರೋದ್ಯೋಗಿಯಾಗುವದಕ್ಕೂ ಅವನು ಎದುರಿಸಿದನು. ಹೀಗಿರಲಾಗಿ, ಪಪ್ಪರ ಮಾನವು ಮುಂಚಿಗಿಂತಲೂ ಕುಂದಿದ್ದಕ್ಕೆ ಕಾರಣ ಹುಡುಕುವದೇನು? ಪಪ್ಪಕಮತಸ್ಥನೂ ಗೆರ್ಮಾನ ರಾಜ್ಯದ ಮಹಾ ಮಂತ್ರಿಯೂ ಆದ ಸೆಲ್ದನೆಂಬವನು ಆಗ ಹೇಳಿದ್ದೇನಂದರೆ—ಪೂರ್ವದಲ್ಲಿ ಪಪ್ಪರಿಗೆ ಆರಾಧಿಸುವಂತೆ ಮಾಡುತ್ತಾ, ದೇವರೆಂದೆಣಿಸುತ್ತಾ ಇದ್ದರು[3], ಆದರೆ ನಮ್ಮ ಸಮಯದಲ್ಲಿ ಕ್ರೈಸ್ತತ್ವದವರದೊಂದು ದೊಡ್ಡ ಪಾಲು ಪಪ್ಪನನ್ನು ತುಚ್ಛೀಕರಿಸುತ್ತದೆ; ಪೂರ್ವದಲ್ಲಿ ಜನರು ಐಹಿಕ ಮರಣಕ್ಕಿಂತ ಆ ಪಪ್ಪರ ಬನ್ನಿಗೆ ಹೆದರುತ್ತಿದ್ದರು, ಆದರೆ ನಮ್ಮ ಕಾಲದಲ್ಲಿ ಅದಕ್ಕೆ ನಗ್ಯಾಡುತ್ತಾರೆ.—4ನೇ ಪೌಲನು ಸತ್ತಾಗ ರೋಮಪುರದ ನಿವಾಸಿಗಳು ತಮ್ಮಲ್ಲಿಯ ಗುಪ್ತವಿಚಾರಕರ ಮಂದಿರವನ್ನು ಕೆಡಿಸಿ, ಅವರನ್ನು ಕೊಂದು, ಪೌಲನ ಪ್ರತಿಮಾಸ್ತಂಭವನ್ನು ಕೆಡವಿ ಬಿಟ್ಟರು. 4ನೇ ಪಿಯುಸು ಪೌಲನ ಉತ್ತರೋದ್ಯೋಗಿಯಾಗಿ, ಇವನ ಹೆಜ್ಜೆಗಳನ್ನು ಹಿಡು ಕೊಂಡು ಹೋದನು; ಪೂರ್ವದಲ್ಲಿ ನೆರೋನ ಮುಂತಾದ ಕೈಸರರು ರೋಮದಲ್ಲಿ ಕ್ರೈಸ್ತರನ್ನು ಮೃಗಗಳ ಮುಂದೆ ಹಾಕುತ್ತಿದ್ದ ರಂಗಸ್ಥಳದಲ್ಲಿ[4] ಅವನು ಒಂದು ಶೆರೆಮನೆ ಕಟ್ಟಿ, ತನ್ನ ಕಾಲದ ಸತ್ಕ್ರೈಸ್ತರನ್ನು ಒಳ ಹಾಕುತ್ತಿರುವನು; ಅವನು ಕ್ರಿ. ಶ. 1560ನೇದಕ್ಕೆ ಇನ್ನೊಂದು ಸರ್ತಿ ತ್ರಿಯೆಂತಿನ ಸಭಾಸಂಘವನ್ನು ನೆರೆಸಿದಂದು ಅದು 3 ವರುಷ ನಡಿಯಿತು; ಅದು ಸೌವಾರ್ತಿಕ ಕ್ರೈಸ್ತರಿಗೆ ಶಪಿಸುವದನ್ನು ತೀರಿಸಿದ ಬಳಿಕ ಮತಾಧಿಕಾರಿಗಳ ಬಲವನ್ನು ಹೆಚ್ಚಿಸಿ, ರಾಜ್ಯಾಧಿಕಾರಿಗಳ ಬಲವನ್ನು ಕಡಿಮೆ ಮಾಡುವದಕ್ಕೆ ತೊಡಗಲು, ಅದು ಇವರು

1) 446ನೇ ಪಾನು. 2) 447ನೇ ಪಾನು. 3) 280ನೇ, 414ನೇ ಪಾನು. 4) 102, 103, 133ನೇ ಪಾನು.

ತೋರಿಸಿದ ಬೆದರಿಕೆಯಿಂದ ಬೇಗನೆ ಚದರಿ, ಮತ್ತೂ ಕೂಡಲಿಲ್ಲ.—ತ್ರಿಯೆಂತಿನಲ್ಲಿ ನೆರೆದು ಬರುವಂದಂದು ಸೌವಾರ್ತಿಕ ಬೋಧನೆಗೂ ಸಭೆಗೂ ಎದುರಿಸುತ್ತಿದ್ದದ್ದೇ ಆ ಪಪ್ಪಕ ಸಭಾಸಂಘದ ಮುಖ್ಯಾಭಿಪ್ರಾಯವು; ಮುಂಚೆ ಪಪ್ಪಕರಲ್ಲಿ ನಡೆಯುತ್ತಿದ್ದ ಸಂತರ ಮತ್ತು ಸಂತಾವಶಿಷ್ಟಗಳ ಪೂಜೆ ಮಿಸ್ಸಯಾಗ ಕ್ಷಮಾವಿಕ್ರಯ ಮುಂತಾದ ದುರಾಚಾರಗಳೂ ಪೆಲಗಿಯತ್ವದ[1] ಪಾಷಂಡಗಳೂ[2] ಸಂಸ್ಥಾಪಿತವಾದವು; ಸ್ವಕ್ರಿಯೆಗಳಿಂದಲ್ಲ ವಿಶ್ವಾಸದಿಂದಲೇ ಪಾಪಿಷ್ಠನು ದೇವರ ಸಮಕ್ಷದಲ್ಲಿ ನೀತಿನಿರ್ಣಯ ಪಡುತ್ತಾನೆಂಬ ದೇವವಾಕ್ಯದ ಮಂಗಳ ಸುವಾರ್ತೆಗೆ, ಹೆಚ್ಚಾಗಿ ಯೇಸುವಿತರೆಂಬ ಹೊಸ ಕುಲದವರಿಂದ[3], ಎದುರ್ಚಂಡಿಸಲಾಯಿತು. ಹೀಗಿರಲಾಗಿ, ಪಪ್ಪಕ ಪಕ್ಷದ ಸರ್ವಸಭಾಸಂಘದವರೆನ್ನಿಸಿ ಕೊಂಡು ತ್ರಿಯೆಂತಿನಲ್ಲಿ ಕೂಡಿದ್ದವರು ದೇವವಾಕ್ಯಾರ್ಥವನ್ನೂ ಕಥೊಲಿಕ[4] ರಕ್ಷಣಪ್ರಮಾಣವನ್ನೂ ತಮ್ಮ ವ್ಯವಸ್ಥೆಗಳಿಂದ ಅನೇಕಶಃ ಉಪೇಕ್ಷಿಸಿ, ತಳ್ಳಿ ಬಿಟ್ಟು, ಸ್ವಾರ್ಥವೂ ಪಪ್ಪಕ ಸಾಂಪ್ರದಾಯವೂ ಉಳ್ಳಂಥ ರಕ್ಷಣಪ್ರಮಾಣವನ್ನು ಸ್ಥಾಪಿಸಿದ್ದರಿಂದ[5] ಪಪ್ಪಕ ಬಹಿಃಸಭೆಯವರು ಇನ್ನು ಪಕ್ಷಕರಾಗಿ ಮಾತ್ರವಲ್ಲದೆ ಭೇದಕರಾಗಿಯೇ ಅಂದರೆ ಕ್ರೈಸ್ತ ಬಹಿಃಸಭೆಯಿಂದ ತಮ್ಮನ್ನು ಕಡಿದು ಕೊಂಡವರಾಗಿಯೇ[6] ತೋರುವದಕ್ಕೆ ಕಾರಣರಾದರು. ತ್ರಿಯೆಂತಿನ ಸಂಘ ಹರಿದು ಹೋದಾಗಲೇ 4ನೇ ಪಿಯ ಪಪ್ಪನು, ದೇವರವಾಕ್ಯದ್ದೊಂದು ದೇಶೀಯ ಭಾಷಾಂತರ ಓದಲಿಚ್ಛೈಸುವವನು ಅಧ್ಯಕ್ಷರ ಅಥವಾ ಗುಪ್ತವಿಚಾರಕರ ಅಪ್ಪಣೆ ಪಡ ಕೊಂಡ ಹೊರ್ತು ಓದ ಬಾರದೆಂದು, ನಿರ್ದೇಶಿಸಿದನು[7].—ಆದರೆ ಈಗ ಪುನಃಸ್ಥಾಪನೆಯ ಕಾರ್ಯದ ಸ್ಥಿತಿ ಗತಿಗಳನ್ನು ತಿರಿಗಿ ನೋಡೋಣ!

ಲುಥರನನ್ನು ಹುಗಿದಾಗಲೇ ಆ 3ನೇ ಪೌಲ ಪಪ್ಪನು[8], ತ್ರಿಯೆಂತಿನ ಸಂಘದಿಂದ ಹೊರಡುವ ತನ್ನ ಸ್ವನಿರ್ಣಯಗಳಿಗೆ ಸೌವಾರ್ತಿಕರು ಒಡಂಬಡುವದಿಲ್ಲವೆಂತ, ಕಂಡು, ಸೌವಾರ್ತಿಕರೆಂಬ ಕಥರರನ್ನು ಅಣಗಿಸಿರೆಂದು, ಕೈಸರನಿಗೆ ನಾನಾ ಪ್ರಕಾರದಿಂದ ದುರ್ಬುದ್ಧಿ ಹೇಳಿ, ನೀವು ಹಾಗೆ ಮಾಡಿದರೆ ನಿಮಗೆ ಜನಧನಸಹಾಯವನ್ನು ಮುಟ್ಟಿಸುವೆನೆಂದು, ಮಾತು ಕೊಟ್ಟನು. ಆ ಕೈಸರನು ಸಮ್ಮತಿಸಲಾಗಿ, ಇನ್ನೂ ಅದೇ 1546ನೇ ವರುಷದಲ್ಲಿ ಕೈಸರನಿಗೂ ಸ್ಮಲ್ಕಲ್ದೆನಿನ ಒಡಂಬಡಿಕೆಯವರಿಗೂ ಯುದ್ಧವು ಹತ್ತಿತು; ಅದು ಎರಡು ವರುಷ ನಡೆದು, ತೀರಿತು. ತರುವಾಯ

1) 426ನೇ ಪಾನು. 2) 349 ಆದಿ ಪಾನು. 3) 59ನೇ ಸಂಧಿ. 4) 445ನೇ ಪಾನು. 5) Professio fidei tridentinae (A. D. 1564); Catechismus romanus (1566); Breviarium romanum (1568); Missale romanum (1570). 6) 165ನೇ ಪಾನು. 7) 389ನೇ ಪಾನು. 8) 446, 447ನೇ ಪಾನುಗಳು.

ಸೌವಾರ್ತಿಕರಿಗೂ ಪಪ್ಪಕರಿಗೂ ಮತಸಂಧಾನವು ಅಂದರೆ ಪಪ್ಪಕ ಮತದವರು ಸೌವಾರ್ತಿಕ ಮತದವರನ್ನೂ ಇವರು ಅವರನ್ನೂ ಸೌಜನ್ಯದಿಂದ ಸಹಿಸುವ ಸಂಧಾನವಾಗುವಂತೆ ಹಲವು ಪ್ರಯತ್ನಗಳಾದದ್ದು ಫಲಕ್ಕೆ ಬಾರದ ಮೇಲೆ ಕ್ರಿ. ಶ. 1555ನೇ ವರುಷ ಔಗ್ಸ್ಬುರ್ಗ್ ಪಟ್ಣದಲ್ಲಿಯ ಮತ್ತೊಂದು ರಾಜ್ಯಸದಸ್ಸಿನಲ್ಲಿ ಅಂಥ ಮತಸಂಧಾನವು ಸ್ಥಾಪಿಸಲಾಯಿತು. ಅದರಿಂದ ಗೆರ್ಮಾನ ಭಾಷೆಯ ಸಕಲ ಸೌವಾರ್ತಿಕರಿಗೂ ಪೂರ್ಣ ಮತಾಚಾರಸ್ವಾತಂತ್ರ್ಯವೂ ಪಪ್ಪನ ಅನಧಿಕಾರತ್ವವೂ ಪಪ್ಪಕರಿಗಿರುವಂಥ ಅದೇ ಅಧಿಕಾರವೂ ಪಪ್ಪಕ ಅಧ್ಯಕ್ಷರ ವಿಚಾರಣದ ಅನರ್ಹತ್ವವೂ ಸದ್ಯಕ್ಕೆ ಸೌವಾರ್ತಿಕ ಸಭೆಯ ಉಪಯೋಗಕ್ಕೆ ತೆಗೆದಿರುವ ಬದುಕು ಬಾಳು ಅದಕ್ಕುಳಿದಿರಲೆಂಬ ನಿಬಂಧನೆಯೂ ನೇಮಿತವಾದವು. ಆದರೆ ತೊಂದರೆ ಕೊಡುವಂಥ ಎರಡು ಸೂತ್ರಗಳು ಸಹ ಈ ವಿಷಯದಲ್ಲಿ ಕೈಸರನಿಗಿದ್ದ ಕಠಿಣತ್ವದಿಂದ ಆ ಸಂಧಾನದಲ್ಲಿ ಶೇರಿದವು; ಸೌವಾರ್ತಿಕ ಬೋಧನೆಯು ಇನ್ನು ನೆಲೆಗೊಳ್ಳದೆ ಪಪ್ಪಕ ಸಭೋದ್ಯೋಗಿಗಳಾಳುವಂಥ ತುಕ್ಕಡಿಗಳವರು ಸೌವಾರ್ತಿಕರಾಗ ಬಾರದೆಂಬದು ಒಂದು; ಪಪ್ಪಕ ಪ್ರಧಾನಾಧ್ಯಕ್ಷರೂ ಅಧ್ಯಕ್ಷರೂ ಇತರ ಸಭೋದ್ಯೋಗಿಗಳೂ ಸೌವಾರ್ತಿಕ ಕ್ರೈಸ್ತರಾದರೆ ಮಾನ ಗುಂದದಿದ್ದರೂ ತಮ್ಮ ತಮ್ಮ ಉದ್ಯೋಗವನ್ನೂ ಅದರದರ ಪ್ರಾಪ್ತಿಯನ್ನೂ ಕೊಟ್ಟು ಬಿಡ ಬೇಕೆಂಬದು ಮತ್ತೊಂದು. ಆ ಸೌವಾರ್ತಿಕ ಕ್ರೈಸ್ತರಿಗೆ ಈ ಎರಡು ಸೂತ್ರಗಳಿಂದ ದುಃಖ ಬಂದದ್ದು ಸರಿ; ಆದಾಗ್ಯೂ ದೇವರು ತಮಗೆ ಗೈದ ಮಹಾ ಸಹಾಯಕ್ಕೋಸ್ಕರ ಅವನನ್ನು ಸಲೆ ಸ್ತುತಿಸುತ್ತಿದ್ದರು.

## 58. 8ನೇ ಹೆನ್ರಿಯು ಮತ್ತು 6ನೇ ಎದ್ವರ್ದನು ಎಂಬ ಇಂಗ್ಲಂದಿನ ಅರಸರು.

ಕೊಬ್ಬಮಿನ ಪ್ರಭು ರಕ್ತಸಾಕ್ಷಿಯಾಗಿ ಸತ್ತ ಇತ್ತ ಕಡೆ[1] ಪಪ್ಪಕರು ಇಂಗ್ಲಂದಿನಲ್ಲಿ ಸೌವಾರ್ತಿಕ ಕ್ರೈಸ್ತರಿಗೆ ಕಠೋರ ರೀತಿಯಿಂದ ಹಿಂಸೆ ಮಾಡುತ್ತಾ ಬಂದರು; ಆದರೂ ಇವರು ನಾಶನ ಪಡಲಿಲ್ಲ. ಗೆರ್ಮಾನಿಯದಲ್ಲಿಯೂ ಸ್ವಿತ್ಸೆರ್ಲಂದಿನಲ್ಲಿಯೂ ಪುನಃಸ್ಥಾಪನೆಯಾರಂಭಿಸಿತೆಂಬ ವರ್ತಮಾನವು ಇಂಗ್ಲಂದಿಗೆ ಮುಟ್ಟಿದಾಗ ಅಲ್ಲಿಯ ಸೌವಾರ್ತಿಕರಿಗೆ ಹೊಸ ಧೈರ್ಯವೂ ಸಾಹಸವೂ ಹುಟ್ಟಿದವು. ಆದರೆ ಕ್ರಿ. ಶ. 1509ನೇ ಅಬ್ದ ರಾಜನಾಗಿದ್ದ 8ನೇ ಹೆನ್ರಿಯು ಗರ್ವಿಷ್ಠನೂ ಕಾಮಾತುರ

1) 392ನೇ ಪಾನು.

ನೂ ಕ್ರೂರನೂ ಆದಂಥ ಮನುಷ್ಯನಾಗಿದ್ದು, ತನ್ನ ರಾಜ್ಯದಲ್ಲಿ ಪುನಃಸ್ಥಾಪನೆಯ ಯಾವದೊಂದೂ ಕಾರ್ಯವನ್ನು ಅಳಿಸುವದಕ್ಕೆ ಪೇಚಾಡಿದನು. ಅವನ ತಂದೆಯು ಅವನನ್ನು ಮೊದಲು ಸಭೋದ್ಯೋಗಕ್ಕೆ ನೇಮಿಸಿ, ಅವನಿಗೆ ಪಪ್ಪಕ ದೇವಜ್ಞಾನ ವಿದ್ಯೆ ಕಲಿಸಿದ್ದನು. ಇಂತಿರಲಿಕ್ಕೆ, ಮತಸಂಬಂಧವಿಷಯದಲ್ಲಿ ಪಪ್ಪನಿಂದ ತನಗೊಂದು ಬಿರುದು ಘಳಿಸಿ ಕೊಳ್ಳುವಂತೆ ಹೆನ್ರಿಯು ಬಬೆಲಿನ ಶೆರೆಯನ್ನು ಕುರಿತು ಲುಥರನು ರಚಿಸಿದ ಆ ಗ್ರಂಥಕ್ಕೆ[1] ವಿರೋಧವಾಗಿ ಕ್ರಿ. ಶ. 1521ನೇ ವರುಷ ಒಂದು ಗ್ರಂಥವನ್ನು ಪ್ರಕಟಿಸಿದನು. ಲುಥರನು ತನ್ನ ಆ ಗ್ರಂಥದಲ್ಲಿ, ಎರಡು ಪರಿಶುದ್ಧ ಸಂಸ್ಕಾರಗಳು ಮಾತ್ರ ಅವೆ ಎಂತ, ದರ್ಶಿಸಿದ್ದನು; ಅದಕ್ಕೆ ಹೆನ್ರಿಯು ಅಡ್ಡ ಒಂದು, ತನ್ನ ಗ್ರಂಥಕ್ಕೆ, ಇಂಗ್ಲಂದಿನ ಮತ್ತು ಫ್ರಂಚಿನ ಪರಾಜಿತ ರಾಜನೂ ಐರ್ಲಂದಿನ ಒಡೆಯನೂ ಆದಂಥ 8ನೇ ಹೆನ್ರಿ ಎಂಬ ನಾಮವುಳ್ಳಾತನು ಮರ್ತೀನ ಲುಥರನೆದುರಿನಲ್ಲಿ ಏಳು ಪರಿಶುದ್ಧ ಸಂಸ್ಕಾರಗಳನ್ನು ನಿರ್ಧರಿಸಿದ್ದು ಎಂತ, ಹೆಸರಿಕ್ಕಿದನು. ಆ ಗ್ರಂಥದಲ್ಲಿ ಹೊಸದ್ದೇನೂ ಇಲ್ಲದೆ, ಅದು ಪ್ರಾಚೀನ ಪಪ್ಪಕ ಗ್ರಂಥಗಳನ್ನೆತ್ತಿ ಸಂಗ್ರಹಿಸಿದ್ದೇ ಆಗಿದ್ದರೂ ಲುಥರನಿಗೆ ವಿರೋಧವಾಗಿ ವಿಷಸ್ವಭಾವವುಳ್ಳ ಹೇರಳ ಸುಳ್ಳೂ ಕುನಿಂದೆಯೂ ಅದರಲ್ಲಿದ್ದವು; ಆದ್ದರಿಂದ 10ನೇ ಲೆಯೋನ ಪಪ್ಪನು[2] ಹೆನ್ರಿ ಅರಸಿಗೆ ವಿಶ್ವಾಸೋದ್ಧಾರಕನೆಂಬ ದೊಡ್ಡ ಬಿರುದನ್ನಿತ್ತನು. ಹೆನ್ರಿಯ ಅರಮನೆಯವರು ಸಹ ಅವನನ್ನು ಆ ಗ್ರಂಥಕ್ಕೋಸ್ಕರ ಮಿತಿ ಇಲ್ಲದೆ ಹೊಗಳುವ ನಿಮಿತ್ತ ಆ ಗರ್ವಿಯು ಕಡೆಯಲ್ಲಿ, ಪರಿಶುದ್ಧಾತ್ಮವು ಅದನ್ನು ತನಗೆ ತಿಳಿಸಿ ಕೊಟ್ಟನೆಂದು, ಭಾವಿಸಿ ಕೊಳ್ಳುವವನಾದನು. ಆದರೆ ಅದನ್ನು ರಚಿಸಿದವನು ಅವನೋ? ಅವನಿಗಾಗಿ ಬೇರೊಬ್ಬರೋ? ಎಂಬದು ಇಂದಿನ ವರಿಗೂ ದೃಢವಾಗಲಿಲ್ಲ. ಹ್ಯಾಗಾದರೂ ಲುಥರನು, ಅದು ರಾಜನ ಹೆಸರಿನದೆಂತ, ಹೇಳಿ, ಇವನೇ ತನ್ನ ಎದುರಾಳಿ ಎಂಬಂತೆ ಮಾಡಿ, ಅದೇ ವರುಷದಲ್ಲಿ ತಾನಿನ್ನೂ ವರ್ತ್ಬುರ್ಗಿನಲ್ಲಿರುವಾಗ[3] ತನ್ನ ಸ್ವಾಭಾವಿಕದ ಬಲೀಯ ಮಾತುಗಳಿಂದ ಅವನಿಗುತ್ತರ ಕೊಟ್ಟದರಲ್ಲಿ ಒಂದೆರಡು ವಾಕ್ಯಗಳಾವವೆಂದರೆ—ಇಂಗ್ಲಂದಿನ ಒಬ್ಬ ಅರಸನು ತನ್ನ ಸುಳ್ಳುಗಳನ್ನು ಲಜ್ಜೆಯರಿಯದೆ ಕಾರಿ ಬಿಡ ಬಹುದಾದರೆ ನಾನು ಅವುಗಳನ್ನು ಸಂತೋಷದಿಂದ ತಿರಿಗಿ ಅವನ ಗಂಟಲೊಳ ನುಗ್ಗಿಸ ಬಹುದು; ಯಾಕಂದರೆ ಅವನು ಅವುಗಳಿಂದ ಸರ್ವ ಕ್ರೈಸ್ತ ಬೋಧನೆಗೆ ದೂಷಿಸಿ, ಯಾರ ಬೋಧನೆಯು ನಮಗುಂಟೋ, ಕ್ರಿಸ್ತನೆಂಬ ಆ ಮಹಿಮಾರಾಜನ ಕಿರೀಟಕ್ಕೆಯೇ ತನ್ನ ಮಲವನ್ನು ಉಜ್ಜುತ್ತಾನೆ; ಆದ್ದರಿಂದ ನಾನು ನನ್ನ ಕರ್ತನ ಕಿರೀಟದಿಂದ ಆ ಮಲವನ್ನು ತೊಳೆದು ತೆಗೆದು, ಸರ್ವ ವಿಶ್ವದ

---

1) 423ನೇ ಪಾನು. 2) 420, 422, 424, 428, 435ನೇ ಪಾನುಗಳು. 3) 426ನೇ ಪಾನು.

ಮುಂದೆ, ಇಂಗ್ಲಂದಿನ ಅರಸನು ಸುಳ್ಳುಗಾರನೂ ಅಮರ್ಯಾದಸ್ಥನೂ ಆಗಿದ್ದಾನೆಂತ, ಹೇಳುವದಕ್ಕೆ ಅವನು ಚೋದ್ಯ ಪಡದಿರಲಿ!—

ಬಳಿಕ ಹೆನ್ರಿಯು ಒಕ್ಸ್ಫೊರ್ದಿನ[1] ಮತ್ತು ಕೇಂಬ್ರಿಜಿನ ಮಹಾ ವಿದ್ಯಾಶಾಲೆಗಳಲ್ಲಿ ತನಗೆ ಶಿಕ್ಕುವ ಸೌವಾರ್ತಿಕ ಬೋಧನೆಯುಳ್ಳವರಲ್ಲಿ ಕೆಲವರನ್ನು ಕಾರ್ಗತ್ತಲೆಯುಳ್ಳ ಶೆರೆಮನೆಯೊಳಗೆ ಹಾಕಿಸಿ, ಕೆಲವರನ್ನು ಸಜೀವವಾಗಿ ಸುಡಿಸಿ, ಕೆಲವರನ್ನು ಗಡಿ ದಾಟಿಸಿದನು; ಅನೇಕರು ತಾವು ಓಡಿ ಹೋದರು. ಆ ಓಡಿ ಹೋದವರಲ್ಲಿ ವಿಲ್ಲಿಯಮ್ ತಿಂದೆಲನೂ ಜೊನ್ ಫ್ರಿಥನೂ ಎಂಬ ಪಂಡಿತರು ಸಹ ಇದ್ದರು; ಇವರು ನೀದೆರ್ಲಂದಿಗೆ ಹೋಗಿ, ಪರಿಶುದ್ಧ ಬರಹದ ಹೊಸ ಒಡಂಬಡಿಕೆಯನ್ನು ಇಂಗ್ಲಿಷ ಭಾಷಾಂತರ ಮಾಡಿ, ಇದರ ಅನೇಕ ಪ್ರತಿಗಳನ್ನೂ ಪುನಃಸ್ಥಾಪನೆಯ ಸಂಬಂಧವಾದ ಇತರ ಕೃತಿಗಳನ್ನೂ ವ್ಯಾಪಾರಸ್ಥರ ಮುಖಾಂತರ ಸ್ವದೇಶಕ್ಕೆ ಕಳುಹಿಸುವವರಾದರು. ಇಂಗ್ಲಂದಿಗೆ ತಿರುಗಲಿಕ್ಕೆ ಧೈರ್ಯ ಪಟ್ಟ ಫ್ರಿಥನನ್ನು ಕ್ರಿ. ಶ. 1533ನೇ ಅಬ್ದ ಲೊಂದನಿನಲ್ಲಿ[2], ಕಥರನೆಂತ, ಚಿತಿಗೆ ಹಾಕಿ, ದಹಿಸಿದರು; 3 ವರುಷಕ್ಕೀಚೆ ನೀದೆರ್ಲಂದಿನ ಹೊಲ್ಲಂದು ಶೀಮೆಯಲ್ಲಿ[3] ಅದೇ ಕಾರಣ ತಿಂದೆಲನ ತಲೆ ಕಡೆದರು.

ಹೆನ್ರಿ ರಾಜನಿಗೆ ಸ್ಪಾನಿಯದ ಅರಗೋನಿಯ ನಾಡಿನ[4] ಕಥರೀನಳೆಂಬ ಹೆಂಡತಿ ಇದ್ದಳು; ಅವಳು ಗೆರ್ಮಾನಿಯದ 5ನೇ ಕರ್ಲ ಕೈಸರನ ಸೋದರತ್ತೆಯು. ಮುಂಚೆ ಅವಳು ಹೆನ್ರಿಯ ಅಣ್ಣನಾದ ಆರ್ಥರನೆಂಬವನಿಗೆ ಮದಿವೆಯಾಗಿದ್ದಳು; ಇವನು ಸತ್ತಾಗ ಹೆನ್ರಿಯು 2ನೇ ಯೂಲಿಯ ಪಪ್ಪನ[5] ಆಜ್ಞೆ ಪಡೆದು ಅವಳನ್ನು ಮದಿವೆ ಮಾಡಿ ಕೊಂಡು, ಬಳಿಕ 18 ವರುಷದೀಚೆ ಕ್ರಿ. ಶ. 1527ನೇದರಲ್ಲಿ, ತಾನು ತನ್ನ ಅಣ್ಣನಿಗೆ ಮದಿವೆಯಾಗಿದ್ದ ಸ್ತ್ರೀಯ ಸಂಗಡ ವೈವಾಹ ಸ್ಥಿತಿಯಲ್ಲಿರುವದು ತನ್ನ ಮನಃಸಾಕ್ಷಿಗೆ ವಿರೋಧವೆಂದು, ಬರೇ ನೆವನು ಹೇಳಿ, ಅವಳಿಗೂ ತನಗೂ ಇದ್ದ ವಿವಾಹಸಮ್ಮಂಧವು ಭಿನ್ನವಾಗುವ ಹಾಗೆ ನೋಡಿದನು; ಆದರೆ ಇದಕ್ಕೆ ಕಾರಣವು ಏನೆಂದರೆ, ಅವನು ರಾಣಿಯ ಸೇವೆಯವರಲ್ಲೊಬ್ಬಳಾದ ಅನ್ನ ಬೊಲೀನಳೆಂಬವಳ ಮೇಲೆ ಮೋಹ ಪಟ್ಟು, ಅವಳನ್ನು ತನ್ನ ಹೆಂಡತಿ ಮಾಡಿ ಕೊಳ್ಳಬೇಕೆಂತ, ಪೇಚಾಡುತ್ತಿದ್ದದ್ದೇ. ಹೀಗಿರಲಾಗಿ, ಅವನು 7ನೇ ಕ್ಲೇಮೆಂತ ಪಪ್ಪನ[6] ಹತ್ತರ ಒಂದು ಪರಿತ್ಯಾಗಪತ್ರ ಬೆಸಗೊಳ್ಳಲು, ಇವನು ಅಂಥಾದ್ದನ್ನು ರಚಿಸಿದರೂ, ವಿಶೇಷವಾಗಿ 5ನೇ ಕರ್ಲ ಕೈಸರನ ಕೋಪಕ್ಕಂಜಿ, ಅದನ್ನು ಕಳುಹಿಸಿ ಕೊ

1) 382, 383, 384, 385, 386, 387, 394ನೇ ಪಾನುಗಳು. 2) 90, 384, 385, 390—392ನೇ ಪಾನುಗಳು. 3) 411ನೇ ಪಾನು. 4) 400ನೇ ಪಾನು. 5) 361, 418ನೇ ಪಾನು. 6) 428, 446ನೇ ಪಾನು.

ಡಲಿಲ್ಲ. ಆಗ ಹೆನ್ರಿಯು ಇನ್ನೂ ಪಪ್ಪನನ್ನು ಕೇಳದೆ, ತನ್ನ ರಾಣಿಯನ್ನು ತ್ಯಜಿಸಿ, ತಾನು 3 ವರುಷದಿಂದ ವ್ಯಭಿಚಾರ ನಡಿಸುತ್ತಾ ಬಂದಿದ್ದ ಆ ಅನ್ನ ಬೊಲೀನಳನ್ನು ಕ್ರಿ. ಶ. 1533ನೇದರಲ್ಲಿ ಮದಿವೆ ಮಾಡಿ ಕೊಂಡನು. ಅದಕ್ಕೋಸ್ಕರ ಕ್ಲೇಮೆಂತ ಪಪ್ಪನು ಬನ್ನಿನ ಭಯ ತೋರಿಸುತ್ತಲೇ ಹೆನ್ರಿಯು ಶಿಟ್ಟಾಗಿ, ಅವನೊಡತನ ಕಡಿದು ಬಿಟ್ಟು, ತನ್ನ ರಾಜ್ಯದಲ್ಲಿದ್ದ ಮಠಿಕ ಕುಲದವರ 645 ಮಠಗಳನ್ನು ತೆಗೆದು ಹಾಕಿ, ಅವುಗಳ ಸೊತ್ತನ್ನು ರಾಜಭಂಡಾರಕ್ಕೆ ಕೂಡಿಸಿ, ಪಾರ್ಲಿಮೆಂತಿನವರಿಂದ[1] ಸುಪ್ರೇಮಾತ್ ಅಕ್ತನ್ನು ಅಂದರೆ ಪ್ರಧಾನಾಧಿಕಾರಾಜ್ಞೆಯನ್ನು ಹೊರಡಿಸಿದನು; ಇದರಿಂದವರು ನೇಮಿಸಿದ್ದರಲ್ಲಿರುವದೇನಂದರೆ—ನಮ್ಮ ಮಹಾ ಚಕ್ರವರ್ತಿಯಾದ ರಾಜನೂ ಕ್ರಮಾಗತರಾದ ಅವನ ಉತ್ತರಾಧಿಕಾರಿಗಳೂ, ಭೂಮಿಯಲ್ಲಿ ಇಂಗ್ಲಂದಿನ ಕ್ರೈಸ್ತ ಸಭೆಯ ಏಕ ಪ್ರಧಾನಶಿರಸ್ಸೆಂದು, ಎಣಿಸ ಬೇಕು!—ಇಂಗ್ಲಂದಿನ ರಾಜ್ಯವು ಹಾಗೆ ಪಪ್ಪನ ಆಡಳಿತೆಯೊಳಗಿಂದ ಹೊರಟದ್ದು ಕ್ರಿ. ಶ. 1534ನೇ ವರುಷದಲ್ಲಿ ಆಯಿತು. ಕ್ರಿ. ಶ. 1538ನೇದಕ್ಕೆ 3ನೇ ಪೌಲ ಪಪ್ಪನು ಹೆನ್ರಿ ರಾಜನಲ್ಲಿ ಬನ್ನು[2] ಜಡಿದು ಬಿಟ್ಟನು.

ಆದರೆ ಹೆನ್ರಿ ರಾಜನಿಗೆ ಪುನಃಸ್ಥಾಪನೆ ಗೈಯ ಬೇಕೆಂಬ ಆಲೋಚನೆಯು ಬಹು ದೂರದಲ್ಲಿತ್ತು; ತಾನು ಆ ಕ್ರೈಸ್ತ ಸಭೆಯ ಪಪ್ಪನಾಗಿದ್ದರೆ ಸರಿ, ಇತರ ವಿಷಯದಲ್ಲಿ ಅದು ಮುಂಚಿನಂತೆಯೇ ಉಳಿದಿರಲೆಂಬದೇ ಅವನ ಮನೋಭಿಪ್ರಾಯವು. ಸೌವಾರ್ತಿಕ ಕ್ರೈಸ್ತರಲ್ಲನೇಕರಿಗೆ ಅವನು ಅವರ ಸೌವಾರ್ತಿಕ ವಿಶ್ವಾಸದ ನಿವೇದನಕ್ಕೋಸ್ಕರ ಮರಣಾಜ್ಞೆ ಮಾಡಿಸುತ್ತಿದ್ದನು; ಪಪ್ಪಕರಲ್ಲಿ ತನಗೆ ಸುಪ್ರೇಮಾತಿನ ಪ್ರಮಾಣವನ್ನು, ಅಂದರೆ ರಾಜನು ಸಭೆಯ ಏಕ ಪ್ರಧಾನಶಿರಸ್ಸೆಂಬದಕ್ಕೆ ಒಪ್ಪುತ್ತೇನೆಂಬ ಪ್ರಮಾಣವನ್ನು, ಸಲ್ಲಿಸಲೊಲ್ಲದಂಥ ಅನೇಕರನ್ನು ಸಹ ಕೊಲ್ಲುತ್ತಿದ್ದನು. 6 ಸರ್ತಿ ಮದುವೆಯಾಗಿ, ತಾನು ಸಹದೋಷಿಯಾದ ತನ್ನ ಹೆಂಡರಲ್ಲಿಬ್ಬರಿಗೆ ಮರಣಾಜ್ಞೆ ಗೈದು, ಇಬ್ಬರನ್ನು ತ್ಯಜಿಸಿ ಬಿಟ್ಟಂಥಾ ಅರಸನ ಕಡೆಯಿಂದ ಬೇರೆ ಕ್ರಿಯೆಗಳ ದಾರಿ ನೋಡ ಬೇಕೇ? ಅವನು ದೇವರಿಗೆ ಭಯ ಪಡದ್ದೇ ಅವನ ದುಶ್ಚರ್ಯೆಗೆ ಮೂಲವು. ತನ್ನ ಜೀವಿತದ ಅಂತ್ಯ ವರುಷಗಳಲ್ಲಿ ಅವನ ಕಾಲಿಗೆ ಒಂದು ಬಾವಾಗಿ, ಬಹಳ ನೋಯಿಸುತ್ತಾ, ಹಗಲಿರುಳು ಶಾಂತಿ ತಪ್ಪಿಸುತ್ತಾ ಇರಲು, ಅವನು ಕ್ರಿಸ್ತನಾಥನ ಕಡೆಗೆ ತಿರಿಗಿ ಕೊಂಡು ತನ್ನ ಹೇರಳ ಪಾತಕಗಳ ಕ್ಷಮೆ ಬೇಡಿ ಕೊಳ್ಳುವದಕ್ಕೆ ಬದಲಾಗಿ ಹೆಚ್ಚು ಕ್ರೂರನಾದನಷ್ಟೇ; ಸೇವಕರು ಅವನ ಹತ್ತರ ಹೋಗ ಬೇಕಾದರೆ ಬೆಚ್ಚಿ ಬೆದರುತ್ತಿದ್ದರು. ಅವನು ಕ್ರಿ. ಶ. 1547ನೇ ವರುಷ ಸತ್ತದ್ದಕ್ಕೆ ಯಾರೂ ದುಃಖ ಗೊಳ್ಳಲಿಲ್ಲ.

---

1) 336, 384, 388ನೇ ಪಾನುಗಳು. 2) 352ನೇ ಪಾನು.

ಆದಾಗ್ಯೂ ಅವನಾಳ್ತನದ ಕಾಲದಲ್ಲಿ ಥೋಮ ಕ್ರಾನ್ಮೆರನೆಂಬ ಕಂತರ್ಬೆರಿಯ[1] ಪ್ರಧಾನಾಧ್ಯಕ್ಷನಿಗೆ ಸುವಾರ್ತಾವಿಸ್ತರಣಕ್ಕಾಗಿ ಹಲವು ಕಾರ್ಯಗಳನ್ನು ನಡಿಸುತ್ತಿರುವದು ಕೂಡಿತು. ಇದಕ್ಕೊಂದು ದೃಷ್ಟಾಂತವೇನಂದರೆ, ಅವನು ಕ್ರಿ. ಶ. 1538ನೇ ವರುಷ ಪರಿಶುದ್ಧ ಬರಹವನ್ನು ಇಂಗ್ಲಿಷ ಭಾಷೆಯಾಗಿ ಬರೆದು, ಛಾಪಿಸಲಾದ್ದನ್ನು ರಾಜ್ಯದಲ್ಲಿ ಹಬ್ಬಿಸಿ, ಅದು ಧರ್ಮದ ಏಕ ಪ್ರಮಾಣವೆಂದು, ಪ್ರಧಾನ ಸಭೋದ್ಯೋಗಿಗಳ ಸಂಘದ್ದೊಂದು ನಿರ್ಣಯದಿಂದ ಸ್ಥಾಪಿಸುವದಕ್ಕೆ ಸಮರ್ಥನಾದನು. ತಾನು ಇಂಗ್ಲಿಷ ಪಪ್ಪನಾಗಿ ಎದುರು ಬಂದ ರೋಮಕ ಪಪ್ಪಕತ್ವವೂ ಮಠಿಕತ್ವವೂ, ಕ್ರಿಸ್ತನವಲ್ಲವೆಂದು, ದೇವವಾಕ್ಯದ ಮೇಲೆ ಅತಿ ಸ್ಪಷ್ಟವಾಗುವದೆಂಬ ಈ ಒಂದೇ ಯುಕ್ತ್ಯಾಲೋಚನೆಯಿಂದ ಮಾತ್ರ ಹೆನ್ರಿ ರಾಜನು ಆ ನಿರ್ಣಯಕ್ಕೆ ಒಡಂಬಟ್ಟನು. ಕ್ರಾನ್ಮೆರನು ಬಹು ಬುದ್ಧಿವಂತನಾದ ಪುರುಷನು; ಹೀಗಿರಲಾಗಿ, ಇತರರಾದ ನೂರಾರು ಮಂದಿ ಸೌವಾರ್ತಿಕ ಕ್ರೈಸ್ತರು ರಾಜನ ಕ್ರೂರತ್ವದಿಂದ ಅಳಿಯುತ್ತಿರುವಲ್ಲಿ ತಾನು ಅವನ ಪ್ರಸಾದದೊಳುಳಿಯುವಂತಾಯಿತು.

6ನೇ ಎದ್ವರ್ದನು ಹೆನ್ರಿಯ ಉತ್ತರಾಧಿಕಾರಿಯಾದನು; ಅವನು ಹೆನ್ರಿಯ 3ನೇ ವಿವಾಹದಲ್ಲಿ ಜನಿಸಿದವನು; ಪಟ್ಟಾಭಿಷೇಕವಾಗುವಾಗ ಅವನು 10 ವರುಷದ ಹುಡುಗನು; ಆದರೆ ಅವನ ಗುಣವೂ ಬುದ್ಧಿಚಾತುರ್ಯವೂ ಅತ್ಯುತ್ತಮವು, ಕ್ರಾನ್ಮೆರನು ಸಹ ಅವನನ್ನು ಸೌವಾರ್ತಿಕ ವಿಶ್ವಾಸದಲ್ಲಿ ಶಿಕ್ಷಿಸುತ್ತಾ ಬಂದಿದ್ದನು. ಎದ್ವರ್ದನು ಅಪ್ರಾಯಸ್ಥನಾದ ಕಾರಣ ಕ್ರಾನ್ಮೆರನು ಕೂಡ ಸೇರಿದ್ದೊಂದು ಸಭೆಯು ರಾಜ್ಯದ ಪರಿಪಾಲನ ಗೈಯಲಿಕ್ಕೆ ತೊಡಗಿತು; ಸೊಮರ್ಸೆತನೆಂಬವನೊಬ್ಬ ಪ್ರಭುವು ಅದರಲ್ಲಿ ಮುಖ್ಯನು. ಇವನು ಸಹ ಸೌವಾರ್ತಿಕ ವಿಶ್ವಾಸಾವಲಂಬಿಯಾಗಿದ್ದದರಿಂದ ಪುನಃಸ್ಥಾಪನೆಯು ಇಂಗ್ಲಂದಿನಲ್ಲಿಯೂ ಪ್ರವರ್ಧಿಸಲಿಕ್ಕೆ ಬಹು ಅಭ್ಯಂತರವಿರಲಿಲ್ಲ. ಇಬ್ಬರು ಅಧ್ಯಕ್ಷರು ಮಾತ್ರ ತೊಂದರೆ ಕೊಟ್ಟರು; ಇವರಲ್ಲಿ ವಿಂಶ್ಚೆಸ್ತರಿನವನಾದ ಗಾರ್ದಿನೆರನೆಂಬವನೊಬ್ಬನು, ಲೊಂದನಿನವನಾದ ಬೊನ್ನೆರನೆಂಬವನು ಮತ್ತೊಬ್ಬನು. 8ನೇ ಹೆನ್ರಿ ರಾಜನ ಕಾಲಕ್ಕಾದರೂ ಪುನಃಸ್ಥಾಪನೆಗೆದುರಿಸಿದ್ದ ಗಾರ್ದಿನೆರನು, ತನಗೆ ರಾಜ್ಯಪರಿಪಾಲನಸಭೆಯಲ್ಲಿ ಸ್ಥಳ ಶಿಕ್ಕಲಿಲ್ಲವೆಂದು, ಕೋಪ ಗೊಂಡು, ಆ ಸಭೆಯ ಅಧಿಕಾರ ತೃಣೀಕರಿಸುವವನಾದನು; ಪಶುತ್ವಗುಣವುಳ್ಳ ಬೊನ್ನೆರನು ಇದರಲ್ಲಿ ಅವನ ಸಂಗಾತಿಯಾದನು. ಆದರೆ ಕ್ರಾನ್ಮೆರನು ಗೆರ್ಮಾನಿಯದ ಮತ್ತು ಸ್ವೀತ್ಸೆರ್ಲಂದಿನ ಪ್ರಖ್ಯಾತ ದೇವಜ್ಞಾನಪಂಡಿತರನ್ನು ಇಂಗ್ಲಂದಿಗೆ ಕರೆಸಿ, ಮಹಾ ವಿದ್ಯಾಶಾಲೆಗಳ ಪಂಡಿತೋದ್ಯೋಗಗಳನ್ನೂ ಸಭೋದ್ಯೋಗಗಳನ್ನೂ ಅವರಿಗೆ ಇತ್ತನು; ಅವರು ಹೆಚ್ಚಾಗಿ ಕಲ್ವೀನಕರೆಂಬ ಶಾಖೆಯವರು[2]. ಕ್ರಿ.

1) 307, 334, 335, 384, 385ನೇ ಪಾನು. 2) 443ನೇ ಪಾನು.

ಶ. 1548ನೇ ವರುಷ ಎದ್ವರ್ದ ರಾಜನು ಕ್ರಾನ್ಮೆರ ಪ್ರಧಾನಾಧ್ಯಕ್ಷನು ತಲೆಯಾದ 13 ಮಂದಿ ಸೌವಾರ್ತಿಕ ಸಭೋದ್ಯೋಗಿಗಳದೊಂದು ಸಭೆಯನ್ನು ನೆರೆಸಿದ ಬಳಿಕ ಈ ಸಭೆಯವರು ಬುಕ್ ಒಫ್ ಕೊಮ್ಮನ್ ಪ್ರೇಯೆರ್ ಅಂದರೆ ಸರ್ವಸಾಧಾರಣ ಪ್ರಾರ್ಥನೆಗಳ ಪುಸ್ತಕವೆಂಬ ಗ್ರಂಥವನ್ನು ರಚಿಸಿದರು; ಮರುವರುಷ ಅದಕ್ಕೆ ಪಾರ್ಲಿಮೆಂತಿನವರ ಸಮ್ಮತಿ ಬಂತು. ಎದ್ವರ್ದನ ಆಳುವಿಕೆಯ 3ನೇ ವರುಷದಲ್ಲೂ ಪಾರ್ಲಿಮೆಂತಿನವರು ಅಧ್ಯಕ್ಷೋದ್ಯೋಗಪ್ರತಿಷ್ಠೆಯ ಒಂದು ಹೊಸ ಕ್ರಮವನ್ನು ನೇಮಿಸಿದರು; ಪಪ್ಪಕರು ಅಂಥಾ ಪ್ರತಿಷ್ಠೆಯಲ್ಲಿ ನಡಿಸುತ್ತಿದ್ದ ಕ್ರಿಸ್ಮವೆಂಬ ಅಧ್ಯಕ್ಷರಿಂದ ಮಂತ್ರಿತವಾದ ಎಣ್ಣೆಯ ಪ್ರಯೋಗವೂ ಉಂಗರದ ಮತ್ತು ಕೋಲಿನ ಪ್ರಯೋಗವೂ[1] ಮಿತ್ರವೆಂಬ ಕಿರೀಟದ ಪ್ರಯೋಗವೂ ಮುಂತಾದ ಪಪ್ಪಕ ಆಚಾರವು ರದ್ದಾಯಿತು. 3ನೇ ಪೌಲ ಪಪ್ಪನು[2] ಅದು ಕೇಳಿ, ಆ ಕ್ರಮಕ್ಕೆ ಶಾಪವಿಕ್ಕಿದನು. ಆದರೆ ಅದೇ ವರುಷ ಗಾರ್ದಿನೆರನ ಉದ್ಯೋಗವನ್ನು, ಎರಡು ವರುಷದಿತ್ತ ಬೊನ್ನೆರನದನ್ನು ತಪ್ಪಿಸಿದರು. ತದನಂತರ ಕ್ರಿ. ಶ. 1552ನೇದಕ್ಕೆ ಆ ಸರ್ವಸಾಧಾರಣ ಪ್ರಾರ್ಥನೆಗಳ ಪುಸ್ತಕದ ಒಂದು ಹೊಸ ಆವರ್ತನೆ ಪ್ರಕಟವಾಯಿತು; ಹಿಂದಿನದರಲ್ಲಿ ಉಳಿದಿದ್ದ ಪಪ್ಪಕತ್ವದ ಶೇಷವು ಇದರಲ್ಲಿಂದ ಪೂರಾ ತೆಗೆದು ಹಾಕಿತ್ತು. ಅದು ಹೊರ್ತಾಗಿ ಆ ಸಮಯ 42 ಸೂತ್ರಗಳಿರುವದೊಂದು ಸೌವಾರ್ತಿಕ ವಿಶ್ವಾಸಪ್ರಮಾಣವು ರಚಿತವಾಯಿತು. ಪಪ್ಪಕ ಬೋಧನೆ ಆಚಾರಗಳನ್ನು ಆ ವಿಧದಿಂದ ರಾಜ್ಯದಲ್ಲೆಲ್ಲಿಯೂ ಕೀಳಲಾದಾಗ್ಯೂ ಸೌವಾರ್ತಿಕರು ಬೇರೆ ವಿಶ್ವಾಸಪ್ರಮಾಣದವರಲ್ಲಿ ಯಾರಿಗೂ ಉಪದ್ರವ ಕೊಡಲಿಲ್ಲ. ಹೀಗಿರಲಿಕ್ಕೆ, ಬಹಳ ತಡವಿಲ್ಲದೆ ಸೌವಾರ್ತಿಕರ ಸಂಖ್ಯೆಯು ಪಪ್ಪಕರದಕ್ಕಿಂತ ಮಿಗಿಲಾಯಿತು. ಆದರೆ ಅಂಥ ಸುಖಸ್ಥಿತಿಯು ಬಹು ಕಾಲಕ್ಕೆ ಉಳಿಯಲಿಲ್ಲ; ಇಂಗ್ಲಂದಿನ ಪುನಃಸ್ಥಾಪಿತವಾದ ಸುವರ್ಣೋಪಮ ಸಭೆಯು ಕಷ್ಟಗಳೆಂಬ ಪುಟಕ್ಕೆ ಬಿದ್ದು, ಚೊಕ್ಕವಾಗಬೇಕೆಂಬದೇ ದೇವರ ಚಿತ್ತವು. ಅದು ನಿಮಿತ್ತವಾಗಿ ಎದ್ವರ್ದ ರಾಜನು 16 ವರುಷದವನಾಗಿ ಮಡಿದ ಹಿಂದೆ ಅವನ ಮಲಸಹೋದರಿಯೂ ಪಪ್ಪಕ ಧರ್ಮದಲ್ಲಿ ಅತ್ಯಾಸಕ್ತಳೂ ಆದಂಥ ತ್ಯೂದರಿನ ಮೇರಿ (ಮರಿಯಳು) ಎಂಬವಳು ರಾಣಿಯಾದಳು.

## 59. ಯೇಸುವಿತರು.

ವಿತ್ತೆನ್ಬೆರ್ಗಿನ ವಿದ್ಯಾಶಾಲೆಯು ಲುಥರನ ಮತ್ತು ಮೆಲಂಖ್ಥೋನನ ದೆಸೆಯಿಂದ ಗೆರ್ಮಾನಿಯದಲ್ಲಿ ಮಾತ್ರವಲ್ಲ ಸಮಸ್ತ ಯುರೋಪ ಖಂಡದಲ್ಲಿ ಕೀರ್ತಿ ಗೊಂ

1) 329ನೇ, 333ನೇ ಪಾನುಗಳು. 2) 446, 447, 453ನೇ ಪಾನುಗಳು.

ಡಿರಲಿಕ್ಕೆ, ಯುರೋಪದ ಸಕಲ ದೇಶಗಳಿಂದ ಸಾವಿರಾರು ಮಂದಿ ವಿದ್ಯಾರ್ಥಿಗಳು ಆ ಇಬ್ಬರು ಪುರುಷರ ವಾಗ್ನಿರೂಪಣಗಳನ್ನು ಕೇಳುವದಕ್ಕೋಸ್ಕರ ವಿತ್ತೆನ್ಬೆರ್ಗಿಗೆ ಬರುತ್ತಿದ್ದರು; ಮೆಲಂಖ್ಥೋನನು ಬೋಧಿಸುತ್ತಿರುವೆಡೆ ಅನೇಕ ಸಾರಿ 2000 ಜನರು ಆಲೈಸುತ್ತಿದ್ದರು. ಈ ಪ್ರಕಾರ ಶಿಕ್ಷಿತರಾದ ಯೌವನಸ್ಥರು ಸಭಾಪುನಃಸ್ಥಾಪನಾಕಾರ್ಯದಲ್ಲಿ ಆಸಕ್ತಿ ಪಡುವಂಥವರಾಗಿ, ತಮ್ಮ ತಮ್ಮ ದೇಶಕ್ಕೆ ಮರಳಿ, ಸತ್ಯದ ಬೆಳಕನ್ನು ಪಸರಿಸುವದಕ್ಕೆ ಅತಿರೇಕ ಸಾಹಸ ಮಾಡುವವರಾದದ್ದು ಸಹಜವೇ. ಇಂತಿರಲಿಕ್ಕೆ ಅಪೊಸ್ತೋಲಿಕ ಕ್ರೈಸ್ತತ್ವದ ಅರ್ಥವು ಲುಥರ ಮುಂತಾದ ಪುನಃಸ್ಥಾಪಕರ ಗ್ರಂಥಗಳಿಂದಲೂ ವೃತ್ತಿಯಿಂದಲೂ ಮಾತ್ರವಲ್ಲದೆ ವಿಶೇಷವಾಗಿ ಅಂಥಾ ವಿದ್ಯಾರ್ಥಿಗಳಿಂದ ಸಹ ಸರ್ವತ್ರ ಪ್ರಬಲವಾಗಿ, ಸಣ್ಣ ದೊಡ್ಡ ಸ್ಥಿತಿಯವರಲ್ಲಿ ಶೇರುತ್ತಿತ್ತು. ಅಲ್ಲಲ್ಲಿ ಅದಕ್ಕೆ ವಿರೋಧ ಕ್ರಿಯೆಯೂ ಹುಟ್ಟಿದ್ದು ತಾನೇ ತಿಳಿಯ ಬರುತ್ತದಲ್ಲ? ಸೌವಾರ್ತಿಕ ತೇಜಸ್ಸಿಗೂ ಪಪ್ಪಕ ಅಂಧಕಾರಕ್ಕೂ ಮಹಾ ಯುದ್ಧವಾದಂತಾಯಿತು. ಕಾಲಕ್ರಮದಿಂದ ಗೆರ್ಮಾನಿಯದ ಉತ್ತರ ಭಾಗದಲ್ಲಿ ಹೊರ್ತು ವುಯಿರ್ತೆಂಬೆರ್ಗಿನಲ್ಲಿ[1], ಸ್ವಿತ್ಸೆರ್ಲಂದಿನದೊಂದು ಭಾಗದಲ್ಲಿ[2], ಸ್ವೇದೆನು ದೇಶದಲ್ಲಿ, ದೇನೆಮರ್ಕಿನಲ್ಲಿ, ನೀದೆರ್ಲಂದಿನ ಹೊಲ್ಲಂದಿನಲ್ಲಿ, ಇಂಗ್ಲಂದಿನಲ್ಲಿ, ಸ್ಕೋತ್ಲಂದಿನಲ್ಲಿ ಸೌವಾರ್ತಿಕ ಸತ್ಯವು ಸಂಪೂರ್ಣ ಜಯ ಹೊಂದಿ, ರಾಜ್ಯಮತವೇ ಆಯಿತು[3]; ಬೇರೆ ದೇಶಗಳಲ್ಲಿ ಅಂದರೆ ಮುಖ್ಯವಾಗಿ ಗೆರ್ಮಾನಿಯದ ದಕ್ಷಿಣ ಭಾಗದಲ್ಲಿ, ಫ್ರಂಚಿನಲ್ಲಿ, ಪೋಲಂದಿನಲ್ಲಿ, ಹೂಂಗರಿಯದಲ್ಲಿ ಸೌವಾರ್ತಿಕರು ಎಡೆ ಬಿಡದೆ ಹಿಂಸೆ ಪಡುತ್ತಿದ್ದರೂ ಕಡೆಯಲ್ಲಿ ಹ್ಯಾಗೂ ತಮಗೆ ಸಹನೀಯವಾದ ಸ್ಥಿತಿಯನ್ನೂ ಮತಾಚಾರದ ಸ್ವಾತಂತ್ರ್ಯವನ್ನೂ ಘಳಿಸಿ ಕೊಂಡರು; ಎರಡು ದೇಶಗಳಲ್ಲಿ ಮಾತ್ರ ಎಣಿಕೆಯಿಲ್ಲದ ಕೊಲೆಯಿಂದ ಸತ್ಯದ ಬೆಳಕನ್ನು ತೀರಾ ನೊಂದಿಸುವದಕ್ಕೆ ಗುಪ್ತವಿಚಾರಕರಿಗೆ ಸಾಧ್ಯವಾಯಿತು; ಈ ಎರಡು ದೇಶಗಳು ಈತಲಿಯ ಮತ್ತು ಸ್ಪಾನಿಯವೆಂಬವು.

ಪುನಃಸ್ಥಾಪನಾಕಾರ್ಯವು ಕ್ರಿ. ಶ. 1517ನೇ ಅಬ್ದ ಆರಂಭವಾಗಿ ಎಲ್ಲಾ ದಿಕ್ಕಿಗೂ ಬೇರು ಬಿಡಲಿಕ್ಕೆ ಹತ್ತಿದ ಮೇಲೆ ಪಪ್ಪಕ ಅಧಿಕಾರದ ಮೇರೆಯು ತಗ್ಗುತ್ತಾ ಬಂತು. ಆದ ಕಾರಣ ಜಾರಿ ಬೀಳಲಿಕ್ಕೆಸಗಿದ ತಮ್ಮ ಆಳ್ತನಕ್ಕಾಶ್ರಯ ಕೊಡುವದಕ್ಕಾಗಿ ಪಪ್ಪರು ಕಂಡ ಉಪಾಯಗಳನ್ನೆಲ್ಲಾ ಹಿಡಿದು, ಪಪ್ಪಕ ವಿಶ್ವಾಸಾರ್ಥವನ್ನು ಅಮೆರಿಕ ಅಸಿಯ[4] ಪ್ರಭೃತಿಯಾದ ಸ್ಥಳಗಳಲ್ಲಿರುವ ವಿಗ್ರಹಾರಾಧಕರೊಳಗೆ ಶೇರಿಸುವದಕ್ಕೂ ಸೌವಾರ್ತಿಕರನ್ನು ಬಾಧಿಸುವದಕ್ಕೂ ವಿಶೇಷ ಪ್ರಯತ್ನ

1) 445ನೇ ಪಾನು. 2) 436 ಆದಿ ಪಾನು. 3) 432ನೇ, 439ನೇ ಪಾನುಗಳನ್ನು ಸರಿ ನೋಡು. 4) 413ನೇ ಪಾನು ಸರಿ ನೋಡು.

ಮಾಡುವವರಾದರು. ಗೆರ್ಮಾನಿಯದ ಹೊರಗೆ ಪಪ್ಪಕ ಧರ್ಮದ ರಾಜರು ಗುಪ್ತವಿಚಾರಕರ ಸಹಾಯಕರಾಗುವ ದೇಶಗಳಲ್ಲಿ ಸೌವಾರ್ತಿಕರು ಪಪ್ಪಕರ ಸಕಲ ತರದ ಕ್ರೂರತ್ವಕ್ಕೆ ಅಧಿಕ ರೀತಿಯಿಂದ ಒಳಬಿದ್ದರೂ ಗೆರ್ಮಾನಿಯದಲ್ಲಿ ಸಹ ಅವರು ಪಪ್ಪಕರ ಹಿಂಸೆಗೆ ಪೂರಾ ತಪ್ಪಿಸಿ ಕೊಳ್ಳಲಾಗಲಿಲ್ಲ.

ಆದರೆ, ಪಪ್ಪಕತ್ವವನ್ನು ಬೆಳಿಸುವದೂ ಪಪ್ಪಕ ವಿಶ್ವಾಸವನ್ನು ವಿಸ್ತರಿಸುವದೂ ಸೌವಾರ್ತಿಕರ ಬೋಧನೆಯನ್ನು ನಶಿಸುವದೂ ತಮ್ಮ ಒಂದೇ ಹಂಗೆಂತ, ಎದ್ದ ದೊಮಿನಿಕಾನ[1] ಮುಂತಾದ ಸಕಲ ಕುಲದವರಿಗಿಂತಲೂ ಯೇಸುವಿತರೆಂಬ ಕುಲದವರು[2] ಪ್ರಾಮುಖ್ಯ ಸಾಹಸದವರು; ಲುಥೆರನ ಮರಣಕ್ಕೆ ಸ್ವಲ್ಪ ಕಾಲ ಮಾತ್ರ ಮುಂಚೆ ಈ ಹೊಸ ಕುಲವು ಉದ್ಭವಿಸಿತು. ಹ್ಯಾಗಂದರೆ,

ಕ್ರಿ. ಶ. 1491ನೇ ವರುಷ ಸ್ಪಾನಿಯದ ಲೋಯೋಲವೆಂಬದೊಂದು ಕೋಟೆಯ ಪಾಳೆಗಾರನಿಗೆ ಇಗ್ನಾತಿಯನೆಂಬ ಮಗನು ಹುಟ್ಟಿದನು. ಈ ಇಗ್ನಾತಿಯ ಲೋಯೋಲನು ತನ್ನ ಯೌವನಕಾಲವನ್ನು ಸ್ಪಾನಿಯ ದೇಶದ ಅರಮನೆಯೊಳಗೆ ಕಳೆದು, ಕ್ರಿ. ಶ. 1521ನೇದರಲ್ಲಿ ತಾನು ಸಹ 5ನೇ ಕರ್ಲ ಕೈಸರನ ಕೈಯ ಕೆಳಗೆ[3] ಫ್ರುಂಚರಿಗೆ ಎದುರ್ಮಲೆಯುತ್ತಿರುವದೊಂದು ದುರ್ಗದೊಳಗೆ ಕಾಲಿಗೆ ಒಂದು ಗುಂಡು ತಾಗಿದವನಾಗಿ, ಔಷಧ ಹೊಂದುತ್ತಿರುವಾಗ ಬೇಸರದೆ ಕಾಲ ಹರಿಯುವಂತೆ ತಾನು ಓದಲಿಕ್ಕೆ ಬಯಸಿದ್ದೊಂದು ಶೃಂಗಾರರಸಮಯ ಕೃತಿ ಶಿಕ್ಕದಿರಲು, ಯೇಸುವಿನ ಮತ್ತು ವಿವಿಧ ಸಂತರ ಜೀವಿತಕಥೆಗಳನ್ನೋದುವವನಾದನು. ಈ ಸಂತರೆಂಬವರ ನಾನಾ ವಿಕಾರದ ಕಥೆಗಳಿಂದ ಅವನ ಮನೋರಥಕ್ಕೆ ಕಿಚ್ಚು ಹೊತ್ತಿಸಿದಂತಾಯಿತು; ತಾನು ಸಹ ಫ್ರುಂತ್ಸಿಸ್ಕಾನ ಕುಲದ ಮತ್ತು ದೊಮಿನಿಕಾನ ಕುಲದ ಸ್ಥಾಪಕರಂಥವನಾಗ ಬೇಕೆಂಬ ಇಚ್ಛೆಯು ಅವನಿಗೆ ಹಿಡಿಯಿತು; ತನ್ನ ಒಂದು ಕಾಲು ಮೋಟಾಗಿ ಉಳಿಯುವದಕ್ಕೋಸ್ಕರ ತಾನು, ಸ್ವಹಸ್ತಶೂರತ್ವ ತೋರಿಸುತ್ತಾ ರಾಜಸೇವೆ ಸ್ತ್ರೀಸೇವೆ ಮಾಡುತ್ತಾ ಇರ ಬೇಕೆಂತ, ಹೇಳುವಂಥ ಧರ್ಮವುಳ್ಳ ಪಾಳೆಗಾರಿಕೆಯ ಕ್ಷೇತ್ರದಲ್ಲಿ ಒಪ್ಪಲಾಗದ ಕಾರಣ, ಪಪ್ಪಕ ಧರ್ಮದ ಕ್ಷೇತ್ರದಲ್ಲಿ ಅಂಥಾ ಪಾಳೆಗಾರಿಕೆಯನ್ನು ತೋರಿಸುವೆನೆಂದು, ಆಲೋಚಿಸಿ, ಬರ್ಸೆಲೋನವೆಂಬ ಪಟ್ಣದ ಹತ್ತರವಿರುವ ಮೊನ್ಸೆರಾತೆಂಬ ಗುಡ್ಡದಲ್ಲಿಯ ಮರಿಯಳೆಂಬದೊಂದು ಪ್ರತಿಮೆಯನ್ನು, ತನ್ನ ಯಜಮಾನಳೆಂದು, ಮಾಡಿ ಕೊಂಡು, ಈ ಹೊಸ ಯಜಮಾನಳ ಬಳಿಯಲ್ಲಿ ಹಲವು ಕಾಲ ಕಾವಲಿಯಾಗಿರುತ್ತಿದ್ದ ಮೇಲೆ ಒಂದು ಗುಹೆಯೊಳಗೆ ಶೇರಿ, ಶರೀರದಂಡನ ಗೈಯುತ್ತಾ, ಮೆದುಲಿನ ಅಸ್ವಸ್ಥತೆಯುರಿಯಿಂದ ವಿಕಾರವಾದ ಮನಸ್ಸಂಕಲ್ಪಗಳನ್ನು ಕಾಣುತ್ತಾ, ಒಮ್ಮೆ ಪಿಶಾಚನು ಸರ್ಪ

1) 350ನೇ ಪಾನು. 2) 449ನೇ ಪಾನು. 3) 444ನೇ ಪಾನು ಸರಿ ನೋಡು.

ರೂಪವಾಗಿ ತನ್ನಲ್ಲಿಗೆ ಬಂದನೆಂದು, ಭಾವಿಸಿ ಕೊಂಡು, ಕೋಲಿನಿಂದ ಹೊಡೆದು ಓಡಿಸಿ, ತನ್ನ ಸ್ವನಮ್ರತೆಗೆ ತಾನೇ ಬೆರಗಾಗುವಂಥ ಸ್ಥಿತಿಯವನಾಗಿ ಸ್ವಲ್ಪ ಸಮಯ ಕಳೆದನಂತರ ಪಲೇಸ್ತೀನಕ್ಕೆ ಹೋಗಿ, ತಾನು ಮೊಹಮ್ಮದಿಯರನ್ನು ಪಪ್ಪಕತ್ವದಲ್ಲಿ ಶೇರಿಸುವೆನೆಂದು, ತನ್ನಲ್ಲಿದ್ದ ಈ ಉದ್ದೇಶ್ಯವನ್ನು ಯಾವದೊಂದೂ ತೊಂದರೆಗೆ ಅಂಜುವಂಥ ಅಲ್ಲಿಯ ಪಪ್ಪಕ ಮತೋದ್ಯೋಗಿಗಳಿಗೆ ಕಪಟದಿಂದ ಮರೆಮಾಜಿಟ್ಟನು. ಸಮಯೋನ್ಮಾದವೂ ಕಪಟಬುದ್ಧಿಯೂ ಕೂಡಿದಂಥ ಚೋದ್ಯವುಳ್ಳ ಭಾವವು ಅವನಲ್ಲಿ ಯಾವಾಗಲೂ ತೋರುತ್ತಿತ್ತು. ಅವನು ಇಪ್ಪೆಗುಡ್ಡದ ಮೇಲಿದ್ದು, ಯೇಸುವು ದಿವಕ್ಕೇರುವಾಗ ಅವನ ಕಾಲು ಯಾವ ದಿಕ್ಕಿಗಿದ್ದವೆಂತ, ಬಹು ಉತ್ಸಾಹದಿಂದ ಶೋಧಿಸಿ, ಬಳಿಕ ಮೊಹಮ್ಮದಿಯರನ್ನು ಪಪ್ಪಕರಾಗ ಮಾಡುವ ಕ್ರಿಯೆಯನ್ನು ಮುಂದಕ್ಕೆ ಹಾಕಿ, ಸ್ಪಾನಿಯಕ್ಕೆ ಹಿಂದಿರುಗಿ, ತತ್ವಜ್ಞಾನದರ್ಶನದ ಅಭ್ಯಾಸವನ್ನಾರಂಭಿಸುವಲ್ಲಿ ಸ್ವಪಾಪವನ್ನಡಗಿಸುವದಕ್ಕೆ ತಾನು ಹಿಡುಕೊಂಡ ಮರುಳಾದ ನೈಮಿತ್ತಕ ಸಮಾಧಿ ಎಂಬ ಒಂದು ತರದ ಯೋಗಕ್ಕೆ ತನ್ನ ಜತೆಗಾರರನ್ನೆಳೆಯಲಿಕ್ಕೆ ಪೇಚಾಡುವವನಾದನು. ಹೀಗಿರಲು, ಗುಪ್ತವಿಚಾರಕರು ಅವನ ವಿಷಯವಾಗಿ ಸಂಶಯ ಗೊಂಡು, ಆ ಯೋಗಾಭ್ಯಾಸವನ್ನು ನಿಷೇಧಿಸಲಿಕ್ಕೆ, ಅವನು ಈ ನಿಷೇಧಕ್ಕೆ ತಪ್ಪಿಸಿ ಕೊಳ್ಳುವಂತೆ ಕ್ರಿ. ಶ. 1528ನೇ ವರುಷ ಫ್ರುಂಚಿನ ಪರೀಸು ಪಟ್ಣಕ್ಕೆ ಹೋಗಿ, ಪಪ್ಪಕ ದೇವಜ್ಞಾನದರ್ಶನವನ್ನು ಕಲಿಯುವವನಾಗಿ, ಇತರ ವಿದ್ಯಾರ್ಥಿಗಳನ್ನು ಆ ಯೋಗಾಚಾರಕ್ಕೆ ತಿರಿಗಿ ಆಕರ್ಷಿಸುತ್ತಿದ್ದನು. ಅದಕ್ಕಾಗಿ ತನಗೆ ನೇಮಕವಾದ ಬೆತ್ತದ ಪೆಟ್ಟುಗಳನ್ನು ತನಗೆ ಹೊಡೆಯಲಾಗದಂತೆ ಮಹಾ ಯುಕ್ತಿಯಿಂದ ತಪ್ಪಿಸಿ ಕೊಂಡು, ಪೇತ್ರ ಫಾಬೆರ ಮತ್ತು ಫ್ರುಂಚ ಕ್ಸಾವೇರ ಎಂಬವರಿಬ್ಬರು ತನ್ನ ಕೂಡ ಒಂದೇ ಕೋಣೆಯೊಳಗಿರುವ ಜತೆಯವರನ್ನು ಪೂರಾ ತನ್ನ ವಶದಲ್ಲಿಡ ಶಕ್ತನಾಗಿ, ಅವರ ಸಂಗಡಲೂ ಬೇರೆ ನಾಲ್ವರ ಸಂಗಡಲೂ ಕ್ರಿ. ಶ. 1534ನೇ ವರುಷ ಗೋಪ್ಯವಾಗಿ ಒಂದು ತರದ ಕುಲ ಸ್ಥಾಪಿಸಿ, 3 ವರುಷಕ್ಕೀಚೆ ಅವರೊಂದಿಗೆ ಈತಲಿಯಕ್ಕೆ ಹೋದನು. ಅಲ್ಲಿ ಅವರು ಪ್ರೀಸ್ತಪ್ರತಿಷ್ಠೆ ಹೊಂದಿ, ಯೇಸುವಿತರು ಅಂದರೆ ಯೇಸುವಿನ ಸಮಾಜದವರು ಎನ್ನಿಸಿ ಕೊಂಡು, ರೋಮಕ್ಕೆ 3ನೇ ಪೌಲ ಪಪ್ಪನ[1] ಬಳಿಗೆ ಗಮಿಸಿ, ನಿಮ್ಮ ಸೇವೆ ಮಾಡ್ವೇವೆಂತ, ಅರಿಕೆ ಮಾಡಿದರು. ಕ್ರಿ. ಶ. 1540ನೇ ವರುಷದ ಅಂತದಲ್ಲಿ ಆ ಪಪ್ಪನು ಆ ಯೇಸುವಿತರ ಕುಲವನ್ನು ಸ್ಥಿರ ಪಡಿಸಿದನು. ಬಳಿಕ ಆ ಕುಲದವರು ಲೋಯೋಲದ ಇಗ್ನಾತಿಯನನ್ನು, ತಮ್ಮ ನಾಯಕನೆಂದು, ಹೆಕ್ಕಿ ಕೊಂಡು, ನಿನಗೆ ಪೂರ್ಣ ವಿಧೇಯರಾಗಿರೋಣವೆಂದು, ಪ್ರಮಾಣಿಸಿದರು. ಹೀಗಾದ

1) 446ನೇ, 447ನೇ, 449ನೇ, 453ನೇ, 454ನೇ ಪಾನು.

ಕ್ಷಣವೇ ಇಗ್ನಾತಿಯನು ತನ್ನ ನಮ್ರತೆ ಕುರಿತು ತಾನೇ ಸಾಕ್ಷಿ ಕೊಡಲಿಕ್ಕೋಸ್ಕರ ಕುಸಿನಿಮನೆಗೆ ಹೋಗಿ, ಕುಸಿನಿಗಾರನ ಕೆಲಸ ಗೈದನು. ಅವನು ಕ್ರಿ. ಶ. 1556ನೇ ವರುಷದಲ್ಲಿ ಸಾಯುವಾಗ ಯೇಸುವಿತ ಕುಲದವರಿಗೆ ಸ್ಪಾನಿಯದಲ್ಲಿ 7, ಈತಲಿಯದಲ್ಲಿ 3, ಗೆರ್ಮಾನಿಯದಲ್ಲಿ 2, ಫ್ರಂಚಿನಲ್ಲಿ 1, ಈ ಪ್ರಕಾರ 13 ಪ್ರೋವಿನ್ಸಿಯಗಳು (ಪ್ರವೇಶಗಳು) ಎಂಬ ಪ್ರವರ್ತನಾಸ್ಥಳಗಳು ಪ್ರಾಪ್ತವಾಗಿದ್ದವು; ಅದಲ್ಲದೆ 100 ಕುಲಗೃಹಗಳು ಅವರಿಗಿದ್ದವು.

ಯೇಸುವಿತ ಧರ್ಮದ 3 ಅಭಿಪ್ರಾಯಗಳು ಯಾವವಂದರೆ 1) ಪಪ್ಪಕ ಮತವನ್ನು ವಿಗ್ರಹಾರಾಧಕರಲ್ಲಿ ವಿಸ್ತರಿಸುವದು; 2) ಪಪ್ಪಕ ಸಭೆಯೊಳಗೆ ಪ್ರಸಂಗಿಸುತ್ತಾ, ಶ್ರವನಿವೇದನ ಕೇಳುತ್ತಾ, ಶಾಲೆಗಳಲ್ಲಿ ಉಪದೇಶ ಮಾಡುತ್ತಾ, ಪ್ರತಿಮೆಗಳ ಪೂಜೆಯನ್ನೂ ಯಾತ್ರೆಗಳನ್ನೂ ಇತರ ಪಪ್ಪಕ ದುರಾಚಾರಗಳನ್ನೂ ಪುನಃ ಸ್ಥಾಪಿಸಿ, ಚನ್ನಾಗಿ ಸಾಕುತ್ತಾ ಇರುವದು; 3) ಸೌವಾರ್ತಿಕ ಕ್ರೈಸ್ತರನ್ನು ಪಪ್ಪಕರಾಗ ಮಾಡುವದು, ಅದಾಗದಿದ್ದರೆ ಅವರನ್ನು ನಶಿಸುವದು[1].—

3ನೇ ಪೌಲ ಪಪ್ಪನು ಆ ಯೇಸುವಿತರಿಗೆ—ನೀವು ನಿಮ್ಮ ಮನಸ್ಸು ಬಂದಷ್ಟು ಜನರನ್ನು ನಿಮ್ಮ ಕುಲಕ್ಕೆ ಕೂಡಿಸಿ ಕೊಳ್ಳ ಬಹುದು; ಅದಲ್ಲದೆ ನೀವು ಪಪ್ಪರ ಅಪ್ಪಣೆ ಕೇಳದಲೇ ಯಥೇಚ್ಛೆ ಹೊಸ ಕಟ್ಟಳೆಗಳನ್ನು ಏರ್ಪಡಿಸಿ, ಇದ್ದ ಕಟ್ಟಳೆಗಳನ್ನು ಬದಲಿಸ ಬಹುದೆಂತ, ಹೇಳುವ ಸ್ವಾತಂತ್ರ್ಯವನ್ನು ಕೊಟ್ಟಿದ್ದನು; ಕ್ರಿ. ಶ. 1545ನೇದಕ್ಕೆ ಅವನು ಸರ್ವತ್ರ ಪ್ರಸಂಗಿಸುವದಕ್ಕೂ ಶ್ರವನಿವೇದನ ಕೇಳುವದಕ್ಕೂ ಸಕಲ ಪಾತಕಗಳಿಂದ ವಿಮೋಚನ ಮಾಡುವದಕ್ಕೂ ಯಾವದೊಂದೂ ಸಮಯ ಮಿಸ್ಸ ನಡಿಸುವದಕ್ಕೂ ಸರ್ವತ್ರ, ಅಧ್ಯಕ್ಷರ ಅಪ್ಪಣೆ ಹೊಂದದ ಪಕ್ಷದಲ್ಲಿಯೂ, ಪಪ್ಪಕರ ಏಳು ಸಂಸ್ಕಾರಗಳನ್ನು[2] ಪಾಲಿಸುವದಕ್ಕೂ ಅಧಿಕಾರವನ್ನು ಸಹ ಅವರಿಗೊಪ್ಪಿಸಿ, ತರುವಾಯ 1549ನೇದರಲ್ಲಿ ಅವರ ಕುಲನಾಯಕನಿಗೆ ಕುಲದ ಜನರೆಲ್ಲರ ಮೇಲೂ ಅಮಿತಾಧಿಕಾರವಿತ್ತು, ನೇಮಿಸಿದ್ದೇನಂದರೆ—ನಾಯಕನ ಅಪ್ಪಣೆ ಇಲ್ಲದೆ ಯೇಸುವಿತರಲ್ಲೊಬ್ಬನಾದರೂ ದೊಡ್ಡ ಸಭೋದ್ಯೋಗಿಗಳಿಗಾಗಲಿ ಗುಪ್ತವಿಚಾರಕರಿಗೂ ಆಗಲಿ ಸೇವೆ ಮಾಡುವ ಅವಶ್ಯವಿಲ್ಲ; ಯೇಸುವಿತರ ಕುಲವೂ ಸೊತ್ತುಗಳೂ ಮಧ್ಯಸ್ಥಿಕೆ ಇಲ್ಲದೆ ಪಪ್ಪನ ಕೆಳಗೆ ಅವೆ[3]; ಅಧ್ಯಕ್ಷರು ಯೇಸುವಿತರನ್ನು ವಿಚಾರಿಸಲಾಗದು; ಯೇಸುವಿತರು ವರುಷಾಸನ್ನ[4] ಸಲ್ಲಿಸುವದಕ್ಕೆ ಹಂಗಿಗರಲ್ಲ; ಅಧ್ಯಕ್ಷರು ಅವರಲ್ಲೊಬ್ಬನ ಮೇಲೆ ಬನ್ನು ಜಡಿಯ ಬಾರದು; ಅದು ಮಾತ್ರವಲ್ಲದೆ ಇಂತೆರ್ದಿಕ್ತನ್ನು ಹಾಕಿರುವ ದೇಶಗಳಲ್ಲಿಯೂ ಯೇಸುವಿತರು ಬಾಗಿಲು

1) 350ನೇ ಪಾನು ಸರಿ ನೋಡು. 2) 357ನೇ ಪಾನು. 3) 329ನೇ ಪಾನು ಸರಿ ನೋಡು.
4) 409ನೇ ಪಾನು ಸರಿ ನೋಡು.

ಮುಚ್ಚಿರುವಲ್ಲಿ ಮಿಸ್ಸ ನಡಿಸಿ, ಅದಕ್ಕೆ ತಮ್ಮ ಮನಸ್ಸು ಬಂದವರನ್ನು ಬರ ಗೊಡ ಬಹುದು; ಯೇಸುವಿತರು ಕಥರರೆಂಬವರ ದೇಶಗಳಲ್ಲಿದ್ದು, ಅವರ ಸಂಗಡ ಹೊಕ್ಕು ಬಳಿಕೆಯಿಂದ ಇರ ಬಹುದು; ಅವರು ಯಾವ ಸ್ಥಿತಿಯ ಜನರನ್ನಾದರೂ ತಮ್ಮ ಕುಲದಲ್ಲಿ ಶೇರಿಸ ಬಹುದು; ಕುಲನಾಯಕನು ಸರ್ವ ಮಹಾ ವಿದ್ಯಾಶಾಲೆಗಳಲ್ಲಿಯೂ ಸಾಧಾರಣ ಶಾಲೆಗಳಲ್ಲಿಯೂ ಪಂಡಿತರನ್ನಿಡ ತಕ್ಕದ್ದು; ಕಥರರೆಂಬವರ ಮತ್ತು ವಿಗ್ರಹಾರಾಧಕರ ದೇಶಗಳಲ್ಲಿ ಯೇಸುವಿತರ ಹತ್ತರ ಒಬ್ಬ ಸಭಾಧ್ಯಕ್ಷನಿಲ್ಲದಿದ್ದರೆ ಅವರೇ ಅಂಥವನ ಅಧಿಕಾರವುಳ್ಳವರಾಗಿರ ಬೇಕು; ಇತ್ಯಾದಿ. ಪೌಲ ಪಪ್ಪನು ಯೇಸುವಿತರಿಗೆ ಕೊಟ್ಟ ಈ ಪ್ರಕಾರದ ಸ್ವಾತಂತ್ರ್ಯವನ್ನು ಅವನ ಉತ್ತರೋದ್ಯೋಗಿಗಳು ಸ್ಥಿರ ಪಡಿಸಿದ್ದಲ್ಲದೆ ಅದಕ್ಕೆ ಹೆಚ್ಚಿನದನ್ನು ಸಹ ಕೂಡಿಸಲಾಯಿತು.

ಆ ಕುಲವು ಉತ್ಪನ್ನವಾಗಿ 50 ವರುಷ ಹೋದ ಬಳಿಕ ಅದಕ್ಕೆ 10,000 ಜನರಾದರೂ ಕೂಡಿದ್ದರು. ಆದರೆ ಹಿಂದೆ ವಿವರಿಸಿದಷ್ಟು ದೊಡ್ಡ ಸ್ವಾತಂತ್ರ್ಯವಿರುವ ಯೇಸುವಿತರು ತಮ್ಮ ಕಾರ್ಯದ ಸಂಪಾದನಕ್ಕೋಸ್ಕರ ಪ್ರಯೋಗಿಸುವ ಮೊದಲಿನ ಉಪಾಯವೇನಂದರೆ, ತಾವು ತೋರಿಸುತ್ತಿರುವ ವಿದ್ಯೆಯಿಂದಲೂ ಕಲಾಕೌಶಲ್ಯವುಳ್ಳ ಮರ್ಯಾದೆಯಿಂದಲೂ ಕಾಲೋಚಿತ ಮುಖಸ್ತುತಿಯಿಂದಲೂ ಮಾತ್ರವಲ್ಲದೆ ಮುಖ್ಯವಾಗಿ ಶ್ರವನಿವೇದನ ಕೇಳುವಲ್ಲಿ ದೊಡ್ಡಸ್ತಿಕೆಯವರನ್ನು ಅವರ ಕೆಟ್ಟ ನಡತೆಗೂ ವ್ಯಸನಗಳಿಗೂ ಗದರಿಸದೆ ಅವವಕ್ಕೆ ಆಸ್ಪದವೇ ಈಯುತ್ತಿರುವ ಪಾಪಾಲಕ್ಷ್ಯಭಾವದಿಂದ ಸಹ ಯೇಸುವಿತರು ಪಪ್ಪಕ ಧರ್ಮದ ಎಲ್ಲಾ ದೇಶಗಳಲ್ಲಿ ತಮ್ಮನ್ನು ಮೆಚ್ಚಿಸಿ ಕೊಳ್ಳುತ್ತಾ, ಹೆಚ್ಚಾಗಿ ಅರಮನೆಗಳಲ್ಲಿ ಅಧಿಕಾರ ಪಡ ಕೊಳ್ಳುತ್ತಾ ಬಂದರು; ಪಪ್ಪಕರಲ್ಲಿ ಯೇಸುವಿತರೇ ಬಾಲಕರ ಸುಮಾರು ಎಲ್ಲಾ ಉಪಾಧ್ಯಾಯರಾದರು; ಅಸಿಯದಲ್ಲಿಯೂ ಅಮೆರಿಕದಲ್ಲಿಯೂ[1] ಪಪ್ಪಕತ್ವವನ್ನು ವಿಸ್ತರಿಸುವ ಪ್ರಯತ್ನಗಳಿಗೆ ಯೇಸುವಿತರೇ ಮುಖ್ಯ ಕಾರಣರು; ಇವರೇ ಮಹಾ ವಿದ್ಯಾಶಾಲೆಗಳಲ್ಲಿಯ ಹೆಸರುಳ್ಳ ಪಂಡಿತರಾದರು; ಆದರೆ ಎಲ್ಲಕ್ಕಿಂತ ದೊಡ್ಡ ಕೇಡೇನೆಂದರೆ, ಪಪ್ಪಕ ಧರ್ಮದ ಹೆಚ್ಚು ಮಂದಿ ರಾಜರ ಬಳಿಯಲ್ಲಿ ಯೇಸುವಿತರೇ ನಿವೇದನಶ್ರೋತರಾಗಿದ್ದು, ಹೀಗೆ ಆಯಾ ರಾಜರನ್ನಲ್ಲದೆ ಅವರ ಮೂಲಕದಿಂದ ಆಯಾ ದೇಶಗಳನ್ನು ಸಹ ತಾವು ಆಳುತ್ತಿದ್ದರು; ಈ ಪರಿ ತಮಗೆ ಪ್ರಾಪ್ತವಾಗಿದ್ದ ಅಧಿಕಾರವನ್ನು ಯೇಸುವಿತರು ಸೌವಾರ್ತಿಕರ ನಿರ್ಮೂಲನಕ್ಕಾಗಿ ಸರ್ವತ್ರ ಪ್ರಯೋಗಿಸುತ್ತಿದ್ದರು.

ಅದು ಹೊರ್ತಾಗಿ ಕಾರ್ಯಸಿದ್ಧಿಗೋಸ್ಕರ ಯೇಸುವಿತ ಕುಲಕ್ಕೆ ಆರಂಭದಿಂದ ಇದ್ದು ಇನ್ನು ಈಗಲೂ ಇರುವ ಕ್ರಮವೇನೆಂದರೆ—ಕುಲಶಿರಸ್ಸಾಗುವದಕ್ಕೆ ಅ

---

1) 456ನೇ ಪಾನು.

ಮಿತಾಧಿಕಾರವುಳ್ಳ ಒಬ್ಬ ನಾಯಕನಿರುವನು; ತನ್ನ ಜೀವದ ಪೂರ್ತಿಗೆ ಅವನು ಕುಲದ ಸಕಲ ವಿಷಯಗಳನ್ನು ನಡಿಸುತ್ತಿರುವನು; ಕುಲದವರಲ್ಲಿ ವಿದ್ವಾಂಸರೂ ಪ್ರವೀಣರೂ ಎನ್ನಿಸುವಂಥವರಲ್ಲಿ ನಾಲ್ವರು ಪ್ರತಿನಿಧಿಗಳೆಂಬ ಮಂತ್ರಿಗಳು ಅವನ ಸಹಾಯಕ್ಕಿರುವರು; ಕುಲದವರೆಲ್ಲರೂ ತಾವು ಬರೇ ಹೆಣಗಳೆಂಬಂತೆ ಕುಲನಾಯಕನಿಗೆ ಏನೂ ವಿರೋಧಿಸದೆ, ವಿಧೇಯರಾಗಿರ ಬೇಕು; ಯೇಸುವಿತರಲ್ಲೊಬ್ಬನು, ನನಗೆ ತಂದೆ ತಾಯಿಗಳಿದ್ಧಾರೆಂತ, ಹೇಳ ಬಾರದು, ನನಗೆ ತಂದೆ ತಾಯಿಗಳಿದ್ದರೆಂತಲೇ, ಮಾತ್ರ ಹೇಳ ಬೇಕು; ಕುಲಾಧಿಕಾರಿಯು ಓದದಿದ್ದಂಥ ಪತ್ರಿಕೆಗಳಲ್ಲೊಂದನ್ನೂ ಸಾಧಾರಣ ಕುಲದವರು ಓದ ಬಾರದು. ನಾಯಕನೂ ಅವನ ನಾಲ್ವರು ಮಂತ್ರಿಗಳೂ ಅಲ್ಲದುಳಿದ ಕುಲಸ್ಥರೆಲ್ಲರೂ ನಾಲ್ಕು ವರ್ಗಗಳಾಗಿ ವಿಭಾಗ ಪಟ್ಟಿರುವರು; ಮೇಲಿನ ವರ್ಗದವರಲ್ಲಿ ನಾಯಕನನ್ನೂ ಅವನ ಮಂತ್ರಿಗಳನ್ನೂ ಕುಲಗೃಹಗಳ ಮುಖ್ಯರನ್ನೂ ಪಪ್ಪಕ ದೇವಜ್ಞಾನದರ್ಶನದ ಪಂಡಿತರನ್ನೂ ರಾಜರ ನಿವೇದನಶ್ರೋತನನ್ನೂ ವಿಗ್ರಹಾರಾಧಕರೊಳಗಣ ಮತವಿಸ್ತರಣದ ಮುಖ್ಯರನ್ನೂ ಆರಿಸಲಾಗುವದು; ಒಟ್ಟಿಗೆ ಕುಲದ ದೊಡ್ಡ ಎಲ್ಲ ಉದ್ಯೋಗಗಳಿಗೆ ಮೊದಲಿನ ವರ್ಗದ ಯೇಸುವಿತರು ಬರುತ್ತಿರುವರು; ಕೆಳಗಿನದೊಂದು ವರ್ಗದಲ್ಲಿ ಬುದ್ಧಿಯಿಂದಲೂ ಕುಲಾಧಿಕಾರಿಗಳ ಮುಂದಿನ ಸಂಪೂರ್ಣ ವಿಧೇಯತ್ವದಿಂದಲೂ ಕುಲದ ಹಿತವನ್ನು ಕುರಿತ ನಿರಾಲಸ್ಯವುಳ್ಳ ವೃತ್ತಿಯಿಂದಲೂ ಎಸೆದಂಥವನೊಬ್ಬನು ಮಾತ್ರ ಮೇಲಿನದೊಂದು ವರ್ಗದಲ್ಲಿ ಶೇರ ಬಹುದು. ಕೆಳಗಣ ವರ್ಗಗಳಲ್ಲಿರುವ ಮತೋದ್ಯೋಗಿಗಳಲ್ಲದವರಾದಂಥ ರಾಜ್ಯೋದ್ಯೋಗಿಗಳೂ ಪಂಡಿತರೂ ವ್ಯಾಪಾರಿಗಳೂ ಸೇನೋದ್ಯೋಗಿಗಳೂ ಮುಂತಾದವರು ಕುಲವಸ್ತ್ರಗಳನ್ನು ಧರಿಸದೆ ಇದ್ದದರಿಂದ ಯಾರಿಗೂ ಬಹಿರಂಗದಲ್ಲಿ ಅವರ ಗೊತ್ತು ತಿಳಿಯದ ಕಾರಣ ಅವರು ಗುಪ್ತ ಹೊಂಚುಗಾರರಾಗಿ, ಬಹಳ ಕಂಟಕವೆಸಗುತ್ತಿದ್ದರು; ಅಷ್ಟರಲ್ಲಿ ಇವರಿಗೆ ಮೇಲಿನ ವರ್ಗದವರ ಅಭಿಪ್ರಾಯವೆಂತೂ ತಿಳಿಯಲಿಲ್ಲ; ಅವರು ಕಣ್ಣು ಮುಚ್ಚಿದಂಥವರಾಗಿ, ತಮ್ಮ ಮೇಲಿನವರ ಆಜ್ಞೆಗಳಿಗನುಸರಿಸ ಬೇಕು. ಅದಲ್ಲದೆ ಸಕಲ ವರ್ಗಗಳ ಪರಸ್ಪರ ಪರಿಶೋಧನೆಯಿಂದ ಕುಲನಾಯಕನಿಗೆ ಕುಲಸ್ಥರಲ್ಲೊಬ್ಬೊಬ್ಬನ ಬುದ್ಧಿ ಕೆಲಸ ನಡತೆ ಪ್ರಯೋಜಕತೆಗಳ ವಿಷಯ ಸೂಕ್ಷ್ಮ ತಿಳಿವಿಕೆ ಇರುವದು. ಯೇಸುವಿತರಲ್ಲಿ ಶೇರಲಪೇಕ್ಷಿಸುವಂಥವರು ಜಾಗರೂಕ ಪರಿಶೋಧನೆಯಾಗುತ್ತಿರುವಲ್ಲಿ 2 ವರುಷ ನಾನಾ ವಿಧದ ಪರೀಕ್ಷೆ ತಾಳುತ್ತಿರ ಬೇಕು. ಹೀಗಿರಲಾಗಿ, ಕುಲಪ್ರವೇಶಕ್ಕೆ ಯಾರನ್ನಾದರೂ ಆರಿಸಿ ಕೊಳ್ಳುವದರಲ್ಲಿ ತಪ್ಪಾಗುವದು ಬಹಳ ಅಪರೂಪ; ಅದು ಹೊರ್ತಾಗಿ ನಿಷ್ಪ್ರಯೋಜಕರನ್ನು ಕುಲದಿಂದ ಕೀಳುವದು ಸುಲಭವಾಗುತ್ತಿರುವದು.—

ಇಂಥಾ ಬಲಿಷ್ಠ ಕುಲದವರು ತಮ್ಮ ಪಪ್ಪಕ ಕ್ರಿಯೆಗಳನ್ನು ಸಾಗಿಸುವದಕ್ಕಾಗಿ ಹಿಡುಕೊಂಡಿರುವ ಬೇರೆ 3 ಮಹಾ ದುಷ್ಟ ಮಾರ್ಗಗಳು ಯಾವವಂದರೆ—ಉದ್ದೇಶ್ಯವು ಉಪಾಯಗಳನ್ನು ಶುದ್ಧೀಕರಿಸುವದೆಂಬದೊಂದು; ಯೋಗ್ಯತೆ ಎಂಬದು ಮತ್ತೊಂದು; ಕಪಟೋಕ್ತಿಯಿನ್ನೊಂದು. ಮುಂದೆ ಸ್ವಲ್ಪ ವಿವರಿಸಿರುವ ಈ ಪಾಯಗಳು ಅವರ ಕ್ರಿಯೆಗಳಲ್ಲಿಯೂ ಗ್ರಂಥಗಳಲ್ಲಿಯೂ ತಿರಿ ತಿರಿಗಿ ಹೇರಳವಾಗಿ ಕಾಣಿಸುತ್ತವೆ.

ಉದ್ದೇಶ್ಯವು ಉಪಾಯಗಳನ್ನು ಶುದ್ಧೀಕರಿಸುವದೆಂಬದರ ಅರ್ಥವೇನೆಂದರೆ—ಒಬ್ಬನು, ಹಿತಕ್ಕೆಂತ, ಹೇಳುವದೊಂದು ಕಾರ್ಯವನ್ನು ಗೈಯುವ ಹಾಗಿದ್ದರೆ ಅವನು ಅದರ ಸಿದ್ಧಿಗಾಗಿ ಪ್ರಯೋಗಿಸುವ ಉಪಾಯಗಳೆಲ್ಲವೂ ಹಿತಕ್ಕೆಂಬ ಆ ಉದ್ದೇಶ್ಯದ ದೆಸೆಯಿಂದ ಒಳ್ಳೆಯವುಗಳೇ ಆಗುತ್ತವೆ; ಆ ಉಪಾಯಗಳು ಮಹಾ ಪಾತಕಗಳಾದರೂ ಚಿಂತೆಯಿಲ್ಲ. ದೃಷ್ಟಾಂತಕ್ಕಾಗಿ ಈ ಪೈಶಾಚಿಕ ಧರ್ಮದ ಮೇಲೆ ಒಬ್ಬನು, ತಾನು ಕದ್ದದರಿಂದ ಯಾವದೊಂದೂ ಉಪಕಾರ ಮಾಡುವೆನೆಂದು, ಆಲೋಚಿಸಿ, ಬೇಕಾದ್ದನ್ನು ಕದಿಯ ಬಹುದು; ಅದೇ ತರದ ಆಲೋಚನೆಯಿಂದ ಒಂದು ವೇಳೆ ಒಬ್ಬ ಕಥರನನ್ನು ನಶಿಸುವೆನೆಂಬ ಅಭಿಪ್ರಾಯ ಗೊಂಡು ಜೀವಹಾನಿ ಮಾಡಲು ಇಲ್ಲವೆ ಅಬದ್ಧ ಪ್ರಮಾಣ ಗೈಯಲು ಬಹುದು; ಒಬ್ಬ ಅರಸನು ಯೇಸುವಿತರ ಆಲೋಚನೆಯ ಪ್ರಕಾರ ಅರಸುತನಕ್ಕೆ ಅಯೋಗ್ಯನೆಂದಾದರೆ ಅವನನ್ನು ಕೊಲ್ಲ ಬಹುದು. ಇಂಥಾ ಧರ್ಮಕ್ಕನುಸಾರವಾಗಿ ಯೇಸುವಿತರು ಕ್ರಿ. ಶ. 1574ನೇ ವರುಷದಿಂದ 1589ನೇದರ ವರೆಗೆ ಫ್ರಂಚು ದೇಶವನ್ನಾಳುತ್ತಿದ್ದ 3ನೇ ಹೆನ್ರಿಯ (ಹೈನ್ರೀಕನ) ಕೊಲೆಗೂ ಅವನ ಉತ್ತರಾಧಿಕಾರಿಯಾದ 4ನೇ ಹೆನ್ರಿಯದಕ್ಕೂ ಕಾರಣರಾದರು; ಸ್ಪಾನಿಯದಲ್ಲೂ ಪೊರ್ತುಗಲಿನಲ್ಲೂ ಯೇಸುವಿತರು ತಮ್ಮ ಚಿತ್ತಕ್ಕೆ ಬಾರದಂಥ ರಾಜರಿಗೆದುರಾಗಿ ಅನೇಕಾವರ್ತಿ ಒಳಸಂಚು ಹುಟ್ಟಿಸಿ, ಅವರಲ್ಲಿ ಕೆಲವರ ಮರಣಕ್ಕೆ ಮೂಲಸ್ಥರಾದರು. ಅವರ ಗ್ರಂಥದೊಳಗಿನ ಬೇರೆ ಕೆಲವು ಮಾತುಗಳಾವವಂದರೆ—ಒಬ್ಬ ಸಭೋದ್ಯೋಗಿಯು ತನಗೊಂದು ಲಾಭಕರವಾದ ಉದ್ಯೋಗವ ದೊರಕಿಸಿ ಕೊಳ್ಳುವದಕ್ಕೆ ಕೊಟ್ಟ ಹಣ ಕ್ರಯವೆಂತಾದರೆ ಅದೊಂದು ಸಿಮೋನೀಯವೆಂಬ[1] ಪಾಪವು; ಆದರೆ ಅವನು ಉದ್ಯೋಗದಾಯಕನಿಗೆ ಮೆಚ್ಚಿಸುವ ಉದ್ದಿಶ್ಯ ಹಣ ಕೊಟ್ಟರೆ, ಉದ್ಯೋಗದಾಯಕನು ಆ ಹಣದ ಮುಖ ಒಂದೇ ನೋಡಿದರೂ, ಸಿಮೋನೀಯವಾಗುವದಿಲ್ಲ. ಪಟಿಂಗರಾದ ಧನಿಗಳ ಚಾಕರರು ಅವರ ಸೇವೆಗಾಗಿ ಕದ ಮುರಿದು, ಕಿಟಕಿ ಹತ್ತುವದಕ್ಕೆ ನಿಚ್ಚಣಿಕೆ ಹಿಡಿದು, ಮುಂತಾದ ಕಳ್ಳ ಉಪಾಯ ಗೈಯುವಲ್ಲಿ ತಮ್ಮ ಚಾಕರಿಯಲ್ಲಿ ಉ

1) 328, 329, 360, 407ನೇ ಪಾನುಗಳು.

ಳಿಯುವದಕ್ಕಾಗಲಿ ಆ ಧನಿಗಳಿಂದ ಇನಾಮು ಹೊಂದುವದಕ್ಕಾಗಲಿ ಹಾಗೆ ಮಾಡಿದರೆ ಅಡ್ಡಿಯಿಲ್ಲ; ಪಾಪಕ್ಕೆ ಆಸ್ಪದ ಕೊಡುವ ಉದ್ದಿಶ್ಯ ಮಾತ್ರ ಅವರು ಹಾಗೆ ಮಾಡ ಬಾರದು. ಚಾಕರರು ತಮ್ಮ ಅಲ್ಪ ಸಂಬಳವನ್ನು ಏರಿಸುವ ಉದ್ದೇಶ್ಯದಿಂದ ತಮ್ಮ ಖರ್ಚಿಗೆ ಸಾಕೆಂದೆಣಿಸುವ ಮಟ್ಟಿಗೆ ತಮ್ಮ ಧನಿಗಳಿಂದ ಕಳ ಬಹುದು. ಒಬ್ಬ ಮಗನು, ತನ್ನ ತಂದೆ ಸಾಯಲಿ! ಎಂದು, ದೇವರ ಹತ್ತರ ಬೇಡಿ ಕೊಂಡು, ಬಳಿಕ ತಂದೆ ಸತ್ತದ್ದಕ್ಕಾಗಿ, ತನಗದರಿಂದ ಲಾಭವಾಯಿತೆಂತ, ಸಂತೋಷ ಪಡ ತಕ್ಕದ್ದು; ಹಗೆಯಿಂದ ಮಾತ್ರ ಹಾಗೆ ಮಾಡ ಬಾರದು. ಒಬ್ಬನು ತನ್ನ ಮಾನ ಉಳಿಸುವದಕ್ಕೋಸ್ಕರವೂ ತನ್ನ ಸೊತ್ತು ಭದ್ರ ಮಾಡುವದಕ್ಕೋಸ್ಕರವೂ (ಗೋಪ್ಯವಾಗಿ) ದ್ವಂದ್ವಯುದ್ಧವೆಸಗ ಬಹುದು[2]; ಆದರೆ ತನ್ನ ಎದುರಾಳಿಯನ್ನು ಹೊಂಚಿ ಕೊಲ್ಲುವದು ದ್ವಂದಯುದ್ಧಕ್ಕಿಂತ ಉತ್ತಮವು. ಒಬ್ಬ ಶತ್ರುವನ್ನಾಗಲಿ ಎದುರಾಳಿಯನ್ನಾಗಲಿ ಹೊಂಚಿ ಕೊಂದರೆ ಚಿಂತೆಯಿಲ್ಲ; ಆದರೆ ಬಿಗಿಯಾದ ಸ್ನೇಹದಿಂದ ಇದ್ದಂಥವನನ್ನು ಹೊಂಚಿ ಕೊಲ್ಲ ಬಾರದು. ತನ್ನ ಕೆನ್ನೆಗೆ ಹೊಡೆದ್ದಕ್ಕಾಗಲಿ ತನ್ನ ಮೇಲೆ ಚಾಡಿ ಹೇಳಿದ್ದಕ್ಕಾಗಲಿ ಸುಳ್ಳಾಡಿದ್ದಕ್ಕಾಗಲಿ ಮುಖಭಾವದಿಂದ ಅಸಹ್ಯ ತೋರಿಸಿ ಚಾಳಿಸಿದ್ದಕ್ಕಾಗಲಿ ಒಬ್ಬ ಆಢ್ಯ ಸ್ಥಿತಿಯವನು ಅಂಥವನನ್ನು ಕೊಂದು, ಡಾವೆ ತೀರಿಸಿ ಕೊಳ್ಳ ಬಹುದು; ಆದರೆ ಡಾವೆಯ ಮೇಲೆ ಅಲ್ಲ ತನ್ನ ಮಾನರಕ್ಷಣದ ಮೇಲೆಯೇ ಮಾತ್ರ ಹಾಗೆ ಮಾಡ ತಕ್ಕದು. ಒಬ್ಬ ಪ್ರೀಸ್ತನಾಗಲಿ ಮಠಿಕನಾಗಲಿ, ನಿನ್ನ ದುಷ್ಟ ಕರ್ಮಗಳನ್ನೂ ಬೇರೊಬ್ಬ ಪ್ರೀಸ್ತರ ದುಷ್ಕರ್ಮಗಳನ್ನೂ ಬೈಲಿಗಿಳಿಸುವೆನೆಂದು, ಹೇಳುವಂಥವನನ್ನು ಕೊಲ್ಲ ಬಹುದು; ಆಗಿಂದಾಗ ಅಂಥವನನ್ನು ಕೊಲ್ಲ ಬೇಕೆಂಬಂತೆ ಸಹ ಆಗುವದು.—

ಯೇಸುವಿತರು ನಡಿಸುತ್ತಿರುವ ಯೋಗ್ಯತೆಯೆಂಬ ಪ್ರಮಾಣವು ಸಕಲ ದೈವಿಕ ಮತ್ತು ಮಾನುಷ ಪ್ರಮಾಣಸೂತ್ರಗಳಿಗೆ ಪ್ರತಿಕೂಲಾರ್ಥ ಸಾಧಿಸ ಬಹುದಾದಂಥಾದ್ದೂ ಸಕಲ ವ್ಯಸನಗಳನ್ನು ಥಂದ ಗಾಣಿಸ ಬಹುದಾದಂಥಾದ್ದೂ ಆಗಿದೆ. ದೇವರದೊಂದು ನ್ಯಾಯಪ್ರಮಾಣಸೂತ್ರಕ್ಕಾಗಲಿ ಮನುಷ್ಯರದೊಂದು ನ್ಯಾಯಪ್ರಮಾಣಸೂತ್ರಕ್ಕಾಗಲಿ ಸಾಧಾರಣವಾದ ಅರ್ಥವು ಯೋಗ್ಯವಾಗಿದ್ದರೂ ಇದಕ್ಕೆ ಪ್ರತಿಕೂಲವಾದ ಅರ್ಥ ಸಹ, ಯೋಗ್ಯವೆಂದು, ಕಾಣಿಸ ಬಹುದು; ಯಾವದೂ ಒಂದು ನೀತಿಚರ್ಯಾಪ್ರಮಾಣವನ್ನು ಕುರಿತು ಆಲೋಚನೆಗಳನ್ನು ಮಾಡುವಲ್ಲಿ ಈ ಆಲೋಚನೆಯು ಸಮ, ಆದರೆ ಇದಕ್ಕೆ ಪ್ರತಿಕೂಲವಾದದ್ದು ಸಹ ಸಮವೆನ್ನಿಸ ಬಹುದು ಎಂಬ ಅಭಿಪ್ರಾಯವು ಆ ಯೋಗ್ಯತಾವ್ಯವಹಾರದಲ್ಲಿ ಉಂಟು. ಇಂತಿರಲಿಕ್ಕೆ, ಯೋಗ್ಯತೆಯೆಂಬ ಇಂಥಾ ಅಸಹ್ಯ ವಾದದ ಮೇಲೆ

---

1) 284ನೇ ಪಾನು ಸರಿ ನೋಡು.

ಒಂದೇ ಪ್ರಮಾಣವಾದರೂ ನಿಶ್ಚಯವಾದದ್ದೂ ಸ್ಥಿರವಾದದ್ದೂ ಅಲ್ಲ. ಇದಕ್ಕೆ ಯೇಸುವಿತರ ಗ್ರಂಥಗಳೊಳಗಿನ ಒಂದೆರಡು ಸಾದೃಶ್ಯಗಳೇನಂದರೆ—ಒಬ್ಬ ನಿವೇದನಶ್ರೋತನು ತನ್ನ ಬಳಿಯಲ್ಲಿ ಪಾಪಗಳನ್ನು ನಿವೇದಿಸುವವನೊಬ್ಬನಿಗೆ ಇವುಗಳ ವಿಷಯದಲ್ಲಿರುವ ಆಲೋಚನೆಗಳನ್ನು, ಅಯೋಗ್ಯವೆಂದು, ತಿಳಿದಿದ್ದರೂ ಅವುಗಳನ್ನು ಕುರಿತು ತನ್ನ ಸ್ವಾಲೋಚನೆಗಳನ್ನು ಅವನಲ್ಲಿ ಒತ್ತಿಡಲಿಕ್ಕೆ ಅವನು ಬದ್ಧನಲ್ಲ; ಇದು ಮಾತ್ರವಲ್ಲದೆ ಆ ನಿವೇದನಶ್ರೋತನು ತನ್ನ ಸ್ವಾಲೋಚನೆಗಳಿಗೆ ವಿರೋಧವಾಗಿ ಅಂಥವನಿಗೆ ಬುದ್ಧಿ ಹೇಳ ಬಹುದು. ಐಶ್ವರ್ಯವಂತರು ಜಾಸ್ತಿ ಉಳಿಯುವ ತಮ್ಮ ಹಣದಿಂದ ದಾನಧರ್ಮ ಮಾಡ ಬೇಕು, ಆದರೆ ಒಬ್ಬನಿಗೆ ಸದ್ಯಕ್ಕೆ ರೂಢಿಯಾಗಿರುವ ಮಹಾ ವೈಭವಭೋಗಜೀವಿತಕ್ಕೆ ಯೋಗ್ಯವಾಗುವಂಥಾದ್ದು ಇನ್ನು ಜಾಸ್ತಿಯೆನ್ನಿಸುವದಿಲ್ಲ; ಅದು ಹೊರ್ತಾಗಿ, ಸುವಾರ್ತೆಯ ಪ್ರಕಾರ ದಾನಧರ್ಮವನ್ನು ಮಾಡುವದು ಯೋಗ್ಯವಾಗಿದ್ದರೂ ಅದನ್ನು ಮಾಡದಿರುವದು ಸಹ ಯೋಗ್ಯ, ಯಾಕಂದರೆ ಯೇಸುವಿತ ವಿದ್ವಾಂಸರು ಹೀಗೆ ನಿರ್ಣಯಿಸಿದರಲ್ಲ? ಪುನಃ, ಒಬ್ಬ ಮಠಿಕನು (ಅಥವಾ ಯಾರಾದರೂ) ಅವಿಧೇಯತ್ವಕ್ಕೆ[1] ಯೋಗ್ಯವಾದ್ದೊಂದು ಕಾರಣ ಕಂಡರೆ ತನ್ನ ಮುಖ್ಯಸ್ಥನಿಗೆ ವಿಧೇಯನಾಗಿರುವ ಹಂಗಿನಲ್ಲಿರುವದಿಲ್ಲ.—ಈ ವಿಧದಿಂದ ಯೇಸುವಿತರು ಬೇರೆ ಬೇರೆ ಆಶೆಯುಳ್ಳ ಬೇರೆ ಬೇರೆ ಮನುಷ್ಯರನ್ನು ನೋಡುವಲ್ಲಿ ಅವರವರ ಆಶೆಗನುಸಾರವಾಗಿ ದೈವಿಕ ಮತ್ತು ಮಾನುಷ ನ್ಯಾಯಪ್ರಮಾಣಗಳನ್ನು ಟೀಕಿಸಿ, ಅವರವರನ್ನು ಮೆಚ್ಚಿಸುತ್ತಿರುವರು; ಕೆಟ್ಟ ಜನಕ್ಕೆ ಕೆಟ್ಟ ಬುದ್ಧಿ ಹೇಳುತ್ತಿರುವರು, ನೀತ್ಯಪೇಕ್ಷಕರಿಗೆ ನೀತಿಯುಕ್ತ ಬುದ್ಧಿ ಹೇಳುತ್ತಿರುವರು; ದೇವರಾಜ್ಞೆ ಲಕ್ಷಿಸದೆ, ತಮ್ಮ ಅವಸ್ಥೆಗಳಿಗೆ ತಕ್ಕಂತೆಯೇ ನಡಕೊಳ್ಳುತ್ತಿರುವರು.

ಕಪಟೋಕ್ತಿಯೆಂಬದರ ಪ್ರಕಾರ ಯೇಸುವಿತರು ತಾವು ಹೇಳುವದರಲ್ಲಿಯೂ ಮಾತು ಕೊಡುವದರಲ್ಲಿಯೂ ಪ್ರಮಾಣ ಮಾಡುವದರಲ್ಲಿಯೂ ಬೇರೊಬ್ಬರು ಮಾಡ ತಕ್ಕ ಅರ್ಥಕ್ಕೆ ದೂರವಿರುವಂಥ ಮತ್ತೊಂದನ್ನು ಅಂತರಂಗದಲ್ಲಿಟ್ಟುಕೊಂಡು, ಹೀಗೆ ಸಕಲ ತರದ ಸುಳ್ಳನ್ನು, ನಿರ್ದೋಷವೆಂದು, ನಡಿಸುತ್ತಿರುವರು. ಅವರು ಹೇಳುವದೇನಂದರೆ, ತಾವು ಗೈದದ್ದೊಂದು ಕಾರ್ಯವನ್ನು ಗೈಯಲಿಲ್ಲವೆಂತ, ಪ್ರಮಾಣಿಸುವಾಗ ತಾವು, ನಿನ್ನೆಯಾಗಲಿ ಮೊನ್ನೆಯಾಗಲಿ ನಾವು ಗೈಯಲಿಲ್ಲವೆಂತ, ಭಾವಿಸಿ ಕೊಂಡರೆ ಪಾಪದ ತಂಟೆ ತೀರಿತು; ಅದಲ್ಲದೆ ತಾವು ಸುಳ್ಳುಪ್ರಮಾಣವಿಡುವಲ್ಲಿ ಪ್ರಮಾಣಿಸುತ್ತೇನೆಂಬ ಸ್ಪಷ್ಟೋಚ್ಚಾರಕ್ಕೆ ಬದಲಾಗಿ, ಪರಮಾಣಿಸುತ್ತೇನೆಂದು, ಮೊದಲಾದ ಅಸ್ಪಷ್ಟೋಕ್ತಿಗಳನ್ನಾಡಿದರೆ ಸುಳ್ಳುಪ್ರಮಾಣವಾಗಲಿಲ್ಲ.—

1) 265ನೇ ಪಾನು.

ಯೇಸುವಿತರು ಯೇಸುವಿನ ಸಮಾಜದವರೆಂಬ ತಾವು ತಮಗಿಟ್ಟು ಕೊಂಡಿದ್ದ ರಮ್ಯ ನಾಮದ ಮಾನವನ್ನು ತೀರ ಕೆಡಿಸುತ್ತಾ, ಸುಮಾರು 200 ವರುಷ ಇದ್ದು, ತನ್ಮಧ್ಯ ಬಹು ಐಶ್ವರ್ಯವನ್ನೂ ಅಧಿಕಾರವನ್ನೂ ಪಡ ಕೊಂಡಿದ್ದ ಮೇಲೆ ಅವರ ಕುಲದ ಅಂತವು ಬಂದಂತೆ ತೋರಿತು; ಹ್ಯಾಗಂದರೆ, ಸಕಲ ಪಪ್ಪಕರೂ ಅದಕ್ಕೆ ಮುನಿಯುವವರಾಗಿದ್ದರು. ಪಪ್ಪರು—ತಾವು ಯೇಸುವಿತರಿಗೆ ಹೆಚ್ಚು ಸ್ವಾತಂತ್ರ್ಯ ಕೊಟ್ಟೆವು, ಆದ್ದರಿಂದ ಅವರು ನಮಗಾದರೂ ಇನ್ನು ಒಳ ಪಟ್ಟೆರುವದಿಲ್ಲವೆಂದು, ತಿಳು ಕೊಂಡಿದ್ದರು; ಯೇಸುವಿತರಿಗೆ ಆರಂಭದಿಂದಲೇ ಪ್ರಾಪ್ತವಾಗಿದ್ದ ಮಹಾ ಸ್ವ ತಂತ್ರಕ್ಕೋಸ್ಕರ ಪಪ್ಪಕ ಮತೋದ್ಯೋಗಿಗಳೆಲ್ಲರೂ ಅವರಿಗೆ ನಿತ್ಯ ಹಗೆ ಮಾಡು ತ್ತಾ ಬಂದಿದ್ದರು; ಯೇಸುವಿತರು ಸಕಲ ರಾಜಕಾರ್ಯಗಳಲ್ಲಿ ಕೈ ಹಾಕುವದಕ್ಕೂ ಪ್ರಜೆಯನ್ನು ಅಧಿಕಾರಸ್ಥರಿಗೆದುರಾಗಿ ಎಬ್ಬಿಸುವದಕ್ಕೂ ರಾಜರು ಬೇಸತ್ತು, ಅಡ್ಡ ಗಟ್ಟುವವರಾಗಿದ್ದರು; ಅದು ಹೊರ್ತಾಗಿ ಯೇಸುವಿತರು ಸತ್ಯ ಕಿತ್ತು ನೀತಿಚರ್ಯೆ ಕೆಡಿಸುವಂಥ ತಮ್ಮ ಬೋಧನೆ ಪ್ರಮಾಣಗಳಿಂದ ಎಲ್ಲಾ ವಿವೇಕಿಗಳಿಗೂ ಅಸಹ್ಯ ಜನರಾಗಿದ್ದರು. ಅಪ್ಪರಲ್ಲಿ ಯೇಸುವಿತರು ಧನಲೋಭದಿಂದ ನವದರ್ಶನದೇಶಗ ಳಲ್ಲಿಯೂ[1] ಸಮುದ್ರಪಾರಗ ವ್ಯಾಪಾರವನ್ನು ತೊಡಗಿದ್ದರು; ಪೊರ್ತುಗಲಿನ ಯೋಸೇಫ ಇಮ್ಮಾನುವೇಲನೆಂಬ ರಾಜನ ಅಧೀನತೆಯಲ್ಲಿಯ ದಕ್ಷಿಣ ಅಮೆರಿಕ ದ ಬ್ರಜಿಲ್ ಎಂಬ ದೇಶದಲ್ಲಿ ಅವರು ಮೂಲನಿವಾಸಿಗಳನ್ನು ದಾಸತ್ವದಲ್ಲಿಟ್ಟು ಕೊಂಡು ಅವರಿಂದ ತಮಗಾಗಿ ಭೂಮಿವ್ಯವಸಾಯ ಗೈಯಿಸುತ್ತಾ ಸಮಸ್ತ ವ್ಯಾ ಪಾರ ಆಕ್ರಮಿಸಿ ಕೊಂಡಿರುತ್ತಾ ಇರುವಂಥವರಾಗಿದ್ದರು. ಪೊರ್ತುಗಲಿನ ರಾಜ ನು ಅವರಿಗೆದುರಾಗಲು, ಅವರು ಕ್ರಿ. ಶ. 1757ನೇ ಅಬ್ದ ಕಲಹಗಾರರಾದರು. ಪುನಃ, ಮರುವರುಷ ಅವರು ರಾಜನ ಜೀವ ತೆಗೆಸಲಿಕ್ಕೆ ನೋಡಿದರು. ಹೀಗಿರಲಾ ಗಿ ಕ್ರಿ. ಶ. 1759ನೇ ಅಬ್ದ ಅವರನ್ನು ಪೊರ್ತುಗಲಿನ ಸಕಲ ಶೀಮೆಗಳಲ್ಲಿಂದ ಓಡಿ ಸಿ ಬಿಟ್ಟರು. ತರುವಾಯ ಫ್ರಂಚಿನಲ್ಲಿ ಯೇಸುವಿತರದೊಂದು ಮಹಾ ಭಂಡಸಾ ಲೆಯವನು ಚೋದ್ಯ ರೀತಿಯಿಂದ ದಿವಾಳಿ ತೆಗೆದ ನಿಮಿತ್ತ ಅಲ್ಲಿ ಇತರ ಅನೇಕ ಭಂಡಸಾಲೆಯವರು ಸಹ ಕೆಟ್ಟದ್ದೇ ಅಲ್ಲಿಯ ಯೇಸುವಿತರನ್ನು ನಷ್ಟ ಕೊಡು ವದಕ್ಕೆ ಗುರಿ ಮಾಡಲಿಕ್ಕೆ ಹೇತುವಾಯಿತು; ಆ ಸಮಯ ಅವರ ಕುಲಪ್ರ ಮಾಣಗಳನ್ನು ಸಹ ಹೆಚ್ಚು ವಿಚಾರಿಸಲಿಕ್ಕೆ, ದುಷ್ಟತ್ವವೆಲ್ಲಾ ಬಯಲಾದ ಕಾ ರಣ ಕ್ರಿ. ಶ. 1764ನೇ ವರುಷ ಅವರನ್ನು ಫ್ರಂಚಿನೊಳಗಿಂದ ಹೊರಗೆ ಹಾಕ ಲಾಯಿತು. ಬಳಿಕ ಅವರಿಗೆ ಸ್ಪಾನಿಯದಲ್ಲಿಯೂ ನಿಲುಗಡೆ ತಪ್ಪಿ ಹೋಯಿತು; ಯಾಕಂದರೆ, ಪೊರ್ತುಗಲಿಗೆ ಶೇರಿದ ಆ ಬ್ರಜಿಲ್ ದೇಶದಲ್ಲಿ ಹ್ಯಾಗೋ, ಹಾಗೆಯೇ

1) 413ನೇ ಪಾನು.

ಅವರು ದಕ್ಷಿಣ ಅಮೆರಿಕದಲ್ಲಿ ಸ್ಪಾನಿಯಕ್ಕೆ ಶೇರಿದ ಪರಗೇ ದೇಶದಲ್ಲಿ ನಾನಾ ಅನ್ಯಾಯ ನಡಿಸುತ್ತಾ ಬಂದಿದ್ದರು; ಸ್ಪಾನಿಯದ 3ನೇ ಕರ್ಲ ರಾಜನು ವಿಚಾರಿಸಿ, ಆದದನ್ನು ತಿಳಿದಾಗಲೇ ಕ್ರಿ. ಶ. 1767ನೇ ಅಬ್ದ ಯೇಸುವಿತರೆಲ್ಲರನ್ನು ಹಿಡಿದು, ಹಡಗಗಳನ್ನೇರಿಸಿ, ತನ್ನ ರಾಜ್ಯದಲ್ಲಿಂದ ಪಪ್ಪಕ ರಾಷ್ಟ್ರಕ್ಕೊಯಿದಿಟ್ಟು ಬಿಟ್ಟನು.— (ಕ್ರಿ. ಶ. 1755ನೇ ಅಬ್ದ ಒಂದು ದೇವಶಿಕ್ಷೆಯಾಗಿದ್ದದನ್ನು ಇಲ್ಲಿ ಹೇಳದಿರ ತಕ್ಕದ್ದಲ್ಲ; ಏನೆಂದರೆ, ಆ ಅಬ್ದಕ್ಕೆ ಪಪ್ಪಕರು ಸರ್ವ ಸಂತರ ಹಬ್ಬವನ್ನಾಚರಿಸುವಾಗಲೇ[1] ಒಂದು ಮಹಾ ಭೂಕಂಪವಾಗಿ, ಪೊರ್ತುಗಲು ದೇಶದ ರಾಜಧಾನಿಯಾದ ಲಿಸಬೊನು ಪಟ್ಣವನ್ನು ಪೂರ್ಣ ಹಾಳು ಮಾಡುವಲ್ಲಿ ಮೊದಲಿನ ಕಂಪದಿಂದ ಅಲ್ಲಿಯ ಗುಪ್ತವಿಚಾರಣಸ್ಥಾನದ ಗೃಹವೇ ಹಿಸಿದು ಬಿತ್ತು.) ಆದರೆ ಹಿಂದೆ ಹೇಳಿದಷ್ಟೆಲ್ಲಾ ನಡೆಯುವಂದು ಪಪ್ಪಕ ಧರ್ಮವುಳ್ಳ ಸಕಲ ದೇಶಗಳ ರಾಜರು ಆಗಿನ ಪಪ್ಪನಾದ 13ನೇ ಕ್ಲೇಮೆಂತನಿಗೆ, ಯೇಸುವಿತರ ಕುಲವನ್ನು ಕಿತ್ತು ಹಾಕಿರೆಂದು, ನಾನಾ ಪ್ರಕಾರ ಬೆಸಸಲು, ಅವನು ಯೇಸುವಿತರ ಸಹಾಯದಿಂದ ತಾನು ಪಪ್ಪತ್ವವನ್ನೈದಿದ್ದ ಕಾರಣ ಬೇಡವೆನ್ನುತ್ತಿದ್ದರೂ ಅವರು ಬೆಸಸುವದನ್ನು ಬಿಡದಿರಲಿಕ್ಕೆ, ಕಡೆಯಲ್ಲಿ ತಾನವರಿಗೆ ಶೇರ ಬೇಕೆಂತ, ಅರಿತು, ಅತಿ ವ್ಯಥೆ ಗೊಂಡು, ಕ್ರಿ. ಶ. 1769ನೇ ಅಬ್ದ ಸತ್ತನು. ಆದರೆ ಅವನ ಉತ್ತರೋದ್ಯೋಗಿಯಾದ 14ನೇ ಕ್ಲೇಮೆಂತನು ತಡೆಗೆ ಅನು ಗಾಣದೆ, ಕ್ರಿ. ಶ. 1773ನೇ ವರುಷ ಒಂದು ಬುಲ್ಲವನ್ನು[2] ಪ್ರಕಟಿಸಿ, ಅದರಿಂದ ಯೇಸುವಿತರ ಕುಲವನ್ನು ಪೂರ್ಣವಾಗಿಯೂ ನಿತ್ಯ ಕಾಲಕ್ಕೂ ಕಿತ್ತು ಹಾಕಿ, ಸ್ವಲ್ಪ ಕಾಲದಿತ್ತ ಯೇಸುವಿತರು ಇಕ್ಕಿದ ವಿಷದಿಂದ ತೀರಿದನು.

ಬಳಿಕ ಯೇಸುವಿತರ ಕುಲವು ಕ್ರಿ. ಶ. 1814ನೇ ವರುಷದ ವರೆಗೆ ಗೋಪ್ಯವಾಗಿ ಉಳಿದನಂತರ 7ನೇ ಪಿಯನೆಂಬ ಅಂದಿನ ಪಪ್ಪನು, ಸರ್ವ ಲೋಕದವರಿಗೆ ಮಹದಾಶ್ಚರ್ಯವಾಗುವಂತೆ, ತನ್ನದೊಂದು ಬುಲ್ಲದ ಮೂಲಕ 14ನೇ ಕ್ಲೇಮೆಂತನೆಂಬ ಪಪ್ಪನ ಆ ಬುಲ್ಲವನ್ನು ಪ್ರಚಂಡ ರೀತಿಯಿಂದ ತಳ್ಳಿ[3], ಯೇಸುವಿತರ ಕುಲವನ್ನು ಪುನಃಸ್ಥಾಪಿಸಿದನು. ಆಗಿನಿಂದ ಆ ಕುಲದವರು ಅನೇಕ ದೇಶಗಳಲ್ಲಿ ಈಗಲೂ ಮುಂಚೆ ತಮಗಿದ್ದ ದುಃಸಾಹಸದಿಂದ ಪಪ್ಪಕ ವಿಶ್ವಾಸವನ್ನು ಹಬ್ಬಿಸಲಿಕ್ಕೂ ಸುವಾರ್ತಾಬೋಧನೆಯನ್ನು ನಿರ್ಮೂಲಿಸಲಿಕ್ಕೂ ಪ್ರವರ್ತಿಸುತ್ತಾ ಬಂದಿದ್ದಾರೆ. ಈ 1868ನೇ ವರುಷ ಸ್ಪಾನಿಯದವರು ಅವರನ್ನು ಇನ್ನೊಮ್ಮೆ ತಮ್ಮ ದೇಶದೊಳಗಿಂದ ಹೊರಗೆ ಅಟ್ಟ ನೋಡಿದರು.

---

1) 357, 422ನೇ ಪಾನು. 2) Dominus ac redemtor noster. 3) 408, 464ನೇ ಪಾನುಗಳನ್ನು ಸರಿ ನೋಡು.

## 60. ಸ್ಪಾನಿಯದ ೨ನೇ ಫಿಲಿಪ್ಪ ಅರಸನು.

ಪುನಃಸ್ಥಾಪನೆಯ ಆರಂಭಕ್ಕೆ[1] 5ನೇ ಕರ್ಲನೆಂಬವನು ಪ್ರಜಾಸ್ವೀಕಾರದ ಮೇಲೆ ಗೆರ್ಮಾನಿಯದ ಕೈಸರನಾಗಿದ್ದದಲ್ಲದೆ ದಾಯದ ಮೇಲೆ ಅಂದರೆ ಬಾಧ್ಯತೆಯ ಮೇಲೆ ನೀದೆರ್ಲಂದಿನ ಧನಿಯೂ ಸ್ಪಾನಿಯದ ರಾಜನೂ ಸಹ ಆಗಿದ್ದನು. ಸ್ಪಾನಿಯದ ಅರಗೋನಿಯ[2] ಮತ್ತು ಕಸ್ತಿಲಿಯ ಎಂಬೆರಡು ನಾಡುಗಳು ಕೂಡಿ, ಕ್ರಿ. ಶ. 1516ನೇ ವರುಷ ಅವನ ಕೈಯ ಕೆಳಗೆ ಒಂದೇ ರಾಜ್ಯವಾಗಿ ಶೇರಿದ್ದವು.

ಸೌವಾರ್ತಿಕ ಗುಣದವರಾದ ಅನ್ಯೋನ್ಯಜೀವಭ್ರಾತರೆಂಬವರು[3] ಉತ್ಪನ್ನರಾಗಿದ್ದಂಥ ನೀದೆರ್ಲಂದಿನಲ್ಲಿ ಪುನಃಸ್ಥಾಪನೆಯು ಲುಥರನ ಗ್ರಂಥಗಳ ಮತ್ತು ಶಿಷ್ಯರ ಮೂಲಕವಲ್ಲದೆ ಫ್ರಂಚು ದೇಶದ ಸೌವಾರ್ತಿಕ ಕ್ರೈಸ್ತರ ಮೂಲಕ ಸಹ ಬೇಗ ಬಂದು ನೆಲಸಿತು. ಅದಲ್ಲದೆ ಕರ್ಲನ ಜೀವದಶೆಯಲ್ಲಿ ಸಹ ಸುವಾರ್ತೆಯ ಬೋಧನೆಯು ಸ್ಪಾನಿಯದಲ್ಲಿಯೂ ಪ್ರವೇಶಿಸಿತು; ತನಗರಿವಿಲ್ಲದೆ ಕರ್ಲನು ತಾನೇ ಇದಕ್ಕೆ ಕಾರಣನಾದನು; ಹ್ಯಾಗಂದರೆ ಅವನು ಸ್ಪಾನಿಯದಿಂದ ತನ್ನ ಸಂಗಡ ಗೆರ್ಮಾನಿಯಕ್ಕೆ ತಂದಿದ್ದ ರಾಜಕ ಮತಕ ಉದ್ಯೋಗಿಗಳು ಅಲ್ಲಿ ನಿರ್ಮಲ ಸುವಾರ್ತೆಯ ಜ್ಞಾನ ಪಡೆದು, ತಮ್ಮ ದೇಶಕ್ಕೆ ಮರಳಿದ ಮೇಲೆ ಅದನ್ನು ವಾಗ್ಗ್ರಂಥಗಳೆರಡರಿಂದ, ಹೆಚ್ಚಾಗಿ ಪರಿಶುದ್ಧ ಬರಹದ ಭಾಷಾಂತರದಿಂದ, ಹಬ್ಬಿಸುವವರಾದರು. ಕರ್ಲನು ಗೆರ್ಮಾನಿಯದಲ್ಲಿ ಕ್ರೈಸ್ತ ಭಕ್ತಿಯಿಂದ ಪುನಃಸ್ಥಾಪನಾಕಾರ್ಯದ ಮಿತ್ರನಾಗಿ ಎಂದೂ ನಡೆಯದಿದ್ದದು ಹಿಂದೆ ತಕ್ಕ ಮಟ್ಟಿಗೆ ಕಾಣುತ್ತದೆ; ಆದರೆ ತನ್ನ ಬಾಧ್ಯತೆಯ ಎರಡು ದೇಶಗಳಲ್ಲಿ ಅವನು ಯಾವಾಗಲೂ ಅದರ ಕಠಿಣ ವೈರಿಯಾಗಿಯೇ ತೋರಿಸಿ ಕೊಳ್ಳುತ್ತಿದ್ದನು; ಎಂತೆಂದರೆ,

ನೀದೆರ್ಲಂದಿನಲ್ಲಿ ಅವನು ಕ್ರಿ. ಶ. 1520ನೇ ವರುಷದಿಂದ[4] 1550ನೇದರ ವರೆಗೆ ಒಂದರ ಮೇಲೊಂದಾಗಿ ಕೊಟ್ಟ 11 ಕ್ರೂರ ಆಜ್ಞೆಗಳಲ್ಲಿರುವದೇನಂದರೆ—ಕಥರತ್ವವು ಸ್ಥಾಪಿತವಾದ ಒಬ್ಬೊಬ್ಬನನ್ನು ಸಜೀವವಾಗಿ ಹುಗಿಯಲೂ ಸಜೀವವಾಗಿ ದಹಿಸಲೂ ಇಲ್ಲವೆ ಬೇರೆ ರೀತಿಯಿಂದ ಕೊಲ್ಲಲೂ ಬೇಕು; ದೂರು ಕೊಡುವವನಿಗೆ ಅವನವನ ಬದುಕಿನ ಅರ್ಧವು ಶಿಕ್ಕುವದು.— ಸೌವಾರ್ತಿಕ ದೇವಾರಾಧನೆಯು ನಡೆಯ ಬಾರದೆಂದು, ವಿಧಿಸಲಾಯಿತು; ದೇವವಾಕ್ಯದ ದೇಶೀಯ ಭಾಷಾಂತರಗಳನ್ನು ಸುಡಿಸಲಾಯಿತು[5]; ಕರ್ಲನ ಆಳುವಿಕೆಯೊಂದರಲ್ಲೇ 30,000 ಸೌವಾರ್ತಿಕ ಕ್ರೈಸ್ತರು ರಕ್ತಸಾಕ್ಷಿಮರಣ ಪಟ್ಟರು. ಆದರೂ ಪೂರ್ವದಲ್ಲಿ ರೋಮಾಯ ಸಾಮ್ರಾಜ್ಯದೊಳಗಾದಂತೆ[6] ಈ ನೀದೆರ್ಲಂದಿನಲ್ಲಿಯೂ ಅಂಥ ಸಾಕ್ಷಿಗ

1) 424ನೇ ಪಾನು. 2) 400ನೇ, 452ನೇ ಪಾನುಗಳು. 3) 410ನೇ ಪಾನು. 4) 443ನೇ ಪಾನು ಸರಿ ನೋಡು. 5) 449ನೇ ಪಾನು. 6) 91ನೇ ಪಾನು.

ಳ ರಕ್ತವು ಕ್ರಿಸ್ತನ ಸಭೆಗೆ ಬೀಜವೇ ಆಯಿತು. ಅಲ್ಲಿಯ ಗುಪ್ತವಿಚಾರಕರ ಹಿಂಸಾ
ಕ್ರಿಯೆಗಳಿಗೆ ಪ್ರಜೆಯಿಂದ ಹೇರಳ ಅಟಕವಾಗುತ್ತಿರಲಿಕ್ಕೆ, ಕರ್ಲನು ತನ್ನ ರಾಜತ್ವ
ದ ಅಂತದಲ್ಲಿ ತನ್ನ ಕಾಠಿಣ್ಯವನ್ನು ಸ್ವಲ್ಪ ಸಡಲು ಬಿಡ ಬೇಕಾಯಿತು; ಆದರೆ ಅ
ಷ್ಟರಲ್ಲಿ ಪ್ರಜೋತ್ತಮರು ಅಳಿದಿದ್ದರು, ವ್ಯಾಪಾರವೂ ಪಂಚಾಳವೃತ್ತಿಗಳೂ ಕೃಷಿ
ಯೂ ಕುಂದಿದ್ದವು, ದೇಶವು ಬಡವಾಗಿತ್ತು.

ಸ್ಪಾನಿಯದಲ್ಲಿ ಅದೇ ಹಾಡಾಯಿತು; ಅಲ್ಲಿ ಅಷ್ಟು ಬಹಳ ಮಂದಿ ಸೌವಾರ್ತಿ
ಕರಿರಲಿಲ್ಲ, ಆದರೂ ನೂರಾರು ಕ್ರೈಸ್ತರು ಸುವಾರ್ತೆಯ ವಿಶ್ವಾಸಕ್ಕೋಸ್ಕರ ಗುಪ್ತ
ವಿಚಾರಕರ[1] ಅಪ್ಪಣೆಯಿಂದ ಬಾಧಿತರಾಗಿ, ಮರಣ ಹೊಂದಿದರು. ಆದಾಗ್ಯೂ
ಅಲ್ಲಿ ಸಹ ಸೌವಾರ್ತಿಕರ ಸಂಖ್ಯೆಯು ಹೆಚ್ಚಿತು; ಬೇರೆ ಬೇರೆ ಬೋಧಕರು ಸುವಾ
ರ್ತಾವಿಸ್ತರಣಕ್ಕಾಗಿ ಸಮಾಜಗಳನ್ನು ಹುಟ್ಟಿಸಿದರು; ಸ್ಪಾನಿಯ ಭಾಷಾಂತರ
ಮಾಡಿದ ಹೊಸ ಒಡಂಬಡಿಕೆಯನ್ನು ಅನೇಕರು ಓದುವವರಾದರು. ಹೀಗಿರಲಾ
ಗಿ ಸುವಾರ್ತೆಯ ತಿಳಿವಿಕೆಯು ಹಿಂಸಕನಾದ ಕರ್ಲನ ಆಳ್ತನದ ಕಡೆಗೆಯೇ ಗು
ಪ್ತವಿಚಾರಣದೆದುರಿನಲ್ಲಿಯೂ ಚಿತಿಗಳೆದುರಿನಲ್ಲಿಯೂ ಸ್ಪಾನಿಯದ ಸುಮಾರು ಸ
ಕಲ ಪ್ರದೇಶಗಳಲ್ಲಿ ವ್ಯಾಪಿಸಿತ್ತು.

ಆಗ ಕರ್ಲನು, ಕಥರರನ್ನು ನಶಿಸ ಬೇಕೆಂಬ ತನ್ನ ಜೀವಿತದ ಈ ದೊಡ್ಡ ಹೃ
ದರ್ಥವು ಒದಗಲಿಲ್ಲವೆಂದು, ಚಿಂತೆ ಗೊಂಡು—ತನ್ನ ಕಿರೀಟಗಳನ್ನೆಲ್ಲಾ ಅಲ್ಲಗಳೆದಿ
ಟ್ಟು, ತನ್ನ ಜೀವಿತದ ಶೇಷವನ್ನು ಒಂದು ಮಠದೊಳಗೆ ಕಳೆಯ ಗೊಡುವೆನೆಂದು,
ನಿಶ್ಚಯಿಸಿ ಕೊಂಡು, ಕ್ರಿ. ಶ. 1555ನೇ ವರುಷ ತನ್ನ ಬಾಧ್ಯತೆಯ ದೇಶಗಳನ್ನೂ
ಅಮೆರಿಕದಲ್ಲಿ ಮೆಕ್ಸಿಕೋ ಪಿರೂ ಕ್ಷಿಲಿ ಮೊದಲಾದ ದೇಶಗಳನ್ನೂ ಇನ್ನೂ ಬೇ
ರೆ ಕಡೆಯವುಗಳನ್ನು ಸಹ ತನ್ನ ಮಗನಾದ 2ನೇ ಫಿಲಿಪ್ಪನಿಗೊಪ್ಪಿಸಿ, ಮರುವರು
ಷ ಗೆರ್ಮಾನಿಯದ ರಾಜತ್ವವನ್ನು 1ನೇ ಫೆರ್ದಿನಂದನೆಂಬ ತನ್ನ ಸಹೋದರನ[2]
ಕೈಗಿತ್ತು, ತರುವಾಯ ತಾನು ಸ್ಪಾನಿಯದ್ದೊಂದು ಮಠದೊಳು ಶೇರಿ, ತನ್ನ ದೇ
ಹಾಂತದ ವರೆಗೂ ಅಲ್ಲಿಯೇ ಇದ್ದು ಕೊಂಡನು. ಅಲ್ಲಿ ಅವನು ದಿವಸಕ್ಕೆ ಎರಡು
ಸಾರಿ ಮಿಸ್ಸವನ್ನು ಕೇಳುತ್ತಾ, ಚನ್ನಾಗಿ ಜಪಿಸುತ್ತಾ, ಮತಕ ಗ್ರಂಥಗಳ ಅಧ್ಯಯ
ನ ಮಾಡುತ್ತಾ ಇದ್ದದಲ್ಲದೆ ಪಂಚಾಳವೃತ್ತಿಯನ್ನು ಸಹ ಗೈಯುತ್ತಿರುವನು; ಅವ
ನು ಮರದ ಗಡಿಯಾರಗಳನ್ನು ರಚಿಸುತ್ತಿದ್ದದು ಇದಕ್ಕೊಂದು ದೃಷ್ಟಾಂತ. ಒ
ಮ್ಮೆ ಅವನು ಅದೇ ಹಾಳಿತದಿಂದ ನಡಿಯುವಂಥ ಎರಡು ಗಡಿಯಾರಗಳನ್ನು ರಚಿ
ಸಲೊದ್ದಾಡುತ್ತಿದ್ದದು ಕೈಗೂಡದಿರಲು, ಅವನು ಮನಸ್ತಾಪ ಪಟ್ಟು—ಎರಡು ಗ

---

1) ಕ್ರಿ. ಶ. 1471ನೇ ಅಬ್ದದಿಂದ 1484ನೇದರ ತನಕ ಪಪ್ಪನಾಗಿದ್ದ ಆ 4ನೇ ಸಿಕ್ಸ್ತನು (360ನೇ ಪಾನು) ಸ್ಪಾನಿಯದಲ್ಲಿ ಗುಪ್ತವಿಚಾರಕ ಧರ್ಮವ ಸ್ಥಾಪಿಸಿದ್ದನು; 414ನೇ ಪಾನು. 2) 447ನೇ ಪಾನು.

ಡಿಯಾರಗಳನ್ನಾದರೂ ನಾನು ಒಂದೇ ಹಾಳಿತದಲ್ಲಿ ನಡಿಸಲಿಕ್ಕೆ ಸಮರ್ಥನಲ್ಲ; ಅಂಥವನಾದ ನಾನು ಸಮಸ್ತ ಗೆರ್ಮಾನಿಯವನ್ನು ಏಕ ವಿಶ್ವಾಸದಲ್ಲಿ ಕೂಡಿಸಿ ನಡಿಸಲಿಕ್ಕೆ ಪ್ರಯತ್ನಿಸುತ್ತಿದ್ದದು ಎಂಥಾ ಅಸಾಧ್ಯ ಕೆಲಸ! ಎಂದು, ಪಶ್ಚಾತ್ತಾಪದೊಡನೆ ಹಲುಬಿದನು. ಆ ಏಕಾಂತವಾದ ಮಠದ ವಾಸದಿಂದ ಅವನು ಹೆಚ್ಚು ಹೆಚ್ಚಿಗೆ ದುಃಖಭರಿತನಾಗಲು, ಒಂದಾನೊಂದು ದಿವಸ ಶವವಸ್ತ್ರಗಳನ್ನು ಧರಿಸಿ ಕೊಂಡು, ಒಂದು ಶವಪೆಟ್ಟಿಗೆಯೊಳು ಮಲಗಿ, ಬಳಿಕ ಮಠೋದ್ಯೋಗಿಗಳಿಂದ ಮರಣಗೀತಗಳನ್ನೂ ಮರಣಪ್ರಾರ್ಥನೆಗಳನ್ನೂ ನುಡಿಸಿದನು. ಸ್ವಲ್ಪ ಕಾಲದಿತ್ತ ಕ್ರಿ. ಶ. 1558ನೇ ಅಬ್ದ ಅವನು ತೀರಿ ಹೋದನು. ತನ್ನ ಜೀವಿಕೆಯ ಕಡೇ ದಿನಗಳಲ್ಲಿ ಅವನು ತನ್ನ ಹೃದಯದ ಬಾಗಿಲನ್ನು ಸುವಾರ್ತಾಪ್ರವೇಶಕ್ಕಾಗಿ ಕೊಂಚ ತೆರೆದಿದ್ದಂತೆ ಕಾಣಿಸುತ್ತದೆ; ಹ್ಯಾಗಂದರೆ, ಅಂದು ಅವನ ಹತ್ತರ ಇರುತ್ತಿದ್ದ ಹತ್ತು ಮಂದಿ ಚಾಕರರೂ ಕೆಲವು ಮಂದಿ ಮಠೋದ್ಯೋಗಿಗಳೂ ಹೆಚ್ಚು ಕಡಿಮೆ ಸೌವಾರ್ತಿಕ ಕ್ರೈಸ್ತರಾಗಿದ್ದಂಥವರೇ. ಅವನ ಮರಣದ ಹಿಂದೆ ಗುಪ್ತವಿಚಾರಕರು ಅವರನ್ನು ಶೆರೆಯಲ್ಲಿಟ್ಟು, ತರುವಾಯ ಅವರಲ್ಲಿ ಹೆಚ್ಚು ಜನರನ್ನು ಸುಟ್ಟರು. ಅದಲ್ಲದೆ, ಫಿಲಿಪ್ಪ ರಾಯನು ತನ್ನ ತಂದೆಯ ಹೆಣ ನೋಡಲಿಕ್ಕೆ ತೀವ್ರದಿಂದ ಬಾರದಿದ್ದರೆ ಮಠಿಕರು ಅದಕ್ಕೆ ಸಹ ಭಂಗ ಪಡಿಸುತ್ತಿದ್ದರೆಂದು, ಮೆಲಂಖ್ಥೋನನು[1] ಹೇಳುತ್ತಾನೆ.

5ನೇ ಕರ್ಲನ ಮಗನಾದ 2ನೇ ಫಿಲಿಪ್ಪನೆಂಬ ಆ ರಾಯನು ಅಮಿತ ಕ್ರೂರತ್ವವುಳ್ಳ ಮನುಷ್ಯನು; ಅವನು ತನ್ನ ಜೀವಿತದ ಸಕಲ ಕಾಲದಲ್ಲಿ ಒಮ್ಮೆ ಆದರೂ ನಗಲಿಲ್ಲವಂತೆ. ಸ್ಪಾನಿಯ ದೇಶದ ಮಠೋದ್ಯೋಗಿಗಳು ಅವನನ್ನು ಪಪ್ಪಕ ಧರ್ಮದಲ್ಲಿ ಕಡು ತರದಿಂದ ನೆಟ್ಟು, ಅವನೊಳಗೆ ಕಥರರೆಂಬವರ ಮೇಲೆ ಮಹಾದ್ವೇಷವನ್ನು ಹುಟ್ಟಿಸಿದ ಕಾರಣ ಅವನು ಮಾಡಿ ಕೊಂಡ ಪ್ರಮಾಣವೇನೆಂದರೆ— ಕಥರರನ್ನು ನನ್ನ ರಾಜ್ಯದಲ್ಲಿರ ಗೊಡುವದಕ್ಕಿಂತ ನಾನು ರಾಜ್ಯವನ್ನು ಬಿಟ್ಟು ಬಿಡುವದೇ ಚಲೋದು!— ಇಂತಿರಲಿಕ್ಕೆ, ಸೌವಾರ್ತಿಕ ಕ್ರೈಸ್ತರನ್ನು ನಶಿಸ ಬೇಕೆಂಬದೇ ಅವನ ಪೂರ್ಣ ಜೀವಿಕೆಯ ಒಂದೇ ಅಭಿಪ್ರಾಯವಾಯಿತು.

ಅಷ್ಟರಲ್ಲಿ ಫಿಲಿಪ್ಪನು ಆಗಿನ ಕಾಲದ ಸಮಸ್ತ ರಾಜರಿಗಿಂತಲೂ ಧನಾಧಿಕಾರವುಳ್ಳಂಥವನು; ಸೂರ್ಯನು ಎಂತಾದರೂ ಅಸ್ತಮಯವಾಗದಷ್ಟು ದೊಡ್ಡ ರಾಜ್ಯವು ಅವನಿಗಿತ್ತು; ಹ್ಯಾಗಂದರೆ, ಯುರೋಪದಲ್ಲಿ ಅವನಿಗೆ ಸ್ಪಾನಿಯ ನೀದೆರ್ಲಂದು ಪ್ರಭೃತಿಯಾದ ದೇಶಗಳಿದ್ದದ್ದಲ್ಲದೆ ಅವನು ಆಫ್ರಿಕದಲ್ಲಿಯೂ ಅಸಿಯದಲ್ಲಿಯೂ ಅಮೆರಿಕದಲ್ಲಿಯೂ ವಿಸ್ತಾರವಾದ ದೇಶಗಳ ಒಡೆಯನಾಗಿದ್ದನು. ಈ ಮಿಗಿಲಾದ ಬಲವಿದ್ದರೂ ನೀದೆರ್ಲಂದಿನಲ್ಲಿಯ ಸೌವಾರ್ತಿಕ ಕ್ರೈಸ್ತರನ್ನು ತನ್ನ ಚಿತ್ತ

1) 423, 427, 428, 455, 456ನೇ ಪಾನು.

ಕ್ಕೊಳ ಪಡಿಸಿ ಕೊಳ್ಳಲಿಕ್ಕೆ ಅವನಿಂದಾಗಲಿಲ್ಲ. ಅದಲ್ಲದೆ, ಅವನಿಗೆ ಅಮೆರಿಕದಿಂದ ಬೆಳ್ಳಿ ಭಂಗಾರದ ರಾಶಿರಾಶಿಗಳು ಬರುತ್ತಿದ್ದರೂ ತನ್ನ ಆಳ್ತನದಂತದಲ್ಲಿ ತೀರಾ ಬಡವನಾದನು; ಎಂತೆಂದರೆ, ಅವನು ತನ್ನ ಚಾಕರರಿಗೂ ದಂಡಿನವರಿಗೂ ಸಂಬಳ ಕೊಡಲಾರದ್ದರಿಂದ ಮತೋದ್ಯೋಗಿಗಳು ಅವನ ಅಪ್ಪಣೆಯ ಮೇರೆಗೆ ರಾಜ್ಯದಲ್ಲಿ ಮನೆ ಮನೆಗೆ ಹೋಗಿ, ಬೇಡುವದಾಯಿತು; ಅವನು ಸಾಯುವಾಗ ರಾಜ್ಯದ ಸಾಲವು ಸುಮಾರು 34 ಕೋಟಿ ರೂಪಾಯಿ ಆಗಿತ್ತು[1]; ಅವನೆದುರಿಸುತ್ತಿದ್ದ ಪರಿಶುದ್ಧ ಸುವಾರ್ತೆಯ ದೇವರ ಆಶೀರ್ವಾದವು ಅವನ ಕಾರ್ಯಗಳಲ್ಲೊಂದಕ್ಕಾದರೂ ಬಾರದ ನಿಮಿತ್ತವೇ ಅದು ಒದಗಿತ್ತು. ಆದರೆ ಅವನ ಆಳ್ತನದ ಮುಖ್ಯ ತಾತ್ಪರ್ಯವನ್ನು ಈಗ ಹೇಳುವ.

ತನ್ನ ಅಧಿಕಾರದ ಬಲವನ್ನು ಇನ್ನು ಹೆಚ್ಚಿಸುವದಕ್ಕೋಸ್ಕರ ಅವನು ತನ್ನ 27ನೇ ವಯಸ್ಸಿನಲ್ಲಿ 40 ವರುಷದ ಕುರೂಪಿಯಾದ ತ್ಯೂದರಿನ ಮೇರಿಯೆಂಬ ಇಂಗ್ಲಂದಿನ ರಾಣಿಯನ್ನು[2] ಮದಿವೆ ಮಾಡಿ ಕೊಂಡನು. ಅವಳು 8ನೇ ಹೆನ್ರಿ ರಾಜನ ಮಕ್ಕಳಲ್ಲಿ ಒಬ್ಬಳು; ಅವಳು ಫಿಲಿಪ್ಪನಂತೆಯೇ ಪಪ್ಪಕ ಧರ್ಮದಲ್ಲಿ ಬಹು ಆಸಕ್ತಳಾಗಿದ್ದು, ಅವನಿಂದ ಪ್ರೇರಿತಳಾಗಿ ಇಂಗ್ಲಂದಿನಲ್ಲಿಯ ಸೌವಾರ್ತಿಕರನ್ನು ಹೆಚ್ಚು ಹೆಚ್ಚಿಗೆ ಹಿಂಸಿಸುವವಳಾದಳು. ಫಿಲಿಪ್ಪನು ಒಂದೇ ವರುಷ ಮಾತ್ರ ಇಂಗ್ಲಂದಿನಲ್ಲಿದ್ದು, ಸ್ಪಾನಿಯಕ್ಕೆ ತಿರುಗಿದನು; ಯಾಕಂದರೆ ಇಂಗ್ಲಂದಿನವರೆಲ್ಲರೂ ಅವನ ಅಧಿಕಾರಾಭಿಮಾನದ ತುಸಕ ಅವನ ಮೇಲೆ ಹಗೆ ಗೊಂಡಿದ್ದರು. ಬಳಿಕ ಮೇರಿಯು ಅಂಥ ವಿವಾಹಸ್ಥಿತಿಯಲ್ಲಿ ಏನೂ ಸುಖ ಪಡದೆ, ನಾಲ್ಕು ವರುಷದಿತ್ತ ಕ್ರಿ. ಶ. 1558ನೇದಕ್ಕೆ ಸಾಯಲು, ಇಲಿಜಬೆಥಳೆಂಬವಳು ಇಂಗ್ಲಂದಿನಲ್ಲಿ ಪಟ್ಟಾಭಿಷೇಕ ಹೊಂದಿದಾಗ ಫಿಲಿಪ್ಪನು ಇವಳನ್ನು ಸಹ ಮದಿವೆಗೆ ಕೇಳಿ ಕೊಳ್ಳಲು, ಒಲ್ಲೆನೆಂದಳು; ಯಾಕಂದರೆ ಅವಳಲ್ಲಿ ಸುವಾರ್ತೆಯ ಪ್ರೀತಿಯು ಬಹಳ. ಅದಕ್ಕಾಗಿ ಅವನು ಅತಿ ರೋಷ ಗೊಂಡದ್ದಕ್ಕೆ ಕ್ರಿ. ಶ. 1584ನೇ ವರುಷಕ್ಕೀಚೆ ಇನ್ನೊಂದು ಕೂಡಿತೇನಂದರೆ, ಇಲಿಜಬೆಥಳು ಸ್ಪಾನಿಯದ ಆ ರಾಜನಿಂದ ಅತಿರೇಕ ಹಿಂಸೆ ತಾಳುತ್ತಿರುವಂಥ ನೀದೆರ್ಲಂದಿನ ಸೌವಾರ್ತಿಕರಿಗೆ ಸಹಾಯ ಗೈಯುತ್ತಿದ್ದದ್ದೇ. ಆದ್ದರಿಂದ ಅವನು ಇಲಿಜಬೆಥಳಿಗೆ, ನಿನ್ನ ಮೇಲೆ ಯುದ್ಧ ಮಾಡುವೆನೆಂದು, ತಿಳಿಸಿ, ಮುಂಚೆ ಎಂದಾದರೂ ಸಮುದ್ರದಲ್ಲಿರದಿದ್ದಂಥ ಮಹಾ ನೌಸೇನೆಯನ್ನು ಕೂಡಿಸಿ, ತನ್ನ ಗರ್ವದಲ್ಲಿ ಅದಕ್ಕೆ, ಅಜಯ್ಯ ಬಲವೆಂದು, ಹೆಸರಿಕ್ಕಿದನು; ಅದನ್ನು ಸೌರಿಸುವದಕ್ಕೆ ಆಗಿನ 5ನೇ ಸಿಕ್ಸ್ತ ಪಪ್ಪನು ತನ್ನಿಂದಾಗುವಷ್ಟು ಒತ್ತಾಸೆ ಗೈದನು. ಆ ಬಲಕ್ಕೆ 150 ಹ

1) ಅಂದು ಹಣಕ್ಕೆ ಈಗಿನದಕ್ಕಿಂತ ಬಹು ಹೆಚ್ಚು ಬೆಲೆ ಇತ್ತು; 420ನೇ ಪಾನು ಸರಿ ನೋಡು.
2) 455ನೇ ಪಾನು.

ಡಗಗಳು ಶೇರಿದ್ದವು; ಇವುಗಳ ಮೇಲೆ 8000 ನಾವಿಕರೂ 31,000 ದಂಡುಗಾರರೂ ಇಂಗ್ಲಂದಿನವರನ್ನು ಪಪ್ಪಕರಾಗ ಮಾಡುವ ಉದ್ದಿಶ್ಯ ಅನೇಕಾನೇಕ ಮಠಿಕರೂ ಇರುವಲ್ಲಿ 2,680 ಫಿರಂಗಿಗಳು ಸಹ ಇದ್ದವು; ಅದಲ್ಲದೆ ಬೇರೆ 31,000 ದಂಡುಗಾರರಿಗೆ ನೀದೆರ್ಲಂದಿನಿಂದ ಬರಲಪ್ಪಣೆಯಾಯಿತು. ಆ ಪಪ್ಪನು ತನಗೆ ಮುಂದಾಗಿ, ನಿನ್ನದೆಂದು, ಕೊಟ್ಟಿದ್ದ ಇಂಗ್ಲಂದನ್ನು[1] ಅಂಥಾ ಬಲದಿಂದ ಸಾಧಿಸಿ ಕೊಳ್ಳುವದು ಸುಲಭವೆಂದು, ಫಿಲಿಪ್ಪನು ಕ್ರಿ. ಶ. 1588ನೇ ವರುಷ ಅದನ್ನು ಲಿಸಬೊನು ಪಟ್ಣದ[2] ರೇವಿನಿಂದ ಹೊರಡಿಸಿದನು. ಇಂಗ್ಲಂದಿನವರಿಗೆ ವಾಚಾತೀತ ಆಪತ್ತು ಒದಗಿದ ಹಾಗೆ ತೋರಿತು. ಆದರೆ, ಅಗೋ, ದೇವರ ಸಂಕಲ್ಪದಿಂದ ಬಿರುಘಾಳಿ ಬೀಸಲೆಸಗಿ, ಪೇರ್ದೆರೆಗಳೆದ್ದು, ಆ ನೌಬಲವನ್ನು ಹೊಡೆದದ್ದಲ್ಲದೆ ದೇವಪ್ರಾರ್ಥನೆಯೊಡನೆ ಹೊರಟದ್ದ ಇಂಗ್ಲಿಷರ ಅಭಿಯೋಗಗಳು ಸಹ ಸಫಲವಾಗುತ್ತಿರುವಲ್ಲಿ ಆ, ಅಜಯ್ಯವೆಂದು, ಕರೆದ ಬಲವು ಜಿತವೇ ಆಗಿ, ದಿಕ್ಕು ದಿಕ್ಕಿಗೆ ಚದರಿ, ಹರಿಹಂಚಾಯಿತು. ಅಲ್ಪ ಸ್ವಲ್ಪ ಹಡಗುಗಳು ಮಾತ್ರ ಹಾಗೆಯೇ ಸ್ಪಾನಿಯಕ್ಕೆ ಮರಳಿದವು. ದೇವರೂದೋಣದರಲ್ಲಿ ಅಂಥಾ ಬಲವು ಹೊಟ್ಟನಂತೆ ಹಾರಿ ಹೋಯಿತು.

ಈ ಅಪಜಯದಿಂದ ಸ್ಪಾನಿಯದ ಬಲಾಭಿವೃದ್ಧಿಗೆ ಎಂದಿಗೂ ತಕ್ಕ ಮಿತಿ ಬಂತು; ಇಂಗ್ಲಂದಿನಲ್ಲಿ ಬಹಳ ಉಲ್ಲಾಸವಾದದಲ್ಲದೆ ಭೂಮಿಯ ಸಕಲ ದೇಶಗಳಲ್ಲಿಯ ಸೌವಾರ್ತಿಕ ಕ್ರೈಸ್ತರಿಗೆ ಸ್ವಸ್ಥದಿಂದ ಉಸುರಾಡಿಸಲಿಕ್ಕೆ ತಿರಿಗಿ ಅನುವಾಯಿತು; ಅದು ಹೊರತಾಗಿ ಸ್ಪಾನಿಯದವರ ಅತ್ಯಧಿಕಾರದಿಂದ ಉಪದ್ರವ ಪಡುತ್ತಿದ್ದ ಪಪ್ಪಕ ಧರ್ಮದ ರಾಜರಾದರೂ ಸ್ಪಾನಿಯದ ಪತನಕ್ಕಾಗಿ ಸಂತೋಷಿಸಿದರು. ಆ ಕಾಲದಾರಭ್ಯ ಇಂಗ್ಲಂದಿನವರೂ ನೀದೆರ್ಲಂದಿನ ಬಡಗು ಭಾಗವಾದ ಹೊಲ್ಲಂದಿನವರೂ ಸಮುದ್ರಾಧಿಕಾರಸ್ಥರಾಗಿ, ಅಮೆರಿಕದಿಂದ ಸ್ಪಾನಿಯಕ್ಕೆ ಬೆಳ್ಳಿ ಭಂಗಾರಗಳನ್ನು ತರುತ್ತಿರುವ ಹಡಗಗಳನ್ನು ಹಿಡು ಕೊಳ್ಳುವವರಾದರು. ಈ ಮು[illegible]ರಾದ ನಷ್ಟದಿಂದ ಸಹ ಫಿಲಿಪ್ಪನಿಗೆ ಆ ಬಡತನವು[3] ಬಂದ ಹಾಗಾಯಿತು.

ತನ್ಮಧ್ಯ ನೀದೆರ್ಲಂದಿನಲ್ಲಿ ಆದದ್ದೇನಂದರೆ, ಗುಪ್ತವಿಚಾರಕರಿಂದ ಸೌವಾರ್ತಿಕ ಕ್ರೈಸ್ತತ್ವವನ್ನು ನಿರ್ಮೂಲನ ಮಾಡಿಸುವದು ಆಗುವದಿಲ್ಲವೆಂದು, 5ನೇ ಕರ್ಲನು ತಿಳಿದು, ಸಡಿಲು ಬಿಟ್ಟ ಹಿಂಸೆಯನ್ನು ಫಿಲಿಪ್ಪನು ಕ್ರೌರ್ಯದಿಂದ ತಿರಿಗಿ ನಡಿಸುವವನಾದನು. ಆದರೂ ಸೌವಾರ್ತಿಕರು ಧೈರ್ಯ ಗುಂದದೆ, ಪಪ್ಪಕರ ಮೂರ್ತಿಪೂಜೆಯ ಮೇಲಿನ ನ್ಯಾಯವಾದ ಹಗೆಯಿಂದ ಅವರದೊಂದು ಸಮೂಹವು ಕ್ರಿ. ಶ. 1566ನೇ ವರುಷಕ್ಕೆ ಹೇರಳ ಪ್ರತಿಮೆಗಳನ್ನು ದೇವಾಲಯ ಮಠಗಳೊಳಗಿಂದ

1) 336ನೇ ಪಾನು ಸರಿ ನೋಡು. 2) 466ನೇ ಪಾನು. 3) 470ನೇ ಪಾನು; 65ನೇ ಸಂಧಿ ಸರಿ ನೋಡು.

ಹೊರಗೆ ಹಾಕಲು, ಫಿಲಿಪ್ಪನು ಮರುವರುಷ, ಸಮಸ್ತ ಕಥರರನ್ನಳಿಸೆಂದು, ಅಲ್ಬನೆಂಬ ತನ್ನ ದಳವಾಯಿಗಳಲ್ಲೊಬ್ಬನನ್ನು ಅಲ್ಲಿಗೆ ಕಳುಹಿಸಿದನು. ಆಗ 1 ಲಕ್ಷಕ್ಕಿಂತ ಹೆಚ್ಚು ಮಂದಿ ನೀದೆರ್ಲಂದಿನ ಗೃಹಸ್ಥರು ಗುಳೆ ತೆಗೆದು ಹೋದರು. ಆದರೆ ಅಲ್ಬನು ತಪ್ಪದೆ ತನ್ನ ಧನಿಯ ಅಪ್ಪಣೆ ಸಾಗಿಸಲೆಸಗಿದನು. ಇವನೂ ರಾಜಕ ಮತಕ ಪ್ರಭುಗಳಾದ ಫ್ರಂಚು ದೇಶದ ಗೀಸಿನ ಕುಟುಂಬದವರೂ ಸ್ಕೋತ್ಲಂದಿನ ರಾಣಿಯಾದ ಸ್ಟ್ಯುವರ್ತಿನ ಮೇರಿ ಎಂಬವಳೂ, ಸೌವಾರ್ತಿಕ ಕ್ರೈಸ್ತರನ್ನು ತಮ್ಮಿಂದಾಗುವ ಮಟ್ಟಿಗೆ ಕೆಡಿಸ ಬೇಕೆಂದು, ತಮ್ಮೊಳಗೆ ಲೀಗು ಎಂಬ ಒಡಂಬಡಿಕೆಯನ್ನು ಕಟ್ಟಿ ಕೊಂಡಿದ್ದರು. ಅಲ್ಬನು ತನ್ನ ಅಪಾರ ಹಿಂಸೆಯಿಂದ ಪ್ರಜೆಯ ಕೋಪವನ್ನೆಬ್ಬಿಸುತ್ತಾ 6 ವರುಷ ನೀದೆರ್ಲಂದಿನಲ್ಲಿದ್ದು, ಹಿಂದಿರುಗಿದಂದು—18,000 ಮಂದಿ ಚಿಕ್ಕ ದೊಡ್ಡ ಸ್ಥಿತಿಯವರಾದ ಸೌವಾರ್ತಿಕರಿಗೆ ಆಜ್ಞೆ ಮಾಡಿ, ಕೊಲ್ಲಿಸಿದೆನೆಂದು, ಹೊಗಳಿ ಕೊಂಡನು. ಅದು ವಿನಹ ಅವನ ಆಡಳಿತೆಯ ಕಾಲದಲ್ಲಿ ತಿರಿಗಿ ಅನೇಕ ಸತ್‌ಕ್ರೈಸ್ತರು ನೀದೆರ್ಲಂದು ಬಿಟ್ಟೋಡಿದ್ದರು. ಬಳಿಕ ಸಹ ಹುಲಿಗಳಂತೆ ಪ್ರಾಣಹಾನಿ ಮಾಡುತ್ತಾ, ಧನವನ್ನಪಹರಿಸುತ್ತಾ ಬರುವ ಪಪ್ಪಕರ ಬಾಧೆಯನ್ನು ಸೌವಾರ್ತಿಕರು ಇನ್ನೂ ತಾಳಲಾರದಿರಲು, ಅವರು ಫಿಲಿಪ್ಪ ರಾಯನಿಗೆ ಹೇಳಿಸಿದ್ದೇನಂದರೆ—ಒಬ್ಬ ತಂದೆಯಂತೆ ನಿಮ್ಮನ್ನು ನಡಿಸುವೆನೆಂದು, ಸಿಂಹಾಸನಾರೂಢನಾದ ಸಮಯದಲ್ಲಿ ನೀನು ನಮಗೆ ಪ್ರಮಾಣಿಸಿದ್ದರೂ ಬಲಿಕುರಿಗಳೆಂಬಂತೆ ನಮ್ಮನ್ನು ನಡಿಸುತ್ತಿದ್ದಿ. ನೀನು ನಿನ್ನ ಪ್ರಮಾಣ ಮುರಿದು ಬಿಟ್ಟ ಕಾರಣ ಅದನ್ನು ತಿರಿಗಿ ಕೈಗೊಂಡು ನಡಿಸುವ ವರೆಗೆ ನಾವು ನಿನ್ನ ಪ್ರಜೆಯಾಗಿರ ಕೂಡದು!—ಫಿಲಿಪ್ಪನು ಅವರಿಗೆ ಕಿವಿಗೊಡದಾಗ ನೀದೆರ್ಲಂದಿನ ಬಡಗ ಭಾಗವಾದ ಆ ಹೊಲ್ಲಂದೆಂಬ[1] ಏಳು ಪ್ರದೇಶಗಳವರು ಕ್ರಿ. ಶ. 1579ನೇ ವರುಷ ಅವನಧಿಕಾರದೊಳಗಿಂದ ಜಾರಿ ಕೊಂಡು, 2 ವರುಷದಿತ್ತ ತಮ್ಮಲ್ಲಿ ಪ್ರಜಾರಾಜತ್ವ ಸ್ಥಾಪಿಸಿ, ಓರಾಂಜಿನ ವಿಲ್ಹೆಲ್ಮನೆಂಬವನನ್ನು, ಅದರ ಅಗ್ರಸ್ಥನೆಂತ, ನೇಮಿಸಿಟ್ಟರು. ತಮಗೆ ಆ ಫಿಲಿಪ್ಪ ಮಹಾ ಚಕ್ರವರ್ತಿಯ ಎದುರಿನಲ್ಲಿ ಇಂಗ್ಲಂದಿನ ಇಲಿಜಬೆಥಳಲ್ಲದೆ[2] ಮನುಷ್ಯರಲ್ಲಿ ಇನ್ನು ಯಾರೂ ಸಹಾಯಕರು ಶಿಕ್ಕದಿದ್ದರೂ ದೇವರ ಸಹಾಯವನ್ನು ಕೂಡ ಪಡಕೊಂಡು, ಫಿಲಿಪ್ಪನ ಮತ್ತು ಅವನುತ್ತರಾಧಿಕಾರಿಗಳ ವಿರೋಧವನ್ನೆಲ್ಲಾ ಗೆದ್ದು, ಕ್ರಿ. ಶ. 1648ನೇ ವರುಷ ಪೂರ್ಣ ಸ್ವಾತಂತ್ರ್ಯವನ್ನು ಘಳಿಸಿ ಕೊಂಡರು. ಆ ಹೊಲ್ಲಂದು ರಾಜ್ಯವು ಈಗ ಸ್ಪಾನಿಯದ ಸಮಸ್ತ ರಾಜ್ಯಕ್ಕಿಂತ ಐಶ್ವರ್ಯವುಳ್ಳದ್ದಾಗಿದೆ. ನೀದೆರ್ಲಂದಿನ ತೆಂಕಣ ಭಾಗವಾದ ಬೆಲ್ಗಿಯೆನೆಂಬ ದೇಶದಲ್ಲಿ ಸ್ಪಾನಿಯದವರ ಬಲಾತ್ಕಾರ ಬುದ್ಧಿವಂತಿಕೆಗಳೆರಡರಿಂದ ಪಪ್ಪಕತ್ವವು ಹೆಚ್ಚು ಕಡಿಮೆಯಾಗಿ ಉಳಿಯಿತು.

1) 411, 452, 456ನೇ ಪಾನು. 2) 470ನೇ ಪಾನು.

ಸ್ಪಾನಿಯದಲ್ಲಿ ಸುವಾರ್ತಾಪುನಃಸ್ಥಾಪನೆಯ ಕಾರ್ಯವನ್ನು ಅಡಗಿಸುವದು ಫಿಲಿಪ್ಪನಿಗೆ ಹೆಚ್ಚು ಕೈಗೂಡಿತು. 5ನೇ ಕರ್ಲನೆಂಬ ಅವನ ತಂದೆಯ ದುಃಖಾಕ್ರಾಂತವಾದ ಹೃದಯವನ್ನು ಸುವಾರ್ತೆಯಿಂದ ಆದರಿಸಿದ್ದ ಕೆಲವು ಮಂದಿ ಮತೋದ್ಯೋಗಿಗಳು ಸಹ ಗುಪ್ತವಿಚಾರಕರ ಕೈಗೆ ಬಿದ್ದಳಿದರೆಂದು, ಹಿಂದೆ[1] ಹೇಳಿ ಅದೆ; ಇವರಲ್ಲಿ ತೋಲೇದೊ ಪಟ್ಣದ ಬರ್ಥೊಲೊಮೇಯ ದಾ ಕರ್‍ರಂಜನೆಂಬ ಪ್ರಧಾನಾಧ್ಯಕ್ಷನೊಬ್ಬನು; ಅವನು 17 ವರುಷ ಶೆರೆಯಲ್ಲಿದ್ದು, ಪಡುತ್ತಿದ್ದ ಸಂಕಟದಿಂದ ಸತ್ತು ಹೋದನು. ಅಷ್ಟರಲ್ಲಿ 4ನೇ ಪೌಲ ಪಪ್ಪನು[2] ಕಥರರೆಂಬವರ ವಿಸ್ತರಣಕ್ಕಂಜಿ, ಕ್ರಿ. ಶ. 1558ನೇ ವರುಷ ಸ್ಪಾನಿಯದ ಪ್ರಧಾನ ಗುಪ್ತವಿಚಾರಕನಿಗೆ, ಪ್ರಧಾನಾಧ್ಯಕ್ಷರನ್ನೂ ಅಧ್ಯಕ್ಷರನ್ನೂ ರಾಜರನ್ನೂ ಸಹ ಲಕ್ಷಿಸದೆ, ನಿಮ್ಮ ವಿಚಾರಣಸ್ಥಾನಕ್ಕೆ ಕರೆಸ ಬೇಕೆಂದು, ವಿಧಿಸಿದನು. ಫಿಲಿಪ್ಪನು ಅದು ಕೇಳಿ, ಸಮ್ಮತಿಸಿ—(ದೇವವಾಗ್ಭಾಷಾಂತರಾದಿ) ಕಥರತ್ವದ ಗ್ರಂಥಗಳನ್ನು ಮಾರುವವರನ್ನಾಗಲಿ ತಕ್ಕೊಳ್ಳುವವರನ್ನಾಗಲಿ ಓದುವವರನ್ನಾಗಲಿ ಇಂಥವರೆಲ್ಲರನ್ನೂ[3] ಸಜೀವವಾಗಿ ಹುಗಿಯ ಬೇಕು, ದೂರು ಹೇಳುವವರಿಗೆ ದೊಡ್ಡ ಇನಾಮೆಂದು, ಆಜ್ಞೆ ಕೊಟ್ಟನು. ಇದಲ್ಲದೆ ಮದ್ರಿದು ಮೊದಲಾದ ಮುಖ್ಯ 12 ಪಟ್ಣಗಳಲ್ಲಿ ಗುಪ್ತವಿಚಾರಣಸ್ಥಾನಗಳನ್ನು ಸ್ಥಾಪಿಸಲಾಯಿತು; ವರುಷ ವರುಷಕ್ಕೆ ಇವುಗಳಿಂದ ಹೊರಡುವ ಆಜ್ಞಾನಿರ್ಣಯಗಳ ಪ್ರಕಾರ ಕಥರರ ಔತೋ ದಾ ಫೇಗಳೆಂಬ ಆ ಸಜೀವದಹನಗಳನ್ನು[4] ಅಲ್ಲಲ್ಲಿ ನಡಿಸಲಾಗುವದು; ಅಂಥಾದ್ದೊಂದು ನೋಡಲಿಕ್ಕೆ ಬರುವವನೊಬ್ಬನಿಗೆ ಪಪ್ಪನಿಂದ ನಾಲ್ವತ್ತು ದಿನಗಳ ಪಾಪಕ್ಷಮೆಯು ಪ್ರಾಪಿಸುವದು. ಹೀಗಿರಲಾಗಿ ಸಕಲ ಸ್ಥಿತಿಯ ಮತ್ತು ಸಕಲ ವಯಸ್ಸಿನ ಮತ್ತು ಉಭಯ ಲಿಂಗದ ಸಾವಿರಾರು ಕ್ರೈಸ್ತರು ರಕ್ತಸಾಕ್ಷಿಗಳಾದರು; ಹ್ಯಾಗಂದರೆ ಆ ಪ್ರಕಾರದ ಹಿಂಸೆಯು ಕ್ರಿ. ಶ. 1570ನೇದರ ವರೆಗೆ 15 ವರುಷವೇ ನಡಿಯುತ್ತಿತ್ತು[5]. ಕಡೆಯಲ್ಲಿ ಸ್ಪಾನಿ

1) 469ನೇ ಪಾನು. 2) 448ನೇ ಪಾನು. 3) 467ನೇ ಪಾನು. 4) 381ನೇ ಪಾನು.

5) ಸ್ಪಾನಿಯದಲ್ಲಿ ಗುಪ್ತವಿಚಾರದವರ ಪ್ರಧಾನ ಲೇಖಕನಾಗಿದ್ದವನೊಬ್ಬನು (Don Juan Antonio Llorento in his Hist. de l' Inquis. d' Espagne) ಗುಪ್ತವಿಚಾರಕರಿಂದ ಆ ದೇಶವೊಂದರಲ್ಲೇ (300 ವರುಷದೊಳಗೆ) ಹಿಂಸೆ ಪಟ್ಟವರ ಲೆಖ್ಖ ಹೇಳಿರುವದೆಂತೆಂದರೆ—

a) ಮರಣಾಜ್ಞೆ ಹೊಂದಿ ಸಜೀವವಾಗಿ ಚಿತೆಗಳಲ್ಲಿ ಅಳಿಸಲಾದಂಥವರು. . 31,912 ಜನರು;

b) ಮರಣಾಜ್ಞೆ ಹೊಂದಿದ ಮೇಲೆ ಶೆರೆಮನೆಯೊಳಗೆ ಸತ್ತವರದೊಂದೊಂದು ರೂಪವನ್ನಾಗಲಿ ಅದರೊಳಗಿಂದ ತಪ್ಪಿಸಿ ಕೊಂಡು ಹೋದವರದೊಂದೊಂದು ರೂಪವನ್ನಾಗಲಿ ಸುಡಲಾದಂಥವರು. . . . 17,659 ಜನರು;

c) ಹಸ್ತಪ್ರೇರಕನಾವೆಗಳ ದಂಡವಾಗಲಿ ಶೆರೆಮನೆಯ ದಂಡವಾಗಲಿ ಆದಂಥವರು. . . . . . . . . . . . . . . . 291,450 ಜನರು.

ಒಟ್ಟಿಗೆ 341,021 ಜನರು.

ಯದೊಳಗೆ ಸುವಾರ್ತೆಯ ಬೆಳಕು ನೊಂದಿದ ಹಾಗಾಯಿತು[1]. ಪಪ್ಪಕರು ಗೆದ್ದಿದ್ದರು; ಆದರೆ ದೇಶವು ಬರೇ ಹಾಳಾಗಿತ್ತು.

ದೇವರ ಪರಿಶುದ್ಧ ಸುವಾರ್ತೆಯ ಕಡು ವೈರಿಯಾದ[2] ಆ ಫಿಲಿಪ್ಪನು ತಾನು ಅನೇಕಾನೇಕ ನಿರಪರಾಧಿಗಳ ರಕ್ತ ಚೆಲ್ಲಿಸಿದ್ದಕ್ಕಾಗಿ ಅವನಿಗೆ ತಕ್ಕ ಪ್ರತಿಫಲವು ಇಹದಲ್ಲೇ ಬಂತು. ಹ್ಯಾಗಂದರೆ, ಅವನು ಸಾಯುವದಕ್ಕಿಂತ 2 ವರುಷ ಮುಂಚೆ ಪಾದವಾತವೂ ಕ್ಷಯಜ್ವರವೂ ಜಲೋದರವೂ ಅವನನ್ನು ಪೀಡಿಸುತ್ತಿರಲು, ಅವನು, ಪಾಪಕ್ಷಮೋಪಾಯವೆಂದು, 1 ಕೋಟಿಯೂ 12 ಲಕ್ಷ ರೂಪಾಯಿ ವೆಚ್ಚ ಮುಟ್ಟಿಸಿ ಕಟ್ಟಿಸಿದ್ದದ್ದೊಂದು ಮಠಕ್ಕೆ ತನ್ನನ್ನು ಹೊರಿಸಿ ಕೊಂಡು ಹೋಗಿ, ತನ್ನ ಆ ಮಹಾ ಪುಣ್ಯಕ್ಕೋಸ್ಕರ ಅಲ್ಲಿ ದೇವರು ತನಗೆಂತೂ ಸ್ವಸ್ಥತೆ ಕೊಡುವನೆಂದು, ಭಾವಿಸಿ, ಕೊಂಡರೂ ಅವನ ದುರವಸ್ಥೆಯು ದಿನಾಲು ಹೆಚ್ಚುತ್ತಿತ್ತಷ್ಟೇ; ಅವನ ಮೊಣಗಾಲಿನಲ್ಲಿಯೂ ಎದೆಯಲ್ಲಿಯೂ ಹುಟ್ಟುತ್ತಿರುವ ಕುರಗಳನ್ನು ಕೊಯಿದು ಬಿಡಿಸುವಾಗ ಅಸಹ್ಯ ದುರ್ಗಂಧ ಹೊರಟು, ಎಣಿಕೆಯಿಲ್ಲದ ಹೇನುಗಳೂ ಕಾಣ ಬಂದವು; ಪೂರ್ವದಲ್ಲಿ ಹೇರೋದನೆಂಬ ಗರ್ವಿಷ್ಠ ರಾಜನನ್ನು ಕೊಂದ ವ್ಯಾಧಿಯು[3] ಅವನನ್ನು ಸಹ ಹಿಡಿದಂತಾಗಿತ್ತು. ಆ ಹೇನುಗಳು ಅವನನ್ನು ಹಗಲಿರುಳು ಕಾಡಿಸುತ್ತಿರುವಲ್ಲಿ ಅವನ್ನಳಿಸಲಾಗಲಿಲ್ಲ. 50 ದಿವಸವೇ ಅವನು ಈ ಕಠೋರ ಬಾಧೆಯೊಳಿರುತ್ತಿದ್ದನು. ಅಷ್ಟರಲ್ಲಿ ಅವನ ಮನಃಸಾಕ್ಷಿಯು ಕೂಡ ಅತಿ ಬಾಧೆ ಕೊಡುತ್ತಿದ್ದ ಹಾಗೆ ಕಾಣಿಸುತ್ತದೆ. ಕಡೆಯ ದಿನದಲ್ಲಿ ಆ ರಾಯನು ತನ್ನ ಜೀವನದ 74ನೇ ವರುಷದಲ್ಲಿ, ತನ್ನ ಆಳುವಿಕೆಯ 42ನೇದರಲ್ಲಿ, ಅಂದರೆ ಕ್ರಿ. ಶ. 1598ನೇ ಅಬ್ದದೊಳು ತೀರಿದನು; 50,000 ಮಂದಿ ಸೌವಾರ್ತಿಕ ಕ್ರೈಸ್ತರ ಜೀವವಳಿಸಿದ ಅವನು ತನ್ನ ದಿನಗಳೊಂದನ್ನಾದರೂ ಲೋಕೋಪಕಾರಕ್ಕೆ ಪ್ರಯೋಗಿಸಲಿಲ್ಲ.

ತನ್ಮಧ್ಯ ಪಪ್ಪರು[4] ತಾವು ನಡಿಸುತ್ತಿದ್ದ ಕ್ರೂರವಾದ ಜೀವಹಿಂಸೆಯಿಂದ ಈತಲಿಯ ದೇಶದಲ್ಲಿ ಪುನಃಸ್ಥಾಪನೆಯ ಕಾರ್ಯವು ಅಡಗುತ್ತಾ ಬಂದಿತ್ತು; ಸ್ಪಾನಿಯದಲ್ಲಿ ಆದಂತೆಯೇ ಅಲ್ಲಿ ಸಹ ಕ್ರಿ. ಶ. 1570ನೇ ವರುಷ ಆಗಿನ 5ನೇ ಪಿಯನೆಂಬ ಕ್ರೂರ ಪಪ್ಪನ[5] ಕಾರುಭಾರಿನೊಳಗೆ ಸುವಾರ್ತೆಯೆಂಬ ಬೆಳಕು ನೊಂದಿಸಿ

---

ಅದಲ್ಲದೆ ಆ ಚರಿತ್ರಕನು ನಿರ್ಣಯಿಸಿರುವದೇನಂದರೆ—ಅದು ಹೊರ್ತಾಗಿ (ಕ್ರೈಸ್ತ ಸ್ಪಾನಿಯರವುಗಳಾದ) 1 ಲಕ್ಷಕ್ಕಿಂತ ಹೆಚ್ಚು ಕುಟುಂಬಗಳು ಆ ರಕ್ತತೃಷೆಯುಳ್ಳ ಗುಪ್ತವಿಚಾರಕರ ಕೈಗೆ ತಪ್ಪಿಸಿ ಕೊಳ್ಳುವದಕ್ಕೋಸ್ಕರ ಗುಳೆಯು ತೆಗೆದು ಹೋದವು. ಹೀಗಾದ ಮೇಲೆ, ಗುಪ್ತವಿಚಾರಧರ್ಮವು ಸ್ಪಾನಿಯದ ನಾಶನಕ್ಕೆ ಬಹು ಪಟುವಾದ ಕರಣವಾಗಿತ್ತೆಂತ, ಸ್ಪಷ್ಟವಾಗಿ ಕಾಣಿಸುತ್ತದೆ.—

1) 456ನೇ ಪಾನು. 2) ಅವನ ಕಾಲದ ಪಪ್ಪರು ಸಹ ಇದಕ್ಕೆ ಕಾರಣ. 3) 23ನೇ, 37ನೇ, 128ನೇ ಪಾನುಗಳು. 4) 446ನೇ, 448ನೇ, 456ನೇ ಪಾನುಗಳು. 5) ಇವನು ಆ 4ನೇ ಪಿಯನ (448, 449ನೇ ಪಾನು) ಉತ್ತರೋದ್ಯೋಗಿ; ಅವನಲ್ಲಿ ಅದೇ ಕಾಡುತನವಿತ್ತು.

ದ ಹಾಗಾಗಿತ್ತು. ಪಿಯನ ಉತ್ತರೋದ್ಯೋಗಿಗಳಲ್ಲೊಬ್ಬನಾದ 8ನೇ ಉರ್ಬಾನನು ಕ್ರಿ. ಶ. 1627ನೇ ವರುಷ ತನಗೆ ಮುಂಚೆ 5ನೇ ಮರ್ತೀನನೆಂಬವನು[1] ಹೊರಡಿಸಿದ್ದ ಆ ಶಪಥಬುಲ್ಲವನ್ನು ಪುನಃಸ್ಥಾಪಿಸಿ, ಲುಥರಿಕ ಚ್ವಿಂಗ್ಲಿಕ ಕಲ್ವೀನಕ ಎಂಬ ಸೌವಾರ್ತಿಕ ತ್ರಿಶಾಖೆಗಳಿಗೆ ಸಹ ಅದರೊಳಗಿನ ಮಹಾ ಶಪಥವನ್ನು ತಾಗಿಸಿದನು.

## 61. ಮೇರಿಯು ಮತ್ತು ಇಲಿಜಬೆಥಳು ಎಂಬ ಇಂಗ್ಲಂದಿನ ರಾಣಿಯರು.

ಇಂಗ್ಲಂದಿನಲ್ಲಿ ಪುನಃಸ್ಥಾಪನೆಯನ್ನು ಶೇರಿಸಿದ ಆ ಎದ್ವರ್ದ ರಾಜನು ಕ್ರಿ. ಶ. 1553ನೇ ವರುಷ ಸತ್ತನೆಂದು, ಸುದ್ದಿ ಕೇಳಿದಿರಷ್ಟೇ[2]? ಅವನು, ತನ್ನ ಮಲಸಹೋದರಿಯಾದ ತ್ಯೂದರಿನ ಮೇರಿಗೆ[3] ಪಟ್ಟಾಭಿಷೇಕವಾಗ ಬಾರದೆಂದು, ನೇಮಿಸಿದ್ದನು; ಯಾಕಂದರೆ, ಅವಳು ಕಡು ಪಪ್ಪಕಳೆಂದು, ಅವನಿಗೆ ಗೊತ್ತಿತ್ತು. ಅವಳಿಗೆ ಬದಲಾಗಿ ಅವನು 8ನೇ ಹೆನ್ರಿ ರಾಜನ ಮೊಮ್ಮಕ್ಕಳಲ್ಲೊಬ್ಬಳಾದ ಜೇನ್ ಗ್ರೇ ಎಂಬವಳನ್ನು, ತನ್ನ ಉತ್ತರಾಧಿಕಾರಸ್ಥಳೆಂದು, ವಿಧಿಸಿದ್ದನು. ಮೇರಿಯು ಸರ್ವ ವಿಷಯದಲ್ಲಿ ಅಲ್ಪ ಅಭ್ಯಾಸ ಶಿಕ್ಷೆಗಳನ್ನು ಮಾತ್ರ ಹೊಂದಿದವಳಾಗಿರುವಲ್ಲಿ 16 ವರುಷದವಳಾದ ಆ ಜೇನ್ ಗ್ರೇಯು ಸರ್ವಥಾ ಪ್ರಚುರಳೂ ಗುಣಾಢ್ಯಳೂ ಆಗಿದ್ದಳು. ನಮ್ರಳಾದ ಈ ಜೇನ್ ಗ್ರೇಯು ಅನ್ಯರ ವಿನಂತಿಯ ದೆಸೆಯಿಂದಲೇ ಪಟ್ಟ ಧರಿಸಿ ಕೊಂಡಳು. ಅವಳ ಮಾವನು ನೊರ್ಥಂಬರ್ಲಂದಿನ[4] ವಾರಿಕ್ ಪ್ರಭುವು; ಅವನು ಅಂತಃಪಪ್ಪಕನು; ಸೊಮರ್ಸೆತನೆಂಬ ಪ್ರಭುವಿನ[5] ಸ್ಥಳದಲ್ಲಿ ಅವನು ತಂತ್ರೋಪಾಯಗಳಿಂದ ರಾಜ್ಯಪರಿಪಾಲಕನಾಗಿ, ತನ್ನ ದೌರ್ಜನ್ಯಕ್ಕೋಸ್ಕರವೂ ದುರಭಿಮಾನಕ್ಕೋಸ್ಕರವೂ ಸೌವಾರ್ತಿಕವಾದ ಸಕಲ ಪ್ರಜೆಗೆ ಅತ್ಯಸಹ್ಯನಾಗಿದ್ದನು. ಹೀಗಿರಲಿಕ್ಕೆ ಮೇರಿಯು ಜೇನ್ ಗ್ರೇಯಿಗೆದುರಾಗಿ ಕಲಹ ತೆಗೆಯಲು, ಇವಳ ಮಾವನು ದಂಡಿನೊಡನೆ ಸೊಸೆಯ ಸಹಾಯಕ್ಕೆ ಬರುವಾಗ ದಂಡಿನವರು ಅವನ ಹಗೆಯಿಂದ ಅವನನ್ನಗಲಿದ ಕಾರಣ ಮಾತ್ರವಲ್ಲದೆ ಮೇರಿಯು, ರಾಜ್ಯದಲ್ಲಿಯ ಸೌವಾರ್ತಿಕ ಕ್ರೈಸ್ತರಿಗೆ ಕೂಡ ಪ್ರೀತಿ ತೋರಿಸುವೆನೆಂದು, ಮಾತು ಕೊಟ್ಟ ಕಾರಣ ಸಹ ರಾಜ್ಯದವರೆಲ್ಲರೂ ವಾರಿಕ್ ಪ್ರಭುವಿನ ತಂಟೆಗೆ ತಪ್ಪಿಸಿ ಕೊಳ್ಳಲಿಕ್ಕಾಗಿ, ಮೇರಿಯು ರಾಣಿಯಾಗ ಬೇಕೆಂತ, ಕಾಣಿಸಿ ಕೊಂಡರು. ಅಂದು ಜೇನ್

1) 388, 405, 406ನೇ ಪಾನು. 2) 454 ಆದಿ ಪಾನುಗಳು. 3) 455, 470ನೇ ಪಾನು. 4) 309ನೇ ಪಾನು. 5) 454ನೇ ಪಾನು.

ಗ್ರೇಯು ಏನೇನೂ ಎದುರಿಸದೆ, ರಾಣಿತನ ಬಿಟ್ಟು ಕೊಟ್ಟರೂ ಮೇರಿಯು ತಾನು ಮುಖ್ಯ ಪ್ರಧಾನತ್ವದಲ್ಲಿರಿಸಿದ ಆ ಗಾರ್ಡಿನೆರನೆಂಬವನ[1] ಸಲಹೆ ಪಡೆದು, ಅವಳನ್ನು ಬಿಗಿ ಶೆರೆಯಲ್ಲಿಟ್ಟಳು. ಮರುವರುಷ ಮೇರಿಯು ದ್ವೇಷದಿಂದ ಪೂರಿತಳಾಗಿ—ಜೇನ್ ಗ್ರೇಯು ಕಲಹಗಾರ್ತಿಯು, ಅವಳನ್ನೂ ಅವಳ ಗಂಡನನ್ನೂ ಕೊಲ್ಲಬೇಕೆಂದು, ಆಜ್ಞಾಪಿಸಿದಳು. ಬಳಿಕ ಫೆಕ್ಕೆನ್ಹಮನೆಂಬ ಪಪ್ಪಕ ಸಭೋದ್ಯೋಗಿಗಳಲ್ಲೊಬ್ಬನು ಜೇನ್ ಗ್ರೇ ಇರುವ ಶೆರೆಮನೆಯಾದ ತವರಿಗೆ[2] ಹೋಗಿ, ಇವಳನ್ನು, ಪಪ್ಪಕ ಧರ್ಮಕ್ಕೆ ಬನ್ನಿ! ಎಂತ, ನಾನಾ ಪ್ರಕಾರದಿಂದ ಸಮ್ಮತಿ ಪಡಿಸಲೊದ್ದಾಡುವಲ್ಲಿ ಅವಳು ವಿದ್ವಾಂಸರಿಗೆ ತಕ್ಕಂಥ ಪ್ರಮಾಣಗಳಿಂದ ತನ್ನ ಸೌವಾರ್ತಿಕ ವಿಶ್ವಾಸವನ್ನು ಸ್ಥಾಪಿಸಿ ಕೊಟ್ಟಳು; ಆ ಪ್ರಸಂಗಿಕನು, ನಿನ್ನ ವಿಶ್ವಾಸವು ಸಭೆಯಲ್ಲಿ (ಅಂದರೆ ಪಪ್ಪಕ ಸಂಪ್ರದಾಯದಲ್ಲಿ) ಅಲ್ಲ ನಿಶ್ಚಯವಲ್ಲದ ಪ್ರಮಾಣದಲ್ಲೇ ನೆಲೆ ಗೊಂಡಿದೆ ಎಂದು, ಹೇಳಿದ್ದಕ್ಕೆ ಅವಳು ಪ್ರತ್ಯುತ್ತರವಾಗಿ ಹೇಳಿದ್ದೇನಂದರೆ--ನನ್ನ ವಿಶ್ವಾಸವು ದೇವರ ವಾಕ್ಯದಲ್ಲೇ ನೆಲೆ ಗೊಂಡಿದೆ; ಸ್ವಾರ್ಥದಲ್ಲಿ ಪ್ರಾಮಾಣ್ಯವಾದ ಈ ದೇವವಾಕ್ಯವನ್ನು, ಸತ್ಯವೋ? ಅಲ್ಲವೋ? ಎಂತ, ಸಭಾಬೋಧನೆಯ ಮೇಲೆ ಪರಿಶೋಧಿಸ ಬೇಕೆಂಬದಲ್ಲ, ಸಭಾಬೋಧನೆಯನ್ನು, ಸತ್ಯವೋ? ಅಲ್ಲವೋ? ಎಂತ, ದೇವವಾಕ್ಯದ ಮೇಲೆ ಪರಿಶೋಧಿಸ ಬೇಕೆಂಬದೇ ನ್ಯಾಯವು; (ಪಾತ್ರಾಪಹರಣದಿಂದ) ಪರಿಶುದ್ಧ ರಾತ್ರಿಭೋಜನದ ಅರ್ಧ ಪಾಲನ್ನು ತೆಗೆದು ಹಾಕಿದಂಥ ಸಭೆಯು[3] ಕ್ರಿಸ್ತನ ವಧುವಲ್ಲ, ಪಿಶಾಚನವಳೇ!—ಅವಳು ಹನನಸ್ಥಳದಲ್ಲಿಯೂ ಏನೂ ಎದೆಗುಂದದೆ—ಕರ್ತನೇ, ನಿನ್ನ ಕೈಗೆ ನನ್ನಾತ್ಮವನ್ನೊಪ್ಪಿಸಿ ಕೊಡುತ್ತೇನೆಂದು, ನುಡಿದು, ಬಳಿಕ ಶಿರಚ್ಛೇದಕನ ಕೈಯಿಂದಳಿದಳು; ಅದೇ ದಿನ ಸ್ವಲ್ಪ ಮುಂದಾಗಿ ಅವಳ ಗಂಡನ ತಲೆ ಕಡೆದಿದ್ದರು. ಅವಳು ಅಂದು ಕ್ರಿ. ಶ. 1554ನೇ ವರುಷಕ್ಕೆ 17ವಯಸ್ಸಿನ ಹುಡುಗಿಯೇ. ಮೇರಿಯು ತನ್ನ ಮಲಸಹೋದರಿಯಾದ ಇಲಿಜಬೆಥಳನ್ನು[4] ಸಹ ಶೆರೆಯಲ್ಲಿಡಿಸಿದಳು; ಯಾಕಂದರೆ, ಇವಳು ಸಹ ಸೌವಾರ್ತಿಕಳು. ಹಿಂದಗಡೆ ರಾಣಿಯಾದವಳು ಇವಳೇ; ಆಢ್ಯ ಸ್ಥಿತಿಯವರು ಅವಳ ಕಡೆ ಕಾರ್ಯಕರ್ತರಾದ್ದರಿಂದಲೂ ಅವಳು ಬಹಿರಂಗಕ್ಕೆ ಪಪ್ಪಕ ಧರ್ಮವನ್ನವಲಂಬಿಸಿದ್ದರಿಂದಲೂ ಮಾತ್ರ ಖಡ್ಗಮರಣಕ್ಕೆ ತಪ್ಪಿಸಿ ಕೊಂಡಳು.

ಜೇನ್ ಗ್ರೇಯ ತಲೆ ಕಡಿಸಿದ್ದದಕ್ಕಿಂತ ಮುಂಚೆ ಸಿಂಹಾಸನಾರೂಢಳಾದಾಗಲೇ ಮೇರಿಯು ತನ್ನ ವೈಮನಸ್ಯವನ್ನು ತೋರಿಸಿದ್ದಳು; ಹ್ಯಾಗಂದರೆ, ಅಂದು ಒಂದು ದಿನ ಬರ್ನನೆಂಬವನೊಬ್ಬ ಪ್ರಸಂಗಿಕನು ಪೌಲ ದೇವಾಲಯದೊಳಗೆ[5] ಪುನಃಸ್ಥಾ

1) 454, 455ನೇ ಪಾನುಗಳು. 2) 390, 391ನೇ ಪಾನು. 3) 354ನೇ ಪಾನು.
4) 352, 470, 472ನೇ ಪಾನು. 5) 385, 390ನೇ ಪಾನು.

ಪನಾಕಾರ್ಯಕ್ಕೆ ಬೈಯುವೆಡೆ ಕೇಳುವವರೊಳೆಯದೆ, ಕೂಗು ಹಾಕಲು, ಅವಳು ಕೂಗಿದವರೆಲ್ಲರ ಕಿವಿಗಳನ್ನು ಕೊಯ್ಯಿಸಿ, ಮರು ಆದಿತ್ಯವಾರದಲ್ಲಿ ದೇವಾಲಯಕ್ಕೆ ದಂಡುಗಾರರನ್ನು ತಂದು, ಇವರು ಕಾಯುವಲ್ಲಿ ಮತ್ತೊಬ್ಬ ಪ್ರಸಂಗಿಕನಿಂದ ಪುನಃಸ್ಥಾಪನಾಕಾರ್ಯಕ್ಕೆ ಮತ್ತಷ್ಟು ಕುನಿಂದೆ ಮಾಡಿಸಿ, ಯಾರೂ ಸೌವಾರ್ತಿಕ ಬೋಧಕರು ಇನ್ನು ಮುಂದೆ ಪ್ರಸಂಗಿಸ ಬಾರದೆಂದು, ಆಜ್ಞೆ ಹೊರಡಿಸಿ, ಅವರ ಉದ್ಯೋಗ ತೆಗೆದು, ಅವರ ವಿವಾಹಸ್ತ್ರೀಯರನ್ನು ಬಲಾತ್ಕಾರದಿಂದ ಸೂರೆ ಗೊಂಡಳು. ಇದಾದಾಗಲೇ ಪಪ್ಪಕ ಮತೋದ್ಯೋಗಿಗಳು ತಿರಿಗಿ ಸೂಳೆಯರ ಹಿಂಡುಗಳ ಸಂಗಡ ಬೀದಿಗಳಲ್ಲೂ ಮೆರೆಯುವವರಾದರು.

ಮೇರಿಯು ಜೇನ್ ಗ್ರೇಯನ್ನು ಕೊಂದ ವರುಷವೇ (ಕ್ರಿ. ಶ. 1554ನೇ ವರುಷದ ಜುಲಾಯಿ ತಿಂಗಳಿಗೆ) ಸ್ಪಾನಿಯದ ಆ ಫಿಲಿಪ್ಪ ರಾಯನಿಗೆ ಮದುವೆಯಾದಳು[1]. ಅವನ ಮೂಲಕ ಸೌವಾರ್ತಿಕರ ಮೇಲಿನ ದ್ವೇಷವು ಅವಳಲ್ಲಿ ಮಹಾಂತವಾಯಿತು; ಅವಳು ಕಥರರೆಂಬವರನ್ನು ಬೇರೊಂದಿಗೆ ಕೀಳುವೆನೆಂಬ ಪಂಥ ಮಾಡಿಕೊಂಡು, 4ನೇ ಪೌಲ ಪಪ್ಪನಿಗೆ[2]—ನಿಮ್ಮ ವಿಧೇಯ ಸೇವಕಳಾಗಿದ್ದೇನೆ, ಸಕಲ ಇಂಗ್ಲಂದನ್ನು ತಿರಿಗಿ ನಿಮ್ಮ ಸಭೆಯ ಉಡಿಯೊಳಗೆ ಶೇರಿಸುವೆನೆಂದು, ತಿಳಿಸಲಂದು ಇವನು ತನ್ನ ಮತಿಯುಳ್ಳ ರೆಗಿನಲ್ದ ಪೋಲನೆಂಬ ಒಬ್ಬ ದೂತನನ್ನು ಕಳುಹಿಸಿ, ಅವನಿಗೆ ಕಂತರ್ಬೆರಿಯ ಪ್ರಧಾನಾಧ್ಯಕ್ಷತೆ ದೊರಕಿಸಿದನು; ಬೊನ್ನೆರನೆಂಬವನಿಗೆ[3] ಲೊಂದನಿನ ಅಧ್ಯಕ್ಷತೆ ತಿರಿಗಿ ಪ್ರಾಪಿಸಿತು. ಹೀಗಿರಲಾಗಿ, ಸೌವಾರ್ತಿಕರು ಮೇರಿಯ ದುರಭಿಪ್ರಾಯಕ್ಕೊಳ ಜೀಳದಿರಲಿಕ್ಕೆ, ಅವಳು ಆ ಪೋಲನ ಮತ್ತು ಬೊನ್ನೆರನ ಮತ್ತು ಗಾರ್ದಿನೆರನ[4] ಸಹಾಯದಿಂದ ಗುಪ್ತವಿಚಾರಕರದ್ದೊಂದು ಸ್ಥಾನವನ್ನಿಟ್ಟು, ಕ್ರಿ. ಶ. 1555ನೇದು ಮೊದಲ್ಗೊಂಡ 4 ವರುಷದೊಳಗೆ ಪ್ರಜೋತ್ತಮರಲ್ಲಿ 316 ಮಂದಿಗಿಂತ ಹೆಚ್ಚಿನವರನ್ನು ಕೊಲ್ಲಿಸಿದಳು; ಇವರಲ್ಲಿ 5 ಮಂದಿ ಅಧ್ಯಕ್ಷರೂ 21 ಮಂದಿ ಪ್ರಸಂಗಿಕರೆಂಬ ಬೋಧಕರೂ ಅಲ್ಲದೆ ಅನೇಕ ಸ್ತ್ರೀಯರು, ಎಳೇ ಶಿಶುಗಳು ಸಹ, ಕೂಡಿದ್ದರು; ಅಷ್ಟು ಜನರಲ್ಲಿ 288 ಸಂಖ್ಯೆಯವರನ್ನು ಚಿತೆಗಳಲ್ಲಿ ಸಜೀವವಾಗಿ ದಹಿಸಲಾಯಿತು. ಮೇರಿಯು ಕೊಲೆ ಮಾಡಿಸದೆ ಕಿವಿ ಮೂಗು ಮುಂತಾದವುಗಳನ್ನು ಛೇದಿಸುವದರಿಂದ ಊನತೆ ಬರಿಸಿದಂಥವರ ಲೆಖ್ಖವು ಇಂದಿನ ವರೆಗೂ ಯಾರೂ ಮಾಡಲಿಕ್ಕೆ ಅಸಾಧ್ಯವಾಯಿತು. ಮರಣಾದಿ ದುರವಸ್ಥೆಗೆ ತಪ್ಪಿಸಿ ಕೊಳ್ಳುವ ಹಾಗೆ ಅನೇಕರು ಓಡಿ ಹೋಗ ಬೇಕಾಯಿತು. ಮೇರಿಯು

1) 470ನೇ ಪಾನು. 2) 448ನೇ, 473ನೇ ಪಾನುಗಳು. 3) 454, 455ನೇ ಪಾನುಗಳು. 4) 476ನೇ ಪಾನು; ಗಾರ್ದಿನೆರನು ಕ್ರಿ. ಶ. 1555ನೇ ವರುಷದ ಕಡೆಯಲ್ಲಿ ಮಹಾ ಮನಃಸಂಕಟದೊಡನೆ ಸತ್ತನು.

ಆ 4 ವರುಷಗಳಂತದಲ್ಲಿ ಸಾಯದಿದ್ದರೆ, ಅವಳು ತನ್ನ ಹಿಂಸೆಯನ್ನು ಎಷ್ಟರ ಮಟ್ಟಿಗೆ ಇನ್ನು ನಡಿಸುತ್ತಿದ್ದಳೆಂದು, ಯಾರೂ ಹೇಳ ಕೂಡದು. ಹ್ಯಾಗೂ ಅವಳಿಗೆ ಲೋಕಚರಿತ್ರದಲ್ಲಿ, ರಕ್ತದ ಮೇರಿ ಎಂತ, ಹೆಸರು ಬಂದು, ಇದ್ದೇ ಇರುವದು.

8ನೇ ಹೆನ್ರಿಯ ಕಾಲದಲ್ಲಿಯಾದರೂ ವಸ್ತ್ರರಿನ ಅಧ್ಯಕ್ಷನಾದ ಲಾತಿಮರನೆಂಬವನು ಮತ್ತು 6ನೇ ಎದ್ವರ್ದನ ಕಾಲದಲ್ಲಿ ಲೊಂದನಿನ ಅಧ್ಯಕ್ಷನಾದ ರಿದ್ಲಿಯೆಂಬವನು, ಇವರಿಬ್ಬರು ಸುವಾರ್ತಾಜ್ಞಾನದ ವಿಸ್ತರಣಕ್ಕಾಗಿ ವೃತ್ತಿ ನಡಿಸಿದ್ದರು. ಕ್ರಿ. ಶ. 1553ನೇ ವರುಷ ಮೇರಿಯು ಇವರನ್ನೂ ಆ ಪ್ರಖ್ಯಾತ ಕ್ರಾನ್ಮೆರನನ್ನೂ[1] ಒಂದೇ ಶೆರೆಗೋಣೆಯೊಳಗೆ ಹಾಕಿಸಿದಳು. 2 ವರುಷದಿತ್ತ ಲಾತಿಮರನಿಗೂ ರಿದ್ಲಿಗೂ, ಅವರು ಸೌವಾರ್ತಿಕರೆಂತ, ಹೇಳುವ ಕಾರಣದಿಂದ ಮರಣಾಜ್ಞೆಯಾಯಿತು. ಅದೇ ವರುಷದ ಒಕ್ತೋಬರ್ ತಿಂಗಳಲ್ಲಿ ಅವರಿಬ್ಬರನ್ನು ಕೂಡ ಒಂದೇ ಚಿತಿಯಲ್ಲಿರಿಸಿ, ಕಟ್ಟಿರುವಂದು ವೃದ್ಧಾಪ್ಯವುಳ್ಳ ಲಾತಿಮರನು ತನ್ನ ಸಹಶ್ರಮಾಳುವಾದ ರಿದ್ಲಿಗೆ— ತಮ್ಮನೇ, ಧೈರ್ಯನಾಗಿದ್ದು, ಪೌರುಷ ತೋರಿಸು! ಯಾರೂ ಎಂದೆಂದಿಗೂ ನೊಂದಿಸಲಾರದಂಥಾದೊಂದು ಬೆಳಕನ್ನು ಈ ಹೊತ್ತು ದೇವರ ಕೃಪೆಯಿಂದ ಇಂಗ್ಲಂದಿನಲ್ಲಿ ಹೊತ್ತಿಸುವೆವಲ್ಲವೇ? ಎಂದು, ಹೇಳಿ, ಹೃದಭಯಕ್ಕಾಗಿ ಉಪಚರಿಸಿದನು. ತರುವಾಯ ಅವರಿಬ್ಬರು ಅಗ್ನಿಗ್ರಸ್ತರಾಗುವಲ್ಲಿ ದೇವಪ್ರಾರ್ಥನೆಯಿಂದ ಮಿಗೆ ಉಪಶಮನ ಹೊಂದಿ, ಪರಂಧಾಮವನ್ನೈದಿದರು.—ತನ್ಮಧ್ಯ ಇನ್ನೂ ಬಂಧನದಲ್ಲಿದ್ದ ಕ್ರಾನ್ಮೆರನು ಶರೀರಾತ್ಮಗಳಲ್ಲಿ ನಿತ್ರಾಣಿಯಾಗುತ್ತಾ ಬಂದನು. ಅವನು ದೇವದೂಷಕನೂ ಪಪ್ಪಕತ್ವಕ್ಕೆ ವಿರೋಧವಾಗಿ ಗ್ರಂಥ ಬರೆದವನೂ ಪಪ್ಪನಿಗಿತ್ತ ಪ್ರಮಾಣ ಮುರಿದದರಿಂದ ಸುಳ್ಳುಪ್ರಮಾಣ ಗೈದವನೂ ವಿವಾಹಸ್ಥಿತಿಯಲ್ಲಿರುವದರಿಂದ ವ್ಯಭಿಚಾರಿಯೂ ಎಂಬ ಮುಂತಾದ ವ್ಯರ್ಥ ದೋಷಾರೋಪಣವನ್ನು ಅವನ ಮೇಲೆ ಮಾಡಿದ್ದರು. ಅವನು ಬಹು ಚತುರತೆಯಿಂದಲೂ ಅತಿಶಯ ಗಾಂಭೀರ್ಯದಿಂದಲೂ, ತಾನು ದೋಷರಹಿತ ಸತ್ಯವಂತನೆಂದು, ನಿದರ್ಶಿಸುತ್ತಿದ್ದರೂ ಅವನಿಗೆ ಬಿಡುಗಡೆ ಕೊಡಲಿಲ್ಲ. ಅವನು 3ವರುಷ ಶೆರೆಯಲ್ಲಿದ್ದನಂತರ ಪಪ್ಪಕ ಬೋಧಕರು ಅವನಿಗೆ ನಾನಾ ಪ್ರಕಾರ ಫುಸಲಾಯಿಸಿ, ಮಾತಿನಾಶೆ ತೋರಿಸಿದ್ದರಿಂದ ಅವನನ್ನು ತಮ್ಮೊಳಗೆ ಪಡಿಸಿ ಕೊಳ್ಳುವದಕ್ಕೆ ಶಕ್ತರಾದರು; ಹೀಗಿರಲಾಗಿ, ಅವನು ಸೌವಾರ್ತಿಕ ಬೋಧನೆ ತಳ್ಳುವಂಥಾದೊಂದು ಕೃತಿಗೆ ಒಪ್ಪು ಹಾಕಿದನು. ಆದಾಗ್ಯೂ ರಕ್ತದ ಮೇರಿ ರಾಣಿಯು, ಅವನು ನಿಜ ಪಪ್ಪಕನಲ್ಲವೆಂತ, ಸಂಶಯ ತಾಳಿ, ಅವನ ಮೇಲಿನ ಹಗೆಯಿಂದ ಪ್ರೇರಿತಳಾಗಿ, ಅವನಿಗೆ ಕ್ರಿ. ಶ. 1556ನೇ ವರುಷ ಮರಣಾಜ್ಞೆ ಗೈದಳು. ಆಗಲೇ ಕ್ರಾನ್ಮೆರನು ತರಹರಿಸಿ ಕೊಂಡು, ತಾನು ಸುವಾರ್ತೆಗೆ

1) 454, 455ನೇ ಪಾನು.

ದ್ರೋಹ ಮಾಡಿದ್ದಕ್ಕೆ ಅತಿ ದುಃಖಿತನಾಗಿ, ಹನನಸ್ಥಳಕ್ಕೆ ಬಂದು, ನೆರೆದ ಪ್ರಜೆಯ ಮುಂದೆ—ತಾನು ಮಾನುಷ ಬಲಹೀನತೆಯಿಂದ ಮಾತ್ರ ಸೌವಾರ್ತಿಕ ಬೋಧನೆಯನ್ನಲ್ಲಗಳದೆನು; ಈ ಭಯಂಕರ ಪಾತಕಕ್ಕಾಗಿ ತಾನು ಮರಣಶಿಕ್ಷೆ ಪಡುವದೇ ತಕ್ಕ ಪ್ರಾಯಶ್ಚಿತ್ತವೆಂದು, ದೊಡ್ಡ ಶಬ್ದದೊಡನೆ ಕೂಗಿ—ಸುವಾರ್ತಾಬೋಧನೆಯೇ ನನ್ನ ಪಾಲಿನದು, ಪಪ್ಪನ ಸ್ವಲ್ಪಾಂಶ ಹಂಗಾದರೂ ತನಗಿಲ್ಲವೆಂದು, ಧೈರ್ಯದಿಂದ ನಿವೇದಿಸಿ, ತಾನು ಆ ಕೃತಿಗೊಪ್ಪಿತವಿಕ್ಕಿದ ಬಲಗೈಯನ್ನು ಚಿತಿಯೊಳುರಿಯುವ ಅಗ್ನಿಶಿಖೆಗೆ ಹಿಡಿದು, ಮೊದಲು ಈ ಕೈಯೇ ಅಪರಾಧ ಮಾಡಿದ್ದರಿಂದ ಇದೇ ಮೊದಲಾಗಿ ಸುಡಲಿ! ಎಂದು, ಹೇಳಿ, ಪೂರ ಕರುಕಾಗ ಗೊಟ್ಟನು. ಬಳಿಕ ಅವನನ್ನು ಯೂಪಕ್ಕೆ ಕಟ್ಟಿದರು; ಅವನು ಧೈರ್ಯಶಾಲಿಯಾಗಿ ಜ್ವಾಲೆಯೊಳಗೆ ನಿಂತು—ಕರ್ತನಾದ ಯೇಸುವೇ, ನನ್ನ ಪ್ರಾಣವನ್ನು ತಕ್ಕೊಳ್ಳೆಂದು, ಪ್ರಾರ್ಥಿಸಿದ್ದೇ ಅವನಂತ್ಯದ ನುಡಿ. ಅವನು ಅಂದು 67 ವರುಷದ ಮುದುಕನು.

ಮೇರಿಯ ಹುಚ್ಚು ಹಿಂಸೆಯಿಂದ ಸುವಾರ್ತೆಯ ಮೇಲಿನ ಪ್ರೀತಿಯು ರಾಜ್ಯದಲ್ಲಿ ಕಡಿಮೆಯಾಗಲಿಲ್ಲ; ಅದು ಹೊರ್ತಾಗಿ ಸಾಧಾರಣ ಪ್ರಜೆಯಲ್ಲಿ ಅದು ದಿನಾಲು ಹೆಚ್ಚಾಗುತ್ತಲಿತ್ತು. ಅವಳು ಕ್ರಿ. ಶ. 1558ನೇದಕ್ಕೆ ಮಡಿದಾಗ ಅವಳ ಮಲ ಸಹೋದರಿಯಾದ ಆ ಇಲಿಜಬೆಥಳು[1] ಪಟ್ಟಕ್ಕೆ ಬಂದಳು.

ಈ ಇಲಿಜಬೆಥಳು 8ನೇ ಹೆನ್ರಿಯ ಮತ್ತು ಅನ್ನ ಬೊಲೀನಳ[2] ಮಗಳು. ಅವಳು ರಾಣಿಯಾಗುತ್ತಲೇ ಪಪ್ಪಕ ಧರ್ಮದ ಬಹಿಃಸಂಬಂಧವನ್ನು ತಿರಿಗಿ ಕಡಿದು ಬಿಟ್ಟು, ಸುವಾರ್ತಾಬೋಧನೆಯನ್ನು ರಾಜ್ಯದಲ್ಲೆಲ್ಲಿಯೂ ಬೆಳಿಸ ಬೇಕೆಂತ, ಮನಸ್ಸು ಮಾಡಿ ಕೊಂಡು, ಬಲೋದ್ಬಂದಿ ಗೈಯದೆ, ಸೌವಾರ್ತಿಕರಿಗೆ ಬರುತ್ತಿರುವ ಹಿಂಸೆಯನ್ನು ನಿಲ್ಲಿಸಿ, ಗಡಿ ದಾಟಿ ಹೋಗ ಬೇಕಾಗಿದ್ದವರನ್ನು ಮರಳಿ ಬರಲೀಸಿದಳಷ್ಟೇ. ಬಳಿಕ ಕ್ರಿ. ಶ. 1559ನೇ ವರುಷದಾರಂಭಕ್ಕೆ ತನಗೆ ಪಟ್ಟಾಭಿಷೇಕವಾಗುವಲ್ಲಿ ಜನರು ತನಗೆ, ಉಚಿತವೆಂತ, ತಂದ ಇಂಗ್ಲಿಷ ಭಾಷಾಂತರದ್ದೊಂದು ದೇವವಾಕ್ಯವನ್ನು ಸಂತೋಷದಿಂದ ಪರಿಗ್ರಹಿಸಿ, ಅದಕ್ಕೆ ಮುದ್ದಿಟ್ಟು, ಹೃದಯದೊಳಾಲಿಂಗಿಸಿದಳು. ಅದೇ ವರುಷ ಅವಳು ಆ ಸುಪ್ರೇಮಾತ್ ಅಕ್ತನ್ನು[3] ಪುನಃಸ್ಥಾಪಿಸಿದರೂ ಇಂಗ್ಲಿಷ ರಾಜನು ಇಂಗ್ಲಂದು ರಾಜ್ಯದ ಕ್ರೈಸ್ತ ಸಭೆಯ ಏಕ ಪ್ರಧಾನ ಶಿರಸ್ಸೆಂಬದಕ್ಕೊಲಿಯದೆ, ಅದಕ್ಕೆ ಬದಲಾಗಿ, ಪ್ರಧಾನಾಧಿಪತಿ ಎಂತ, ಮಾತ್ರ ಬರೆಸಿದಳು. ತರುವಾಯ ಇನ್ನು ಅದೇ ವರುಷದಲ್ಲಿ 6ನೇ ಎದ್ವರ್ದ ರಾಜನು ರಚಿಸಿದ್ದ[4] ಸರ್ವಸಾಧಾರಣ ಪ್ರಾರ್ಥನೆಗಳ ಪುಸ್ತಕವೆಂಬದರದು ಒಂದು ಹೊಸ ಆವರ್ತನೆಯಾಯಿತು. ಪೂರ್ವದದರಲ್ಲಿದ್ದ ಪಪ್ಪಕತ್ವದ ನಿಂದೆಯ ಕೆಲವು ಮಾತುಗಳ

1) 476ನೇ ಪಾನು  2) 452, 453ನೇ ಪಾನು.  3) 453ನೇ ಪಾನು.  4) 455ನೇ ಪಾನು.

ನ್ನು ಇದರಲ್ಲಿಂದ ಕಿತ್ತರು; ಅದು ವಿನಹ ಪ್ರೀಸ್ತರ ಉಡಿಗೆ ತೊಡಿಗೆಯ ರೀತಿಯೂ ಪರಿಶುದ್ಧ ರಾತ್ರಿಭೋಜನವನ್ನು ಮೊಣಗಾಲೂರಿ ತಕ್ಕೊಳ್ಳುವ ರೀತಿಯೂ ಮುಂತಾದ ಅಮುಖ್ಯವಾದ ಕೆಲವು ಪಪ್ಪಕ ರೀತಿಗಳು, ಪಪ್ಪಕರಿಗಾದರೂ ಅಷ್ಟು ವೈಷಮ್ಯ ತೋರದಂತೆ, ಇದರಲ್ಲಿ ಇರಲೆಂದೆಣಿಸಿದರು. ಬಳಿಕ ಪಾರ್ಲಿಮೆಂತಿನವರು ಯೂನಿಫೊರ್ಮಿತಿ ಅಕ್ಟನ್ನು ಅಂದರೆ ಏಕರೂಪತಾವಿಧಿಯನ್ನು ಪ್ರಕಟಿಸಿದರು; ಅದರ ಪ್ರಕಾರ ಸರ್ವಸಾಧಾರಣ ಪ್ರಾರ್ಥನೆಗಳ ಆ ಪುಸ್ತಕ ಒಂದೇ ಸರ್ವ ರಾಜ್ಯದೊಳಗೆ ದೇವಾರಾಧನೆಗಳಲ್ಲಿ ನಡುವಳಿಯಾಗಿರ ಬೇಕು. ಹೆಚ್ಚು ಮಂದಿ ಸಭೋದ್ಯೋಗಿಗಳು ಅದಕ್ಕೊಡಂಬಟ್ಟರು; ಪಪ್ಪಕತ್ವವನ್ನಗಲಲೊಲ್ಲದ 14 ಮಂದಿ ಅಧ್ಯಕ್ಷರು ಮುಂತಾದ ಅಂಥ ಹಲವರು ಸಭೋದ್ಯೋಗಿಗಳ ಕೆಲಸವನ್ನು ತೆಗೆಯಲಾಯಿತು; ಇಂಥವರಲ್ಲಿ ಕೆಲವರನ್ನು ಪ್ರಭುಗಳು, ತಮ್ಮ ಗೃಹಪ್ರಸಂಗಿಕರೆಂತ, ಅಂಗೀಕರಿಸಿದರು, ಕೆಲವರಿಗೆ ರಾಜ್ಯೋದ್ಯೋಗವು ಶಿಕ್ಕಿತು, ಕೆಲವರು ಸ್ವೇಚ್ಛೆಯಾಗಿ ದೇಶಾಂತರಕ್ಕೆ ಹೋದರು. ಇಲಿಜಬೆಥಳ ಅಪ್ಪಣೆಯ ಮೇಲೆ ಸಭೋದ್ಯೋಗಿಗಳ ಸಂಘದವರು ಪಾರ್ಕೆರನೆಂಬ ಸದ್ಭಕ್ತನಾದ ಬೋಧಕನನ್ನು, ಕಂತರ್ಬೆರಿಯ[1] ಪ್ರಧಾನಾಧ್ಯಕ್ಷನೆಂದು, ಆರಿಸಿ ಕೊಂಡು, ಎದ್ವರ್ದ ರಾಜನು ನಿರ್ಮಿಸಿದ ಉದ್ಯೋಗ ಪ್ರತಿಷ್ಠಾಕ್ರಮಕ್ಕನುಸಾರವಾಗಿ[2] ಅಧಿಕಾರದಲ್ಲಿ ಸ್ಥಾಪಿಸಿದರು.

ಕ್ರಿ. ಶ. 1562ನೇ ವರುಷ ಎದ್ವರ್ದನ 42 ವಿಶ್ವಾಸಸೂತ್ರಗಳನ್ನು ಇನ್ನೊಮ್ಮೆ ವಿಮರ್ಶಿಸುವಲ್ಲಿ ಅವನ್ನು ಸಂಕ್ಷೇಪಿಸಿ, 39 ಸೂತ್ರಗಳನ್ನು ಮಾತ್ರ, ಸಭೆಯ ವಿಶ್ವಾಸಪ್ರಮಾಣವೆಂದು, ಪ್ರಕಟಿಸಿದರು; ಇವಕ್ಕೆ 9 ವರುಷದಿತ್ತ ಪಾರ್ಲಿಮೆಂತಿನವರ ಒಪ್ಪಿತ ಬಂತು. ಈಗ ಇಂಗ್ಲಿಷ ಸಭೆಗಳಲ್ಲಿ ವಾಡಿಕೆಯಾದ ದೇವವಾಕ್ಯದ ಭಾಷಾಂತರವನ್ನು ಆಗ 20 ಮಂದಿ ದೇವಜ್ಞಾನಪಂಡಿತರು ರಚಿಸಿದರು; ಅದು ಕ್ರಿ. ಶ. 1572ನೇ ವರುಷದಲ್ಲಿ ಮೊದಲಿನ ಸರ್ತಿ ಮುದ್ರಿತವಾಯಿತು; ಇಲಿಜಬೆಥಳ ಉತ್ತರೋದ್ಯೋಗಿಯಾದ 1ನೇ ಜೇಂಸನ ಕಾಲದಲ್ಲಿ ಅದು ಈಗಿನಂತೆ ಚೊಕ್ಕ ತರದ್ದಾಯಿತು.

ಆ 39 ವಿಶ್ವಾಸಸೂತ್ರಗಳು ಪಪ್ಪನ ಅಧಿಕಾರವನ್ನೂ ಸಭೋದ್ಯೋಗಿನಿರ್ವಿವಾಹಿತ್ವಾಜ್ಞೆ ಕ್ಷಮಾವಿಕ್ರಯ ಸಂತರ ಮತ್ತು ಪ್ರತಿಮೆಗಳ ಪೂಜೆ ವಸ್ತುಪರಿಣಾಮ ಮಿಸ್ಸಯಾಗ ಮುಂತಾದ ಪಪ್ಪಕ ದುರ್ಬೋಧನೆ ದುರಾಚಾರಗಳನ್ನೂ ತಳ್ಳಿ, ಅಪೊಕ್ರುಫಗಳಿಲ್ಲದ ದೇವವಾಕ್ಯವು[3] ವಿಶ್ವಾಸಪ್ರಮಾಣದ ನಿಜೈಕ ಅಸ್ತಿವಾರವೆಂದು, ಸಂಸ್ಥಾಪಿಸಿ, ಅದರ ಪ್ರಕಾರ ಸ್ವಕ್ರಿಯೆಗಳಿಂದಲ್ಲ ಕ್ರಿಸ್ತನ ಮೇಲಿನ ವಿಶ್ವಾಸದಿಂದ ಮಾತ್ರವೇ ಬರುವಂಥ ನೀತಿನಿರ್ಣಯವನ್ನು[4] ಬೋಧಿಸಿ, ಕ್ರಿಸ್ತನಾಥನು

1) 477ನೇ ಪಾನು. 2) 455ನೇ ಪಾನು. 3) 386, 447ನೇ ಪಾನು. 4) 440ನೇ ಪಾನು.

ತಾನು ವಿಧಿಸಿದ ಸ್ನಾನವೂ ರಾತ್ರಿಭೋಜನವೂ ಎಂಬಿವೆರಡು ಸಂಸ್ಕಾರಗಳು ಮಾತ್ರ ಅಪ್ರತಿಮ ಆಶೀರ್ವಾದದ ದೆಸೆಯಿಂದ ಪರಿಶುದ್ಧವಾದವುಗಳೆಂದು, ನಿರ್ದೇಶಿಸಿ, ಪರಿಶುದ್ಧ ರಾತ್ರಿಭೋಜನವನ್ನು ಕುರಿತ ದೇವವಾಕ್ಯವಚನಗಳನ್ನು ಕಲ್ವೀನನಂತೆಯೇ[1] ಟೀಕಿಸಿ, 6ನೇ ಎದ್ವರ್ದನ ಉದ್ಯೋಗಪ್ರತಿಷ್ಠಾಕ್ರಮವನ್ನು ನೆಲೆಗೊಳ್ಳಿಸುತ್ತವೆ; ಆದರೆ ಪರಿಶುದ್ಧ ರಾತ್ರಿಭೋಜನದಲ್ಲಿ ಹೊಸ್ತಿಯದ[2] ಪೂಜೆಯನ್ನು ನೆನಪಿಗೆ ತರುವ ಮೊಣಗಾಲೂರೋಣವನ್ನೂ, ಸಭೋದ್ಯೋಗಿಗಳು ಒಂದು ಬೇರೆ ಜಾತಿ ಎಂದು, ಸೂಚಿಸುವ ಸಭೋದ್ಯೋಗಿಗಳ ಉಡಿಗೆ ತೊಡಿಗೆಗಳನ್ನೂ[3] ಇವು ಮೊದಲಾದ ಪಪ್ಪಕ ಸಭೆಯಲ್ಲಿ ಪದ್ಧತಿಯಾಗಿರುವ ಕೆಲವು ಗೌಣವಾದ ಆಚಾರಗಳನ್ನು ಆ ಸೂತ್ರಗಳು ನಿವರ್ತಿಸದಿದ್ದದರಿಂದ ಹಿಂದಗಡೆ ಇಂಗ್ಲಂದಿನ ಸೌವಾರ್ತಿಕ ಕ್ರೈಸ್ತರಲ್ಲಿ ಬಹು ತೊಂದರೆ ಹುಟ್ಟಿತು. ಕೊನ್ಸಿಸ್ತೋರಿಯಾಲ ಸಭಾಪರಿಪಾಲನಕ್ರಮವಾಗಲಿ[4] ಪ್ರೆಸ್ಬುತೆರಿಯಾಲವಾದದಾಗಲಿ[5] ಇಂಗ್ಲಂದು ರಾಜ್ಯದಲ್ಲಿ ಶೇರಿಸಲಾಗಲಿಲ್ಲ; ಇದ್ದ ಎಪಿಸ್ಕೊಪಾಲವಾದದನ್ನೇ ಅಂದರೆ ಅಧ್ಯಕ್ಷರ ಸಂಬಂಧವಾದದನ್ನೇ[6] ಅಂತೆಯೇ ಉಳಿಸಲಾಯಿತು. ಅದು ಕಾರಣ ಪ್ರಧಾನಾಧ್ಯಕ್ಷರೂ ಅಧ್ಯಕ್ಷರೂ ಹಿಂದಿದ್ದ ಅದೇ ಮಹಾಧಿಕಾರದಲ್ಲುಳಿದು, ರಾಜ್ಯದಲ್ಲಿ ಸಲ್ಲ ತಕ್ಕಂಥ ನಿಜ ಉದ್ಯೋಗಪ್ರತಿಷ್ಠೆಯನ್ನೂ ಮುಂತಾದ ಮತಕ ಪ್ರತಿಷ್ಠೆಯನ್ನೂ ಮಾಡಲಿಕ್ಕೆ ತಾವೇ ಮಾತ್ರ ಶಕ್ತರೆನ್ನಿಸುವದಿತ್ತು; ಉದ್ಯೋಗಪ್ರತಿಷ್ಠಾಕ್ರಮ ಒಂದೇ, ಹಿಂದೆ ಹೇಳಿರುವ ಪ್ರಕಾರ, ಬದಲಾಯಿತು. ಚಕ್ರವರ್ತಿಯ ನಿರ್ದೇಶದ ಮೇಲೆ ಅಧ್ಯಕ್ಷಕರನ್ನಾರಿಸಿ ಕೊಳ್ಳುವದಾಗುವದು; ಇವರಿಗೆ ರಾಜ್ಯಪ್ರಭುಗಳೆಂಬಂತೆ[7] ಪಾರ್ಲಿಮೆಂತಿನ ಮೇಲ್ವರ್ಗದಲ್ಲಿ ನೆಲೆನುಡಿಗಳು ಇರುವವು; ಸಾಧಾರಣ ಸಭ್ಯರು ಪಾರ್ಲಿಮೆಂತಿನ ಸಾಧಾರಣ ಪ್ರಜೆಯವರೆಂಬ ಕೆಳವರ್ಗಕ್ಕೆ ಕಳುಹಿಸುವ ಪ್ರೇಷಿತರ ಮುಖದಿಂದ ಮಾತ್ರ ಸಭೆಯ ಬೋಧನೆ ಆಚಾರಗಳನ್ನು ಕುರಿತು ತಮ್ಮ ಆಲೋಚನೆಯನ್ನು ಸಾಗಿಸಲೆಸಗ ಬಹುದು. ಹಾಗಾದರೆ ರಾಜನೂ ಪಾರ್ಲಿಮೆಂತಿನವರೂ ಇಂಗ್ಲಂದಿನಲ್ಲಿ, ರಾಜ್ಯಮತದ್ದೆಂತ[8], ಸ್ಥಾಪಿತವಾದ ಎಪಿಸ್ಕೊಪಾಲ ಸಭೆಯನ್ನು ಆಳುವಂತಾಗುತ್ತದೆ. ಕಂತರ್ಬೆರಿಯಲ್ಲಿಯೂ ಯೊರ್ಕಿನಲ್ಲಿಯೂ[9] ಒಬ್ಬೊಬ್ಬ ಪ್ರಧಾನಾಧ್ಯಕ್ಷನು; ಇವರ ಕೆಳಗೆ 26 ಅಧ್ಯಕ್ಷತಾಸ್ಥಳಗಳು.

ಎಪಿಸ್ಕೊಪಾಲ ರಾಜ್ಯಸಭೆಯನ್ನು ಶೇರಿದವರೆಲ್ಲರು ಕೊನ್ಫೊರ್ಮಿಸ್ತರು ಅಂದರೆ ತದ್ವದ್ರೂಪಿತರು ಎನ್ನಿಸಿ ಕೊಳ್ಳುತ್ತಾರೆ; ಉಳಿದವರೆಲ್ಲರೂ ನೊನ್ಕೊನ್ಫೊರ್ಮಿ

---

1) 441ನೇ, 442ನೇ ಪಾನುಗಳು. 2) 354ನೇ ಪಾನು. 3) 286, 314, 349ನೇ ಪಾನು. 4) 432ನೇ ಪಾನು. 5) 438, 439ನೇ ಪಾನು. 6) 168ನೇ ಪಾನು. 7) 319, 333ನೇ ಪಾನು. 8) 431, 432, 456ನೇ ಪಾನುಗಳು. 9) 90, 116ನೇ ಪಾನು.

ಸ್ತರು ಅಂದರೆ ಅನ್ಯರೂಪಿತರೆಂತ, ಇವರೊಳಗಿನ ಸೌವಾರ್ತಿಕರು ದಿಸ್ಸೆಂತರರು ಅಂದರೆ ಅಸಮ್ಮತಕರೆಂತಲೂ, ಅನ್ನಿಸಿ ಕೊಳ್ಳುತ್ತಾರೆ.

ರಾಜನು ಪ್ರಧಾನಾಧಿಪತಿಯಾದ ಇಂಗ್ಲಿಷ ಎಪಿಸ್ಕೊಪಾಲ ರಾಜ್ಯಸಭೆಯನ್ನು ಕುರಿತ ಮತ್ತೊಂದೆರಡು ಮಾತನ್ನು ಇಲ್ಲಿ ಹೇಳ ತಕ್ಕದ್ದು; ಏನೆಂದರೆ, ಎಪಿಸ್ಕೊಪಾಲ ಸಭಾಪರಿಪಾಲನಕ್ರಮವನ್ನು ಹಿಡಿದುಳಿಸುವಾಗ, ಪಪ್ಪಕ ಪಕ್ಷಸಭೆಯೊಳು ಸಲ್ಲುತ್ತಿರುವ ಅಪೊಸ್ತೊಲಿಕ್ ಸಕ್ಸೆಶ್ಯನ್ ಅಂದರೆ ಅಪೊಸ್ತೊಲಿಕ ಕ್ರಮಾಗಮವೆಂಬದು ಇನ್ನು ಸಲ್ಲ ಬಾರದೆಂದು, ಸ್ಪಷ್ಟ ನಿಯಮವಾಗಲಿಲ್ಲ. ಈ ಕ್ರಮಾಗಮವಂದರೇನು? ಅಪೊಸ್ತಲರು ಕ್ರಿಸ್ತನಿಂದಲೇ ಪ್ರತಿಷ್ಠಿತರಾದ ಅಧ್ಯಕ್ಷರಾಗಿದ್ದರು; ಅನಾಶಿಯಾದ್ದೊಂದು ಉದ್ಯೋಗಭಾವವನ್ನೀಯುವಂಥ[1] ಮತ್ತು ಈ ಉದ್ಯೋಗಭಾವವನ್ನು ಹೊಂದಿದವರ ಕೈಯಿಂದ ಮಾತ್ರ ಯಥಾಪ್ರಕಾರ ಪ್ರಾಪ್ತವಾಗುವಂಥ ಆ ಪ್ರತಿಷ್ಠೆಯ ಮೂಲಕ ಅವರೇ ಮಾತ್ರ ಅನ್ಯರನ್ನು ಪ್ರತಿಷ್ಠೆಯಿಂದ ತದ್ವದ್ಭಾವವುಳ್ಳ ಉತ್ತರೋದ್ಯೋಗಿಗಳಾಗ ಸ್ಥಾಪಿಸಲಿಕ್ಕೆ ಶಕ್ತರಾದರು; ಆ ಮೇಲೆ ಇವರೇ ಮಾತ್ರ ಬೇರೊಬ್ಬರನ್ನು, ಬಳಿಕ ಪರಂಪರೆಯಿಂದ ಹೀಗೆಯೇ; ಈ ಪ್ರಕಾರವೇ ಮಾತ್ರ ಸಭೋದ್ಯೋಗಿಗಳ ಉದ್ಯೋಗವರವೂ ಭಾವವೂ ಅವಿಚ್ಛಿನ್ನವಾಗಿಯೇ ಈ ವರೆಗೂ ನಡೆದುಳಿದು, ಇನ್ನು ಮುಂದೆಯೂ ಅಂಥ ಅಧ್ಯಕ್ಷರ ಪಂಕ್ತಿಯಲ್ಲಿರುವವರಿಂದಲೇ ಮುನ್ನಡೆಯಲಾಗುವದು; ಆದ್ದರಿಂದ ಅಧ್ಯಕ್ಷರ ಮಾನವು ದಿವ್ಯ ನ್ಯಾಯದ ಮೇಲೆಯೇ ಪ್ರೀಸ್ತರದಕ್ಕಿಂತ (ಪ್ರೆಸ್ಬುತರದಕ್ಕಿಂತ) ಸಹ ಬೇರೆಯಾದದ್ದೂ ಅಧಿಕವಾದದ್ದೂ ಎಂಬ ಈ ಭಾವನೆಯು. ಆ 39 ವಿಶ್ವಾಸಸೂತ್ರಗಳು ಉದ್ಯೋಗಪ್ರತಿಷ್ಠೆಯನ್ನು ಪರಿಶುದ್ಧ ಸಂಸ್ಕಾರವೆನ್ನದಿದ್ದರೂ ಈ ಪ್ರತಿಷ್ಠೆಯು, ನೀವು ಹಿಂದೆ ಪಠಿಸಿರುವಂತೆ,[2] ಮಾರ್ಪಟ್ಟಿದ್ದರೂ ಬಹಳ ವಿಲಂಬವಿಲ್ಲದೆ ಇಲಿಜಬೆಥಳ ಹಿಂದಿನವನಾದ ಆ 1ನೇ ಜೇಂಸನ[3] ಕಾಲದಲ್ಲಾದರೂ ಎಪಿಸ್ಕೊಪಾಲ ರಾಜ್ಯಸಭೆಯಲ್ಲನೇಕರು, ಅಪೊಸ್ತೊಲಿಕ ಕ್ರಮಾಗಮವು ಸತ್ಯವೆಂದು, ಚರ್ಚಿಸಲಿಕ್ಕೆ ಹತ್ತಿದರು; ಪಪ್ಪಕ ಧರ್ಮದ ಈ ಮುಂತಾದ ಶೇಷವನ್ನು ಬಹು ಬಿಗಿ ಹಿಡುಕೊಳ್ಳುವವರಾದಂಥವರಿಗೆ ಉಚ್ಚಸ್ಥಾನಸಭ್ಯರೆಂಬ ಹೆಸರು ಬಿತ್ತು; ರಾಜ್ಯಸಭೆಯ ಇತರರಿಗೆ ಅಧಃಸ್ಥಾನದ ಸಭ್ಯರೆಂಬದು ಪ್ರಾಪಿಸಿತು. ಉಚ್ಚಸ್ಥಾನಸಭ್ಯರು, ಸಭೋದ್ಯೋಗಿಗಳು ವಿಶೇಷ ವೃತ್ತಿಯದೊಂದು ಕುಲವಲ್ಲದೆ ಒಂದು ವಿಶೇಷ ಜಾತಿಯು ಸಹ ಎಂದು, ಹೇಳುವ ಆ ವಿಕಾರವಾದ ಬೋಧನೆಯನ್ನು ತಿರಿಗಿ ಏಳಗೊಟ್ಟು, ಹೀಗೆ ಸರ್ವ ಕ್ರೈಸ್ತರೂ ಏಕೀಭಾವದ ಯಾಜಕ ಕುಲವೆಂಬೀ[4] ಸುವಾರ್ತೆಯ ಮೂಲಬೋಧನೆಯನ್ನು ಕುಂದಿಸುವದಕ್ಕೆ ಕಾರಣರಾದರು.

1) 286ನೇ ಪಾನು. 2)455ನೇ ಪಾನು. 3) 480ನೇ ಪಾನು. 4) 431ನೇ ಪಾನು.

ಆದರೆ ಇಲಿಜಬೆಥಳು ಸೌವಾರ್ತಿಕ ಮತವನ್ನು ಇಂಗ್ಲಂದಿನಲ್ಲಿ, ರಾಜ್ಯಮತ ವೆಂತ[1], ನೇಮಿಸಿದ್ದಂದೇ ಮೇರಿಯ ಆಳ್ತನದಲ್ಲಿ ದೇಶನಿರ್ವಾಸಿಗಳಾದ ಸೌವಾರ್ತಿಕರೆಲ್ಲರು ಸ್ವದೇಶಕ್ಕೆ ಮರಳಿದರು; ಕಲ್ವೀನಕ ಶಾಖೆಯವರು ಪ್ರಬಲರಾಗಿದ್ದ ಹೆಚ್ಚಾಗಿ ಗೆರ್ಮಾನಿಯದ ತೆಂಕಣ ಭಾಗದಲ್ಲಿಯೂ ಸ್ವೀಟ್ಸೆರ್ಲಂದಿನಲ್ಲಿಯೂ ಅವರು ತಮ್ಮ ದೇಶನಿರ್ವಾಸದ ಕಾಲ ಕಳೆದು, ಕಲ್ವೀನಕರ ವಿಶೇಷವಾದ ಅಭಿಪ್ರಾಯ ಕಂಡೊಲಿದು, ಬಂದಂಥವರಾಗಿದ್ದರು. ಹೀಗಿರಲಿಕ್ಕೆ, ಅವರು ಎಪಿಸ್ಕೊಪಾಲ ಸಭೆಯ ರಕ್ಷಣವಿಧಿಬೋಧನೆಗೆ[2] ಪೂರಾ ಸಮ್ಮತಿಸಿದರೂ ಅದರಲ್ಲಿಯ ಪರಿಪಾಲನ ಕ್ರಮಕ್ಕೂ ಅನೇಕ ಆಚಾರಗಳಿಗೂ ಮೆಚ್ಚದೆ—ಸಭೋದ್ಯೋಗಿಗಳ ಅಸಾಧಾರಣ ವಸ್ತ್ರಗಳನ್ನೂ ಪರಿಶುದ್ಧ ಸ್ನಾನದಲ್ಲಿಯ ಕ್ರೂಜೆಸಂಜ್ಞೆಯ ನ್ಯಾಸವನ್ನೂ ಪರಿಶುದ್ಧ ಸ್ನಾನದಲ್ಲಿಯ ಶಿಶುಪ್ರತಿನಿಧಿಗಳನ್ನೂ ಮುದ್ರಾಂಕನಕ್ಕೆ[3] ಬದಲಾಗಿ ಬಂದಿದ್ದ ದೃಢೀಕರಣರೀತಿಯನ್ನೂ ನಿತ್ಯ ಅಧ್ಯಯನಕ್ಕೆ ನೇಮಿತವಾದಂಥ ಪ್ರಾರ್ಥನೆಗಳನ್ನೂ ಪರಿಶುದ್ಧ ರಾತ್ರಿಭೋಜನದಲ್ಲಿ ಮೊಣಗಾಲೂರುವ ಪದ್ಧತಿಯನ್ನೂ ದೇವಾಲಯದ ಘಂಟೆ ಸ್ವರಮಂಡಲ ವೇದಿ ಭೂಷಣಗಳನ್ನೂ ಸಂತರ ಸಕಲ ಹಬ್ಬದಿನಗಳನ್ನೂ ತೆಗೆದು ಹಾಕಿ, ಆದಿತ್ಯವಾರವನ್ನು ಯೆಹೂದ್ಯರ ಸಬ್ಬತೆಂಬಂಥ[4] ಪ್ರಕಾರದಿಂದಾಚರಿಸಿ, ಎಪಿಸ್ಕೊಪಾಲವಾದದಕ್ಕೆ ಪ್ರತಿಯಾಗಿ ಪ್ರೆಸ್ಬುತೆರಿಯಾಲವಾದ ಸಭಾಪರಿಪಾಲನವನ್ನು[5] ಸ್ಥಾಪಿಸ ಬೇಕೆಂದು, ಬೆಸಸಿದರು. ರಾಣಿಯೂ ಅಧ್ಯಕ್ಷಕರೂ ಅವರ ಮನೋರ್ಥಕ್ಕೆ ಶೇರದ್ದಕ್ಕೆ ಬಹಳ ಆಶ್ಚರ್ಯ ಪಡ ಬೇಡ, ಬಳಿಕ ಅವರು ರಾಜ್ಯಸಭೆಯನ್ನು ಅಗಲಲಿಚ್ಛೈಸಿದ್ದಕ್ಕೆ ಸಹ ಆಶ್ಚರ್ಯ ಪಡ ಬೇಡ; ಆದರೆ ಇಲಿಜಬೆಥಳು ಅವರನ್ನೊಳ ಪಡಿಸಲಿಕ್ಕೋಸ್ಕರ ಅವರೊಳಗಣ ಹಲವರು ಸಾಧಾರಣ ಸಭ್ಯರಿಗೆ ಹಣದ ಮತ್ತು ಶೆರೆಯ ಶಿಕ್ಷೆ ಗೈದು, ಸಭೋದ್ಯೋಗಿಗಳಲ್ಲಿ ಹಲವರ ಉದ್ಯೋಗ ತೆಗೆದು, ಹಲವರನ್ನು ಗಡಿಪಾರು ಮಾಡಿದ್ದು ಅಹಿತೋಪಾಯವಾದದ್ದೇ ನಿಶ್ಚಯ! ಹೀಗಿರಲಾಗಿ ಆ ಕಡು ಕಲ್ವೀನಕ ಶಾಖೆಯವರು ಕ್ರಿ. ಶ. 1567ನೇ ವರುಷ, ಚಕ್ರವರ್ತಿಯು ಕ್ರೈಸ್ತ ಸಭೆಯ ಪ್ರಧಾನಾಧಿಪತಿಯಾಗಿರ ಕೂಡದೆಂದು, ಹೇಳಿ, ರಾಜ್ಯಸಭೆಯನ್ನು ತೊಲಗಿದರು. ಅವರದೊಂದು ಭಾಗದವರು ತಮ್ಮಲ್ಲಿ ಪ್ರೆಸ್ಬುತೆರಿಯಾಲವಾದ್ದೊಂದು ಸಭಾಪರಿಪಾಲನಕ್ರಮದೊಡನೆ ತಕ್ಕಷ್ಟು ಬಿಗಿಯಾದ ಸಭಾಶಿಕ್ಷೆಯನ್ನು ಸಹ ಸ್ಥಾಪಿಸಿ, ಪ್ರೆಜ್ಬೆತೀರಿಯನರು ಅಂದರೆ ಪ್ರೆಸ್ಬುತೆರಿಯಾಲ ಸಭೆಯವರು ಎನ್ನಿಸಿ ಕೊಳ್ಳುವವರಾದರು; ಮತ್ತೊಂದು ಭಾಗದವರು ತಮ್ಮಲ್ಲಿ ಸರ್ವಾಗ್ರಸ್ಥವಾದ್ದೊಂದು ಪರಿಪಾಲನಸಭೆಯನ್ನಿಡದೆ, ಒಂದೊಂದು ದೇ

1) 481ನೇ ಪಾನು. 2) 440, 442ನೇ ಪಾನು. 3) 315, 357ನೇ ಪಾನು. 4) 50ನೇ ಪಾನು. 5) 438ನೇ ಪಾನು.

ವಾಲಯಕ್ಕೆ ಶೇರಿದ ಒಂದೊಂದು ಒಳಸಭೆಯು ತನ್ನ ತನ್ನ ಕಾರ್ಯಗಳನ್ನು ಸರಿಗೊಳ್ಳಿಸುವಂತೆ ಮಾಡಿ, ಕೊಂಗ್ರೆಗಾತಿಯೋನಲಿಸ್ತರು ಅಂದರೆ ಪ್ರತಿಸಭಾಸ್ವಪರಿಪಾಲನಕ್ರಮದವರೆಂತಾಗಲಿ ಇಂದೆಪೆಂದೆಂತರು ಅಂದರೆ ಪರಾಧೀನರೆಂತಾಗಲಿ ಹೆಸರು ಪಡೆದರು. ಆದರೆ ರಾಜ್ಯಸಭೆಯವರು ಅವರೆಲ್ಲರಿಗೆ ಕೂಡ, ಪ್ಯೂರಿತನರು (ಪೂರಿತಾನರು) ಅಂದರೆ ಪೂತರು ಎಂತ[1], ಅಡ್ಡಹೆಸರಿಕ್ಕಿದರು. ಕ್ರಿ. ಶ. 1570ನೇ ವರುಷ 5ನೇ ಪಿಯ ಪಪ್ಪನು[2] ಇಲಿಜಬೆಥಳ ತಲೆಗೆ ಬನ್ನನ್ನೆಸೆದನು[3].

ಸ್ಕೋತ್ಲಂದಿನಲ್ಲಿ ಸುವಾರ್ತಾಮತದ ಪುನಃಸ್ಥಾಪನೆಯಾದದ್ದನ್ನು ಈಗ ಸ್ವಲ್ಪ ವರ್ಣಿಸುವ. ಕ್ರಿ. ಶ. 1360ನೇ ಅಬ್ದ ಆ ಪ್ರಖ್ಯಾತ ವಿಕ್ಲಿಫನ[4] ಮುಖದಿಂದ ತಿರಿಗಿ ಅಭಿವೃದ್ಧಿ ಹೊಂದಿದ್ದ ಅಲ್ಲಿಯ ಸೌವಾರ್ತಿಕ ಕ್ರೈಸ್ತರು ಕ್ರಿ. ಶ. 1494ನೇದರ ತನಕ ಶಾಂತ ಸ್ಥಿತಿಯಲ್ಲಿರುತ್ತಿದ್ದ ಮೇಲೆ ಸ್ಕೋತ್ಲಂದಿನ 4ನೇ ಜೇಂಸನೆಂಬ ಅರಸನು ಅವರನ್ನು ಗುಪ್ತವಿಚಾರಣರೀತಿಯಿಂದ ಪರಿಶೋಧಿಸಿ, ಬಾಧಿಸುವಲ್ಲಿ—ಅವರು ಮರಿಯಳು ಮುಂತಾದ ಸಂತರಿಗೆ ಪ್ರಾರ್ಥಿಸುವದಿಲ್ಲ, ಸಂತಾವಶಿಷ್ಟಗಳಿಗೂ ಪ್ರತಿಮೆಗಳಿಗೂ ಪೂಜಿಸುವದಿಲ್ಲ, ಮಿಸ್ಸಯಾಗವನ್ನು ತ್ಯಜಿಸುತ್ತಾರೆ ಎಂತ, ಹೇಳುವ ಅಪರಾಧವು ಆಪಾದನೆಯಾಯಿತು; ಆದರೂ ಅವರಲ್ಲೊಬ್ಬನಾದ ದೇವಿದ್ ರೀದನೆಂಬವನು ಅರಸನ ಮುಂದೆ ಅವರ ಕಾರ್ಯವನ್ನು ಚನ್ನಾಗಿ ಪರಿಪೋಷಿಸಲಿಕ್ಕೆ, ಅವರಿಗೆ ಮಾತಿನ ಭಯ ಮಾತ್ರವೇ ತೋರಿಸಲಾಯಿತು. ಅಷ್ಟರೊಳಗೆ ಪಪ್ಪಕ ಪ್ರಜೆಯ ದೊಡ್ಡ ಗುಂಪಿನಲ್ಲಿ ಅಘೋರ ಅಪವಿಶ್ವಾಸವು ಪ್ರಬಲವಾಗಿತ್ತು; ಪ್ರೀಸ್ತರೊಬ್ಬರೇ ಸುದ್ದಿ ಕೊಡುತ್ತಿರುವ ಅವರು, ಪಪ್ಪನು ಭೂದೇವತೆ ಎಂತ[5], ನೆನಸುತ್ತಿದ್ದರು; ಸಿಮೋನೀಯವು[6] ಮಿಗಿಲಾಗಿತ್ತು; ಆ ಬಡ ಚಿಕ್ಕ ದೇಶದಲ್ಲಿ 150 ಭಿಕ್ಷುಕ ಕುಲದ ಮಠಗಳು[7] ನಿರ್ಮಿತವಾಗಿ, ಅದರ ಸಾರ ತಿನ್ನುತ್ತಾ ಇದ್ದವು; ಪರಿಶುದ್ಧ ಬರಹದ ಜ್ಞಾನವಿರಲಿಲ್ಲ; ನೀತಿಚರ್ಯೆಯು ಕೆಟ್ಟಿತ್ತು. ವಿವಾಹಿಗಳಾಗ ಬಾರದ ಪಪ್ಪಕ ಸಭೋದ್ಯೋಗಿಗಳು ಅಗಾಧ ನಿರ್ಲಜ್ಜೆಯಿಂದ ಸ್ತ್ರೀಯರನ್ನಿಟ್ಟು ಕೊಂಡಿದ್ದ ಒಂದು ನಿದರ್ಶನವೇನೆಂದರೆ, ಸ್ಕೋತ್ಲಂದಿನ ಪ್ರಧಾನಾಧ್ಯಕ್ಷನಾದ ಜೇಂಸ್ ಬೀತನೆಂಬವನು ತನಗೆ ಹುಟ್ಟಿದ ಮಗಳನ್ನು ಬಹಿರಂಗದಲ್ಲಿ, ತನ್ನ ಮಗಳೆಂತ, ಹೇಳಿ, ಒಬ್ಬ ಪ್ರಭುವಿಗೆ ಮದಿವೆ ಮಾಡಿ ಕೊಟ್ಟನು. ಇನ್ನು ಕ್ರಿ. ಶ. 1545ನೇ ವರುಷದಲ್ಲ್ಯಾದರೂ—ಲುಥರನು ಬರೆದ ಆ ಹೊಸ ಗ್ರಂಥವು ಅಂದರೆ (ದೇವವಾಕ್ಯಭಾಷಾಂತರವು) ಬೇಡವೇ ಬೇಡ, ಹಳೇ ಒಡಂಬಡಿಕೆಯನ್ನು[8] ಕೈಗೊಂಡಿರುವದೇ

---

1) 162ನೇ ಪಾನು. 2) 474ನೇ ಪಾನು. 3) 352ನೇ ಪಾನು ಸರಿ ನೋಡು. 4) 50ನೇ ಸಂಧಿ. 5) 414ನೇ ಪಾನು. 6) 462ನೇ ಪಾನು. 7) 386, 411, 413ನೇ ಪಾನುಗಳು.
8) ಅಂದರೆ ಅವರ ಭಾವನೇ ಪ್ರಕಾರ ಪಪ್ಪಕ ಮತದ ಸಂಪ್ರದಾಯುಗಳನ್ನು.

ಮಾತ್ರ ಅವಶ್ಯ! ಎಂತ, ಹೇಳುವಷ್ಟು ಮಹಾ ಅಜ್ಞಾನವು ಅನೇಕ ಪಪ್ಪಕ ಪ್ರೀಸ್ತರಲ್ಲಿ ಕಾಣಿಸುತ್ತಿತ್ತು.

ಕ್ರಿ. ಶ. 1525ನೇ ವರುಷ ಲುಥರನ ಕೃತಿಗಳು ಸ್ಕೋತ್ಲಂದಿನಲ್ಲಿ ಸಹ ಪ್ರಚುರವಾಗಲು, ಅಲ್ಲಿಯ ಪಾರ್ಲಿಮೆಂತಿನವರು, ಅವನ್ನೋದ ಬಾರದೆಂದು, ಆಜ್ಞಾಪಿಸಿದರು; ಆದರೂ ವಿತ್ತೆನ್ಬೆರ್ಗಿನಲ್ಲಿ[1] ಲುಥರನ ಶಿಷ್ಯನಾಗಿದ್ದ ಪತ್ರಿಕ್ ಹಮಿಲ್ತನನೆಂಬ ಒಬ್ಬ ರಾಜವಂಶಜನಾದ ಬೋಧಕನು ಅಂಜದೆ, 2 ವರುಷಕ್ಕೀಚೆ ಬೈಲಿಗಿಳಿದು, ಅತಿರೇಕ ಕುತೂಹಲದಿಂದ ಸುವಾರ್ತೆ ಸಾರುವವನಾದನು. ಹೇರಳ ಜನರು ಅವನ ಪ್ರಸಂಗಕ್ಕೆ ಒಲುಮೆ ಪಡಲು, ಆ ಕ್ರೂರ ಪ್ರಧಾನಾಧ್ಯಕ್ಷನಾದ ಬೀತನು ಕ್ರಿ. ಶ. 1528ನೇದಕ್ಕೆ ಕಪಟೋಪಾಯದಿಂದ ಹಮಿಲ್ತನನನ್ನು ಇರುಳಿನಲ್ಲಿ ಶೆರೆ ಹಿಡಿಸಿ, ತಾನೂ 17 ಮಂದಿ ಪ್ರೀಸ್ತರೂ ಇರುವ ವಿಚಾರಣಸ್ಥಾನಕ್ಕೆ ತರಿಸಿ, ಅವನು ಸುಧೈರ್ಯದಿಂದ ಸುವಾರ್ತಾಸತ್ಯ ನಿವೇದಿಸುವಲ್ಲಿ ಅವನಿಗೆ ಅಗ್ನಿಮರಣಾಜ್ಞೆ ಮಾಡಿ, ಇನ್ನು ಅದೇ ದಿನದಲ್ಲಿ ಅದನ್ನು ನಡಿಸಲಪ್ಪಣೆ ಕೊಟ್ಟನು. ಹಮಿಲ್ತನನು ಚಿತಿಗೆ ಬಂದು, ತನ್ನ ಮೇಲಣ ಅಂತಃಕರಣದಿಂದ ಗೋಳಾಡುತ್ತಿರುವ ಪ್ರಜೆಯವರಿಗೆ ಬುದ್ಧಿಯ ಕೆಲವು ಮಾತುಗಳನ್ನು ಹೇಳುವಾಗ ಪಶುತ್ವವುಳ್ಳ ಪ್ರೀಸ್ತರು, ಕಥರನೇ, ಮಾನಸಾಂತರ ಪಡೆಂತ, ಕೂಗಿ, ಅವನನ್ನು ಸುಮ್ಮನಿರಿಸಲೊದ್ದಾಡಿದರು. ಆ ಹೊತ್ತು ಅವನು ಅವರಲ್ಲಿ ಹೆಚ್ಚು ಕಾಡನಾದ ಕೆಂಬೆಲನೆಂಬವನ ಮೇಲೆ ದೃಷ್ಟಿ ಇಟ್ಟು, ನುಡಿದ್ದೇನೆಂದರೆ—ನಾನು ಪಾಷಂಡಿಯಾದ ಕಥರನಲ್ಲ, ನಾನು ಸತ್ಯಕ್ಕೋಸ್ಕರ ಶ್ರಮ ಪಡುತ್ತೇನೆಂಬದು ನಿನಗೆ ಗೊತ್ತೇ ಉಂಟು, ಯಾಕಂದರೆ ನೀನೇ ಮುಖಾಮುಖಿಯಾಗಿ ನನಗೆ ಹಾಗೆಯೇ ಅರಿಕೆ ಮಾಡಿದಿ; ಆದ ಕಾರಣ 40 ದಿವಸಗಳೊಳಗೆ ಲೆಖ್ಖ ಒಪ್ಪಿಸುವದಕ್ಕೋಸ್ಕರ ನಿನ್ನನ್ನು ಕ್ರಿಸ್ತನ ನ್ಯಾಯವಿಚಾರಣಸ್ಥಾನಕ್ಕೆ ಕರೆಸುತ್ತೇನೆ.—ಚಿತೆಯ ಜ್ವಾಲೆಗಳು ಧಗಧಗಿಸುವಲ್ಲಿ ಅವನು—ಕರ್ತನೇ, ಅಂಧಕಾರವು ಎಷ್ಟು ಕಾಲದ ವರೆಗೆ ಈ ದೇಶವನ್ನು ಕವಿದು ಕೊಂಡಿರುವದು? ಜನರ ಈ ಕ್ರೌರ್ಯವನ್ನು ಎಷ್ಟರ ವರೆಗೆ ಸಹಿಸುತ್ತಿರುವಿ? ಯೇಸುನಾಥನೇ, ನನ್ನಾತ್ಮವನ್ನಂಗೀಕರಿಸು! ಎಂದು, ಬೇಡುವದು ಕೇಳಿಸಿತು. ಅವನರ್ಧವು ಸುಟ್ಟು ಹೋದಾಗ ನೋಡಿದವರಲ್ಲೊಬ್ಬನು—ನಿನ್ನ ಬೋಧನೆಯನ್ನು ನೀನು, ಸತ್ಯವೆಂದು, ನಂಬಿ ಕೊಂಡರೆ ಒಂದು ಸಂಜ್ಞೆ ಕೊಡು! ಎಂತ, ಅವನ ಕಡೆಗೆ ಕೂಗಲು, ಅವನು 3 ಬೆರಳನ್ನು ಮೇಲೆತ್ತಿ, ತೀರುವ ಮಟ್ಟಿಗೂ ಅವನ್ನು ಕೆಳಗೆ ಬಿಡಲಿಲ್ಲ. ಅವನ ರಕ್ತಸಾಕ್ಷಿಮರಣದಿಂದ ಪ್ರಜೆ ಎಲ್ಲವೂ ತೆಪ್ಪರಿಸಿ, ನಿದ್ರೆ ತಿಳಿದಂತಾಯಿತು; ಹಮಿಲ್ತನನಂಥವನೇ ಸತ್ತ ಬೋಧನೆಯು ಎಂಥಾದ್ದೆಂಬ ಪ್ರಶ್ನೆಯೂ ವಿಚಾರವೂ

1) 455, 456ನೇ ಪಾನು.

ಮಿಗಿಲಾಯಿತು. ಆದರೆ 40 ದಿವಸ ಕಳೆಯುವದಕ್ಕಿಂತ ಮುಂಚೆಯೇ ಕೆಂಬೆಲನೆಂಬ ಆ ಪ್ರೀಸ್ತನು ಹಮಿಲ್ತನನು ತನಗೆ ಹೇಳಿದ ಮಾತಿನ ಮಹಾ ಭೀತಿಯಿಂದ ಹುಚ್ಚನಾಗಿ, ಸತ್ತನು.

ತದನಂತರ ಪುನಃಸ್ಥಾಪನೆಯ ವಿಷಯದ ಆಶೆಯು ಎಷ್ಟು ಬೆಳೆಯಿತೋ, ಅಷ್ಟು ಹೆಚ್ಚು ರೋಷವು ಪ್ರೀಸ್ತರಲ್ಲಿ ಉದ್ಭವಿಸಿತು. ಹೀಗಿರಲಾಗಿ ಕ್ರಿ. ಶ. 1528ನೇ ವರುಷದಿಂದ 1540ನೇದರ ವರೆಗೆ ಸತ್ಸಾಕ್ಷಿಗಳದ್ದೊಂದು ದೊಡ್ಡ ಮೇಘವು[1] ಅಗ್ನಿ ಮರಣವನ್ನೈದಿತು.

ಕ್ರಿ. ಶ. 1539ನೇದರಲ್ಲಿ ಆ ಜೇಂಸ್ ಬೀತನೆಂಬವನು ಸತ್ತ ಹಿಂದೆ ಅವನ ದಾಯಾದ್ಯ ಬಂಧುವಾದ ದೇವಿದ್ ಬೀತನು ಪ್ರಧಾನಾಧ್ಯಕ್ಷತೆ ಹೊಂದಿ, ಅವನಿಗಿಂತ ಹೆಚ್ಚಾಗಿ ಸೌವಾರ್ತಿಕರನ್ನು ಹಿಂಸಿಸಲೆಸಗಿದನು. ಕ್ರಿ. ಶ. 1542ನೇದಕ್ಕೆ ಇವರಿಗೆ ಸ್ವಲ್ಪ ಉಪಶಮನವಾಯಿತು; ಹ್ಯಾಗೆಂದರೆ, ಅಂದಿನ ರಾಜನಾದ 5ನೇ ಜೇಂಸನು ಆ ಸಮಯದಲ್ಲಿ ಬೀತನಿಂದ ಪ್ರೇರಿತನಾಗಿ, ಇಂಗ್ಲಂದಿನ ರಾಜನಾದ ಆ 8ನೇ ಹೆನ್ರಿಯ ಒಬ್ಬ ಮಗಳನ್ನು, ವಿವಾಹಕ್ಕೆ ತಕ್ಕೊಳ್ಳಲೊಲ್ಲೆನೆಂದು, ವಿಸರ್ಜಿಸಿ, ಫ್ರಂಚು ದೇಶದ ಗೀಸೆಂಬ[2] ಆ ಕುಟುಂಬದವಳೊಬ್ಬಳಾದ ಮೇರಿ ಎಂಬವಳನ್ನು ಮದಿವೆ ಮಾಡಿ ಕೊಂಡದರಿಂದ 8ನೇ ಹೆನ್ರಿ ರಾಜನು ಶಿಟ್ಟಾಗಿ, ದಂಡಿನೊಡನೆ ಸ್ಕೋತ್ಲಂದಿನೊಳ ಹೊಗಲು, ಜೇಂಸ ರಾಜನು, ತನ್ನ ಕೆಳಗಿನ ಪ್ರಭುಗಳು ತಕ್ಕ ಸಹಾಯ ಗೇಯುವದಿಲ್ಲವೆಂತ, ಶೋಕ ಗೊಂಡು, ಬುದ್ಧಿಗೆಟ್ಟು, ಆ ವರುಷದಂತದಲ್ಲಿ ಮಡಿದನು. ಆಗ ಸ್ತ್ಯುವರ್ತಿನ ಮೇರಿ ಎಂಬ ಕುಮಾರಿಯು[3] 7 ದಿನದವಳು ಮಾತ್ರ. ಇಂತಿರಲಿಕ್ಕೆ, ದೇವಿದ್ ಬೀತನು, ಜೇಂಸ ರಾಜನು ತನ್ನನ್ನು, ರಾಜ್ಯದ ಕಾರ್ಯಭಾರಿ ಎಂತ, ನೇಮಿಸಿದನೆಂಬಂತೆ ತಾನು ಒಂದು ಸುಳ್ಳುಪತ್ರ ಕಲ್ಪಿಸಿ, ತೋರಿಸಲು, ಆ ಮೋಸವು ಆಢ್ಯ ಸ್ಥಿತಿಯವರಿಗೆ ತಿಳಿದು ಬಂತು; ಅದು ಕಾರಣ ಅಂದು 360 ಮಂದಿ ಆಢ್ಯರಾದ ಸೌವಾರ್ತಿಕ ಕ್ರೈಸ್ತರ ಮರಣವನ್ನಾದರೂ ನಿಶ್ಚಯಿಸಿ ಕೊಂಡಿದ್ದಂಥಾ ಬೀತನನ್ನು ಶಿರೆಗೆ ಗುರಿ ಮಾಡಿದರು. ಬಳಿಕ ಜೇಂಸ್ ಹಮಿಲ್ತನನೆಂಬ ಶ್ರೀಮಂತನು ರಾಜ್ಯಪರಿಪಾಲನಕ್ಕೆ ಬಂದನು; ಇವನು ಮನಃಪೂರ್ವಕವಾಗಿ ಸೌವಾರ್ತಿಕನಲ್ಲದಿದ್ದಾಗ್ಯೂ ತಾನು ಆ ಪತ್ರಿಕ್ ಹಮಿಲ್ತನನ[4] ಸಮೀಪದ ನೆಂಟನಾದರಿಂದಲೂ ಸುವಾರ್ತಾಬೋಧನೆಗೊಲಿಯುವ ಆಢ್ಯರ ಮುಖ್ಯನಾದ್ದರಿಂದಲೂ ಪುನಃಸ್ಥಾಪನಾಕಾರ್ಯಕ್ಕೆ ಸಲಹೆ ಕೊಡುವವನಾಗಿ, ಪಾರ್ಲಿಮೆಂತಿನವರನುಮತಿಯಿಂದ ದೇವವಾಕ್ಯದ ಇಂಗ್ಲಿಷ ಭಾಷಾಂತರವನ್ನು ವಿಸ್ತರಿಸ ಗೊಟ್ಟು, ಇಬ್ಬರು

1) ಎಬ್ರೀ. 12, 1. 2) 472ನೇ ಪಾನು. 3) 472ನೇ ಪಾನು. 4) 485ನೇ ಪಾನು.

ಸೌವಾರ್ತಿಕ ಬೋಧಕರನ್ನು, ತನ್ನ ಗೃಹಪ್ರಸಂಗಿಕರೆಂತ, ಇಟ್ಟು ಕೊಂಡು, ಸ್ಟ್ಯೂವರ್ತಿನ ಮೇರಿಗೂ 8ನೇ ಹೆನ್ರಿಯ ಮಗನಾದ ಆ ಎದ್ವರ್ದನಿಗೂ[1] ಒಮ್ಮೆ ವಿವಾಹವಾಗುವಂತೆ ಸವನಿಸುವವನಾದನು. ಆದರೆ ಪಾರ್ಲಿಮೆಂತಿನವರ ಒಪ್ಪಿಗೆಯ ಮೇಲೆ ವಿವಾಹಪತ್ರವು ಸಿದ್ಧವಾದಾಗಲೇ ತನ್ಮಧ್ಯ ಶೆರೆಯಿಂದ ಬಿಡುಗಡೆ ಹೊಂದಿದ್ದ ಆ ದೇವಿದ್ ಬೀತನಿಗೆ ಚಪಲನಾದ ಹಮಿಲ್ತನನ ಮನಸ್ಸನ್ನು ಆ ಗೀಸಿನವರ ಅಭಿಪ್ರಾಯಕ್ಕೆ ಒಳ ಶಿಕ್ಕಿಸಲನುವಾಯಿತು; ನಿಮ್ಮ ಸ್ವಕುಮಾರನು ಮೇರಿಗೆ ಮದುವೆಯಾಗಲಿ! ಎಂಬ ಭಾಷೆಯ ಆಶೆ ತೋರಿಸಿದ್ದರಿಂದ ಅಂಥಾ ಒಳ ಪಡಿಸೋಣವು ಕೈಗೂಡಿ ಬಂತು. ಬಳಿಕ ಹಮಿಲ್ತನನು ಸುವಾರ್ತಾಬೋಧನೆಯನ್ನು ಬಹಿರಂಗದಲ್ಲತಿಗಳೆದು, ತನ್ನಿಬ್ಬರು ಸೌವಾರ್ತಿಕ ಗೃಹಪ್ರಸಂಗಿಕರನ್ನು ತಳ್ಳಿದನು; ಅದಲ್ಲದೆ ಆ ವಿವಾಹಪತ್ರವು ರದ್ದಾಯಿತು. ಆಗ ಆ ಪ್ರಧಾನಾಧ್ಯಕ್ಷನು ಸೌವಾರ್ತಿಕ ಕ್ರೈಸ್ತರನ್ನು ತಿರಿಗಿ ಹಿಂಸಿಸುವವನಾದನು.

ಆದರೆ ಅದೇ ಸಮಯಕ್ಕೆ ಜೊರ್ಜ್ ವಿಷರ್ತನೆಂಬ ಒಬ್ಬ ಹೊಸ ಪುನಃಸ್ಥಾಪಕನು ಸ್ಕೋತ್ಲಂದಿನಲ್ಲಿ ಎದ್ದನು. ಅವನು ಒಬ್ಬ ಧನಿಕನಾದ ಭೂಮಿವಾಳನ ಮಗನಾಗಿದ್ದು, ಇಂಗ್ಲಂದಿನ ಕೇಂಬ್ರಿಜು ಪಟ್ಣದ ಮಹಾ ವಿದ್ಯಾಶಾಲೆಯಲ್ಲಿ[2] ದೇವಜ್ಞಾನದರ್ಶನವ ಕಲಿತು, ಇನ್ನೂ 8ನೇ ಹೆನ್ರಿ ರಾಜನ ಕಾಲಕ್ಕೆ ಕ್ರಿ. ಶ. 1544ನೇ ವರುಷ ಸ್ಕೋತ್ಲಂದಿಗೆ ಹಿಂದಿರುಗಿ, ಸರ್ವತ್ರ ಪ್ರಜೆಯ ಸ್ವೇಚ್ಛಾಗಮನಗಳಲ್ಲಿ ಭಯವಳಿಯದೆ ಸುವಾರ್ತೆ ಸಾರಲಿಕ್ಕೆ ಹತ್ತಿದನು; ಅನೇಕಾನೇಕ ಜನರು ಅವನ ಸತ್ಪ್ರಸಂಗಗಳಿಂದ ಮಾನಸಾಂತರ ಗೊಳ್ಳುತ್ತಾ ಬಂದರು. ಒಂದು ಸಾಂಕ್ರಾಮಿಕ ವಿಷರೋಗವು ಬಂದ ದಂದೀ ಎಂಬ ಪಟ್ಣದಲ್ಲಿ ಅವನ ವೃತ್ತಿಯು ಹೆಚ್ಚಾಗಿ ಸಾಗುತ್ತಿತ್ತು. ಅಂದು ದೇವಿದ್ ಬೀತನು ಅವನನ್ನು ಕೊಲ್ಲುವದಕ್ಕೆ ಗುಪ್ತಮಾರಕರನ್ನು ಕಳುಹಿಸಿದನು; ಆದರೆ ವಿಷರ್ತನಲ್ಲಿರುವ ಕಾಲಜ್ಞಾನಭಾವದ ದೆಸೆಯಿಂದ ಅವನು ಎರಡು ಸಾರಿ ಅವರಿಗೆ ತಪ್ಪಿಸಿ ಕೊಂಡನು. ಹ್ಯಾಗಂದರೆ, ಅವನೊಮ್ಮೆ ತಾನು ಪ್ರಸಂಗಿಸಿದ್ದ ಪಟ್ಣದ ಬಾಗಿಲಿನಿಂದ ಹೊರಡುತ್ತಿರಲು, ಅವನು ದಾರಿಯಲ್ಲಿ ನೆರೆದಿದ್ದ ಸಮೂಹದೊಳಗಿನ ಒಬ್ಬಾನೊಬ್ಬ ಮನುಷ್ಯನ ಕೈ ಹಿಡಿದು, ತಮ್ಮನೇ, ಏನು ಮಾಡುವದಕ್ಕಿದ್ದಿ? ಎಂತ, ಕೇಳುವಲ್ಲಿ ಆ ಮನುಷ್ಯನ ಅಂಗಿಯೊಳಗೆ ಒಂದು ಕಠಾರಿಯು ನೋಡಲಿಕ್ಕೆ ಶಿಕ್ಕಿತು; ಅದ್ಯಾತಕ್ಕೆ? ಎಂದು, ವಿಚಾರಿಸುತ್ತಲೇ ಅವನು, ಬೀತನು ವಿಷರ್ತನನ್ನು ಕೊಲ್ಲುವದಕ್ಕೆ ತನ್ನನ್ನು ಲಂಚ ಕೊಟ್ಟು ಕಳುಹಿಸಿದ್ಧಾನೆಂತ, ಅರುಹಿದನು. ಮತ್ತೊಮ್ಮೆ ಮರಣಸಂಕಟದಲ್ಲಿ ಬಿದ್ದಿರುವವನೊಬ್ಬ ಸ್ನೇಹಿತನಿಂದೆಂಬಂತೆ ಒಂದು ಪತ್ರಿಕೆಯು ವಿಷರ್ತನ ಬಳಿಗೆ ಬಂದು ಮುಟ್ಟಲು, ಅ

1) 454ನೇ ಪಾನು. 2) 452ನೇ ಪಾನು.

ವನು ಆ ಸ್ನೇಹಿತನ ಭೇಟಿಗೆ ಹೊರಟು, ದಾರಿಯಲ್ಲಿ ನಡೆಯುವಾಗ ಫಕ್ಕನೆ ನಿಂತು, ತನ್ನ ಜೊತೆಗಾರರಿಗೆ— ಈ ಪ್ರಯಾಣದಲ್ಲಿ ಮುಂದರಿಸ ಬಾರದೆಂದು, ದೇವರು ನನಗೆ ತಿಳಿಸಿದ್ಧಾನೆ; ಅತ್ತಣ ದಿಣ್ಣೆಯನ್ನು ಹತ್ತಿ, ಅಲ್ಲಿ ಏನೆಂತ, ವಿಚಾರಿಸಿ, ಬನ್ನಿರೆಂದು, ಹೇಳಿದನು. ಅವರು ಹೋಗಿ, ನೋಡಲು, 60 ಮಂದಿ ಗುಪ್ತಮಾರಕರು ಅಲ್ಲಿ ಕಾಣ ಬಂದರು. ಆದರೆ ಆ ಸುಳ್ಳುಪತ್ರವನ್ನು ಬರೆದು ಕಳುಹಿಸಿದವನು ಬೀತನೇ.

ಸ್ವಲ್ಪ ಕಾಲಕ್ಕೀಚೆ ವಿಷರ್ತನು ತನ್ನ ಮಿತ್ರರ ಸಮಕ್ಷದಲ್ಲಿ— ನನ್ನ ದೇಹಾಂತವು ಸಮೀಪವಾಯಿತೆಂತ, ನಿಶ್ಚಯ ಬಲ್ಲೆನು; ಆದರೂ ಅಪೊಸ್ತಲರ ಕಾಲಕ್ಕೀಚೆ ಸುವಾರ್ತೆಯು ಯಾವ ಯಾವ ದೇಶದಲ್ಲಿ ಅಧಿಕವಾಗಿ ಪ್ರಜ್ವಲಿಸಿತೋ, ಆಯಾ ದೇಶದಲ್ಲಿ ಆದಂತೆಯೇ ಸ್ಕೋತ್ಲಂದಿನಲ್ಲಿ ಸಹ ಆಗುವದೆಂದು, ಪ್ರವಾದಿಸಿದ್ದು ಒದಗಿತು. ಕೊಂಚ ದಿವಸ ಹೋದ ತರುವಾಯ ಬೀತನ ಪಕ್ಷಕರ ಕಪಟೋಪಾಯದಿಂದಲೂ ವಚನಭಂಗದಿಂದಲೂ ಅವನು ಆ ಪ್ರಧಾನಾಧ್ಯಕ್ಷನ ಕೈಗೆ ಶಿಕ್ಕಿದ ಮೇಲೆ ಇವನು ಅವನಿಗೆ ಅಗ್ನಿಮರಣಾಜ್ಞೆ ನಿರ್ಣಯಿಸಿದನು. ಜೇಂಸ್ ಹಮಿಲ್ತನನು ಅದು ಕೇಳಿ—ಹಾಗಾಗ ಬಾರದು, ವಿಷರ್ತನ ರಕ್ತವನ್ನು ಕುರಿತ ವಿಚಾರಣವು ನಿಮ್ಮ ಮೇಲೆ ಬರುವದೆಂದು, ಬೀತನಿಗೆ ತೀವ್ರವಾಗಿ ಎಚ್ಚರಿಸಿದಾಗ್ಯೂ ಇವನು ಅದನ್ನು ಲಕ್ಷಿಸದೆ, ಕ್ರಿ. ಶ. 1546ನೇ ವರುಷದ ಮಾರ್ಚು ತಿಂಗಳಿನ ಪ್ರಥಮ ದಿನದಲ್ಲಿ (ಲುಥರನು ಸತ್ತು 10 ದಿನ ಕಳೆದನಂತರ) ಸೇಂತ್ ಅಂದ್ರೂಜೆಂಬ ಪಟ್ಣದೊಳಗೆ ತನ್ನಾಜ್ಞೆ ತೀರಿಸಿ ಬಿಟ್ಟನು. ಹಮಿಲ್ತನನು ಚಿತೆಯಲ್ಲಿರುವಾಗ ತನ್ನನ್ನು ಕಟ್ಟುವ ಮಾರಕನಿಗೆ ಕ್ಷಮಿಸಿದ್ಧೇನೆಂಬ ಸಂಜ್ಞೆಗಾಗಿ ಮುದ್ದಿಟ್ಟನು. ಅಷ್ಟರಲ್ಲಿ ಆ ಪ್ರಧಾನಾಧ್ಯಕ್ಷನು ಹತ್ತರದಲ್ಲಿರುವ ತನ್ನ ಕೋಟೆಯದೊಂದು ಕಿಟಕೆಯಲ್ಲಿ ನಿಂತು ಕೊಂಡು, ಜ್ವಲನೋತ್ಸವವನ್ನು ನೋಡುತ್ತಿದ್ದನು. ಚಿತೆ ಹೊತ್ತಿಸುವದಕ್ಕಿಟ್ಟ ಕರೀ ಮದ್ದು ಸುಟ್ಟಾಗ ವಿಷರ್ತನು ಪ್ರಜೆಯ ಮುಂದೆ ದೊಡ್ಡ ಸ್ವರದಿಂದ ಕೂಗಿದ್ದೇನೆಂದರೆ— ಈ ಜ್ವಾಲೆಯು ನನ್ನ ದೇಹವನ್ನು ಕರುಕು ಮಾಡಿದ್ದರೂ ನನ್ನಾತ್ಮಕ್ಕೆ ಬೆದರಿಸ ಕೂಡಲಿಲ್ಲ. ಆದರೆ ಆ ಎತ್ತರ ಸ್ಥಳದಲ್ಲಿದ್ದು ಗರ್ವದಿಂದ ಕೆಳಗೆ ನೋಡಿ ನನ್ನ ಸಂಕಟಕ್ಕನುವೋದಿಸುವಂಥ ಅವನು (ಅಂದರೆ ಬೀತನು) ಸ್ವಲ್ಪ ದಿವಸಗಳ ಮೇಲೆ ಈಗ ನಿಂತಿರುವ ಸ್ಥಳದಲ್ಲಿಯೇ ಈಗಿನ ಗೌರವಕ್ಕೆ ಪ್ರತಿಕೂಲವಾದಷ್ಟೇ ಅಪಮಾನರೂಪದಲ್ಲಿ ಕಾಣುವನು!—ತರುವಾಯ ಜ್ವಾಲೆಗಳು ತನ್ನನ್ನು ನುಂಗುವಲ್ಲಿ ಅವನು—ಜಗದ್ರಕ್ಷಕನೇ, ನನಗೆ ಕರುಣಿಸು! ಪಿತನೇ, ನಿನ್ನ ಹಸ್ತಕ್ಕೆ ನನ್ನಾತ್ಮವನ್ನೊಪ್ಪಿಸುತ್ತೇನೆಂದು, ಬೇಡಿ, ತನ್ನ ಕರ್ತನ ಆನಂದಪದವಿಗೆ ಹೋದನು.

ಬೀತ ಪ್ರಧಾನಾಧ್ಯಕ್ಷನು ಅಭವ್ಯವಾದದೆಂಬಂತೆ ತೋರುವಂಥ ಆ ರಕ್ತಸಾಕ್ಷಿಯ ಪ್ರವಾದನೆಗೆ ನಕ್ಕನಷ್ಟೇ. ಆದರೆ ಸಾಧಾರಣ ಪ್ರಜೆಯು ಆದ ಕ್ರೌರ್ಯ

ಕ್ಕೋಸ್ಕರ ಬಹಳ ಶಿಟ್ಟು ಗೊಂಡದ್ದಲ್ಲದೆ ಆಧ್ಯರು, ಬೀತನ ಹಿಂಸಾಕಾರ್ಯವು ತೀರ ಬೇಕೆಂದು, ಬಹಿರಂಗದಲ್ಲಿಯೂ ಪ್ರಚಂಡ ರೀತಿಯಿಂದ ನುಡಿಯುವವರಾಗಲಿಕ್ಕೆ, ಬೀತನು ಬೆಚ್ಚಿ, ತನ್ನ ಕೋಟೆಯನ್ನು ಹೆಚ್ಚು ಘಟ್ಟಿ ಮಾಡುವ ಕಾರಣ ಕಾಮಾಟಿಗರನ್ನು ತರಿಸಿರಿಸಿದನು. ಅಷ್ಟರಲ್ಲಿ 12 ಮಂದಿ ಆಧ್ಯರು—ವಿಷರ್ತನನ್ನು ಕೊಂದದ್ದು ರಾಜ್ಯಪರಿಪಾಲಕನ ಆಜ್ಞೆಗೆ ವಿರೋಧವೇ[1] ಆದ್ದರಿಂದ ಅದು ಕೊಲೆಯಲ್ಲದೆ ಬೇರೊಂದಲ್ಲ, ಇದಕ್ಕಾಗಿ ಬೀತನನ್ನು ಕೊಲ್ಲುವದೇ ನ್ಯಾಯವೆಂದು, ಪರ್ಯಾಲೋಚಿಸಿ, ಮೇ ತಿಂಗಳಿನ 27ನೇ ದಿನದ ರಾತ್ರಿಯಲ್ಲಿ ಕಾಮಾಟಿಗರು ಮುಚ್ಚದಿದ್ದ ಒಂದು ಬಾಗಲಿನಿಂದ ಕೋಟೆಗೆ ನುಗ್ಗಿ, ಅವನು ಮಲಗಿರುವ ಕೋಣೆಗೆ ಹೊಕ್ಕ ಬಳಿಕ ಅವರಲ್ಲೊಬ್ಬನು ಅವನನ್ನು ಕೊಲ್ಲುವದಕ್ಕನುವಾಗಲು, ಜೇಂಸ್ ಮೆಲ್ವಿಲನೆಂಬ ಮತ್ತೊಬ್ಬನು—ಇಲ್ಲಿ ಕೊಲೆ ಮಾಡುವ ಕಾರ್ಯವು ಆಗುವದಿಲ್ಲ; ನ್ಯಾಯ ತೀರಿಸುವದೇ ನಮ್ಮ ಕಾರ್ಯವು! ಎಂತ, ಹೇಳುವ ಮಾತಿನಿಂದ ಅವನನ್ನು ತಡೆದು, ಆ ಪ್ರಧಾನಾಧ್ಯಕ್ಷನಿಗೆ—ದ್ವೇಷವಾಗಲಿ ಭಯವಾಗಲಿ ಲೋಭವಾಗಲಿ ನಮ್ಮನ್ನು ಕರಕೊಂಡು ಬಂದದ್ದಲ್ಲ, ನೀನು ದೇವರ ಆ ಮಾನನೀಯ ಸಾಕ್ಷಿಯ ರಕ್ತವನ್ನು ಚೆಲ್ಲಿ ಸುವಾರ್ತೆಯ ಕಡು ಶತ್ರುವಾಗಿದ್ದದ್ದೇ ನಮ್ಮನ್ನು ಕರತಂದಿದೆ; ಈಗ ದೇವರ ಮುಂದೆ ಮಾನಸಾಂತರ ಪಟ್ಟು, ಪ್ರಾರ್ಥಿಸು! ಎಂದು, ಗಾಂಭೀರ್ಯದೊಡನೆ ಹೇಳಲು, ಇವನು ಪ್ರಾರ್ಥನೆಯ ಚಿಂತೆ ಇಲ್ಲದೆ, ಕಳ್ಳರಿಗೆ ತಕ್ಕಂಥ ದಿಗಿಲಿನಿಂದ—ನಾನು ಪ್ರೀಸ್ತನೇ! ನಾನು ಪ್ರೀಸ್ತನೆಂತ, ಚಿಂತಿಸಿ ಕೊಳ್ಳಿರಿ! ಎಂದು, ಒದರಿದನಷ್ಟೇ. ಆಗ ಕತ್ತಿಯ ಕೆಲವು ಪೆಟ್ಟುಗಳು ಆ ವ್ಯಾಘ್ರೋಪಮನಾದ ನೀಚನನ್ನು ಪರಕ್ಕೆ ಕಳುಹಿದವು. ಅವನ ಮೇಲಾಳುಗಳು ಪಟ್ಣದೊಳಗೆ ಓಡಿ, ಗುಲ್ಲನ್ನೆಬ್ಬಿಸಿದ ಮೇಲೆ ಪ್ರಜೆಯು ಕೋಟೆಗೆ ಬಂದು, ಪ್ರಧಾನಾಧ್ಯಕ್ಷನನ್ನು ನೋಡ ಬೇಕೆಂದಿತು. ಅಂದು ಆ 12 ಮಂದಿ ಆಧ್ಯರು ಎದುರು ಗೊಂಡ ಕಿಟಕಿಯಲ್ಲಿ ಆ ಹೆಣವನ್ನು ನಿಲ್ಲಿಸಿದರು. ಪ್ರಜೆಯವರು ಅದನ್ನಲ್ಲಿ ನೋಡಿದ ಕ್ಷಣವೇ ವಿಷರ್ತನ ಪ್ರವಾದನೆ ನೆನಸಿ, ಭಯಭರಿತರಾದರು; ಯಾಕಂದರೆ, ಆ ಕಿಟಕಿಯು ಬೀತನು ವಿಷರ್ತನ ಮರಣವನ್ನು ದೃಷ್ಟಿಸುತ್ತಿದ್ದದ್ದೇ! ಹೀಗಿರಲಾಗಿ, ಆ ಪ್ರಜೆಯು ಧ್ಯಾನದೊಡನೆ ಸುಮ್ಮನೆಯೇ ಮನೆಗೆ ತಿರಿಗಿತು.

ತರುವಾಯ ವಿಷರ್ತನ ಪ್ರವಾದನೆಯಂತೆ[2] ಸ್ಕೋತ್ಲಂದಿನಲ್ಲಿ ಸೌವಾರ್ತಿಕರ ಸಂಖ್ಯೆಯು ಹೆಚ್ಚುತ್ತಾ ಬಂತು. ವಿಷರ್ತನ ಮರಣದಿತ್ತ ಮುಖ್ಯವಾಗಿ ಜೊನ್ ನೊಕ್ಸನೆಂಬ ಅವನ ಪ್ರಾಣಗೆಳೆಯನೂ ಶಿಷ್ಯನೂ ಆಗಿದ್ದಂಥವನು ಸುವಾರ್ತಾವಿಸ್ತರಣದಿಂದ ವಿರಾಜಿಸಿದನು; ಅವನು ಪ್ರಸಂಗಿಕೋದ್ಯೋಗಿಯು. ಅವನು ವಿಶ್ವಾ

1) 488ನೇ ಪಾನು.  2) 488ನೇ ಪಾನು.

ಸಶಾಲಿಯಾದ್ದು ಹೊರ್ತು ಒಬ್ಬ ಮನುಷ್ಯನ ಮುಖಕ್ಕೂ ಎಂದೂ ಹೆದರದ ಘಟ್ಟಿಗನು. ಕ್ರಿ. ಶ. 1547ನೇ ಅಬ್ದ (ಇಂಗ್ಲಂದಿನ 8ನೇ ಹೆನ್ರಿಯು ಸತ್ತ ಅಬ್ದವೇ) ಅವನು ಸೇಂತ್ ಅಂದ್ರೂಜ್ ಎಂಬ ಆ ಪಟ್ಣದಲ್ಲಿ[1] ದೇವಜ್ಞಾನಪಂಡಿತನಾಗಿ, ಅಲ್ಲಿ ಮೊದಲಿನ ಸರ್ತಿ ಬಹಿರಂಗದಲ್ಲಿ ಪರಿಶುದ್ಧ ರಾತ್ರಿಭೋಜನವನ್ನು ಉಭಯ ಸಾಹಿತ್ಯಗಳೊಡನೆ ಆಚರಿಸುವವನಾದನು. ಬೀತನ ತಂಟೆ ತೀರಿಸಿದ ಆಧ್ಯರು ಆ ಪಟ್ಣದಲ್ಲಿ ಉಳು ಕೊಂಡಿದ್ದರು; ಅದಲ್ಲದೆ ಅದರಲ್ಲಿಯ ಹೆಚ್ಚು ಜನರು ಸೌವಾರ್ತಿಕ ಕ್ರೈಸ್ತರಾಗಿದ್ದರು. ಹೀಗಿರುವದರಿಂದ ಜೇಂಸ್ ಹಮಿಲ್ತನ ಪ್ರಭು ಒಂದು ಫ್ರುಂಚ ನೌಬಲದೊಡನೆ ಆ ಪಟ್ಣಕ್ಕೆ ಮುತ್ತುವವನಾದನು. ಅದೇ ಸಮಯ ಇಂಗ್ಲಿಷರು ಆ ವಿವಾಹಪತ್ರ ಭಿನ್ನವಾದ್ದಕ್ಕೋಸ್ಕರ[2] ಸ್ಕೋತ್ಲಂದಿನಲ್ಲಿ ಅಭಿಯೋಗ ಮಾಡಿದರು. ಹಮಿಲ್ತನನು ಸೇಂತ್ ಅಂದ್ರೂಜಿನವರನ್ನು ಗೆಲ್ಲಲು, ಇವರು, ನಮ್ಮನ್ನು ಫ್ರುಂಚಿಗೊಯಿದು ಬಿಡಿಸಿ ಕಳುಹಿರೆಂತ, ಬೇಡಿ ಕೊಂಡ ಕೌಲಿಗಿಳಿದರು. ಆದರೆ ಫ್ರುಂಚರು ಅವರನ್ನು ತಮ್ಮ ದೇಶಕ್ಕೆ ತಕ್ಕೊಂಡು ಹೋಗಿ, ಕೌಲು ತಪ್ಪಿಸಿ, ಹಸ್ತಪ್ರೇರಕನಾವೆಗಳ ವಾಚಾತೀತ ಪೀಡೆಯುಳ್ಳ ಕೆಲಸಕ್ಕೆ ಒಡ್ಡಿದರು. ನೊಕ್ಸನು ಸಹ 19 ತಿಂಗಳು ಆ ಕೆಲಸ ಗೈಯುತ್ತಿರಲು, ತನಗೆ ಕಠಿಣ ರೋಗ ಬಂದಿದ್ದರೂ ಜತೇ ತಾಪಿಗಳಿಗೆ ಆತ್ಮೋಪಶಮನ ಕೊಡ ಶಕ್ತನಾಗಿರುತ್ತಿದ್ದನು. ಕ್ರಿ. ಶ. 1549ನೇ ಅಬ್ದ ಇಂಗ್ಲಿಷರು ಸ್ಕೋತರ ಮತ್ತು ಫ್ರುಂಚರ ಸಂಗಡ ತಿರಿಗಿ ಸ್ನೇಹ ಕಟ್ಟಿ ಕೊಂಡ ಬಳಿಕ ಆ ಹಸ್ತಪ್ರೇರಕನಾವೆಗಳವರಿಗೆ ಬಿಡುಗಡೆ ಪ್ರಾಪಿಸಿದಾಗ ನೊಕ್ಸನು ಇಂಗ್ಲಂದಿಗೆ ಹೋಗಿ, ಆ 6ನೇ ಎದ್ವರ್ದ ರಾಜನ ಗೃಹಪ್ರಸಂಗಿಕನಾಗಿ, ರಕ್ತದ ಮೇರಿ ಎಂಬವಳು ಸಿಂಹಾಸನಾರೂಢಳಾದಂದು ಕ್ರಿ. ಶ. 1553ನೇ ಅಬ್ದ ಅವಳ ಬಾಧೆಯ ದೆಸೆಯಿಂದ ಸಾವಿರಾರು ಜತೆಕ್ರೈಸ್ತರ ಸಹಿತ ಪಲಾಯನ ತೆಗೆದು, ಸ್ವೀತ್ಸೆರ್ಲಂದಿಗೆ ಹೋಗಿ, ಗೆನ್ಫ ಪಟ್ಣದಲ್ಲುಳಿದು, ತನ್ನ ಸಹವಾಸದಲ್ಲಿ ಬಂದಿದ್ದವರ ಪ್ರಸಂಗಿಕನಾಗಿ, ತನಗಿಂತ ಪ್ರಾಯದಲ್ಲಿ 4 ವರುಷಕ್ಕೆ ಚಿಕ್ಕವನಾದ ಆ ಕಲ್ವೀನನ ಸಂಗಡ ತನ್ನ ತಂದೆ ಎಂಬಂತೆ ಪರಿಚರ್ಯವುಳ್ಳವನಾಗಿ, ಕ್ರಿ. ಶ. 1555ನೇ ಅಬ್ದ 5ನೇ ಜೇಂಸ ರಾಜನ ವಿಧವೆಯೂ ಸ್ಕೂವರ್ತಿನ ಮೇರಿಯ ತಾಯಿಯೂ ಆದಂಥ ಗೀಸಿನ ಮೇರಿಯು[3] ಸ್ಕೋತ್ಲಂದಿನಲ್ಲಿ ರಾಜ್ಯಪರಿಪಾಲನವನ್ನು ಆಕ್ರಮಿಸಿ ಕೊಂಡಾಗ ಸ್ವದೇಶಕ್ಕೆ ಪುನರಾಗಮಿಸಿದನು. ಆ ಗೀಸಿನ ಮೇರಿಯು, ಸಮಯ ಬಂದ ಹಾಗೆ, ಒಮ್ಮೆ ಸೌವಾರ್ತಿಕರಿಗೆ ಮತ್ತೊಮ್ಮೆ ಪಪ್ಪಕರಿಗೆ ಆಸ್ಪದ ಕೊಡುವಂಥವಳು; ಒಂದಾನೊಂದು ದಿನ ಅವಳು, ತಾನು 10,000 ಯುದ್ಧಸ್ಥರದೊಂದು ಸೇನೆಗಿಂತಲೂ ಅಧಿಕವಾಗಿ ನೊಕ್ಸನ ಪ್ರಾರ್ಥನೆಗಳಿಗೆ ಅಂಜುತ್ತೇನೆಂತ, ಹೇಳಿದಳು. ಹೀಗಿರಲಾಗಿ,

1) 488ನೇ ಪಾನು. 2) 487ನೇ ಪಾನು. 3) 486ನೇ ಪಾನು.

ನೊಕ್ಸನು ಸ್ವಲ್ಪ ಕಾಲದ ಮೇಲೆ ತಿರಿಗಿ ಗೆನ್ಫಿಗೆ ಓಡಿ ಹೋಗ ಬೇಕಾಯಿತು; ಆ ಕಾಲ ಅವನು ತಾನು ಸ್ಕೋತ್ಲಂದಿನಲ್ಲಿ ಶತ್ರುಗಳಿಗೆ ಶಿಕ್ಕದಿರಲಿಕ್ಕೆ, ಅವರು ಅವನದೊಂದು ರೂಪವನ್ನು ಚಿತೆಗೆ ಹಾಕಿ, ಸುಟ್ಟರು[1]. ಕ್ರಿ. ಶ. 1557ನೇ ವರುಷ ಸ್ಕೋತ್ಲಂದಿನ ಆಧ್ಯರು ಸುವಾರ್ತಾರಕ್ಷಣಕ್ಕಾಗಿ ತಮ್ಮೊಳಗೆ ಮೊದಲಿನ ಕೊವೆನಂತ್ ಅಂದರೆ ಒಡಂಬಡಿಕೆ ಸ್ಥಾಪಿಸಿ ಕೊಂಡರು; ಆ ತರುವಾಯ ಕ್ರಿ. ಶ. 1559ನೇದರಲ್ಲಿ, ತನ್ನ ಜೀವನದ 54ನೇದರಲ್ಲಿ, ನೊಕ್ಸನು ತನ್ನ ದೇಶದ ಸಹೋದರಕ್ರೈಸ್ತರ ಬಳಿಗೆ ಮರಳಲನುಕೂಲವಾಯಿತು. ಗೀಸಿನ ಮೇರಿಯು, ಅವನನ್ನು ರಾಜ್ಯದಲ್ಲಿ ಅನಾಥನೆಂದೆಣಿಸ[2] ಬೇಕೆಂತ, ಆಜ್ಞೆ ಹೊರಡಿಸಿದರೂ ಅವನು ಅದಕ್ಕೆ ಚಿಂತಿಸದೆ, ಆಧ್ಯರ ಆಶ್ರಯ ಪಡೆದು, ಎಲ್ಲೆಲ್ಲಿಯೂ ಸುವಾರ್ತೆ ಪ್ರಸಂಗಿಸುತ್ತಾ ಇದ್ದನು. ಸಾಧಾರಣ ಪ್ರಜೆಯು ತಾನೇ ಮಿಸ್ಸಯಾಗ ಮೂರ್ತಿಪೂಜೆ ಮುಂತಾದ ಪಪ್ಪಕತ್ವಾರ್ಥದ ನಿವಾರಣ ಕೇಳಿ ಕೊಳ್ಳುವಂತಾಯಿತು; ಪ್ರಭುಗಳು ಪಪ್ಪಕತ್ವದ ಸಂಜ್ಞೆಗಳನ್ನು ದೇವಾಲಯಗಳೊಳಗಿಂದ ಹೊರಗೆ ತೆಗೆಸುವವರಾದರು; ಆಗಿಂದಾಗ ಪ್ರಜೆಯಲ್ಲಿ ಕೆಲವರು, ಪಪ್ಪಕ ಮಠಗಳು ದುಷ್ಟತ್ವದ ಗುಹೆಗಳೆಂದು, ದೀರ್ಘಾನುಭವದ ಮೇಲೆ ತಿಳಿದಿದ್ದು ಅವನ್ನು ಕೆಡವಿ ಹಾಕಿದ್ದು ಅನುಚಿತ ಕಾರ್ಯವಾದರೂ ಪಪ್ಪಕ ಪ್ರೀಸ್ತರಿಂದ ಅವಿನಯವನ್ನೇ ಕಲಿತಿದ್ದಂಥವರಿಂದ ಅದಾದದು ಚೋದ್ಯಕರವೋ? ಅಷ್ಟರಲ್ಲಿ ಗೀಸಿನ ಮೇರಿಯು ತನ್ನ ಅಳಿಯನಾದ ಫ್ರುಂಚಿನ 2ನೇ ಫ್ರುಂಚ ರಾಜನ ಧನಜನಸಹಾಯದ ದಾರಿ ನೋಡಿ, ಸೌವಾರ್ತಿಕ ಮತಾಚಾರವನ್ನು ಹ್ಯಾಗೂ ಅಡಗಿಸ ತೊಡಗಲಿಕ್ಕೆ, ದೇಶದ ಸೌವಾರ್ತಿಕರಾದ ಆಧ್ಯರು, ರಾಜ್ಯಪರಿಪಾಲಕಳಿಂದ ತಮ್ಮ ಮತಾಚಾರಕ್ಕೆ ತಿರಿ ತಿರಿಗಿ ಕೇವಲ ಅಭ್ಯಂತರವಾಗುತ್ತದೆಂದು, ತಮ್ಮ ಸ್ಥಿತಿಯ ಸ್ವಾತಂತ್ರ್ಯವನ್ನು ಪ್ರಯೋಗಿಸಿ, ಅದರ ಪ್ರಕಾರ ಇನ್ನು ಅದೇ ವರುಷ ಅವಳ ಅಧಿಕಾರವ ತೆಗೆದು, ಅವಳ ಮಗಳೂ 2ನೇ ಫ್ರುಂಚ ರಾಜನ ಹೆಂಡತಿಯೂ ಆದ ಸ್ಟ್ಯೂವರ್ತಿನ ಮೇರಿಯ[3] ಹೆಸರಿನಲ್ಲಿ ಒಂದು ಮಂತ್ರಿಸಭೆಯನ್ನಿಟ್ಟರು. ಗೀಸಿನ ಮೇರಿಯು ಯುದ್ಧವೆಸಗಿದರೂ ಮರುವರುಷ ರಾಜ್ಯಕಾರ್ಯಗಳ ಕ್ರಮೀಕರಣಕ್ಕೋಸ್ಕರ ವಿಶೇಷ ಸ್ವತಂತ್ರವುಳ್ಳಂಥಾದೊಂದು ಪಾರ್ಲಿಮೆಂತು ನಿರ್ಮಿತವಾದದಕ್ಕೆ ಅವಳು ಶೇರ ಬೇಕಾಯಿತು. ಆಗ ಸೌವಾರ್ತಿಕರು ಎದಿನ್ಬರ್ಗ್ಂಬ ರಾಜಧಾನಿಯಲ್ಲಿ ಒಂದು ಮಹಾ ದೇವಸ್ತುತಿಯ ಹಬ್ಬವನ್ನಾರಂಭಿಸಿದರು. ತದನಂತರ ಆ ಪಾರ್ಲಿಮೆಂತಿನವರ ಅಪ್ಪಣೆಯ ಮೇಲೆ ನೊಕ್ಸ ಮೊದಲಾದ ಕೆಲವರು ಬೋಧಕರು ಸ್ಕೋತಿಕ ವಿಶ್ವಾಸಪ್ರಮಾಣವನ್ನು ದೇವವಾಕ್ಯಕ್ಕನುಸಾರ 25 ಸೂ

1) 381, 388, 426, 473ನೇ ಪಾನು. 2) 425ನೇ ಪಾನು ನೋಡು. 3) 472, 486, 487, 490ನೇ ಪಾನುಗಳು.

ತ್ರಗಳಾಗಿ ಪ್ರಬಂಧಿಸಿ, ಪಾರ್ಲಿಮೆಂತಿನವರ ಒಪ್ಪಿಗೆಗೆ ತರಲು, 5 ಮಂದಿ ಆಧ್ಯರು ಮಾತ್ರ ಅದಕ್ಕೊಡಂಬಡಲಿಲ್ಲ; ಅಧ್ಯಕ್ಷರೆಲ್ಲರೂ ಮೌನರಾಗಿದ್ದರು. ಇಂತಿರಲಿಕ್ಕೆ, ಪಾರ್ಲಿಮೆಂತಿನವರಿಂದ ಕ್ರಿ. ಶ. ಆ 1560ನೇ ಅಬ್ದದ ಆಗೊಸ್ತು ತಿಂಗಳ 24ನೇ ದಿನದಲ್ಲಿ, ಪಪ್ಪನ ಅಧಿಕಾರವು ಸ್ಕೋತ್ಲಂದಿನಲ್ಲಿ ತೀರಿ ಹೋಯಿತೆಂತ, ಹೇಳುವ ನಿರ್ಣಯವು ಪ್ರಕಟವಾಯಿತು. ಅಂದೇ ಪುನಃಸ್ಥಾಪನಾಕಾರ್ಯವು ಅಲ್ಲಿ ಜಯ ಹೊಂದಿತು. ನೊಕ್ಸನೆಂಬ ಸುವಾರ್ತಾಪುನಃಸ್ಥಾಪಕನು ಆ ಸಮಯ ಎದಿನ್ಬರ್ಗಿನಲ್ಲಿ ಬೋಧಕೋದ್ಯೋಗಿಯಾದನು.

ಬಳಿಕ ಸ್ಕೋತ್ಲಂದಿನಲ್ಲಿ ಉದ್ಭವಿಸಿದ ಪ್ರೆಸ್ಬುತೆರಿಯಾಲವಾದ ಸಭೆಯ ಮುಖ್ಯ ಪ್ರಮಾಣವೇನೆಂದರೆ—ಯೇಸು ಕ್ರಿಸ್ತನೇ ಸಭೆಯ ಏಕ ಶಿರಸ್ಸು; ಸಭೆಗೆ ಕಿಂಚಿತ್ತೂ ರಾಜಾಧೀನತೆಯು ಬೇಡ; ಸಭೋದ್ಯೋಗಿಗಳಾದ ಬೋಧಕರೂ ಪಂಡಿತರೂ ಹಿರಿಯರೂ ದರಿದ್ರಪೋಷಕರೂ ಕೂಡಿ ಒಂದೇ ಅಧಿಕಾರದವರು[1]; ಆ 4 ತರದ ಉದ್ಯೋಗಿಗಳೆಲ್ಲರೂ ಸಭೆಯ ಧನಿಗಳಲ್ಲ, ಅದರ ಉಪಚಾರಕ್ಕಾಗಿ ಕ್ರಿಸ್ತನ ವಾಕ್ಯವನ್ನು ಕುರಿತ ಸೇವೆ ಮಾಡುವಂಥವರೇ[2].—ಬಿಗಿಯಾದ ಸಭಾಶಿಕ್ಷೆಯು ಸ್ಥಾಪಿತವಾಯಿತು; ಒಂದೊಂದು ಒಳಸಭೆಯ ಬೋಧಕನು ಇಬ್ಬರು ಹಿರಿಯರ ಸಂಗಡ ಕೂಡುವಲ್ಲಿ ಒಂದು ಸಭೇ ಕೂಟವು ಆಗುವದು, ಇದು ಆ ಒಳಸಭೆಯ ಮತಸಂಬಂಧದ ಕಾರ್ಯಗಳನ್ನು ಸರಿ ಗೊಳ್ಳಿಸುವದು; ಕೆಲವು ಸಭೇ ಕೂಟಗಳು ನೆರೆಯುವಲ್ಲಿ ಒಂದು ಪ್ರೆಜ್ಬಿತೆರಿ (ಪ್ರೆಸ್ಬುತೆರಿಯ) ಅಂದರೆ ಹಿರಿಯರ ಸಭೆಯು ಆಗುವದು; ಕೆಲವು ಪ್ರೆಜ್ಬಿತೆರಿಗಳಿಂದ ಒಂದು ಸಿನೊದ್ ಅಂದರೆ ಸಂಸದಸ್ಸು ಆಗುವದು; ಸಂಸದಸ್ಸುಗಳ ಪ್ರತಿನಿಧಿಗಳು ನೆರೆಯುವಲ್ಲಿ ಜೆನರಲ್ ಅಸ್ಸೆಂಬ್ಲಿ ಅಂದರೆ ಸರ್ವಸಾಧಾರಣಸಭಾಸಂಘವು ಆಗುವದು, ಇದು ವರುಷಕ್ಕೊಮ್ಮೆ ಎದಿನ್ಬರ್ಗಿನಲ್ಲಿ ಕೂಡುತ್ತಿರುವದು. ಜೆನರಲ್ ಅಸ್ಸೆಂಬ್ಲಿಯಲ್ಲಿ ರಾಜನ ಒಬ್ಬ ಪ್ರತಿನಿಧಿಯು ಅಗ್ರಸ್ಥನಾಗಿದ್ದರೂ ಅವನು ಎಂತೂ ಮತಕ ವಿಷಯಗಳಲ್ಲಿ ವ್ಯವಸ್ಥಾಕರ್ತನಲ್ಲ.—ಕಾಲಕ್ರಮೇಣ 6ನೇ ಜೇಂಸ ರಾಜನು 25 ವರುಷ ಸ್ಕೋತ್ಲಂದನ್ನಾಳಿದನಂತರ ಅವನು ಕ್ರಿ. ಶ. 1592ನೇ ಅಬ್ದ ಅಂಥ ಪ್ರೆಸ್ಬುತೆರಿಯಾಲ ಸಭಾಪರಿಪಾಲನಕ್ರಮವನ್ನು ಸ್ಕೋತ್ಲಂದಿನಲ್ಲಿ ರಾಜಾಜ್ಞೆಯಿಂದೂರ ಬೇಕಾಯಿತು. ಕ್ರಿ. ಶ. 1706ನೇ ಅಬ್ದ ಇಂಗ್ಲಂದಿಗೂ ಸ್ಕೋತ್ಲಂದಿಗೂ ಒಂದೇ ಪಾರ್ಲಿಮೆಂತಾಗಿ, 6 ವರುಷ ಕಳೆದ ತರುವಾಯ ಪಾರ್ಲಿಮೆಂತಿನವರ ಒಂದು ನಿರ್ಣಯದಿಂದ ರಾಜನೂ ಗ್ರಾಮಧನಿಗಳೂ ಸ್ಕೋತಿಕ ಸಭೆಯಲ್ಲಿ ಪ್ರಸಂಗಿಕರನ್ನಾರಿಸಿಡುವದರಲ್ಲಿ ಅತ್ಯಧಿಕಾರ ಹೊಂದಿದ್ದಕ್ಕೆ ವಿವಿಧದ ತೊಂದರೆ ಹುಟ್ಟಿತು.

ಆದರೆ ಅಷ್ಟರಲ್ಲಿ, ಹಿಂದೆ ಹೇಳಿರುವಂತೆ[3], ಸ್ಟ್ಯುವರ್ತಿನ ಮೇರಿಯು ಫ್ರಂಚಿನ

1) 438ನೇ ಪಾನು. 2) 431ನೇ ಪಾನು. 3) 491ನೇ ಪಾನು.

2ನೇ ಫ್ರಂಚನೆಂಬ ರಾಜನಿಗೆ ಮದಿವೆಯಾಗಿದ್ದಳು. ಇವನು ಕ್ರಿ. ಶ. 1560ನೇ ವರುಷದಂತದಲ್ಲಿ ಸತ್ತಾಗ ಅವಳು ಮರುವರುಷ ಸ್ಕೋತ್ಲಂದಿಗೆ ತಿರಿಗಿ ಬಂದು, ಸಿಂಹಾಸನವನ್ನೇರಿದಳು. ಅವಳು ಲಘು ಮನಸ್ಸಿನವಳೂ ಕಾಮಾಸಕ್ತಳೂ ಆದಂಥವಳು. ರಾಜ್ಯದಲ್ಲಿ ಉದ್ಭವಿಸಿದ ಸುವಾರ್ತಾಬೋಧನೆಯ ಮತದಲ್ಲಿ ಏನಾದರೂ ಬದಲಾಯಿಸುವದಕ್ಕೆ ತಾನು ಪ್ರಯತ್ನ ಮಾಡುವದಿಲ್ಲವೆಂದು, ಪಟ್ಟಾಭಿಷೇಕದ ಕಾಲದಲ್ಲಿ ನಂಬಿಕೆ ಕೊಟ್ಟಿದ್ದಳು; ಆದರೂ ಅವಳು ತನ್ನ ಅರಮನೆಯೊಳು ಪಪ್ಪಕ ದೇವಾರಾಧನೆಯನ್ನು ಶೇರಿಸಿದ್ದು ಮಾತ್ರ ಹೊರ್ತಾಗಿ ಸರ್ವತ್ರ ಮಠಿಕರಿಂದ ಪಪ್ಪಕತ್ವವನ್ನು ಸಾರಿಸಿ, 4ನೇ ಪಿಯ ಪಪ್ಪನ[1] ಬಳಿಕೆಯವಳಾಗಿದ್ದದರಿಂದ ಸೌವಾರ್ತಿಕ ಪ್ರಜೆಯು ಬೇಗ ಅವಳ ಮೇಲೆ ಸಂಶಯ ಗೊಂಡಿತು. ಕ್ರಿ. ಶ. 1562ನೇ ವರುಷದಲ್ಲಿ ಅವಳ ಲಘು ಮನಸ್ಸಿನದೊಂದು ಸಂಗತಿಯು ಕಂಡು ಬಂತು; ಅದೇನಂದರೆ, ಆಗ ಫ್ರಂಚಿನಲ್ಲಿ ಗೀಸು ಕುಟುಂಬದವನೊಬ್ಬ ಪ್ರಭುವು ವಸ್ಸಿ ಎಂಬ ಪಟ್ಣದಲ್ಲಿ ದೇವಾರಾಧನೆಗೆ ಕೂಡಿದ್ದ 1,200 ಸೌವಾರ್ತಿಕ ಕ್ರೈಸ್ತರನ್ನು ತಾನು ನಡಿಸಿಕೊಂಡು ಬಂದ 60 ಜನ ರಾವುತರಿಂದ ಹತ ಮಾಡಿಸಿದ್ದಕ್ಕಾಗಿ ಅವಳು ಅರಮನೆಯಲ್ಲಿ ದೊಡ್ಡದೊಂದು ನರ್ತನಹಬ್ಬವನ್ನು ನಡಿಸಿದಳು.—ಮೂರು ವರುಷದಿತ್ತಕಡೆ ಅವಳು ಒಬ್ಬ ಪಪ್ಪಕ ಮತದ ಪ್ರಭುವಿಗೆ ಮದುವೆಯಾದಳು. ಅಂದಿನಿಂದ ಸ್ಕೋತ್ಲಂದಿನವರನ್ನು ತಿರಿಗಿ ಪಪ್ಪಕರಾಗ ಮಾಡುವ ಪೇಚಾಟವು ಅವಳಲ್ಲಿ ಹೆಚ್ಚಾಗಿ ತೋರಿತು. ಕ್ರಿ. ಶ. 1566ನೇದಕ್ಕೆ ಅವಳು ಗೀಸಿನ ಕುಟುಂಬದವರೂ ಸ್ಪಾನಿಯದ ಅಲ್ಬನೆಂಬ ಆ ದಳವಾಯಿಯೂ ಸೌವಾರ್ತಿಕರನ್ನು ನಿರ್ಮೂಲಿಸುವದಕ್ಕೆ ತಮ್ಮೊಳಗೆ ಕಟ್ಟಿ ಕೊಂಡ ಒಡಂಬಡಿಕೆಗೆ ಶೇರಿ ಕೊಂಡು[2], ಪಪ್ಪಕವಾದ್ದೊಂದು ಪ್ರಧಾನಾಧ್ಯಕ್ಷತೆ ನಿರ್ಮಿಸಿ, ಪಪ್ಪಕ ದೇವಾರಾಧನೆಯನ್ನು ರಾಜ್ಯದಲ್ಲೆಲ್ಲಿಯೂ ಸಾಗಿಸಲೆಸಗಿ, ಅಂದಿನ 5ನೇ ಪಿಯ ಪಪ್ಪನ[3] ಸಂಗಡದ ಸಂಬಂಧವನ್ನು ಹೆಚ್ಚು ಬಿಗಿಹಿಡು ಕೊಂಡಳು. ತರುವಾಯ ಅವಳು ತನ್ನ ಗಂಡನನ್ನು ಕೊಂದ ಬೊಥ್ವೆಲನೆಂಬ ಪ್ರಭುವನ್ನು ವಿವಾಹ ಮಾಡಿ ಕೊಂಡ ಕಾರಣವೂ ಇವನು, ರಾಜಕುಮಾರನಾದ ಜೇಂಸನನ್ನು ಸಹ ಕೊಲ್ಲ ಬೇಕೆಂದು, ಪಡುವ ಅಭಿಪ್ರಾಯ ಬೈಲಾದ ಕಾರಣವೂ ದೇಶದ ಆಢ್ಯರ ಒಲುಮೆಯು ಅವಳನ್ನು ಪೂರಾ ಬಿಟ್ಟು ಹೋಯಿತು. ಇಂತಿರಲಿಕ್ಕೆ ಅವಳು, ಪಲಾಯನ ತೆಗೆಯುವದು ಹಿತವೆಂದು, ಆಲೋಚಿಸಿ ಕೊಂಡು, ಕ್ರಿ. ಶ. 1567ನೇ ವರುಷ ಓಡಿ ಹೋಗುವಲ್ಲಿ ಕೈಶೆರೆಯವಳಾಗಿ, ಆ ವೇಳೆ ಅಪ್ರಾಪ್ತವಯಸ್ಸಿನ ಕುಮಾರನಾದ ಆ 6ನೇ ಜೇಂಸನೆಂಬವನಿಗೆ[4] ರಾಜ್ಯಾಧಿಕಾರವನ್ನೊ

1) 448, 449, 474ನೇ ಪಾನು. 2) 472ನೇ ಪಾನು. 3) 474, 484ನೇ ಪಾನು. 4) 492ನೇ ಪಾನು.

ಪ್ಪಿಸ ಬೇಕಾಗಿ, ಮರುವರುಷ ಶೆರೆಗೆ ತಪ್ಪಿಸಿ ಕೊಂಡು, ರಾಜ್ಯಾಧಿಕಾರವನ್ನು ಮತ್ತು ಘಳಿಸಿ ಕೊಳ್ಳುವ ಪ್ರಯತ್ನವು ವ್ಯರ್ಥವಾದ ಮೇಲೆ ಇಂಗ್ಲಂದಿಗೆ ಗಮಿಸಿ, ತಾನು ಮುಂಚೆ ಅಲ್ಲಿ ರಾಣಿಯಾಗುವದಕ್ಕೆ ಬಹು ಅಭ್ಯಂತರ ಗೈದಿದ್ದ ಇಲಿಜಬೆಥಳ ಆಶ್ರಯ ಹೊಕ್ಕಳು. ಇಲಿಜಬೆಥಳು, ಅವಳನ್ನು ಕೆಲವು ದಿವಸ ಶೆರೆಯಲ್ಲಿಡುವದು ಯೋಗ್ಯವೆಂತ, ತಿಳಿದು, ಹಾಗೆ ಗೈದಿರುವಷ್ಟರೊಳಗೆ ಮೇರಿಯ ಹೆಸರಿನಲ್ಲಿ ಗೀಸು ಕುಟುಂಬದವರ ಮತ್ತು ಸ್ಪಾನಿಯದ ರಾಜನಾದ ಆ 2ನೇ ಫಿಲಿಪ್ಪನ ಸಲಹೆಯಿಂದ ಪಪ್ಪಕ ಪ್ರಭುಗಳದೊಂದು ಕಲಹವೇಳಲು, ಇಲಿಜಬೆಥಳು, ಇಂಗ್ಲಂದಿನ ಮತ್ತು ತನ್ನ ಭದ್ರತೆಗೋಸ್ಕರ ಅವಳನ್ನು ಹೆಚ್ಚು ಕಾಲ ಶೆರೆಯಲ್ಲಿರಿಸುವದು ಅತ್ಯಗತ್ಯವೆಂದು, ಅವಳನ್ನು ಒಂದು ಕೋಟೆಯೊಳಗೆ ಮುಚ್ಚಿ, ನೀನು ನಂಬಿಗಸ್ತಳಾಗಿದ್ದರೆ ಬಿಡುಗಡೆ ಹೊಂದುವದಕ್ಕೆ ಅಡ್ಡಿ ಏನೂ ಇಲ್ಲವೆಂತ, ಅವಳಿಗೆ ಅಭಯ ಕೊಟ್ಟಳು. ಆಗಲೇ 5ನೇ ಪಿಯ ಪಪ್ಪನು ಇಲಿಜಬೆಥಳ ಮೇಲೆ ಬನ್ನು ಜಡಿಯಲಿಕ್ಕೆ[1], ಇಂಗ್ಲಂದಿನ ಪಪ್ಪಕರು ನೊರ್ಫೋಕಿನ ಪ್ರಭುವಿನ ಮುಖ್ಯಸ್ಥಿಕೆಯಲ್ಲಿ ಮೇರಿಗೋಸ್ಕರ ಇಲಿಜಬೆಥಳ ಮೇಲೆ ದಂಗೆ ಎಬ್ಬಿಸಿದಂದು, ಇವಳಿಗೆ, ಮೇರಿಯು ತನ್ನ ಕಂಟಕಕರಳಾದ ಎದುರಾಳಿ ಎಂತ, ಸ್ಪಷ್ಟ ತಿಳಿಯಲಾರಂಭಿಸಿತು.

ತನ್ಮಧ್ಯ ಸ್ಕೋತ್ಲಂದಿನಲ್ಲಿ ನೊಕ್ಸನು ಸ್ಟ್ಯುವರ್ತಿನ ಮೇರಿಯಿಂದ ವಿಧ ವಿಧದ ತಂಟೆ ಪಟ್ಟಿದ್ದನು; ನೀನು ಪ್ರಸಂಗಿಸ ಬಾರದೆಂಬ ಅಪ್ಪಣೆಯನ್ನು ಸಹ ಕ್ರಿ. ಶ. 1565ನೇ ಅಬ್ದ ಅವನಿಗೆ ಕೊಟ್ಟಿದ್ದಳು. ಅವಳು ಶೆರೆಯವಳಾದನಂತರ ಪಪ್ಪಕತ್ವದ ಸಂಗಡದ ಹೋರಾಟವು ಸ್ಕೋತ್ಲಂದಿನಲ್ಲಿ ಹೆಚ್ಚು ಕಡಿಮೆ ಮುಗಿಯಿತು. ಮೇರಿಯ ಮಗನಾದ 6ನೇ ಜೇಂಸನಿಗೆ[2] ಪಟ್ಟ ಕಟ್ಟುವಲ್ಲಿ ನೊಕ್ಸನೇ ಪ್ರಸಂಗಿಸಿದನು. ಪಪ್ಪಕರು ರಾಜಧಾನಿಯಲ್ಲಿ ತನ್ನ ಪ್ರಾಣಹತ್ಯ ಚಿಂತಿಸುತ್ತಲಿರುವದರಿಂದ ನೊಕ್ಸನು ಸೇಂತ್ ಅಂದ್ರೂಜ್ ಪಟ್ಣಕ್ಕೆ ಹೋಗಿ, ಒಂದು ವರುಷ ಇದ್ದು, ತರುವಾಯ ತನ್ನ ಗೆಳೆಯರ ವಿನಂತಿಯ ಪ್ರಕಾರ ಎದಿನ್ಬರ್ಗಿಗೆ ಹಿಂದಿರುಗಿದ ಕ್ರಿ. ಶ. 1572ನೇ ವರುಷದ ನವಂಬರ್ ತಿಂಗಳಿನ 9ನೇ ದಿನವಾದ್ದೊಂದು ರವಿವಾರದಲ್ಲಿ, ತನ್ನ ವೃತ್ತಿಯ ಅಂತವು ಸಮೀಪಿಸಿತೆಂತ, ತನ್ನೊಳರಿತು, ದೇವಾಲಯದೊಳಗೆ ತನ್ನ ಪ್ರಸಂಗದಲ್ಲಿ ಅದರ ವಿಷಯ ಮಾತಾಡಿ, ಕಡೆಯ ಆಶೀರ್ವಾದ ಪಾಲಿಸಿ, ಮನೆಗೆ ಬಂದು, ತ

---

1) 484ನೇ ಪಾನು. ಇಲಿಜಬೆಥಳನ್ನು ಕೊಲ್ಲುವ ದುಷ್ಪ್ರಯತ್ನವನ್ನು ಸ್ಪಾನಿಯದ 2ನೇ ಫಿಲಿಪ್ಪ ರಾಜನೂ ಅಲ್ಬನೆಂಬ ಪ್ರಭುವೂ ಅಲ್ಲದೆ (493ನೇ ಪಾನು) 5ನೇ ಪಿಯ ಪಪ್ಪನು ಸಹ ನಡಿಸುತ್ತಿದ್ದನು; ಈ 5ನೇ ಪಿಯ ಪಪ್ಪನು ಆ ರಾಜನಿಗೆ— ಆ ಕಾರ್ಯವು ಸಿದ್ಧಿಸುವದಕ್ಕೆ ದೇವಾಲಯಪಾತ್ರಗಳನ್ನೂ ತನ್ನ ಸ್ವಂತ ವಸ್ತ್ರಗಳನ್ನೂ ಕೊಡುತ್ತೇನೆಂದು, ವಾಗ್ದತ್ತ ಮಾಡಿದನು. ಬಳಿಕ ಇಲಿಜಬೆಥಳ ಪಟ್ಟವನ್ನು ಮೇರಿಗೆ ಕಟ್ಟಿಸ ಬೇಕೆಂಬದು ಅವರ ಅಭಿಪ್ರಾಯ. vid. Correspondence of Philipp II in N. E. Kirchenzeitung, 1 May, 1869, p. 279. 2) 493ನೇ ಪಾನು.

ತ್ಕ್ಷಣವೇ ಮಂಚದಲ್ಲಿ ಮಲಗ ಬೇಕಾಯಿತು. ಇನ್ನು ತನ್ನ ಐಹಿಕ ಜೀವದಲ್ಲುಳಿದ 15 ದಿವಸಗಳಲ್ಲಿ ಅವನು ದೇವವಾಕ್ಯವನ್ನೇ ಧ್ಯಾನಿಸಿ ಕೊಳ್ಳುತ್ತಿರುವನು. ಮರು ಆದಿತ್ಯವಾರ ಅವನು ತನ್ನ ಮಿತ್ರರ ಮುಂದೆ—ರಾತ್ರಿಯಲ್ಲಿ ತಾನು ಸ್ವರ್ಗದೊಳಿದ್ದು, ಅದರ ಆನಂದಗಳನ್ನಾಸ್ವಾದಿಸಿದಂತೆ ಆಯಿತೆಂತ, ಹೇಳಿದನು. ಬಳಿಕ ಅವನು ಪ್ರಯಾಸದಿಂದ ಉಸುರು ತೆಗಿಯುತ್ತಿರುವೆಡೆ ಒಬ್ಬನು, ಬಹಳ ಸಂಕಟ ಉಂಟೋ? ಎಂತ, ಕೇಳಲು, ಅವನು, ದೇವರ ಚಿತ್ತವಾದರೆ ಏಳು ವರುಷವಾದರೂ ಹೀಗೆ ಬಿದ್ದು ಕೊಂಡಿರುವದಕ್ಕೆ ಸಂತುಷ್ಟನಾಗಿರುವೆನೆಂದು, ನುಡಿದನು. ನವಂಬರಿನ 23ನೇದರಲ್ಲಿ ಅವನು ಭಾರವಾದ ಸ್ವಪ್ನ ತಿಳಿದು—ನೀನು ಸುವಾರ್ತಾಸಭೆಗೋಸ್ಕರ ನಡಿಸಿದ (ಆತ್ಮೀಯ) ಯುದ್ಧದಲ್ಲಿ ಅತಿರೇಕ ಪುಣ್ಯ ಪಡಕೊಂಡಿದ್ಧಿ, ಇದನ್ನು ಚನ್ನಾಗಿ ನೆನಸಿ ಕೊಳ್ಳೆಂತ, ಸೈತಾನನು ನನ್ನನ್ನು ಪರಿಶೋಧಿಸಿದನು[1]; ಆಗ, ದೇವರಿಂದ ಹೊಂದದ್ದು ನಿನಗೇನದೆ? ಎಂತ, ಹೇಳುವ ದೇವವಾಕ್ಯದ ವಚನದಿಂದ[2] ಅವನ ಉರಿಬಾಣಗಳನ್ನು ಶಮಿಸಿ ಬಿಟ್ಟೆನೆಂದು, ಅದನ್ನು ವಿವರಿಸಿದನು. ಮರುದಿವಸ ಅವನು ತನ್ನ ಹೆಂಡತಿಯಿಂದ, ತನ್ನ ಮುಖ್ಯವಾದ ಲಂಗರವೆಂದು, ಹೇಳಿ, ಯೋಹಾನ ಅಪೊಸ್ತಲನ ಸುವಾರ್ತೆಯ 17ನೇ ಸಂಧಿಯಾದ ಕ್ರಿಸ್ತನ ಮಹಾಪ್ರಾರ್ಥನೆಯನ್ನೋದಿಸಿ, ಸ್ವಲ್ಪ ಹೊತ್ತಿನ ಮೇಲೆ—ಓ ಕರ್ತನೇ, ಈಗ ಕಡೇ ಸಾರಿ ನನ್ನನ್ನು ಪ್ರಾಣ ಆತ್ಮ ಶರೀರಗಳ ಸಹಿತ ನಿನ್ನ ಕೈಗೊಪ್ಪಿಸಿ ಕೊಡುತ್ತೇನೆಂದು, ನುಡಿದು, ನಿಟ್ಟುಸುರು ಕಳೆದು, ಈಗ ಸಮಯ ಬಂದಿದೆ! ಎಂದು, ಹೇಳುತ್ತಲೇ ಹತ್ತರದವರು, ವಾಕ್ಶಕ್ತಿಯು ಅವನಿಗೆ ಬಿಟ್ಟು ಹೋಯಿತೆಂತ, ನೋಡಲು, ಅವರಲ್ಲೊಬ್ಬನು—ನಿಮಗೆ ಇನ್ನು ಮಾತಾಡಲಿಕ್ಕೆ ಬಾರದಿದ್ದರೆ, ನೀವು ನಮಗೆ ಅನೇಕಾನೇಕಾವರ್ತಿ ತಿಳಿಸುತ್ತಿದ್ದ ಆದರಿಕ ದೇವವಾಗ್ದತ್ತಗಳಿಗೆ ಈಗಲೂ ಸಂತೋಷ ಪಡುತ್ತೀರೆಂಬದಕ್ಕೆ ಒಂದು ಕುರುಹ ತೋರಿಸಿರಿ! ಎಂದು, ಕೂಗಿದ್ದಕ್ಕೆ ಅವನು ತನ್ನೆರಡು ಕೈಗಳನ್ನೆತ್ತಿ, ಇನ್ನೊಮ್ಮೆ ನಿಟ್ಟುಸುರು ಗಳೆದು, ಏನೂ ಕಷ್ಟವಿಲ್ಲದೆ ನಿತ್ಯ ಶಾಂತಿಯನ್ನೈದಿದನು.

ಅಷ್ಟರೊಳಗೆ ಫ್ರಂಚು ದೇಶದವರೂ[3] ಸ್ಪಾನಿಯದವರೂ[4] ಸೌವಾರ್ತಿಕರನ್ನು ಅಮಿತ ದ್ವೇಷದಿಂದ ಹಿಂಸಿಸುವವರಾಗಿರಲು, ಇಲಿಜಬೆಥ ರಾಣಿಯು, ಫ್ರಂಚಿನವರು ಸ್ಕೋತ್ಲಂದನ್ನು ಹಿಡಿಯದಂತೆ[5] ಮತ್ತು 2ನೇ ಫಿಲಿಪ್ಪ ರಾಯನು ನೀದೆರ್ಲಂದಿನವರನ್ನು ಜಯಿಸದಂತೆ, ಫ್ರಂಚಿನಲ್ಲಿಯ ಸೌವಾರ್ತಿಕರಿಗೂ ನೀದೆರ್ಲಂದಿ

1) ಅಂದರೆ ಸೈತಾನನು, ನಿನ್ನಲ್ಲಿ ಸ್ವಯಂಕೃತ ಪುಣ್ಯ ಬಹಳ ಉಂಟೆಂತ, ನನ್ನ ಮನಸ್ಸಿನಲ್ಲಿ ಒಣ್ಣಿಸಿ. ಯಾವದರ ಮೇಲೆ ಭರವಸವಿಡುವನು? ಇದರ ಮೇಲೆಯೋ? ಸುವಾರ್ತಾರ್ಥದ ಮೇಲೆಯೋ? ಎಂಬಂತೆ ನನ್ನನ್ನು ಪರಿಶೋಧಿಸಿದನು. 2) 1 ಕೊರಿ. 4, 7. 3) 493ನೇ ಪಾನು; 62ನೇ ಸಂಧಿ. 4) 473 ನೇ ಪಾನು. 5) 486, 490, 491, 493ನೇ ಪಾನುಗಳನ್ನು ಸರಿ ನೋಡು.

ನವರಿಗೂ ಸಹಾಯಕಳಾಗಿ, ತನ್ನ ರಾಜ್ಯದಲ್ಲಿ ಹೊಕ್ಕೊಂಡಿದ್ದ ಯೇಸುವಿತರಲ್ಲಿ ಅನೇಕರನ್ನು ಗಡಿ ದಾಟಿಸಿ, ಹಲವರಿಗೆ ಆಜ್ಞೆ ಮಾಡಿಸಿದಳು. ಬಳಿಕ 2ನೇ ಫಿಲಿಪ್ಪ ರಾಯನು ನಿತ್ಯದಲ್ಲಿ ಮಾತಿನ ಭಯ ತೋರಿಸುತ್ತಾ, ಸ್ಕೊತ್ಯವರ್ತಿನ ಮೇರಿಯ ಸಮ್ಮತಿಯ ಮೇಲೆ ಇಲಿಜಬೆಥಳ ಪ್ರಾಣವನ್ನು ತೆಗೆಯ ಬೇಕೆಂಬ ದ್ರೋಹಿಗಳು ಎಡೆ ಬಿಡದಲೇಳುತ್ತಾ, ಪಪ್ಪಕರ ಕಲಹಗಳು ರಾಜ್ಯದಲ್ಲಿ ತೀರದೆ ನಡಿಯುತ್ತಾ ಇರಲಿಕ್ಕೋಸ್ಕರ ಇಂಗ್ಲಿಷ ಪಾರ್ಲಿಮೆಂತಿನವರು, ಇಲಿಜಬೆಥಳ ಜೀವದ್ರೋಹಿಗಳೆಲ್ಲರಿಗೂ ಮರಣಾಜ್ಞೆಯಾಗ ಬೇಕೆಂದು, ನೇಮಿಸಿದನಂತರ ಕ್ರಿ. ಶ. 1585ನೇ ವರುಷ ಮೇರಿಯನ್ನು ಸಹ ಪಾರ್ಲಿಮೆಂತಿಗೆ ಕರಿಸಿ, ವಿಚಾರಿಸಲಾದಲ್ಲಿ ಈ ಮಹಾ ಸಭೆಯ ಸಮಸ್ತರೂ—ಅವಳು ಕಡು ಅಪರಾಧಸ್ಥಳೇ, ಅವಳಿಗೆ ಮರಣಶಿಕ್ಷೆ ಯೋಗ್ಯವೆಂದು, ಕಂಡು ಹೇಳಿದರು. ಸ್ತ್ರೀಯಾದ ಇಲಿಜಬೆಥಳಿಗೆ ಆ ಪ್ರಕಾರದ ಆಜ್ಞೆಯು ತತ್ಕ್ಷಣವೇ ಸಮ ಬೀಳಲಿಲ್ಲ; ಮೇರಿಯ ಪಕ್ಷಕರಿಂದ ತನ್ನ ಜೀವಕ್ಕೆ ಹೊಸ ಅಪಾಯ ಬಂದ ಮೇಲೆ ಮಂತ್ರಿಗಳು ತನಗೆ ಒತ್ತಾಯ ಮಾಡಲೆಸಗುವ ವರೆಗೂ ಇನ್ನೂ ತಾಳಿ ಕೊಂಡಿದ್ದು, ಬಳಿಕ, ನಡಿಯುವದಕ್ಕೆ ದೇವರು ತಾನೇ ಮಾರ್ಗ ತೋರಿಸಿದ್ದಾನೆಂದು, ತಿಳಿದಾಗ್ಯೂ ಆಜ್ಞಾನಿರ್ಣಯಪತ್ರಕ್ಕೆ ಹಸ್ತಲಿಖಿತ ಹಾಕುವಲ್ಲಿ, ಮತ್ತೊಂದು ಕಲಹವಾಗಲಿ ಮತ್ತೊಂದು ಶತ್ರುಭಿಯೋಗವಾಗಲಿ ಆಗುವ ತನಕ ಹ್ಯಾಗೂ ಆ ನಿರ್ಣಯ ನಡಿಸದಿರ ಬೇಕೆಂದು, ವಿಧಿಸಿದಳು. ಆದರೂ ಅವಳ ಮಂತ್ರಿಗಳು ಅವಳ ಕರುಣಾಪೇಕ್ಷೆಯನ್ನತಿಗಳೆದು, ಅವಳಿಗರಿವಿಲ್ಲದೆ ಆಗಲೇ ಆ ಪತ್ರವನ್ನು ನ್ಯಾಯೇಶರ ಬಳಿಗೆ ಕಳುಹಿಸಲು, ಇವರು ತಡೆಯದೆ ಕ್ರಿ. ಶ. 1587ನೇ ವರುಷದ 2ನೇ ತಿಂಗಳಿನಲ್ಲಿ ಅವಳ ತಂಟೆ ತೆಗೆದರು.

ಸ್ವಲ್ಪ ಕಾಲದಿತ್ತಕಡೆ ಸ್ಪಾನಿಯದ 2ನೇ ಫಿಲಿಪ್ಪರಾಯನು, ಇಲಿಜಬೆಥಳು ಸೌವಾರ್ತಿಕ ಕ್ರೈಸ್ತತ್ವಕ್ಕೆ ಮುಖ್ಯಾಧಾರಳೆಂದು, ಅವಳ ರಾಜ್ಯವನ್ನು ಸ್ವತಂತ್ರಿಸಿ ಕೊಳ್ಳುವದಕ್ಕೆ, ನಿಮಗೆ ಹಿಂದೆ ಗೊತ್ತಾದಂತೆ[1], ಆ ಅಜಯ್ಯ ಬಲವೆಂಬ ಮಹಾ ನೌಸೇನೆಯನ್ನು ಸೌರಿಸಿ, ಹೊರಡಿಸಿದನು; ಆದರೂ ಅದು ದೇವರ ಊದೋಣದರಲ್ಲಿ ಹಾರಿ ಹೋದ್ದರಿಂದ ಇಂಗ್ಲಂದಿನ ಮತ್ತು ಉಳಿದ ದೇಶಗಳ ಸೌವಾರ್ತಿಕ ಕ್ರೈಸ್ತರಿಗೆ ಉಪಶಮನವೇ ಬಂತು. ಆಗ ಇಲಿಜಬೆಥಳು ಸ್ಕೊತ್ಯವರ್ತಿನ ಮೇರಿಯ ಕುಮಾರನಾದ ಆ 6ನೇ ಜೇಂಸ ರಾಜನನ್ನು[2], ತನ್ನ ಉತ್ತರಾಧಿಕಾರಿ ಎಂದು, ನೇಮಿಸಿ, 55 ವರುಷ ಇಂಗ್ಲಂದಿನಲ್ಲಿ ರಾಜ್ಯದಾಡಳಿತೆ ಗೈದ ಬಳಿಕ ಕ್ರಿ. ಶ. 1603ನೇ ವರುಷದಲ್ಲಿ, ತನ್ನ ಜೀವನದ 70ನೇದರಲ್ಲಿ, ಕ್ರಿಸ್ತನ ಮೇಲಿನ ವಿಶ್ವಾಸಸ್ಥೈರ್ಯದೊಡನೆ ತೀರಿ ಹೋದಳು.

1) 470, 471ನೇ ಪಾನು. 2) 494ನೇ ಪಾನು.

ತನ್ಮಧ್ಯ ಐರ್ಲಂದಿನಲ್ಲಿ ನಡೆದ್ದೇನೆಂದರೆ—ಕ್ರಿ. ಶ. 1154ನೇ ವರುಷದಿಂದ 1189ನೇದರ ವರೆಗೆ ಇಂಗ್ಲಂದನ್ನಾಳುತ್ತಿದ್ದ 2ನೇ ಹೆನ್ರಿ ರಾಯನು[1] ಆ 4ನೇ ಹದ್ರಿಯಾನನೆಂಬ ಪಪ್ಪನ[2] ಒಂದು ಆಜ್ಞೆಗನುಸಾರವಾಗಿ ಐರ್ಲಂದನ್ನು ಜಯಿಸಿ ಕೊಂಡು, ಅಲ್ಲಿಯ ಪ್ರಖ್ಯಾತವಾಗಿದ್ದ ಸೌವಾರ್ತಿಕ ಸಭೆಯ ಶೇಷವನ್ನು[3] ಪಪ್ಪನೊಳಗೆ ಶೇರಿಸಲೊದ್ದಾಡ ಬೇಕಾಯಿತು. ಈ ದುರಭಿಪ್ರಾಯವು ಅಡಿಗಡಿಗೆ ಸಾಗುತ್ತಾ ಬಂತು; ಸುವಾರ್ತೆಯ ಬೆಳಕು ನೊಂದುತ್ತಲಿತ್ತು. ಹೀಗಿರಲಾಗಿ, ಪುನಃಸ್ಥಾಪನೆಯ ಕಾಲದಲ್ಲಿ ಅಲ್ಲಿ ಕಾರ್ಗತ್ತಲೆಯೇ ಕಂಡಿತು. 6ನೇ ಎದ್ವರ್ದನ ಕಾಲದಲ್ಲಿ ಐವರು ಐರಿಷ ಅಧ್ಯಕ್ಷರು ಸೌವಾರ್ತಿಕ ಮತವನ್ನವಲಂಬಿಸಿದರು, ಸರಿ; ಆದರೂ ತ್ಯೂದರಿನ ರಕ್ತಮೇರಿಯ ಕೆಳಗೆ ಆ ಚಿಕ್ಕ ಫಲಮಿಡಿಗಳು ಮತ್ತು ಉದುರಿ ಬಿದ್ದವು. ಪೂರ್ವದಲ್ಲಿ ಬಹು ಬುದ್ಧಿಚಾತುರ್ಯದಿಂದೊಪ್ಪುತ್ತಿದ್ದ[4] ಐರ್ಲಂದಿನ ಪ್ರಜೆಯವರು ಪಪ್ಪಕರ ಪ್ರಯತ್ನದಿಂದ ಕಾಡಿನ ಪಾಲಾಗಿದ್ದರು; ಆದ್ದರಿಂದ ಮುದ್ರಾಯಂತ್ರವು ನವಕಲ್ಪಿತವಾಗಿ[5] 100 ವರುಷ ಕಳೆಯುವದಕ್ಕಿಂತ ಮುಂಚೆ, ಅಂದರೆ ಕ್ರಿ. ಶ. 1551ನೇ ವರುಷಕ್ಕೆ ಮುಂಚೆ, ಅವರಲ್ಲಿ ಒಂದೇ ಮುದ್ರಾಯಂತ್ರಶಾಲೆಯಾದರೂ ಸ್ಥಾಪಿತವಾಗಲಿಲ್ಲ. ಇಲಿಜಬೆಥಳ ಆಡಳಿತೆಯೊಳಗೆ ಐರ್ಲಂದಿನ ಪಾರ್ಲಿಮೆಂತಿನವರು ಎಪಿಸ್ಕೊಪಾಲವಾದ ರಾಜ್ಯಸಭಾಕ್ರಮಗಳನ್ನು ಮಂದತ್ವವುಳ್ಳ ಔದಾಸೀನ್ಯದಿಂದ ತಕ್ಕೊಂಡಾಗ್ಯೂ ಸುವಾರ್ತೆಯು ಐರ್ಲಂದಿನಲ್ಲಿ ನೆಲೆಯಾಗಲಿಲ್ಲ; ಯಾಕಂದರೆ, ಹಿಂದೆ ಸೂಚಿಸಿದಂತೆ, ಪಪ್ಪಕ ಮತೋದ್ಯೋಗಿಗಳ ಪಾಲನದಿಂದ ಅಲ್ಲಿಯ ಹೇರಳ ಜನರು ದಡ್ಡರೂ ಬಡವರೂ ಬಹುಶಃ ಹಂದಿ ಮೇಯಿಸುವವರೂ ವಿದ್ಯೋಪೇಕ್ಷಕರೂ ಆಗಿದ್ದದ್ದಲ್ಲದೆ ಅಲ್ಲಿಗೆ ಇಂಗ್ಲಂದಿನಿಂದ ಹೋಗುತ್ತಿರುವ ಎಪಿಸ್ಕೊಪಾಲ ರಾಜ್ಯಸಭೆಯ ಹೆಚ್ಚು ಕಡಿಮೆ ಐಶ್ವರ್ಯವಂತರೂ ಗೌರವ್ಯರೂ ಐರಿಷ ಭಾಷೆ ಕಲಿಯದವರೂ ಆದಂಥ ಮತೋದ್ಯೋಗಿಗಳಿಂದ ಅಲ್ಲಿಯಣ ದರಿದ್ರ ಕೆಳ ಪ್ರಜೆಯ ನಂಬಿಗೆಯನ್ನು ಸಂಪಾದಿಸಲಾಗಲಿಲ್ಲ. ಇಂತಿರಲಿಕ್ಕೆ, ಅಲ್ಲಿಯ ಪ್ರಜೆಯಲ್ಲಿ ಪಪ್ಪಕ ಮತದ ದೊಡ್ಡ ಸಭೆಯು ಉಳಿಯಿತು.

ಕ್ರಿ. ಶ. 1603ನೇ ಅಬ್ದ ಇಲಿಜಬೆಥಳ ಉತ್ತರಾಧಿಕಾರಿಯಾದ ಸ್ಕೋತ್ಲಂದಿನ 6ನೇ ಜೇಂಸನು ಇಂಗ್ಲಂದಿನಲ್ಲಿ 1ನೇ ಜೇಂಸನೆನ್ನಿಸಿ ಕೊಂಡನು; ಅವನ ಕೈಯ ಕೆಳಗೆ ಇಂಗ್ಲಂದು ಸ್ಕೋತ್ಲಂದು ಐರ್ಲಂದು ಎಂಬೀ 3 ದೇಶಗಳು ಒಂದೇ ರಾಜ್ಯವಾದವು. ಅವನನ್ನು ಕರೆಸಿದ ಇಂಗ್ಲಂದಿನವರು, ಅವನು ಸರ್ವ ಸಾಮ್ರಾಜ್ಯದಲ್ಲಿ ಎಪಿಸ್ಕೊಪಾಲ ಸಭೆಯನ್ನು ಸ್ಥಾಪಿಸುವನೆಂತ, ಪ್ರತೀಕ್ಷಿಸಿದರು; ಸ್ಕೋತ್ಲಂದಿನವರು,

---

1) 334, 335ನೇ ಪಾನು. 2) 334, 366ನೇ ಪಾನುಗಳು. 3) 369, 370ನೇ ಪಾನು. 4) 300 ಆದಿ ಪಾನು. 5) 412ನೇ ಪಾನು.

ಜೇಂಸನು ತಾನು ಶಿಕ್ಷಿತನಾದ ಪ್ರೆಸ್ಬುತೆರಿಯಾಲ ಅಭಿಪ್ರಾಯಕ್ಕೆ ಮಿಗಿಲಾಸ್ಪದ ಕೊಡುವನೆಂದು, ದಾರಿ ನೋಡಿದರು; ಅವನ ತಾಯಿಯ ಸಲಹೆಗಾರರಾಗಿದ್ದ ಪಪ್ಪಕರು, ಅವನು ತಮಗೆ ಹೆಚ್ಚು ಸ್ವಾತಂತ್ರ್ಯ ಕೊಟ್ಟಾನಲ್ಲದೆ ಒಂದು ವೇಳೆ ತಮ್ಮ ಮತವನ್ನೇ ತಿರಿಗಿ ರಾಜ್ಯಮತವಾಗ ಮಾಡುವನೆಂದು, ಎದುರು ಕಂಡರು;—ಆದರೆ ಚಪಲ ಬುದ್ಧಿಯೂ ಸಂದೇಹಯುತ ಮನಸ್ಸೂ ಅಧಿಕಾರಾಭಿಮಾನವೂ ಉಳ್ಳಂಥ ಜೇಂಸ ರಾಜನು ಎಲ್ಲರಿಗೂ ಸರಿ ತೋರುವ ಹಾಗೆ ನಡಿಯುವದಕ್ಕೆ ಅತ್ಯಸಮರ್ಥನು. ಎಪಿಸ್ಕೊಪಾಲ ರಾಜ್ಯಸಭೆಯಲ್ಲಿ ಶೇರದೆ ನೊನ್ಕೊನ್ಫೊರ್ಮಿಸ್ತರೆನ್ನಿಸಿ ಕೊಂಡ[1] ಸೌವಾರ್ತಿಕರಿಗೂ ಪಪ್ಪಕರಿಗೂ ಅವನು ನಿತ್ಯದಲ್ಲೂ ದಂಡ ಹಾಕುತ್ತಿದ್ದದರಿಂದ ಪಪ್ಪಕರು ಸಹಿಸಲೊಲ್ಲದೆ, ಕ್ರಿ. ಶ. 1605ನೇ ವರುಷ ಮದ್ದಿನ ಒಳಸಂಚು ಎಂಬದನ್ನು ಸಿದ್ಧಿಸಿದರು. 180 ಮಂದಿಯುಳ್ಳ ಸಮಾಜದವರಾದ ಅವರು ಪಾರ್ಲಿಮೆಂತಿನ ಗೃಹದ ಅಡಿಗೆ ಇರುವ ನೆಲಮಾಳಿಗೆಯೊಳಗೆ ಕರೀ ಮದ್ದೂ ಕಲ್ಲುಗಳೂ ತುಂಬಿದ ಪೀಪಾಯಿಗಳನ್ನು ಇಟ್ಟು, ರಾಜನೂ ಪಾರ್ಲಿಮೆಂತಿನವರೆಲ್ಲರೂ ಆ ಗೃಹದೊಳಗೆ ಕೂಡಿ ಬರುವ ದಿನದಲ್ಲಿ ಆ ಮದ್ದಿಗೆ ಸರಬತ್ತಿಯ ಮೂಲಕ ಬೆಂಕಿ ಹಚ್ಚುವದಕ್ಕೆ ಗೈ ಫಾಕ್ಸನೆಂಬವನನ್ನು ನೇಮಿಸಿದರು. ಆ ಜೀವದ್ರೋಹಕ್ಕೆ ವಿಶೇಷಿಸಿದ ದಿನವು ಸಮೀಪಿಸಲು, ಒಳಸಂಚಿನವರಲ್ಲೊಬ್ಬನು ತನ್ನ ನೆಂಟನಾದ ಒಬ್ಬ ಪ್ರಭುವನ್ನು ರಕ್ಷಿಸುವದಕ್ಕೋಸ್ಕರ ಅವನಿಗೆ ಆ ಕಾರ್ಯವನ್ನು ಒಂದು ಪತ್ರಿಕೆಯಿಂದ ಸೂಚಿಸಿ, ಎಚ್ಚರಿಸಲು, ಆ ಪ್ರಭುವು ಆ ಪತ್ರಿಕೆಯನ್ನು ರಾಜಮಂತ್ರಿಗಳಿಗೆ ತೋರಿಸಿದ ಕ್ಷಣವೇ ಅವರು ವಿಚಾರಿಸಿ, ಆ ದೊಡ್ಡ ಗಂಡಾಂತರ ಕಂಡು, ನಿವಾರಿಸಿದರು. ಅದಾದ ಮೇಲೆ ಪಾರ್ಲಿಮೆಂತಿನವರು ಪಪ್ಪಕರ ಸ್ವಾತಂತ್ರ್ಯಗಳನ್ನು ಇನ್ನೂ ಕಡಿಮೆ ಮಾಡಿದ್ದು ಸಹಜ. ತರುವಾಯ ಜೇಂಸ ರಾಜನು ಸ್ಕೋತ್ಲಂದಿನ ಪ್ರೆಸ್ಬುತೆರಿಯಾಲ ಸಭೆಯವರಲ್ಲಿ, ತಾನು ಕ್ರೈಸ್ತ ಸಭೆಯ ಪ್ರಧಾನಾಧಿಪತಿ ಎಂತ ಅವರು ಸಮ್ಮತಿಸಲೊಲ್ಲದ್ದರಿಂದ ರಾಜಾಧಿಕಾರದ ಅಮಿತ್ರರೆಂದು, ಎಪಿಸ್ಕೊಪಾಲ ಅಧ್ಯಕ್ಷರನ್ನೂ ಎಪಿಸ್ಕೊಪಾಲ ಸಭೆಯ ಅನೇಕ ಆಚಾರಗಳನ್ನೂ ಶೇರಿಸಲಿಕ್ಕೋತ್ಸಾಯ ಗೈದದರಿಂದ ಸ್ಕೋತರ ಪ್ರೀತಿಯು ಅವನನ್ನು ತೊಲಗಿ ಹೋಯಿತು; ಅವನು ಇಂಗ್ಲಂದಿನ ಪ್ಯೂರಿತನರನ್ನು[2] ಸಹ ಅದೇ ನೆವನದ ಮೇಲೆ ತಂಟೆ ಪಡಿಸಿದ್ದರಿಂದ ಇವರೂ ಅವನಿಗೆ ಮೆಚ್ಚದವರಾದರು; ಅದಲ್ಲದೆ ಅವನು ಪಾರ್ಲಿಮೆಂತಿನ ಸ್ವತಂತ್ರವನ್ನು ಕುಂದಿಸಿದ್ದರಿಂದಲೂ ತನ್ನ ಅರಮನೆಯಲ್ಲಿ ನೀತಿಚರ್ಯೆಗೆಟ್ಟ ನಡಾವಳಿ ಇರಗೊಟ್ಟದರಿಂದಲೂ ಸಕಲ ಪ್ರಜೆಯೊಲುಮೆಯು ಅವನನ್ನಗಲಿತು. ಹೀಗಿರಲಾಗಿ ಅವನು ಕ್ರಿ. ಶ. 1625ನೇ ಅಬ್ದ ಸತ್ತಾಗ ದೇಶದ ನಿಜ ಮಿತ್ರ

1) 481ನೇ ಪಾನು. 2) 484ನೇ ಪಾನು.

ರಲ್ಲೊಬ್ಬನಿಗೂ ದುಃಖ ಬರಲಿಲ್ಲ. ಅವನಾಳ್ತನದಲ್ಲಿ ಹೇರಳ ಜನ ಪ್ಯೂರಿತನರು ಗುಳೆ ತೆಗೆದು, 8ನೇ ಹೆನ್ರಿ ರಾಜನಿಗೆ ಸ್ವಲ್ಪ ಮುಂಚೆಯೂ ಇಲಿಜಬೆಥ ರಾಣಿಯ ಕಾಲದಲ್ಲಿಯೂ ಇಂಗ್ಲಿಷರಿಂದ ನವದೃಷ್ಟವಾಗಿದ್ದ ಅಮೆರಿಕ ಖಂಡದ ಉತ್ತರ ಭಾಗದ ಪೂರ್ವ ತೀರಕ್ಕೆ ಹೋಗಿದ್ದರು; ಅದು ವಿನಹ ಕ್ರಿ. ಶ. 1581ನೇದಕ್ಕೆ ಸ್ಕೋತ್ಲಂದಿನ ಪ್ರಜೆಯಲ್ಲಿ ಪ್ರೆಸ್ಬುತೆರಿಯಾಲ ಪರಿಪಾಲನಕ್ರಮದ ಮತ್ತು ಪ್ರಜೆಯ ಸ್ವಾತಂತ್ರ್ಯದ ರಕ್ಷಣಕ್ಕಾಗಿ ಹುಟ್ಟಿದ್ದ ಮತ್ತೊಂದು ಕೊವೆನಂತ್[1] ಅಂದರೆ ಸಾರ್ವಜನೀನ ಕೊವೆನಂತ್ ಎಂಬದು ಬಲ ಗೊಂಡಿತ್ತು.

ಜೇಂಸನ ಸ್ಥಳಕ್ಕೆ ಬಂದ 1ನೇ ಚಾರ್ಲ್ಸನೆಂಬ ಕುಮಾರನು ತನ್ನ ತಂದೆಯ ಹಾಗೆ ಅತ್ಯಧಿಕಾರೇಚ್ಛೆಯುಳ್ಳವನಾಗಿ, ಸ್ಕೋತ್ಲಂದಿನ ಪ್ರೆಸ್ಬುತೆರಿಯಾಲ ಕ್ರಮದವರನ್ನು ಬಾಧಿಸಿ, ಉಚ್ಚಸ್ಥಾನಭಾವದ[2] ಪ್ರಧಾನಾಧ್ಯಕ್ಷನಾದ ಲಾದನೆಂಬವನ ಸಲಹೆಯೊಡನೆ ಇಂಗ್ಲಂದಿನಲ್ಲಿ ಪಪ್ಪಕತ್ವದಂಥ ಸಭಾಪರಿಪಾಲನಕ್ರಮಕ್ಕೆ ಸಹಾಯ ಕೊಟ್ಟು, ಫ್ರಂಚಿನ ರಾಜನಾಗಿದ್ದ 4ನೇ ಹೆನ್ರಿಯ[3] ಪಪ್ಪಕಳಾದ ಮಗಳನ್ನು ಮದಿವೆ ಮಾಡಿ ಕೊಂಡು, ಮುಖ್ಯವಾಗಿ ಇಂಗ್ಲಿಷ ಪಾರ್ಲಿಮೆಂತಿನವರ ಅಧಿಕಾರವನ್ನು ಕೊಂಚ ಪಡಿಸಲಿಕ್ಕೆ ಪೇಚಾಡಿದ ಕಾರಣ ದೇಶಪ್ರಿಯರಾದಂಥ ಹೆಚ್ಚು ಪ್ರಜೆಯು ಅವನಿಗೆ ಅಗದೀ ಮೆಚ್ಚದೆ ಹೋಯಿತು. ಪ್ಯೂರಿತನರಲ್ಲನೇಕರು ತಿರಿಗಿ ಗುಳೆ ತೆಗೆದು, ಅಮೆರಿಕಕ್ಕೆ ಐದಿದರು. ತರುವಾಯ ಕ್ರಿ. ಶ. 1641ನೇ ವರುಷದ ಒಕ್ತೋಬರ್ ತಿಂಗಳಲ್ಲಿ ಚಾರ್ಲ್ಸನ ಅಪ್ಪಣೆಯ ಮೇಲೆ[4] ಐರ್ಲಂದಿನ ಪಪ್ಪಕ ಪ್ರಜೆಯವರು ಮಹಾ ಕ್ರೂರತ್ವದಿಂದ 40,000 ಸೌವಾರ್ತಿಕ ಕ್ರೈಸ್ತರನ್ನು ಹತ ಮಾಡಿ, 2 ವರುಷವೇ ಈ ಪ್ರಕಾರದ ಜೀವಹಿಂಸೆ ನಡಿಸುತ್ತಿರುವಲ್ಲಿ ಹ್ಯಾಗಾದರೂ 2ಲಕ್ಷ ಸೌವಾರ್ತಿಕರು ವಧಿತರಾದರು; ಆಗಿನ 8ನೇ ಉರ್ಬಾನ ಪಪ್ಪನು[5], ಸಂತರ ಆ ದ್ವೀಪವನ್ನು[6] ಕಥರರನ್ನಳಿಸಿ ಶುದ್ಧೀಕರಿಸಿದ್ದು ಉತ್ತಮ ಕಾರ್ಯವೆಂದು, ಹೇಳಿ, ಸಮ್ಮತಿ ತೋರಿಸಿದನು. ಈ ಅತಿ ದುಷ್ಟ ಪಾತಕದಿಂದ ಇಂಗ್ಲಂದಿನ ಮತ್ತು ಸ್ಕೋತ್ಲಂದಿನ ಪ್ರಜೆಯಲ್ಲಿ ಒಂದು ದೊಡ್ಡ ಗುಲ್ಲು ಎದ್ದದ್ದು ತನ್ನಿಂದ ತಾನೇ ತಿಳಿಯುತ್ತದೆ. ಅದಕ್ಕೀಚೆ ಉದ್ಭವಿಸಿದ ಪ್ರಜಾಪರಸ್ಪರಯುದ್ಧದಲ್ಲಿ ಇಂಗ್ಲಿಷ ಪಾರ್ಲಿಮೆಂತಿನವರೂ ಪ್ರೆಸ್ಬುತೆರಿಯಾಲ ಕ್ರಮದವರೂ ಇಂದೆಪೆಂದೆಂತರೂ[7] ಕ್ರಿ. ಶ. 1643ನೇ ಅಬ್ದ ತಮ್ಮ ಮತಕ ಮತ್ತು ಪ್ರಜೆಯ ಸ್ವಾತಂತ್ರ್ಯವನ್ನುಳಿಸುವದಕ್ಕೂ ದೇವಾರಾಧನಾಕ್ರಮ ಸಭಾಪರಿಪಾಲನಕ್ರಮಗಳೆರಡನ್ನು ಒಂದೇ ಪ್ರಕಾರ ಮಾಡಿಡುವದಕ್ಕೂ ಎಪಿಸ್ಕೊಪಾಲ ಅಧ್ಯಕ್ಷರ ಆಳ್ತನವನ್ನು ನಿರ್ಮೂಲಿಸುವದಕ್ಕೂ ದೊಡ್ಡದೊಂದು

1) 491ನೇ ಪಾನು ಸರಿ ನೋಡು. 2) 482ನೇ ಪಾನು. 3) 462ನೇ ಪಾನು. 4) ಹತ್ಯಕಾರ್ಯದ ಮುಖ್ಯಸ್ಥರು ಹೀಗೆ ಹೇಳಿದರು. 5) 475ನೇ ಪಾನು. 6) 303ನೇ ಪಾನು. 7) 484ನೇ ಪಾನು.

ಕೊವೆನಂತನ್ನು[1] ಕಟ್ಟಿ ಕೊಂಡು, ಕಡು ಇಂದೆಪೆಂದೆಂತನಾದ ಒಲಿವರ್ ಕ್ರೊಂವೆಲನ ಮುಖ್ಯಸ್ಥಿಕೆಯೊಳಗೆ ಗೆದ್ದರು; ಇಂಗ್ಲಂದಿನಲ್ಲಿ ಅಂದು ಪ್ರಜಾರಾಜತನವು ಸ್ಥಾಪಿತವಾಗಿ, ಕ್ರೊಂವೆಲನು ಮಹಾಪರಿಪಾಲಕಪ್ರಭುವಾದನು; ಅದು ಹೊರ್ತಾಗಿ ಸ್ಕೋತ್ಲಂದಿನಲ್ಲಿದ್ದಂತೆ ಅಲ್ಲಿ ಸಹ ಪ್ರೆಸ್ಬುತೆರಿಯಾಲ ಸಭಾಪರಿಪಾಲನಕ್ರಮವು ರೂಢಿ ಬಿತ್ತು. ಆದರೆ ಪಾರ್ಲಿಮೆಂತಿನವರು 1ನೇ ಚಾರ್ಲ್ಸ ರಾಜನಿಗೆ ಮರಣಾಜ್ಞೆ ನಿರ್ಣಯಿಸಿ, ಕ್ರಿ. ಶ. 1649ನೇ ವರುಷ ತೀರಿಸಿ ಬಿಟ್ಟರು.

ಕ್ರೊಂವೆಲನು ಕ್ರಿ. ಶ. 1658ನೇದಕ್ಕೆ ಮಡಿದ ಹಿಂದೆ ಅವನ ಮಗನು ಮಹಾಪರಿಪಾಲಕಪ್ರಭುವಾದರೂ ತಂದೆಯ ಘಟ್ಟಿಗತನವು ಅವನಲ್ಲಿರದ್ದರಿಂದ 2 ವರುಷಕ್ಕಿತ್ತ 1ನೇ ಚಾರ್ಲ್ಸನ ಮಗನಾದ 2ನೇ ಚಾರ್ಲ್ಸನಿಗೆ ಅರಸುತನಕ್ಕೆ ಬರಲಿಕ್ಕೆ ಕೈಗೂಡಿತು. ಅವನು ಸ್ವಾಧಿಕಾರಕಾಮಿಯೂ ಅಸಹನಭಾವಿಯೂ ಕುಮಾರ್ಗಿಯೂ ಅಂತಃಪಪ್ಪಕನೂ. ಅವನು, ಉಚ್ಚಸ್ಥಾನದ ಎಪಿಸ್ಕೊಪಾಲತ್ವವು[2] ಪಪ್ಪಕತ್ವಕ್ಕೆ ಈಡೆಂತ, ತನ್ನೊಳಾಲೋಚಿಸಿ ಕೊಂಡು, ಅದನ್ನು ರಾಜ್ಯಸಭಾಮತವೆಂದು, ಸ್ಥಾಪಿಸಿ, ಕ್ರಿ. ಶ. 1662ನೇ ವರುಷ ಒಂದು ಕಠಿಣವಾದ ಯೂನಿಫೊರ್ಮಿತಿ ಅಕ್ತನ್ನು[3] ಸಾರಿಸಿದನು. ಆಗ ಪ್ರೆಸ್ಬುತೆರಿಯಾಲ ಮತ್ತು ಇಂದೆಪೆಂದೆಂತ ಸಭಾಪರಿಪಾಲನಕ್ರಮದವರಾಗಿರುವ ಅನೇಕ ಸಭೋದ್ಯೋಗಿಗಳು ಎಪಿಸ್ಕೊಪಾಲವಾದ್ದನ್ನು ಶೇರಲೊಲ್ಲದಿರಲು, ಅವನು ಇಂಗ್ಲಂದೊಂದರಲ್ಲಿ ಮಾತ್ರ 2000 ಮಂದಿಯಾದ ಅಂಥವರ ಉದ್ಯೋಗ ಕಳಿಸಿದನು. ಪ್ರಜೆಯಲ್ಲಿ ಹೇರಳರು ಮರಳಿ ತಾಪ ಪಟ್ಟು, ದೇಶ ಬಿಟ್ಟು ಹೋದರು. ಬಳಿಕ ಚಾರ್ಲ್ಸನು ಪಪ್ಪಕರನ್ನು ಒಂದು ಇಂದಲ್ಜೆನ್ಸ್ ಅಕ್ತೆಂಬ ಕ್ಷಮಾನಿರ್ಣಯದಿಂದ ಮೆಚ್ಚಿಸಲಿಕ್ಕೆ, ಪಾರ್ಲಿಮೆಂತಿನವರು ಕೋಪಿಸಿದದರಿಂದ ಕ್ರಿ. ಶ. 1673ನೇ ಅಬ್ದ ಅವನು ತೆಸ್ತ್ ಅಕ್ತು ಅಂದರೆ ಸಾಕ್ಷಿನಿರ್ಣಯವೆಂಬದನ್ನು ಪ್ರಕಟಿಸ ಬೇಕಾಯಿತು; ಅದರ ಮೇಲೆ ನೊನ್ಕೊನ್ಫೊರ್ಮಿಸ್ತರೆಲ್ಲರೂ[4] ಸೈನಿಕ ಕಾರ್ಯಭಾರಿಕ ಎಂಬೀ ಎರಡು ರಾಜಕ ಉದ್ಯೋಗಗಳಲ್ಲಿ ಒಂದನ್ನು ಹೊಂದಲಿಕ್ಕೂ ಪಾರ್ಲಿಮೆಂತಿನಲ್ಲಿ ಶೇರಲಿಕ್ಕೂ ಅನರ್ಹರೆಂಬ ವಿಷಮ ನ್ಯಾಯವು ಸ್ಥಾಪಿತವಾಯಿತು. ಆ ರಾಜನು ತನ್ನ ಆಳ್ತನದ ಅಂತದಲ್ಲಿ ಬಹಿರಕ್ಕೂ ಪಪ್ಪನಾದನು. ಅವನ ಸಹೋದರನಾದ ಜೇಂಸನು ಕ್ರಿ. ಶ. 1685ನೇ ವರುಷ ಅವನನ್ನು ವಿಷ ಕೊಟ್ಟು ಕೊಂದ ತರುವಾಯ ಇವನು ಅರಸನಾಗಿ, 2ನೇ ಜೇಂಸನೆನ್ನಿಸಿ ಕೊಂಡು, ಯೇಸುವಿತರ ಸಹಾಯ ಪಡೆದು, ಪಪ್ಪಕ ಸಭೆಯು ಮರಳಿ ರಾಜ್ಯಸಭೆಯಾಗಲಿಕ್ಕೆ ಅಧಿಕ ಪ್ರಯತ್ನ ಮಾಡುವವನಾದನು. ಆ ಇಬ್ಬರು ಸಹೋದರರ ವೈನುನಸ್ಯದಿಂದ 28 ವರುಷದೊಳಗೆ ಸ್ಕೋತ್ಲಂದೊಂದರಲ್ಲೇ 18,000 ಜನರು ಬಹು ತ

1) 499ನೇ ಪಾನು. 2) 499ನೇ ಪಾನು. 3) 480ನೇ ಪಾನು. 4) 481ನೇ ಪಾನು.

ರದ ಭಂಗ ಪಟ್ಟನಂತರ ಕ್ರಿ. ಶ. 1688ನೇ ಅಬ್ದ ಎಪಿಸ್ಕೊಪಾಲರೂ ದಿಸ್ಸೆಂತರರೂ ಆದಂಥ ಸಕಲ ಇಂಗ್ಲಿಷ ಪ್ರಜೆಯವರು ಒಂದೇ ಮನಸ್ಸಾಗಿ, ಹೊಲ್ಲಂದಿನಲ್ಲಿ ಪ್ರಜಾರಾಜತ್ವದ ಅಧಿಪತಿಯಾದಂಥ ಓರಾಂಜಿನ ವಿಲ್ಲಿಯಮನನ್ನು (ವಿಲ್ಹೆಲ್ಮನನ್ನು)[1], ತಮ್ಮ ಅರಸನೆಂದು, ಆರಿಸಿ ಕೊಂಡು, ಕರೆಸಿದರು; 2ನೇ ಜೇಂಸನು ಫ್ರಂಚು ದೇಶಕ್ಕೋಡಿ ಹೋದನು. ವಿಲ್ಲಿಯಮನು 2ನೇ ಜೇಂಸನ ಅಳಿಯನಲ್ಲದೆ ಉತ್ತಮ ಸೌವಾರ್ತಿಕ ಕ್ರೈಸ್ತನು. ಅವನು 3ನೇ ವಿಲ್ಲಿಯಮನೆನ್ನಿಸಿ ಕೊಂಡು, ರಾಜನಾದ ಮೇಲೆ ಪ್ರೆಸ್ಬುತೆರಿಯಾಲ ಕ್ರಮದ ಕ್ರೈಸ್ತರಿಗೆ ಮಿಗಿಲಧಿಕಾರವು ಶಿಕ್ಕಿದರೂ ಅವರು ತಮಗೆ ಬಾಧಕರಾಗಿದ್ದವರಲ್ಲಿ ಒಬ್ಬನಿಗಾದರೂ ಮುಯ್ಯಿಗೆ ಮುಯ್ಯಿ ತೀರಿಸದೆ, ಎಲ್ಲರಿಗೂ ಮನ್ನಿಸಿ ಬಿಟ್ಟರು. ವಿಲ್ಲಿಯಮನು ಆಳಲಿಕ್ಕೆ ಹತ್ತಿ 1ವರುಷ ಕಳೆದನಂತರ (1689) ಸಕಲ ಕ್ರೈಸ್ತರಿಗೂ ತಮ್ಮ ತಮ್ಮ ಅಭಿಪ್ರಾಯವುಳ್ಳ ಮತಾಚಾರದ ಪೂರ್ಣ ಸ್ವಾತಂತ್ರ್ಯವನ್ನಿತ್ತನು; ಇಂಗ್ಲಂದಿನಲ್ಲಿ ಎಪಿಸ್ಕೊಪಾಲ ರಾಜ್ಯಸಭೆಯು ಪ್ರಬಲವಾಗಿ ಉಳಿಯಿತು, ಸ್ಕೋತ್ಲಂದಿನಲ್ಲಿ ಪ್ರೆಸ್ಬುತೆರಿಯಾಲ ಸಭೆಯು ಮುಂಚಿನ ಶುದ್ಧತ್ವದಲ್ಲಿ ಪುನಃಸ್ಥಾಪಿತವಾಯಿತು, ಐರ್ಲಂದಿನಲ್ಲಿ ಸಣ್ಣ ಎಪಿಸ್ಕೊಪಾಲರಾಜ್ಯಸಭೆಯ ಸಂಗಡ ಪಪ್ಪಕತ್ವವು ಅಧಿಕ ಸಂಖ್ಯೆಯವರಲ್ಲಿ ಉಳಿಯಿತು. ಕ್ರಿ. ಶ. 1829ನೇ ಅಬ್ದ ಆ ತೆಸ್ತ್ ಅಕ್ತೆಂಬದು[2] ಸಮಸ್ತ ಬ್ರಿತಿಷ ರಾಜ್ಯದಲ್ಲಿ ರದ್ದಾಯಿತು. ಐರ್ಲಂದಿನಲ್ಲಿ ಈಗ ನೂರುನೂರು ಜನರೊಳಗೆ 11 ಮಂದಿ ಎಪಿಸ್ಕೊಪಾಲ ರಾಜ್ಯಸಭ್ಯರೂ 81 ಮಂದಿ ಪಪ್ಪಕರೂ 8 ಮಂದಿ ಪ್ರೆಸ್ಬುತೆರಿಯಾಲ ಮೊದಲಾದ ದಿಸ್ಸೆಂತರರೂ ಇದ್ದಾರು; ಇಂಗ್ಲಂದಿನಲ್ಲಿ 3ನೇ ಅಂಶಕ್ಕಿಂತ ಹೆಚ್ಚು ಮಂದಿ ದಿಸ್ಸೆಂತರರಿದ್ದಾರು. ಇಂಗ್ಲಂದಿನಲ್ಲಿಯೂ ಐರ್ಲಂದಿನಲ್ಲಿಯೂ ನೊನ್ಕೊನ್ಫೊರ್ಮಿಸ್ತರು ತಮ್ಮ ದೇವಾಲಯಗಳ ಮತ್ತು ಸಭೋದ್ಯೋಗಿಗಳ ಸಂಬಂಧವಾದ ಖರ್ಚಿಗೆ ಅಧಿಕಾರಸ್ಥರ ಒತ್ತಾಸೆ ಇಲ್ಲದವರಾಗಿರ ಬೇಕಾದ್ದು ಮಾತ್ರವಲ್ಲದೆ ರಾಜ್ಯಸಭೆಯ ಸಂಬಂಧವಾದ ಖರ್ಚಿಗಾಗಿ ಕಂದಾಯ ತೆರ ಬೇಕು[3]. ರಾಜ್ಯಸಭೆಯ ದೇವಾಲಯಗಳೊಳಗೆ ಪ್ರಸಂಗಿಸುವದಕ್ಕೆ ದಿಸ್ಸೆಂತರರಿಗೆ ಅಪ್ಪಣೆ ಇಲ್ಲ.



1) ಅವನು 472ನೇ ಪಾನಿನಲ್ಲಿ ಹೆಸರು ಹೇಳಿರುವವನ ಉತ್ತರಾಧಿಕಾರಿಗಳಲ್ಲೊಬ್ಬನು.
2) 500ನೇ ಪಾನು. 3) ಕ್ರಿ. ಶ 1871ನೇ ಅಬ್ದ ಐರ್ಲಂದಿನಲ್ಲಿ ಎಪಿಸ್ಕೊಪಾಲ ರಾಜ್ಯಸಭೆಯು ತೀರ ಬೇಕೆಂತ, ಬ್ರಿತಿಷ ಪಾರ್ಲಿಮೆಂತಿನವರ ನಿರ್ಣಯು; ಆಗ ಅಲ್ಲಿ ಎಪಿಸ್ಕೊಪಾಲರು ಮುಂತಾದವರೆಲ್ಲರು ಒಂದೇ ಸ್ವತಂತ್ರದವರಾಗಿರುವರು.

## 62. ಫ್ರಂಚಿನೊಳಗಿನ ಪುನಃಸ್ಥಾಪಿತ ಸಭೆಯು.

ಪರೀಸು ಪಟ್ಣದ ರಕ್ತವಿವಾಹವು.

ಪುನಃಸ್ಥಾಪನಾಕಾಲದಲ್ಲಿ ಫ್ರಂಚು ದೇಶಕ್ಕೆ ಸೌವಾರ್ತಿಕ ಬೋಧೆಯು ಗೆರ್ಮಾನಿಯದಿಂದ ಬೇಗ ಬಂದು[1] ಬೇರೂರಿದ್ದಕ್ಕೆ ಫ್ರಂಚಿನ ದಕ್ಷಿಣ ಭಾಗದಲ್ಲುಳಿದಿರುವ ವಲ್ದೆನ್ಸರು[2] ಸಹ ಕಾರಣರಾದರು; ಆದರೂ ಅನೇಕ ಬಾಧೆಗಳನ್ನೂ ಭಯಂಕರ ಯುದ್ಧಗಳನ್ನೂ ದಾಟಿದ ಮೇಲೆ ಮಾತ್ರ ಆ ಬೋಧನೆಯವರು ಅಲ್ಲಿ ತಮಗೆ ಸಹ್ಯವಾದ ಸ್ಥಿತಿಯೊಳು ಶೇರಿದರು. ಗೆರ್ಮಾನಿಯದ ಕೈಸರನಾದ 5ನೇ ಕರ್ಲನ ಸಂಗಡ ಅನೇಕ ವರುಷ ಯುದ್ಧ ಮಾಡುತ್ತಿರುವ ವಲ್ವಾ ಕುಟುಂಬದ 1ನೇ ಫ್ರಂಚನೆಂಬ ಫ್ರಂಚಿನ ಅರಸನು ಹಿಂದೆ ಹೇಳಿದ ಆ ಸಮಯದಲ್ಲಿ[3] ಗೆರ್ಮಾನಿಯದ ಸೌವಾರ್ತಿಕರಿಗೆ ಕೈಸರನೆದುರಿನಲ್ಲಿ ಫುಸಲಾಯಿಸುತ್ತಿದ್ದರೂ ದುಷ್ಟ ಮತೋದ್ಯೋಗಿಗಳ ಕುತಂತ್ರಕ್ಕೊಳಗಾಗಿ, ತನ್ನ ಪ್ರಜೆಯೊಳಗಿನ ಸೌವಾರ್ತಿಕ ಕ್ರೈಸ್ತರೆಲ್ಲರಿಗೂ, ಮುಖ್ಯವಾಗಿ ಆ ವಲ್ದೆನ್ಸರಿಗೆ, ಹಿಂಸೆ ಪಡಿಸುತ್ತಿದ್ದನು. ದೃಷ್ಟಾಂತಕ್ಕಾಗಿ ಕ್ರಿ. ಶ. 1545ನೇ ವರುಷ ಅವನು ಪ್ರೊವಙ್ಸು ಎಂಬ ಪ್ರದೇಶದಲ್ಲಿ ವಲ್ದೆನ್ಸರ 22 ಊರುಗಳನ್ನು ಸುಟ್ಟು, ಅವುಗಳಲ್ಲಿದ್ದ ಸುಮಾರು ಎಲ್ಲಾ ನಿವಾಸಿಗಳನ್ನು, ಗಂಡಸರನ್ನೂ ಹೆಂಗಸರನ್ನೂ ಮಕ್ಕಳನ್ನೂ, ತಾರತಮ್ಯ ನೋಡದೆ, ಕೊಲ್ಲಿಸಿದನು; ಅವನು ಒಂದೇ ಊರಲ್ಲಿ 700 ವಲ್ದೆನ್ಸರನ್ನು ಹತ ಮಾಡಿಸಿದಲ್ಲಿ ಒಂದು ಉಗ್ರಾಣದೊಳಗೆ ಹೊಕ್ಕೊಂಡಿದ್ದ 40 ಜನ ಹೆಂಗಸರನ್ನೂ ಮಕ್ಕಳನ್ನೂ ಸಜೀವವಾಗಿ ದಹಿಸಿದನು. ಪಪ್ಪಕರು ಸೌವಾರ್ತಿಕರ ಮನೆಗಳನ್ನು ಕೆಡಿಸಿದ್ದಲ್ಲದೆ ಅವರ ಹೊಲಗಳನ್ನು ಹಾಳುಗೈದು, ಮರಗಳನ್ನು ಕಡೆದು, ಪೈರುಗಳನ್ನು ನಶಿಸುವಷ್ಟು ದ್ವೇಷವನ್ನು ಸಹ ತೋರಿಸಿದರು. ಸೌವಾರ್ತಿಕರಲ್ಲನೇಕರು ಸ್ವಿಟ್ಸೆರ್ಲಂದಿಗೆ ಓಡಿ ಹೋದರು. ಆದರೆ ಕಾಡುಮೃಗಗಳಿಗೆ ಮಾತ್ರವೇ ತಕ್ಕಂಥ ಆ ಪಪ್ಪಕರ ಕ್ರೂರತ್ವದ ಮೇಲೆ ಸಕಲ ಮಂದಿ ಗುಣವಂತರಿಗೆ ಹುಟ್ಟುವ ಅಸಹ್ಯತೆಯ ದೆಸೆಯಿಂದಲೂ ಹಿಂಸೆ ಪಡುವ ಹೇರಳರಲ್ಲಿ ಗೋಚರಿಸುವ ವಿಶ್ವಾಸಾನಂದದ ದೆಸೆಯಿಂದಲೂ ಸುವಾರ್ತಾಬೋಧನೆಯ ಮಿತ್ರರು ಹೆಚ್ಚುತ್ತಿದ್ದರು; ಅದು ಹೊರ್ತಾಗಿ ಯಶಸ್ವಿಯಾದ ಕಲ್ವೀನನು[4] ರಚಿಸಿ ವಲ್ದೆನ್ಸರು ತಮ್ಮ ಖರ್ಚಿನ ಮೇಲೆ ಛಾಪೆ ಮಾಡಿಸಿದ್ದ ದೇವವಾಕ್ಯದ್ದೊಂದು ಫ್ರಂಚ ಭಾಷಾಂತರದಿಂದ ಸಕಲ ಜನರಿಗೆ ಸತ್ಯದ ಶೆಲೆಗೆಯೇ ಬರುವದಕ್ಕೆ ಮಾರ್ಗವಾಯಿತು. ಕಲ್ವೀನನು ಗೆನ್ಫ ಪಟ್ಣದಲ್ಲಿ ಪುನಃಸ್ಥಾಪಕನಾಗಿದ್ದಂದಿನಿಂದ ಫ್ರಂಚಿನಲ್ಲಿ

---

1) 437ನೇ ಪಾನು. 2) 378ನೇ ಪಾನು. 3) 444ನೇ, 446ನೇ ಪಾನುಗಳು. 4) 437ನೇ ದಾದಿ ಪಾನು.

ಹೆಚ್ಚಾಗಿ ಕಲ್ವೀನಕ ಶಾಖೆಯವರು ಪ್ರಬಲರಾದರು. ಕ್ರಿ. ಶ. 1553ನೇ ವರುಷ ಫ್ರಂಚಿನಲ್ಲಿಯ ಸೌವಾರ್ತಿಕರಿಗೆ ಹೂಗೊನೊತ್ತರೆಂಬ ಹಾಸ್ಯದ ಉಪನಾಮವು ಬಂತು; ಹ್ಯಾಗಂದರೆ, ಅವರು ಏಕಾಂತ ಸ್ಥಳಗಳಲ್ಲಿಯೂ ಜನಪದವಿಲ್ಲದ ಗೃಹಗಳಲ್ಲಿಯೂ ಗೋಪ್ಯ ಗುಹೆಗಳಲ್ಲಿಯೂ ಮುಖ್ಯವಾಗಿ ರಾತ್ರಿಹೊತ್ತು ದೇವಾರಾಧನೆಗೆ ಕೂಡಿ ಬರ ಬೇಕಾದಲ್ಲಿ ತೂರ್ಜೆಂಬ ಪಟ್ಣದ ಹೂಗೊ ಬಾಗಲಿನ ಹತ್ತರ ಸಹ ಶೇರುತ್ತಿದ್ದರು; ಆದರೆ ಬಹು ಕಾಲಕ್ಕೆ ಮುಂಚೆ ಸತ್ತಿದ್ದ ಹೂಗೊವೆಂಬ ಅರಸನು ಭೂತವಾಗಿ ಅಲ್ಲಿಯೇ ಸಂಚರಿಸುತ್ತಾನೆಂಬ ಅಪವಿಶ್ವಾಸ ಹಿಡು ಕೊಂಡಿರುವ ಪಪ್ಪಕ ಪ್ರಜೆಯು ಅಲ್ಲಿಯೂ ಸಂಘ ನೆರೆಯುತ್ತಿರುವ ಸೌವಾರ್ತಿಕರನ್ನು,' ಹೂಗೊನೊತ್ತರು ಅಂದರೆ ಹೂಗೊವಿನ ಭೂತಗಳೆಂದು, ಬೈಯುವದಾಯಿತು.

ಆದರೆ ಅಷ್ಟರೊಳಗೆ ಕ್ರಿ. ಶ. 1547ನೇ ವರುಷ 2ನೇ ಹೆನ್ರಿಯು 1ನೇ ಫ್ರಂಚ ರಾಜನ ಉತ್ತರಾಧಿಕಾರಿಯಾಗಿದ್ದನು. ಅವನು ತನ್ನ ತಂದೆಯಂತೆಯೇ ಕರ್ಲ ಕೈಸರನೆದುರಿನಲ್ಲಿ ಗೆರ್ಮಾನಿಯದ ಸೌವಾರ್ತಿಕರಿಗೆ ಆಶ್ರಯದಾಶೆ ತೋರಿಸುತ್ತಿರುವಲ್ಲಿ ತಂದೆಗಿಂತ ಇನ್ನೂ ಹೆಚ್ಚಾಗಿ ಸ್ವರಾಜ್ಯದೊಳಗಿನವರಿಗೆ ಬಾಧಕನಾದನು; ಪಪ್ಪಕ ಮತೋದ್ಯೋಗಿಗಳೂ ಒಬ್ಬ ಜಾರಸ್ತ್ರೀಯೂ[1] ಅವನ ಸಲಹೆಗಾರರು. ಎಲ್ಲಾ ದೊಡ್ಡ ಪಟ್ಣಗಳಲ್ಲಿ ಗುಪ್ತವಿಚಾರಣಸ್ಥಾನಗಳನ್ನಿಡಲಾಯಿತು; ಅನೇಕ ನೂರು ಮಂದಿ ನಿರಪರಾಧಿಗಳು ಚಿತಿಗಳಲ್ಲಿಯೂ ಖಡ್ಗಧಾರೆಗಳಿಂದಲೂ ರಕ್ತಸಾಕ್ಷಿಗಳಾದರು; ಒಂದು ದೇವವಾಗ್ಭಾಷಾಂತರ ಮಾರುವದಾಗಲಿ ಇಟ್ಟು ಕೊಳ್ಳುವದಾಗಲಿ ಅಗ್ನಿಮರಣಕ್ಕೆ ಹೇತುವಾಗುತ್ತಿರುವದು[2]; ಹೆನ್ರಿ ಅರಸನು ತಾನು ಸಹ ಬಹು ಸಾರಿ ಹನನಸ್ಥಳಕ್ಕೆ ಬಂದು, ಔತೋ ದಾ ಫೇಗಳನ್ನು[3] ನೋಡುತ್ತಿರುವನು. ಆದಾಗ್ಯೂ ಆ ಕಥರರೆಂಬವರನ್ನು ನಿರ್ಮೂಲಿಸುವದು ಅವನಿಂದಾಗದ್ದು ಮಾತ್ರವಲ್ಲದೆ ಅವನ ಅರಮನೆಯಲ್ಲಿಯಾದರೂ ಅವನ ಸುತ್ತ ಮುತ್ತಲೂ ಸೌವಾರ್ತಿಕರಿದ್ದ ಹಾಗಾಯಿತು. ಅಂದು ಫ್ರಂಚಿನೊಳಗೆ ಒಂದು ಪ್ರತ್ಯೇಕ ರಾಜ್ಯವಾದ ನವರ್ರವೆಂಬಲ್ಲಿಯ ಬುರ್ಬೊಜ್ ಎಂಬ ಕುಟುಂಬದ ಶ್ರೀಮಂತರಾದರೂ ಸೌವಾರ್ತಿಕ ಸಭೆಯ ಅವಯವಗಳಾದರು; ಅವರು ಹೆನ್ರಿಗೆ ಹತ್ತರದ ನೆಂಟರೇ. ಹೀಗಿರಲಿಕ್ಕೆ ಪಪ್ಪಕ ಸಭೆಗೆ ಸುರಂಗೆ ಇಟ್ಟಂತಾಯಿತು. ಹೆನ್ರಿಯು ಅದು ಕಂಡು, ಈಗ ಅಧಿಕ ಹಿಂಸೆ ಅಗತ್ಯವಾಯಿತೆಂತ, ಯೋಚಿಸಿ, ಸ್ವಲ್ಪ ಕಾಲದೊಳಗೆ ಸಕಲ ಶೆರೆಮನೆಗಳನ್ನು ಸೌವಾರ್ತಿಕ ಸತ್ಸಾಕ್ಷಿಗಳಿಂದ[4], ಮರಣಕ್ಕೆ ಪಾತ್ರರೆಂದು, ತುಂಬಿಸಿದ ಕ್ಷಣವೇ ದೇವರು ಅವನಿಗೆ ಅಡ್ಡ ಬಂದನು; ಹ್ಯಾಗಂದರೆ, ಇಂಗ್ಲಂದಿನ ರಕ್ತದ ಮೇರಿ ಎಂಬ

---

1) Diana de Poitiers. 2) 473ನೇ ಪಾನು ಸರಿ ನೋಡು. 3) 473ನೇ ಪಾನು.
4) 104ನೇ ಪಾನು.

ರಾಣಿಯು ಸತ್ತ ಈಚೆ ಆ ಅರಸನು ಕ್ರಿ. ಶ. 1559ನೇ ವರುಷದ ಜುಲಾಯಿ ತಿಂಗಳಲ್ಲಿ ತನ್ನ ಮಗಳಿಗೂ ಸ್ಪಾನಿಯದ ಆ 2ನೇ ಫಿಲಿಪ್ಪನಿಗೂ[1] ವಿವಾಹ ಮಾಡಿಸುವಾಗ ತಾನು ಸಹ ದ್ವಂದ್ವಯುದ್ಧವಾಡುವಲ್ಲಿ ಮುರಿದ ಈಟಿಯದೊಂದು ರವೆಯು ಅವನ ಕಣ್ಣು ಪಾರಾಗಿ ಮೆದುಲಿನೊಳಗೆ ಶೇರಿದ ಮೇಲೆ ಅವನು ವಾಚಾತೀತ ವೇದನೆಯೊಳಗೆ 11 ದಿನಕ್ಕಿತ್ತ ಸತ್ತನು.

ಆಗ ಅವನ ನಾಲ್ವರು ಅಪ್ರಾಪ್ತವಯಸ್ಸಿನ ಕುಮಾರರಲ್ಲಿ 2ನೇ ಫ್ರಂಚನೆಂಬ 16 ವರುಷದ ಹುಡುಗನು ರಾಜನಾದನು; ಇವನಿಗೆ ಮದಿವೆಯಾದ ಸ್ಟ್ಯೂವರ್ತಿನ ಮೇರಿಯ[2] ಮೂಲಕ ಗೀಸು ಕುಟುಂಬದವರು ಅವನ ಮನಸ್ಸು ತಮ್ಮ ವಶ ಮಾಡಿ ಕೊಂಡು, ತಾವೇ ಆಳುವಂಥವರಾಗಿ, ಪುನಃಸ್ಥಾಪನಾಕಾರ್ಯವನ್ನು ಬೇರೊಂದಿಗೆ ಕೀಳಲೊದ್ದಾಡುತ್ತಾ ಬಂದರು. ಅವರಲ್ಲೊಬ್ಬ ಕರ್ದಿನಾಲುದ್ಯೋಗಿಯಾದ ಚಾರ್ಲ್ಸನು ಪರೀಸು ಪಟ್ಣದಲ್ಲಿ ಪಾರ್ಲಿಮೆಂತಿನವರೊಳಗಿನ ಮತ್ತು ಆಧ್ಯರೊಳಗಿನ ಸೌವಾರ್ತಿಕರನ್ನು ಸಹ ಹೊಂಚಿ ಹಿಡಿಯುವದಕ್ಕೆ ಒಂದು ಗುಪ್ತವಿಚಾರಣಸ್ಥಾನ ನಿರ್ಮಿಸಿ, ಅರಸನ ನೆಂಟರಾದ ಆ ಬುರ್ಬೊಜಿನ ಶ್ರೀಮಂತರ ಮೇಲೆ ಸಂಶಯ ಹುಟ್ಟಿಸಿ, ಅರಮನೆಯಿಂದ ಹೊರಡಿಸಲಿಕ್ಕೆ ಸಮರ್ಥನಾದ ಬಳಿಕ ಬುರ್ಬೊಜಿನವರ ಪಕ್ಷದವರು ಗೀಸಿನವರ ಪಾಪಾಧಿಕಾರ ಮುರಿಯುವದಕ್ಕೋಸ್ಕರ ಒಳಸಂಚು ಮಾಡಿದರು; ಆದರೆ ಇದು ಬೈಲಿಗಿಳಿದಂದು ಸೌವಾರ್ತಿಕ ಆಧ್ಯರಲ್ಲಿ 600 ಜನರ ತಲೆ ಹೊಯಿದು, ಅವರ ನಾಯಕರನ್ನು ಶೆರೆಯಲ್ಲಿಡಲಾಯಿತು. ಆವಾಗ ಕ್ರಿ. ಶ. 1560ನೇ ವರುಷಕ್ಕೆ 2ನೇ ಫ್ರಂಚನು ಮಡಿದು, 9ನೇ ಚಾರ್ಲ್ಸನೆಂಬ ತಮ್ಮನು ಸಿಂಹಾಸನಕ್ಕೆ ಬಂದಲ್ಲಿ ಅವನ ತಾಯಿಯಾದ ಕಥರೀನಳು ರಾಜ್ಯಪರಿಪಾಲಕಳಾದಳು. ಅಷ್ಟರಲ್ಲಿ ಗೆನ್ಫಿನಿಂದ ಬರುತ್ತಿರುವ ಬೋಧಕರ ಮುಖದಿಂದ ಸೌವಾರ್ತಿಕರ ಸಭೆಯು ಬೆಳೆಯುತ್ತಲಿತ್ತು; ಇಂತಿರುವಲ್ಲಿ ಕೊಲಿಂಞಿ ಎಂಬ ನೌಸೇನಾಧಿಪತಿಯಾದ ಒಳ್ಳೇ ಸೌವಾರ್ತಿಕ ಭಕ್ತನು 2150 ಸೌವಾರ್ತಿಕ ಒಳಸಭೆಗಳ ಹೆಸರಿನಲ್ಲಿ, ಮತಾಚಾರಸ್ವಾತಂತ್ರ್ಯವನ್ನು ದಯೆ ಪಾಲಿಸ ಬೇಕೆಂತ, ಹೇಳುವ ಬಿನ್ನಹ ಬರೆದು, ಅಧಿಕಾರಸ್ಥರಿಗೆ ಮುಟ್ಟಿಸಿದನು. ಆ ಹೊತ್ತು ಪಪ್ಪನವನೊಬ್ಬ ದೂತನು ದಿಗಿಲು ಪಟ್ಟು, ರೋಮಕ್ಕೆ, ಫ್ರಂಚಿನ ಅರ್ಧವು ಹೂಗೊನೊತ್ತರಿಗೊಳಗಾಯಿತೆಂತ, ಕಾಗದ ಬರೆದು ಕಳುಹಿಸಿದನು. ಬಳಿಕ ಮರುವರುಷ ಗೀಸಿನವರ ಸಲಹೆಯಿಂದ ವಸ್ಸಿ ಪಟ್ಣದಲ್ಲಿ ಹಿಂದೆ ಹೇಳಿದ ಆ ಮಹಾ ಕೊಲೆಯಾಗಲಿಕ್ಕೆ[3], ದುಃಖಕರವಾದ ಪ್ರಜಾಪರಸ್ಪರಯುದ್ಧವು ಉದ್ಭವಿಸಿತು. ಗೀಸಿನವರು ಅದನ್ನು ನಿಲ್ಲಿಸುವದಕ್ಕೆ ಏನೂ ಚಿಂತೆ ಪಡದ್ದಲ್ಲದೆ ಪಪ್ಪಕರಿಗೆ ಸೌವಾರ್ತಿಕರ ಮೇಲಿರುವ

1) 470, 477, 479ನೇ ಪಾನು. 2) 472, 491, 493ನೇ ಪಾನುಗಳು. 3) 493ನೇ ಪಾನು.

ಹಗೆಯನ್ನು ರಿಸುತ್ತಲ್ಲಿದ್ದರು. ಆದ್ದರಿಂದ ಚಾರ್ಲ್ಸ್ ರಾಜನು, ಸುವಾರ್ತೆಯ ಪ್ರಕಾರ ದೇವಾರಾಧನೆ ನಡಿಸುವವರೆಲ್ಲರಿಗೆ ಮರಣಾಜ್ಞೆಯಾಗುವದೆಂತ, ಹೇಳುವ ವಿಧಿಯನ್ನು ಕೊಡುವದಕ್ಕೂ ಪ್ರೇರಿತನಾದನು. ಕೊಲಿಂಞ್ ನೌಸೇನಾಧಿಪತಿಯು ಸೌವಾರ್ತಿಕ ಕಾರ್ಯದ ಪ್ರಾಣವೆಂಬಂತೆ ಪರಿಶೋಭಿಸುತ್ತಿರುವ ನಿಮಿತ್ತ ಅವನು ರಾಜ್ಯದಲ್ಲಿ ಅನಾಥನೆಂಬ ಅಪ್ಪಣೆ ಬಂದು[1], ಅವನನ್ನು ಕೊಂದವಗೆ ದೊಡ್ಡ ಇನಾಮು ಶಿಕ್ಕುವದೆಂತ, ಸಾರಲಾಯಿತು.

ಆದಾಗ್ಯೂ ಪಪ್ಪಕರ ಪ್ರಯತ್ನಗಳೆಲ್ಲಾ ನಿರರ್ಥಕವಾದ ಹಿಂದೆ ಸೌವಾರ್ತಿಕರು ಮತಾಚಾರದ ಸ್ವಾತಂತ್ರ್ಯವನ್ನೂ ಮುಟ್ಟುಗೋಳು ಪಟ್ಟಿದ್ದ ಸೊತ್ತನ್ನೂ ರಾಜ್ಯದಲ್ಲಿ ಮಿಕ್ಕಾದ ಪ್ರಜೆಗಿರುವ ಅಧಿಕಾರವನ್ನೂ ಪಡ ಕೊಂಡಾಗ ಸ್ಪಾನಿಯದ ಆ ಅಲ್ಬನೆಂಬ ದಳವಾಯಿಯ[2] ಆಲೋಚನೆ ಕೇಳಿ ಕೊಂಡಿದ್ದ ಆ ಕಥರೀನಳೆಂಬ ರಾಜಮಾತೆಯೂ[3] ಗೀಸಿನ ಪ್ರಭುಗಳೂ ವಂಚನೋಪಾಯಗಳಿಂದ ತಮ್ಮ ದುರಭಿಪ್ರಾಯ ಸಿದ್ಧಿಸಲಿಕ್ಕೆ ನೋಡಿ—ಹೂಗೊನೊತ್ತರ ಸಂದೇಹ ಪರಿಹರಿಸುವದಕ್ಕಾಗಿ ಕಪಟಮಯವಾದ ನ್ಯಾಯವನ್ನೂ ದಯೆಯನ್ನೂ ಮೈತ್ರ್ಯವನ್ನೂ ತೋರಿಸಿದರೆ ಅವರ ನಾಯಕರನ್ನು ಪರೀಸು ರಾಜಧಾನಿಗೆ ಬರಿಸಿ, ಒಂದೇ ದೊಡ್ಡ ಕೊಲೆಯಿಂದ ಇವರೆಲ್ಲರನ್ನು ನಶಿಸಿ, ಹೀಗೆ ಅನಾಯಕರಾದ ಹೂಗೊನೊತ್ತರ ಬಲವನ್ನು ನಿರ್ಮೂಲಿಸುವದು ಸುಲಭವಾಗುವದೆಂದು, ತಮ್ಮೊಳಾಲೋಚಿಸಿ ಕೊಂಡು, ಅದರಂತೆ ನಡಿಯುವವರಾದರು.

ಆಗ ಸೌವಾರ್ತಿಕರ ಮುಖ್ಯಸ್ಥರ್ಯಾರಂದರೆ, ನವರ್‍ರದ ಯೌವನಸ್ಥ ಶ್ರೀಮಂತನಾದ ಹೆನ್ರಿಯು ಮತ್ತೆ ಮುದಿಪ್ರಾಯದ ಆ ಕೊಲಿಂಞ್ ಎಂಬ ಸೇನಾಧಿಪನು; ಇವನನ್ನು ಕುರಿತು ಪ್ರಜೆ ಎಲ್ಲವೂ, ಅವನು ಒಂದು ಸೇನೆಗೆ ಈಡೆಂದು, ಹೇಳುತ್ತಿರುವದು. ಕ್ರಿ. ಶ. 1570ನೇ ವರುಷ ಚಾರ್ಲ್ಸ್ ರಾಜನು, ತನ್ನ ಕಡೇ ತಂಗಿಯಾದ ವಲ್ವಾ ಕುಟುಂಬದ ಮರ್ಗರೇತಳನ್ನು 19 ವರುಷದ ಆ ಹೆನ್ರಿ ಶ್ರೀಮಂತನಿಗೆ ಮದಿವೆ ಮಾಡಿ ಕೊಡುತ್ತೇನೆಂತ, ನಿಶ್ಚಯಿಸಿ, ವಲ್ವಾ ಮತ್ತು ಬುರ್ಬೊಜ್ ಎಂಬ ಎರಡು ಕುಟುಂಬದವರಿಗೆ ಆ ವಿವಾಹದಿಂದ ನಿತ್ಯ ಐಕ್ಯವಾಗಲೆಂದು, ಬಹಿರಕ್ಕೆ ಕಾರಣ ತೋರಿಸಿದನು. ಆದರೂ—ಹೂಗೊನೊತ್ತರ ಸಂದೇಹವ ಛೇದಿಸಿ, ಅವರ ಜಾಗರೂಕತೆ ತಪ್ಪಿಸಿ, ಈ ಪ್ರಕಾರ ಅವರನ್ನು ಹ್ಯಾಗೂ ಉರುಲಿನೊಳಗೆ ಶಿಕ್ಕಿಸ ಬೇಕೆಂತ, ಅವನ ಮತ್ತು ಅವನವರ ಅಂತರದಾಲೋಚನೆಯು. 5ನೇ ಪಿಯ ಪಪ್ಪನ[4] ದೂತೋದ್ಯೋಗಿಯು, ಅಂಥಾ ವಿವಾಹ ಸಿದ್ಧಿಸಿದರೆ ಪಪ್ಪಕತ್ವಕ್ಕೆ ನಷ್ಟವಾ

1) 491ನೇ ಪಾನು ಸರಿ ನೋಡು. 2) 472, 493, 494ನೇ ಪಾನು. 3) 504ನೇ ಪಾನು.
4) 474, 484, 493, 494ನೇ ಪಾನು.

ದೀತೆಂತ, ಹೆದರಲು, ರಾಜನು, ತಾನು ಸರ್ವಥಾ ಪಪ್ಪನ ನಿಜ ಹಿತಕಾರಿ ಎಂತ, ತೋರಿಸಿ, ಪ್ರಮಾಣಿಸಿದನು. ಅವನು ಆ ಮಾನ್ಯನೂ ಭಕ್ತನೂ ಆದ ಕೊಲಿಂಙ್ಙಿ ಯನ್ನು ಅರಮನೆಗೆ ಕರೆಸಿ, ಹಿಂದಿನ ಸಮಸ್ತ ಹುದ್ದೆಗಳಲ್ಲಿ ತಿರಿಗಿ ಇರಿಸಿದನು; ಆಗ ಈ ಉತ್ತಮ ಪುರುಷನು ಅರಸನ ಮೇಲೆ ತಿರಿಗಿ ಪೂರ್ಣ ಭರವಸ ಗೊಂಡು, ಬಂದು, ಅರಸನಿಗೆ ವಂದಿಸುವಲ್ಲಿ ಸಾಷ್ಟಾಂಗವೆರಗುವ ಹಾಗಿರಲು, ಇವನು ಅವನನ್ನಪ್ಪಿ ಕೊಂಡು, ಸೌಜನ್ಯದಿಂದೆಂಬಂತೆ—ನಾನು ಬಹು ಕಾಲದಾರಭ್ಯ ಅಪೇಕ್ಷಿಸುತ್ತಿದ್ದ ನೀವು ಈಗ ನನಗೆ ದೊರಕಿದಿರಿ; ನನ್ನನ್ನು ಮತ್ತೂ ಅಗಲುವದು ದುರ್ಲಭವಾದೀತೆಂತ, ನುಡಿದು, ಸಮಿಾಪದಲ್ಲಿ ನಿಂತಿರುವವರಿಗೆ, ನನ್ನ ಗೆಳೆಯರೇ, ನನ್ನ ಜೀವಿತದಲ್ಲಿ ಅತಿಶುಭವಾದ ದಿನವು ಇದೇ! ಎಂದು, ಹೇಳಿದನು. ರಾಜಮಾತೆಯೂ ಶ್ರೀಮಂತರೂ ರಾಜ್ಯಾಧ್ಯರೂ ಸಹ ಅದೇ ಮನ್ನಣೆಯಿಂದಲೂ ಅದೇ ಸಲುಗೆಯಿಂದಲೂ ಆ ಸೇನಾಧಿಪ ಮೊದಲಾದ ಹೂಗೊನೊತ್ತರ ಶ್ರೇಷ್ಠರನ್ನು ಅಂಗೀಕರಿಸಿದರು. ಮುಂಚಿನ ಭೇದವೆಲ್ಲವೂ ಮರೆತ್ತಿದ್ದ ಹಾಗೆ ತೋರಿತು.

ವಿವಾಹಕಾರ್ಯವನ್ನು ಪೌರಿಸುವಷ್ಟರಲ್ಲಿಯೇ 1572ನೇ ವರುಷದ ಆಗೊಸ್ತು ತಿಂಗಳ 18ನೇ ದಿನ ಬಂದೊದಗಿತ್ತು. ಆಗ ಅನೇಕ ಮಂದಿ ಹೂಗೊನೊತ್ತರು ಕೂಡಿರುವಲ್ಲಿ ರಾಜಕ ವೈಭವದಿಂದ ವಿವಾಹವಾಯಿತು. ಎರಡು ದಿವಸ ಕಳೆದ ಮೇಲೆ ಕೊಲಿಂಙ್ಙಿಯು ಬೀದಿಯೊಳು ನಡೆಯುತ್ತಿರುವ ಹೊತ್ತು ಯಾರೋ ಒಬ್ಬನು ಒಂದು ತುಪಾಕಿ ಸುಡಲು, ಅದರ ಗುಂಡು ಅವನ ಕೈಗೆ ತಾಗಿದ್ದಕ್ಕೆ ಹೂಗೊನೊತ್ತರು, ಪಲಾಯನ ತೆಗೆಯಿರೆಂದು, ಅವನಿಗೆ ಬಿನ್ನವಿಸಿದರು; ಆದರೆ ಅವನು—ನಾನು ಹಾಗೆ ಮಾಡಿದರೆ ಭಯದ ಚಿನ್ಹೆಯಾಗಲಿ ಸಂದೇಹದ್ದಾಗಲಿ ಆದೀತಲ್ಲ? ಮೊದಲಿನದು ಆದರೆ ನನ್ನ ಮಾನ ಹೋಗುವದು, ಮತ್ತೊಂದಾದರೆ ರಾಜನ ಹೃದ್ಭಗ್ನತೆಯಾಗುವದು! ಎಂದು, ಉತ್ತರ ಕೊಟ್ಟು, ರಾಜಧಾನಿಯಲ್ಲೇ ಉಳಿದನು. ಬಳಿಕ ಅವನನ್ನೂ ಇತರ ಸೌವಾರ್ತಿಕ ಕ್ರೈಸ್ತರನ್ನೂ ಕೂಡುವ ಮಟ್ಟಿಗೆ ನಂಬಿಸುವದಕ್ಕೋಸ್ಕರ ರಾಜನು—ಸೌವಾರ್ತಿಕ ಅಧ್ಯರು ತಮ್ಮ ಪ್ರಿಯ ನಾಯಕನಾದ ಕೊಲಿಂಙ್ಙಿಗೆ ಆಶ್ರಯ ಕೊಡ ಬಹುದಾಗುವಂತೆ ಪಪ್ಪನ ಮತದವರೆಲ್ಲರೂ ಅವನಿರುವದಕ್ಕೆ ಸಮಿಾಪವಾದ ತಮ್ಮ ಮನೆಗಳನ್ನು ಬಿಟ್ಟು, ಆ ಅಧ್ಯರಿಗೊಪ್ಪಿಸಿ ಕೊಡಲೆಂದು, ವಿಧಿಸಿದನು.

ಕಥರೀನಳು ಮುಂತಾದ ನಿಷ್ಕರುಣರು ಆಗೊಸ್ತು ತಿಂಗಳ 24ನೇ ದಿನದ ಬರ್ಥೊಲೊಮಾಯನ ರಾತ್ರಿ ಎಂಬ ರಾತ್ರಿಯ ನಡುಝಾಮವನ್ನು ತಮ್ಮ ಮಹಾಂಧಕಾರಕ್ರಿಯೆಗೆ ನೇಮಿಸಿದರು. ಆ ಝಾಮ ಒದಗುತ್ತಲೇ ಅರಮನೆಯ ಘಂಟೆಯ ಧ್ವನಿಯು ಕೊಲೆಗೆ ಸೂಚನೆ ಕೊಟ್ಟಿತು; ಗೀಸು ಕುಟುಂಬದ ಹೆನ್ರಿ ಎಂಬ ಪ್ರ

ಭುವು ವಧೆಗೆ ಉದ್ಯುಕ್ತವಾದ ತನ್ನ ಗುಂಪಿನೊಂದಿಗೆ ನೌಸೇನಾಧಿಪನ ಗೃಹಕ್ಕೋಡಿ ಹೋದನು; ಆ ಗುಂಪಿನವರು ಗೃಹವನ್ನು ಮುತ್ತಿ, ಕಾವಲಿಗರನ್ನು ಸದೆ ಬಡಿದು, ಬಹು ಕಾಡರಾದ ಕೆಲವರು ಕೊಲಿಂಞ್ಯಿಯ ಕೋಣೆಗೆ ಬಾಗಿಲೊಡೆದು ಹೊಕ್ಕರು; ಭಕ್ತಿಯುಳ್ಳ ಆ ಶೂರನು ಬೀದಿಯಲ್ಲಿಯ ಗದ್ದಲ ಕೇಳಿ, ಮಂಚದಿಂದೆದ್ದು, ತನ್ನ ಹತರವಿದ್ದ 10 ಮಂದಿ ಗೆಳೆಯರ ಸಂಗಡ ದೇವರಿಗೆ ಪ್ರಾರ್ಥನೆ ಮಾಡಿ, ಆ ವೇಳೆ ವೃದ್ಧತ್ವದ ಬಲಹೀನತೆಯ ದೆಸೆಯಿಂದ ಗೋಡೆಗೆ ಆತು ಕೊಂಡು ನಿಂತದ್ದು ಕಾಣಿಸಿತು; ಮುಂದರಿಸಿದ ಕೊಲೆಗಾರನೊಬ್ಬನು ತನ್ನ ಕತ್ತಿಯನ್ನು ಅವನೆದೆಗೆ ಹಾಕಿದ ಮೇಲೆ ಹಿಂದೆ ಬಂದವರು ಅವನ ಶರೀರಕ್ಕೆ ಸಾವಿರಾರು ಪೆಟ್ಟುಗಳು ಹೊಯಿದು, ಕಿಟಕಿಯೊಳಗಿಂದ ಬೀದಿಗೆ ದೂಡಿದರು. ಅವನ ಸಂಗಡ 8 ಮಂದಿ ಗೆಳೆಯರು ಮರಣ ಪಟ್ಟರು; ಇಬ್ಬರು ತಪ್ಪಿಸಿ ಕೊಂಡು ಹೋದರು. ತರುವಾಯ ಆ ಭೀಕರವಾದ ಗುಂಪು ನೌಸೇನಾಧಿಪನ ಗೃಹ ಬಿಟ್ಟು, ಒಂದು ಮಹಾರ್ಣವದಂತೆ ಸಕಲ ಬೀದಿಗಳಲ್ಲಿ ಪ್ರವಹಿಸಿತು; ರಾಳದ ದೀವಟಿಗೆಗಳು ಅವುಗಳಲ್ಲಿ ಉರಿಯುತ್ತಿದ್ದವು; ಹೂಗೊನೊತ್ತರು ಓಡದಂತೆ ಅಲ್ಲಲ್ಲಿ ಸಂಕೋಲೆಗಳ ತಡೆ ಗಟ್ಟಿದ್ದದಲ್ಲದೆ ಎಲ್ಲೆಲ್ಲಿಯೂ ಕಾವಲಿಗರನ್ನಿಟ್ಟಿದ್ದರು. ಇನ್ನು ಅರೆನಿದ್ರೆಯುಳ್ಳ ಹೂಗೊನೊತ್ತರು ಗಾಬರಿ ಬಿದ್ದು, ಬೀದಿಗಿಳಿಯುವಲ್ಲೆಲ್ಲಿಯೂ ಅಹಿತರು ಎಡಗೈಗೆ ಕಟ್ಟಿರುವದೊಂದು ಬಿಳೀ ವಸ್ತ್ರದ ಮೇಲೆಯೂ ತೋಪಿಯಲ್ಲಿರುವದೊಂದು ಬಿಳೀ ಕ್ರೂಜೆಯಾಕಾರದ ಮೇಲೆಯೂ ಅವರ ಗುರುತ ಹಿಡಿದು, ಅವರನ್ನೀಟಿಯಿಂದ ತಿವಿದು ಕೊಂದರು; ಇವರು, ನಾಯಕರು ಯಾರೂ ಇಲ್ಲದೆ, ವಿರಳರಾಗಿ, ಮಾರ್ಮಲೆಯಲರಿಯದಿದ್ದರು. ಮಾರಕರಿಗೆ ಬೀದಿಗಳಲ್ಲಿ ಇನ್ಯಾರೂ ಶಿಕ್ಕದೆ ಹೋದನಂತರ ಗೃಹಗಳೊಳ ನುಗ್ಗಿ, ಅಂತಃಕರಣವರಿಯದೆ ಗಂಡ ಹೆಂಗಸರನ್ನೂ ಬಾಲ ವೃದ್ಧರನ್ನೂ ಆಢ್ಯಾನಾಢ್ಯರನ್ನೂ ಹತ ಮಾಡಿದರು. ರಾಜಕಾವಲಿಗಾರರ ಮುಖ್ಯಸ್ಥನಾದ ಒಬ್ಬ ದಳವಾಯಿಯು ತನ್ನ ಕೆಳಗಿನವರ ರೋಷವೇರಿಸುವದಕ್ಕೋಸ್ಕರ—ಸೊಕ್ಕಿದ ರಕ್ತ ತೆಗಿಸುವದನ್ನು ಮುನ್ನಡಿಸಿರಿ! ಅದು ಯಾವಾಗಲೂ ದೇಹಸೌಖ್ಯಕ್ಕೆ ಆಗುವದಲ್ಲವೇ? ಎಂತ, ಒದರುತ್ತಿರುವನು.

ಹೂಗೊನೊತ್ತರಲ್ಲನೇಕರು ಅರಮನೆಯೊಳಗೆ ರಕ್ಷಣೆ ಹುಡುಕಲು, ಅರಸನ ದ್ವಾರಪಾಲಕರಿಂದ ಅವರಿಗೆ ಮರಣವಾಯಿತು. ಅರಮನೆಯದೊಂದು ಭಾಗದಲ್ಲಿ ನವರ್ರದ ಆ ಹೆನ್ರಿಯು ವಸ್ತಿಯಾಗಿದ್ದನು; ಸೌವಾರ್ತಿಕರಾದ ಅವನ ಸೇವಕರನ್ನು ಹಿಂಸಕರು ಅವನಿರುವ ಕೋಣೆಯೊಳಗೂ ಹಿಂದಟ್ಟಿ ಕೊಂಡು ಬಂದು, ಕೊಂದರು. ಬೇರೊಬ್ಬರು ಹೆನ್ರಿಯ ಹೆಂಡತಿಯಾದ ಮರ್ಗರೇತಳ ಆಸರೆ ಹೊಕ್ಕೊಂಡಾಗ ಮಾರಕರು ಅವರನ್ನು ಅವಳ ಪಕ್ಕದೆಡೆಯಲ್ಲೇ ತಿವಿದು, ತೀರಿಸುವಲ್ಲಿ ಅವ

ರ ರಕ್ತವು ಅವಳ ಮೈಯ ಮೇಲೆ ತುಂಬ ಶಿಡಿಯಿತು. ಒಂದು ತಾಸಾದ ಬಳಿಕ ಅರಮನೆಯ ಹೇರಳ ಕೋಣೆಗಳಲ್ಲಿ ಒಂದಾದರೂ ನೆತ್ತರಿಲ್ಲದೆಯೂ ಹೆಣಗಳಿಲ್ಲದೆಯೂ ಇರಲಿಲ್ಲ. ಚಾರ್ಲ್ಸ್ ರಾಯನು ಕಿಟಕಿ ಕಿಟಕಿಗೆ ಹೋಗಿ, ಬೀದಿಯಲ್ಲಿ ಓಡುವವರಿಗೆ ಗುಂಡು ಹಾಕುತ್ತಿದ್ದನು; ರಾಜಮಾತೆಯಾದ ಕಥರೀನಳು ಬತ್ತಲೆಯಾದ ಹತ ಪುರುಷರ ರಹಸ್ಯಾಂಗಗಳನ್ನು ನೋಡಿ ಮುಟ್ಟುವದರಲ್ಲಿ ವಿನೋದ ಗೊಳ್ಳುತ್ತಿದ್ದಳು.

ಮೂರು ದಿನದ ಹಗಲಿರುಳು ಆ ಪ್ರಕಾರದ ಜೀವಹಾನಿಯು ನಡೆಯುತ್ತಿತ್ತು; ರಾಜನು ತನ್ನ ಅರಮನೆಯವರೊಂದಿಗೆ ರಕ್ತಮಯ ಬೀದಿಗಳಲ್ಲಿ ಅಡ್ಡಾಡುತ್ತಾ, ಮರುಳುಪ್ರಜೆಯು ಗಲ್ಲಿಗೆ ತೂಗ ಹಾಕಿದ ಕೊಲಿಂಞ್ಞಿಯ ಹೆಣವನ್ನು ಸಹ ನೋಡಲಿಕ್ಕೆ ಬಂದು, ಅದರ ತಲೆ ಕೊಯಿದು, ಮಹಾ ಜಯವಾಯಿತೆಂಬ ಸುದ್ದಿಯ ಸಂಗಡ ಅದನ್ನು ಆಗಿನ 13ನೇ ಗ್ರೆಗೋರನೆಂಬ ಪಪ್ಪನ ಬಳಿಗೆ ಕಳುಹಿಸಿದನು. ಹೂಗೊನೊತ್ತರನ್ನು ಕೊಲ್ಲ ಬೇಕೆಂಬ ರಾಜಾಜ್ಞೆಯು ರಾಜ್ಯದೊಳಗಿನ ಸರ್ವ ರಾಷ್ಟ್ರಾಧಿಪರ ಸನ್ನಿಧಿಗೆ ಸಹ ಹೋಗಿತ್ತು; ಆದ್ದರಿಂದ ಲಿಯೋನು[1] ತುಲೂಸು[2] ಮುಂತಾದ ದೊಡ್ಡ ಪಟ್ಟಗಳಲ್ಲಿ ಕೂಡ ಸೌವಾರ್ತಿಕ ಕ್ರೈಸ್ತರ ಮೇಲಿನ ಹಿಂಸೆಯು ಹತ್ತಿ, ಪರೀಸು ಪಟ್ಟದಲ್ಲಿಯಣಷ್ಟು ಕಠೋರ ನಿಷ್ಠುರತ್ವದಿಂದ 6 ವಾರದ ಕಾಲವೇ ನಡೆಯಿತು. ಸ್ವಲ್ಪ ಮಂದಿ ಅಧಿಪರು ಮಾತ್ರ ರಾಜನಿಗೆ ಅವಿಧೇಯರಾಗಿರಲಿಕ್ಕೆ ಧೈರ್ಯ ತೆಕ್ಕೊಂಡರು; ಇವರಲ್ಲೊಬ್ಬನಾದ ಬಾಯೊನ್ನು ಪಟ್ಟದ ಒರ್ಥಿನ ಪ್ರಭುವು ರಾಜನಿಗೆ, ಮಾರಕರನ್ನಲ್ಲ ಸೈನಿಕರನ್ನೇ ಆಳುತ್ತೇನೆಂದು, ಪತ್ರ ಬರೆದು ಬಿಟ್ಟನು. ಲಿಯೋನು ಪಟ್ಟದ ಕೆಳಗಿನ ರೋನೆಂಬ ನದಿಯ ಭಾಗವು ಬಳದು ಬಂದ ಹೆಣಗಳಿಂದ ಬಹಳ ಕೊಳಕಾದ್ದರಿಂದ ಅತ್ತಲಾಗಿನ ಊರುಗಳವರಿಗೆ ಪ್ರಚಂಡ ಬರ ಬಿತ್ತು; ಯಾಕಂದರೆ ಅವರಿಗೆ ಆ ನದೀ ನೀರಲ್ಲದೆ ಬೇರೇನೂ ಇರಲಿಲ್ಲ. ನಿದರ್ಶನಕ್ಕಾಗಿ ಹೆಂಗಸರೂ ಮಕ್ಕಳೂ ಅಲ್ಲದೆ ಪರೀಸು ಪಟ್ಟ ಒಂದರಲ್ಲೇ 4,000 ಮಂದಿ, ಲಿಯೋನೊಂದರಲ್ಲೇ 1,800 ಮಂದಿ ಸೌವಾರ್ತಿಕರು ಹತರಾದರು. ಒಬ್ಬ ಪಪ್ಪಕ ಸಭಾಧ್ಯಕ್ಷನ[3] ಲೆಖ್ಖದ ಪ್ರಕಾರ ಒಟ್ಟಿಗೆ 1 ಲಕ್ಷ ಜನರು ಕೊಲೆ ಪಟ್ಟರು; ಕೊಲೆ ನಿಂತ ಮೇಲೆ ಆಢ್ಯ ಸ್ಥಿತಿಯ ಹೂಗೊನೊತ್ತರಿಗೆ ತಾಗಿದ್ದ ಹಿಂಸೆಯೊಂದರಿಂದಲೇ 1 ಲಕ್ಷ ಮಂದಿ ವಿಧವೆಗಳೂ ಅನಾಥರೂ ಉದ್ಭವಿಸಿದ್ದು ಕಂಡಿತು.

ಆ ಪೈಶಾಚಕ ಹಿಂಸೆಯ ವರ್ತಮಾನವು ರೋಮಪುರಕ್ಕೆ ಹೋಗಿ ಮುಟ್ಟಿದಾಗಲೇ ಗ್ರೆಗೋರ ಪಪ್ಪನು ಮೋದಮುದದಿಂದ ಪುರದೊಳಗಿನ ಸಕಲ ಘಂಟೆಗಳನ್ನು

1) 376ನೇ ಪಾನು. 2) 376ನೇ ಪಾನು. 3) Bishop Péréfix.

ಬಾರಿಸ ಮಾಡಿ, ಎಂಗೆಲ್ಸ್ಬುರ್ಗಿನಲ್ಲಿಯ[1] ಫಿರಂಗಿಗಳನ್ನು ಸುಡಿಸಿ, ಕರ್ದಿನಾಲುದ್ಯೋಗಿಗಳ ಸಭೆಯನ್ನು ಕೂಡಿಸಿ, ಅವರೊಡನೆ ದೇವರನ್ನು ಕೊಂಡಾಡಿ, 14 ದಿವಸಕ್ಕೀಚೆ ಗೀಸು ಕುಟುಂಬದ ಒಬ್ಬ ಕರ್ದಿನಾಲುದ್ಯೋಗಿಯ ಸಹಾಯದಿಂದ ದೊಡ್ಡದೊಂದು ಸ್ತೋತ್ರಹಬ್ಬವನ್ನಾಚರಿಸಿ, ಆ ಮಹಾಹಿಂಸಾಜ್ಞಾಪಕಕ್ಕಾಗಿ ಒಂದು ಹೊಸ ನಾಣ್ಯ ಹೊಯಿಸಿದನು; ಇದರದೊಂದು ಕಡೆಯಲ್ಲಿ ಆ ಪಪ್ಪನ ಪ್ರತಿಮೆಯು, ಮತ್ತೊಂದು ಕಡೆಯಲ್ಲಿ ಎಡಗೈಯಿಂದ ಒಂದು ಕ್ರೂಜೆ ಎತ್ತಿ ಬಲಗೈಯಲ್ಲಿಯ ಕತ್ತಿಯಿಂದ ಹೂಗೊನೊತ್ತರೆಂಬವರದೊಂದು ಗುಂಪನ್ನು ಸದೆ ಬಡಿಯುವಂಥ ಒಬ್ಬ ದೇವದೂತನು[2].

ಆದಾಗ್ಯೂ ಪಪ್ಪನೂ ರಾಜನೂ ಅವರ ಪಕ್ಷಕರೂ ಅಷ್ಟು ಉಲ್ಲಾಸಿಸಿದ್ದು ಬಹಳ ತ್ವರೆಯಿಂದಾಯಿತು; ಯಾಕಂದರೆ ಹೂಗೊನೊತ್ತರ ದಂಡು ಪಪ್ಪಕರದನ್ನು ತಡೆಯದೆ ಅಪಜಯ ಪಡಿಸಿತು. ಹೀಗಿರಲಾಗಿ ಚಾರ್ಲ್ಸ್ ರಾಜನು ಎರಡು ತಿಂಗಳಿಗಿತ್ತ—ಸೌವಾರ್ತಿಕ ಕ್ರೈಸ್ತರಿಗೆ ರಾಜ್ಯದಲ್ಲೆಲ್ಲಿಯೂ ಆಶ್ರಯವಾಗ ಬೇಕು, ಅವರ ಸೊತ್ತನ್ನು ಅವರಿಗೆ ತಿರಿಗಿ ಕೊಡ ಬೇಕೆಂದು, ಆಜ್ಞಾಪಿಸಿದನು. ಆದರೆ ಆ ಪ್ರಕಾರವಾದರೂ ಅವನ ಮನಸ್ಸಾಕ್ಷಿಗೆ ಶಾಂತಿಯೊದಗಲಿಲ್ಲ; ತಾನು ಏಕಾಂತನಾಗಿರುವಲ್ಲೆಲ್ಲಿಯೂ ತಾನು ಕೊಲ್ಲಿಸಿದವರ ಭೂತಗಳು ತನಗೆ ತೋರಿ ಬಾಧಿಸುತ್ತವೆಂಬಂತೆ ಭಾವಿಸಿ ಕೊಳ್ಳುತ್ತಿದ್ದನು; ತಾನು ನೆನಸಿದ ರಕ್ತಮಯ ರೂಪಗಳು ಅವನ ನಿದ್ರೆ ಸಹ ಕೆಡಿಸುತ್ತಿದ್ದವು; ಅವನು ಭಗ್ನ ಹೃದಯದವನಾಗಿ ಶರೀರ ಪ್ರಾಣಗಳಲ್ಲಿ ಅಸ್ವಸ್ಥನಾಗಿ, ಇನ್ನು ಸುಮಾರು 2 ವರುಷ ಇದ್ದು, ಕ್ರಿ. ಶ. 1574ನೇದಕ್ಕೆ ಮಡಿದನು.

---

## 63. 4ನೇ ಹೆನ್ರಿ 14ನೇ ಲೂಯಿ ಎಂಬ ಫ್ರೆಂಚಿನ ಇಬ್ಬರು ಅರಸರು.

ನಂಟ್ಸಿನ ನಿರ್ಣಯವು. ಡ್ರಗೊನಾದುಗಳು.

9ನೇ ಚಾರ್ಲ್ಸನ ತಮ್ಮನು ಅವನುತ್ತರೋದ್ಯೋಗಿಯಾಗಿ, 3ನೇ ಹೆನ್ರಿ ಎನ್ನಿಸಿ ಕೊಂಡನು; ಅವನು ಲಘು ಮನಸ್ಸಿನವನೂ ಕಾಮಾತುರನೂ ಆದಂಥ ಮನುಷ್ಯನು. ಅವನು ಒಳ್ಳೇ ಮುಹೂರ್ತದಲ್ಲಿ ಸಿಂಹಾಸನಾರೂಢನಾಗಲಿಲ್ಲ; ಎಂತೆಂದರೆ ಸೌವಾರ್ತಿಕ ಪ್ರಜೆಯ ಸಂಶಯವು ಅವನ ಮೇಲಿತ್ತು; ಪಪ್ಪಕರಲ್ಲಿ ಉತ್ತಮ

---

1) 331ನೇ ಪಾನು. 2) The Jesuit Philipp Bonanni's Numismata Pontificum, Rome 1689, vol. I, p. 336; cf. also Neue Evang. Kirchenzeitung, 1869, No. 18, p. 279.

ಗುಣಿಗಳಾದಂಥವರು ಅವನಿಗೆ ತುಚ್ಛೀಕರಿಸಿದರು; ಅವನ ಸಹಾಯಕರಾದ ಗೀಸಿನವರು ತಮ್ಮ ದರ್ಪಕ್ಕೋಸ್ಕರ ಜನರೊಲುಮೆ ಕಳಕೊಂಡಿದ್ದರು; ಅಘೋರ ದುರ್ಮಾರ್ಗತನವು ತನ್ನ ಮೂಲಸ್ಥಾನವಾಗಿರುವ ಅರಮನೆಯೊಳಗಿಂದ[1] ಹೆಚ್ಚು ಹೆಚ್ಚಿಗೆ ಜನರೊಳಗೆ ಹೋಗುತ್ತಲಿತ್ತು; ಆದರೆ ಹೊಸ ತಿದ್ದುಪಾಟ ನಿರ್ಮಿಸುವದಕ್ಕೆ ಹೆನ್ರಿಯು ಹ್ಯಾಗೂ ತಕ್ಕವನಾಗಿರಲಿಲ್ಲ. ಕ್ರಿ. ಶ. 1576ನೇ ವರುಷಕ್ಕೆ ಗೀಸಿನವರು ಕಥರರೆಂಬವರ ನಿರ್ಮೂಲನಕ್ಕಾಗಿ ಉತ್ಪನ್ನವಾಗಿದ್ದ ಆ ಲೀಗೆಂಬ ಒಡಂಬಡಿಕೆಯನ್ನು[2] ಪುನಃಸ್ಥಾಪಿಸಿದರೂ ಸೌವಾರ್ತಿಕರು ನವರ್‍ರದ ಹೆನ್ರಿಯ[3] ಸಹಾಯದಿಂದ ಜಯವಂತರಾಗಿ, ತಮಗಿದ್ದ ಸ್ವಾತಂತ್ರ್ಯಗಳಲ್ಲಿ ಉಳಿದ್ದಲ್ಲದೆ ಹೊಸವನ್ನು ಸಹ ಪಡ ಕೊಂಡರು; 3ನೇ ಹೆನ್ರಿಯು ತನ್ನ ಪೂರ್ಣ ರಾಜ್ಯದಲ್ಲಿ ಅವರಿಗೆ ಅಭ್ಯಂತರವಿಲ್ಲದಂಥ ಮತಾಚಾರಕ್ಕೆ ಆಜ್ಞೆ ಕೊಟ್ಟು, ತಾವು ತಮ್ಮ ಭದ್ರತೆಗಾಗಿ ದಂಡುಠಾಣ್ಯಗಳನ್ನಿಡ ಯೋಗ್ಯವಾದ ಹಲವು ಕೋಟೆಗಳನ್ನು ಅವರ ಕೈಗೊಪ್ಪಿಸಿದನು. ಹೀಗಿರಲಾಗಿ ಗೀಸಿನವರು ಅವನ ಮೇಲೆ ಕಲಹಕ್ಕೆದ್ದು, ರಾಜ್ಯಾಧಿಕಾರವನ್ನು ತಮ್ಮದು ಮಾಡಿ ಕೊಳ್ಳಲಿಕ್ಕೆ ಪೇಚಾಡಲೆಸಗಿ, ಹೆನ್ರಿಯು ಇರುವ ಅರಮನೆಗೆ ಮುತ್ತಲು, ಇವನು ತಪ್ಪಿಸಿ ಕೊಳ್ಳುವ ಅನುವ ಕಂಡು, ನವರ್‍ರದ ಹೆನ್ರಿಯ ಬಳಿಗೆ ಓಡಿ ಹೋಗಿ, ಅವನ ಒತ್ತಾಸೆ ಬೇಡಿ ಕೊಂಡನು. ಬಳಿಕ ಅವನು ಗೀಸಿನವರನ್ನು ಗೆದ್ದರೂ 5ನೇ ಸಿಕ್ಸ್ತ ಪಪ್ಪನು[4] ಸೌವಾರ್ತಿರಿಗೆ ಅವನಿತ್ತ ಸ್ವಾತಂತ್ರ್ಯಗಳಿಗೋಸ್ಕರ ಅವನ ಮೇಲೆ ಬನ್ನು ಜಡಿದು, ಸ್ವಲ್ಪ ಕಾಲ ಹೋದನಂತರ ಕ್ರಿ. ಶ. 1589ನೇ ವರುಷ ಯೇಸುವಿತರ ಸಲಹೆಯಿಂದ ಯಕೋಬ ಕ್ಲೇಮೆಂತನೆಂಬ ದೊಮಿನಿಕಾನ[5] ಕುಲದ ಮಠಿಕನು ರಾಜನನ್ನು ಕೊಂದನು[6]. ಸಿಕ್ಸ್ತ ಪಪ್ಪನು ಅದನ್ನು ಕೇಳಿ, ಕರ್ದಿನಾಲುದ್ಯೋಗಿಗಳ ಸಭೆಯಲ್ಲಿ, ಯಕೋಬ ಕ್ಲೇಮೆಂತನು ಲೋಕದ ರಕ್ಷಣಕ್ಕೋಸ್ಕರ ಮಾಡಿದ ಆ ಕಾರ್ಯವು ಕ್ರಿಸ್ತನ ಮನುಷ್ಯಾವತಾರಕ್ಕೂ ಪುನರುತ್ಥಾನಕ್ಕೂ ಸಮವೆಂದು, ನಿರ್ಣಯಿಸಿದನು[7].

ತರುವಾಯ ರಾಜತ್ವ ಹೊಂದುವದಕ್ಕೆ ವಲ್ವಾ[8] ಕುಟುಂಬದವರಿರಲಿಲ್ಲ; ಅದು ಕಾರಣ ನವರ್‍ರದ ಹೆನ್ರಿಯು ರಾಜತ್ವದ ಬಾಧ್ಯಸ್ಥನೇ. ಕಡು ಪಪ್ಪಕರು ಹೂಗೊನೊತ್ತನಾದ ಅವನಿಗೆ ಮಾರ್ಮಲೆಯಲಿಕ್ಕೆ, ಅವನಿಗೂ ಲೀಗಿನವರಿಗೂ ಈವ್ರಿ ಎಂಬಲ್ಲಿ ದೊಡ್ಡ ಯುದ್ಧವಾಗುವ ಹಾಗಿರುವಾಗ ಆ ಗುಣವಂತನು—ತಾನು ಕೆಟ್ಟ ಅರಸನಾಗುವಂತೆ ಇದ್ದರೆ ದೇವರು ತನ್ನನ್ನು ಯುದ್ಧದಲ್ಲಿ ಸಾಯಲೀಸುವದೇ ವಿಹಿ

1) 285, 358, 359ನೇ ಪಾನು ಸರಿ ನೋಡು. 2) 472, 493ನೇ ಪಾನು. 3) 503, 505, 507ನೇ ಪಾನು. 4) 470ನೇ ಪಾನು. 5) 457ನೇ ಪಾನು. 6) 462ನೇ ಪಾನು. 7) ಪ್ರಕಟ. 17, 3 ಸರಿ ನೋಡಿರಿ! 499, 509ನೇ ಪಾನು. 8) 505ನೇ ಪಾನು.

ತವೆಂತ, ಮೊದಲು ಪ್ರಾರ್ಥಿಸಿ, ತನ್ನ ಸೇನೆಗೆ, ವಾರ್ಬಲದಲ್ಲಿ ಕೂಡುವ ಮಟ್ಟಿಗೆ ಹಿಂಸೆ ಕಡಿಮೆ ಮಾಡ ಬೇಕೆಂದು, ತಿಳಿಸಿ, ತದನಂತರ ಶತ್ರುಗಳ ಮೇಲೆ ಬೀಳಲು, ಇವರು ಸೋತು, ಅವನು ಗೆದ್ದುಳಿದನು.

ಆ ಜಯದ ಮೂಲಕ ಲೀಗಿನವರ ಬಲವು ಮುರಿದು ಹೋದಂದು ಹೆನ್ರಿಯು ಪರೀಸು ರಾಜಧಾನಿಗೆ ಹೋಗಿ, ಮುತ್ತುತ್ತಿರುವ ಸಮಯ ಪಟ್ಣದೊಳಗೆ ಕಠಿಣ ಬರವು ಬಿತ್ತು. ಆಗ ಇಬ್ಬರು ರಯಿತರು ರೊಟ್ಟಿಯನ್ನು ಒಳಗೊಯ್ಯಲು, ಹೆನ್ರಿಯ ಸೈನಿಕರು ಅವರನ್ನು ಹಿಡಿದು, ಗಲ್ಲಿಗೆ ಹಾಕುವ ಹಾಗಿದ್ದರು; ಆದರೆ ಹೆನ್ರಿಯು ಆ ರಯಿತರ ಜೀವವುಳಿಸಿದ್ದಲ್ಲದೆ ಅವರಿಗೆ ಹಣ ಸಹ ಕೊಟ್ಟು, ಕಳುಹಿಸಿದನು. ಅದು ಹೊರ್ತಾಗಿ ಪಟ್ಣದೊಳಗಿನವರು ಹೊರಗೆ ದೂಡಿದ 4,000 ಮಂದಿ ಮುದುಕರನ್ನೂ ಸ್ತ್ರೀಯರನ್ನೂ ಶಿಶುಗಳನ್ನೂ ಅವನು ಪೋಷಿಸಿ, ಪಟ್ಣದೊಳಗಿನ ಶತ್ರುಗಳಿಗೂ ಆಹಾರ ದೊರಕಿಸಿದನು.

4ನೇ ಹೆನ್ರಿಯೆಂಬ ಹೆಸರು ಹೊಂದಿದ ಅವನು[1] ಆ ಮುಂತಾದ ಪ್ರಕಾರಗಳಿಂದ ತನ್ನ ಪ್ರಜೆಯ ಪ್ರೀತಿಯನ್ನೂ ನಂಬಿಕೆಯನ್ನೂ ಘಳಿಸಿ ಕೊಳ್ಳಲಿಕ್ಕೆ ಪ್ರಯತ್ನಿಸುವಲ್ಲಿ ಅದು ಬಹುಶಃ ಕೈಗೂಡಿತು; ಆದಾಗ್ಯೂ ಪಪ್ಪನೂ ಸ್ಪಾನಿಯದ 2ನೇ ಫಿಲಿಪ್ಪನೂ[2] ಲೀಗಿನ ಮುಖ್ಯಸ್ಥರೂ ಕಥರನೆಂಬ ರಾಜನ ಸಂಗಡ ಸ್ನೇಹದಿಂದಿರುವದಕ್ಕೆ ಅಸಹ್ಯ ಗೊಂಡಿರುತ್ತಿದ್ದರು. ಹೆನ್ರಿಯು ಅದು ಕಂಡು—ನನ್ನ ಪ್ರಜೆಗೆ ಶಾಂತಿಯನ್ನೂ ಸಮಾಧಾನವನ್ನೂ ಪಾಲಿಸುತ್ತೇನೆ, ನನ್ನ ಸಹೋದರರಾದ ಹೂಗೊನೊತ್ತರಿಗೆ ಸಹ ಹೆಚ್ಚು ಪ್ರಯೋಜನ ಬರಿಸ್ಯೇನೆಂದು, ತನ್ನೊಳಾಲೋಚಿಸಿ ಕೊಂಡು, ಕ್ರಿ. ಶ. 1593ನೇ ವರುಷ ಪಪ್ಪಕ ಸಭೆಯನ್ನು ಶೇರಿ ಕೊಂಡನು. ಮರುವರುಷ ಯೇಸುವಿತರು ಅವನನ್ನು ಕೊಲ್ಲುವದಕ್ಕೆ ಒಬ್ಬ ಮಾರಕನನ್ನು ಕಳುಹಿಸಿದ್ದು ಬೈಲಾದಾಗ ಯೇಸುವಿತರು ಇತ್ತಣ ವರುಷ ಫ್ರಂಚಿನ ಗಡಿ ಬಿಟ್ಟು ಹೋಗಬೇಕಾಯಿತು. ಆದರೆ ಇವರು ಈಗ ತಡೆಯದೆ ಅವಸ್ಥೆಗನುಸರಿಸಿ[3], 4ನೇ ಹೆನ್ರಿಯ ಪಕ್ಷಕರಾಗಿ, ಅವನನ್ನೂ ಪಪ್ಪನನ್ನೂ ಒಂದೇ ಮಾಡುವಲ್ಲಿ ಪ್ರಮುಖರಾದರು. ಆದ್ದರಿಂದ ಅಂದಿನ ಪಪ್ಪನಾದ 8ನೇ ಕ್ಲೇಮೆಂತನು ಅವನನ್ನು ಬನ್ನಿನೊಳಗಿಂದ ಬಿಡಿಸಿದನು; ಬಳಿಕ ರಾಜ್ಯದವರೆಲ್ಲರೂ, ತಮ್ಮ ಅರಸನೆಂದು, ಅವನಿಗೆ ವಂದಿಸಿದರು.

ಕ್ರಿ. ಶ. 1598ನೇ ವರುಷ ಅವನು ನಂತ್ಸು ಪಟ್ಣದ ಪ್ರಖ್ಯಾತ ನಿರ್ಣಯವನ್ನು ಪ್ರಕಟಿಸಿದನು; ಅದರ ಮೇರೆಗೆ ಸೌವಾರ್ತಿಕ ಕ್ರೈಸ್ತರಿಗೂ ಪಪ್ಪಕರಿಗೂ ಮತಾಚಾರದ ಸಮಾನ ಸ್ವಾತಂತ್ರ್ಯವು ನೇಮಿತವಾಯಿತು. ಪ್ರಭುಗಳಲ್ಲಿ ಮತ್ತು ರಾಷ್ಟ್ರಸ

1) 462, 499ನೇ ಪಾನು. 2) 468—474, 494ನೇ ಪಾನು. 3) 464ನೇ ಪಾನು.

ಭೆಗಳಲ್ಲಿ ಮತ್ತು ಪಾರ್ಲಿಮೆಂತಿನಲ್ಲಿ ಇರುವ ಪಪ್ಪಕರೂ ಸೌವಾರ್ತಿಕರೂ ಎಲ್ಲರೂ ಕೂಡಿ, ಅದು ನಿತ್ಯಕ್ಕೂ ಅಚಲವಾದ ನಿರ್ಣಯವೆಂದು, ದೇವರಾಣೆ ಇಟ್ಟು, ಪ್ರಮಾಣಿಸಿದರು. ಆ ಸಮಯ ಹೂಗೊನೊತ್ತರು ರಾಜ್ಯಾಧಿಕಾರಸ್ಥರಿಂದಲೇ ತಮ್ಮ ಮತಕ ರಾಷ್ಟ್ರೀಯ ಸ್ವಾತಂತ್ರ್ಯಗಳಲ್ಲಿ ಸ್ಥಾಪಿತವಾದಂಥ ರಾಜ್ಯಕುಲವಾದರು; ಇನ್ನು ಮುಂದೆ ಅವರ ಹೋರಾಟಗಳಾಗುವಲ್ಲಿ ಇವು ಅವರ ಮತಸ್ವಾತಂತ್ರ್ಯದ ರಕ್ಷಣೆಗೋಸ್ಕರ ಮಾತ್ರವಲ್ಲ, ಅವರ ಪ್ರಜಾಸ್ವಾತಂತ್ರ್ಯದ ಉಳಿಮೆಗೋಸ್ಕರ ಸಹ ಆಗುವಂಥಾವು; ಇನ್ನು ಮುಂದೆ ರಾಜ್ಯಾಧಿಕಾರಸ್ಥರು ಹೂಗೊನೊತ್ತರನ್ನು ಯಾವ ವಿಧದಿಂದಲಾದರೂ ಒತ್ತಿ ಅವರ ಸ್ವಾತಂತ್ರ್ಯಗಳನ್ನು ಕೆಡಿಸುವದು ಪ್ರಮಾಣಕ್ಕೆ ಭಂಗವೆಂದಾಗುವದು; ಅದು ನಿಮಿತ್ತವಾಗಿ ಹೆನ್ರಿಯ ಮೇಲಣ ಅರಸುಗಳು ಸೌವಾರ್ತಿಕರಿಗೆ ಬಲಾತ್ಕಾರ ಮಾಡುವಲ್ಲಿ ಇವರು ಎದುರಿಸುತ್ತಿದ್ದದು ಅತರ್ಕ್ಯವಾದ ನ್ಯಾಯವೇ.

4ನೇ ಹೆನ್ರಿ ರಾಜನು ಒಳ್ಳೇ ತಂದೆ ಎಂಬಂತೆ ತನ್ನ ಪ್ರಜೆಯ ಹಿತವನ್ನು ಚಿಂತಿಸುತ್ತಿರುವನು. ತೆರಿಗೆಯು ಕಡಿಮೆಯಾಗುವ ಹಾಗೂ ಕೃಷಿ ಮುಂತಾದ ದೇಶಪ್ರಯೋಜಕ ವೃತ್ತಿಗೆ ಹೆಚ್ಚು ಇಂಬಾಗುವ ಹಾಗೂ ಅವನು ಅನೇಕ ಮಂದಿ ದಂಡುಗಾರರನ್ನು ಬಿಟ್ಟು ಬಿಟ್ಟನು; ಕಾಡು ಬಿದ್ದ ವಿಸ್ತಾರವಾದ ಬೈಲುಗಳನ್ನು ಹಸನು ಮಾಡಿಸಿ, ಲಾಭಕರವಾದ ರೇಶಿಮೆಯ ಹುಟ್ಟುವಳಿಯನ್ನು ತನ್ನ ರಾಜ್ಯದಲ್ಲಿ ಶೇರಿಸಿ, ಪಂಚಾಳತ್ವ ವ್ಯಾಪಾರಗಳ ವೃತ್ತಿಯನ್ನು ಪ್ರವರ್ಧಿಸಿ, ಚೌರ್ಯವೃತ್ತಿಗಳನ್ನು ನಿಲ್ಲಿಸಿದನು. ಅನೇಕಾವರ್ತಿ ಅವನು ರಯಿತರಿಗೆ ತಕ್ಕದಾದ ಸಾಧಾರಣ ಅಂಗಿ ತೊಟ್ಟು ಕೊಂಡು, ಈ ಪ್ರಕಾರ ತನ್ನ ರಾಜಕೀಯ ಕುರುಹನ್ನಡಗಿಸಿ, ಪ್ರಜೆಯು ತನ್ನ ಆಡಳಿತೆಯ ಕುರಿತು ಏನು ತಿಳು ಕೊಳ್ಳುತ್ತಾರೆ? ನೋಡೋಣವೆಂದು, ಪ್ರಜೆಯೊಳು ಹೊಕ್ಕು, ತಾನು ನಿಂದೆಯನ್ನಾದರೂ ಕೇಳುವಲ್ಲಿ ಶಿಕ್ಷೆಯೇನೂ ಗೈಯದೆ, ಅದರ ಕಾರಣವನ್ನು ಪರಿಹರಿಸಲಿಕ್ಕೆ ಪ್ರಯತ್ನಿಸುತ್ತಿದ್ದನಷ್ಟೇ. ಅರಮನೆಯೊಳಗೆ ಪ್ರಬಲವಾಗಿದ್ದ ಜಾರಕ್ರಿಯೆಗಳಿಗೆ ದೂರವಾಗಿರುವದು ಮಾತ್ರ ಅವನಿಂದಾಗಲಿಲ್ಲ[1]. ಹ್ಯಾಗಾದರೂ ಫ್ರಂಚರು ಈಗಲಾದರೂ ಅವನ ಒಳ್ಳೇ ಕಾರುಭಾರಿನ ಉಪಕಾರವನ್ನರಿತು, ಅವನನ್ನು ಕೊಂಡಾಡುತ್ತಾರೆ; ಅವನ ಉತ್ತರಾಧಿಕಾರಿಗಳಾದ 13ನೇ, 14ನೇ, 15ನೇ ಲೂಯಿ ಎಂಬವರು ದುಷ್ಟ ರೀತಿಯ ರಾಜ್ಯಪರಿಪಾಲನದಿಂದ ದೇಶದ ಮೇಲೆ ವಾಚಾತೀತವಾದ ಆರ್ತಿಯನ್ನು ತಂದ ಸಲುವಾಗಿ ಅದಕ್ಕೆ ಮತ್ತಷ್ಟು ಕಾರಣವಾಯಿತು.

ಕ್ರಿ. ಶ. 1610ನೇ ವರುಷದ ಮೇ ತಿಂಗಳಲ್ಲಿ ಹೆನ್ರಿಯು ಕೂತಿರುವ ರಥಕ್ಕೆ ಇಕ್ಕಟ್ಟುಬೀದಿಯಲ್ಲಿ ಕೆಲವು ಬಂಡಿಗಳಿಂದ ಅಟಕವಾಗಿ, ಅದು ನಿಂತಿರಲು, ಮುಂಚೆ

---

1) 510ನೇ ಪಾನು.

ಭಿಕ್ಷಕ ಮಠಿಕಕುಲದವನಾಗಿದ್ದ ಫ್ರಂಚ ರವಯ್ಲ್ಯಕನೆಂಬವನೊಬ್ಬನು ರಥಗಾಲಿಯ ಹತ್ತಿ, ಮೂರು ಸಾರಿ ಒಂದು ಕತ್ತಿಯಿಂದ ರಾಜನೆದೆಗೆ ತಿವಿದು, ಅವನನ್ನು ಕೊಂದನು. ರಾಜರ ಕೊಲೆಯನ್ನು ಸ್ತುತಿಸುವಂಥ ಯೇಸುವಿತರ ಗ್ರಂಥಗಳು ಆ ಸಮಯ ಪರೀಸು ಪಟ್ಣದಲ್ಲಿ ಮಿಗಿಲಾಗಿದ್ದವು; ಸ್ವಲ್ಪ ಕಾಲಕ್ಕೆ ಮುಂಚೆ ಪಾರ್ಲಿಮೆಂತಿನವರು ಅಂಥವುಗಳನ್ನು ಸಂತೆಬೈಲಿನಲ್ಲಿ ಸುಡಿಸಲವಶ್ಯವಾಗಿತ್ತು. ಹಾಗಾದರೆ, ಹೂಗೊನೊತ್ತರ ಗೆಳೆಯನಾದ ಹೆನ್ರಿಯ ಮರಣಕ್ಕೆ ಹೇತುವಾದವರು ಯಾರೆಂತ, ಸಂಶಯ ಹುಟ್ಟದು[1].

ಹೆನ್ರಿಯು ತನ್ನ ಜೀವಿತದ 55ನೇ ವರುಷದಲ್ಲಿ ಆ ಪ್ರಕಾರ ಕೊಲೆಗೆ ಗುರಿಯಾದನಂತರ ಅಪ್ರಾಪ್ತವಯಸ್ಸಿನವನಾದ 13ನೇ ಲೂಯಿ ಎಂಬ ಕುಮಾರನು ಗದ್ದುಗೆಯನ್ನೇರಿದನು; ಅಧಿಕಾರಾಭಿಮಾನಿಯಾದ ರಾಜಮಾತೆಯು ರಾಜ್ಯಪರಿಪಾಲನವನ್ನು ಹಿಡು ಕೊಂಡಿರುವಲ್ಲಿ, ಸೌವಾರ್ತಿಕರ ಸ್ವಾತಂತ್ರ್ಯಗಳು ತಪ್ಪಿ ಹೋಗುವವೆಂತ, ವಿಲಂಬವಿಲ್ಲದೆ ಸ್ಪಷ್ಟವಾಯಿತು. ಬಳಿಕ 10 ವರುಷಕ್ಕೀಚೆ ಲೂಯಿ ರಾಜನು ದಂಡಿನೊಡನೆ ಬೇಯರ್ನು ಎಂಬ ಪ್ರದೇಶದಲ್ಲಿ ಸೌವಾರ್ತಿಕರಿಂದ ಹೆಚ್ಚು ದೇವಾಲಯಗಳನ್ನೂ ಅವುಗಳ ಸೊತ್ತುಗಳನ್ನೂ ಕಸು ಕೊಂಡು, ಪಪ್ಪಕರಿಗೆ ಕೊಟ್ಟು, ಉಳಿದ ಕೆಲವು ದೇವಾಲಯಗಳನ್ನು ಕೆಡವಿ, ಸೌವಾರ್ತಿಕರ ದೇವವಾಗ್ಗ್ರಂಥಗಳನ್ನು ಹರಿದು, ಅವರಲ್ಲಿ ನಾನಾ ತರದ ಕ್ರೂರತ್ವ ನಡಿಸಲಿಕ್ಕೆ, ಫ್ರಂಚಿನ ಸಮಸ್ತ ಸೌವಾರ್ತಿಕ ಸಭೆಯಲ್ಲಿ ಸಂಕಷ್ಟದ ಗೋಳಾಟವು ಕೇಳಿಸಿತು; ಪಪ್ಪಕರು ಸೌವಾರ್ತಿಕರನ್ನು ನಶಿಸಲಿಕ್ಕೆ ಆಲೋಚನೆ ಗೊಂಡಿದ್ದಾರೆಂತ, ಅವರಿಗೆ ಗೊತ್ತಾಯಿತು. ಹೀಗಿರಲಾಗಿ ಕ್ರಿ. ಶ. 1621ನೇ ವರುಷ ತಿರಿಗಿ ಯುದ್ಧವು ಹತ್ತಿತು. ಈ ಸರ್ತಿ ಪಪ್ಪಕರು ಕ್ರಿ. ಶ. 1628ನೇದಕ್ಕೆ ಪೂರ್ಣವಾಗಿ ಗೆದ್ದರು. ಆದ್ದರಿಂದ ಮರುವರುಷ ನಂತ್ಸಿನ ನಿರ್ಣಯವು ಬಹುಶಃ ತಳ್ಳಿ ಹೋದರೂ, ಸೌವಾರ್ತಿಕರಿಗೆ ಅನಾಥತ್ವವಾದರೂ, ಬಹು ಅಪಮಾನ ಬಂದರೂ, ಅವರು ಅರಮನೆಯನ್ನೂ ರಾಜೋದ್ಯೋಗಗಳನ್ನೂ ಬಿಟ್ಟು ಬಿಡ ಬೇಕಾದರೂ, 15ನೇ ಗ್ರೆಗೋರ ಪಪ್ಪನು, ಸಭ್ಯರು ದೇವವಾಕ್ಯದ ದೇಶೀಯ ಭಾಷಾಂತರಗಳನ್ನು ಓದ ಬಾರದೆಂತ, 7 ವರುಷದ ಹಿಂದೆ ಅವರನ್ನು ಕುರಿತು ವಿಧಿಸಿದ್ದರೂ[2], ಆ ಕ್ರೈಸ್ತರ ಭಕ್ತಿಚರ್ಯೆಯು ಅದೆಲ್ಲಾದರಿಂದ ಕುಂದದ್ದು ಮಾತ್ರವಲ್ಲದೆ ಹೆಚ್ಚಾಯಿತಷ್ಟೇ. ಅಂದಿನಿಂದ ಅವರು ಖಡ್ಗದ ಉಪಾಯದಿಂದ ತಮ್ಮ ನ್ಯಾಯವನ್ನುಳಿಸಿ ಕೊಳ್ಳುವ ಶೋಧನೆ ದಾಟಿದವರಾಗಿ, ತಮ್ಮೊಳಗಿನ ಮತಕಾರ್ಯಗಳ ಚಿಂತನೆಗಳನ್ನೇ ಮಾತ್ರ ಮಾಡ ತೊಡಗಿದರು. ಇಂತಾಗುತ್ತಿರಲು, ಗೃಹ್ಯವಾದ ಮತ್ತು ಮತಕವಾದ ಅಧಿಕ ಸೌಖ್ಯವು ಬೇಗ ಅವರಲ್ಲಿ ಉ

1) 462ನೇ, 465ನೇ, 510ನೇ, 511ನೇ ಪಾನು. 2) 503ನೇ ಪಾನು ಸರಿ ನೋಡು.

ಧ್ಭವಿಸಿತು; ಪಪ್ಪಕರಿಂದ ತಮಗೆ ಇನ್ನೂ ಆಗುವ ತಂಟೆಯನ್ನೆಲ್ಲಾ ಶಾಂತಿಯಿಂದ ಸಹಿಸುತ್ತಾ ಬಂದರು.

ಕ್ರಿ. ಶ. 1643ನೇ ವರುಷದಲ್ಲಿ ಸತ್ತ 13ನೇ ಲೂಯಿಯ ಹಿಂದೆ 14ನೇ ಲೂಯಿ ಎಂಬವನು ರಾಜನಾದನು. ಇಂಗ್ಲಿಷ ಪ್ರಜಾರಾಜತ್ವದ ಪರಿಪಾಲಕ ಪ್ರಭುವಾದಂಥ ಕ್ರೊಂವೆಲನ[1] ಸಹಾಯದಿಂದ 1652ನೇದರಿಂದ 1656ನೇದರ ವರೆಗೆ ಸೌವಾರ್ತಿಕರಿಗೆ ತಕ್ಕ ಶಾಂತಿ ಇರುತ್ತಿತ್ತು. ಆದರೆ ಲೂಯಿಯ ಯೇಸುವಿತ ಕುಲದವನಾದ ನಿವೇದನಶ್ರೋತನು, ರಾಜನು ತನ್ನ ಸೌವಾರ್ತಿಕ ಪ್ರಜೆಯನ್ನು ಪಪ್ಪಕತ್ವದಲ್ಲಿ ಶೇರಿಸಿದರೆ ಮಹಾ ಪುಣ್ಯೋದಯವಾದೀತೆಂತ, ನಾನಾ ಪ್ರಕಾರ ಒಡಂಬಡಿಸುತ್ತಿರಲು, ಈ ರಾಜನು, ತನ್ನ ಯೌವನದ ಪಾಪಗಳಿಗೆ ಯೋಗ್ಯ ಪ್ರಾಯಶ್ಚಿತ್ತವು ಇದೇ, ಸರಿ! ಎಂದು, ಮೊದಲು ಮಾತಿನ ಮತ್ತು ಹಣದ ಆಶೆ ತೋರಿಸಿ, ಮುಖ್ಯವಾಗಿ ಸೌವಾರ್ತಿಕರ ಬೋಧಕರನ್ನು ಪಪ್ಪಕತ್ವಕ್ಕೆಳೆಯ ನೋಡಿದನು. ಇದು ಸಾಗದೆ ಹೋದ ಮೇಲೆ ಸೌವಾರ್ತಿಕರ ದೇವಾಲಯಗಳನ್ನೂ ಶಾಲೆಗಳನ್ನೂ ಕೆಡಿಸಲಾಯಿತು; ಯಾರೂ ಸೌವಾರ್ತಿಕರಾಗ ಬಾರದೆಂಬ ಆಜ್ಞೆಯು ಬಂತು; ಏಳೇಳು ವರುಷದ ಎಲ್ಲಾ ಮಕ್ಕಳನ್ನು ಪಪ್ಪಕ ಧರ್ಮದಲ್ಲಿ ಶಿಕ್ಷಿಸುವದಕ್ಕೋಸ್ಕರ ಸೌವಾರ್ತಿಕ ಹೆತ್ತವರಿಂದ ಅಪಹರಿಸಲಾಯಿತು; ಇತ್ಯಾದಿ. ಕ್ರಿ. ಶ. 1680ನೇ ವರುಷ ಅರಸನು ದ್ರಗೊನಾದುಗಳು ಅಂದರೆ ದ್ರಗೋನರುಪದ್ರವವೆಂಬ ದುಷ್ಕ್ರಿಯೆಗಳನ್ನಾರಂಭಿಸಿದನು. ಹ್ಯಾಗಂದರೆ, ದ್ರಗೋನರು ಅಂದರೆ ದಂಡಿನ ರಾವುತರು; ಸೌವಾರ್ತಿಕರು ಬಹು ಹೆಚ್ಚಾಗಿರುವ ಫ್ರಂಚಿನ ದಕ್ಷಿಣ ಭಾಗಕ್ಕೆ ಆ ರಾಜನು ಅಂಥವರಲ್ಲಿ ಹಲವು ಪಟಾಲಮುಗಳನ್ನು ಕಳುಹಿಸಿ, ಕಥರರೆಂಬವರ ಮನೆಗಳಲ್ಲಿಳಿಸಿದನು. ಆ ರಾವುತರು ಬರುವಲ್ಲಿ ಅವರ ಮುಂದುಗಡೆ ಪಪ್ಪಕ ಮತೋದ್ಯೋಗಿಗಳು, ಒಂದು ಕೈಯಲ್ಲೊಂದು ಕ್ರೂಜೆಯು ಮತ್ತೊಂದು ಕೈಯಲ್ಲೊಂದು ಹಣದ ಚೀಲವು ಇದ್ದವರಾಗಿ, ನಡೆಯುವರು; ನಿವಾಸಿಗಳು ಪಪ್ಪಕತ್ವಕ್ಕೊಳಗಾಗದಿದ್ದರೆ ರಾವುತರು ಮನೆಸಾಮಗ್ರಿಗಳನ್ನೆಲ್ಲಾ ಹಾಳು ಮಾಡಿ, ವ್ಯಾಪಾರದ ಜೀನಸುಗಳನ್ನು ಕೆಡಿಸಿ ಅಥವಾ ಮಾರಿ, ಚಲೋ ದ್ರಾಕ್ಷೆಯ ತೋಟ ಮುಂತಾದವುಗಳನ್ನು ನಶಿಸಿ, ಆಬಾಲವೃದ್ಧರಾದ ನಿವಾಸಿಗಳೆಲ್ಲರನ್ನು ಬಾಧಿಸುವೆಡೆ ಅವರ ಕಾಲಿಗೆ ಹಗ್ಗ ಕಟ್ಟಿ, ತಲೆ ಕೆಳಗಾಗಿ ಅವರನ್ನು ಗೋಡೆಗೆ ತೂಗ ಹಾಕಿ, ಬುಡದಲ್ಲಿ ಹಸಿದಾದ ಹುಲ್ಲನ್ನೊಟ್ಟಿ, ಹೊಗೆ ಹಾಕುವರು; ಅದಲ್ಲದೆ ಅವರ ಕೂದಲುಗಳನ್ನೆಲ್ಲ ಕಿತ್ತು, ಕಾಸಿದ ದಂಡಾಸುಗಳಿಂದ ಅವರ ಮೈ ಚಿವಟ, ಹೀಗೆ ಕೆಲವು ದಿವಸ ಅವರಿಗೆ ನಿದ್ರೆ ಬಾರದಂತೆ ಪೀಡಿಸುವರು; ಬೇರೊಬ್ಬರನ್ನು ಮಿಸ್ಸಯಾಗ ನಡೆಯುವಲ್ಲಿಗೆ ಬಲಾತ್ಕಾರದಿಂದ ಎಳ

1) 500ನೇ ಪಾನು.

ಕೊಂಡು ಬರುವರು; ಸ್ತ್ರೀಯರನ್ನೂ ಕುಮಾರ್ತೆಗಳನ್ನೂ ಅಸಹಜವಾದ ಬಹು ವಿಕಾರದಿಂದ ಭಂಗ ಪಡಿಸುವರು[1]; ಅನೇಕಾನೇಕ ದೇವಾಲಯಗಳನ್ನು ಸಹ ಕೆಡಿಸಲಾಗುವ ಕಾರಣ ಬಹಳ ರಾಷ್ಟ್ರಗಳಲ್ಲಿ ಒಂದೇ ಮಾತ್ರ ಉಳಿಯಿತು, ಹೀಗಿರಲಾಗಿ 80 ವರುಷದ ಮುದುಕರಾದ ಸೌವಾರ್ತಿಕರಾದರೂ ಅಲ್ಲಲ್ಲಿ ದೇವಾಲಯದೊಳಗಣ ಆರಾಧನೆ ಮಾಡುವದಕ್ಕೆ 60ಮೈಲು ದೂರಕ್ಕೂ ನಡೆದು ಹೋಗಿ ಬರ ಬೇಕಾಯಿತು. ಈ ಮೊದಲಾದ ಕ್ರೂರತ್ವವು 5 ವರುಷವೇ ಆಳುತ್ತಿತ್ತು. ಪೀಡಿತರಲ್ಲಿ ಅನೇಕರು ಹುಚ್ಚರಾದರು; ಅನೇಕರು ಬಹಿರಕ್ಕೆ ಪಪ್ಪಕ ಮತವನ್ನವಲಂಬಿಸಿದರು; ಅನೇಕರು ಸ್ಥಿರ ವಿಶ್ವಾಸದಿಂದೊಪ್ಪಿ, ರಾವುತರಿಂದ ಹತರಾದರು. 50,000 ಕುಟುಂಬಗಳು ಅಂದರೆ ಸುಮಾರು 5ಲಕ್ಷ ಜನರು ಗುಳೆ ತೆಗದು, ಪರಮಂಡಲಸಂಶ್ರಿತರಾದರು[2]. ಅಂಥವರು ಇಂಗ್ಲಂದು ಹೊಲ್ಲಂದು ಸ್ವಿತ್ಸೆರ್ಲಂದು ಗೆರ್ಮಾನಿಯವೆಂಬ ದೇಶಗಳಲ್ಲಿಯ ಸೌವಾರ್ತಿಕರನ್ನು ಶೇರಿ ಕೊಂಡರು; ಇವರು ಅವರನ್ನು ಬಹು ಸಂತೋಷದಿಂದ ಅಂಗೀಕರಿಸಿದರು. ಅವರು ನೆಲೆ ಗೊಂಡಲ್ಲೆಲ್ಲಿಯೂ ಕಾರ್ಯಶೀಲತ್ವ ಭಕ್ತಿಗಳೆರಡರಿಂದೆಸೆದು, ದೇವರ ಆಶೀರ್ವಾದದೊಡನೆ ತಾವು ಬಾಳುವವರಾಗಿ, ದೇಶೋಪಕಾರಿಗಳು ಸಹ ಆದರು. ಗೆರ್ಮಾನಿಯದಲ್ಲಿ ಮುಖ್ಯವಾಗಿ ಬ್ರಂದೆನ್ಬುರ್ಗ್ ಎಂಬ ದೇಶದ ಪ್ರೀದೆರೀಕ ವಿಲ್ಹೆಲ್ಮನೆಂಬ ದೊಡ್ಡ ರಾಜಶೋಧಕ ಪ್ರಭುವು ಅವರಿಗೆ ಬಲು ಪ್ರೀತಿ ತೋರಿಸುತ್ತಾ ಬಂದನು.

ಆದರೆ ಆ 5 ವರುಷದ ಈಚೆ ಫ್ರಂಚಿನಲ್ಲಿ ಸೌವಾರ್ತಿಕರ ಮೇಲಿನ ಹಿಂಸೆಯು ತೀರಿತ್ತೆಂತ, ನೆನಸ ಬೇಡ. ಯಾಕಂದರೆ ಅರಸನು ಇನ್ನೂ ಕ್ರಿ. ಶ. 1685ನೇ ವರುಷದಲ್ಲಿ ನಂತ್ಸಿನ ನಿರ್ಣಯವನ್ನು ಪೂರಾ ರದ್ದು ಗೈದ ತರುವಾಯ ಕೇವಲ ಅನಾಥರಾದ ಸೌವಾರ್ತಿಕರಿಗೆ ಉಪಶಮನ ಬಂದದ್ದುಂಟೇ? ಪಪ್ಪಕರು ಅವರ ಸಮೂಹ ಸಮೂಹಗಳನ್ನು ಮಿಸ್ಸಯಾಗಕ್ಕೆ ಹೊಡೆದು ನಡಿಸಿ, ಅವರು ಹೊಸ್ತಿಯವನ್ನು ತಕ್ಕೊಳ್ಳುವದಕ್ಕೆ ಬಾಯಿ ತೆರೆಯಲೊಲ್ಲದಿದ್ದರೆ ಸನೀನಿನಿಂದ ಹಲ್ಲುಗಳನ್ನಗಲಿಸಿ, ಅದನ್ನೊಳ ಶೇರಿಸಿ, ಅದನ್ನೊಕ್ಕೊಡುವಂಥವರನ್ನು ಸಜೀವವಾಗಿ ದಹಿಸುವರು; ಓಡಿ ಹೋಗುವಂಥವರನ್ನು ಹಸ್ತಪ್ರೇರಕನಾವೆಗಳ[3] ಭಾಷಾತೀತ ಕಷ್ಟಕ್ಕೆ ಗುರಿ ಮಾಡುವರು ಅಥವಾ ಶೆರೆಗುಹೆಗಳೊಳಗೆ ಹಾಕುವರು. ಇಂಥಾ ಹಿಂಸೆ ಪಡುವವರಲ್ಲಿ ಹೇರಳರು ಸೆವೆನ್ನೆನ್ ಪರ್ವತಗಳ[4] ಪ್ರದೇಶಕ್ಕೆ ಪಲಾಯನ ತೆಗೆದು ಹೋಗಿ, ಅಲ್ಲಿಯ ಒಕ್ಕಲಿಗರಂತೆ ಕಮಿಸೆಂಬ ತುಂಡಂಗಿಯನ್ನು ತೊಟ್ಟು ಕೊಂಡದರಿಂದ ಕ

1) ಕ್ರೈಸ್ತರಿಗೆ ರೋಮಾಯ ಸಾಮ್ರಾಜ್ಯದ ವಿಗ್ರಹಾರಾಧಕರಿಂದ ಆದ ಹಿಂಸೆಯು ನೆನಪಿಗೆ ಬರುತ್ತದಲ್ಲ? 2) ಪರಮಂಡಲಸಂಶ್ರಿತ = Emigré; — ಮಂಡಲಸಂಶ್ರಿತ = Réfugié; cf. Weber's Ind. Stud. X, 2, p. 201. 3) 473, 490ನೇ ಪಾನು. 4) 376ನೇ ಪಾನು.

ಮಿಸರ್ದರೆಂಬ ನಿಂದೆಯ ಉಪನಾಮದವರಾಗಿ, 20 ವರುಷವೇ ತಮ್ಮನ್ನು ವಧೆ ಗೈಯಲಿಕ್ಕೇರಿ ಬರುತ್ತಿರುವ ರಾಜನ ಸೇನೆಗಳಿಗೆ ಅಪಜಯ ಪಡಿಸುತ್ತಿದ್ದ ಮೇಲೆ ಅವರಿಗೆ ಮತಾಚಾರದ ಸ್ವಾತಂತ್ರ್ಯವನ್ನೂ ಕಸುಕೊಂಡಿದ್ದ ಆಸ್ತಿಯನ್ನೂ ತಿರಿಗಿ ಕೊಡ ಬೇಕಾಯಿತು.

ಲೂಯಿ ರಾಜನು, ತಾನು ಸೌವಾರ್ತಿಕರ ಹಿಂಸೆಯಲ್ಲಿ ಮಿತಿ ತಪ್ಪಿ ಹೋದೆನೆಂತ, ಆಗಿಂದಾಗ ಸ್ವಲ್ಪ ತಿಳುಕೊಂಡು, ಮನೋವ್ಯಥೆ ಗೊಂಡರೂ ಅವನ ನಿವೇದನಶ್ರೋತರು—ನೀವು ಪಪ್ಪನ ವಿಧೇಯ ಕುಮಾರನಾಗಿ ನಡಕೊಂಡಿರಿ, ಅದಲ್ಲದೆ ನಿಮ್ಮ ಹಿಂಸಾಕೃತ್ಯಗಳನ್ನೆಲ್ಲಾ ನಾವೇ ಹೊತ್ತು ಕೊಂಡಿದ್ಧೇವೆಂತ, ಅವನಿಗೆ ತಿರಿ ತಿರಿಗಿ ಹೇಳುತ್ತಿರುವದರಿಂದ ಅವನ ಮನಃಸಾಕ್ಷಿಯ ಅಗ್ನಿಶಿಖೆಯು ತಿರಿ ತಿರಿಗಿ ಇಳಿಯುತ್ತಿರುವದು. ಆದರೂ ಅವನ ಕೆಟ್ಟ ಆಡಳಿತೆಯ ಫಲವು ನಿತ್ಯದಲ್ಲಿ ಅವನೆದುರಿಗೆ ಬರುತ್ತಿತ್ತು; ಹ್ಯಾಗಂದರೆ ವ್ಯಾಪಾರವೂ ಪಂಚಾಳವೃತ್ತಿಯೂ ಕೃಷಿಯೂ ಅನೇಕಶಃ ಬಡವಾಗಿದ್ದವು, ಅದು ವಿನಹ ರಾಜ್ಯಕ್ಕೆ ಭಯಂಕರ ಸಾಲವು ಬಂದು ಕಾಡಿಸುತ್ತಿತ್ತು. ಅವನ ಮೂಲಕ ವ್ಯಭಿಚಾರ ಸೂಳೆಗಾರಿಕೆ ಮುಂತಾದ ವಿಷಯ ಲಾಂಪಟ್ಯವು ಇನ್ನು ಏನೂ ಅಪಮಾನವೆನ್ನಿಸದೆ ಹಬ್ಬುತ್ತಲಿತ್ತು; ಅದು ಹೊರ್ತಾಗಿ ಅವನ ಕಾಲದಲ್ಲಿ ಹಿಂಸಾಸಕ್ತಿಯೇ ಪಪ್ಪಕ ಧರ್ಮವೆನ್ನಿಸುವದರಿಂದ ಜನರು, ಅಂಥಾದ್ದು ಧರ್ಮವಾದರೆ ಧರ್ಮವೆಂದರೇನೆಂದು, ಕೇಳಿ, ನಾಸ್ತಿಕತ್ವಕ್ಕೊಳಗಾಗುತ್ತಲೇ ಇದ್ದರು. 14ನೇ ಲೂಯಿಯು 72 ವರುಷ ಆಳಿ, ಕ್ರಿ. ಶ. 1715ನೇದರಲ್ಲಿ ಸಾಯಲು, ಅವನ ಮೊಮ್ಮಗನಾದ 15ನೇ ಲೂಯಿಯು ಉತ್ತರಾಧಿಕಾರಿಯಾದನು.

ಇವನು ತನ್ನ ಅಜ್ಜನಿಗಿಂತಲೂ ಪಟಿಂಗನು; ಅವನ ಆಳುವಿಕೆಯ ಕಾಲದಲ್ಲಿ ಕಾಮಾತುರವು ಗಗನಕ್ಕೆ ಏರಿತು. ಅವನೂ ಅವನಿಗೆ ಮುಂಚೆ ಅವನ ಅಜ್ಜನೂ ರಾಜ್ಯದ ಸಕಲ ಪ್ರದೇಶಗಳಿಂದ ಸಾವಿರಾರು ಕನ್ಯೆಯರನ್ನು ಹಿಡ ತರಿಸಿ ಕೆಡಿಸಿ ಹಿಂದಕ್ಕೆ ಕಳುಹಿಸುತ್ತಿರುವಾಗ ಮಾನಗೆಟ್ಟ ಕನ್ಯಾಸ್ತ್ರೀಯರು ಕಣ್ಣೀರು ಹಾಕಿ ಗೋಳಾಡುತ್ತಿದ್ದದ್ದೂ ಆಶೆ ತೀರಿಸಿ ಕೊಂಡ ಲಂಪಟರು ಪೈಶಾಚಕ ಅಟ್ಟಹಾಸ ಗೈಯುತ್ತಿದ್ದದ್ದೂ ನಾಸ್ತಿಕರು ಅರಮನೆಗಳಲ್ಲಿಯೂ ಪಪ್ಪಕ ಆಢ್ಯರ ಕೋಟೆಗಳಲ್ಲಿಯೂ ಕ್ರಿಸ್ತನಿಗೆ ದೂಷಿಸುತ್ತಿದ್ದದ್ದೂ ಕ್ಷಣಿಕವಾದ ಹೊಗೆಯಾಗಲಿ ಇಬ್ಬನಿಯಾಗಲಿ ಅಲ್ಲ, ಅದೆಲ್ಲವೂ ಕಾರ್ಮುಗಿಲಿನಂತಾಗಿದ್ದು, ಕಾಲೋಚಿತಕ್ಕೆ ದೇಶದ ಮೇಲೆ ಶಾಪವೆಂಬ ಶಿಡಿಲನ್ನು ಹಾಕುವಂಥಾದ್ದಾಗಿದೆ. ಆ 15ನೇ ಲೂಯಿಯು ಕ್ರಿ. ಶ. 1774ನೇ ವರುಷದ ವರೆಗೆ 50 ವರುಷ ಫ್ರುಂಚಿನ ರಾಜನಾಗಿರುವಂದು ಸೌವಾರ್ತಿಕರಿಗೆ ತಿರಿಗಿ ಬೇರೆ ಬೇರೆ ತರದ ಉಪದ್ರವವು ಬರುತ್ತಿತ್ತು; ಅವರು ಬಹಿರಂಗದ ದೇವಾರಾಧನೆ ಮಾಡ ಬಾರದು; ಮಾಡುವವರಿಗೆ ಶೆರೆಮನೆಯ ಮತ್ತು ಮುಟ್ಟು

ಗೋಳಿನ ಶಿಕ್ಷೆಯಾಗುವದು, ನಡಿಸುವ ಬೋಧಕರಿಗೆ ಮರಣಾಜ್ಞೆಯಾಗುವದು. ಹೀಗಿರಲಾಗಿ ಸೌವಾರ್ತಿಕ ಕ್ರೈಸ್ತರು ಏಕಾಂತ ಸ್ಥಳಗಳಲ್ಲಿ ದೇವಾರಾಧನೆಗೆ ರಾತ್ರಿ ಹೊತ್ತು ಕೂಡ ಬೇಕಾಯಿತು.

15ನೇ ಲೂಯಿಯ ಉತ್ತರಾಧಿಕಾರಿಯು 16ನೇ ಲೂಯಿ ಎಂಬವನು; ಅವನು ಆಳ ತೊಡಗಲು, ಸಕಲ ಸ್ಥಿತಿಯ ಪಪ್ಪಕ ಪ್ರಜೆಯಲ್ಲಿ ದುರ್ಮಾರ್ಗತನವೂ ನಾಸ್ತಿಕ್ಯವೂ ವಾಚಾತೀತ ಬಲ ಗೊಂಡಿತ್ತು. ಅದಲ್ಲದೆ ಪಪ್ಪಕ ಸಭೋದ್ಯೋಗಿಗಳು ಸಾಧಾರಣ ಪ್ರಜೆಯೊಳಗೆ ವಿದ್ಯಾಹೀನತೆಯನ್ನು, ಬೇಕೆಂತ, ಬೆಳಿಸುತ್ತಾ ಬಂದಿದ್ದರು; ಬ್ರೆತಂಞ್ ಎಂಬ ಪ್ರದೇಶಕ್ಕೆ ಮೊದಲಿನ ಸಾರಿ ಜೋಲ್ಗೋಲುಗಡಿಯಾರಗಳು ಬಂದಾಗ ಪ್ರಜೆಯು, ಅವು ಪೈಶಾಚಕ ಮಾಟದವುಗಳೆಂತ, ಕಲಹಕ್ಕೆದ್ದದ್ದೇ ಇದಕ್ಕೊಂದು ನಿದರ್ಶನವು[1]. ಅದು ವಿನಹ, ಹಿಂದೆ ಹೇಳಿದಂತೆ, ಹೆಚ್ಚಾಗಿ 15ನೇ ಲೂಯಿಯ ಸೂಳೆಯರ ಅತಿ ವೆಚ್ಚದಿಂದ, ರಾಜ್ಯದ ಮೇಲೆ ಅಮಿತ ಭಾರವುಳ್ಳದೊಂದು ಸಾಲ ಬಿದ್ದಿದ್ದು, ಕುತ್ತಿಗಮರುತ್ತಿತ್ತು. ಮುಖ್ಯವಾಗಿ ಈ ಸಾಲವು ಕ್ರಿ. ಶ. 1789ನೇ ವರುಷ ಸಂಭವಿಸಿದ ರಾಜ್ಯಪರಿವರ್ತನವೆಂಬ ಪೂರ್ವಾವಸ್ಥೆಯ ಬದಲಾಟಕ್ಕೆ ಕಾರಣವಾಯಿತು; ಆಗ ತೀರದ ಮೇಲೆ ಉಕ್ಕ್ಯೇರಿದ ಕಲ್ಲೋಲಮಯ ಮಹಾರ್ಣವದಂತೆ ಕಲಹಕ್ಕೆದ್ದ ಪಪ್ಪಕ ಪ್ರಜೆಯು 3 ವರುಷದೀಚೆ ರಾಜನನ್ನು ಕೊಂದು, ಯಾವ ಯಾವ ಮತಾಚಾರದ ವಿಷಯವಾದ ಬಲಾತ್ಕಾರವನ್ನೂ ಯಾವತ್ತೂ ಕಿತ್ತು ಹಾಕುವಲ್ಲಿ ಸೌವಾರ್ತಿಕರಿಗೆ ಸಹ ಮತಾಚಾರದ ಸ್ವಾತಂತ್ರ್ಯವು ಪ್ರಾಪಿಸಿತು. ಕ್ರಿ. ಶ. 1804ನೇ ಅಬ್ದ ಫ್ರಂಚಿನಲ್ಲಿ ಕೈಸರನಾದ 1ನೇ ನಪೊಲೆಯೋನ ಬೊನಪರ್ತನೆಂಬವನು 1802ನೇದಕ್ಕೆ ಪಪ್ಪಕತ್ವವನ್ನು, ರಾಜ್ಯಮತವೆಂತ[2], ಮರಳಿ ಊರಿದರೂ ಸೌವಾರ್ತಿಕ ಸಭ್ಯರ ಮತ್ತು ಸಭೋದ್ಯೋಗಿಗಳ ಸದ್ಭಾವವನ್ನನುಭವಿಸುತ್ತಾ ಇದ್ದು, ಅವರವರನ್ನು ಸಲೆ ಕೊಂಡಾಡಿ, ಅದೇ 1802ನೇ ಅಬ್ದ ಅವರಲ್ಲಿ ಕೊನ್ಸಿಸ್ತೋರಿಯಾಲವಾದ್ದೊಂದು[3] ಸಭಾಪರಿಪಾಲನಕ್ರಮವನ್ನು ನೆಲೆಗೊಳ್ಳಿಸಿದನು. ಬಳಿಕ ಕ್ರಿ. ಶ. 1830ನೇ ವರುಷಕ್ಕೆ ಮತ್ತೊಂದು ಅಂಥಾ ರಾಜ್ಯಪರಿವರ್ತನವಾಗಲು, ದೇವಸಂಕಲ್ಪದಿಂದ, ಸೌವಾರ್ತಿಕರಿಗೂ ಪಪ್ಪಕರಿಗೂ ಅದೇ ಪ್ರಜಾಸ್ವಾತಂತ್ರ್ಯವಿರ ತಕ್ಕದೆಂತ, ತಿರಿಗಿ ನೇಮಿತವಾಯಿತು.

---

1) 497ನೇ ಪಾನು ಸರಿ ನೋಡು. 2) 179—181ನೇ ಪಾನು. 3) 432ನೇ ಪಾನು.

## 64. ಗುಸ್ತವ ಆದೊಲ್ಫನೆಂಬ ಸ್ವೇದೆನು ದೇಶದ ರಾಜನು.

ಫ್ರುಂಚಿನಲ್ಲಿ ಪಪ್ಪಕರು ನಂತ್ಸಿನ ನಿರ್ಣಯವೆಂಬ ಒಪ್ಪಂದವನ್ನುಪೇಕ್ಷಿಸಿ, ಕಡೆಯಲ್ಲಿ ಒಡೆದು ಬಿಟ್ಟ ಹಾಗೆ[1] ಗೆರ್ಮಾನಿಯದಲ್ಲಿ ಸಹ ಪಪ್ಪನೂ ಯೇಸುವಿತರೂ ಬೇರೆ ಬೇರೆ ಪಪ್ಪಕ ರಾಜ್ಯಾಧಿಕಾರಿಗಳೂ ಔಗ್ಸ್ಬುರ್ಗಿನ ಆ ಮತಸಂಧಾನವನ್ನು[2] ಲಕ್ಷ್ಯ ಮಾಡದೆ ಇರುತ್ತಿದ್ದರು. ಆದಾಗ್ಯೂ 5ನೇ ಕರ್ಲ ಕೈಸರನ ಸಹೋದರನಾದ ಆ 1ನೇ ಫೆರ್ದಿನಂದನು[3] ಬಹು ಬುದ್ಧಿವಂತಿಕೆಯಿಂದ ಗೆರ್ಮಾನಿಯವನ್ನಾಳುವಾಗ ಆ ಸಂಧಾನದ ಅರ್ಥವನ್ನು ತಪ್ಪಿಸಲಿಕ್ಕೆ ಯಾರಿಗೂ ಧೈರ್ಯ ಸಾಲಲಿಲ್ಲ; ಅವನ ಕುಮಾರನಾದ 2ನೇ ಮಕ್ಸಿಮಿಲಿಯಾನನು ಕ್ರಿ. ಶ. 1564ನೇ ವರುಷದಿಂದ 1576ನೇದರ ವರೆಗೆ ಒಳ್ಳೇ ಕಾರಭಾರು ಗೈಯುತ್ತಿರುವ ಸಮಯ ಸಹ ಅದೇ ಸ್ಥಿತಿಯು ಉಳಿಯಿತು. ಈ ಕೈಸರನಿಗೆ ಸೌವಾರ್ತಿಕರ ವಿಶ್ವಾಸಪ್ರಮಾಣವು ಚಂದಾಗಿ ತಿಳಿದಿದ್ದದಲ್ಲದೆ ಅವನು, ತನ್ನ ಅರಮನೆಯ ಪ್ರಸಂಗಿಕನೆಂತ, ಒಬ್ಬ ಸೌವಾರ್ತಿಕ ಬೋಧಕನನ್ನಾದರೂ ಇಟ್ಟು ಕೊಂಡನು; ಇದರ ಹೊರ್ತು ಅವನು ಫ್ರುಂಚಿನಲ್ಲಿಯ ಆ ರಕ್ತವಿವಾಹದ ಸುದ್ದಿಯನ್ನೂ[4] ಸ್ಪಾನಿಯದ 2ನೇ ಫಿಲಿಪ್ಪನ ಕ್ರೂರತ್ವದ್ದನ್ನೂ[5] ಕೇಳಿ, ಪಪ್ಪನಿಗೆ ಘಟ್ಟಿಗತನದಿಂದ ಬುದ್ಧಿ ಹೇಳಿದನು. ಬಳಿಕ ಕ್ರಿ. ಶ. 1612ನೇ ಅಬ್ದದ ತನಕ ಕೈಸರನಾಗಿರುತ್ತಿದ್ದ 2ನೇ ರೂದೊಲ್ಫನೆಂಬ ಕುಮಾರನು ಸ್ಪಾನಿಯದ ಆ 2ನೇ ಫಿಲಿಪ್ಪ ರಾಯನ ಅರಮನೆಯಲ್ಲಿ ಶಿಕ್ಷಿತನಾಗಿದ್ದವನು; ಈ ಚಪಲಭಾವಿಯು ಆರಂಭಕ್ಕೆ ಸಾಧುಗುಣಿಯಾಗಿ ತೋರಿದರೂ ಯೇಸುವಿತರಿಗೆ ಪೂರಾ ವಶನಾದ ಕಾರಣ ಅವನ ಆಳ್ತನದ ಕಾಲದಲ್ಲಿ ಗೆರ್ಮಾನಿಯದ ಪಪ್ಪಕ ಧರ್ಮವುಳ್ಳ ಕೆಲವು ದೇಶಗಳಲ್ಲಿ ಸೌವಾರ್ತಿಕರಿಗಿದ್ದ ಸ್ವಾತಂತ್ರ್ಯವನ್ನು ಕಳೆದು, ಸೌವಾರ್ತಿಕ ದೇವಾರಾಧನೆಯನ್ನು ನಿಷೇಧಿಸಲಾಯಿತು.

ಸೌವಾರ್ತಿಕ ರಾಜರು ಅದು ಕಂಡು, ಕೈಸರನೂ ಪಪ್ಪಕ ರಾಜರೂ ಕೈಗೂಡುವ ಕ್ಷಣವೇ ಕೊಟ್ಟ ಮಾತನ್ನು ತಪ್ಪಿಸುವರೆಂತ, ಚಿಂತಿಸಿ, ಕ್ರಿ. ಶ. 1610ನೇ ವರುಷ ಸೌವಾರ್ತಿಕ ಊನಿಯೋನು ಎಂಬ ಒಡಂಬಡಿಕೆಯನ್ನು ತಮ್ಮೊಳಗೆ ಕಟ್ಟಿ ಕೊಂಡರು; ಅದಕ್ಕೆದುರಾಗಿ ಪಪ್ಪಕರು ಲೀಗವೆಂಬದನ್ನು ಕಟ್ಟಿ ಕೊಂಡರು. ತದನಂತರ ಆ ಉಭಯ ಪಕ್ಷದವರಿಗೆ 30 ವರುಷದ ಯುದ್ಧವೆಸಗಿದ ಬಹಿಷ್ಕಾರಣವೇನೆಂದರೆ, ಕಾಲೋಚಿತಕ್ಕೆ ದಯಾಯುಕ್ತನಾದ ಆ 2ನೇ ರೂದೊಲ್ಫ ಕೈಸರನು ಕ್ರಿ. ಶ. 1609ನೇ ಅಬ್ದ ಒಂದು ಮಹಾ ರಾಜಶಾಸನದ ಮೂಲಕ ಬೋಯಿಮೆನು ದೇಶದಲ್ಲಿಯ[6] ಪುನಃಸ್ಥಾಪಿತ ಸಭೆಗಳಿಗೆ ನಿಲುಗಡೆಯನ್ನೂ ಪಪ್ಪಕರಿಗಿರುವ ಅದೇ ಮ

1) 511, 513, 515ನೇ ಪಾನು. 2) 450ನೇ ಪಾನು. 3) 447, 448, 468ನೇ ಪಾನು. 4) 506—509ನೇ ಪಾನು. 5) 469 ಆದಿ ಪಾನು. 6) 408ನೇ ಪಾನು.

ತಕ ಮತ್ತು ರಾಷ್ಟ್ರೀಯ ಸ್ವಾತಂತ್ರ್ಯವನ್ನೂ ಕೊಟ್ಟಿದ್ದನು. ಬಳಿಕ ಕ್ರಿ. ಶ. 1612ನೇ ವರುಷ ಗೆರ್ಮಾನಿಯದ ಕೈಸರನಾದ ಮತ್ಥಿಯನು ತನ್ನ ಚಿಕ್ಕಪ್ಪನ ಮಗನಾದಂಥ ಔಸ್ತ್ರಿಯದ[1] ಫೆರ್ದಿನಂದನೆಂಬ ಪ್ರಧಾನ ನಾಯಕನಿಗೆ 1617ನೇದರಲ್ಲಿ ಬೋಯಿಮೆನಿನ ಅರಸುತನದ ಬಿರುದನ್ನೊಪ್ಪಿಸಲು, ಇವನು ಆ ಮಹಾ ರಾಜಶಾಸನವನ್ನು, ದೇವರ ಮುಂದೆ ಪ್ರಮಾಣವಿಟ್ಟು, ಪುನಃಸ್ಥಾಪಿಸಿದನು. ಆ ಮೇಲೆ ಆ ಬೋಯಿಮೆನು ದೇಶದಲ್ಲಿ ಎರಡು ಸೌವಾರ್ತಿಕ ಸಭೆಯವರು ಒಂದೊಂದು ಹೊಸ ದೇವಾಲಯವನ್ನೇರಿಸಿದರು; ಆಗ ಪಪ್ಪಕರು ಅವುಗಳಲ್ಲೊಂದನ್ನು ಕೆಡವಿ ಹಾಕಿ, ಮತ್ತೊಂದನ್ನು ಮುಚ್ಚಿ ಬಿಟ್ಟರು. ಅದಕ್ಕೋಸ್ಕರ ಆ ಸೌವಾರ್ತಿಕರು ಮತ್ಥಿಯನ ಹತ್ತರ ದೂರು ಹೇಳಲು, ಯೇಸುವಿತರ ವಕ್ರ ಬುದ್ಧಿಗೆ ಗುರಿಯಾದ ಆ ಕೈಸರನು ಒಂದು ಪತ್ರದ ಮುಖಾಂತರ ಅವರಿಗೆ, ದೂರು ಕೊಟ್ಟ ತುಸಕವೇ, ಶಿಕ್ಷೆಯ ಭಯವನ್ನು ತೋರಿಸಿದನು. ಈ ಮುಂತಾದಂಥ ಕೆಲವು ನಿಮಿತ್ತಗಳಿಂದ ಬೋಯಿಮೆನಿನ ಸೌವಾರ್ತಿಕರ ಮುಖ್ಯಸ್ಥರು ಪ್ರಾಗು ಪಟ್ಣಕ್ಕೆ[2] ಬಂದು, ಕೈಸರನ ನಾಲ್ವರು ಪ್ರತಿನಿಧಿಗಳನ್ನು ಮಾತಾಡಿಸಲು, ಇವರು ಮಹಾ ಮೂರ್ಖತೆಯಿಂದಿರಲಿಕ್ಕೆ, ಆ ಮುಖ್ಯಸ್ಥರು ಕಾಲಾನುಗುಣ್ಯ ವೇಗದಿಂದ ತಾಳ್ಮೆಯ ಮಾರ್ಗ ಬಿಟ್ಟು, ಕೈಸರನು ಕಳುಹಿಸಿದ ಪತ್ರದ ಲೇಖಕರೆನ್ನಿಸುವ ಪ್ರತಿನಿಧಿಗಳಾದ ಇಬ್ಬರನ್ನು ಒಂದು ಗೊಬ್ಬರದ ತಿಪ್ಪೆಗೆ ದೂಡಿ, ಇವರು ಸ್ವಸ್ಥರಾಗಿ ಉಳಿದರೂ ಶಿಕ್ಷಾಭಯದ ಭ್ರಾಂತಿಯಿಂದಲೂ ಕೈಸರನ ಹಂಗು ತ್ಯಜಿಸಿ ಬಿಟ್ಟು, ತಮ್ಮವರಾದ 30 ಮಂದಿ ಪುರುಷರನ್ನು, ದೇಶಕಾರ್ಯಪ್ರವರ್ತಕರೆಂದು, ನೇಮಿಸಿಟ್ಟು, ಕೈಸರನ ಸಂಗಡ ಯುದ್ಧವಾದರೂ ಆಗಲೆಂದು, ಹೇಳಿ, ಸೌರಣೆ ಮಾಡುವವರಾಗಿ, ಯೇಸುವಿತರನ್ನು ದೇಶದಿಂದಟ್ಟಿದರು. ಇದು ಕ್ರಿ. ಶ. 1618ನೇ ವರುಷದ ಮೇ ತಿಂಗಳಲ್ಲಿ ಆಯಿತು.

ತರುವಾಯ ಮತ್ಥಿಯ ಕೈಸರನು ಔಸ್ತ್ರಿಯದ (ಔಷಸ್ಯರಾಜ್ಯದ) ಫೆರ್ದಿನಂದನೆಂಬ ಪ್ರಧಾನ ನಾಯಕನ ಕ್ರೂರ ಮತಿಗೊಳಗಾಗಿ, ಯೇಸುವಿತರ ಕಡು ಶಿಷ್ಯನಾದ ಇವನ ಮಾತಿನ ಪ್ರಕಾರ ಬೋಯಿಮೆನ ಆ ಕಥರರೆಂಬವರನ್ನು ನಿರ್ಮೂಲಿಸುವ ಉದ್ದಿಶ್ಯವಾಗಿ ಒಂದು ಸೇನೆಯನ್ನೆತ್ತುವವನಾದನು. ಆದರೆ ಅವನು ಮರುವರುಷ ಮಡಿಯಲು, ಕೈಸರತ್ವವು ಔಸ್ತ್ರಿಯದ ಆ ಫೆರ್ದಿನಂದನಿಗೆ ಶಿಕ್ಕಿತು; ಇವನಿಗೆ 2ನೇ ಫೆರ್ದಿನಂದನೆಂಬ ನಾಮ ಬಂತು. ಅವನು ಆ ಕಾಲಕ್ಕೆ 11 ವರುಷ ಮುಂಚೆ ಗೆರ್ಮಾನಿಯದ ಸ್ಟೈಯೆರ್ಮರ್ಕ್ರ್ ಮತ್ತು ಕಯೆರ್ನ್ಥೆನು ಎಂಬ ತನ್ನೆರಡು ಬಾಧ್ಯತೆಯ ಶೀಮೆಗಳಲ್ಲಿ ಬಲಾತ್ಕಾರದಿಂದ ಪುನಃಸ್ಥಾಪನೆಯ ಕಾರ್ಯವನ್ನು ಕಿತ್ತು ಹಾಕಿದ್ದನು. ಅವನು ಆ ಪಪ್ಪಕ ಲೀಗದವರನ್ನು[3] ಕೂಡಿ ಕೊಂಡು, ಬೋಯಿ

1) 310, 393, 434, 437ನೇ ಪಾನು. 2) 406ನೇ ಪಾನು. 3) 518ನೇ ಪಾನು.

ಮೆನಿನೊಳ ಹೊಕ್ಕು, ಪ್ರಾಗು ಪಟ್ಣದ ಸಮಿಪದಲ್ಲಿ ಬೋಯಿಮರು ಮೊದಲಾದ ಊನಿಯೋನಿನವರನ್ನು ಜಯಿಸಿ, ಕ್ರಿ. ಶ. 1620ನೇ ವರುಷ ಬೋಯಿಮೆನಿನ ಪತಿಯಾದನು. ತರುವಾಯ 3 ತಿಂಗಳು ಈಚೆ ಸೌವಾರ್ತಿಕರ ಮುಖ್ಯಸ್ಥರು ಸಮಾಧಾನದೊಡನೆ ಪ್ರಾಗಿಗೆ ಹಿಂದಿರುಗಿದ ಮೇಲೆ ಕೈಸರನು ಅವರನ್ನು ಫಕ್ಕನೆ ಶೆರೆ ಹಿಡಿದು, ತನ್ನ ನಿವೇದನಶ್ರೋತನಾದ ಒಬ್ಬ ಯೇಸುವಿತನಿಂದ ಪ್ರೇರಿತನಾಗಿ ಅವರಲ್ಲಿ 27 ಜನರಿಗೆ ಮರಣಾಜ್ಞೆ ಮಾಡಿ, ಸುಮಾರು 700 ಮಂದಿ ಆಢ್ಯರ ಸ್ವಾಸ್ಥಿಯನ್ನು ಮುಟ್ಟುಗೋಲು ಹಾಕಿ, ಯೇಸುವಿತರನ್ನು ಹಿಂದಕ್ಕೆ ಕರೆದು, ಸಾಕಿ, ಸೌವಾರ್ತಿಕ ದೇವಾರಾಧನೆಯನ್ನು ನಡಿಸ ಬಾರದೆಂದು, ಆಜ್ಞಾಪಿಸಿ, ಹೆಚ್ಚು ಕಡಿಮೆ 30,000 ಕುಟುಂಬಗಳಾದ ಬೋಯಿಮ ಸೌವಾರ್ತಿಕರನ್ನು ಸುಲಿದು, ಗುಳೆ ತೆಗೆಸಿದನು[1]. ಆಗ ಸೌವಾರ್ತಿಕರು ಮಾರ್ಮುಲೆತರೂ ದೇನೆಮರ್ಕ್ಲ ದೇಶದ ಸೌವಾರ್ತಿಕ ರಾಜನಾದ ಕ್ರಿಸ್ತಿಯಾನನು ಗೆರ್ಮಾನಿಯಕ್ಕೆ ಬಂದು, ಸೌವಾರ್ತಿಕರಿಗೆ ಒತ್ತಾಸೆ ಗೈದರೂ ಕೈಸರನ ಇಬ್ಬರು ದಳವಾಯಿಗಳಾದ ತಿಲ್ಲಿ ಮತ್ತು ವಲ್ಲೆನ್ಸ್ಟೈನ ಎಂಬವರು ಸೌವಾರ್ತಿಕರನ್ನೆಲ್ಲಿಯೂ ಅಪಜಯ ಪಡಿಸುವದರಿಂದ ಕೈಸರನು 10 ವರುಷಕ್ಕೀಚೆ ಸಮಸ್ತ ಗೆರ್ಮಾನಿಯದ ಏಕ ಸ್ವತಂತ್ರಿಯಾಗಿ, ಅದರಲ್ಲಿ ಸುವಾರ್ತೆಯನ್ನು ಪೂರಾ ಅಳಿಸ ಬೇಕೆಂಬ ತನ್ನ ದುರಪೇಕ್ಷೆಯನ್ನು ನಡಿಸುವದಕ್ಕಾಗಿ ದೊಡ್ಡ ದಂಡುಗಳುಳ್ಳವನಾಗಿದ್ದನು. ಆದರೆ ಎಲ್ಲಿ ದೊಡ್ಡ ಅಪಾಯ, ಅಲ್ಲಿ ಸಮಿಪ ದೇವಸಹಾಯ! ಎಂಬ ಸದ್ಗಾದೆಯು ಅಂದೇ ಈಡೇರಿತು.

ಹ್ಯಾಗಂದರೆ ಫೆರ್ದಿನಂದ ಕೈಸರನು ವಲ್ಲೆನ್ಸ್ಟೈನನಿಗೂ ಅವನ ಕೆಳಗಿನ ಮಹಾಸೇನೆಗೂ ತಾನೂ ಹೆದರುವವನಾಗಿ, ಅವನ ಸರ್ವದಳಪತಿತ್ವವನ್ನು ತೆಗೆದದಲ್ಲದೆ ಸೇನೆಯದೊಂದು ಭಾಗವನ್ನು ಬಿಚ್ಚಿ, ಕಳುಹಿಸಿದನು. ವಲ್ಲೆನ್ಸ್ಟೈನನು, ತಾನು ಕೈಸರನಿಗೆ ತಡವಿಲ್ಲದೆ ತಿರಿಗಿ ಅಗತ್ಯ ಬಿದ್ದೇನೆಂತ, ನಿರೀಕ್ಷಿಸಿ, ಸುಮ್ಮನಿದ್ದನು. ಆ ಮಿತ್ರಭೇದದ ಕಾಲದಲ್ಲೇ ದೇವರು ಗೆರ್ಮಾನ ಸೌವಾರ್ತಿಕರನ್ನು ರಕ್ಷಿಸುವದಕ್ಕಾಗಿ ಸ್ವೇದೆನಿನ ರಾಜನಾದ ಗುಸ್ತವ ಆದೊಲ್ಫನೆಂಬವನನ್ನು ಕರಕೊಂಡು ಬಂದನು.

ಸ್ವೇದೆನಿನಲ್ಲಿ ಅಂದಿಗೆ ಸುಮಾರು 100 ವರುಷ ಮುಂಚೆ ಕ್ರಿ. ಶ. 1527ನೇದರಲ್ಲಿ ಪುನಃಸ್ಥಾಪನೆಯು ಗುಸ್ತವ ವಾಸನೆಂಬ ರಾಜನ ಮೂಲಕ ಸರ್ವತ್ರ ನೆಲೆಗೊಂಡಿತ್ತು. ಇವನ ಮೊಮ್ಮಗನು ಹಿಂದೆ ಹೇಳಿದ ಆ ಗುಸ್ತವ ಆದೊಲ್ಫ ರಾಜನು. ಇವನು ಗೆರ್ಮಾನಿಯದಲ್ಲಿಯ ತನ್ನ ಕ್ರೈಸ್ತ ಸಹೋದರರ ಸಂಕಷ್ಟದ ಸಮಾಚಾರ ಕೇಳಿ, ಅವರಿಗೆ ಅಂತಃಕರಣ ಪಟ್ಟದರಿಂದಲ್ಲದೆ ಫೆರ್ದಿನಂದ ಕೈಸರನು ತನ್ನ ರಾಜ್ಯಕ್ಕೆ ಮೋಸ ಕೊಡುತ್ತಿದ್ದದರಿಂದಲೂ ಕ್ರಿ. ಶ. 1630ನೇ ವರುಷ, ನಿಮ್ಮ ಮೇಲೆ

1) 375, 408, 452, 472, 499, 500, 502ನೇ ಪಾನು.

ಯುದ್ಧ ತೆಗೆಯುತ್ತೇನೆಂತ, ಆ ಕೈಸರನಿಗೆ ತಿಳಿಸಿ, ತನ್ನ ರಾಜ್ಯಸದಸ್ಸಿನವರನ್ನು ಕೂಡಿಸಿ, ಅವರ ಮುಂದೆ—ನಾವು ತಕ್ಕದಲ್ಲದ ಕಾರಣದಿಂದ ಈ ಯುದ್ಧವನ್ನು ನಮ್ಮ ಮೇಲೆ ವಹಿಸಿ ಕೊಳ್ಳುತ್ತೇವೆಂತ, ಅನೇಕರು ನೆನಸಿ ಕೊಂಡಾರು; ಆದರೆ ನಮ್ಮ ಸ್ವೇಚ್ಛೆಯಿಂದಾಗಲಿ ಯುದ್ಧಾಸಕ್ತಿಯಿಂದಾಗಲಿ ಅಲ್ಲ, ಅನೇಕ ವರುಷದಾರಭ್ಯ ಕಂಡು ಬಂದ ಬೇರೆ ಬೇರೆ ಪ್ರಚಂಡ ಕಾರಣಗಳಿಂದಲೇ ಹಾಗೆ ಮಾಡುತ್ತೇವೆಂಬದಕ್ಕೆ ಸರ್ವೋನ್ನತ ದೇವರೇ ನಮ್ಮ ಸಾಕ್ಷಿಯು; ಮುಖ್ಯವಾದ ಹೇತು ಯಾವದಂದರೆ, ಒತ್ತಾಯ ಪಡುವ ನಮ್ಮ ವಿಶ್ವಾಸಜೊತೆಯವರು ಪಪ್ಪಕ ನೊಗದಿಂದ ಬಿಡುಗಡೆ ಹೊಂದಲಿ! ಎಂಬದೇ. ನಾವು ಈ ವರೆಗೂ ದೇವರ ಕೃಪಾಶ್ರಯದಿಂದ ಅನೇಕ ಕಂಟಕಾವಸ್ಥೆಗಳಲ್ಲಿ ರಕ್ಷಿತರಾಗ್ಯುಳಿದಿದ್ದರೂ, ಈ ಸರ್ತಿ ನಮ್ಮ ಜೀವ ಕಳಕೊಳ್ಳುವೆವೆಂದು, ನಮಗೆ ತೋಚುವ ನಿಮಿತ್ತ ಈಗ ಪ್ರಯಾಣಕ್ಕೆ ಹೊರಡುವ ಸಮಯ ಸ್ವೇದೆನಿನ ಸಕಲ ರಾಷ್ಟ್ರಸಭೆಗಳವರನ್ನು, ಈ ಸದಸ್ಸಿಗೆ ಬಂದಿರುವವರನ್ನಾಗಲಿ ಬಾರದಿರುವವರನ್ನಾಗಲಿ, ದೇವರಿಗೊಪ್ಪಿಸಿ ಕೊಟ್ಟು, ಈ ಕೃಚ್ಛ್ರವೂ ಕಷ್ಟವೂ ಉಳ್ಳ ಜೀವದಶೆಯನ್ನು ದಾಟಿದನಂತರ ನಾವೆಲ್ಲರೂ ಕೂಡಿ ನಿತ್ಯಾನಂದದಲ್ಲಿ ನೆರೆದು ಒಬ್ಬರನ್ನೊಬ್ಬರು ತಿರಿಗಿ ಕಂಡು ಕೊಳ್ಳ ಬೇಕೆಂದು, ಪ್ರಾರ್ಥಿಸುತ್ತೇವೆಂತ, ಬಹು ಗದ್ಗದ ಕಂಠದಿಂದ ನುಡಿದನು. ಆಗ ಸದಸ್ಸಿನವರೆಲ್ಲರೂ ಬಿಕ್ಕಿ ಬಿಕ್ಕಿ ಅಳುವಲ್ಲಿ ರಾಜನು—ಕರ್ತನಾದ ದೇವರೇ, ನಮ್ಮ ಕಡೆಗೆ ತಿರುಗಿ ಕೊಂಡು, ನಿನ್ನ ಸೇವಕರಿಗೆ ಕೃಪೆ ತೋರಿಸು! ನಿನ್ನ ಕೃಪೆಯನ್ನು ಬೇಗ ನಮ್ಮೊಳು ತುಂಬಿಸಿದರೆ ಜೀವಾಂತದ ವರೆಗೆ ನಿನ್ನನ್ನು ಹೊಗಳುತ್ತಾ, ನಿನ್ನಲ್ಲಿ ಸಂತೋಷಿಸುತ್ತಾ ಇರುವೆವು. ನಿನ್ನ ಸೇವಕರಿಗೆ ನಿನ್ನ ಮಹತ್ಕಾರ್ಯಗಳನ್ನು, ಅವರ ಮಕ್ಕಳಿಗೆ ನಿನ್ನ ಮಹಿಮೆಯನ್ನು ಕಾಣಿಸು! ನಮ್ಮ ದೇವರಾದ ಯೆಹೋವನ ರಮ್ಯತೆಯು ನಮ್ಮ ಮೇಲಿರಲಿ! ನಮ್ಮ ಕೈಗಳ ಕೆಲಸವನ್ನು ನಮ್ಮ ಮೇಲೆ ಸ್ಥಿರ ಪಡಿಸು, ನಮ್ಮ ಕೈಕೆಲಸವನ್ನೇ ಸ್ಥಿರ ಪಡಿಸು! ಆಮೆನ್! ಎಂತ[1], ಪ್ರಾರ್ಥಿಸಿದ ಬಳಿಕ ಅವನು ದೇಶದ ಸಮಸ್ತ ಪ್ರಜೆಗೆ, ತನಗೋಸ್ಕರವೂ ತನ್ನ ಸೇನೆಗೋಸ್ಕರವೂ ದೇವರನ್ನು ವಿಶೇಷದಿಂದ ಬೇಡಿ ಕೊಳ್ಳ ಬೇಕೆಂತ, ಕೆಲವು ದಿನಗಳನ್ನು ನೇಮಿಸಿ, 15,000 ಮಂದಿ ಸೈನಿಕರೊಂದಿಗೆ ಹಡಗುಗಳನ್ನೇರಿ, ತೀರವನ್ನು ಬಿಟ್ಟು, ಹೋಗಲು, ಎಣಿಕೆ ಇಲ್ಲದ ಜನಸಮೂಹದವರ ಪುಣ್ಯಾಹವಾಚನಘೋಷವು ಗಗನಕ್ಕೇರಿತು. ಮೇಘಗಳೆದ್ದು ಮೊಳಗುತ್ತಾ, ಬಿರುಘಾಳಿ ಬೀಸುತ್ತಾ, ಮಳೆ ಸುರಿಯುತ್ತಾ, ಸಿಡಿಲು ಬೀಳುತ್ತಾ ಇರುವಲ್ಲಿ ನೌಸೇನೆಯು ಜಲಧಿಯ ದಾಟಿ, ಗೆರ್ಮಾನಿಯದ ನೆಲಕ್ಕೆ ಮುಟ್ಟಿದ ಮೇಲೆ ಅರಸನು ಎಲ್ಲರಿಗಿಂತ ಮುಂದಾಗಿ ದಂಡೆಗಿಳಿದು, ಮೊಣಗಾಲೂರಿ, ಬಿನ್ನವಿಸಿದ್ದೇನಂದರೆ—

1) ಕೀರ್ತ. 90, 16. 17.

ಆಕಾಶ ಭೂಮಿಗಳನ್ನೂ ವಾಯು ಸಮುದ್ರಗಳನ್ನೂ ಆಳುವಂಥ ದೇವರೇ, ನೀನು ಈ ಮಹಾ ವಿಘ್ನವುಳ್ಳ ಪ್ರಯಾಣದಲ್ಲಿ ನನ್ನನ್ನು ಮಿಗು ದಯೆಯಿಂದ ಕಾಪಾಡಿದ್ದಕ್ಕಾಗಿ ನಿನಗೆ ತಕ್ಕ ಸ್ತೋತ್ರ ಮಾಡುವದಕ್ಕೆ ನಾನೆಷ್ಟರವನು? ಆದರೆ ಮನಃಪೂರ್ವಕ ನಿನ್ನನ್ನು ಕೊಂಡಾಡಿ, ಈ ಪ್ರಯಾಣವು ನನ್ನ ನಿಮಿತ್ತವಲ್ಲ ನಿನ್ನ ಮತ್ತು ನಿನ್ನ ಸಂಕಷ್ಟಾನ್ವಿತಸಭೆಯ ನಿಮಿತ್ತ ಮಾತ್ರವೇ ಆಗುತ್ತದೆಂತ, ನಿನಗೆ ತಿಳಿದ್ದರಿಂದ ಇನ್ನು ಮುಂದೆಯೂ ಕೃಪೆಯನ್ನೂ ಆಶೀರ್ವಾದವನ್ನೂ ಪಾಲಿಸು!—ಸಮೀಪದವರು ಪ್ರಾರ್ಥನಾಸಕ್ತನಾದ ಆ ರಾಜನ ದರ್ಶನದಿಂದ ಹೃದಯ ಕರಗಿದವರಾಗಿ, ಬಹು ಕಣ್ಣೀರು ಹಾಕಲಿಕ್ಕೆ, ಗುಸ್ತವನು—ನನ್ನ ಸ್ನೇಹಿತರೇ, ಅಳುವದು ಬಿಟ್ಟು, ಪ್ರಾರ್ಥಿಸಿರಿ! ಯಥಾ ಪ್ರಾರ್ಥನೆಯು, ತಥಾ ಜಯವು; ಜಾಗ್ರತೆಯಿಂದ ಪ್ರಾರ್ಥಿಸುವದು ಅರ್ಧ ಕಾದಾಟಕ್ಕೆ ಸಮವೇ! ಎಂದು, ಅವರನ್ನು ಸಂತೈಸಿ, ಕಡೆಯಲ್ಲಿ ನುಡಿದ ಆ ಪ್ರಮಾಣಿಕ ಮಾತನ್ನು ಸರ್ವ ಯುದ್ಧಕಾಲವೇ ಬಳಿಸುತ್ತಾ ಬಂದನು. ಹೀಗಿರಲಾಗಿ ಅವನು ತನ್ನ ದಂಡುಗಾರರಿಗೆ ಪ್ರಾರ್ಥನೆ ಎಂಬ ಅತಿ ಹಿತವಾದ ಋಣ ತೀರಿಸುವಂತೆ ಯಾವಾಗಲೂ ಅನುವ ಕೊಡುತ್ತಾ ಇದ್ದನು; ದಿವಸಕ್ಕೆರಡು ಸಾರಿ ಅವರು ಪ್ರಾರ್ಥನೆಗೆ ನೆರೆಯುವಲ್ಲಿ ಒಂದೊಂದು ಪಟಾಲಮಿನ ಸಂಗಡ ಇದ್ದ ಪ್ರಸಂಗಿಕರು ಅವರಿಗೆ ದೇವರ ವಾಕ್ಯವನ್ನು ಸಾರುತ್ತಿರ ಬೇಕು. ಈ ದೇವಾರಾಧನೆಯ ಫಲವು ಪರಮಶ್ರೇಷ್ಠವಾಯಿತು; ಹ್ಯಾಗಂದರೆ ಸ್ವೇದರ ದಂಡಿನಲ್ಲಿ ಮಂಗಳ ವೀರತ್ವವಲ್ಲದೆ ಸತ್ಕ್ರಮವೂ ನೀತಿಚರ್ಯೆಯೂ ಪರಿಶೋಭಿಸುತ್ತಿರುವದು; ಅಷ್ಟರಲ್ಲಿ ಕೈಸರನ ದಂಡುಗಾರರು ತೀರ ಹದಗೆಟ್ಟವರಾಗಿರುತ್ತಿದ್ದರು.

ಆದರೆ ಗೆರ್ಮಾನಿಯದ ಸೌವಾರ್ತಿಕ ರಾಜರಲ್ಲಿ ಕೈಸರನ ಭಯವು ಬಹಳವಾಗಿರುವದರಿಂದಲೂ ಪರರಾಜನೊಬ್ಬನ ಸಂಗಡ ಒಡಂಬಡಿಕೆ ಮಾಡಿದರೆ ಇವನಿಂದ ತಮ್ಮ ಶೀಮೆಗಳಿಗೆ ಅಪಾಯ ಬಂದೀತೆಂಬ ಅನುಮಾನವು ಅವರಲ್ಲಿದ್ದದರಿಂದಲೂ ಸ್ವಲ್ಪ ಬಲ ಮಾತ್ರವಿರುವ ಸ್ವೇದೆನಿನ ರಾಜನ ಮೇಲೆ ಅವರಿಗೆ ಭರವಸ ಹುಟ್ಟದಿದ್ದದರಿಂದಲೂ ಅವರು ಗುಸ್ತವನನ್ನು ಶೇರಿ ಕೊಳ್ಳುವದಕ್ಕೆ ಧೈರ್ಯ ಪಡಲಿಲ್ಲ; ಪೊಮ್ಮೆರ್ನ್ ಶೀಮೆಯ ನಾಯಕನು ಬ್ರಂದೆನ್ಬುರ್ಗ್ ಶೀಮೆಯ ರಾಜಶೋಧಕ ಪ್ರಭುವು[1] ಇವರಿಬ್ಬರು ಮಾತ್ರ, ಸಾಕೆಂದು, ಅವನನ್ನು ತಮ್ಮ ಶೀಮೆಯಲ್ಲಿ ಬರಲೀಸಿದರು.

ಗುಸ್ತವನು ಸ್ವಲ್ಪ ಕಾಲದೊಳಗೆ ಕೈಸರನ ದಂಡುಗಾರರನ್ನು ಆ ಎರಡು ಶೀಮೆಗಳೊಳಗಿಂದ ಓಡಿಸಿ, ತಿಲ್ಲಿ ಎಂಬ ದಳವಾಯಿಯು ಬಿಗಿ ಮುತ್ತಿಗೆ ಹಾಕಿರುವ ಮಗ್ದೆಬು

---

1) ಇವನು ಫ್ರೀದೆರೀಕ ವಿಲ್ಹೆಲ್ಮನೆಂಬ ಆ ದೊಡ್ಡ ರಾಜಶೋಧಕಪ್ರಭುವಿನ ಪಿತನು; 515ನೇ ಪಾನು ನೋಡು. ಪೊಮ್ಮೆರ್ನಿಗೆ 323ನೇ ಪಾನು.

ಗುರ್ ಎಂಬ ಪಟ್ಣವನ್ನು ರಕ್ಷಿಸುವದಕ್ಕೆ ತಡೆಯದಲೇ ಹೋಗಲೆಸಗಿದನು; ಆದರೂ ಬ್ರಂದೆನ್ಬುಗುರ್ ಮತ್ತು ಸಕ್ಸೆನು[1] ಎಂಬೆರಡು ಶೀಮೆಗಳ ರಾಜಶೋಧಕ ಪ್ರಭುಗಳ ಉದಾಸೀನತ್ವದ ದೆಸೆಯಿಂದ ಅವನಿಗೆ ಅಭ್ಯಂತರವಾಗಲು, ಆ ಪಟ್ಣಕ್ಕೊದಗುವ ಮಹದಾಪತ್ತನ್ನು ತಾನು ಹೋಗಿ ತಪ್ಪಿಸುವದು ಅವನಿಂದಾಗಲಿಲ್ಲ. ಈ ನಿಮಿತ್ತ ತಿಲ್ಲಿಯು ಕ್ರಿ. ಶ. 1631ನೇ ವರುಷದ ಮೇ ತಿಂಗಳಲ್ಲಿ ಆ ಪಟ್ಣದೊಳ ಹೊಕ್ಕು, ಅದಕ್ಕೆ ಕಿಚ್ಚು ಇಕ್ಕಿಸಿದ ಮೇಲೆ ಅವನ ದಂಡುಗಾರರು ಕಂಡಾಬಟ್ಟೆ ಲೂಟಿ ಗೈದು, ನೋಡ ಶಿಕ್ಕಿದವರೆಲ್ಲರನ್ನು ಕೊಂದು, ಮೊಲೆಕೂಸುಗಳನ್ನಾದರೂ ಗೋಡೆಗೆ ಬಡಿಯುವ ರೀತಿಯಿಂದಾಗಲಿ ಈಟಿಗೆ ಶಿಕ್ಕಿಸಿ ಬೆಂಕಿಗೆ ಹಿಡಿಯುವ ರೀತಿಯಿಂದಾಗಲಿ ವಧಿಸಿದರು; 2,000 ಮನೆಗಳಲ್ಲಿ 300 ಮಾತ್ರವೇ ಉಳಿದವು, 40,000 ನಿವಾಸಿಗಳಲ್ಲಿ 1,500 ಜನರ ಜೀವ ಮಾತ್ರವೇ ಬಾಕಿಯಾಯಿತು. ತರುವಾಯ ತಿಲ್ಲಿಯು ರಾಜಶೋಧಕ ಪ್ರಭುವಿನ ಶೀಮೆಯಾದ ಸಕ್ಸೆನನ್ನು ಹಿಡು ಕೊಳ್ಳುವದಕ್ಕೆ ಹೊರಟನು. ಆಗ ಆ ದೇಶದ ಪ್ರಭುವು ತಿಲ್ಲಿಗೆ ಹೆದರಿ ಕೊಂಡು, ಇನ್ನೂ ಶಂಕಿಸದೆ, ನಾನಾ ಪ್ರಕಾರದಿಂದ ಗುಸ್ತವ ರಾಜನ ಸಹಾಯ ಬೇಡಿ ಕೊಂಡು, ಅವನ ಸಂಗಡ ಒಡಂಬಡಿಕೆ ಕಟ್ಟೆ ಕೊಂಡ ಕ್ಷಣವೇ ಇವನು ತಿಲ್ಲಿಯ ಬೆನ್ನು ಹತ್ತಿ ಕೊಂಡು ಹೋಗಿ, ಲೈಪ್ಸಿಗು ಪಟ್ಣದ[2] ಹತ್ತರ ಅವನಿಗೆದುರಾದರು.

ಆ ಸಮಯ ತಿಲ್ಲಿಯು ತನ್ನ ಕೆಳಗಿನ ಸೇನೋದ್ಯೋಗಿಗಳನ್ನು ಕೂಡಿಸಿದೆಡೆ ಅವರಿಗೆ ಧೈರ್ಯ ಹುಟ್ಟಿಸಿ ಕೊಡುವದಕ್ಕೋಸ್ಕರ, ಕಥರರು ಒಂದೇ ಯುದ್ಧದಲ್ಲಿಯಾದರೂ ಜಯಿಸಲಿಲ್ಲವೆಂತ, ನುಡಿದನು; ಆದರೆ ಗುಸ್ತವನು ತನ್ನ ಕೆಳಗಿನ ಸೇನೋದ್ಯೋಗಿಗಳ ಸಭೆಯಲ್ಲಿ ಆಡಿದ ಮಾತುಗಳ್ಯಾವವೆಂದರೆ—ನಮ್ಮ ಎದುರಾಳಿಗಳನ್ನು ಉಪೇಕ್ಷಿಸುವದಾಗಲಿ ಮುಂದಿನ ಕಾರ್ಯವು ಸಣ್ಣದೆಂದು ಭಾವಿಸುವದಾಗಲಿ ನನ್ನ ಮನಸ್ಸಿಗೆ ಬಾರದು; ನಮ್ಮೆದುರು ನಿಂತಿರುವ ಶತ್ರುವು ಮಹಾ ಬಲಿಷ್ಠನಾಗಿರುವದಲ್ಲದೆ ಒಳ್ಳೇ ಯುದ್ಧಸಾಧಕವುಳ್ಳವನಾಗಿದ್ದು, ಅನೇಕ ವರುಷದ ಯುದ್ಧದಲ್ಲಿ ಒಮ್ಮೆಗಾದರೂ ಸೋಲದೆ, ನಿತ್ಯ (ಅಂದರೆ 36) ಜಯಗಳನ್ನು ಪಡದಿದ್ದಾನೆಂತ, ನಿಮಗೆ ಗೊತ್ತದೆಯಲ್ಲ? ಆದಾಗ್ಯೂ ಅಂಥಾ ಕೀರ್ತಿಗೊಂಡ ಶತ್ರುವನ್ನು ನಾವು ಗೆದ್ದರೆ ನಮ್ಮ ಕೀರ್ತಿಯು ಮಿಗಿಲಾಗುವದೇ ಸರಿ! ಅವನು ಅನೇಕ ವರುಷದಾರಭ್ಯ ಸಂಪಾದಿಸಿ ಕೊಳ್ಳುತ್ತಾ ಬಂದಿರುವ ಸಕಲ ಮಾನವೂ ಯಶಸ್ಸೂ ಮಹಿಮೆಯೂ ದೇವರ ಸಹಾಯದಿಂದ 24 ತಾಸಿನೊಳಗೆ ನಮ್ಮದಾಗುವದಕ್ಕೆ ಅಡ್ಡಿ ಏನು? ನಮ್ಮ ಕಡೆಯಲ್ಲಿ ಸತ್ಕಾರ್ಯವಿರುವದೇ ಎಲ್ಲಕ್ಕಿಂತ ಮುಖ್ಯವಾದದ್ದು. ಮನುಷ್ಯರಿಗೋಸ್ಕರವೂ ಕ್ಷಣಿಕ ಸ್ವಾಸ್ಥ್ಯಕ್ಕೋಸ್ಕರವೂ ಅಲ್ಲ, ದೇವರ ಮಾನ ಬೋಧ

1) 432ನೇ ಪಾನು. 2) 421, 423ನೇ ಪಾನು.

ನೆಗಳಿಗೋಸ್ಕರವೂ ಅದ್ವಿತೀಯ ರಕ್ಷಣ ಕೊಡುವಂಥ ಸತ್ಯಧರ್ಮಕ್ಕೋಸ್ಕರವೂ ನಾವು ಕಾದುತ್ತೇವಲ್ಲವೋ? ಆದ್ದರಿಂದ ನಮ್ಮನ್ನು ವೈರಿಗಳ ದೊಡ್ಡ ಎದುರಾಟದಲ್ಲಿ ಬಹಳ ಹೊಳೆ ಗುಡ್ಡಗಳನ್ನು ಈ ವರೆಗೆ ಹಾಯಿಸಿ ಆಶ್ಚರ್ಯರೀತಿಯಿಂದ ತಂದಂಥ ಸರ್ವತ್ರಾಣಿಯು ತನ್ನ ಸಹಾಯದಿಂದ ಬಲುಮೆಯಾಗಿ ಒತ್ತಾಸೆ ಗೈದು, ನಮ್ಮ ಕೈಗಳನ್ನು ಬಲ ಪಡಿಸಿ, ಶತ್ರುವಿನ ದರ್ಪವನ್ನು ಮುರಿದು ಬಿಡುವದಕ್ಕೆ ಕರುಣಿಸುವನೆಂಬದಕ್ಕೆ ಸಂದೇಹವೇನು?— ಮತ್ತು, ಅಗೋ, ರಾಜನ ನಮ್ರತೆಯುಳ್ಳ ಭಕ್ತಿಗೆ ಮೋಸ ಬರಲಿಲ್ಲ. ಕೈಸರನವರು, ಯೇಸು ಮರಿಯಳೇ! ಎಂತ, ಹೇಳುವ ಕೂಗು ಹಾಕಿ, ಕದನಕ್ಕೆ ಓಡಿ ಬರುವಲ್ಲಿ ಗುಸ್ತವನವರು, ನಮ್ಮ ಸಂಗಡ ದೇವರೇ! ಎಂತ, ಕೂಗಿ, ಹೋರಾಡಲೆಸಗಿದರು. ದೇವರು ಅವರ ಸಂಗಡ ಇದ್ದದ್ದೇ ನಿಶ್ಚಯ; ಯಾಕಂದರೆ ಒಂದೆರಡು ತಾಸು ಮಾತ್ರ ನಡೆಯುತ್ತಿದ್ದ ಅತಿ ಕಠೋರ ಯುದ್ಧದ ಮೇಲೆ ಸ್ವೇದೆನಿನವರಿಗೆ ಜಯವಾಯಿತು. ಆಗ ಶತ್ರುಗಳು ತಾವು ಪಲಾಯನದ ಪಾಲಾದ್ದನ್ನು ಕುರಿತು ವಿಸ್ಮಿತರಾಗಿ, ಅವರಲ್ಲೊಬ್ಬನು, ದೇವರು ಒಮ್ಮಿಂದೊಮ್ಮೆ ಲುಥರಿಕನಾದನೋ? ಎಂತ, ನೆನಸಿ, ಕೇಳಿದನು. ಆದರೆ ಇನ್ನು ರಣರಂಗದಲ್ಲೇ ಸ್ವೇದೆನಿನವರು ರಾಜಾಧಿರಾಜನಾದ ದೇವರ ಮುಂದೆ ಮೊಣಗಾಲೂರಿ, ಅವನಿಗೆ ಸ್ತೋತ್ರಬಲಿಗಳನ್ನರ್ಪಿಸಿದರು.

ತಿಲ್ಲಿಯು ತನ್ನ ಸೇನೆಯ ಸಹಿತ ಸ್ವಾಬೆನು ದೇಶಕ್ಕೆ ಓಡಿ ಹೋಗಲು, ಗುಸ್ತವನು ಅಲ್ಲಿಗೂ ಅವನನ್ನಟ್ಟಿ ಕೊಂಡು ಬಂದು, ಬೈಯೆರ್ನು[1] ದೇಶದ ಲೆಖೆಂಬ ಹೊಳೆಯ ಬಳಿಯಲ್ಲಿ ಅವನನ್ನು ಇನ್ನೊಂದು ಸರ್ತಿ ಅಪಜಯ ಪಡಿಸುವಾಗ ತಿಲ್ಲಿಯು, ಘಾಯ ತಗಲಿ, ಸ್ವಲ್ಪ ಕಾಲಕ್ಕಿತ್ತ ಸತ್ತನು.

ತದನಂತರ ಗುಸ್ತವನಿಗೆ ಸಮಸ್ತ ಗೆರ್ಮಾನಿಯವು ವಶವಾದಂತೆ ತೋರುವಂದು 2ನೇ ಫೆರ್ದಿನಂದ ಕೈಸರನು ತನ್ನ ಆಪತ್ತನ್ನು ನೋಡಿ, ವಲ್ಲೆನ್ಸ್ಟೈನನೆಂಬವನಿಗೆ ಸರ್ವಸೇನಾಧಿಪತ್ಯವನ್ನು ತಿರಿಗಿ ಕೊಟ್ಟನು. ಇವನು ವೇಗದಿಂದ ಒಂದು ದೊಡ ಸೇನೆಯನ್ನೆತ್ತಿ ಕೊಂಡು, ಸಕ್ಸೆನಿನೊಳ ಹೊಗಲು, ಗುಸ್ತವನು ಅವನ ಹಿಂದೆ ಗಮಿಸಿ, ನೌಂಬುರ್ಗು ಪಟ್ಣದಲ್ಲಿ ಪ್ರವೇಶಿಸುವ ಹೊತ್ತು ಪ್ರಜೆಯು ಬಹು ಕುತೂಹಲದಿಂದ ಅವನನ್ನೆದುರ್ಗೊಂಡು, ಅದರಲ್ಲಿ ಹಲವರು ಅವನ ಮೊಚ್ಚೆಗಾದರೂ ಮುದ್ದಿಡಲಿಕ್ಕೆ, ಅವನು ದುಃಖಿಸಿ, ಫಬ್ರಿಕಿಯನೆಂಬ ತನ್ನ ಅರಮನೆಯ ಪ್ರಧಾನ ಪ್ರಸಂಗಿಕನಿಗೆ ಹೇಳಿದ್ದೇನಂದರೆ—ನಮ್ಮ ಕಾರ್ಯವು ಸ್ಥಿರ ಪಾದದಲ್ಲಿ ನಿಂತಿರುವದು ಸರಿ; ಆದರೂ, ದೇವರು ಪ್ರಜೆಯ ಮೂಢತನಕ್ಕಾಗಿ ನನಗೆ ಶಿಕ್ಷಿಸುವನೆಂದು, ಅಂಜಿಕೆ ಪಡುತ್ತೇನೆ. ನನ್ನನ್ನು ಸನ್ಮಾನಿಸುವ ಪ್ರಜೆಯು ದೇವಪ್ರಾರ್ಥನೆಯನ್ನು ಮರೆತು ಬಿಟ್ಟು, ದೇವರಿ

1) ಇದರಲ್ಲಿ 3ನೇ ಅಂಶದವರು ಮಾತ್ರ ಸೌವಾರ್ತಿಕರು.

ಗಿಂತ ಮನುಷ್ಯರಲ್ಲಿ ಹೆಚ್ಚು ವಿಶ್ವಾಸವನ್ನಿಡುತ್ತದೆ. ಓ ಮಹಾ ದೇವರೇ, ನನಗಂಥಾದ್ದು ಮೆಚ್ಚದೆಂಬದಕ್ಕೆ ನೀನೇ ಸಾಕ್ಷಿಯು!—ಬಳಿಕ ಅವನು ಲೈಪ್ಸಿಗಿಗೆ ಸಮೀಪವಾದ ಲುಯಿತ್ಸೆನೆಂಬ ಊರಲ್ಲಿ ವಲ್ಲೆನ್ಸ್ಟೈನನನ್ನು ಕಂಡನು. ಆಗ ಕ್ರಿ. ಶ. 1632ನೇ ವರುಷದ ನವಂಬರ್ ತಿಂಗಳಿನ 6ನೇ ದಿನದ ಪ್ರಾತಃಕಾಲವು ಬಂದೊದಗಿತ್ತು. ಅಲ್ಲಿಯ ಬೈಲಿನ ಮೇಲೆ ಇನ್ನು ನಿಬಿಡವಾದ ಇಬ್ಬನಿ ಕವಿದಿತ್ತು. ಆ ವೇಳೆ ಗುಸ್ತವನು ತನ್ನ ದಂಡಿನೊಡನೆ ಮೊಣಗಾಲೂರುವಲ್ಲಿ ತುತೂರಿಯವರು ಲುಥರನು ರಚಿಸಿದ

ಯೆಹೋವನೇ ತಾತ್ಕಾಲಿಕ
ಸುಭದ್ರ ದುರ್ಗಸ್ಥಲ,
ಶತ್ರುಂಗಳನ್ನು ಜೈಸುವ
ಶ್ರೇಷ್ಠಾಸ್ತ್ರ, ನಿಜಬಲ!

ಇತ್ಯಾದಿಯಾದ ಗೀತದ ರಾಗವನ್ನು ಬಾರಿಸುವದಕ್ಕನುಗುಣವಾಗಿ ಅರಸನು ತಾನು ರಚಿಸಿದ್ದೊಂದು ದೇವಭಕ್ತಿಮಯ ರಣಗೀತವನ್ನು ತನ್ನವರ ಸಂಗಡ ಹಾಡಲೆಸಗಿ, ತರುವಾಯ ಕುದುರೆ ಹತ್ತಿ, ಅವರ ಸಾಲುಗಳಲ್ಲಿ ಸಂಚರಿಸುತ್ತಿರುವಾಗ ಅವರು ಮಹಾನಂದಘೋಷದಿಂದ ಅವನಿಗೆ ನಮನ ಮಾಡುವಲ್ಲಿ ಅವನು—ಈಗ ದೇವರ ಹೆಸರಿನಲ್ಲಿ ಮುಂದರಿಸುವ! ಯೇಸುವೇ, ಯೇಸುವೇ, ಈ ಹೊತ್ತು ನಿನ್ನ ನಾಮದ ಸ್ತುತಿಗಾಗಿ ನಮ್ಮನ್ನು ಕಾದಿಸು! ಎಂತ, ಅವರನ್ನು ಹಂಗಿಸಿ, ತನ್ನ ಖಡ್ಗ ಬೀಸಿ, ಮುನ್ನಡಿಯೋಣ! ಎಂತ, ಕೂಗಿ, ತಾನಿರುವ ಭಾಗದವರನ್ನು ನಡಿಸಿ ಕೊಂಡು, ಕೈಸರನವರ ಮೇಲೆ ಬೀಳಲು, ಇವರು ಹಿಂಜಾರ ಬೇಕಾಯಿತು. ಆದರೆ ಬೇರೆ ಭಾಗದ ಸ್ವೇದರು ಹಿಮ್ಮೆಟ್ಟಲಿಕ್ಕೆ, ಗುಸ್ತವನು ಅವರ ಸಹಾಯಕ್ಕೆ ಬರುವಂದು ಶತ್ರುಗಳಿಗೆ ತಾನಾಗಿ ಅತಿ ಸಮೀಪಿಸಲು, ಅವರದೊಂದು ಗುಂಡು ಅವನ ಎಡಗೈ ಭೇದಿಸಿತು. ಆಗ ಅವನ ಜತೆಗಾರರಲ್ಲೊಬ್ಬನು ಅವನನ್ನು ರಣರಭಸದೊಳಗಿಂದ ಸ್ವಲ್ಪ ಆಚೆಗೆ ಕರಕೊಂಡು ಹೋಗುತ್ತಿರಲು, ಮತ್ತೊಂದು ಗುಂಡು ಅವನ ಬೆನ್ನೊಳು ಶೇರಿದ್ದರಿಂದ ಅವನು ಮೈ ಸೋತವನಾಗಿ, ತನ್ನ ಜತೆಯವನಿಗೆ—ತಮ್ಮನೇ, ಈಗ ನಾನು ಸಾಕೆನ್ನಿಸಿ ಕೊಳ್ಳುತ್ತೇನೆ; ನಿನ್ನ ಜೀವವನ್ನೇ ಉಳಿಸಿ ಕೊಳ್ಳುವದಕ್ಕೆ ನೋಡು! ನನ್ನ ದೇವರೇ, ನನ್ನ ದೇವರೇ! ಎಂತ, ಅನುತಾಪದಿಂದ ಕೂಗಿ, ಕುದುರೆಯಿಂದ ಕೆಳಗೆ ಉರುಳಿ ಬೀಳುತ್ತಲೇ ಯುದ್ಧದ ಗದ್ದಲವು ಅವನ ಮೇಲೆ ಪ್ರವಹಿಸಿತು. ಆದಾಗ್ಯೂ ಸ್ವೇದರು, ತಮ್ಮ ನಾಯಕನು ಸತ್ತನೆಂತ, ತಿಳಿದು, ಧೈರ್ಯ ಗುಂದದ್ದು ಮಾತ್ರವಲ್ಲದೆ ಅಧಿಕಾಸಕ್ತಿಯಿಂದ ಕಾದುವವರಾಗಿ, ಕಡೆಯಲ್ಲಿ ವಲ್ಲೆನ್ಸ್ಟೈನನನ್ನು ಪೂರಾ ಗೆದ್ದರು.

ತನ್ನ ಕರ್ತನೆಡೆಗೆ ಹೋದ ಆ ಗುಸ್ತವ ರಾಯನು ಉತ್ತಮ ತರದ ದೇವಭಕ್ತನೂ ದಳವಾಯಿಯೂ ಆಗಿದ್ದ ಹೊರ್ತು ಸಕಲ ಕಲಾಕೌಶಲ್ಯ ವಿದ್ಯೆಗಳಲ್ಲಿಯೂ ಪ್ರಚುರನಾಗಿದ್ದು, ವಿವಿಧ ಭಾಷೆಗಳಲ್ಲಿ ಹತ್ತನ್ನಾದರೂ ಆಡ ಶಕ್ತನಾಗಿದ್ದನು; ಅವನ ದಂಡಿನಲ್ಲಿ ಶಪಥಗಳೂ ಬೈಗಳೂ ಕೇಳುತ್ತಿದ್ದಿಲ್ಲ, ಅದರಲ್ಲಿ ಜೂಜಾಟವು ನಡಿಯುತ್ತಿದ್ದಿಲ್ಲ, ಅಮಲಿನವರಿಗೆ ದೊಡ್ಡ ಶಿಕ್ಷೆಯಾಗುತ್ತಿರುವದು; ಇಷ್ಟು ಬಿಗಿಯಾದ ಕ್ರಮವು ಆ ದಂಡಿನಲ್ಲಿ ಗುಸ್ತವನ ಮೂಲಕ ವಾಡಿಕೆ ಬಿದ್ದಿರುತ್ತಿದ್ದರೂ ದಂಡುಗಾರರೆಲ್ಲರೂ ತಮ್ಮ ತಂದೆ ಎಂಬಂತೆಯೇ ಅವನಿಗೆ ಪ್ರೀತಿ ಗೈಯುತ್ತಿದ್ದರು.

ಅವನ ಮರಣಕ್ಕೀಚೆ ಆ ಯುದ್ಧವು ಇನ್ನಾದರೂ 16 ವರುಷ ಉರಿಯುತ್ತಲಿತ್ತು. ಕಾಲಗತಿಯಿಂದ ಅದು ಸೌವಾರ್ತಿಕ ಸೈನಿಕರಲ್ಲಾದರೂ ಕಾಡುಗುಣವನ್ನು ಉತ್ಪಾದಿಸಿದ್ದು ಬಹು ದುಃಖಕರವಾದ್ದು; ಆದಾಗ್ಯೂ ಕೈಸರನವರದರಷ್ಟಾಗಲಿಲ್ಲ. ತನ್ಮಧ್ಯ ವಲ್ಲೆನ್ಸ್ತೈನನ ಬಲಾತ್ಕಾರವು ಎಲ್ಲಾ ಮೇರೆ ಮಿರಿತು; ಅವನು, ಬೋಯಿಮೆನಿನ ಅರಸುತನವು ತನಗೆ ಬೇಕೆಂತ, ಅಭಿಪ್ರಾಯ ತೋರಿಸುವ ಕಾರಣ ಕೈಸರನು ಕ್ರಿ. ಶ. 1634ನೇ ವರುಷ ಅವನನ್ನು ಕೊಲ್ಲಿಸಿದನು. ಆದರೆ ಸ್ವೇದೆನಿನ ರಾಜ್ಯಸದಸ್ಸಿನವರು ತಮ್ಮ ಅರಸನು ಸತ್ತ ತರುವಾಯ ಇನ್ನು ಕೆಲವು ಕಾಲ ಸೌವಾರ್ತಿಕ ವಿಶ್ವಾಸಪ್ರಮಾಣದ ರಕ್ಷಣಕ್ಕೋಸ್ಕರ ಆ ಯುದ್ಧವನ್ನು ನಡಿಸುತ್ತಿದ್ದರೂ ಆ ಮಂಗಳ ಆಲೋಚನೆಗೆ ಬದಲಾಗಿ ಬೇಗ ಲಾಭದ ಆಶೆಯುದ್ಭವಿಸಿತು; ಗೆರ್ಮಾನಿಯದಲ್ಲಿ ತಮಗೆ ಪೊಮ್ಮೆರ್ನ್ ಶೀಮೆಯು ತಮಗಾದ ಯುದ್ಧಸಂಬಂಧದ ನಷ್ಟಕ್ಕೆ ಪ್ರತಿಯಾಗಿ ಶಿಕ್ಕ ಬೇಕೆಂಬದೇ ಅವರ ಮುಖ್ಯಾಪೇಕ್ಷೆಯು ಆಯಿತು. ಅದು ವಿನಹ ಅವರ ದಂಡುಗಾರರು, ಹಿಂದೆ ಸೂಚಿಸಿದ ಪ್ರಕಾರ, ಮುಂಚಿನ ಸಾಧುತೆಯನ್ನು ಬಿಟ್ಟು ಬಿಟ್ಟು, ಕ್ರಿ. ಶ. ಆ 1634ನೇ ವರುಷದಲ್ಲಿ ಕೈಸರನವರಿಂದ ಮೊದಲಿನ ಸಾರಿ ಅಪಜಯ ಹೊಂದಿದ ನಿಮಿತ್ತ ಬ್ರಂದೆನ್ಬುರ್ಗಿನ ಮತ್ತು ಸಕ್ಸೆನಿನ ಪ್ರಭುಗಳು ಸ್ವೇದರ ಸಂಗಡದ ಒಡಂಬಡಿಕೆಯನ್ನಗಲಿ, ಅವರಿಗೆ ವಿರೋಧವಾಗಿ ಕೈಸರನ ಸಂಗಡ ಸಲ್ಲ ಮಾಡಿ ಕೊಂಡರು. ಅಂದು ಫ್ರಂಚಿನವರು ಸಹ ಗೆರ್ಮಾನಿಯದ ಶೀಮೆಗಳನ್ನು ಸ್ವತಂತ್ರಿಸಿ ಕೊಳ್ಳಲೊದ್ದಾಡುವವರಾದ್ದರಿಂದ ಸ್ವೇದೆನಿನವರು ಇವರ ಸಹಾಯ ಪಡ ಕೊಂಡು, ಯುದ್ಧ ಮುಂದರಿಸುತ್ತಿದ್ದರು.

ದಿನ ಹೋಗುತ್ತಿರಲು, ಇಬ್ಬರು ಗೆರ್ಮಾನ ರಾಜರ ಮರಣದ ದೆಸೆಯಿಂದ ಸಮಾಧಾನವು ಪುನಃಸ್ಥಾಪಿತವಾಯಿತು. ಹ್ಯಾಗಂದರೆ ಕ್ರಿ. ಶ. 1637ನೇ ವರ್ಷ 2ನೇ ಫೆರ್ದಿನಂದ ಕೈಸರನು ಸತ್ತಾಗ 3ನೇ ಫೆರ್ದಿನಂದನೆಂಬ ಕುಮಾರನು ಅವನ ಸ್ಥಳಕ್ಕೆ ಬಂದು, ಸಮಾಧಾನದ ಪ್ರೀತಿಯನ್ನು ತೋರಿಸುತ್ತಿರುವದಲ್ಲದೆ ಸೌವಾರ್ತಿಕರನ್ನು ತೊಲಗಿ ಕೈಸರನಿಗೆ ಒತ್ತಾಸೆ ಗೈಯುತ್ತಿದ್ದ ಬ್ರಂದೆನ್ಬುರ್ಗಿನ ಆ ರಾಜಸ್ವೀ

ಕಾರ ಪ್ರಭುವು ಕ್ರಿ. ಶ. 1640ನೇದಕ್ಕೆ ಮಡಿದ ಹಿಂದೆ ಮಹಾ ರಾಜಸ್ವೀಕಾರಪ್ರಭುವೆಂಬ ಆ ಪ್ರೀದೆರೀಕ ವಿಲ್ಹೆಲ್ಮನೆಂಬವನು[1] ಉತ್ತರಾಧಿಕಾರಿಯಾಗಿ, ಸ್ವೇದೆನಿನವರೊಂದಿಗೆ ಘಟ್ಟಿಯಾದದೊಂದು ಒಡಂಬಡಿಕೆ ಕಟ್ಟಿ ಕೊಂಡು, ಹೀಗೆ ಪಪ್ಪಕರ ಬಲವನ್ನು ಕುಂದಿಸಿದನು. ಇಂತಿರಲಾಗಿ 30 ವರುಷದ ಅಂಥಾ ಯುದ್ಧದ ಮೇಲೆ ಕ್ರಿ. ಶ. 1648ನೇ ವರುಷದ ಒಕ್ತೋಬರ್ ತಿಂಗಳಲ್ಲಿ ಗೆರ್ಮಾನಿಯದ ವೆಸ್ತ್ಫಾಲೆನೆಂಬ ಶೀಮೆಯಲ್ಲಿ ವೆಸ್ತ್ಫಾಲಿಕ ಸಮಾಧಾನವೆಂಬದು ಹುಟ್ಟಿತು; ಅದರ ಪ್ರಕಾರ ಔಗ್ಸ್ಬ ರ್ಗಿನ ಆ ಮತಸಂಧಾನವು ಹೊಸ್ತಾಗಿ ಸ್ಥಾಪಿತವಾಯಿತು; ಗೆರ್ಮಾನಿಯ ಸ್ವಿಟ್ಸೆರ್ಲಂದು ಹೊಲ್ಲಂದು[2] ಈ 3 ದೇಶಗಳಲ್ಲಿರುವ ಸಕಲ ಸೌವಾರ್ತಿಕರಿಗೆ ಮತಾಚಾರದ ಪೂರ್ಣ ಸ್ವಾತಂತ್ರ್ಯವೂ ಪಪ್ಪಕರಿಗಿರುವ ಅದೇ ಪ್ರಜಾಸ್ವಾತಂತ್ರ್ಯವೂ ಮುಟ್ಟುಗೋಳಾಗಿದ್ದ ಮತಕ ಸೊತ್ತೂ ಪುನಃ ಪ್ರಾಪ್ತವಾದವು. ಆಗಿನ 10ನೇ ಇನ್ನೊಕೆಂತ ಪಪ್ಪನು ಆ ವೆಸ್ತ್ಫಾಲಿಕ ಸಮಾಧಾನಕ್ಕೆ ಬಹು ಕೋಪಗೊಂಡು, ನವಂಬರ್ ತಿಂಗಳಲ್ಲಿ ಒಂದು ಬುಲ್ಲ ಪ್ರಕಟಿಸಿ, ಅದರಿಂದ ಆ ಸಮಾಧಾನವನ್ನು ತೀರಾ ರದ್ದು ಮಾಡಿ, 3ನೇ ಫೆರ್ದಿನಂದ ಕೈಸರನ ರಾಜಧಾನಿಯಾದ ವೀನೆಂಬಲ್ಲಿ[3] ಸಹ ಗೋಡೆ ಬಾಗಲುಗಳಿಗೆ ಅದರ ಪ್ರತಿಗಳನ್ನು ಹಚ್ಚಿಸಲು, ಆ ಕೈಸರನು ಅವನ್ನು ಕಿತ್ತು ತೆಗೆಸಿ, ಪಪ್ಪನ ಪ್ರತಿನಿಧಿಯಿಂದ ಇವನಿಗೆ ಹೇಳಿಸಿದ್ದೇನಂದರೆ—ಧೊರೆಸಾನಿಯಾದ ಒಲುಂಪಿಯಳು ಪರಿಶುದ್ಧ ಪಪ್ಪನಿಗೆ ಆ ಪ್ರಕಾರ, ಜೋ ಜೋ ಎಂತ, ಹಾಡಿ, ತೂಗ ಬಹುದು; ಆದರೂ ಕೈಸರನಾದ ತಾನು ಆ ಸಮಾಧಾನವನ್ನೇ ಕೈಗೊಂಡಿರುವನು, ಅಲ್ಲದಿದ್ದರೆ ಸ್ವೇದೆನಿನವರು ತನ್ನ ತಲೆಯ ಮೇಲೆ ಬಂದಾರು.—ಕೈಸರನು ಸೂಚಿಸಿದ ಆ ಒಲುಂಪಿಯಳು ಪಪ್ಪನು ಇಟ್ಟು ಕೊಂಡ ಒಬ್ಬ ಸೂಳೆಯು; ಅವಳು ಆ ಪಪ್ಪನ ಸಹೋದರನಿಗೆ ಮದಿವೆಯಾಗಿರುವಂದೇ ಅವನು ಅವಳೊಡನೆ ಜಾರತ್ವ ನಡಿಸುತ್ತಿದ್ದನು; ಅವನು 72 ವರುಷದ ಮುದುಕನಾಗಿರುವಾಗಲಾದರೂ ಅವಳ ವಶವರ್ತಿಯಾಗಿದ್ದದರಿಂದ ಬಣ್ಣಗಾರರು ಅವನ ರೂಪ ಬರೆಯುವಲ್ಲಿ ಅವನಿಗೆ ಹೆಣ್ಣುಡಿಗೆಯುಡಿಸಿ, ಅವಳ ಕೈಯಲ್ಲಿ ಪೆತ್ರನ ಬೀಗದ ಕೈಗಳನ್ನು ಕೊಟ್ಟು, ಹಾಸ್ಯಚಿತ್ರವಾಗಿ ರಚಿಸುತ್ತಿರುವರು.

ಆ 30-ವರುಷದ ಯುದ್ಧದಿಂದ ಗೆರ್ಮಾನಿಯದ ಸಾರವನ್ನೆಲ್ಲಾ ಎಳೆದ ಹಾಗಾಯಿತು; ಕತ್ತಿಯಿಂದಲೂ ಬರದಿಂದಲೂ ಸೊಂಕುರೋಗಗಳಿಂದಲೂ ಅದರ ನಿವಾಸಿಗಳಲ್ಲಿ ಅರ್ಧ ಪಾಲು ಸತ್ತಿತು; ಅನೇಕ ಪಟ್ಣಗಳು ಹಾಳಾದ್ದಲ್ಲದೆ ಸಕಲವುಗಳೂ ಹೇರಳ ಹಾನಿ ಪಟ್ಟವು; ಲೆಖ್ಖವಿಲ್ಲದ ಊರುಗಳು ಕೆಟ್ಟವು; ಮಹಾ ಪ್ರದೇಶಗಳು ಕಾಡು ಬಿದ್ದವು; ಕೃಷಿಯೂ ಪಂಚಾಳವೃತ್ತಿಯೂ ವ್ಯಾಪಾರವೂ ಶಿಥಿಲ

1) 515, 522ನೇ ಪಾನು. 2) 472ನೇ ಪಾನು. 3) 434, 447ನೇ ಪಾನು.

ವಾದವು; ಕಲಾಕುಶಲತ್ವ ವಿದ್ಯೆಗಳಿಗೆ ಬಹಳ ಅಭ್ಯಂತರವಾಯಿತು; ಆದರೆ ನೀತಿ ಚರ್ಯೆಯು ಸಹ ಬಹುಶಃ ಕುಂದಿದ್ದು ಸಮಸ್ತಕ್ಕಿಂತ ದೊಡ್ಡ ಕೇಡು. 100 ವರುಷದಿತ್ತ ಕಡೆಯಾದರೂ ಆ ಯುದ್ಧದ ನಷ್ಟಚಿನ್ಹೆಗಳು ಎಲ್ಲಿಯೂ ಪರಿಹರಿಸಲಳವಾಗಲಿಲ್ಲ. ಪಪ್ಪಕರ ಹಟದಿಂದ ಗೆರ್ಮಾನಿಯಕ್ಕೆ ಸಹ ಎಷ್ಟೋ ದೊಡ್ಡ ಗಂಡಾಂತರ ಸಂಭವಿಸಿತಲ್ಲವೇ?

ಗೆರ್ಮಾನಿಯದಲ್ಲಿ ಮತಸಂಧಾನವಾದಂದಿಗೆ 41 ವರುಷ ಈಚೆ ಬ್ರಿತಿಷ ರಾಜ್ಯದಲ್ಲಿ ಸಹ ಅದು ಬಂದೊದಗಿತು[1].

ಕ್ರಿ. ಶ. 1517ನೇದಕ್ಕೂ 1648ನೇದಕ್ಕೂ[2] ಅಂತರವಾಗಿರುವ ವರುಷಗಳೊಳಗೆ ಯುರೋಪದಲ್ಲಿ ನಡೆದ ಸಂಗತಿಗಳ ಮೇಲೆ ಸರ್ವಸಾಧಾರಣ ರೀತಿಯಾಗಿ ದೃಷ್ಟಿಯಿಟ್ಟು ತಿಳಕೊಳ್ಳುವದೇನಂದರೆ—

ಮೊದಲು ಸುವಾರ್ತೆಯೆಂಬ ದೀಪವನ್ನು ತಿರಿಗಿ ಸ್ತಂಭದಲ್ಲಿಡಲಾಯಿತು, ಸೌವಾರ್ತಿಕ ಸಭೆಯನ್ನು ತಿರಿಗಿ ಕಟ್ಟಲಾಯಿತು; ಅಷ್ಟರೊಳಗೆ (ದೊಡ್ಡ ಕೊನ್ಸ್ತಂತೀನ ಕೈಸರನು ರೋಮಿಾಯ ಸಾಮ್ರಾಜ್ಯವನ್ನಾಳಲೆಸಗಿದ ವರೆಗೆ ಯೆಹೂದ್ಯರಿಂದ ಮತ್ತು ವಿಗ್ರಹಾರಾಧಕರಿಂದಾದಂತೆಯೂ[3] ಬಳಿಕ ಅಹುರಮಜ್ದನ ಶಿಷ್ಯರಾದ ಪಾರ್ಶಿಯರಿಂದಾದಂತೆಯೂ[4] ತದನಂತರ ಮೊಹಮ್ಮದಿಯರಿಂದಾದಂತೆಯೂ[5] ತರುವಾಯ ಪಪ್ಪನ ಭಕ್ತರಿಂದಾದಂತೆಯೂ[6]) ಆ ಕಾಲಾಂತರದಲ್ಲಿ ಪಪ್ಪನ ಭಕ್ತರಿಂದ ಸತ್‌ಕ್ರೈಸ್ತರಿಗೆ ಅಘೋರ ಹಿಂಸೆಯಾಯಿತು; ಇವರಲ್ಲಿ ತಿರಿಗಿ ಅನೇಕರು ಎಲ್ಲಾ ಹಿಂಸೆಯನ್ನೂ ವಿಸ್ಮಯಕರವಾದ ತಾಳ್ಮೆಯಿಂದ ಸಹಿಸಿ, ಸತ್ಸಾಕ್ಷಿಗಳೂ ರಕ್ತಸಾಕ್ಷಿಗಳೂ ಆದರು[7].

ಅದಲ್ಲದೆ ಆ ಕಾಲಾಂತರದಲ್ಲಿ ಪಪ್ಪಕರ ಮತ್ತು ಅವರ ಗೆಳೆಯರ ಶತ್ರುತ್ವಕ್ಕೆ ವಾಕ್ಕು ಗ್ರಂಥಗಳಿಂದ ಮಾತ್ರವಲ್ಲದೆ ಖಡ್ಗದಿಂದಲೂ ಎದುರಿಸಲಗತ್ಯವೆನ್ನಿಸಿತು. ಇಂದಿಗೆ 2308 ವರುಷ ಮುಂಚೆ ಯೆಹೂದ್ಯರು ದೇವರ ಅಪ್ಪಣೆಯ ಪ್ರಕಾರ ಯೆರೂಸಲೇಮು ಪಟ್ಣವನ್ನು ಮರಳಿ ಕಟ್ಟುವಾಗ ತಮ್ಮ ಶತ್ರುಗಳೆದುರಿನಲ್ಲಿ ಒಂದು ಕೈಯಿಂದ ಕೆಲಸ ಮಾಡುತ್ತಾ ಮತ್ತೊಂದರಿಂದ ಆಯುಧಗಳನ್ನು ಹಿಡುಕೊಂಡಿ

---

1) 501ನೇ ಪಾನು. 2) ಇಂಗ್ಲಂದಿನಲ್ಲಿ 1689ನೇದಕ್ಕೂ. 3) 10—17ನೇ ಸಂಧಿಗಳು. 4) 23, 31ನೇ ಸಂಧಿಗಳು. 5) 37ನೇ ಸಂಧಿ. 6) 314, 371—411ನೇ ಪಾನು. 7) ಬೋಯಿಮೆನಿನಲ್ಲೂ ಮೋರಿಸಿನಲ್ಲೂ 408, 518—520ನೇ ಪಾನು; ಸ್ತೈಯಿರ್ಮರ್ಕಿನಲ್ಲೂ ಕಯಿನ್ಥೆನಿನಲ್ಲೂ 519ನೇ ಪಾನು; ಇಂಗ್ಲಂದಿನಲ್ಲಿ 475—479, 499, 500ನೇ ಪಾನು; ಸ್ಕೋತ್ಲಂದಿನಲ್ಲಿ 485—491, 499, 500ನೇ ಪಾನು; ಹೊಲ್ಲಂದಿನಲ್ಲಿ 467, 468, 471, 472ನೇ ಪಾನು; ಈತಲಿಯದಲ್ಲಿ 446, 448, 474ನೇ ಪಾನು; ಸ್ಪಾನಿಯದಲ್ಲಿ 468, 473ನೇ ಪಾನು; ಫ್ರಂಚಿನಲ್ಲಿ 502—517ನೇ ಪಾನು; ಗೆರ್ಮಾನಿಯದಲ್ಲಿ 518 ಆದಿ ಪಾನು.

ರುತ್ತಾ ಇರ ಬೇಕಾಯಿತಲ್ಲ[1]? ಹ್ಯಾಗೋ, ಹಾಗೆಯೇ ಇನ್ನೊಮ್ಮೆ ಸಂಭವಿಸಿದಂತಾಯಿತು.

ಅದು ವಿನಹ ಆ ಕಾಲಾಂತರ ಮಹಾ ಸೂಕ್ಷ್ಮ ರೀತಿಯಿಂದಾಗುವ ಸತ್ಯಶೋಧನೆಯಲ್ಲಿ ಉತ್ಪನ್ನವಾಗಿದ್ದ ಸೌವಾರ್ತಿಕ ಶಾಖೆಯವರು, ಅಂದರೆ ಲುಥರಿಕರು ಜ್ವಿಂಗ್ಲಿಕರು ಕಲ್ವೀನಕರು ಮತ್ತು ಎಪಿಸ್ಕೊಪಾಲರು ಪ್ರೆಸ್ಬುತೆರಿಯಾಲರು ಇಂದೆಪೆಂದೆಂತರು, ವಿಚಿತ್ರ ಶಾಖೆಗಳ ಸಹಜತೆಯನ್ನೂ ಉಪಕೃತಿಯನ್ನೂ ಸ್ವಾನುಭವದ ಮೇಲೆ ಇನ್ನು ಅರಿಯದೆ, ತಾಳ್ಮೆಯನ್ನೂ ಪರಸ್ಪರ ಪ್ರೀತಿಯನ್ನೂ ಬಿಗಿಯಾಗಿ ಹಿಡುಕೊಳ್ಳದೆ ಇದ್ದರು; ಇಂಗ್ಲಂದಿನಲ್ಲಿ ಅಸದ್ಭಾವವುಳ್ಳಂಥ ರಾಜರು ಇದಕ್ಕೆ ಬಹು ವಿಧವಾಗಿ ಕಾರಣರಾದರು[2].

ಪುನಃ ಆ ಕಾಲಾಂತರ ಪಪ್ಪಕ ಬಹಿಃಸಭೆಯು ಕಥೊಲಿಕ ಬೋಧನೆಯ ಭಾವವನ್ನು ಹೆಚ್ಚಾಗಿ ಬಿಟ್ಟು, ವಿಷಮ ಭಾವದ ಭೇದಕತ್ವವನ್ನವಲಬಿಂಸಿ[3], ನ್ಯಾಯಾನ್ಯಾಯದಿಂದ ಹಬ್ಬಲೊದ್ದಾಡಿತು.

## 65. ಹಿಂದು ದೇಶದಲ್ಲಿಯ ಕ್ರೈಸ್ತರ ಸ್ಥಿತಿಗತಿಯು.

ಕ್ರಿ. ಶ. 641ನೇ ಅಬ್ದ ಮೊಹಮ್ಮದಿಯರು ಐಗುಪ್ತದ ಅಲೆಕ್ಸಂದರೀಯ ಪಟ್ಣವನ್ನು[4] ಹಿಡುಕೊಂಡದರಿಂದ ರೋಮಿಾಯ ಮತ್ತು ಗ್ರೇಕ ರಾಜ್ಯದ ಕ್ರೈಸ್ತರು ಹಡಗವೇರಿ ಹಿಂದು ದೇಶಕ್ಕೆ ಹೋಗಿ ವ್ಯಾಪಾರ ನಡಿಸುವಂಥಾದ್ದು ನಿಂತು ಹೋಯಿತು; ಆದಾಗ್ಯೂ ಪಾರ್ಶಿಸ್ಥಾನದ ನೆಸ್ತೊರಿಯಾನ ಕ್ರೈಸ್ತರು ಎಂದಿನಂತೆ[5] ಹಿಂದು ದೇಶಸ್ಥರ ಸಂಗಡ ಅಂಥಾ ವ್ಯಾಪಾರ ಗೈಯಲಿಕ್ಕೆ ಅಡ್ಡಿಯಾಗಲಿಲ್ಲ, ಹಾಗಾದರೆ ಅವರಿಗೂ ಹಿಂದು ದೇಶದಲ್ಲಿಯ ಅವರ ಕ್ರೈಸ್ತ ಸಹೋದರರಿಗೂ ಮುಂಚಿನಂತೆ ಪರಿಚಿತೆ ಇರುತ್ತಿರುವದು. ಹ್ಯಾಗಂದರೆ ಆ ನೆಸ್ತೊರಿಯಾನರು ಮೊಹಮ್ಮದಿಯರ ದಯೆಗಾಗಿ ವಿಧವಿಧ ವಿನಂತಿ ಮಾಡಿದದರಿಂದಲೂ ಆಗಿಂದಾಗ ಅವರ ದಂಡಿಗೆ ಬರದೆಡೆಯಲ್ಲಿ ಆಹಾರ ದೊರಕಿಸುತ್ತಿದ್ದದರಿಂದಲೂ ನೀಸಿಬಿಸ್ ಎಂಬ ಯಶಸ್ಸುಳ್ಳ ಶಾಲೆಯಲ್ಲಿ[6] ಸರ್ವ ವಿಷಯದ ವಿದ್ಯೆ ಕಲಿತು ಹೀಗೆ ಮೊಹಮ್ಮದಿ ಅಧಿಕಾರಸ್ಥರೊಳಗೆ ಪಟ್ಟಣಾಧಿಪತಿಗಳೂ ರಾಷ್ಟ್ರಾಧಿಪತಿಗಳೂ ಅಲ್ಲದೆ ವಿಶೇಷವಾಗಿ ವೈದ್ಯರೂ ಲೇಖಕರೂ ಆಗುವದಕ್ಕೆ ಯೋಗ್ಯರೆನ್ನಿಸುತ್ತಿದ್ದದರಿಂದಲೂ ಮೊಹಮ್ಮದನು ತಾನು ಹೊರ್ತು ಅವನ ಖಲೀಫರು ಅಂದರೆ ಉತ್ತರೋದ್ಯೋಗಿಗಳು ಸಹ ಕೆಲವು

1) ನೆಹೆಮಿಾ. 4, 17; 18ನೇ ಪಾನು. 2) 441 — 443; 481 — 484; 498 — 500ನೇ ಪಾನು. 66ನೇ, 78ನೇ ಸಂಧಿಗಳು. 3) 449ನೇ ಪಾನು. 4) 295ನೇ ಪಾನು. 5) 253ನೇ ಪಾನು. 6) 252, 253ನೇ ಪಾನು.

ಶತಮಾನದ ವರೆಗೆ ಅವರಿಗೆ ಒಲುಮೆ ತೋರಿಸುತ್ತಾ ಬಂದರು. ಸೆಲ್ಯುಕೀಯ ಪಟ್ಣದ ಸ್ಥಳದಲ್ಲಿ ಕಟ್ಟಿದ ಬಾಗ್ದಾದು[1] ಪಟ್ಣವು ಕ್ರಿ. ಶ. 750ನೇ ವರುಷ ಪ್ರಧಾನ ಖಲೀಫಾತಿನ ಸ್ಥಾನವಾದ ಮೇಲೆ ನೆಸ್ತೊರಿಯಾನ ಕಥೊಲಿಕನೆಂಬ ಪತ್ರಿಯರ್ಖನು[2] ಕೂಡ ಅಲ್ಲಿ ವಸ್ತಿ ಮಾಡುವವನಾದನು. ಕ್ರಿ. ಶ. 1000ನೇ ವರುಷ ಪಾರ್ಶಿಸ್ಥಾನದ ಸಿಯ್ಯಿತರೆಂಬ[3] ಮೊಹಮ್ಮದಿ ಶಾಖೆಯವರು ಬಾಗ್ದಾದಿನ ಖಲೀಫಾತನ್ನು ತೊಲಗಿ ಬಿಟ್ಟ ತರುವಾಯ ಸ್ವಮತಕ್ಕೆ ಮರುಳಾದಂಥ ಈ ಧನಿಗಳು ನೆಸ್ತೊರಿಯಾನರನ್ನು ಬಹಳ ಪೀಡಿಸುವವರಾದರು; ಅದು ಹೊರ್ತಾಗಿ ಪಪ್ಪರು ಗ್ರೇಕ ಪಕ್ಷಸಭೆಯವರನ್ನಲ್ಲದೆ[4] ನೆಸ್ತೊರಿಯಾನರನ್ನು ಸಹ ಪಪ್ಪಕರಾಗ ಮಾಡಲಿಕ್ಕೆ ನಿತ್ಯದಲ್ಲಿ ಪೇಚಾಡುತ್ತಿದ್ದು, ತಮ್ಮ ಪ್ರೇಷಿತರಿಂದ ನೆಸ್ತೊರಿಯಾನತ್ವಕ್ಕೆ ಅಭ್ಯಂತರವಿಡುತ್ತಿದ್ದರು. ಇಂತಿರಲಿಕ್ಕೆ ನೆಸ್ತೊರಿಯಾನರ ಸಂಖ್ಯೆಯು ವಿರಳವಾಗಲೆಸಗಿತು. ಇತ್ತಕಡೆ ಕ್ರಿ. ಶ. 1400ನೇ ವರುಷ ಸುತ್ತ ತಾತಾರ್ಯರ ಖಾನನಾದ ತೀಮೂರ್ಲಂಗನೆಂಬವನು ತನ್ನ ಪರಾಭಿಯೋಗಪ್ರಯಾಣಗಳಲ್ಲಿ ಸ್ವಲ್ಪ ವರುಷದೊಳಗೆ ಅವರಲ್ಲಿ ಹೇರಳರನ್ನು ನಶಿಸಿದನು; ಅದು ಕಾರಣ ಅವರಲ್ಲುಳಿದವರಲ್ಲಿ ಹೆಚ್ಚು ಜನರು ತೀಮೂರ್ಲಂಗನ ಕಾಲದಲ್ಲಿಯಾದರೂ ಕುರ್ದಿಸ್ಥಾನದ ಪರ್ವತಗಳಲ್ಲಿ[5] ಆಶ್ರಯಗೊಳ್ಳ ಬೇಕಾಯಿತು. ಅಲ್ಲಿ ಪಪ್ಪಕ ಪ್ರೇಷಿತರೂ ಕುರ್ದರೂ ಅವರಿಗೆ ಮುತ್ತುತ್ತಿರುವೆಡೆ ಈಗಲೂ ಇನ್ನೂ ಇದ್ಧಾರೆ. ಅಲ್ಲಿರುವವರು ಸುಮಾರು 150,000 ಜನರು; ಕ್ರಿ. ಶ. 1684ನೇ ವರುಷದಾರಭ್ಯ ಅವರ ಪತ್ರಿಯರ್ಖನು ಸಹ ಅಲ್ಲಿಯೇ ವಾಸ ಮಾಡುತ್ತಾನೆ. ಮೆಸಪೊತಮಿಯದಲ್ಲಿ ತಿಗ್ರಿಸ್ ಎಂಬ ನದಿಯ[6] ಹತ್ತರ ಮುಂಚೆ ನಿನಿವೆ (ನೀನೀವೆ) ಪಟ್ಣವಿದ್ದ ವೊಸುಲ್ ಎಂಬ ಪಟ್ಣದ ಬಳಿಯಲ್ಲಿ ಕೂಡ ಈಗಲೂ 40,000 ಮಂದಿ ನೆಸ್ತೊರಿಯಾನರೆನ್ನಿಸುವವರು ಇದ್ಧಾರೆ; ಪಪ್ಪಕರು, ಇವರೆಲ್ಲರು ತಮ್ಮ ಸಭೆಯಲ್ಲಿ ಶೇರಿ ಕೊಂಡವರಾಗಿದ್ಧಾರೆಂತ, ಹೇಳುತ್ತಾರೆ; ಆದರೂ ಈ ಮಾತು ಅವರದೊಂದು ಭಾಗಕ್ಕೆ ಮಾತ್ರ ತಾಗುತ್ತದೆ.

ಕ್ರಿ. ಶ. 920ನೇ ವರುಷ[7] ಇನ್ನೂ ನಮ್ಮ ಈ ಹಿಂದು ದೇಶದಲ್ಲಿ, ಮುಖ್ಯವಾಗಿ ಮಲಯಾಳ ಶೀಮೆಯಲ್ಲಿ, ಇದ್ದು ಸುರಿಯಕರೆಂತಲೂ ಸುರಿಯಾನಿಯರೆಂತಲೂ ನಜರಾನಿಯರೆಂತಲೂ[8] ತರಿಸರೆಂತಲೂ[9] ಹೇಳಿಸಿ ಕೊಳ್ಳುವ ನೆಸ್ತೊರಿಯಾ

1) 39, 297ನೇ ಪಾನು. 2) 252, 253ನೇ ಪಾನು. 3) 298ನೇ ಪಾನು. 4) 44ನೇ ಸಂಧಿ ಸರಿ ನೋಡು. 5) 254ನೇ ಪಾನು. 6) 297ನೇ ಪಾನು. 7) About 100 years before this *S*ankarâcârya, the Vedântist, had begun his work there, and had introduced there the so called ಕೊಲ್ಲಂ ಆಂಡ್ or the Collam Era in A. D. 822. Vid. the Memorandum alluded to one page 81. *S*ankarâ. was born in Malayâlam; his relations are said still to exist there. 8) 24ನೇ ಪಾನು. 9) Perhaps those of Tarsus, Paul's birth-place? 81ನೇ ಪಾನು.

ನರ ಬಳಿಗೆ ಆ ವರುಷಕ್ಕೆ ಮಾರ್ ಶಾಹ್ ಪೂರ ಮತ್ತು ಮಾರ್ ಫೀರೂಜ್ ಎಂಬ ವರಿಬ್ಬರು ಉತ್ತಮ ತರದ ಮತೋದ್ಯೋಗಿಗಳು ಬಾಗ್ದಾದಿನಿಂದ ಮಲಯಾಳಕ್ಕೆ ಆಗಮಿಸಿ, ಸುವಾರ್ತೆ ಸಾರುವಲ್ಲಿ ಹೇರಳ ಮಂದಿ ವಿಗ್ರಹಾರಾಧಕರು ಕ್ರೈಸ್ತರಾದರು. ಅಂದಿನ ತಿರುವಾಂಕೋಡಿನ ರಾಜನು ಅವರಿಬ್ಬರಿಗೆ ತರತರದ ಪ್ರಸನ್ನತೆ ಕೊಡುವಲ್ಲಿ, ನೀವು ನನ್ನ ರಾಜ್ಯದಲ್ಲಿ ಏನೂ ಅಡ್ಡಿ ಇಲ್ಲದೆ ಪ್ರಸಂಗಿಸುತ್ತಾ ದೇವಾಲಯಗಳನ್ನು ಕಟ್ಟುತ್ತಾ ಇರ ಬಹುದೆಂದು, ಹೇಳುವ ಅಪ್ಪಣೆಯನ್ನು ಸಹ ದಯೆಪಾಲಿಸಿದನು; ತನ್ನ ಪ್ರಜೆಯವರಲ್ಲಿ ಯಾರಾದರೂ ಕ್ರೈಸ್ತರಾಗುವದಕ್ಕೆ ಅವನು ಏನೂ ಅಭ್ಯಂತರ ಮಾಡಲಿಲ್ಲ.

ಆದರೆ ಆ ತರುವಾಯ ಮಲಯಾಳ ರಾಜರು ಅವರಿಗೆ ತಂಟೆ ಪಡಿಸುವವರಾದರು; ಅದಲ್ಲದೆ ಕ್ರಿ. ಶ. 1000ನೇ ಅಬ್ದ ಸುತ್ತ ಪಾರ್ಶಿಸ್ಥಾನದಲ್ಲಿ ಅವರ ಕ್ರೈಸ್ತ ಸಹೋದರರು ಸಿಯ್ಯಿತರ ಮತ್ತು ಆ ಮೇಲೆ ತೀಮೂರ್‌ಲಂಗನ ಕ್ರೂರತ್ವದ ದೆಸೆಯಿಂದ ತಮ್ಮ ಸ್ವರಕ್ಷಣದ ಚಿಂತೆಯೊಳಗೆ ಮುಳುಗಿ, ಇನ್ನೊಂದಕ್ಕೆ ಹೋಗ ಕೂಡದ ಕಾರಣ ಅವರಿಗೂ ಮಲಯಾಳದ ಕ್ರೈಸ್ತರಿಗೂ ಇದ್ದ ಬಳಿಕೆಯು ತಪ್ಪಿ ಹೋಯಿತು. ಹೀಗಿರಲಾಗಿ ಮಲಯಾಳದವರ ಸಂಕಷ್ಟವು ಮಿಗಿಲೇರಿತು. ಆಗಲವರು ಕ್ರಿ. ಶ. 1490ನೇ ವರುಷ ಆ ವೇಳೆ ಮೊಸುಲ್ ಪಟ್ಣದಲ್ಲಿ ವಸ್ತಿಯಾಗಿರುವ ಸಿಮೆಯೋನನೆಂಬ ಪತ್ರಿಯರ್ಖನ ಸನ್ನಿಧಾನಕ್ಕೆ ದೂತರನ್ನಟ್ಟಿ, ಒಬ್ಬ ಅಧ್ಯಕ್ಷನನ್ನು ಬೆಸಗೊಳ್ಳಲು, ಇವನು ಥೋಮ ಮತ್ತು ಯೋಹಾನ ಎಂಬಿವರಿಬ್ಬರನ್ನು ಕಳುಹಿಸಿದನು. ಇವರಲ್ಲಿ ಥೋಮನು ಬೇಗ ಸ್ವದೇಶಕ್ಕೆ ಮರಳಿದನು; ಆದರೆ ಯೋಹಾನನು ಮಲಯಾಳದಲ್ಲುಳಿದು, ಕೊಡುಂಬಲೂರಲ್ಲಿ ನೆಲೆಗೊಂಡಿರುತ್ತಿದ್ದನು. ಅಂದು ಆ ಕಡೆ ಸುಮಾರು 20 ಪಟ್ಣ ಊರುಗಳಲ್ಲಿ 30,000 ಕ್ರೈಸ್ತ ಕುಟುಂಬಗಳಿದ್ದವು; ಅವೆಲ್ಲವೂ ಬಹುಶಃ ಕ್ಷುಧೆ ಬಾಧೆಗಳುಳ್ಳ ಸ್ಥಿತಿಯಲ್ಲಿದ್ದವು.

8 ವರುಷದಿತ್ತ ಪೊರ್ತುಗೀಸರು ವಸ್ಕೊ ದೇ ಗಾಮನೆಂಬ ನಾಯಕನ ಕೆಳಗೆ ಮೊದಲಿನ ಸಾರಿ ಆಫ್ರಿಕವನ್ನು ಸುತ್ತಿ, ಹಿಂದು ದೇಶಕ್ಕೆ ನೌಪ್ರಯಾಣವಾಗಿ ಬಂದು[1], ಮಲಯಾಳದ ಕೋಳಿಕೋಡಿನಲ್ಲಿ (ಕಲ್ಲಿಕೋಟೆನಲ್ಲಿ) ತೀರಕ್ಕಿಳಿದು, ಬಹಳ ತಡ ಮಾಡದೆ, ಹಿಂದಿರುಗಿದರು. ಬಳಿಕ ವಸ್ಕೊ ದೇ ಗಾಮನು ತನ್ನ ಅರಸನಾದ ಇಮ್ಮಾನುವೇಲನಿಂದ ಹಿಂದು ಪಾರ್ಶಿಕ ಅರಬಿ ಸಮುದ್ರಗಳ ನೌಸೇನಾಧಿಪತಿ ಎಂಬ ಬಿರುದು ಹೊಂದಿ, ಕ್ರಿ. ಶ. 1502ನೇ ವರುಷ ಮತ್ತೊಮ್ಮೆ ಈ ನಮ್ಮ ಶೀಮೆಗಾಗಮಿಸಿ, ಕೊಚ್ಚಿಗೆ ಮುಟ್ಟಲು, ವಿಗ್ರಹಾರಾಧಕರಿಂದಲೂ ಮೊಹಮ್ಮದಿಯರಿಂದಲೂ ಬಹಳ ಉಪದ್ರವ ಪಡುತ್ತಿರುವ ಅಲ್ಲಿಯ ನೆಸ್ತೊರಿಯಾನ ಕ್ರೈಸ್ತರು

1) 413ನೇ ಪಾನು.

ಮಹಾ ಬಲಿಷ್ಠನಾದ ಕ್ರೈಸ್ತ ರಾಜನಂತೆ ತಮಗೆ ಕಾಣುವ ಆ ಇಮ್ಮಾನುವೇಲನ ಪ್ರತಿನಿಧಿಯ ಆಗಮನಕ್ಕೆ ಮೋದ ಗೊಂಡು, ಅವನ ಹಡಗಕ್ಕೆ ಅವನ ಬಳಿಗೆ ಪ್ರೇಷಿತರನ್ನು ಕಳುಹಿ, ಅವನ ಆಶ್ರಯ ಬೇಡಿ ಕೊಂಡು—ಅದು ತಮಗೆ ಶಿಕ್ಕಿದರೆ ಇಮ್ಮಾನುವೇಲ ರಾಜನನ್ನು, ತಮ್ಮ ಏಕ ಪತಿ ಎಂತ, ವಂದಿಸುವೆವೆಂದು, ಮಾತು ಕೊಟ್ಟರು. ಅವರ ಬಿನ್ನಹದ ಆಶೆ ಅವರಿಗೆ ತೋರಿಸಲಾಯಿತು. ಆದರೂ ಆ ಒಪ್ಪಂದವು ಅವರನ್ನು ಬೇಗನೇ ನಷ್ಟಕ್ಕೆ ಗುರಿ ಮಾಡಿತು. ಹ್ಯಾಗಂದರೆ ಗರ್ವವೂ ಲೋಭವೂ ಉಳ್ಳ ಆ ಪೊರ್ತುಗೀಸರಿಗೆ ಅಗದೀ ಒಲಿಯದೆ ಇಂಥವರ ಸಂಗಡ ಒಡಂಬಡಿಕೆ ಕಟ್ಟಿ ಕೊಂಡ ನೆಸ್ತೊರಿಯಾನರಿಗೆ ಮುನಿಯುವ ಮಲಯಾಳ ಧನಿಗಳು ಇವರನ್ನು ಮುಂಚೆಗಿಂತ ಹೆಚ್ಚಾಗಿ ಬಾಧಿಸಲೆಸಗಿದ್ದಲ್ಲದೆ ಈ ಪತಿಗಳಿಗಿಂತಲೂ ಅಧಿಕವಾಗಿ ಪೊರ್ತುಗೀಸರು ತಾವೇ ಸ್ವಲ್ಪ ಕಾಲಕ್ಕೀಚೆ ಅವರಿಗೆ ತಂಟೆ ಕೊಡಲಿಕ್ಕೆ ಹತ್ತಿದರು.

ಪೊರ್ತುಗೀಸರು ಕ್ರಿ. ಶ. 1510ನೇ ವರುಷ ಗೋವೆಯನ್ನು ಹಿಡು ಕೊಂಡು, ಬಳಿಕ 30 ವರುಷಗಳೊಳಗೆ ಗುಜರಾತಿನ ತೆಂಕಣ ತೀರದ ಹತ್ತರದ್ದೊಂದು ಚಿಕ್ಕ ದ್ವೀಪದಲ್ಲಿರುವ ದೀಯೊವೆಂಬ ಪಟ್ಣವನ್ನೂ ಮರಾಟಿ 4 ಸ್ಥಳಗಳಾದ ಮುಂಬಯಿಯ ಹತ್ತರದ ಸಾಷ್ಟಿ ಎಂಬ ದ್ವೀಪವನ್ನೂ ಮುಂಬಯಿ ದ್ವೀಪವನ್ನೂ ಇದರ ಬಡಗು ದಿಕ್ಕಿನಲ್ಲಿರುವ ವಸಯಿೊ ಎಂಬ ಪಟ್ಣವನ್ನೂ ಇದಕ್ಕೆ ಬಡಗಿನಲ್ಲಿರುವ ದಮಾವೆಂಬ ಪಟ್ಣವನ್ನೂ ಸ್ವತಂತ್ರಿಸಿ ಕೊಂಡದ್ದು ಹೊರ್ತು ದಕ್ಷಿಣ ಹಿಂದು ದೇಶದ ಪಶ್ಚಿಮ ದಡದ ಹವಿಕ ಶೀಮೆಯ ಹೊನ್ನಾವರದಲ್ಲಿಯೂ ಬಸರೂರಿನಲ್ಲಿಯೂ ತೌಳವ ಶೀಮೆಯ ಮಂಗಳೂರಿನಲ್ಲಿಯೂ ಮಲವಾರಿ ಶೀಮೆಯ ಕೋಳಿಕೋಡಿನಲ್ಲಿಯೂ ಕೊಚ್ಚಿ ಶೀಮೆಯ ಕೊಡುಂಜಲೂರಲ್ಲಿಯೂ ಕೊಚ್ಚಿಯಲ್ಲಿಯೂ ತಿರುವಾಂಕೋಡು ಶೀಮೆಯ ಕೊಲ್ಲದಲ್ಲಿಯೂ ಪೂರ್ವ ದಡದ ತಿರುನೆಲ್ವೇಲಿ ಶೀಮೆಯ ತೂತ್ತುಕುಡಿ ಎಂಬ ಪಟ್ಣದಲ್ಲಿಯೂ ಭಂಡಶಾಲೆಗಳನ್ನು ಕಟ್ಟಿ, ಅವುಗಳಲ್ಲಿ ಕೆಲವು ಸ್ಥಳಗಳೊಳು ಕೋಟೆಗಳನ್ನು ಸಹ ಏರಿಸಿದರು. ಬಳಿಕ ಅವರ ಬಲಾತ್ಕಾರದ ದೆಸೆಯಿಂದ ಮೊಹಮ್ಮದಿಯರ ವ್ಯಾಪಾರಕ್ಕೆ ಬಹಳ ಕೊರತೆಯಾಯಿತು. ಆ ಸಮಯ ಹಿಂದು ದೇಶದ್ದೊಂದು ಹಡಗವು ಸಮುದ್ರಕ್ಕೆ ಹೋದರೆ ಪೊರ್ತುಗೀಸರದೊಂದು ಕೌಲು ತಂಡೇಲನಲ್ಲಿ ಇದ್ದ ಹೊರ್ತು ಅದಕ್ಕೆ ಭದ್ರತೆ ಶಿಕ್ಕದು.

ಪೊರ್ತುಗೀಸರು ಗೋವೆ ತಕ್ಕೊಂಡನಂತರ ಅವರು ದೊಡ ಮೆರವಣಿಗೆಯೊಡನೆ, ಗೋವೆಯ ಒಡತಿಯೂ ಸಮಸ್ತ ಮೂಡಣ ದಿಕ್ಕಿನಲ್ಲಿ ಪೊರ್ತುಗೀಸರ ಆಶ್ರಯದಾತಳೂ ಎಂದು, ದೇವರ ಬದಲಾಗಿ ಸಂತ ಕಥರೀನಳೆಂಬ ಒಬ್ಬ ಸ್ತ್ರೀಯ

ನ್ನು ಆರಿಸಿ ಕೊಂಡರು[1]; ಇವಳು ಮಕ್ಸಿಮಿಾನ ಕೈಸರನ ಕಾಲದಲ್ಲಿ[2] ಅಲೆಕ್ಸಂದರೀಯದೊಳಗೆ ರಕ್ತಸಾಕ್ಷಿಯಾಗಿ ಸತ್ತವಳೊಬ್ಬಳು. ಪುನಃ, ಅಂದು ಅನೇಕ ವಿಗ್ರಹಾರಾಧಕರಿಗೆ ಪಪ್ಪಕ ಸ್ನಾನ ತಕ್ಕೊಳ್ಳುವದಕ್ಕೆ ಒತ್ತಾಯ ಬಂತು; ಪೊರ್ತುಗೀಸ ದಂಡುಗಾರರಿಗೆ ಮದಿವೆ ಮಾಡಿ ಕೊಡುವದಕ್ಕೋಸ್ಕರ ಆ ಸ್ನಾನವನ್ನು ವಿಶೇಷವಾಗಿ ಬಹಳ ಮಂದಿ ಸ್ತ್ರೀಯರಿಗೆ ಮಾಡಿಸಲಾಯಿತು[3].

ಕ್ರಿ. ಶ. 1542ನೇ ವರುಷ ಫ್ರಂಚ ಕ್ಷಾವೇರನೆಂಬವನು[4] ದೇ ಸೋಜನೆಂಬ ಹೊಸ ಅಧಿಪತಿಯ ಸಹಿತ ಗೋವೆಗೆ ಬಂದನು; ಲೋಯೋಲನೆಂಬ ಆ ಯೇಸುವಿತಕುಲಸ್ಥಾಪಕನ ಜತೆಯವನೂ ಪಕ್ಷದವನೂ ಇವನೇ; ಲೋಯೋಲನು ಸಹ ಆಗ ಜೀವದಿಂದಿದ್ದನು, ಕ್ಷಾವೇರನು 35 ವರುಷದವನು. ಅವನು ಹಲವರು ಯೇಸುವಿತರನ್ನು ತನ್ನ ಸಂಗಡ ಕರ ಕೊಂಡು ಬಂದಿದ್ದನು[5]. ಅದಲ್ಲದೆ ಅಂದಿನ 3ನೇ ಯೋಹಾನ ರಾಜನು ಅವನಿಗೆ ಬಹು ಸ್ವಾತಂತ್ರ್ಯ ನೇಮಿಸಿತ್ತಂಥಾದ್ದೊಂದು ರಾಯಸಪತ್ರವು ಅವನ ಬಳಿಯಲ್ಲಿತ್ತು; ಅದರ ಪ್ರಕಾರ ರಾಜನ ಕೆಳಗಿನ ಸಮಸ್ತ ಅಧಿಕಾರಸ್ಥರು ಅವನಿಗೆ ಬೇಕಾದ ಸಹಾಯವನ್ನು ಅಗತ್ಯವಾಗಿ ಕೊಡ ತಕ್ಕದ್ದು. ಅವನು ಗೋವೆಯಲ್ಲಿ ಪೊರ್ತುಗೀಸರ ದುರ್ಮಾರ್ಗತನವನ್ನು ಬಿಡಿಸಲಿಕ್ಕೆ ಪೇಚಾಡಿದ ಮೇಲೆ[6] ಕ್ರಿ. ಶ. 1543ನೇ ವರುಷ ಪೊರ್ತುಗೀಸ ಆಡಳಿತೆಗಾರನ ಸಂಗಡ ಹಡಗದೊಳು ದಕ್ಷಿಣಪಥದ ಮಧುರಾಶೀಮೆಗೆ ಶೇರಿದ ಕುಮಾರಿಮೂಲೆಯ ತೀರಕ್ಕೆ ಹೊರಟು, ಕುಮಾರಿಯಿಂದ ನಾಗಪಟ್ಣದ ವರೆಗಿರುವ ತೀರದಲ್ಲಿರುವಂಥ ಪರವರೆಂಬ ಮಿಾನುಗಾರರ ಹತ್ತರ ಹೋದನು. ಈ ಪರವರು ಸ್ವಲ್ಪ ಕಾಲದ ಹಿಂದೆ ಪೊರ್ತುಗೀಸರ ಕೈಯಿಂದ ಮೊಹಮ್ಮದಿಯರ ತಂಟೆಯೊಳಗಿಂದ ವಿಮುಕ್ತರಾಗಿ, ತಾವು ಆ ಉಪಕಾರವನ್ನರಿಯುವಂಥವರೆಂದು, ತೋರಿಸುವದಕ್ಕೋಸ್ಕರ, ತಮ್ಮ ವಿಮೋಚಕರ ಮತವನ್ನವಲಂಬಿಸುವೆವೆಂತ, ಇವರಿಗೆ ಮಾತು ಕೊಟ್ಟಲ್ಲಿ ಅವರೊಳಗೆ ಹೆಚ್ಚು ಕಡಿಮೆ 20,000 ಜನರು, ಪಪ್ಪಕ ಮತದ ವಿಷಯವನ್ನು ಎಂತೂ ತಿಳಿಯದವರಾಗಿದ್ದರೂ, ಪಪ್ಪಕ ಸ್ನಾನ ಹೊಂದಿದ್ದರು. ಕ್ಷಾವೇರನು ಅವರನ್ನು ಪರೀಕ್ಷಿಸಿ, ಅವರು ಕೇವಲ ಅಜ್ಞಾನಿಗಳೆಂತ, ಕಂಡದ್ದು ಸಹಜವೇ. ಬಳಿಕ ಅವನು ಮೊದಲು ದ್ವಿಭಾಷಿಗಳ ಮುಖ್ಯಸ್ಥಿಕೆಯಿಂದ ಉಪದೇಶಿಸ ಯತ್ನಿಸಿದ್ದು ಆಗದಿರಲು, ಅವನು ಗೋವೆಯಲ್ಲಿ ಪೊರ್ತುಗೀಸ ಭಾಷೆಯನ್ನು ಕೊಂಚ ಕಲಿತಿದ್ದ ಹಲವರು ತಮಿಳರಿಂದ ದೇವವಾಕ್ಯಸಂಬಂಧವಾದ ಮತ್ತು ಪಪ್ಪಕ ಮತಸಂಬಂಧವಾದ ಕೆಲವು

1) Rev. Mr. Cottineau. A historical Sketch of Goa. A. D. 1812. p. 51. 2) 262ನೇ ಪಾನು. 3) Maffeus, lib. IV. 4) 458ನೇ ಪಾನು. 5) Cottineau, pp. 56; 113. 6) Cott. p. 55.

ಸಣ್ಣ ಕೃತಿಗಳನ್ನು ತಮಿಳ ಭಾಷಾಂತರ ಗೈಯಿಸಿ, ತಾನು ಅವನ್ನು ಬಾಯಿಪಾಠ ಮಾಡಿ ಕೊಂಡು, ಒಂದು ಘಂಟೆ ಹಿಡು ಕೊಂಡು ಹೋಗಿ ಬಾರಿಸುವ ಸ್ಥಳದಲ್ಲಿ ಅದರ ನಾದ ಕೇಳಿ ಬಂದವರಿಗೆ ಸಹ ಅವನ್ನು ಬಾಯಿಪಾಠ ಮಾಡಿಸುತ್ತಿರುವನು; ಆದರೆ ಅವನ್ನು ಒಕ್ಕಣಿಸುವದು ಅವನಿಂದಾಗುತ್ತಿದ್ದಿಲ್ಲ. ಅವನು ಈ ಪ್ರಕಾರ 15 ತಿಂಗಳೊಳಗೆ ಅಲ್ಲಿಯ ತೀರಕ್ಕನುಕೂಲವಾದ ಊರು ಹಳ್ಳಿಗಳಲ್ಲಿ 30ನ್ನು ತಿರುಗಿ ನೋಡುತ್ತಿರಲು, ನಿವಾಸಿಗಳಲ್ಲಿ ಅರೆವಾಸಿಯವರು ಪಪ್ಪಕ ಸ್ನಾನ ಹೊಂದಿದ್ದರೆಂದು, ಗೊತ್ತಿಗೆ ಬಂತು; ಅವುಗಳಲ್ಲೊಂದೊಂದರಲ್ಲಿ ಅವನು ಸುಮಾರು 14 ದಿವಸ ಕಾಲ ಕಳೆಯುತ್ತಿರುವನು. ಒಂದು ತಕ್ಕಷ್ಟು ದೊಡ್ಡ ಸಭೆಯಿರುವೆಡೆ ಅವನು ತನ ಕೃತಿಗಳನ್ನು ಬಹು ಚನ್ನಾಗಿ ಬಾಯಿಪಾಠ ಮಾಡಿ ಕೊಂಡಂಥವನೊಬ್ಬನನ್ನು, ಉಪದೇಶಿ ಎಂತ, ನೇಮಿಸಿದ್ದಲ್ಲದೆ ದೇವಾಲಯಗಳನ್ನು ಸಹ ಕಟ್ಟಿಸಿದನು. ಆ ಕಡೆಯ ಬ್ರಾಹ್ಮಣರಲ್ಲಿ ಯಾರೂ ಕಿವಿ ಗೊಡದೆ, ಅವನಿಗೆ ಬೆನ್ನು ಹಾಕಿದರು. ಕ್ರಿ. ಶ. 1544ನೇ ವರುಷ ಅವನು ಅಲ್ಲಿಯ ಕೆಲವರು ಯೌವನಸ್ಥರಾದ ಕ್ರೈಸ್ತರೆಂಬವರನ್ನು ಕರ ಕೊಂಡು, ಗೋವೆಗೆ ಮರಳಿ, ಅವರನ್ನು ಶಾಲಾಶಿಕ್ಷೆಯಲ್ಲಿಟ್ಟು, ತಾನು ಬಹಳ ತಡೆಯದೆ, ಮಧುರಾಶೀಮೆಯ ಪರವರೆಡೆಗೆ ತಿರುಗಿ ಹೋದನು. ಅದು ವಿನಹ ಲಂಕಾದ್ವೀಪದ ಪರವರೊಳಗೂ ಅವನು ಅಂದು ತನ್ನ ವೃತ್ತಿ ಗೇಯುವವನಾದನು; ಅವನಿಗೆ ಸುಮಾರು 30 ವರುಷ ಮುಂದಾಗಿ ಇತರ ಪೊರ್ತುಗೀಸರು ಆ ದ್ವೀಪದ ಸಿಂಗಳರೆಂಬವರಲ್ಲಿ ಪಪ್ಪಕ ಧರ್ಮದ ವಿಸ್ತಾರಕರಾಗಿದ್ದರು. ಅವನು ಆಗಲಾದರೂ ಆಯಾ ಜನರ ಭಾಷೆ ತಿಳಿಯದವನಾಗಿರುವದರಿಂದ ಮಕ್ಕಳಿಗೆ ಸ್ನಾನ ಕೊಡುವದೇ ಮಾತ್ರ ಅವನ ಕೆಲಸವು. ಈ ಮಕ್ಕಳಲ್ಲಿ ಪಪ್ಪಕಮತಾವಲಂಬಿಗಳಾಗದಿದ್ದವರವುಗಳು ಸಹ ಅನೇಕ; ಹ್ಯಾಗಂದರೆ ಅವನು ಒಬ್ಬ ವೈದ್ಯಗಾರನಂತೆ ವೇಷ ತೊಟ್ಟು, ಬಡ ಹೆತ್ತವರಿಗೆ ಔಷಧದ ಗುಳಿಗೆಗಳನ್ನಾಗಲಿ ತುಸ ಹಣವನ್ನಾಗಲಿ ಕೊಟ್ಟು, ರೋಗದಲ್ಲಿ ಬಿದ್ದಿರುವ ಕೂಸನ್ನು ಪರೀಕ್ಷಿಸಿ, ಹ್ಯಾಗೂ ಬದುಕಲಾರದೆಂದು, ಕಂಡರೆ ಅದಕ್ಕೆ ನೀರಿನ ಕೆಲವು ಹನಿಗಳನ್ನು, ಕ್ಷೇಮಕ್ಕೆ ಒಳ್ಳೇದೆಂದು, ಚಿಮಿಕಿಸಿ, ಪರಿಶುದ್ಧ ಸ್ನಾನದ ಸ್ಥಾಪನಾವಾಕ್ಯಗಳನ್ನು ಮೊರಮೊರೆಯುತ್ತಾ ಹೇಳಿ, ಹೀಗೆ ಗೋಪ್ಯ ಸ್ನಾನವಿತ್ತು, ಆ ಕೂಸಿಗೆ ಸ್ವರ್ಗಪ್ರಾಪ್ತಿಯೆಂದು, ಭಾವಿಸಿ ಕೊಳ್ಳುವನಂತೆ[1]. ಇನ್ನು ಅದೇ ವರುಷದಲ್ಲಿ ತಿರುವಾಂಕೋಡಿನ ತಂಬಿರಾನ್ ಅಂದರೆ ರಾಜನು ಕ್ಷಾವೇರನ ಮತ್ತು ಪೊರ್ತುಗೀಸ ಅಧಿಕಾರಸ್ಥರ ಬಿನ್ನಹಕ್ಕೊಳಗಾಗಿ, ಕ್ಷಾವೇರನಿಗೆ, ತನ್ನ ರಾಜ್ಯದಲ್ಲಿ ಪ್ರಸಂಗಿಸ ಬಹುದೆಂದು, ಅಪ್ಪಣೆ ಪಾಲಿಸಿ, ಸಮುದ್ರತೀರದಲ್ಲಿ ದೇವಾಲಯಗಳನ್ನು ಕಟ್ಟಿಸುವ ಉದ್ದಿಶ್ಯ ಅವನ

1) Lordship Doctor Perochem.

ಕೈಯಲ್ಲಿ 2,000 ರೂಪಾಯಿ ಕೊಟ್ಟನು[1]. ದಿನ ಹೋಗುತ್ತಿರುವಾಗ ಆ ರಾಜನು ಅವನಿಗೆ ಹೆಚ್ಚು ಮೆಚ್ಚುವವನಾದನು. ಅದು ಹ್ಯಾಗಂದರೆ, ಆ ಸಮಯ ವಿಜಯ ನಗರದ (ಆನೆಗುಂದಿಯ) ರಾಮರಾಜನು[2] ದಕ್ಷಿಣಪಥದ ಮೇಲೆ ಸಕಲ ಅಧಿಕಾರವನ್ನು ಆಕ್ರಮಿಸಲೊಡ್ಡಾಡಿ, ಅದರ ತೆಂಕಣ ಭಾಗದ ಮೇಲೆ ಬಲಾತ್ಕಾರದಿಂದ ತೆರಿಗೆ ಎತ್ತುವವರನ್ನು ಕಳುಹಿಸುತ್ತಿರಲು, ಇವರು ಅಲ್ಲಿಯ ಪಪ್ಪಕ ಕ್ರೈಸ್ತರ ಮೇಲೆ ಸಹ ಬಿದ್ದು, ಲೂಟಿ ಮಾಡಿ, ಅನೇಕರನ್ನು ಕೊಲ್ಲುತ್ತಾ ಇರುವ ಕಾರಣ ಕ್ಷಾವೇರನು ಆ ಬಡಗರು ಇನ್ನು ಮುಂದೆ ಬಹು ಕೇಡು ಗೈಯದಂತೆ ತಕ್ಕ ಯುಕ್ತ್ಯುಪಾಯಗಳನ್ನು ನಡಿಸಿದನು[3]; ಆ ತಂಬಿರಾನ್, ತನ್ನ ಶತ್ರುಗಳಿಗೆ ಹಾಗೆ ಅಟಕವಾಯಿತೆಂತ, ಸಂತೋಷಿಸಿ, ದೇಶಕ್ಕೆ ಉಪಕಾರಿಯಾದ ಆ ಕ್ಷಾವೇರನ ಪ್ರಸಂಗವನ್ನು ತಕ್ಕಂತೆ ಆಲೈಸಿ ಕೊಳ್ಳಿರೆಂದು, ತನ್ನ ಪ್ರಜೆಗೆ ಆಜ್ಞಾಪಿಸಿದನು. ಸ್ವಲ್ಪ ಕಾಲಕ್ಕೀಚೆ ಆ 1544ನೇ ವರುಷದಂತದಲ್ಲಿ ಕ್ಷಾವೇರನು ಕಾಲುನಡೆಯಾಗಿ ತಿರುವಾಂಕೋಡಿಗೆ ಹೋಗಿ, ಇಲ್ಲಿ ಸಹ ಮೀನುಗಾರರಲ್ಲಿ ಪಪ್ಪಕ ಮತವನ್ನು ಸಾರುತ್ತಿರಲು, ಅವರಲ್ಲಿ ಹೇರಳರು, ತಮ್ಮ ರಾಜನ ಅಪ್ಪಣೆ ಎಂತ, ನೆನಸಿ, ಸ್ನಾನ ಹೊಂದಿದರು; ಅವನು ಒಂದೇ ತಿಂಗಳೊಳಗೆ ಆ ರೀತಿ ಹಿರಿ ಕಿರಿಯರಲ್ಲಿ 30,000ಕ್ಕಿಂತ ಹೆಚ್ಚು ಸಂಖ್ಯೆಯವರನ್ನು ಕ್ರೈಸ್ತರಾಗ ಮಾಡಿದನಂತೆ.

ಕ್ರಿ. ಶ. 1547ನೇ ವರುಷ ಅವನು, ಪಪ್ಪಕ ಮತಕ್ಕೆ ಶೇರಿದ ಹಿಂದು ದೇಶದವರಲ್ಲಿ ಯಾರೂ ನಿಜ ಭಕ್ತರಾಗಲಿಲ್ಲ ಮತ್ತು ಎಂದೂ ಆಗಲಾರದಂತೆ ಕಾಣಿಸುತ್ತದೆ! ಎಂತ, ಪೂರಾ ದಿಂಡು ಗೆಟ್ಟು, ಬೇಸತ್ತು, ಹಿಂದು ದೇಶವನ್ನು ಬಿಟ್ಟು[4], ನಿಪೊಜ್ ದ್ವೀಪಕ್ಕೆ ಹೋಗಿ, 5 ವರುಷದ ಬಳಿಕ ಚೀನಕ್ಕೆ ಪಯಣ ಮಾಡಲು, ಕಂತೊಜ್ ಪಟ್ಣದ ಹತ್ತರದ್ದೊಂದು ದ್ವೀಪದಲ್ಲಿ ಮಡಿದನು. 15ನೇ ಗ್ರೆಗೋರನೆಂಬ ಆ ಪಪ್ಪನು[5] ಕ್ಷಾವೇರನು ಹತ್ತು ದೊಡ್ಡ ಅದ್ಭುತಕಾರ್ಯಗಳನ್ನು ಗೈದನೆಂತ, ಹೇಳುವ ಮಾತಿನ ಕಿಂಚಿತ್ತೂ ಸೂಚನೆಯಾದರೂ ಅವನ ಸ್ವಂತ ಹಸ್ತದ ಪತ್ರಿಕೆಗಳಲ್ಲಿ ಇರುವದಿಲ್ಲ, ಪರಭಾಷೆಗಳನ್ನು ಕಲಿಯುವ ವರವು ಸಹ ಅವನಿಗಿರಲಿಲ್ಲ, ತನ್ನ ಸ್ವಂತ ಪತ್ರಿಕೆಗಳ ಪ್ರಕಾರ ಅವನು ಮುಖ್ಯವಾಗಿ ಅಂತೋನಿಯನೆಂಬವನೊಬ್ಬ ದ್ವಿಭಾಷಿಯ ಮುಖದಿಂದ ಉಪದೇಶವನ್ನೀಯುತ್ತಿದ್ದನು.

---

1) Cf. Venn, p. 58. 2) Râma Râja reigned from 1542 to 1564, but was not of age in the first years of his reign. A. D. 1564 he fought against the Mohammadans at Talikôte when he was defeated in such a manner that henceforth Vijayanagara rapidly declined. Talikôte is situated to the North of the river Krishna, not far from its northern bank, and to the S. E. of Bijapoor. 3) Xavier's letters apud Venn. 4) Letters of Xavier to F. Mansilla and Letters by the Abbé Dubois. 5) 513ನೇ ಪಾನು.

ಅಷ್ಟರೊಳಗೆ ವಿಶೇಷವಾಗಿ ಕ್ರಿ. ಶ. 1548ನೇ ವರುಷ ಪಪ್ಪಕ ಕ್ರೈಸ್ತತ್ವವು ಹೆಚ್ಚಾಗಿ ಯೇಸುವಿತರ ಮೂಲಕ ಗೋವೆಯ ಪಟ್ಟದಲ್ಲಿಯೂ ದ್ವೀಪದಲ್ಲಿಯೂ ಪ್ರಬಲವಾಗಿತ್ತು[1]. ಕ್ರಿ. ಶ. 1560ನೇ ವರುಷಕ್ಕೆ ಅಲ್ಲಿ ಗುಪ್ತವಿಚಾರಕರದೊಂದು ಸ್ಥಾನವು ನಿರ್ಮಿತವಾಯಿತು[2]; ಕಾಲಗತಿಯಲ್ಲಿ ಪಪ್ಪನಿಗೆ ವಿರೋಧವಾಗಿ ಏನೊಂದು ಮಾತನ್ನು ಆಡುವಂಥ ಅನೇಕರು ಆ ಸ್ಥಾನದವರ ಅಪ್ಪಣೆಯ ಮೇಲೆ ಚಿತಿಯಲ್ಲಿ ಸಜೀವವಾಗಿ ದಗ್ಧರಾಗುತ್ತಿದ್ದರು. ಗೋವೆಯಲ್ಲಿ ಹೇರಳರು ಪಪ್ಪಕ ಕ್ರೈಸ್ತತ್ವವನ್ನವಲಂಬಿಸಿದ್ದಕ್ಕೆ ಯೇಸುವಿತರ ಮತ್ತು ಬೇರೆ ಬೇರೆ ಜನ ಮತೋದ್ಯೋಗಿಗಳ ಮತ್ತು ಅಧಿಕಾರಸ್ಥರ ಉಗ್ರತ್ವವೇ ಮುಖ್ಯ ಕಾರಣವು; ಮೊಹಮ್ಮದಿಯರೂ ಕೊಂಕಣಸ್ಥರಾದ ಹಿಂದು ಧರ್ಮದವರೂ ಗೋವೆಯಲ್ಲಿರ ಬಹುದಾದಾಗ್ಯೂ ಅವರು ತಮ್ಮ ತಮ್ಮ ಧರ್ಮದ ಯಾವದೊಂದು ಆಚಾರವನ್ನು ಬಹಿರಂಗದಲ್ಲಿ ನಡಿಸಲಾರರು[3].

ಗೋವೆಗೆ ಮೊದಲಿನ ಮತೋದ್ಯೋಗಿಗಳು ಬಂದು ಮುಟ್ಟಿದ ಕ್ಷಣವೇ ಅವರು, ಮಲಯಾಳದ ಸುರಿಯಕ ಕ್ರೈಸ್ತರು ಬರೇ ಕಥರರೆಂತ, ಹೇಳಿ, ಅವರನ್ನು ಪಪ್ಪಕರಾಗ ಮಾಡಲಿಕ್ಕೆ ಪ್ರಯತ್ನಿಸುವವರಾದಲ್ಲಿ ಆ ಕ್ರೈಸ್ತರು ಪಪ್ಪಕತ್ವಕ್ಕೆ ಬೆನ್ನು ಹಾಕಿದರಷ್ಟೇ. ಆದಾಗ್ಯೂ ಪಪ್ಪಕರು ಬೇಸರದೆ, ಬಲುಮೆಯಿಂದ ಅದೇ ಯತ್ನಗೇಯುತ್ತಾ ಬರಲು, ಕೊಚ್ಚಿ ಶೀಮೆಯ ಆಂಗಮಲೆಯಲ್ಲಿರುವ ಮಾರ್ ಥೋಮನೆಂಬ ಸುರಿಯಕ ಅಧ್ಯಕ್ಷನು ತನ್ನ ಉದ್ಯೋಗದಲ್ಲಿ ಭದ್ರವಾಗಿರುವದಕ್ಕೋಸ್ಕರ ಒಮ್ಮೆ ಸುರಿಯಕರಿಗೆ ಒಮ್ಮೆ ಪಪ್ಪಕರಿಗೆ ಶೇರುತ್ತಿದ್ದನು. ಅವನು ಕ್ರಿ. ಶ. 1566ನೇ ವರುಷ ಮಗುಳೊಂದು ಸಾರಿ ಪಪ್ಪಕ ಮತಕ್ಕಲ್ಲ ಸುರಿಯಕ ಮತಕ್ಕನುಸಾರವಾಗಿಯೇ ಬೋಧಿಸಿದ್ದು ಗೋವೆಯ ಪ್ರಧಾನಾಧ್ಯಕ್ಷನಿಗೆ ಸುದ್ದಿಯಾದಾಗ ಇವನು ಅದನ್ನು ಪೊರ್ತುಗಲು ದೇಶದ ಮತೋದ್ಯೋಗಿಗಳ ವಿಚಾರಣಸ್ಥಾನದವರಿಗೆ ತಿಳಿಸಲು, 5ನೇ ಪಿಯ ಪಪ್ಪನು[4] ಅವರ ಪ್ರಸ್ತಾವದ ಮೇರೆಗೆ ಮರುವರುಷ—ಮಾರ್ ಥೋಮನನ್ನು ಚನ್ನಾಗಿ ವಿಚಾರಿಸ ಬೇಕು; ಆ ಮಹಾ ಪಾತಕದ ಅಪರಾಧವು ಅವನ ಮೇಲೆ ಸ್ಥಾಪಿತವಾದರೆ ಅವನನ್ನು ಶೆರೆ ಹಿಡಿದು, ರೋಮಪುರಕ್ಕೆ ಕಳುಹಿಸ ಬೇಕು! ಎಂದು, ಆಜ್ಞೆ ಬರೆದು, ಗೋವೆಯವರಿಗೆ ಮುಟ್ಟಿಸಿದನು. ತರುವಾಯ ಪಪ್ಪಕರು ಆ ಸುರಿಯಕ ಅಧ್ಯಕ್ಷನನ್ನು ಹಿಡಿದು, ರೋಮಕ್ಕೆ ಕಳುಹಿಸಿದಂದು ಅವನು ಅಲ್ಲಿಯೇ ಸತ್ತನು. ಆ ಪಪ್ಪನು ಅವನನ್ನು ಕೊಲ್ಲಿಸಿದಂತೆ ಕಾಣುತ್ತದೆ; ಯಾಕಂದರೆ ಪಪ್ಪಕ ಮತಕ್ಕೆ ಕೊಂಚವಾದರೂ ಸಮ್ಮತಿಸದಂಥ ಒಬ್ಬೊಬ್ಬನಿಗೆ ಮರಣಾಜ್ಞೆ

1) Cott. pp. 57; 59. 2) Cott. p. 61. 3) Cott. pp. 107; 108; pp. 15; 20.
4) 474, 484, 493, 494, 505ನೇ ಪಾನು.

ಮಾಡುವಷ್ಟು ಕ್ರೂರತ್ವವು ಅವನಲ್ಲಿತ್ತು; ಅವನ ಆಳ್ತನದಲ್ಲಿ ರೋಮದೊಳಗೆ ದಿ
ನಂಪ್ರತಿ ಹಲವರು ಸೌವಾರ್ತಿಕರನ್ನು ಸಜೀವವಾಗಿ ದಹಿಸುತ್ತಾ, ಅಥವಾ ಉ
ರ್ಲು ಕೊಡುತ್ತಾ, ಅಥವಾ ತಲೆ ಕಡೆಯುತ್ತಾ ಇದ್ದರು[1].

ಕ್ರಿ. ಶ. 1578ನೇ ವರುಷ ಬಾಗ್ದಾದಿನ ಪತ್ರಿಯರ್ಖನು ಆ ಮಾರ್ ಥೋಮನ
ಉತ್ತರೋದ್ಯೋಗಿಯಾದ ಮಾರ್ ಅಬ್ರಹಾಮನೆಂಬ ಸುರಿಯಕ ಅಧ್ಯಕ್ಷನ ವಿನಂ
ತಿಯನ್ನು ಮನಸ್ಸಿನಲ್ಲಿಟ್ಟು ಕೊಂಡು, ಮಾರ್ ಸಿಮೆಯೋನನೆಂಬ ಒಬ್ಬ ಯೌವನಸ್ಥ
ಮತೋದ್ಯೋಗಿಯನ್ನು ಮಲಯಾಳಕ್ಕೆ ಕಳುಹಿಸಿದನು. ಇವನು ಕಡು ಸುರಿಯ
ಕನಾದ್ದಲ್ಲದೆ ಅನೇಕ ಕ್ರೈಸ್ತರು ಅವನಿಗೆ ಒಲುಮೆ ತೋರಿಸುತ್ತಿದ್ದ ಕಾರಣ ಕೆಲವ
ರು ಫ್ರಂಕ್ಸಿಸ್ಕಾನರು[2] ಸ್ನೇಹಿತರ ವೇಷವಾಂತು, ಅವನ ಬಳಿಗೆ ಬಂದು—ನೀವು ರೋ
ಮಕ್ಕೆ ಹೋಗಿ, ನಿಮ್ಮ ಅಧ್ಯಕ್ಷೋದ್ಯೋಗ ಸ್ಥಿರ ಪಡಿಸದಿದ್ದರೆ ಪೊರ್ತುಗೀಸರ ಒ
ಪ್ಪಿಗೆಯು ನಿಮಗೆಂದೂ ಬರಲಿಕ್ಕಿಲ್ಲವೆಂತ, ಹೇಳಿ, ನಾನಾ ವಿಧದಿಂದೊಡಂಬಡಿಸಲಿ
ಕ್ಕೆ, ಅವನು ಇನ್ನು ಅದೇ ವರುಷ ಗೋವೆಗೆ ಹೋಗಿ, ಅಲ್ಲಿಂದ ಪೊರ್ತುಗಲಿಗೆ ಗ
ಮಿಸಿದನಂತರ ಅವನನ್ನು ರೋಮಕ್ಕೆ ಸಾಗಿಸಿದರು. ಅಲ್ಲಿ ಗುಪ್ತವಿಚಾರಕರು ಅವ
ನನ್ನು ಪರೀಕ್ಷಿಸಲು, ಅವನು ನೆಸ್ತೊರಿಯಾನನೆಂತ, ಕಂಡು ಬಂತು. ಆಗಲವರು,
ಆ ಮಹಾ ಕಥರತ್ವವೆಂಬದನ್ನು ಈ ಕ್ಷಣವೇ ಬಿಟ್ಟು ಬಿಡಿರೆಂತ, ಅವನಿಗೆ ದುಡುಕು
ಮಾಡಿ, ಹೀಗೆ ಬಹಿರಕ್ಕೆ ಅಲ್ಲಗಳೆಸಲಿಕ್ಕೆ ಸಮರ್ಥರಾಗಿ, ಒಂದು ಮಠದೊಳಗೆ
ಅವನನ್ನು ಮುಚ್ಚಿ ಬಿಟ್ಟರು. ಸ್ವಲ್ಪ ಕಾಲಕ್ಕೆ ಈಚೆ 5ನೇ ಸಿಕ್ಸ್ತ ಪಪ್ಪನು[3] ಅವನ
ಅಧ್ಯಕ್ಷೋದ್ಯೋಗ ತೆಗದು, ಸ್ಪಾನಿಯಕ್ಕೆ ಕಳುಹಿಸಿದನು. ಅಲ್ಲಿ ಅವನನ್ನು ಫ್ರೇ
ಅಲೆಕ್ಸಿಸ್ ದೇ ಮೆನೇಜೆಸ್ ಎಂಬ ಔಗುಸ್ತೀನ[4] ಮಠಿಕಕುಲದವನ ಶಿಕ್ಷೆಯಲ್ಲಿಡ
ಲು, ಇವನು ಅವನನ್ನು ಪೊರ್ತುಗಲಿನ ಲಿಸಬೊನು ಪಟ್ಣದ[5] ಒಂದು ಮಠದ ಶೆರೆ
ಯೊಳಿರಿಸಿದಲ್ಲಿ ಅವನು ಮಡಿದನು; ಸಹಜ ಮರಣದಿಂದಲೋ? ಏನೋ? ಅದು
ಅಷ್ಟು ತಿಳಿದು ಬರಲಿಲ್ಲ; ಆದರೆ ಮಾರ್ ಸಿಮೆಯೋನನು ಜೀವಾಂತದ ವರೆಗೂ
ದೃಢ ನೆಸ್ತೊರಿಯಾನನಾಗಿದ್ದದು ಪೂರ್ಣ ನಿಶ್ಚಯವೇ.

ಕ್ರಿ. ಶ. 1595ನೇ ವರುಷ 8ನೇ ಕ್ಲೇಮೆಂತ ಪಪ್ಪನು[6] ಆ ಅಲೆಕ್ಸಿಸ್ ದೇ ಮೆ
ನೇಜೆಸ್ ಎಂಬವನಿಗೆ, ನಿಮಗೆ ಯೋಗ್ಯ ಕಾಣುವಂತೆಯೇ ಮಲಯಾಳದಲ್ಲಿ ಸ
ಕಲ ಕಾರ್ಯಗಳನ್ನು ನಡಿಸಿರೆಂದು, ಆಜ್ಞಾಪಿಸಿ, ಪ್ರಧಾನಾಧ್ಯಕ್ಷನೆಂದು, ಅವನ
ನ್ನು ಗೋವೆಗೆ ಕಳುಹಿಸಿದನು. ಮೆನೇಜೆಸ್ ಅಲ್ಲಿಗೆ ಹೋಗಿ ಮುಟ್ಟುತ್ತಲೇ ಸುರಿ

1) La Croze's Histoire du Christianism des Indes; Rancke; M'Crie; Gerdesii Italia reform. 2) 350ನೇ ಪಾನು. 3) 470, 510ನೇ ಪಾನು. 4) 350ನೇ ಪಾನು. 5) 466ನೇ ಪಾನು. 6) 466, 471ನೇ ಪಾನು.

ಯಕ ಸಭೋದ್ಯೋಗಿಗಳ್ಯಾರೂ ಇನ್ನು ಮುಂದೆ ಬಾಗ್ದಾದಿನಿಂದ ಮಲಯಾಳಕ್ಕೆ ಬಾರದಂತೆ ತಕ್ಕ ಉಪಾಯ ಗೈದು, ಕ್ರಿ. ಶ. 1598ನೇದರಲ್ಲಿ ತಾನು ದಕ್ಷಿಣಕ್ಕೆ ಹೊರಟು, ಮರುವರುಷ ಕೊಚ್ಚಿಯಲ್ಲಿ ಶೇರಿ, 95,000 ರೂಪಾಯಿಗಳ ಲಂಚದಿಂದ ಅಲ್ಲಿಯ ರಾಜನನ್ನು ತನ್ನ ಪಕ್ಷದವನಾಗ ಮಾಡಿ ಕೊಂಡು[1], ಇನ್ನು ಅದೇ ವರುಷ ತರ್ಜನಗಳಿಂದಲೂ ಯುಕ್ತಿಯಿಂದಲೂ ಕಪಟೋಪಾಯಗಳಿಂದಲೂ ಇತರ ಲಂಚಗಳಿಂದಲೂ ವಾಗ್ದತ್ತಗಳಿಂದಲೂ ಸುರಿಯಕರ ಗೆಯೋರ್ಗನೆಂಬ ಪ್ರಧಾನ ಸಭಾಸೇವಕನನ್ನು ತನ್ನೊಳಗೆಳೆಯಲಿಕ್ಕೆ ಕೂಡಿತು. ಈ ಗೆಯೋರ್ಗನು ಅಂದು ಕ್ರೈಸ್ತ ಸಭೆಗಳ ಮುಖ್ಯಸ್ಥನು; ಯಾಕಂದರೆ ಅಧ್ಯಕ್ಷನು 2 ವರುಷಕ್ಕೆ ಮುಂಚೆ ಸತ್ತಿದ್ದನು. ಮೆನೇಜೆಸಿನ ತಂತ್ರದ ಮೇಲೆ ಅವನು, ಪಪ್ಪನವರಿಗೂ ನೆಸ್ತೊರಿಯನವರಿಗೂ ಅನ್ಯೋನ್ಯವಾಗುವ ಹಾಗೆ ಕೊಚ್ಚಿ ಪಟ್ಣದ ಹತ್ತರದಲ್ಲಿರುವ ಉದಯಂಬೂರಿನಲ್ಲಿ ಕೂಡಿ ಬರ ಬೇಕೆಂದು, ಓಲೆಗಳನ್ನು ಬರೆದು, ತನ್ನ ಕೆಳಗಿನ ಸಭೋದ್ಯೋಗಿಗಳಿಗೆ ಮುಟ್ಟಿಸಿದನು. ಕ್ರಿ. ಶ. 1599ನೇ ವರುಷದ ಜೂನ್ ತಿಂಗಳಿಗೆ ಅಲ್ಲಿ ನೆರೆಯುವ ಸಭೆಗೆ ಅನೇಕ ಪಪ್ಪಕ ಸಭೋದ್ಯೋಗಿಗಳಲ್ಲದೆ ಕೊಚ್ಚಿಯ ಪೊರ್ತುಗೀಸ ಅಧಿಪತಿಯೂ ಪೊರ್ತುಗೀಸ ಭಂಡಾರದ ಆಡಳಿತೆಗಾರರೂ ಕೊಚ್ಚಿಯ ಪೊರ್ತುಗೀಸ ಮಂತ್ರಿಸಭೆಗೆ ಶೇರಿದ ಸಮಸ್ತರೂ ಬಹಳ ಮಂದಿ ಪೊರ್ತುಗೀಸರಾದ ದೊಡ್ಡ ಸಾವಕಾರರೂ ಸಹವಾಗಿ ಬಂದರು; ಆ ಸಭೆಯು ಒಟ್ಟಿಗೆ 813 ಸಂಖ್ಯೆಯವರದು. ಆ ಸಾವಕಾರರು, ಸುರಿಯಕರ ಸಂಗಡ ಐಕ್ಯವಾದರೆ ಅವರಿಂದ ತಮ್ಮ ವ್ಯಾಪಾರಕ್ಕೆ ಬೆಳವಣಿಗೆ ಬಂದೀತೆಂತ, ನೆನಸುವಲ್ಲಿ ಆ ಪೊರ್ತುಗೀಸ ಅಧಿಕಾರಸ್ಥರು, ಸುರಿಯಕರು ಎತ್ತಿಡ ಬಹುದಾದ 30,000 ಮಂದಿ ಯುದ್ಧಶಾಲಿಗಳಿಂದ ಹಿಂದು ದೇಶದಲ್ಲಿ ತಮ್ಮ ಅಧಿಕಾರವನ್ನು ಘಟ್ಟಿಯಾಗಿ ನೆಡ ಬಹುದೆಂದು, ಯೋಚಿಸಿದರು[2].

ಮೆನೇಜೆಸ್ ಆರಂಭಕ್ಕೆ ಆ ಸಭೆಯಲ್ಲಿ ಬಾಗ್ದಾದಿನ ಪತ್ರಿಯರ್ಖನಿಗೂ ನೆಸ್ತೊರಿಯನೆಂಬ ಬೋಧಕನಿಗೂ ಶಾಪವಿಕ್ಕಿ, ಪಪ್ಪನಿಗೂ ಗುಪ್ತವಿಚಾರಕರಿಗೂ ವಿಧೇಯರಾಗಿರ ಬೇಕೆಂತ, ಪ್ರಸಂಗಿಸಿದ ತರುವಾಯ ತನ್ನ ಪರಿಚಾರಕರಾದ ಮತಕರಾಜಕ ಜನರ ಗೌರವವುಳ್ಳ ಭಾವ ಭಾಷಣಗಳ ಬಲದಿಂದ ಸುರಿಯಕರ ಎದೆಗೆಡಿಸಿ, ಇವರಿಗೆ ಎಂದಾದರೂ ಸುದ್ದಿಯಾಗದಿದ್ದಂಥ ಪಪ್ಪಕ ಅಬದ್ಧ ಬೋಧನೆಗಳುಳ್ಳದ್ದೊಂದು ಪತ್ರಕ್ಕೆ ಒಪ್ಪಿತ ಹಾಕಿಸಿದನು; ಆ ಬೋಧನೆಗಳು ಯಾವವಂದರೆ—ವಸ್ತುಪರಿಣಾಮ, ಪ್ರತಿಮಾಪೂಜೆ, ಸಂತದ್ವಾರಾ ವಿಜ್ಞಾಪನೆ, ಶುದ್ಧೀಕರಣಾಗ್ನಿ, ಪ್ರಾಣಿಮಿಸ್ಸಯಾಗ, ಅಂತತೈಲಾಭಿಷೇಕ, ಶ್ರವನಿವೇದನ, ಸಭೋದ್ಯೋಗಿಗಳ ಅವಿ

1) La Croze. 2) Geddes.

ವಾಹಿತ್ವಾಜ್ಞೆ, ಸಾಂಪ್ರದಾಯಿಕ ವಾಕ್ಯಗಳ ಮತ್ತು ಸಭಾಸಂಘಗಳ ನಿರ್ಣಯಗಳ ಮತ್ತು ವುಲ್ಗಾತದ ಮತ್ತು ಪ್ರೀಸ್ತರ ಭಾಷ್ಯದ ದಿವ್ಯ ಪ್ರಮಾಣ, ಪಪ್ಪಕತ್ವ, ಇವು ಮುಂತಾದದ್ದು[1].

ಆ ಸಭೆಯ ಸುರಿಯಕರು ನಾನಾ ಪ್ರಕಾರವಾಗಿ ಗುಣುಗುಟ್ಟದಿರಲಿಲ್ಲ; ಆದರೂ ಆ ದೊಡ್ಡ ಮಾರ್ಬಲದ ದೆಸೆಯಿಂದ ಅವರಲ್ಲಿ ಯಾರೂ ಘಟ್ಟಿಗತನದೊಡನೆ ಎದುರಿಸಲಿಕ್ಕೆ ಧೈರ್ಯ ಪಡಲಿಲ್ಲ; ಕೆಲವರು ರಾಜಕ ಅಧಿಕಾರಸ್ಥರು ಬಲಾತ್ಕಾರವನ್ನು ಸಹ ನಡಿಸಿದ ಹಾಗೆ ತೋರುತ್ತದೆ[2]. ಬಳಿಕ ಮೆನೇಜೆಸ್ ಶಿಕ್ಕುವಷ್ಟು ಪ್ರಾಚೀನ ಸುರಿಯಕ ಗ್ರಂಥಗಳನ್ನು ತರಿಸಿ, ಹಲವನ್ನು ಪಪ್ಪಕ ಅರ್ಥ ಕೂಡಿಸಿ ಬದಲಾಯಿಸಿ, ಹಲವನ್ನು ಸುಟ್ಟು, ತ್ರಿಯೇಕ ದೇವರ ನಾಮದಲ್ಲಿ ಪರಿಶುದ್ಧ ಸ್ನಾನ ಹೊಂದಿದಂಥವರೆಂದು, ಲಕ್ಷಿಸದೆ[3], ಅನೇಕ ಮಂದಿ ಸುರಿಯಕ ಸಭೋದ್ಯೋಗಿಗಳಿಗೂ ಸಭ್ಯರಿಗೂ ತನ್ನ ತರದ ಸ್ನಾನ ಕೊಟ್ಟು, ಅನೇಕ ಸಭೋದ್ಯೋಗಿಗಳನ್ನು ಸತಿಯರಿಂದ ತೊಲಗಿಸಿ, ಇನ್ನು ಅದೇ ವರುಷ ಗೋವೆಗೆ ಮರಳಿದನು. ಅಲ್ಲಿಗೆ ಹೋಗುತ್ತಿರುವ ದಾರಿಯಲ್ಲಿ ಅವನು ತೌಳವ ಮತ್ತು ಹವಿಕ ತೀರದಲ್ಲಿ ಪೊರ್ತುಗೀಸರಿಗಿದ್ದ ಬೇರೆ ಬೇರೆ ಭಂಡಸಾಲೆಗಳನ್ನು ನೋಡಿ, ಮುನ್ನಡೆದನು; ಆ ಭಂಡಸಾಲೆಗಳಲ್ಲಿ, ಹಿಂದೆ ಹೇಳಿರುವಂತೆ, ಮಂಗಳೂರು ಬಸರೂರು ಹೊನ್ನಾವರ ಎಂಬ ಈ 3 ಸ್ಥಳಗಳವುಗಳು ಮುಖ್ಯಗಳು.

ಆ ವೇಳೆಗಾದರೂ ಹ್ಯಾಗೂ ಹೊನ್ನಾವರದಲ್ಲಿ ಪಪ್ಪಕ ಕ್ರೈಸ್ತರಾದ ಹಿಂದುದೇಶಜರು ಇದ್ದರು. ಈ ಊರಿನವರು ವಿಗ್ರಹಾರಾಧಕರ ದೊಡ್ಡ ಹಬ್ಬಗಳಿಗೆ ಅನೇಕಾವರ್ತಿ ಹೋಗಿ ಬರುತ್ತಿರುವ ಕಾರಣ ಮೆನೇಜೆಸ್ ಅವರಿಗೆ ಬೆದರಿಸ ಬೇಕಾಯಿತು; ಅವರು ಕೊಂಕಣಸ್ಥರಲ್ಲಿ ಈಗ ಕ್ರಿಸ್ತಾನರೆಂಬ ಹೆಸರು ಹೊಂದಿದಂಥವರೊಳಗಿನವರೇ. ಹ್ಯಾಗಂದರೆ ಆಗ ಗೋವೆಯಲ್ಲಿ ಕೊಂಕಣಸ್ಥರೊಳಗೆ ಪಪ್ಪಕರಾದವರಲ್ಲಿ ದೊಡ್ಡ ಭೂಮಿವಾಳರಲ್ಲದಂಥವರು ಉಪ್ಪನ್ನು ಉತ್ತರಕ್ಕೂ ದಕ್ಷಿಣಕ್ಕೂ ಒಯಿದು, ಮಾರುತ್ತಿದ್ದರು; ಅದು ಅಲ್ಲಿ ಬಹಳವಾಗಿ ಬೆಳದು, ಅಘ್ಘವಾಗಿಯೂ ಇತ್ತು; ಇನ್ನು ಕ್ರಿ. ಶ. 1812ನೇ ವರುಷಕ್ಕಾದರೂ ತಕ್ಕಷ್ಟು ಉಪ್ಪು ಗೋವೆಯಿಂದ ರಫ್ತಾಯಿತು[4]. ಅದು ಹೊರ್ತಾಗಿ ಆ ತರದ ಪಪ್ಪಕರು ಪೊರ್ತುಗೀಸರು ಆಮದು ಮಾಡುವ ವಿಲಾಯತೀ ಜೀನಸುಗಳನ್ನು ಅತ್ತಿತ್ತ ಸಾಗಿಸಿ, ವಿಕ್ರಯಿಸುತ್ತಿದ್ದರು; ಅದಲ್ಲದೆ ಅಂಥವರು ಪೊರ್ತುಗೀಸರಿಗೆ ಗೋವೆಯ ಉತ್ತರದಲ್ಲಿದ್ದ ಭೂಮಿಗಾಗಲಿ ಅದರ ದಕ್ಷಿಣದಲ್ಲಿ ಅವರಿಗಿದ್ದ ಭಂಡಸಾಲೆಗಳಿಗಾಗಲಿ ಹೋಗಿ, ಉದ್ಯೋ

1) Gouvea. 2) Cott. p. 69. 3) 165ನೇ ಪಾನು ಸರಿ ನೋಡು. 4) Cott. pp. 160; 170.

ಗಗಳನ್ನು ಪಡ ಕೊಳ್ಳುವ ರೀತಿಯಿಂದಾಗಲಿ ಸಾವಕಾರಿಕೆಯಿಂದಾಗಲಿ ಹೇರಳ ಲಾಭ ಹೊಂದುವಂತಾಯಿತು. ಈ ಪ್ರಕಾರ ಅಂಥವರು ಬೇಗ ಆಯಾ ಸ್ಥಾನಗಳಲ್ಲಿ ಸ್ಥಳವಂತಿಗರಾದರು. ಪುನಃ, ಪೊರ್ತುಗೀಸರ ಕೆಳಗಣ ಗೋವೆಯ ವಿಗ್ರಹಾರಾಧಕರಾದ ಕೊಂಕಣಸ್ಥರು ಸಹ ಅದರಂತೆಯೇ ಮಾಡುತ್ತಾ ಬಂದರು; ಇವರಿಗೆ ಬೇರೆ ಬೇರೆ ಕಡೆಗೆ ಪಸರಿಸಿ ಹೋಗುವದಕ್ಕೆ ಇನ್ನೊಂದು ಕಾರಣವೇನೆಂದರೆ, ತಮಗೆ ಗೋವೆಯಲ್ಲಿ ಮತಾಚಾರ ಮೂರ್ತಿಪೂಜಾಚಾರಗಳಿಗೆ ಅಡ್ಡಿ ಬೀಳುತ್ತಿದ್ದದ್ದೇ. ಆ ಕಾಲದಾರಭ್ಯ ಕೊಂಕಣಿಯರಾದಂಥ ಪಪ್ಪಕರೂ ಮೂರ್ತಿಪೂಜಕರೂ ಹವಿಕ ಮತ್ತು ತೌಳವ ತೀರದಲ್ಲಿ ಸಹ ಪ್ರಬಲರಾದಂತಾಯಿತು. ಬಳಿಕ ಕ್ರಿ. ಶ. 1603ನೇ ವರುಷಕ್ಕೀಚೆ ಹೊಲ್ಲಂದಿನವರು[1] ಮೂಡಣ ದಿಕ್ಕಿನ ವ್ಯಾಪಾರದ ಮುಖ್ಯಸ್ಥರಾದ ಮೇಲೆ ಗೋವೆಗೆ ಬಹಳ ಬಡತನ ಒದಗಿದದರಿಂದ[2] ಮುಂಚಿಗಿಂತ ಹೆಚ್ಚು ಮಂದಿ ಕೊಂಕಣಸ್ಥರು, ಸುಖದ ಬಾಳುವೆ ಬರುವದೆಂತ, ಗೋವೆ ಬಿಟ್ಟು, ಪಶ್ಚಿಮ ತೀರದ ತೆಂಕಣ ಕಡೆಯಲ್ಲಿ ನೆಲೆ ಗೊಂಡಂತೆ ಕಾಣಿಸುತ್ತದೆ.

ಮೆನೇಜೆಸ್ ಗೋವೆಗೆ ತಿರಿಗಿ ಮುಟ್ಟಿದ ಹಿಂದೆ ಕ್ರಿ. ಶ. 1609ನೇ ವರುಷ ಮಲಯಾಳದ ಕೊಚ್ಚಿ ರಾಜ್ಯದ ಕೊಡುಂಬಲೂರಲ್ಲಿ ಒಬ್ಬ ಪಪ್ಪಕ ಪ್ರಧಾನಾಧ್ಯಕ್ಷನನ್ನು ನೇಮಿಸಿಡಲಾಯಿತು; ಪಪ್ಪಕರೊಡ ಗೂಡಿದ ಸುಮಾರು 150,000 ಮಂದಿ ಮಲಯಾಳ ಕ್ರೈಸ್ತರು ಅವನ ಕೆಳಗಾದರು. ಕ್ರಿ. ಶ. 1607ನೇ ವರುಷದಿಂದ ಆ 1609ನೇ ದರ ವರೆಗೆ ಮೆನೇಜೆಸ್ ಗೋವೆಯಲ್ಲಿ ಪ್ರಧಾನಾಧ್ಯಕ್ಷನಾಗಿದ್ದದ್ದು ಮಾತ್ರವಲ್ಲದೆ ಬದಲಿಗೆ ಅಧಿಪತಿಯು ಸಹ ಆಗಿರುತ್ತಿದ್ದನು[3]. ಅವನು ಗೋವೆಯಲ್ಲಿರುತ್ತಿರಲು, ಯೇಸುವಿತರು ಗೋವಾರ್ಧದ್ವೀಪಕ್ಕೆ ತೆಂಕಣದಲ್ಲಿರುವ ಸಾಷ್ಟಿ ದ್ವೀಪದಲ್ಲಿ ಪಪ್ಪಕರಾಗದಿದ್ದವರನ್ನು ಮೂರ್ತಿಪೂಜೆಯಿಂದ ತೊಲಗಿಸುವದಕ್ಕೋಸ್ಕರ ಅಲ್ಲಿಯ ಸಕಲ ದೇವಸ್ಥಾನಗಳನ್ನು ಹಾಳು ಮಾಡಿದರು, ಆದರೆ ಅವರ ಅಭಿಪ್ರಾಯವು ಒದಗಲಿಲ್ಲ; ಹ್ಯಾಗಂದರೆ ಆ ಮೂರ್ತಿಪೂಜಕರು ರೋಷವುಳ್ಳವರಾಗಿ, ಕತ್ತಿ ಹಿಡಿದು, ಐವರು ಯೇಸುವಿತರನ್ನೂ ಹಲವರು ಪೊರ್ತುಗೀಸರನ್ನೂ ಕೊಂದರು. ಆಗ ಅಧಿಪತಿಯು ಆ ಸಾಷ್ಟಿಕಾರರನ್ನು ಬಲಾತ್ಕಾರದಿಂದ ಒಳ ಪಡಿಸಿ, ತಮ್ಮ ದೇವಸ್ಥಾನಗಳನ್ನು ತಿರಿಗಿ ಕಟ್ಟ ಬಾರದೆಂದು, ವಿಧಿಸಿದನು[4].—ಪೊರ್ತುಗೀಸರೂ ಅವರ ಸಹಿತದ ಪಪ್ಪಕ ಮತೋದ್ಯೋಗಿಗಳೂ ಆ ಪ್ರಕಾರ ಹಿಂದು ದೇಶದಲ್ಲಿ ಕ್ರೈಸ್ತರಿಗೂ ವಿಗ್ರಹಾರಾಧಕಾದಿ ಜನಕ್ಕೂ ತಂಟೆ ಕೊಡುತ್ತಿದ್ದರು, ಸರಿ; ಆದರೆ ಪಪ್ಪನ ಹಿಂಡಿನವರಾದ ಸ್ಪಾನಿಯದವರು 16ನೇ ಕ್ರಿಸ್ತಶತಮಾನ ಅಮೆರಿಕ ಖಂಡದ ಹೇತಿ ಮುಂತಾದ ದ್ವೀಪಗಳಲ್ಲಿಯೂ ಪಿರೂ ಮೆಕ್ಸಿಕೋ ಮೊದಲಾದ ದೇಶಗಳಲ್ಲಿಯೂ ನಡಿಸಿ

1) 472ನೇ ಪಾನು. 2) Cott. p 20 seq. 3) Cott. p. 37. 4) Cott. p. 70.

ದ ಶಾಪಕರವಾದ ಕ್ರೂರತ್ವವು ಬಹು ಹೆಚ್ಚಾಗಿದ್ದು, ವರ್ಣನಾತೀತವಾದದೇ ಎನ್ನಿಸುತ್ತದೆ; ಈ ಕಾರಣದಿಂದ ಸಹ ಆ ದಿಕ್ಕಿನಿಂದ ಸ್ಪಾನಿಯಕ್ಕೆ ಬರುತ್ತಿದ್ದ ಬೆಳ್ಳಿ ಭಂಗಾರಗಳ ಮಹಾ ರಾಶಿಗಳಲ್ಲಿ ಏನೂ ಆಶೀರ್ವಾದವಿರಲಿಲ್ಲ[1], ಅದು ಹೊರ್ತಾಗಿ ಸ್ಪಾನಿಯವು ಅಂದು ಭೂಚಕ್ರದ 3ನೇ ಭಾಗವನ್ನು ಸ್ವತಂತ್ರಿಸಿ ಕೊಂಡಿದ್ದರೂ[2] ಇಂದು ದರಿದ್ರವಾಗಿದೆ. ಒಂದೆರಡು ಮಾತುಗಳಿಂದ ಆ ಸ್ಪಾನಿಯದವರ ನಡತೆ ತೋರಿಸುವ. ಹ್ಯಾಗಂದರೆ, ಕ್ರಿ. ಶ. 1492ನೇ ಅಬ್ದ, ಗೆರ್ಮಾನಿಯದ 5ನೇ ಕರ್ಲ ಕೈಸರನ[3] ಅಜ್ಜನಾದ 2ನೇ ಫೆರ್ದಿನಂದನು ಸ್ಪಾನಿಯದ ಅರಗೋನಿಯ ಮತ್ತು ಕಸ್ತಿಲಿಯ ಎಂಬ ಆ ಉಭಯ ನಾಡುಗಳ ರಾಜನಾಗಿರಲು[4], ಅವನ ಚಾಕರಿಯಲ್ಲಿರುವ ಕೊಲುಂಬನು ಅಮೆರಿಕದ ನವದ್ರಷ್ಟೃವಾದನು[5]. ಬಳಿಕ ಆ ನೀಚ ಪಪ್ಪನಾದ 6ನೇ ಅಲೆಕ್ಸಂದರನು[6] ಆ ರಾಜನಿಗೆ—ಅಮೆರಿಕದಲ್ಲಿ ಈ ವರೆಗೆ ಹೊಸ್ತಾಗಿ ಗೊತ್ತಿಗೆ ಬಂದು ಇನ್ನು ಮೇಲೆ ಸಹ ಅಲ್ಲಿ ಗೊತ್ತಿಗೆ ಬರುವ ಸಕಲ ದೇಶಗಳನ್ನು, ಇನಾಮೆಂತ, ನಿನಗೆ ಕೊಟ್ಟೆನೆಂದು, ಉನ್ಮತ್ತ ದರ್ಪದಿಂದ ಹೇಳಿ[7], ಹೀಗೆ ಅವನನ್ನೂ ಮುಂದಿನ ರಾಜರನ್ನೂ ಆ ಕಡೆಯಲ್ಲಿ ಪಪ್ಪಕ ಧರ್ಮವನ್ನೂರಲಿಕ್ಕೆ ಹಂಗಿಗರಾಗ ಮಾಡಿದನು. ತರುವಾಯ ವಿಶೇಷವಾಗಿ ಕ್ರಿ. ಶ. 1509ನೇ ವರುಷ ಸುತ್ತ (2ನೇ ಯೂಲಿಯ ಪಪ್ಪನ[8] ಕಾಲ ಹಿಡಿದು) ಸ್ಪಾನಿಯದ ಅಧಿಕಾರಸ್ಥರು ಆ ಕಡೆಯ ಇಂದಿಯಾನರೆಂಬ ನಿವಾಸಿಗಳಲ್ಲಿ, ನೀವು ಸ್ವೇಚ್ಛೆಯಿಂದ ಪಪ್ಪಕರಾದ ಹೊರ್ತು ಅಗ್ನಿ ಖಡ್ಗಗಳೆರಡರಿಂದ ನಿಮ್ಮನ್ನು ಪಪ್ಪನಿಗೊಳ ಪಡಿಸುವೆವೆಂತ[9], ಸಾರಿಸಿ, ಅದರಂತೆ ನಡೆಯುವವರಾದರು. ಕೆಲವರು ಇಂದಿಯಾನರು ಸ್ಪಾನಿಯದವರ ಹಿಂಸೆಗೆ ಬೊಗ್ಗಲೊಲ್ಲದಿದ್ದರು; ಇವರಲ್ಲೊಬ್ಬನಾದ ಹಾತ್ವೈ ಎಂಬವನು ಕೂಬವೆಂಬ ದ್ವೀಪದಲ್ಲಿ ಒಬ್ಬ ದೇಶಾಯಿಯಾಗಿದ್ದನು. ಕ್ರಿ. ಶ. 1511ನೇ ವರುಷ ಸ್ಪಾನಿಯದವರು ಅವನನ್ನು ಕಾಳಗದಲ್ಲಿ ಗೆದ್ದು, ಹಿಡಿದು, ಅಗ್ನಿಮರಣಾಜ್ಞೆ ಗೈದು, ಚಿತೀ ಯೂಪಕ್ಕೆ ಕಟ್ಟಿರಲು, ಫ್ರಂತ್ಸಿಸ್ಕಾನ ಮಠಿಕಕುಲದವನೊಬ್ಬನು ಅವನ ಬಳಿಗೆ ಬಂದು, ನಮ್ಮ ಧ

1) 470, 471ನೇ ಪಾನು. 2) 469ನೇ ಪಾನು. 3) 424ನೇ ಪಾನು. 4) 467ನೇ ಪಾನು; ಕ್ರಿ. ಶ. 1469ನೇ ವರ್ಷ ಅವನು ಕಸ್ತಿಲಿಯ ನಾಡಿನ ಯಿಜಬೆಲಳೆಂಬ ರಾಣಿಯ ಮದುವೆ ಮಾಡಿ ಕೊಂಡಿದ್ದು, 1477ನೇದು ಹಿಡಿದು ಯಿಜಬೆಲಳ ಸಹಾಯದೊಡನೆ ಮೌರರಿಗೂ ಯೆಹೂದ್ಯರಿಗೂ ಕಥರರೆಂಬವರಿಗೂ ವಿರೋಧವಾಗಿ ಗುಪ್ತವಿಚಾರವೆಂಬದನ್ನು ಘುಟ್ಟಿಯಾಗಿ ಸ್ಥಾಪಿಸುತ್ತಾ ಬಂದು (468ನೇ ಪಾನು), 1492ನೇದಕ್ಕೆ ಸ್ಪಾನಿಯದಲ್ಲಿ ಮೌರರ ಅಧಿಕಾರವನ್ನು ಪೂರಾ ಮುರಿದು (297ನೇ ಪಾನು), 1516ನೇದರ ತನಕ ಆಳಿದನು.—Both Ferdinand and Isabella were instigated in establishing the Inquisition by the Grand Inquisitor Torquemada. Pope Sixt IV authorised them to appoint inquisitors for the detection and suppression of heresy in their dominions (468ನೇ ಪಾನು). 5) 413ನೇ ಪಾನು. 6) 360, 412ನೇ ಪಾನು. 7) 336, 471ನೇ ಪಾನು ಸರಿ ನೋಡು. 8) 361, 418, 452ನೇ ಪಾನು. 9) Dittmar's Umrisse der Weltgeschichte, 1864, II, §. 175.

ರ್ಮದವನಾದರೆ ಸ್ವರ್ಗವಾಸಿಯಾಗುವಿ ಎಂದು, ಹೇಳಿದನು. ಹಾತ್ವೈಯು, ಸ್ವರ್ಗದಲ್ಲಿ ಸ್ಪಾನಿಯದವರು ಸಹ ಇದ್ದಾರೋ? ಎಂತ, ವಿಚಾರಿಸಲು, ಆ ಮಠಿಕನು—ಹೌದು, ಆದರೆ ಯೋಗ್ಯರೂ ಒಳ್ಳೆಯವರೂ ಮಾತ್ರವೆಂತ, ಉತ್ತರ ಕೊಡುತ್ತಲೇ ಆ ಇಂದಿಯಾನನು—ಅವರಲ್ಲಿ ಉತ್ತಮರೆನ್ನಿಸುವಂಥವರಾದರೂ ಅಲ್ಲದವರೇ! ಶಾಪಗ್ರಸ್ತವಾದ ಈ ಸಂತತಿಯವರಲ್ಲಿ ಯಾರೊಬ್ಬನನ್ನೂ ಕಂಡೇನು, ಆದ್ದರಿಂದ ಆ ಸ್ವರ್ಗಕ್ಕೆ ಹೋಗಲೊಲ್ಲೆನೆಂತ, ನುಡಿದು ಬಿಟ್ಟನು.—ಸ್ಪಾನಿಯದವರು ಪಪ್ಪಕರಾಗದವರಲ್ಲಿ ಒಂದು ಪಾಲನ್ನು ಕೊಂದು, ಮತ್ತೊಂದನ್ನು ಕಠಿಣ ದಾಸತ್ವದಲ್ಲಿಟ್ಟು, ತಮ್ಮ ಖಣಿ ತೋಟಗಳಲ್ಲಿ ದುಡಿಸಿ ದಣಿಸುತ್ತಾ ಪೀಡಿಸುತ್ತಾ ಇದ್ದರು; ಅವರು ಹೀಗೆ ಪಪ್ಪಕತ್ವದ ಮತ್ತು ಹಣದಾಶೆಯ ಮರುಳಿನಿಂದ 1 ಕೋಟಿಯ 50 ಲಕ್ಷ ಇಂದಿಯಾನರನ್ನು ಸಂಹರಿಸಿದರೆಂತ, ಲೆಖ್ಖ ಮಾಡಿದ್ದುಂಟು. ಪಪ್ಪಕಮತಪ್ರಸಾರಣಕ್ಕೋಸ್ಕರ ಅಂದು ಅಮೆರಿಕಕ್ಕೆ ಬಂದವರಲ್ಲಿ ದೊಮಿನಿಕಾನ ಮಠಿಕಕುಲದವರು ಮಾತ್ರ ಸಾಧು ಗುಣಿಗಳಾಗಿ ಶೋಭಿಸಿದರು; ಇವರು ಮಾತ್ರ ಆ ದುಷ್ಟ ಕ್ರಿಯೆಗಳಿಗೆ ಅಡ್ಡಗಟ್ಟ ನೋಡಿದರು. ಅವರಲ್ಲೊಬ್ಬನ ಹೆಸರು ಬರ್ಥೊಲೊಮೇಯೊ ದೇ ಲಸ್ ಕಾಸಸ್ ಎಂತ. ಆದರೆ ಇವನು ಇಂದಿಯಾನರನ್ನುಳಿಸಲಿಚ್ಛೈಸುವಲ್ಲಿ, ನಿಮ್ಮ ಖಣಿ ತೋಟಗಳಲ್ಲಿ ದುಡಿಸುವದಕ್ಕೆ ಆಫ್ರಿಕದಿಂದ ನೀಗ್ರೋರೆಂಬ ಜನರನ್ನು ತನ್ನಿ! ಎಂತ, ಲೋಭಿಗಳಾದ ಸ್ಪಾನಿಯದವರಿಗೆ ಹೇಳಿದ್ದರಿಂದ ಅಸಹ್ಯ ನೀಗ್ರೋವ್ಯಾಪಾರಕ್ಕೆ ಕಾರಣನಾದನು.

ಕ್ರಿ. ಶ. 1613ನೇ ವರುಷ ಮೆನೇಜೆಸ್ ಗೋವೆ ಬಿಟ್ಟು[1], ಪೊರ್ತುಗಲಿಗೆ ಹೋದನು. ಇದು ಕ್ರಿ. ಶ. 1580ನೇದಕ್ಕೆ ಸ್ಪಾನಿಯದ ಆ 2ನೇ ಫಿಲಿಪ್ಪ ರಾಯನದಾಗಿತ್ತು[2]. ಮೆನೇಜೆಸ್ ಪೊರ್ತುಗಲಿನಲ್ಲಿ ಫಿಲಿಪ್ಪನ ಉತ್ತರಾಧಿಕಾರಿಯ ಅಪ್ಪಣೆಯ ಮೇಲೆ ಪ್ರತಿರಾಜನಾಗಿ, ಬಳಿಕ ಅಪಮಾನಸ್ಥಿತಿಯಲ್ಲಿ ಸತ್ತನು. ಒಬ್ಬ ಪೊರ್ತುಗೀಸ ಗ್ರಂಥಕರ್ತನು ಅವನ ವಿಷಯ ಬರೆದದ್ದೇನಂದರೆ[3]—ಆ ಯಶಸ್ಸುಳ್ಳ ಸಭೋದ್ಯೋಗಿಯು ಸ್ಪಾನಿಯಕ್ಕೆ ಹಿಂದಿರುಗದಿದ್ದರೆ ತನ್ನ ಮರಣಕ್ಕಿಂತ ಮುಂಚೆಯೇ ಅವನನ್ನು ಸಂತರ ಲೆಖ್ಖದಲ್ಲಿ ಶೇರಿಸುತ್ತಿದ್ದರೆಂಬಂತೆಯೇ ತೋರುತ್ತದೆ; ಆದರೆ ಅವನು ಅಲ್ಲಿಗೆ ಹೋಗಿ, ಸ್ವವಿನಂತಿಯ ಮೇಲಾಗಲಿ ಅನ್ಯರ ಕೃಪೆಯ ಮೇಲಾಗಲಿ ದೊಡ್ಡ ಹುದ್ದೆಗಳನ್ನು ಹೊಂದಿ, ಇವನ್ನು ನಡಿಸುವದು ಬಹು ಕಷ್ಟವಾದ ಕಾರಣ ಮುಂಚೆ ಹಿಂದು ದೇಶದಲ್ಲಿ ಲೋಕದವರೆದುರಿಗೆ ಘಳಿಸಿ ಕೊಂಡಿದ್ದ ಸಮಸ್ತ ಮಾನವನ್ನು ಕಳಕೊಂಡನು.—ಅದಲ್ಲದೆ ಮೆನೇಜೆಸ್ ಮಲಯಾಳದ ಸುರಿಯಕ ಕ್ರೈಸ್ತರಿಗೆ ಮೋಸ ಮಾಡಿದ್ದನ್ನು ಕುರಿತು ಫಾಥೆರ್ ಸಿಮೋನನೆಂಬ ಪಪ್ಪಕನು ಲೇಖಿ

1) 540ನೇ ಪಾನು. Cott. p. 68. 2) 474ನೇ ಪಾನು. 3) Manuel de Faria's Asia Portugesa.

ಸಿದ್ದೇನೆಂದರೆ[1]—ಅಂಥಾ ರೀತಿಗಳಿಂದ ಈ ವರೆಗೆ ಬಂದ ಫಲವೆಲ್ಲವೂ, ರೋಮಕ ಮತವು ಮೂಡಣದಲ್ಲಿ ಎಂಥಾ (ಅಯೋಗ್ಯ) ಉಪಾಯಗಳಿಂದ ಸ್ಥಾಪಿತವಾಯಿತೆಂತ, ಲೋಕಕ್ಕೆ ತೋರಿಸುವದಕ್ಕೆ ಆಗುತ್ತದಷ್ಟೇ; ಹೀಗಿರುವದರಿಂದ ನಾವು ಆ ಕಡೆಯಲ್ಲಿ, ಛೇದಕರೆಂತ, ಹೇಳುವ ಜನರೊಂದಿಗೆ ಮಾಡಿ ಕೊಂಡ ಸಮಸ್ತ ಪುನರೈಕ್ಯಗಳು ಸ್ವಲ್ಪ ಕಾಲಕ್ಕೆ ಮಾತ್ರ ಉಳಿದವೆಂಬದಕ್ಕೆ ಬಲ್ಲವರು ಆಶ್ಚರ್ಯ ಪಡಲಾರರು.—ಪೊರ್ತುಗಲು ದೇಶವು ಕ್ರಿ. ಶ. 1640ನೇ ಅಬ್ದಕ್ಕೆ ತಿರಿಗಿ ಸ್ವತಂತ್ರವುಳ್ಳಂಥಾದಾಯಿತೆಂತ, ಇಲ್ಲಿ ಸೂಚಿಸ ತಕ್ಕದು.

ಅಷ್ಟರಲ್ಲಿ ಯೇಸುವಿತರು ಮಲಯಾಳದಲ್ಲಿ ಸುರಿಯಕ ಭಾಷೆಯನ್ನು ಪೂರಾ ನಶಿಸಲಿಕ್ಕೆ ಹತ್ತಿದ ನಿಮಿತ್ತ ಸುರಿಯಕ ಕ್ರೈಸ್ತರಲ್ಲಿ ಪಪ್ಪಕತ್ವಕ್ಕೆ ಅಗದೀ ಮೆಚ್ಚದಂಥವರು ಕ್ರಿ. ಶ. 1603ನೇ ವರುಷಕ್ಕೀಚೆ ಹೊಲ್ಲಂದಿನವರಿಗೆ ಪ್ರಾಪ್ತವಾಗಲೆಸಗಿದ್ದ ಬಲದಿಂದ ಧೈರ್ಯ ಗೊಂಡು, ಕ್ರಿ. ಶ. 1656ನೇ ವರುಷ ಸುರಿಯದ ಅಂತಿಯೊಖೀಯ ಪಟ್ಣದಲ್ಲಿಯ ಯಕೋಬೀತರೆಂಬವರ ಪತ್ರಿಯರ್ಖನ ಸನ್ನಿಧಿಗೆ ದೂತರನ್ನು ಕಳುಹಿಸಿ, ಒಬ್ಬ ಅಧ್ಯಕ್ಷನನ್ನು ಬೇಡಿ ಕೊಂಡರು. ಅಲ್ಲಿಯ ಕ್ರೈಸ್ತರು ಕ್ರಿ. ಶ. 1054ನೇ ವರ್ಷ ಗ್ರೇಕಮತಸ್ಥರ ಗೆಳೆಯರಾಗಿದ್ದರೂ[2] ಏಕಭಾವತ್ವದರ್ಶನದವರಾಗಿ[3] ಉಳಿದಿದ್ದರು; ಈ ದರ್ಶನವು ಶಿಥಿಲವಾಗಿದ್ದಾಗ ಯಕೋಬನೆಂಬ ಒಬ್ಬ ಸುರಿಯಕ ಮಠಿಕನು ಕ್ರಿ. ಶ. 541ನೇ ವರುಷದಿಂದ ಅದನ್ನು ಉಜ್ಜೀವಿಸಲಿಕ್ಕೆ ಪ್ರಯತ್ನಿಸ ತೊಡಗಿದ್ದನು; ಅವನ ಸಲುವಾಗಿ ಅಲ್ಲಿಯ ಕ್ರೈಸ್ತರು ಯಕೋಬೀತರೆಂಬ ಹೆಸರುಳ್ಳವರಾಗಿದ್ದರು. ಮಲಯಾಳದ ನೆಸ್ತೊರಿಯಾನ ಕ್ರೈಸ್ತರು ದ್ವಿಭಾವತ್ವದರ್ಶನದವರಾಗಿದ್ದರೂ[4] ಅಂತಿಯೊಖೀಯದ ಪತ್ರಿಯರ್ಖನಿಗೆ ಆಶ್ರಯ ಗೊಂಡದ್ದಕ್ಕೆ ಕಾರಣವೇನೆಂದರೆ, ಆ ಸಮಯದಲ್ಲಿ ಮೆಸೊಪೊತಮಿಯ ಕುರ್ದಿಸ್ಥಾನ ಪಾರ್ಶಿಸ್ಥಾನ ಎಂಬ ದೇಶಗಳ ನೆಸ್ತೊರಿಯಾನರು ಹೆಚ್ಚಾಗಿ ಪಪ್ಪಕ ಪ್ರೇಷಿತರಿಂದ ಲೆಖ್ಖವಿಲ್ಲದ ತೊಂದರೆ ಪಡುತ್ತಿರುವ ಕಾರಣ ಅವರು ಅನ್ಯರ ಗೊಡವೆಗೆ ಹೋಗ ಕೂಡದಿದ್ದರು; ಇಂತಿರಲಿಕ್ಕೆ ಬಾಗ್ದಾದಿಗೆ ಪ್ರತಿಯಾಗಿ ಅಂತಿಯೊಖೀಯವು ಅವರಿಗೆ ಪ್ರಧಾನವೆನ್ನಿಸಿತು, ಯಾಕಂದರೆ ಇನ್ನೂ ಅವರ ಗೆಳೆಯನಾದ ನೆಸ್ತೊರಿಯನು ಬಹಳ ವೃತ್ತಿ ನಡಿಸಿದ್ದೆಂಬದು ಅಲ್ಲಿಯೇ, ಅಲ್ಲ? ಆ ಪತ್ರಿಯರ್ಖನು ಅವರಿಗೆ ಅತ್ತಲ್ಲನು ಅಂದರೆ ಥೆಯೊದೋರನೆಂಬವನೊಬ್ಬನನ್ನು ಕಳುಹಿಸಿ ಕೊಟ್ಟನು. ಇವನು ಹಿಂದು ದೇಶದ ಪೂರ್ವ ತೀರಕ್ಕೆ ಬಂದು ಶೇರಿ, ಮಲಯಾಳಕ್ಕೆ ಪ್ರಯಾಣ ಮಾಡುತ್ತಿರಲು, ಯೇಸುವಿತರು ಅವನನ್ನು ಮೈಲಾಪುರದಲ್ಲಿ ಹಿಡಿದು, ಹಡಗದ

1) Simon's Histoire Critique. 2) 342ನೇ ಪಾನು. 3) 254, 295ನೇ ಪಾನು. 4) 251ನೇ ಪಾನು. 5) 80ನೇ ಪಾನು.

ಲ್ಲಿ ಗೋವೆಗೆ ಸಾಗಿಸಿದ ಬಳಿಕ ಗುಪ್ತವಿಚಾರಕರು, ಅವನು ಕಥರನೆಂದು, ಆಜ್ಞೆ ಮಾಡಿ, ಅವನನ್ನು ಕೊಂದರು[1]. ಒಬ್ಬ ಹೆಸರುಗೊಂಡ ಗ್ರಂಥಕರ್ತನು ಬರೆದದ್ದೇನೆಂದರೆ[2]—ಯೇಸು ಕ್ರಿಸ್ತನ ಅಪೊಸ್ತಲರಂತ ವಂಚಿಸಿ ಕೊಂಡ ಆ ಯೇಸುವಿತರು ದುಷ್ಟತ್ವದಿಂದ ಚೆಲ್ಲಿದ ಮಾರ್ ಯೋಸೇಫ ಮಾರ್ ಸಿಮೆಯೋನ ಅತ್ತಲ್ಲ ಎಂಬೀ ಮೂವರಧ್ಯಕ್ಷರ ರಕ್ತವೂ ಇತರರಾದ ಅನೇಕ ಮಂದಿ ಹಿಂದು ಕ್ರೈಸ್ತರದೂ ಆವಾಗ ದೇವರ ಮುಂದೆ, ಮುಯ್ಯಿಗೆ ಮುಯ್ಯಿಯಾಗ ಬೇಕೆಂತ, ಅವರಿಗೆ ವಿರೋಧವಾಗಿ ಕೂಗಿ, ಗೆದ್ದಿತು.—ಹ್ಯಾಗಂದರೆ ಪೊರ್ತುಗೀಸರಿಗೆ ಹಿಂದು ದೇಶದಲ್ಲಿ ಉಳಿದಿದ್ದ ಅಧಿಕಾರವನ್ನು ದೇವರು ಹೊಲ್ಲಂದಿನವರ ಮೂಲಕ ಅವರ ಕೈಯಲ್ಲಿಂದ ತೆಗೆದನು. ಇವರು ಕ್ರಿ. ಶ. 1662ನೇ ವರುಷಕ್ಕೂ 1666ನೇದಕ್ಕೂ ನಡುವೆ ಕೊಚ್ಚಿ ಮೊದಲಾದ ಮಲಯಾಳದ ಸ್ಥಳಗಳಲ್ಲಿ ಪೊರ್ತುಗೀಸರಿಗಿದ್ದ ವರ್ತಕಶಾಲೆಗಳನ್ನು ಸ್ವತಂತ್ರಿಸಿ ಕೊಂಡದರಿಂದ[3] ಪಪ್ಪಕ ಅಧಿಕಾರಸ್ಥರ ಬಲವು ಮುರಿದ ಹಾಗಾಯಿತು. ಕ್ರಿ. ಶ. ಆ 1662ನೇ ವರುಷ ಸಮಸ್ತ ಸುರಿಯಕ ಕ್ರೈಸ್ತರು ಯೇಸುವಿತರಿಗೆದುರಾಗಿ ಏಳಲಿಕ್ಕೆ, ಇವರ ತಂಟೆ ತೀರಿ ಹೋದಾಗ ಅನೇಕ ಜನ ಸುರಿಯಕರು ಕರ್ಮೆಲೀತರೆಂಬ ಮಠಿಕ ಕುಲದವರಿಂದ ಪ್ರೇರಿತರಾಗಿ, ಸ್ವಲ್ಪ ಸಡಿಲು ತರದ ಪಪ್ಪಕತ್ವಕ್ಕನುಸರಿಸಿ ಕೊಂಡರು; ಆದರೆ ಮಿಕ್ಕಾದವರು ಮುಂಚಿನಂತೆ ತಮಗೆ ಅಂತಿಯೊಖೀಯದಿಂದ ಅಧ್ಯಕ್ಷರನ್ನು ತರಿಸುತ್ತಾ ಬಂದರು.

ತಿರುವಾಂಕೋಡಿನಲ್ಲಿಯೂ ಕೊಚ್ಚಿಯಲ್ಲಿಯೂ ಈ ನಮ್ಮ ಕಾಲ ಸುಮಾರು 1 ಲಕ್ಷ ಮಂದಿ ಯಕೋಬೀತರಾದಂಥ ಸುರಿಯಕರು ತಮ್ಮ ಸ್ವಂತ ಕತ್ತನಾರರು ಎಂಬ ಸಭೋದ್ಯೋಗಿಗಳ ಕೆಳಗೆ 72 ಸಭೆಗಳಾಗಿ ಇದ್ದಾರೆ; ಅವರ ಮತಮುಖ್ಯಸ್ಥನು ಅಂತಿಯೊಖೀಯದ ಪತ್ರಿಯರ್ಖನು; ಅವರಿಗಿರುವ ಪೆಷಿತೊ ಎಂಬ ದೇವವಾಕ್ಯದ ಸುರಿಯಕ ಭಾಷಾಂತರವನ್ನು[4] ಅವರು ದ್ವಿಭಾಷಿಗಳಿಂದ ಮಾತ್ರ ತಿಳುಕೊಳ್ಳ ಬಹುದು. ಪಪ್ಪಕತ್ವವನ್ನವಲಂಬಿಸಿದಂಥ ಸುರಿಯಕರ ಸಂಖ್ಯೆಯು ಈಗ ಸುಮಾರು 1 ಲಕ್ಷದ 25 ಸಾವಿರ[5].

ಮಲಯಾಳ ಯಕೋಬೀತರಿಗೆ ಆ ಪ್ರಕಾರ ಮತಸ್ವಾತಂತ್ರ್ಯವಿದ್ದರೂ ತರತರದ ಪಪ್ಪಕ ಆಚಾರವು ಅವರಲ್ಲಿ ಹೊಕ್ಕೊಂಡದೆ; ಆದರೂ ಪಪ್ಪಕರಂತೆ ಅವರು ಹಿಂದು ವಿಗ್ರಹಾರಾಧಕರ ತಲೆಜುಟ್ಟು ಮೊದಲಾದ ಚಿನ್ಹೆಗಳಲ್ಲಿ ಒಂದನ್ನಾದರೂ

1) Carmelite Vincent; Raulin; La Croze. 2) La Croze. 3) Cott. p. 39. 4) 189ನೇ ಪಾನು. 5) The Memorandum alluded to on page 81 states that there are altogether 2,25,583 Syrians in Travancore and Cochin belonging either to Rome or Antiochia.

ತಕ್ಕೊಳ್ಳದೆ, ವಿಗ್ರಹಾರಾಧಕರಾದಂಥ ನೆಂಟರ ಸಂಗಡಲೂ ನೆರೆಯವರ ಸಂಗಡಲೂ ಏನೂ ಬಹಿಃಸಂಪರ್ಕವಿಲ್ಲದವರಾಗಿದ್ದಾರೆ. ಸಕಲ ಹಿಂದು ಕುಲದವರೂ ಅವರಲ್ಲಿ ಶೇರಿದ್ದಾರೆ.

ಇಂಗ್ಲಂದಿನ ಎಪಿಸ್ಕೊಪಾಲವಾದ ರಾಜ್ಯಸಭೆಯ ಸುವಾರ್ತಾಪ್ರಸಾರಣಸಮಾಜದವರು[1] ಕ್ರಿ. ಶ. 1805ನೇ ವರುಷ ಕ್ಲಾದಿಯಸ್ ಬಕ್ಕನ್ನನನೆಂಬವನೊಬ್ಬ ಇಂಗ್ಲಿಷ ಸದ್ಭಕ್ತನ ಮುಖದಿಂದ ಮಲಯಾಳದ ಯಕೋಬೀತರ ಅವಿದ್ವತ್ತನ್ನು ತಿಳಿದು, 1816ನೇದಕ್ಕೆ ಮೂವರು ಸುವಾರ್ತಾಪ್ರಸಾರಕರನ್ನು ಅವರ ಹತ್ತರ ಕಳುಹಿಸಿದರು. ಈ ಯಕೋಬೀತರು ಅಂದು ತಿರುವಾಂಕೋಡಿನ ಕೋಟೆಯವೆಂಬಲ್ಲಿ ತಮ್ಮ ಕತ್ತನಾರರನ್ನು ಸುಶಿಕ್ಷಿಸುವದಕ್ಕೋಸ್ಕರ ಒಂದು ವಿದ್ಯಾಶಾಲೆ ಕಟ್ಟಿದ್ದರು; ಅದಕ್ಕೆ ತಿರುವಾಂಕೋಡಿನ ರಾಣಿಯು ಉಚಿತಸಹಾಯವನ್ನಿತ್ತಿದ್ದಳು; ಅವರ ಮೇತ್ರಾನನೆಂಬ[2] ಅಧ್ಯಕ್ಷನು ಸಹ ಅಲ್ಲಿ ವಸ್ತಿಯಾಗಿರುತ್ತಿದ್ದನು. ಆ ಸುವಾರ್ತಾಪ್ರಸಾರಕರು ಈ ಮೇತ್ರಾನನ ಸಂಗಡ ಸ್ನೇಹದ್ದೊಂದು ಒಡಂಬಡಿಕೆ ಕಟ್ಟಿ ಕೊಂಡು, ತಿರುವಾಂಕೋಡಿನಲ್ಲಿಯೂ ಕೊಚ್ಚಿಯಲ್ಲಿಯೂ ಯಕೋಬೀತ ಸಭೆಯ ಮತಸಂಮ್ಮಂಧವಾದ ಮತ್ತು ಪ್ರಜಾಸಮ್ಮಂಧವಾದ ಸಕಲ ಕಾರ್ಯಗಳನ್ನು ನಡಿಸುವಂಥಾದ್ದೆಂದು, ಒಂದು ಆಲೋಚನಾಸಂಘವ ನಿರ್ಮಿಸಿ ಕೊಂಡರು. ಆ ಸುವಾರ್ತಾಪ್ರಸಾರಕರಲ್ಲಿ ಒಬ್ಬನು ವಿದ್ಯಾವರ್ಧಕ ಶಾಖೆಯ ಮುಖ್ಯಸ್ಥನಾದನು, ಮತ್ತೊಬ್ಬನು ಪರಿಶುದ್ಧ ಬರಹವನ್ನು ಭಾಷಾಂತರೀಕರಿಸುವವನಾದನು, ಇನ್ನೊಬ್ಬನು ಪಪ್ಪಕರಿಗೆ ಒಳಬೀಳದಿದ್ದ ಆ 72 ಸುರಿಯಕ ಸಭೆಗಳನ್ನು ನೋಡುವವನಾದನು. ಈ ಸಮಸ್ತ ಸಭೆಗಳಲ್ಲಿ ಸುರಿಯಕರ ಮಕ್ಕಳುಪಕಾರಕ್ಕಾಗಿ ಸ್ಥಾಪಿತವಾದ ಶಾಲೆಗಳಲ್ಲಿ ಮಲಯಾಳ ಭಾಷೆಯನ್ನಲ್ಲದೆ ಸುರಿಯಕವಾದದ್ದನ್ನು ಸಹ ಕಲಿಸೋಣವಾಯಿತು. ಆ ಸಂಘದವರಿಂದ ಯೋಗ್ಯತಾಪತ್ರ ಹೊಂದದವರಿಗೆ ಮೇತ್ರಾನನು ಉದ್ಯೋಗಪ್ರತಿಷ್ಠೆ ಮಾಡದಿರುವನು. ಈ ಪ್ರಕಾರದ ಸ್ನೇಹದ ಐಕ್ಯವು ಕ್ರಿ. ಶ. 1838ನೇ ವರುಷದ ತನಕ ಚನ್ನಾಗಿ ನಡಿಯುತ್ತಾ ಬಂತು. ಆಗ ಮೇತ್ರಾನನಾದವನು ಕಡು ಲೋಭಿಯು; ಅವನು ಹಣದಾಶೆಯಿಂದ ಚಿಕ್ಕ ಮಕ್ಕಳಿಗೂ ವಿದ್ಯಾಹೀನ ಯೌವನಸ್ಥರಿಗೂ ಉದ್ಯೋಗಪ್ರತಿಷ್ಠೆ ಗೈಯ ತೊಡಗಿದ್ದಲ್ಲದೆ ಕೋಟೆಯದ ವಿದ್ಯಾಶಾಲೆಯ ಭೂಮಿಯನ್ನು ಮಿಗಿಲಾದ ಗೇಣಿಗೆ ಕೊಟ್ಟು, ಉಳಿಮೆಯನ್ನು ಸ್ವಪ್ರಯೋಜನಕ್ಕೆ ತಕ್ಕೊಂಡು, ಆಲೋಚನಾಸಂಘದ ಮೇಲೆ ಏನೂ ಲಕ್ಷ್ಯವಿಡದೆ, ಸಭ್ಯರಿಗೆ ಶಾಲೆಗಳ ಮೇಲಿದ್ದ ಪ್ರೀತಿ ಕೆಡಿಸ ನೋಡಿ, ಸುವಾರ್ತಾಪ್ರಸಾರಕರು ಸುರಿಯಕರಲ್ಲಿ ಎಂದಿನಂತೆ ಸುವಾರ್ತೆ ಸಾರ ಬಾರದೆಂದು, ಕಟ್ಟು ಮಾಡಿದನು.

---

1) 76ನೇ ಸಂಧಿ. 2) 273ನೇ ಪಾನು.

ಆ ಸಮಯ ಅಲ್ಲಿದ್ದ ಸುವಾರ್ತಾಪ್ರಸಾರಕರು—ತಾವು ಸ್ವಲ್ಪ ಸಜ್ಜ್ಯೋತಿಯನ್ನು ಹಬ್ಬಿಸಲಿಕ್ಕೆ ಸಮರ್ಥರಾಗಿದ್ದಾಗ್ಯೂ ಸುರಿಯಕ ಸಭೆಯಲ್ಲಿ ಪುನಃಸ್ಥಾಪನೆಯು ಶೇರದೆ ಹೋಯಿತು; ಸುರಿಯಕರ ದೇವಾರಾಧನೆಗಳಲ್ಲಿ ಕೊಂಚ ಮಂದಿ ಕ್ರಿಸ್ತರು ಮಾತ್ರ ಬಲ್ಲ ಸುರಿಯಕ ಭಾಷೆಯು ಪ್ರಯೋಗಿಸಲಾಗುವ ವರೆಗೂ ಸುರಿಯಕ ಸಭೆಯಲ್ಲಿ ಹೊಕ್ಕೊಂಡಿದ್ದ ಯಕೋಬೀತ ಮತ್ತು ಗ್ರೇಕ ಮತ್ತು ಪಪ್ಪಕ ಪಕ್ಷದವರ ಅನೇಕ ದುರ್ಬೋಧನೆ ದುರಾಚಾರಗಳು ಪರಿಹಾರವಾಗುವ ವರೆಗೂ ಪುನಃಸ್ಥಾಪನಾಪ್ರಯತ್ನಗಳೆಲ್ಲಾ ವ್ಯರ್ಥವಾಗುವವೆಂದು, ಆಲೋಚಿಸುವಲ್ಲಿ ತಿರುವಾಂಕೋಡಿಗೆ ಬಂದ ಕಲಿಕಾತೆ ಪಟ್ಣದ ವಿಲ್ಸನನೆಂಬ ಘನಸ್ಥ ಅಧ್ಯಕ್ಷನು—ಸುರಿಯಕರು ಇನ್ನೂ ಉಳಿದಿರುವ ತಮ್ಮ ಪ್ರಾಚೀನ ಕಟ್ಟಳೆಗಳನ್ನು ತಿರಿಗಿ ನಡಿಸುವವರಾಗಿ, ಹೀಗೆ ಅಪೊಸ್ತೊಲಿಕ ಕಾಲಕ್ಕೆ ಅನುಗುಣವಾದ ರೀತಿಯನ್ನು ಮರಳಿ ಹಿಡು ಕೊಂಡ ಹೊರ್ತು ಎಪಿಸ್ಕೊಪಾಲ ಸಭೆಯ ಸುವಾರ್ತಾಪ್ರಸಾರಕರು ಅವರೊಡತನದಿಂದಿರುವದು ಹಿತವಲ್ಲವೆಂದು, ತನ್ನ ನಿರ್ಣಯವನ್ನುಚ್ಚರಿಸಲು, ಒಂದು ಸಭಾಸಂಘವು ನೆರೆಯಿತು. ಅದರಲ್ಲಿ ಆ ಸುರಿಯಕ ಮೇತ್ರಾನನು ಲಂಚ ಕೊಟ್ಟು, ಭಯ ತೋರಿಸಿ, ಈ ರೀತಿಯಿಂದ ಪುನಃಸ್ಥಾಪನಾಪೇಕ್ಷಕರಾದಂಥ ಸುರಿಯಕರ ಮಾತು ಸಾಗದ ಹಾಗೆ ಮಾಡಿದಲ್ಲಿ ಎಪಿಸ್ಕೊಪಾಲ ಸುವಾರ್ತಾಪ್ರಸಾರಕರ ಸಂಗಡವಿದ್ದ ಸಮ್ಮಂಧವನ್ನು ಕಡಿದು ಬಿಟ್ಟನು. ತರುವಾಯ ತಿರುವಾಂಕೋಡಿನ ಅಧಿಕಾರಸ್ಥರು ಆ ಸುರಿಯಕ ವಿದ್ಯಾಶಾಲೆಗೆ ಶಿಕ್ಕಿದ್ದ ಉಚಿತವನ್ನು ಸಮವಾಗಿ ವಿಭಾಗಿಸಿ, ಅರ್ಧವನ್ನು ವಿದ್ಯಾವಿವರ್ಧನೋಪಾಯಕ್ಕೋಸ್ಕರ ಮೇತ್ರಾನನಿಗೆ ಕೊಟ್ಟು, ಅರ್ಧವನ್ನು ಯಾವತ್ತೂ ಶಾಖೆಯ ಕ್ರೈಸ್ತರ ಸುಶಿಕ್ಷೆಗೋಸ್ಕರ ಆ ಸುವಾರ್ತಾಪ್ರಸಾರಣಸಮಾಜದವರಿಗೆ ದಯೆ ಪಾಲಿಸಿದರು. ಆ ಮೇತ್ರಾನನ ಕೈಯಲ್ಲುಳಿದ ಆ ವಿದ್ಯಾಶಾಲೆಯು ಹಾಳಾಯಿತು; ಆದರೆ ಇಂಗ್ಲಿಷ ಎಪಿಸ್ಕೊಪಾಲ ಸುವಾರ್ತಾಪ್ರಸಾರಕರಿಂದ ಸ್ಥಾಪಿತವಾದ್ದೊಂದು ಚನ್ನಾಗಿ ನಡೆಯುತ್ತದೆ.

ಮಲಯಾಳದಲ್ಲಿ ಎಪಿಸ್ಕೊಪಾಲ ಸುವಾರ್ತಾಪ್ರಸಾರಣದವರ ಸಭೆಯನ್ನು ಕೂಡಿ ಕೊಂಡ ನಿಜ ಸುರಿಯಕರು ಈಗ ಹೆಚ್ಚು ಕಡಿಮೆ 3000 ಸಂಖ್ಯೆಯವರು; ಮಿಕ್ಕಾದವರು ಮಾರ್ ಅಥನಸಿಯನು? ಎಂಬ ಮುಖ್ಯ ಮೇತ್ರಾನನ ಕೆಳಗಿದ್ದಾರೆ. ಇವನು ಆ ಸುವಾರ್ತಾಪ್ರಸಾರಕರ ಶಾಲೆಯಲ್ಲಿ ಶಿಕ್ಷಿತನಾಗಿ, ಸುರಿಯದಲ್ಲಿ ಉದ್ಯೋಗಪ್ರತಿಷ್ಠೆ ಪಡೆದು, ಸೌವಾರ್ತಿಕ ಭಾವ ತೋರಿಸುತ್ತಾನೆ; ಹೀಗಿರಲಾಗಿ ಅವನ ಅಧೀನತೆಯ ದೇವಾಲಯಗಳಲ್ಲಿ ದೇವವಾಕ್ಯದ ಮಲಯಾಳ ಭಾಷಾಂತರವು ಸಹ ಅಧ್ಯಯನವಾಗುವದು.—

ಕ್ರಿ. ಶ. 1606ನೇ ವರುಷ ಯೇಸುವಿತರು[1] ತಮಿಳ ದೇಶದಲ್ಲಿ ಮುಖ್ಯವಾಗಿ ಮಧುರೆ ನಾಡಿನಲ್ಲಿ ಪಪ್ಪಕ ಮತ ವಿಸ್ತರಿಸಲಿಕ್ಕೆ ತೊಡಗಿದರು; ಆದರೆ ಕ್ಷಾವೇರನಂತೆ ಪರಿಯರಲ್ಲಿ (ಹೊಲೆಯರಲ್ಲಿ) ಅಲ್ಲ, ಬ್ರಾಹ್ಮಣರಲ್ಲಿಯೇ. ಆ ವರುಷ ರೋಬೆರ್ತ ನೋಬಿಲಿ ಎಂಬ ಯೇಸುವಿತನು ಅಲ್ಲಿ ತನ್ನ ವೃತ್ತಿ ನಡಿಸುವವನಾಗಿ, ಕ್ರಿ. ಶ. 1656ನೇದರ ವರೆಗೆ ಅದರಲ್ಲಿ ಉಳಿದನು; ಅವನು ಒಬ್ಬ ಬ್ರಾಹ್ಮಣನಂತೆ ತೊಡಿಗೆ ತೊಟ್ಟು, ತಾನು ಬ್ರಹ್ಮದೇವನ ಕುಲದವನೊಬ್ಬನೆಂದು, ಹೇಳಿ[2], ಧಾನ್ಯಶಾಖಾಹಾರವನ್ನು ಮಾತ್ರ ಕೈಗೊಂಡು, ತಮಿಳ ಶಾಸ್ತ್ರ ವಿದ್ಯೆಗಳನ್ನು ಸಂಪಾದಿಸಿಕೊಂಡು, ತದನಂತರ ಸುಳ್ಳುಸಾಕ್ಷಿಗಳಿಂದಲೂ, ಸುಳ್ಳುಪ್ರಮಾಣಗಳಿಂದಲೂ, ತಾನು ಬ್ರಾಹ್ಮಣಜನೆಂದು, ಸ್ಥಾಪಿಸಿ[3], ಕಳೆದು ಹೋದ ವೇದಗಳಲ್ಲೊಂದು ತನಗೆ ಶಿಕ್ಕಿತೆಂತ, ವಂಚಿಸಿ, ಹೇರಳ ಮಂದಿ ಬ್ರಾಹ್ಮಣರನ್ನು ನಂಬಿಸಿದನು. ಅವನು, ಬ್ರಾಹ್ಮಣರ ಆಚಾರಗಳಲ್ಲೊಂದೆಂತ, ಕೊಟ್ಟ ಸ್ನಾನ ಹೊಂದಿದವರೊಳಗೆ ಕಡು ಬಿಗಿಯಾದ ಬ್ರಾಹ್ಮ್ಯ ಕುಲಾಚಾರವನ್ನು ಉಳಿಸಿದನು. ಸ್ನಾತನಾದ ಅಂಥವನೊಬ್ಬ ಬ್ರಾಹ್ಮಣನು ಕ್ರೈಸ್ತನೆನ್ನಿಸುವ ಒಬ್ಬ ಪರಿಯನನ್ನು ಮುಟ್ಟ ಬಾರದು; ಪರಿಯರಲ್ಲಿ ಕ್ರೈಸ್ತರೆನ್ನಿಸುವವರು ಯೇಸುವಿತ ದೇವಾಲಯದೊಳಗೆ ಬಂದರೆ ಅವರನ್ನು ಹೊರಗೆ ಹಾಕುವದು ರೂಢಿ; ಅಂಥವರು ಸಾಯುವ ಹಾಗಾದರೆ ಅವರ ಮನೆತನದವರು ಅವರನ್ನು ದೇವಾಲಯದೊಳಗೆ ತರ ಕೂಡದೆ, ಹೊಸ್ತಿಲಲ್ಲಿ ಮಲಗಿಸಿ ಬಿಡ ಬೇಕು; ಆಗ ಪ್ರೀಸ್ತರು ಅವರನ್ನು ಮುಟ್ಟದೆ, ಒಂದು ಕೊಳವಿಯ ಉಪಾಯದಿಂದ ಅವರಿಗೆ ಅಂತತೈಲಾಭಿಷೇಕ ಕೊಡುವರು; ಏಳು ವರುಷದ ಮಕ್ಕಳಿಗೆ ಮದಿವೆ ಮಾಡಿಸುವ ಹಿಂದು ತರವು ಎಂದಿನಂತೆ ನಡೆಯುವದು; ಇತರ ವಿಗ್ರಹಗಳಲ್ಲಿ ಮರಿಯಳೆಂಬವಳದನ್ನು ಸಹ ಇಡುವದೇ ಆ ಯೇಸುವಿತರ ಶಿಷ್ಯರ ಮತ್ತು ಹಿಂದು ವಿಗ್ರಹಾರಾಧಕರ ವಿವಾಹಾಚರಣದ ವಿಷಯವಾದ ಒಂದೇ ವ್ಯತ್ಯಾಸವು; ಜಗನ್ನಾಥನ ಪ್ರತಿಮೆಯಂತೆ ಮರಿಯಳದು ಸಹ ರಥದಲ್ಲಿ ಮೆರವಣಿಗೆಯಾಗುವದು; ನಟರ ಆಟವನ್ನು ಸಹ ಪಪ್ಪಕ ಮತಾಚಾರದಲ್ಲಿ ಶೇರಿಸಲಾಯಿತು. ಹೆಸರುಗೊಂಡವನೊಬ್ಬ ಪ್ರಯಾಣಿಕನು[4] ಕ್ರಿ. ಶ. 1659ನೇ ವರುಷ ಗೋವೆಗೆ ಬಂದು, ಯೇಸುವಿತರು ಪ್ರಧಾನಾಧ್ಯಕ್ಷನ ಸಮಕ್ಷದಲ್ಲಿ ನಡಿಸುವ ಅಂಥಾದ್ದೊಂದು ನಾಟ್ಯದಲ್ಲಿ ಕ್ರಿಸ್ತನ ಮತ್ತು ಮರಿಯಳ ಗೊಂಬೆಗಳ ಸಹಿತ ಮಂಗಗಳ ವೇಶ ಹಾಕಿಕೊಂಡ 12 ಮಂದಿ ಹುಡುಗರು ಕೂಡ ಇದ್ದು, ಕುಣಿದಾಡಿದರು. ಕ್ರೈಸ್ತರೆನ್ನಿಸುವ ಹೆಂ

1) ಕ್ರಿ. ಶ. 1549ನೇ ವರುಷ ಸುತ್ತ ಇವರು ಅಮೆರಿಕದ ಬ್ರಜಿಲ್ ಪರಗೇ ಎಂಬೆರಡು ದೇಶಗಳಲ್ಲಿ ತಮ್ಮ ತರದ ವೃತ್ತಿಯನ್ನಾರಂಭಿಸಿದ್ದರು; 465, 466ನೇ ಪಾನು. ಕ್ರಿ. ಶ. 1584ನೇ ವರುಷ ಸುತ್ತ ಚೀನ ದೇಶದಲ್ಲಿ ಅವರ ಕೆಲಸ ಬಲವಾಗಿ ತೊಡಗಿತ್ತು. 2) Norbert, Mémoires I, 18. 3) Hist. soc. Jes. II, 495 seq. 4) Mandelsloh; Cott. p. 164.

ಗಸರು ಹಿಂದು ವಿಗ್ರಹಗಳ ರೂಪಗಳನ್ನು ಕೊರಳಿಗೆ ಕಟ್ಟಿ ಕೊಂಡಿರುವರು; ಸ್ನಾನವೆಂಬಲ್ಲಿ ಮಕ್ಕಳಿಗೆ ಹಿಂದು ದೇವತೆಗಳ ಹೆಸರನ್ನಿಡುವ ಪದ್ಧತಿಯು; ಕ್ರೈಸ್ತರೆನ್ನಿಸುವವರೆಲ್ಲರು, ಪಾಪವಿಮೋಚನೋಪಾಯವೆಂದು, ಕುಲಕುರುಹುಗಳಾದ ನಾಮ ಬೊಟ್ಟು ಭಸ್ಮ ಮುಂತಾದವುಗಳನ್ನು ಹಣೆಗಿಟ್ಟು ಕೊಂಡಿರುವರು; ಅದಲ್ಲದೆ ಮುಂಚಿನಂತೆ ಹಿಂದು ಮೂಲಮಂತ್ರಗಳನ್ನು ಜಪಿಸುತ್ತಿರುವರು[1]. ರೋಬೆರ್ತ ನೋಬಿಲಿಯ ಹಿಂದಿನವನೊಬ್ಬನಾದ ಬೇಷಿ ಎಂಬವನು ತಮಿಳ ಕಾವ್ಯಕೃತಿಗಳಿಂದ ಪ್ರಸಿದ್ಧನಾದವನು; ಅವನು ಕ್ರಿ. ಶ. 1700ನೇ ವರುಷದಿಂದ 1744ನೇದರ ಪರಿಯಂತ ನೋಬಿಲಿಯದರಂಥ ವೃತ್ತಿಯನ್ನೇ ನಡಿಸಿದನು. ಮತ್ತು ಈ ಹಿಂದು ದೇಶದಲ್ಲಿ ಹ್ಯಾಗೋ, ಹಾಗೆಯೇ ಯೇಸುವಿತರು ಚೀನದಲ್ಲಿಯೂ ಮಾಡುತ್ತಿದ್ದರು[2]. ಹೀಗಿರಲಾಗಿ ಹಿಂದು ದೇಶದ ಕೆಳಕುಲದವರಲ್ಲಿ ಕೆಲಸ ಗೈಯುತ್ತಿರುವ ಫ್ರಂಕ್ಸಿಸ್ಕಾನ ಮೊದಲಾದ ಮಠಿಕ ಕುಲದವರೂ ಚೀನದಲ್ಲಿಯ ದೊಮಿನಿಕಾನರೂ ಯೇಸುವಿತರ ಆ ಪ್ರಕಾರದ ನಡತೆಗೆ ಬೇಸತ್ತು, ಪಪ್ಪನ ಹತ್ತರ ಅವರ ಮೇಲೆ ದೂರು ಹೇಳಿದರು. ಆದ ಕಾರಣ 15ನೇ ಗ್ರೆಗೋರ ಪಪ್ಪನ[3] ಕಾಲ ಮೊದಲ್ಗೊಂಡ ಒಂದು ಶತಮಾನವೇ ನಡಿಯುವದೊಂದು ವಾಗ್ವಾದವು ಹುಟ್ಟಿತು. ಕ್ರಿ. ಶ. 1742ನೇ ವರುಷ 14ನೇ ಬೆನಿದಿಕ್ತನೆಂಬ ಪಪ್ಪನು ಒಂದು ಕಠಿಣ ಬುಲ್ಲದಿಂದ ಯೇಸುವಿತರ ಪರೇಚ್ಛಾನುಸಾರದ ಆ ದುಃಪದ್ಧತಿಗೆ ಅಡ್ಡಗಟ್ಟಲು, ಇವರು ಅದನ್ನು ಸ್ವಲ್ಪ ಸಡಿಲು ಬಿಡ ಬೇಕಾದ ಮೇಲೆ ಅವರನ್ನು ಶೇರಿ ಕೊಂಡಿದ್ದ ಕ್ರೈಸ್ತರೆನ್ನಿಸುವಂಥವರಲ್ಲನೇಕರು ಆ ಹೊಸ ಕಟ್ಟಳೆಯಿಂದ ಹಿಂಜಾರಿದ್ದಲ್ಲದೆ ಆ ಕಟ್ಟಳೆಗೊಳಗಾಗುವದು ಸಹ ನಿಂತು ಹೋಯಿತು[4].

ಕ್ರಿ. ಶ. 1759ನೇ ವರುಷ ಯೇಸುವಿತರನ್ನು ಪೊರ್ತುಗಲಿನ ರಾಜನ ಸಕಲ ಭೂಮಿಯಿಂದ ಹೊರಗಟ್ಟಲು[5], ಅವರು ಗೋವೆಯನ್ನು ಸಹ ತೊಲಗಿ ಹೋಗಲವಶ್ಯವಾಯಿತು[6]. ಕಾಲಗತಿಯಿಂದ ಅವರ ಕುಲವು ತಿರಿಗಿ ಸ್ಥಾಪಿತವಾಯಿತೆಂತ, ಹಿಂದೆ ಕೇಳಿದ್ಧೀರಿ[7].

ಕ್ರಿ. ಶ. ಆ 1510ನೇ ವರುಷದಿಂದ[8] ಈ 1868ನೇದರ ವರೆಗೆ ಅಂದರೆ 358 ವರುಷಗಳೊಳಗೆ ಹಿಂದು ದೇಶದಲ್ಲಿ ಉತ್ಪನ್ನರಾದ ಪಪ್ಪಕರ ಸಂಖ್ಯೆಯು ಸುಮಾರು 9 ಲಕ್ಷವಂತೆ; ಅವರಲ್ಲಿಯ ಸಭ್ಯರೂ ಸಭೋದ್ಯೋಗಿಗಳೂ ಹೆಚ್ಚು ಕಡಿಮೆಯಿಂದ ಹಿಂದು ಕುಲಾಚಾರದಲ್ಲಿ ಉಳಿದವರಾಗಿದ್ಧಾರೆ.



1) Norbert I, 12; Cott. p. 153. 2) Morale practique des Jesuites, VI, p. 66 seq. 3) 513, 535ನೇ ಪಾನು. 4) Abbé Dubois. 5) 465ನೇ ಪಾನು. 6) Cott. pp. 75;113. 7) 466ನೇ ಪಾನು. 8) 532ನೇ ಪಾನು.

# VII. ಪುನಃಸ್ಥಾಪಿತವಾದ ಸಭೆಯ

# ಸಜ್ಜೀವನದ ಪ್ರಸರಣವು.

(ಕ್ರಿ. ಶ. 1648ನೇ ವರುಷದಿಂದ 1868ನೇದರ ವರೆಗೆ.)



## 66. ಸ್ಪೇನೆರನೆಂಬ ಬೋಧಕನು.

ಲುಥರನ ಕಾಲದಲ್ಲಿಯಾದರೂ ಗೆರ್ಮಾನಿಯ ಮುಂತಾದ ದೇಶಗಳೊಳಗೆ ಪುನಃಸ್ಥಾಪಿತ ಸಭೆಯಲ್ಲಿ ಎರಡು ಅಭಿಪ್ರಾಯದವರು ಇದ್ದರು; ಮಿತಾರ್ಥರು ಮತ್ತು ಕಠಿಣಾರ್ಥರು. ಗೆರ್ಮಾನಿಯದಲ್ಲಿ ಮೆಲಂಖ್ಥೋನನು[1] ಅಗ್ರಸ್ಥನಾದ ಆ ಮಿತಾರ್ಥರು, ಮುಖ್ಯ ವಿಷಯಗಳುಳ್ಳದ್ದೊಂದು ಸರ್ವಸಾಧಾರಣ ವಿಶ್ವಾಸಪ್ರಮಾಣದ ಮೇಲೆ ಲುಥರಿಕರಿಗೂ ಚ್ವಿಂಗ್ಲಿಕರಿಗೂ ಕಲ್ವಿನಕರಿಗೂ ಪಪ್ಪಕರಿಗಾದರೂ ಸಹ ಅನ್ಯೋನ್ಯವಾದರೆ ವಿಹಿತವೆಂತ, ಬಯಸಿ, ತರ್ಕವಿಷಯಗಳಲ್ಲಿ ಸ್ವಲ್ಪ ಲಘು ಬಿಡುವಷ್ಟರಲ್ಲಿ ಆ ಕಠಿಣಾರ್ಥರು, ಅಂಥಾ ಅನ್ಯೋನ್ಯವು ತೀರ ಅಸಾಧ್ಯವಾದ್ದರಿಂದ ಏನೂ ಲಘು ಬಿಡ ಬಾರದೆಂದು, ಹೇಳುತ್ತಿದ್ದರು. ಲುಥರನು ಜೀವದಿಂದಿರುವ ತನಕ ಆ ಉಭಯಾಭಿಪ್ರಾಯದವರು ಅವನ ಬುದ್ಧಿವಂತಿಕೆಯಿಂದ ಸಮಾಧಾನವಾಗಿದ್ದಾಗ್ಯೂ ಅವನ ಮರಣಕ್ಕೀಚೆ ವಿಶೇಷವಾಗಿ ಪುರಾವಸ್ಥಾಪನದ ಮತ್ತು ಪರಿಶುದ್ಧ ರಾತ್ರಿಭೋಜನದ ರಹಸ್ಯಾರ್ಥವನ್ನು ಕುರಿತು ಕಡು ತರದ ವಾದವು ಉದ್ಭವಿಸಿತು[2]; ಇದರಲ್ಲಿ ಆ ಎರಡು ಅಭಿಪ್ರಾಯದವರೂ ಪರಸ್ಪರ ಪ್ರೀತಿ ಬಿಟ್ಟದರಿಂದ ಪಾಪಕ್ಕೊಳಗಾದರು. ಅವರವರ ಬೋಧಕರು ದೇವವಾಕ್ಯದ ಹಲವು ವಚನಗಳ ಅರ್ಥವಾದಕ್ಕೆ ಸಂಬಂಧಿಸುವ ಬೇರೆ ಬೇರೆ ವಿಷಯಗಳನ್ನು ವಿನಯದೊಡನೆ ಗ್ರಂಥಗಳಿಂದ ದರ್ಶಿಸಿ ಸಿದ್ಧಾಂತ ಪಡಿಸುವದಕ್ಕೆ ಬದಲಾಗಿ ಅವನ್ನು ದೇವಾಲಯದ ಪ್ರಸಂಗದಲ್ಲಿ ತಂದು, ಬೇರೆ ಅಭಿಪ್ರಾಯದವರಿಗೆ ನಿಂದಿಸಿ, ಸಭ್ಯರನ್ನು ಅವರ ಮೇಲೆ ವೈಮನಸ್ಯ ಗೊಳ್ಳಿಸಿ, ಅವರ ಉದ್ಯೋಗಗಳನ್ನು ತೊಲಗಿಸಲೊದ್ದಾಡಿದ್ದು ಕ್ರಿಸ್ತನಾಥನ ಭಾವವನ್ನು ಅತಿಗಳೆದಂತಾಯಿತಲ್ಲವೇ?

ಈ ದುಃಖಕರವಾದ ಸಂಗತಿಯ ಕಾಲದಲ್ಲಿ ಕ್ರಿ. ಶ. 1560ನೇ ವರುಷ, ಸ್ಪೋ

1) 423, 427, 428, 455, 456, 468ನೇ ಪಾನು. 2) 443, 529ನೇ ಪಾನು.

ತ್ಲಂದಿನಲ್ಲಿ ಪುನಃಸ್ಥಾಪನೆಯು ಜಯಕ್ಕೆ ಬರುವಾಗಲೇ[1], ಆ ಮಹಾ ಕಾರ್ಯಶಾಲಿಯಾದ ಮೆಲಂಖ್ಥೋನನೆಂಬ ಸದ್ಭಕ್ತನು ತೀರಿ ಹೋದನು. ತನ್ನ ಮರಣಕ್ಕೆ ಕೊಂಚ ಹೊತ್ತು ಮುಂಚೆ ಅವನು—ಸಭೆಗಳು ಕ್ರಿಸ್ತ ಯೇಸುವಿನಲ್ಲಿ ಅನ್ಯೋನ್ಯವಾಗಿರ ಬೇಕೆಂಬ ಇದೊಂದೇ ಚಿಂತೆ ನನಗಿದೆ! ಎಂದು, ನಿರ್ಧಾರವಾಗಿ ನುಡಿದಿದ್ದನು. ಬಳಿಕ ಕ್ರಿ. ಶ. 1577ನೇ ವರುಷ ಗೆರ್ಮಾನಿಯದಲ್ಲಿ ದೊಡ್ಡ ಪಂಡಿತರಾದ ಕೆಲವರು ಲುಥರಿಕ ಬೋಧಕರು, ತಮ್ಮ ಶಾಖೆಯಲ್ಲಿ ದ್ವ್ಯರ್ಥತ್ವವು ಇನ್ನು ಮುಂದೆ ನಡೆಯ ಬಾರದೆಂದು, ಆಲೋಚಿಸಿ ಕೊಂಡು, ಮಗ್ದೆಬುರ್ಗೆಂಬ ಪಟ್ಣದ ಹತ್ತರ ಬೆರ್ಗೆನೆಂಬದೊಂದು ಮಠದೊಳಗೆ ಬಂದು ಕೂಡಿ, ಹೊಸದೊಂದು ಕಡು ಲುಥರಿಕವಾದ ವಿಶ್ವಾಸಪ್ರಮಾಣವನ್ನು ರಚಿಸಿ, ಅದಕ್ಕೆ, ಕೊಂಕೊರ್ದಿಯ ಅಂದರೆ ಐಕ್ಯಕ್ರಮಸೂತ್ರವೆಂತ, ಹೆಸರಿಟ್ಟರು. ಅದರಿಂದ ಅವರು ತರ್ಕಕ್ಕೆ ಕಾರಣವಾಗಿದ್ದಂಥ ದೇವವಾಗ್ವಚನಗಳ ಕುರಿತು ತಾವು ಒಡಂಬಡುವ ಟೀಕೆಯನ್ನೇ ಸ್ಥಾಪಿಸಿ, ಇತರ ಟೀಕೆಯನ್ನೆಲ್ಲಾ ಛೇದಿಸಿ ಬಿಟ್ಟರು. ಆದರೆ ತರ್ಕಗಳು ಈ ಸಲುವಾಗಿ ನಿಂತು ಹೋಗಲಳವಲ್ಲ. ಲುಥರಿಕ ಶಾಖೆಯವರಿರುವ ಕೆಲವು ದೇಶದವರು, ಔಗ್ಸ್ಬುರ್ಗಿನ ಕೊನ್ಫೆಸ್ಸಿಯೋನೇ[2] ತಮಗೆ ಸಾಕೆಂದು, ಆ ಕೊಂಕೊರ್ದಿಯವನ್ನು ವಿಸರ್ಜಿಸಿದ್ದು ಹೊರ್ತಾಗಿ ಲುಥರಿಕ ಶಾಖೆಯವರಿಗೂ ಚ್ವಿಂಗ್ಲಿಕ ಮತ್ತು ಕಲ್ವೀನಕ ಶಾಖೆಯವರಿಗೂ ಇದ್ದ ವ್ಯತ್ಯಾಸವು ಸ್ಥಿರ ಪಟ್ಟಂತಾಯಿತು; ಯಾಕಂದರೆ ಚ್ವಿಂಗ್ಲಿಕ ಮತ್ತು ಕಲ್ವೀನಕ ಆಲೋಚನಾರ್ಥಗಳನ್ನು ಕೀಳುವದಕ್ಕೆ ಸಹ ಆ ಕ್ರಮಸೂತ್ರವು ರಚಿತವಾಗಿತ್ತು. ಅಂಥಾ ಅನರ್ಥಕರವಾದ ವಾಕ್ಕಲಹದಿಂದ ಸಭ್ಯರ ಭಕ್ತಿಯೂ ನೀತಿಚರ್ಯೆಯೂ ಬೆಳೆಯದ್ದೇ ಸಹಜ; ಹೇರಳರು ಪಪ್ಪಕರಿಗೆ ವಿರೋಧವಾದ ಕಡು ತರ್ಕಕ್ಕೆ ಸುವಾರ್ತಾರ್ಥವನ್ನು, ಮತ್ತು ತಮಗೆ ಕೆಲವು ವಿಷಯಗಳಲ್ಲಿ ಸಮ್ಮತಿಸದ ಸೌವಾರ್ತಿಕರ ವಿರೋಧವಾದ ತರ್ಕಕ್ಕೆ ದೇವವಾಗ್ವಚನಗಳ ಟೀಕೆಯನ್ನು ಪ್ರಯೋಗಿಸುತ್ತಾ ಬರುವಲ್ಲಿ ಕ್ರೈಸ್ತತ್ವವು ಕೇವಲ ಬುದ್ಧಿಕಾರ್ಯವೇ ಎಂಬಂತೆ ತೋರಿತು; ದೇವಾಲಯದ ಹೆಚ್ಚು ಪ್ರಸಂಗಗಳಲ್ಲಿ ಸಭ್ಯರ ಹೃದಯಕ್ಕೆ ತಾಗದಂಥ ತರ್ಕಮಯ ಭಾವವೂ ನಿಷ್ಪ್ರಯೋಜಕ ವಿದ್ಯಾಡಂಭವೂ ಇರುತ್ತಿದ್ದವು. ನೀನು ಪ್ರಮಾಣಾನುಗುಣವಿಶ್ವಾಸಿಯೋ? ಎಂತ, ಕೇಳುವ ಪದ್ಧತಿಯು ಅಂದು ಬಹಳ; ನೀನು ವಿಶ್ವಾಸಾನುಗುಣಭಕ್ತನೋ? ಎಂತ, ಕೇಳುವದು ಕಡಿಮೆ. ಈ ತರದ ಶುಷ್ಕ ವಾದದ ಸ್ಥಿತಿಯು ಸುಮಾರು 100 ವರುಷವೇ ಉಳಿಯಿತು; ಹಾಗಾದರೆ ಯೇಸುವಿತರು ಸೌವಾರ್ತಿಕ ಮತದ ಹಬ್ಬುವಿಕೆಯನ್ನು ಬಹುಶಃ ನಿಲ್ಲಿಸಲಿಕ್ಕೆ ಸಮರ್ಥರಾದದ್ದು ಆಶ್ಚರ್ಯವೇನು?

1) 492ನೇ ಪಾನು. 2) 445ನೇ ಪಾನು.

ಹಿಂದೆ ಆ 100 ವರುಷದೊಳಗಿನ ಸೌವಾರ್ತಿಕರ ಅವಸ್ಥೆಯನ್ನು ಸೂಚಿಸಿದ್ದು ಸಾಧಾರಣವಾಗಿ ಸರಿ ಬಿದ್ದರೂ ಪರಿಶುದ್ಧಾತ್ಮದ ವೃತ್ತಿಯು ಅನೇಕಾನೇಕರಲ್ಲಿ ಪ್ರಬಲವಾಗಿದ್ದದ್ದು ಸಹ ನಿಶ್ಚಯ; ಆ ಕಾಲಾಂತರದಲ್ಲಿ ಸಹ ನಿಜ ಭಕ್ತಿಯ ಬೋಧಕರೂ ಸಭ್ಯರೂ ಆದಂಥ ಹೇರಳರು ಪ್ರಕಾಶಿಸುತ್ತಿದ್ದರು. 30 ವರುಷದ ಆ ಯುದ್ಧವೂ[1] ಕಡು ವಿಷಕರವಾದದೊಂದು ಸಾಂಕ್ರಾಮಿಕ ರೋಗವೂ ಗೆರ್ಮಾನಿಯದ ಮೇಲೆ ತಂದ ಮಹಾರ್ತಿಯೊಳಗೆ ಬಹಳ ಮಂದಿ ಸೌವಾರ್ತಿಕರು, ದೇವರ ಶಿಕ್ಷೆ ಎಂದು, ಪಶ್ಚಾತ್ತಾಪ ಗೊಂಡು, ಸುವಾರ್ತಾಮುಖದಿಂದ ವಿಶ್ವಾಸಾನುಗುಣಭಕ್ತರು ಆದದ್ದು ಅಲ್ಲದೆ ದೇವರ ಮೇಲಿನ ಸ್ಥಿರ ಭರವಸವೂ ತನ್ನನ್ನರಿಯದಂಥ ಪರಸ್ಪರ ಪ್ರೀತಿಯೂ ಸ್ವರ್ಗದ ನಿತ್ಯವಾದ ಸೊತ್ತನ್ನು ಹುಡುಕಿ ಕೊಳ್ಳುವಂಥ ಸಾಹಸವೂ ಸಕಲ ಸ್ಥಿತಿಯ ಸೌವಾರ್ತಿಕರಲ್ಲಿ ಗೋಚರವಾಗುತ್ತಿದ್ದವು. ಗೆರ್ಮಾನಿಯದಲ್ಲಿ ಆಗಿನ ಯಶಸ್ಸುಳ್ಳ ಬೋಧಕರು ರಚಿಸಿದ ದೇವವಾಗ್ವ್ಯಾಖ್ಯಕೃತಿ ಪ್ರಸಂಗಕೃತಿ ಗೀತಕೃತಿಗಳು ಈಗಲಾದರೂ ಆಶೀರ್ವಾದ ಹುಟ್ಟಿಸುತ್ತಾ ಅವೆ. ಅವರಲ್ಲಿ ಮೂವರ ಹೆಸರುಗಳನ್ನು ಇಲ್ಲಿ ಹೇಳದಿರ ತಕ್ಕದಲ್ಲ; ಒಬ್ಬನು ಯೋಹಾನ ಆರ್ನ್ದ್ತನು, ಮತ್ತೊಬ್ಬನು ಪೌಲ ಗೆರ್ಹರ್ದನು, ಇನ್ನೊಬ್ಬನು ಕ್ರಿಸ್ತಿಯಾನ ಸ್ಕ್ರೀವೆರನು. ಆದಾಗ್ಯೂ ಕ್ರೈಸ್ತರ ಸಜ್ಜೀವನದ ಬಲಿಷ್ಠ ಪುನಃಸ್ಥಾಪಕರಾಗುವದು ಅವರಿಂದಾಗಲಿಲ್ಲ; ಇದಕ್ಕೆ ದೇವರು ಅವರಿಗೆ ಸ್ವಲ್ಪ ಕಾಲದಿತ್ತಕಡೆ ಸ್ಪೇನೆರ ಮತ್ತು ಫ್ರುಂಕೆ ಎಂಬಿವರಿಬ್ಬರನ್ನು ಹುಟ್ಟಿಸಿ, ನೇಮಿಸಿದನು.

ಕ್ರಿ. ಶ. 1635ನೇ ವರುಷ, ತ್ರಿಂಶದ್ವರ್ಷದ ಯುದ್ಧಕಾಲದೊಳಗೆ, ಅಲ್ಸಾಸು ಶೀಮೆಯಲ್ಲಿ[2] ಒಬ್ಬ ಸೌವಾರ್ತಿಕ ಪ್ರಭುವಿನ ಮಂತ್ರಿಗೆ ಫಿಲಿಪ್ಪ ಯಕೋಬ ಸ್ಪೇನೆರನೆಂಬವನು ಮಗನಾಗಿ ಜನಿಸಿದನು. ಭಕ್ತಿಯುಳ್ಳ ತಂದೆ ತಾಯಿಗಳು, ತಮ್ಮ ಕುಮಾರನು ಸಭೋದ್ಯೋಗಿಯಾಗ ತಕ್ಕದ್ದೆಂತ, ಅಪೇಕ್ಷಿಸಿದ ಕಾರಣ ಅವನು ತನ್ನ ಜೀವಿತದ 16ನೇ ವರುಷ ಮೊದಲು ಸ್ತ್ರಾಸ್ಸುಬುರ್ಗ ಪಟ್ಣದಲ್ಲಿ[3], ಆ ಮೇಲೆ ಬಾಸೆಲು ಪಟ್ಣದಲ್ಲಿ[4] ದೇವಜ್ಞಾನದರ್ಶನವನ್ನು ಅಭ್ಯಾಸಿಸಿದನು. ಅಂಥಾ ಮಹಾ ವಿದ್ಯಾಶಾಲೆಗಳಲ್ಲಿ ಹೆತ್ತವರೆಂಬ ಶಿಕ್ಷಕರಿಲ್ಲದಿರುವ ಯೌವನಸ್ಥ ಅಭ್ಯಾಸಿಗಳಲ್ಲಿ ರೂಢಿಯಾಗಿರುವ ಲಘು ಮನಸ್ಸಿನ ಭಾವವೂ ಚರ್ಯೆಯೂ ಅವನಲ್ಲಿರಲಿಲ್ಲ; ಅವನು ಉಸುಬಿನ ಅರಣ್ಯದಲ್ಲಿ ಒಂದು ಹೂವು ಇದ್ದಂತೆ ಅವರಲ್ಲಿರುವನು. ತನ್ನ ಹೆತ್ತವರಿಗೆ ಬಹಳ ಮಕ್ಕಳಿದ್ದದರಿಂದ ಅವರು ತನಗೆ ಅಲ್ಪ ಸ್ವಲ್ಪ ಹಣ ಮಾತ್ರ ಕಳುಹಿಸಿ ಕೊಡಬಹುದಾದ ನಿಮಿತ್ತ ಅವನು ಧನವಂತ ವಿದ್ಯಾರ್ಥಿಗಳಿಗೆ ಪಾಠ ಕಲಿಸಿ ಕೊಟ್ಟು ತ

---

1) 519 — 527ನೇ ಪಾನು. 2) 303, 410ನೇ ಪಾನು; ಈ ಶೀಮೆಯು ಆವಾಗ ಗೆರ್ಮಾನಿಯ ಸಾಮ್ರಾಜ್ಯದ್ದೊಂದು ಭಾಗವಾಗಿತ್ತು. 3) 410ನೇ ಪಾನು. 4) 421, 434, 436ನೇ ಪಾನು.

ಕ್ಕಷ್ಟು ಹಣ ದುಡಿದು ಕೊಳ್ಳುತ್ತಿದ್ದನು. ಅವನು ಆ ಕಾಲದಲ್ಲಿಯೂ ಪರಿಶುದ್ಧ ಬರಹವನ್ನೂ ವಿಶ್ವಾಸಾಭಿವರ್ಧಕವಾದ ಇತರ ಗ್ರಂಥಗಳನ್ನೂ ಅಧ್ಯಯನ ಮಾಡುತ್ತಾ, ತಪ್ಪದೆ ದೇವಾಲಯದೊಳಗಿನ ಆರಾಧನೆಗೆ ಹೋಗುತ್ತಾ ಇದ್ದನು. ಕರ್ತನ ದಿವಸವೆಂಬ ಆದಿತ್ಯವಾರದ ಪರಿಶುದ್ಧಾಚಾರವು ಅವನಿಗೆ ಬಹಳ ಶ್ರೇಷ್ಠವೆನ್ನಿಸಿತು; ಆ ದಿನದಲ್ಲಿ ತನ್ನ ಕ್ರೈಸ್ತ ಭಕ್ತಿಯನ್ನು ಪೋಷಿಸುವದೇ ಅವನ ಕೆಲಸವು. ಒಂದು ವರುಷದ ಪೂರ್ತಿಗೆ ಅವನು ಆದಿತ್ಯವಾರದ ಹಗಲೆಲ್ಲಾ ಕೊಂಚವಾದರೂ ಆಹಾರ ತಕ್ಕೊಳ್ಳದೆ, ಬೈಸಾರಿ ಹೊತ್ತಿಗೆ ಮಾತ್ರ ಒಂದು ರೊಟ್ಟಿಯ ಚಿಕ್ಕ ತುಂಡಿನಿಂದ ತನ್ನ ಕಡು ಹಶಿವೆಯನ್ನು ಸ್ವಲ್ಪ ಉಪಶಮಿಸುತ್ತಿದ್ದನು; ಆದರೆ ಅಮಿತಾಭ್ಯಾಸದಿಂದಲೂ ಈ ಸ್ವೇಚ್ಛೋಪವಾಸವ್ರತದಿಂದಲೂ ತನ್ನ ಶರೀರಕ್ಕೆ ಅಸೌಖ್ಯ ಬಂದ ಕಾರಣ ಇಂಥಾ ವ್ರತವನ್ನು ಬಿಡಲವಶ್ಯವಾಯಿತು. ಪರಿಶುದ್ಧ ಬರಹದ ಅರಿವಿಗೆ ಯೋಗ್ಯವಾದ ಎಬ್ರೇಯ ಭಾಷೆಯಲ್ಲಿಯೂ ಗ್ರೀಕದಲ್ಲಿಯೂ ಅವನು ಬಹಳ ಘಟ್ಟಿಗನಾದನು. ಇನ್ನು ವಿದ್ಯಾರ್ಥಿಯಾಗಿರುವ ಕಾಲದಲ್ಲಿ ಅವನು ಪ್ರಯಾಣಕ್ಕೆ ಹೊರಟು, ಫ್ರಂಚಿನಲ್ಲಿಯೂ ಸ್ವಿತ್ಸೆರ್ಲಂದಿನಲ್ಲಿಯೂ ಹಲವು ಕಾಲ ಕಳೆದು, ಜ್ವಿಂಗ್ಲಿಕ ಮತ್ತು ಕಲ್ವೀನಕ ಶಾಖೆಯ ಭಕ್ತರೊಡನೆ ಸ್ನೇಹಸಂಪರ್ಕದಿಂದಿರುವಲ್ಲಿ ಉಭಯ ಶಾಖೆಯವರ ಅಭಿಪ್ರಾಯ ಚನ್ನಾಗಿ ತಿಳಿದು, ಅವರೆಲ್ಲರ ಮೇಲೆಯೂ ಮನ್ನಣೆ ಇಡುವವನಾಗಿ, ತನ್ನ ಲುಥರಿಕ ಶಾಖೆಯ ಬೋಧಕರಲ್ಲಿ ಅನೇಕ ಸರ್ತಿ ತೋರುತ್ತಿರುವ ಅಸಹನಭಾವಕ್ಕೆ ದೂರದಲ್ಲುಳಿದನು. ಅವನ 28ನೇ ವಯಸ್ಸಿಗೆ, ಅವನು 12 ವರುಷವೇ ಮಹಾ ವಿದ್ಯಾಶಾಲೆಗಳಲ್ಲಿರುತ್ತಿದ್ದನಂತರ[1], ಅವನನ್ನು ಸ್ತ್ರಾಸ್ಬುರ್ಗಿನಲ್ಲಿ ಪ್ರಸಂಗಿಕನಾಗುವದಕ್ಕೆ ಕರೆಯಲು, ಅವನು, ಅಂಥಾ ಮಂಗಳೋದ್ಯೋಗಕ್ಕೆ ತಾನು ಯೋಗ್ಯನಲ್ಲವೆಂತ, ಆರಂಭದಲ್ಲಿ ಅನುಮಾನ ಪಟ್ಟು, ಕಡೆಯಲ್ಲಿ ದೇವರ ಮೇಲೆ ನಂಬಿಕೆ ಇಟ್ಟು, ಆ ಉದ್ಯೋಗ ಸ್ವೀಕರಿಸಿ, 3 ವರುಷ ಮಿಗಿಲಾಶೀರ್ವಾದದೊಡನೆ ನಡಿಸುತ್ತಿರಲು, ದೇವಜ್ಞಾನದರ್ಶನದ ಮಹಾ ಪಾಂಡಿತ್ಯವನ್ನು ಸಹ ಹೊಂದಿ, ಆ ಪಟ್ಣದ ಮಹಾ ವಿದ್ಯಾಶಾಲೆಯಲ್ಲಿಯೂ ವಾಗ್ನಿರೂಪಣಗಳನ್ನು ಹೇಳುತ್ತಾ ಬಂದನು; ಅದಲ್ಲದೆ ಅವನು ಆ ಸಮಯದಲ್ಲಿ ಒಬ್ಬ ದೇವಭಕ್ತಳಾದ ಕನ್ಯೆಯನ್ನು ಮದಿವೆ ಮಾಡಿ ಕೊಂಡನು.

ಕ್ರಿ. ಶ. 1666ನೇ ವರುಷ, ಸ್ಪೇನೆರನು 33 ವರುಷದವನಾಗಿರುವಂದು, ಗೆರ್ಮಾನಿಯದ ಮೈನು ನದಿಯ ತೀರದಲ್ಲಿರುವ ಫ್ರಂಕ್ಫೂರ್ತೆಂಬ ರಾಜ್ಯಪಟ್ಣದ[2] ಅಧಿಕಾರಸ್ಥರು, ನಮ್ಮ ಪ್ರಧಾನ ಪ್ರಸಂಗಿಕನೂ ಸಕಲ ಬೋಧಕರ ಮುಖ್ಯಸ್ಥನೂ

---

1) ಸಾಧಾರಣ ಪಕ್ಷಕ್ಕೆ 3 ವರುಷ ಮಾತ್ರ ಒಂದು ಮಹಾ ವಿದ್ಯಾಶಾಲೆಯಲ್ಲಿ ಕಲಿಯುವದು ಸಾಕು. 2) 428, 444, 445ನೇ ಪಾನು.

ಆಗುವ ಹಾಗೆ ನಮ್ಮ ಪಟ್ಣಕ್ಕೆ ಬನ್ನಿ! ಎಂದು, ನಾನಾ ಪ್ರಕಾರ ಬಿನ್ನವಿಸಿದ್ದಕ್ಕೋಸ್ಕರ ಅವನು ದೇವರ ಹೆಸರಿನಲ್ಲಿ ಆ ದೊಡ್ಡ ಉದ್ಯೋಗ ವಹಿಸಿ ಕೊಂಡು, ಬಹು ನಂಬಿಕೆಯಿಂದ ಪ್ರವರ್ತಿಸುವವನಾದನು. ಹಿಂದೆ ಸೂಚಿಸಿದ ಆ ಶುಷ್ಕವಾದ ಪ್ರಸಂಗರೀತಿಯನ್ನು ಅವನು ಪೂರಾ ತ್ಯಜಿಸಿ, ಬೇರೆ ಬೋಧಕರಂತೆ ತನ್ನ ಪ್ರಸಂಗಗಳಿಗೆ ಎಬ್ರೇಯ ಮತ್ತು ಗ್ರೇಕ ಮಾತುಗಳಿಂದ ಅನರ್ಥಕ ಅಲಂಕಾರ ಕೊಡದೆ, ಇತರ ಶಾಖೆಯವರನ್ನು ಕುರಿತು ಅವುಗಳಲ್ಲಿ ತುಚ್ಛೀಕಾರದ ಮಾತುಗಳನ್ನು ಶೇರಿಸದೆ— ತನ್ನ ಪ್ರಸಂಗಗಳು ಸಭ್ಯರೆಲ್ಲರಿಗೆ ಸ್ಪಷ್ಟ ತಿಳಿದು, ಅವರ ಭಕ್ತಿಯನ್ನು ಸಾಕುವದಕ್ಕೆ ಮಾತ್ರ ಆಗಲಿ! ಎಂತ, ಒಂದೇ ಅಭಿಲಾಷೆಯುಳ್ಳವನಾಗಿದ್ದು, ಪೆರಿಕೊಪೆಗಳನ್ನು[1] ಹೊರ್ತಾಗಿ ಸಕಲ ದೇವವಾಕ್ಯವನ್ನೂ ತನ್ನ ಪ್ರಸಂಗಗಳಿಗೆ ಆಧಾರ ಮಾಡಿ ಕೊಂಡು, ವಿಶ್ವಾಸಪ್ರಮಾಣಸೂತ್ರಗಳನ್ನು ನಿದರ್ಶಿಸುತ್ತಿದ್ದದು ಬಿಡದಿದ್ದರೂ ಮುಖ್ಯವಾಗಿ—ಕ್ರೈಸ್ತರು ಭಕ್ತಿಮಯ ಜೀವನದಿಂದ ತಮ್ಮ ವಿಶ್ವಾಸವನ್ನು ತೋರಿಸಿ, ಪ್ರಮಾಣಿಸ ಬೇಕೆಂತ, ಹೇಳುವ ಸೌವಾರ್ತಿಕ ತಾತ್ಪರ್ಯವನ್ನು[2] ತಿರಿ ತಿರಿಗಿ ಸಭ್ಯರ ಹೃದಯಕ್ಕೆ ಪ್ರಚಂಡವಾಗಿ ತಾಗಿಸುತ್ತಾ ಇದ್ದನು.

ತನ್ನ ಸುಪ್ರಸಂಗಗಳಿಂದ ವಿನಹ ತನ್ನ ಉತ್ತಮ ತರದ ಬಾಲಬೋಧನೆಯಿಂದ ಸಹ ಅತಿರೇಕ ಸುಕೃತ ಹುಟ್ಟಿಸುತ್ತಿದ್ದನು. ದೇವಾಲಯದೊಳು ಬಾಲಬೋಧನೆಯು ಅಂದು ಅನೇಕ ಕಡೆಯಲ್ಲಿ ಬಡ ಸ್ಥಿತಿಯಲ್ಲಿತ್ತು; ಹ್ಯಾಗಂದರೆ ಹಲವರು ಬೋಧಕರು, ಅದರಲ್ಲಿ ರುಚಿ ಇಲ್ಲವೆಂತ, ಅದರ ವಿಷಯ ಆಲಸ್ಯದಿಂದಿದ್ದರು; ಬೇರೆ ಹಲವರು ಅದರಲ್ಲಿ ತಮ್ಮ ವಿದ್ಯಾಡಂಭವನ್ನೂ ತರ್ಕಯುಕ್ತಿಯನ್ನೂ ಕಾಣಿಸಿದರಷ್ಟೇ. ಸ್ಪೇನೆರನು ಪಟ್ಣದ ಪ್ರಧಾನ ಪ್ರಸಂಗಿಯಾದ ಕಾರಣ ಬಾಲಬೋಧನೆ ಮಾಡುವ ಋಣವು ತನಗಿಲ್ಲದಿದ್ದಾಗ್ಯೂ ಅದನ್ನು ಹೊತ್ತು, ಬಾಲಕರಿಗೆ ಚಲೋವಾದ ಸಾಹಸ ಚತುರತೆಗಳಿಂದ ಉಪದೇಶಿಸುತ್ತಿರುವಲ್ಲಿಗೆ ಬೇಗ ಪ್ರಾಯದವರು ಸಹ ತಮ್ಮ ಮಕ್ಕಳ ಸಂಗಡ ಬಂದು, ಇವರ ಸಾಲಿನಲ್ಲಿ ನಿಲ್ಲಲಿಕ್ಕೆ ನಾಚದೆ, ಅನೇಕ ಪ್ರಸಂಗಗಳಿಗಿಂತ ಒಂದೇ ಬಾಲಬೋಧನೆಯಿಂದ ಅಧಿಕ ಜ್ಞಾನವು ಪ್ರಾಪಿಸಿತೆಂತ, ಅರುಹುವರು.

ಸ್ಪೇನೆರನು 3 ವರುಷ ಫ್ರಂಕ್ಫೂರ್ತಿನಲ್ಲಿ ಇದ್ದನಂತರ ಅವನದೊಂದು ಪ್ರಸಂಗದಿಂದ ಅಲ್ಲಿಯ ಸಭೆಯಲ್ಲಿ ಒಂದು ಮಹಾ ಉದ್ವೇಗವು ಹುಟ್ಟಿತು. ಅವನು ಅದರಲ್ಲಿ ಫರಿಸಾಯರ[3] ಕಪಟಮಯ ನೀತಿಯನ್ನು ವರ್ಣಿಸುತ್ತಿರುವೆಡೆ, ಪುಣ್ಯವೂ ಶುದ್ಧಿಯೂ ಸ್ಥೂಲ ಪಾತಕಗಳನ್ನು ಬಿಡುವದರಿಂದಾಗಲಿಲ್ಲವೆಂತ, ಹೇಳಿ, ಕ್ರೈಸ್ತರಲ್ಲಿ ಫರಿಸಾಯರಂಥವರ ಭಕ್ತಿಯ ಇಳಿತವನ್ನೂ ಹಮ್ಮನ್ನೂ ಸತ್ಯ ಮಾಜದಂಥ ರೀತಿಯಿಂದ ವಿವರಿಸಿದ್ದನು. ಅದು ನಿಮಿತ್ತವಾಗಿ ಬಹು ಜನರು, ತಮಗೆ ಮೋ

1) 435ನೇ ಪಾನು. 2) ಯಕೋಬ. 2, 17—26. 3) 21, 371ನೇ ಪಾನು.

ಕ್ಷಪದವಿ ಪ್ರಾಪಿಸುವದೋ? ಇಲ್ಲವೋ? ಎಂತ, ಭಯ ಪಡುವವರಾಗಿ, ಅದನ್ನು ಪಡ ಕೊಳ್ಳುವ ಹಾಗೆ ಹೆಚ್ಚು ಜಾಗರೂಕರಾಗಿ, ತಾವು ಆದಿತ್ಯವಾರಗಳ ಪ್ರಾತಃ ಕಾಲ ಕೇಳುತ್ತಿರುವ ಪ್ರಸಂಗವನ್ನು ಇನ್ನೊಮ್ಮೆ ಸ್ಮರಿಸಿ ಮನನ ಮಾಡಿ ಕೊಳ್ಳುವ ದಕ್ಕೂ ದೇವವಾಕ್ಯವನ್ನೋದುವದಕ್ಕೂ ತಮ್ಮ ತಮ್ಮ ಮನೆಗಳಲ್ಲಿ ಸಂಘವಾಗಿ ನೆ ರೆಯಲಿಕ್ಕೆ ಹತ್ತಿದರು. ಸ್ಪೇನೆರನು ಅದು ತಿಳಿದು, ಹೃತ್ಸಂತುಷ್ಟನಾಗಿ, ತಾನು ಆ ಸಮಾಗಮಗಳನ್ನು ನಡಿಸ್ಯೇನೆಂತ, ತನ್ನ ಮುಖ್ಯಸ್ಥರಿಗೆ ಮತ್ತು ಜತೆಬೋಧಕರಿಗೆ ಬಿನ್ನವಿಸಿ, ಅವರೆಲ್ಲರ ಸಮ್ಮತಿಯನ್ನು ಕೈಗೊಂಡನು. ಈ ಪ್ರಕಾರ ಭಕ್ತಸಮಾಗ ಮಗಳು ಎಂಬ ಹೆಸರು ಹೊಂದಿದಂಥ ಸಂಘಗಳು ಹುಟ್ಟಿದವು. ಸ್ಪೇನೆರನಿಗೂ ಅ ವನ ಸಮ್ಮತರಿಗೂ ಅವುಗಳ ದೆಸೆಯಿಂದ ಪಿಯೆತಿಸ್ತರು ಅಂದರೆ ಭಕ್ತಕರು ಎಂಬ ಉಪನಾಮವು ಎದುರಾಳಿಗಳಿಂದ ಬಂತು. ಆರಂಭದಲ್ಲಿ ಸ್ಪೇನೆರನು ಅಂಥ ಸಮಾ ಗಮಗಳನ್ನು ತನ್ನ ಗೃಹದೊಳಗೆ ಕೂಡಿಸುತ್ತಿರುವೆಡೆ ಅವನು ಮೊದಲು ದೇವರಿಗೆ ಪ್ರಾರ್ಥಿಸಿ, ಹೊಸ ಒಡಂಬಡಿಕೆಯ ಒಂದು ಪ್ರಪಾಠಕವನ್ನೋದಿ, ಟೀಕಿಸುವನು; ಬಳಿಕ ಕೇಳಿದವರು ತಮ್ಮ ಜ್ಞಾನಾಭಿವೃದ್ಧಿಗೋಸ್ಕರ ಕಠಿಣಾರ್ಥದ ವಿಷಯ ಪ್ರಶ್ನೆ ಹಾಕುವರು; ತರ್ಕದ ಮಾತು ಒಂದೂ ನಡಿಯ ಬಾರದು. ಆ ಸಮಾಗಮಗಳಿಗೆ ಹೇರಳರ ಮೆಚ್ಚಿಗೆ ದೊರೆಯಿತು; ದೊಡ್ಡ ಸಣ್ಣ ಸ್ಥಿತಿಯವರೂ ಪಂಡಿತಾಪಂಡಿತ ರೂ ಪುರುಷಸ್ತ್ರೀಯರೂ ಸಮುದಾಯವಾಗಿ ಅವಕ್ಕೆ ನೆರೆಯುವದರಿಂದ ಸ್ಪೇನೆರ ನು ಅವನ್ನು ಕಾಲಗತಿಯಲ್ಲಿ ದೇವಾಲಯದೊಳಗೆ ನಡಿಸಲವಶ್ಯವಾಯಿತು.

ತನ್ಮಧ್ಯ ನಮ್ರಗುಣಿಯಾದ ಸ್ಪೇನೆರನು, ತಾನು ದೇವಸಂಕಲ್ಪದ ಮೇಲೆ ಕ್ರೈ ಸ್ತರ ಸಜ್ಜೀವನದ ಪುನಃಸ್ಥಾಪಕನೆಂತ, ಆಲೋಚಿಸದೆ, ಇನ್ನು ಮುಂದೆ ತಾನು ರ ಚಿಸಿ ಪ್ರಕಟಿಸುವ ಭಕ್ತ್ಯನುಭವವುಳ್ಳ ಕೃತಿಗಳಲ್ಲಿ ಸಹ ಅಂಥಾ ಅಭಿಮಾನವನ್ನು ತೋರಿಸಲಿಲ್ಲ; ಜತೆಕ್ರೈಸ್ತರನ್ನು ಮೋಕ್ಷಮಾರ್ಗದಲ್ಲಿ ಶೇರಿಸುವದೇ ಅವನ ದೊ ಡ್ಡ ಅಭಿಪ್ರಾಯವು. ಆ ಕೃತಿಗಳಲ್ಲಿ ಅವನು ನಿರ್ಧಾರಣವಾಗಿ ಜನರ ಮನಸ್ಸಿನ ಲ್ಲಿಟ್ಟದ್ದು ಏನಂದರೆ—ದೇವಜ್ಞಾನದರ್ಶನದ ವಿದ್ಯಾರ್ಥಿಗಳು ಮಹಾ ವಿದ್ಯಾಶಾಲೆ ಗಳಲ್ಲಿರುವಾಗಲೇ ಅವರಿಗೆ ಪರಿಶುದ್ಧ ಬರಹದ ಅಭ್ಯಾಸಕ್ಕೂ ಸಭ್ಯಾತ್ಮಪರಿಪಾಲ ನಕ್ಕೂ ಸುಶಿಕ್ಷೆ ಕೊಡ ಬೇಕು. ಪ್ರಸಂಗಗಳು ಭಕ್ತಿಗೃಹ ಕಟ್ಟುವ ಉದ್ದಿಶ್ಯದವುಗ ಳಾಗಿ, ತರ್ಕವಾದದಲ್ಲಿ ಬೆರೆಯ ಬಾರದು; ಯಾಕಂದರೆ ಕ್ರೈಸ್ತತ್ವದ ಮುಖ್ಯ ತಾತ್ಪ ರ್ಯವು ವಿದ್ಯೆಯಲ್ಲ, ಬಾಲಕರಿಗೂ[1] ಪ್ರಕಟವಾಗುವ ಸುವಾರ್ತೆ ಎಂಬ ಮಹಾ ಜ್ಞಾನದ ಮೂಲಕ ಜನಿಸುವ ಸದ್ಭಕ್ತಿಯುಕ್ತ ಕ್ರಿಯೆಯೇ. ಪ್ರಸಂಗಿಕರಿಗೂ ಅವ ರ ಸಭ್ಯರಿಗೂ ಹೆಚ್ಚು ಅನ್ಯೋನ್ಯವಾಗ ಬೇಕು; ಸರ್ವ ಕ್ರೈಸ್ತರೂ ಏಕೀಭಾವದ

1) ಲೂಕ. 10, 21.

ಯಾಜಕಕುಲವಾಗಿದ್ದಾರೆಂಬ ದಿವ್ಯ ಸತ್ಯವು[1] ತಿರಿಗಿ ಪೂರಾ ಒದಗುವಂತೆ ಸಭ್ಯರು ತಾವು ದೇವಪ್ರಾರ್ಥನೆ ಮಾಡುವದಕ್ಕೂ ದೇವವಾಕ್ಯವನ್ನೋದಿ ಧ್ಯಾನಿಸಿಕೊಂಡು ಸಂಭಾಷಿಸುವದಕ್ಕೂ ಭಕ್ತಸಮಾಗಮಗಳಾಗಿ ಕೂಡ ಬೇಕು; ಸಭ್ಯರು ಸಭಾಪರಿಪಾಲನದಲ್ಲಿ ಹೆಚ್ಚಾಗಿ ಪಾಲುಗಾರರಾಗ ಬೇಕು[2].—ಅವನ ಈ ಅಪೇಕ್ಷಾರ್ಥವು ಅನೇಕ ಪಟ್ಣಗಳವರಿಗೆ ಒಪ್ಪಿಗೆಯಾಯಿತು; ಅದು ಸಿದ್ಧಿಸಿದಲ್ಲಿ ಬೇಗ ಒಳ್ಳೇ ಫಲ ಹುಟ್ಟಿತು. ಅಲ್ಲಲ್ಲಿ ಒಬ್ಬ ತಾರ್ಕಿಕ ಬೋಧಕನು ಸ್ಪೇನೆರನಿಗೆ ಅಪಲಾಪಿಸಿದರೂ ಇವನು ಅದನ್ನೆಲ್ಲಾ ಅತಿ ಪ್ರೀತಿಯಿಂದ ಸಹಿಸುತ್ತಿದ್ದ ಕಾರಣ ಅಂಥವನ ಬಾಯಿಯು ಮುಚ್ಚಿ ಹೋಯಿತು.

ಸ್ಪೇನೆರನು ಫ್ರಂಕ್ಫೂರ್ತಿನಲ್ಲಿ 20 ವರುಷ ಇದ್ದನಂತರ ಅವನು ಕ್ರೈಸ್ತ ಸಭೆಗೆ ಮತ್ತಷ್ಟು ಆಶೀರ್ವಾದವನ್ನುತ್ಪಾದಿಸುವದೊಂದು ಉದ್ಯೋಗವು ಅವನಿಗೆ ದೊರಕಿತು. ಹ್ಯಾಗಂದರೆ ಸಕ್ಸೆನು ದೇಶದ ರಾಜಸ್ವೀಕಾರ ಪ್ರಭುವಾದ 3ನೇ ಗೆಯೋರ್ಗನೆಂಬವನು ಫ್ರಂಕ್ಫೂರ್ತನ್ನು ದಾಟಿ ಹೋಗುವಾಗ ಅವನದೊಂದು ಪ್ರಸಂಗದಿಂದ ಮನ ಸೋತು, ಅವನನ್ನು, ತನ್ನ ರಾಜಧಾನಿಯಾದ ದ್ರೇಸ್ಡೆನಿನಲ್ಲಿ ತನ್ನ ಅರಮನೆಯ ಪ್ರಧಾನ ಪ್ರಸಂಗಿಕನು ಆಗ ಬೇಕೆಂತ, ಬೇಡಿ ಕೊಂಡನು; ಆ ಉದ್ಯೋಗವು ಲುಥರಿಕ ಶಾಖೆಯ ಸಭೆಯಲ್ಲಿ ಆಗ ಶ್ರೇಷ್ಠವಾದದು. ಸ್ಪೇನೆರನು ಕ್ರಿ. ಶ. 1686ನೇ ವರುಷ ಅದಕ್ಕೆ ಹೋಗಿ, ಎಂದಿನಂತೆ ಭಕ್ತಿಮಯ ವೃತ್ತಿ ನಡಿಸುತ್ತಾ ಬಂದನು.

ಸಕ್ಸೆನು ದೇಶದ ಲೈಪ್ಸಿಗೆಂಬ[3] ಪಟ್ಣದಲ್ಲಿಯೂ ಮುಂತಾದ ಸ್ಥಳಗಳಲ್ಲಿಯೂ ಇರುವ ಮಹಾ ವಿದ್ಯಾಶಾಲೆಗಳಲ್ಲಿ ಆ ಸಮಯ ಮಹಾಪಂಡಿತರು ದೇವವಾಕ್ಟೀಕೆಯ ನಿರೂಪಣಗಳನ್ನಲ್ಲ ವಿಶ್ವಾಸಪ್ರಮಾಣಗ್ರಂಥಟೀಕೆಯವನ್ನೇ ಮಾತ್ರ ಕೊಡುತ್ತಿರಲಿಕ್ಕೆ, ಸ್ಪೇನೆರನು ಲೈಪ್ಸಿಗಿನಲ್ಲಿ ದೇವವಾಕ್ಟೀಕೆಯ ಅಭಿಲಾಷೆಯನ್ನು ಪುನಃಸ್ಥಾಪಿಸಲೆಸಗಿದ್ದು ಸಾಗಿತು. ಹ್ಯಾಗಂದರೆ ಹಿಂದಗಡೆ ಬಹು ಪ್ರಖ್ಯಾತನಾದ ಔಗುಸ್ತ ಹೆರ್ಮನ ಫ್ರಂಕೆಯು ಪ್ರಮುಖ್ಯನಾದ ಮೂವರು ಯೌವನಸ್ಥ ಪಂಡಿತರು ತಡೆಯದೆ ಒಡಂಬಟ್ಟು, ಆ ಮಹಾ ವಿದ್ಯಾಶಾಲೆಯಲ್ಲಿ ಗೆರ್ಮಾನ ಭಾಷೆಯಿಂದ ಪರಿಶುದ್ಧ ಬರಹವನ್ನು ಕುರಿತು ಭಕ್ತಿಯುಕ್ತವಾಗ್ನಿರೂಪಣಗಳನ್ನು ಆದಿತ್ಯವಾರಂಪ್ರತಿ ಸಾಯಂಕಾಲದಲ್ಲಿ ಕೊಡುವವರಾದರು; ಅವನ್ನು ಕೇಳುವದಕ್ಕೆ ಹೇರಳ ಮಂದಿ ವಿದ್ಯಾರ್ಥಿಗಳು ಮಾತ್ರವಲ್ಲದೆ ನಗರದ ಗೃಹಸ್ಥರಲ್ಲನೇಕರು ಸಹ ಬರ ತೊಡಗಿದರು. ಅಂಥಾ ವಿದ್ಯಾರ್ಥಿಗಳಲ್ಲಿ ಬೇಗ ಹೃತ್ಪರಿಣಾಮವು ಗೋಚರಿಸಿತು; ಅವರು ಸತ್ಯವಂತಿಕೆಯಿಂದಲೂ ನೀತಿಚರ್ಯೆಯಿಂದಲೂ ಒಪ್ಪಿ, ಉಡಿ ತೊಡಿಗೆಗಳಲ್ಲಿ ಮಿ

1) 482ನೇ ಪಾನು. 2) 432, 481ನೇ ಪಾನು ಸರಿ ನೋಡು. 3) 421, 423, 523, 525ನೇ ಪಾನು.

ತಸ್ಥರಾಗಿ, ಇತರ ವಿದ್ಯಾರ್ಥಿಗಳು ಹೋಗುವ ಆಟಪಾಟಗಳಿಗೆ ದೂರದಲ್ಲಿರುವರು; ಆದ್ದರಿಂದ ಅವರಿಗೆ ಸಹ ಭಕ್ತಕರೆಂಬ ಅಡ್ಡಹೆಸರು ಬಂದದ್ದು ಏನು ಚೋದ್ಯ? ಕೆಲವರು ಮಹಾಪಂಡಿತರು, ದೇವರ ವಾಕ್ಯವನ್ನು ಕುರಿತ ಆ ನಿರೂಪಣಗಳು ನಡೆಯುವ ತುಸಕ ತಮ್ಮ ನಿರೂಪಣಗಳನ್ನು ಕೇಳುವವರು ಕಡಿಮೆಯಾಗುತ್ತಾರೆಂತ, ಆ ಮೂವರು ಪಂಡಿತರಿಗಲ್ಲದೆ ಮುಖ್ಯವಾಗಿ ಸ್ಪೇನೆರನಿಗೆ ಸಹ ಕೋಪ ಪಟ್ಟು, ರಾಜಸ್ವೀಕಾರ ಪ್ರಭುವಿನ ಹತ್ತರ ಇವನ ಮೇಲೆ ವಿಧವಿಧ ದೂರು ಹೇಳುತ್ತಾ ಬರಲು, ಆ ಪ್ರಭುವು, ಆ ದೂರು ಸುಳ್ಳೇ ಎಂತ, ಬಲ್ಲವನಾಗಿದ್ದರೂ ಸ್ಪೇನೆರನು ತನಗೂ ತನ್ನ ಅರಮನೆಯವರಿಗೂ ಏನೂ ಮುಖದಾಕ್ಷಿಣ್ಯವಿಲ್ಲದೆ ಅಕ್ರಮಕ್ಕೋಸ್ಕರ ಗದರಿಸುತ್ತಿರುವ ಕಾರಣ ಕಡೆಯಲ್ಲಿ ಅವನಿಗೆ ಬೇಸತ್ತನು.

ಹೀಗಿರಲಾಗಿ ದ್ರೇಸ್ಡೆನಿನಲ್ಲಿ ಸ್ಪೇನೆರನ ಸುವೃತ್ತಿಗೆ ಅಭ್ಯಂತರವಾದಾಗಲೇ ಪೂರ್ಣ ಸಕ್ಸೆನು ದೇಶದ ಹೇರಳರಲ್ಲಿ ಸಜ್ಜೀವನವನ್ನು ಹುಟ್ಟಿಸಿದಂಥ ಅವನನ್ನು ದೇವರು, ಇತರ ಸ್ಥಳಗಳಲ್ಲಿಯೂ ಆ ಪ್ರಕಾರದ ವೃತ್ತಿ ನಡಿಸೆಂದು, ಬ್ರಂದೆನ್ಬುರ್ಗ್ ದೇಶಕ್ಕೆ ಕಳುಹಿಸಿದನು. ಹ್ಯಾಗಂದರೆ ಕ್ರಿ. ಶ. 1691ನೇ ವರುಷ ಆ ದೇಶದ ರಾಜಸ್ವೀಕಾರ ಪ್ರಭುವಾದ 3ನೇ ಫ್ರೀದೆರೀಕನು ಅವನನ್ನು ಬೆರ್ಲೀನು ಪಟ್ಣದಲ್ಲಿ ಪ್ರಸಂಗಿಕನೂ ಕೊನ್ಸಿಸ್ತೋರಿಯಾಲ ಮಂತ್ರಿಸಭೆಯವನೊಬ್ಬನೂ[1] ಆಗುವದಕ್ಕಾಗಿ ಕರಿಸಿ ಕೊಂಡನು; ಹಿಂದಗಡೆ ಕ್ರಿ. ಶ. 1700ನೇ ಅಬ್ದ ಪ್ರುಸ್ಸಿಯದ ಪ್ರಥಮ ಅರಸನಾಗಿ, 1ನೇ ಫ್ರೀದೆರೀಕ ರಾಜನೆನ್ನಿಸಿ ಕೊಂಡವನು ಆ ಪ್ರಭುವೇ; ಅವನು ಹಿಂದೆ ನಿಮಗೆ ಗೊತ್ತಾದ ಫ್ರೀದೆರೀಕ ವಿಲ್ಹೆಲ್ಮನೆಂಬ ಆ ದೊಡ್ಡ ರಾಜಸ್ವೀಕಾರ ಪ್ರಭುವಿನ ಕುಮಾರನು[2]. ಸ್ಪೇನೆರನು ಬೆರ್ಲೀನಿನಲ್ಲಿ ಸಹ ಅತ್ಯಾಶೀರ್ವಾದಕರನಾಗಿ ಪರಿಶೋಭಿಸುವವನಾದನು. ಸ್ವಲ್ಪ ಕಾಲದಿತ್ತ ಅವನು ಆ ಪ್ರಭುವಿನ ಅಪ್ಪಣೆಯ ಮೇರೆಗೆ ಹಲ್ಲೆ ಎಂಬ ಪಟ್ಣದಲ್ಲಿ[3] ಒಂದು ಮಹಾ ವಿದ್ಯಾಶಾಲೆ ನಿರ್ಮಿಸಿದನು; ಅದಕ್ಕೆ ಅವನ ಬುದ್ಧ್ಯಾಲೋಚನೆಯ ಮೂಲಕ ಆ ಫ್ರಂಕೆ ಮುಂತಾದ ಸದ್ಭಕ್ತರನ್ನು, ಮಹಾಪಂಡಿತರೆಂತ, ನೇಮಿಸಿಡಲಾಯಿತು; ಆದ ಕಾರಣ ಆ ಶಾಲೆಯು ಭಕ್ತಿಯುಕ್ತ ವಿದ್ಯಾರ್ಥಿಗಳ ಮುಖ್ಯ ಕ್ಷೇತ್ರವಾಯಿತು; ಇವರು ಅಭ್ಯಾಸ ತೀರಿಸಿ, ಅಲ್ಲಿಂದ ಹೊರಟು, ಗೆರ್ಮಾನಿಯದ ಸೌವಾರ್ತಿಕ ಸಭೆಯಲ್ಲೆಲ್ಲಿಯೂ ಸಜ್ಜೀವನದ ಮೂಲಸ್ಥರಾದರು. ಅಷ್ಟರಲ್ಲಿ ಸ್ಪೇನೆರನಿಗೂ ಅವನ ಮಿತ್ರರಿಗೂ ಇನ್ನು ಆಗಿಂದಾಗ ಶುಷ್ಕ ಶಾಸ್ತ್ರಿಗಳಿಂದ ಎದುರ್ಖಂಡಾಟವಾದಾಗ್ಯೂ ಅವರು, ತಮ್ಮ ರೀತಿಯೂ ಬೋಧನೆಯೂ ಔಗ್ಸ್ಬುರ್ಗಿನ ಕೊನ್ಫೆಸ್ಸಿಯೋನಿಗೆ ಪೂರಾ ಸರಿ ಬೀಳುತ್ತದೆಂತ, ನಿದರ್ಶಿಸಿ, ತುದಿಗೆ ಸರ್ವಥಾ ಜೈಸಿದರು. ಕ್ರೈಸ್ತರ ಮನಸ್ಸು ಅಯೋಗ್ಯ

1) 431ನೇ ಪಾನು.  2) 515, 522, 527ನೇ ಪಾನು.  3) 445ನೇ ಪಾನು.

ವಾಗಿ ತಪ್ಪಿ ಹೋಗಿದ್ದ ಕ್ರಿಸ್ತನ ಸಹಸ್ರವರ್ಷರಾಜ್ಯಾಗಮನದ[1] ಪ್ರತೀಕ್ಷೆಯನ್ನು ಅವರು ತಿರಿಗಿ ಪ್ರಜ್ವಲಿಸ ಮಾಡಿದ್ದು ಮಹೋಪಕಾರವೇ.

ಈಗ ಸ್ಪೇನೆರನ ದಿನಕ್ರಿಯೆಗಳನ್ನು ಸಹ ಸ್ವಲ್ಪ ವಿವರಿಸುವ. ಅವನು ದಿನಂಪ್ರತಿ ಹೊಂತುಂಟ್ಲೇ 5½ ಘಂಟೆಗೆಯೇ ಎದ್ದು, ತನ್ನ ಕೋಣೆಯೊಳಗೆ ದೇವರಿಗೆ ತನ್ನ ಹೃದರ್ಥವನ್ನು ಹೇಳಿ ಕೊಂಡ ಬಳಿಕ ತನ್ನ ಮನೆತನದವರು ನೆರೆದಲ್ಲಿಗೆ ಬಂದು, ಅವರ ಸಂಗಡ ಪ್ರಾರ್ಥನೆ ಮಾಡಿ, ಒಂದು ಭಕ್ತಿಗೀತ ಹಾಡಿ, ಸ್ವಲ್ಪ ರೊಟ್ಟಿ ತಿಂದ ಮೇಲೆ ತಿರಿಗಿ ತನ್ನ ಕೋಣೆಯೊಳಗೆ ಹೋಗಿ, ಪೂರ್ವಾಹ್ನಕಾಲವೆಲ್ಲಾ ಕೆಲಸ ಮಾಡುವಷ್ಟರಲ್ಲಿ ಯಾರಾದರೂ ಬಂದು, ಅದಕ್ಕೆ ಅಭ್ಯಂತರ ಗೈಯುವದಕ್ಕೆ ಅಗದೀ ಮೆಚ್ಚದಿರುವನು. ಪತ್ರಿಕೆಗಳಿಗೆ ಪ್ರತ್ಯುತ್ತರ ಬರೆಯುವದಕ್ಕೆ ಅವನಿಗೆ ಯಾವಾಗಲೂ ಬಹಳ ಸಮಯ ಬೇಕಾಗುವದು, ಯಾಕಂದರೆ ಅವುಗಳ ಲೆಖ್ಖವು ವರುಷ ವರುಷಕ್ಕೆ ಸಾವಿರಕ್ಕಿಂತ ಹೆಚ್ಚು. ಮಧ್ಯಾಹ್ನಕ್ಕೆ ಊಟ ಮಾಡುವದರಲ್ಲಿಯೂ ಸುಮ್ಮನೆ ಹೊತ್ತು ಕಳೆಯುವಂಥ ಮಾತಾಡದಿರುವನು. ಊಟವಾದನಂತರ ತನ್ನವರ ಸಂಗಡ, ಮರಣದ ಜ್ಞಾಪಕ ಹಚ್ಚುವಂಥಾದ್ದೊಂದು ಮತ್ತು ಭಕ್ತಿಗೆ ಬಲ ಪಡಿಸುವಂಥಾದ್ದಿನ್ನೊಂದು, ಹೀಗೆ ಎರಡು ಗೀತಕೃತಿಗಳನ್ನು ಹಾಡುವನು. ಉತ್ತರಾಹ್ನಕ್ಕೆ ಯಾರೂ ಅವನಿಗೆ ಭೇಟಿ ಮಾಡುವದಕ್ಕೆ ಏನೂ ಅಡ್ಡಿ ಇಲ್ಲ; ಆಗ ಬಹು ದೂರದಿಂದಲಾದರೂ ಜನರು ಅವನ ಕೀರ್ತಿಗಾಗಿ ಅವನನ್ನು ನೋಡ ಬರುವರು. ಅದರಿಂದ ಹಗಲು ತೀರುವದು. ರಾತ್ರಿಯ ಊಟವು ಆದಂದು ತನ್ನವರೊಂದಿಗೆ

ಕಾಯುವವರೆದ್ದಿದ್ದಾರೆ;
ಓ, ಎಚ್ಚರೆಂತ, ಕೂಗುತ್ತಾರೆ;
ಓ, ಎಚ್ಚರಾಗು, ಚೀಯೋನೇ!

ಎಂಬ ಮೊದಲುಳ್ಳ ಗೀತ ಹಾಡಿ, ತನ್ನ ಕೋಣೆಯೊಳು ಪ್ರವೇಶಿಸಿ, ಹಲವು ಹೊತ್ತಿಗೀಚೆ, ಮರಣ ಲೇಸುವೆಂದು, ಕಾಣಿಸುವಂಥ ಮತ್ತೊಂದು ಗೀತಕೃತಿಯಿಂದ ತನ್ನ ಹೃದಯವನ್ನಾದರಿಸಿ ಕೊಳ್ಳುವನು. ಗೀತ ಹಾಡುವದರಲ್ಲಿ ಅವನಿಗೆ ಎಂದಾದರೂ ಅತಿ ಪ್ರೀತಿ.

ಒಮ್ಮೆಯಾದರೂ ಘಾಳಿ ತಕ್ಕೊಳ್ಳುವ ಹಾಗೆ ಮನೆ ಬಿಟ್ಟು ಅಲೆದಾಡದಷ್ಟು ಕಾರ್ಯಶೀಲತ್ವವು ಅವನಲ್ಲಿರುವದು; ತಾನು ಬೆರ್ಲೀನಿನಲ್ಲಿರುತ್ತಿದ್ದ 14 ವರುಷಗಳೊಳಗೆ ಅವನು ಎರಡು ಸಾರಿ ಮಾತ್ರ ತನ್ನ ಹಿತ್ತಲಿನ ಚಲೋ ತೋಟಕ್ಕೆ ಇಳಿ

1) 27, 146, 147ನೇ ಪಾನು.

ದನಂತೆ. ವ್ಯೈಚಟವಟಿಕೆಗೆ ಬೇಕಾದ ಸಾಧಕವನ್ನು ತನ್ನ ಕೋಣೆಯೊಳಗೆ ಅಡ್ಡಾಡುವದರಿಂದ ಘಳಿಸಿ ಕೊಳ್ಳುವದೇ ಅವನ ಮನಸ್ಸು. ಪಟ್ಣದೊಳಗೆ ತನಗೊಂದು ಜಂಬರವಿದ್ದರೆ ಕಾಲುನಡೆಯಾಗಿ ಹೋಗಿ, ಬರುವನು; ಬಿರುಘಾಳಿ ಬೀಸಿದರೂ ಮಳೆ ಹಿಮಗಳು ಹೊಯಿದರೂ ಗಾಡಿಯಲ್ಲಿ ಕುಳ್ಳಿರಲೊಲ್ಲನು, ಅದಕ್ಕೆ ಅವನಿಗೆ ನಾಚಿಕೆಯಾಗುವದು.

ದೇವಪ್ರಾರ್ಥನೆಗೆ ಮಾತ್ರ ಅವನಿಗೆ ಯಾವಾಗಲೂ ಅನುವಿರುವದು; ಬೇರೊಬ್ಬರಿಗಾಗಿ ದೇವರಿಗೆ ಪ್ರತಿವಿಜ್ಞಾಪನೆ ಮಾಡುವದಕ್ಕೋಸ್ಕರ ದಿನಕ್ಕೆ ಕೆಲವು ತಾಸುಗಳನ್ನು ವಿಶೇಷಿಸಿರುವನು. ಅವನು ಕೆಲಸದೊಳಗಿರಲು, ಆಗಿಂದಾಗ ಅವನ ಹೃದಯವು ಪ್ರಾರ್ಥನಾಪೇಕ್ಷೆಯಿಂದ ತುಂಬುವದರಿಂದ ಎದ್ದು, ದೇವರಿಗಡ್ಡ ಬಿದ್ದು, ಬೇಡಿ ಕೊಳ್ಳುವನು. ಸುಸನ್ನಳೆಂಬ ತನ್ನ ಹೆಂಡತಿಯ ಸಂಗಡ ಅವನು ಅತಿಸುಖಕರವಾದ ವಿವಾಹಸ್ಥಿತಿಯಲ್ಲಿದ್ದು, ಅವಳ ಪ್ರೀತಿಗೆ ಯೋಗ್ಯವಾದ ಪ್ರತಿಪ್ರೀತಿ ಗೈಯುವನು. ಒಂದಾನೊಂದು ದಿನ ಒಬ್ಬನು, ನೀವು ವಿವಾಹಿಯಾದದ್ದಕ್ಕೆ ಎಂದೂ ಪಶ್ಚಾತ್ತಾಪ ಪಡಲಿಲ್ಲವೇ? ಎಂತ, ಕೇಳಲು, ಸ್ಪೇನೆರನು ಅರುಹಿದ್ದೇನೆಂದರೆ—ವಿವಾಹಿಯಾದದಕ್ಕೋಸ್ಕರ ನನಗೆ ಪಶ್ಚಾತ್ತಾಪವಾಯಿತೆಂಬ ಆಲೋಚನೆಯು ಒಮ್ಮೆಯಾದರೂ ನನ್ನ ಬಾಯಿಯಿಂದ ಹೊರಡಲಿಲ್ಲ, ನನಗೆ ಹುಟ್ಟಲೂ ಇಲ್ಲ; ನಾನು ಬೇರೆ ಪ್ರಕಾರ ಹೇಳುವದಾದರೆ ದೇವರಿಗೆ ಕೃತಘ್ನನಾದೇನು, ಯಾಕಂದರೆ ನನ್ನನ್ನು ವಿವಾಹಸ್ಥಿತಿಯಲ್ಲಿ ಕರೆದಿಟ್ಟ ಅವನು ನನಗದರಲ್ಲಿ ನಾನಾ ತರದ ಪ್ರಸಾದ ಪಾಲಿಸಿದ್ಧಾನೆ; ದೇವರು ನನ್ನ ನಿರ್ವಿವಾಹಿತ್ವಕ್ಕಿಂತ ವಿವಾಹಿತ್ವದಲ್ಲಿ ಅಧಿಕೋಪಕಾರವನ್ನು ನನಗೆ ತೋರಿಸಿದ್ಧಾನೆಂಬದೇ ನಿಶ್ಚಯ! ಆದ್ದರಿಂದ ಇಂಥಾ ಮಂಗಳ ಸ್ಥಿತಿಗಾಗಿ ಅವನನ್ನು ಮನಃಪೂರ್ವಕ ಕೊಂಡಾಡುತ್ತೇನೆ.—

ಕ್ರಿ. ಶ. 1701ನೇ ವರುಷ ಅವನು, ತನ್ನ ಶರೀರದ ಬಲವು ಕುಂದುತ್ತದೆಂತ, ತಿಳಿದು, ಉದ್ಯೋಗದಲ್ಲಿ ಒಬ್ಬ ಸಹಾಯಕನನ್ನು ಇಟ್ಟು ಕೊಂಡು, ಕ್ರಿ. ಶ. 1704ನೇದರ ಆರಂಭದೊಂದು ಆದಿತ್ಯವಾರ, ತಾನು ತನ್ನ ಜೀವಿತದ 70ನೇ ವಯಸ್ಸಿನಲ್ಲಿರುವಾಗ, ಕಡೆಯ ಪ್ರಸಂಗ ಮಾಡಿದನು; ಪಶ್ಚಾತ್ತಾಪ ಗೊಂಡಂಥ ಯಾವನೊಬ್ಬ ಪಾಪಿಯನ್ನು ಕ್ರಿಸ್ತನು ಕೃಪೆಯೊಡನೆ ಅಂಗೀಕರಿಸುತ್ತಾನೆಂಬ ತಾತ್ಪರ್ಯವು ಅದರಲ್ಲಿತ್ತು. ಬಳಿಕ ಅವನು ಜೂನ್ ತಿಂಗಳಲ್ಲಿ ರೋಗಿಷ್ಠನಾಗಿ, ತನ್ನ ಅಂತವು ಸಮೀಪವಾಯಿತೆಂತ, ನೆನಸಿ, ತನ್ನ ಜೊತೆಬೋಧಕರನ್ನು ತನ್ನ ಬಳಿಗೆ ಬರಿಸಿ— ನಾನು ಸೌವಾರ್ತಿಕ ಸಭೆಯಲ್ಲಿ ಶಿಕ್ಷಿತನಾದ್ದಕ್ಕಾಗಿ ದೇವರನ್ನೀಗಲೂ ಸ್ತುತಿಸುತ್ತೇನೆ; ಪರಿಶುದ್ಧ ಬರಹಕ್ಕೂ ಸೌವಾರ್ತಿಕ ವಿಶ್ವಾಸಪ್ರಮಾಣಕ್ಕೂ ಅನುಗುಣವೇ ಬೋಧಿಸುವದು ನಿತ್ಯದಲ್ಲಿ ನನ್ನ ಪ್ರಯತ್ನವಾಗಿತ್ತು. ನಾನು ನಿಮ್ಮಲ್ಲೊಬ್ಬನಿಗೆ ದುಃ

ಖ ಪಡಿಸಿದ್ದರೆ ಈಗ ಹೃದ್ಯ ರೀತಿಯಾಗಿ ಅವನ ಕ್ಷಮಾವಚನ ಬೇಡಿ ಕೊಳ್ಳುತ್ತೇನೆ. ನಾನೆಂದಾದರೂ ನನ್ನ ಸ್ವನೀತಿಯ ಮೇಲೆ ಆತು ಕೊಳ್ಳಲಿಲ್ಲ. ನಾನು ಚಿಕ್ಕತನದಿಂದ ಲೋಕದ ಬಹಿರ್ಭೋಗಕ್ಕೆ ಹಿಂಜರಿಯುವಂಥ ಶಾಂತ ಚರ್ಯೆಯಿಂದಿದ್ದ ದೆಸೆಯಿಂದ ಮತ್ತೊಬ್ಬರಿಗೆ ನನ್ನನ್ನು, ಮಾದರಿಯೆಂತ, ಇಟ್ಟಂತಾಯಿತು; ಆದರೂ ಅದೇನೂ ಅಲ್ಲ, ಏನೂ ಅಲ್ಲ, ಏನೂ ಅಲ್ಲ; ನಾನು ಆತು ಕೊಳ್ಳುವದು ಕ್ರಿಸ್ತ ಯೇಸುವಿನಲ್ಲಿಯ ದೇವರ ಅನುಗ್ರಹವೇ! ನನ್ನಿಂದಾಗಿರ ಬಹುದಾದ ಒಳ್ಳೇದರಲ್ಲಿ ನನಗೇನೂ ಎಣಿಸಿ ಕೊಳ್ಳುವದಿಲ್ಲ; ಅಂಥಾದ್ದರಲ್ಲಿ ಕಡಿಮೆ ಬಿದ್ದದೇ ಮಾತ್ರ ನನ್ನ ಪಾಲಿನದು!—ಮರುವರುಷದ ಜನವರಿ ತಿಂಗಳ 13ನೇ ದಿನದಲ್ಲಿ ಅವನ ಜೀವಿತದ 70ನೇ ವರುಷ ಮುಗಿಯುವಲ್ಲಿ ಗಡಿಯಾರವು ಸಾಯಂಕಾಲದ 5ನೇ ಘಂಟೆ ಹೊಡೆಯಲು, ಅವನು, ಅದು ತಾನು ಹುಟ್ಟಿದ ತಾಸೆಂದು, ಕಣ್ಣೀರು ಹಾಕಿ, ದೇವರನ್ನು ಮಹಾ ಶಬ್ದದಿಂದ ಕೊಂಡಾಡಿದ್ದಲ್ಲದೆ ತಾನು ಗೈಯುತ್ತಾ ಬಂದಿದ್ದ ಜ್ಞಾತಾಜ್ಞಾತ ಪಾಪಗಳಿಗೋಸ್ಕರ ಕ್ಷಮಾವಿಜ್ಞಾಪನ ಮಾಡಿ ಕೊಂಡನು. ಅಂದು ಅವನ ಹೆಂಡತಿಯು, ನಿಮಗೆ ಗ್ರಂಥ ವಾಕ್ಯಗಳೆರಡರಿಂದ ಬಹು ಆರ್ತಿ ಕೊಟ್ಟಂಥವರಿಗೂ ಮನಃಪೂರ್ವಕ ಮನ್ನಿಸಿದ್ಧೀರಾ? ಎಂತ, ಕೇಳಲಿಕ್ಕೆ, ಅವನು— ಹೌದು! ಅವರು ದೇವರ ಕಡೆಗೆ ತಿರಿಗಿ ಕೊಳ್ಳ ಬೇಕೆಂಬದು ನನ್ನ ಅಪೇಕ್ಷೆ ಎಂತ, ನುಡಿದನು.

ಫೆಬ್ರವರಿ ತಿಂಗಳಿನ 4ನೇದರಲ್ಲಿ ಅವನ ಬಲಹೀನತ್ವವು ಹೆಚ್ಚಾದಾಗ 3 ಸಾರಿ ಯೇಸುವಿನ ಪ್ರಧಾನಯಾಜಕತ್ವಪ್ರಾರ್ಥನೆ ಎಂಬದನ್ನು[1] ತನ್ನ ಹತ್ತರ ಓದಿಸಿದನು. ಹೊಸ ಒಡಂಬಡಿಕೆಯಲ್ಲಿ ಅವನಿಗೆ ಯಾವಾಗಲೂ ಶ್ರೇಷ್ಠ ಭಾಗವೆನ್ನಿಸಿದ್ದದ್ದು ಅದೇ; ಆದರೂ ಅವನು ಒಮ್ಮೆಗೂ ಅದನ್ನು ಕುರಿತು ಪ್ರಸಂಗಿಸಿದ್ದಿಲ್ಲ;—ಅದು ನನಗೆ ಚನ್ನಾಗಿ ತಿಳಿಯುವದಿಲ್ಲ; ಅದರ ತಿಳುವಿಕೆಯು ಕರ್ತನು ತನ್ನವರಿಗೆ ಈ ಜೀವಯಾತ್ರೆಯಲ್ಲಿ ಕೊಡ ಮೆಚ್ಚುವ ವಿಶ್ವಾಸದ ಪರಿಮಾಣವನ್ನು ಮೀರುವಂಥಾದ್ದೇ! ಎಂಬದು ಅವನ ರೂಢಿಯ ಮಾತು. ಆ ದಿನದ ಬೈಸಾರಿಗೆ ಅವನು ಸೌಖ್ಯನಿದ್ರೆಗೊಂಡು, ಮರುದಿನ ಆದಿತ್ಯವಾರದ ವರೆಗೆ ಅದರಲ್ಲಿದ್ದು, ಸ್ವಲ್ಪ ಆಹಾರ ತಕ್ಕೊಂಡ ಮೇಲೆ ಎಬ್ಬಿಸಿ, ಒಂದು ಕುರ್ಚಿಯಲ್ಲಿ ಕುಳ್ಳಿರಿಸಿರಲು, ಕೊಂಚ ವೇಳೆಗೀಚೆ ಅವನನ್ನು ತಿರಿಗಿ ಮಂಚದಲ್ಲಿ ಪವಡಿಸಲಿಕ್ಕೆ ಬರುವಾಗ ಅವನ ಕಣ್ಣುಗಳು ಮುಚ್ಚಿಕೊಂಡವು; ಅವನು ಏನೂ ವೇದನೆಯಿಲ್ಲದೆ ತನ್ನ ಕರ್ತನೆಡೆಗೆ ಹೋಗಿದ್ದನು. ಅವನ ಹೆಣವನ್ನು ಸಮಾಧಿಗೆ ವೈಯುವಲ್ಲಿ ಸಾವಿರಾರು ಜನರು ಪ್ರೀತಿಯಿಂದೊಡಗೂಡಿ ಐದಿದರು.

---

1) ಯೋಹಾ. 17; 495ನೇ ಪಾನು ಸರಿ ನೋಡು.

## 67. ಫ್ರಂಕೆಯೆಂಬ ಬೋಧಕನು.

ಗೆರ್ಮಾನಿಯದಲ್ಲಿ ಹಂಬುರ್ಗು ಪಟ್ಣಕ್ಕೆ ಬಹಳ ದೂರವಲ್ಲದೆ ಬಡಗ ಮೂಡಣ ದಿಕ್ಕಿನಲ್ಲಿರುವ ಲುಯಿಬೆಕು ಪಟ್ಣದಲ್ಲಿ ಕ್ರಿ. ಶ. 1663ನೇ ವರುಷ ಔಗುಸ್ತ ಹೆರ್ಮನ ಫ್ರಂಕೆಯು ಹುಟ್ಟಿದನು. ಅವನ ತಂದೆಯು ಮತಕ ರಾಜಕ ನೀತಿಯ ಪಂಡಿತನು. ಆ ಮಗನಿಗೆ 3ನೇ ವರುಷ ನಡೆಯುವಾಗ ಹೆತ್ತವರು ಸಕ್ಸೆನಿನ ಗೊಥವೆಂಬ ಪಟ್ಣಕ್ಕೆ ಹೋದರು; ಅಲ್ಲಿ ತಂದೆಯು 4 ವರುಷಕ್ಕೀಚೆ ತೀರಿದನು. ಆಗ ತಾಯಿಯು ಮತಕ ವಿಷಯದಲ್ಲಿಯೂ ತನ್ನ ಮಗನಿಗೆ ಸುಶಿಕ್ಷೆ ಕೊಡಿಸುವದಕ್ಕೆ ಬಹು ಜೋಕೆಯಿಂದಿರುವಲ್ಲಿ ಅವನಿಗಿಂತ 3 ವರುಷಕ್ಕೆ ಹಿರಿಯಳಾದ ಅಕ್ಕನು ಸಹ ತನ್ನ ಭಕ್ತಿಯ ಗುಣವಂತಿಕೆಯಿಂದ ಅವನ ಗುಣಗಳನ್ನು ತಿದ್ದುತ್ತಿದ್ದಳು. ಯೇಸುನಾಥನು ಈ ಕನ್ಯೆಯನ್ನು ಕೂಡ ಬಹಳ ತಡವಿಲ್ಲದೆ ತನ್ನೆಡೆಗೆ ಕರಕೊಂಡನು. ಬಳಿಕ ಫ್ರಂಕೆಯು ತನ್ನ 10ನೇ ವರುಷದಲ್ಲಿಯಾದರೂ ತಾಯಿಯ ಹತ್ತರ ಬಂದು, ತಾನು ಏಕಾಂತದಲ್ಲಿ ಅಭ್ಯಾಸ ಮಾಡಿ ದೇವರಿಗೆ ಪ್ರಾರ್ಥಿಸುವ ಹಾಗೆ ತನಗೆ ಪ್ರತ್ಯೇಕವಾದ್ದೊಂದು ಕೊಠಡಿ ಕೊಡ ಬೇಕೆಂದು, ಬಿನ್ನವಿಸಿ ಕೊಂಡನು. ಆ ಕೊಠಡಿಯೊಳಗೆ ಅವನು ಅನೇಕಾವರ್ತಿ ಕದ ಮುಚ್ಚಿ, ತನ್ನ ಪ್ರಿಯ ಅಕ್ಕನು ಈಗ ಇರುವ ದೇವರಿಗೆ ವಿನಂತಿ ಮಾಡುತ್ತಿದ್ದನು. ಅಂಥಾ ವಿನಂತಿಯಲ್ಲಿ ತಿರಿ ತಿರಿಗಿ ಶೇರುತ್ತಿರುವ ಮಾತುಗಳೇನಂದರೆ— ನನ್ನ ದೇವರೇ, ಅನೇಕ ತರದ ಸ್ಥಿತಿ ವೃತ್ತಿಗಳವೆ, ಇವೆಲ್ಲವೂ ಕಡೆಯಲ್ಲಿ ಒಂದು ಪ್ರಕಾರ ನಿನ್ನ ಸ್ತೋತ್ರಕ್ಕೆ ಉಪಯೋಗವಾಗ ಬೇಕು; ಇಂತಾದರೂ, ನನ್ನ ಜೀವಿಕೆ ಎಲ್ಲಾ ನಿನ್ನ ಸ್ತೋತ್ರಕ್ಕೆ ಮಾತ್ರವೇ ಉಪಯೋಗವಾಗ ಮಾಡೆಂತ, ನಿನ್ನನ್ನು ಬೇಡಿ ಕೊಳ್ಳುತ್ತೇನೆ!—ಫ್ರಂಕೆಯು ಚುರುಕು ಬುದ್ಧಿಯವನಾದ್ದಲ್ಲದೆ ಒಳ್ಳೇ ಅಭ್ಯಾಸಶಾಲಿಯು ಸಹ ಆಗಿದ್ದ ಕಾರಣ ತನ್ನ 14ನೇ ವಯಸ್ಸಿನಲ್ಲಾದರೂ ಮಹಾ ವಿದ್ಯಾಶಾಲೆಗೆ ಪಕ್ವವಾಗಿದ್ದನು; ಆದಾಗ್ಯೂ ಅವನು ಇನ್ನೆರಡು ವರುಷ ತಾಯಿಯ ಮನೆಯಲ್ಲುಳಿದು, ಪ್ರಾಚೀನ ಭಾಷೆಗಳನ್ನು ಹೆಚ್ಚಾಗಿ ಕಲಿತು ಕೊಳ್ಳುತ್ತಾ ಬಂದನು.

ಆ ತರುವಾಯ ಅವನು 5 ವರುಷ 2 ಮಹಾ ವಿದ್ಯಾಶಾಲೆಗಳಲ್ಲಿ ಅಭ್ಯಾಸಿಸುತ್ತಿದ್ದನಂತರ ಲೈಪ್ಸಿಗಿನದಕ್ಕೆ ಸಹ ಹೋಗಿ, ಮರುವರುಷ ಪಂಡಿತೋದ್ಯೋಗ ಪಡ ಕೊಂಡು, ಸ್ಪೇನೆರನದೊಂದು ಪ್ರಸಂಗದಿಂದ ಪ್ರೇರಿತನಾಗಿ, ತನ್ನ 22ನೇ ವಯಸ್ಸಿನಲ್ಲಿ, ಹಿಂದೆ ಹೇಳಿರುವಂತೆ[1], ಪರಿಶುದ್ಧ ಬರಹವನ್ನು ಕುರಿತು ಆ ಭಕ್ತಿಮಯ ವಾಗ್ನಿರೂಪಣಗಳನ್ನು ಕೊಡ ತೊಡಗಿದಲ್ಲಿಗೆ ಹೇರಳ ಮಂದಿ ಶ್ರೋತರು ಬಂದು,

1) 555ನೇ ಪಾನು.

ಮಿಗಿಲಾಶೀರ್ವಾದ ಹೊಂದುತ್ತಿದ್ದರು. ಹೀಗಾಗುತ್ತಿದ್ದಾಗ್ಯೂ ನಮ್ರಾತ್ಮನಾದ ಅವನು, ತನ್ನ ಭಕ್ತಿಯು ನೆಟ್ಟಗಾಗಲಿಲ್ಲವೆಂತ, ಅಂದು ಹಲುಬಿ ಕೊಂಡದ್ದೇನಂದರೆ— ನನ್ನ ಅವಸ್ಥೆಯು ನಾನಾ ವಿಧ ತೊಡಕು ತೊಂದರೆಗಳಿಂದ ತೀರ ಕೆಟ್ಟದ್ದಾಗಿದೆ; ಅವು ಸ್ಥೂಲಪಾತಕಸಂಬಂಧದವುಗಳೆಂದು, ಗ್ರಹಿಸಲಾಗದು, ಬೇರೆ ಬೇರೆ ಅಭ್ಯಾಸದಲ್ಲಿಯೂ ಲೋಕಪೂಜ್ಯತೆಯಲ್ಲಿಯೂ ಶಿಕ್ಕಿ ಕೊಂಡಿರುವ ಸಂಬಂಧದವುಗಳೇ, ಸರಿ. ಆದರೆ ಇದರಿಂದ ಏನಾಗುತ್ತದಂದರೆ, ಆಳವಾದ ಕೆಸರೊಳಗೆ ಶಿಕ್ಕೊಂಡು ಕೈಗಳೂರಿ ಸ್ವಲ್ಪ ಮಾತ್ರ ಮೇಲಕ್ಕೆ ಬರುವದಕ್ಕೆ ಶಕ್ತಿಯುಳ್ಳವನೊಬ್ಬನ ಹಾಗೆಯೂ ಕೈ ಕಾಲು ಮೊದಲಾದ ಅವಯವಗಳೆಲ್ಲಾ ಕಟ್ಟಿದ್ದು ಒಂದೇ ಹಗ್ಗ ಹರಿದ ಮೇಲೆ ಉಳಿದವುಗಳಿಂದ ಸಹ ಬಿಡುಗಡೆಯಾಗುವದಕ್ಕೆ ಮತ್ತಷ್ಟು ಅಭಿಲಾಷೆ ಪಡುವವನೊಬ್ಬನ ಹಾಗೆಯೂ ಆಗಿದ್ದೇನೆ.—3 ವರುಷದಿತ್ತ ಅವನು ಗೆರ್ಮಾನಿಯದ ಲುಯಿನೆಬುರ್ಗ್ ಪಟ್ಣಕ್ಕೆ ಒಬ್ಬ ಭಕ್ತನಾದ ಬೋಧಕನ ಬಳಿಗೆ ಹೋಗಿರಲು, ಇವನು—ಯೇಸುವೇ ದೇವರ ಮಗನಾದ ಕ್ರಿಸ್ತನೆಂದು ನೀವು ನಂಬುವ ಹಾಗೆಯೂ ನಂಬಿ ಅವನ ಹೆಸರಿನಲ್ಲಿ ಜೀವ ಹೊಂದುವ ಹಾಗೆಯೂ ಇವು ಬರದವೆಂತ, ಯೋಹಾನ ಅಪೊಸ್ತಲನ ಸುವಾರ್ತೆಯ 20ನೇ ಸಂಧಿಯ 31ನೇ ವಚನವಾದ ಇದನ್ನು ವಿಷಯವೆಂದೆಣಿಸಿ, ಪ್ರಸಂಗ ರಚಿಸಿರೆಂತ, ಅವನಿಗೆ ಬೆಸಸಿದನು. ಆಗ ಫ್ರಂಕೆಯು, ತಾನು ಜೀವಂಕರವಾದ ವಿಶ್ವಾಸದ ವಿಷಯ ಪ್ರಸಂಗಿಸ ಬೇಕಾದರೆ ತನಗಂಥಾ ವಿಶ್ವಾಸ ಬರಲಿಲ್ಲವೆಂದು, ದುಃಖಾಕ್ರಾಂತನಾಗಿ, ಈ ಪ್ರಸಂಗ ಮಾಡುವದು ತನಗೆ ಬೇಡವೆಂತ, ಹೇಳುವ ಹಾಗಿರುವಲ್ಲಿ ಪರಾತ್ಪರ ದೇವರ ಮುಂದೆ ಮೊಣಗಾಲೂರಿ, ಬಹಳ ಹೊತ್ತು ಹೃದ್ಯವಾಗಿ ಬೇಡಿ ಕೊಂಡನಂತರ, ಕ್ರಿಸ್ತ ಯೇಸುವಿನಲ್ಲಿ ದೇವರ ಕೃಪೆಯು ತನಗೆ ಪ್ರಾಪ್ತವಾಯಿತೆಂತ, ಪೂರ್ಣ ನಿಶ್ಚಯ ಹೊಂದಿದನು; ತತ್ಕ್ಷಣವೇ ಅವನ ಹೃದಯದ ಸಕಲ ದುಃಖವೂ ಕಳವಳವೂ ಪರಿಹಾರವಾಯಿತು, ತಾನು ಹೃದ್ವಾಕ್ಕುಗಳೆರಡರಿಂದ ದೇವರಿಗೆ ಅತಿರೇಕ ಸ್ತುತಿ ಸ್ತೋತ್ರಗಳನ್ನರ್ಪಿಸ ಬರುವದಕ್ಕೆ ಆನಂದಪ್ರವಾಹವು ಅವನ ಮೇಲೆ ಉಕ್ಕಿ ಹರಿದಂತಾಯಿತು.

ಕ್ರಿ. ಶ. 1688ನೇ ವರುಷ ಅವನು ದ್ರೇಸ್ಡನಿಗೆ[1] ಸ್ಪೇನೆರನ ಹತ್ತರ ಹೋಗಿ, ಎರಡು ತಿಂಗಳು ಅವನ ಸಂಗಡ ಇದ್ದ ತರುವಾಯ ತಿರಿಗಿ ಲೈಪ್ಸಿಗಿಗೈದಿ, ಮುಂಚಿನಂತೆ ಆ ಭಕ್ತಿಮಯ ವಾಗ್ನಿರೂಪಣಗಳನ್ನು ಧಾರಾಳ ಆಶೀರ್ವಾದದೊಡನೆ ಎರಡು ವರುಷ ಕೊಡುತ್ತಿದ್ದನು. ತನ್ಮಧ್ಯ ಅವನಿಗೆ ಹೊಟ್ಟೆಕಿಚ್ಚು ಪಡುವಂಥವರು ಹೆಚ್ಚಿ, ಕ್ರಿ. ಶ. 1690ನೇ ವರುಷ ಆ ವಾಗ್ನಿರೂಪಣಗಳು ಇನ್ನು ನಡೆಯ ಬಾರದೆಂಬ ಅಪ್ಪಣೆ ಹೊರಡಿಸಲಿಕ್ಕೆ ಶಕ್ತರಾದರು. ಆದ ಕಾರಣ ಸಕ್ಸೆನಿನ ಏರ್ಫೂರ್ತುರ್[2]

1) 555, 556ನೇ ಪಾನು. 2) 416, 417ನೇ ಪಾನು.

ಪಟ್ಣದವರು, ತಮ್ಮಲ್ಲಿ ಪ್ರಸಂಗಿಕನಾಗ ಬೇಕೆಂತ, ಅವನಿಗೆ ಬೇಡಲು, ಅವನು ಅಲ್ಲಿಗೆ ಹೋಗಿ, ದೇವಾಲಯದಲ್ಲಿಯ ತನ್ನ ಪ್ರಸಂಗಗಳಿಂದಲೂ ಗೃಹದಲ್ಲಿಯ ತನ್ನ ಬೋಧನೆಯಿಂದಲೂ ಪರಿಶುದ್ಧ ಬರಹ ಮುಂತಾದ ಭಕ್ತಿವರ್ಧಕ ಗ್ರಂಥಗಳ ಪ್ರಸಾರಣದಿಂದಲೂ ಕ್ರೈಸ್ತರ ಸಜ್ಜೀವನವನ್ನು ಅನೇಕ ಪರಿಯಾಗಿ ಬೆಳಿಸುವವನಾದನು; ಆದರೆ ಅಲ್ಲಿಯ ಪಪ್ಪಕರು ಮಾತ್ರವಲ್ಲದೆ ಲುಥರಿಕ ಶಾಖೆಯ ತಾರ್ಕಿಕ ಬೋಧಕರು ಸಹ ತಡೆಯದೆ ಅವನಿಗೆದುರ್ಜಂಡಿಸುತ್ತಿರಲಿಕ್ಕೆ, ಪಟ್ಣದ ಗೃಹಸ್ಥರು, ಮಕ್ಕಳಾದರೂ, ಅವನು ನಮ್ಮಲ್ಲಿದ್ದುಳಿಯಲಿ! ಎಂದು, ನಾನಾ ವಿಧವಾಗಿ ವಿಜ್ಞಾಪನೆ ಮಾಡಿದಾಗ್ಯೂ ಆ ಪಟ್ಣದ ಆಗಿನ ಪಪ್ಪಕ ಅಧಿಕಾರಸ್ಥರು ಕ್ರಿ. ಶ. 1692ನೇ ವರುಷ ಅವನನ್ನು ಪಟ್ಣದೊಳಗಿಂದ ಓಡಿಸಿದರು. ಆ ಸಮಯದಲ್ಲಿಯೇ ಬ್ರಂದೆನ್ಬುರ್ಗಿನ 3ನೇ ಪ್ರೀದೆರೀಕನೆಂಬ ಆ ರಾಜಶೋಧಕ ಪ್ರಭುವು ಸ್ಪೇನೆರನ ಬುದ್ಧ್ಯಾಲೋಚನೆಯ ಮೇರೆಗೆ ಅವನನ್ನು ಅಂದಿಗೆ ಸ್ವಲ್ಪ ಕಾಲ ಮುಂಚೆ ನಿರ್ಮಿತವಾಗಿದ್ದ ಹಲ್ಲೆ ಎಂಬ ಮಹಾ ವಿದ್ಯಾಶಾಲೆಯಲ್ಲಿ[1], ಮಹಾ ಪಂಡಿತನೆಂತ, ನೇಮಿಸಿಟ್ಟದ್ದಲ್ಲದೆ ಪಟ್ಟಣೋಪಗ್ರಾಮವಾದ ಗ್ಲೌಖವೆಂಬಲ್ಲಿ ಪ್ರಸಂಗೋದ್ಯೋಗವನ್ನು ಅವನಿಗೊಪ್ಪಿಸಿ ಕೊಟ್ಟನು. ಈ ಗ್ರಾಮದಲ್ಲಿದ್ದು ಹೋದ ಪ್ರಸಂಗಿಕನು ಅಧಮಗುಣಿಯಾಗಿದ್ದ ಉದ್ದಿಶ್ಯ ಅಲ್ಲಿಯ ಸಭೆಯು ಕಾಡಿನ ಪಾಲಾಗಿತ್ತು; ಆದರೂ ಫ್ರಂಕೆಯ ಸುವೃತ್ತಿಯಿಂದ ಆ ಸಭೆಯವರು ವಿಲಂಬವಿಲ್ಲದೆ ಹೃತ್ಪರಿಣತರಾದದ್ದು ಹೊರ್ತಾಗಿ ಸರ್ವದಿಕ್ಕಿನಿಂದಲೂ ಬಹಳ ಜನರು ಅವನ ಭಕ್ತಿವಾಕ್ಯಗಳನ್ನು ಕೇಳಿ ಕೊಳ್ಳುವದಕ್ಕೆ ನೆರೆಯುತ್ತಲಿದ್ದರು. ಅದೇ ಆಶೀರ್ವಾದವು ಫ್ರಂಕೆಯ ಮಹಾಪಾಂಡಿತ್ಯವೃತ್ತಿಯಲ್ಲಿ ಗೋಚರವಾಗುತ್ತಿತ್ತು; ಪರಿಶುದ್ಧ ಬರಹವನ್ನು ಧ್ಯಾನಿಸಿ ಪ್ರಾರ್ಥಿಸುವ ನಿಮಿತ್ತ ವಿದ್ಯಾರ್ಥಿಗಳಲ್ಲನೇಕರು ತಮ್ಮೊಳಗೆ ಸಮಾಜಗಳನ್ನು ಸ್ಥಾಪಿಸಿ ಕೊಂಡರು. ಅಷ್ಟರಲ್ಲಿ ಫ್ರಂಕೆಯು ತನ್ನ ಕೆಳಗಿನ ಹೇರಳ ಸಭ್ಯರ ಕಾಡುಗುಣವನ್ನೂ ಅಜ್ಞಾನವನ್ನೂ ಕಂಡು ಹಿಡಿದಿದ್ದದೊಂದು ಉಪಾಯವೇನೆಂದರೆ, ನೇಮಕವಾದ ದಿನಗಳಲ್ಲಿ ಭಿಕ್ಷೆಗೋಸ್ಕರ ಪಟ್ಣ ತಿರುಗುವಂಥ ಬಡವರನ್ನು ಅವನು ತನ್ನ ಮನೆಯೊಳಗೆ ಬರಿಸಿ, ಹಿರಿಯರ ಮುಂದೆ ಕಿರಿಯರಿಗೆ ಲುಥರನ ಸಣ್ಣ ಬೋಧನಾಗ್ರಂಥವನ್ನು[2] ಉಪದೇಶಿಸಿ, ಹಿರಿಯರಿಗೆ ಸಹ ಕೆಲವು ಬುದ್ಧಿಯ ಮಾತುಗಳನ್ನು ಹೇಳಿ, ದೇವಪ್ರಾರ್ಥನೆ ಮಾಡಿದ ತರುವಾಯ ತನ್ನ ದಾನಧರ್ಮವನ್ನು ಹಂಚಿ ಕೊಡುತ್ತಿದ್ದದ್ದೇ. ಇಂಥಾ ಕೆಲಸದಲ್ಲಿ ಅವನು, ಹೆತ್ತವರ ಬಡತನಕ್ಕೋಸ್ಕರ ಅನೇಕ ಮಕ್ಕಳು ಶಾಲೆಗೆ ಹೋಗ ಕೂಡದೆ ಕೆಡುತ್ತವೆಂತ, ತಿಳಿದು, ಚಿಂತೆ ಗೊಂಡು, ಆ ಮಕ್ಕಳಲ್ಲಿ ಹಲವರನ್ನು ಶಾಲೆಗೆ ನಡಿಸುವದಕ್ಕಾಗಿ ಹೆತ್ತವರಿಗೆ ವಾರ ವಾರಕ್ಕೆ ಬೇಕಾದ ಸಂಬಳ

1) 445, 556ನೇ ಪಾನು. 2) 430ನೇ ಪಾನು.

ಹಣ ಕೊಡುವವನಾದಾಗ ಹೆತ್ತವರು ತಪ್ಪದೆ ಆ ಹಣ ಈಸು ಕೊಳ್ಳಲಿಕ್ಕೆ ಬಂದರೂ ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಲಿಲ್ಲ. ಹಾಗಾದರೇನು ಮಾಡ ಬೇಕು? ಆ ಬಡವರ ಸಂಕಷ್ಟವನ್ನು ನಿವರ್ತಿಸುವದಕ್ಕೆ ತನಗೆಷ್ಟೋ ಅಭಿಲಾಷೆ ಇತ್ತಲ್ಲವೇ? ಹೀಗಿರಲಾಗಿ ಒಂದಾನೊಂದು ದಿನದಲ್ಲಿ ಅವನು ಹೊಸ ಒಡಂಬಡಿಕೆಯ ಕೊರಿಂಥಿಯರ 2ನೇ ಪತ್ರಿಕೆಯ 9ನೇ ಸಂಧಿಯಲ್ಲಿದ್ದು—ನೀವು ಎಲ್ಲಾದರಲ್ಲಿ ಎಂದಿಗೂ ಎಲ್ಲಾ ತೃಪ್ತಿಯುಳ್ಳವರಾಗಿ, ಎಲ್ಲಾ ಸತ್ಕ್ರಿಯೆಗಳಿಗಾಗಿ ಹೆಚ್ಚುವ ಹಾಗೆ ದೇವರು ಎಲ್ಲಾ ಕೃಪೆಯನ್ನು ನಿಮಗಾಗಿ ಹೆಚ್ಚಿಸ ಬಲ್ಲನು ಎಂತ, ಹೇಳುವ 9ನೇ ವಚನವನ್ನೋದುವ ಹೊತ್ತು, ದೇವರು ಅದನ್ನೆಂತು ಮಾಡ ಬಲ್ಲನೆಂದು, ತನ್ನೊಳಾಲೋಚಿಸಿ, ಮಹಾ ದುಃಖದೊಡನೆ ಕೂತು ಕೊಂಡಿರುವಲ್ಲಿಗೆ ಪರಶೀಮೆಯವನೊಬ್ಬ ಸ್ನೇಹಿತನ ಒಂದು ಕಾಗದವು ಬಂದು ಮುಟ್ಟಿತು; ಅದರ ಮೂಲಕ ಆ ಸ್ನೇಹಿತನು ಅವನಿಗೆ ತನ್ನ ದರಿದ್ರತನವನ್ನೂ ಕೃಚ್ಛ್ರವನ್ನೂ ವರ್ಣಿಸಿ, ಬಹು ಪ್ರಕಾರದಿಂದ ಅವನ ಸಹಾಯ ಬೇಡಿ ಕೊಂಡನು. ಅದರಿಂದ ತಾನು ಸಹ ನಿರ್ಧನನಾದಂಥ ಅವನ ಹೃದಯವು ಭಿನ್ನವಾದ ಹಾಗಾಯಿತು; ಕಡೆಯಲ್ಲಿ ತನಗೆ ಬಂದ ಒಂದು ವಿಹಿತಾಲೋಚನೆಯ ನಡಿಸ ತೊಡಗಿದನು. ಹ್ಯಾಗಂದರೆ, ತಾನು ಪ್ರಾತಃಕಾಲದಿಂದ ಸಾಯಂಕಾಲದ ವರೆಗೂ ಎಡೆ ಬಿಡದೆ ಉದ್ಯೋಗವೃತ್ತಿಯಲ್ಲಿದ್ದು ದಣಿಯುತ್ತಿದ್ದರೂ ದೀರ್ಘ ಕಾಲದ ತನಕ ಸಾಯಂಕಾಲದೂಟವನ್ನು ಕೈಕೊಳ್ಳದೆ ಸ್ವಲ್ಪ ಹಣವನ್ನುಳಿಸಿ ಇಟ್ಟು ಕೊಂಡದು ಮಾತ್ರವಲ್ಲದೆ ಆ ಊಟದ ಸಮಯ ಹೋಗಿ, ದೇವವಾಕ್ಯೈಕೆಯದೊಂದು ಗ್ರಂಥ ರಚಿಸಿ, ಮಾರಿ, ಬಂದ ಸುಮಾರು 200 ರೂಪಾಯಿಗಳನ್ನು[1] ತಾನುಳಿಸಿಟ್ಟು ಕೊಂಡ ಆ ಹಣದ ಸಹಿತ ತನ್ನ ಗೆಳೆಯನಿಗೆ, ಉಚಿತವೆಂದು, ಕಳುಹಿಸಿ ಕೊಟ್ಟು—ಕ್ರೈಸ್ತರು ಎಲ್ಲಾ ಸತ್ಕ್ರಿಯೆಗಳಿಗಾಗಿ ಹೆಚ್ಚುವ ಹಾಗೆ ದೇವರು ಮಾಡ ಬಲ್ಲ ರೀತಿಯು ಏನೆಂತ, ಈಗಲೇ ತಿಳು ಕೊಂಡಿದ್ದೇನೆ! ಎಂದು, ಆನಂದಸ್ವರದಿಂದ ಕೂಗಿದನು. ಅಪ್ಪಂತ ಬಡವರ ಕಷ್ಟ ತಪ್ಪಿಸುವದಕ್ಕೋಸ್ಕರ ಅವನು ಪಟ್ಟಣದ ಕ್ರೈಸ್ತರಲ್ಲಿ ಒಂದು ಡಬ್ಬಿ ಸುತ್ತ್ಯಾಡಿಸಿ ಸ್ವೇಚ್ಛಾದಾನಗಳನ್ನು ಕೂಡಿಸುತ್ತಿರುವ ಪದ್ಧತಿ ಇತ್ತು; ದಿನ ಹೋಗುತ್ತಿರಲು, ಅವನು, ಐಶ್ವರ್ಯವಂತರು ಏನೂ ಕೊಡುವದಿಲ್ಲವೆಂತ, ಆ ಡಬ್ಬಿ ತಿರುಗಿಸುವದು ಬಿಟ್ಟು, ಜನರು ತನ್ನ ಮನೆಯಲ್ಲಿ ಬರುತ್ತಾ ಹೋಗುತ್ತಾ ಇರುವೆಡೆ ಅದನ್ನು ಗೋಡೆಗೆ ಹೊಡೆದು, ದೇವವಾಕ್ಯದ ಎರಡು ವಚನಗಳನ್ನು ಅದರ ಮೇಲೆ ಬರದನು. ಒಂದು ಏನಂದರೆ[2]— ಲೋಕದ ಬದುಕುಳ್ಳವನು ತನ್ನ ಸಹೋದರನಿಗೆ ಕೊರತೆ ಇರುವದನ್ನು ನೋಡಿ,

1) ಆಗಲಿನ್ನೂ ಹಣದಲ್ಲಿ ಹೆಚ್ಚು ಬೆಲೆ ಇತ್ತು; 420ನೇ ಪಾನು ಸರಿ ನೋಡು. 2) 1 ಯೋಹಾ. 3, 17.

ತನ್ನ ಅಂತಃಕರಣವನ್ನು ಅವನಿಗೆ ಮುಚ್ಚಿದರೆ ಅವನಲ್ಲಿ ದೇವರ ಪ್ರೀತಿಯು ನೆಲೆಯಾಗಿರುವದು ಹ್ಯಾಗೆ?—ಮತ್ತೊಂದೇನಂದರೆ[1]—ಒಬ್ಬೊಬ್ಬನು ಹೃದಯದಲ್ಲಿ ಮುಂಗೊಳ್ಳುವ ಪ್ರಕಾರವೇ (ಕೊಡಲಿ)! ದುಃಖದಿಂದಾಗಲಿ ಅಗತ್ಯದಿಂದಾಗಲಿ ಅಲ್ಲ! ಯಾಕಂದರೆ ಸಂತೋಷವಾಗಿ ಕೊಡುವಂಥವನಿಗೆ ದೇವರು ಪ್ರೀತಿ ಮ್ಹಾಡುತ್ತಾನೆ.—ಬಳಿಕ ಕ್ರಿ. ಶ. 1695ನೇ ವರುಷದ ಒಂದಾನೊಂದು ದಿವಸ ಒಬ್ಬಳು ಗರತಿಯು ಒಮ್ಮೆ ಡಬ್ಬಿಗೆ 7 ರೂಪಾಯಿ ಹಾಕಿ ಹೋಗಲು, ಫ್ರಂಕೆಯು ಆ ಹಣ ನೋಡಿ, ಭಿಕ್ಷೆಗಾರರ ಮಕ್ಕಳನ್ನು ಜ್ಞಾಪಕ ಮಾಡಿ, ವಿಶ್ವಾಸಾನಂದದಿಂದ—ಇದೊಂದು ಒಳ್ಳೇ ಮೂಲ, ಇದರಿಂದ ದೊಡ್ಡದೊಂದು ಹುಟ್ಟಿಸ ಬೇಕು; ಇದರಿಂದ ಒಂದು ದರಿದ್ರಶಾಲೆಯನ್ನಾರಂಭಿಸುವೆನು! ಎಂತ, ನುಡಿದು, ರಕ್ತ ಮಾಂಸಗಳ ಸಂಗಡ ಸಂಭಾಷಣೆ ಗೈಯದೆ[2], ದೇವರ ಮೇಲೆ ನಂಬಿಕೆ ಇಟ್ಟು, ಅದೇ ದಿವಸ 3½ ರೂಪಾಯಿಗೆ ಪುಸ್ತಕಗಳನ್ನು ಕೊಂಡು ಕೊಂಡು, ಮಹಾ ವಿದ್ಯಾಶಾಲೆಯ ಒಬ್ಬ ಬಡ ವಿದ್ಯಾರ್ಥಿಗೆ ವಾರ ವಾರಕ್ಕೆ 5 ಅಣೆ ಕೊಡುವದೆಂತ, ಮ್ಹಾಡಿ, ಅವನಿಂದ ದಿನಕ್ಕೆ 2 ತಾಸು ಮೊದಲು 27 ಮಕ್ಕಳಿಗೆ ತನ್ನ ಮನೆಯದೊಂದು ಕೋಣೆಯೊಳಗೆ ವಿದ್ಯೆ ಕಲಿಸುವವನಾದನು. ಆದರೆ ಅವನ ದುಃಖಕ್ಕೆ ಏನಾಯಿತಂದರೆ, ಪುಸ್ತಕಗಳನ್ನು ಹೊಂದಿದ ಆ ಮಕ್ಕಳಲ್ಲಿ ನಾಲ್ವರು ಮಾತ್ರ ಶಾಲೆಯಲ್ಲುಳಿದರಲ್ಲದೆ ಮಿಕ್ಕಾದವರು ಪುಸ್ತಕಗಳನ್ನು ಮಾರಿ, ಶಾಲೆಗೆ ಬರುವದನ್ನು ಬಿಟ್ಟರು. ಇಂತಾದ ಮೇಲೆ ಅವನು ಇನ್ನೊಮ್ಮೆ 1 ರೂಪಾಯಿಗೆ ಪುಸ್ತಕಗಳನ್ನು ತಕ್ಕೊಂಡು, ಮಕ್ಕಳಿಗೆ ಕೊಟ್ಟಲ್ಲಿ ಇವರು ಪಾಠ ತೀರಿದಾಗಲೇ ಅವನ್ನು ಹಿಂದಕ್ಕೊಪ್ಪಿಸ ಬೇಕಾಯಿತು. ವಾರಕ್ಕೆ ಎರಡು ಮೂರು ಸಾರಿ ಅವನು ಆ ಮಕ್ಕಳಲ್ಲಿ ವಿದ್ಯಾಭ್ಯಾಸದ ಪ್ರೀತಿಯರಳಿಸುವ ಉದ್ದಿಶ್ಯ ಒಂದು ಚಿಕ್ಕ ಉಚಿತ ಪಾಲಿಸುತ್ತಿರುವನು. ಅಷ್ಟರಲ್ಲಿ ಆ 7 ರೂಪಾಯಿ ಖರ್ಚಾಗಿ, ಹೊಸ ದಾನಧರ್ಮವು ಬರುತ್ತಿರಲು, ಆ ಶಾಲೆಯು ಬರ ಬರ ಸಾಗುತ್ತಾ ಬಂತು. ಬಡವರ ಮಕ್ಕಳಿಗೆ ಬಹು ಜಾಗ್ರತೆಯಿಂದ ವಿದ್ಯೆ ಕಲಿಸೋಣಾಗುತ್ತದೆಂಬ ಸುದ್ದಿಯು ತಡವಿಲ್ಲದೆ ಹಬ್ಬಿದನಂತರ ಪಟ್ಟಣದ ಗೃಹಸ್ಥರಲ್ಲಿ ಅನೇಕರು, ತಮ್ಮ ಮಕ್ಕಳು ಸಹ ಆ ಶಾಲೆಯ ಪಾಠದಲ್ಲಿ ಶೇರುವಂತಾದರೆ ವಾರ ವಾರಕ್ಕೆ 1 ಅಣೆ ಕೊಡುವೆವೆಂದು, ಹೇಳಿದ ಪ್ರಕಾರವಾದಂದು ಆರಂಭದ ಅರ್ಧ ವರುಷದಲ್ಲಿ ಮಕ್ಕಳ ಸಂಖ್ಯೆಯು 60ಕ್ಕೆ ಮುಟ್ಟಿತು. ಆಗ ಆ ಉಪಾಧ್ಯಾಯನು ಪ್ರತಿ ವಾರಕ್ಕೆ 16 ಅಣೆ ಹೊಂದಿ, ದಿನಕ್ಕೆ 5 ತಾಸು ಪಾಠ ಕೊಡುವವನಾದನು. ಬಳಿಕ ಸುಗ್ಗಿಕಾಲದಲ್ಲಿ ಒಂದೇ ಕೋಣೆಯು ಇನ್ನೂ ಸಾಲದೆ, ನೆರಮನೆಯದು ಮತ್ತೊಂದು ಬಾಡಿಗೆಗೆ ತೆಕ್ಕೊಳ್ಳಲಾಯಿತು; ಛಳಿಕಾಲದಲ್ಲಿ ಇ

1) 2 ಕೊರಿ. 9, 7. 2) ಗಲಾ. 1, 16.

ನ್ನೊಂದನ್ನು ತೆಕ್ಕೊಳ್ಳಲವಶ್ಯವಾಯಿತು. ಫ್ರಂಕೆಯು ಶಾಲೆಯಲ್ಲಿ ನೆಟ್ಟದ್ದು ಮನೆಯಲ್ಲಿ ತಿರಿತಿರಿಗಿ ಕಿತ್ತು ಹೋಗುವದೆಂದು, ಅನುಭವಿಸುತ್ತಿರುವದರಿಂದ, ಹ್ಯಾಗಾದರೂ ಕೆಲವು ಮಕ್ಕಳನ್ನು ತನ್ನ ಜೋಕೆಯಲ್ಲಿಯೂ ಸುಶಿಕ್ಷೆಯಲ್ಲಿಯೂ ಪೂರಾ ಇಟ್ಟು ಕೊಳ್ಳುವೆನೆಂದು, ಮನಸ್ಸು ಮಾಡುತ್ತಲೇ ಕ್ರಿ. ಶ. 1695ನೇ ವರುಷ ಅಕಸ್ಮಾತ್ತಾಗಿ ಒಬ್ಬನು ಧರ್ಮಕ್ಕೆ ಬಿಟ್ಟು ಕಳುಹಿಸಿದ 750 ರೂಪಾಯಿಗಳು ಬಂದು ಮುಟ್ಟಿದವು; ಅವುಗಳ ವರುಷದ ಬಡ್ಡಿಯಾದ ಸುಮಾರು 37 ರೂಪಾಯಿ ಬಡವಾದ್ದೊಂದು ಅನಾಥಶಿಶುವಿನ ಸುಶಿಕ್ಷೆಗೆ ಪ್ರಯೋಗವಾಗ ಬೇಕೆಂದು, ನೇಮಿಸಿತ್ತು. ಫ್ರಂಕೆಯು ಅಂಥಾದ್ದೊಂದನ್ನು ಹುಡುಕಲಿಕ್ಕೆ ಹತ್ತಲು, ಅಂಥಾ 4 ಶಿಶುಗಳ ಗೊತ್ತು ಅವನಿಗೆ ಹಚ್ಚಿದರು; ಆಗಲವನು ಅವನ್ನೆಲ್ಲ ಅಂಗೀಕರಿಸಿದ್ದಕ್ಕೆ ಸ್ವಲ್ಪ ಕಾಲ ಮಾತ್ರ ಈಚೆ ಮತ್ತೈದವನ್ನೂ ಸ್ವೀಕರಿಸ ಬೇಕಾಯಿತು. ಅವನು ಎಲ್ಲವುಗಳನ್ನೂ ಭಕ್ತಿಯುಕ್ತ ಕ್ರೈಸ್ತರ ಮನೆಯಲ್ಲಿ ಜೋಪಾನದ ಹಣ ಕೊಟ್ಟು ಶೇರಿಸಿ, ಅವುಗಳನ್ನು ನೋಡುವವನೆಂತ, ತನಗತಿ ಪ್ರಿಯನಾದ ಒಬ್ಬ ವಿದ್ಯಾರ್ಥಿಯನ್ನು ಆರಿಸಿಟ್ಟನು. ಆದರೆ ಆ 37 ರೂಪಾಯಿ ಬಡ್ಡಿಯ ಮೇಲೆ 9 ಬಡ ಬಾಲಕರು ಒಂದು ವರುಷವಾದರೂ ಬದುಕಿ, ಕಲಿತು, ವರ್ಧಿಸುವದೆಂತು? ಅದು ಫ್ರಂಕೆಯ ಚಿಂತೆಯದಲ್ಲ; ಅದನ್ನವನು ಪರಲೋಕದಲ್ಲಿಯ ನಿಜ ಅನಾಥಪಿತನಿಗೆ ಒಪ್ಪಿಸಿತ್ತನು. ಹೀಗಿರಲು ಏನಾಯಿತಂದರೆ, ಮುಂಚೆ 750 ರೂಪಾಯಿ ಕಳುಹಿಸಿದವನು ಅದರ ಎರಡಷ್ಟು ಕಳುಹಿಸಿ ಕೊಟ್ಟದ್ದಲ್ಲದೆ ಮತ್ತೊಬ್ಬನು 450, ಇನ್ನೊಬ್ಬನು 150 ರೂಪಾಯಿ ತಲಪಿಸಿ ಕೊಟ್ಟರು. ಅದು ಹೊರ್ತಾಗಿ ಚಿಕ್ಕ ಚಿಕ್ಕ ದಾನಗಳು ಸಹ ಬಾರದಿರಲಿಲ್ಲ. ತನ್ಮಧ್ಯ ಫ್ರಂಕೆಯು ಅನಾಥರನ್ನು ಮಾತ್ರವಲ್ಲದೆ ಬಡ ವಿದ್ಯಾರ್ಥಿಗಳನ್ನೂ ಪೋಷಿಸುವದಕ್ಕೆ ತೊಡಗಿದ್ದನು. ಆ ಎರಡು ತರದವರ ಲೆಖ್ಖವು ಹೆಚ್ಚುತ್ತಿರುವ ಪ್ರಕಾರ ಧರ್ಮದ ಹಣವು ಸಹ ಹೆಚ್ಚುತ್ತಿರಲು, ಅವನು ಕ್ರಿ. ಶ. 1697ನೇ ವರುಷ ತನ್ನದಕ್ಕೆ ನೆರೆಯಾದ ಎರಡು ಮನೆಗಳನ್ನು ಕೊಂಡು ಕೊಂಡನು. ಇವುಗಳಲ್ಲಿಯಾದರೂ ಅವರೆಲ್ಲರೂ ಹಿಡಿಯದೆ ಹೋದ ಮೇಲೆ ಅವನು ಹಲ್ಲೆ ಪಟ್ಣಕ್ಕೆ ಶೇರಿದ್ದೊಂದು ಒಕ್ಕಲಿಗರ ಆಸ್ತಿ ಕ್ರಯಕ್ಕೆ ಕೊಂಡನು. ಹಾಗಾದರೆ ಒಂದು ಮನೆ ಕಟ್ಟುವದಕ್ಕೆ ತಕ್ಕ ಸ್ಥಳವಿತ್ತು, ಹತ್ತರದ ಕಲ್ಲಣೆಯಲ್ಲಿ ಕಲ್ಲು ಸಹ ಶಿಕ್ಕುವಂತಿತ್ತು; ಆದಾಗ್ಯೂ ಒಂದು ಸಣ್ಣ ಮನೆಯನ್ನಾದರೂ ಕಟ್ಟುವದಕ್ಕೆ ಫ್ರಂಕೆಗೆ ಹಣವಿರಲಿಲ್ಲ. ಇಂತಾದರೂ ಅವನು ದೇವರ ಮೇಲೆ ಭರವಸವಿಟ್ಟು, ಕ್ರಿ. ಶ. 1698ನೇ ವರುಷ ಅವನ ಹೆಸರಿನಲ್ಲಿ ಒಂದು ದೊಡ್ಡ ಅನಾಥಗೃಹಕ್ಕೆ ಪಾಯ ಹಾಕಿದನು. ಬಳಿಕ ಒಮ್ಮೆ ಮರ ಮತ್ತೊಮ್ಮೆ ಸುಣ್ಣ ಮುಂತಾದದ್ದು ಸದ್ಯಕ್ಕೆ ಇಲ್ಲದೆ ಹೋದರೂ ದೇವರು ತಕ್ಕ ಕಾಲಕ್ಕೆ ಯಾವಾಗಲೂ ತಿರಿತಿರಿಗಿ ತಕ್ಕ ಸಹಾಯ ಗೈಯುತ್ತಿದ್ದನು.

ಆಗಿಂದಾಗ, ಕಾಮಾಟಿಗಳಿಗೆ ಸಂಬಳ ಕೊಡ ಬೇಕಾದಂದಾಗಲಿ ತನ್ನ ಪೋಷಣ ದೊಳಗಿರುವ ನೂರಾರು ಬಡ ಜನಕ್ಕೋಸ್ಕರ ಪೇಟೆಯಿಂದ ಆಹಾರಜೀನಸುಗಳನ್ನು ತರ ಬೇಕಾದಂದಾಗಲಿ, ಫ್ರಂಕೆಯ ಹತ್ತರ ಒಂದೇ ರುವಿಯಾದರೂ ಇಲ್ಲದಿರುವದು; ಒಂದಾನೊಂದು ದಿನ ದಿಕ್ಕಿಲ್ಲದವರ ಮನೆಗಳ ಪಾರುಪತ್ಯಗಾರನು ರಾತ್ರಿಯಲ್ಲಿ ಮಕ್ಕಳಿಗೆ ದೀಪ ಹಚ್ಚಲಿಕ್ಕೆ ಬರುವಷ್ಟು ಹಣ ದೊರಕಿಸಿ ಕೊಳ್ಳುವ ನಿಮಿತ್ತ ಹಗಲೆಲ್ಲಾ ತಿರಿಗ್ಯಾಡುತ್ತಿದ್ದ ಮೇಲೆ ಸಾಯಂಕಾಲಕ್ಕೆ ಮುಂಚೆ ಬೇಕಾದದ್ದು ಪ್ರಾಪಿಸದಿತ್ತು. ಅನೇಕ ಸಾರಿ ಫ್ರಂಕೆಯ ಸ್ನೇಹಿತರು ದಿಂಡು ಗೆಟ್ಟು ಹೋದರು; ಆದರೂ ಅವನ ವಿಶ್ವಾಸವು ಕಿಂಚಿತ್ತೂ ಚಲಿಸಲಿಲ್ಲ. ಒಮ್ಮೆ ಆ ಸ್ನೇಹಿತರು, ಖರ್ಚನ್ನು ಕಡಿಮೆ ಮಾಡುವದಕ್ಕೋಸ್ಕರ ಕಟ್ಟುವದಕ್ಕೆ ಕಲ್ಲಿಗೆ ಬದಲಾಗಿ ಮರವನ್ನೇ ಮಾತ್ರ ಉಪಯೋಗಿಸಿರೆಂದು, ಆಲೋಚನೆ ಹೇಳುವಾಗ—ಕಲ್ಲಿನಲ್ಲಿಯೇ ಕಟ್ಟು! ಹಣವನ್ನು ನಾನು ಕೊಡುವೆನೆಂತ, ದೇವರ ಕಡೆಯಿಂದ ಫ್ರಂಕೆಗೆ ಒಂದು ನುಡಿಯು ಕೇಳಿಸಿದಂತಾಯಿತು. ಒಂದಾನೊಂದು ದಿನ ಅವನು ತನ್ನ ಕೋಣೆಯೊಳಗೆ ದೇವರ ಒತ್ತಾಸೆ ಬೇಡಿ ಕೊಳ್ಳುತ್ತಿದ್ದ ತರುವಾಯ ಹೊರಟು, ಕಟ್ಟುವ ಸ್ಥಳಕ್ಕೆ ಹೋದಲ್ಲಿ ಕಾಮಾಟಿಗರಲ್ಲೊಬ್ಬನು ತಾನು ಆಗಲೇ ಕಸದೊಳಗೆ ಕಂಡು ಕೊಂಡದ್ದೊಂದು ಪ್ರಾಚೀನ ನಾಣ್ಯವನ್ನು ಅವನಿಗೆ ತೋರಿಸಿದನು; ಅದರಲ್ಲಿ, ಕಟ್ಟಿಸುವವನಾದ ಯೆಹೋವನು ಕಟ್ಟೋಣವನ್ನು ತೀರಿಸಲಿ! ಎಂತ, ಬರೆದಿತ್ತು. ಅವನು ಅದನ್ನೋದಿ, ಮತ್ತಷ್ಟು ಸಂತೋಷದಿಂದ ಕಟ್ಟಿಸುವವನಾದನು.

ಫ್ರಂಕೆಯು ಅಂದು ತಾನು ಅನುಭವಿಸಿದ್ದನ್ನು ಕುರಿತು ಸ್ವಹಸ್ತಾಕ್ಷರದಿಂದ ಬರೆದ ಒಂದೆರಡು ಮಾತನ್ನು ಈಗ ತಿಳಿಸುವ—ಕ್ರಿ. ಶ. 1698ನೇ ವರುಷದ ಒಕ್ಟೋಬರ್ ತಿಂಗಳಲ್ಲಿ ನಾನು ಭಕ್ತಿಯುಕ್ತಳಾದ ಒಬ್ಬ ಬಡ ಕ್ರೈಸ್ತಳಿಗೆ ದುಕಾತೆಂಬ 5 ರೂಪಾಯಿ ಮೌಲ್ಯದ್ದೊಂದು ನಾಣ್ಯವನ್ನು ಕಳುಹಿಸಿ ಕೊಟ್ಟದ್ದಕ್ಕೆ ಅವಳು ಪ್ರತ್ಯುತ್ತರವಾಗಿ—ಆ ದುಕಾತು ಅತ್ಯಗತ್ಯವಾದ ಸಮಯಕ್ಕೆಯೇ ನನಗೆ ಮುಟ್ಟಿತು; ಹೀಗಿರಲಿಕ್ಕೆ ನಾನು ತತ್‌ಕ್ಷಣವೇ ದೇವರಿಗೆ, ಅದಕ್ಕೆ ಪ್ರತಿಯಾಗಿ ಫ್ರಂಕೆಯ ಬಡ ಅನಾಥರಿಗೆ ದುಕಾತುಗಳದೊಂದು ರಾಶಿಯನ್ನು ದಯೆ ಪಾಲಿಸೆಂದು, ಬಿನ್ನವಿಸಿದೆನೆಂತ, ಬರೆದಳು. ಅದಾದ ಮೇಲೆ ಸ್ವಲ್ಪ ವೇಳೆಗೆ ಮಾತ್ರ ಈಚೆ ಒಬ್ಬ ಕ್ರೈಸ್ತಳು ನನ್ನ ಬಳಿಗೆ ಬಂದು, ನನಗೆ 1 ದುಕಾತನ್ನೂ 12 ದುಬಾರಿ ದುಕಾತುಗಳನ್ನೂ ತಂದು ಕೊಟ್ಟಳು; ಅದಲ್ಲದೆ ಅದೇ ದಿನದಲ್ಲಿ ಸ್ವೇದೆನು ದೇಶದಲ್ಲಿಯ ಒಬ್ಬ ಮಿತ್ರನು ಸಹ ನನಗೆ 2 ದುಕಾತುಗಳನ್ನು ಮುಟ್ಟಿಸಿದನು; ಇಷ್ಟೂ ಮಾತ್ರವಲ್ಲದೆ ಕೊಂಚ ಕಾಲದ ಮೇಲೆ ಟಪ್ಪಾಲ ದ್ವಾರಾ 25 ದುಕಾತುಗಳು ಬಂದೊದಗಿದವು, ಇವನ್ನು ಕಳುಹಿಸಿದವನು ತನ್ನ ಹೆಸರನ್ನು ಪ್ರಕಟಿಸಲಿಲ್ಲ; ಅದೇ ಸಮಯ ವುಯಿರ್ತೆಂ

ಬೆರ್ಗಿನ[1] ಲೂದ್ವಿಗನೆಂಬ ಶ್ರೀಮಂತನು ಸಕ್ಸೆನಿನಲ್ಲಿ ಸತ್ತು, ಇದು ಹಲ್ಲೆಯ ಅನಾಥಗೃಹಕ್ಕೆ ನೇಮಿತವಾದದ್ದೆಂತ, ಹೇಳುವದೊಂದು ಚೀಟು ಹಚ್ಚಿರುವಂಥ ಕೆಂಪು ರೇಶಿಮೆಯದಾದ ಚೀಲದೊಳಗೆ 500 ದುಕಾತುಗಳನ್ನು ಧರ್ಮಕ್ಕೆ ಒಪ್ಪಿಸಿದ್ದು ನನಗೆ ಮುಟ್ಟಿತು. ನಾನು ಆಯಾ ದುಕಾತುಗಳ ರಾಶಿಯನ್ನು ನನ್ನ ಮೇಜಿನ ಮೇಲೆ ನನ್ನೆದುರಾಗಿರುವದನ್ನು ಕಂಡು, ಒಮ್ಮಿಂದೊಮ್ಮೆ ಆ ಭಕ್ತಿಯುಕ್ತಳಾದ ಸ್ತ್ರೀಯ ಬಿನ್ನಹದರ್ಥವು ನನಗೆ ನೆನಪಾಯಿತು.—ಒಂದಾನೊಂದು ಸಮಯಕ್ಕೆ ನನಗೆ 150 ರೂಪಾಯಿಗಿಂತ ಹೆಚ್ಚು ಅವಶ್ಯ ಬಿದ್ದಾಗ 15 ರೂಪಾಯಿ ಶಿಕ್ಕುವ ದಾರಿಯನ್ನಾದರೂ ನಾನು ಕಾಣಲಿಲ್ಲ. ಆ ವೇಳೆ ಪಾರುಪತ್ಯಗಾರನು ಬಂದು, ಮುಟ್ಟ ಬೇಕಾದ ಸಾಮಾನಿನ ಪಟ್ಟಿ ತೋರಿಸಿ, ಹಣ ಕೇಳಿದನು. ನಾನು, ಮಧ್ಯಾಹ್ನದ ಊಟ ಆದ ತರುವಾಯ ತಿರಿಗಿ ಬರ್ರಿ! ಎಂತ, ಹೇಳಿ, ದೇವಪ್ರಾರ್ಥನೆ ಮಾಡ ತೊಡಗಿದೆನು. ಅವನು ಮಧ್ಯಾಹ್ನದ ಊಟದ ಮೇಲೆ ಮರಳಿ ಬಂದು, ಕೇಳಲು, ಇನ್ನೂ ಏನೂ ಹಣ ಬಾರದಿದ್ದದರಿಂದ, ಮತ್ತೂ ಸಾಯಂಕಾಲಕ್ಕೆ ಬರ ಬೇಕೆಂದು, ವಿಧಿಸಿದೆನು. ತನ್ಮಧ್ಯ ಒಬ್ಬ ಕ್ರೈಸ್ತ ಪ್ರಾಣಗೆಳೆಯನು ನನಗೆ ಭೇಟಿ ಕೊಡಲು, ಅವನ ಸಂಗಡ ದೇವರಿಗಡ್ಡ ಬಿದ್ದು, ಪ್ರಾರ್ಥಿಸುವಲ್ಲಿ ದೇವೋಪಕಾರದ ವಿವಿಧ ವೈಚಿತ್ರ್ಯವೆಲ್ಲವೂ ನನ್ನ ಮನಸ್ಸಿನಲ್ಲಿ ಮೂಡಿತು; ಆದ್ದರಿಂದ ದೇವರ ಸ್ತೋತ್ರ ಒಂದೇ ನನ್ನಲ್ಲುಳಿದು, ನನಗೆ ಬಹು ಬಲ ಪಡಿಸಿದ ಕಾರಣ, ಈ ನೈಮಿತ್ತಕ ಕಷ್ಟಕ್ಕೆ ನನ್ನನ್ನು ತಪ್ಪಿಸೆಂತ, ಇನ್ನೂ ಕಳವಳದೊಡನೆ ದೇವರಿಗೆ ಬೇಡಿ ಕೊಳ್ಳುವದು ನನಗೆ ಅನಾವಶ್ಯಕವೆನ್ನಿಸಿತು. ಆ ಪ್ರಾಣಗೆಳೆಯನು ನನ್ನನ್ನು ಬಿಟ್ಟು ಹೋಗುವಾಗ ನಾನವನನ್ನು ನನ್ನ ಕೋಣೆಯೊಳಗಿಂದ ಹೆಬ್ಬಾಗಿಲಿಗೆ ಮುಟ್ಟಿಸಿ ಕೊಡುತ್ತಿರಲು, ಇದರದೊಂದು ಕಡೆಯಲ್ಲಿ ಪಾರುಪತ್ಯಗಾರನು ನಿಂತಿದ್ದು, ಕೇಳಿದ ಹಣವನ್ನು ಈಸು ಕೊಳ್ಳುವ ಹಾಗಿದ್ದನು; ಆದರೆ ಮತ್ತೊಂದು ಕಡೆಯಲ್ಲಿ ಮುದ್ರೆ ಹಾಕಿದ್ದೊಂದು ಚೀಲದೊಳಗೆ ಅನಾಥಗೃಹದ ಪ್ರಯೋಜನಕ್ಕಾಗಿ 225 ರೂಪಾಯಿಗಳನ್ನು ತಂದವನೊಬ್ಬನು ನಿಂತಿದ್ದನು.—ಮತ್ತೊಂದು ಸಮಯ ಬೊಕ್ಕಸಪರಿಪಾಲಕನಾದಂಥ ನನ್ನ ಸಹಾಯಕರಲ್ಲೊಬ್ಬನು ನನಗೆ, ನಮ್ಮ ಹಣವೆಲ್ಲಾ ಖರ್ಚಾಯಿತೆಂತ, ಹೇಳಲಿಕ್ಕೆ, ನಾನು ಅವನಿಗೆ—ಅದರಿಂದ ನನಗೆ ಸಂತೋಷವಾಗುತ್ತದೆ; ಯಾಕಂದರೆ ದೇವರು ಹೊಸತಾಗಿ ನಮಗೇನಾದರೂ ಕೊಡುವನೆಂಬದಕ್ಕೆ ಅದೇ ಗುರ್ತು! ಚಿಕ್ಕತನದಿಂದ ನನ್ನ ಮೊಚ್ಚೆಗಳು ಹರಿದು ಹೋಗುತ್ತಿರಲು, ಆಗಾಗ ನನಗೆ ಹೊಸವುಗಳನ್ನು ಕೊಡುತ್ತಿದ್ದವನು ಅವನೇ, ಅಲ್ಲ? ಎಂತ, ಉತ್ತರವಿತ್ತೆನು. ಬಳಿಕ ಮರುದಿವಸ ಕೋಳಿ ಕೂಗುವಾಗಲೇ ಒಬ್ಬನು ನನ್ನ ಮನೇ ಬಾಗಲಿಗೆ ಬಂದು, ನನ್ನೊಡನೆ ತನಗೆ ಅಮರಿದ ಒಂದು

[1] 445, 456ನೇ ಪಾನು.

ಜಂಬರವದೆ ಎಂದು, ನನಗೆ ಹೇಳಿಸಿದನು; ಅವನು ಅನಾಥಗೃಹದ ಹಿತಕ್ಕೋಸ್ಕರ ತನಗೊಪ್ಪಿಸಿರುವ 300 ರೂಪಾಯಿಗಳನ್ನು ನನ್ನ ಕೈಯಲ್ಲಿ ಕೊಟ್ಟು ಹೋದನು.—

ಕ್ರಿ. ಶ. 1695ನೇ ವರುಷದಲ್ಲಿಯಾದರೂ ಫ್ರಂಕೆಯು, ಅನೇಕ ಸಾರಿ ಕ್ರೈಸ್ತತ್ವಕ್ಕೆ ದೂರದಲ್ಲುಳಿಯುವ ದೊಡ್ಡ ಸ್ಥಿತಿವಂತರ ಮಕ್ಕಳನ್ನು ಸುಶಿಕ್ಷಿಸುವದಕ್ಕೆ ಒಂದು ಶಾಲೆಯನ್ನಿಡುವದು ಕೂಡ ಯೋಗ್ಯವೆಂದು, ಆಲೋಚಿಸಿ ಕೊಂಡು, ಲತೀನ ಮುಂತಾದ ಪರ ಭಾಷೆಗಳು ಸಹ ಅಭ್ಯಾಸವಾಗುವ ಪೇದಗೋಗೀಯವೆಂಬಂಥಾದ್ದೊಂದು ಬಾಲಶಿಕ್ಷಾಶಾಲೆಯನ್ನು ಉತ್ಪಾದಿಸಿದಾಗ ಸದ್ಯ ಕೆಲಸಕ್ಕೆ ಬೇಕಾಗದಂಥ 6000 ರೂಪಾಯಿ ಬೊಕ್ಕಸದೊಳಗಿದ್ದವು. ಅಂದು ಒಂದು ಪ್ರಾತಃಕಾಲಕ್ಕೆ ಆ ಹಣವಿದ್ದಲ್ಲಿ ಕಳ್ಳರು ಕನ್ನ ಕೊರೆದ ಕುರುಹು ಕಾಣಲು, ಫ್ರಂಕೆಯು—ಕಳ್ಳರು ಆ ಹಣ ಕದ್ದು ಕೊಂಡು ಹೋಗುವದಕ್ಕಿಂತ ಮುಂಚೆ ಅದನ್ನು ಭದ್ರವಾಗಿಟ್ಟು ಕೊಳ್ಳುವೆನು; ದೇವರ ಹೆಸರಿನಲ್ಲಿ ಆ ಬಾಲಶಿಕ್ಷಾಶಾಲೆಗೆ ಒಂದು ಗೃಹ ಕಟ್ಟುವೆನು ಎಂತ, ಹಾಗೆ ಮಾಡ ಹತ್ತಿದನು. ಆ ಗೃಹ ತೀರಿ ಕರಾರಿನ ಹಣ ಕೊಡಲವಶ್ಯವಾದ ದಿನ, ಇದ್ದ ಹಣವೆಲ್ಲ ವೆಚ್ಚವಾಗಿರಲಾಗಿ ಅದೆಲ್ಲಿಂದ ಬರುವದೆಂದು, ಸರ್ವರು ದಿಶೆ ಗೆಟ್ಟು ಇರಲು, ಫ್ರಂಕೆಯೊಬ್ಬನೇ ಶಾಂತನಾಗಿ ಉಳಿದು, ಮಹಾ ವಿದ್ಯಾಶಾಲೆಯಲ್ಲಿ ಎಂದಿನಂತೆ ತನ್ನ ವಾಗ್ನಿರೂಪಣ ಕೊಟ್ಟು, ಮನೆಗೆ ತಿರುಗಿದ ಬಳಿಕ ಅವನ ಮೇಜಿನಲ್ಲಿ ಅನೇಕಾನೇಕ ಪತ್ರಿಕೆಗಳು ಇಟ್ಟಿದ್ದವು; ಅವನು ತನ್ನ ಕೈಗೆ ಶಿಕ್ಕಿದ್ದೊಂದನ್ನು ತೆಗದು, ಮುದ್ರೆಯೊಡೆದು, ಓದಲು, ಆರಂಭದಲ್ಲಿಯೇ ಬರದಿದ್ದದೇನಂದರೆ—ನನ್ನ ತಂಗಿಯು ಸಾಯುವಾಗ ಹಲ್ಲೆಯ ಅನಾಥಗೃಹಸಂಬಂಧವಾದ ಕಾರ್ಯಕ್ಕೆ 12,000 ರೂಪಾಯಿ ಬಿಟ್ಟು ಕೊಟ್ಟಳು.—ಹೀಗಿರಲಾಗಿ ಆಗಿನ ಕಷ್ಟವೆಲ್ಲಾ ಹೋಗಿತ್ತು.

ಫ್ರಂಕೆಯು ಈ ಬಾಲಶಿಕ್ಷಾಶಾಲೆಯನ್ನಲ್ಲದೆ ಆ ಅನಾಥಗೃಹಕ್ಕೆ ಒಂದು ಔಷಧಶಾಲೆಯನ್ನೂ ಒಂದು ಪುಸ್ತಕಸಂಗ್ರಹಶಾಲೆಯನ್ನೂ ಒಂದು ಮುದ್ರಾಶಾಲೆಯನ್ನೂ ಅವೇ ವಿಶ್ವಾಸಕ್ರಿಯೆಗಳ ಮೂಲಕ ಶೇರಿಸಿದನು. ಆ ಮುದ್ರಾಶಾಲೆಯ ಮುಖ್ಯ ಉದ್ದೇಶವು ಗೆರ್ಮಾನ ಭಾಷೆಯ ದೇವವಾಕ್ಯಪ್ರತಿಗಳನ್ನು ಮುದ್ರಿಸಿ ಬಡವರಿಗೆ ಅಘ್ಘವಾಗಿ ಮಾರುವದೇ, ಅಥವಾ ಉಚಿತವಾಗಿ ಕೊಡುವದೇ; ಈ 1868ನೇ ವರುಷದ ವರೆಗೆ ಅಲ್ಲಿ ಸುಮಾರು 20 ಲಕ್ಷ ದೇವವಾಕ್ಯಪ್ರತಿಗಳು ಮುದ್ರಿತವಾಗಿವೆ. ಇಷ್ಟೆಲ್ಲಾ ಹೊರ್ತಾಗಿ ಫ್ರಂಕೆಯು ಅಮೆರಿಕದ ಉತ್ತರ ಭಾಗದಲ್ಲಿ ಇಂದಿಯಾನರೆಂಬ ಮೂಲನಿವಾಸಿಗಳಿಗೆ[1] ಅಧಿಕಾಶೀರ್ವಾದದೊಡನೆ ಸುವಾರ್ತೆ ಸಾರಿದ್ದ ಜೊನ್ ಎಲಿಯೊತನೆಂಬವನ ಸುದ್ದಿ ಕೇಳಿ, ಪರದೇಶಗಳಲ್ಲಿಯ

1) 541, 542ನೇ ಪಾನು.

ಸುವಾರ್ತಾಪ್ರಸಾರಣವೃತ್ತಿಯನ್ನೆಸಗಿ, ಕ್ರಿ. ಶ. 1706ನೇ ವರುಷ ಈ ನಮ್ಮ ಹಿಂದು ದೇಶದಲ್ಲಿ ದೇನೆಮರ್ಕಿನವರಿಗೆ[1] ಸ್ವಾಸ್ಥ್ಯವಾಗಿದ್ದ ತಮಿಳ ತೀರದ ತರಂಗಂಬಾಡಿ ಎಂಬಲ್ಲಿಗೆ ಬರ್ಥೋಲೊಮಾಯ ತ್ಸೀಗೆನ್ಬಲ್ಗನೆಂಬ ಸುವಾರ್ತಾಪ್ರಸಾರಕನನ್ನು ಕಳುಹಿಸಿದನು. ಹಿಂದು ದೇಶಕ್ಕೆ ಮೊದಲು ಬಂದ ಸುವಾರ್ತಾಪ್ರಸಾರಕನು ಇವನೇ.

ಕ್ರಿ. ಶ. 1701ನೇ ವರುಷ ಅನಾಥಗೃಹವು ಸಂಸಿದ್ಧವಾದಾಗ ಅನಾಥರೂ ಬಡ ವಿದ್ಯಾರ್ಥಿಗಳೂ ಅದರೊಳಗೆ ಶೇರಿ, ವಸಿಸುವವರಾದರು. ಬಳಿಕ ಫ್ರಂಕೆಯು ಅದರ ಸ್ಥಿತಿ ಗತಿಗಳನ್ನು ಕುರಿತು ಸ್ತುತಿಸಿದ್ದೇನಂದರೆ—ಒಬ್ಬನು ಕೋಳೀ ಮರಿಗಳಿಗೆ ರೊಟ್ಟಿ ಪುಡಿ ಮಾಡಿ ಹಾಕುವ ಓಪಾದಿಯಲ್ಲಿ ಕ್ರಿಸ್ತ ಕರ್ತನು ವಾರ ವಾರಕ್ಕೂ ಮಾಸ ಮಾಸಕ್ಕೂ ಜೀವನಕ್ಕೆ ಅಗತ್ಯವಾದದನ್ನು ಸಿದ್ಧ ಮಾಡಿ, ಬಾಯಿಗೊಡ್ಡುತ್ತಾ ಬಂದನು.—ಅವನು ಕ್ರಿ. ಶ. 1727ನೇ ವರುಷ ಸಾಯಲು, ಅನಾಥಗೃಹದಲ್ಲಿ 430 ಮಂದಿ ಅನಾಥರು 10 ಜನ ಮನೆವಾರ್ತೆಯವರ ಕೆಳಗೆ ಪೋಷಣ ಶಿಕ್ಷೆಗಳೆರಡನ್ನು ಹೊಂದುತ್ತಿದ್ದರು; ಅದಕ್ಕೆ ಶೇರಿದ ಗೆರ್ಮಾನ ಭಾಷೆಯ ಶಾಲೆಗಳಲ್ಲಿ 2125 ಹೆಣ್ಣು ಗಂಡು ಮಕ್ಕಳಿಗೆ 136 ಮಂದಿ ಉಪಾಧ್ಯಾಯರಿಂದ ಧರ್ಮಕ್ಕಾಗಿ ಓದಿಸುತ್ತಿದ್ದರು; ಪೇದಗೋಗೀಯವೆಂಬದರಲ್ಲಿ 82 ಮಂದಿ ಬಾಲರು ಶಿಕ್ಷಿತರಾಗುತ್ತಿದ್ದರು; ಅದು ಹೊರ್ತಾಗಿ 212 ಮಂದಿ ಬಡ ಶಾಲೆಹುಡುಗರಿಗೂ 255 ಮಂದಿ ಬಡ ವಿದ್ಯಾರ್ಥಿಗಳಿಗೂ ಅನಾಥಗೃಹದಲ್ಲಿ ಊಟ ಕೊಡೋಣವಾಗುತ್ತಿತ್ತು. ನಮ್ಮ ಈ ಕಾಲದಲ್ಲಿ ಆ ಅನಾಥಗೃಹಕ್ಕೆ ಶೇರಿದ ಮನೆಗಳೆಲ್ಲಾ 800 ಅಡಿಗಿಂತ ಉದ್ದವಾದ ಬೀದಿಯಾಗಿರುತ್ತವೆ.

ಫ್ರಂಕೆಯು 63 ವರುಷದವನಾದಾಗ ಮೂತ್ರಕೃಚ್ಛ್ರವು ಅವನಿಗೆ ಹಿಡಿದು, ಸುಮಾರು 1 ವರುಷ ಉಪದ್ರವ ಕೊಡುತ್ತಿದ್ದ ಮೇಲೆ ಅವನ ಎಡಗೈಯು ಮರಗಟ್ಟಿತು. ಅಂದು ಒಂದಾನೊಂದು ದಿನ ನೋವು ಮಿಗಿಲಾಗಲಿಕ್ಕೆ, ಅವನು, ದೇವರೇ, ಪರಿಹರಿಸೆಂತ, ಪ್ರಾರ್ಥಿಸುವ ಹೊತ್ತು ಅಗೋ, ಅವನು ತಿರಿಗಿ ಸ್ವಸ್ಥನಾಗಿ, ಮುಂಚೆ ಎಂದಾದರೂ ಅನುಭವಿಸದಿದ್ದ ಕ್ಷೇಮ ಹೊಂದಿದನು. ಆದ್ದರಿಂದ ವೈದ್ಯಗಾರರು, ತಮ್ಮ ಔಷಧಗಳಿಂದ ಆಗದ್ದನ್ನು ದೇವರ ಕೈಯೇ ಮಾಡಿತೆಂತ, ತಿಳಿದು, ನಿವೇದಿಸಿದರು. ತರುವಾಯ ಕ್ರಿ. ಶ. 1727ನೇ ವರುಷದ ಮೇ ತಿಂಗಳಂತದಲ್ಲಿ ಅವನ ರೋಗವು ಮರಳಿ ಬಂತು. ಆ ಮೇಲೆ ಅವನ ವೃತ್ತಿಯು ನಿತ್ಯ ಪ್ರಾರ್ಥನೆಯೇ; ತನಗೆ ಬಲಹೀನತ್ವ ಒದಗಲು, ದೇವವಾಕ್ಯದ ಭಾಗಗಳನ್ನು ಸ್ನೇಹಿತರಿಂದೋದಿಸಿ, ಆಲೈಸುತ್ತಿರುವನು; ಯೆಹೋವನೇ, ನಿನ್ನ ರಕ್ಷಣೆಯನ್ನು ಪ್ರತೀಕ್ಷಿಸಿದ್ಧೇನೆ ಎಂಬ[1] ಮಾತು ಲೆಖ್ಖವಿಲ್ಲದಷ್ಟು ಸಾರಿ ಅವನ ಬಾಯಿಯಿಂದ ಹೊರಡುತ್ತಿ

1) 456ನೇ ಪಾನು. 2) ಉತ್ಪ. 49, 18.

ರುವದು. ಜೂನ್ ತಿಂಗಳಿನ 8ನೇ ದಿನ ಮಧ್ಯಾಹ್ನಕ್ಕೆ ಒಬ್ಬ ಜತೆಬೋಧಕನು ಬಂದು, ಅವನ ಆಶೀರ್ವಾದವನ್ನು ಬಿನ್ನವಿಸಿ ಕೊಳ್ಳಲು, ಅವನು ಆ ಸ್ನೇಹಿತನ ತಲೆಯಲ್ಲಿ ತನ್ನ ಬಲಹೀನ ಹಸ್ತವನ್ನಿಟ್ಟು, ತಾನು ಸುಮಾರು 1 ತಿಂಗಳಿಗಾಚೆ ವಿದ್ಯಾರ್ಥಿಗಳ ಮುಂದೆ ತನ್ನ ಕಡೇ ವಾಗ್ನಿರೂಪಣಕ್ಕೆ ವಿಷಯವೆಂದು ಪ್ರಯೋಗಿಸಿದ್ದು, ಯುಗ ಯುಗಕ್ಕೂ ಯೆಹೋವನ ಆಶೀರ್ವಾದಾನ್ವಿತರಾಗಿರಿ! ಎಂತ, ಹೇಳುವ[1] ವಚನವನ್ನೇ ತೆಕ್ಕೊಂಡು, ಹಾಗಾದರೆ ಯುಗ ಯುಗಕ್ಕೂ ಕರ್ತನ ಆಶೀರ್ವಾದಾನ್ವಿತನಾಗಿರು! ಎಂದು, ನುಡಿದನು. ಬಳಿಕ ಅವನ ನಿಶ್ತ್ರಾಣಾವಸ್ಥೆಯು ಹೆಚ್ಚೆಚ್ಚಾಗುವಲ್ಲಿ ಅವನ ಹೆಂಡತಿಯು, ನಿನ್ನ ರಕ್ಷಕನು ನಿನಗೆ ಸಮೀಪನಾಗಿದ್ದಾನಲ್ಲವೋ? ಎಂದು, ಕೇಳಿದ್ದಕ್ಕೆ ಅವನು, ಅದಕ್ಕೇನೂ ಸಂಶಯವಿಲ್ಲ! ಎಂದು, ಉತ್ತರ ಕೊಟ್ಟು, ನಿದ್ರೆ ಹತ್ತಿದವನಾಗಿ, ರಾತ್ರಿ ಹತ್ತು ಘಂಟೆಗೆ ಇನ್ನೂ ಅದರೊಳಗೆಯೇ ಇದ್ದು, ಹಾಗೆಯೇ ತೀರಿ, ತನ್ನ ಕರ್ತನ ಮಹಿಮೆಗೆ ಹೋದನು. ತದನಂತರ ಪಟ್ಣದವರೆಲ್ಲರೂ, ಇನ್ನೊಮ್ಮೆ ಅವನ ಹೆಣವನ್ನಾದರೂ ನೋಡ ಬೇಕೆಂದು, ಕೂಡಿ ಬಂದು, 8 ದಿವಸಕ್ಕೀಚೆ ದೊಡ್ಡ ಸಮೂಹವಾಗಿ ಅದನ್ನೊಡಗೊಂಡು ಸಮಾಧಿಗೆ ಗಮಿಸಿದರು.

ಫ್ರಂಕೆಯು ದೇವರ ಹೆಸರಿನಲ್ಲಿ ನಿರ್ಮಿಸಿದ ಆ ಅನಾಥಗೃಹ ಮೊದಲಾದದ್ದು ಈಗಲಾದರೂ ಇನ್ನು ಕ್ರೈಸ್ತ ಸಜ್ಜೀವಿಕೆಗೆ ಮಹಾಭಿವೃದ್ಧಿ ಕೊಡುವ ಬುಗ್ಗೆಯಾಗಿದೆ.

## 68. ತ್ಸಿಂತ್ಸೆಂದೊರ್ಫನು.

ಸ್ಪೇನೆರನು ದ್ರೇಸ್ದೆನು ಪಟ್ಣದಲ್ಲಿ ಬೋಧಕವೃತ್ತಿ ತೀರಿಸಿ ಹೋದಾಗ[2] ಕ್ರಿ. ಶ. 1700ನೇ ವರುಷ ಅಲ್ಲಿ ನೀಕೊಲಾವ ತ್ಸಿಂತ್ಸೆಂದೊರ್ಫನೆಂಬ ಪ್ರಭುವು ಜನಿಸಿದನು. ಅವನ ತಂದೆಯು ಸಕ್ಸೆನಿನ ಪ್ರಧಾನ ಮಂತ್ರಿಗಳಲ್ಲೊಬ್ಬನು. ಹೆತ್ತವರಿಬ್ಬರು ಸ್ಪೇನೆರನ ಮತ್ತು ಫ್ರಂಕೆಯ ನಿಜ ಮಿತ್ರರಾಗಿ, ಕ್ರೈಸ್ತಸಜ್ಜೀವನಾಭಿವೃದ್ಧಿಯ ಅಭಿಲಾಷೆಯುಳ್ಳವರಾಗಿದ್ದದರಿಂದ ತಮ್ಮ ಕುಮಾರನಿಗೆ ಸದ್ಭಕ್ತಿಯಲ್ಲಿ ಶಿಕ್ಷೆ ಗೊಳ್ಳಿಸುತ್ತಾ ಬಂದರು. ತಂದೆಯು ಬೇಗ ಸತ್ತ ಮೇಲೆ ತಾಯಿಯೂ ಅಜ್ಜಿಯೂ ಸಕ್ಸೆನು ರಾಜ್ಯದಲ್ಲಿ ಇವಳ ಸ್ವಾಸ್ಥ್ಯವಾದ ಒಬೆರ್ ಲೌಸಿತ್ಸು ಶೀಮೆಯ ಹೆನ್ನೆರ್ಸ್ಡೊರ್ಫು ಎಂಬ ಊರಿಗೆ ಅವನನ್ನು ತೆಕ್ಕೊಂಡು ಹೋಗಿ, ಅವನ ಶಿಕ್ಷಕರಾದರು. ತ್ಸಿಂತ್ಸೆಂದೊರ್ಫ ಪ್ರಭುವು ಇನ್ನು ಹುಡುಗನಾಗಿರುವಂದೇ ಕ್ರಿಸ್ತನಾಥನಿಗೆ ಬಹಳ ಪ್ರೀತಿ ಮಾಡುತ್ತಿರುವಲ್ಲಿ ಒಮ್ಮೆ ಬಾಲಕರಿಗೆ ತಕ್ಕ ಭೋಳೇತನದೊಡನೆ ಅವನಿಗೆ ಒಂದು ಕಾ

1) ದಿನಚರ್ಯ. 17, 27. 2) 556ನೇ ಪಾನು.

ಗದ ಬರೆದು, ಅದವನಿಗೆ ಶಿಕ್ಕುವಂತೆ ಕಿಟಕಿಯೊಳಗಿಂದ ಹೊರಗೆ ಹಾಕಿದನು. ಆ ಕಾಲ ಉತ್ತರದಿಗ್ಯುದ್ಧವೆಂಬದು ನಡೆಯುತ್ತಿತ್ತು; ಅದರಲ್ಲಿ ಸ್ವೇದೆನಿನ ರಾಜನಾದ 12ನೇ ಕರ್ಲನೆಂಬವನು[1] 2ನೇ ಔಗುಸ್ತನೆಂಬ ಸಕ್ಸೆನು ದೇಶದ ರಾಜಸ್ವೀಕಾರ ಪ್ರಭುವಿನ ಮೇಲೆ ಸಹ ಬಿದ್ದಿದ್ದನು. ಹೀಗಿರಲಿಕ್ಕೆ ಕರ್ಲ ರಾಜನ ದಂಡುಗಾರರು 1706ನೇ ವರುಷದಲ್ಲೊಮ್ಮೆ ಹೆನ್ನೆರ್ಸ್ಡೊರ್ಫಿಗೆ ಸಹ ಬಂದರು. ಆಗ ತ್ಸಿಂತ್ಸೆಂದೊರ್ಫ ಕುಮಾರನು ಎಂದಿನಂತೆ ತನ್ನ ಅಜ್ಜಿಯ ಗೃಹದ್ದೊಂದು ಕೋಣೆಯೊಳಗೆ ತನ್ನಷ್ಟಕ್ಕೆ ಪ್ರಾರ್ಥನೆ ಪ್ರಸಂಗಗಳನ್ನು ಮಾಡುತ್ತಿರುವಲ್ಲಿಗೂ ಆ ಸ್ವೇದರು ಒಳ ಹೊಕ್ಕು, 6 ವರುಷದ ಆ ಚಿಕ್ಕ ಪ್ರಸಂಗಿಕನ ಚೋದ್ಯ ಕಂಡು, ಅವನು ಧೈರ್ಯದಿಂದ ತಮಗೆ ಹೇಳಿದ ನಯ ನುಡಿಗಳನ್ನು ಕೇಳಿ, ಹೃದಯ ತಿವಿದವರಾಗಿ, ತಾವು ಬೆಸಗೊಳ್ಳುವದಕ್ಕೆ ಬಂದ ಯುದ್ಧಹಣ ಬೆಸಗೊಳ್ಳುವದನ್ನು ಮರೆತು, ಹಾಗೆಯೇ ಹೋಗಿ ಬಿಟ್ಟರು. ತನ್ನ 10ನೇ ವಯಸ್ಸಿನಲ್ಲಿ ತ್ಸಿಂತ್ಸೆಂದೊರ್ಫನು ಹಲ್ಲೆಯ ಅನಾಥಗೃಹಕ್ಕೆ ಸಮ್ಮಂಧವಾದ ಆ ಪೇದಗೋಗೀಯವೆಂಬ ಶಾಲೆಯಲ್ಲಿ[2] ಶೇರಿ, ಜನೋಪಯೋಗವುಳ್ಳ ಅನೇಕ ವಿದ್ಯೆಗಳನ್ನಲ್ಲದೆ ಮುಖ್ಯವಾಗಿ ತನಗೆ ಕಾಲತ್ವಕ್ಕೂ ನಿತ್ಯತ್ವಕ್ಕೂ ನಿಜಾನಂದ ಕೊಡ ಬಹುದಾದ್ದನ್ನು ಅಂದರೆ ಕ್ರಿಸ್ತಭಕ್ತಿಯನ್ನು ಕೂಡ ಸಂಪಾದಿಸಿ ಕೊಂಡನು. ತನ್ನವರ ಅಪೇಕ್ಷೆಯ ಪ್ರಕಾರ ಅವನು ರಾಜೋದ್ಯೋಗಿಯಾಗಬೇಕು; ಆದರೆ ಅವನ ಹೃದಯವು ಎಡೆ ಬಿಡದೆ ಅವನನ್ನು ದೇವಜ್ಞಾನದರ್ಶನವಿದ್ಯೆಗೆಳೆಯುತ್ತಿತ್ತು; ಕ್ರಿಸ್ತರಕ್ಷಕನಿಗೆ ಪ್ರಾಣಗಳನ್ನು ಫಳಿಸಿ ಕೊಡುವದೇ ಅವನಿಗೆ ಮಹಾಪ್ರಮೋದಕರ ವೃತ್ತಿ ಎನ್ನಿಸುತ್ತಿತ್ತು. ಇದಕ್ಕನುಗುಣವಾಗಿ ಅವನು ಹಲ್ಲೆಯ ಆ ಶಾಲೆಯಲ್ಲಿಯಾದರೂ ನಡಕೊಳ್ಳುತ್ತಿದ್ದನು; ಹ್ಯಾಗಂದರೆ, ಜತೆಯ ಅಭ್ಯಾಸಿಗಳಲ್ಲಿ ಅನೇಕರು, ಅತಿಭಕ್ತಿ ಎಂತ, ಹಾಸ್ಯ ಮಾಡಿದರೂ ಅವನು ಬೇರೊಬ್ಬರ ಸಂಗಡ ಒಡಗೂಡಿ, ಒಂದು ಸಮಾಜ ನಿರ್ಮಿಸಿ, ಅದು ಸದ್ಯಕ್ಕೆ ಸಣ್ಣದಾದ ಕಾರಣ ಅದಕ್ಕೆ, ಸಾಸಿವೇ ಕಾಳಿನ[3] ಕುಲವೆಂತ, ಹೆಸರಿಕ್ಕಿದನು; ಕ್ರೈಸ್ತರಿಗೆ ತಕ್ಕಂಥ ಸಜ್ಜೀವನದಿಂದೊಪ್ಪ ಬೇಕೆಂಬದೇ ಆ ಸಮಾಜದವರಿಗೆ ಕಟ್ಟಲೆ; ಅವರಿಗಿದ್ದ ಕುಲಚಿನ್ಹೆಗಳಲ್ಲಿ ಕ್ರಿಸ್ತನ ಮುಖವೆಂಬಂತೆ ಬರೆದಿರುವದೊಂದು ಚಿಕ್ಕ ಡಾಲು ಒಂದು, ಇದರಲ್ಲಿ ಅವನ ಘಾಯಗಳು ನಮ್ಮ ಶುದ್ಧೀಕರಣವಾಗಿವೆ ಎಂಬ[4] ಬರಹ ಸಹ ಇತ್ತು; ನಮ್ಮಲ್ಲೊಬ್ಬನಾದರೂ ತನಗಾಗಿ ಬದುಕುವದಿಲ್ಲವೆಂಬ[5] ಮಾತುಗಳು ಕೆತ್ತಿಸಿರುವದೊಂದು ಉಂಗರವು ಮತ್ತೊಂದು.

1) ಕ್ರಿ. ಶ. 1697ನೇ ಅಬ್ದ ರಾಜನಾದ ಇವನು ಗುಸ್ತವ ಆದೊಲ್ಫನ 4ನೇ ಉತ್ತರಾಧಿಕಾರಿಯು.
2) 568, 569ನೇ ಪಾನು. 3) ಮತ್ತಾ. 13, 31; ಮರ್ಕ. 4, 31. 4) 1 ಪೇತ್ರ. 2, 24.
5) ರೋಮಿ. 14, 7. 8.

ತನಗೆ 16ನೇ ವರುಷ ಬಂದ ಮೇಲೆ ತ್ಸಿಂತ್ಸೆಂದೊರ್ಫನು ತನ್ನ ನೆಂಟರ ಅಪೇಕ್ಷೆಯ ಮೇರೆಗೆ ವಿತ್ತೆನ್ಬೆರ್ಗಿನ ಮಹಾ ವಿದ್ಯಾಶಾಲೆಗೆ[1] ಹೋಗಿ, ರಾಜಕ ಮತಕ ನೀತಿಯನ್ನು ಹೆಚ್ಚಾಗಿ ಅಭ್ಯಾಸಿಸುವವನಾದನು; ಅದಲ್ಲದೆ ಅವನು ತನ್ನವರ ಅಪ್ಪಣೆಗನುಸಾರವಾಗಿ ಸಕಲ ಕಲಾಕುಶಲತ್ವದಲ್ಲಿ ಪ್ರವೀಣನಾದ ಮರ್ಯಾದಸ್ಥನಾಗುವಂತೆ ಕತ್ತಿಸಾಧಕ ನಾಟ್ಯ ಕುದುರೆಸವಾರಿ ಮುಂತಾದವುಗಳ ಅಭ್ಯಾಸವನ್ನು ಸಹ ಮಾಡ ಬೇಕಾಯಿತು. ಇಷ್ಟೆಲ್ಲವೂ ಅವನ ಅಭಿಲಾಷೆಗೆ ವಿರೋಧ; ಆದರೂ, ದೇವರ ಚಿತ್ತವೆಂತ, ಗುಣುಗುಟ್ಟದಿದ್ದನು. ವಿತ್ತೆನ್ಬೆರ್ಗಿನಲ್ಲಿ ಆಗ ಬಹು ಮಂದಿ ಪ್ರಮಾಣಾನುಗುಣವಿಶ್ವಾಸಿಗಳಾದ[2] ತಾರ್ಕಿಕ ಮಹಾಪಂಡಿತರು ಇದ್ದರು. ಇವರ ಸಹವಾಸದಿಂದ ಅಂಥ ಕ್ರೈಸ್ತರಲ್ಲಿಯೂ ಇರುವ ಸುಗುಣಗಳು ಕೂಡ ಅವನಿಗೆ ಗೊತ್ತಾದದ್ದು ವಿಹಿತ; ಯಾಕಂದರೆ ಈ ಪ್ರಕಾರ ಸಹನವೆಂಬ ಸುಲಕ್ಷಣವು ಅವನಲ್ಲುದ್ಭವಿಸಿತು. ಬಳಿಕ ಕ್ರಿ. ಶ. 1719ನೇ ವರುಷದಲ್ಲಿ ಅವನು ತನ್ನವರ ನಿರ್ದೇಶದ ಮೇಲೆ ಬುದ್ಧಿಶಿಕ್ಷೆಗೋಸ್ಕರ ಹೊಲ್ಲಂದಿನಲ್ಲಿಯೂ ಫ್ರಂಚಿನಲ್ಲಿಯೂ ಸ್ವಿತ್ಸೆರ್ಲಂದಿನಲ್ಲಿಯೂ ಪ್ರಯಾಣ ಮಾಡುತ್ತಿರುವಾಗ ಪಪ್ಪಕರನ್ನೂ ಚ್ವಿಂಗ್ಲಿಕ ಮತ್ತು ಕಲ್ವಿನಕ ಶಾಖೆಯವರನ್ನೂ ಕಂಡೊಡತನ ಗೈಯುತ್ತಾ ಬರಲು, ಪಪ್ಪಕರೊಳಗೂ ಸಾರ್ವಾರ್ತಿಕ ಭಾವದವರಿದ್ದಾರೆಂತ[3], ತಿಳಿದು, ಅಸಹನವೆಂಬ ಪಾಶದಿಂದ ಪೂರಾ ವಿಮುಕ್ತನಾದನು. ಅವನು ಹೊಲ್ಲಂದಿನಿಂದ ಹಿಂದಿರುಗಿ, ಗೆರ್ಮಾನಿಯದಲ್ಲಿ ರೈನು ನದಿಯ ತೀರದಲ್ಲಿರುವ ದುಯಿಸ್ಸೆಲ್ಡೊರ್ಫು ಪಟ್ಣದ ಒಂದು ಛತ್ರಗೃಹದೊಳಗೆ ಕ್ರೂಜೆಯಲ್ಲಿ ಸತ್ತ ಕ್ರಿಸ್ತನದೆಂಬಂತೆ ಒಂದು ಚಿತ್ರಪಟ ಗೋಡೆಗೆ ತೂಗಿರುವದನ್ನು ಕಂಡನು; ಚಿತ್ರದ ಕೆಳಗೆ—ಇದನ್ನು ನಿನಗಾಗಿ ನಾನು ಮಾಡಿದೆನು, ನನಗಾಗಿ ನೀನೇನು ಮಾಡುತ್ತಿ? ಎಂದು, ಕ್ರಿಸ್ತನು ನುಡಿದಂತೆ ಬರೆದಿತ್ತು. ಇದರಿಂದ ಅವನಿಗೆ ಅತಿರೇಕ ಪರಿಚಿಂತನೆ ಬಂತು. ತಾನು ಅಂಥಾ ಪ್ರಶ್ನೆಗೆ ಬಹಳ ಉತ್ತರ ಕೊಡ ಕೂಡದೆಂದು, ಅರಿತು—ಕ್ರಿಸ್ತ ರಕ್ಷಕನೇ, ನನ್ನ ಮನಸ್ಸು ನಿನ್ನ ಸಹಶ್ರಮತ್ವದೊಳಗೆ ಶೇರಲೊಲ್ಲದಲ್ಲಿ ಅದನ್ನು ಬಲಾತ್ಕರಿಸಿ, ಒಳ ಶೇರಿಸೆಂದು, ಪ್ರಾರ್ಥಿಸಿದನು. ಅವನು ಪ್ರಯಾಣಗಳನ್ನೆಲ್ಲಾ ತೀರಿಸಿ, ತನ್ನ ಸ್ವದೇಶಕ್ಕೆ ಮರಳಿರಲು, ಕ್ರಿ. ಶ. 1721ನೇ ವರುಷ ಅವನನ್ನು ದ್ರೇಸ್ಡೆನಿನಲ್ಲಿ, ಮಹಾ ಮಂತ್ರಿಯೆಂತ, ನೇಮಿಸಿದರು. ಆ ಉದ್ಯೋಗವು ತನ್ನ ಚಿತ್ತಕ್ಕೆ ಮೆಚ್ಚದಿದ್ದರೂ ಅದನ್ನು ತಕ್ಕೊಂಡನು. ಆದಾಗ್ಯೂ ಆ ರಾಜಕ ಉದ್ಯೋಗದಲ್ಲಿ ಅವನು ಬಹಳ ಕಾಲ ಉಳಿಯಲಿಲ್ಲ; ಕ್ರಿಸ್ತ ಕರ್ತನು ಅವನನ್ನು ನಾನಾ ವಿಧದಿಂದ ಮತಕೋದ್ಯೋಗಕ್ಕೆ ಸರಿ ಗೊಳ್ಳಿಸುತ್ತಾ ಬಂದಿದ್ದು, ಒಂದು ಬಹಿರ್ನಿಮಿತ್ತದ ಮೂಲಕ ಅಂಥಾದ್ದಕ್ಕೆ ಹಾಕಿದನು.

---

1) 455ನೇ ಪಾನು. 2) 550ನೇ ಪಾನು. 3) 363, 369ನೇ ಪಾನು ಸರಿ ನೋಡು.

ಅದು ಹ್ಯಾಗಂದರೆ, ನೀವು ಹಿಂದೆ ಪಠಿಸಿರುವಂತೆ[1] ಬೋಯಿಮೆನು ಮತ್ತು ಮೇರೆನು ಶೀಮೆಗಳಲ್ಲಿ ಪುನಃಸ್ಥಾಪನಾಕಾಲಕ್ಕೆ ಅನೇಕ ಮಂದಿ ಸೌವಾರ್ತಿಕ ಕ್ರೈಸ್ತರಿದ್ದರು; ಬಳಿಕ ಅವರಿಗೆ ಪಪ್ಪಕರಿಂದ ಬಹಳ ಹಿಂಸೆಯಾಗಲಿಕ್ಕೆ[2], ಅವರಲ್ಲಿ ಹೇರಳರು ಸೊತ್ತು ಬದುಕು ಹಿಂದುಳಿಸಿ, ಪರದೇಶಕ್ಕೋಡ ಬೇಕಾಗಿ, ಅಲ್ಲಲ್ಲಿಯ ಸೌವಾರ್ತಿಕ ಸಭೆಗಳನ್ನು ಶೇರಿ ಕೊಳ್ಳುವವರಾಗಿದ್ದರು. ಹೀಗಿರಲಾಗಿ ಕ್ರಿ. ಶ. 1722ನೇ ವರುಷದಲ್ಲಿ ಸಹ ತಿರಿಗಿ ಹಲವು ಕುಟುಂಬಗಳು ಗುಳೆಯ ತೆಗೆದು, ಸಕ್ಸೆನಿನಲ್ಲಿ ಆಶ್ರಯ ಹೊಂದುವದಕ್ಕೆ ಬಂದವು. ಆಗ ತ್ಸಿಂತ್ಸೆಂದೊರ್ಫ ಪ್ರಭುವು ಆ ಕುಟುಂಬಗಳವರನ್ನು ಸ್ವೀಕರಸಿ, ತನಗೆ ಸಕ್ಸೆನಿನ ಓಬೆರ್ಲೌಸಿತ್ಸೆಂಬ ನಾಡಿನಲ್ಲಿ ಹೂತ್ಬೆರ್ಗೆಂಬ ಗುಡ್ಡದಡಿಯಲ್ಲಿರುವ ಕಾಡುಳ್ಳದ್ದೊಂದು ಭೂಮಿಯಲ್ಲಿ ನೆಲೆ ಗೊಳ್ಳಿಸಿದನು. ಅದಕ್ಕವರು ಅಲ್ಲಿ ಒಂದು ಊರು ಮಾಡಿ, ಅದಕ್ಕೆ, ಹೆರ್ನ್ಹೂತು ಎಂತ, ಹೆಸರು ಕೊಟ್ಟರು; ಹೆರ್ನ್ಹೂತಂದರೆ ಕರ್ತನ ಆಶ್ರಯವುಳ್ಳ ಸ್ಥಳವು. ಮೇರೆನು ಶೀಮೆಯಿಂದ ನಿತ್ಯದಲ್ಲಿ ಇತರ ಕ್ರೈಸ್ತ ಸಹೋದರರು ಅಲ್ಲಿಗೆ ಬರುತ್ತಿರುವದರಿಂದಲೂ ಆ ಸಭೆಯೊಳಗಿನ ಭಕ್ತಿ ಕಂಡೊಲಿದ ಲುಥರಿಕ ಮತ್ತು ಕಲ್ವಿನಕ ಶಾಖೆಯವರಲ್ಲನೇಕರು ಸಹ ಅದನ್ನು ಕೂಡಿ ಕೊಳ್ಳುತ್ತಿರುವದರಿಂದಲೂ ಆ ನಿವಾಸಿಗಳ ಸಂಖ್ಯೆಯು ಹೆಚ್ಚುತ್ತಲಿತ್ತು. ಇಂತಾಗುವ ಕಾರಣ ಒಂದೊಂದು ಶಾಖೆಯವರು ತಮ್ಮ ಬೋಧನಾರ್ಥ ಸಭಾಪರಿಪಾಲನಕ್ರಮಗಳನ್ನು ಸ್ಥಾಪಿಸಲಪೇಕ್ಷಿಸುತ್ತಿರುವಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಬಿದ್ದ ನಿಮಿತ್ತ ತ್ಸಿಂತ್ಸೆಂದೊರ್ಫ ತಾನು ಹೆರ್ನ್ಹೂತಿಗೆ ಬಂದು, ಒಂದು ಸಭಾಪರಿಪಾಲನಕ್ರಮವನ್ನೂ ದೇವಾಲಯಕ್ರಮವನ್ನೂ ರಚಿಸಿ, ಮೇರ ಸಹೋದರಸಭೆಯಲ್ಲಿ[3] ರೂಢಿಯಾಗಿದ್ದ ಸಭೋದ್ಯೋಗಗಳನ್ನು ಮುಖ್ಯಾಂಶವಾಗಿ ಉಳಿಸಿ ಕೊಟ್ಟಂದು ಎಲ್ಲರೂ ತಮ್ಮಲ್ಲಿದ್ದ ವ್ಯತ್ಯಾಸದ ವಾದಕ್ಕೆ ನಾಚಿ, ಆ ಹೊಸ ಕಟ್ಟಲೆಗೊಡಂಬಟ್ಟರು; ಅದರಲ್ಲಿ ತಾರ್ಕಿಕ ವಿಷಯಗಳು ಏನೂ ಇರಲಿಲ್ಲ. ಅದು ಹೊರ್ತಾಗಿ ಅಭ್ಯಂತರವಿಲ್ಲದೆ ಅವರೆಲ್ಲರ ವಿಶ್ವಾಸಪ್ರಮಾಣವಾದದು ಆ ಔಗುಸ್ತಾನವೆಂಬದೇ[4]. ಅವರೆಲ್ಲರ ಅನ್ಯೋನ್ಯದ ಏಕ ಬಂಧವಾದದು ಕ್ರಿಸ್ತನ ಮೇಲಿನ ಹೃದ್ಯ ವಿಶ್ವಾಸ ಪ್ರೀತಿಗಳಿವೆರಡೇ[5]. ತರುವಾಯ ಕ್ರಿ. ಶ. 1727ನೇ ವರುಷದ ಆಗೊಸ್ತು ತಿಂಗಳಿನ 13ನೇ ದಿನದಲ್ಲಿ ಅವರೆಲ್ಲರೂ ಕೂಡಿ, ಪರಿಶುದ್ಧ ರಾತ್ರಿಭೋಜನವನ್ನಾಚರಿಸಿ, ಹೀಗೆ ಆ ಹೊಸ ಕಟ್ಟಲೆಗೆ ಮುದ್ರೆ ಹಾಕಿದಂತಾಯಿತು. ಸೌವಾರ್ತಿಕ ಸಹೋದರಸಭೆಯೆಂಬದೇ ಅವರು ತಮಗೆ ಇಟ್ಟು ಕೊಂಡ ಹೆಸರು; ಬೇರೊಬ್ಬರು ಅವರಿಗೆ ಹೆರ್ನ್ಹೂತರೆಂತಾಗಲಿ ಮೇರರೆಂಬ ಮೋರೇವಿಯನರೆಂತಾಗಲಿ ಸಹ ಹೇಳುತ್ತಾರೆ.

---

1) 408ನೇ ಪಾನು. 2) 408, 519, 520ನೇ ಪಾನು. 3) 408ನೇ ಪಾನು. 4) 445ನೇ ಪಾನು. 5) 1, 2ನೇ ಪಾನು.

ತ್ಸಿಂತ್ಸೆಂದೋರ್ಫನು ಹೆರ್ನ್ಹೂತಿನ ಸಭೆಯಲ್ಲಿ ಸ್ವಲ್ಪ ಕಾಲ ಇದ್ದನಂತರ ಎಂದಿಗೂ ಅದರಲ್ಲೇ ಇರ ಬೇಕೆಂಬ ಅಪೇಕ್ಷೆಯುಳ್ಳವನಾಗಿ, ದ್ರೇಸ್ದೆನಿನಲ್ಲಿ ತನಗಿದ್ದ ಉದ್ಯೋಗ ವಿಸರ್ಜಿಸಿ ಬಿಟ್ಟು, ಬಂದು, ಹೆರ್ನ್ಹೂತಿನಲ್ಲಿ ಸ್ಥಳವಂತಿಗನಾದ ಮೇಲೆ ಹಿರಿಯರು ಬೋಧಕರು ಪರಿದ್ರಷ್ಟರು ಬುದ್ಧಿವಾಚಕರು ದರಿದ್ರಪೋಷಕರು ರೋಗಿಪೋಷಕರು ಮುಂತಾದ ಸಭೋದ್ಯೋಗಿಗಳನ್ನು, ಶೋಧಿಸುವ ರೀತಿಯಿಂದಲೂ ಚೀಟು ಹಾಕುವ ರೀತಿಯಿಂದಲೂ, ನೇಮಿಸಿಡಲಾಯಿತು. ತ್ಸಿಂತ್ಸೆಂದೋರ್ಫನು ಆ ಸಭೆಗೆ ಪರರು ಮಾಡಿದ ಭಕ್ತಿಗೀತಕೃತಿಗಳದೊಂದು ಸಂಗ್ರಹಗ್ರಂಥವನ್ನು ಕೂಡಿಸಿ ಕೊಟ್ಟದ್ದಲ್ಲದೆ ತಾನು 2000ಕ್ಕಿಂತ ಹೆಚ್ಚು ರಮ್ಯ ಗೀತಕೃತಿಗಳನ್ನು ರಚಿಸಿ ಕೊಟ್ಟನು. ದಿನ ಹೋಗುತ್ತಿರಲು, ಆ ಸಭೆಯವರು ಸರ್ವ ದಿಶೆಯ ಕ್ರೈಸ್ತರಲ್ಲಿ ಕ್ರಿಸ್ತ ರಕ್ಷಕನ ಮೇಲೆ ಅಧಿಕ ಪ್ರೀತಿ ಹುಟ್ಟಿಸುವದಕ್ಕೋಸ್ಕರ ಹೂಂಗರಿಯ ದೇನೆಮರ್ಕ್ ಸ್ವೇದೆನು ಇಂಗ್ಲಂದು ಸ್ವೀತ್ಸೆರ್ಲಂದು ಮೊದಲಾದ ದೇಶಗಳಿಗೆ ಭಕ್ತಿಯುಳ್ಳ ಪ್ರೇಷಿತರನ್ನು ಕಳುಹಿಸ ತೊಡಗಿದರು. ತ್ಸಿಂತ್ಸೆಂದೋರ್ಫನು ಇನ್ನು ಹುಡುಗನಾಗಿರಲು, ಆ ಪ್ರಖ್ಯಾತ ಸುವಾರ್ತಾಪ್ರಸಾರಕನಾದ ತ್ಸೀಗೆನ್ಬಲ್ಗನೆಂಬವನ[1] ಸುದ್ದಿಯ ಮೂಲಕ, ತಾನು ಸಹ ವಿಗ್ರಹಾರಾಧಕರಲ್ಲಿ ಸುವಾರ್ತಾಪ್ರಸಾರಣ ನಡಿಸ ಬೇಕೆಂತ, ಹೇಳುವಂಥ ಮಹಾ ಕುತೂಹಲವು ಅವನಲ್ಲಿ ಹುಟ್ಟಿತ್ತು. ಹೀಗಿರುವದರಿಂದ ಅವನು ಕ್ರಿ. ಶ. 1731ನೇ ವರುಷ ಒಮ್ಮೆ ದೇನೆಮರ್ಕಿನ ಕೋಪೆನ್ಹಾಗೆನೆಂಬ ರಾಜಧಾನಿಗೆ ಹೋದನು; ಅಲ್ಲಿ ಆ ಸಮಯ 4ನೇ ಫ್ರೀದೆರೀಕನೆಂಬ ಭಕ್ತಿಯುಳ್ಳ ಅರಸನಾಳುತ್ತಿದ್ದನು; ಇವನ ಸಹಾಯದಿಂದ ಕ್ರಿ. ಶ. 1706ನೇ ವರುಷದಲ್ಲಿ ಆ ತ್ಸೀಗೆನ್ಬಲ್ಗನು ಹಿಂದು ದೇಶಕ್ಕೆ, ಮತ್ತು 1721ನೇದರಲ್ಲಿ ಹನ್ಸ್ ಎಗೆದೆ ಎಂಬ ಒಬ್ಬ ಸುವಾರ್ತಾಪ್ರಸಾರಕನು ಅಮೆರಿಕದ ಗ್ರೋಯಿನ್ಲಂದು[2] ಶೀಮೆಗೆ ಹೋಗಲಾಗಿತ್ತು. ತ್ಸಿಂತ್ಸೆಂದೋರ್ಫನು ಒಬ್ಬ ಪ್ರಭುವಿನ ಸೇವೆಯಲ್ಲಿರುವ ಅಂತೋನನೆಂಬ ಕ್ರೈಸ್ತನನ್ನು ಕಂಡನು; ಇವನು ನೀಗ್ರೋ ಜಾತಿಯವನೊಬ್ಬನು; ದೇನರು ವಿಗ್ರಹಾರಾಧಕನಾಗಿದ್ದ ಕ್ರೈಸ್ತನಾದ ಅವನನ್ನು ಅಮೆರಿಕ ಭೂಖಂಡಕ್ಕೆ ಶೇರಿದ ಸಂತಥೋಮವೆಂಬ ತಮ್ಮದೊಂದು ಚಿಕ್ಕ ದ್ವೀಪದಿಂದ ತಂದಿದ್ದರು; ಈ ದ್ವೀಪವು ವೆಸ್ತ್ ಇಂದಿಯ ಅಂದರೆ ಪಶ್ಚಿಮ ಹಿಂದು ದೇಶವೆಂಬ ಅಡ್ಡಹೆಸರಿನ ದ್ವೀಪರಾಶಿಗಳದೊಂದು. ಆ ನೀಗ್ರೋರೆಂಬ ಜನರು ಅಮೆರಿಕದ ಮೂಲನಿವಾಸಿಗಳಲ್ಲ, ಆಫ್ರಿಕ ಖಂಡದವರೇ; ಆದರೆ, ಹಿಂದೆ ಹೇಳಿರುವಂತೆ[3], ಅಮೆರಿಕದಲ್ಲಿ ಸ್ವಾಸ್ಥ್ಯಗಳನ್ನು ಪಡಕೊಂಡ ಸ್ಪಾನಿಯದವರು ಅಲ್ಲಿಯ ಭಂಗಾರದ ಖಣಿಗಳಲ್ಲಿಯೂ ತೋಟಗಳಲ್ಲಿಯೂ ದುಡಿಸುವದಕ್ಕಾಗಿ ಅಂದಿಗೆ ಸುಮಾರು 200 ವರುಷ ಹಿಂದೆ ಆಫ್ರಿಕದವರ

1) 569ನೇ ಪಾನು. 2) 323ನೇ ಪಾನು. 3) 542ನೇ ಪಾನು

ಸಂಗಡ ನೀಗ್ರೋರ ವ್ಯಾಪಾರವೆಂಬ ನೀಚ ಕೆಲಸವೆಸಗಿ, ಧಾರಾಳ ಮಂದಿ ನೀಗ್ರೋರನ್ನು ಅಲ್ಲಿ ಕೊಂಡು ಕೊಂಡು, ತಂದು, ದಾಸತ್ವದಲ್ಲಿಟ್ಟು ಕೊಳ್ಳುವವರಾಗಿದ್ದರು; ಇಂಥಾ ನೀಗ್ರೋರು ಅತ್ತ ಕಡೆಯ ದೇಸರ ಸ್ವಾಸ್ಥ್ಯಸ್ಥಳಗಳಲ್ಲಿ ಸಹ ಶೇರಿದ್ದರು. ತ್ಸಿಂತ್ಸೆಂದೊರ್ಫನು ಆ ಅಂತೋನನ ಸಂಗಡ ಮಾತಾಡುವಾಗ ಇವನು—ತಾನು ಕ್ರಿಸ್ತನಾಥನನ್ನರಿಯುವದಕ್ಕಿಂತ ಮುಂಚೆ ನನಗೇನೂ ಹೃಚ್ಛಾಂತಿ ಇರಲಿಲ್ಲ; ಈಗ ತನಗೆ ಸಂತ ಥೋಮದಲ್ಲಿ ಅನ್ನಳೆಂಬ ತಂಗಿ ಇದ್ದಾಳೆ, ಇವಳಿಗೆ ಕ್ರೈಸ್ತರ ದೇವರ ಮೇಲೆ ಬಹಳ ಅಭಿಲಾಷೆ; ಅದಲ್ಲದೆ ಅಲ್ಲಿಯ ನೀಗ್ರೋರ ಪ್ರಾಣಗಳು ಮಿತಿ ಮಿಾರುವ ಸಂಕಷ್ಟಾವಸ್ಥೆಯಲ್ಲಿವೆ ಎಂತ, ಎಂಬದನ್ನೆಲ್ಲಾ ಅವನಿಗೆ ವಿವರಿಸಿದನು. ಅದರಿಂದ ಆ ಪ್ರಭುವಿಗೆ ಮಿಗೆ ಮನೋವ್ಯಥೆಯಾಯಿತು. ಅವನು ಆ ಕ್ರೈಸ್ತ ನೀಗ್ರೋನನ್ನು ಹೆರ್ನ್ಹೂತಿಗೆ ಕರಕೊಂಡು ಬಂದು, ಸಭ್ಯರ ಮುಂದೆ ನಿಲ್ಲಿಸಿ, ತೋರಿಸಲು, ಇಬ್ಬರು ಕ್ರೈಸ್ತ ಸಹೋದರರು—ನಾವು ಸಂತ ಥೋಮಕ್ಕೆ ಹೋಗೋಣ! ಅಲ್ಲಿ ಸುವಾರ್ತೆ ಪ್ರಸಂಗಿಸುವದಕ್ಕೆ ಬೇರೆ ಮಾರ್ಗ ಕಾಣದಿದ್ದರೆ ನಾವು ಸಹ ದಾಸರಾಗಲಿಕ್ಕೆ ಅಂಜೆವೆಂತ, ನುಡಿದು, ನಿಶ್ಚಯಿಸಿ ಕೊಂಡರು. ಅವರಿಬ್ಬರ್ಯಾರಂದರೆ, ಒಬ್ಬ ಕುಂಬಾರನಾದ ಲೆಯೋನ್ಹರ್ದ ದೋಬೆರನು ಮತ್ತು ಬಡಿಗೆಯವನಾದ ದಾವೀದ ನಿತ್ಷ್ಮನನು. ಒಬ್ಬೊಬ್ಬನಿಗೆ ಆ ದೊಡ್ಡ ಪ್ರಯಾಣಕ್ಕಾಗಿ ಐದೈದು ರೂಪಾಯಿ ಮಾತ್ರ ಇದ್ದವು; ಆದರೂ ಅವರು ಕ್ರಿ. ಶ. 1732ನೇ ವರುಷ ಕ್ರಿಸ್ತನ ಹೆಸರಿನಲ್ಲಿ ಧೈರ್ಯರಾಗಿ ಹೊರಟು, ಕೋಪೆನ್ಹಾಗೆನಿಗೆ ಹೋಗಿರುವಲ್ಲಿ ಅವರಿಗೆ ನೌಪ್ರಯಾಣಕ್ಕೆ ಅಗತ್ಯವಾದ ಹಣವು ಧರ್ಮವಾಗಿ ಶಿಕ್ಕಿದ್ದಲ್ಲದೆ ಕೆಲವರು ರಾಜಮಂತ್ರಿಗಳು ಅವರ ವಿಶ್ವಾಸಾನಂದಕ್ಕೆ ಆಶ್ಚರ್ಯ ಪಟ್ಟು—ಹಾಗಾದರೆ ದೇವರ ಹೆಸರಿನಲ್ಲಿ ಹೋಗಿರಿ! ನಮ್ಮ ರಕ್ಷಕನು ತನ್ನ ಸುವಾರ್ತೆ ಸಾರುವದಕ್ಕೋಸ್ಕರ ಮಿಾನುಗಾರರನ್ನು ಆರಿಸಿದನಲ್ಲ[1]? ತಾನು ಬಡಿಗೆಯವನ ಮಗನೆನ್ನಿಸಿ ಕೊಳ್ಳುತ್ತಿದ್ದನಲ್ಲ[2]? ಎಂದು, ಹೇಳಿ, ಸೌಜನ್ಯದ ಮಾತುಗಳಿಂದ ಅವರನ್ನಾದರಿಸಿ, ಸಾಗ ಕಳುಹಿಸಿದರು. ಹತ್ತು ವಾರಗಳ ಕಷ್ಟವುಳ್ಳ ಸಮುದ್ರಪ್ರಯಾಣದಿತ್ತ ಅವರು ಸಂತ ಥೋಮದಲ್ಲಿ ಶೇರಿ, ಅಂತೋನನು ತಮಗೆ ಕೊಟ್ಟಿದ್ದ ಪತ್ರಿಕೆಯನ್ನು ಅವನ ತಂಗಿಗೊಪ್ಪಿಸಿದ ಮೇಲೆ ಇವಳು ಹೋಗಿ, ಬೇರೆ ನೀಗ್ರೋರನ್ನು ಕರಕೊಂಡು, ಆ ಇಬ್ಬರು ಬೋಧಕರ ಶುಭಸಮಾಚಾರ ಕೇಳಲಿಕ್ಕೆ ಬಂದಳು. ಆ ನೀಗ್ರೋರು ಸಕಲ ಜನರಿಗೂ ಮೋಕ್ಷಪದವಿ ಪಾಲಿಸುವಂಥ ಕ್ರಿಸ್ತನ ವಿಷಯವನ್ನು ಕೇಳುತ್ತಲೇ ಸಂತೋಷದಿಂದ ಕೈಚಪ್ಪಳ ಹಾಕುವವರಾದರು. ಮೊದಲು ಕ್ರೈಸ್ತ ಸ್ನಾನ ಹೊಂದುವವರು ಆ ಅನ್ನಳೂ ಅವಳ ಗಂಡನೂ ಅವಳ ತಮ್ಮನೂ, ಈ ಮೂವರೇ; 6 ವ

1) 45ನೇ ಪಾನು. 2) ಮತ್ತಾ. 13, 55.

ರುಷಕ್ಕೀಚೆ 900 ಜನ ನೀಗ್ರೋರಾದರೂ ಕ್ರೈಸ್ತರಾಗದಿರಲಿಲ್ಲ. ದಾವೀದ ನಿತ್ಷ್ಮನನು ಬೇಗ ಯುರೋಪಕ್ಕೆ ತಿರುಗ ಬೇಕಾಯಿತು; ಅದರ ಮೇಲೆ ದೋಬೆರನು ಇನ್ನೂ 2 ವರುಷ ಅಲ್ಲಿ ಉಳಿದನು; ಆ ತರುವಾಯ ಬೇರೆ ಮಂದಿ ಸಹೋದರಸಭ್ಯರು ಅವರ ಸ್ಥಳಕ್ಕೆ ಬಂದರು. ಆ ದ್ವೀಪದ ಘಾಳಿಯು ಬಹು ಕೆಟ್ಟದ್ದು; ಆದ್ದರಿಂದ ಕ್ರಿ. ಶ. 1750ನೇ ವರುಷದಲ್ಲಾದರೂ ಸ್ತ್ರೀ ಪುರುಷರಾದ 50 ಜನ ಸಹೋದರಸಭೆಯವರು ಮರಣವನ್ನೈದಿದ್ದರು. ಆದಾಗ್ಯೂ ಆ ಸುವಾರ್ತಾಪ್ರಸಾರಕರು ಎದೆಗುಂದಲಿಲ್ಲ. ಆ ದ್ವೀಪದಲ್ಲಿಯೂ ಆ ಕಡೆಯ ಇತರ ಕೆಲವು ದ್ವೀಪಗಳಲ್ಲಿಯೂ ನಮ್ಮ ಈ ಕಾಲಕ್ಕೆ 100 ಮಂದಿ ಸಹೋದರಸಭ್ಯರಾದ ಸುವಾರ್ತಾಪ್ರಸಾರಕರು 40 ಕ್ಷೇತ್ರಗಳಲ್ಲಿ ಮಿಗಿಲಾಶೀರ್ವಾದದೊಡನೆ ಬೋಧಕವೃತ್ತಿ ನಡಿಸುತ್ತಿದ್ದಾರೆ.

ನಿತ್ಷ್ಮನನೂ ದೋಬೆರನೂ ಅಮೇರಿಕಕ್ಕೆ ಹೋದಾಗಲೇ ಸ್ತ್ರಖವೆಂಬ ಕುಟುಂಬ ಹೆಸರಿನ ಇಬ್ಬರು ಸಹೋದರರೂ ಕ್ರಿಸ್ತಿಯಾನ ದಾವೀದನೆಂಬವನೂ, ಎಗೆದೆ ಎಂಬ ಸ್ವೇದೆನಿನವನಾದ ಆ ಸುವಾರ್ತಾಪ್ರಸಾರಕನಿಗೆ[1] ಒತ್ತಾಸೆ ಮಾಡುವ ಉದ್ದಿಶ್ಯವಾಗಿ, ಹೆರ್ನ್ಹೂತಿನಿಂದ ಅಮೇರಿಕದ ಗ್ರೋಯಿನ್ಲಂದಿನ ವಿಗ್ರಹಾರಾಧಕರಾದ ಎಸ್ಕಿಮೊರೆಂಬವರ ಬಳಿಗೆ ಗಮಿಸಿದರು. ಗ್ರೋಯಿನ್ಲಂದಿನಲ್ಲಿ 700 ವರುಷದ ಮುಂಚೆ[2] ಶೇರಿದ್ದ ಕ್ರೈಸ್ತತ್ವವು ತಿರಿಗಿ ಪೂರಾ ಕಾಣದೆ ಹೋಗಿತ್ತು. ಅವರು ಮೂವರಲ್ಲದೆ ಇತ್ಲಾಗೆ ಬಂದ ಮತ್ತೊಬ್ಬರು ಹೆರ್ನ್ಹೂತಿನವರು ಸಹ ತಾವು ತಮಗೆ ಆರಿಸಿಕೊಂಡ ನಾಡಿನಲ್ಲಿ 5 ವರುಷವೇ ಸುವೃತ್ತಿ ಗೈದು, ಏನೂ ಫಲ ನೋಡದಿದ್ದನಂತರ ಒಂದಾನೊಂದು ದಿನ ಬೆಕ್ಕನೆಂಬವನು ಎಸ್ಕಿಮೊರು ನೆರದೆಡೆ ಕ್ರಿಸ್ತನು ಇಪ್ಪೇಗುಡ್ಡದ ಮೇಲೆ ಪಟ್ಟ ಪ್ರಾಣಶ್ರಮದ ಸಮಾಚಾರವನ್ನು ಓದುತ್ತಿರಲಿಕ್ಕೆ, ಮುಂಚೆ ಎಂದಾದರೂ ಅಂಥಾ ಕೂಟಕ್ಕೆ ಬಾರದಿದ್ದ ಕಾಯರ್ನಕನೆಂಬವನೊಬ್ಬ ವಿಗ್ರಹಾರಾಧಕನು ಬಸವಳಿದು, ಎದ್ದು—ಅದು ಹ್ಯಾಗೆ? ಅದನ್ನಿನ್ನೊಮ್ಮೆ ನನಗೆ ಹೇಳು! ನನಗೆ ಸಹ ರಕ್ಷಣ ಹೊಂದುವದಕ್ಕೆ ಆಶೆ ಅದೆ! ಎಂದು, ಮಹಾ ಶಬ್ದದಿಂದ ಕೂಗಿದನು. ಅಂಥಾ ಮಾತುಗಳು ಒಬ್ಬ ಎಸ್ಕಿಮೊನ ಬಾಯಿಯೊಳಗಿಂದ ಹೊರಟದ್ದು ಆ ಸುವಾರ್ತಾಪ್ರಸಾರಕನ ಕಿವಿಗೆ ಕೇಳಿಸಿದ್ದಿಲ್ಲ. ಬಳಿಕ ಅವನು ಮತ್ತಷ್ಟು ಕುತೂಹಲದಿಂದ ಕ್ರಿಸ್ತನ ಶ್ರಮಚರಿತ್ರವನ್ನು ಸಾರುತ್ತಾ ಬರಲು, ಮೊದಲು ಕಾಯರ್ನಕನೂ ಅವನ ಹೆಂಡತಿಯೂ ಅವನ ಇಬ್ಬರು ಮಕ್ಕಳೂ ಕ್ರಿಸ್ತನ ಭಕ್ತರಾದರು; ಅಂದಿನಿಂದ ಗ್ರೋಯಿನ್ಲಂದಿನವರಲ್ಲಿ ಸಹೋದರಸಭ್ಯರ ಮೂಲಕ ಅನೇಕರು ಕ್ರೈಸ್ತರಾಗುತ್ತಾ ಬಂದರು.

1) 574ನೇ ಪಾನು. 2) 323ನೇ ಪಾನು.

ಅಷ್ಟರಲ್ಲಿ ತ್ಸಿಂಸ್ಸೆಂದೊರ್ಫನು ತಾನು ಸಹ ನಿಜವಾದ ಕ್ರೈಸ್ತ ಜೀವಿಕೆಯನ್ನು ಅಲ್ಲಲ್ಲಿ ಬೆಳಿಸುವದಕ್ಕೆ ಪ್ರಯಾಣ ಮಾಡುತ್ತಿದ್ದು, ಕ್ರಿ. ಶ. 1734ನೇ ವರುಷ, ತಾನು ಮನೆಗಳಲ್ಲಿ ಮಾತ್ರವಲ್ಲ ದೇವಾಲಯಗಳ ಪೀಠಗಳಲ್ಲಿ ಸಹ ಪ್ರಸಂಗಿಸುವದಕ್ಕೆ ಅಧಿಕಾರಿಯಾಗುವದು ಉಚಿತವೆಂತ, ಆಲೋಚಿಸಿ, ಒಂದು ಸಭೋದ್ಯೋಗ ಪಡಕೊಳ್ಳುವೆನೆಂದು, ನಿಶ್ಚಯಿಸಿ ಕೊಂಡು, ಮೊದಲು ಪೊಮ್ಮೆರ್ನಿನ ಸ್ತ್ರಾಲ್ಸುಂದೆಂಬ ಪಟ್ಣಕ್ಕೆ ಹೋಗಿ, ಇಬ್ಬರು ಲುಥರಿಕ ಶಾಖೆಯವರಾದ ಯಶಸ್ಸುಳ್ಳ ಬೋಧಕರ ಬಳಿಯಲ್ಲಿ ಪರೀಕ್ಷೆ ಕೊಟ್ಟು, ವಿಶ್ವಾಸಪ್ರಮಾಣಾನುಗುಣಿಯಾದವನೂ ಪ್ರಸಂಗೋದ್ಯೋಗಕ್ಕೆ ಅರ್ಹನೂ ಎಂಬ ಯೋಗ್ಯತಾಪತ್ರ ಹೊಂದಿದನಂತರ ವುಯಿರ್ತೆಮ್ಬೆರ್ಗಿನ ತುಯಿಬಿಂಗೆನೆಂಬ ಮಹಾ ವಿದ್ಯಾಶಾಲೆಯವರ ಹತ್ತರ ಗಮಿಸಿ, ತನಗೆ ಉದ್ಯೋಗಪ್ರತಿಷ್ಠೆ ಕೊಡ ಬೇಕೆಂತ, ಬಿನ್ನವಿಸಿ, ಅವರ ಅಪ್ಪಣೆಯ ಪ್ರಕಾರ ಎರಡು ಸಾರಿ ಅಲ್ಲಿ ಪ್ರಸಂಗ ಮಾಡಿದ ತರುವಾಯ ಆ ಪ್ರತಿಷ್ಠೆಯು ಅವನಿಗೀಯಲಾಯಿತು. ತನ್ಮಧ್ಯ ಎಡೆ ಬಿಡದೆ ಸಹೋದರಸಭ್ಯರಲ್ಲಿಂದ ಸುವಾರ್ತಾಪ್ರಸಾರಕರು ಅಮೆರಿಕಕ್ಕಲ್ಲದೆ ಆಫ್ರಿಕಕ್ಕೂ ಹೋಗುತ್ತಿರಲು, ಅಂಥವರು ಗೆರ್ಮಾನ ಸಭಾಪರಿಪಾಲನಕ್ರಮಕ್ಕೆ ಅನುಸಾರವಾಗಿ ಆಯಾ ಸುವಾರ್ತಾಪ್ರಸಾರಣಕ್ಷೇತ್ರಗಳಲ್ಲಿ ಕ್ರಿಸ್ತನ ಎರಡು ಪರಿಶುದ್ಧ ಸಂಸ್ಕಾರಗಳನ್ನು ಪಾಲಿಸುವದಕ್ಕೆ ಅಧಿಕಾರಿಗಳಾಗುವಂತೆ ತ್ಸಿಂಸ್ಸೆಂದೊರ್ಫನು ಅವರಿಗೆ ಅಲ್ಲಲ್ಲಿ ಉದ್ಯೋಗಪ್ರತಿಷ್ಠೆ ದೊರಕಿಸ ತಕ್ಕವನನ್ನು ಹುಡುಕಲಿಕ್ಕೆ ಹತ್ತಲು, ಪ್ರುಸ್ಸಿಯದ ಬೆರ್ಲೀನು ರಾಜಧಾನಿಯಲ್ಲಿ[1] ಅರಮನೆಯ ಪ್ರಸಂಗಿಕನೂ ಅಲ್ಲಿಯ ಮತ್ತು ಪೋಲಂದಿನ[2] ಬೋಯಿಮ ಸಹೋದರರ ಸಭೆಗಳ ಅಧ್ಯಕ್ಷನೂ ಆಗಿರುವ ಯಬ್ಲೊನ್ಸ್ಕಿ ಎಂಬವನು—ನಾನು ಹೆರ್ನ್ಹೂತಿನ ಸಹೋದರರಲ್ಲೊಬ್ಬನಿಗೆ ಅಧ್ಯಕ್ಷಪ್ರತಿಷ್ಠೆ ಕೊಡುವೆನು, ತದನಂತರ ಅವನು ಸುವಾರ್ತಾಪ್ರಸಾರಕರಿಗೆ ಅದನ್ನು ಕೊಡಲಿ! ಎಂದು, ಹೇಳಿ, ಅಮೆರಿಕದ ವೆಸ್ತ್ ಇಂದಿಯದಿಂದ ಹಿಂದಕ್ಕೆ ಬಂದಿದ್ದ ಆ ದಾವೀದ ನಿತ್ಸ್ಮನನಿಗೆ ಕ್ರಿ. ಶ. 1735ನೇ ವರುಷದ ಆರಂಭಕ್ಕೆ ಅಧ್ಯಕ್ಷೋದ್ಯೋಗದಲ್ಲಿ ನೆಲೆಗೊಳ್ಳಿಸಿದನು. ಆ ಮೇಲೆ ಅವನನ್ನು ತಿರಿಗಿ ಅಮೆರಿಕಕ್ಕೆ ಕಳುಹಿಸಲಾಯಿತು. ಸ್ವಲ್ಪ ಸಮಯಕ್ಕೀಚೆ ತ್ಸಿಂಸ್ಸೆಂದೊರ್ಫನಿಗೆ ಸಹ ಅಧ್ಯಕ್ಷಪ್ರತಿಷ್ಠೆಯಾಯಿತು.

ಕ್ರಿ. ಶ. 1741ನೇ ವರುಷ ತ್ಸಿಂಸ್ಸೆಂದೊರ್ಫನು ಮಗುಳೊಮ್ಮೆ ಇಂಗ್ಲಂದಿನ ಲೊಂದನು ಪಟ್ಣದಲ್ಲಿರಲು, ಹೆರ್ನ್ಹೂತಿನಿಂದ ಒಂದು ಕಾರ್ಯವು ಅವನ ಮುಂದೆ ಬಂತು; ಏನೆಂದರೆ, ಆರಂಭದಲ್ಲಿ ಸಹೋದರಸಭೆಯವರ ಮೇಲ್ವಿಚಾರಕರಾಗಿರಲಿಕ್ಕೆ ನಾಲ್ವರು ಹಿರಿಯರು ಇದ್ದರು, ಆದರೆ ಕಾಲಗತಿಯಿಂದ ಒಬ್ಬನೇ ಹಿರಿಯನನ್ನು ಅ

1) 556, 557ನೇ ಪಾನು. 2) 456ನೇ ಪಾನು.

ದಕ್ಕೆ ನೇಮಿಸುವ ಪದ್ಧತಿ ಹುಟ್ಟಿತ್ತು; ಆಗಿನವನು ಆ ಲೆಯೋನ್ಹರ್ದ ದೋಬೆರನೆಂಬವನು[1]; ತನಗೆ ಆ ಉದ್ಯೋಗ ಮಹಾ ಭಾರವಾದ ಕಾರಣ ಇವನು, ಅದನ್ನು ತನ್ನಿಂದ ತೆಗೆಯ ಬೇಕೆಂತ, ತ್ಸಿಂತ್ಸೆಂದೊರ್ಫನಿಗೆ ಬರೆದು, ಬೇಡಿದನು. ಇವನು ಆ ಹೊತ್ತು ಲೊಂದನಿನಲ್ಲಿ ಸಹೋದರಸಭ್ಯರದೊಂದು ಸಂಘ ನೆರೆಸಿರುವಲ್ಲಿ ಆ ಕಾರ್ಯದ ಸಂಭಾಷಣೆಯಾಯಿತು. ಆಗ ಆ ಸಹೋದರರು—ಇದೇನು? ಸಹೋದರಸಭ್ಯರ ಜೋಕೆಯನ್ನು ಮಾಡುವದಕ್ಕೆ ನಮ್ಮ ರಕ್ಷಕನೊಬ್ಬನೇ ಶಕ್ತನಲ್ಲವೋ? ಮೇಲ್ವಿಚಾರಕನಾಗುವದಕ್ಕೆ ನಾವು ಅವನನ್ನೇ ಬೇಡಿ ಕೊಳ್ಳುವದು ಚಲೋದಲ್ಲವೋ? ಎಂತ, ಪರ್ಯಾಲೋಚಿಸಿ, ವರುಷದ ದಿನಂಪ್ರತಿಗೆ ಒಂದೊಂದು ಚೀಟುನುಡಿ[2] ಎಂಬ ದೇವವಾಗ್ವಚನವಿರುವದೊಂದು ಪುಸ್ತಕ ತೆಗದು, ಆ ದಿನದ ಚೀಟುನುಡಿ ಹಿಡಿದೋದಲು, ಅದು ವಿಧಿಸಿದ್ದೇನಂದರೆ—ಇಸ್ರಯೇಲಿನ ಪರಿಶುದ್ಧನೂ ಅದನ್ನು ರೂಪಿಸಿದವನೂ ಆಗಿರುವ ಯೆಹೋವನು ಹೇಳುವದೇನಂದರೆ, ಮುಂದಿನವುಗಳ ವಿಷಯ ನನ್ನನ್ನು ಕೇಳಿರಿ! ನನ್ನ ಮಕ್ಕಳ ವಿಷಯವೂ ನನ್ನ ಕೈಯ ಕೆಲಸದ ವಿಷಯವೂ ನನಗೆ ಅಪ್ಪಣೆ ಕೊಡಿರಿ! ಎಂಬದೇ[3]. ಅವರು ಆ ವಚನ ಕೇಳಿ, ಮಿಗಿಲಾಶ್ಚರ್ಯ ಪಟ್ಟು, ನಿಶ್ಚಯಕ್ಕಾಗಿ ಚೀಟನ್ನು ಸಹ ಹಾಕುವಲ್ಲಿ ಅದೇ ಪ್ರಕಾರ ವಿಧಿಯು ತಿರಿಗಿ ಬಂದದರಿಂದ ಅವರು ಪ್ರಾರ್ಥನೆಗಳೊಡನೆಯೂ ಬಾಷ್ಪಗಳೊಡನೆಯೂ ತಮ್ಮ ಕ್ರಿಸ್ತ ರಕ್ಷಕನಿಗೆ ಮೇಲ್ವಿಚಾರಣವುಳ್ಳ ಆ ಹಿರಿಯತನದುದ್ಯೋಗವನ್ನೊಪ್ಪಿಸಿ, ಬಹಿರಕ್ಕೆ ತಮ್ಮ ಸಭಾಕಾರ್ಯಗಳನ್ನು ಸರಿ ಗೊಳ್ಳಿಸುವದಕ್ಕೋಸ್ಕರ 12 ಜನರುಳ್ಳದ್ದೊಂದು ಸಂಘವನ್ನು ಮಾಡಿಟ್ಟರು. ಈ ಪರಿ ಪಪ್ಪಕತ್ವದ ಭಾವವು ಆ ಸಹೋದರಸಭೆಗೆ ತಪ್ಪಿ ಹೋದದ್ದು ಅತಿ ಹಿತವೇ.

ತ್ಸಿಂತ್ಸೆಂದೊರ್ಫನು ತಾನಾದರೂ ದೇವರ ರಾಜ್ಯದ ಉಪಕಾರಕ್ಕಾಗಿ ಯುರೋಪ ಖಂಡವನ್ನು ತಿರಿಗಿದ್ದು ಮಾತ್ರವಲ್ಲದೆ ಅಮೆರಿಕಕ್ಕೂ ಎರಡಾವರ್ತಿ ಹೋದನು. ಕ್ರಿ. ಶ. 1738ನೇ ವರುಷ ಅವನು ಸಂತ ಥೋಮ ದ್ವೀಪಕ್ಕೆ ಹೊರಟು, ಮರುವರುಷ ಅಲ್ಲಿಗೆ ಮುಟ್ಟಿದಾಗ ಅಲ್ಲಿಯ ಕ್ರೈಸ್ತರಾದ ನೀಗ್ರೋರ ಸಭೆಯು 900 ಜನರ ಸಂಖ್ಯೆಯದ್ದಾದ್ದನ್ನು[4] ಕಂಡು, ಅವರ ಬಳಿಕೆಯಿಂದ ಬಹಳ ಸಂತೋಷಗೊಂಡನು. ಅವನು 3 ವಾರ ಮಾತ್ರ ತಡಿಯಲಿಕ್ಕೆ ಅನು ಹೊಂದಿ, ಯುರೋಪಕ್ಕೆ ತಿರಿಗಿ, ಕ್ರಿ. ಶ. 1740ನೇ ವರುಷ ತನ್ಮಧ್ಯ ಹೆನ್ಹೂತಿಗೆ ಪುನರಾಗತನಾಗಿದ್ದ ಆ ದಾವೀದ ನಿಶ್ಮನನನ್ನು[5] ಅಮೆರಿಕದ ಉತ್ತರ ಭಾಗದಲ್ಲಿ ಗುಳೆ ತೆಗದು ಬಂದು ನಿವಾಸಿಗಳಾಗಿದ್ದ ಗೆರ್ಮಾನರೊಳಗೆ ಕಳುಹಿಸಿ, ಅದೇ ವರುಷದ ಅಂತದಲ್ಲಿ ತಾನು

---

1) 575, 576ನೇ ಪಾನು. 2) 574ನೇ ಪಾನು ಸರಿ ನೋಡು. 3) ಯೆಶಾ. 45, 11. 4) 576ನೇ ಪಾನು. 5) 577ನೇ ಪಾನು.

ಉತ್ತರ ಅಮೆರಿಕದ ಪೂರ್ವ ತೀರದಲ್ಲಿಯಣ ಪೆನ್ಸುಲ್ವಾನಿಯವೆಂಬ ಪ್ರದೇಶಕ್ಕೆ ಹೋದನು. ಅಲ್ಲಿ ಆಗ ಒಂದು ಲಕ್ಷಕ್ಕಿಂತ ಹೆಚ್ಚು ಮಂದಿ ಸೌವಾರ್ತಿಕ ಗೆರ್ಮಾನರಿದ್ದರು; ಪಪ್ಪಕರ ಉಪದ್ರವಕ್ಕೆ ತಪ್ಪಿಸಿ ಕೊಂಡು ಬಂದಂಥ ಅವರಲ್ಲಿ ಅಧಿಕ ಜನರು ಫಲ್ಟ್ಸ ಮತ್ತು ಸಲ್ಟ್ಸಬುರ್ಗ ಶೀಮೆಯವರು.

ತ್ಸಿಂತ್ಸೆಂದೊರ್ಫನು ಪೆನ್ಸುಲ್ವಾನಿಯದಲ್ಲಿರುವಾಗ ಹಿಂದಗಡೆ ಅಮೆರಿಕದ ಸ್ವಾತಂತ್ರ್ಯಯುದ್ಧದಲ್ಲಿ ಕೀರ್ತಿ ಗೊಂಡ ಬೆಂಜಮಿನ್ ಫ್ರಂಕ್ಲಿನನೆಂಬವನ ಪರಿಚಿತೆ ಸಹ ಮಾಡಿದನು; ಇವನು ಆ ವೇಳೆ ಇನ್ನೂ ಒಂದು ಮುದ್ರಾಯಂತ್ರದ ಮತ್ತು ಒಂದು ಸಮಾಚಾರಪತ್ರಿಕೆಯ ಅಧಿಪನು. ಗೆರ್ಮಾನರಲ್ಲದೆ ಆ ಪ್ರದೇಶದಲ್ಲಿಯೂ ಇತರ ಪ್ರದೇಶಗಳಲ್ಲಿಯೂ ಬಹಳ ಮಂದಿ ಪ್ಯೂರಿತನರು[1] ಮುಂತಾದ ಇಂಗ್ಲಿಷರಾದ ಸೌವಾರ್ತಿಕ ಕ್ರೈಸ್ತರೂ ಹಲವರು ಇಂಗ್ಲಿಷ ಪಪ್ಪಕರೂ ಸಹ ಇದ್ದರು; ಆ ಇಂಗ್ಲಿಷ ಸೌವಾರ್ತಿಕರು ಕ್ರಿ. ಶ. 1607ನೇ ವರುಷ ಹಿಡಿದು ಸ್ವಶೀಮೆ ಬಿಡುತ್ತಾ ಬಂದಿದ್ದು[1], ಅಲ್ಲಲ್ಲಿ ಮೂಲನಿವಾಸಿಗಳಾದ ಇಂದಿಯಾನರಿಗೆ[2] ತಕ್ಕ ಹಣ ಕೊಟ್ಟು, ಭೂಮಿಯನ್ನು ಕ್ರಯಕ್ಕೆ ಮಾಡಿ ಕೊಂಡಿದ್ದರು; ಅಂಥಾ ಇಂಗ್ಲಿಷ ನೆಲೆಗಳವರು ಆಗ ಇಂಗ್ಲಂದಿನ ರಾಜನಿಗೆ ವಂದಿಸಿ, ಅವನದೊಂದು ಪ್ರತಿನಿಧಿಯ ವಿಚಾರಣೆಯಲ್ಲಿದ್ದರೂ ಇಂಗ್ಲಿಷ ರಾಜನೀತಿಯೊಳಗಿರಲಿಲ್ಲ. ಅದು ಹೊರ್ತಾಗಿ ಹೊಲ್ಲಂದಿನಲ್ಲಿಯೂ[3] ಫ್ರಂಚಿನಲ್ಲಿಯೂ[4] ಪಪ್ಪಕರಿಂದ ಬಾಧೆ ಪಡುತ್ತಿದ್ದ ಆಯಾ ದೇಶದವರಾದ ಅನೇಕ ಸೌವಾರ್ತಿಕರು ಅಮೆರಿಕದ ಉತ್ತರ ಭಾಗದಲ್ಲಿ ಆಶ್ರಯ ಗೊಂಡಿದ್ದರು[5]. ಅಮೆರಿಕದ ಮೂಲನಿವಾಸಿಗಳಾದ ವಿಗ್ರಹಾರಾಧಕರಿಗೆ, ಹಿಂದೆ ಹೇಳಿರುವಂತೆ, ಇಂದಿಯಾನರೆಂಬ ಹೆಸರು. ಇವರಿಗೆ ಸುವಾರ್ತೆ ತಂದು ಕೊಡುವದಕ್ಕೆ ಉತ್ತರ ಅಮೆರಿಕದ ಮಸ್ಸತ್ಶೂಸೆತ್ಸ ಎಂಬ ಪ್ರದೇಶದ ಬೊಸ್ತನು ಪಟ್ಟದ್ದೊಂದು ಪ್ಯೂರಿತನ ಸಭೆಯ ಬೋಧಕನಾದ ಆ ಜೊನ್ ಎಲಿಯೊತನೆಂಬವನು[6] ಕ್ರಿ. ಶ. 1646ನೇ ವರುಷ ಹೊರಟನು; ಮುಂದಾಗಿ ಅವನು 15 ವರುಷವೇ ಅವರ ಬಹು ಕಠಿಣವಾದ ಭಾಷೆಯನ್ನಭ್ಯಾಸಿಸಿದ್ದನು. ಅವನು ದೇವವಾಕ್ಯವನ್ನು ತಾನು ಹೆಚ್ಚಾಗಿ ಸುವಾರ್ತಾಪ್ರಸಾರಣ ನಡಿಸುತ್ತಿರುವ ಇಂದಿಯಾನರದೊಂದು ಕುಲದ ಭಾಷೆಯಲ್ಲಿ ರಚಿಸಿಟ್ಟದ್ದು ಅಮೆರಿಕದಲ್ಲಿ ಮುದ್ರಿತವಾದ ಮೊದಲಿನ ಗ್ರಂಥವೇ; ಅದನ್ನು ಈಗ ಯಾರೂ ಓದ ಕೂಡದು, ಹ್ಯಾಗಂದರೆ ಆ ಕುಲವೂ ಅದರ ಭಾ

---

1) 484ನೇ ಪಾನು; 499, 500ನೇ ಪಾನು. 2) 541, 542, 568ನೇ ಪಾನು. 3) 472ನೇ ಪಾನು. 4) 515ನೇ ಪಾನು. 5) ಉತ್ತರ ಅಮೆರಿಕದ ಕನದವೆಂಬ ಪ್ರದೇಶವನ್ನು ಕ್ರಿ. ಶ. 1608 ಅಬ್ದ ಫ್ರಂಚಿನ ಸರ್ಕಾರದವರು ಹಿಡು ಕೊಂಡು, 1763ನೇದರಲ್ಲಿ ಇಂಗ್ಲಿಷರಿಗೆ ಕೊಟ್ಟು ಬಿಡಬೇಕಾಯಿತು. 6) 568ನೇ ಪಾನು.

ಷೆಯೂ ಇಲ್ಲದೆ ಹೋದವು. ಎಲಿಯೊತನು 44 ವರುಷ ಇಂದಿಯಾನರಲ್ಲಿ ಕ್ರಿಸ್ತನ ಹೆಸರು ಸಾರಿ, ಸತ್ತು, ಈಗಿನವರಿಂದ ಇಂದಿಯಾನರ ಅಪೊಸ್ತಲನೆನ್ನಿಸಿ ಕೊಳ್ಳುತ್ತಾನೆ. ಕ್ರಿ. ಶ. 1742ನೇ ವರುಷ ತ್ಸಿಂತ್ಸೆಂದೊರ್ಫನು, ಎಲಿಯೊತನ ಹಾಗೆ ತಾನು ಸಹ ಮಾಡ ಬೇಕೆಂತ, ಇಂದಿಯಾನರಲ್ಲಿ ನಾಲ್ಕು ಕುಲದವರಿಗೆ, ಕ್ರಿಸ್ತನದೊಂದು ಮಹಾ ಸುವಾರ್ತೆಯುಂಟೆಂತ, ತಿಳಿಸುವದರಲ್ಲಿ ಸುಮಾರು ಒಂದು ವರುಷ ಕಳೆದು, ಕ್ರಿ. ಶ. 1743ನೇದರ ಆರಂಭದಲ್ಲಿ ಇಂಗ್ಲಂದಿನ ಮೇಲೆ ಗೆರ್ಮಾನಿಯಕ್ಕೆ ಹಿಂದಿರುಗಿ, ಮರುವರುಷ ತಾನು ಅಮೆರಿಕದಲ್ಲಿ ಕಂಡಿದ್ದ ದಾವೀದ ತ್ಸೈಸ್ಬೆರ್ಗೆರನೆಂಬ ಒಬ್ಬ ಭಕ್ತಿಯುಳ್ಳ ಯೌವನಸ್ಥನನ್ನು ಇಂದಿಯಾನರೊಳಗೆ ಸುವಾರ್ತೆ ಪ್ರಸಂಗಿಸುವದಕ್ಕೋಸ್ಕರ ನೇಮಿಸಿ, ಕಳುಹಿಸಿದನು; ಇವನು ಕ್ರಿ. ಶ. 1808ನೇ ವರುಷದ ತನಕ ಏನೇನೂ ದಣಿಯದೆ 63 ವರುಷ ಆ ಬಡ ವಿಗ್ರಹಾರಾಧಕರನ್ನು ದೇವರ ಭಯಭಕ್ತಿಯಲ್ಲಿಯೂ ನಾಗರಿಕತನದಲ್ಲಿಯೂ ಊರಿಸುವಂತೆ ಕಷ್ಟ ಪಡುತ್ತಿದ್ದನು. ಕ್ರಿ. ಶ. 1743ನೇಯದಾದ ಆ ವರುಷ ದೇವಿದ್ ಬ್ರೇನೆರ್ದನೆಂಬ ಬೋಧಕನು ಸ್ಕೋತ್ಲಂದಿನಲ್ಲಿ ಕ್ರೈಸ್ತ ಭಕ್ತರಿಂದ ಕಳುಹಿಸಿ ಕೊಂಡಿದ್ದು, ಅದೇ ವೃತ್ತಿಯನ್ನು ಬೇರೆ ಇಂದಿಯಾನ ಕುಲದವರಲ್ಲಿಯೂ ಗೈಯುತ್ತಿದ್ದನು.

ಈ ಪ್ರಕಾರವಾಗಿ ಉತ್ತರ ಅಮೆರಿಕದ ಇಂದಿಯಾನರಲ್ಲಿ ದೇವರ ರಾಜ್ಯವು ಚನ್ನಾಗಿ ಆರಂಭಿಸಿತು. ಆದರೂ ಆ ಕ್ರೂರ ವಿಗ್ರಹಾರಾಧಕರು ತಮ್ಮ ತಮ್ಮೊಳಗೆ ನಿತ್ಯ ಆಡುತ್ತಿರುವ ಕದನಗಳಿಂದಲೂ ಕಾಲಗತಿಯಲ್ಲಿ ಯುರೋಪದವರು ತಂದ ಮೈಲಿ ಮುಂತಾದ ರೋಗಗಳಿಂದಲೂ ಸಾರಾಯಿಯಿಂದಲೂ, ಹೊರ್ತು ಫ್ರಂಚರೂ ಹೊಲ್ಲಂದಿನವರೂ ಇಂಗ್ಲಿಷರೂ ಸ್ಪಾನಿಯದವರೂ[1] ತಾವು ತಾವು ನೆಲೆಗೊಂಡಲ್ಲಿ ತಮ್ಮ ಮೇಲೆ ಕವಿಯುತ್ತಿರುವ ಮೂಲನಿವಾಸಿಗಳಿಗೆದುರಾಗಿ ಮಾಡುವ ಶಿಕ್ಷಾಕರ ಯುದ್ಧಗಳಿಂದಾಗಲಿ ಅವರ ಸಂಗಡ ಕಟ್ಟಿ ಕೊಳ್ಳುವ ಒಪ್ಪಂದಗಳಿಂದಾಗಲಿ ಕ್ರಯದಿಂದಾಗಲಿ ಮೋಸದಿಂದಾಗಲಿ ಆಕ್ರಮಣದಿಂದಾಗಲಿ ಅವರ ಭೂಮಿ ಘಳಿಸಿ ಕೊಂಡು ಅವರನ್ನು ದಿಶೆಗೆಡಿಸುತ್ತಿದ್ದ ರೀತಿಯಿಂದ ಸಹ ಏನಾಯಿತಂದರೆ, ಇಂದಿಯಾನರ ಸಂಖ್ಯೆಯು ಬಹಳ ಕುಂದಿದ್ದಲ್ಲದೆ ದೇವರ ರಾಜ್ಯವು ನೆಟ್ಟಿದ್ದಲ್ಲಿಂದ ಬಹುಶಃ ಕಿತ್ತು ಹೋಯಿತು; ಅದು ವಿನಹ ಅಷ್ಟೆಲ್ಲದರಿಂದ ಬೇರೆ ಕಡೆಯಲ್ಲಿ ಆ ರಾಜ್ಯವು ಉತ್ತಮ ಭಕ್ತರ ಅತಿರೇಕ ಸಾಹಸದಿಂದಲಾದರೂ ನೆಲಸುವದಕ್ಕೆ ಅತ್ಯಭ್ಯಂತರವಾಗಿದೆ. ನಮ್ಮ ಈ ಕಾಲದಲ್ಲಲ್ಲಿ ಉಳಿದಿರುವ ಇಂದಿಯಾನರು ಹೆಚ್ಚು ಕಡಿಮೆ 4 ಲಕ್ಷ ಜನರು; ಇಷ್ಟರಲ್ಲಿ 8 ಸಾವಿರ ಮಂದಿ ಮಾತ್ರ ಸೌವಾರ್ತಿಕ ಕ್ರೈಸ್ತರು.

1) ಇವರಿಗೆ ಅಂದು ಆ ಕಡೆಯಲ್ಲಿ ಫ್ಲೋರಿದವೆಂಬ ಪ್ರದೇಶವಿತ್ತು; ಇವರ ತರವು 541, 542ನೇ ಪಾನಿನಲ್ಲಿ ಕಾಣುತ್ತದೆ.

ತ್ಸಿಂಶ್ಸೆಂದೊರ್ಫನು ಕ್ರಿ. ಶ. 1749ನೇ ಅಬ್ದ ಮತ್ತೊಮ್ಮೆ ಇಂಗ್ಲಂದಿನಲ್ಲಿರುವಾಗ ಪಾರ್ಲಿಮೆಂತಿನವರು ಅಲ್ಲಿಯ ಸಹೋದರಸಭ್ಯರನ್ನು ಕುರಿತು, ಅವರು ನಿಜ ಅಪೊಸ್ತೊಲಿಕ ಮತ್ತು ಎಪಿಸ್ಕೊಪಾಲ ಸಭೆಯವರೆಂದು, ನಿರ್ಣಯ ಮಾಡಿ, ಪ್ರಕಟಿಸಿದರು.

ತ್ಸಿಂಶ್ಸೆಂದೊರ್ಫನು ಕರ್ತನ ಸಭೆಯನ್ನು ಕಟ್ಟುವದರಲ್ಲಿ ಅಮಿತ ಉದ್ಯಮ ಗೈಯುವದರಿಂದ ತನ್ನ ಆಸ್ತಿ ಎಲ್ಲವನ್ನು ಮಾತ್ರವಲ್ಲದೆ ತನ್ನ ಶರೀರತ್ರಾಣವನ್ನು ಸಹ ವೆಚ್ಚ ಮಾಡಿದ್ದಕ್ಕೆ ಆಶ್ಚರ್ಯ ಪಡುವದೇನು? ತನ್ನ ಜೀವಿಕೆಯ ಅಂತ್ಯವಾದ 4 ತಿಂಗಳುಗಳೊಳಗೆ ಅವನು ಹೆರ್ನ್ಹೂತಿನಲ್ಲಿ ಸಭೆಯವರ ಮುಂದೆ 120 ಪ್ರಸಂಗಗಳನ್ನಾದರೂ ಹೇಳಿ ಕೊಟ್ಟ ಮೇಲೆ ಒಂದು ರವಿವಾರ ತನ್ನೆದೆಗೆ ನೆಗಡಿ ಹಿಡಿದ ಕಾರಣ ಮಲಗಿ ಕೊಂಡು, ಕಠಿಣ ಜ್ವರ ಸಹ ಬಂದವನಾದನು. ಅಲ್ಲಿಯ ಸಭ್ಯರು ಸರ್ತಿಯ ಮೇಲೆ ಬಂದು, ಅವನನ್ನು ಪರಾಂಬರಿಸುವಲ್ಲಿ ಅವನೊಮ್ಮೆ ಅಂದದ್ದೇನು—ನಿಮ್ಮೆಲ್ಲರಿಗೆ ಎಷ್ಟು ಪ್ರೀತಿ ಮಾಡುತ್ತೇನೆಂದು, ಉಚ್ಚರಿಸುವದು ನನಗಳವಲ್ಲ. ನಾವು ದೇವದೂತರಂತೆ ಸ್ವರ್ಗದಲ್ಲಿ ಕೂಡಿರುವ ಓಪಾದಿ ಆಯಿತಲ್ಲವೋ? ಅವರೆಲ್ಲರೂ ಒಂದೇ ಆಗಿರ ಬೇಕೆಂತ, ಕ್ರಿಸ್ತನು ಪ್ರಾರ್ಥಿಸಿದ್ದು ಈ ಆನಂದಕರವಾದ ರೀತಿಯಿಂದ ಒದಗುವದೆಂದು, ನೀವು ಎಂದಾದರೂ ಆಲೋಚಿಸಲಿಕ್ಕೆ ಧೈರ್ಯ ಪಟ್ಟರೋ?—ಬಳಿಕ ಎರಡು ದಿನದಿತ್ತ ಅವನು ಸಮಾಧಾನದಿಂದ ಮಡಿದನು. ಆ ಸಮಯ ಅವನ ಹೆಂಡತಿಯು ಬೇರೆ ಕಡೆಯಲ್ಲಿ ರೋಗಿಷ್ಠಳಾಗಿ ಬಿದ್ದಿರಲಿಕ್ಕೆ, ಸಭ್ಯರು ಅವಳೆಡೆಗೆ ಬಂದು, ಆದದ್ದನ್ನು ತಿಳಿಸಿದಂದು ಅವಳು—ನಿಮ್ಮೆಲ್ಲರಿಗಿಂತಲೂ ಅತಿರಮ್ಯಾರ್ಥವುಳ್ಳ ಪ್ರತೀಕ್ಷೆಯು ನನಗುಂಟು; ಏನಂದರೆ ನಾನು ಬೇಗನೆ ಅವನ ಬಳಿಗೆ ಹೋಗುವ ಹಾಗಿದ್ಧೇನೆ ಎಂದು, ನುಡಿದ್ದು ಸಿದ್ಧಿಸಿತು; ಹ್ಯಾಗಂದರೆ ಅದೇ ತಿಂಗಳಲ್ಲಿ ಅವಳು ಸಹ ಪರಂಧಾಮವನ್ನೈದಿದಳು.

ತ್ಸಿಂಶ್ಸೆಂದೊರ್ಫನು ಸತ್ತು, 5 ದಿವಸ ತೀರಿದ ತರುವಾಯ 32 ಮಂದಿ ಪ್ರಸಂಗಿಕರೂ ಸಭಾಸೇವಕರೂ ಸರ್ತಿಯ ಮೇಲೆ ಅವನ ಹೆಣವನ್ನು ಸಮಾಧಿಗೆ ಹೊತ್ತು ಕೊಂಡು ಹೋದರು; ಇವರಲ್ಲಿ ಕೆಲವರು ಹೊಲ್ಲಂದಿನಿಂದ, ಕೆಲವರು ಇಂಗ್ಲಂದಿನಿಂದ, ಮತ್ತು ಕೆಲವರು ಐರ್ಲಂದಿನಿಂದ, ಇನ್ನು ಕೆಲವರು ಅಮೆರಿಕದಿಂದ, ಬೇರೆ ಕೆಲವರು ಗ್ರೊಯಿನ್ಲಂದಿನಿಂದ ಹೆರ್ನ್ಹೂತಿಗೆ ಆಗಮಿಸಿದಂಥವರು. ಶವಪೆಟ್ಟಿಗೆಯ ಹಿಂದೆ 4000ಕ್ಕಿಂತ ಹೆಚ್ಚು ಜನರು ಅವನ ಮೇಲಿನ ಮಮತೆಗಾಗಿ ನಡಿಯುವವರಾದರು. ಶವವನ್ನು ಭೂಮಿಯೊಳಗೆ ಇಳಿಸುವಾಗ ಪ್ರಸಂಗಿಕನು—ಕಣ್ಣೀರಿನೊಡನೆ ಈ ಗೋಧಿಕಾಳನ್ನು ಭೂಮಿಗೆ ಬಿತ್ತುತ್ತೇವೆ, ಆದರೆ ಅದು ತಕ್ಕ ಸಮಯಕ್ಕೆ ತನ್ನ ಅಮರ ಫಲ ಹುಟ್ಟಿಸಿ ಕೊಡುವದು; ನಮ್ಮ ಸಹೋದರನು ಸಹ

ಎದ್ದು, ತನ್ನ ಪೈರುಸೂಡುಗಳನ್ನು ಹೊರುವವನಾಗಿ, ಉತ್ಸವಧ್ವನಿಯಿಂದ ಬಂದೇ ಬರುವನು[1]! ಹೀಗೆ ಬಯಸುವವನು, ಆಮೆನ್! ಎಂದು, ಹೇಳಲಿ! ಎಂತ, ಮಾತಾಡಲು, ಸಭ್ಯರೆಲ್ಲರೂ, ಆಮೆನ್! ಎಂದು, ಉತ್ತರ ಕೊಟ್ಟರು.

ತ್ಸಿಂತ್ಸೆಂದೊರ್ಫನು ಸಹೋದರಸಭ್ಯರೊಳಗೆ, ವಿಗ್ರಹಾರಾಧಕರಿಗೆ ಸುವಾರ್ತೆ ಪ್ರಸಂಗಿಸ ಬೇಕೆಂದು, ಹೊತ್ತಿಸಿದ ಉತ್ಸಾಹವೆಂಬ ಉರಿಯು ಇಂದಿನ ವರೆಗೂ ಆರಲಿಲ್ಲ; ಅವರಿಗೆ ಈಗ ಅಮೆರಿಕದಲ್ಲಿಯೂ ಆಫ್ರಿಕದ ದಕ್ಷಿಣ ಭಾಗದಲ್ಲಿಯೂ ಇರುವ 80 ಸುವಾರ್ತಾಪ್ರಸಾರಣಕ್ಷೇತ್ರಗಳಲ್ಲಿ 300 ಜನಕ್ಕಿಂತ ಹೆಚ್ಚು ಸುವಾರ್ತಾಪ್ರಸಾರಕರು ಮಂಗಲಕರ ವೃತ್ತಿ ನಡಿಸುತ್ತಾ ಬರುತ್ತಾರೆ[2].

ಸಹೋದರಸಭ್ಯರಲ್ಲಿ ಚೀಟುನುಡಿ ತೆಗೆಯುವ ಮತ್ತು ಚೀಟು ಹಾಕುವ ಪದ್ಧತಿಯೊಂದು ಅಪರೂಪವಾದದ್ದು[3]. ಅವರು ಕ್ರಿಸ್ತ ಕರ್ತನನ್ನೇ, ತಮ್ಮ ಅದೃಶ್ಯ ಅಗ್ರಸ್ಥನೂ ಪರಿಪಾಲಕನೂ ಎಂತ, ಆರಿಸಿ ಕೊಂಡಿಟ್ಟ ಮೇಲೆ ಸುವಾರ್ತಾಪ್ರಸಾರಣ ಉದ್ಯೋಗನೇಮಕ ನವಸಭ್ಯಾಂಗೀಕರಣ ವಿವಾಹ ಮೊದಲಾದ ಸಕಲ ಮುಖ್ಯ ಕಾರ್ಯಗಳಲ್ಲಿ ಅವನ ಚಿತ್ತ ಕೇಳಿ ಕೊಳ್ಳುವಂತೆ ಚೀಟುನುಡಿ ಚೀಟುಗಳೆರಡನ್ನು ಪ್ರಯೋಗಿಸಿ, ಬಂದ ಅಭಿಪ್ರಾಯಕ್ಕೆ ಅನುಸಾರವಾಗಿ ಪರ್ಯಾಲೋಚಿಸಿ ವರ್ತಿಸುವರು. ಈ ಪದ್ಧತಿಯನ್ನು ಸಿದ್ಧಾಂತ ಪಡಿಸುವದಕ್ಕಾಗಿ ಅವರು ಪೇತ್ರ ಮುಂತಾದ ಕ್ರಿಸ್ತನ ಶಿಷ್ಯರು ಪೂರ್ವದಲ್ಲಿ ಮತ್ಥಿಯನೆಂಬವನನ್ನು ಚೀಟಿನ ಮೇಲೆ ಅಪೊಸ್ತಲರ ಸಂಖ್ಯೆಗೆ ಕೂಡಿಸಿದ್ದನ್ನು ದೃಷ್ಟಾಂತ ಕೊಡುತ್ತಾರೆ[4].

## 69. ಮೆನ್ನೊ ಸಿಮೋನಿಸ್.

ನೀವು ಹಿಂದೆ ಪಠಿಸಿದಂತೆ[5] ಲುಥರನ ಕಾಲದಲ್ಲಿ ಅನಬಪ್ತಿಸ್ತರೆಂಬ ಪುನಃಸ್ನಾನಿಕರೆದ್ದು, ಗದ್ದಲ ಹುಟ್ಟಿಸಿದರು; ಹೆಚ್ಚು ಕಡಿಮೆ ಇವರೆಲ್ಲರೂ ಭೇದಕರೇ ಅಂದರೆ ತಮ್ಮನ್ನು ತಾವೇ ಕ್ರೈಸ್ತ ಸಭೆಯಿಂದ ಕಡಿದು ಕೊಂಡಿದ್ದಂಥವರೇ. ಆದರೆ ಕಾಲಗತಿಯಿಂದ ಮೆನ್ನೊ ಸಿಮೋನಿಸ್ ಎಂಬವನು ಅಂಥವರನ್ನು ತಿರಿಗಿ ಕರ್ತನ ಸಭೆಯಲ್ಲಿ ಸೇರಿಸಲಿಕ್ಕೆ ಸಮರ್ಥನಾದನು. ಅವನು ಕ್ರಿ. ಶ. 1505ನೇ ವರುಷ ಉತ್ತರ ಗೆರ್ಮಾನಿಯದ ಹೊಲ್ಸ್ಟೈನೆಂಬ ಶೀಮೆಯಲ್ಲಿ ಜನಿಸಿ, ತನ್ನ 24ನೇ ವಯಸ್ಸಿಗೆ ಅಲ್ಲಿ ಪಪ್ಪಕ ಪ್ರೀಸ್ತನಾದನು. ಆ ವರೆಗೆ ಅವನು ದೇವವಾಕ್ಯದ ಸ್ವಲ್ಪಾಂಶವನ್ನಾದ

1) ಕೀರ್ತ. 126, 6. 2) 576ನೇ ಪಾನು ಸಹ ನೋಡು. 3) 578ನೇ ಪಾನು ಸರಿ ನೋಡು. 4) 28ನೇ ಪಾನು ನೋಡು. 5) 427ನೇ ಪಾನು.

ರೂ ಓದಲಿಲ್ಲ; ಅದರಿಂದ ತಾನು ದಿಶೆಗೆಟ್ಟು ಹೋದೇನೆಂತ, ಅಂಜಿ ಕೊಂಡನು. ಆದರೆ ತಾನು ಮಿಸ್ಸಯಾಗವನ್ನು ನಡಿಸುವಂದಂದು, ಆ ಪರಿಶುದ್ಧ ಸಂಸ್ಕಾರದ ಸಾಹಿತ್ಯಗಳು ವಸ್ತುಪರಿಣಾಮ[1] ಪಟ್ಟ ರಕ್ತ ಮಾಂಸಗಳಲ್ಲವೆಂತ, ಹೇಳುವ ಅನುಮಾನವು ತನ್ನೊಳಗೆ ತಿರಿತಿರಿಗಿ ಮೂಡುತ್ತಿರುವ ನಿಮಿತ್ತ ಒಮ್ಮೆ ತನ್ನ ಜತೆಯ ಪ್ರೀಸ್ತರಿಗೆ ಅದನ್ನು ನಿವೇದಿಸಿ, ಅದನ್ನು ಕುರಿತು ಅವರ ಸಂಗಡ ಸಂಭಾಷಣೆ ಗೈಯಲು, ಇವರು ಪರಿಹಾಸ್ಯ ಮಾಡಿದ್ದರಿಂದ ಅವನು ಸಹ ಲಘು ಮನಸ್ಸಿನವನಾಗಿ, ಅವರ ಕೂಡೆ ಪಗಡೆಯಾಟ ಮದ್ಯಪಾನ ಮುಂತಾದ್ದರಿಂದ ಕಾಲ ಸವೆಯುವವನಾದನು. ಆದಾಗ್ಯೂ ಸತ್ಯಾಪೇಕ್ಷೆಯು ಅವನನ್ನು ಪೂರಾ ಬಿಡದಿರಲಿಕ್ಕೆ, ಕಡೆಯಲ್ಲಿ ಅವನು ದೇವರ ವಾಕ್ಯದ ಅಭ್ಯಾಸದಲ್ಲಿ ಶೇರಿದನು. ಆಗ ಪರಿಶುದ್ಧ ರಾತ್ರಿಭೋಜನದ ವಿಷಯ ಅವನಿಗೆ ಬೇಗ ಸೌವಾರ್ತಿಕ ಜ್ಞಾನವು ಬಂತು. ತದನಂತರ ಕ್ರಿ. ಶ. 1531ನೇ ವರುಷ ಪರಿಶುದ್ಧ ಸ್ನಾನವನ್ನು ಕುರಿತು ಕೂಡ ಪರ್ಯಾಲೋಚನೆ ಮಾಡುವಲ್ಲಿ, ಶಿಶುಸ್ನಾನವು ಸಮವಲ್ಲವೆಂತ[2], ಭಾವಿಸಿ ಕೊಳ್ಳುವವನಾದನು. ಅಷ್ಟೆಲ್ಲ ವಿಚಾರಣದಲ್ಲಿ ಅವನು ಇನ್ನೂ ಹೃತ್ಪರಿಣಾಮ ಪಡೆಯದಂಥ ಮನುಷ್ಯನು. ಅಂದು ಆ ಕಲಹಗಾರರಾದ ಅನಬಪ್ತಿಸ್ತರಲ್ಲಿ ಕೆಲವರು ಅವನಿರುವ ಊರಿಗೆ ಬಂದು, ಅಲ್ಲಿ ಸಹ ತಮ್ಮ ದುರ್ಮಾರ್ಗತನ ನಡಿಸುತ್ತಿರಲು, ಅವನು ಅವರಿಗೆ ಬುದ್ಧಿ ಹೇಳಲಿಕ್ಕೆ ಹೋಗುವ ಹಾಗಿರುವಲ್ಲಿ, ತಾನಾದರೂ ಇನ್ನು ಬಹು ಕೆಟ್ಟವನೆಂತ, ಚಿಂತಾಭರಿತನಾಗಿ, ದೇವರೇ, ನನಗೊಂದು ನಿರ್ಮಲ ಹೃದಯವನ್ನು ದಯೆ ಪಾಲಿಸೆಂದು, ನಾನಾ ಪ್ರಕಾರ ಬಿನ್ನವಿಸಿ, ಬಳಿಕ ತಾನನುಭವಿಸಿದ ಮಾನಸಾಂತರದ ರ್ಥವನ್ನು ಬೇರೊಬ್ಬರಿಗೆ ಪ್ರಸಂಗಿಸಲೆಸಗಿ, ಜನರ ಭಯವಿಲ್ಲದೆ ಪಪ್ಪಕತ್ವದ ಮತ್ತು ಅನಬಪ್ತಿಸ್ತತ್ವದ ಸಕಲ ಅಸಹ್ಯತೆಗೆ ಮಾರ್ಮಲೆಯುವವನಾದನು. ತರುವಾಯ ಕ್ರಿ. ಶ. 1537ನೇ ಅಬ್ದ ಅನಬಪ್ತಿಸ್ತರಲ್ಲಿ ಹೃತ್ಪರಿಣತರಾದ ಸುಮಾರು ಏಳ್ವರು ಬಂದು—ನೀವು ನಮ್ಮನ್ನೂ ನಮ್ಮಂಥವರನ್ನೂ ಸ್ವೀಕರಿಸಿ, ನಮ್ಮ ನಾಯಕನಾಗಿರೆಂದು, ಅವನಿಗೆ ವಿನಂತಿ ಮಾಡಿದರು. ಆರಂಭದಲ್ಲಿ ಅವನು ತನ್ನ ಆತ್ಮೀಯ ಬಲಹೀನತ್ವ ನೋಡಿ, ಒಲ್ಲೆನೆಂದರೂ ದೇವರಿಗೆ ಬಹಳ ಪ್ರಾರ್ಥಿಸುವದರಿಂದ ಅಂತ್ಯಕ್ಕೆ ಧೈರ್ಯಗೊಂಡು, ಗೆರ್ಮಾನಿಯದಲ್ಲಿಯೂ ನೀದೆರ್ಲಂದಿನಲ್ಲಿಯೂ ಚದರಿರುವ ಅನಬಪ್ತಿಸ್ತರ ಬಳಿಗೆ ಹೋಗುವವನಾಗಿ, ಅವರನ್ನು ಸನ್ಮಾನಸಾಂತರಕ್ಕೂ ಭಕ್ತಿಯುಕ್ತ ಜೀವಿಕೆಗೂ ಕ್ರೈಸ್ತಸಭಾಕ್ರಮವರ್ತಿತ್ವಕ್ಕೂ ನಡಿಸುವದಕ್ಕೆ ನಾನಾ ಧಾವತಿ ಗೊಳ್ಳುತ್ತಾ ಬಂದನು. ಅಂಥಾ ಸುವೃತ್ತಿಗೆ ದೇವರ ಆಶೀರ್ವಾದ ಒದಗಿತು; ಅನಬಪ್ತಿಸ್ತರನ್ನು ಸತ್ಯದಲ್ಲಿ ಪುನಃಸ್ಥಾಪಿಸಲಿಕ್ಕೆ ಅವನಿಗನುಕೂಲವಾಯಿತು. ಆ ಕಾಲದಾರಭ್ಯ ಅ

1) 290ನೇ ಪಾನು. 2) 96, 97, 146, 147, 164, 212, 289, 427ನೇ ಪಾನು ಸರಿ ನೋಡು.

ವರು ಒಂದು ಸಭಾಶಾಖೆಯಾಗಿ, ಅನಬಪ್ತಿಸ್ತರೆಂಬ ಹೆಸರು ಕಳೆದು ಬಿಟ್ಟು, ಬಪ್ತಿಸ್ತರೆನ್ನಿಸುವವರಾದರು. ಬಪ್ತಿಸ್ತರೆಂದರೆ ಶಿಶುಸ್ನಾನಕ್ಕೆ ಮೆಚ್ಚದೆ ಪ್ರಾಯ ಬಂದವರಿಗೆ ಮಾತ್ರ ಪರಿಶುದ್ಧ ಸ್ನಾನ ಕೊಡುವವರು. ಮೆನ್ನೊನು ಮೊಂತಾನಿಯಾನರ[1] ಮತ್ತು ನೊವಾತಿಯಾನಕರ[2] ಮತ್ತು ದೋನಾತಿಸ್ತರ[3] ಓಪಾದಿ ಅನ್ನುವದೇನಂದರೆ—ಪಾಪಪರಿಹಾರವೂ ಪುನರ್ಜನ್ಮವೂ ಸ್ನಾನದಿಂದಲ್ಲ ಸದ್ವಿಶ್ವಾಸದಿಂದಲೇ ಪ್ರಾಪಿಸುತ್ತವೆ; ಸ್ನಾನವು ಶುದ್ಧರನ್ನೂ ಅಶುದ್ಧರನ್ನೂ ಬೇರೆ ಬೇರೆ ಮಾಡಿಡುವ ಆಚಾರವೇ, ಆದ ಕಾರಣ ದೇವವಾಕ್ಯದಲ್ಲಿ ಮುಂದಾಗಿ ಶಿಕ್ಷಿತರಾದವರೇ ಹೊರ್ತು ಮತ್ತ್ಯಾರೂ ಸದ್ವಿಶ್ವಾಸವನ್ನು ಪಡೆಯ ಕೂಡದ್ದರಿಂದ ದೇವವಾಕ್ಯವನ್ನು ಕೇಳಿ ವಿಧೇಯತ್ವದೊಡನೆ ತೆಕ್ಕೊಂಡು ಹೀಗೆ ಹೊಸ ಮನುಷ್ಯರು ಆದವರನ್ನು ಮಾತ್ರ ಸ್ನಾನದ್ವಾರಾ ಸಭೆಯಲ್ಲಿ ಸೇರಿಸ ಬೇಕು; ದೃಶ್ಯವಾದ ಕ್ರೈಸ್ತ ಸಭೆಯಲ್ಲೂ ನಿಜ ವಿಶ್ವಾಸಿಗಳೊಬ್ಬರೇ ಮಾತ್ರ ಇರ ಬೇಕು[4].—ಮೆನ್ನೊನ ಮುಖ್ಯ ಶಾಖಾಭಿಪ್ರಾಯವು ಇಷ್ಟೇ. ಹೀಗಿರಲಾಗಿ ಅವನು ಅತಿ ಕಠಿಣ ಸಭಾಶಿಕ್ಷೆ ನಿರ್ಮಿಸಿದ್ದು ಸಹಜ. ಅವನ ಶಾಖೆಯ ಬಪ್ತಿಸ್ತರಲ್ಲಿ ಪ್ರಮಾಣ ಮಾಡದ ಪದ್ಧತಿಯೂ ದಂಡಿನಲ್ಲಿ ಸೇವೆಗೈಯದ್ದೂ ಅಲ್ಲಲ್ಲಿ ರೂಢಿಯು[5]; ಆದಾಗ್ಯೂ ಅವಶ್ಯವಾದಲ್ಲಿ ಸಮಸ್ತ ರಾಜನೀತಿಗೂ ಒಳಗಾದರು. ಮೆನ್ನೊನ ಶಾಖೆಯವರಿಗೆ ಮೆನ್ನೊನೀತರೆಂಬ ಹೆಸರು ಸಹ ಬಂದದೆ.

ಮೆನ್ನೊನೀತರು ಮುಖ್ಯವಾಗಿ ಕ್ರಿ. ಶ. 1608ನೇ ವರುಷ ಹಿಡಿದು ಇಂಗ್ಲಂದಿನಲ್ಲಿ ನೆಲೆಗೊಂಡು, ಅನೇಕಾನೇಕ ಉಪದ್ರವ ತಾಳುತ್ತಿದ್ದ ಬಳಿಕ ಕ್ರಿ. ಶ. 1689ನೇ ವರುಷ[6] ತಮಗೆ ಸಹನೀಯವಾದ ಸ್ಥಿತಿಯನ್ನು ಘಳಿಸಿ ಕೊಂಡರು. ಇಂಗ್ಲಂದಿನ ಮತ್ತು ಅಮೆರಿಕದ ಬಪ್ತಿಸ್ತರಿಗೆ ಮೂಲಕರಾದವರು ಅವರೇ. ಈ ಬಪ್ತಿಸ್ತರಲ್ಲಿ ಹಲವು ಉಪಶಾಖೆಗಳಿದ್ದರೂ, ತಮ್ಮ ಮಕ್ಕಳಲ್ಲಿ ಮಾನಸಾಂತರದ ಕುರುಹುಗಳು ತಮಗೆ ಗೋಚರಿಸಿದಂತೆ ತೋರುವಂದೇ ಮಾತ್ರ ಅವರಿಗೆ ಸ್ನಾನ ಕೊಡ ಬೇಕೆಂದು, ಹೇಳುವ ಮನಸ್ಸು ಅವರೆಲ್ಲರಿಗುಂಟು. ಆದರೆ ಇದೇ ವಿಷಯದಲ್ಲಿ ಅವರಿಗೂ ಇನ್ನೂ ಮೆನ್ನೊನೀತರೆನ್ನಿಸುವವರಿಗೂ ವ್ಯತ್ಯಾಸ; ಹ್ಯಾಗಂದರೆ ಇವರು ನಿತ್ಯಕ್ಕೆ ನೇಮಿತವಾದ್ದೊಂದು ವಯಸ್ಸಿನಲ್ಲಿ ಅಂದರೆ 14ನೇ ವರುಷದಿಂದ 16ನೇದರ ಪರಿಯಂತದ ಕಾಲದಲ್ಲಿ ಪರಿಶುದ್ಧ ಸ್ನಾನ ದೊರಕಿಸುವರು.

ಇಂಗ್ಲಂದಿನ ಬಪ್ತಿಸ್ತರಲ್ಲಿ ಜೊನ್ ಬುನ್ಯನನೆಂಬವನು ಬಹು ಪ್ರಖ್ಯಾತಿ ಪಟ್ಟವನು. ಬೆದ್ಫೋರ್ದು ಪಟ್ಣದ ಸಮೀಪ ಅವನ ಜನ್ಮಸ್ಥಳ. ಅಲ್ಲಿ ಅವನು ಕ್ರಿ. ಶ.

---

1) 146ನೇ ಪಾನು. 2) 162ನೇ ಪಾನು. 3) 242ನೇ ಪಾನು. 4) 1, 284, 363ನೇ ಪಾನು ಸರಿ ನೋಡು. 5) 101, 375ನೇ ಪಾನು. 6) 501ನೇ ಪಾನು.

1628ನೇ ಅಬ್ದ ಹುಟ್ಟಿ, ಕಲಾಯಿಗಾರಿಕೆ ಮಾಡುವವನಾಗಿ, ಕ್ರಿ. ಶ. 1655ನೇ ಅಬ್ದ (ಇನ್ನೊಮ್ಮೆ) ಪರಿಶುದ್ಧ ಸ್ನಾನ ಹೊಂದಿ, ದೇವವಾಕ್ಯದ ನಿತ್ಯ ಅಭ್ಯಾಸದಿಂದ ಸಜ್ಜ್ಞಾನಸಂಪನ್ನನಾಗಿ, ಪ್ರಸಂಗವೃತ್ತಿ ನಡಿಸಲಿಕ್ಕೆ ಹತ್ತಿ, ಬಹು ಜನರ ಹೃತ್ಪರಿಣಾಮಕ್ಕೆ ಕಾರಣನಾಗುತ್ತಿರಲಿಕ್ಕೆ, 2ನೇ ಚಾರ್ಲ್ಸ್ ರಾಜನು[1] ದಿಸ್ಸೆಂತೆರರಲ್ಲಿ[2] ಬಲಿಷ್ಠನಾದ ಅವನಿಗೆ ಕಡು ಕೋಪ ಪಟ್ಟು, ಕ್ರಿ. ಶ. 1660ನೇ ಅಬ್ದ ಅವನನ್ನು ಶೆರೆಮನೆಯೊಳಗೆ ಹಾಕಿಸಿದನು. ಬುನ್ಯನನು 12½ ವರುಷ ಅದರೊಳಗಿರುವಾಗ ಯಾತ್ರಿಕನ ಸಂಚಾರವೆಂಬ ಹೆಸರುಗೊಂಡ ಗ್ರಂಥವನ್ನು ಸಹ ರಚಿಸಿ ಬರೆದನು. 1672ನೇ ಅಬ್ದ ಅವನು ಮೃದುಗುಣಿಯಾದವನೊಬ್ಬ ಎಪಿಸ್ಕೋಪಾಲ ಅಧ್ಯಕ್ಷನ ಮುಖದಿಂದ ಬಂಧಮುಕ್ತಿ ಪಡೆದು, ಮುಂಚಿನಂತೆ ತಿರಿಗಿ ಪ್ರಸಂಗಿಸುವವನಾಗಿ, ತಿರಿಗಿ ನಾನಾ ಹಿಂಸೆಗೆ ಗುರಿಯಾಗುತ್ತಿದ್ದ ಮೇಲೆ 2ನೇ ಜೇಂಸನೆಂಬ ಪಪ್ಪಕ ಭಾವದವನಾದ ಆ ರಾಜನು[3] ದಿಸ್ಸೆಂತೆರರಿಗೆ ಫುಸಲಾಯಿಸಿ ಅವರನ್ನು ಎಪಿಸ್ಕೊಪಾಲ ಸಭ್ಯರಿಗೆ ವಿರೋಧವಾಗಿ ತನ್ನ ಪಕ್ಷಕರಾಗ ಮಾಡಿ ಕೊಳ್ಳುವದಕ್ಕೋಸ್ಕರವೂ ಪಪ್ಪಕರಿಗೆ ದಯೆ ತೋರಿಸುವದಕ್ಕೋಸ್ಕರವೂ ಕ್ರಿ. ಶ. 1687ನೇ ಅಬ್ದ ಪ್ರಕಟಿಸಿದ್ದೊಂದು ಹೊಸ ಇಂದಲ್ಜೆನ್ಸ್ ಅಕ್ತು ಎಂಬ ಕ್ಷಮಾನಿರ್ಣಯದಿಂದ[4] ಪೂರ್ಣ ಸ್ವಾತಂತ್ರ್ಯದವನಾಗಿ, ಮರುವರುಷ ತನ್ನ ಕ್ರಿಸ್ತನಾಥನೆಡೆಗೆ ಹೋದನು.

---

## 70. ಜೊರ್ಜ್ ಫೊಕ್ಸನು.

ಇಂಗ್ಲಂದಿನಲ್ಲಿ ಉದ್ಭವಿಸಿದ ಎಪಿಸ್ಕೊಪಾಲ ಸಭೆಯವರು ತಮ್ಮ ತರದ ಸಭಾಪರಿಪಾಲನದ ಮತ್ತು ದೇವಾರಾಧನದ ಕ್ರಮದ ಮೇಲೆ ಹೆಚ್ಚು ಬೆಲೆ ಕಟ್ಟಿ, ಭಕ್ತಿಮಯ ಸಜ್ಜೀವನವು ಕ್ರೈಸ್ತರಲ್ಲಿ ಮುಖ್ಯವೆಂಬಂತೆ ಬಹುಶಃ ನಡೆಯದಾಗ ವಿಶೇಷವಾಗಿ ಅಲ್ಲಿಯ ಪ್ರಜಾರಾಜತನದ ಕಾಲದಲ್ಲಿ[5] ಪ್ಯೂರಿತನರೊಳಗನೇಕರು, ಹಿಂದೆ ಹೇಳಿದ ಬಪ್ತಿಸ್ತರು[6] ಸಹ—ಸಕಲ ಕ್ರೈಸ್ತ ಸಹೋದರರಾದರೂ ವಿಶ್ವಾಸವನ್ನು ಪಾಯ ಹಾಕಿ ಕಟ್ಟುವಂಥ ಪ್ರಸಂಗಗಳನ್ನು ಮಾಡ ಬಹುದು[7]; ಅದಕ್ಕೆ ಬೇಕಾದದ್ದು ಭಕ್ತಿಯೊಂದಲ್ಲದೆ ಉದ್ಯೋಗಪ್ರತಿಷ್ಠೆಯೂ ವಿದ್ಯೆಯೂ ಅಲ್ಲವೆಂದು, ಈ ಪ್ರಕಾರ ಸರ್ವ ಕ್ರೈಸ್ತರ ರಾಜಯಾಜಕತ್ವವನ್ನೂ[8] ಇದರ ಮೂಲಕ ಸಜ್ಜೀವನವನ್ನೂ ತಿರಿಗಿ ಬೆಳಿಸಲಾರಂಭಿಸಿದರು.

---

1) 500ನೇ ಪಾನು. 2) 482ನೇ ಪಾನು. 3) 500, 501ನೇ ಪಾನು. 4) 500ನೇ ಪಾನು ಸರಿ ನೋಡು. 5) 500ನೇ ಪಾನು. 6) 584, 585ನೇ ಪಾನು. 7) 70, 147, 373ನೇ ಪಾನು ಸರಿ ನೋಡು. 8) 482, 555ನೇ ಪಾನುಗಳು.

ಆ ಸಮಯ ಕ್ರಿ. ಶ. 1624ನೇ ಅಬ್ದ ಇಂಗ್ಲಂದಿನ ಲೆಸ್ತೆರೆಂಬ ನಾಡಿನ ದ್ರೇತನೆಂಬ ಊರಲ್ಲಿ ಒಬ್ಬ ಜಾಡನಿಗೆ ಜೊರ್ಜ್ ಫೊಕ್ಸನೆಂಬ ಮಗನು ಹುಟ್ಟಿದನು. ಆ ಜಾಡನು ಪ್ರೆಸ್ಬುತೆರಿಯಾಲ ಸಭೆಯವನು; ಅವನ ಹೆಂಡತಿಯು ಒಳ್ಳೇ ಭಕ್ತಿವಂತಳು, ಇವಳ ಪೂರ್ವಿಕರು ರಕ್ತದ ಮೇರಿ ಎಂಬ ರಾಣಿಯ ಆಳ್ತನದಲ್ಲಿ[1] ತಮ್ಮ ಸೌವಾರ್ತಿಕ ವಿಶ್ವಾಸಕ್ಕಾಗಿ ರಕ್ತಸಾಕ್ಷಿಮರಣ ಪಟ್ಟಿದ್ದರು. ಆ ಜಾಡನು ತನ್ನ ಮಗನನ್ನು ಮೊಚ್ಚೆಯ ಕೆಲಸ ಕಲಿಸುವದಕ್ಕೋಸ್ಕರ ನೊತ್ತಿಂಗ್ಹಮು ಪಟ್ಣದಲ್ಲಿ ಇಂಥಾ ಕೆಲಸದವನೊಬ್ಬನ ಬಳಿಯಲ್ಲಿಟ್ಟನು. ಇವನು ಆ ಕೆಲಸ ಮಾತ್ರವಲ್ಲದೆ ಕುರಿಯ ಮತ್ತು ಉಣ್ಣೆಯ ವ್ಯಾಪಾರ ಸಹ ಮಾಡುತ್ತಿರುವದರಿಂದ ಜೊರ್ಜ್ ಫೊಕ್ಸನನ್ನು ಅನೇಕ ಸರ್ತಿ ತನ್ನ ಕುರಿಗಳನ್ನು ಮೇಯಿಸುವದಕ್ಕೂ ಕಳುಹಿಸುವನು. ಇಂಥಾ ವೇಳೆಯಲ್ಲಿ ಫೊಕ್ಸನಿಗೆ ಮತದ ವಿಷಯವಾದ ಆಲೋಚನೆಗಳನ್ನು ಹಾಕಿ ಕೊಳ್ಳುವದಕ್ಕೆ ಬಹಳ ಸಂದರ್ಭವಾಯಿತು. ಅಂದಾದರೂ ದೇವವಾಕ್ಯದ ಧ್ಯಾನವೇ ಅವನಲ್ಲಿ ಹೆಚ್ಚು; ಅವನು ಸುಮಾರು ಅದೆಲ್ಲವನ್ನು ಬಾಯಿಪಾಠ ಮಾಡಿ ಕೊಂಡನು. ಆದ್ದರಿಂದ ಹಿಂದಗಡೆ ಅವನ ಸ್ನೇಹಿತರು, ಸಮಸ್ತ ದೇವವಾಗ್ಗ್ರಂಥಗಳು ಒಮ್ಮೆ ಕಳೆದು ಹೋದರೂ ಫೊಕ್ಸನ ಬಾಯ್ಯಿಂದ ದೇವವಾಕ್ಯವನ್ನು ಪುನಃ ಸಂಪಾದಿಸಿ ಕೊಳ್ಳ ಬಹುದೆಂದು, ಹೇಳುತ್ತಿರುವರು. ಫೊಕ್ಸನು 19ವರುಷದವನಾದಂದು—ಲೋಕದ ಡಂಭಾಚಾರವೂ ಸಕಲ ಮಾನುಷ ಪ್ರಯತ್ನವೂ ಅನರ್ಥಕವಾದದ್ದು; ಅಂಥಾದ್ದು ಕಾಣುವವರನ್ನಗಲಿ, ಈಗ ನಿನ್ನ ಯೌವನದಲ್ಲಿಯೂ ನಿನ್ನನ್ನು ಕ್ರಿಸ್ತನಾಥನಿಗೆ ಪೂರಾ ವಂದಿಸಿ ಕೊಡೆಂದು, ಹೇಳುವ ದಿವ್ಯ ಶಬ್ದವು ತನಗೆ ಕೇಳಿಸಿದಂತಾಯಿತು. ಆಗಿನಿಂದ ಅವನು ಸ್ವಂತ ನಿಷ್ಕಲಂಕವಾದ ಜೀವಿಕೆಯ ಸಿದ್ಧಿಗೋಸ್ಕರ ಹೊಸ ಕೌತುಕ ಪಟ್ಟಿದ್ದಲ್ಲದೆ ತನ್ನ ಸುತ್ತ ಮುತ್ತಲಿನ ಸಂಸಾರವೆಲ್ಲವೂ ಅವನಿಗೆ ಮತ್ತಷ್ಟು ಕೆಟ್ಟದ್ದಾಗಿ ತೋರಲಿಕ್ಕೆ ಹತ್ತಿತು; ತಾನು ಲೋಕಕ್ಕೆ ಮಾನಸಾಂತರಪ್ರಸಂಗ ಮಾಡಬೇಕೆಂದು, ಭಾವಿಸಿ ಕೊಳ್ಳುವವನಾದನು. ಅದು ಕಾರಣ ತನ್ನನ್ನು ಅಂಥಾ ಕಾರ್ಯಕ್ಕೆ ಸರಿ ಗೊಳ್ಳಿಸುವದಕ್ಕೋಸ್ಕರ ಮೊಚ್ಚೆಗೆಲಸ ಬಿಟ್ಟು ಬಿಟ್ಟು, ಹೆಚ್ಚಾಗಿ ತನ್ನ ಯಜಮಾನನ ಕುರಿಹಿಂಡು ಸಮೇತವಾಗಿ ಕಾಡನ್ನು ತಿರುಗುತ್ತಾ, ತನಗೆ ಅಲ್ಲಿ ಶಿಕ್ಕುವ ಬೇರು ಕಾಯಿಪಲ್ಯ ತಿಂದು ಜೀವಿಸುತ್ತಾ, ಬಹಳ ಸರ್ತಿ ಉಪವಾಸ ಸಹ ಮಾಡುತ್ತಾ, ಹಗಲಿರುಳು ಧ್ಯಾನದೊಳಿರುತ್ತಾ ಇದ್ದು, ಒಮ್ಮೆ ಪಿಶಾಚನು ತನಗೆ ಉಪದ್ರವ ಕೊಡುವ ಹಾಗೆ ಆದಾಗ ನೊತ್ತಿಂಗ್ಹಮು ಪಟ್ಣದ ಪ್ರಸಂಗಿಕೋದ್ಯೋಗಿಯ ಹತ್ತರ ಬುದ್ಧಿಯನ್ನೂ ಆದರವನ್ನೂ ಹುಡುಕಲು, ಇವನು ಹೊರ್ತಾಗಿ ಬೇರೆ ಅಂಥವರು ಸಹ ತನ್ನನ್ನು ಶಾಂತಿ ಪಡಿಸಲಸಮರ್ಥರಾದ ನಿಮಿತ್ತ ಯಾವತ್ತೂ

1) 478ನೇ ಪಾನು.

ಜನ ಸಭೋದ್ಯೋಗಿಗಳ ಮೇಲೆ ಬೇಸರುವವನಾಗಿ, ದೇವವಾಕ್ಯವಿಕ್ರಯಕರು! ಸಂಬಳ ತಿನ್ನುವವರು! ಎಂತ, ಹೇಳಿ, ಅವರನ್ನು ತೃಣೀಕರಿಸಲಿಕ್ಕೆ ಹತ್ತಿ, ಸತ್ಪ್ರಸಂಗ ನಡೆಯುವ ದೇವಾಲಯಗಳಿಗೂ ಹೋಗುವದು ತ್ಯಜಿಸಿ, ಕ್ರಿ. ಶ. 1648ನೇ ವರುಷ ಸುತ್ತ ಆ ಪ್ರಜಾಪರಸ್ಪರಯುದ್ಧದ ಕಾಲದಲ್ಲಿ ಮಾನಸಾಂತರಪ್ರಸಂಗಿ ಎಂಬಂತೆ ದೇಶದಲ್ಲಿ ಇತ್ತತ್ತು ಚರಿಸುವವನಾಗಿ, ಮುಖದಾಕ್ಷಿಣ್ಯವಿಲ್ಲದೆ ಎಲ್ಲಾ ಸ್ಥಿತಿಯ ಜನರಿಗೂ—ಅವರು ಎಪಿಸ್ಕೊಪಾಲರಾದರೇನು? ನೊನ್ಕೊನ್ಫೊರ್ಮಿಸ್ತರಾದರೇನು[1]?—ಅವರ ಹೀನ ನಡವಳಿಗಾಗಿ ಗದರಿಸಿ, ವಿಶೇಷವಾಗಿ ಸಭೋದ್ಯೋಗಿಗಳಿಗೆ ವಾಗ್ಬಾಣಗಳನ್ನೆಸೆಯುತ್ತಿರುವನು. ಅಪೊಸ್ತೊಲಿಕ ಕಾಲದ ನೀತಿದಶೆಯು ತಿರಿಗಿ ಬರ ಬೇಕು, ಸದ್ಯಕ್ಕೆ ಇರುವ ಆಚಾರಗಳೆಲ್ಲಾ ವಿಗ್ರಹಾರಾಧಕರಿಗೆ ಯೋಗ್ಯ, ಪ್ರಮಾಣವಿಡ ಬಾರದು[2], (ರಾಜ್ಯಮತದ) ಸಭೋದ್ಯೋಗಿಗಳಿಗೆ ದಶಾಂಶ ಸಲ್ಲಿಸುವದು ಪಿಶಾಚನ ನಿಯಮ, ಮಹಾ ವಿದ್ಯಾಶಾಲೆಗಳು (ಕ್ರೈಸ್ತ ಬೋಧನೆಯನ್ನು ಕುರಿತು) ಅಬದ್ಧಾರ್ಥದ ಗುಹೆಗಳು, ಅವನ್ನು ಮುಚ್ಚ ಬೇಕು, ಯಾರೂ ಯುದ್ಧಕ್ಕೆ ಹೋಗ ಬಾರದು[3], ಈ ಮುಂತಾದ್ದು ಅವನ ಪ್ರಸಂಗ. ಕ್ರಿ. ಶ. 1650ನೇ ವರುಷ 1ನೇ ಚಾರ್ಲ್ಸ್ ರಾಜನಿಗೆ[4] ಮರಣಾಜ್ಞೆಯಾದ ತರುವಾಯ ಅವನು ದೇವಾರಾಧನೆ ಆಗುವ ದೇವಾಲಯಗಳೊಳಗೆ ಸಹ ಹೊಕ್ಕು, ಪ್ರಸಂಗಿಕನ ವಾಗ್ನಿರೂಪಣವು ತನಗೊಪ್ಪದಿದ್ದರೆ ಅಲ್ಲಿಯೇ ದೊಡ್ಡ ಕೂಗಿನಿಂದ ಅದನ್ನಪಲಾಪಿಸುತ್ತಿರುವನು. ಈ ಕಡೆಯ ಸ್ವಭಾವಕ್ಕಾಗಿ ಅವನನ್ನು ಶೆರೆಯಲ್ಲಿಡಲು, ಅವನು ಅಲ್ಲಿ ಸಹ ಪ್ರಸಂಗ ಬಿಡದೆ, ಮೇಲ್ಗಾವಲಿಯವನನ್ನು ಅವನ ಮನೆತನದವರೆಲ್ಲರ ಸಮೇತ ಹೃತ್ಪರಿಣಾಮಕ್ಕೆ ತರ ಶಕ್ತನಾದನು. ತನಗೆ ಬಿಡುಗಡೆಯಾದ ಮೇಲೆಯೂ ಅವನು ತನ್ನ ನಡತೆಯಲ್ಲಿ ಒಂದಿಷ್ಟನ್ನಾದರೂ ಬದಲಾಯಿಸದೆ ಬರಲು, ಪ್ರಜೆಯು ಸಹ ಅವನಿಗೆ ಆಗಿಂದಾಗ ಕಂಡಾಬಟ್ಟೆ ಹೊಡೆದು, ಶಿಕ್ಷಿಸುವದಾಯಿತು. ಬಳಿಕ ಅವನು ಎಂದಿನಂತೆ—ಕದನವಾಡುವದು ಪಾಪ, ಆದ್ದರಿಂದ ತಾನು ಸಹ ದಂಡುಗಾರನಾಗಲೊಲ್ಲೆನೆಂದು, ಸರ್ಕಾರಕ್ಕೆ ವಿರೋಧಿಸುವ ಉದ್ದಿಶ್ಯ ತಿರಿಗಿ ಶೆರೆಮನೆಗೆ ಗುರಿಯಾದನು. ಇನ್ನು ಅದೇ ಕ್ರಿ. ಶ. 1650ನೇ ವರುಷ ಒಮ್ಮೆ ಒಬ್ಬ ನ್ಯಾಯಾಧಿಪತಿಯು ಅವನನ್ನು ವಿಚಾರಿಸುವ ಹೊತ್ತು ಫೊಕ್ಸನು, ಕರ್ತನ ವಾಕ್ಯಕ್ಕಾಗಿ ನಡುಗು! ಎಂತ, ಅವನಿಗೆ ಕೂಗಿ ಹೇಳಲು, ಇವನು—ಇಗೋ, ಆ ಕ್ವೇಕೆರನನ್ನು (ಅಂದರೆ ನಡುಗುವವನನ್ನು) ನೋಡಿರಿ! ಎಂದು, ನುಡಿದನು; ಅಂದಿನಿಂದ ಫೊಕ್ಸನ ಸಂಬಂಧಕರಿಗೆ ಕ್ವೇಕೆರರೆಂಬ ಅಡ್ಡಹೆಸರು ಬಂತು. ಆದರೆ ಅವರು ತಾವು ಸ್ನೇಹಿತರೆನ್ನಿಸಿ ಕೊಂಡರು. ಅವರ ಸಂಖ್ಯೆಯು ದಿನಾಲು ಹೆಚ್ಚುತ್ತಲಿತ್ತು; ಆಗಿಂದಾಗ ಫೊಕ್ಸ ಮೊದಲಾದ ಸ್ನೇ

1) 481ನೇ ಪಾನು. 2) 584ನೇ ಪಾನು. 3) 584ನೇ ಪಾನು. 4) 500ನೇ ಪಾನು.

ಹಿತರು ಜನರಲ್ಲಿ ದೇವರ ಭಯ ಹುಟ್ಟಿಸುವದಕ್ಕೋಸ್ಕರ ಬಹು ವಿಕಾರವಾದ ಉಪಾಯಗಳನ್ನು ಸಹ ಹಿಡು ಕೊಂಡರು. ಒಂದೆರಡು ನಿದರ್ಶನಗಳೇನೆಂದರೆ, ಕಡು ಶೀತವುಳ್ಳ ಹಿಮಕಾಲದಲ್ಲೊಮ್ಮೆ ಫೊಕ್ಸನು ಬರಿ ಗಾಲಾಗಿ ಲಿಚ್ಫೀಲ್ಡೆಂಬ ಪಟ್ಣದೊಳಗೆ ಓಡ್ಯಾಡಿ, ಅದಕ್ಕೆ ನಾಶನ ಒದಗುವ ಹಾಗಾಯಿತೆಂತ, ಸಾರಿದನು. ಅದಲ್ಲದೆ ಥೋಮ ಮಫೋರ್ರ್ದನೆಂಬವನು ಹೋತು ಕುರಿಗಳ ಚರ್ಮಗಳನ್ನು ಹೊದ್ದು ಕೊಂಡು, ಪ್ರವಾದಿಗಳದೆಂದು ತಾನು ನೆನಸಿ ಕೊಂಡ ಈ ಉಡಿಗೆಯೊಡನೆ ಪಟ್ಣ ಊರುಗಳನ್ನು ತಿರುಗುವಲ್ಲಿ ಅವವಕ್ಕೆ ದೇವರ ಶಿಕ್ಷೆಯ ಭಯ ತೋರಿಸಿದನು. ಅದು ವಿನಹ ಸೇರೆ ಗೋಲ್ಡ್‌ಸ್ಮಿಥ್ ಎಂಬ ಸ್ತ್ರೀಯು ತನ್ನ ಕೂದಲು ಕೆದರಿ, ತಲೆಯ ಮೇಲೆ ಮಣ್ಣು ಬೂದಿ ಹೊಯಿ ಕೊಂಡು, ಹುಚ್ಚಳೋಪಾದಿಯಲ್ಲಿ ಪಟ್ಣದ ಸಕಲ ಬಾಗಿಲು ಬೀದಿಗಳೊಳ ಹೋಗಿ, ಅದೇ ಪ್ರಕಾರದ ಪ್ರಸಂಗ ಮಾಡಿದಳು. ಅದು ಹೊರ್ತಾಗಿ ಸೊಲೋಮನ್ ಎಕ್ಲ್ಸನೆಂಬವನೊಬ್ಬ ಗಾಯಕನು ತನ್ನ ವಿದ್ಯೆಯ ವಾದ್ಯಸಾಹಿತ್ಯಗಳನ್ನೂ ಪುಸ್ತಕಗಳನ್ನೂ, ಪಿಶಾಚನವುಗಳೆಂತ, ಲೊಂದನಿನ ಸಂತೇ ಬೈಲಿನಲ್ಲಿ ಸುಟ್ಟು, ಫೊಕ್ಸನಿಗೆ ಮನ್ನಿಸುವ ಉದ್ದಿಶ್ಯ ಮೊಚ್ಚೆಗಾರನಾಗಿ, ಈ ಹೊಸ ವೃತ್ತಿಯ ಸಾಮಾನುಗಳನ್ನು ಆರಾಧನೆಯಾಗುವ ಒಂದು ದೇವಾಲಯದೊಳಗೆ ತಕ್ಕೊಂಡು ಹೋಗಿ, ಪ್ರಸಂಗಪೀಠದ್ದೊಂದು ಹಲಿಗೆಯಲ್ಲಿ ಕೂತು ಕೊಂಡು, ಮೊಚ್ಚೆ ಹೊಲಿಯುವವನಾದನು; ತರುವಾಯ ನೆರೆದ ಪ್ರಜೆಯು ಅವನನ್ನು ಹೊರಡಿಸಿ, ಶೆರೆಯಲ್ಲಿಡ ಬೇಕಾಯಿತು. ಅದಲ್ಲದೆ ಕ್ವೇಕೆರರು ಪಾರ್ಲಿಮೆಂತಿನವರಿಗೂ ಪ್ರಜಾರಾಜತ್ವದ ಪರಿಪಾಲಕನಾದ ಆ ಕ್ರೊಂವೆಲನಿಗೂ ಅಪಲಾಪಿಸಲಂಜಲಿಲ್ಲ.

ಫೊಕ್ಸನು ತಾನು ಇನ್ನು ಮುಂದೆ ಸಹ ಅನೇಕ ತರದ ಹಿಂಸೆಗೊಳ ಬಿದ್ದನು. ಒಂದಾನೊಂದು ದಿನ ಅವನನ್ನು ಹಿಡಿದು, ಲೊಂದನಿಗೆ ತಂದು, ಆ ಕ್ರೊಂವೆಲನ ಸಮಕ್ಷದಲ್ಲಿರಿಸಲು, ಇವನು ಅವನ ಭಕ್ತಿಗೆ ಸಲೆ ಮೆಚ್ಚಿ, ಮನ್ನಿಸಿ, ಅವನಿಗೆ ಬಿಡುಗಡೆ ಕೊಟ್ಟದ್ದಲ್ಲದೆ ತನ್ನ ಮಂದಿರದ ಭೋಜನಕ್ಕೂ ಕರೆದನು; ಆದರೆ ಫೊಕ್ಸನು—ಉಂಡಂತಾಯಿತು, ಕ್ಷಮಿಸ ಬೇಕೆಂತ, ವಂದಿಸಿ, ಹೋಗಿ ಬಿಟ್ಟನು. ತದನಂತರ, ಆ ಸ್ನೇಹಿತರನ್ನು ಇಂದಿನಾರಭ್ಯ ಯಾರೂ ತಂಟೆ ಪಡಿಸ ಬೇಡವೆಂತ, ಕ್ರೊಂವೆಲನಿಂದ ಆಜ್ಞೆ ಪ್ರಕಟವಾಯಿತು. ಈಚೆ 2ನೇ ಚಾರ್ಲ್ಸ ರಾಜನ[1] ಪಟ್ಟಾಭಿಷೇಕದ ಕಾಲದಲ್ಲಿ ಕ್ರಿ. ಶ. 1660ನೇ ಅಬ್ದ ಫೊಕ್ಸನು ತನ್ನ ಸ್ನೇಹಿತರ ಸಂಗಡ ಅವನಿಗೆ ವಿಧೇಯತ್ವಪ್ರಮಾಣವನ್ನಲ್ಲದೆ ಸುಪ್ರೇಮಾತಿನದನ್ನು[2] ಸಹ ಸಲ್ಲಿಸಲೂ ರಾಜ್ಯಸಭೋದ್ಯೋಗಿಗಳಿಗೆ ದಶಾಂಶವನ್ನು ಕೊಡಲೂ ತನ್ನ ಪ್ರಾರ್ಥನಾಸಮಾಗಮಗಳನ್ನು ನಿಲ್ಲಿಸಲೂ ಒಲ್ಲದ ಕಾರಣ ಅವನು ತಿರಿಗಿ ಬಂಧನದವನಾದನು. ಒಂದು

1) 585ನೇ ಪಾನು. 2) 453ನೇ ಪಾನು.

ವರ್ಷದಿತ್ತ ಮತ್ತೂ ಶೆರೆಯಿಂದ ವಿಮುಕ್ತನಾಗಿ, ಇಂಗ್ಲಂದಿನಿಂದ ಹೊರಟು ಹೋಗಿ, ಹೊಲ್ಲಂದಿನಲ್ಲಿಯೂ ಬಡಗು ಗೆರ್ಮಾನಿಯದಲ್ಲಿಯೂ ಪ್ರವರ್ತಿಸಿ, ತಿರಿಗಿ ಬಂದು, ಪುನಃ ಒಮ್ಮೆ ಬಂಧನಯುತನು, ಮಗುಳೊಮ್ಮೆ ಬಂಧನಹೀನನು ಆಗುತ್ತಿರಲು, ಅಧಿಕಾರಸ್ಥರು ಅವನ ಸ್ನೇಹಿತರ ಬದುಕನ್ನು ಮುಟ್ಟುಗೋಳು ಮಾಡುತ್ತಾ, ಶೆರೆಮನೆಗಳನ್ನು ಅವರಿಂದ ತುಂಬಿಸುತ್ತಾ ಇದ್ದರು. ಇಷ್ಟೆಲ್ಲವಾದರೂ ಕ್ವೇಕೆರರ ಮನಸ್ಸು ಬೇರೆಯಾಗದಿರಲಿಕ್ಕೆ, ಕ್ರಿ. ಶ. 1664ನೇ ಅಬ್ದ ರಾಜನು ಅನೇಕರನ್ನು ದೇಶನಿರ್ವಾಸಕ್ಕೆ ಗುರಿ ಮಾಡಿದನು. ಕಾಲಕ್ರಮೇಣ 3ನೇ ವಿಲ್ಲಿಯಮ ರಾಜನ ಮೂಲಕ ಕ್ರಿ. ಶ. 1689ನೇ ಅಬ್ದ ಸಕಲ ಶಾಖೆಯ ಕ್ರೈಸ್ತರಿಗೆ ಪೂರ್ಣ ಮತಾಚಾರಸ್ವಾತಂತ್ರ್ಯವು ದೊರೆಯಲು[1], ಕ್ವೇಕೆರರಿಗೆ ಸಹ ಅದು ಶಿಕ್ಕಿತು. ಆ ಮೇಲೆ ಫೊಕ್ಸನು ಲೊಂದನಿನ ಸಮಿಪದಲ್ಲಿ ಇನ್ನು ಮೂರು ವರುಷ ಶಾಂತಿಯೊಡನೆ ಬದುಕಿ, ತೀರಿದನು.

ಫೊಕ್ಸನಿಂದ ಕ್ರೈಸ್ತ ಸಜ್ಜೀವನಕ್ಕೆ ಬಹಳ ಆಸ್ಪದವಾದರೂ ಅವನ ಮತ್ತು ಇತರ ಜನ ಸ್ನೇಹಿತರೆಂಬವರ ರೀತಿಯು ಅಷ್ಟು ಚಲೋದಲ್ಲವೆಂಬದಕ್ಕೆ ವಿವೇಕಿಗಳೆಲ್ಲರೂ ಅಸ್ತುಬಡದಿರಲಾರರು. ಆದರೆ ಕ್ವೇಕೆರರ ರೀತಿಯನ್ನು ಹೆಚ್ಚು ಸರಿ ಗೊಳ್ಳಿಸುವವರು ಎದ್ದರು. ಇವರಲ್ಲಿ ವಿಲ್ಲಿಯಮ ಪೆನ್ನನೆಂಬವನು ಮುಖ್ಯನೊಬ್ಬನು. ಅವನು ದೊಡ್ಡ ಹೆಸರೂ ಐಶ್ವರ್ಯವೂ ಉಳ್ಳ ಒಬ್ಬ ನೌಸೇನಾಧಿಪನ ಏಕ ಕುಮಾರನು; ಕ್ರಿ. ಶ. 1644ನೇ ವರುಷ ಲೊಂದನಿನಲ್ಲಿ ಹುಟ್ಟಿದವನು. ಅವನು ಚಿಕ್ಕ ಪ್ರಾಯದಲ್ಲಿಯೂ ಧ್ಯಾನಪರನೂ ಭಕ್ತಿಚಿಂತಾಯುತನೂ ಆಗಿದ್ದು, ತನ್ನ 15ನೇ ವಯಸ್ಸಿನಲ್ಲಿ ಒಂದು ಮಹಾ ವಿದ್ಯಾಶಾಲೆಯಲ್ಲಿ ಶೇರಿ, ಅದೇ ಭಾವದಿಂದಿರಲು, ಅವನ ನಿಜಭಕ್ತಿಹೀನನಾದ ತಂದೆಯೊಲಿಯದೆ—ಅದು ಪಿತ್ತರೋಗಿಯ ಭಾವ, ಲೌಕಿಕ ಆಟಪಾಟಗಳಿಂದ ಅದನ್ನು ಪರಿಹರಿಸ್ಯೇನೆಂದು, ಅವನನ್ನು ವಿಷಯವಿನೋದ ತೀವಿದ ಫ್ರುಂಚಿನ ಪರೀಸು ಪಟ್ಣಕ್ಕೆ ಕಳುಹಿಸಿದನು. ವಿಲ್ಲಿಯಮ ಪೆನ್ನನು, ತಂದೆ ಬಯಸಿದಂತೆ, ಅಲ್ಲಿ ಲಘು ಮನಸ್ಸಿನವನಾದನಂತರ ತಂದೆಯು ಅವನನ್ನು ಹಿಂದಕ್ಕೆ ಕರ ತರಿಸಿ, ಮಿಗೆ ಹೊಗಳಿ, ಕುಮಾರ್ಗಿಯಾದ 2ನೇ ಚಾರ್ಲ್ಸನ[2] ಅರಮನೆಯಲ್ಲಿ ಶೇರಿಸಿ, ಅದರಲ್ಲಿಯ ವಿವಿಧ ಭೋಗದೊಳಗೆ ಮುಳುಗಿಸಿದನು. ಆದರೆ ಕುಮಾರನ ಆತ್ಮವು ಫಕ್ಕನೆ ಎಚ್ಚತ್ತಂತಾಯಿತು; ದೇವರ ಭಯವು ಅದರೊಳಗೆ ತಿರಿಗಿ ಉಕ್ಕೇರಲೆಸಗಿತು. ಆ ಸಮಯವೇ ತಂದೆಯು ಅವನನ್ನು ಐರ್ಲಂದಿಗೆ ಅಲ್ಲಿ ತನಗಿರುವ ದೊಡ್ಡ ಆಸ್ತಿಯ ಪರಾಮರ್ಶಕ್ಕಾಗಿ ಕಳುಹಿಸಿದಂದು ವಿಲ್ಲಿಯಮನು ಕೊರ್ಕು ಪಟ್ಣದಲ್ಲಿ ಮುಂಚೆ ತಾನೊ

1) 501ನೇ ಪಾನು. 2) 500ನೇ ಪಾನು.

ಮ್ಮೆ ಕಂಡಿದ್ದ ಕ್ವೇಕೆರನಾದವನೊಬ್ಬನ ಪ್ರಸಂಗ ಕೇಳುವದಕ್ಕೆ ಹೋಗಲು, ಇವನು—ಲೋಕವನ್ನು ಜಯಿಸುವಂಥಾದ್ದು ಒಂದು ವಿಶ್ವಾಸವು ಮನುಷ್ಯರಲ್ಲಿ ಇರುವದು, ಲೋಕದಿಂದ ಅಪಜಯ ಹೊಂದುವಂಥಾದ್ದು ಮತ್ತೊಂದು ಸಹ ಇರುವದೆಂದು, ಹೇಳುವ ಮಾತನ್ನು ವಿಷಯ ಮಾಡಿ, ಬಹು ಬಲದೊಡ ಗೂಡಿ ಪ್ರಸಂಗಿಸುವದರಿಂದ ವಿಲ್ಲಿಯಮನು ಹೃತ್ಪರಿಣತನಾಗಿ, ಪುನರ್ಜನ್ಮ ಪಟ್ಟ ಹಾಗಾಯಿತು. ಆ ದಿನ ಹಿಡಿದು, ಅವನು ಕ್ವೇಕೆರರ ಸಭೆ ಶೇರಿ, ಅದರ ಸುಖ ದುಃಖಗಳ ಪಾಲುಗಾರನಾದನು. ಕ್ವೇಕೆರರು ಇನ್ನೂ ಕಷ್ಟೋಪದ್ರವ ತಾಳುತ್ತಿರುವ ಕ್ರಿ. ಶ. 1667ನೇ ಅಬ್ದಕ್ಕೆ ಅದು ಸಂಭವಿಸಿತು. ಅವನ ತಂದೆಯು ಅದರ ಸುದ್ದಿ ಕೇಳಿ, ವ್ಯಸನೋನ್ಮತ್ತನಾಗಿ, ತತ್ಕ್ಷಣವೇ ಮಗನನ್ನು ಬರಿಸಿ, ಮೊದಲು ಫುಸಲಾಯಿಸುವಿಕೆಯಿಂದ ತನ್ನೊಳ ಪಡಿಸಿ ಕೊಳ್ಳಲಿಕ್ಕೆ ಪೇಚಾಡುವಲ್ಲಿ—ಬೇಕಾದರೆ ನಿನ್ನ ಮತಾಲೋಚನೆಗಳನ್ನು ಹಿಡು ಕೊಂಡಿರು, ಆದರೆ ನಾನು ಅರಮನೆಗೆ ನಿನ್ನನ್ನು ಕರ ಕೊಂಡು ಹೋಗಿ ಪ್ರವೇಶ ಮಾಡುವಲ್ಲಿ ಹ್ಯಾಗಾದರೂ ನಿನ್ನ ಟೋಪಿಯನ್ನು ತಲೆಯಿಂದ ತೆಗೆದವನಾಗಿ ತೋರು! ಎಂದು, ಬೇಡಿದನು. ಹ್ಯಾಗಂದರೆ ಮುಖದಾಕ್ಷಿಣ್ಯಾವರಿಯದ ಕ್ವೇಕೆರರು ಯಾರಿಗೂ ವಿಶೇಷವಾದ ಉಪಚಾರ ಗೈಯದೆ, ಯಾರ ಮುಂದೆಯೂ ಟೋಪಿಯನ್ನು ತಲೆಯಿಂದ ತೆಗೆಯದಿರುವರು. ವಿಲ್ಲಿಯಮನು ತನ್ನ ತಂದೆ ಹೇಳಿದ ವಿಷಯವನ್ನು ಪ್ರಾರ್ಥನೆಯಿಂದ ದೇವರೆಡೆಗೆ ತಂದು, ಪರ್ಯಾಲೋಚಿಸುವಾಗ ಅದಕ್ಕೆ ಸಮ್ಮತಿಸಲಾರದೆ ಉಳಿದನು. ಅದು ನಿಮಿತ್ತ ತಂದೆಯು ಅವನನ್ನು ಹೊರಗೆ ದೂಡಿ, ಜೀವನಕ್ಕೆ ಏನೂ ಕೊಡಲಿಲ್ಲ. ಆದಾಗ್ಯೂ ವಿಲ್ಲಿಯಮನು ಶಿಟ್ಟಾಗದೆ, ದೇವರ ಹೆಸರಿನಲ್ಲಿ ತನ್ನ ಹೀನಾವಸ್ಥೆಯನ್ನು ಆಶ್ಚರ್ಯಕರವಾದ ತಾಳ್ಮೆಯಿಂದ ಸಹಿಸುತ್ತಿರುವದಕ್ಕೆ ತಂದೆಯು ಅಂತಃಕರಣ ಗೊಂಡು, ಅವನನ್ನು ಮತ್ತೂ ಶೇರಿಸಿ, ಅವನ ಹೃದಯದ ಆಶಾರ್ಥದ ಪ್ರಕಾರ ಅವನನ್ನು ನಡೆಯಲೀಸಿದ್ದು ಸಹ ಆಯಿತು. ಆ ಮೇಲೆ ವಿಲ್ಲಿಯಮ ಪೆನ್ನನು ತಾನು ಸಹ ಪ್ರಸಂಗವೃತ್ತಿ ಗೈಯುವವನಾಗಿ, ಕ್ವೇಕೆರರ ಹಿತಕ್ಕಾಗಿ ಹಲವು ಭಕ್ತಿವರ್ಧಕ ಗ್ರಂಥಗಳನ್ನು ರಚಿಸಿ, ಅವರ ಮತದ ಕಡು ವಿಸ್ತಾರಕನಾದನು. ಇಂತಿರಲಾಗಿ, ಅವನು ಶೆರೆಮನೆಯ ಪಾಲಾದನು. ಆದರೂ ತನ್ನ ಬುದ್ಧಿಯುಕ್ತ ಚರ್ಚಾಪತ್ರಗಳ ದೆಸೆಯಿಂದ ತಡವಿಲ್ಲದೆ ತಿರಿಗಿ ವಿಮೋಚನ ಪಡೆದಾಗ ಕ್ರಿ. ಶ. 1672ನೇ ಅಬ್ದ ವಿವಾಹ ಮಾಡಿಕೊಂಡು, ಪ್ರಯಾಣಸ್ಥನಾಗಿ, ಹೊಲ್ಲಂದು ಗೆರ್ಮಾನಿಯ ಎಂಬೀ ಎರಡು ದೇಶಗಳನ್ನು ತಿರಿಗಿದನು.

ತನ್ಮಧ್ಯ ಕ್ರಿ. ಶ. 1670ನೇ ವರುಷ ತಂದೆಯು ಸತ್ತು ಅವನಿಗೆ ಪೂರ್ಣ ಮಮತೆಯಿಂದ ಬಿಟ್ಟು ಕೊಟ್ಟಿದ್ದ ಮಹಾ ಆಸ್ತಿಯಲ್ಲಿ ರಾಜಭಂಡಾರಕ್ಕೆ ಸಾಲವಾಗಿತ್ತಂ

ಥ ಬಹು ಹಣವು ಸಹ ಬಂದಿತ್ತು. ಆಗಲವನು ಸ್ವದೇಶದಲ್ಲಿ ಕ್ವೇಕೆರರಿಗೆ ಮತ ಸ್ವಾತಂತ್ರ್ಯ ಫಳಿಸಿ ಕೊಡುವದು ಸದ್ಯಕ್ಕೆ ಅಸಾಧ್ಯವೆಂದು, 2ನೇ ಚಾರ್ಲ್ಸ್ ರಾಜನ ಸನ್ನಿಧಿಯಲ್ಲಿ, ತನಗೆ ಆ ಸಾಲಕ್ಕೆ ಪ್ರತಿಯಾಗಿ ಉತ್ತರ ಅಮೆರಿಕದ ಪೂರ್ವ ತೀರದ್ದೊಂದು ಶೀಮೆಯನ್ನು ದಯೆ ಮಾಡ ಬೇಕೆಂದು, ಬಿನ್ನವಿಸಿದ್ದನ್ನು ಹೊಂದಿ, ಬೇರೊಬ್ಬರು ತೋರಿಸುವ ಸ್ವಾರ್ಥವಿಲ್ಲದೆ[1], ಪ್ಯೂರಿತನರಂತೆ—ಆ ಶೀಮೆಯ ನಿಜ ಮಾಲೀಕರು ತಾನಾಗಲಿ ಚಾರ್ಲ್ಸ್ ರಾಜನಾಗಲಿ ಅಲ್ಲ, ಇಂದಿಯಾನರೇ! ಎಂತ, ಆಲೋಚಿಸಿ, ಇವರಿಂದ ಅದನ್ನು ಸಮ ಕ್ರಯಕ್ಕೆ ತಿಕ್ಕೊಂಡು, ಬೇಕಾದ ಕ್ವೇಕೆರರಿಗೆ ಅದರಲ್ಲಿ ನೆಲೆ ಕೊಡುತ್ತೇನೆಂತ, ಪ್ರಕಟಿಸಿದಾಗ ಇವರಲ್ಲನೇಕರು ಒಕ್ಕಲು ತೆಗೆದು, ಹೋಗಿ, ಅಲ್ಲಿ ನೆಲಸಿ ಕೊಂಡರು. ಅದು ಹೊರ್ತಾಗಿ ಪೆನ್ನನು ತಾನು ಕ್ವೇಕೆರನಾಗಿದ್ದರೂ ಯಾರ ಮೇಲೆಯೂ ಅಸಹನಭಾವದವನಲ್ಲದದರಿಂದ, ಶೀಮೆಯ ನೀತಿಗೊಳಗಾಗಲಿಕ್ಕೂ ನೆರೆಯವರ ಸಂಗಡ ಸಮಾಧಾನವಾಗಿ ಇರಲಿಕ್ಕೂ ಮನಸ್ಸಿದ್ದು ದೇವರಿಗೆ ದೂಷಿಸದೆ ಅವನಿಗೆ ಭಯ ಪಟ್ಟು ತಮ್ಮ ಮತಕ್ಕೋಸ್ಕರ ಹಿಂಸಾಸಮಾಪನ್ನರಾದವರೆಲ್ಲರೂ ಕೂಡ ಆ ಶೀಮೆಯಲ್ಲಿ ಸ್ಥಳೀಕರಾಗುವದಕ್ಕೆ ಅಡ್ಡಿ ಏನೂ ಇಲ್ಲವೆಂದು, ವಾಗ್ದತ್ತ ಮಾಡಿದ ಕಾರಣ ಇತರ ಹೇರಳ ಜನರು ಸಹ, ನೀವು ಹಿಂದೆ ತಿಳು ಕೊಂಡಂತೆ[2], ಬೇರೆ ಬೇರೆ ರಾಜ್ಯಗಳಿಂದ ಪೆನ್ಸುಲ್ವಾನಿಯ ಅಂದರೆ ಪೆನ್ನನ ವನವೆಂಬ ಆ ಶೀಮೆಗಾಗಮಿಸಿದರು. ಆದರೆ ತಮ್ಮ ಮತಸ್ವಾತಂತ್ರ್ಯ ಸಂಪಾದಿಸಿ ಕೊಳ್ಳುವ ನಿಮಿತ್ತ ಸ್ವದೇಶದ ಸುಖಗಳನ್ನಾದರೂ ತೊಲಗುವಂಥವರು ಕೀಳರಾಗಿರುವದು ಅಪರೂಪವಾದ್ದರಿಂದ ಪೆನ್ನನ ಕ್ಷೇತ್ರವು ಅಂಥವರಿಂದ ವಿಲಂಬವಿಲ್ಲದೆ ಉತ್ಕೃಷ್ಟವಾಯಿತು; ಮಹಾ ಕಾನನವಿದ್ದಲ್ಲಿ ಹಸನಾದ ಭೂಮಿ ಶೋಭಿಸಲೆಸಗಿತು; ನಿವಾಸಿಗಳು ಧನಿಕರಾಗುತ್ತಾ ಬಂದರು. ಫಿಲದೆಲ್ಫೀಯ (ಅಂದರೆ ಸಹೋದರಪ್ರೀತಿ) ಎಂಬ ಪ್ರಧಾನಪಟ್ಣ ಕಟ್ಟಲಾಯಿತು.

ತಾನು ತನ್ನ ಶೀಮೆಯ ಹಿತಾಹಿತ ವಿಚಾರಿಸಿ ನೋಡುವದಕ್ಕೆ ಪೆನ್ನನು ಕ್ರಿ. ಶ. 1682ನೇ ವರುಷ ಅಲ್ಲಿಗೆ ಹೋದಾಗ ಅವನನ್ನು ಕಾಣುವ ಸಕಲ ನಿವಾಸಿಗಳೂ ಅತಿ ಹರ್ಷ ಗೊಂಡು, ತಮ್ಮ ತಂದೆ ಎಂಬಂತೆ ಅವನಿಗೆ ಮಾನ ಸಲ್ಲಿಸಿದರು. ದಿನ ಹೋಗುತ್ತಿರಲು, ಅವನು ಇಂಗ್ಲಂದಿಗೆ ತಿರುಗಿ, ಕ್ರಿ. ಶ. 1687ನೇ ವರುಷ 2ನೇ ಜೇಂಸ ರಾಜನ ಇಂದಲ್ಜೆನ್ಸ್ ಅಕ್ತು ಎಂಬ ಆ ನಿರ್ಣಯದ[3] ಮೂಲಕ ಕ್ವೇಕೆರರ ಸಭೆಗೆ ರಾಜಾಶ್ರಯ ಫಳಿಸಿ ಕೊಟ್ಟು, 20 ವರುಷದಿತ್ತ ಲೊಂದನಿನಲ್ಲಿ ಮನಃಶಾಂತಿಯೊಡನೆ ಮಡಿದನು.

ಕ್ವೇಕೆರರ ಮತದರ್ಶನವನ್ನು ಚಂದವಾಗಿ ಕಟ್ಟಿ ವಿವರಿಸಿದವನು ರೊಬರ್ತ್

1) 579, 580ನೇ ಪಾನು. 2) 579ನೇ ಪಾನು. 3) 585ನೇ ಪಾನು.

ಬಾರ್ಕ್ಲೇ ಎಂಬ ಸ್ಕೋತ ಪಂಡಿತನು. ಅವರು ಅಪೊಸ್ತೊಲಿಕ ವಿಶ್ವಾಸಪ್ರಮಾಣವೆಂಬದನ್ನು ನಂಬಿ ಕೊಳ್ಳುತ್ತಾರೆ, ದೇವವಾಕ್ಯವೆಂಬ ಗ್ರಂಥವನ್ನು ಪರಿಶುದ್ಧವೆಂದೆಣಿಸಿ, ಸನ್ಮಾನಿಸುತ್ತಾರೆ; ಆದರೂ ಅವರು ಕಂಠೋಕ್ತ ಸತ್ಯದ ದ್ರವ್ಯಗಳನ್ನು, ಬಹಿಜ್ಯೋರ್ತಿ ಎಂತ, ಸ್ವಲ್ಪ ಉಪೇಕ್ಷಿಸಿ, ದೇವವಾಗ್ಗ್ರಂಥದ ಮೇಲಿನ ಸ್ವಧ್ಯಾನಾರ್ಥವನ್ನು, ಅಂತಜ್ಯೋರ್ತಿ ಎಂತ, ಹೆಚ್ಚು ಅಪೇಕ್ಷಿಸುವ ವಿಷಯದಲ್ಲಿ ಸೌವಾರ್ತಿಕ ಮಾರ್ಗವನ್ನು ಬಿಟ್ಟು, ಅಡ್ಡಮಾರ್ಗಕ್ಕೆ ಹಾದು ಹೋದರು. ಹ್ಯಾಗಂದರೆ, ಅವರು—ಕ್ರಿಸ್ತನನ್ನು ಕುರಿತು ಲಿಖಿತವಾದದು ಕ್ರೈಸ್ತರ ಅಂತರ್ಭಾವದೊಳಗೆ ಆಗ ತಕ್ಕದ್ದಕ್ಕೆ ವಿಶೇಷವಾಗಿ ಒಂದು ಉಪಮೆ ಮಾತ್ರ; ಅದಲ್ಲದೆ ಅದೃಶ್ಯವಾದ ಆತ್ಮೀಯ ಸ್ನಾನವೂ ರಾತ್ರಿಭೋಜನವೂ ಮಾತ್ರ ಅತ್ಯವಶ್ಯವೆಂದು, ಚರ್ಚಿಸಿ, ಮಹಾ ಕೃಪಾಕರಣಗಳಾದ ಸ್ನಾನ ರಾತ್ರಿಭೋಜನಗಳ ಆಚಾರವನ್ನು ಬಯಸುವದಿಲ್ಲ. ಹೀಗಿರಲಾಗಿ, ಕ್ವೇಕೆರರು ನಿತ್ಯ ಕತೇಖೂಮೆನರೆಂತ[1], ಹೇಳ ಬಹುದು. ಮಹಾ ವಿದ್ಯಾಶಾಲೆಗಳಿಗೆ ಹೋಗಿ ದೇವಜ್ಞಾನದರ್ಶನವನ್ನಭ್ಯಾಸಿಸುವ ಪದ್ಧತಿಯೂ ಸಭೋದ್ಯೋಗಿಧರ್ಮವೂ ಅವರಲ್ಲಿ ಇಲ್ಲ; ಮೊಂತಾನಿಯಾನರಂತೆ[2] ಅವರು ಸಹ, ಪರಿಶುದ್ಧಾತ್ಮದ ವರಗಳು ಸಭೋದ್ಯೋಗಿಗಳೆಂಬವರಿಗೆ ವಿಶೇಷ ಪರಿಯಾಗಿ ಶಿಕ್ಕುವದಿಲ್ಲವೆಂತ, ಹೇಳುತ್ತಾರೆ; ತಮ್ಮ ದೇವಾರಾಧನೆಗಳಲ್ಲಿ ಒಬ್ಬನ ಮೇಲಾಗಲಿ ಒಬ್ಬಳ ಮೇಲಾಗಲಿ ಪರಿಶುದ್ಧಾತ್ಮವು ಇಳಿದು ಬಂದ ಹಾಗಾಗುವ ತನಕ ಎಲ್ಲರೂ ಮೌನರಾಗಿರುವರು. ಸೇನಾಸೇವೆಯನ್ನೂ ಯಾವದೊಂದು ಪ್ರಮಾಣವನ್ನೂ ಮಾಡಲೊಲ್ಲರು; ಅಧಿಕಾರಸ್ಥರಿಗೆ ತೆರಿಗೆ ತೆರುವ ಮನಸ್ಸು ತಮಗಿರದ ಕಾರಣ ಅದನ್ನು ತಮ್ಮ ಕೈಯಿಂದ ಕೊಡರು, ಆದರೆ ಎತ್ತಿ ಕೊಳ್ಳಲಿಕ್ಕೆ ಬಂದವರು ಅದನ್ನು ಸ್ವಂತ ಕೈ ಪ್ರಯೋಗಿಸಿ ಕಸು ಕೊಂಡಂತಾಗುವಲ್ಲಿ ಏನೂ ಅಭ್ಯಂತರ ಗೈಯರು. ಅವರು—ಸರ್ವ ಮನುಷ್ಯರೊಳಗೆ ದಿವ್ಯ ಜ್ಯೋತಿಯು ವಸ್ತಿಯಾಗಿದೆ; ಅದು ನಿಮಿತ್ಯವಾಗಿ ಸರ್ವರಿಗೂ ಅದೇ ಮಾನವನ್ನೂ ಅದೇ ಹೃದ್ಯ ಪ್ರೀತಿಯನ್ನೂ ತೋರಿಸುತ್ತಾ, ಒಬ್ಬನಿಗೂ ಮುಖಸ್ತೋತ್ರವನ್ನಾಗಲಿ ಮುಖನಿಂದೆಯನ್ನಾಗಲಿ ಮಾಡದಿರುತ್ತಾ ಇರ ಬೇಕೆಂತ, ಹೇಳಿ, ಬಹಿರ್ವಂದನೆಗಾಗಿ ಯಾರ ಮುಂದೆಯೂ ಟೋಪಿಯನ್ನು ತಲೆಯಿಂದ ತೆಗೆಯದೆ, ಮುಖದಾಕ್ಷಿಣ್ಯವಿಲ್ಲದೆ ಸರ್ವರನ್ನೂ, ರಾಜರನ್ನು ಸಹ, ನೀವೆಂತಾಗಲಿ ತಾವೆಂತಾಗಲಿ ಅಲ್ಲ, ನೀನೆಂತಲೇ, ಮಾತಾಡಿಸುತ್ತಾ ಇರುವರು.

ಇಂಥಾ ಆಶ್ಚರ್ಯಗಳು ಈಗಿನ ಕ್ವೇಕೆರರಲ್ಲೂ ಹೆಚ್ಚು ಕಡಿಮೆಯಾಗಿ ಉಳಿದು ಇದ್ದಾಗ್ಯೂ ಅವರು ಕ್ರೈಸ್ತ ಸಜ್ಜೀವನದ ನಿಜ ಪ್ರವರ್ಧಕರಾಗಿರುತ್ತಿದ್ದದು

1) 96ನೇ ಪಾನು. 2) 147; 585, 590ನೇ ಪಾನು.

ನಿಶ್ಚಯವೇ! ಕೃಚ್ಛ್ರಾನ್ವಿತರಿಗೆ ಮಾಡುತ್ತಿರುವ ಪೋಷಣದಿಂದ ವಿಶೇಷ ಕೀರ್ತಿ ಗೊಂಡಿದ್ದಾರೆ; ಅವರ ಕಾರ್ಯಶೀಲತ್ವದ ಸಲುವಾಗಿ ಅವರಲ್ಲಿ ಬಡವರೂ ಭಿಕ್ಷಕರೂ ಇರುವದಿಲ್ಲ; ತಾವು ಉಡಿಗೆ ತೊಡಿಗೆ ಆಟ ಊಟ ಮುಂತಾದ್ದರಲ್ಲಿ ಕಾಣಿಸುತ್ತಿರುವ ಸಾಮಾನ್ಯ ಭಾವದ ವಿಷಯ ಬೇರೊಬ್ಬರಿಗೆ ಒಳ್ಳೇ ಮಾದರಿ ಎನ್ನಿಸುತ್ತಾರೆ; ವಚನಭಂಗವು ಅವರಲ್ಲಿ ಬಹಳ ಅಪರೂಪ.

## 71. ಜೊನ್ ವೆಸ್ಲಿ.

ಗೆರ್ಮಾನಿಯದಲ್ಲಿ ಹೆರ್ನ್ಹೂತಿನವರು ಮುಂತಾದ ಪಿಯೆತಿಸ್ತರೂ ಇಂಗ್ಲಂದಿನಲ್ಲಿ ಪ್ಯೂರಿತನರೂ ಬಪ್ತಿಸ್ತರೂ ಕ್ವೇಕೆರರೂ ಎದ್ದು, ಅಲ್ಲಲ್ಲಿಯ ರಾಜ್ಯಮತಾವಲಂಬಿಗಳೊಳಗಿನ ಕ್ರೈಸ್ತ ಸಜ್ಜೀವನವನ್ನು ಸಾಕಿ ಹೆಚ್ಚಿಸುವವರಾದರೆಂಬದು ಹಿಂದೆ ಗೊತ್ತಾಯಿತಲ್ಲ? ಈಚೆ ಅದೇ ಮಂಗಳ ಅಭಿಪ್ರಾಯದಿಂದುದ್ಭವಿಸಿ ಒಪ್ಪಿದವರು ಮೆಥೊದಿಸ್ತರೆಂತಲೂ ವೆಸ್ಲಿಯನರೆಂತಲೂ ಹೆಸರು ಬಂದ ಸೌವಾರ್ತಿಕ ಶಾಖೆಯವರು. ಇಂಗ್ಲಂದಿನಲ್ಲಿ ಸ್ವಭಾವಪ್ರಮಾಣಿಕರಾದ ಕೇವಲ ಪ್ರಕೃತಿವಾದಿಗಳೂ ದೈವವಾದಿಗಳೂ ಎಂಬಿವೆರಡು ತರದ ನಾಸ್ತಿಕರು[1] ಹುಟ್ಟಿ, ಆಢ್ಯ ಸ್ಥಿತಿಯವರಲ್ಲನೇಕರ ಆಸ್ತಿಕ್ಯ ಕೆಡಿಸಿ, ಸಾಧಾರಣ ಪ್ರಜೆಯ ಭಕ್ತಿ ಕುಂದಿಸುವದಕ್ಕೂ ಒದ್ದಾಟ ಗೈಯ ತೊಡಗಿದಂದೇ ಆ ಮೆಥೊದಿಸ್ತರು ತಮ್ಮ ಸುವೃತ್ತಿ ನಡಿಸುವವರಾದದು ದೇವರ ದಯಾಸಂಕಲ್ಪವೇ ಸರಿ.

ಹ್ಯಾಗಂದರೆ, ಇಂಗ್ಲಂದಿನ ಲಿಂಕನೆಂಬ ನಾಡಿನಲ್ಲಿ ಎಪ್ವೊರ್ಥೆಂಬ ಊರು ಅದೆ; ಇದರಲ್ಲಿ ಎಪಿಸ್ಕೊಪಾಲನಾದ ಒಬ್ಬ ಪ್ರಸಂಗೋದ್ಯೋಗಿಯಾದ ಸಮ್ಯುವೆಲ್ ವೆಸ್ಲಿ ಎಂಬವನಿಗೆ ಕ್ರಿ. ಶ. 1703ನೇ ವರುಷ ಜೊನ್ ಎಂಬ ಮಗನು ಜನಿಸಿದನು. ಈ ಜೊನ್ ವೆಸ್ಲಿಯು ತನ್ನ 6ನೇ ವಯಸ್ಸಿನಲ್ಲಿರುವಾಗ ಅವನ ತಂದೆಯ ಮನೆಗೆ ಕಿಚ್ಚು ಹಿಡಿಯಿತು. ಅದು ಧಗಧಗನೆ ಸುಟ್ಟು ಹೋಗಲು, ಹೆತ್ತವರು ಏಳು ಮಂದಿ ಮಕ್ಕಳನ್ನು ಪ್ರಯಾಸದಿಂದ ರಕ್ಷಿಸಿದ ಮೇಲೆ ಇನ್ನೊಬ್ಬನು ಒಳಗಿದ್ದಾನೆಂಬದು ತತ್ಕ್ಷಣದ ಗಲಿಬಿಲಿಯಿಂದ ತಿಳಿಯದೆ ಹೋಯಿತು. ಆದರೆ ತಂದೆಯು ಯಾರೋ ಕಿಚ್ಚಿನೊಳಗೆ ಸಂಕಟದಿಂದ ಕೂಗುವ ಶಬ್ದ ಕೇಳಿ, ತನ್ನ ಮಗನಾದ ಜೊನನೇ! ಎಂದು, ಅರಿತು, ಭಯಾರ್ತನಾಗಿ, ದೇವರನ್ನು ಬೇಡಿ ಕೊಂಡಿರಲು, ಒಬ್ಬ ಗೃಹಸ್ಥನು ಧೈರ್ಯ ಗೊಂಡು, ಹೋಗಿ, ಆ ಹುಡುಗನನ್ನು ಅಗ್ನೀ ಬಾಯಿ

1) 73ನೇ ಸಂಧಿ.

ಯೊಳಗಿಂದ ಕಸು ಕೊಂಡು, ಬಂದನು. ಜೊನ್ ವೆಸ್ಲಿಯು ತನಗೆ ಆ ಪರಿ ಆದ ರಕ್ಷಣವನ್ನು ಎಂದೂ ಮರೆಯದೆ, ದೇವರನ್ನು ಹೊಗಳುತ್ತಿರುವನು. ಅವನು ಬಾಲ್ಯದಲ್ಲಿಯಾದರೂ ಭಕ್ತಿಯುಕ್ತನಾದದರಿಂದ 7 ವರುಷ ಮಾತ್ರದವನಾದ ಅವನಿಗೆ ಸಹ ಪರಿಶುದ್ಧ ರಾತ್ರಿಭೋಜನದಲ್ಲಿ ಅವಕಾಶ ಕೊಟ್ಟರು. ತನ್ನ 17ನೇ ವಯಸ್ಸಿನಲ್ಲಿ ಅವನು ಒಕ್ಸ್ಫೋರ್ದಿನ ಮಹಾ ವಿದ್ಯಾಶಾಲೆಯಲ್ಲಿ ಅಭ್ಯಾಸಿಸುವವನಾಗಿ, 6 ವರುಷ ಹೋದ ತರುವಾಯ ಅವನಿಗೆ ಎಪಿಸ್ಕೊಪಾಲ ರಾಜ್ಯಸಭೆಯಲ್ಲಿ ಪ್ರೀಸ್ತನಾಗುವದಕ್ಕೆ ಮೊದಲಿನ ಉದ್ಯೋಗಪ್ರತಿಷ್ಠೆ ಮಾಡಿದರು. ಸುಮಾರು ಇದೇ ಸಮಯ ಚಾರ್ಲ್ಸನೆಂಬ ಅವನ ತಮ್ಮನು ಅಲ್ಲಿಗೆ ಬಂದು, ವಿದ್ಯಾರ್ಥಿಯಾದನು. ಬಳಿಕ ಕ್ರಿ. ಶ. 1729ನೇ ವರುಷ ಜೊನ್ ವೆಸ್ಲಿಯು ತನ್ನ ತಮ್ಮನ ಮತ್ತು ಬೇರೆ ಕೆಲವರು ವಿದ್ಯಾರ್ಥಿಗಳ ಸಹಿತ ಭಕ್ತಿಯುಕ್ತವಾದ್ದೊಂದು ಸಮಾಜ ನಿರ್ಮಿಸಿದನು; ಅದಕ್ಕೆ ಶೇರಿದವರೊಟ್ಟುಗೂಡಿ ದೇವವಾಕ್ಯವನ್ನೋದುತ್ತಾ ಪ್ರಾರ್ಥಿಸುತ್ತಾ ಇರುವದಲ್ಲದೆ ಶೆರೆಯವರ ಮತ್ತು ಬಡವರ ಮತ್ತು ರೋಗಿಗಳ ಬಳಿಗೆ ಹೋಗಿ, ಅವರವರಿಗೆ ಆರೈಕೆ ಮಾಡಿ, ದೇವವಾಕ್ಯ ಮುಂತಾದ ಒಳ್ಳೇ ಗ್ರಂಥಗಳನ್ನು ಓದಲಿಕ್ಕೆ ಕೊಡುತ್ತಾ ಇದ್ದರು. ಅದು ವಿನಹ ಅವರು ಕಠಿಣ ಶರೀರದಂಡನವನ್ನು ಕೂಡ ಕೈಕೊಳ್ಳುವವರಾದರು; ಇದರಿಂದ ಅವರಲ್ಲೊಬ್ಬನು ಮೃತನಾದದ್ದು ಸಹ ಕಂಡು ಬಂತು. ಇಷ್ಟರಲ್ಲಿ ಅವಿಶ್ವಾಸಿಗಳೂ ಅಲ್ಪ ತರದ ವಿಶ್ವಾಸಿಗಳೂ ಅವರಿಗೆ ಕ್ರಿಸ್ತನ ಮೇಲಿರುವ ಪ್ರೀತಿಗಾಗಿ ಪರಿಹಾಸ ಗೈಯುತ್ತಿದ್ದು, ಕ್ರೈಸ್ತ ಜೀವಿಕೆಯಲ್ಲಿ ಎಂಥಾ ವಿಪರೀತ ಕ್ರಮದವರೆಂತ, ಹೇಳಿ, ಅವರಿಗೆ, ಮೆಥೊದಿಸ್ತರು ಅಂದರೆ ಕ್ರಮಾನುಸಾರಿಕರೆಂತ, ಉಪನಾಮ ಹಚ್ಚಿದರು. ಆ ಸಮಾಜದವರ ಲೆಖ್ಖವು ಹೆಚ್ಚುತ್ತಿರುವಲ್ಲಿ ಕ್ರಿ. ಶ. 1732ನೇ ವರುಷ ಜೊರ್ಜ್ ಹ್ವಿತ್ಫೀಲ್ದನೆಂಬ ವಿದ್ಯಾರ್ಥಿಯು ಸಹ ಅದಕ್ಕೆ ಕೂಡಿ ಕೊಂಡನು; ಇವನು ಒಬ್ಬ ದ್ರಾಕ್ಷಾರಸವಿಕ್ರಯಸ್ಥನ ಮಗನಾಗಿದ್ದು, ಮೊದಲು ಪಟಿಂಗತನದಲ್ಲಿ ಹೊರಳಾಡಿ, ಕಾಲಗತಿಯಲ್ಲಿ ಮಾನಸಾಂತರದವನಾಗಿ, ವಿದ್ಯಾಶಾಲೆಗೆ ಬಂದು, ಇನ್ನು ಮುಂದೆ ಕ್ರಿಸ್ತ ಕರ್ತನ ಏಕಾರ್ಥ ಸೇವೆ ಮಾಡ ಬಲ್ಲವನಾಗುವ ಹಾಗೆ ದೇವಜ್ಞಾನದರ್ಶನ ಕಲಿಯುವಂಥವನು.

ತನ್ಮಧ್ಯ ಎಪಿಸ್ಕೊಪಾಲರು ಪ್ರೆಸ್ಬುತೆರಿಯಾಲರು ಕೊನ್ಗಿಸ್ತೋರಿಯಾಲರು ಮುಂತಾದ ಸೌವಾರ್ತಿಕರಲ್ಲನೇಕರು ತಮಗೊದಗುವ ಕಾಲಾನುಸಾರವಾದ ಉಪದ್ರವದಿಂದ ಪ್ರೇರಿತರಾಗಿ, ಉತ್ತರ ಅಮೆರಿಕದಲ್ಲಿ ಬಂದು, ನೆಲೆ ಗೊಂಡಿದ್ದರಲ್ಲ[1)]? ಅವರು ಬಹುಶಃ ಉತ್ತಮ ತರದ ಕ್ರೈಸ್ತರೇ. ಈಗಿನಂತೆ ಆಗ ಭಕ್ತಾಭಕ್ತ ಪ್ರಜೆಯವರು ಮಿಲಿತರಾಗಿ ಅಲ್ಲಿಗೆ ಹೋಗಿ ನಿವಾಸಿಗಳಾಗುವ ಪದ್ಧತಿಯು ಪ್ರಬಲವಾ

1) 579, 591ನೇ ಪಾನು.

ಗಿದ್ದಿಲ್ಲ. ಅಲ್ಲಿಯ ಗೆಯೋರ್ಗಿಯವೆಂಬ ಪ್ರದೇಶದಲ್ಲಿ ಸಹ ಅಂಥಾ ಸತ್ಕ್ರೈಸ್ತರದೊಂದು ನೆಲೆಯಾಗಿತ್ತು; ಇವರು ಕ್ರಿ. ಶ. 1735ನೇ ವರುಷ, ತಮಗೆ ಒಳ್ಳೇ ಪ್ರಸಂಗಿಕರು ಬೇಕೆಂತ, ಹೇಳುವ ಅಪೇಕ್ಷೆಯಿಂದ ಜೊನ್ ವೆಸ್ಲಿಯನ್ನೂ ಅವನ ತಮ್ಮನನ್ನೂ ತಮ್ಮ ಬಳಿಗೆ ಬರಲಿಕ್ಕೆ ಹೇಳಿ ಕಳುಹಿಸಿದಾಗ ಅವರಿಬ್ಬರೂ ಒಡಂಬಟ್ಟು, ಹತ್ತಿದ ಹಡಗದಲ್ಲಿ ಅಲ್ಲಿಗೆಯೇ 25 ಮಂದಿ ಹೆರ್ನ್ಹೂತಿನವರ ಸಂಗಡ ಹೋಗುವ ಆ ದಾವೀದ ನಿಶ್ಮನನನ್ನು[1] ಕಂಡರು. ಪ್ರಯಾಣದಲ್ಲಿ ಹಲವು ಸಾರಿ ಬಿರುಘಾಳಿ ಬೀಸಿ, ನೌನಷ್ಟವೊದಗಿಸುವ ಹಾಗಿರುವೆಡೆ ಜೊನ್ ವೆಸ್ಲಿಗೆ ಮರಣದ ಭಯವು ಹಿಡಿಯಿತು; ಅದು ಕಾರಣ ಅವನು, ತಾನು ಸಾಯಲಿಕ್ಕೆ ಸಿದ್ಧ ಮಾಡಲಿಲ್ಲವೆಂದು, ತಿಳುಕೊಂಡನು. ಅಷ್ಟರೊಳಗೆ ಆ ಗೆರ್ಮಾನರು ಕಿಂಚಿತ್ತೂ ಭೀತಿಗೊಳ್ಳದ್ದಕ್ಕಾಗಿ ಅವನು ಬಹಳ ಆಶ್ಚರ್ಯ ಪಟ್ಟು, ಇದರ ವಿಷಯ ಬರೆದ ಕೆಲವು ಮಾತುಗಳೇನಂದರೆ—ಒಂದಾನೊಂದು ದಿನದಲ್ಲಿ ಆ ಸಹೋದರಸಭ್ಯರು ದೇವಾರಾಧನೆಗೆ ನೆರೆದು, ದಾವೀದನದೊಂದು ಕೀರ್ತನೆ ಹಾಡುವದನ್ನಾರಂಭಿಸಿದಾಗಲೇ ಸಮುದ್ರದ ಥೆರೆಗಳು ನಮ್ಮ ಹಡಗದ ಮೇಲೆ ಬಿದ್ದು, ಮುಖ್ಯ ಕೂವೇ ಮರ ಮುರಿದು, ರಾಶಿರಾಶಿಯಾಗಿ ಹಡಗದೊಳಗೆ ತುಂಬಲು, ನಾವು ಸಮುದ್ರಗ್ರಸ್ತರಾಗುವಂತೆ ತೋರಿತು. ಅಂದು ಇಂಗ್ಲಿಷರಾದ ನಮ್ಮಲ್ಲಿ ಭಯದ ಮಹಾ ಬೊಬ್ಬೆ ಹುಟ್ಟುವಲ್ಲಿ ಆ ಗೆರ್ಮಾನರು ಎಂತೂ ಶಾಂತಿ ತಪ್ಪದೆ ಕೀರ್ತನೆ ಹಾಡುತ್ತಾ ಉಳಿದರು. ವಿಘ್ನವು ತೀರಿದನಂತರ ನಾನು ಆ ಸಹೋದರಸಭ್ಯನೊಬ್ಬನನ್ನು ಮಾತಾಡಿಸಿ, ನಿಮ್ಮಲ್ಲೊಬ್ಬನೂ ಅಂಜಲಿಲ್ಲವೋ? ಎಂತ, ಕೇಳಿದ್ದಕ್ಕೆ ಅವನು—ಇಲ್ಲ! ದೇವರಿಗೆ ಸ್ತೋತ್ರವಾಗಲಿ! ಎಂತ, ಉತ್ತರ ಕೊಟ್ಟನು. ಬಳಿಕ ನಾನು, ನಿಮ್ಮ ಹೆಂಡರೂ ಮಕ್ಕಳೂ ಇವರಾದರೂ ಹೆದರಲಿಲ್ಲವೋ? ಎಂದು, ಪ್ರಶ್ನೆ ಮಾಡಲು, ಅವನು ಮೃದು ಸ್ವರದೊಡನೆ—ಇಲ್ಲ; ನಮ್ಮ ಹೆಂಡರೂ ಮಕ್ಕಳೂ ಮರಣಕ್ಕೆ ಭಯ ಗೊಳ್ಳುವಂಥವರಲ್ಲ! ಎಂದು, ನುಡಿದನು.—ಅಂಥಾ ಭಕ್ತಿದಾರ್ಢ್ಯದಿಂದ ಜೊನ್ ವೆಸ್ಲಿಗೆ ಬಹು ಆಶೀರ್ವಾದ ಬಂತು. ಗೆಯೋರ್ಗಿಯದಲ್ಲಿ ತನ್ನ ಉದ್ಯೋಗಕ್ಷೇತ್ರಕ್ಕೆ ಬಂದ ಮೇಲೆ ಅವನು ಕಠಿಣ ಸಭಾಶಿಕ್ಷೆ ಸ್ಥಾಪಿಸಿ, ಪರಿಶುದ್ಧವಾದ ನಿಜ ಸಭೆಯನ್ನು ನಿರ್ಮಿಸುವೆನೆಂತ[2], ನೆನಸಿ, ಸಭ್ಯರನ್ನು ಮೂರು ವರ್ಗಗಳಾಗಿ ವಿಭಾಗಿಸಿದನು; ಕೆಳಗಿನ ವರ್ಗದಲ್ಲಿ ಮಾನಸಾಂತರದ ಕುರುಹುಗಳಿಲ್ಲದವರನ್ನು, ನಿದ್ರಾಳುಗಳೆಂತ, ಇರಿಸಿ ಬಿಟ್ಟು, ಮಾನಸಾಂತರಕ್ಕಾಗಿ ನಿದ್ರೆ ತಿಳಿದಂತೆ ಆದವರನ್ನು ನಡುವರ್ಗದಲ್ಲಿಟ್ಟು, ಪೂರ್ಣ ಮಾನಸಾಂತರಕ್ಕೆ ಬಂದವರನ್ನು ಮೇಲಿನದಕ್ಕೆ ಹಾಕಿ, ಈ ವಿಷಯದಲ್ಲಿ ಒಂದು ವಿಧವಾಗಿ ಕ್ರಮಾನುಸಾರಿಕನಾದನು. ಅಷ್ಟರಲ್ಲಿ ಅವನು, ತಾ

1) 577ನೇ ಪಾನು. 2) 584ನೇ ಪಾನು ಸರಿ ನೋಡು.

ನು ಸಹ ಇನ್ನೂ ಮಾನಸಾಂತರದವನಾಗಲಿಲ್ಲವೆಂದು, ತಿಳುಕೊಂಡಿದ್ದನು. ಒಮ್ಮೆ ಒಬ್ಬ ಹೆರ್ನ್ಹೂತಿನವನು ಕ್ರೈಸ್ತ ವಿಶ್ವಾಸದ ಬಲದ ದೆಸೆಯಿಂದ ಅತಿರೇಕಾನಂದವನ್ನನುಭವಿಸುತ್ತಾ ಸಾಯುವದನ್ನು ಅವನು ನೋಡುವ ಹೊತ್ತು ಅಂಥ ತಿಳುವಿಕೆಯು ಅವನೊಳಗೆ ಬಹು ಹೆಚ್ಚಾಯಿತು; ತಾನು ಮರಣಭಯವನ್ನು ಗೆಲ್ಲಲಿಲ್ಲವೆಂಬದು ಅವನಿಗೆ ತಿರಿಗಿ ಸ್ಪಷ್ಟ ಕಂಡಿತು. ಹೀಗಿರುವ ಕಾಲಕ್ಕೆ ಮುಖ್ಯವಾಗಿ ಸಭೆಯ ಶ್ರೇಷ್ಠ ಸ್ಥಿತಿಯವರು ಅವನು ಮೃದುತ್ವ ಕಡಿಮೆ ಬಿದ್ದ ರೀತಿಯಿಂದ ಸಭಾಶಿಕ್ಷೆ ನಡಿಸುತ್ತಿರುವದಕ್ಕೋಸ್ಕರ ಬೇಸತ್ತು, ಅವನಿಗೆ ಉಪದ್ರವ ಕೊಡಲೆಸಗಿದಾಗ ಅವನು ಕ್ರಿ. ಶ. 1738ನೇ ವರುಷ ಇಂಗ್ಲಂದಿಗೆ ಮರಳಿದನು; ಅವನ ತಮ್ಮನು ಅವನಿಗೆ ಮುಂಚೆ ಅದೇ ಹೇತುವಾಗಿ ಅಲ್ಲಿಗೆ ಹಿಂದಿರುಗಿದ್ದನು.

ಲೊಂದನಿನಲ್ಲಿ ಅವನು ಹೆರ್ನ್ಹೂತಿನವರ ಸಹವಾಸ ಗೈಯುತ್ತಿದ್ದು, ಪೆತೆರ್ ಬೊಯಿಲೆರೆಂಬ ಅವರಲ್ಲೊಬ್ಬ ಸಭೋದ್ಯೋಗಿಯ ಸಂಗಡದ ಸಂಭಾಷಣೆಯ ಮೂಲಕ ಕ್ರೈಸ್ತ ಧರ್ಮದ ಮುಖ್ಯ ತಾತ್ಪರ್ಯದಲ್ಲಿ ಹೆಚ್ಚು ಶಿಕ್ಷಿತನಾಗುತ್ತಾ ಬರಲು, ಅದೇ ವರುಷ ಮೇ ತಿಂಗಳಿನ 24ನೇ ದಿನದ ರಾತ್ರಿಯಲ್ಲಿ ಅವನು ಪೌಲನು ರೋಮಾಯರಿಗೆ ಲೇಖಿಸಿದಂಥ ಪತ್ರಿಕೆಯನ್ನು ಕುರಿತು ಲುಥರನು ರಚಿಸಿದ ಪೀಠಿಕೆಯೋದಿದ ಮೇಲೆ, ತಾನು ಹೇಳಿದಂತೆ, 9 ಘಂಟೆ ಹೊಡೆದು 45 ನಿಮಿಷಗಳು ಕಳೆಯುವಾಗಲೇ ಮಾನಸಾಂತರ ಪಟ್ಟನು; ಆಗಲೇ ಅವನು—ತನ್ನ ಪಾಪ ಪರಿಹಾರವಾಯಿತು, ತಾನು ಪಾಪದ ಪ್ರಮಾಣದಿಂದ ವಿಮುಕ್ತನಾದೆನೆಂದು, ಮೊದಲಿನ ಸರ್ತಿ ಅರಿತು ಕೊಂಡನು. ಅದಾದ ಬಳಿಕ ಅವನು ಗೆರ್ಮಾನಿಯಕ್ಕೆ ತ್ಸಿಂತ್ಸೆಂದೊರ್ಫನ ಸನ್ನಿಧಿಗೆ ಹೋಗಿ, ಅವನ ಅಭಿಪ್ರಾಯಕ್ಕೆ ಪೂರಾ ಸಮ್ಮತಿಸದಿದ್ದರೂ ಅವನಿಂದ ತರ ತರದ ಉಪಶಮವನ್ನೂ ಜ್ಞಾನವನ್ನೂ ಪಡ ಕೊಂಡನು. ತ್ಸಿಂತ್ಸೆಂದೊರ್ಫನಲ್ಲಿ ಅಪೊಸ್ತಲನಾದ ಯೋಹಾನನ ಭಾವವು ಮೆರೆಯುವೆಡೆ ವೆಸ್ಲಿಯಲ್ಲಿ ಸ್ನಾನಿಕನಾದ ಯೋಹಾನನದೇ ಮೆರೆಯುತ್ತಿತ್ತೆಂಬಂತೆ ಅವರಿಬ್ಬರ ಭಾವದ ತಾರತಮ್ಯವನ್ನು ವರ್ಣಿಸ ಬಹುದು; ಸಹೋದರಸಭ್ಯರು ಯೇಸು ಕ್ರಿಸ್ತನ ರಕ್ತದಿಂದಾದ ವಿಮೋಚನೆಯ ಮೂಲಕ ಹುಟ್ಟುವ ಆನಂದಮಯ ಮನೋನುರಾಗವನ್ನು ತಮ್ಮ ಪ್ರಸಂಗಗಳಲ್ಲಿ ನಿದರ್ಶಿಸಿ, ಪಾಪಿಗಳ ಹೃತ್ತನ್ನು ಇಂಥಾ ಮೃದು ವಾಕ್ಯಗಳಿಂದ ಮಾನಸಾಂತರಕ್ಕೆ ಕರಗಿಸಿ ಎಳೆಯುವಲ್ಲಿ ವೆಸ್ಲಿಯವರು ಮುಖ್ಯವಾಗಿ ದೇವಕೋಪದ ಮತ್ತು ನಿತ್ಯ ನಾಶನದ ಭೀಕರ ವಿವರಣವನ್ನು ತಮ್ಮ ಪ್ರಸಂಗಗಳಿಗೆ ವಿಷಯ ಮಾಡಿ, ಹೀಗೆ ಪಾಪಿಗಳ ಹೃತ್ತನ್ನೊಡೆದು, ಕ್ರಿಸ್ತನಲ್ಲಿ ಆದ ವಿಮೋಚನೆಯ ಅಂಗೀಕಾರಕ್ಕೆ ನಡಿಸುವರು ಎಂಬಂತೆ. ಇನ್ನು ಅದೇ ವರುಷ ಸಪ್ತಂಬರ್ ತಿಂಗಳಲ್ಲಿ ವೆಸ್ಲಿಯು ಲೊಂದನಿಗೆ ತಿರಿಗಿ ಬಂದು, ಅಲ್ಲಿ ಹ್ವಿತ್ಫೀಲ್ಡನನ್ನು ಪುನರವಲೋಕಿ

ಸಿದನು; ಇವನು ಆ ಸಮಯ ಮಾನಸಾಂತರಕರ ಪ್ರಸಂಗಗಳಿಂದ ಪ್ರಜೆಯನ್ನೆಚ ರಿಸುತ್ತಿದ್ದನು. ಕೇಳುವವರು ಆಗಿಂದಾಗ ದೇವಕೋಪಾಗ್ನಿಯ ಭಯದಿಂದ ಕೈ ಕಾಲೆಳೆದವರಾಗಿ, ಬೊಬ್ಬಿಟ್ಟು, ನೆಲಕ್ಕೆ ಬಿದ್ದದ್ದು ಸಂಭವಿಸದಿರಲಿಲ್ಲ. ವೆಸ್ಲಿಯು ಅವನ ಹಾಗೆ ಪ್ರಸಂಗಿಸಲಾರಂಭಿಸಲು, ಉಚ್ಚಸ್ಥಾನದ ಎಪಿಸ್ಕೊಪಾಲ ಸಭೋ ದ್ಯೋಗಿಗಳು, ಮೀರಿದ ಕೆಲಸವೆಂದು, ನೆನಸಿ, ದೇವಾಲಯದೊಳಗೆ ಅಂಥಾದ್ದು ನಡಿಯ ಬಾರದೆಂದು, ವಿಧಿಸಿದರು. ಬಳಿಕ ವೆಸ್ಲಿಯು ಕ್ರಿ. ಶ. 1739ನೇ ವರುಷ ಬ್ರಿಸ್ತಲೆಂಬ ಪಟ್ಣದಲ್ಲಿ ತನ್ನದೊಂದು ದೇವಾಲಯ ಕಟ್ಟಿ ಕೊಂಡು, ಅದರಲ್ಲಿ ದೇವ ವಾಕ್ಯವನ್ನು ಬಲದೊಂದಿಗೆ ಸಾರಿದ್ದಲ್ಲದೆ ಹ್ವಿತ್ಫೀಲ್ದನ ಮತ್ತು ಇತರರಾದ ತನ್ನ ಗೆಳೆಯರ ಸಹಿತ ದೇಶವನ್ನು ತಿರಿಗ್ಯಾಡಿ, ಪಟ್ಣ ಊರುಗಳ ಬೈಲುಗಳಲ್ಲಿ ಸಹ ಪ್ರಸಂ ಗಿಸುವವನಾದನು; ಇಂಥಾ ವೇಳೆಯಲ್ಲಿ ಆಗಿಂದಾಗ 80,000 ಜನರಾದರೂ ಕೇಳು ವದಕ್ಕೆ ನೆರೆಯುವರು.

ಹ್ವಿತ್ಫೀಲ್ದನು ವೆಸ್ಲಿಗಿಂತ ಇನ್ನೂ ವಾಕ್ಚತುರನು; ಅವನು ಮಿಗು ಸಾಹಸ ಪ ಟ್ಟು ಪ್ರಸಂಗಿಸುವಲ್ಲಿ ಕಾಲಿನಿಂದ ನೆಲಕ್ಕೊದೆಯುತ್ತಾ, ಕಣ್ಣೀರು ಹಾಕುತ್ತಾ ಇ ರುವದನ್ನು ಸಹ ಬಿಡನು; ಪ್ರಸಂಗ ತೀರಿಸುವಂದಂದು ರಕ್ತ ಕಾರುವಷ್ಟು ದಣಿದವ ನಾಗಿ ತೋರುವನು. ಅವನು ಸಾರುತ್ತಿರಲು, ಯಾರ ಮನಸ್ಸೂ ಇತ್ತತ್ತು ಚಲಿ ಸ ಗೊಡದೆ, ಆಕರ್ಷಿಸುತ್ತಿದ್ದನು. ಈ ವಿಷಯದಲ್ಲಿ ಹಡಗ ಕಟ್ಟುವ ಕೆಲಸದವ ನೊಬ್ಬನು ಒಮ್ಮೆ—ತಾನು ತನ್ನ ಊರಿನ ದೇವಾಲಯದೊಳಗೆ ಪ್ರಸಂಗ ಕೇಳುವ ಹೊತ್ತಿನೊಳಗೆ ಒಂದು ಪೂರ್ಣ ಹಡಗವನ್ನು ಬುಡ ಹಿಡಿದು ತುದಿಯ ವರೆಗೂ ಮನಸ್ಸಿನಲ್ಲಿ ಕಟ್ಟುವಂತೆ ಆಗುತ್ತಿತ್ತು; ಆದರೆ ಹ್ವಿತ್ಫೀಲ್ದ ಧೊರೆಯು ಪ್ರಸಂಗಿಸುವ ಲ್ಲಿ ಒಂದು ತೊಲೆಯನ್ನಾದರೂ ಇಡುವದು ತನ್ನಿಂದಾಗದೆಂದು, ಹೇಳಿದನು. ಹ್ವಿ ತ್ಫೀಲ್ದನು ಒಂದಾನೊಂದು ದಿವಸ ಕಲ್ಲಿದ್ದಲುಖಣಿಯ ಕೆಲಸದವರದೊಂದು ಗುಂ ಪಿಗೆ ದೇವರ ವಾಕ್ಯ ತಿಳಿಸುವಾಗ ಅವರಲ್ಲೊಬ್ಬ ಕಾಡುಗುಣದವನು ಅವನೆದುರಿ ನದೊಂದು ಮರದ ಟೊಂಗಿಯಲ್ಲಿ ಕೂತು ಕೊಂಡು, ಅವನ ಮೇಲೆ ನಿರ್ಲಜ್ಜಾದೃ ಷ್ಟಿಯನ್ನಿಟ್ಟು, ಅಣಕಿಸುತ್ತಿರಲು, ಹ್ವಿತ್ಫೀಲ್ದನು ಅವನನ್ನು ಕಂಡು, ಶಿಡಿಲಿನಂತೆ ತ ನ್ನ ವಾಗ್ವಜ್ರವನ್ನು ಅವನ ಮೇಲೆ ಬಡಿದ ಕ್ಷಣವೇ ಅವನು ದಿಗಿಲಾಗಿ, ಟೊಂಗಿಯಿಂ ದ ನೆಲಕ್ಕುರುಳಿ ಬಿದ್ದನು. ಎಕ್ಸಿತೆರೆಂಬ ಪಟ್ಣದಲ್ಲಿ ಆದದ್ದೇನಂದರೆ, ಹ್ವಿತ್ಫೀಲ್ದನು ಪ್ರಸಂಗ ಮಾಡ ತೊಡಗಿದಲ್ಲಿ ಒಬ್ಬ ಭಕ್ತಿಹೀನ ಮನುಷ್ಯನು, ಆ ಅಸಹ್ಯ ಪ್ರಸಂ ಗಿಕನ ತಲೆಗೆ ಹೊಡೆಯುವೆನೆಂದು, ಕಿಶೆಯೊಳಗೆ ಅನೇಕ ಕಲ್ಲುಗಳಿದ್ದು, ಒಂದ ನ್ನು ಕೈಯಲ್ಲಿ ಸಹ ಹಿಡಿದು, ನಿಂತಿರಲು, ಅವನ ಪ್ರಸಂಗದ ಪ್ರಥಮ ಭಾಗವನ್ನು ಮಾತ್ರ ಕೇಳಿದ ಬಳಿಕ ಆ ಕಲ್ಲು ಅವನ ಕೈಯೊಳಗಿಂದ ಸಡಲಿ ಬಿದ್ದದ್ದಲ್ಲದೆ ಪ್ರ

ಸಂಗದ ಮೇಲೆ ಅವನು ಹ್ವಿತ್ಫೀಲ್ಡನ ಹತ್ತರ ಬಂದು—ಸ್ವಾಮಿಯೇ, ನಿಮ್ಮ ಕಪಾಲ ಒಡೆಯುವದಕ್ಕೆ ನಾನು ಬಂದೆನು; ಆದರೆ ನಿಮ್ಮ ಪ್ರಸಂಗದಿಂದ ದೇವರು ನನ್ನ ಹೃದಯವನ್ನೊಡೆದಂತಾಗಿದೆ ಎಂದು, ನಿವೇದಿಸಿದನು. ಹ್ವಿತ್ಫೀಲ್ಡನು ಹಲವು ಸಾರಿ ಉತ್ತರ ಅಮೆರಿಕಕ್ಕೆ ಹೋಗಿ ಬಂದನು. ಒಮ್ಮೆ ಅವನು ಅಲ್ಲಿರುವಾಗ, ಅನಾಥರಿಗೊಂದು ಗೃಹಾಶ್ರಯ ಕಟ್ಟುವೆನೆಂದು, ಬೇಕಾದ ಹಣದ ಸಂಗ್ರಹಕ್ಕಾಗಿ ಒಂದು ವಾಗ್ನಿರೂಪಣ ಕೊಡುವ ಹಾಗಿರುವಲ್ಲಿ ಆ ಬೆಂಜಮಿನ್ ಫ್ರುಂಕ್ಲಿನನು[1] ಕೂಡ ಕೇಳಲಿಕ್ಕೆ ಆಗಮಿಸಿ, ಕೂತು ಕೊಂಡನು; ಇವನು ಆ ಕಾರ್ಯಕ್ಕೆ ಏನೋ ಒಂದು ಕಾರಣದಿಂದ ಸಮ್ಮತಿಸದೆ, ಕೊಂಚವಾದರೂ ಹಣ ಕೊಡೆನೆಂದು, ನಿಶ್ಚಯಿಸಿ ಕೊಂಡಿದ್ದನು. ಆದರೂ ಹ್ವಿತ್ಫೀಲ್ಡನು ಮಾತಾಡಲಾರಂಭಿಸಿ, ಜನರಿಗೆ ಹಂಗಿಸಿ, ಅವರ ಹೃತ್ತುಗಳನ್ನು ಚಮತ್ಕೃತಿಯಿಂದೊತ್ತುತ್ತಾ ಇರಲು, ಫ್ರುಂಕ್ಲಿನನು ಮೊದಲು ತನ್ನ ಕೈಯನ್ನು ತನ್ನ ಕಿಶೆಯೊಳಗಣ ಹಣವನ್ನಾಡಿಸಲೀಸಿ, ತದನಂತರ ತನಗಿದ್ದ ಚಿಲ್ಲರೆಯನ್ನು ಧರ್ಮಸಂಗ್ರಹಡಬ್ಬಿಗೆ ಹಾಕಿ, ಬಳಿಕ ಹ್ವಿತ್ಫೀಲ್ಡನ ನಿರೂಪಣದ ಅರ್ಥವನ್ನಾಲೈಸುತ್ತಲೇ ತನ್ನ ಕಿಶೆಯೊಳಗಿದ್ದ ರೂಪಾಯಿಗಳನ್ನು ಅದರೊಳಗಿಟ್ಟು, ಕಡೆಯಲ್ಲಿ ತನಗುಳಿದಿದ್ದ 5 ವರಹಗಳನ್ನು ಸಹ ಕೈಗೊಂಡಿರಲಾರದೆ, ಅದರೊಳಗೆ ಬೀಳಿಸಿ ಬಿಟ್ಟನು. ಒಂದಾನೊಂದು ಸಮಯ ಹ್ವಿತ್ಫೀಲ್ಡನು ಇಂಗ್ಲಂದಿನಲ್ಲಿ ಮೋರ್ಫೀಲ್ಡ್ಸೆಂಬಲ್ಲಿಗೆ ಪ್ರಸಂಗ ಮಾಡಲಿಕ್ಕೆ ಹೋದನು; ಆಗ ಪಂಚಾಶತ್ತಮದಿನಹಬ್ಬ; ಲೊಂದನಿನ ಕೆಳಪ್ರಜೆಯು ಆಟಪಾಟಗಳನ್ನು ನೋಡುವ ಉದ್ದಿಶ್ಯ ಅಲ್ಲಿ ಹಿಂಡು ಹಿಂಡಾಗಿ ನೆರೆದಿತ್ತು; ಅಲ್ಲಲ್ಲಿ ಮಿಠಾಯಿಯ ಅಂಗಡಿಗಳು, ಸಾರಾಯಿಯ ಅಂಗಡಿಗಳು, ಪರದೇಶದ ವಿಚಿತ್ರ ಮೃಗಗಳ ಅಂಗಡಿಗಳು, ಕುಸ್ತೀ ಲೀಲೆಯವುಗಳು ಮುಂತಾದವುಗಳು ಕಾಣುತ್ತಿದ್ದವು. ಹ್ವಿತ್ಫೀಲ್ಡನು, ಅಯ್ಯೋ, ಸೈತಾನನ ಮಕ್ಕಳೆಂದು, ಸುಮಾರು 30,000 ಮಂದಿಯಾದ ಆ ಸಮೂಹದ ಮಧ್ಯದಲ್ಲಿ ತನ್ನ ಪ್ರಸಂಗಪೀಠ ನಿಲ್ಲಿಸಿ, ಎಫೆಸಿಯರ ಅರ್ತೆಮಿಸ್ ದೇವತೆ ದೊಡ್ಡವಳೆಂಬ[2] ವಚನವನ್ನು ವಿಷಯ ಮಾಡಿ, ಸಾರಲೆಸಗಿದಂದೇ ಸಮೂಹದವರು ಅವನ ಕಡೆಗೆ ಕಲ್ಲುಗಳನ್ನೂ ಕೋಳಿಯ ಕೆಟ್ಟ ತತ್ತಿಗಳನ್ನೂ ಮಳೆಯಂತೆ ಸುರಿಸುವವರಾದರು. ಆದಾಗ್ಯೂ ಚಿಂತೆಯಿಲ್ಲ; ಜನರು ಮುತ್ತಿ ನಿಂತಿದ್ದ ಒಬ್ಬ ದೊಡ್ಡ ತಮಾಷೆಗಾರನ ಅಂಗಡಿಯನ್ನು ಸಹ ಬೇಗ ಬಿಟ್ಟು ಬಂದು, ಆ ಪ್ರಸಂಗಿಕನ ವಾಕ್ಯವಣದಿಂದ ಸಂತುಷ್ಟರಾದರು; ಅದಲ್ಲದೆ ಅವರಲ್ಲಿ 350 ಮಂದಿಗಳು ಮೆಥೊದಿಸ್ತರ ಸಮಾಜವನ್ನು ಶೇರಿ ಕೊಂಡರು.

ಮೆಥೊದಿಸ್ತರ ಭಕ್ತಿಯ ಇಂಗಿತವನ್ನರಿಯಲಾರದ ಮನುಷ್ಯರು, ನಾವು ಹಿಂ

1) 579ನೇ ಪಾನು. 2) ಅಪೊ. ಕ್ರಿ. 19, 28; 9ನೇ ಪಾನು.

ದೆ ಸೂಚಿಸಿರುವಂತೆ, ಅವರ ಪ್ರಸಂಗಸ್ಥಳಗಳಲ್ಲಿ ಅವರಿಗೆ ವಿವಿಧೋಪದ್ರವ ಪಡಿಸುತ್ತಿದ್ದದಲ್ಲದೆ ಅವರನ್ನು ನ್ಯಾಯಸ್ಥಾನಕ್ಕೆಳದೊಯಿದು, ಅವರ ಮೇಲೆ ಸುಳ್ಳುದೂರು ಹೇಳಿದ್ದು ಸಹ ಅಪರೂಪವಲ್ಲ. ಒಮ್ಮೆ ಅಲ್ಲಿಗೆ ಒಂದು ಬಂಡಿಯ ಮೇಲೆ ತಂದ ಮೆಥೊದಿಸ್ತರನ್ನು ನ್ಯಾಯಾಧಿಪತಿಯು ವಿಚಾರಿಸುವಲ್ಲಿ ಅವರು ಪ್ರಾತಃಕಾಲದಿಂದ ಸಾಯಂಕಾಲದ ತನಕ ದೇವರಿಗೆ ಪ್ರಾರ್ಥಿಸುವಂಥವರೆಂಬದು ಗೊತ್ತು ಹತ್ತಿತಷ್ಟೇ; ಮತ್ತೊಂದು ಸಾರಿ ಒಬ್ಬನು ನ್ಯಾಯಾಧಿಪನ ಹತ್ತರ—ಮೆಥೊದಿಸ್ತರು ತನ್ನ ಹೆಂಡತಿಯ ಮನಸ್ಸು ಬದಲಿಸಿದರು; ಮುಂಚೆ ಅವಳಿಗಿದ್ದ ಚುರುಕು ನಾಲಿಗೆ ಕಿತ್ತು ಹೋದ ಹಾಗಾಗಿತ್ತಲ್ಲ? ಆದ್ದರಿಂದ ಅವಳು ಈಗ ಮೌನಳಾಗಿ, ಧ್ಯಾನದೊಳಿರುವಳೆಂದು, ಅಪರಾಧ ಹೊರಿಸುವಾಗ ಆ ಅಧಿಕಾರಸ್ಥನು—ಮೆಥೊದಿಸ್ತರನ್ನು ಕರತಂದು, ಪಟ್ಣದ ಸಕಲ ನಿವಾಸಿಗಳ ನಾಲಿಗೆಯನ್ನು ಹಾಗೆಯೇ ಕೀಳಗೊಡಿರೆಂದು, ಉತ್ತರ ಕೊಟ್ಟು, ಅವನನ್ನು ಕಳುಹಿಸಿದನು. ಒಂದಾನೊಂದು ದಿನ ಮದ್ಯವಿಕ್ರಯದ್ದೊಂದು ಅಂಗಡಿಯಲ್ಲಿ ಹಲವರು ಪಶುಗುಣವುಳ್ಳ ಜನರು ಕೂಡಿ, ಮೆಥೊದಿಸ್ತರ ವಿಷಯ ಪರಿಹಾಸಕ ಮಾತುಗಳನ್ನಾಡುವ ಸಮಯ ಅವರ ಪ್ರಸಂಗಿಕರಂತೆ ಪ್ರಸಂಗಿಸುವದಕ್ಕೆ ನಾನು ತಾನು ಸಮರ್ಥನೆಂಬಂತೆ ಮುಂಗೊಂಡರು; ಬಳಿಕ ಒಂದು ದೇವವಾಗ್ಗ್ರಂಥವ ತೆಕ್ಕೊಂಡು ಬಂದು, ಮೇಜಿನಲ್ಲಿ ಒಂದು ಕುರ್ಚಿಯನ್ನಿಟ್ಟು, ಪ್ರಸಂಗಪೀಠವೆಂದು, ಕಲ್ಪಿಸಿ, ತಮ್ಮ ಕುಚೋದ್ಯದಾಟವೆಸಗಿದರು. ಸರ್ತಿಯ ಮೇಲೆ ಮೂವರು ಅದನ್ನು ತೀರಿಸಿದಾಗ ನಾಲ್ಕನೆಯವನೊಬ್ಬನು ಸಹ, ಅವರಿಗೆ ಗೆಲ್ಲುವೆನೆಂತ, ಕುರ್ಚಿ ಹತ್ತಿ, ದೇವವಾಗ್ಗ್ರಂಥವ ತೆರೆದು ನೋಡುವಾಗ, ಮಾನಸಾಂತರ ಪಡದಿದ್ದರೆ ನೀವೆಲ್ಲರೂ ನಾಶವಾಗಿ ಹೋಗುವಿರಿ! ಎಂಬ ವಚನವು ಬಂತು. ತತ್‍ಕ್ಷಣವೇ ದೇವಭಯವು ಅವನಿಗೆ ಹಿಡಿಯಿತು; ರೋಮಾಂಚವಾಯಿತು. ತರುವಾಯ ಅವನು ಕೊಡುವ ಶಿಕ್ಷಾಪ್ರಸಂಗದ ದೆಸೆಯಿಂದ ಅವನ ಕಾಡುಜತೆಗಾರರಿಗೆ ಸಹ ಕೂದಲು ಶಿಡಿದಂತಾಯಿತು; ಚೇಷ್ಟೆಗೆ ಬದಲಾಗಿ ಸದ್ಭಾವವು ಮೂಡಿತು. ಅಂಥಾ ಆಶ್ಚರ್ಯವುಳ್ಳ ರೀತಿಯಿಂದ ಹೃತ್ಪರಿಣಾಮ ಗೊಂಡ ಆ ಮನುಷ್ಯನು ಅಂದೇ ಮೆಥೊದಿಸ್ತರಲ್ಲಿ ಪ್ರಸಂಗಿಕನಾಗಿ[1], ಹಿಂದಗಡೆ ಅನೇಕಾವರ್ತಿ ಹೇಳುತ್ತಿದ್ದದೇನಂದರೆ—ನಾನು ಪರಿಶುದ್ಧಾತ್ಮದ ಸಹಾಯದೊಡನೆ ಯಾವಾಗಲೂ ಪ್ರಸಂಗಿಸುವಲ್ಲಿ ಆ ಸಮಯಕ್ಕೆ ಅದು ಅತ್ಯಧಿಕವಾಗಿ ಒದಗಿತ್ತು.—

ಹೆನ್ಹ್ಟಿನವರಿಗೆ ಹ್ಯಾಗೋ, ಹಾಗೆಯೇ ಹ್ವಿತ್ಫೀಲ್ದನಿಗೆ ಕೂಡ ವೆಸ್ಲಿಯು ಸಕಲ ವಿಷಯಗಳಲ್ಲಿ ಸಮ್ಮತಿಸಲಿಲ್ಲ. ಅವರಿಬ್ಬರಿಗೆ ತಾರತಮ್ಯ ಬಿದ್ದ ಮುಖ್ಯ ವಿಷಯವು ಪುರಾವಸ್ಥಾಪನೆ[2]; ಹ್ವಿತ್ಫೀಲ್ದನು ಇದನ್ನೇ ಪೂರ ನಂಬಿ ಕೊಂಡು ಸಾರು

1) 592ನೇ ಪಾನು ಸರಿ ನೋಡು. 2) 439, 440, 443, 549ನೇ ಪಾನು.

ವಲ್ಲಿ ವೆಸ್ಲಿಯು ಪುರುಷಕಾರವನ್ನು ಸಹ ತೋರಿಸುವನು. ಆದಾಗ್ಯೂ ಅವರಿಬ್ಬರಿಗೆ ಮಿತ್ರಭೇದವಾಗಲಿಲ್ಲ. ಫ್ವಿಟ್ಫೀಲ್ಡನು 7ನೇ ಸರ್ತಿ ಇಂಗ್ಲಂದಿನಿಂದ ಅಮೆರಿಕಕ್ಕೆ ಹೋಗಿರುವ ಕಾಲ ಕ್ರಿ. ಶ. 1770ನೇ ವರುಷಕ್ಕೆ ಅಲ್ಲಿ ಮಡಿದನಂತರ ವೆಸ್ಲಿಯು ಅದರ ಸುದ್ದಿ ಕೇಳುತ್ತಲೇ, ಆ ಉತ್ತಮ ಭಕ್ತನ ಹೆಸರನ್ನು ತನ್ನಿಂದಾಗುವಷ್ಟರ ಮಟ್ಟಿಗೆ ಕೊಂಡಾಡ್ಯೇನೆಂತ, ಹೇಳಿ, ಲೊಂದನಿನಲ್ಲಿ ಅವನ ಜ್ಞಾಪಕದ ನಿಮಿತ್ತವಾಗಿ ಒಂದು ವಿಶೇಷ ಪ್ರಸಂಗ ಗೈದನು. ಫ್ವಿಟ್ಫೀಲ್ಡನು ಬಳಿಸುತ್ತಿದ್ದದೊಂದು ನುಡಿಯನ್ನು ಇಲ್ಲಿ ಸ್ಮರಿಸ ತಕ್ಕದ್ದೇನಂದರೆ—ತನಗೆ ಸತ್ತು ದೇವರಿಗೆ ಬದುಕುವದೊಂದೇ ಮಾತ್ರ ನಾನರಿತಿರುವ ಕ್ರಮಾನುಸಾರಿಕತ್ವವು.—

ವೆಸ್ಲಿಯ ಗುಣವನ್ನು ಕುರಿತು ಇನ್ನು ಒಂದೆರಡು ಮಾತು ಕೇಳಿರಿ. ಅವನು ನಿತ್ಯ ಮಿತಾಹಾರಿಯು; ನೈಮಿತ್ತಿಕ ಉಪವಾಸ ಗೈಯುವದನ್ನು ಬಿಡದಿರುವನು; ನಿದ್ರೆಯನ್ನು ಕಡಿಮೆ ಮಾಡುವನು. ಅವನು ದಿನಂಪ್ರತಿ ಇಷ್ಟಿಷ್ಟು ಹೊತ್ತು ಇಂಥಿಂಥ ಕೆಲಸಕ್ಕೆ ನೇಮಿಸಿದ್ದು, ತಪ್ಪದೆ ಅದರಂತೆ ನಡೆಯುತ್ತಿರುವದರಿಂದ ಹೇರಳ ಸುವೃತ್ತಿ ತೀರಿಸ ಶಕ್ತನಾದನು; ಹೀಗಿರಲಾಗಿ ತನ್ನ ಜೀವಕಾಲದಲ್ಲಿ 40,000 ವಾಗ್ನಿರೂಪಣಗಳನ್ನಾದರೂ ಸಹ ಕೊಡುವದಕ್ಕೆ ಸಂದರ್ಭ ಕಂಡನು. ಸುವಾರ್ತಾವಿಸ್ತಾರಕ್ಕೋಸ್ಕರ ವರುಷ ವರುಷಕ್ಕೆ ಸುಮಾರು 4,000 ಮೈಲು ಗಮಿಸುವನು; ಅಂಥಾ ಸಮಯ ಕುದುರೆ ಹತ್ತಿ ಹೋಗುವಾಗ ಲಗಾಮನ್ನು ಅದರ ಕುತ್ತಿಗೆಯಲ್ಲಿ ತೂಗ ಬಿಟ್ಟು, ಒಂದು ಪುಸ್ತಕವನ್ನು ಹಿಡಿದು ಓದುತ್ತಿರುವನು. ಉದಾರತ್ವದಿಂದೊಪ್ಪುತ್ತಿರುವನು; ತನಗಿದ್ದದನ್ನೆಲ್ಲಾ, ತನ್ನ ಋಣವೆಂದು, ಧರ್ಮವಾಗಿ ಕೊಟ್ಟನು. ಸಭಾಪರಿಪಾಲನಕ್ರಮದ ವಿಧಿ, ಪರಿಶುದ್ಧ ಬರಹದಲ್ಲಿಯಣ ರಹಸ್ಯಾರ್ಥವುಳ್ಳ ವಚನಗಳ ಭಾಷ್ಯ ಮುಂತಾದ ಗೌಣ ವಿಷಯಗಳಲ್ಲಿ ತನಗಿಂತ ಬೇರೆಯಾಗಿರುವವರ ಮೇಲೆ ಅತಿ ಕ್ಷಮೆಯುಳ್ಳವನಾಗಿರುವನು. ನಾವು, ಅನ್ಯರ ಇಷ್ಟಾಲೋಚನೆಗಳು ಮಿತ್ರಭೇದಕ್ಕೆ ಕಾರಣವೆಂದು, ಎಣಿಸುವವರಲ್ಲ; ಇಂಗ್ಲಿಷ ರಾಜ್ಯಸಭೆಯವರಾಗಲಿ ಇಂದೆಪೆಂದೆಂತರಾಗಲಿ ಪ್ರೆಸ್ಬುತೆರಿಯಾಲ ಸಭೆಯವರಾಗಲಿ ಎಲ್ಲರೂ ನಮ್ಮ ಶಾಖೆಯಲ್ಲಿ ಶೇರಿರುವದಕ್ಕೆ ಅಭ್ಯಂತರವೇನೂ ಇಲ್ಲ; ನಮ್ಮಲ್ಲಿ ಶೇರುವವರಿಗೆ ಆತ್ಮರಕ್ಷಣದ ನಿಜವಾದ ಅಪೇಕ್ಷೆ ಇದ್ದರೆ ಸಾಕು! ಎಂತ, ಅವನು ಹೇಳಿದ ತಾತ್ಪರ್ಯವು. ಈ ವಿಷಯದಲ್ಲಿ ಅವನಿಗೆ ಬಹು ಸಹನವುಳ್ಳ ಭಾವವಿದ್ದರೂ ನೀತಿಚರ್ಯಾಭಾವವನ್ನು ಕುರಿತು ಅವನ ಅಭಿಪ್ರಾಯವು ಬಹಳ ಕಡುಹಿನದು; ಅವನು ತನ್ನ ಶಾಖೆಯವರಿಗೆ ಬೇಜಾರ ಕಳೆಯುವಂಥ ನಿರ್ದೋಷದಾಟಗಳನ್ನು ಸಹ ನಿಷೇಧಿಸಿದ್ದಲ್ಲದೆ, ಹುಡುಗರ ಆಟಪಾಟಗಳಾದರೂ ಅಯುಕ್ತವೆಂತ, ಚರ್ಚಿಸಿದನು.

ಅವನು 88 ವರುಷದವನಾದಾಗ ಸತ್ತನು. ತನಗೆ ಮರಣವು ಸಮಿಾಪಿಸಲು,

ಅವನು—ದೇವರೇ, ಲೋಕದ ಸಕಲ ಮಹತ್ತುಗಳು ಸಾಯುವಂಥವನೊಬ್ಬನಿಗೆ ಎಷ್ಟರವುಗಳು! ಎಂತ, ಕೂಗಿ,

ಎನ್ನುಸುರಾಡೊ ತನಕ
ಕೊಂಡಾಡುತೇನೆ ದೇವರ;
ಆ ಮೇಲೆ ಮೃತ್ಯುಹಸ್ತವು
ಈ ತುಟಿಯನ್ನು ಮುಚ್ಚಲು,
ನಾ ಗೈವೆ ದಿವ್ಯ ಸ್ತುತಿಯನ್ನು.
ಕೈಗೊಂಡೆನಮರತ್ವವನ್ನು!

ಎಂಬ ಗೀತಶ್ಲೋಕವನ್ನು ಕೆಲವು ಸಾರಿ ಹಾಡಿ, ಕಡೆಯಲ್ಲಿ—ಈಗ ಎಲ್ಲಾ ತೀರಿತು, ಮನೆಗೆ ಹೋಗೋಣ! ಮೇಘಗಳು ಆಶೀರ್ವಾದ ಗರೆಯುತ್ತವೆ, ಯೆಹೋವನು ನಮ್ಮ ಸಂಗಡ ಇದ್ದಾನೆ, ಯಕೋಬನ ದೇವರು ನಮಗೆ ಆಶ್ರಯವಾಗಿದ್ದಾನೆಂತ, ನುಡಿದು, ತನ್ನವರಿಗೆ ಸ್ವಸ್ತಿವಾಚನ ಹೇಳಿ, ಪರಲೋಕಕ್ಕೆ ಹೋದನು.

ವೆಸ್ಲಿಯನರ ಅಂದರೆ ವೆಸ್ಲಿಯ ಶಾಖೆಯವರ ಒಂದೊಂದು ಸಭೆಯು ಹಲವು ಚಿಕ್ಕ ವರ್ಗಗಳಾಗಿ ವಿಭಾಗಿಸಿರುವದು; ಒಂದೊಂದು ವರ್ಗದಲ್ಲಿ ಸ್ತ್ರೀ ಪುರುಷರಾದ ಸುಮಾರು 20 ಜನರು; ಇವರ ಮೇಲಿರುವ ಒಬ್ಬ ನಾಯಕನು ವಾರಂಪ್ರತಿ ಅವರನ್ನು ಸಂಘ ನೆರೆಸಿ, ಅವರ ಸುಖ ದುಃಖಗಳನ್ನು ವಿಚಾರಿಸಿ, ಅವರ ಸಂಗಡ ದೇವಪ್ರಾರ್ಥನೆ ದೇವಸ್ತೋತ್ರಗಳನ್ನು ಮಾಡುವನು; ಅದು ಹೊರ್ತು ಅವನು ಸಭೆಯ ಪ್ರಸಂಗಿಕನಿಗೂ ಅದರ ಪಾರುಪತ್ಯಗಾರನಿಗೂ ತನ್ನ ಕೆಳಗಿನವರ ಸ್ಥಿತಿಗತಿಗಳನ್ನು ತಿಳಿಸುವನು. ಈ ಉದ್ಯೋಗಿಗಳು ಬಹಳ ಬುದ್ಧಿ ಹೇಳಿ, ಬಹಳ ತಾಳ್ಮೆ ಪಟ್ಟಿದ್ದ ತರುವಾಯದಲ್ಲಿಯೂ ಒಬ್ಬ ಸಭ್ಯನು ಮಾನಸಾಂತರಕ್ಕೆ ಬಾರದಿದ್ದರೆ ಸಭೆಯ ಪ್ರಸಂಗಿಕನೂ ಸಕಲ ವರ್ಗಗಳ ನಾಯಕರೂ ಸಮಾಗತರಾಗಿ, ಅಂಥವನನ್ನು ಬಹಿಷ್ಕರಿಸುವರು; ವರ್ಷಪಾದಕ್ಕೊಮ್ಮೆ ಸಭ್ಯನಿಗೆ ಶಿಕ್ಕುವ ಯೋಗ್ಯತಾಪತ್ರವು ಅಂಥವನಿಗೆ ಕೊಡದ್ದು ಬಹಿಷ್ಕಾರದ ಸಂಜ್ಞೆಯು. ಒಂದೊಂದು ವರ್ಗದಲ್ಲಿ ತಿರಿಗಿ ಒಳವರ್ಗಗಳು ಇರುವವು; ಸ್ತ್ರೀ ಪುರುಷರು ಮಿಲಿತರಾಗಿರದೆ ಇರುವಂಥ ಇವುಗಳು ವಾರಕ್ಕೊಮ್ಮೆ ವಿಶ್ವಾಸವರ್ಧನೆಗಾಗಿ ಒಂದೊಂದಾಗಿ ಕೂಡಿ ಬರುವವು. ಪ್ರಸಂಗಿಕರು ಎರಡು ತರದವರು; ಮಹಾ ವಿದ್ಯಾಶಾಲೆಗಳಲ್ಲಿ ದೇವಜ್ಞಾನದರ್ಶನ ಕಲಿತು ಉದ್ಯೋಗಪ್ರತಿಷ್ಠೆ ಹೊಂದಿದವರು ಒಬ್ಬರು; ಸಾಧಾರಣ ಸಭ್ಯರಲ್ಲಿ ಪ್ರವೀಣತೆಯಿಂದೆಸೆದು ಪ್ರಸಂಗಕ್ಕೂ ಪರಿಶುದ್ಧ ಸಂಸ್ಕಾರಗಳ ಪಾಲನಕ್ಕೂ ಅಪ್ಪಣೆ ಪಡೆದವರು ಮತ್ತೊಬ್ಬರು. ಸಭೆಯ ಪಾರುಪತ್ಯಗಾರನು (ಸಭಾಸೇವಕನು) ರೊಖ್ಖ ಲೆ

ಖ್ಯ ಮುಂತಾದ ಬಹಿಃಕಾರ್ಯಗಳನ್ನು ನೋಡುತ್ತಾ, ವಾರಂಪ್ರತಿ ಒಂದೊಂದು ವರ್ಗದ ಒಂತಿಗೆಹಣ ಎತ್ತುಗಡೆ ಮಾಡುತ್ತಾ ಇರುವನು; ಹ್ಯಾಗಂದರೆ ಮೆಥೊದಿಸ್ತರ ಸಮಾಜವು (ಮಿಕ್ಕಾದ ದಿಸ್ಸೆಂತರರ ಸಮಾಜಗಳಂತೆ[1]) ಒಂತಿಗೆಹಣದ ಮೇಲೆ ಮಾತ್ರ ಬದುಕುತ್ತಿರುವದು. ಹೆಚ್ಚು ಕಡಿಮೆ 20 ಸಭೆಗಳಿರುವದೊಂದು ಮಂಡಳಿಯ ಪ್ರಸಂಗಿಕರ ಮೇಲ್ವಿಚಾರಕನು ಸುಪೆರಿಂತೆಂದೆಂತನೆನ್ನಿಸುವನು[2]. ಪೂರ್ಣ ಮೆಥೊದಿಸ್ತಸಭೆಯ ಮೇಲೆ ಕೊನ್ಫೆರೆನ್ಸ್ ಎಂಬ ಸಂಸದಸ್ಸು ಇರುವದು; ಇದು ವರುಷಕ್ಕೊಮ್ಮೆ ಇಂಗ್ಲಂದಿನ ದೊಡ್ಡ ಪಟ್ಟಗಳಲ್ಲೊಂದರಲ್ಲಿ ಕೂಡುವಲ್ಲಿಗೆ 100 ಮಂದಿ ಪ್ರಸಂಗಿಕರು ಬರುವರು. ಈ ಕೊನ್ಫೆರೆನ್ಸಿನವರು ವೆಸ್ಲಿಯ ಮರಣದಿತ್ತ ಕ್ರಿ. ಶ. 1793ನೇ ವರುಷಕ್ಕೆ—ಅಧ್ಯಕ್ಷರಿಂದ ಉದ್ಯೋಗಪ್ರತಿಷ್ಠೆಯನ್ನು ಹೊಂದಿದ ಪ್ರಸಂಗಿಕರಿಗೂ ಅದನ್ನು ಹೊಂದದಂಥವರಿಗೂ ವ್ಯತ್ಯಾಸವೇನೂ ಇಲ್ಲ; ಅವೆರಡು ತರದವರೂ ಪ್ರಸಂಗಿಸಲಿಕ್ಕೆ ಮಾತ್ರವಲ್ಲದೆ ಪರಿಶುದ್ಧ ಸಂಸ್ಕಾರಗಳನ್ನು ನಡಿಸಲಿಕ್ಕೆ ಸಹ ಯೋಗ್ಯರೆಂತ[3], ಪ್ರತ್ಯೇಕ ವ್ಯವಸ್ಥೆ ಮಾಡಿದಾಗ ಮೆಥೊದಿಸ್ತರ ಮತ್ತು ಎಪಿಸ್ಕೊಪಾಲ ರಾಜ್ಯಸಭ್ಯರ ಬಹಿರನ್ಯೋನ್ಯವು ಸಡ್ಲಾಯಿತು.

ದೇವರು ಮೆಥೊದಿಸ್ತರನ್ನು ಕ್ರೈಸ್ತರೊಳಗಿನ ಸಜ್ಜೀವನದ ಅಭಿವರ್ಧನಕ್ಕೋಸ್ಕರ ನೇಮಿಸಿದ ಕಲ್ಪನಾರ್ಥವು ಮಂಗಳ ರೀತಿಯಿಂದ ಸಿದ್ಧಿಸಿತು; ಅದು ಹೊರ್ತಾಗಿ ಅವರು ವಿಗ್ರಹಾರಾಧಕರಲ್ಲಿ ಸುವಾರ್ತಾಪ್ರಸಾರಣಕಾರ್ಯದಿಂದ ಸಹ ವಿರಾಜಿಸುವವರಾದರು. ಕ್ರಿ. ಶ. 1816ನೇ ವರುಷ ಅವರದೊಂದು ಪ್ರತ್ಯೇಕವಾದ ದೊಡ್ಡ ಬಾಹ್ಯಸುವಾರ್ತಾಪ್ರಸಾರಣಸಂಘವು[4] ಸ್ಥಾಪಿತವಾಯಿತು.

ಸ್ಪೇನೆರನನ್ನು[5] ಹಿಡಿದು ವೆಸ್ಲಿಯ ಪರಿಯಂತ ಇರುವ ಸಜ್ಜೀವನವರ್ಧಕರಾದವರ ಆವಳಿಗೆ ಇನ್ನು ಇಬ್ಬರನ್ನು ಕೂಡಿಸ ತಕ್ಕದ್ದು; ಅವರ್ಯಾರಂದರೆ—ಎದ್ವರ್ದ್ ಇರ್ವಿಂಗನು ಮತ್ತು ದರ್ಬಿಯು.

ಇರ್ವಿಂಗನು ಕ್ರಿ. ಶ. 1822ನೇ ವರುಷ ಸುತ್ತ ಲೊಂದನಿನಲ್ಲಿ ಸ್ಕೋತರ ಪ್ರೆಸ್ಬುತೆರಿಯಾಲವಾದ್ದೊಂದು ಸಭೆಯ ಪ್ರಸಂಗಿಕನು. ಅಪೊಸ್ತೊಲಿಕ ಕಾಲದಲ್ಲಿ ನಡೆಯುತ್ತಿದ್ದ ಬೇರೆ ಬೇರೆ ಆತ್ಮೀಯ ವರಗಳು[6] ವಿಶ್ವಾಸವುಳ್ಳ ಪ್ರಾರ್ಥನೆಯಿಂದ ಈಗಲಾದರೂ ಹಾಗೆಯೇ ದೊರಕುವವು; ಆದ್ದರಿಂದ ಅವನ್ನು ಪಡ ಕೊಂಡು, ಆ ಕಾಲದ ಅಪೊಸ್ತಲರು ಪ್ರವಾದಿಗಳು ಎವಂಗೆಲಿಸ್ತರು ಕುರುಬರು (ಅಂದರೆ ಅಂಗೆಲರೆಂಬ ದೂತರು, ಅಧ್ಯಕ್ಷರು) ಎಂಬೀ 4 ತರದ ಸಭೋದ್ಯೋಗಿಗಳನ್ನು[7] ಸಹ ಹ್ಯಾಗೂ ಹೆಸರಿನ ಮೇಲೆಯೂ ಇದ್ದಂತೆಯೇ ಪುನಃಸ್ಥಾಪಿಸ ಬೇಕು; ಕರ್ತ

---

1) 501ನೇ ಪಾನು. 2) 431ನೇ ಪಾನು. 3) 585, 590, 592, 599ನೇ ಪಾನು.
4) 76ನೇ ಸಂಧಿ. 5) 66ನೇ ಸಂಧಿ. 6) 1 ಕೊರಿ. 12, 8 ಆದಿ. 7) ಎಫೆಸ. 4, 11.

ನ ಪುನರಾಗಮನವೂ ಇದರಿಂದ ಸಿದ್ಧಿಸುವ ಕ್ರಿಸ್ತನ ಸಹಸ್ರವರ್ಷರಾಜ್ಯದ[1] ಆರಂಭವೂ ಅತಿ ಸಮೀಪವಾಯಿತು ಎಂಬದೇ ಅವನ ವಿಶೇಷ ತಾತ್ಪರ್ಯವು. ಇರ್ವಿಂಗಿಯಾನರೆಂಬ ಅವನ ಸಮಾಜದವರು ನೀತಿಚರ್ಯಾಸಕ್ತಿಯಿಂದ ಕೀರ್ತಿಗೊಂಡಿದ್ದಾಗ್ಯೂ ಪಪ್ಪಕರವಕ್ಕೆ ಹೋಲುವ ಕೆಲವು ಆಚಾರಗಳನ್ನು ಹಿಡಿದು ನಡಿಸುವದರಿಂದಲೂ ಉದ್ಯೋಗವಿಡಂಬನ ತೋರಿಸುವದರಿಂದಲೂ ಅವರಿಂದ ಹೊರಡುವ ಆಶೀರ್ವಾದವು ಕಡಿಮೆಯಾಯಿತು.

ದರ್ಬಿ ಎಂಬವನು ಇಂಗ್ಲಂದಿನ ಎಪಿಸ್ಕೊಪಾಲ ರಾಜ್ಯಸಭೆಯಲ್ಲೊಬ್ಬ ಉದ್ಯೋಗಿಯಾಗಿದ್ದು, ಕ್ರಿ. ಶ. 1840ನೇ ವರುಷ ಪ್ಲಿಮೊಥ್ ಎಂಬ ಪಟ್ಣದಲ್ಲಿ ದರ್ಬಿಸ್ತರೆಂತಾಗಲಿ ಪ್ಲಿಮೊಥಿನ ಸಹೋದರರೆಂತಾಗಲಿ ಹೆಸರು ಹೊಂದಿದವರ ಸಮಾಜಕ್ಕೆ ಮೂಲಸ್ಥನಾದನು. ಸಭೋದ್ಯೋಗಗಳ ವಿಷಯ ಇವರು ಇರ್ವಿಂಗಿಯಾನರ ಪ್ರತಿಕೂಲಿಗಳಾಗಿ, ಕ್ವೇಕೆರರಂತೆ ಪ್ರಸಂಗೋದ್ಯೋಗವನ್ನರಿಯದೆ, ಸರ್ವಸಾಧಾರಣವಾದ ಸಭಾಪರಿಪಾಲನಕ್ರಮವನ್ನು ಕಟ್ಟದೆ, ಮುಖ್ಯವಾಗಿ ಗೃಹ್ಯ ಸಂಘಗಳಲ್ಲಿ ಏಕೀಭಾವದ ಯಾಜಕತ್ವವನ್ನು[2] ಈಡೇರಿಸುವದಕ್ಕೆ ನೋಡುತ್ತಾರೆ. ಪೂರ್ವದಲ್ಲಿ ದೋನಾತಿಸ್ತರಿಗೂ[3] ಈಚೆ ಸೌವಾರ್ತಿಕರಾದಂಥ ಇತರ ಅನೇಕ ಕ್ರೈಸ್ತರಿಗೂ ಹ್ಯಾಗೋ, ಹಾಗೆಯೇ ಕ್ರೈಸ್ತ ರಾಜ್ಯಸಭೆಗಳು ಅವರಿಗೆ ಸಹ ಅಗದೀ ಆಗುವದಿಲ್ಲ; ಶಿಶುಸ್ನಾನಕ್ಕೆ ಅವರು ಬಹಳ ಮೆಚ್ಚುವದಿಲ್ಲ[4]; ಕ್ರಿಸ್ತನ ಪುನರಾಗಮನವು[5] ವಿವಿಧ ಕಾಲಲಕ್ಷಣಗಳ ಮೇಲೆ ತೀರ ಹತ್ತರವೇ ಆಯಿತು, ಅದು ಆಗುವದಕ್ಕಿಂತ ಮುಂಚೆ ಸಭೆಯು ಒಳ್ಳೇ ಅಂದದಿಂದ ಪರಿಶೋಭಿಸ ಕೂಡದು ಎಂತ, ನಂಬಿ ಕೊಳ್ಳುತ್ತಾರೆ.

ನೀದೆರ್ಲಂದಿನಲ್ಲಿ ಕ್ರಿ. ಶ. 1648ನೇ ವರುಷ ಸುತ್ತ ಯೋಹಾನ ಕೊಖನೆಂಬ ದೇವಜ್ಞಾನದರ್ಶನದ ಮಹಾ ಪಂಡಿತನು ಭಕ್ತಿಯುಕ್ತವಾದ ಕ್ರೈಸ್ತ ಜೀವಿಕೆಯನ್ನು ಹೆಚ್ಚಾಗಿ ಅರಳಿಸುತ್ತಾ ಇದ್ದನು; ಫ್ರಂಚು ದೇಶದಲ್ಲಿ ಸೌವಾರ್ತಿಕರ ಸಜ್ಜೀವನವು ಕ್ರಿ. ಶ. ಆ 1629ನೇ ವರುಷಕ್ಕೀಚೆ[6] ಪಸರಿಸುತ್ತಾ ಬಂದಿತ್ತು.

---

1) 557ನೇ ಪಾನು. 2) 585ನೇ ಪಾನು. 3) 242ನೇ ಪಾನು. 4) 584ನೇ ಪಾನು. 5) 27ನೇ ಪಾನು. 6) 513ನೇ ಪಾನು.

## 72. ಗ್ರೇಕ ಸಭೆಯು ಸ್ಥಿತಿಗತಿಯು.

ಗ್ರೇಕ ಮತ್ತು ಪಪ್ಪಕ ಸಭೆಗಳು ಕ್ರಿ. ಶ. 1054ನೇ ವರುಷಕ್ಕೆ ಒಂದೊಂದನ್ನಗಲಿ ಶಪಥವಿಕ್ಕಿದ ಸಮಾಚಾರವನ್ನು ಹಿಂದೆ ಓದಿದಿರಲ್ಲ[1]? ಅಂದಿನಿಂದ ಕೊನ್ಸ್ತಂತೀನೊಪೊಲಿಯ ಪತ್ರಿಯರ್ಖನು[2] ಸಮಸ್ತ ಗ್ರೇಕ ಸಭೆಯ ಮೇಲ್ವಿಚಾರಕನಾದರೂ ಅವನೂ ಸಭೆಯೂ ಬಹುಶಃ ಕೆಟ್ಟವರಾದಂಥ ಗ್ರೇಕ ಕೈಸರರ[3] ಅಧೀನತೆಯಲ್ಲುಳಿದಂತಾಯಿತು. ಬಳಿಕ ದೇವರು ಕ್ರಿ. ಶ. 1453ನೇ ವರುಷ ಗ್ರೇಕ ಸಭೆಯನ್ನು ಶಿಕ್ಷಿಸುವದಕ್ಕೋಸ್ಕರ ತುರ್ಕರ ವಶದಲ್ಲಿಟ್ಟದ್ದು ಸಹ ಹಿಂದೆ ಗೊತ್ತಾಯಿತು[4]. ಆಗ ತುರ್ಕರ ಸುಲ್ತಾನನು ಗ್ರೇಕ ಪತ್ರಿಯರ್ಖನ ಧನಿಯಾಗಿ, ಗ್ರೇಕ ಸಭೆಯ ಮುಖ್ಯವಾದ ಉದ್ಯೋಗಗಳನ್ನು ಹಣಕ್ಕೆ ಮಾರುವವನಾದನು. ಅಷ್ಟರಲ್ಲಿ ಪತ್ರಿಯರ್ಖನೂ ಅಧ್ಯಕ್ಷರೂ ಅವನಿಗೆ ನಿತ್ಯಕ್ಕೆ ಮಹೋಚಿತಗಳನ್ನು ಕೊಟ್ಟ ಹೊರ್ತು ಉದ್ಯೋಗದಲ್ಲಿಯೂ ಜೀವದಲ್ಲಿಯೂ ಭದ್ರವಾಗಿರಲರಿಯರು. ಇಂಥಾ ಪರಾಧೀನತೆಗೆ ಪತ್ರಿಯರ್ಖನು ಬೇಸತ್ತದ್ದು ಸಹಜವೇ. ಪಪ್ಪರು ಅದನ್ನು ಕಂಡು, ಗ್ರೇಕ ಸಭೆಯನ್ನು ತಮ್ಮದರ ಸಂಗಡ ತಿರುಗಿ ಒಂದೇ ಮಾಡ ಕೂಡೀತೆಂತ, ಆಶೆ ತಾಳಿ, ಅದರಂತೆ ಪ್ರಯತ್ನಿಸುವವರಾದರು; ಆದಾಗ್ಯೂ—ಗ್ರೇಕಮತಸ್ಥರು ಏನೂ ಕುಂದಿಲ್ಲದೆ ಪಪ್ಪನ ಅಧಿಕಾರಕ್ಕೆ ಒಳ ಪಟ್ಟು, ಪಪ್ಪಕ ಬೋಧನೆ ಆಚಾರಗಳನ್ನೆಲ್ಲಾ ತೆಕ್ಕೊಳ್ಳ ಬೇಕೆಂತ, ಅವರು ಬೆಸಸಿದ್ದಕ್ಕೆ ಗ್ರೇಕರು ಶೇರಲಿಲ್ಲ.

ತರುವಾಯ ಗ್ರೇಕಮತಸ್ಥರು ಗೆರ್ಮಾನಿಯದಲ್ಲಿಯ ಪುನಃಸ್ಥಾಪಿತವಾದ ಸೌವಾರ್ತಿಕ ಸಭೆಯೊಂದಿಗೆ ಐಕ್ಯವಾಗುವದಕ್ಕೆ ಬಯಸುವವರಾಗಲು, ಅಂದಿನ ಪತ್ರಿಯರ್ಖನ ಅಪ್ಪಣೆಯ ಮೇಲೆ ದೇಮೇತ್ರಿಯನೆಂಬ ಗ್ರೇಕ ಸಭೋದ್ಯೋಗಿಯು ವಿತ್ತೆನ್ಬೆರ್ಗಿಗೆ[5] ಹೋಗಿ, ಸೌವಾರ್ತಿಕ ಸಭೆಯ ಬೋಧನೆ ಸಭಾಪರಿಪಾಲನಕ್ರಮಗಳನ್ನು ಪರೀಕ್ಷಿಸಿ, ಹಿಂದಿರುಗುವಾಗ ಆ ಮೆಲಂಖ್ಥೋನನು[6], ಪತ್ರಿಯರ್ಖನಿಗೆ ಉಚಿತವೆಂದು, ಔಗ್ಸ್ಬುರ್ಗಿನ ಕೊನ್ಫೆಸ್ಸಿಯೋನು ಎಂಬ ವಿಶ್ವಾಸಪ್ರಮಾಣದ[7] ಗ್ರೇಕ ಭಾಷಾಂತರವನ್ನು ಅವನ ಕೈಯಲ್ಲಿ ಕೊಟ್ಟು ಕಳುಹಿಸಿದನು; ಹೀಗಾದರೂ ಆ ಪತ್ರಿಯರ್ಖನು ಅದರಲ್ಲಿಯ ಹಲವು ತಾತ್ಪರ್ಯಗಳಿಗೆ ಅನುಮಾನ ಗೊಂಡ ನಿಮಿತ್ತ ಐಕ್ಯಸಂಧಾನವಾಗಲಿಲ್ಲ. ಕಾಲಗತಿಯಿಂದ ಕೊನ್ಸ್ತಂತೀನೊಪೊಲಿಯ ಲೂಕಾರಿಯನೆಂಬ ಇನ್ನೊಬ್ಬ ಪತ್ರಿಯರ್ಖನು ಸೌವಾರ್ತಿಕರ ಸ್ನೇಹವನ್ನು ಹುಡುಕಲೆಸಗಿದನು; ಅವನು ಮುಂಚೆ ಹಲವು ಕಾಲ ಸ್ವಿತ್ಸೆರ್ಲಂದಿನ ಗೆನ್ಫ ಪಟ್ಣದಲ್ಲಿ[8] ದೇ

1) 342ನೇ ಪಾನು. 2) 343ನೇ ಪಾನು. 3) 342(cf. 512)ನೇ ಪಾನು. 4) 343ನೇ ಪಾನು. 5) 455ನೇ ಪಾನು. 6) 549ನೇ ಪಾನು. 7) 445ನೇ ಪಾನು. 8) 439ನೇ ಪಾನು.

ವಜ್ಞಾನದರ್ಶನ ಅಭ್ಯಾಸಿಸಿದ್ದಂಥವನು. ಕ್ರಿ. ಶ. 1629ನೇ ಅಬ್ದ ಅವನು ಕಲ್ವೀನಕ ಶಾಖೆಯವರ ವಿಶ್ವಾಸಪ್ರಮಾಣಕ್ಕೆ ಅಲ್ಪ ಸ್ವಲ್ಪ ಮಾತ್ರ ವ್ಯತ್ಯಾಸವಿರುವಂಥಾದೊಂದನ್ನು, ತನ್ನದೆಂದು, ಗೆನ್ಫಿಗೆ ಕಳುಹಿಸಿದ್ದಲ್ಲದೆ ಗ್ರೇಕ ಸಭೆಯಲ್ಲಿ ಪುನಃಸ್ಥಾಪನಾ ಕಾರ್ಯವನ್ನು ನಡಿಸ ತೊಡಗಿದನು. ಅಂದು ಯೇಸುವಿತರು, ಗ್ರೇಕ ಸಭೆಯವರಿಗೂ ಸೌವಾರ್ತಿಕರಿಗೂ ಅನ್ಯೋನ್ಯವಾಗ ಬಾರದೆಂದು, ಹೇಳಿ, ಆ ಹಿತಕರವಾದ ಕಾರ್ಯಕ್ಕೆ ಎದುರ್ಚಂಡಿಸಲಾರಂಭಿಸಿದರು; ಕ್ರಿ. ಶ. 1566ನೇ ವರುಷ ಸುತ್ತ ಇವರು ಕೊನ್ಸ್ತಂತೀನೊಪೊಲಿಯಲ್ಲಿ ತಮ್ಮ ದೊಡ್ಡದೊಂದು ವಿದ್ಯಾಶಾಲೆ ನಿರ್ಮಿಸಿದ್ದರೆಂತ, ಇಲ್ಲಿ ನೆನಸ ತಕ್ಕದ್ದು. ಅವರು ತಮ್ಮ ವೈಮನಸ್ಯದಿಂದ ಪ್ರೇರಿತರಾಗಿ, ಸುಲ್ತಾನನ ಬಳಿಯಲ್ಲಿ ಲೂಕಾರಿಯನ ಮೇಲೆ ಸ್ವಾಮಿದ್ರೋಹವನ್ನಾರೋಪಿಸಿದ ಕಾರಣ ಇವನ ಮೈಗಾವಲಿಯವರು ಆ ಪತ್ರಿಯರ್ಖನನ್ನು ಹಿಡಿದು, ಒಂದು ಹಡಗದಲ್ಲಿ ಏರಿಸಿ, ಉರುಲು ಹಾಕಿ, ಅವನನ್ನು ಸಮುದ್ರಕ್ಕೆ ದೂಡಿದರು. ಆ ಕಾಲಕ್ಕೀಚೆ ಗ್ರೇಕಮತಸ್ಥರಿಗೂ ಸೌವಾರ್ತಿಕರಿಗೂ ತಿರಿಗಿ ಮಿತ್ರಸಂಧಾನಗಳು ನಡೆಯಲಿಲ್ಲ. ಹೀಗಿರಲಾಗಿ ತುರ್ಕರೊಳಗಿನ ಗ್ರೇಕ ಬಹಿಃಸಭೆಯು ಹೆಚ್ಚು ಹೆಚ್ಚಿಗೆ ಶುಷ್ಕತ್ವಕ್ಕೆ ಬಿತ್ತು. ಕ್ರಿ. ಶ. 1830ನೇ ಅಬ್ದ ಯವನ ದೇಶವು ತುರ್ಕರ ವಶದಿಂದ ವಿಮುಕ್ತವಾಗಲು, 3 ವರುಷದಿತ್ತ ಕಡೆ ಅಲ್ಲಿಯ ಸಭೆಯು ಕೊನ್ಸ್ತಂತೀನೊಪೊಲಿಯ ಪತ್ರಿಯರ್ಖನ ಅಧ್ಯಕ್ಷತೆಯನ್ನಗಲಿ ಬಿಟ್ಟು, ತನ್ನ ಕಾರುಬಾರು ಮಾಡ ತಕ್ಕದೆಂತ, ಅಥೇನೆ ಪಟ್ಣದಲ್ಲಿ ಸಂಸದಸ್ಸೆಂಬ ಸಂಘವನ್ನು ನಿರ್ಮಿಸಿತು.

ಆದರೆ ಹಿಂದೆ ಮಾತು ಕೊಟ್ಟಂತೆ[1] ಈಗ ರುಸ್ಸಿಯ ದೇಶದಲ್ಲಿ ಗ್ರೇಕ ಮತವು ಪ್ರವೇಶಿಸಿದ್ದನ್ನು ವರ್ಣಿಸುವ. ಕ್ರಿ. ಶ. 850ನೇ ವರುಷಕ್ಕಾದರೂ ಅಂದು ಇನ್ನು ಮೂರ್ತಿಪೂಜಕರಾಗಿರುವ ರುಸ್ಸರಿಗೆ ಗ್ರೇಕ ಕೈಸರರ ಪ್ರಯತ್ನದ ಮೂಲಕ ಕ್ರೈಸ್ತತ್ವ ಸಾರಲಾಯಿತಂತೆ. ಹ್ಯಾಗಾದರೂ 100 ವರುಷದಿತ್ತ ರುಸ್ಸಿಯದ ಕೀಯೆವೆಂಬ ಆಗಿನ ರಾಜಧಾನಿಯಲ್ಲಿ ಒಂದು ದೊಡ್ಡ ಕ್ರೈಸ್ತ ಸಭೆಯು ಉತ್ಪನ್ನವಾಗಿತ್ತು. ಬಳಿಕ ಕ್ರಿ. ಶ. ಸುಮಾರು 1000ನೇ ಅಬ್ದ ರುಸ್ಸಿಯದ ಅಪೊಸ್ತಲೋಮಪನೆಂಬ ಉಪನಾಮವುಳ್ಳ ವ್ಲಾದಿವಿಾರ ಮಹಾರಾಜನು ತನ್ನ ರಾಜ್ಯದಲ್ಲಿ ಕ್ರೈಸ್ತ ಮತವನ್ನು ಘಟ್ಟಿಯಾಗಿ ಬೇರೂರಿಸಿದನು. ಹ್ಯಾಗಂದರೆ, ಅವನು 10 ಮಂದಿ ಆಪ್ತ್ಯರನ್ನು ಬೇರೆ ಬೇರೆ ದೇಶಗಳಿಗೆ ಪ್ರೇಷಿಸಿ, ಅವರಿಂದ ಅಲ್ಲಲ್ಲಿಯ ಮತಗಳನ್ನೂ ದೇವಾರಾಧನೇ ವಿಧಗಳನ್ನೂ ವಿಚಾರಣೆ ಮಾಡಿಸುತ್ತಿರಲು, ಇವರು ಕೊನ್ಸ್ತಂತೀನೊಪೊಲಿಗೆ ಸಹ ಬಂದು, ಅಲ್ಲಿಯಣ ಸೊಫಿಯ ದೇವಾಲಯದ[2] ಸೌಂದರ್ಯವನ್ನೂ ಅದರೊಳಗೆ ನಡಿಯುವ ದೇವಾರಾಧನೆಯ ಸೌರಂಭವನ್ನೂ ಕಂಡು, ಅತಿ ವಿಸ್ಮಿತರಾ

1) 324ನೇ ಪಾನು. 2) 217ನೇ ಪಾನು.

ಗಿ, ತಮ್ಮ ಮಹಾರಾಜನ ಸನ್ನಿಧಾನಕ್ಕೆ ಮರಳಿ, ಸುದ್ದಿ ಹೇಳಲು, ಇವನು ತಡೆಯದೆ, ಗ್ರೇಕ ರಾಜ್ಯದ ಕ್ರೈಸ್ತತ್ವವನ್ನಾರಿಸಿ ಕೊಂಡು, ಅಲ್ಲಿಂದ ಬೋಧಕರನ್ನು ತರಿಸಿ, ತನಗೆ ಪರಿಶುದ್ಧ ಸ್ನಾನ ಮಾಡಿಸಿ ಕೊಳ್ಳುವಲ್ಲಿ ಅಂದಿನ ಗ್ರೇಕ ಕೈಸರನ ಬಸಿಲೀಯನೆಂಬ ಹೆಸರನ್ನಿಕ್ಕಿಸಿ ಕೊಂಡು, ಒಬ್ಬ ಗ್ರೇಕ ಶ್ರೀಮಂತೆಯಾದ ಅನ್ನಳೆಂಬವಳನ್ನು ಮದಿವೆ ಮಾಡಿ ಕೊಂಡ ಹಿಂದೆ ಬಲಾತ್ಕಾರದಿಂದ ಸಹ ಕ್ರೈಸ್ತತ್ವವನ್ನು ರುಸ್ಸಿಯದಲ್ಲಿ ವಿಸ್ತಾರ ಗೈಯುವದಕ್ಕೆ ಹತ್ತಿ, ವಿಗ್ರಹಗಳನ್ನೊಡೆದು, ಬೀದಿಗಳಲ್ಲೆಳೆದು, ಸುಟ್ಟು ಅಥವಾ ಹೊಳೆಗೆ ದೊಬ್ಬಿ, ದೊಡ್ಡನೆಂಬ ಕರ್ಲ ಕೈಸರನಂತೆ[1] ತಾನು ಸಹ, ಪರಿಶುದ್ಧ ಸ್ನಾನ ಹೊಂದ ಬೇಕೆಂದು, ಪ್ರಜೆಗೆ ನಿರ್ದೇಶಿಸಿದನು. ತರುವಾಯ ವ್ಲಾದಿಮಿರನು ತೀರದಲ್ಲಿ ಮೊಣಗಾಲೂರಿ ತನ್ನ ಪ್ರಜೆಯ ಹಿತಕ್ಕಾಗಿ ದೇವಪ್ರಾರ್ಥನೆ ಮಾಡುವ ಡ್ನೀಪರ್ ಎಂಬ ಹೊಳೆಗೆ ಬಾಲ ಸ್ತ್ರೀ ಪುರುಷರ ಮಹಾ ಸಮೂಹದವರು ಬಂದು, ತೆಪ್ಪಗಳಲ್ಲಿ ನಿಂತಿರುವ ಮತೋದ್ಯೋಗಿಗಳ ಕೈಯಿಂದ, ಸ್ವಾಮಿಯ ಅಪ್ಪಣೆಯಾಯಿತೆಂತ, ಮೌನರಾಗಿ ಸ್ನಾನ ತೆಕ್ಕೊಂಡರು. ತದನಂತರ ಕೀಯೆವು ಮತ್ತು ನೊವ್ಗೊರೊದು ಎಂಬ ಎರಡು ಪಟ್ಣಗಳಲ್ಲಿ ಒಂದೊಂದು ಪ್ರಧಾನಾಧ್ಯಕ್ಷತಾಸ್ಥಳವು ಸ್ಥಾಪಿತವಾಯಿತು; ಮಠಿಕರ ಮಠಗಳನ್ನೂ ಶಾಲೆಗಳನ್ನೂ ಕಟ್ಟಲಾಯಿತು; ಅದಲ್ಲದೆ ಕುರಿಲ್ಲನೆಂಬ ಆ ಮಠಿಕನು[2] ರಚಿಸಿದ್ದ ದೇವವಾಕ್ಯದ ಹಳೇ ಸ್ಲಾವಿಕ ಭಾಷಾಂತರವು ರಾಜ್ಯದ ದೇವಾರಾಧನೆಗಳಲ್ಲಿ ಪ್ರಚುರವಾಯಿತು.

ಕೊನ್ಸ್ತಂತೀನೊಪೊಲಿಯ ಪತ್ರಿಯರ್ಖರು ಮೊಹಮ್ಮದಿಯರ ಅಧೀನತೆಯಲ್ಲಿ ಬರ ಬರ ಅಧಿಕಾರ ಕುಂದಿದವರಾಗುತ್ತಾ, ತುರ್ಕ ರಾಜ್ಯದಲ್ಲಿ ಗ್ರೇಕ ಬಹಿಃಸಭೆಯು ದೇವರ ಶಿಕ್ಷೆಯಿಂದಲೂ ತಿದ್ದಲಾಗದೆ ಕಾಷ್ಟದಂತಾಗುತ್ತಾ ಇರಲು, ನೆರೆ ದೇಶವಾದ ರುಸ್ಸಿಯದಲ್ಲಿ ಗ್ರೇಕ ಸಭೆಯ ಬಲವೂ ಮಾನವೂ ಏರುತ್ತಲಿತ್ತು. ಆರಂಭದಲ್ಲಿ ರುಸ್ಸ ಸಭೋದ್ಯೋಗಿಗಳು ಕೊನ್ಸ್ತಂತೀನೊಪೊಲಿಯ ಪತ್ರಿಯರ್ಖನ ವಿಚಾರಣದಲ್ಲಿ ಇದ್ದದ್ದು ಸರಿ; ಆದರೆ ಸುಮಾರು ಕ್ರಿ. ಶ. 1600ನೇ ಅಬ್ದ ರುಸ್ಸರ ಒಬ್ಬ ಕೈಸರನು ಆ ಪತ್ರಿಯರ್ಖನಿಗೆ ಹಣ ಕೊಟ್ಟು, ತನ್ನ ರಾಜ್ಯದ ಮೊಸ್ಕಾವೆಂಬ ಪಟ್ಣದಲ್ಲಿ ರುಸ್ಸರ ಸಭೆಗಾಗಿ ಒಬ್ಬ ಪ್ರತ್ಯೇಕ ಪತ್ರಿಯರ್ಖನನ್ನು ಆರಿಸಿಡ ಬಹುದೆಂಬ ಅಪ್ಪಣೆ ಪಡೆದು[3], ಹಾಗೆ ಮಾಡಿದನಂತರ ಬಹಳ ಕಾಲ ಹೋಗದ್ದಕ್ಕಿಂತ ಮುಂಚೆ ಮೊಸ್ಕಾವಿನ ಈ ಪತ್ರಿಯರ್ಖರು ಅಧಿಕಾರದಲ್ಲಿ ಮಿಗೆ ಬೆಳೆದು, ರುಸ್ಸ ಕೈಸರರೆದುರಿನಲ್ಲಿ ಸಹ ಅಧಿಕಾರಾಭಿಮಾನ ತೋರಿಸುವವರಾದರು. ಆದ ಕಾರಣ ದೊಡ್ಡ ಪೆತ್ರನೆಂಬ ಉಪನಾಮವುಳ್ಳ ಕೈಸರನು ಸುಮಾರು ಕ್ರಿ. ಶ. 1700ನೇ ಅಬ್ದ ಆ ಪತ್ರಿಯರ್ಖತ್ವವನ್ನು ತಿರಿಗಿ ಕಿತ್ತು, ತಾನೇ ರುಸ್ಸ ಸಭೆಯ ಆಶ್ರಯದಾತನೂ ಅಧಿ

1) 317ನೇ ಪಾನು. 2) 323, 324ನೇ ಪಾನು. 3) 343ನೇ ಪಾನು.

ಪತಿಯೂ ಎಂತ, ನಿರ್ಣಯ ಪ್ರಕಟಿಸಿ, ಅಧ್ಯಕ್ಷರದೊಂದು ಸಂಘಕ್ಕೆ ಸಕಲ ಮತಕ ಕಾರ್ಯಗಳನ್ನು ಒಪ್ಪಿಸಿತ್ತನು. ಕೈಸರನ ಚಿತ್ತದೊಳಗಣ ಈ ಸಂಘವು, ಪರಿಶುದ್ಧ ಸಂಸದಸ್ಸೆಂದು, ಎನ್ನಿಸಿ ಕೊಂಡು, ಪೆತೆರ್ಸ್ಬರ್ಗು ಎಂಬ ಈಗಿನ ರಾಜಧಾನಿಯಲ್ಲಿ ಇರುವದು; ಅದರಿಂದ ಹೊರಡುವ ನಿರ್ಣಯಗಳು ಸರ್ವ ರುಸ್ಸಿಯದ ಗ್ರೇಕಮತಸ್ಥರಾದ ಸಭೋದ್ಯೋಗಿಗಳಿಗೆ ಸಲ್ಲುವವು. ಆ ಕಾಲಾರಭ್ಯ ದೊಡ್ಡ ಪೆತ್ರ ಮುಂತಾದ ಕೈಸರರು ಪರದೇಶಗಳಿಂದ ಸಕಲ ತರದ ವಿದ್ವಾಂಸರನ್ನು ತರಿಸಿ, ಚಿಕ್ಕ ದೊಡ್ಡ ಶಾಲೆಗಳನ್ನು ಇಟ್ಟು, ಅನೇಕ ದೇವಾಲಯಗಳನ್ನು ಕಟ್ಟುತ್ತಾ ಬಂದದರಿಂದ ಮುಂಚೆ ಕಾಡುಪಾಲಾಗಿದ್ದ ರುಸ್ಸರಿಗೆ ಬಹಳ ಉಪಕಾರವಾಯಿತು; ಆದಾಗ್ಯೂ ರುಸ್ಸ ಪ್ರಜೆಯು ವಿದ್ಯೆಯಲ್ಲಿಯೂ ಕ್ರೈಸ್ತ ಜ್ಞಾನದಲ್ಲಿಯೂ ಇನ್ನೂ ಹಿಂದೆ ಬಿದ್ದದೆ.

ರುಸ್ಸ ರಾಜ್ಯಸಭೆಯ ದೇವಾಲಯಗಳಲ್ಲಿ ಪ್ರಸಂಗ ನಡೆಯುವದು ಅತ್ಯಪರೂಪ; ಯಾಕಂದರೆ ಮೇಲ್ತರದ ಸಭೋದ್ಯೋಗಿಗಳು ಅದಕ್ಕೆ ಯೋಗ್ಯರಾಗಿದ್ದರೂ ಕೆಳತರದವರು ಬಹುಶಃ ಅಯೋಗ್ಯರು; ಅಕ್ಷರವರಿಯದವರು ಸಹ ಇವರಲ್ಲಿ ಅನೇಕ ಮಂದಿ. ಮಿಸ್ಸಯಾಗವೆಂಬ ವಿಕರ್ಮವು[1] ದೇವಾರಾಧನೆಯ ಮುಖ್ಯಾಂಶವಾಗಿರುವದು; ಅದು ಅನೇಕ ಶುಷ್ಕವಾದ ಆಚಾರಗಳ ಸಹಿತ ನಡೆಯುವದು. ಅದರ ಮೇಲೆ ಬರುವ ದೇವಾರಾಧನೆಯ ಭಾಗದಲ್ಲಿ ದೇವವಾಗ್ವಚನಗಳನ್ನೂ ಭಕ್ತರ ಕಥೆಗಳನ್ನೂ ಪ್ರಾರ್ಥನೆಗಳನ್ನೂ ವಿಶ್ವಾಸಪ್ರಮಾಣಗಳನ್ನೂ ಹೇಳುವದೂ ಸಂಗೀತಮೇಳದವರು ಕೀರ್ತನೆಗಳನ್ನು ಹಾಡುವದೂ ಆಗುತ್ತಿರುವದು. ಸುಮಾರು 3 ತಾಸು ಹೊತ್ತಿನೊಳಗೆ ಸಭ್ಯರು ಕ್ರೂಜಾಕಾರನ್ಯಾಸ ಮಾಡುತ್ತಾ, ಮೊಣಗಾಲೂರುತ್ತಾ, ನೆಲಕ್ಕೆ ಮುದ್ದಿಕ್ಕುತ್ತಾ ಇರುವರಷ್ಟೇ; ಅವರಲ್ಲಿ ಯಾರೂ ಹಾಡುವದಿಲ್ಲ, ಅವರ ಹತ್ತರ ಪ್ರಾರ್ಥನಾಗ್ರಂಥವು ಇರುವದಿಲ್ಲ; ಅದು ಹೊರ್ತಾಗಿ ಅಂಥಾ ದೇವಾರಾಧನೆಯು ಆಗುವ ಹಳೇ ಸ್ಲಾವಿಕ ಭಾಷೆಯು ಹೆಚ್ಚು ಜನರಿಗೆ ತಿಳಿಯುವದಿಲ್ಲ. ಈ ಪರಿಯ ದೇವಾರಾಧನೆಯಿಂದ ಪ್ರಜೆಯ ದೇವಜ್ಞಾನವು ಅಭಿವೃದ್ಧಿ ಹೊಂದದ್ದಕ್ಕೆ ಆಶ್ಚರ್ಯವೇನು[2]?

ಈಗ ನಡೆಯುವ ಶತಮಾನದ ಆರಂಭಕ್ಕೆ ಕ್ರಿ. ಶ. 1813ನೇ ಅಬ್ದ ಹಿಡಿದು ದೇವವಾಗ್ಗ್ರಂಥವಿಸ್ತಾರಕಸಂಘದವರು[3] ರುಸ್ಸ ಭಾಷೆಯ ಪರಿಶುದ್ಧ ಬರಹಗ್ರಂಥಗಳನ್ನು ಕಳುಹಿಸಿ, ರುಸ್ಸ ರಾಜ್ಯಸಭ್ಯರೊಳಗೆ ಸಹ ಹಂಚಿಸುವದರಿಂದ ಅವರೊ

---

1) 358ನೇ ಪಾನು. 2) ಈಗ ಸಲ್ಲುವ ಕ್ರಿ. ಶ. 1869ನೇ ವರುಷ ಕೈಸರನ ಅಪ್ಪಣೆಯೊಳಗೆ ರಚಿತವಾಗಿ ತೀರಿದ ದೇವವಾಕ್ಯದ ರುಸ್ಸ ಭಾಷಾಂತರದಿಂದ ಮಿಗಿಲಾಶೀರ್ವಾದ ಬಂದೀತು. 3) 75ನೇ ಸಂಧಿ.

ಳಗೆ ಭಕ್ತಿಯುರಿಯು ಹೊತ್ತಲೆಸಗಿತು; ಆದರೂ ಕ್ರಿ. ಶ. 1826ನೇ ಅಬ್ದ ನೀಕೊಲಾವನೆಂಬ ಕೈಸರನು—ಆ ದೇವವಾಗ್ಗ್ರಂಥವಿಸ್ತಾರಕಸಂಘದವರು ಇನ್ನೂ ತನ್ನ ಸಾಮ್ರಾಜ್ಯದ ಗ್ರೇಕಮತಸ್ಥರಲ್ಲಿ ಅಲ್ಲ, ಸೌವಾರ್ತಿಕರಲ್ಲಿಯೂ ಪಪ್ಪಕರಲ್ಲಿಯೂ ಮಾತ್ರ ತಮ್ಮ ವೃತ್ತಿ ಗೈಯ ಬಹುದೆಂದು, ವಿಧಿಸಿದ ಕಾರಣದಿಂದ ಅದು ತಿರಿಗಿ ಆರಿತು. ತದನಂತರ 2ನೇ ಅಲೆಕ್ಸಂದರನೆಂಬ ಈಗಿನ ಕೈಸರನು ಸೌವಾರ್ತಿಕ ಒಡಂಬಡಿಕೆ ಎಂಬ ಸಮಾಜದವರ[1] ಬಿನ್ನಹದ ಮೇಲೆ ಆ ವಿಧಿಯನ್ನು ತಿರಿಗಿ ರದ್ದು ಮಾಡಿದ್ದರಿಂದ ಸುಫಲ ಹುಟ್ಟುವದು ತಪ್ಪಲಿಕ್ಕಿಲ್ಲವು. ಅನ್ಯ ಮತವನ್ನವಲಂಬಿಸುವ ಗ್ರೇಕ ಮತಜನೊಬ್ಬನಿಗೆ ಮರಣಶಿಕ್ಷೆ ಎಂಬ ರಾಜಾಜ್ಞೆ ಇರುವ ಕಾರಣ ರುಸ್ಸಿಯದಲ್ಲಿ ಸೌವಾರ್ತಿಕ ಮತದ ವಿಸ್ತರಣಕ್ಕೆ ಬಹಳ ಅಡ್ಡಿಯುಂಟು.

ಸದಸತ್ಕಾರಣಗಳಿಂದ ರುಸ್ಸಿಯದ ರಾಜ್ಯಸಭೆಯನ್ನಗಲಿ ನಾನಾ ಹಿಂಸೆ ತಾಳಿ ಉಳಿದ ಅನೇಕಾನೇಕ ಸಭೆಗಳು ಉದ್ಭವಿಸಿ ಅವೆ; ಅವುಗಳವರು ಮುಖ್ಯವಾಗಿ ಒಕ್ಕಲಿಗರು.

## 73. ಪಪ್ಪಕ ಸಭೆಯು ಸ್ಥಿತಿಗತಿಯು.

ಪುನಃಸ್ಥಾಪನೆಯ ದೆಸೆಯಿಂದ ಯುರೋಪ ಖಂಡದ ಬಹು ದೇಶಗಳಲ್ಲಿ ನವಜೀವನದ ಜ್ಯೋತಿಯು ಉದಯಿಸಿದಾಗ ಪಪ್ಪಕರು ಸ್ವಮತವನ್ನುಳಿಸುವದಕ್ಕೆ ತಮ್ಮಿಂದಾಗುವಷ್ಟು ಧಾವತಿ ಗೈಯುವವರಾದರು. ಅವರು ಸೌವಾರ್ತಿಕ ಮತಕ್ಕೆ ವಾಚಾತೀತ ಕ್ರೂರತ್ವದಿಂದ ಎದುರಿಸಿದ ಈತಲಿಯ[2] ಸ್ಪಾನಿಯ[3] ಈ ದೇಶಗಳಲ್ಲಿ ಅದು ಅಡಗಿದರೂ ಬೇರೆ ದೇಶಗಳಲ್ಲಿ ಅದು ಹೆಚ್ಚು ಕಡಿಮೆ ಜಯಗತಿ ಹೊಂದಿತು[4]; ಕ್ರಿ. ಶ. 1540ನೇ ವರುಷಕ್ಕೀಚೆ ವಿಶೇಷವಾಗಿ ಯೇಸುವಿತ ಕುಲದವರು ಸುವಾರ್ತಾವಿಸ್ತರಣಕ್ಕೆ ಎದುರ್ಗಂಡಿಸುವವರಾದರು[5]; ತ್ರಿಯೆಂತಿನ ಪಪ್ಪಕ ಸಂಘದವರು, ಸೌವಾರ್ತಿಕ ಬೋಧನೆ ಪಾಷಂಡವೆಂದು, ಶಪಿಸಿದರು[6]; ಇಷ್ಟೆಲ್ಲಾ ನೀವು ಹಿಂದೆ ಪಠಿಸಿದಿರಲ್ಲವೇ? ಅದು ವಿನಹ ತಮಗೆ ಯುರೋಪದಲ್ಲಿ ತಪ್ಪಿ ಹೋದ ನೆಲೆಯನ್ನು ಪಪ್ಪಕರು ಹಿಂದುದೇಶ ನಿಪೊನ್ಜ್ ಚೀನ ಅಮೆರಿಕ ಎಂಬ ಪರಸ್ಥಳಗಳಲ್ಲಿ ಪುನಃ ಘಳಿಸಿ ಕೊಳ್ಳುವ ಪ್ರಯತ್ನದಲ್ಲಿ ಯೇಸುವಿತರು ಮುಂಗೊಂಡಿದ್ದರೆಂಬದು ಸಹ ಹಿಂದೆ ಸೂಚಿಸಿ ಅದೆ[7].

1) 78ನೇ ಸಂಧಿ. 2) 456, 474, 528ನೇ ಪಾನು. 3) 474ನೇ ಪಾನು. 4) 456ನೇ ಪಾನು. 5) 59ನೇ ಸಂಧಿ; 500ನೇ ಪಾನು; 63ನೇ ಸಂಧಿ; 518—520(536—544)ನೇ ಪಾನು. 6) 447ನೇ ಪಾನು. 7) 536ಆದಿ ಪಾನು.

ತನ್ಮಧ್ಯ ಪಪ್ಪಕ ಪಕ್ಷಸಭೆಯೊಳಗೂ ಇದ್ದ ಭಕ್ತರದೊಂದು ಪಾಲಿನವರು ಪಪ್ಪಕ ಶುಷ್ಕ ಆಚಾರಗಳಿಂದ ತೃಪ್ತಿ ಪಡದ್ದು ಮಾತ್ರವಲ್ಲದೆ ಮತ್ತೊಂದು ಪಾಲಿನವರು ತಮ್ಮ ಪಾಪಿಷ್ಠತ್ವವನ್ನೂ ನೀತಿಚರ್ಯೆಯಲ್ಲಿ ತಮಗಿರುವ ಬಲಹೀನತ್ವವನ್ನೂ ಚನ್ನಾಗಿ ಅರಿತು, ಮನುಷ್ಯನು ಸ್ವಯಂಕೃತ ಪುಣ್ಯದಿಂದ ತನ್ನ ಮೋಕ್ಷ ಸಂಪಾದಿಸಿ ಕೊಳ್ಳ ಬಹುದೆಂತಲ್ಲದೆ ಅದನ್ನು ಹಾಗೆಯೇ ಸಂಪಾದಿಸಿ ಕೊಳ್ಳ ಬೇಕೆಂತಲೂ, ಹೇಳುವ ತಮ್ಮ ಮತದ ಬೋಧನೆಗೆ ನಿರಾಶೆ ಪಟ್ಟದ್ದು ಸಹ ತನ್ನಿಂದ ತಾನೇ ತಿಳಿಯುತ್ತದೆ. ಹೀಗಿರಲಾಗಿ ಮುಂಚಿನಂತೆ[1] 17ನೇ ಕ್ರಿಸ್ತಶತಮಾನದಲ್ಲಿಯೂ ಪಪ್ಪಕರಲ್ಲಿ ತಿರಿಗಿ ಬಹು ಜನ ಮುಸ್ತಿಕರೆಂಬ ಪರಮಾರ್ಥವಿಚಾರಕರೆದ್ದು, ಉಪವಾಸ ಮಾಲಾಜಪ ದಂಡನಪ್ರಾಯಶ್ಚಿತ್ತ ಮುಂತಾದ ಪಪ್ಪಕ ಮೋಕ್ಷೋಪಾಯಗಳ ಅನರ್ಥತ್ವವನ್ನು ತೋರಿಸಿ, ಅವಕ್ಕೆ ಬದಲಾಗಿ ನಿಜವಾದ ಹೃದ್ಯ ಭಕ್ತಿಯೂ ಹೃದಂತರ್ಗತ ದೇವಪ್ರೀತಿಯೂ ಬೇಕೆಂತ, ಸಾರಿ, ತಮ್ಮ ಮನೋವಾಕ್ಕಾಯಗಳಿಂದ ಈ ವಿಧದ ಸನ್ಮಾರ್ಗದಲ್ಲಿ ನಡಿಯುವವರಾಗಿ, ಸುವಾರ್ತಾವಿಶ್ವಾಸಕ್ಕನುಸಾರವಾದ ಸಜ್ಜೀವನವನ್ನು ಪಪ್ಪಕ ಸಭೆಯಲ್ಲಿ ಸ್ಥಾಪಿಸಲೆಸಗಿದರು. ಇಂಥವರಲ್ಲಿ ಕೆಲವರು ಯಾರಂದರೆ—ಗೆನ್ಸ್ಪು ಪಟ್ಣದ[2] ಒಬ್ಬ ಅಧ್ಯಕ್ಷನಾದ ಸಾಲೆಸಿನ ಫ್ರಂಚನು; ಸ್ಲೇಸಿಯೆನು ಶೀಮೆಯ[3] ದೊಡ್ಡ ಪಟ್ಣವಾದ ಬ್ರೆಸ್ಲಾವುವಿನ ಒಬ್ಬ ಪ್ರೀಸ್ತನಾದ ಯೋಹಾನ ಷೆಫ್ಲೆರನು; ಸ್ಪಾನಿಯದಲ್ಲಿ ಹುಟ್ಟಿ ರೋಮದಲ್ಲಿ ಪ್ರೀಸ್ತನಾದ ಮೊಲೀನೊಸೆಂಬವನು; ಫ್ರಂಚು ದೇಶದ ಕಂಬ್ರೇ ಪಟ್ಣದ ಪ್ರಧಾನಾಧ್ಯಕ್ಷನಾದ ಫೆನೆಲೊಬ್ ಎಂಬವನು; ಇತ್ಯಾದಿ. ಫೆನೆಲೊಬ್ ಎಂಬವನು ಕ್ರಿ. ಶ. 1675ನೇ ವರುಷ ಪ್ರೀಸ್ತನೂ ಒಂದು ಬಾಲಶಿಕ್ಷಾಮಠದ ಮುಖ್ಯಸ್ಥನೂ ಆದ ಮೇಲೆ 14ನೇ ಲೂಯಿ ರಾಜನು[4] ಅವನನ್ನು ಸಹ ಸೌವಾರ್ತಿಕರಿಗೆ ಮಾನಸಾಂತರ ಪಡಿಸೆಂಬದಕ್ಕೋಸ್ಕರ ಕರೆಯಲು, ಅವನು, ದಂಡುಗಾರರನ್ನು ತನ್ನ ಸಂಗಡ ಕಳುಹಿಸದಿದ್ದರೆ ಆದೀತೆಂತ, ಹೇಳಿದನು. ಈ ಮಾತಿನಲ್ಲಿ ಗೋಚರಿಸುವ ಕ್ಷಮಾಭಾವದ ದೆಸೆಯಿಂದ ಹೂಗೊನೊತ್ತರು ಸಹ ಅವನಿಗೆ ಮನ್ನಣೆ ಮಾಡುವವರಾದರು. ಕ್ರಿ ಶ. 1689ನೇ ವರುಷ ಅವನು ಆ ರಾಜನ ಮೊಮ್ಮಕ್ಕಳ ಶಿಕ್ಷಕನಾಗಿ, 5 ವರುಷಕ್ಕೀಚೆ ಕಂಬ್ರೇ ಪಟ್ಣದ ಪ್ರಧಾನಾಧ್ಯಕ್ಷತೆಗೆ ಸಹ ಬಂದು, ಕೆಲವು ಭಕ್ತಿಯುತ ಗ್ರಂಥಗಳನ್ನು ಪ್ರಕಟಿಸಿ, ಅರಸನ ಮತ್ತು ಪಪ್ಪನ ಒಲುಮೆ ಕಳಕೊಂಡವನಾದನು. ಕ್ರಿ. ಶ. 1697ನೇ ವರುಷ ಅವನ ಮಂದಿರವೂ ಅದರೊಳಗಿನ ಪುಸ್ತಕಸಂಗ್ರಹಶಾಲೆಯೂ ಸುಟ್ಟು ಹೋಗುವಾಗ ಅವನು ಹೂಗೊನೊತ್ತರಿಗಾಗುವ ಹಿಂಸೆಯನ್ನು ನೆನಸಿ, ಒಬ್ಬ ಬ

1) 410ನೇ ಪಾನು. 2) 604, 605ನೇ ಪಾನು. 3) 393, 408ನೇ ಪಾನು. 4) 514—516ನೇ ಪಾನು.

ಡ ಒಕ್ಕಲಿಗನ ಗುಡಸಲು ಸುಟ್ಟದ್ದಕ್ಕಿಂತ ಲಘುವಾಯಿತೆಂತ, ನುಡಿದನು. ಕ್ರಿ. ಶ. 1710ನೇ ವರುಷ ಫ್ರಂಚಿನ ಉತ್ತರ ಪ್ರಾಂತದಲ್ಲಿ ಒಂದು ಸೌವಾರ್ತಿಕವಾದ ಗೋಪ್ಯ ಸಭೆಯ ಪ್ರಸಂಗಿಕನಾದವನೊಬ್ಬನು ಅವನಿಗೆ ಭೇಟಿ ಕೊಡಲು, ಫೆನೆಲೊಜ್ ಒಬ್ಬ ಸಹೋದರನೆಂಬಂತೆ ಅವನನ್ನಂಗೀಕರಿಸಿ, ಭೋಜನಕ್ಕೆ ಸಹ ಕರೆದು, ಅವನ ಸಭ್ಯರಿಗೆ ಒಕ್ಕಲು ತೆಗೆದು ಹೋಗುವದಕ್ಕೆ ಸಂದರ್ಭವಾಗುವ ಹಾಗೆ ಅವರಿಗೆ ರಾಜಶಾಸನಗಳನ್ನು ದೊರಕಿಸಿತ್ತನು. ಐದು ವರುಷಕ್ಕೀಚೆ ಅವನು ಮರಣಗತಿಯಲ್ಲಿ ಬರುವಾಗ, ಕ್ರಿಸ್ತನ ಸಂಗಡ ಕ್ರೂಜಿತನಾಗಿದ್ದೇನೆಂತ, ಹೇಳಿ, ಪರಂಧಾಮವನ್ನೈದಿದನು.

ಅಂಥಾ ಮುಸ್ತಿಕರಿಂದ ಪಪ್ಪಕ ಸಭೆಯಲ್ಲಿ ಮಹಾಶೀರ್ವಾದವು ಹುಟ್ಟುವ ಹಾಗಾದರೂ ಪಪ್ಪರು ಸಕಲ ಹೊಸ ಕಾರ್ಯಗಳಿಗೆ ಅನುಮಾನಿಸಿದ್ದಲ್ಲದೆ ಯೇಸುವಿತರ ದುರ್ಬುದ್ಧಿಗೊಳಗಾಗಿ, ಆ ಮುಸ್ತಿಕರನ್ನು ಕಥರರೆಂಬಂತೆ ನಡಿಸಿದರು. ನಿದರ್ಶನಕ್ಕಾಗಿ ಆ ಮೊಲೀನೊಸನ್ನು ತನ್ನ ಮರಣದ ತನಕ ಒಂದು ಮಠದಲ್ಲಿ ಶೆರೆ ಮಾಡಿಟ್ಟರು; ಫೆನೆಲೊಜೆಂಬವನ ಮೇಲೆ ಪಪ್ಪನದೊಂದು ಶಪಥನಿರ್ಣಯ ಬಿತ್ತು. ಹೀಗೆ ಆ ಮಹಾತ್ಮರ ಪ್ರಸಂಗಶಬ್ದವನ್ನು ಒತ್ತಾಯದಿಂದ ಅಣಗಿಸಿದ ಕಾರಣ ಅವರ ಸುವೃತ್ತಿಯು ಬಹಳ ಫಲಕ್ಕೆ ಬರಲಿಲ್ಲ.

ಮುಸ್ತಿಕತ್ವದ ತಾತ್ಪರ್ಯವು ಯನ್ಸೆನಿಸ್ತಿಕತ್ವವೆಂಬದರಲ್ಲಿಯೂ ಪ್ರತ್ಯಕ್ಷವಾಯಿತು. ಹ್ಯಾಗಂದರೆ ಸೌವಾರ್ತಿಕ ಸಭೆಯವರು ಪಪ್ಪಕ ಸಭೆಯಲ್ಲಿ ಶೇರಿದ ಪೆಲಗಿಯನ ಕರ್ಮಠ ಬೋಧನೆಯನ್ನು[1] ತಳ್ಳಿ, ವಿಶ್ವಾಸದಿಂದ ಮಾತ್ರವೇ ದೇವರ ಕಡೆಯಿಂದ ನೀತಿನಿರ್ಣಯವಾಗುತ್ತದೆಂಬ ಪರಿಶುದ್ಧ ಬರಹದ ಅಭೇದ್ಯವಾದ ಬೋಧನೆಯನ್ನು ಪುನಃಸ್ಥಾಪಿಸಿ, ಇದಕ್ಕಾಗಿ ಹಿಪ್ಪೊ ಪಟ್ಟದ ಔಗುಸ್ತೀನ[2] ಮೊದಲಾದ ಪೂರ್ವ ಸಭಾಪಿತರ ಸಾಕ್ಷಿವಾಕ್ಯಗಳನ್ನು ಸಹ ತರಲು, ಪಪ್ಪಕ ಸಭೆಯಲ್ಲಿ ಆ ಯಶಸ್ಸುಳ್ಳ ಬೋಧನಾರ್ಥವನ್ನು ಕುರಿತು ವಾಗ್ವಾದವು ಉದ್ಭವಿಸಿತು. ಅದು ಬೆಲ್ಗಿಯೆನೆಂಬ ದೇಶದಲ್ಲಿ[3] ಆರಂಭವಾಯಿತು. ಅಲ್ಲಿ ಗೆರ್ಮಾನಿಯದ 30 ವರುಷದ ಯುದ್ಧಕಾಲಕ್ಕೆ[4] ಕ್ರಿ. ಶ. 1638ನೇ ಅಬ್ದ ಈಪೆರ್ನ ಪಟ್ಟದ ಒಬ್ಬ ಪಪ್ಪಕ ಅಧ್ಯಕ್ಷನಾದಂಥ ಯನ್ಸೆನನೆಂಬವನು ಹಿಪ್ಪೊ ಪಟ್ಟದ ಆ ಔಗುಸ್ತೀನನು ಜನಪಾಪವನ್ನೂ ದೇವಕೃಪೆಯನ್ನೂ ಪುರಾವಸ್ಥಾಪನೆಯನ್ನೂ[5] ಕುರಿತು ಬೋಧಿಸಿದ್ದೆಲ್ಲವನ್ನು ಬಹು ವಿದ್ವಾಂಸಿಕೆಯಿಂದ ಒಂದು ಗ್ರಂಥದಲ್ಲಿ ನಿದರ್ಶಿಸಿ, ಇದ್ದಂತೆಯೇ ತಿರಿಗಿ ಸಾಗಿಸಲಿಕ್ಕೆ ಪ್ರಯತ್ನ ಪಟ್ಟು, ಸ್ವಲ್ಪ ಕಾಲದಿತ್ತ ಸತ್ತನು. ಬಳಿಕ ಅಂದಿನ ಪಪ್ಪನು ಯೇಸುವಿತರಿಂದ ನಡಿಸಿ ಕೊಂಡು, ಯನ್ಸೆನನ ಗ್ರಂಥವನ್ನು ಯಾರೂ ಓದ ಬಾರದೆಂದು,

1) 449ನೇ ಪಾನು. 2) 440; 426ನೇ ಪಾನು. 3) 472ನೇ ಪಾನು. 4) 551ನೇ ಪಾನು. 4) 439ನೇ ಪಾನು.

ಅಜ್ಞಾಪಿಸಿದಾಗ್ಯೂ ಫ್ರಂಚು ದೇಶದ ಪಪ್ಪಕ ಸಭೆಯವರಲ್ಲಿ ಪಸ್ಕಲ್ ಎಂಬ ಮಹಾ ಪಂಡಿತ ಮುಂತಾದ ಬೇರೆ ಬೇರೆ ಮಂದಿ ಭಕ್ತಿಯುಳ್ಳ ಪಂಡಿತರು ಔಗುಸ್ತೀನನ ಬೋಧನಾರ್ಥವನ್ನು ಸಂರಕ್ಷಿಸುವವರಾಗಿ, ಸರ್ವರೂ ಪರಿಶುದ್ಧ ಬರಹವನ್ನೋದ ತಕ್ಕದೆಂದು, ಕೂಡ ಸ್ಥಾಪಿಸುವವರಾಗಿ, ಯೇಸುವಿತರ ಕುನೀತಿಯನ್ನು ಖಂಡಿತ ವಾಗಿ ಭೇದಿಸಲಿಕ್ಕೂ ಹತ್ತಿದರು. ಅಂಥವರಿಗೆ ಯನ್ಸೆನಿಸ್ತರೆಂಬ ಅಡ್ಡಹೆಸರಾಯಿತು. ತರುವಾಯ ಯೇಸುವಿತರು ಮುಂಚಿಗಿಂತ ಹೆಚ್ಚಾಗಿ ಆ ಸೌವಾರ್ತಿಕ ಭಾವದ ಯನ್ಸೆನಿಸ್ತರಿಗೆ ಮಾರ್ಮಲೆಯುವಲ್ಲಿ 11ನೇ ಕ್ಲೇಮೆಂತ ಪಪ್ಪನು ಯೇಸುವಿತರ ಸಹಾಯಕ್ಕಾಗಿ ಎದ್ದು, ಕ್ರಿ. ಶ. 1713ನೇ ಅಬ್ದ, ಸಾಧಾರಣ ಸಭ್ಯರಿಗೆ ದೇವವಾಕ್ಯವನ್ನೋದುವದಕ್ಕೆ ಅಧಿಕಾರವಿಲ್ಲವೆಂತ[1], ಊನಿಗೆನಿತವೆಂಬದೊಂದು ಬುಲ್ಲದಿಂದ ಆಜ್ಞೆ ಕೊಟ್ಟದು ಮಾತ್ರವಲ್ಲದೆ ತಾನು ಔಗುಸ್ತೀನನ ಗ್ರಂಥಗಳಲ್ಲಿಂದಲೂ ದೇವವಾಕ್ಯದಲ್ಲಿಂದಲೂ ತೆಗೆದು ಆ ಬುಲ್ಲದಲ್ಲಿ ಇದ್ದಂತೆಯೇ ಬರೆದ ವಚನಗಳನ್ನಾದರೂ, ಕಥರತ್ವವೆಂದು, ಶಪಿಸಿದನು. ತದನಂತರ ಕ್ರಿ. ಶ. 1754ನೇ ಅಬ್ದಕ್ಕೆ 14ನೇ ಬೆನೆದಿಕ್ತ ಪಪ್ಪನು[2] ಆ ಬುಲ್ಲವನ್ನು ಇನ್ನೊಮ್ಮೆ ನೆಲೆಗೊಳ್ಳಿಸಿದನು. ಹಿಂದೆ ಗೊತ್ತಾದಂತೆ[3] ಆ ಸಮಯ ಎಲ್ಲರಿಗೂ ಅಸಹ್ಯ ಉಪದ್ರವಕರರಾಗಿದ್ದ ಯೇಸುವಿತರಿಗೆ ಶಿಕ್ಷೆ ಕೊಡುವ ಕಾರ್ಯದ ಮೇಲೆ ಸಮಸ್ತ ಪಪ್ಪಕರ ಮನಸ್ಸು ಸಹ ಹೋಗುವದರಿಂದ ಯನ್ಸೆನಿಸ್ತರನ್ನು ಮರೆತ ಹಾಗಾಯಿತು; ಹೀಗಿರಲಾಗಿ ಅವರ ಅಭಿಪ್ರಾಯವು ಮೂಲೆಗಣಗಿತು. ನೀದೆರ್ಲಂದಿನಲ್ಲಿ ಮಾತ್ರ ಅವರದೊಂದು ಸಭೆಯು ಪಪ್ಪನ ಅಧಿಕಾರ ತ್ಯಜಿಸಿ ಬಿಟ್ಟು, ಇಂದಿನ ವರೆಗೂ ಉಳಿದದೆ.

ಪುನಃ, 18ನೇ ಕ್ರಿಸ್ತಶತಮಾನದಲ್ಲಿ ಆ 14ನೇ ಕ್ಲೇಮೆಂತ ಪಪ್ಪನು[4] ತನ್ನೊಳಗಿನ ಸಭ್ಯರೆಲ್ಲರ ಬೆಸನದ ದೆಸೆಯಿಂದ ಯೇಸುವಿತರ ಕುಲವನ್ನು ಕೀಳ ಬೇಕಾದದ್ದೂ ಔಸ್ತ್ರಿಯ ರಾಜ್ಯದ[5] 2ನೇ ಯೋಸೇಫ ಕೈಸರನು ತನ್ನ ರಾಜ್ಯದಲ್ಲಿ ಪಪ್ಪನಿಗೆ ಮೆಚ್ಚದ ತರತರದ ನವಸ್ಥಾಪನೆಯನ್ನು ಮಾಡ ಪ್ರಯತ್ನ ಪಟ್ಟದ್ದೂ ಮುಖ್ಯವಾಗಿ ಫ್ರಂಚು ದೇಶದಲ್ಲಿ ನಾಸ್ತಿಕತ್ವವು ಸರ್ವ ಪ್ರಜೆಯಲ್ಲಿ ಪ್ರಬಲವಾದದ್ದೂ ಅಲ್ಲಿ ಆ ಭೀಕರವಾದ ರಾಜ್ಯಪರಿವರ್ತನ ಸಂಭವಿಸಿದ್ದೂ[6] ಈ 4 ಕೃತ್ಯಗಳಿಂದ ಪಪ್ಪಕತ್ವವನ್ನೊಡೆಯಲಿಕ್ಕೆ ಸುರಂಗವಿಟ್ಟಂತೆ ಅನಕ ತೋರಿತು; ಆದರೂ ಅದು ಜೀವಗೇಡಿಗೆ ಗುರಿಯಾಗಲಿಲ್ಲ. ಯೋಸೇಫ ಕೈಸರನ ನವಸ್ಥಾಪನೆಯನ್ನೂ ಫ್ರಂಚಿನಲ್ಲಿಯ ನಾಸ್ತಿಕತ್ವ ರಾಜ್ಯಪರಿವರ್ತನಗಳನ್ನೂ ಕುರಿತು ಇನ್ನು ಸ್ವಲ್ಪ ವಿವರ ಹೇಳೋಣ.

ಗೆರ್ಮಾನಿಯಕ್ಕೆ ಶೇರಿದ ಔಸ್ತ್ರಿಯ ರಾಜ್ಯವು[7] ಪಪ್ಪಕತ್ವದ ಮುಖ್ಯ ಕೋಟೆ

1) 513ನೇ ಪಾನು. 2) 548ನೇ ಪಾನು. 3) 465ನೇ ಪಾನು. 4) 466ನೇ ಪಾನು. 5) 519ನೇ ಪಾನು. 6) 517ನೇ ಪಾನು. 7) ಕ್ರಿ. ಶ. 1618ನೇ ವರುಷಕ್ಕೀಚೆ ಔಸ್ತ್ರಿಯಕ ಕೈಸರತ್ವ ಹುಟ್ಟಿತ್ತು.

ಗಳಲ್ಲೊಂದು. ಇದನ್ನು ಕ್ರಿ. ಶ. 1780ನೇ ವರುಷದಿಂದ 1790ನೇದರ ವರೆಗೆ ಆಳುತ್ತಿದ್ದ ಆ 2ನೇ ಯೋಸೇಫನು ಔದಾರ್ಯವೂ ಘಟ್ಟಿಗತನವೂ ಉಳ್ಳಂಥವನು. ಅವನು, ಪಪ್ಪಕ ಸಭೋದ್ಯೋಗಿಗಳ ಅತಿ ಬಲವು ರಾಜ್ಯಕ್ಕೆ ಹಿತವಲ್ಲವೆಂದು, ತಿಳಿದು, ಅದಕ್ಕೆ ತಕ್ಕ ಮಿತಿ ಕೊಡ ನೋಡುವವನಾಗಿ, ತನ್ನ ಪಪ್ಪಕ ಪ್ರಜೆಗೆ ಇದ್ದ ಅದೇ ಮತಕ ಮತ್ತು ಲೌಕಿಕ ಸ್ವಾತಂತ್ರ್ಯಗಳನ್ನು ಸೌವಾರ್ತಿಕ ಪ್ರಜೆಗೂ ಪಾಲಿಸಿ, ರಾಜ್ಯದ ಸಮಸ್ತ ಕ್ರೈಸ್ತ ಸಭೆಯ ಪ್ರಧಾನಾಧ್ಯಕ್ಷನು ತಾನೇ ಎಂದು, ಹೇಳಿ, ಪಪ್ಪನಿಂದ ಹೊರಟು ಬರುವ ಯಾವತ್ತೂ ಆಜ್ಞೆಗಳು ತನ್ನ ಸಮ್ಮತಿಯಿಲ್ಲದೆ ನಡೆಯಕೂಡದೆಂದು, ನಿರ್ಣಯಿಸಿ, ಎಲ್ಲಾ ಶಾಲೆಗಳನ್ನು ಸಭೋದ್ಯೋಗಿಗಳ ಸ್ವೇಚ್ಛೆಯಿಂದ ಬಿಡಿಸಿ, ಎಲ್ಲಾ ಸಭೋದ್ಯೋಗಿಗಳನ್ನು ರಾಜಾಧಿಕಾರಸ್ಥರ ಮೇಲ್ವಿಚಾರದೊಳಿಟ್ಟು, ಪ್ರಜೆಯ ಸುಶಿಕ್ಷೆಗೂ ವಿದ್ಯಾಭಿವೃದ್ಧಿಗೂ ಬಾರದಂಥ ಎಲ್ಲಾ ಮಠಗಳನ್ನು ನಿರ್ಮೂಲಿಸಿ, ಕ್ಷಮಾವಿಕ್ರಯವನ್ನು ಕುಂದಿಸಿ, ಸಂತಾವಶಿಷ್ಟಗಳನ್ನು ತೆಗೆದು ಹಾಕಲಿಕ್ಕೆ ಹೇಳಿ, ದೇವಾರಾಧನೆಯಲ್ಲಿ ಲತೀನ ಭಾಷೆಗೆ[1] ಬದಲಾಗಿ ಗೆರ್ಮಾನವಾದ್ದನ್ನು ಏರ್ಪಡಿಸಿ, ಈ ಮುಂತಾದ ಸೌಜನ್ಯದಿಂದ ಶೋಭಿಸುವವನಾದನು. ಆದರೂ ಅವನು ಬೇಗ ಮಡಿದು ಉತ್ತರಾಧಿಕಾರಿಯಾದ ಅವನ ತಮ್ಮನು ಅತಿದರ್ಪವುಳ್ಳ ಆ ಸಭೋದ್ಯೋಗಿಗಳ ಸಂಗಡದ ಹೋರಾಟವನ್ನು ಮುನ್ನಡಿಸಲಿಕ್ಕೆ ಬೇಸತ್ತ ಕಾರಣ ಇವರ ಕುಸಾಹಸದಿಂದ ಆ ಉತ್ಕೃಷ್ಟ ನವಸ್ಥಾಪನೆಗಳು ತಿರಿಗಿ ಕೆಟ್ಟವು.

ಫ್ರಂಚು ದೇಶದಲ್ಲಿಯಣ ನಾಸ್ತಿಕತ್ವದ ವಿಷಯವೇನೆಂದರೆ, ಬ್ರಿತನ್ನಿಯ ರಾಜ್ಯದಲ್ಲಿ ಮಹಾ ಪುನಃಸ್ಥಾಪನೆಗೆ ಮುಂಚೆಯೂ ಮೇಲೆಯೂ ಪಪ್ಪಕರೂ ಅವರ ಸಂಬಂಧಿಗಳೂ ತಮ್ಮ ಅಸಹನಭಾವ ಹಿಂಸಾಸಕ್ತಿಗಳೆರಡರಿಂದ[2] ಅನೇಕರಲ್ಲಿ, ಕ್ರೈಸ್ತತ್ವವೆಂದರೇನೆಂತ, ಬಹು ಸಂಶಯ ಹುಟ್ಟಿಸಿದ್ದರು; 1ನೇ ಜೇಂಸ ರಾಜನೂ[3] ಅವನ ಉತ್ತರಾಧಿಕಾರಿಗಳಲ್ಲಿಬ್ಬರಾದ 2ನೇ ಚಾರ್ಲ್ಸನೂ 2ನೇ ಜೇಂಸನೂ[4] ತಮ್ಮ ಪಟ್ಟಿಂಗತನದಿಂದ ಕ್ರೈಸ್ತತ್ವಕ್ಕೆ ಹೊಸ ದುರ್ಗಂಧ ಹಚ್ಚಿದರು; ಅದು ಹೊರ್ತು ಎಪಿಸ್ಕೊಪಾಲ ರಾಜ್ಯಸಭೆಯವರೂ ದಿಸ್ಸೆಂತೆರರೂ ತಮ ತಮಗೆ ಕ್ರೈಸ್ತ ಸಹೋದರಪ್ರೀತಿ ತೋರಿಸುವದರಲ್ಲಿ ಬಹಳ ಹಿಂದೆ ಬಿದ್ದಿದ್ದರು[5]. ಹೀಗಿರಲಾಗಿ ಭಕ್ತರಿಗಾಗಲಿ ಅಭಕ್ತರಿಗಾಗಲಿ ಬಹಿರ್ವಿಷಯದಲ್ಲಿ ರಮಣೀಯ ಶಾಂತಿಯ ಕಾಲವು ನಡೆಯಲಿಲ್ಲ; ದೇಶವು ದುರವಸ್ಥೆಗಳಲ್ಲಿ ನರಳಿದಂತಾಗಿತ್ತು. ತದುದ್ದಿಶ್ಯವಾಗಿ ಸಂಭವಿಸಿದ್ದೇನೆಂದರೆ, ಸರ್ವತ್ರವೂ ಸರ್ವದಾ ಇರುವ ಕ್ರಿಸ್ತನ ಶತ್ರುಗಳು ದುರ್ಧೈರ್ಯಗೊಂಡು, ಕ್ರೈಸ್ತರೆಂಬ ಹೆಸರಿದ್ದರೂ ಕ್ರೈಸ್ತರಲ್ಲದಂಥವರ ದುಶ್ಚರ್ಯೆಯನ್ನಲ್ಲದೆ ಸ

1) 430ನೇ ಪಾನು. 2) 528, 529ನೇ ಪಾನು. 3) 497—499ನೇ ಪಾನು.
4) 500, 501ನೇ ಪಾನು. 5) 529ನೇ ಪಾನು.

ಕ್ಯಶೋಧನೆ ನಡೆಯುತ್ತಿರುವೆಡೆ ಕಾಲಕ್ರಮೇಣ ಪರಸ್ಪರ ಪ್ರೀತಿಯಲ್ಲಿ ಪರಿಪಕ್ವರಾಗುವಂತಿದ್ದ ಕ್ರೈಸ್ತ ಶಾಖೆಗಳ ಕ್ಷಣಿಕ ಭೇದದ ಅನಾಶೀರ್ವಾದವನ್ನು ಸಹ ಒಂದು ವಿಷಯ ಮಾಡಿ ಕೊಂಡು, ದಿವ್ಯವಾದ ಕ್ರೈಸ್ತತ್ವಕ್ಕೆಯೇ ನಿಂದಿಸುವವರಾದರು; ಕ್ರಿ. ಶ. 1660ನೇ ಅಬ್ದದಿಂದ 1685ನೇದರ ತನಕ ರಾಜನಾಗಿರುತ್ತಿದ್ದ ಆ 2ನೇ ಚಾರ್ಲ್ಸನ ಕೆಟ್ಟ ನಡತೆಯುಳ್ಳ ಅರಮನೆಯಲ್ಲಿ[1] ಅಂಥವರಿಗೆ ವಿಶೇಷ ಆಸ್ಪದವು ಶಿಕ್ಕಿತು. ಅವರೊಳಗಿನ ಕೆಲವರು ಯಾರಂದರೆ—ತೊಮಸ್ ಹೊಬ್ಬೆಸ್, ಫ್ರಂಶ್ಸಿಜ್ ಬೇಕೊ, ಜೊನ್ ಲೊಕ್, ಷಫ್ಟ್ಸಬುರಿ ಪ್ರಭು, ಜೊನ್ ತೋಲಂದ್, ಅಂತೋನಿ ಕೊಲ್ಲಿನ್ಸ್, ಮಥೂ ತಿಂದಲ್, ಬೊಲಿಂಗ್ಬ್ರುಕ್, ದೇವಿದ್ ಹ್ಯೂಮ್, ತೊಮಸ್ ಪೇನ್, ಮುಂತಾದವರು. ಇವರು ತಮ್ಮ ಗ್ರಂಥಗಳಲ್ಲಿ ಕ್ರೈಸ್ತತ್ವಕ್ಕೆ ದೂಷಿಸುತ್ತಿದ್ದದು ಮಾತ್ರವಲ್ಲದೆ ಅವುಗಳ ಮೂಲಕ ತಮ್ಮ ನೀಚ ಬುದ್ಧಿಯ ಆಲೋಚನೆಗಳನ್ನು ಕ್ರೈಸ್ತತ್ವಕ್ಕೆ ಪ್ರತಿಯಾಗಿ ಜನರೊಳಗೆ ಹಬ್ಬಿಸಲೊದ್ದಾಡುತ್ತಿದ್ದರು. ಅವರಲ್ಲಿ ಕೆಲವರು ಕಾಣಾದರಂತೆ ಕೇವಲಾದೃಷ್ಟವನ್ನು, ಕೆಲವರು ಪೌರಾಣಿಕರಂತೆ ದೈವೇಶ್ವರತ್ವವನ್ನು, ಇನ್ನು ಕೆಲವರು ಸಾಂಖ್ಯರಂತೆ ಈಶ್ವರಾಸಿದ್ಧಿಯನ್ನು, ಮತ್ತು ಕೆಲವರು ಬೌದ್ಧರಂತೆ ನಾಸ್ತಿಕತ್ವವನ್ನು, ಬೇರೆ ಕೆಲವರು ಚಾರ್ವಾಕರಂತೆ ದೇಹಾತ್ಮವಾದವನ್ನು[2] ಸಾರುತ್ತಿರುವರು. ಈ ದೇಹಾತ್ಮವಾದಿಗಳ ಮುಖ್ಯಸ್ಥರಾದ ಬೊಲಿಂಗ್ಬ್ರುಕ್ ಮತ್ತು ಹ್ಯೂಮ್ ಇವರಿಬ್ಬರು ಪುಣ್ಯ ಪಾಪಗಳ ನಂಬಿಕೆಯನ್ನಾದರೂ ಉಳಿಯ ಗೊಡಲೊಲ್ಲರು, ಸದ್ದುಕಾಯರು ಅವರಲ್ಲಿ ತಿರಿಗಿ ಎದ್ದಂತಾಯಿತು[3]. ಲೋಕಚರಿತ್ರದಲ್ಲಿ ಆ ಕುಹಕ ಜನರೆಲ್ಲರಿಗೆ ಒಟ್ಟಿಗೆ ಎರಡು ಹೆಸರು ಬಿದ್ದವೆ; ನಾತೂರಾಲಿಸ್ತರು ಅಂದರೆ ಪ್ರಕೃತಿ ಎಂಬ ನಾತೂರವನ್ನೇ ದೇವರೆಂದು ಹೇಳಿ ವಿಶ್ವನಿರ್ಮಾಣಿಕನಾದ ದೇವರನ್ನರಿಯಲೊಲ್ಲದವರು ಎಂಬದೊಂದು; ದೆಯಿಸ್ತರು ಅಂದರೆ ದೇವರ ಪರಿಪಾಲನವೃತ್ತಿಯು ವಿಶ್ವದಲ್ಲಿ ನಡೆಯುವದಿಲ್ಲವೆಂದು ಚರ್ಚಿಸಿ ಸಕಲ ದೇವಪ್ರಕಟನಗಳನ್ನು, ಕ್ರಿಸ್ತನ ಮೂಲಕ ಬಂದವನ್ನು ಸಹ, ಅಲ್ಲಗಳೆಯುವವರು ಎಂಬದು ಮತ್ತೊಂದು. ಕ್ರಿ. ಶ. 1706ನೇ ವರುಷದಲ್ಲಾದರೂ ಅವರು, ಸುಖಗತಿಗೆ ಪಾಪವೇ ಅಗತ್ಯವೆಂತ, ಒದರುವ ಕುವಾದಕ್ಕೂ ಹಿಂದೆಗೆಯಲಿಲ್ಲ. ಆದರೆ ಆಸ್ತಿಕ್ಯವನ್ನೂ ನೀತಿಚರ್ಯೆಯನ್ನೂ ಪೂರಾ ಕೆಡಿಸುವ ಅಂಥಾ ನಡತೆಯಿಂದ ಆ ವಿಶ್ವಾಸಹೀನರು ತಮ್ಮನ್ನು ತಾವೇ ಕೊಂದು ಕೊಂಡಂತಾಯಿತಲ್ಲದೆ ಇಂಗ್ಲಂದಿನೊಳಗಣ ಭಕ್ತಿಯುಳ್ಳ ದೇವಜ್ಞಾನದರ್ಶಕ ಪಂಡಿತರೂ ಅದರ ಹೊರಗಿನಂಥವರೂ ಜಯಪ್ರದ ಗ್ರಂಥಗಳಿಂದ ಅವರಿಗೆದುರಿಸಿ, ಗೆದ್ದರು; ಸಾದೃಶ್ಯಕ್ಕಾಗಿ ಇವ

1) Cf. 604ನೇ ಪಾನು. 2) ಇದೇನಂದರೆ—ದೇಹವೂ ಆತ್ಮವೂ ಭಾವದಲ್ಲಿ ಒಂದೇ; ಆತ್ಮವಾದರೂ ಸ್ಥೂಲ ಎಂಬದೇ. 3) 21ನೇ ಪಾನು.

ರಲ್ಲಿ ಕ್ರಿ. ಶ. 1764ನೇ ವರುಷ ಇಂಗ್ಲಿಷ ಪ್ರಸಂಗಿಕನೊಬ್ಬನಾದ ನಥನಯೆಲ್ ಲಾರ್ದ್ನರನು ಪರಿಶೋಧಿಸಿದನು. ಅದು ವಿನಹ ಮೆಥೊದಿಸ್ತರು[1] ಮುಂತಾದ ಸದ್ಭಕ್ತರ ಸಜ್ಜೀವನಕರ ವೃತ್ತಿಯಿಂದ ಆ ನಾತೂರಾಲಿಸ್ತರ ಮತ್ತು ದೆಯಿಸ್ತರ ದುರಪೇಕ್ಷೆಗೆ ಪ್ರಚಂಡ ಅಭ್ಯಂತರವಾಯಿತು. ಆದರೂ ಆ ಕುದರ್ಶಕರಿಂದ ಹುಟ್ಟಿ ಈಗಲಿನ್ನೂ ಸರ್ವ ದಿಕ್ಕಿನಲ್ಲಿ ಕಳೆಯ ಹಾಗೆ ಬೆಳೆಯುತ್ತಿರುವ ಫ್ರೀ ಮೇಸನರ ಅಂದರೆ ಸ್ವತಂತ್ರಶಿಲ್ಪಿಗಳ ಕುಲವೆಂಬದೊಂದು ವರ್ಧಿಸುತ್ತಾ ಬಂತು; ಕ್ರೈಸ್ತ ಪರಮಾರ್ಥದ ಉಪೇಕ್ಷೆಯೂ ಸಕಲ ಮತಗಳ ಮೇಲಣ ಉದಾಸೀನತೆಯೂ ಬರೇ ಮಾನುಷ ಮಿತ್ರತ್ವವೂ ಅದರ ಮೂಲೋದ್ದಿಶ್ಯವಾಗಿವೆ; ಅದು ಕಾರಣ ವಿಗ್ರಹಾರಾಧಕರೂ ನಾಸ್ತಿಕರೂ ಸಹ ಅದರಲ್ಲಿ ಶೇರುವರು.

ಹ್ಯಾಗಾದರೂ ಆ ಕುದರ್ಶಕರಿಗೆ ಕೆಲವು ಕಾಲ ಇಂಗ್ಲಂದಿನಲ್ಲಿ ಬಹಿರಕ್ಕೆ ನಿಲುಗಡೆ ಇದ್ದ ತರುವಾಯ ಅದವರಿಗೆ ತಪ್ಪಿ ಹೋಯಿತು; ಅದು ಹೊರ್ತಾಗಿ ಇಂಗ್ಲಿಷರ ಸಾಧಾರಣ ಪ್ರಜೆಯವರಲ್ಲಿ ಅವರನ್ನವಲಂಬಿಸಿದವರು ತೀರ ಕೊಂಚ ಜನರು ಮಾತ್ರ. ಬಹುಶಃ ಇಂಗ್ಲಂದಿನಲ್ಲಿ ಅಲ್ಲ ಹೆಚ್ಚಾಗಿ ಅದರ ಹೊರಗೆ, ವಿಶೇಷವಾಗಿ ಫ್ರಂಚಿನಲ್ಲಿ, ಆ ಕುದರ್ಶನಗಳ ದುಷ್ಫಲಗಳು ಜನಿಸಿ, ಉಳಿದವು; ಫ್ರಂಚಿನಲ್ಲಿ ಕ್ರಿ. ಶ. 1643ನೇ ವರುಷದಿಂದ 1715ನೇದರ ತನಕ ಆಳುತ್ತಿದ್ದು, 1660ನೇದು ಸುತ್ತ ಆ ಯನ್ಸೆನಿಸ್ತರಿಗೆ ಸಹ ಪೀಡೆ ಕೊಡಲೆಸಗಿದ ಆ 14ನೇ ಲೂಯಿ ರಾಜ[2] ಪ್ರಮುಖರು ಆ ಕೆಟ್ಟ ಬೀಜಕ್ಕೆ ತಮ್ಮ ಕಾಕುತನದಿಂದಲೂ ಕ್ರೂರತನದಿಂದಲೂ ಭೂಮಿಯನ್ನು ಹಸನು ಮಾಡಿದಂತೆ ಆಗಿತ್ತು. ಆ ಲೂಯಿಯು ಸಾಯುವಾಗ ಏನಾಯಿತಂದರೆ, ಸಕಲ ಪರೇಚ್ಛಾಲೋಚನೆಗಳನ್ನು, ಅವು ಹಿತವಾಗಿದ್ದರೂ, ನಿಷೇಧಿಸುವಂಥ ಅಸಹನಭಾವವುಳ್ಳ ಪಪ್ಪಕತ್ವದ ಬಂಧನದಲ್ಲಿ ಆ ವರೆಗೆ ಸಾಕೆಂದಿದ್ದ ಪಪ್ಪಕ ಸಭ್ಯರು ಲಗಾಮನ್ನು ಪೂರಾ ಹರಿದು ಬಿಟ್ಟ ಹಾಗಾಗಿ, ಪಪ್ಪಕ ಸಭೆಗೂ ಸಕಲ ಪರಮಾರ್ಥಧರ್ಮಕ್ಕೂ, ಆ ಮೇಲೆ ಪಪ್ಪಕ ಮತವೊಂದೇ ರಾಜ್ಯಮತವೆನ್ನಿಸುತ್ತಾ ಬಂದಿದ್ದ ರಾಜ್ಯಕ್ಕೆ ಸಹ, ವಿರೋಧವಾಗಿ ಎದ್ದರು. ಫ್ರಂಚಿನಲ್ಲಿ ಅವಿಶ್ವಾಸಿಗಳ ಮುಖ್ಯ ನಾಯಕನಾದವನು ವೊಲ್ತೇರನೆಂಬವನು; ಅವನು ಕ್ರಿ. ಶ. 1695ನೇ ಅಬ್ದ ಹುಟ್ಟಿ, 1778ನೇದರಲ್ಲಿ ಮಡಿದನು. ಅವನು ರಚಿಸಿದ ಕೃತಿಗಳಲ್ಲಿ ಕ್ರೈಸ್ತತ್ವದ ನಿರ್ಮಾಣಚರಿತ್ರವೆಂಬದೊಂದಿದೆ; ಇದರಲ್ಲಿ ಅವನು, ಪರಿಶುದ್ಧ ಸುವಾರ್ತೆಗಳು ಒಂದು ಕಟ್ಟುಕಥೆ ಎಂತ, ಹೇಳಿ, ಅವಕ್ಕೆ ಯೆಹೂದ್ಯನೊಬ್ಬನು ಕಲ್ಪಿಸಿದ್ದೊಂದು ಸುಳ್ಳುವೃತ್ತಾಂತವು ಮುಖ್ಯ ಮೂಲವೆಂತ, ದೋಷವನ್ನಾರೋಪಿಸಲಿಕ್ಕೆ ಹೆದರಲಿಲ್ಲ. ತನ್ನಂಥ ಅಭಿಪ್ರಾಯವುಳ್ಳ ಒಬ್ಬ ಗೆಳೆಯನಿಗೆ ಅವನು ಕ್ರಿ.

1) 593ನೇ ಪಾನು. 2) 609ನೇ ಪಾನು.

ಶ. 1778ನೇ ಅಬ್ದ—ಇನ್ನು 20 ವರುಷ ಹೋದ ತರುವಾಯ ಕ್ರೈಸ್ತರ ದೇವರಿಗೆ ಒಂದೇ ಆಲಯವು ಉಳಿಯದಂತಾಗಿರುವದು! ಎಂದು, ತನ್ನ ನಾಸ್ತಿಕ ಮತದ ಬಲವನ್ನು ಹೊಗಳಿ, ಬರೆದನು. ಆದಾಗ್ಯೂ ಆ 20ನೇ ವರುಷ ಬಂದಂದು ಆ ಕಳ್ಳ ಮನುಷ್ಯನು ಮರಣಸಂಕಟದಲ್ಲಿ ಬಿದ್ದಿರುವೆಡೆ ನರಕಾಗ್ನಿಯ ಭಯದಿಂದ ಪೂರಿತನಾಗಿ, ತನ್ನ ವೈದ್ಯನಿಗೆ, ಇನ್ನು ಅರ್ಧ ವರುಷವಾದರೂ ನನ್ನ ಜೀವವನ್ನುಳಿಸಿದರೆ ನನ್ನ ಆಸ್ತಿಯ ಅರೆವಾಸಿಯನ್ನೂ ಕೊಡುವೆನೆಂದು, ಬೇಡಿದನು; ಆದರೆ ಅಂದೇ ತನ್ನ ಭಯಪೀಡೆಯೊಡನೆ, ದೇಹವಳಿದು, ತನ್ನ ಗತಿಯನ್ನೈದಿದನು. ನಾವು ಅವನ ಇಂಗಿತವನ್ನು ಸ್ಪಷ್ಟವಾಗಿ ತಿಳಿಯ ಬಹುದಾದ ಅವನದೊಂದು ಮಾತೇನಂದರೆ—ಕಡೆಯ ಅರಸನ[1] ಕರುಳಿನಿಂದ ಕಡೆಯ ಪ್ರೀಸ್ತನ ಕೊರಳು ಸುತ್ತಿ ಹಿಸಿಕಿ ಕೊಲ್ಲ ಬೇಕೆಂಬದೇ ನನ್ನ ಕಾಂಕ್ಷೆಯು!—ವೊಲ್ತೇರನೂ ಅವನ ಓಪಾದಿಯವರೂ ಫ್ರಂಚಿನಲ್ಲಿ ಏನೂ ದಂಡ ಹೊಂದದೆ ಅವಿಶ್ವಾಸದ ಕಡು ವಿಷವನ್ನು ಇಕ್ಕುತ್ತಿರುವಲ್ಲಿ ಸಾವಿರಾರು ಜನರಲ್ಲಿ ಕ್ರೈಸ್ತತ್ವವು ದಿವ್ಯ ಸತ್ಯವೆಂಬ ನಂಬಿಕೆಯನ್ನು ಮಾತ್ರವಲ್ಲದೆ ಯಾವದೊಂದು ಪರಮಾರ್ಥಧರ್ಮದ ಮೇಲೆಯೂ ನೀತಿಚರ್ಯೆಯ ಮೇಲೆಯೂ ಸ್ವದೇಶವರ್ಚಸ್ಸಿನ ಮೇಲೆಯೂ, ಒಟ್ಟಿಗೆ ಮನುಷ್ಯರ ಮನಃಸಾಕ್ಷಿಗೆ ಯೋಗ್ಯವೆನ್ನಿಸುವ ಯಾವದೊಂದೂ ವಿಷಯದ ಮೇಲೆಯೂ, ಇರ ತಕ್ಕ ಕುತೂಹಲವನ್ನು ಸಹ ಕೆಡಿಸಿ ಬಿಟ್ಟರು. ಅಷ್ಟರಲ್ಲಿ ಇಂಥವರಿಗೆ ಅಲ್ಲಿ ಸರಿಯಾಗಿ ಎದುರಿಸ ಶಕ್ತರ್‍ಯಾರು? ಪಪ್ಪಕ ಸಭೆಯವರು ಹೂಗೊನೊತ್ತರೆಂಬ ಸೌವಾರ್ತಿಕರನ್ನು ಅಗ್ನಿಯಿಂದಲೂ ಖಡ್ಗದಿಂದಲೂ ಶೆರೆಮನೆಯಿಂದಲೂ ಹಸ್ತಪ್ರೇರಕನಾವೆಗಳ[2] ಕಷ್ಟವುಳ್ಳ ಕೆಲಸದಿಂದಲೂ ನಶಿಸಲಿಕ್ಕೆ ಪೇಚಾಡಿ, ಮುಸ್ತಿಕರ ಮತ್ತು ಯನ್ಸೆನಿಸ್ತರ ಬಾಯಿ ಮುಚ್ಚಿ, ಹೀಗೆ ಭಕ್ತಿರಕ್ಷಕರ ಸುವೃತ್ತಿಗೆ ಮಹಾತಂಕ ಹಾಕಿದ್ದರಲ್ಲ?

ಇಂತಿರಲಾಗಿ ಫ್ರಂಚ ರಾಜ್ಯಪರಿವರ್ತನವೆಂಬದು ಉದ್ಭವಿಸಿದ್ದು ಆಶ್ಚರ್ಯಕರವಲ್ಲ. ಕ್ರಿ. ಶ. 1789ನೇ ವರುಷ ರಾಜಾಧಿಕಾರಕ್ಕೂ ರಾಜಕಮತಕಪ್ರಭುಸಂಘಾಧಿಕಾರಕ್ಕೂ ಎದುರಾಗಿ ಆಳ ತೊಡಗಿದ ಸಾಧಾರಣಪ್ರಜಾಸಂಘದವರು, ವಿವಿಧ ಧರ್ಮಗಳಲ್ಲಿ ಇದು ಮೇಲು ಅದು ಕೀಳೆಂಬಂತೆ ತಾರತಮ್ಯವೆಣಿಸ ಬಾರದೆಂದು, ಹೇಳಿ, ಯಥೇಚ್ಛೆಯುಳ್ಳ ಮತಾಚಾರ ನಡಿಸುವ ಸ್ವಾತಂತ್ರ್ಯವು ಅತರ್ಕ್ಯವಾದ ಮಾನುಷ ನ್ಯಾಯವೆಂತ, ನಿಶ್ಚಯಿಸಿ, ಪಪ್ಪಕ ಸಭೋದ್ಯೋಗಿಗಳ ಅಧಿಕಾರಾತಿಕ್ರಮಣವನ್ನು ಕುಂದಿಸ ನೋಡಿ, ಅವರಿಗಿರುವ ಮಿಗಿಲು ಆಸ್ತಿಯಿಂದ ರಾಜ್ಯದ ಅಘೋರವಾದ ಸಾಲವನ್ನು[3] ತೀರಿಸಲಾಲೋಚಿಸಿ—ಇನ್ನು ಮುಂದೆ ಪ್ರಜೆಯು

1) ಅರಸರು ಸಹ ಬೇಡವೇ ಬೇಡ! ಎಂಬದಾದರೂ ಆ ಉನ್ಮತ್ತನ ಚರ್ಚೆಯು. 2) 473, 490, 515ನೇ ಪಾನು. 3) 516, 517ನೇ ಪಾನು.

ಸಭೋದ್ಯೋಗಿಗಳನ್ನು ಆರಿಸ ಬೇಕು; ಸ್ಥಾಪಿತವಾಗ ತಕ್ಕ ಹೊಸ ರಾಜ್ಯನೀತಿಗೊಳಗಾಗಿರೋಣವೆಂಬಂತೆ ಆ ಉದ್ಯೋಗಿಗಳು ಪ್ರಮಾಣಿಸ ಬೇಕು; ರಾಜ್ಯಾಧಿಕಾರಸ್ಥರಿಂದ ಅವರಿಗೆ ತಕ್ಕ ಸಂಬಳ ಸಲ್ಲ ಬೇಕು ಎಂತ, ನಿರ್ಣಯ ಮಾಡಿದರು. ಆಗಿನ 6ನೇ ಪಿಯ ಪಪ್ಪನು—ಆ ನಿರ್ಣಯಗಳ ಮೂಲಕ ಕಥರರೆಂಬವರಿಗೂ ನನ್ನ ಸಭ್ಯರಿಗೂ ಅದೇ ಪ್ರಜಾಧಿಕಾರ ಪ್ರಾಪಿಸಿದ ಹಾಗಾಯಿತು, ಅವು ಸಭೋದ್ಯೋಗಿಗಳಿಂದಲೂ ತೆರಿಗೆ ಎತ್ತುತ್ತವೆಂತ, ಕಂಡು, ಅವಕ್ಕೆ ಶಾಪವಿಕ್ಕಿ, ಹೊಸ ರಾಜ್ಯಧರ್ಮಕ್ಕೆ ಒಡಂಬಟ್ಟು ಪ್ರಮಾಣಿಸಿದ ಸಭೋದ್ಯೋಗಿಗಳನ್ನು ಬಹಿಷ್ಕರಿಸಿದನು. ಪಪ್ಪನ ಕಾಲಾನುಚಿತವಾದ ಅಂಥಾ ಎದುರಾಟದಿಂದ ಬೆಂಕಿಗೆ ಎಣ್ಣೆ ಹೊಯಿದಂತಾಯಿತು. ಬಳಿಕ ಕ್ರಿ. ಶ. 1792ನೇ ವರುಷದ ವರೆಗೆ ಸುಮಾರು 10,000 ಜನ ರಾಜಪಕ್ಷಕರನ್ನು ಕೊಲ್ಲುತ್ತಾ ಬಂದಿದ್ದ ಆ ಸಾಧಾರಣಪ್ರಜಾಸಂಘಕ್ಕೆ ಬದಲಾಗಿ ಆಳ್ತನ ಪಡೆದ ಸರ್ವಪ್ರಜಾಸಮಾಗಮವೆಂಬದರವರು ಏಕಚಕ್ರವರ್ತಿಧರ್ಮವನ್ನು ಪೂರಾ ತಳ್ಳಿ, ಫ್ರಂಚು ದೇಶವು ಪ್ರಜಾರಾಜತನದ್ದೆಂದು, ನಿರ್ಣಯ ಪ್ರಕಟಿಸಿ, ಕ್ರಿ. ಶ. 1793ನೇದರಲ್ಲಿ ರಾಜನಿಗೆ ಮರಣಾಜ್ಞೆ ಗೈಯಿಸಿ, ಕ್ರೈಸ್ತತ್ವವು ಸುಳ್ಳೆಂದು, ಸುಮಾರು 2000 ದೇವಾಲಯಗಳನ್ನು ಕೆಡಿಸಿ, ಆದಿತ್ಯವಾರದ ಮತ್ತು ಪಪ್ಪಕ ಹಬ್ಬಗಳ ಬದಲಿಗೆ ವಿಗ್ರಹಾರಾಧಕರಲ್ಲಿದ್ದ ಮಾಸಹಬ್ಬಗಳನ್ನು ನೇಮಿಸಿ, ವಿವಾಹಧರ್ಮ ಕಿತ್ತು ಹಾಕಿ, ಪರೀಸು ಪಟ್ಣದಲ್ಲಿ ಮರಿಯಳಿಗೆ ವಂದಿತವಾಗಿರುವ ನೊತರ್ ದಾಮ್ ಅಂದರೆ ನಮ್ಮ ಯಜಮಾನಳು ಎಂಬ ಮುಖ್ಯ ದೇವಾಲಯದಲ್ಲಿ ಸಹ, ದೇವರೆಂತೂ ಇಲ್ಲವೆಂದು, ಬುದ್ಧಿಯೆಂಬ ವಸ್ತುದೇವತೆಯ ಪೂಜೆಯನ್ನು ಕಲ್ಪಿಸಿ, ಬುದ್ಧಿದೇವತೆಯೆಂದು, ಒಬ್ಬ ಸೂಳೆಯನ್ನು ಪೀಠದಲ್ಲಿರಿಸಿ, ಆಟ ಊಟಗಳೊಡನೆ ಉಪಾಸಿಸುವವರಾಗಿ, ಕ್ರೈಸ್ತ ದೇವಾರಾಧನೆ ನಡಿಯ ಬಾರದೆಂದು, ನಿರ್ದೇಶಿಸಿ, ತಮಗೆ ಮಾರ್ಮಲೆಯುವವರೆಲ್ಲರ ತಲೆ ಕಡೆಯುತ್ತಿದ್ದರು. ಆ ಕಾಲದಲ್ಲಿ ಪಪ್ಪಕ ಸಭೋದ್ಯೋಗಿಗಳ ಅವಿಶ್ವಾಸವೂ ಹೇಡಿತನವೂ ಅನೀತಿಚರ್ಯೆಯೂ ಮಹಾ ಭೀಕರವಾದ ರೀತಿಯಿಂದ ಗೋಚರವಾಯಿತು; ಹ್ಯಾಗಂದರೆ, ಪರೀಸು ಪಟ್ಣದ ಗೋಬೆಯೆಂಬ ಪ್ರಧಾನಾಧ್ಯಕ್ಷನೂ ಇತರರಾದ ಅನೇಕ ಸಭೋದ್ಯೋಗಿಗಳೂ—ತಮಗೆ ಈ ವರೆಗೆ ಇದ್ದ ವಿಶ್ವಾಸಾರ್ಥವು ಕೇವಲ ಮನೋಭ್ರಾಂತಿ, ಸಕಲ ವಿಷಯಗಳಲ್ಲಿ ಸಕಲರಿಗೂ ಯಥೇಚ್ಛಾಸ್ವತಂತ್ರವಿರುವದೇ ಮಾತ್ರ ಧರ್ಮವೆಂದು, ಬಹಿರಂಗದಲ್ಲಿ ಸಾರಿ, ಕ್ರಿಸ್ತನನ್ನತಿಗಳೆದು ಬಿಟ್ಟರು. ಅಷ್ಟರಲ್ಲಿ ಸೌವಾರ್ತಿಕ ಕ್ರೈಸ್ತರು ಧೈರ್ಯಗುಂದದೆ, ಮೊದಲು ಮರೆಯಾಗಿ, ಆ ಮೇಲೆ ತಿರಿಗಿ ಬೈಲಾಗಿ ತಮ್ಮ ದೇವಾರಾಧನೆ ಕೈಗೊಂಡಿರುತ್ತಿದ್ದರು. ತರುವಾಯ ಕ್ರಿ. ಶ. 1795ನೇ ವರುಷ ಆ ಸರ್ವಪ್ರಜಾಸಮಾಗಮದ ಸ್ಥಳಕ್ಕೆ ಬಂದ ಪಂಚನಾಯಕರಾಜತ್ವದವರು, ಕ್ರೈಸ್ತ ದೇವಾ

ರಾಧನೆಯು ಈಗ ತಿರಿಗಿ ನಡಿಯ ಬಹುದೆಂದು, ವಿಧಿಸಿದರೂ ಫ್ರಂಚರು ತಮ್ಮ ಪ್ರಜಾರಾಜತನವುಳ್ಳ ಅಭಿಪ್ರಾಯವನ್ನು ಅನ್ಯ ದೇಶಗಳಲ್ಲಿಯೂ ಶೇರಿಸುವದಕ್ಕೋಸ್ಕರ ಕ್ರಿ. ಶ. 1798ನೇ ವರುಷ ಪಪ್ಪಕ ರಾಷ್ಟ್ರವನ್ನು[1] ಸಹ ಹಿಡು ಕೊಂಡು, ಪ್ರಜಾರಾಜತನದ್ದೆಂತ, ವ್ಯವಸ್ಥೆ ಗೈದು, ಪಪ್ಪರ ಲೌಕಿಕ ಅಧಿಕಾರವನ್ನೂ ರಕ್ಷಿಸ ನೋಡಿದವನೂ 4 ವರುಷಕ್ಕೆ ಮುಂಚೆ ದೇವವಾಗಧ್ಯಯನನಿಷೇಧಾಜ್ಞೆ[2] ಕೊಟ್ಟವನೂ ಆದಂಥ 6ನೇ ಪಿಯ ಪಪ್ಪನನ್ನು ಫ್ರಂಚಿಗೊಯಿದು, ಶೆರೆಯಲ್ಲಿಟ್ಟರು; ಅಲ್ಲಿ ಅವನು ಮರು ವರುಷ ಸತ್ತನು. ಆ ಸಮಯ ಫ್ರಂಚ ದಳವಾಯಿಯಾದ ನಪೊಲೆಯೋನ ಬೊನಪರ್ತನೆಂಬವನು ಹೆಚ್ಚು ಅಧಿಕಾರ ಹೊಂದಿ, ತನ್ನ ಇಚ್ಛೆಗೆ ತಕ್ಕ ಹಾಗೆ ಒಳಪಟ್ಟ 7ನೇ ಪಿಯನೆಂಬವನನ್ನು[3] ಪಪ್ಪೋದ್ಯೋಗದಲ್ಲಿ ಊರಿ, ಕ್ರಿ. ಶ. 1804ನೇ ವರುಷ ಪರೀಸು ಪಟ್ಟಣದಲ್ಲಿ ಅವನಿಂದ ಕೈಸರಕಿರೀಟಕ್ಕೆ ಪ್ರತಿಷ್ಠೆ ಮಾಡಿಸಿ, ತಾನೇ ಅದನ್ನು ತನ್ನ ತಲೆಯಲ್ಲಿಟ್ಟು ಕೊಂಡನು[4]. ಬಳಿಕ ಆ ಪಪ್ಪನು ನಪೊಲೆಯೋನನ ಚಿತ್ತಕ್ಕೆ ತಿರಿಗಿ ಅವಿಧೇಯನಾದದ್ದು ಮಾತ್ರವಲ್ಲದೆ, (ಪಪ್ಪನಿಂದ ಪೂರ್ಣವಾಗಿ ಆಳಿಸಿ ಕೊಳ್ಳಲೊಲ್ಲದಂಥ) ಕಥರತ್ವವುಳ್ಳವನೊಬ್ಬ ರಾಜನ ಪ್ರಜೆಯು ವಂದನಾಪ್ರಮಾಣದಿಂದಾಗಲಿ ನಂಬಿಗೆಯ ಮತ್ತು ವಿಧೇಯತ್ವದ ನ್ಯಾಯದಿಂದಾಗಲಿ ಬದ್ಧವಲ್ಲವೆಂದು, ಹೇಳಿ[5], ಅವನಿಗೆ ಬನ್ನೆಂಬ ವಜ್ರವನ್ನು ಜಡಿಯಲಿಕ್ಕೂ ಯೋಚಿಸುವ ಕಾರಣ ಕ್ರಿ. ಶ. 1809ನೇ ಅಬ್ದ ಆ ಕೈಸರನು ಪಿಪ್ಪೀನನು ಕೊಟ್ಟು ದೊಡ್ಡ ಕರ್ಲನು ಪುನಃಸ್ಥಾಪಿಸಿದ ಪಪ್ಪಕ ರಾಷ್ಟ್ರವೆಂಬ ಹೆಸರನ್ನು ತಳ್ಳಿ, ಆ ರಾಷ್ಟ್ರವನ್ನು ಫ್ರಂಚ ರಾಜ್ಯಕ್ಕೆ ಕೂಡಿಸಿದನು. ಅದಲ್ಲದೆ ಪಪ್ಪನು ಫ್ರಂಚಿನಲ್ಲಿ ಶೆರೆ ತಾಳುವವನಾದನು; ನಪೊಲೆಯೋನನು ಕೈಸರತ್ವ ಕಳ ಕೊಂಡ ಕ್ರಿ. ಶ. 1814ನೇ ವರುಷದ ವರೆಗೆ ಅವನು ಆ ಹೀನ ಸ್ಥಿತಿಯಲ್ಲಿರ ಬೇಕಾಯಿತು. ಆಗ ಔಸ್ತ್ರಿಯ ಪ್ರುಸ್ಸಿಯ ರುಸ್ಸಿಯ ಇಂಗ್ಲಂದು ಎಂಬ 4 ದೇಶದ ರಾಜರು ನಪೊಲೆಯೋನನ ಬಲವನ್ನು ಮುರಿದು, ಅಂತಃಕರಣದಿಂದ ಆ ಪಪ್ಪನನ್ನು ತಿರಿಗಿ ಸಕಲ ಮತಕ ಮತ್ತು ರಾಜಕ ಅಧಿಕಾರದಲ್ಲಿ ಊರಿದರು. ಅಂದು ಪಪ್ಪಕತ್ವವನ್ನು 2ನೇ ಸಾರಿ ಇದ್ದಂತೆಯೇ ಹುಟ್ಟಿಸಿದ ಹಾಗಾಯಿತು. ಆದರೆ ಆ ಕುಹಕ ಬುದ್ಧಿಯ ಪಪ್ಪನು ಉಪಕಾರವನ್ನರಿಯದೆ, ಯೇಸುವಿತರ ಕುಲವನ್ನು ಪುನಃಸ್ಥಾಪಿಸಿದನಷ್ಟೇ[6]. ಇದನ್ನೂ ಅವನು ದೇವವಾ

1) 283ನೇ ಪಾನು. 2) 611ನೇ ಪಾನು. 3) 466ನೇ ಪಾನು. 4) ಸುಮಾರು 1000 ವರುಷ ನಡೆದು ಬಂದ ರೋಮಾಯ ಸಾಮ್ರಾಜ್ಯವೆಂಬ ಗೆರ್ಮಾನ ಕೈಸರತ್ವರಾಜ್ಯವು (320ನೇ ಪಾನು) ಕ್ರಿ. ಶ. 1806ನೇ ವರುಷ ತೀರಿದ್ದಕ್ಕೆ ಕಾರಣನಾದವನು ಅವನೇ. ರೋಮಾಯ ಸಾಮ್ರಾಜ್ಯದ ಕೈಸರನೆಂಬ ಬಿರುದು ಇದ್ದ ಗೆರ್ಮಾನ ಕೈಸರನು ಅಂದಿನಿಂದ ಔಸ್ತ್ರಿಯ ರಾಜ್ಯದ ಪರಿಪಾಲನದಲ್ಲೇ ಮಾತ್ರ (611ನೇ ಪಾನು) ಉಳಿದಿದ್ದಾನೆ. — ಕ್ರಿ. ಶ. 1808ನೇ ವರುಷ ನಪೊಲೆಯೋನ ಸ್ಪಾನಿಯದಲ್ಲಿಯ ಗುಪ್ತವಿಚಾರಣಧರ್ಮವನ್ನು (468ನೇ ಪಾನು) ಕಿತ್ತು ಹಾಕಿದನು. 5) 462, 494ನೇ ಪಾನು ಸರಿ ನೋಡು. 6) 466ನೇ ಪಾನು.

ಗ್ರಂಥವಿಸ್ತಾರಕಸಂಘದವರಿಗೆ[1] ಅಭಿಶಪಿಸಿ ದೇವವಾಕ್ಯಾಧ್ಯಯನನಿಷೇಧದ್ದೊಂದು ಹೊಸ ಆಜ್ಞೆ ಪ್ರಕಟಿಸಿದ್ದನ್ನೂ[2] ಪರ್ಯಾಲೋಚಿಸಿದರೆ ಆ ಸಮಯ ಪುನರುದ್ಭವಿಸಿದ್ದ ಪಪ್ಪಕತ್ವದ ಛೇದಕಾಭಿಪ್ರಾಯವನ್ನು[3] ತಿಳುಕೊಳ್ಳ ಬಹುದು. ಪಪ್ಪರು ಸುವಾರ್ತೆಯ ಜ್ಯೋತಿಯನ್ನೂ ಸುವಾರ್ತಾನುವರ್ತಿಗಳಾದ ಕ್ರೈಸ್ತರನ್ನೂ ಈ ಹೊಸ ಕಾಲದಲ್ಲಿಯಾದರೂ ನೋಡಿ ಸಹಿಸಲಾರರು. ಸೌವಾರ್ತಿಕ ಕ್ರೈಸ್ತರಿಗೆ ಸಹ ಮಹಾ ಶಾಪ ಹಾಕುವಂಥ ಆ ಬುಲ್ಲವನ್ನು[4] ಪ್ರತಿ ವರುಷಕ್ಕೊಮ್ಮೆ ಪಪ್ಪಕ ದೇವಾಲಯಗಳಲ್ಲಿ ಓದುವದು ಒಂದು ಪ್ರತ್ಯೇಕ ಆಜ್ಞೆಯಿಂದ ರದ್ದಾಗದ್ದು ಕೂಡ ಅದಕ್ಕೊಂದು ಸ್ಪಷ್ಟ ನಿದರ್ಶನವು. ಸೌವಾರ್ತಿಕರ ಸಹವಾಸದಲ್ಲಿ ಪಪ್ಪಕ ಉದ್ಯೋಗಿಗಳು ಹೆಚ್ಚು ನಿಂದೆಗೆ ಒಳ ಬೀಳ ತಕ್ಕ ಪಪ್ಪಕಾಚಾರಗಳನ್ನು ಅಡಗಿಸುವದೇ ಮಾತ್ರ ಹೊಸ ಪಪ್ಪಕತ್ವದ ಒಂದು ಅಪೂರ್ವವಾದದು.

ಕ್ರಿ. ಶ. 1846ನೇ ಅಬ್ದ 9ನೇ ಪಿಯನು ಪಪ್ಪನಾಗಿ ಈಗಲೂ ಇದ್ದಾನೆ. ಅವನು ತನ್ನ ಗದ್ದುಗೆಯನ್ನೇರಿ ಸ್ವಲ್ಪ ದಿವಸ ಕಳೆದನಂತರ, ಯೇಸುವಿತರ ಮತಿಗೆ ಒಡಂಬಡುತ್ತೇನೆಂದು, ಬಹಿರಂಗದಲ್ಲಿ ಸಾರಿ, ತನ್ನ ಮಾತಿಗೆ ಹೆಚ್ಚು ಬಲ ಹಚ್ಚುವಂತೆ ರೋಮದಲ್ಲಿ ಲೋಯೋಲದ ಇಗ್ನಾತಿಯನ[5] ಅವಶಿಷ್ಟಗಳಿರುವ ಸ್ತೂಪಕ್ಕೆ ಹೋಗಿ, ಸಾಷ್ಟಾಂಗವೆರಗಿದನು. ತರುವಾಯ ಕ್ರಿ. ಶ. 1854ನೇದರ ದಶಂಬರ್ ತಿಂಗಳಲ್ಲಿ ಅವನು ದೇವವಾಕ್ಯ ಕೇಳದೆ, ಸ್ವಾಧಿಕಾರದ ಮೇಲೆ ವಿಧಿಸಿದ್ದೇನೆಂದರೆ—ಮರಿಯಳೆಂಬ ಕನ್ಯೆಯು ಪಾಪವಿಲ್ಲದ ರೀತಿಯಿಂದ ಗರ್ಭದಲ್ಲಿ ಹುಟ್ಟಿದವಳು[6]! ನಾವು ಹೇಳಿದ ಇದಕ್ಕೆ ಸಮ್ಮತಿಸದಂಥ ಯಾವನೊಬ್ಬನೂ ನರಕಾಜ್ಞಾನಿರ್ಣಯ ಹೊಂದಿದವನೇ!—

ಪಪ್ಪಕತ್ವದ ಬಲವನ್ನದರಿಸುವದಕ್ಕೆ ಈ 19ನೇ ಕ್ರಿಸ್ತಶತಮಾನದಲ್ಲಿ ನಡಿಯುತ್ತಿರುವ ಕೆಲವು ವಿಶೇಷ ಸಂಗತಿಗಳ್ಯಾವವೆಂದರೆ—ಕ್ರಿ. ಶ. 1856ನೇ ವರುಷ ಸುತ್ತ ಪಪ್ಪನ ರಾಷ್ಟ್ರದ ಪ್ರಜೆಯು ಅವನಾಳ್ತನಕ್ಕೆ ಬೇಸತ್ತು, ತಾವು ಇನ್ನು ಹೊರಲಾರದ ನೊಗದಂತೆ ಆದ ಅದನ್ನು ತಪ್ಪಿಸಿ ಬಿಡಲೊದ್ದಾಡುತ್ತಿರುವಲ್ಲಿ ಫ್ರಂಚು ದೇಶದ ದಂಡುಗಾರರು ಆ ಪ್ರಜೆಯನ್ನು ಈಗ ಕೆಳಗೊತ್ತುತ್ತಲಿರ ಬೇಕಾದದ್ದೇ ಒಂದು. ಪಿಯೆಮೊಂತೆ ಶೀಮೆಯ[7] ಇಮ್ಮಾನುವೇಲ ರಾಜನು ಪಪ್ಪನ ಬನ್ನುಗಳಿಗೆ ಹೆದರದೆ, ಸುಮಾರು ಸಮಸ್ತ ಈತಲಿಯ ದೇಶವನ್ನು, ಪಪ್ಪಕ ರಾಷ್ಟ್ರದ ದೊಡ್ಡ ಪಾಲನ್ನು ಸಹ, ಸಾಧಿಸಿ ಕೊಂಡು, ತನ್ನ ರಾಜ್ಯಕ್ಕೆ ಶೇರಿಸಿ, ರೋಮಪುರವನ್ನು ತನ್ನ ರಾಜಧಾನಿಯಾಗ ಮಾಡಲಿಚ್ಛೈಸುವದೇ ಮತ್ತೊಂದು. ಆ ಇಮ್ಮಾನುವೇಲ ರಾಜನು ಮುಂಚೆ ಪಪ್ಪಕತ್ವವೊಂದಕ್ಕೆಯೇ ಮಾತ್ರ ಅಪ್ಪಣೆ ಇದ್ದ ತನ್ನ ರಾಜ್ಯದ ಸಕಲ

1) 617ನೇ ಪಾನು. 2) 617ನೇ ಪಾನು. 3) 529ನೇ ಪಾನು. 4) 405, 475ನೇ ಪಾನು. 5) 457ನೇ ಪಾನು. 6) 355, 368ನೇ ಪಾನು. 7) 370—373ನೇ ಪಾನು.

ಪ್ರಜೆಗೆ, ವಲ್ದೆಂಸರಿಗೆ ಸಹ, ಪೂರ್ಣ ಮತಾಚಾರಸ್ವಾತಂತ್ರ್ಯ ಪಾಲಿಸಿತ್ತದ್ದೇ[1] ಇನ್ನೊಂದು. ಬೆಲ್ಗಿಯೆನು ದೇಶದಲ್ಲಿ[2] ಎಲ್ಲರಿಗೂ ಸ್ವಮತಾಚಾರಸ್ವಾತಂತ್ರ್ಯ ಶಿಕ್ಕಿದ್ದು ಇತರವಾದ್ದೊಂದು. 17ನೇ ಕ್ರಿಸ್ತಶತಮಾನ ಹೆಚ್ಚಾಗಿ ಯೇಸುವಿತರು ಕಡು ಪಪ್ಪಕತ್ವವನ್ನೂರಿದ ದಕ್ಷಿಣ ಅಮೆರಿಕದ ಲಾಪ್ಲಾತ ಶ್ಚೀಲಿ[3] ಪಿರೂ[4] ಕೊಲೊಂಬಿಯ[5] ಗ್ವಾತಿಮಾಲ ಬ್ರಜಿಲ್ ಪರಗೇ ಎಂಬ 7 ದೇಶಗಳಲ್ಲಿಯೂ ಹೇತಿ ದ್ವೀಪದಲ್ಲಿಯೂ[6] ಕ್ರಿ. ಶ. 1808ನೇ ಅಬ್ದ ಸುತ್ತ ಸ್ಪಾನಿಯದ ಮತ್ತು ಪೊರ್ತುಗಲಿನ ರಾಜರ ಅಧಿಕಾರವು ತೀರಿ, ಸರ್ವಮತಾಚಾರಸ್ವಾತಂತ್ರ್ಯ ನೆಲಸಿದ್ದು ಪುನಃ ಒಂದು. ಉತ್ತರ ಅಮೆರಿಕದ ದಕ್ಷಿಣ ಭಾಗದ ಒಂದು ದೇಶವಾಗಿರುವ ಮೆಕ್ಸಿಕೋ ಎಂಬಲ್ಲಿ[7] ಸುಮಾರು ಅದೇ ಹಾಡಾದದು ಮಗುಳೊಂದು. ಅನೇಕ ಮಂದಿ ಕೀಳ್ತರದ ಮತ್ತು ಮೇಲ್ತರದ ಪಪ್ಪಕ ಮತೋದ್ಯೋಗಿಗಳು, ಪಪ್ಪನ ಲೌಕಿಕ ಅಧಿಕಾರವು ಸಭೆಗೆ ಅನವಶ್ಯವಾದದ್ದು ಮಾತ್ರವಲ್ಲದೆ ನಷ್ಟಕರವಾದದ್ದೇ ಎಂದು, ಎಣಿಸಿ ಕೊಂಡಿರುವದೇ ಬೇರೊಂದು. ಈ 1868ನೇ ವರುಷದಲ್ಲಿ ಔಸ್ತ್ರಿಯದವರೂ ಸ್ಪಾನಿಯದವರೂ[8] ಪಪ್ಪ

1) ಪೂರ್ಣ ಮತಾಚಾರಸ್ವಾತಂತ್ರ್ಯವಿರುವಲ್ಲಿ ದೇವವಾಕ್ಯವನ್ನು ದೇಶೀಯ ಭಾಷೆಯಲ್ಲಿ ಸಹ ಯಥೇಚ್ಛೆ ಓದಲಿಕ್ಕೆ ಏನೂ ಅಡ್ಡಿ ಆಗದು; ಆದ್ದರಿಂದ ಪೂರ್ಣ. ಮತಾಚಾರಸ್ವಾತಂತ್ರ್ಯಧರ್ಮ ಗೆಲ್ಲುವದಕ್ಕೆ ಬಹು ಸಂತೋಷ ಪಡ ತಕ್ಕದ್ದು. 2) 472ನೇ ಪಾನು. 3) 468ನೇ ಪಾನು. 4) 468, 540ನೇ ಪಾನು. 5) ಅಂದರೆ New Granada, Venezuela, Ecuador. 6) 465, 466, 540ನೇ ಪಾನು. 7) 468, 540ನೇ ಪಾನು. 8) ಕ್ರಿ. ಶ. 1869ನೇ ವರುಷದ ಜೂನ್ ತಿಂಗಳಿನ 6ನೇ ದಿನ ಸ್ಪಾನಿಯದಲ್ಲಿ ಸರ್ವಮತಾಚಾರಸ್ವಾತಂತ್ರ್ಯವು ಅಧಿಕಾರಸ್ಥರ ಆಜ್ಞೆಯಿಂದ ಸ್ಥಾಪಿತವಾಯಿತು; ಪಪ್ಪಕ ಮತವು ರಾಜ್ಯಮತವೆಂತ ಉಳಿದಿದ್ದರೂ ಸೌವಾರ್ತಿಕರಾಗಿರುವ ಪರದೇಶಿಗಳಾಗಲಿ ಸ್ವದೇಶಿಗಳಾಗಲಿ ಅಧಿಕಾರಸ್ಥರ ಆಶ್ರಯದೊಳಗೆ ತಮ್ಮ ಮತಾಚಾರ ನಡಿಸ ಬಹುದು. ಸ್ಪಾನಿಯ ಭಾಷೆಯ ದೇವವಾಗ್ಗ್ರಂಥಗಳನ್ನು ಕೊಂಡು ಕೊಂಡು ಅಭ್ಯಾಸಿಸಲಿಕ್ಕೆ ಅಲ್ಲಿ ಬಹಳ ಕಾಂಕ್ಷೆ ಹುಟ್ಟಿರುವದು ಕಾಣುತ್ತದೆ. ಪಪ್ಪಕ ಮತೋದ್ಯೋಗಿಗಳು ಸರ್ವಮತಾಚಾರಸ್ವಾತಂತ್ರ್ಯದ ಸ್ಥಾಪನೆಗೆ ತಮ್ಮಿಂದ ಆಗುವಷ್ಟು ವಿರೋಧ ಮಾಡಿದ್ದು ಸಹಜವೇ. ಅವರು ಮದ್ರಿದೆಂಬ ರಾಜಧಾನಿಯ ಪಾರ್ಲಿಮೆಂತಿನಲ್ಲಿ ಪಪ್ಪಕತ್ವವನ್ನು ಮಿತಿ ಮೀರಿ ಹೊಗಳುತ್ತಾ ಜನರ ಕಣ್ಣು ಕಟ್ಟುತ್ತಾ ಇರಲು, ದೇವರು ತಾನು ಪರಲೋಕದಿಂದಿಳಿದು, ಸತ್ಯ ತೋರಿಸಿದಂತೆಯೇ ಆಯಿತು. ಹ್ಯಾಗಂದರೆ ಆ ಸಮಯವೇ ಆ ರಾಜಧಾನಿಯೊಳಗೆ ಪ್ರಜೋಪಯೋಗಕ್ಕಾಗಿ ಒಂದು ಹೊಸ ಚತುರಶ್ರಭೂಮಿ ಎಂಬ ಬೈಲನ್ನು (Dos de Mayos) ಅಗಿದಗಿದು ಸಮ ಮಾಡುವಾಗ ಮುಂಚೆ ಗುಪ್ತವಿಚಾರಕರು ಕಥರರೆಂಬವರನ್ನು ಸುಡುತ್ತಿದ್ದ ಸ್ಥಳವು (Quemadero de la Cruze) ಕೆಲಸಗಾರರ ಗುದ್ದಲಿಗೆ ಬಂತು; ಅವರು ಅಲ್ಲಿ ಸಹ ಅಗಿದಗಿಯುತ್ತಿರಲಾಗಿ, ಕಪ್ಪು ಬೂದಿಯೊಳು ಚಿತಿಗಳ ಅರ್ಧ ಸುಟ್ಟ ಕಟ್ಟಿಗೆಯೂ ಸಂಕೋಲೆಗಳ ತುಂಡುಗಳೂ ಅರ್ಧ ಸುಟ್ಟ ಗಂಡು ಹೆಣ್ಣು ಮಕ್ಕಳ ಎದೇ ಎಲುಬುಗಳೂ ತೊಡೇ ಎಲುಬುಗಳೂ ತಲೇ ಬುರುಡೆಗಳೂ ಕರಿದ ಮಾಂಸದ ಕರಣೆಗಳೂ ಕಥರರೆಂಬವರು ತೊಟ್ಟು ಕೊಂಡು ದಗ್ಧರಾಗ ಬೇಕಾದಂಥ ವಸ್ತ್ರಗಳ (38ನೇ ಪಾನು) ತುಂಡುಗಳೂ ರಾಶಿರಾಶಿಯಾಗಿ ಬೈಲಾಗಿ, ತೋರಿದವು. ಸಂಗಡಲೇ ಪಟ್ಣದವರೆಲ್ಲರು, ಪಪ್ಪರ ಹೆಸರಿನಲ್ಲಿ ಗುಪ್ತವಿಚಾರಕರು ನಡಿಸುತ್ತಿದ್ದ ಹಿಂಸಾಕ್ರಿಯೆಗಳ ಕುರುಹುಗಳನ್ನು ನೋಡೋಣವೆಂತ, ಕೂಡಿ ಬಂದು, ನೋಡಿದರು. ಆ ಮೇಲೆ ಸರ್ವಮತಾಚಾರಸ್ವಾತಂತ್ರ್ಯವನ್ನು ನೆಲೆಗೊಳ್ಳಿಸುವದು ಅತಿ ಸುಲಭವಾಯಿತು. — ಕ್ರಿ. ಶ. 1869ನೇ ಅಬ್ದ ಹೂಂಗರಿಯದಲ್ಲೂ ಮತಸ್ವಾತಂತ್ರ್ಯವಾಯಿತು.

ಕ ಮತೋದ್ಯೋಗಿಗಳ ಅತಿಬಲದಿಂದ ತಮ್ಮನ್ನು ಬಿಡಿಸಿ ಕೊಳ್ಳುವ ಪ್ರಯತ್ನ ಗೈಯುತ್ತಿರುವದೇ ಅನ್ಯವಾದದ್ದೊಂದು[1].—ವಿವೇಕಿಗಳು ಇಷ್ಟೆಲ್ಲಾ ನೋಡಿ, ದೇವರ ಕಡೆಯಿಂದ ಬಂದ ಸುಂಟರ ಘಾಳಿಗಳೆಂಬಂತಿರುವ ಆ ಪ್ರತಿಕೂಲವಾದ ಕಾರ್ಯಗಳಿಗೆ ಪಪ್ಪಕತ್ವವು ಇದ್ದಂತೆ ನಿಲ್ಲುವದೋ? ತಿದ್ದುವದೋ? ಏನೋ? ಎಂದು, ಅನುಮಾನಿಸಿದರೆ ಚೋದ್ಯವೇನು?

## 74. ಭೇದಕರೆಂಬ ಪಾಷಂಡಿಗಳೂ ಬುದ್ಧಿಪ್ರಮಾಣಿಕರೂ ಮೊದಲಾದಂಥವರು.

### ಅಂಶಿತ್ರೀನಿತಾರಿಯರು.

ಪುನಃಸ್ಥಾಪನಾಕಾಲಕ್ಕೆ ಮುಂಚೆ ಈತಲಿಯದಲ್ಲಿ ಒಂದು ತರದ ಅದ್ವೈತ ಮತದ ಜ್ಞೋಸ್ತಿಕರಂಥವರು[2] ಇದ್ದರು. ತರುವಾಯ ಪುನಃಸ್ಥಾಪನಾಶಾಲಿಗಳು ಅಲ್ಲಿ ಸಹ ಎದ್ದು, ಪಪ್ಪಕತ್ವಕ್ಕೆ ಪ್ರತಿಕೂಲವಾದಿಗಳಾದಾಗ ಆ ಜ್ಞೋಸ್ತಿಕರು ಆ ಎದುರಾಟದಲ್ಲಿ ಅವರಿಗೆ ಸಹಾಯ ಗೈಯಲೆಸಗಿದರು; ಆದಾಗ್ಯೂ ಅವರಿಗೂ ಇವರಿಗೂ ಬೇರೇನೂ ಸಂಬಂಧವಿರಲಿಲ್ಲ. ಹೀಗಿರಲಾಗಿ ಪಪ್ಪರು ಸೌವಾರ್ತಿಕರನ್ನು ಹಿಂಸಿಸಲಿಕ್ಕೆ ಹತ್ತಿದ ಕ್ಷಣವೇ[3] ಆ ಜ್ಞೋಸ್ತಿಕರು ಹೆದರಿ, ಅಡಗಿ ಕೊಂಡರು; ರಾಜಾಧಿರಾಜನಾದ ಕ್ರಿಸ್ತ ಯೇಸುವಿನಲ್ಲಿ ಹೃದಾದರ ಹೊಂದಿದ ಸೌವಾರ್ತಿಕ ಕ್ರೈಸ್ತರು ಮಾ

---

1) ರೋಮುಪುರದಲ್ಲಿ ಈಗ ಸುಮಾರು $1\frac{1}{2}$ ಲಕ್ಷ ಜನರು ಮಾತ್ರ (8ನೇ ಪಾನು ಸರಿ ನೋಡು) ಇದ್ದಾರೆ. ಅದರಲ್ಲಿ ಮಹಾ ಅರಮನೆ ಮಠ ದೇವಾಲಯ ಇವುಗಳ ಹತ್ತರವೇ ಗುಡಸಲುಗಳೂ ಹಾಳುಗೋಡೆಗಳೂ ಇರುವದಲ್ಲದೆ ತೋಟಗಳ ಹತ್ತರವೇ ಹಾಳುಕಾಡುಗಳು ಅವೆ; ಇಂಥಾ ವಿಪರೀತವಾದ ನೋಟವು ಯುರೋಪಿನ ಇತರ ರಾಜಧಾನಿಗಳಲ್ಲಿ ಇಲ್ಲವೇ ಇಲ್ಲ. ಪಪ್ಪಕ ರಾಷ್ಟ್ರದಲ್ಲಿಯುಷ್ಟು ಮಂದಿ ಕಳ್ಳರು, ಹಾಳಿತ ನೋಡಿದರೆ, ಬೇರೊಂದೂ ರಾಜ್ಯದಲ್ಲಿ ಇಲ್ಲವೇ ಇಲ್ಲ. ಕಳೆದ ಕಡೇ ವರುಷಗಳಲ್ಲಿ ಪಪ್ಪನು ಸಂತಾವಶಿಷ್ಟಗಳ (287ನೇ ಪಾನು) ಪೂಜೆಯನ್ನು ಬಹಳ ಹೆಚ್ಚಿಸಿದನು; ಪಪ್ಪಕರು ಮಠಿಕರ ಅನೇಕ ಹೊಸ ಮಠಗಳನ್ನು ಕಟ್ಟಿದರು; ಅಷ್ಟರೊಳಗೆ ಈತಲಿಯ ದೇಶದಲ್ಲಿ ಇಮ್ಮಾನುವೇಲ ರಾಜನಿಂದ ರದ್ದಾದ ಮಠಗಳೊಳಗಿಂದ ಹೊರಗೆ ಬಂದ ಗಂಡು ಹೆಣ್ಣು ಮಕ್ಕಳು, ತಾವು ನಾಸ್ತಿಕರೆಂತ, ಬೈಲಿನಲ್ಲಿ ಹೇಳುವದು ಹೊರ್ತಾಗಿ ತಾವು ಮಠಗಳಲ್ಲಿ ಗೋಪ್ಯವಾಗಿ ನಡಿಸುತ್ತಿದ್ದ ದುಷ್ಕ್ರಿಯೆಗಳನ್ನು (350ನೇ ಪಾನು) ಸಾರಿ ಹೇಳಲಿಕ್ಕೂ ನಾಚಿಕೆ ಪಡುವದಿಲ್ಲ. ಪಪ್ಪಕ ಮತೋದ್ಯೋಗಿಗಳು ತಮ್ಮ ವರ್ತಮಾನಪತ್ರಗಳಲ್ಲಿಯೂ ಪಪ್ಪನನ್ನು, ರಾಜಾಧಿರಾಜನೆಂತ (484ನೇ ಪಾನು), ಕೊಂಡಾಡುವದನ್ನು ಬಿಡುವದಿಲ್ಲ; ಪಾಪಕ್ಷಮಾವಿಕ್ರಯವು (348ನೇ ಪಾನು) ಇನ್ನೂ ತೀರಲಿಲ್ಲ. ಅದಲ್ಲದೆ ಹಿಂದು ವಿಗ್ರಹಾರಾಧಕರು ಪಪ್ಪಕತ್ವವುಳ್ಳದೊಂದು ಶೀಮೆಗೆ ಹೋಗಿ ನೋಡಿದರೆ, ಪಪ್ಪಕರು ವಿಗ್ರಹಾರಾಧಕರೇ! ಎಂತ, ಆಲೋಚಿಸುವವರಾಗುತ್ತಾರೆ. 2) 18ನೇ ಸಂಧಿ. 3) 446ನೇ ಪಾನು.

ತ್ರ ಅಚಲ ವಿಶ್ವಾಸದಿಂದೊಪ್ಪಿ, ಸಂತೋಷದಿಂದ ಬಂಧನಕ್ಕೂ ಮರಣಕ್ಕೂ ಒಳಗಾಗುತ್ತಿದ್ದರು. ಆ ಸಮಯ ಕ್ರಿ. ಶ. 1547ನೇ ವರುಷದಲ್ಲಿ ಲೇಲಿಯೊ ಸೊಕೀನೊ ಎಂಬವನೊಬ್ಬ ಯೌವನಸ್ಥ ವಾಕ್ಚಾತುರ್ಯಪಂಡಿತನು ಬೇರೆ ಮಂದಿ ಸ್ವದೇಶಜರ ಸಹಿತ ಈತಲಿಯವನ್ನು ಬಿಟ್ಟೋಡಿ, 2 ವರುಷಕ್ಕೆ ಈಚೆ ಸ್ವೀತ್ಸೆರ್ಲಂದಿನ ಜುಯಿರಿಖು ಪಟ್ಣಕ್ಕೆ[1] ಬಂದನು. ಅವನು ಈತಲಿಯದೊಳಗಣ ಪಾಷಂಡ ಸೌವಾರ್ತಿಕಕ್ರೈಸ್ತತ್ವಗಳೆರಡನ್ನೂ ಸಹ ವಿದ್ಯೆಯೆಂಬಂತೆ ಅಭ್ಯಾಸಿಸಿದವನು; ಪಪ್ಪಕತ್ವದ ಮೇಲೆ ಅವನಿಗೆ ಬಹು ದ್ವೇಷವಿತ್ತು. ಜುಯಿರಿಖಿನಲ್ಲಿ ಅವನು ಗೆನ್ಫಿನಲ್ಲಿರುವ ಕಲ್ವೀನನ[2] ಸಂಗಡ ಕಾಗದಪತ್ರ ನಡಿಸುವವನಾಗಿ, ಸೌವಾರ್ತಿಕ ಕ್ರೈಸ್ತತ್ವವೊಂದೇ ಮಾತ್ರ ಮೋಕ್ಷ ಕೊಡುವ ಮತವೆಂದು, ಹಲವು ಸಾರಿ ಅವನಿಂದ ತನಗೆ ಸಿದ್ಧಾಂತ ಮಾಡಿಸಿ ಕೊಂಡನು. ಕಲ್ವೀನನು ಬೇಸರದೆ, ಪರಿಶುದ್ಧ ಬರಹದ ಮೂಲಕ ಹಾಗೆ ತಿರಿ ತಿರಿಗಿ ಗೈಯುತ್ತಾ ಬಂದರೂ ಸೊಕೀನೊ ತನ್ನ ಸ್ವಬುದ್ಧಿಯನ್ನು ವಿಶ್ವಾಸಕ್ಕೊಳ ಪಡಿಸಲೊಲ್ಲದೆ, 37 ವರುಷ ಪ್ರಾಯದವನಾಗಿ ಅವಿಶ್ವಾಸಸ್ಥಿತಿಯಲ್ಲೇ ಸತ್ತನು. ಅವನು ಸತ್ತು ಬಿಟ್ಟ ಕೃತಿಗಳಲ್ಲಿ ಅಂತಿತ್ರೀನಿತಾರಿಯತ್ವದ ಅಂದರೆ ತ್ರಿಯೇಕತ್ವದ್ವೇಷದ[3] ದರ್ಶನದ ವಿವರಣಕೃತಿಯು ಸಹ ಶಿಕ್ಕಿತು; ಅಂದಿಗೆ 1400 ವರುಷಗಳ ಹಿಂದೆ ಉತ್ಪನ್ನವಾದದ್ದಕ್ಕೆ ಅದು ಸರಿ ಬೀಳುವಂಥಾದ್ದು. ಸೊಕೀನೊ ತನ್ನ ಜೀವಿತಕಾಲದಲ್ಲಿ ನಾನಾ ಪ್ರಯಾಣ ಮಾಡುವಾಗ ಗೋಪ್ಯ ರೀತಿಯಾಗಿ ಆ ಕುದರ್ಶನವನ್ನು ಹಬ್ಬಿಸ ನೋಡಿದ್ದನು. ಅದನ್ನವಲಂಬಿಸಿ ಬೈಲಿಗಿಳಿದು ಮುಖ್ಯವಾಗಿ ಈತಲಿಯದವರಾಗಿರುವಂಥ ಜನರಿಗೆ ಸ್ವೀತ್ಸೆರ್ಲಂದಿನಲ್ಲಿ ಆಶ್ರಯಸ್ಥಳವು ಶಿಕ್ಕದಿರಲಿಕ್ಕೆ, ಅವರು ಪೋಲಂದಿಗೆ[4] ಓಡಿ ಹೋದರು. ಲೇಲಿಯೊ ಸೊಕೀನೊ ಎಂಬವನ ಸಮೀಪದ ನೆಂಟನಾದ ಫೌಸ್ತ ಸೊಕೀನನು ಅವನ ಲಿಖಿತ ಕೃತಿಗಳ ಬಾಧ್ಯಸ್ಥನಾಗಿದ್ದನು. ಹೀಗಿರಲು, ಇವನು ಪರಿಶುದ್ಧ ಬರಹವನ್ನೋದುವದಕ್ಕೆ ಬದಲಾಗಿ ಆ ಕೃತಿಗಳನ್ನೇ ಅಭ್ಯಾಸಿಸುತ್ತಿದ್ದು, ಅವುಗಳೊಳಗಿನ ಕುದರ್ಶನವನ್ನು ಹೆಚ್ಚು ವಿಕಸಿತ ಮಾಡುವವನಾಗಿ, ಜನರನ್ನು ಅದಕ್ಕೆಳೆಯುವದಕ್ಕೆ ಪ್ರಯತ್ನಿಸ ತೊಡಗಿದನು. ಆ ವೇಳೆ ಅವನು ಈತಲಿಯದ ಫ್ಲೋರೆಂತಿಯ ಪಟ್ಣದಲ್ಲಿ ಒಬ್ಬ ರಾಜೋದ್ಯೋಗಿಯಾಗಿದ್ದನು. ತನ್ನ ದರ್ಶನದ ವಿಸ್ತರಣಕ್ಕೆ ಅಲ್ಲಿ ಅಭ್ಯಂತರವಾಗುವ ಉದ್ದಿಶ್ಯ ಅವನು ಆ ಉದ್ಯೋಗ ಬಿಟ್ಟು, ಪರದೇಶವನ್ನೈದಿ, ಕ್ರಿ. ಶ. 1579ನೇ ವರ್ಷ ಪೋಲಂದಿಗೆ ಹೋಗಿ, ಕ್ರೈಸ್ತ ಮತದ ಉಪದೇಶಗ್ರಂಥವೆಂಬ ಹೆಸರಿನದೊಂದು ಪಾಷಂಡಕೃತಿ ರಚಿಸಿ, ಪ್ರಕಟಿಸಿದನು; ಅದು ಕಾಲಗತಿಯಿಂದ ಸಕಲ ತ್ರಿಯೇಕತ್ವದ್ವೇಷಿಗಳ ಸಾಧಾರಣ ವಿಶ್ವಾಸಪ್ರಮಾಣವಾಯಿತು; ಅದು ಕ್ರಿಸ್ತನ ಮತ್ತು ಪರಿಶುದ್ಧಾತ್ಮದ ದೇ

1) 435ನೇ ಪಾನು. 2) 438ನೇ ಪಾನು. 3) 148, 158, 183ನೇ ಪಾನು. 4) 456ನೇ ಪಾನು.

ವತ್ವವನ್ನೂ ಕ್ರಿಸ್ತನ ಶ್ರಮ ಮರಣಗಳಿಂದಾಗುವ ಪಾಪಶಾಪವಿಮೋಚನವನ್ನೂ ಪರಿಶುದ್ಧ ಸ್ನಾನ ರಾತ್ರಿಭೋಜನಗಳ ರಹಸ್ಯಾಶೀರ್ವಾದವನ್ನೂ ತಳ್ಳಿ, ಮಹಾ ಗುರುವೆಂಬ ಕ್ರಿಸ್ತನ ನೀತಿಬೋಧನಾತಿಶಯವನ್ನು ಮಾತ್ರ ದರ್ಶಿಸುವಂಥಾದ್ದು. ತ್ರಿಯೇಕತ್ವದ್ವೇಷಿಗಳಿಗೆ, ಸೊಕೀನಿಯಾನರು ಅಂದರೆ ಸೊಕೀನನ ಪಕ್ಷಕರು ಎಂತಲೂ, ಊನಿತಾರಿಯರು ಅಂದರೆ ಏಕಪುರುಷಾಭಿಮಾನಿಗಳೆಂತಲೂ, ನಾಮಧೇಯ ಸಹ ಬಿದ್ದದೆ. ಪೋಲಂದಿನಲ್ಲಿ ಆ ಭೇದಕರು ಅನೇಕ ಸಭೆಗಳಾದ್ದಲ್ಲದೆ ತಮ್ಮದೊಂದು ವಿದ್ಯಾಶಾಲೆಯನ್ನೂ ಮುದ್ರಾಕ್ಷರಶಾಲೆಯನ್ನೂ ಸಹ ಸ್ಥಾಪಿಸಿದರು. ಬಳಿಕ ಕ್ರಿ. ಶ. 1640ನೇ ವರುಷಕ್ಕೆ ಯೇಸುವಿತರು ಅವರನ್ನು ಪೋಲಂದಿನಿಂದ ಹೊರಡಿಸ ಶಕ್ತರಾದಾಗ ಅವರು ಹೆಚ್ಚಾಗಿ ಔಸ್ತ್ರಿಯದ ಸೀಬೆನ್ಬುಯಿರ್ಗೆನೆಂಬ ಶೀಮೆಯೊಳ ಹೊಕ್ಕು, ನೆಲೆಗೊಂಡರು. ನಿಜ ಗೆರ್ಮಾನಿಯದಲ್ಲಿ ಪ್ರತ್ಯೇಕ ಸಭೆಗಳನ್ನು ನಿರ್ಮಿಸುವದು ಅವರಿಂದಾಗಲಿಲ್ಲ; ಆದರೂ ಗುಪ್ತವಾಗಿ ಅವರ ಅಭಿಪ್ರಾಯ ಉಳ್ಳಂಥವರು ಅಲ್ಲಿ ಇಲ್ಲದಿರುವದಿಲ್ಲ. ಇಂಗ್ಲಂದಿನಲ್ಲಿ ಅವರ ಸಭೆಗಳೂ ಅವೆ. ಅಮೆರಿಕದಲ್ಲಿ ಸುಮಾರು 3 ಲಕ್ಷ ಜನ ತ್ರಿಯೇಕತ್ವದ್ವೇಷಿಗಳ ಸಭೆಗಳು 4,800 ಜನ ಸ್ವಮತೋದ್ಯೋಗಿಗಳ ಕೆಳಗೆ ಇರುತ್ತವೆ.

### ಸ್ವೇದೆನ್ಬೊರ್ಗಿಯಾನರು.

ಇವರ ಸ್ಥಾಪಕನು ಸ್ವೇದೆನು ದೇಶದ ಸ್ತೊಕ್ಹೊಲ್ಮ ರಾಜಧಾನಿಯಲ್ಲಿ ಖಣಿವೃತ್ತಿಸಂಘದವರೊಳಗೊಬ್ಬ ಮಂತ್ರಿಯಾದ ಇಮ್ಮಾನುವೇಲ ಸ್ವೇದೆನ್ಬೊರ್ಗನು; ಅವನ ತಂದೆಯು ಒಳ್ಳೇ ಭಕ್ತಿವಂತನಾದ ಒಬ್ಬ ಸಭಾಧ್ಯಕ್ಷನು. ಇಮ್ಮಾನುವೇಲ ಸ್ವೇದೆನ್ಬೊರ್ಗನು ಭೂವಸ್ತುವಿದ್ಯೆ ಗಣಿತವಿದ್ಯೆ ತತ್ವದರ್ಶನವಿದ್ಯೆಗಳಲ್ಲಿ ಪಾಂಡಿತ್ಯ ಪಡೆದವನು. ಕಾಲ ಹೋಗುತ್ತಿರಲು, ಅವನು ಗಂಧರ್ವಗೃಹೀತ[1] ಅವಸ್ಥೆಗೆ ಒಳ ಬಿದ್ದು, ಒಮ್ಮೆ ಸ್ವರ್ಗದಲ್ಲಿ ಒಮ್ಮೆ ನರಕದಲ್ಲಿ ಎಂಬಂತೆ ಇದ್ದು, ಪ್ರೇತಾತ್ಮರ ಸಂಗಡ ಪರಿಚರ್ಯೆ ಮಾಡಿದಂತಾಯಿತು. ಈ ಮರುಳವಸ್ಥೆಯಲ್ಲಿ ಅವನು ಕಂಡದ್ದು, ದೇವಪ್ರಕಟನಗಳೆಂದು, ಭಾವಿಸಿ ಕೊಂಡು—ಕ್ರೈಸ್ತ ಧರ್ಮವನ್ನು ಪ್ರಾಚೀನ ಶುದ್ಧಿಯಲ್ಲಿ ತಿರಿಗಿ ನೆಲೆಗೊಳ್ಳಿಸುವದೂ ನವಸಭೆಯನ್ನು ಸ್ಥಾಪಿಸುವದೂ ತನ್ನ ಋಣವು; ಸದ್ಯಕ್ಕಿರುವ ಕ್ರೈಸ್ತ ಸಭೆಯೆನ್ನಿಸುವಂಥಾದ್ದು ಕ್ರಿಸ್ತನ ವಾಗ್ದತ್ತಗಳ ಮೇಲೆ ನಾಶನಕ್ಕೆ ಗುರಿಯಾಗ ಬೇಕೆಂದು, ನಂಬಿ ಕೊಂಡು, ನವ ಯೆರೂಸಲೇಮಿನ ಸಭೆಯೆಂಬಂಥಾದ್ದನ್ನು ನಿರ್ಮಿಸಲಾಲೋಚನೆ ಗೊಂಡನು. ತರುವಾಯ ಅವನು, ಕ್ರಿ. ಶ. 1757ನೇ ವರುಷವೇ ಸದ್ಯಕ್ಕಿರುವ ಸಭೆಗಳ ಅಂತಕಾಲವೆಂದು, ಹೇಳಿ, ತಾನು

1) 145, 146ನೇ ಪಾನು.

ನಿರ್ಮಲ ಕ್ರೈಸ್ತಧರ್ಮವೆಂಬ ತನ್ನ ಮುಖ್ಯ ಗ್ರಂಥವನ್ನು ತೀರಿಸಿದ 1770ನೇ ವರುಷದ ಜೂನ್ ತಿಂಗಳಿನ 19ನೇ ದಿವಸವೇ ನವಸಭೆಯ ನಿರ್ಮಾಣದಿನವೆಂದು, ಚರ್ಚಿಸಿ, ಎರಡು ವರುಷದಿತ್ತ ಸತ್ತನು. ಅವನ ದರ್ಶನದ ವಿಕೃತಿಯನ್ನು ವಿವರಿಸುವದಕ್ಕೆ ಈ ಗ್ರಂಥದಲ್ಲಿ ಆಸ್ಪದವಿಲ್ಲ; ಆದರೆ ಅವನು ಫೌಸ್ತ ಸೊಕೀನನೋಪಾದಿ ದೇವರನ್ನು ಕುರಿತು ಸಬೆಲ್ಲನೆಂಬವನಂಥ[1] ತ್ರಿಯೇಕತ್ವದ್ವೇಷಿಯೂ ಅವನ ಮತ್ತು ಪಪ್ಪಕರ ಓಪಾದಿ ಜನರಕ್ಷಣವನ್ನು ಕುರಿತು ಪೆಲಗಿಯನೆಂಬವನಂಥ[2] ಕರ್ಮಕಮಾರ್ಗವಾದಿಯೂ ಆಗಿದ್ದನೆಂತ, ತಿಳಿಸಿದರೆ ಅವನ ಪಾಷಂಡವು ತಕ್ಕ ಮಟ್ಟಿಗೆ ಗೊತ್ತಾದೀತಲ್ಲವೋ? ಅದು ಹೊರ್ತಾಗಿ ಅವನು ಸತ್ತವರ ದೇಹಪುನರುತ್ಥಾನವನ್ನೂ ಲೋಕನ್ಯಾಯನಿರ್ಣಯಕ್ಕೋಸ್ಕರವಾಗುವ ಕ್ರಿಸ್ತನ ಪುನರಾಗಮನವನ್ನೂ ಮುಂತಾದದನ್ನು ಸಹ ವಿಷಮ ರೀತಿಯಾಗಿ ಗ್ರಹಿಸಿ ಅತಿಗಳೆದನು. ಸ್ವೇದೆನಿನಲ್ಲಿಯೂ ಇಂಗ್ಲಂದಿನಲ್ಲಿಯೂ ಸ್ವೇದೆನ್ಬೊರ್ಗಿಯಾನರ ಸಭೆಗಳು ಹುಟ್ಟಿ ಅವೆ; ಉತ್ತರ ಅಮೆರಿಕದಲ್ಲಿಯೂ ಗೆರ್ಮಾನಿಯದಲ್ಲಿಯೂ ಅಲ್ಲಲ್ಲಿ ಆ ಭೇದಕರ ಪಕ್ಷಕರು ದೃಷ್ಟಿಗೆ ಬೀಳುತ್ತಾರೆ.

ಅರ್ಮಿನಿಯಾನರು.

ಈ ಪಾಷಂಡಿಗಳು ಸುಮಾರು ಕ್ರಿ. ಶ. 1600ನೇ ವರುಷ ಹೊಲ್ಲಂದಿನಲ್ಲಿದ್ದರು. ಅಂದು ಲೈದೆನು ಪಟ್ಣದ ಮಹಾ ವಿದ್ಯಾಶಾಲೆಯವನೊಬ್ಬ ಪಂಡಿತನಾದ ಯಕೋಬ ಅರ್ಮಿನನು ಪೆಲಗಿಯನ ಕುದರ್ಶನವನ್ನು ತಿರಿಗಿ ಬೈಲಿಗೆ ತರಲಿಕ್ಕೆ ಹತ್ತಿದನು. ಬಳಿಕ ಅನೇಕ ಜನ ಶುಷ್ಕ ಭಕ್ತಿಯವರು ಅವನ ಪಕ್ಷವನ್ನು ಹಿಡಿಯುವವರಾದಾಗ ಕ್ರಿ. ಶ. 1618ನೇ ವರುಷ ಸೌವಾರ್ತಿಕ ಸಭೆಯ ಉದ್ಯೋಗಿಗಳದೊಂದು ಸಂಘದವರು ಅವನ ಬೋಧೆಯನ್ನು ಖಂಡಿಸಿ, ಸಕಲ ಅರ್ಮಿನಿಯಾನರೆಂಬ ಅವನ ಪಕ್ಷಾವಲಂಬಿಗಳನ್ನು ಸಭೆಯಿಂದ ಬಹಿಷ್ಕರಿಸಿದರು. ಈ ನಮ್ಮ ಕಾಲಕ್ಕೆ ಅವರ ಸಂಖ್ಯೆಯು ಬಹಿರಂಗದಲ್ಲಿ ಕೊಂಚ ಮಾತ್ರ.

ಮೊರ್ಮೊನರು.

ಇವರ ಉತ್ಪತ್ತಿಯು ಉತ್ತರ ಅಮೆರಿಕದಲ್ಲಿ ಆಯಿತು. ಕ್ರಿ. ಶ. 1825ನೇ ವರುಷ ಅಲ್ಲಿಯ ಸ್ಮಿಥನೆಂಬ ಒಬ್ಬ ಪಟಿಂಗ ಒಕ್ಕಲಿಗನು—ತನಗೆ ಭೂಮಿಯೊಳಗೆ ಚಿನ್ನದ ಹಲಿಗೆಗಳು ಶಿಕ್ಕಿದವು, ಅವುಗಳಲ್ಲಿದ್ದ ಅಪೂರ್ವ ಬರಹವನ್ನು ಅವುಗಳ ಬಳಿಯಲ್ಲಿಟ್ಟಿದ್ದ ಒಂದು ಕನ್ನಡಿಯ ಪರಿಮುಖ ಮಾತ್ರ ತನಗೋದ ಕೂಡಿತು ಎಂತ,

---

1) 158, 183ನೇ ಪಾನು. 2) 243 — 245, 251, 291ನೇ ಪಾನು.

ಕಲ್ಪಿಸಿ, ಹೇಳಿ, ತದನಂತರ ತಾನು, ಆ ಬರಹದ ಭಾಷಾಂತರವೆಂತ, ಚರ್ಚಿಸುವದೊಂದು ಗ್ರಂಥವನ್ನು ಇಂಗ್ಲಿಷ ಮಾತಿನಲ್ಲಿ ಪ್ರಕಟಿಸಿದನು. ಅದರ ಮುಖ್ಯ ಹುಚ್ಚು ತಾತ್ಪರ್ಯವೇನೆಂದರೆ—ಸುಮಾರು ಕ್ರಿಸ್ತನ ಜನ್ಮಕ್ಕೆ 720 ವರುಷ ಮುಂಚೆ ಅಸ್ಸುರಿಯ ದೇಶದ ಸಲ್ಮನಸ್ಸರನೆಂಬ ರಾಜನು ಪಲೇಸ್ತೀನವನ್ನು ಹಾಳು ಮಾಡಿದ ಮೇಲೆ[1] ಇಸ್ರಯೇಲ್ಯರಲ್ಲಿ 10 ಗೋತ್ರದವರು ಗುಳೆ ತೆಗೆದು, ಅಮೆರಿಕಕ್ಕೆ ಬಂದರು; ಆದರೆ ತಮ್ಮ ಪಾಪಗಳ ದೆಸೆಯಿಂದ ನಾಶನ ಹೊಂದಿದರು. ಅವರ ಕಡೇ ಪ್ರವಾದಿಯಾದ ಮೊರ್ಮೋನನೆಂಬವನು ದೇವಪ್ರಕಟನಗಳನ್ನು ಆ ಹಲಿಗೆಗಳಲ್ಲಿ ಲೇಖಿಸಿ, ಇವನ್ನು ಅಂತ್ಯ ದಿನಗಳ ಪರಿಶುದ್ಧರಿಗೆ ಆಗ ತಕ್ಕ ಸಾಕ್ಷಿಗೋಸ್ಕರ ಹುಗಿದು ಬಿಟ್ಟನು.—ಅದಲ್ಲದೆ ಅವನು, ತಾನು ಕ್ರಿಸ್ತನ ಪ್ರವಾದಿಯೂ ಕ್ರಿಸ್ತನಿಗೆ ಸರಿಯಾದ ಮಾನದವನೂ ಎಂತ, ಒದರಿ, ಪರಿಶುದ್ಧ ಬರಹದ ಹೊಸ ಒಡಂಬಡಿಕೆಯದೊಂದು ಕೆಡಿಸಿದ ಪ್ರತಿಯನ್ನು ಹೊರಡಿಸಿ—ಪರಮಾನಂದವುಳ್ಳ ನಿಜ ಚಿಯೋನುಸಭೆಯನ್ನು[2] ನಿರ್ಮಿಸುವದು ದೇವರು ತನಗೆ ಕೊಟ್ಟ ಉದ್ಯೋಗವು; ಅಂತ್ಯ ದಿನಗಳ ಪರಿಶುದ್ಧರೆಂತಾಗಲಿ ಮೊರ್ಮೋನರೆಂತಾಗಲಿ ಹೆಸರಿರ ತಕ್ಕ ತನ್ನ ಪಕ್ಷಾವಲಂಬಿಗಳಾದವರು ಆ ಸಭೆಯಲ್ಲಿ ವಾಚಾತೀತ ಸುಖಗತಿಯನ್ನೈದುವರು; ಕ್ರಿಸ್ತನು ತಡೆಯದೆ 10,000 ಮಂದಿ ಪರಿಶುದ್ಧರೊಂದಿಗೆ ಪ್ರತ್ಯಕ್ಷನಾಗಿ, ಮೊರ್ಮೋನರಾಗದವರೆಲ್ಲರನ್ನು ನಶಿಸುವನು ಎಂತ, ಸಾರುತ್ತಾ ಬಂದನು. ಮೂಢಾತ್ಮರಲ್ಲಿ ಅವನಿಗೆ ಶೇರುವವರು ಇರದಿರಲಿಲ್ಲ. ಬಳಿಕ ಅವನು ಬಹುಸ್ತ್ರೀವಿವಾಹವನ್ನೂ ವಿವಾಹಿತ ಸ್ತ್ರೀಯರ ಅದಲುಬದಲನ್ನೂ ಸಹ, ದಿವ್ಯ ನ್ಯಾಯವೆಂದು, ತನ್ನ ಸಭೆಯೊಳು ಸ್ಥಾಪಿಸಿ, ಸ್ತ್ರೀಯರಲ್ಲಿ ಮೊರ್ಮೋನರಿಗೆ ಮದಿವೆಯಾಗುವಂಥವರೇ ಮಾತ್ರ ಮೋಕ್ಷ ಹೊಂದುವರೆಂದು, ಪ್ರಸಂಗಿಸ ತೊಡಗಿದನಂತರ ಹೇರಳ ಮಂದಿ ವಿಷಯಲಂಪಟರು ಅವನ ದುರ್ಬೋಧನೆಯಲ್ಲಿ ಶಿಕ್ಕಿ ಕೊಂಡರು. ಕ್ರಿ. ಶ. 1844ನೇ ವರುಷದಾರಭ್ಯ ಮೊರ್ಮೋನರು ನೀತಿಚರ್ಯಾಪ್ರಿಯ ಜನರೊಳಗೆ ತಮ್ಮ ಪಟಿಂಗತನಕ್ಕೋಸ್ಕರ ಇನ್ನೂ ನಿಲುಗಡೆ ಕಾಣದೆ, ಜನಪದವಿಲ್ಲದ ಪಶ್ಚಿಮ ಪ್ರಾಂತಕ್ಕೆ ಹೋಗಿ, ಕಲಿಫೋರ್ನಿಯ ಶೀಮೆಯ ಉಪ್ಪುನೀರಿನದೊಂದು ದೊಡ್ಡ ಸರೋವರದ ತೀರದಲ್ಲಿ ನೆಲಸಿ, ಊತಾ ಎಂಬ ಸಂಸ್ಥಾನವನ್ನು ನಿರ್ಮಿಸಿ, ನವ ಯೆರೂಸಲೇಮು ಎಂಬ ಪಟ್ಟಣವನ್ನು ಕಟ್ಟಿದ್ದಾರೆ. ಅವರ ಚಂಚಲವಾದ ವಿಶ್ವಾಸಪ್ರಮಾಣದ ಮುಖ್ಯ ಆಧಾರವು ತಾವು ತಮ್ಮಲ್ಲಿ ಆರಿಸಿಟ್ಟ ಪ್ರವಾದಿಗಳು ಮತ್ತು ಅಪೊಸ್ತಲರು ಎಂಬವರ ನುಡಿಗಳೇ; ಅವರ ಬೋಧನಾರ್ಥವು ಅನೇಕ ವಿಷಯಗಳಲ್ಲಿ ಜ್ಞೋಸ್ತಿಕರದಕ್ಕೆ ಸಮವಾಗುತ್ತದೆ; ಶಿಶುಸ್ನಾನ ತಳ್ಳಿ ಬಿಟ್ಟಿದ್ದಾರೆ.

1) 2 ಅರಸು. 17. 2) ಮತ್ತಾ. 21, 5.

ರತಿಯೋನಾಲಿಸ್ತಿಕತ್ವವೆಂಬ ಬುದ್ಧಿಪ್ರಮಾಣಿಕತ್ವವು.

ಹಿಂದೆ ಹೇಳಿದಂತೆ ಸೌವಾರ್ತಿಕ ಸಭೆಯಿಂದಲೂ ಪಪ್ಪಕ ಸಭೆಯಿಂದಲೂ ತಮ್ಮ ತಮ್ಮನ್ನು ಛೇದಿಸಿ ಕೊಂಡ ಅಂತಿತ್ರೀನಿತಾರಿಯರು ಮೊದಲ್ಗೊಂಡ ಆ ಪಾಷಂಡಸಭೆಗಳನ್ನು ಕುರಿತು ಸೂಚಿಸಿದ ಮೇಲೆ ರತಿಯೋನಾಲಿಸ್ತರೆಂಬ ಬುದ್ಧಿಪ್ರಮಾಣಿಕರನ್ನು ಸಹ ಸ್ವಲ್ಪ ತೋರಿಸ ತಕ್ಕದ್ದಾಗಿದೆ. ಹ್ಯಾಗಂದರೆ ಇಂಗ್ಲಂದಿನಲ್ಲಿದ್ದ ಆ ನಾತೂರಾಲಿಸ್ತರು ಮತ್ತು ದೆಯಿಸ್ತರು ಎಂಬವರ[1] ಪ್ರೇರಣೆಯಿಂದ 18ನೇ ಕ್ರಿಸ್ತಶತಮಾನದೊಳಗೆ ಫ್ರಂಚಿನಲ್ಲಿ ನಾಸ್ತಿಕತ್ವವು ಮುಂಚಿಗಿಂತ ಭೀಕರ ರೀತಿಯಿಂದ ಪ್ರಬಲವಾಗಲು, ಗೆರ್ಮಾನಿಯದ ಪ್ರುಸ್ಸಿಯವೆಂಬ ದೇಶದಲ್ಲಿ ಯುದ್ಧಜಯಗಳಿಂದ ದೊಡ್ಡನೆಂಬ ಉಪನಾಮು ಹೊಂದಿದ 2ನೇ ಪ್ರೀದೆರೀಕ ರಾಜನಿದ್ದನು. ಕ್ರಿ. ಶ. 1740ನೇ ಅಬ್ದ ಆಳಲೆಸಗಿದ ಇವನು ಆ 1ನೇ ಪ್ರೀದೆರೀಕನ ಮೊಮ್ಮಗನು[2], ಆದರೆ ಅಜ್ಜನಂಥ ಭಕ್ತನಲ್ಲ. ಈ 2ನೇ ಪ್ರೀದೆರೀಕನ ಗೆಳೆಯನಾಗಿ ಅವನ ರಮನೆಯಲ್ಲಿರುತ್ತಿದ್ದ ಆ ವೊಲ್ತೇರ[3] ಮುಂತಾದ ಕುಹಕ ಪಂಡಿತರ ಮೂಲಕ ಗೆರ್ಮಾನಿಯದೊಳು ಸಹ ಅನೇಕರಲ್ಲಿ ವಿಶ್ವಾಸದ ಬಲ ಕುಂದಿತು. ತನ್ನ ಜೀವಾಂತದ ಕಡೆಗೆ ಕ್ರಿ. ಶ. 1786ನೇ ಅಬ್ದ 2ನೇ ಪ್ರೀದೆರೀಕ ರಾಜನು ಫ್ರಂಚರ ಮೂಲಕ ತನ್ನ ರಾಜ್ಯದಲ್ಲಿ ಉತ್ಪನ್ನವಾಗಿದ್ದ ಅವಿಶ್ವಾಸದ ದುರ್ಮಾರ್ಗತನ ಕಂಡು, ದುಃಖಿಸಿ—ಭಕ್ತಿಯುಕ್ತ ತಂದೆಯು ಸಾಯುವಾಗ ಒಳ್ಳೇ ಸ್ಥಿತಿಗತಿಯುಳ್ಳ ರಾಜ್ಯವನ್ನು ನನಗೆ ಬಿಟ್ಟು ಕೊಟ್ಟನಲ್ಲ? ನಾನು ಈಗ ಸಾಯುವಾಗ ಅಂಥಾದ್ದನ್ನೇ ನನ್ನ ಉತ್ತರಾಧಿಕಾರಿಗೆ ಬಿಟ್ಟು ಕೊಡ ಸಿದ್ಧಿಸುವಂತೆ ಬೇಕಾದರೆ ನನ್ನ ಬೆರಳುಗಳಲ್ಲೊಂದನ್ನು ಕಡಿಸಿ ಕೊಂಡೇನೆಂತ, ಹಲುಬಿದನು. ಆದರೆ ಆರಂಭಕ್ಕೆ ಗೆರ್ಮಾನ ಪಂಡಿತರು, ದೇವವಾಕ್ಯದರ್ಥವು ಮಾನುಷ ಬುದ್ಧಿಗನುಸಾರವಾದ್ದೆಂದು, ತರ್ಕದ ಮೇಲೆ ಕಾಣಿಸಿ, ಹೀಗೆ ಬುದ್ಧಿಕ್ರಿಯೆಗಳಿಂದ ಕುಹಕರ ಬೋಧನೆ ಖಂಡಿಸ ನೋಡಿದರು. ಆದರೆ ಪರಮಾರ್ಥಸತ್ಯವು ಬುದ್ಧ್ಯತೀತವಾದದಲ್ಲವೋ? ಹೀಗಿರಲಾಗಿ ಆ ಪಂಡಿತರು ಮೊದಲು ಸದಪೇಕ್ಷೆಯಿಂದ ಹಿಡು ಕೊಂಡ ಆ ಮಾರ್ಗದಲ್ಲಿ ಕಡೆಗೆ ಅವರೇ ಸ್ವಬುದ್ಧಿಯ ಉರ್ಲಿನಲ್ಲಿ ಶಿಕ್ಕಿ, ಸ್ವಬುದ್ಧ್ಯಭಿಮಾನವು ಹುಟ್ಟಿ, ಗಗನಕ್ಕೇರಿತು. ಈ ಭಾವಕ್ಕೊಳ ಬಿದ್ದವರು, ದೇವವಾಕ್ಯವೆಂಬದರಲ್ಲಿ ಬುದ್ಧಿಗೆ ಗ್ರಾಹ್ಯವಾದ ಅಂಶವೊಂದೇ ಮಾತ್ರ ಸತ್ಯವೆಂತ, ಕೂಗಿ, ಅದರಲ್ಲಿ ಹೇಳಿರುವ ಅದ್ಭುತಕ್ರಿಯೆ ದೇಹಪುನರುತ್ಥಾನ ತ್ರಿಯೇಕತ್ವ ಮುಂತಾದ ಪಾರಮಾರ್ಥಿಕ ರಹಸ್ಯಗಳನ್ನು ತ್ಯಜಿಸಿ, ಇದರ ದೆಸೆಯಿಂದ ಸಭಾಚರಿತ್ರದಲ್ಲಿ ಬುದ್ಧಿಪ್ರಮಾಣಿಕರೆನ್ನಿಸಿ ಕೊಳ್ಳುತ್ತಾರೆ. ಈ ಒಣ ಗುಣದವರು, ಸೊಕೀನಿಯಾನರ ಮತ್ತು ಸ್ವೇದೆನ್ಬೊರ್ಗಿಯಾನರ ಹಾಗೆ, ಕ್ರೈ

1) 613, 614ನೇ ಪಾನು. 2) 556ನೇ ಪಾನು. 3) 614ನೇ ಪಾನು.

ಸ್ತತ್ವವು ಕೇವಲ ಸುಮರ್ಯಾದಾವರ್ತನ ಮಾತ್ರವೆಂತ, ಹೇಳುವದು ಬಹಳ. ದೇವವಾಕ್ಯಪ್ರತಿಕೂಲವಾದ ಇಂಥಾ ಬುದ್ಧಿಪ್ರಮಾಣಿಕತ್ವವನ್ನು ಅನೇಕ ವರ್ಷ ಮಹಾ ವಿದ್ಯಾಶಾಲೆಗಳಲ್ಲಿಯೂ ದೇವಾಲಯಗಳಲ್ಲಿಯೂ ಸಾಧಾರಣ ಶಾಲೆಗಳಲ್ಲಿಯೂ ಹೆಚ್ಚು ಕಡಿಮೆಯಾಗಿ ಉಪದೇಶಿಸಲಾಯಿತು. ಬುದ್ಧಿಪ್ರಮಾಣಿಕರಾದ ಅನೇಕ ಜನ ಸಭೋದ್ಯೋಗಿಗಳು ದೇವವಾಕ್ಯವನ್ನು ಮೂಲೆಗೆ ಹಾಕಲಂಜಿ, ತಾವು ಅದರ ಮೇಲೆ ತೋರಿಸುವಂಥ ಸ್ವಾಭಿಪ್ರಾಯಮಯವಾದ ಕ್ರಿಸ್ತಮತವು ಬುದ್ಧಿಯುಕ್ತವಾದ್ದೆಂದು, ಸಾರಿದರೂ—ದೇವರಿಲ್ಲ, ನಿತ್ಯ ಜೀವವಿಲ್ಲ! ಸಕಲ ಪರಮಾರ್ಥ ಧರ್ಮವೆನ್ನಿಸುವದು ಬರೇ ಮೋಸವೆಂತ, ಹೇಳುವವರು ಸಹ ಇಲ್ಲದಿರಲಿಲ್ಲ. ಸೌವಾರ್ತಿಕ ಮತ್ತು ಪಪ್ಪಕ ಸಭೆಗಳೆರಡರಲ್ಲಿ ಗೋಪ್ಯಾಗೋಪ್ಯವಾಗಿ ಆ ವಿಧದ ಬುದ್ಧಿಪ್ರಮಾಣಿಕತ್ವದಿಂದ, ಮುಖ್ಯವಾಗಿ ಉದ್ಯೋಗಿಗಳಲ್ಲಿಯೂ ಪಂಡಿತರಲ್ಲಿಯೂ, ಭಕ್ತಿಗೇಡು ಹುಟ್ಟಿದ್ದು ಖರೆ; ಆದಾಗ್ಯೂ ಫ್ರಂಚು ದೇಶದಲ್ಲಿ ಆ ವೊಲ್ತೇರ ಮುಂತಾದವರು ಬೋಧಿಸಿದ ನಾಸ್ತಿಕತ್ವದಿಂದ ಸೌವಾರ್ತಿಕರಲ್ಲದುಳಿದ ಸಕಲ ಪ್ರಜಾಕುಲಗಳು ಭಕ್ತಿಹೀನತ್ವದೊಳಗೆ ಮುಳುಗುತ್ತಿರುವಂದು ಏನಾಯಿತಂದರೆ, ನಾತೂರಾಲಿಸ್ತರ ಮತ್ತು ದೆಯಿಸ್ತರ ಕಾಲದಲ್ಲಿ ಇಂಗ್ಲಿಷ ಸಾಧಾರಣ ಪ್ರಜೆಯು ಹ್ಯಾಗೋ[1], ಹಾಗೆಯೇ ಗೆರ್ಮಾನವಾದದು ಸಹ ಹೆಚ್ಚಾಗಿ ಕ್ರಿಸ್ತನಾಥನ ನಂಬಿಗಸ್ತ ಸೇವೆಯಲ್ಲಿದ್ದು ಕೊಂಡಿತು; ತನಗೆ ದೇವಾಲಯದಲ್ಲಿ ಪ್ರಸಂಗಿಕರ ಜೊಳ್ಳುಪೊಳ್ಳಾದ ವಾದದಿಂದ ಆತ್ಮಾಹಾರವು ಶಿಕ್ಕದ ಪಕ್ಷದಲ್ಲಿ ಆ ಪ್ರಜೆಯು ಸ್ವಗೃಹದಲ್ಲಿ ದೇವವಾಕ್ಯವನ್ನೂ ಪೂರ್ವ ಭಕ್ತರು ರಚಿಸಿದ ಪರಮಾರ್ಥಕೃತಿಗಳನ್ನೂ ಓದುತ್ತಾ, ಇದರಿಂದ ವಿಶ್ವಾಸಾಭಿವೃದ್ಧಿಯನ್ನು ಪಡ ಕೊಳ್ಳುತ್ತಾ ಇರುವದು. ಅದಲ್ಲದೆ ವಿಶ್ವಾಸಸಂರಕ್ಷಣ ಗೈಯುವದರಲ್ಲಿ ಸಹೋದರಸಭ್ಯರೆಂಬವರು ಅಂದು ವಿರಾಜಿಸುತ್ತಿರುವರು[2].

ಗೆರ್ಮಾನಿಯದಲ್ಲಿ ಉದ್ಭವಿಸಿದಂಥ ಬುದ್ಧಿಪ್ರಮಾಣಿಕತ್ವವು ನೀದೆರ್ಲಂದು ದೇನೆಮರ್ಕು ನೊರ್ವೇಗೆನು ಪ್ರಭೃತಿಯಾದ ದೇಶಗಳಲ್ಲಿ ಸಹ ಬರಬರ ಶೇರಿದ ಹಾಗಾಯಿತು.

ಬುದ್ಧಿಪ್ರಮಾಣಿಕತ್ವವು ಗೆರ್ಮಾನಿಯ ಮುಂತಾದಲ್ಲಿ ಸುಮಾರು 80 ವರುಷ ಕ್ರೈಸ್ತ ಸಜ್ಜೀವನವನ್ನು ಬಾಡಿಸುವಂತಿರುವಷ್ಟರೊಳಗೆ ದೇವರು ಕ್ರಿ. ಶ. 1796ನೇ ವರುಷ ಹಿಡಿದು ಆ ಅತಿದರ್ಪಿಯಾದ 1ನೇ ನಪೊಲೆಯೋನನೆಂಬವನಿಂದ[3] ಗೆರ್ಮಾನಾದಿ ಜನಾಂಗಗಳಿಗೆ ಪ್ರಚಂಡ ಶಿಕ್ಷೆ ಕೊಡುತ್ತಾ ಬಂದಿದ್ದನು. ಬಳಿಕ ಗೆರ್ಮಾನರು ಸ್ವಶಕ್ತಿಗೆಟ್ಟು, ದೇವರ ಸಹಾಯ ಬೇಡಿ ಕೊಂಡು, ಕ್ರಿ. ಶ. 1815ನೇ ವರುಷ ಆ ಕೈಸರನ ವಶದಿಂದ ಪೂರ್ಣ ಬಿಡುಗಡೆಯವರಾದ ಮೇಲೆ, ತಮ್ಮನ್ನು ಕ

---

1) 614ನೇ ಪಾನು. 2) 574—581ನೇ ಪಾನು. 3) 517ನೇ ಪಾನು.

ರುಣಿಸಿ ಬಿಡಿಸಿದವನು ದೇವರೇ! ಎಂತ, ಸ್ಪಷ್ಟ ತಿಳಿದು, ನಿವೇದಿಸಿ, ಭಕ್ತಿಯಲ್ಲಿ ತಿರಿಗಿ ಬೆಳೆಯುವವರಾದಲ್ಲಿ ಭಕ್ತಿತೇಜಸ್ಸಲ್ಲಿ ಬುದ್ಧಿಪ್ರಮಾಣಿಕತ್ವದ ಸಹಜ ದುಷ್ಫಲವು ಇದ್ದಂತೆಯೇ ಅಘೋರ ಕಾರುಗತ್ತಲೆಯಾಗಿ ಕಾಣಿಸಿ, ಬುದ್ಧಿಪ್ರಮಾಣಿಕತ್ವವು ಸರ್ವತ್ರ ಕ್ಷೀಣಿಸುತ್ತಾ ಬಂತು. ಆಗ ಪಿಯೆತಿಸ್ತರೆಂಬ ಸದ್ಭಕ್ತರು[1] ಪುನಃ ಪ್ರಬಲರಾದರು; ಸಭೋದ್ಯೋಗಿಗಳಲ್ಲಿಯೂ ಪಂಡಿತರಲ್ಲಿಯೂ ಅನೇಕಾನೇಕರು ಸಹ ನಿಜವಾದ ಸೌವಾರ್ತಿಕ ಭಕ್ತಿಗೆ ತಿರಿಗಿದರು.

### ಅದ್ವೈತವಾದಿಗಳು.

ವಿಶೇಷವಾಗಿ ಕ್ರಿ. ಶ. 1830ನೇ ವರುಷಕ್ಕೀಚೆ[2] ಕ್ರಿಸ್ತನ ಅನಾದಿದೇವಪುರುಷತ್ವದ ಸಂಗಡ ಕ್ರೈಸ್ತತ್ವದ ಮಹಾ ದಿವ್ಯತೆ ಕೀಳ ನೋಡುವ ಅದ್ವೈತವಾದವು ಹಲವು ಮಂದಿ ಯುರೋಪೀಯ ಪಂಡಿತರಲ್ಲುದ್ಭವಿಸಿ[3], ಸ್ವಲ್ಪ ರೂಢಿಯಾಯಿತು; ಆದರೆ ಹೇರಳ ಪಂಡಿತರು ಹದನ ಖಡ್ಗಗಳಂತಿರುವ ಗ್ರಂಥಗಳಿಂದೇ ಅಂಥವರನ್ನು ಜಯಿಸುವವರಾದರು. ತನ್ಮಧ್ಯ ಯುರೋಪದ ಮಹಾ ನಗರಗಳೊಳಗೆ, ಹೆಚ್ಚಾಗಿ ಫುಂಚಿನವುಗಳೊಳಗೆ, ಕೈಕೆಲಸದವರಾದಂಥ ಧಾರಾಳ ಜನರು ಮುತ್ತಿ ಬಂದಿರಲು, ಇವರಲ್ಲಿ ಸಂಕಷ್ಟಭರಿತರೂ ಮೈಗಳ್ಳರೂ ಭೋಗಾಸಕ್ತರೂ ಕೂಡಿ, ಆ ಅದ್ವೈತವಾದವನ್ನು ವಿಷಯ ಮಾಡಿ ಕೊಂಡು, ಕ್ರೈಸ್ತತ್ವದ ಮುಖದಿಂದ ಬರುವ ಐಹಿಕವಾದ ನಿಜ ಸುಖ ಫಳಿಸಿ ಕೊಳ್ಳುವದಕ್ಕೆ ಬದಲಾಗಿ ಅದ್ವೈತವಾದಾಂತ ಹಿಡಿದು, ಸಮಸ್ತ ಮನುಷ್ಯರಲ್ಲಿ ಯಥೇಚ್ಛಾಸ್ವತಂತ್ರವೂ ಸಮಧನವೂ ಸಮಮಾನವೂ ಸ್ವಪರಸ್ತ್ರೀಗಮನವೂ ಆಗ ಬೇಕೆಂತ, ಪಿಶಾಚಿಗಳಂತೆ ಕೂಗಿ, ಸಖ್ಯಶಾಲಿಗಳೆಂಬ ಅಡ್ಡಹೆಸರು ಇಟ್ಟು ಕೊಂಡರೂ ವ್ಯಾಘ್ರಭಾವದವರಾಗಿದ್ದಾರೆ.

### ಸ್ವತಂತ್ರಸಭೆಗಳು.

ಬುದ್ಧಿಪ್ರಮಾಣಿಕತ್ವ ಬಿಡದಂಥವರು ಬಹುಶಃ ಪ್ರತ್ಯೇಕ ಸಭೆಗಳಾಗದೆ, ದೃಶ್ಯ ರಾಜ್ಯಮತದವರಲ್ಲಿ ಇದ್ದುಳಿದರು. ಆದರೆ ಕ್ರಿ. ಶ. 1840ನೇ ಅಬ್ದ ಪ್ರುಸ್ಸಿಯ ರಾಜ್ಯದ ಸೌವಾರ್ತಿಕಸಭಾಪರಿಪಾಲಕರು ಅವರಿಗೆದುರಿಸಲು, ಮರುವರುಷ ಅವರದೊಂದು ಗುಂಪಿನವರು ರಾಜ್ಯಮತವನ್ನಗಲಿ, ತಾವು ಕೇವಲ ಮೃಗತೃಷ್ಣೆಯ ಅಂದರೆ ಬಿಸಿಲುಕುದುರೆಯ ಭಾವದವರಾಗಿದ್ದರೂ ಜ್ಯೋತಿಮಿತ್ರರೆನ್ನಿಸಿ ಕೊಂಡು, ಸ್ವತಂತ್ರಸಭೆಗಳೆಂಬವುಗಳಾಗಿ ಒಟ್ಟುಗೂಡಿದರು. ಬಳಿಕ ದೊಡ್ಡ ಪ್ರೀದೆರೀಕ ರಾಜನ[4] 3ನೇ ಉತ್ತರಾಧಿಕಾರಿಯಾದ ಅಂದಿನ 4ನೇ ಪ್ರೀದೆರೀಕ ವಿಲ್ಹೆಲ್ಮನೆಂಬವನು, ಅವಿಶ್ವಾಸಿಗಳೆಲ್ಲರೂ ತಾವೇ ಹೊರಗೆ ಹೋಗಿ ಬಿಡುವ ಹೊರ್ತು ಸೌ

---

1) 554ನೇ ಪಾನು. 2) 517ನೇ ಪಾನು. 3) Hegel; Strauss; etc. 4) 625ನೇ ಪಾನು.

ವಾರ್ತಿಕ ಸಭೆಯು ಶುಭಗತಿ ಹೊಂದುವದಿಲ್ಲವೆಂತ, ನಿಶ್ಚಯಿಸಿ ಕೊಂಡು, ಕ್ರಿ. ಶ. 1847ನೇ ವರುಷ ತೊಲೆರಂತ್ಸ್ ಏದಿಕ್ತನ್ನು ಅಂದರೆ ಕ್ಷಮಾಭಾವದ ನಿರ್ಣಯವನ್ನು ಪ್ರಕಟಿಸಿ, ಇದರಿಂದ—ಪ್ರುಸ್ಸಿಯದ ಪ್ರಜೆಯಲ್ಲಿ ಯಾವನೊಬ್ಬನೂ ಪ್ರಜೆಯ ಸ್ವಾತಂತ್ರ್ಯ ಮಾನಗಳೆರಡನ್ನು ಕಳಕೊಳ್ಳದಲೇ ರಾಜ್ಯಮತ ತೊಲಗಿ, ಯಾವದೊಂದೂ ಧರ್ಮದವನಾಗ ಬಹುದೆಂದು, ವಿಧಿಸಿದನು.

## ಗೆರ್ಮಾನ ಕಥೊಲಿಕರು.

ಸ್ವತಂತ್ರಸಭೆಗಳ ಉತ್ಪತ್ತಿಗೆ ಕಾರಣವಾದ ಬುದ್ಧಿಪ್ರಮಾಣಿಕತ್ವವು ಪಪ್ಪಕ ಸಭೆಯನ್ನು ಅಗಲಿದ ಗೆರ್ಮಾನ ಕಥೊಲಿಕರೆಂಬವರ ಸಭೆಗಳ ಉತ್ಪತ್ತಿಗೆ ಸಹ ಕಾರಣವಾಯಿತು. ಹ್ಯಾಗಂದರೆ ಪ್ರುಸ್ಸಿಯದ ತ್ರೀರೆಂಬ ಪಟ್ಣದಲ್ಲಿ ಪಪ್ಪಕ ಮತೋದ್ಯೋಗಿಗಳು ಕ್ರಿಸ್ತನಿಗೆ ಗೊಲ್ಗಥದಲ್ಲಿದ್ದ ಆ ಹೊಲಿಗೆಯಿಲ್ಲದ ಅಂಗಿಯೆಂಬದೊಂದು ಸಂತಾವಶಿಷ್ಟವನ್ನು ತೋರಿಸುತ್ತಾ ಬಂದಿದ್ದರು[1]. ಕಾಲಗತಿಯಲ್ಲಿ ಕ್ರಿ. ಶ. 1844ನೇ ವರುಷ ಅದನ್ನು ಸರ್ವ ಪಪ್ಪಕ ಸಭ್ಯರು ವಂದಿಸಲಿಕ್ಕೋಸ್ಕರ ಹೊಸತಾಗಿ ಇಟ್ಟು, ಪಪ್ಪನು ತ್ರೀರಿಗೆ ಯಾತ್ರೆ ಮಾಡಿ ದಾನ ಕೊಡುವಂಥವರಿಗೆ ಪೂರ್ಣ ಪಾಪಕ್ಷಮೆಯ[2] ಮಾತು ಕೊಟ್ಟು—ಆ ಅಂಗಿಯು ಕರ್ತನಾದ ಯೇಸು ಕ್ರಿಸ್ತನು ಗೈದಷ್ಟು ಮಹಾದ್ಭುತಗಳನ್ನು ಗೈಯುತ್ತದೆ; ಅದರಿಂದ ಕುಬ್ಜರು ನೆಟ್ಟಗಾಗುವರು, ಕುರುಡರು ದೃಷ್ಟಿ ಹೊಂದುವರು, ಕುಂಟರು ನಡೆಯಲಾಪರು, ವಿಶಿಷ್ಟ ರೋಗಿಗಳು ಕ್ಷೇಮ ಪಡೆಯುವರು ಎಂತ, ಹೇಳುವ ಸುದ್ದಿಯನ್ನು ಸಹ ಹಬ್ಬಿಸಿದ ಮೇಲೆ ಸ್ಲೇಸಿಯೆನು ದೇಶದ ಒಬ್ಬ ಯೌವನಸ್ಥ ಪಪ್ಪಕ ಪ್ರೀಸ್ತನು, ಕ್ರಿಸ್ತನು ತನ್ನ ಸಭೆಗೆ ಬಾಧ್ಯತೆಯಾಗಿ ಕೊಟ್ಟುಳಿಸಿದ್ದು ಅವನಂಗಿಯಲ್ಲ ಅವನ ಪರಿಶುದ್ಧ ಆತ್ಮವೇ! ಎಂತ, ಸತ್ಯವಿದ್ದಂತೆಯೇ ಸಾರಿ, ಆ ಅಂಗಿಯಿಂದ ಆಗುವ ಅಪವಿಶ್ವಾಸ ಗೋಷ್ಟಿಗೂ ಮೋಸಕೃತ್ಯಕ್ಕೂ ಬಹಿರಂಗದಲ್ಲೆದುರಿಸುವವನಾದನು. ತದನಂತರ ಅನೇಕ ಜನ ಗೆರ್ಮಾನ ಪಪ್ಪಕರು ಅವನ ಕಡೆ ಹಿಡು ಕೊಂಡು, ಯನ್ಸೆನಿಸ್ತರೆಂಬವರದೊಂದು ಭಾಗದವರು[3] ಮಾಡಿದಂತೆ ಪಪ್ಪನೊಳಗಿನ ಅಧೀನಾವಸ್ಥೆಯನ್ನು ತಳ್ಳಿ ಬಿಟ್ಟರು. ಆರಂಭದಲ್ಲಿ ಅದೆಲ್ಲಾವು ಗೆರ್ಮಾನಿಯದ ಪಪ್ಪಕ ಸಭೆಯು ಪುನಃ ಸ್ಥಾಪಿತವಾಗುವದಕ್ಕೆ ಯೋಗ್ಯ ಕಾರ್ಯವೆಂಬಂತೆ ತೋರಿತು; ಆದರೂ ಗೆರ್ಮಾನ ಕಥೊಲಿಕರೆನ್ನಿಸಿ ಕೊಳ್ಳುವ ಆ ಜನರು ಕಾಲಕ್ರಮೇಣ ಬುದ್ಧಿಪ್ರಮಾಣಿಕತ್ವದಲ್ಲಿ ಶಿಕ್ಕಿ, ದೇವವಾಕ್ಯಪ್ರಮಾಣವ ತೊಲಗಿ, ಅಪೊಸ್ತೊಲಿಕ ವಿಶ್ವಾಸಪ್ರಮಾಣವನ್ನಾದರೂ ಬದಲಿಸಿದ್ದು ಬಹು ವಿಲಂಬವಿಲ್ಲದೆ ಕಂಡು ಬಂತು. ಹೀಗಿರಲಾಗಿ ಅದ

1) 356ನೇ ಪಾನು. 2) 620ನೇ ಪಾನು. 3) 611ನೇ ಪಾನು.

ಕ್ಕಿತ್ತ ಕಡೆ ಸ್ವಲ್ಪ ಮಂದಿ ಮಾತ್ರ ಅವರ ಸಮಾಜಕ್ಕೆ ಕೂಡಿದ್ದಲ್ಲದೆ ಪಪ್ಪಕ ಸಭೆಯಲ್ಲಿ ಅವರ ಮೂಲಕ ನವೀಕರಣವೇನೂ ಉದ್ಭವಿಸಲಿಲ್ಲ.—

ಕ್ರಿ. ಶ. 1848ನೇ ಅಬ್ದ ಆ ಸಖ್ಯಶಾಲಿಗಳೆಂಬವರಿಂದ[1] ಫ್ರಂಚಿನಲ್ಲಿ ಹುಟ್ಟಿದ ಒಂದು ಹೊಸ ರಾಜ್ಯಪರಿವರ್ತನವೆಂಬ ಸಮುದ್ರೋದ್ರವದ ಮಹಾ ತರಂಗಗಳು ಸಮಸ್ತ ಯುರೋಪೀಯ ರಾಜ್ಯಗಳನ್ನೊಡೆಯುವ ವಿಘ್ನವು ದೇವರ ದಯೆಯಿಂದ ಹರಿದು ಹೋಯಿತು.—

ಸೌವಾರ್ತಿಕರೆಂಬ ಹೆಸರಿರುವವರೊಳಗೆ ಸಹ ದೆಯಿಸ್ತರೂ ನಾತೂರಾಲಿಸ್ತರೂ ಅದ್ವೈತವಾದಿಗಳೂ ನಾಸ್ತಿಕರೂ ಹುಟ್ಟ ಬಹುದಾದ ಪರಿ ಏನು? ಎಂತ, ಒಬ್ಬನು ಕೇಳುವದು ಸಹಜ. ಇದಕ್ಕೆ ಉತ್ತರವೇನಂದರೆ—ಸೌವಾರ್ತಿಕ ಮತವು ರಾಜ್ಯಮತವಾಗಿರುವಲ್ಲಿ ಜನ್ಮದ ಮೇಲೆಯೇ ಹೆಚ್ಚು ಜನರು ಸೌವಾರ್ತಿಕರೆನ್ನಿಸಿದರೂ ಅವರೆಲ್ಲರೂ ಸೌವಾರ್ತಿಕ ಭಾವದವರಲ್ಲ; ದೃಶ್ಯವಾದ ರಾಜ್ಯಸಭೆಯಲ್ಲಿ ಅದೃಶ್ಯವಾದ ನಿಜಸಭೆಯು ಅಡಗಿರುವದು[2]; ಇದಕ್ಕೆ ಶೇರಿದವರು ಪರಿಶುದ್ಧಾತ್ಮದ ಮೂಲಕ ಪುನರ್ಜನ್ಮ ಪಟ್ಟು, ಸತ್ಕ್ರಿಯೆಗಳೆಂಬ ಭೂಷಣದಿಂದ ಹೊಳೆಯುವಂಥವರೇ; ಇವರಿಗೆ ಆಯಾ ತರದ ವಿಶ್ವಾಸಭ್ರಂಶವು ತಾಗುವದಿಲ್ಲ; ಇಂಥವರು ಎಂದಿನಂತೆ ಆಯಾ ವಿಶ್ವಾಸಭ್ರಷ್ಟರು ಮೊದಲಾದಂಥವರ ಆತ್ಮರಕ್ಷಣಕ್ಕೋಸ್ಕರ ಗೈದ ಪ್ರಯತ್ನಗಳನ್ನು ಕುರಿತು ಇನ್ನು ಮೇಲೆಯೂ ತಕ್ಕಷ್ಟು ಗೋಚರಿಸುವದು. ಹಿಂದೆ ನೀವು ನಿಜ ಭಾವದ ಪಿಯೆತಿಸ್ತರು ಹೆರ್ನ್ಹೂತಿನವರು ಮೆಥೊದಿಸ್ತರು ಪ್ರಭೃತಿಯಾದ ಸೌವಾರ್ತಿಕರಲ್ಲಿ ಕಂಡಂಥ ಒಳ್ಳೇ ಕ್ರಿಯೆಗಳನ್ನು ಈಚೆ ಸಹ ನಿಜ ಭಾವದ ಸೌವಾರ್ತಿಕರಲ್ಲಿ ಕಾಣುತ್ತಲಿರುವಿರಿ.

## 75. ದೇವವಾಗ್ಗ್ರಂಥವಿಸ್ತಾರಕಸಂಘಗಳು.

ಹಿಂದೆ ನಿಮಗೆ ಗೊತ್ತಾದಂತೆ[3] ಫ್ರಂಕೆಯೆಂಬ ಯಶಸ್ಸುಳ್ಳ ಬೋಧಕನು ತನ್ನ ಅನಾಥಗೃಹಕ್ಕೆ ದೇವವಾಗ್ಗ್ರಂಥಗಳ ವಿಸ್ತರಣದ ಉದ್ದಿಶ್ಯವಾದ್ದೊಂದು ಮುದ್ರಾಶಾಲೆಯನ್ನು ಕೂಡಿಸಿದನು. ಇಂಥಾ ಮಂಗಳಕಾರ್ಯದ ಅಪೇಕ್ಷೆಯಿಂದ 19ನೇ ಕ್ರಿಸ್ತಶತಮಾನದಾರಂಭಕ್ಕೆ ಇಂಗ್ಲಂದಿನಲ್ಲಿ ದೇವವಾಗ್ಗ್ರಂಥವಿಸ್ತಾರಕಸಂಘಗಳ ಮೊದಲಾಯಿತು. ಎಂತೆಂದರೆ, ಒಂದು ಸ್ವಂತ ಭಾಷೆಯುಳ್ಳ ವೇಲ್ಜೆಂಬ[4] ಇಂಗ್ಲಿಷ ಶೀಮೆಯಲ್ಲಿ 18ನೇ ಕ್ರಿಸ್ತಶತಮಾನದಂತಕ್ಕೆ ದೇವವಾಕ್ಪ್ರತಿಗಳು ಬಹು ಕಡಿಮೆ ಬಿದ್ದಿರಲು, ಅಲ್ಲಿಯ ಸೌವಾರ್ತಿಕ ಸಭೋದ್ಯೋಗಿಗಳು ಕ್ರಿ. ಶ. 1698ನೇ ಅಬ್ದ ಲೊಂ

1) 627ನೇ ಪಾನು. 2) 1ನೇ ಪಾನು. 3) 568ನೇ ಪಾನು. 4) 303ನೇ ಪಾನು.

ದನಿನಲ್ಲಿ ನಿರ್ಮಿತವಾಗಿದ್ದ ಕ್ರೈಸ್ತಜ್ಞಾನಾಭಿವರ್ಧಕಸಮಾಜವೆಂಬ ಸಂಘದವರ ಬಳಿಯಲ್ಲಿ, ವೇಲ್ಜಿನ ಭಾಷೆಯ ಪರಿಶುದ್ಧ ಬರಹಗಳನ್ನು ಛಾಪಿಸಲಿಕ್ಕೆ ಕೊಡ ಬೇಕೆಂದು, ಬೇಡಿ ಕೊಂಡರು. ಅದು ಹಾಗೆಯೇ ಆಯಿತು. ಆದರೆ ಹತ್ತು ಸಾವಿರ ಪ್ರತಿಗಳಿದ್ದ ಆ ಮುದ್ರಾವರ್ತನದ ಗ್ರಂಥಗಳು ಸ್ವಲ್ಪ ಕಾಲದೊಳಗೆ ವೆಚ್ಚವಾದ ತರುವಾಯ ದೇವವಾಗ್ಗ್ರಂಥಗಳು ಇನ್ನೂ ಸಾಲಲಿಲ್ಲ. ಅದು ಕಾರಣ ಆ ಶೀಮೆಯ ಹಲವರು ಆಢ್ಯ ಜನರು ಸರ್ವಸಾಧಾರಣವಾದ್ದೊಂದು ಹಣಸಂಗ್ರಹದ ಮೇಲೆ ಒಂದು ಹೊಸ ಆವರ್ತನ ಸಿದ್ಧಿಸಲೂ ವೇಲ್ಜಿಗಾಗಿ ಒಂದು ದೇವವಾಗ್ಗ್ರಂಥವಿಸ್ತಾರಕಸಂಘ ನಿರ್ಮಿಸಲೂ ಆಲೋಚಿಸುವವರಾದರು. ಬಳಿಕ ಕ್ರಿ. ಶ. 1802ನೇ ಅಬ್ದ ಲೊಂದನಿನಲ್ಲಿ ನೆರೆದ್ದೊಂದು ಸಮಾಗಮದಲ್ಲಿ ಚಾರ್ಲ್ಸನೆಂಬವನೊಬ್ಬ ಎಪಿಸ್ಕೊಪಾಲ ಸಭೆಯ ಉದ್ಯೋಗಿಯ ಪ್ರೇರಣೆಯಿಂದ ಆ ವಿಷಯದ ಮಾತು ನಡೆಯುವಲ್ಲಿ ಒಬ್ಬ ಬಪ್ತಿಸ್ತ ಪ್ರಸಂಗಿಕನಾದ ಯೂಜೆಂಬವನು—ಒಂದು ದೇವವಾಗ್ಗ್ರಂಥವಿಸ್ತಾರಕಸಂಘವು ವೇಲ್ಜಿಗೋಸ್ಕರ ಮಾತ್ರವೇ ಯಾಕೆ? ಸಮಸ್ತ ಇಂಗ್ಲಿಷ ರಾಜ್ಯಕ್ಕೋಸ್ಕರ ಯಾತಕ್ಕಾಗ ಬಾರದು? ಸಮಸ್ತ ಲೋಕಕ್ಕೋಸ್ಕರವಾದರೂ ಯಾತಕ್ಕಾಗ ಬಾರದು? ದೇವವಾಗ್ಗ್ರಂಥಗಳು ಸರ್ವತ್ರವೂ ತುಟ್ಟಿಯಲ್ಲವೋ? ಎಂದು, ಕೇಳಿ, ಹಂಗಿಸಿದನು. ತತ್‌ಕ್ಷಣವೇ ನೆರೆದವರೆಲ್ಲರೂ ಅತಿ ಕುತೂಹಲ ಪಟ್ಟು, ಅವನು ಉಚ್ಚರಿಸಿದ ಆಲೋಚನೆಯನ್ನು ತಮ್ಮದು ಮಾಡಿ ಕೊಂಡು, ಅದನ್ನು ಶೀಘ್ರವಾಗಿ ನಡಿಸಲಿಕ್ಕೆ ನೋಡಿ, ಕ್ರಿ. ಶ. 1804ನೇ ಅಬ್ದದ ಮಾರ್ಚ್ ತಿಂಗಳಿನ 8ನೇ ದಿನದಲ್ಲಿ ಸಮಾಗಮ ಕೂಡಿ, ಬ್ರಿತಿಷ ಮತ್ತು ಪರದೇಶಿಕ ದೇವವಾಗ್ಗ್ರಂಥವಿಸ್ತಾರಕಸಂಘವೆಂಬದನ್ನು ನಿರ್ಮಿಸಿದರು. ಆ ಸಮಾಗಮದಲ್ಲಿದ್ದ ಎಪಿಸ್ಕೊಪಾಲರು ಪ್ಯೂರಿತನರು ಮೆಥೊದಿಸ್ತರು ಬಪ್ತಿಸ್ತರು ಕ್ವೇಕೆರರು ಮೊದಲಾದ ಸೌವಾರ್ತಿಕ ಶಾಖೆಯವರೆಲ್ಲರೂ ವಿಶ್ವಾಸದಲ್ಲಿ ಒಂದೇ ಮನಸ್ಸಾಗಿದ್ದು, ದೇವವಾಗ್ಗ್ರಂಥಗಳನ್ನು ಭೂಮಿಯ ಮೇಲೆ ವಿಸ್ತರಿಸ ಬೇಕೆಂಬದೊಂದೇ ಗೊತ್ತು ಮಾತ್ರವುಳ್ಳವರಾಗಿ, ಯಾವದೊಂದೂ ಕ್ರೈಸ್ತ ಶಾಖೆಯವರಿಗೆ ಆತಂಕವಾಗದಂತೆ ಪರಿಶುದ್ಧ ಬರಹವನ್ನು ಏನೂ ಟೀಕೆಯಿಲ್ಲದೆ ಹಾಗೆಯೇ ಛಾಪಿಸ ಬೇಕೆಂತ, ನಿಶ್ಚಯಿಸಿ—ಇಂಗ್ಲಿಷ ದೇಶದಲ್ಲಿ ಮಾತ್ರವಲ್ಲ ಪರದೇಶದಲ್ಲಿಯೂ, ಕ್ರೈಸ್ತರಲ್ಲಿ ಮಾತ್ರವಲ್ಲ ಯೆಹೂದ್ಯರು ಮೊಹಮ್ಮದಿಯರು ವಿಗ್ರಹಾರಾಧಕರು ಎಂಬ ಜನರಲ್ಲಿಯೂ ಅದನ್ನು ಹಬ್ಬಿಸ ಬೇಕು ಎಂತ, ವ್ಯವಸ್ಥೆ ಮಾಡಿ, ಎಪಿಸ್ಕೊಪಾಲಮತಜನಾಗಿ ನಮ್ಮ ಈ ಹಿಂದು ದೇಶದಲ್ಲಿ ಸರ್ವಾಧಿಪತಿಯಾಗಿದ್ದ ತೆನ್ಮೊಥ್ ಪ್ರಭುವನ್ನು, ಸಮಾಜದ ಅಗ್ರಸ್ಥನೆಂತ, ಆರಿಸಿ, ಆ ಭಕ್ತಿಕಾರ್ಯದಲ್ಲಿ ಸಮಾಜದವರೆಲ್ಲರಿಗೂ ಇರುವ ಐಕ್ಯವನ್ನು ಬಹಿರಂಗದಲ್ಲಿ ಸಹ ತೋರಿಸುವದಕ್ಕೋಸ್ಕರ ಎಪಿಸ್ಕೊಪಾಲ ಪ್ಯೂರಿತನ ಪ್ರಭೃತಿಯಾದ

ಶಾಖೆಗಳ ಸಭೋದ್ಯೋಗಿಗಳನ್ನೂ ಸಾಧಾರಣ ಸಭ್ಯರನ್ನೂ, ಮುಖ್ಯಸ್ಥರೆಂತಲೂ ಪಾರುಪತ್ಯಗಾರರೆಂತಲೂ, ತೆಗೆದಿಟ್ಟು, ಸಮಸ್ತ ಪ್ರಜೆಯ ಸಹಾಯ ಪಡೆಯುವಂತೆ ಸರ್ವ ರಾಜ್ಯದ ಮೇಲೆ ಒಂದು ಪ್ರಕಟನಪತ್ರ ಕಳುಹಿಸಿದರು. ಆ ಮೇಲೆ ಹೆಚ್ಚು ಮಂದಿ ಸಭೋದ್ಯೋಗಿಗಳು ಆಸಕ್ತಿಯಿಂದ ಆ ಪರಿಶುದ್ಧ ಕಾರ್ಯವನ್ನು ಕೈಗೊಂಡು, ನಡಿಸಿ, ಎಲ್ಲಿಯೂ ಒಂತಿಗೆ ಎತ್ತುತ್ತಿರಲು, ಮೊದಲಿನ ವರ್ಷದ ಜಮೆಯು ಸುಮಾರು 60,000 ರೂಪಾಯಿಯಾಯಿತು; ಇಷ್ಟರಲ್ಲಿ ವೇಲ್ಸು ಶೀಮೆಯವರೊಬ್ಬರೇ 3ನೇ ಪಾಲನ್ನು ಕೊಟ್ಟಿದ್ದರು. ಅಲ್ಲಿಯವರ ಮನಸ್ಸು ಪೂರ್ಣವಾಗಿ ಆ ಕಾರ್ಯದಲ್ಲಿ ಶೇರಿತ್ತು; ಹೀಗಿರಲಾಗಿ ಅವರ ಭಾಷೆಯ ಪರಿಶುದ್ಧ ಬರಹದ ಹೊಸ ಮುದ್ರಾವರ್ತನವು ತೀರಿದಾಗ ಅದರ ಪ್ರತಿಗಳನ್ನು ಒಂದು ಬಂಡಿಯಲ್ಲಿ ಹೇರಿಸಿಕೊಂಡು ಬರುವಲ್ಲಿಗೆ ಒಕ್ಕಲಿಗರು ಸಮೂಹ ಸಮೂಹವಾಗಿ ಎದುರು ಗೊಂಡು, ಆ ಬಂಡಿಯನ್ನು ತಾವೇ ಎಳದೊಯಿದು, ಪಟ್ಟಣದೊಳ ತಂದರು. ಬಳಿಕ ಆ ಪ್ರತಿಗಳನ್ನು ಹಂಚೋಣವಾದ ಮೇಲೆ ಆ ಜನರು ಅವನ್ನು ಹೊಲ ಕಾಡುಗಳಿಗೆ ಸಹ ತೆಕ್ಕೊಂಡು ಹೋಗಿ, ಓದುತ್ತಾ, ಕೆಲಸವಿಲ್ಲದ ಹೊತ್ತನ್ನೆಲ್ಲಾ, ಆಗಿಂದಾಗ ರಾತ್ರಿಯನ್ನೂ, ಅವುಗಳ ಪಾರಾಯಣಕ್ಕೆ ತಾಗಿಸುತ್ತಾ ಇದ್ದರು. ಆ ಪ್ರಸಿದ್ಧ ದೇವವಾಗ್ಗ್ರಂಥವಿಸ್ತಾರಕಸಂಘವು ಸ್ಥಾಪಿತವಾದ ಆರಂಭದ ವರುಷದಲ್ಲಿ ವಿಗ್ರಹಾರಾಧಕರನ್ನು ಕುರಿತ ಅದರ ವೃತ್ತಿಯು ಸಹ ತೊಡಗಲಿಕ್ಕೆ ಸಂದರ್ಭವಾಯಿತು; ಹ್ಯಾಗಂದರೆ ಅಂದೇ ಉತ್ತರ ಅಮೆರಿಕದ ಇಂದಿಯಾನರಲ್ಲೊಂದು ಕುಲದ[1] ನಾಯಕನು ಲೊಂದನಿನಲ್ಲಿದ್ದು, ಯೋಹಾನನ ಸುವಾರ್ತೆಯನ್ನು ಸ್ವಕುಲದ ಭಾಷಾಂತರಗೈಯಲು, ಅದನ್ನು ಮುದ್ರಿಸಿ, ಅವನ ದೇಶಕ್ಕೆ ಕಳುಹಿಸಿದರು; ಆ ಇಂದಿಯಾನರಿಗೆ ಅದರಿಂದ ಮಹಾ ಸಂತೋಷವಾಯಿತು. ಆ ಸಂಘದವರು, ಭೂಮಿಯಲ್ಲಿ ದೇವವಾಕ್ಯದ ಎಷ್ಟು ಪ್ರತಿಗಳು ಇದ್ದಾವೆಂತ, ಒಮ್ಮೆ ಪರಿಶೋಧಿಸುವಾಗ, ಅವರು ಎಣಿಸಿದಂತೆ ಸುಮಾರು 6 ಕೋಟಿ ಜನ ಸೌವಾರ್ತಿಕರಿರುವ 20 ಕೋಟಿ ಮಂದಿ ಕ್ರೈಸ್ತರೆನ್ನಿಸುವವರಿಗೆ 50 ಲಕ್ಷ ದೇವವಾಕ್ಯಪ್ರತಿಗಳಾದರೂ ಇಲ್ಲವೆಂತ, ಕಂಡು ಬಂತು. ಹಾಗಾದರೆ ಆ ಸಂಘವು ಉತ್ಪನ್ನವಾದದ್ದು ಎಷ್ಟೋ ತಕ್ಕದ್ದು!

ಲೊಂದನಿನ ಆ ದೇವವಾಗ್ಗ್ರಂಥವಿಸ್ತಾರಕಸಂಘವು ಬಲವುಳ್ಳ ಬೀಜದಂತಾಯಿತು; ಹ್ಯಾಗಂದರೆ ತಡವಿಲ್ಲದೆ ಇಂಗ್ಲಂದಿನಲ್ಲಿಯೂ ಸ್ಕೋತ್ಲಂದಿನಲ್ಲಿಯೂ ಐರ್ಲಂದಿನಲ್ಲಿಯೂ ಹಲವು ಸಹಾಯಸಂಘಗಳು ಹುಟ್ಟಿ, ಆ ಮಾತೃಸಂಘಕ್ಕೆ ಕೂಡಿದವು; ಅದು ಹೊರ್ತಾಗಿ, ಪ್ರಜೆಗೆ ದೇವವಾಕ್ಯವು ಎಲ್ಲಿ ಕಡಿಮೆ? ಎಂತ, ವಿಚಾರಿಸುವದಕ್ಕೂ ಬಡವರಿಗೆ ಅದನ್ನು ಕೊಡುವದು ವಿನಹ ಅವರಲ್ಲಿ ಅದರ ಮೇಲೆ

1) 579, 580ನೇ ಪಾನು.

ಒಲುಮೆಯನ್ನು ಹುಟ್ಟಿಸುವದಕ್ಕೂ ಅನೇಕ ಸಣ್ಣ ದೇವವಾಕ್ಪ್ರಿಯಸಮಾಜಗಳು ಆದವು. ಈ ಪ್ರಕಾರ ಆ ಕಾರ್ಯವು ಚನ್ನಾಗಿ ಸಾಗುತ್ತಾ ಬರಲು, ಕ್ರಿ. ಶ. 1815ನೇ ದಾದ ಆ ವಿಶೇಷ ಲಕ್ಷಣವುಳ್ಳ ವರುಷ[1] ಆ ಇಂಗ್ಲಿಷ ಸಮಾಜಗಳಿಗೆ ಮಾತ್ರವೂ ಸುಮಾರು 10 ಲಕ್ಷ ರೂಪಾಯಿೞ ಜಮೆ ಕೂಡಿತು. ನಪೊಲೆಯೋನನ ಸಂಗಡ ನಡಿಯುತ್ತಿದ್ದು ಅಂದು ತೀರಿದ ಭಯಂಕರ ಯುದ್ಧದಿಂದ ಯುರೋಪದ ಸಕಲ ಪ್ರಜೆಗೆ ಆಗ ಬಹಳ ನಷ್ಟ ಒದಗಿದ್ದರೂ ಅದರ ದೇವವಾಕ್ಪ್ರೀತಿವರಗಳಲ್ಲಿ ಆ ನಷ್ಟದ ಚಿನ್ಹೆಯು ಕಿಂಚಿತ್ತೂ ಮೂಡಿದ್ದಿಲ್ಲ.

ಅಷ್ಟರಲ್ಲಿ ಆ ಬ್ರಿತಿಷ ಮಾತೃಸಂಘದವರ ಪ್ರಯತ್ನದಿಂದ ಯುರೋಪದ ನಾನಾ ದಿಕ್ಕಿನ ಗೆರ್ಮಾನಿಯ ನೀದೆರ್ಲಂದು ದೇನೆಮರ್ಕು ಸ್ವೇದೆನು ರುಸ್ಸಿಯ ಮೊದಲಾದ ದೇಶಗಳಲ್ಲಿಯೂ ದೇವವಾಗ್ಗ್ರಂಥವಿಸ್ತಾರಕಸಂಘಗಳು ಉತ್ಪನ್ನವಾಗಿದ್ದವು. ಲೊಂದನಿನಲ್ಲಿ ಒಂದು ಸೌವಾರ್ತಿಕವಾದ ಗೆರ್ಮಾನ ಸಭೆಯ ಪ್ರಸಂಗಿಕನಾಗಿರುವ ಸ್ತೈನ್ಕೊಪ್ಫನೆಂಬವನು ಗೆರ್ಮಾನಿಯದಲ್ಲಿ ದೇವವಾಕ್ಕಾರ್ಯವನ್ನು ಬೆಳಿಸುತ್ತಿದ್ದವರಲ್ಲಿ ಮುಖ್ಯನೊಬ್ಬನು. ಅಲ್ಲಿ ಅಂದು ಆದ ದೇವವಾಗ್ಗ್ರಂಥವಿಸ್ತಾರಕ ಸಂಘಗಳಲ್ಲಿ ಬಾಸೆಲು ಪಟ್ಣದ ಮತ್ತು ನುಯಿರ್ನ್ಬೆರ್ಗು ಪಟ್ಣದ[2] ಅವುಗಳು ಮೊದಲಿನವು; ಅವು ಕ್ರಿ. ಶ. ಆ 1804ನೇ ವರುಷಕ್ಕಾದರೂ ನಿರ್ಮಿತವಾದವು. ರುಸ್ಸಿಯವನ್ನು[3] ಕುರಿತು ಇನ್ನೊಂದು ಮಾತು ಹೇಳೋಣ. ಕ್ರಿ. ಶ. 1812ನೇ ವರುಷ ಆ ದರ್ಪಗ್ರಸ್ತನಾದಂಥ ನಪೊಲೆಯೋನನು ಆ ದೇಶವನ್ನು ಸಹ ಸ್ವತಂತ್ರಿಸಿ ಕೊಳ್ಳುವ ಉದ್ದಿಶ್ಯ ಮಹಾ ಸೇನೆ ಸಹಿತವಾಗಿ ಅದರೊಳ ಹೊಕ್ಕು, ಜಯಶಾಲಿಯಾಗಿ ಮುಂದರಿಸುತ್ತಿರಲು, ದೇವರು ರುಸ್ಸರಿಗೆ ಮಿಗೆ ಕಠಿಣವಾದ್ದೊಂದು ಹಿಮಕಾಲದಿಂದ ವಿಶೇಷ ರೀತಿ ಒತ್ತಾಸೆ ಮಾಡಿ, ಅವನನ್ನು ಹಿಂದಕ್ಕಟ್ಟಿ, ಅವನ ಸೇನೆಯನ್ನು ನಿರ್ಮೂಲಿಸಿದಾಗ ರುಸ್ಸಿಯದ ಆಗಿನ ಕೈಸರನಾದ 1ನೇ ಅಲೆಕ್ಸಂದರನು ತನ್ನ ಪ್ರಜೆಯೊಡನೆ ಕೃತಜ್ಞನಾಗಿ, ಯೋಗ್ಯವಾದಂತೆ ದೇವರಿಗೆ ಸ್ತೋತ್ರ ಗೈದು, ತನ್ನ ಸಕಲ ಪ್ರಜೆಗೆ ದೇವವಾಗ್ಗ್ರಂಥವನ್ನು ಕೊಡ ಬೇಕೆಂಬದರಲ್ಲಿ ಧಾವತಿ ಪಡುವವನಾದನು; ಅದು ವಿನಹ ಅವನ ಪ್ರಜೆಯವರೆಲ್ಲರೂ ಅದನ್ನು ತೆಕ್ಕೊಳ್ಳುವದಕ್ಕೂ ವಿಸ್ತರಿಸುವದಕ್ಕೂ ಮಿಗು ಉತ್ಸಾಹ ಗೊಂಡರು. ಲುಥರಿಕರು ಚ್ವಿಂಗ್ಲಿಕರು ಎಂಬೆರಡು ಸೌವಾರ್ತಿಕ ಶಾಖೆಯವರ ಮತ್ತು ಗ್ರೇಕ ರಾಜ್ಯಸಭ್ಯರ ಮತ್ತು ಅರ್ಮಿನಿ ಸಭ್ಯರ[4] ಮತ್ತು ಪಪ್ಪಕ ಸಭ್ಯರ ಏಕೀಭಾವದ ಕುತೂಹಲದಿಂದ ಪೆತೆರ್ಸ್ಬುರ್ಗು ರಾಜಧಾನಿಯಲ್ಲಿ ಒಂದು ದೇವವಾಗ್ಗ್ರಂಥವಿಸ್ತಾರಕಸಂಘವು ಹುಟ್ಟಿತು; ಅದು

1) 626ನೇ ಪಾನು. 2) 551; 428ನೇ ಪಾನು. 3) 607ನೇ ಪಾನು. 4) 254ನೇ ಪಾನು.

ಹೊರ್ತಾಗಿ 300 ಸಹಾಯಸಂಘಗಗಳು ಉದ್ಭವಿಸಿದವು; ಬಳಿಕ ದೇವವಾಕ್ಯವ ಅಲ್ಲಿ 41 ವಿಧದ ಭಾಷೆಗಳಿಂದ ಎಡೆ ಬಿಡದೆ ಅಂತರೀಕರಿಸಿ, ಛಾಪಿಸಿ, ಪಸರಿಸಲಾಯಿತು; ಸಕಲ ಸ್ಥಳಗಳ ಚಿಕ್ಕ ದೊಡ್ಡ ಶಾಲೆಗಳಲ್ಲಿಯೂ ರಾಜ್ಯಗಾವಲಿಗರ ಠಾಣ್ಯಗಳಲ್ಲಿಯೂ ಶೆರೆಮನೆಗಳಲ್ಲಿಯೂ ಔಷಧದಶಾಲೆಗಳಲ್ಲಿಯೂ ಹಡಗುಗಳಲ್ಲಿಯೂ ಕಾಡುಗಳಲ್ಲಿಯೂ ಅದು ತಡವಿಲ್ಲದೆ ಶೇರುತ್ತಲಿತ್ತು. ಗೇದ್ರೊವಿತ್ಸನೆಂಬ ಒಬ್ಬ ಪಪ್ಪಕ ಅಧ್ಯಕ್ಷನು ಒಮ್ಮೆ ಆ ದಿವ್ಯ ಕಾರ್ಯಕ್ಕೆ 32,000 ರೂಪಾಯಿಗಳನ್ನು ಕೊಟ್ಟನು; ಗ್ರೀಕ ಮತದವನೊಬ್ಬ ವ್ಯಾಪಾರಿಯು ಸ್ವಭಾಷೆಯ 3000 ದೇವವಾಕ್ಯಪ್ರತಿಗಳಿಗೆ ಬೇಕಾದ ಛಾಪೆಯ ವೆಚ್ಚವನ್ನಿತ್ತನು; ಒಬ್ಬ ರುಸ್ಸ ಆಢ್ಯನು ಪೆತೆರ್ಸ್ಬುರ್ಗಿನ ಸಂಘಕ್ಕೆ ಒಂದು ಪೂರ್ಣ ಗ್ರಾಮವನ್ನಾದರೂ ಒಪ್ಪಿಸಲಿಕ್ಕೆ ಹಿಂದೆಗೆಯಲಿಲ್ಲ; ಕೈಸರನೂ ರಾಜಕ ಮತಕ ಪ್ರಭುಗಳೂ ಸೈನಿಕರೂ ಒಕ್ಕಲಿಗರೂ ಕೂಲಿಗಾರರೂ ಎಲ್ಲರು ಕೂಡಿ ದಾನಗಳನ್ನು ಕಳುಹಿಸುತ್ತಿದ್ದರು; (ತುರ್ಕರಾಳುವ) ಮಕೆದೊನಿಯ ಶೀಮೆಯವರು ಪೆತೆರ್ಸ್ಬುರ್ಗಿಗೆ ಪ್ರೇಷಿತರನ್ನಟ್ಟಿ—ಮಕೆದೊನಿಯಕ್ಕೆ ಬಂದು, ನಮಗೂ ಸಹಾಯ ಮಾಡಿರೆಂತ, ಬೇಡಿ ಕೊಂಡರು[1]. ಆದಾಗ್ಯೂ ಇಂಥಾ ಸುಗತಿಯು ಬಹಳ ಕಾಲ ಉಳಿಯಲಿಲ್ಲ; ಯಾಕಂದರೆ ಆ 7ನೇ ಪಿಯ ಪಪ್ಪನು[2] ರುಸ್ಸರಿಗೆ ವಶವಾಗಿರುವ ಪೋಲಂದಿನ ತನ್ನ ಕೆಳಗಿನ ಪ್ರಧಾನಾಧ್ಯಕ್ಷನಿಗೆ ಒಂದು ಬುಲ್ಲದಿಂದ ತನ್ನ ಮುನಿಸು ತೋರಿಸಿದ್ದಲ್ಲದೆ ಗ್ರೇಕ ಸಭೋದ್ಯೋಗಿಗಳು ಸಹ ಅಡಿಗಡಿಗೆ ಆ ಸೌವಾರ್ತಿಕ ಕಾರ್ಯಕ್ಕೆ ಎದುರ್ಮಲೆಯುವವರಾದರು. ಹೀಗಿರಲಾಗಿ ಕ್ರಿ. ಶ. 1825ನೇ ವರುಷ 1ನೇ ಅಲೆಕ್ಸಂದರನ ಉತ್ತರೋದ್ಯೋಗಿಯಾದ ನೀಕೊಲಾವನು ಮರುವರುಷ ರುಸ್ಸಿಯದ ದೇವವಾಗ್ಗ್ರಂಥಪ್ರಸಾರಕಸಂಘದ ವೃತ್ತಿ ನಿಲ್ಲಿಸಿ, ಅದು ಗ್ರೇಕ ಸಭ್ಯರಲ್ಲದವರಾದ ಕ್ರೈಸ್ತರಿಗೆ ಮಾತ್ರ ಇನ್ನು ಮುಂದೆ ದೇವವಾಕ್ಯವನ್ನು ಕೊಡ ಬಹುದೆಂದು, ಆಜ್ಞಾಪಿಸಿದನು[3]. ತರುವಾಯ ದೇವವಾಗ್ವಿಸ್ತರಣಕಾರ್ಯವು ಆ ರಾಜ್ಯದಲ್ಲಿ 34 ವರುಷ ಶಿಥಿಲಾವಸ್ಥೆಯಲ್ಲಿರುತ್ತಿದ್ದ ಮೇಲೆ 2ನೇ ಅಲೆಕ್ಸಂದರ ಕೈಸರನು ತನ್ನ ಸಕಲ ಪ್ರಜೆಗೆ ಪರಿಶುದ್ಧ ಬರಹದ ಮೇಲೆ ಇನ್ನೂ ಇದ್ದ ಅಪೇಕ್ಷೆ ಕಂಡು, ಕ್ರಿ. ಶ. 1860ನೇ ಅಬ್ದ ತನ್ನ ಪೂರ್ವೋದ್ಯೋಗಿಯ ಆಜ್ಞೆಯನ್ನು ತಿರಿಗಿ ತಳ್ಳಿದನು.

ದೇವವಾಕ್ಯವೆಂಬ ಜೀವದ ರೊಟ್ಟಿಯನ್ನು ಕ್ರಿಸ್ತನಾಥನ ಸಮಸ್ತ ಸಭ್ಯರಿಗೆ ಕೊಡ ಬೇಕೆಂಬ ಪ್ರೇಮವೃತ್ತಿಯು ಅತಿರೇಕ ಶೋಭೆಯಿಂದ ಆರಂಭಿಸಿರಲು, ಹಿಂದೆ ರುಸ್ಸಿಯದ ವಿಷಯದಲ್ಲಿ ಸೂಚಿಸಿದಂತೆ, ಅನೇಕ ಮಂದಿ ಪಪ್ಪಕ ಸಭೋದ್ಯೋಗಿಗಳು ಸಹ ಅದಕ್ಕೆ ಕೈ ಹಚ್ಚಿದರು; ಅಂದು ಫ್ರಂಚರ ಶೆರೆಯಲ್ಲಿರುವ ಆ 7ನೇ ಪಿಯ ಪಪ್ಪನಾದರೂ ತನ್ನ ಪೂರ್ವಿಕರ ದುರ್ಭಾವವನ್ನು[4] ಅನಕ ಕಳೆದು, ಗುಣ

1) ಅಪೊ. ಕ್ರಿ. 16, 9. 2) 617ನೇ ಪಾನು. 3) 608ನೇ ಪಾನು. 4) 611, 617ನೇ ಪಾನು.

ಕರ ಬೋಧನೆಯನ್ನೂ ಪರಿಶುದ್ಧ ಚರ್ಯೆಯನ್ನೂ ಮೊಗೆದು ಕೊಳ್ಳುವದಕ್ಕೆ ಎಲ್ಲರೂ ಪ್ರವೇಶಿಸ ಬೇಕಾದ ಮಹದೈಶ್ವರ್ಯದೊಡನೆ ಹರಿಯುವಂಥ ಶೆಲೆಯು ದೇವವಾಕ್ಯವೇ! ಎಂತ, ಹೇಳಿ, ಸಮ್ಮತಿ ಪಟ್ಟನು. ಅಂದಿನ ವರೆಗೆ ಪಪ್ಪಕ ಸಭೋದ್ಯೋಗಿಗಳು ದೇವವಾಕ್ಯದ ವುಲ್ಗಾತವೆಂಬ[1] ಲತೀನ ಭಾಷಾಂತರ ಬಳಿಸುತ್ತಾ ಬಂದಿದ್ದರು. ಇದು ಸಭ್ಯರಿಗೆ ತಿಳಿಯದ ಕಾರಣ ತನಗೊಪ್ಪುವಂಥ ಗೆರ್ಮಾನ ಭಾಷಾಂತರವಾದ್ದೊಂದನ್ನು ಇವರಿಗೆ ಅಘ್ಘವಾಗಿ ದೊರಕಿಸಿ ಕೊಡ ಬೇಕೆಂಬ ಅಭಿಲಾಷೆಯು ವಿತ್ಮನನೆಂಬ ಒಬ್ಬ ಪಪ್ಪಕ ಮತೋದ್ಯೋಗಿಯಲ್ಲಿ ಅಪರಿಮಿತವಾಯಿತು. ಅವನು ಬೈಯೆರ್ನ್ ದೇಶದ[2] ರೇಗೆನ್ಸ್ಬುರ್ಗ ಪಟ್ಣದಲ್ಲಿರುವ ಪ್ರೀಸ್ತವಿದ್ಯಾಶಾಲೆಯ ಮುಖ್ಯಸ್ಥನು. ಕ್ರಿ. ಶ. 1804ನೇ ಅಬ್ದ ಇಂಗ್ಲಂದಿನಲ್ಲಿ ಆ ದೇವವಾಗ್ಗ್ರಂಥವಿಸ್ತಾರಕಸಂಘವು ನಿರ್ಮಿತವಾಗಿ, ಸುಮಾರು ಒಂದು ವರುಷ ಹೋದಾಗ ಅವನು, ಗೆರ್ಮಾನವಾದ ದೇವವಾಗ್ಭಾಷಾಂತರವು ಸಕಲರಿಗೂ ಅತ್ಯವಶ್ಯವಾಯಿತೆಂತ, ನಾನಾ ವಿಧ ವರ್ಣಿಸುವದೊಂದು ಪತ್ರ ಲೇಖಿಸಿ, ಯೇಸುವಿನ ಬೋಧನೆಯ ಸ್ನೇಹಿತರೆಂಬಂಥವರ ಬಳಿಗೆ ಕಳುಹಿಸಿ, ಅವರ ಧನಸಹಾಯ ಹೊಂದಿ, ಒಂದು ದೇವವಾಗ್ಗ್ರಂಥವಿಸ್ತಾರಕಸಂಘ ಸ್ಥಾಪಿಸಿ, ಪಪ್ಪಕ ಮತಕ್ಕೆ ಉಚಿತವಾದ ಟಿಪ್ಪಣೀ ಮಾತುಗಳೊಡನೆ ಹೊಸ ಒಡಂಬಡಿಕೆಯ ಒಂದು ಗೆರ್ಮಾನ ಭಾಷಾಂತರ ಛಾಪಿಸಿ, ಒಂದೊಂದು ಪ್ರತಿಗೆ 3 ಅಣೆ ಎಂಬೀ ಪ್ರಕಾರ ಮಾರಲೆಸಗಿ, 10 ವರುಷಗಳೊಳಗೆ 60,000ಕ್ಕಿಂತ ಹೆಚ್ಚು ಪ್ರತಿಗಳನ್ನು ವಿಕ್ರಯಿಸಿದನು; ಅನೇಕವನ್ನು ಇನಾಮಾಗಿ ಸಹ ಕೊಟ್ಟನು. ಈ ಒಳ್ಳೇ ಕೆಲಸದಲ್ಲಿ ಹೇರಳ ಜನ ಸಭೋದ್ಯೋಗಿಗಳು ಅವನ ಸಹಾಯಕರಾದರು; ಇಂಥವರಲ್ಲಿ ಪ್ರಖ್ಯಾತಿ ಗೊಂಡವನು ಗೊಸ್ನೆರನು; ಕಾಲಗತಿಯಿಂದ ಸೌವಾರ್ತಿಕನಾಗಿ ಪ್ರುಸ್ಸಿಯದ ಬೆರ್ಲೀನು ಪಟ್ಣದಲ್ಲಿ ಪ್ರಸಂಗಿಕೋದ್ಯೋಗಿಯಾದವನು ಇವನೇ. ಅಷ್ಟರೊಳಗೆ ಹೆಸ್ಸೆನು ದೇಶದ ಮರ್ಬುರ್ಗ ಎಂಬಲ್ಲಿ[3] ಲೆಯಂದೆರ್ ವನ್ ಎಸ್ಸನೆಂಬ ಪಪ್ಪಕ ಪ್ರಸಂಗೋದ್ಯೋಗಿಯೂ ಮಹಾ ಪಂಡಿತನೂ ಆದವನಿದ್ದು, ದೇವವಾಕ್ಪ್ರಿಯನಾಗಿ, ಪಪ್ಪನು ಲುಥರನ ದೇವವಾಗ್ಭಾಷಾಂತರವನ್ನೋದ ಗೊಡುವದಿಲ್ಲೆಂತ, ತಿಳಿದು, ವಿತ್ಮನನದು ಅಷ್ಟು ಶುದ್ಧವಲ್ಲವೆಂದು, ಗ್ರೇಕ ಭಾಷೆ ನೋಡಿ, ತಾನು ಹೊಸ ಒಡಂಬಡಿಕೆಯ ಒಂದು ಚಂದ ಗೆರ್ಮಾನ ಭಾಷಾಂತರದ ಕರ್ತನಾಗಿ, ಪಪ್ಪಕ ಮತದ ರಕ್ಷಣಕ್ಕಾಗಿ ತನಗೆ ಯೋಗ್ಯವೆನ್ನಿಸುವ ಟೀಕೆ ಕೂಡಿಸಿ, ತನ್ನ ಮೇಲಿನ ಸಭೋದ್ಯೋಗಿಗಳ ಮಹಾ ಪ್ರಸಾದ ಪಡೆದು, ಕ್ರಿ. ಶ. 1807ನೇ ಅಬ್ದ ರೇಗೆನ್ಸ್ಬುರ್ಗಿನವರ ಸಹಾಯದಿಂದ ಆ ಭಾಷಾಂತರ ಛಾಪಿಸಲಿಕ್ಕೆ ಕೊಟ್ಟನು. ಲೊಂದನಿನ ಸಂಘದವರು ಅದರ ಸುದ್ದಿ ಕೇಳಿ, ಹ

1) 447, 539ನೇ ಪಾನು. 2) 524ನೇ ಪಾನು. 3) 442ನೇ ಪಾನು.

ರ್ಷಿತರಾಗಿ—ನಿಮ್ಮ ಸ್ವಟೀಕೆ ತೆಗೆದು ಹಾಕಿ, ಒಂದು ಹೊಸ ಆವರ್ತನೆ ಮಾಡಿಸಿದರೆ ನಮ್ಮಿಂದ 2000 ರೂಪಾಯಿೂ ಒತ್ತಾಸೆ ಬಂದು ಮುಟ್ಟುವದೆಂದು, ಬೇಡಲು, ಅವನು ಅಸ್ತುಬಟ್ಟು, ಕ್ರಿ. ಶ. 1816ನೇ ಅಬ್ದದಿಂದ 1830ನೇದರ ತನಕ ಮುಖ್ಯವಾಗಿ ಅವರು ಸಲ್ಲಿಸುತ್ತಲಿರುವ ಹಣದ ಮೂಲಕ ತನ್ನ ಭಾಷಾಂತರದ 20 ಆವರ್ತನೆಗಳನ್ನು ಮಾಡಿಸಿ, ಪಪ್ಪಕ ಪ್ರಜೆಯೊಳಗೆ ಶೇರಿಸಲನುವಾಯಿತು; ಅದು ಹೊರ್ತಾಗಿ ಕ್ರಿ. ಶ. 1819ನೇ ಅಬ್ದ ಹಳೇ ಒಡಂಬಡಿಕೆಯ ಅವನದೊಂದು ಗೆರ್ಮಾನ ಭಾಷಾಂತರವು ಮುದ್ರಿತವಾಗಿತ್ತು. ಆದರೆ ಈ ಭಾಷಾಂತರಕ್ಕೋಸ್ಕರ ಕ್ರಿ. ಶ. ಆ 1830ನೇ ಅಬ್ದದಲ್ಲಿ ಅವನಿಗೂ ಲೊಂದನಿನ ಸಂಘದವರಿಗೂ ಇದ್ದ ಸಂಬಂಧವು ಬಹಿರಕ್ಕೆ ಬಿಚ್ಚಿ ಹೋಯಿತು; ಯಾಕಂದರೆ ಅದರಲ್ಲಿ ಅಪೊಕ್ರುಫಗಳೆಂಬ ಗ್ರಂಥಗಳು[1] ಸಹ ಇದ್ದದ್ದು ಲೊಂದನಿನ ಸಂಘದವರಿಗೆ ಅಂದು ಇನ್ನೂ ಹಿತ ತೋರಲಿಲ್ಲ. ಆದರೆ ಸ್ನೇಹವು ಹಾಗೆಯೇ ಉಳಿಯಿತು.

ತನ್ಮಧ್ಯ ಆ ದೇವವಾಗ್ಭಾಷಾಂತರಗಳಿಂದ ಅತಿಶಯಾಶೀರ್ವಾದವು ಹುಟ್ಟುವಂತಾದಾಗ ಕ್ರಿ. ಶ. ಆ 1816ನೇ ವರುಷಕ್ಕಾದರೂ 7ನೇ ಪಿಯ ಪಪ್ಪನೇ[2] ತಿರಿಗಿ ನಿಲ್ಲುವವನಾಗಿ, ಫಕ್ಕನೆ ಒಂದು ಬುಲ್ಲವನ್ನು ಪ್ರಕಟಿಸಿ, ಅದರಲ್ಲಿ ಸಕಲ ದೇವವಾಗ್ಗ್ರಂಥವಿಸ್ತಾರಕಸಂಘಗಳಿಗೆ ಶಪಿಸಿ[3]—ಕಂಟಕಕರ ಗ್ರಂಥಗಳದ್ದೊಂದು ಪೂರವನ್ನೂ, ದೇವವಾಕ್ಯವನ್ನಾದರೂ ಸಹ, ವಿಸ್ತರಿಸುವಂಥ ಮತ್ತು ಕ್ರಿಸ್ತನ ಸುವಾರ್ತೆಯನ್ನು ಮನುಷ್ಯರ ಅಥವಾ ಪಿಶಾಚನ ಸುವಾರ್ತೆಯಾಗ ಮಾರ್ಪಡಿಸುವಂಥ ಆ ಸಂಘಗಳು ವಿಷವುಳ್ಳ ಸಾಂಕ್ರಾಮಿಕರೋಗವೇ! ಯಾವತ್ತೂ ದೇವವಾಗ್ಭಾಷಾಂತರಗಳಿಂದ ಮೇಲಿಗಿಂತ ಬಹು ಹೆಚ್ಚಾದ ಕೇಡಾಗುವದು! ಎಂತ, ಕುನಿರ್ಣಯ ಹೇಳಿದನು. ಆದ್ದರಿಂದ ಪಪ್ಪಕ ಮತದ ದೇಶಗಳಲ್ಲಿ ಸ್ಥಾಪಿತವಾಗಿದ್ದಂಥ ದೇವವಾಗ್ಗ್ರಂಥವಿಸ್ತಾರಕಸಂಘಗಳು, ಆ ರೇಗೆನ್ಸ್ಬುರ್ಗಿನದು ಕೂಡ, ಮರಳಿ ಕೆಟ್ಟುಹೋದವು. ಹೇರಳ ಮಂದಿ ಪಪ್ಪಕ ಮತೋದ್ಯೋಗಿಗಳೂ ಸಭ್ಯರೂ ಅಲ್ಲಲ್ಲಿ ಆ ವಿಧದ ಬುಲ್ಲದ ಮೇಲೆ ಲಕ್ಷ್ಯವಿಡದಿದ್ದರೂ ವನ್ ಎಸ್ಸನು ಬ್ರಿತಿಷ ಸಂಘದ ಒತ್ತಾಸೆಯಿಂದ ಮುಂಚಿನಂತೆಯೇ ತನ್ನ ಭಾಷಾಂತರ ಹಬ್ಬಿಸುತ್ತಾ ಬಂದರೂ ಪಪ್ಪನ ಆ ನಿಷೇಧದಿಂದ ಬಹಳ ಅಟಕವಾಯಿತು. ತದನಂತರ ಕ್ರಿ. ಶ. 1819ನೇ ಅಬ್ದ ಅವನೇ ಪಪ್ಪನು ಪರಿಶುದ್ಧ ಬರಹದ ವಿಸ್ತರಣವನ್ನು, ಕಳೆ ಬಿತ್ತೋಣವೆಂದು, ಹೇಳಿದನು. ಕ್ರಿ. ಶ. 1823ನೇ ಅಬ್ದ ಅವನ ಉತ್ತರೋದ್ಯೋಗಿಯಾದ 12ನೇ ಲೆಯೋನನೆಂಬವನು ಮರುವರುಷ ಸೌವಾರ್ತಿಕರ ದೇವವಾಗ್ಭಾಷಾಂತರಕ್ಕೆ, ಪಿಶಾಚನ ಸುವಾರ್ತೆಯೆಂತ, ಹೆಸರಿಕ್ಕಿ, 13 ವರುಷಕ್ಕೀಚೆ ಸಕಲ ಪಪ್ಪಕ ಅಧ್ಯಕ್ಷರಿಗೆ ಮು

1) 480ನೇ ಪಾನು. 2) 633ನೇ ಪಾನು. 3) 618ನೇ ಪಾನು.

ಟ್ಟ ಬೇಕಾದ್ದೊಂದು ಪರಿಕ್ರಮಣಪತ್ರದಲ್ಲಿ ಬರೆದದ್ದೇನೆಂದರೆ—ನಿಮ್ಮ ಮಂದೆಗಳನ್ನು ವಿಷ ಬೆರೆದ ಈ ಹುಲ್ಲುಬೈಲುಗಳಲ್ಲಿಂದ (ಅಂದರೆ ದೇವವಾಕ್ಯ ಕೃತಿಗಳ ಅಧ್ಯಯನದಲ್ಲಿಂದ) ಚತುರೋಪಾಯದೊಡನೆ ಅಟ್ಟಿ ಕೊಂಡು ಹೋಗಿರೆಂತ, ನಿಮಗೆ ಬುದ್ಧಿಯನ್ನೊರೆಯುತ್ತೇವೆ; ಯಾಕಂದರೆ, ಪರಿಶುದ್ಧ ಬರಹವು ತಾರತಮ್ಯವಿಲ್ಲದೆ ಸರ್ವತ್ರ ವಿಸ್ತರಿಸಲಾದರೆ ಲಾಭಕ್ಕಿಂತ ಅಧಿಕವಾದ ಕೇಡೂ ನಷ್ಟವೂ ಆಗುವದೆಂಬದೇ ನಮಗೆ ನಿಶ್ಚಯವಲ್ಲವೋ?—ಅದಕ್ಕಿತ್ತ ಕ್ರಿ. ಶ. 1846ನೇ ವರುಷ ಸತ್ತ 16ನೇ ಗ್ರೆಗೋರ ಪಪ್ಪನು ಒಂದು ಪರಿಕ್ರಮಣಪತ್ರದಲ್ಲಿ—ಆಯಾ ದೇಶಗಳ ಪ್ರಜೆಯ ಸ್ವಭಾಷಾಂತರ ಗೈದ ಪರಿಶುದ್ಧ ಬರಹವನ್ನು ಪ್ರಕಟಿಸಲೂ ಹಂಚಿ ಕೊಡಲೂ ಇಟ್ಟು ಕೊಳ್ಳಲೂ ಬಾರದೆಂದು, ಪೂರ್ವ ಕಾಲದ ಪಪ್ಪರು ಹೊರಡಿಸಿದ ನಿರ್ಣಯಗಳನ್ನು[1] ನಾವು ನೆಲೆ ಗೊಳ್ಳಿಸಿ, ಹೊಸತಾಗಿ ಹೊರಡಿಸುತ್ತೇವೆಂತ, ಹೇಳಿದನು. ಅದು ಹೊರ್ತಾಗಿ ಈಗ ಪಪ್ಪನಾಗಿರುವ 9ನೇ ಪಿಯನು[2] ತಾನು ಪಪ್ಪಪೀಠಾರೂಢನಾದ ವರುಷದಂತಕ್ಕೆ ತನ್ನದೊಂದು ಪರಿಕ್ರಮಣಪತ್ರ ರಚಿಸಿ, 10,000ಕ್ಕಿಂತ ಹೆಚ್ಚು ಪ್ರತಿಗಳನ್ನು ಛಾಪಿಸಿ, ದಿಕ್ಕು ದಿಕ್ಕಿಗೆ ಕಳುಹಿಸಿ, ಒದರಿದ್ದೇನಂದರೆ—ಮೋಸಗಾರರಾದ ದೇವವಾಗ್ಗ್ರಂಥವಿಸ್ತಾರಕಸಂಘಗಳವರು ಪೂರ್ವ ಕಥರರ (ಅಂದರೆ ಸೌವಾರ್ತಿಕ ಸತ್‌ಕ್ರೈಸ್ತರ) ತಂತ್ರೋಪಾಯಗಳನ್ನು ತಿರಿಗಿ ಹಿಡುಕೊಂಡು, ನಮ್ಮ ಸಭೆಯ ಪರಿಶುದ್ಧ ಕ್ರಮಗಳಿಗೆ ವಿರೋಧವಾಗಿ ದೇವವಾಕ್ಯದ ಸಮುಸ್ತ ದೇಶೀಯ ಭಾಷೆಗಳ ಅಂತರವನ್ನು ರಚಿಸಿ, ಬಲುಮೆಯೊಡನೆ ವಿಸ್ತರಿಸುವದನ್ನು ಬಿಡರು. ಹೀಗಿರಲಾಗಿ, 16ನೇ ಗ್ರೆಗೋರನೆಂಬ ನಮ್ಮ ಪೂರ್ವಾಧಿಕಾರಿಯು ಆ ಸಮಸ್ತ ಸಂಘದವರಿಗೆ ತನ್ನ ಅಪೊಸ್ತೊಲಿಕ (? ?) ಪತ್ರದಿಂದ ಪ್ರತಿಬಾಧನ ಮಾಡಿದಂತೆ, ತಾವು ಸಹ, ಬಾಧಿತಾರ್ಥದವರೆಂತ, ಅವರಿಗೆ ಆಜ್ಞೆ ನಿರ್ಣಯಿಸುತ್ತೇವೆ. ಕಥೊಲಿಕ (ಅಂದರೆ ಪಪ್ಪಕ) ಸಭೆಯ ಹೊರಗೆ ರಕ್ಷಣೆಯಿಲ್ಲ. ದೇವರ ಅತಿಪರಿಶುದ್ಧ ತಾಯಿಯಾದ ಮರಿಯಳು[3] ನಮ್ಮೆಲ್ಲರ ಅತಿಸ್ವಾದುವುಳ್ಳ ತಾಯಿಯೂ ಮಧ್ಯಸ್ಥಳೂ[4] ಕಾರ್ಯಕರ್ತಳೂ[5] ದೇವರ ಸಮಕ್ಷದಲ್ಲಿ ಅಪ್ರತಿಮ ಬಲವುಳ್ಳ ಆಶ್ರಯದಾಯಕಳೂ ಎಂತ, ಇವನಲ್ಲಿ ಅವಳನ್ನು, ನಮ್ಮ ಪ್ರತಿವಿಜ್ಞಾಪಕಳೆಂದು, ತೆಕ್ಕೊಂಡು, ಎಡೆ ಬಿಡದೆ ಬಳಸುವ! ಯಾಕಂದರೆ ನಾವು ಹೀಗೆ ನಡೆಯುವ ಪಕ್ಷದಲ್ಲಿ ಕರ್ತನು ತನ್ನ ಕಿವಿಯನ್ನು ನಮ್ಮ ಪ್ರಾರ್ಥನೆಗಳಿಗೆ ಹೆಚ್ಚಾಗಿ ಇಕ್ಕಿ, ಅವುಗಳ ಅರ್ಥ ಕೊಡುವನು. ಅದಲ್ಲದೆ ಅಪೊಸ್ತಲರ ರಾಜನಾದ ಪೆತ್ರನಿಗೂ[6] ಅವನ ಜತೆಯವನಾದ ಪೌಲನಿಗೂ ಪರಲೋಕದಲ್ಲಿರುವ ಇತರ ಸಂತರೆಲ್ಲರಿಗೂ[7] ವಿನಂತಿ ಮಾಡುವ! ಹೀಗಾದರೆ ಕ್ರಿ

1) 357ನೇದು ಮೊದಲಾದ ಪಾನು. 2) 618ನೇ ಪಾನು. 3) 355ನೇ ಪಾನು. 4) 1 ತಿಮೊ. 2, 5 ಸರಿ ನೋಡು. 5) 1ಯೋಹಾ. 2, 1 ಸರಿ ನೋಡು. 6) 279ನೇ ಪಾನು. 7) 355, 618, 620ನೇ ಪಾನು.

ಸ್ತನ ಜನರೆಲ್ಲರಿಗೆ ದೇವಕೃಪೆಯ ಇಷ್ಟ ಬಾಹುಳ್ಯವನ್ನು ದೊರಕಿಸುವರು.—ಬಳಿಕ 15 ವರುಷ ಹೋಗಲಾಗಿ ಕ್ರಿ. ಶ. 1861ನೇದಕ್ಕೆ ಅವನು, ದೇವವಾಗ್ಗ್ರಂಥವಿಸ್ತಾರಣವೂ ಪ್ರಬೋಧ್ಬಂಧಕವೃತ್ತಿಯೂ ಒಂದೇ! ಎಂತ, ಬರೆದನು.

ಗೆರ್ಮಾನಿಯ ಮುಂತಾದ ದೇಶಗಳೊಳಗೆ ಪಪ್ಪಕ ಅಧಿಕಾರವು ಮಿಗಿಲಾದ ಭಾಗಗಳಲ್ಲಿ ದೇವವಾಗ್ಗ್ರಂಥವಿಸ್ತರಣವೃತ್ತಿಯು ಆ ಪ್ರಕಾರ ತಡೆದು ಹೋಗುವಷ್ಟರಲ್ಲಿ ಗೆರ್ಮಾನಿಯದ ಉತ್ತರ ಭಾಗದಲ್ಲಿ, ವಿಶೇಷವಾಗಿ ಪ್ರುಸ್ಸಿಯದಲ್ಲಿ, ಆ ವೃತ್ತಿಯ ಹೇರಳ ಚಿಕ್ಕ ದೊಡ್ಡ ಸಮಾಜಗಳು ಹುಟ್ಟುತ್ತಿದ್ದವು; ಇವೆಲ್ಲವೂ ಕ್ರಿ. ಶ. 1814ನೇ ವರುಷ ಬೆರ್ಲೀನೆಂಬ ರಾಜಧಾನಿಯಲ್ಲಿ ಸ್ಥಾಪಿತವಾಗಿದ್ದ ದೇವವಾಗ್ಗ್ರಂಥವಿಸ್ತಾರಕಪ್ರಧಾನಸಂಘವೆಂಬದಕ್ಕೆ ಕೂಡಿ ಕೊಂಡವು.

ಕ್ರಿ. ಶ. 1808ನೇ ವರುಷ ಉತ್ತರ ಅಮೆರಿಕದ ಆ ಫಿಲದೆಲ್ಫೀಯ ಪಟ್ಣದಲ್ಲಿ[1] ಒಂದು ದೇವವಾಗ್ಗ್ರಂಥವಿಸ್ತಾರಕಸಂಘವು ಜನಿಸಿದ್ದು, ಬ್ರಿತಿಷವಾದ್ದರ ಸಹಾಯ ಹೊಂದುತ್ತಾ ಬಂದ ಮೇಲೆ ನ್ಯೂಯೊರ್ಕು ಪಟ್ಣದಲ್ಲಿ ಉತ್ತರ ಅಮೆರಿಕದ ದೇವವಾಗ್ಗ್ರಂಥವಿಸ್ತಾರಕಪ್ರಧಾನಸಂಘವೆಂಬದು ಉದ್ಭವಿಸಿತು; ಕ್ರಿ. ಶ. 1820ನೇ ಅಬ್ದ ಇದಕ್ಕೆ 267 ಸಹಾಯಸಂಘಗಳಾದರೂ ಶೇರಿದ್ದವು; ಕ್ರಿ. ಶ. 1843ನೇದಕ್ಕೆ ಅವು 1000ಕ್ಕೂ ಮೀರಿದವು; ಈಗ ಅದರ ಸಂಬಂಧದಲ್ಲಿರುವ ಸುಮಾರು 1,400 ಸಹಾಯಸಂಘಗಳ ಮತ್ತು 2,800 ಶಾಖಾಸಮಾಜಗಳ ಪ್ರಯತ್ನದಿಂದ ವರ್ಷಂಪ್ರತಿ ಹೆಚ್ಚು ಕಡಿಮೆ 8ಲಕ್ಷ ದೇವವಾಕ್ಪ್ರತಿಗಳನ್ನು ಹೊರಡಿಸೋಣವಾಗುತ್ತದೆ; ಕ್ರಿ. ಶ. 1865ನೇ ಅಬ್ದದ ವರೆಗೆ ಅದು 2,06,09,564 ದೇವವಾಕ್ಪ್ರತಿಗಳನ್ನು ಲೋಕದಲ್ಲಿ ತುಂಬಿಸಿತ್ತು.

ಸುಮಾರು 8,400 ಸಹಾಯಸಂಘಗಳಿರುವ ಆ ಬ್ರಿತಿಷ ಮತ್ತು ಪರದೇಶಿಕ ದೇವವಾಗ್ಗ್ರಂಥವಿಸ್ತಾರಕಸಂಘದವರು ಕ್ರಿ. ಶ. 1867ನೇ ವರುಷವೊಂದಕ್ಕೆಯೇ 24,00,776 ಪರಿಶುದ್ಧ ಬರಹದ ಪ್ರತಿಗಳನ್ನು ಹೊರಡಿಸುವಲ್ಲಿ ಅಮೆರಿಕದ ಮತ್ತು ಇತರ ದೇಶಗಳ ಸಂಘಗಳವರಿಂದ ಸುಮಾರು 20,00,000 ಅಂಥ ಪ್ರತಿಗಳು ಹೊರಟವು. ಯುರೋಪದಲ್ಲಿಯೂ ಅಮೆರಿಕದಲ್ಲಿಯೂ ಈಗ ಒಟ್ಟಿಗೆ 18 ದೇವವಾಗ್ಗ್ರಂಥವಿಸ್ತಾರಕಪ್ರಧಾನಸಂಘಗಳು ಇವೆ; ಇವು ವರುಷಕ್ಕೆ 1½ ಕೋಟಿಗಿಂತ ಹೆಚ್ಚು ರೂಪಾಯಿಗಳನ್ನು ತಮ್ಮ ಸುವೃತ್ತಿಗೆ ಬಳಿಸುತ್ತಾ ಅವೆ. ಈ ಪರಿಯ ಸಂಘಗಳಲ್ಲದೆ ದೇವವಾಕ್ಯವನ್ನು ಕುರಿತ ಚಿಕ್ಕ ದೊಡ್ಡ ಪುಸ್ತಕಗಳನ್ನು ಪ್ರಕಟಿಸುತ್ತಿರುವ 17 ಲಘುಬೃಹದ್ಗ್ರಂಥೋತ್ಪಾದಕಸಮಾಜಗಳು ಆ 2 ಭೂಖಂಡಗಳಲ್ಲಿದ್ದು, ಶೋಭಿಸುತ್ತವೆ.

---

1) 591ನೇ ಪಾನು.

ಆ ದೊಡ್ಡ ಇಂಗ್ಲಿಷ ಸಂಘವು ಕ್ರಿ. ಶ. 1804ನೇ ವರುಷ ನಿರ್ಮಾಣವಾಗುವಂ
ದು ದೇವವಾಕ್ಯವು 50 ವಿವಿಧ ಭಾಷೆಗಳಲ್ಲಿ ಮಾತ್ರವಿತ್ತು; ಬಳಿಕ ಇತ್ತಣ 60 ವ
ರುಷಗಳೊಳಗೆ ಅದು ಹೊಸ ಭಾಷಾಂತರವಾಗಿ ಮುದ್ರಿತವಾದದ್ದು 135 ಇತರವಾ
ದ ಬೇರೆ ಬೇರೆ ಭಾಷೆಗಳಲ್ಲಿಯೇ; ಅದರ ಭಾಷಾಂತರಗಳು ಈಗ ಒಟ್ಟಿಗೆ 185[1].
ಹಾಗಾದರೆ ಭೂಲೋಕದವರೆಲ್ಲರೂ ಅದನ್ನು ತಮ್ಮ ತಮ್ಮ ಸ್ವಭಾಷೆಗಳಲ್ಲಿ ಓದಲಾ
ಗುವ ಕಾಲವು ಸಮೀಪಿಸುತ್ತಲಿದೆ; ಅನೇಕ ಮಂದಿ ಯೆಹೂದ್ಯರ ಮತ್ತು ಮೊಹ
ಮ್ಮದಿಯರ ಮತ್ತು ತರ ತರದ ವಿಗ್ರಹಾರಾಧನೆಯವರ ಕೈಯಲ್ಲಿ ಅದು ಈಗಲೂ
ಕೊಟ್ಟದೆ; ಹ್ಯಾಗಂದರೆ 19ನೇ ಕ್ರಿಸ್ತಶತಮಾನದ ದೇವವಾಗ್ಗ್ರಂಥವಿಸ್ತಾರಕಸಂ
ಘಗಳಿಂದ ಇಂದು ನಡೆಯುತ್ತಿರುವ 1868ನೇ ವರ್ಷದ ತನಕ 8 ಕೋಟಿಗಿಂತ ಅಧಿ
ಕವಾದ ದೇವವಾಕ್ಪ್ರತಿಗಳು ಅವರವರಲ್ಲಿಯೂ ಕ್ರೈಸ್ತರಲ್ಲಿಯೂ ವಿಸ್ತರಿಸಿವೆ.

ಕುರುಡರಿಗೆ ಸಹ ದೇವವಾಕ್ಸ್ವಾಧ್ಯಾಯನದ ಮಹಾಶೀರ್ವಾದವು ಪ್ರಾಪಿಸು
ವಂತೆ ದೇವವಾಗ್ವಿಸ್ತಾರಕಸಂಘಗಳವರು ಪ್ರಯತ್ನ ಪಟ್ಟು, ದಪ್ಪ ಕಾಗದದಲ್ಲಿ ಅ
ಕ್ಷರದಚ್ಚುಗಳನ್ನು ಘಟ್ಟಿಯಾಗಿ ಒತ್ತಿ ಅತ್ತ ಕಡೆಗೆ ಮೂಡಿಸುವಂಥ ಯುಕ್ತಿಯಿಂ
ದ ನಾಲ್ಕು ಸುವಾರ್ತೆ ಮುಂತಾದ ದೇವವಾಕ್ಯದ ಮುಖ್ಯ ಗ್ರಂಥಗಳನ್ನು ಛಾಪಿ
ಸಿ, ಕುರುಡರು ಬೆರಳ ತುದಿಗಳ ಸೂಕ್ಷ್ಮ ಸ್ಪರ್ಶದಿಂದ ಓದಲಾಗುವದಕ್ಕೆ ಅನುಕೂ
ಲ ಮಾಡಿದರು. ಒಮ್ಮೆ ಇಂಗ್ಲಂದಿನ ಒಬ್ಬ ಕುರುಡಿಯ ಬೆರಳುಗಳು ನೂಲಿಗೆ ಮುಂ
ತಾದ ಕೈಕೆಲಸದಿಂದ ದಡ್ಡು ಕಟ್ಟಿರಲು, ಅಂಥಾ ಗ್ರಂಥಗಳ ಅಕ್ಷರಗಳು ಅವಳ ಬೆರಳು
ಗಳಿಗೆ ಚನ್ನಾಗಿ ತಿಳಿದು ಬಾರದಿದ್ದವು; ಆಗಲವಳು ಒಂದು ಕತ್ತಿಯಿಂದ ಮೇಲ್ತೊಗ
ಲು ಕೊಯಿದು, ಬಿಡಿಸಿದರೂ ಪ್ರಯೋಜನವಾಗಲಿಲ್ಲ. ತನ್ನದೊಂದು ಬೆರಳಿಗೆ ಘಾ
ಯ ಮಾಡಿ ಕೊಂಡಳಷ್ಟೇ. ತಕ್ಷಣವೇ, ಅದರ ನೋವು ತಾಳಲಾರದೆ, ವೇಗದಿಂ
ದ ಬೆರಳನ್ನು ಬಾಯಿಯೊಳು ಹಾಕಿ ಕೊಳ್ಳಲು, ತನ್ನ ತುಟಿಗಳ ತೊಗಲು ಬಹು
ಮೃದುವೆಂತ, ಆಲೋಚಿಸಿ ಕೊಂಡು, ತುಟಿಗಳಿಂದಲೇ ಆ ಅಕ್ಷರಗಳನ್ನರಿಯುವ
ದಕ್ಕೆ ಅವನ್ನು ಮುಟ್ಟಿಸುವಂದು, ಅಗೋ, ಅವನ್ನು ಅತ್ತಿತ್ತಕ್ಕೆಳದೋದುವದು ಹ
ಗುರವಾಯಿತು.

ಆಫ್ರಿಕ ಖಂಡದ ದಕ್ಷಿಣ ಭಾಗದಲ್ಲಿಯೂ ಪೊಲುನೇಸಿಯವೆಂಬ ಪಾಕಿಫಿಕ
ದ್ವೀಪಗಳಲ್ಲಿಯೂ ತುರ್ಕ ರಾಜ್ಯದ ಕೊನ್ಸ್ತಂತೀನೊಪೊಲಿಯೆಂಬ ಪ್ರಧಾನ ಪ
ಟ್ಣದಲ್ಲಿಯೂ ಈ ನಮ್ಮ ಹಿಂದು ದೇಶದಲ್ಲಿಯೂ ಕೂಡ ದೇವವಾಗ್ಗ್ರಂಥವಿಸ್ತಾರಕ
ಸಂಘಗಳು ಅವೆ. ತಮ್ಮ ಸತ್ಕಾರ್ಯದ ಆರಂಭದಲ್ಲೇ ಬ್ರಿತಿಷ ಮಾತೃಸಂಘದವ

1) ಭೂಲೋಕದಲ್ಲಿ 2000 ಬೇರೆ ಬೇರೆ ಭಾಷೆಗಳಿವೆಂತ, ಎಣಿಸುತ್ತಾರೆ; ಆದರೆ ಧಾತುವ್ಯತ್ಯಾಸ
ವಿರುವಂಥ ಭಾಷೆಗಳು 10 ಮಾತ್ರ.

ರು ಬಂಗಾಳದ ರಾಜಧಾನಿಯಾದ ಕಲಿಕಾತೆಯಲ್ಲಿದ್ದ ದೇವಿದ್ ಬ್ರೌನ ಮತ್ತು ಕ್ಲಾದಿಯಸ್ ಬಕ್ಕನ್ನನ[1] ಎಂಬವರಿಬ್ಬರು ಭಕ್ತಿಯುಳ್ಳ ಪ್ರಸಂಗೋದ್ಯೋಗಿಗಳಾದ ಪಂಡಿತರ ಸಂಗಡ ಪರಿಶುದ್ಧ ಬರಹವನ್ನು ಹಿಂದು ದೇಶದ ಬೇರೆ ಬೇರೆ ಭಾಷೆಯಿಂದ ಸಹ ಗೈಯುವದನ್ನು ಕುರಿತು ಪತ್ರ ನಡಿಸುವವರಾಗಿ, ಅದಕ್ಕೋಸ್ಕರ ಹಣ ಕಾಗದ ಗ್ರಂಥ ಮುಂತಾದ್ದರಿಂದ ನಾನಾ ಸಹಾಯ ಮಾಡಲೆಸಗಿದರು. ಅಂದು ಆ ಕಡೆಯಲ್ಲಿ ಇಂಗ್ಲಿಷ ಭಾಷೆಯ ದೇವವಾಗ್ಗ್ರಂಥಗಳೂ ಬಹು ತುಟ್ಟಿ; ಇಂಗ್ಲಿಷ ದಂಡಿನವರಿಗೆ ತಕ್ಕಷ್ಟು ಪ್ರತಿಗಳು ಶಿಕ್ಕಲಿಲ್ಲ. ಹೀಗಿರಲಾಗಿ, ಅಲ್ಲಿಯ ಹೆನ್ರಿ ಮರ್ತಿನನೆಂಬ ಮತ್ತೊಬ್ಬ ಪ್ರಸಿದ್ಧ ಪ್ರಸಂಗಿಕೋದ್ಯೋಗಿಯು ತಾನು ಕ್ರಿ. ಶ. 1810ನೇ ವರುಷ ಸುವಾರ್ತಾಪ್ರಸಾರಣಕ್ಕಾಗಿ ಪಾರ್ಶಿಸ್ಥಾನಕ್ಕೆ ಹೊರಡುವದಕ್ಕಿಂತ ಸ್ವಲ್ಪ ಮುಂಚೆ ಕೊಟ್ಟದ್ದೊಂದು ವಾಗ್ನಿರೂಪಣದಿಂದಲೂ ಮರುವರುಷ ಆ ಬ್ರೌನ ಪ್ರಸಂಗಿಕೋದ್ಯೋಗಿಯು ಒಂದು ಸಭಾಸಮಾಗಮದಲ್ಲಿ ಬ್ರಿತಿಷ ದೇವವಾಗ್ಗ್ರಂಥವಿಸ್ತಾರಕಸಂಘದ ಮಹಾಂತ ವೃತ್ತಿಯನ್ನು ವರ್ಣಿಸಿ, ಹಾಗಾದರೆ ಧನಿಷ್ಠವೂ ಬಲಿಷ್ಠವೂ ಆದಂಥ ಹಿಂದು ದೇಶವು ಆ ದೊಡ್ಡ ಕಾರ್ಯಕ್ಕೆ ಸಹಾಯ ಮಾಡ ಬಾರದೇ? ಎಂತ, ಹಾಕಿದ ನಿರ್ಧಾರ್ಣಾರ್ಥವುಳ್ಳ ಪ್ರಶ್ನೆಯಿಂದಲೂ, ಇವೆರಡು ನಿಮಿತ್ತಗಳಿಂದ ಕ್ರಿ. ಶ. 1811ನೇ ವರುಷ ಕಲಿಕಾತೆಯ ದೇವವಾಗ್ಗ್ರಂಥವಿಸ್ತಾರಕಸಂಘವು ಉದ್ಭವಿಸಿತು. ಆಗಲೇ ಸಮಸ್ತ ಹಿಂದು ದೇಶದಲ್ಲಿದ್ದ ದೇವವಾಕ್ಪ್ರಿಯ ಕ್ರೈಸ್ತರು ಹೇರಳ ಹಣ ಕೂಡಿಸುವಲ್ಲಿಗೆ ಇಂಗ್ಲಂದಿನ ಮಾತೃಸಂಘದಿಂದ ಸಹ ತಿರಿಗಿ ಮಿಗು ಸಹಾಯವು ಬಂದೊದಗಿತು. ಮರುವರುಷ ಲಂಕಾದ್ವೀಪದ ಕೊಳುಂಬ ಪಟ್ಣದಲ್ಲಿ, ಬಳಿಕ ಅಲ್ಲಿಯ ಯಾಳ್ಪಾಣ ಪಟ್ಣದಲ್ಲಿಯೂ ಕಂಡಿ ಪಟ್ಣದಲ್ಲಿಯೂ ಒಂದೊಂದು ಸಹಾಯಸಂಘವು ಆಯಿತು. ಮುಂಬಯಿಯದು ಕ್ರಿ. ಶ. 1813ನೇ ಅಬ್ದಕ್ಕೆ ಜನಿಸಿತು. ಚನ್ನಪಟ್ಣದಲ್ಲಿಯ ದೇವವಾಗ್ಗ್ರಂಥವಿಸ್ತಾರಕಸಹಾಯಸಂಘದ ವಿಷಯ ಸ್ವಲ್ಪ ವಿವರಿಸೋಣ. ಅದು ಉತ್ಪನ್ನವಾಗದ್ದಕ್ಕಿಂತ ಮುಂಚೆ ದ್ರವಿಡ ಭಾಷೆಯ ದೇವವಾಕ್ಪ್ರತಿಗಳು ತೀರ ಕೊಂಚ; ಅವು ಹಿಂದುಜ ಕ್ರೈಸ್ತರಿಗಾದರೂ ಸಾಕಾಗದ್ದರಿಂದ ವಿಗ್ರಹಾರಾಧಕರಲ್ಲಾಗಲಿ ಮೊಹಮ್ಮದಿಯರಲ್ಲಾಗಲಿ ಅಂಥವನ್ನು ಹಂಚಿ ಕೊಡಲಿಕ್ಕೆ ಏನೂ ಸಂದರ್ಭವಾಗಲಿಲ್ಲ. ಇದ್ದ ಪ್ರತಿಗಳು ಮುಖ್ಯವಾಗಿ ಬಂಗಾಳದ ಶ್ರೀರಾಮಪುರದ ಸುವಾರ್ತಾಪ್ರಸಾರಕರ ಮುದ್ರಾಶಾಲೆಯಲ್ಲಿ ಛಾಪಿತವಾದವುಗಳು. ಕ್ರಿ. ಶ. 1806ನೇ ವರುಷ ಬಕ್ಕನ್ನನ ಎಂಬ ಆ ಮಹಾ ಪಂಡಿತನು ತಮಿಳ ದೇಶಕ್ಕೆ ಬಂದು, ವಿಚಾರಿಸಿ, ಆಗ ತಿರುನೆಲ್ವೇಲಿಯಲ್ಲಿಯೂ ತಂಜಾವೂರಿನಲ್ಲಿಯೂ ಇರುವ ಸುಮಾರು 11,000 ಮಂದಿ ಹಿಂದುಜ ಕ್ರೈಸ್ತರೊಳಗೆ ನೂರು ನೂರು ಜನರಲ್ಲಿ ಒಬ್ಬ

1) 545ನೇ ಪಾನು.

ನಿಗಾದರೂ ಹೊಸ ಒಡಂಬಡಿಕೆಯ ಒಂದು ಪ್ರತಿಯು ಇರುವದಿಲ್ಲವೆಂತ, ಕಂಡು, ಈ ಕೊರತೆಯ ವರ್ತಮಾನವನ್ನು ಬ್ರಿತಿಷ ಮಾತೃಸಂಘಕ್ಕೆ ತಿಳಿಸಲು, ಇದು ತನಗೆ ಶಿಕ್ಕುವಷ್ಟು ಪ್ರತಿಗಳನ್ನೆಲ್ಲಾ ಕೊಂಡು ಕೊಂಡು, ತಂಜಾವೂರಿನ ತಮಿಳ ಕ್ರೈಸ್ತರಿಗೆ, ಇನಾಮೆಂತ, ದಯೆ ಮಾಡಿತು. ಇವರು ಅತಿ ಸಂತುಷ್ಟರಾದರೂ—ರೊಟ್ಟಿಯನ್ನಾಗಲಿ ಹಣವನ್ನಾಗಲಿ ನಾವು ನಿಮ್ಮಿಂದ ಕೇಳಿ ಕೊಳ್ಳುವದಿಲ್ಲ, ದೇವರ ವಾಕ್ಯವೇ ನಮಗೆ ಬೇಕು! ಎಂತ, ಹೇಳಿ, ಹೆಚ್ಚು ಪ್ರತಿಗಳನ್ನಪೇಕ್ಷಿಸಿದರು. ತರುವಾಯ ಕ್ರಿ. ಶ. 1817ನೇ ವರುಷ ಚನ್ನಪಟ್ಣದಲ್ಲಿ ದೇವವಾಗ್ಗ್ರಂಥವಿಸ್ತಾರಕಸಂಘದ್ದೊಂದು ಮಿಡಿಯು ಹುಟ್ಟಿದಂತಾಯಿತು; ಆದರೆ 2 ವರುಷದಿತ್ತ ಮಾತ್ರ ಬ್ರಿತಿಷ ಮಾತೃಸಂಘದ ಒತ್ತಾಸೆಯ ಮೇಲೆ ಈಗ ಇರುವ ಆಶೀರ್ವಾದಕರ ಸಂಘವು ಜನನಕ್ಕೆ ಬಂತು. ಅಂದಿನಿಂದ ಈ ಸಂಘದವರು ಚನ್ನಪಟ್ಣದ ಆಧಿಪತ್ಯದಲ್ಲಿ ನಡಿಯುವ ತಮಿಳ ತೆಲುಗು ಕನ್ನಡ ಮಲೆಯಾಳ ಹಿಂದುಸ್ಥಾನಿ ಎಂಬ 5 ಮುಖ್ಯ ಭಾಷೆಗಳಲ್ಲಿ ದೇವವಾಕ್ಯವನ್ನು ಅಂತರೀಕರಿಸಿ, ಛಾಪಿಸಿ, ಹಬ್ಬಿಸುವದಕ್ಕೆ ಅತಿರೇಕ ಧಾವತಿಗೊಂಡರು; ಈ ಕಾಲದ ವರೆಗೆ ಅವರು ಆಯಾ ಭಾಷೆಗಳಲ್ಲಿ ಸುಮಾರು 18ಲಕ್ಷ ದೇವವಾಕ್ಪ್ರತಿಗಳನ್ನು ಹೊರಡಿಸಿದ್ಧಾರೆ. ಇದು ತನ್ನಷ್ಟಕ್ಕೆ ದೊಡ್ಡ ಸಂಖ್ಯೆ ಎನ್ನಿಸುತ್ತದೆ, ಸರಿ; ಆದರೆ, 47 ವರುಷಗಳಲ್ಲಿ ಸುಮಾರು 2ಕೋಟಿಯೂ 10ಲಕ್ಷ ಜನರೊಳಗೆ ಹೊರಡಿಸಿದಂಥವುಗಳೆಂತ, ಪರ್ಯಾಲೋಚಿಸಿದರೆ, ಒಂದು ಹನಿಯಷ್ಟು ಸ್ವಲ್ಪವೆಂದು, ಕಂಡು ಬರುವದು. ಕ್ರಿ. ಶ. 1845ನೇ ಅಬ್ದ ಅಲ್ಲಹಾಬಾದು ಪಟ್ಣದಲ್ಲಿ ಸಹ ಒಂದು ಸಹಾಯಸಂಘವು ನಿರ್ಮಿತವಾಯಿತು.

ನಮ್ಮ ಸಮಯದಲ್ಲಿ ಪೂರ್ಣ ದೇವವಾಕ್ಯವು 15 ಹಿಂದು ಭಾಷೆಗಳಲ್ಲಿ, ಹೊಸ ಒಡಂಬಡಿಕೆ ಎಂಬ ಭಾಗವು ಬೇರೆ 5 ಅವುಗಳಲ್ಲಿ, ಸುವಾರ್ತೆಗಳು ಮತ್ತು 7 ಅವುಗಳಲ್ಲಿ ಭಾಷಾಂತರವಾಗಿ, ಚರಿಸುತ್ತದೆ.

ದೇವವಾಗ್ಗ್ರಂಥವಿಸ್ತಾರಕಸಂಘಗಳವರೂ ಲಘು ಬೃಹದ್ಗ್ರಂಥೋತ್ಪಾದಕಸಮಾಜಗಳವರೂ ತಮ್ಮ ತಮ್ಮ ಗ್ರಂಥಗಳನ್ನು ಉಚಿತಕ್ಕಾಗಲಿ ಸ್ವಲ್ಪ ಮೌಲ್ಯಕ್ಕಾಗಲಿ ಅತ್ಯಲ್ಪ ಕ್ರಯಕ್ಕಾಗಲಿ ಕೊಡುವದದೆ; ಆದ್ದರಿಂದ ಧನಿಗಳಿಗೂ ದರಿದ್ರರಿಗೂ ದೇವವಾಕ್ಯಪ್ರಾಪ್ತಿಯು ಸುಲಭವಾಯಿತು. ದೇವವಾಗ್ಗ್ರಂಥವಿಸ್ತರಣವು ಬಾಹ್ಯ ಮತ್ತು ಅಂತರ್ಯ ಸುವಾರ್ತಾಪ್ರಸಾರಣದ ಸಂಬಂಧದಲ್ಲಿ ನಡೆಯುತ್ತದೆ; ಇದು ಮುಂದಿನ ಎರಡು ಸಂಧಿಗಳಲ್ಲಿ ಗೋಚರವಾಗುವದು.



## 76. ಬಾಹ್ಯ ಸುವಾರ್ತಾಪ್ರಸಾರಣವು.

ಬಾಹ್ಯ ಸುವಾರ್ತಾಪ್ರಸಾರಣವು ಏನಂದರೆ, ಯೆಹೂದ್ಯರು ಮೊಹಮ್ಮದಿಯರು ವಿಗ್ರಹಾರಾಧಕರು ಎಂಬ ದೃಶ್ಯವಾದ ಕ್ರೈಸ್ತಸಭೆಯ ಹೊರಗಿರುವ ಮೂರು ತರದ ಜನಾಂಗಗಳವರಿಗೆ ಸುವಾರ್ತೆಯನ್ನು ಸಾರುತ್ತಾ, ಓದಿಸುತ್ತಾ, ಅದರ ಸಂಬಂಧವಾದ ಪಾರಲೌಕಿಕ ಆಶೀರ್ವಾದವನ್ನೂ ವಿದ್ಯೆ ನಾಗರಿಕತ್ವ ಮರ್ಯಾದೆ ದರಿದ್ರಪೋಷಣ ರೋಗಿಪೋಷಣ ವಿಧವಾರಕ್ಷಣ ಅನಾಥರಕ್ಷಣ ಮೊದಲಾದ ಐಹಿಕವಾದ್ದನ್ನೂ ಅವರವರಲ್ಲಿ ನೆಟ್ಟು ಮೊಳೆಸಿ ಬೆಳೆಸುತ್ತಾ ಇರುವ ಯಶಸ್ಸುಳ್ಳ ವೃತ್ತಿಯೇ.

ಕ್ರಿಸ್ತನಾಥನು ತನ್ನ ಶಿಷ್ಯರಿಗೆ—ನೀವು ಹೋಗಿ, ದೇವರಾದ ತಂದೆಯ, ಮಗನ, ಪರಿಶುದ್ಧಾತ್ಮದ ಹೆಸರಿನಲ್ಲಿ ಅವರಿಗೆ ಸ್ನಾನ ಕೊಡುತ್ತಾ, ನಾನು ನಿಮಗೆ ಆಜ್ಞಾಪಿಸಿದದನ್ನೆಲ್ಲಾ ಕೈಗೊಳ್ಳುವದಕ್ಕೆ ಅವರಿಗೆ ಬೋಧಿಸುತ್ತಾ, ಸಮಸ್ತ ಜನಾಂಗಗಳನ್ನು ಶಿಷ್ಯರಾಗ ಮಾಡಿರಿ! ಎಂತ, ಕೊಟ್ಟ ಅಂತಾಜ್ಞೆಯನ್ನು[1] ನಡಿಸುವದೇ ತಮ್ಮ ಆನಂದಕರವಾದ ಋಣವೂ ಅಧಿಕಾರವೂ ಎಂದು, ಯಾವತ್ತೂ ಕಾಲದ ಸತ್ಕ್ರೈಸ್ತರು ನಿಶ್ಚಯ ಹಿಡು ಕೊಂಡಿರುತ್ತಿದ್ದರು. ಅದರ ಪ್ರಕಾರ ಅವರು ಅಪೊಸ್ತೊಲಿಕ ಕಾಲದಲ್ಲಿಯೂ ಅದಕ್ಕೀಚೆ ಈ ಕಾಲದ ಪರ್ಯಂತವೂ ನಡೆಯುತ್ತಾ ಬಂದರು.

ಮೊದಲಿನ ಕ್ರಿಸ್ತಶತಮಾನದ ಕಡೆಯಲ್ಲಿ ವಿಗ್ರಹಾರಾಧಕರ ಮಹಾರ್ಣವದಂತಿರುವ ಸಮೂಹದಲ್ಲಿ 5 ಲಕ್ಷ ಜನ ಕ್ರೈಸ್ತರು ಇದ್ದಿರ ಬಹುದು; ಬಳಿಕ ಅವರ ಸಂಖ್ಯೆಯು ಹೆಚ್ಚುತ್ತಲಿರುವಲ್ಲಿ ಯಾವದೊಂದು ಕಟ್ಟಾದರೂ ನದಿಯ ಪ್ರವಾಹವನ್ನು ತಡಿಯ ಕೂಡದಂತಾಯಿತು. ರೋಮೀಯ ಸಾಮ್ರಾಜ್ಯದ ಪ್ರಥಮನಾದ ಕ್ರೈಸ್ತ ಕೈಸರನಾಗಿದ್ದ ದೊಡ್ಡನೆಂಬ ಕೊನ್ಸ್ತಂತೀನನ[2] ಕೆಳಗೆ 4ನೇ ಕ್ರಿಸ್ತಶತಮಾನದಲ್ಲಿ 9 ಲಕ್ಷ ಜನ ಕ್ರೈಸ್ತರಿದ್ದ ಹಾಗೆ ಕಾಣಿಸುತ್ತದೆ. ತದನಂತರ 9ನೇ ಕ್ರಿಸ್ತಶತಮಾನದಾರಂಭದಲ್ಲಿ ದೊಡ್ಡನೆಂಬ ಕರ್ಲನ ಮೂಲಕ ರೋಮೀಯ ಕೈಸರತ್ವವು ತಿರಿಗಿ ಸ್ಥಾಪಿತವಾದಾಗ[3] ಕ್ರೈಸ್ತರೆನ್ನಿಸುವಂಥವರ ಸಂಖ್ಯೆಯು ಸುಮಾರು 3 ಕೋಟಿ. ಈ ನಮ್ಮ ಕಾಲದಲ್ಲಿ ಹೆಚ್ಚು ಕಡಿಮೆ 33,50,00,000 ಜನರಿಗೆ ಕ್ರೈಸ್ತರೆಂಬ ಹೆಸರಿದೆ.

ಅಪೊಸ್ತಲರೂ ಇವರಿಗೆ ಹೊಂದಿಕೆಯಾಗಿದ್ದ ಸೌವಾರ್ತಿಕ ಕ್ರೈಸ್ತರೂ ನಡಿಸಿದ ಸುವಾರ್ತಾಪ್ರಸಾರಣವನ್ನು ಕುರಿತು ಹಿಂದೆ ಸಂಕ್ಷೇಪವಾಗಿ ಸೂಚಿಸಿ ಅದೆ[4]; ಆ ಮೇಲೆ ಐರ್ಲಂದಿನಲ್ಲಿಯೂ ಪೂರ್ಣ ಇಂಗ್ಲಂದು ಸ್ಕೋತ್ಲಂದು ಗೆರ್ಮಾ

---

1) 26ನೇ ಪಾನು. 2) 179ನೇ ಪಾನು. 3) 320ನೇ ಪಾನು. 4) 28—59, 72—91, 180, 201, 202, 217, 227, 230ನೇ ಪಾನು.

ನಿಯಗಳಲ್ಲಿಯೂ ನೊರ್ಮನ್ನರಲ್ಲಿಯೂ ಸ್ಲಾವರಲ್ಲಿಯೂ ಕ್ರೈಸ್ತತ್ವ ನೆಟ್ಟದ್ದು ವರ್ಣಿಸಲಾಯಿತು[1]. ತದನಂತರ, ಸುಮಾರು ಕ್ರಿ. ಶ. 1000ನೇ ವರುಷ ಹಿಡಿದು, ಅಲ್ಪಸ್ವಲ್ಪ ಬಾಹ್ಯ ಸುವಾರ್ತಾವಿಸ್ತರಣವು ಮಾತ್ರ ಸಾಗುತ್ತಿದ್ದ ಕಾಲವು ಹತ್ತಿತು; ಗ್ರೀಕ ಮತೋದ್ಯೋಗಿಗಳಿಗೂ ಪಪ್ಪಕ ಮತೋದ್ಯೋಗಿಗಳಿಗೂ ಜಗಳ ನಡೆಯುತ್ತಾ, ಪಪ್ಪರೂ ಅವರ ಪಕ್ಷಾವಲಂಬಿಗಳೂ ಸೌವಾರ್ತಿಕ ಕ್ರೈಸ್ತರನ್ನು ಹಿಂಸಿಸುತ್ತಾ, ಪಪ್ಪರು ರಾಜರ ಸಂಗಡ ವ್ಯಾಜ್ಯವೆಸಗುತ್ತಾ ಇದ್ದ ಕಾಲವು ಅದೇ[2]; ಆಗ ಸುವಾರ್ತಾಪ್ರಸಾರಣದ ವಿಷಯದಲ್ಲಿ ಮಹಾಂಧಕಾರದ ಕಾಲ ಒದಗಿದ್ದಕ್ಕೆ ಅಷ್ಟೆಲ್ಲದರಿಂದ ಕಾರಣವಾಯಿತು.

16ನೇ ಕ್ರಿಸ್ತಶತಮಾನದ ಆರಂಭದಲ್ಲಿ ಸಭಾಪುನಃಸ್ಥಾಪನೆಯು ತೊಡಗುವದಕ್ಕಿಂತ ಮುಂಚೆ ಸುವಾರ್ತಾಪ್ರಸಾರಣವೃತ್ತಿಯು ಮರಳಿ ಸಲೆ ಎಸಗಲೇ ಇಲ್ಲ. ಆದರೆ ಪ್ರಥಮದಲ್ಲಿ ಪಪ್ಪಕರು ಕ್ರಿ. ಶ. 1509ನೇ ವರುಷ ಮೆಕ್ಸಿಕೋ ಮೊದಲಾದ ಅಮೆರಿಕದ ಹಲವು ದೇಶಗಳಲ್ಲಿ[3], ತಾವು ಯುರೋಪದಲ್ಲಿ ಕಳ ಕೊಂಡ ನೆಲೆಯನ್ನು ಇತರ ದಿಶೆಗಳಲ್ಲಿ ತಿರಿಗಿ ಫಳಿಸಿ ಕೊಳ್ಳುವ ಉದ್ದಿಶ್ಯ ಕ್ರಿ. ಶ. 1542ನೇ ವರುಷ ಹಿಂದು ದೇಶದಲ್ಲಿ[4], 2 ವರುಷಕ್ಕೀಚೆ ಲಂಕಾದ್ವೀಪದಲ್ಲಿ[5], ಬಳಿಕ 5 ವರುಷಕ್ಕೀಚೆ ನಿಪೊಂಜ್ ದ್ವೀಪದಲ್ಲಿ[6] ತಮ್ಮ ಮತದ ವಿಸ್ತಾರಣವನ್ನು ಬಳಿಸುವವರಾದರು. ಕ್ರಿ. ಶ. 1552ನೇ ಅಬ್ದ ಅವರು ತಾವು ಅಂದಿಗೆ 164 ವರುಷ ಮುಂಚೆ ಬಿಟ್ಟು ಬಿಟ್ಟಿದ್ದ ಚೀನ ದೇಶದಲ್ಲಿಯ ಸ್ವಮತಪ್ರಸಾರಣಕಾರ್ಯವನ್ನು[7] ತಿರಿಗಿ ಹಿಡಿದರು. ಹ್ಯಾಗಂದರೆ ಆ ಚೀನದಲ್ಲಿ ಸುಮಾರು ಕ್ರಿ. ಶ. 640ನೇ ವರುಷ ಸುತ್ತ ನೆಸ್ತೊರಿಯಾನರು[8] ಪಾರ್ಶಿಸ್ಥಾನದಲ್ಲಿಂದ ಬಂದು, ತಮ್ಮ ರೀತಿಯಿಂದ ಸುವಾರ್ತೆ ಪ್ರಸಂಗಿಸುತ್ತಾ ಬಂದಿದ್ದ ತರುವಾಯ ಕ್ರಿ. ಶ. 1294ನೇ ವರುಷದಾರಭ್ಯ ಫ್ರಂಕ್ಸಿಸ್ಕಾನ ಮಠಿಕಕುಲದವರು ಸಹ ತಾತಾರಿ ರಾಜ್ಯ[9] ದಾಟಿ, ಅಲ್ಲಿ ಶೇರಿದರು; ಆದರೆ ಅವರಿವರನ್ನು ತಾಳುತ್ತಿದ್ದ ರಾಜವಂಶಜರು ತೀರಿ, ಕ್ರಿ. ಶ. 1368ನೇ ಅಬ್ದ ಹೊಸದೊಂದು ವಂಶಕ್ಕೆ ಆಳ್ತನವು ದೊರಕಲು, ಉಭಯತರ ಸ್ವಮತಪ್ರಸಾರಣವೃತ್ತಿಯು ಮುಗಿದಿತ್ತು.—ಆಫ್ರಿಕದ ಉತ್ತರ ಭಾಗದಲ್ಲಿ ಕೂಡ ಪಪ್ಪಕರು ಧಾವತಿ ಪಟ್ಟು, ತಮ್ಮ ಮತ ಬೆಳಿಸುವವರಾಗಿದ್ದಾರೆ. ಕ್ರಿ. ಶ. 1622ನೇ ಅಬ್ದ 10ನೇ ಗ್ರೆಗೋರ ಪಪ್ಪನು ಸೌವಾರ್ತಿಕ ಸಭ್ಯರ ಎದುರಾಳಿಗಳಾಗುವದಕ್ಕೂ ಪರದೇಶಗಳಲ್ಲಿ ಪಪ್ಪಕತ್ವದ ಪ್ರಸಾರಕರಾಗುವದಕ್ಕೂ ಯೋಗ್ಯರಾದ ಜನರನ್ನು ಕಳುಹಿಸುವದಕ್ಕೋಸ್ಕರವಾಗಿ

---

1) 300—305, (305—324), 605, 606ನೇ ಪಾನು. 2) 325—342, 370—408ನೇ ಪಾನು. 3) 541, 547ನೇ ಪಾನು. 4) 533 ಆದಿ ಪಾನು. 5) 534ನೇ ಪಾನು. 6) 535ನೇ ಪಾನು. 7) 547, 548ನೇ ಪಾನು. 8) 253, 529ನೇ ಪಾನು. 9) 383ನೇ ಪಾನು.

ರೋಮದಲ್ಲಿ ಪ್ರೋಪಾಗಂದವೆಂಬ ಸಮಾಜವನ್ನು[1] ನಿರ್ಮಿಸಿದನು; ಇದಕ್ಕೆ 8ನೇ ಉರ್ಬಾನನೆಂಬ ಆ ಪಪ್ಪನು[2] ಕ್ರಿ. ಶ. 1627 ಅಬ್ದ ಅಂಥಾ ಜನರನ್ನು ತಕ್ಕ ಶಿಕ್ಷೆ ಗೊಳ್ಳಿಸುವದಕ್ಕೆ ಒಂದು ಶಾಲೆ ಕೂಡಿಸಿದನು. ಪರೀಸು ಪಟ್ಣದಲ್ಲಿ ಕೆಲವು ವರುಷದಿತ್ತ ಪರದೇಶಗಳಿಗೋಸ್ಕರವಾಗಿ ಹುಟ್ಟಿದ್ದೊಂದು ಪಪ್ಪಕಮತಪ್ರಸಾರಣಶಾಲೆಯು ಈಗ ಅದಕ್ಕಿಂತ ಪ್ರಸಿದ್ಧವಾದದ್ದು. ಕಾಲಗತಿಯಿಂದ ಕ್ರಿ. ಶ. 1822ನೇ ಅಬ್ದ ಯೇಸುವಿತರು ಲಿಯೋನೆಂಬ ಆ ಪಟ್ಣದಲ್ಲಿ[2] ಭೂಚಕ್ರದ ಮೂರ್ತಿಪೂಜಕರಲ್ಲೂ ಸೌವಾರ್ತಿಕರಲ್ಲೂ ಪಪ್ಪಕಮತಪ್ರಸಾರಣ ಮಾಡ ತಕ್ಕದೊಂದು ಸಮಾಜವನ್ನೂರಿದರು; ಇದಕ್ಕೆ ಯಾರಾದರೂ ಗೈಯುವ ಎಂಥಾದ್ದೊಂದೂ ಒತ್ತಾಸೆಯಿಂದ ಇಷ್ಟಿಷ್ಟು ಕಾಲದ ವರೆಗೆ ಪಾಪಕ್ಷಮೆ[3] ಘಳಿಸಿ ಕೊಳ್ಳುವರೆಂಬ ವಿಶೇಷವಾದ್ದೊಂದು ಪಪ್ಪಕ ಕಟ್ಟಲೆ ಉಂಟು.

ರುಸ್ಸಿಯದಲ್ಲಿ ಕ್ರಿ. ಶ. 1801ನೇ ವರುಷದಿಂದ 1825ನೇದರ ತನಕ ಆಳುತ್ತಿದ್ದ ಸದ್ಭಕ್ತನಾದ ಆ 1ನೇ ಅಲೆಕ್ಸಂದರನೆಂಬ ಕೈಸರನ[4] ಕಾಲ ಮೊದಲುಗೊಂಡು, ಗ್ರೇಕ ಸಭೆಯವರು ರುಸ್ಸ ಸಾಮ್ರಾಜ್ಯಕ್ಕೆ ಶೇರಿದ ವಿಗ್ರಹಾರಾಧಕರಲ್ಲಿಯೂ ಮೊಹಮ್ಮದಿಯರಲ್ಲಿಯೂ ತಮ್ಮ ಮತ ಕಟ್ಟಲಿಕ್ಕೆ ಪ್ರಯತ್ನಿಸುವವರಾದರು.

ಸಭಾಪುನಃಸ್ಥಾಪನೆಗೀಚೆ ಕ್ರಿ. ಶ. 1549ನೇ ವರುಷ ಸೌವಾರ್ತಿಕ ಕ್ರೈಸ್ತರ ಬಾಹ್ಯ ಸುವಾರ್ತಾಪ್ರಸಾರಣವು ತಿರಿಗಿ ಆರಂಭಿಸಿತು. ಅಂದು ಗೆನ್ಫಿನಲ್ಲಿಯ ಕಲ್ವೀನನು[5] ದಕ್ಷಿಣ ಅಮೆರಿಕದಲ್ಲಿರುವ ಬ್ರಜಿಲ್ ದೇಶದ್ದೊಂದು[6] ಪಟ್ಣವಾದ ರೀಯು ಜನೇರೋ ಎಂಬಲ್ಲಿಗೆ ಫ್ರಂಚಿನ ಪಪ್ಪಕರ ಕ್ರೂರತ್ವಕ್ಕೋಸ್ಕರ ಗುಳೆ ತೆಗೆದು ಹೋಗುವಂಥ ಹೂಗೊನೊತ್ತರ[7] ಒಂದು ಸಮೂಹದ ಸಂಗಡ ಇಬ್ಬರು ಪ್ರಸಂಗಿಕರನ್ನು ಕಳುಹಿಸಿದನು; ಇವರು ಆ ಹೂಗೊನೊತ್ತರಿಗೂ ಅಲ್ಲಿಯ ವಿಗ್ರಹಾರಾಧಕರಾದ ಇಂದಿಯಾನರಿಗೂ[8] ಸುವಾರ್ತೆ ಸಾರ ಬೇಕೆಂಬದು ಅವನ ಆಲೋಚನೆ; ಆದರೆ ಆ ಹೂಗೊನೊತ್ತರ ಮೇಲಿರುವ ನೌನಾಯಕನು ತನ್ನ ಪಪ್ಪಕ ಭಾವದಿಂದಲೂ ಇದರ ದೆಸೆಯಿಂದ ತಾನು ಗೈದ ಹಿಂಸೆಯಿಂದಲೂ ಆ ಕಾರ್ಯವನ್ನು ಸಿದ್ಧಿ ಹೊಂದಿಸದವನಾದನು. ಅದಕ್ಕೆ ಸುಮಾರು 100 ವರುಷ ಇತ್ತಲಾಗೆ ಆ ಎಲಿಯೊತನೆಂಬ ದೊಡ್ಡ ಸುವಾರ್ತಾಪ್ರಸಾರಕನ[9] ಸುದ್ದಿ ಹಬ್ಬಲೆಸಗಿದಂದು ಕ್ರಿ. ಶ. 1647ನೇ ಅಬ್ದ ಇಂಗ್ಲಂದಿನಲ್ಲಿ ಕ್ರೊಂವೆಲ ಪರಿಪಾಲಕಪ್ರಭುವಿನ[10] ಕೆಳಗೆ ಪಾರ್ಲಿಮೆಂತಿನ

---

1) ಈ ಸಮಾಜದವರು ಕ್ರಿ. ಶ. 1663ನೇ ವರ್ಷದಿಂದ 1869ನೇದರ ವರೆಗೆ 940 ಜನ ಪಪ್ಪಕಮತಪ್ರಸಾರಕರನ್ನು ಇತ್ತತ್ತ ಕಡೆಗೆ ಕಳುಹಿಸಿದರು. 2) 475, 499ನೇ ಪಾನು. 3) 620ನೇ ಪಾನು. 4) 632ನೇ ಪಾನು. 5) 438ನೇ ಪಾನು. 6) 465, 547ನೇ ಪಾನು. 7) 503ನೇ ಪಾನು. 8) 541ನೇ ಪಾನು. 9) 568, 579, 580ನೇ ಪಾನು. 10) 500, 514, 588ನೇ ಪಾನು.

ವರದೊಂದು ನಿರ್ಣಯದಿಂದ ಪರದೇಶಸುವಾರ್ತಾಪ್ರಸಾರಣಸಂಘವೆಂಬದು ಸ್ಥಾಪಿಸಲಾಯಿತು; ಆದರೂ ಕ್ರಿ. ಶ. 1701ನೇ ವರುಷಕ್ಕೆ ಮುಂಚೆ ಇದು ಶುಭಗತಿ ಪಡೆಯಲಿಲ್ಲ; ಆಗ ಆ 3ನೇ ವಿಲ್ಲಿಯಮನೆಂಬ ರಾಜನು[1] ಅದಕ್ಕೆ ಆಶ್ರಯದಾತನಾದನು. ಕ್ರಿ. ಶ. 1658ನೇ ವರುಷ ಹೊಲ್ಲಂದಿನವರು[2] ಪೊರ್ತುಗೀಸರನ್ನು ಲಂಕಾದ್ವೀಪದಿಂದ ಹೊರಡಿಸಿ, ಅಲ್ಲಿ ನೆಲೆಗೊಂಡಿದ್ದ ಪಪ್ಪಕ ಮತಕ್ಕೆದುರಾಗಿ, ಸಕಲ ಕ್ರೈಸ್ತರಿಗೂ ತಕ್ಕಂಥ ಉಪಾಯಗಳಿಂದ ವಿನಹ ವಿಶೇಷವಾಗಿ ರಾಜೋದ್ಯೋಗಗಳ ಮತ್ತು ಪ್ರಜಾಸ್ವಾತಂತ್ರ್ಯದ ಆಶೆ ತೋರಿಸುವ ರೀತಿಯಿಂದಲೂ ಆ ದ್ವೀಪಜರನ್ನು ಕ್ರೈಸ್ತ ಸ್ನಾನಕ್ಕೆ ಳೆಯುವವರಾದರು. ಹೀಗಿರಲಾಗಿ ಅನೇಕ ಮಂದಿ ಸಿಂಗಳರೆಂಬ ಬೌದ್ಧರು[3], ಹಿಂದುಮತಸ್ಥರು ಕೂಡ, ಕ್ರೈಸ್ತರೆನ್ನಿಸುವವರಾದರು; ಕ್ರಿ. ಶ. 1700ನೇ ವರುಷ ಅವರವರಲ್ಲಿ 3ಲಕ್ಷ ಮಂದಿಯಾದರೂ ಪರಿಶುದ್ಧ ಸ್ನಾನ ತಕ್ಕೊಂಡಿದ್ದರು. ಆ ಹೊಲ್ಲಂದಿನವರಲ್ಲಿಯ ಕೆಲವರು ಪ್ರಸಂಗೋದ್ಯೋಗಿಗಳು ಉತ್ತಮ ಕ್ರೈಸ್ತರಾಗಿದ್ದು, ಅಸ್ನಾತರಿಗೂ ಸ್ನಾತರಿಗೂ ತಕ್ಕ ಉಪದೇಶ ಕೊಡುತ್ತಿದ್ದದಲ್ಲದೆ ಪರಿಶುದ್ಧ ಬರಹವನ್ನು ದ್ವೀಪಸ್ಥ ಭಾಷಾಂತರ ಮಾಡಿ, ಅಲ್ಲಲ್ಲಿ ಶಾಲೆಗಳನ್ನು ಹಾಕಿ, ನಿಜ ಕ್ರೈಸ್ತತ್ವವನ್ನೂರಲಿಕ್ಕೆ ಪೇಚಾಡುತ್ತಿದ್ದರೂ ಅಧಿಕಾರಸ್ಥರು ಕ್ರೈಸ್ತತ್ವಪ್ರಸಾರಣಕ್ಕೋಸ್ಕರ ಹೆಚ್ಚಾಗಿ ಪ್ರಯೋಗಿಸುತ್ತಿರುವ ಆ ಲೌಕಿಕ ಉಪಾಯಗಳ ತುಸಕ ಅವರ ಸದಭಿಪ್ರಾಯವು ಬಹಳ ಸಾಗಲಿಲ್ಲ; ಕ್ರೈಸ್ತ ಭಕ್ತಿಯು ಹೆಚ್ಚು ಜನರ ಹೃದಯದಲ್ಲಿ ಬೇರು ಬಿಡದೆ ಹೋಯಿತು. ಇಂತಿರಲಿಕ್ಕೆ ಕ್ರಿ. ಶ. 1796ನೇ ಅಬ್ದ ಇಂಗ್ಲಿಷರು ಆ ದ್ವೀಪ ಪಡಕೊಂಡು, ಆರಂಭದಲ್ಲಿ ಜನೋಪದೇಶಕ್ಕೆ ಮನಸ್ಸು ಕೊಡದ ನಿಮಿತ್ತ ಆ ದ್ವೀಪದಲ್ಲಿ ಸೌವಾರ್ತಿಕರೆನ್ನಿಸಿದವರ ಸಂಖ್ಯೆಯು ಮಿಗೆ ಕುಂದಿ, ಬೌದ್ಧ ಮತ್ತು ಪಪ್ಪಕ ಎಂಬೆರಡು ಮತಗಳು ಮರಳಿ ಪ್ರಬಲವಾದವು. ಸರ್ವಥಾ ಸತ್ಸೌವಾರ್ತಿಕವಾದಂಥ ಸುವಾರ್ತಾಪ್ರಸಾರಣವು ಕ್ರಿ. ಶ. 1804ನೇ ವರುಷಕ್ಕೆ ಮುಂಚೆ ಲಂಕೆಯಲ್ಲಿ ತೊಡಗಲಿಲ್ಲ; ಈಗ ಅಲ್ಲಿ ಹೆಚ್ಚುಕಡಿಮೆ 16,000 ಸೌವಾರ್ತಿಕ ಕ್ರೈಸ್ತರಿದ್ದಾರೆ; ಅವರೊಳಗೆ ಬೌದ್ಧ ಮತದಲ್ಲಿ ಹುಟ್ಟಿದ ಸುಮಾರು 13,000 ಜನ ಸಿಂಗಳರೆಂಬವರು.

ಕ್ರಿ. ಶ. 1698ನೇ ಅಬ್ದ ಇಂಗ್ಲಂದಿನಲ್ಲಿ ಎಪಿಸ್ಕೊಪಾಲ ರಾಜ್ಯಸಭೆಯವರ ಹಿತಕ್ಕೂ ಅನ್ಯರಲ್ಲಿಯ ಸುವಾರ್ತಾಪ್ರಸಾರಣದ ಹಿತಕ್ಕೂ ಆ ಕ್ರೈಸ್ತಜ್ಞಾನಾಭಿವರ್ಧಕಸಮಾಜವೆಂಬದು[4] ಉದ್ಭವಿಸಿತು. ಬಳಿಕ ಕ್ರಿ. ಶ. 1700ನೇ ವರುಷ ದೇನೆಮರ್ಕಿನ ಭಕ್ತಿಯುಳ್ಳ ರಾಜನಾದ 4ನೇ ಫ್ರೀದೆರೀಕನು[5] ತನಗೆ ಹಿಂದು ದೇಶದಲ್ಲಿರುವ ಸ್ವಾಸ್ಥ್ಯಸ್ಥಳಗಳಿಗೆ ಸುವಾರ್ತಾಪ್ರಸಾರಕರಾಗಿ ಹೋಗಲಪೇಕ್ಷಿಸುವಂಥ

1) 501ನೇ ಪಾನು. 2) 540, 543, 544ನೇ ಪಾನು ಸರಿ ನೋಡು. 3) 534ನೇ ಪಾನು. 4) 630ನೇ ಪಾನು. 5) 573ನೇ ಪಾನು.

ಸತ್ಪುರುಷರನ್ನು ಹುಡುಕಲು, ಅಂಥವರು ಸ್ವರಾಜ್ಯದಲ್ಲಿ ತನಗೆ ಶಿಕ್ಕದ ಕಾರಣ ಸ್ಪೇನೆರನ ಮತ್ತು ಫ್ರಂಕೆಯ[1] ಸಹಾಯ ಬೇಡಿ ಕೊಂಡನು. ಆಗ ಫ್ರಂಕೆಯು ಅವನಿಗೆ ಬರ್ಥೊಲೊಮಾಯ ತ್ಸೀಗೆನ್ಬಲ್ಗ[2] ಮತ್ತು ಹೈನ್ರೀಕ ಪ್ಲುಯಿತ್ಶೌ ಎಂಬವರಿಬ್ಬರನ್ನು ಹಲ್ಲೆ ಪಟ್ಟದಿಂದ ಕಳುಹಿಸಿ ಕೊಟ್ಟನು. ಇವರು ಕ್ರಿ. ಶ. 1706ನೇ ಅಬ್ದ ಚೋಳಮಂಡಲದ ತರಂಗಂಬಾಡಿ ಎಂಬಲ್ಲಿ ತಮ್ಮ ವೃತ್ತಿ ನಡಿಸಲಿಕ್ಕೆ ಹತ್ತಿದರು. ತ್ಸೀಗೆನ್ಬಲ್ಗನಿಗೆ ಫ್ರಂಕೆಯಿಂದಲೂ 4ನೇ ಫ್ರೀದೆರೀಕ ರಾಜನಿಂದಲೂ ಹೊರ್ತಾಗಿ ಆ ಕ್ರೈಸ್ತಜ್ಞಾನಾಭಿವರ್ಧಕಸಮಾಜದಿಂದ ಸಹ ಬಹು ಒತ್ತಾಸೆಯಾಯಿತು. ಅವನು ದೇವವಾಕ್ಯದ ತಮಿಳ ಭಾಷಾಂತರ ಮಾಡುವವನಾಗಿ, ಕ್ರಿ. ಶ. 1711ನೇ ವರುಷಕ್ಕೆ ಹೊಸ ಒಡಂಬಡಿಕೆಯದು ತೀರಿಸಿ, 1714ನೇದಕ್ಕೊಮ್ಮೆ ಇಂಗ್ಲಂದಿನ ಮೇಲೆ ಸ್ವದೇಶಕ್ಕೆ ಹಿಂದಿರುಗುತ್ತಿರಲು, ಇಂಗ್ಲಂದಿನ 1ನೇ ಜೊರ್ಜ (ಗೆಯೊರ್ಗ) ರಾಜನು ಅವನನ್ನು ತನ್ನ ಸನ್ನಿಧಿಗೆ ಬರಿಸಿ, ಧೈರ್ಯ ಹೇಳಿದ್ದಲ್ಲದೆ ಆ ರಾಜನೂ ಕ್ರೈಸ್ತಜ್ಞಾನಾಭಿವರ್ಧಕಸಮಾಜದ ಸಂಬಂಧದಲ್ಲಿ ಕೂಡಿದ ರಾಜ್ಯಸಭಾಧ್ಯಕ್ಷರದ್ದೊಂದು ಸಮಾಗಮದವರೂ, ಪರಿಶುದ್ಧ ಬರಹವೆಲ್ಲವನ್ನೂ ತಮಿಳ ಭಾಷಾಂತರ ಗೈಯಿರೆಂತ, ಅವನಲ್ಲಿ ಕೌತುಕ ಹುಟ್ಟಿಸಿದರು. ಅದು ಕಾರಣ ಅವನು 2 ವರುಷದ ಮೇಲೆ ತರಂಗಂಬಾಡಿಗೆ ಮರಳಿದನಂತರ ಹಳೆ ಒಡಂಬಡಿಕೆಯ ಭಾಷಾಂತರಕಾರ್ಯವನ್ನು ಬಹು ಉದ್ಯಮದೊಡನೆ ನಡಿಸುವವನಾಗಿ, ರೂತಳದೆಂಬ ಚರಿತ್ರಧ ವರೆಗೆ ಬಂದಾಗ ಕ್ರಿ. ಶ. 1719ನೇ ಅಬ್ದದ ಆರಂಭದಲ್ಲಿ ತನ್ನ ಜೀವಿಕೆಯ 36ನೇ ವರುಷದಲ್ಲಿ, ನನ್ನ ಪ್ರತೀಕ್ಷೆಯು ಯೇಸುವೇ! ಎಂತ, ಕೂಗಿ, ಸತ್ತನು. ಅಲ್ಲಿಗೆ ಬಂದ ಮತ್ತೊಬ್ಬ ಸುವಾರ್ತಾಪ್ರಸಾರಕನಾದ ಷುಲ್ತ್ಸೆ ಎಂಬವನು ಕ್ರಿ. ಶ. 1727ನೇ ಅಬ್ದ ದೇವವಾಕ್ಯದಲ್ಲಿ ಉಳಿದ ಭಾಗದ ಭಾಷಾಂತರವನ್ನು ಪೂರ್ಣ ಮಾಡಿದನು. ಅದಕ್ಕೆ ಸ್ವಲ್ಪ ಈಚೆ ಫಬ್ರಿಕಿಯನೆಂಬ ಇನ್ನೊಬ್ಬನು ಹೊಸ ಒಡಂಬಡಿಕೆಯ ಆ ಭಾಷಾಂತರವನ್ನು ಅನೇಕ ಮುನಿಷಿಗಳ ಸಹಾಯದೊಡನೆ ಚೊಕ್ಕ ಗೈಯುತ್ತಿದ್ದು, ಯೋಹಾನ ಅಪೊಸ್ತಲನು ಬರೆದ 1ನೇ ಪತ್ರಿಕೆಯ 3ನೇ ಸಂಧಿಯ 1ನೇ ವಚನಕ್ಕೆ ಮುಟ್ಟಿರುವಂದು ಇವರಲ್ಲೊಬ್ಬನು ಮನಃಕುತೂಹಲ ಪಟ್ಟು—ನಾವು ದೇವರ ಮಕ್ಕಳೆನ್ನಿಸ ಬೇಕೆಂಬದು ಬಹಳ ಹೆಚ್ಚಾಯಿತಲ್ಲವೇ? ನಾವು ಪಿತನ ಪಾದಕ್ಕೆ ಚುಂಬನವಿಕ್ಕ ಬಹುದೆಂತ, ನಾನು ಬರೆಯಲೋ? ಇದಾದರೂ ಅತಿಶಯವೂ ಮಹತ್ತಮವೂ ಆದದಲ್ಲವೋ? ಎಂದು, ನುಡಿದನು. ಶೋಧನಾತೀತ ಕೃಪಾಮಯವಾದ ದೇವವಾಕ್ಯವ ಕೇಳುವೊಬ್ಬೊಬ್ಬವನ ಹೃದಯದಲ್ಲಿ ಅದು ಆ ಪ್ರಕಾರದ ಆಲೋಚನೆಗಳನ್ನು ಹುಟ್ಟಿಸುವದು ಅಗಾಧವೇ?

---

1) 67ನೇ ಸಂಧಿ. 2) 569, 574ನೇ ಪಾನು.

ಕ್ರಿ. ಶ. 1728ನೇ ವರುಷದಾರಭ್ಯ ಕ್ರೈಸ್ತಜ್ಞಾನಾಭಿವರ್ಧಕಸಮಾಜದವರು ಸ್ವಂತ ಖರ್ಚಿನ ಮೇಲೆ ಸುವಾರ್ತಾಪ್ರಸಾರಕರನ್ನು ಚನ್ನಪಟ್ಟಣಕ್ಕೆ, ತದನಂತರ ಸುಮಾರು 10 ವರುಷದಿತ್ತ ಕಡೆ ಇತರರನ್ನು ಕೂಡಲೂರಿಗೂ ನಾಗಪಟ್ಣಕ್ಕೂ ತಂಜಾವೂರಿಗೂ ತಿರುಚಿರಾಪಳ್ಳಿಗೂ (ತಿರುಚಿನಾಪಳ್ಳಿಗೂ) ಕಳುಹಿಸಿದರು. ಹಲ್ಲೆಯಿಂದ ಚೋೞಮಂಡಲಕ್ಕೆ ಆಗತರಾದ ಸುವಾರ್ತಾಪ್ರಸಾರಕರಲ್ಲಿ ಕ್ರಿ. ಶ. 1750ನೇ ವರುಷದಿಂದ 1798ನೇದರ ಮಟ್ಟಿಗೆ ಕ್ರಿಸ್ತಿಯಾನ ಫ್ರೀದೆರೀಕ ಸ್ವರ್ತ್ಸನೆಂಬವನು ಮೆರೆಯುತ್ತಿದ್ದನು; ತನ್ನ ವೃತ್ತಿಯ ಪ್ರಥಮ ವರುಷದಲ್ಲೇ 400 ಜನರಿಗೆ ಪರಿಶುದ್ಧ ಸ್ನಾನ ಕೊಡುವದು ಅವನಿಗನುಕೂಲವಾಯಿತು. 1766ನೇದರಲ್ಲಿ ಅವನು ಆ ಕ್ರೈಸ್ತಜ್ಞಾನಾಭಿವರ್ಧಕಸಮಾಜದವರ ಹೆಸರಿನಲ್ಲಿ ತಿರುನೆಲ್ವೇಲಿಯೊಳೂ ಸುವಾರ್ತೆ ಸಾರುವವನಾದನು. ಹಿಂದು ದೇಶದ ಆ ಕಡೆಯ ತೀರದವರೆಲ್ಲರೂ ಅವನಿಗೆ ಬಹಳ ಮಾನ ತೋರಿಸುತ್ತಾ, ಎಂದಾದರೂ ಅವನ ವಿಷಯ ಮಾತಾಡುವಾಗ ಒಳ್ಳೇ ತಂದೆ ಎಂಬ ಹೆಸರನ್ನೆತ್ತುತ್ತಿದ್ದರು. ಇಂಗ್ಲಿಷ ಅಧಿಕಾರಸ್ಥರು ಸಹ ಅವನಿಗೆ ಪ್ರೀತಿ ಸಲ್ಲಿಸುತ್ತಿದ್ದು, ಅವನಿಗಿರುವ ಸರ್ವಸಾಧಾರಣ ಕೀರ್ತಿಗೋಸ್ಕರ ಹೈದರ್ ಅಲ್ಲಿಯ ಸಂಗಡ ಸಮಾಧಾನ ಕಟ್ಟುವದಕ್ಕೆ ಯೋಗ್ಯನು ಅವನೇ! ಎಂದು, ಕ್ರಿ. ಶ. 1779ನೇ ಅಬ್ದ ಶ್ರೀರಂಗಪಟ್ಣಕ್ಕೆ ಇವನ ಹತ್ತರ ಅವನನ್ನು ಪ್ರೇಷಿಸಿದರು. ಆ ನಬಾಬನು ಅವನೊಡನೆ ಸಂಭಾಷಣೆ ತೀರಿಸಿ, ಸಾಗ ಕಳುಹಿಸುವಂದು ರೂಪಾಯಿ ತುಂಬಿದ್ದೊಂದು ಚೀಲವನ್ನು, ಉಚಿತವೆಂತ, ಅವನ ಕೈಯಲ್ಲಿ ಕೊಟ್ಟನು. ಸ್ವರ್ತ್ಸನು ಅದನ್ನಿಟ್ಟು ಕೊಳ್ಳದೆ, ಚನ್ನಪಟ್ಣದ ಅಧಿಪತಿಯಾದ ರಂಬೋಲ್ಡನಿಗೆ ಒಪ್ಪಿಸಲು, ಇವನು—ಅದು, ನಿಮ್ಮ ಕಷ್ಟಕ್ಕೆ ತಕ್ಕ ಪ್ರತಿಫಲವೆಂತ, ಕೈಕೊಳ್ಳಿರೆಂದು, ಬೆಸಸಲಾಗಿ, ಸ್ವರ್ತ್ಸನು ಅದನ್ನು ತಂಜಾವೂರಿನಲ್ಲಿಯದೊಂದು ಶಾಲೆಯ ಆಧಾರಕ್ಕೂ ಹಿಂದುಜರಾದ ಕ್ರೈಸ್ತ ಉಪದೇಶಕರ ಮತ್ತು ಅನಾಥರ ಪೋಷಣಕ್ಕೂ ತಾಗಿಸಿದನು. ತರುವಾಯ ಹೈದರನು ಚನ್ನಪಟ್ಣದ ಆಗಿನ ಅಧಿಪತಿಯ ಮೇಲೆ ಹ್ಯಾಗೂ ಭರವಸ ಹಿಡಿಯ ಕೂಡದೆ, 1 ಲಕ್ಷ ಜನರಿರುವ ದಂಡಿನ ಸಹಿತ ಚೋೞಮಂಡಲ ಶೇರಿರುವ ಕರ್ಣಾಟಕ ಶೀಮೆಯ ಒಳ ಹೊಕ್ಕು, ಹೇರಳ ಹಾನಿ ಗೈಯುವಲ್ಲಿ ತನ್ನ ಸೇನೋದ್ಯೋಗಿಗಳಿಗೆ—ಸ್ವರ್ತ್ಸ ತಂದೆಯನ್ನು ಉಪದ್ರವ ಪಡಿಸದೆ, ಇತ್ತತ್ತ ಯಥೇಷ್ಟ ನಡೆದಾಡ ಗೊಡಿರಿ! ಯಾಕಂದರೆ ಅವನು ಸತ್ಪುರುಷನು, ನಮ್ಮ ಹಿತ ಬಯಸುವಂಥವನು ಎಂದು, ನಿರ್ದೇಶಿಸಿದನು. ಆ ಸಮಯ ಕಾವೇರಿ ಹೊಳೆಯ ದಂಡೆಯಲ್ಲಿರುವ ಇಂಗ್ಲಿಷ ಸೇನೆಯನ್ನು ಮಹಾ ಬರವು ಕಾಡಿಸುತ್ತಿರಲು, ಸ್ವರ್ತ್ಸನೊಬ್ಬನೇ ಅದನ್ನು ನಿವೃತ್ತಿ ಮಾಡ ಬಲ್ಲನು; ಹ್ಯಾಗಂದರೆ ಒಕ್ಕಲಿಗರು ಇಂಗ್ಲಿಷ ರಾಜೋದ್ಯೋಗಿಗಳ ಬೇಡುವಿಕೆ ಬೆದರಿಸುವಿಕೆಗಳೆರಡನ್ನು ಎಂತೂ ಚಿಂತಿಸದೆ, ಆಹಾರ ತಾರದೆ

ಇರಲು, ತಮ್ಮ ಪ್ರಾಣಗೆಳೆಯನಾದ ಸ್ವರ್ತ್ಸ್‌ನ ಮಾತಿನ ಮೇಲೆ ಆ ಸೇನೆಗೆ ಬೇಕಾದ ಸಾಮಗ್ರಿಯನ್ನು ಸಂತೋಷದಿಂದ ತೆಕ್ಕೊಂಡು ಬಂದರು. ಕ್ರಿ. ಶ. 1787ನೇ ವರುಷ ತಂಜಾವೂರಿನ ತುಳಸೀ ರಾಜನು ಸಾಯುವ ಹಾಗಾದ ಹೊತ್ತು ಈ ರಾಜನು ಸ್ವರ್ತ್ಸ್‌ನನ್ನು ಕರಿಸಿ, ತಾನು, ಕುಮಾರನೆಂತ, ಸ್ವೀಕರಿಸಿದ್ದ 10 ವರುಷದ ಹುಡುಗನನ್ನು ಅವನ ಮುಂದಿಡಿಸಿ—ಇವನು ನನ್ನ ಮಗನಲ್ಲ, ನಿಮ್ಮವನೇ! ನೀವು ಅವನ ಪರಿಪಾಲಕನಾಗ ಬೇಕೆಂತ, ಬಿನ್ನವಿಸಲು, ಸ್ವರ್ತ್ಸ್‌ನು—ಅವನು ದೇವರ ಕುಮಾರರಲ್ಲೊಬ್ಬನಾಗಲಿ! ಎಂಬದೇ ನನ್ನ ಪ್ರಾರ್ಥನೆ ಎಂದು, ಉತ್ತರ ಕೊಟ್ಟು, ಕಾಲಗತಿಯಲ್ಲಿ ಒಬ್ಬ ತಂದೆಯೆಂಬಂತೆ ಸೆರ್ಫೂಜೀ ಎಂಬ ಆ ಯೌವನಸ್ಥನನ್ನು ಸಾಕುತ್ತಾ ಬಂದನು. ಈ ಶ್ರೀಮಂತನು ಚಿಚ್ಛಕ್ತಿ ಸಾಲದೆ ಕ್ರೈಸ್ತನಾಗದಿದ್ದರೂ ತನ್ನ ಸಾಕುತಂದೆಯಾದ ಸ್ವರ್ತ್ಸ್‌ನು ಕೊಟ್ಟ ಜ್ಞಾನೋಪದೇಶವನ್ನು ತನ್ನ ಜೀವಾಂತದ ತನಕ ಕಣ್ಣೀರೊಡನೆ ಸ್ಮರಿಸುತ್ತಿದ್ದನು. ಸ್ವರ್ತ್ಸ್‌ನು ತಮಿಳ ದೇಶದಲ್ಲಿ ಕ್ರಿ. ಶ. 1798ನೇದರ ವರೆಗೆ 49 ವರುಷ ಕ್ರಿಸ್ತನಾಥನ ಮಹಿಮೆಗಾಗಿ ಮಿಗು ಆಶೀರ್ವಾದಕರ ಪ್ರವೃತ್ತಿ ನಡಿಸಿ, ಸುಮಾರು 10,000 ಜನ ವಿಗ್ರಹಾರಾಧಕರು ನಿಜ ದೇವರ ಭಕ್ತರಾದದಕ್ಕೆ ಮುಖ್ಯ ಕಾರಣನಾದನಂತರ ತನ್ನ 71ನೇ ವಯಸ್ಸಿನಲ್ಲಿ—ಲೋಕವು ಮನಸ್ಸು ಬಂದಂತೆ ಸ್ತೋತ್ರ ಮಾಡಿದರೇನು? ನನ್ನ ಸ್ತೋತ್ರವು ಯೆಹೋವನೇ! ಆತನೊಬ್ಬನಿಂದಲೇ ನನ್ನ ಮೋಕ್ಷವು ಬರುವದೆಂದು, ಒಮ್ಮೆ ಬರೆದು, ಬಳಿಕ ದೇಹದಲ್ಲಿ ಬಲಹೀನನಾಗಿ, ಮಲಗಿರಲು, ಒಬ್ಬ ಸ್ನೇಹಿತನು—ಹಿಂದು ದೇಶದಲ್ಲಿ ದೇವರ ರಾಜ್ಯವು ಇನ್ನು ಮುಂದೆಯೂ ವಿಸ್ತರಿಸುವದೆಂದು, ನಂಬುತ್ತೀರೋ? ಎಂತ, ಕೇಳಿದ್ದಕ್ಕೆ—ಹೌದು, ಆದಾಗ್ಯೂ ಅನೇಕ ಕಷ್ಟ ತಾಪಗಳ ಮಾರ್ಗದಲ್ಲಿಯೇ! ಎಂತ, ಹೇಳಿದನು. ಆ 1798ನೇ ವರುಷದ 2ನೇ ತಿಂಗಳಲ್ಲಿ ಅವನು ಸಂಕಟವೇನೂ ಇಲ್ಲದೆ ಸ್ವರ್ಗವನ್ನೈದಿದಾಗ ಅವನ ಶವವನ್ನು ತಂಜಾವೂರಿನ ದೇವಾಲಯದೊಳಗೆ ಹುಗಿಯುವೆಡೆ ಸೆರ್ಫೂಜೀಯು ಬಿಳುಗಲ್ಲಿನದೊಂದು ಚಲೋ ಗೋರಿ ಕಟ್ಟಿಸಿದನು.

ತನ್ಮಧ್ಯ ಕ್ರಿ. ಶ. 1769ನೇ ಅಬ್ದ ಇಂಗ್ಲಂದಿನಲ್ಲಿ ವೆಸ್ಲಿಯು ಇನ್ನು ಜೀವದಿಂದಿರುವ ಕಾಲಕ್ಕೆ ಮೆಥೊದಿಸ್ತರ ಬಾಹ್ಯ ಸುವಾರ್ತಾಪ್ರಸಾರಣವೃತ್ತಿಯು ತೊಡಗಿತ್ತು[1]; ಬಳಿಕ ಕ್ರಿ. ಶ. 1792ನೇ ಅಬ್ದಕ್ಕೆ ಅಲ್ಲಿ ಬಪ್ತಿಸ್ತರ[2] ಸುವಾರ್ತಾಪ್ರಸಾರಣ ಸಂಘವೂ 1795ನೇದಕ್ಕೆ ಲೊಂದನಿನದೂ ಉದ್ಭವಿಸಿದ್ದವು. ಕ್ರಿ. ಶ. 1799ನೇ ಅಬ್ದ ಇಂಗ್ಲಂದಿನ ರಾಜ್ಯಸಭ್ಯರಲ್ಲಿಯ ಅಧಃಸ್ಥಾನದವರಿಂದ[3] ಎಪಿಸ್ಕೊಪಾಲ ರಾಜ್ಯಸಭಾಸುವಾರ್ತಾಪ್ರಸಾರಣಸಂಘವು ಹುಟ್ಟಿತು; ಅದಕ್ಕೀಚೆ ಆ ಪರದೇಶಸುವಾರ್ತಾಪ್ರಸಾರಣಸಂಘವೆಂಬದು[4] ಮುಖ್ಯವಾಗಿ ಉಚ್ಚಸ್ಥಾನದ ರಾಜ್ಯಸಭ್ಯ

1) 602ನೇ ಪಾನು. 2) 584ನೇ ಪಾನು. 3) 482ನೇ ಪಾನು. 4) 644ನೇ ಪಾನು.

ರ ಕೈಯಲ್ಲಿ ಬಂದುಳಿಯಿತು. ಕ್ರಿ. ಶ. 1800ನೇ ಅಬ್ದ ಬೆರ್ಲೀನು ಪಟ್ಣದೊಳಗಣ ಆ ಬೋೕಯಿಮು ಸಭೆಯ[1] ಒಬ್ಬ ಭಕ್ತಿವಂತ ಪ್ರಸಂಗೋದ್ಯೋಗಿಯಾದ ಯೇನಿಕೆ ಎಂಬವನು ಆ ಪಟ್ಣದಲ್ಲಿ ಒಂದು ಸುವಾರ್ತಾಪ್ರಸಾರಣಶಾಲೆಯನ್ನು ಸ್ಥಾಪಿಸಿ, ತನ್ನ ಶಿಕ್ಷಿತರಾದವರನ್ನು ಇಂಗ್ಲಿಷ ಮುಂತಾದ ಸಂಘಗಳವರ ಸಂಬಂಧದಲ್ಲಿಡುತ್ತಾ ಬಂದನು. ಎಪಿಸ್ಕೊಪಾಲ ರಾಜ್ಯಸಭಾಸುವಾರ್ತಾಪ್ರಸಾರಣಸಂಘದವರು ಕ್ರಿ. ಶ. 1820ನೇ ವರ್ಷಕ್ಕೆ ಕರ್ಲ ರೇನಿಯನೆಂಬ ಪ್ರಸಂಗೋದ್ಯೋಗಿಯನ್ನು ತಿರುನೆಲ್ವೇಲಿಗೆ[2] ಕಳುಹಿಸಿದರು. ಇವನು ಪ್ರುಸ್ಸಿಯ ದೇಶದ ಕಾಲ್ಬಲದಲ್ಲಿ ಉದ್ಯೋಗಿಯಾದವನೊಬ್ಬನ ಮಗನು. ಅವನು ಯೌವನಕಾಲದಲ್ಲಿ ಕ್ರಿಸ್ತನಿಗೆ ತನ್ನ ಸಂಪೂರ್ಣ ಹೃದಯವನ್ನೊಪ್ಪಿಸಿತ್ತು, ಕೆಲವು ಸುವಾರ್ತಾಪ್ರಸಾರಣಪತ್ರಗಳನ್ನು ಕಂಡೋದಿದಾಗ ಕ್ರಿಸ್ತನು ತನಗೆ ಕೊಟ್ಟ ಆನಂದಮಯ ಸಮಾಧಾನವನ್ನು ವಿಗ್ರಹಾರಾಧಕರಿಗೆ ತಾನು ಹೋಗಿ ದೊರಕಿಸುವದಕ್ಕೆ ತಾನು ಋಣಿ, ಏನೋ? ಎಂಬ ಆಲೋಚನೆಯು ಅವನಿಗೆ ಹಿಡಿದ್ದು ತಿರಿಗಿ ಬಿಡಲೇ ಇಲ್ಲ; ಹೀಗಿರಲಾಗಿ ಅವನು ಬೆರ್ಲೀನಿನ ಆ ಸುವಾರ್ತಾಪ್ರಸಾರಣಶಾಲೆಯಲ್ಲಿ ಶೇರಿದನು. ಅವನು, ಹಿಂದೆ ಹೇಳಿದಂತೆ, ತಿರುನೆಲ್ವೇಲಿ ನಾಡಿಗೆ ಕಳುಹಿಸಿ ಕೊಂಡು ಬಂದು, ಅಲ್ಲಿಯ ಪಾಳೆಯಂಕೋಟೆಯಲ್ಲಿ ಸುಮಾರು 3000 ಜನರಾದ ದೇಶಜ ಕ್ರೈಸ್ತರಿದ್ದದ್ದು ನೋಡಿ, ಅವರನ್ನು ಬಹು ಜೋಕೆಯಿಂದ ಪರಿಪಾಲಿಸುವವನಾಗಿ, ಚಾಣಾರೆಂಬ[3] ಕಳ್ಳು ಮಾಡುವಂಥವರಾದ ವಿಗ್ರಹಾರಾಧಕರಲ್ಲಿ ಪ್ರಸಂಗಿಸಲಿಕ್ಕೆ ಹತ್ತುತ್ತಲೇ ಇವರಲ್ಲಿ ಸಾವಿರಾರು ಜನರು ಬಂದು, ಕ್ರೈಸ್ತ ಉಪದೇಶ ಕೇಳಿ ಕೊಂಡರು. ಕಾಲ ಹೋಗುತ್ತಿರಲು, ಆ ಪರದೇಶಸುವಾರ್ತಾಪ್ರಸಾರಣಸಂಘದವರು ಕ್ರೈಸ್ತಜ್ಞಾನಾಭಿವರ್ಧಕಸಂಘದವರಿಗಿದ್ದ[4] ಕ್ಷೇತ್ರಗಳನ್ನು ವಹಿಸಿ ಕೊಂಡರು. ಕ್ರಿ. ಶ. 1797ನೇ ವರುಷದಾರಭ್ಯ ಹಲ್ಲೆ ಪಟ್ಣದಿಂದ ಸುವಾರ್ತಾಪ್ರಸಾರಕರು ಬರೋಣವು ನಿಂತು ಹೋದನಂತರ ಬದಲಿಗಾಗಿ ಅಂಥವರು ಕ್ರಿ. ಶ. 1836ನೇ ಅಬ್ದ ಸುತ್ತ ಮೊದಲು ದ್ರೇಸ್ದೆನು ಪಟ್ಣದ[5] ಸುವಾರ್ತಾಪ್ರಸಾರಣಸಂಘದಲ್ಲಿಂದ, ಆ ಮೇಲೆ 1848ನೇದು ಸುತ್ತ ಲೈಪ್ಸಿಗು ಪಟ್ಣದದರಲ್ಲಿಂದ[6] ಚನ್ನಪಟ್ಟಣ ತರಂಗಂಬಾಡಿ ಮುಂತಾದ ತಮಿಳ ಸ್ಥಳಗಳಿಗೆ ಆಗತರಾಗುತ್ತಿದ್ದರು; ಇವರ ಕ್ರೈಸ್ತ ಪರಿಪಾಲನದೊಳಗೆ ಈಗ ಸುಮಾರು 8,500 ಪ್ರಾಣಿಗಳಿದ್ದಾರೆ.

ಬಂಗಾಳದ ಕಲಿಕಾತೆಯಲ್ಲಿದ್ದ ಪ್ರಥಮನಾದ ಸುವಾರ್ತಾಪ್ರಸಾರಕನು ಕೀರ್ನಂದೆರನೆಂಬವನು; ಅವನು ಸ್ವೇದೆನಿನಲ್ಲಿ ಹುಟ್ಟಿ, ಹಲ್ಲೆಯಿಂದ ಚೋಳಮಂಡಲದ

1) 577ನೇ ಪಾನು. 2) 646ನೇ ಪಾನು. 3) Nom. Sing. ಚಾಣಾನ್. 4) 646ನೇ ಪಾನು. 5) 561, 570, 572, 574ನೇ ಪಾನು. 6) 555, 560, 561ನೇ ಪಾನು.

ಕೂಡಲೂರಿಗೆ ಬಂದು, ಅಲ್ಲಿ 18 ವರುಷ ಪ್ರಸಂಗಿಸುತ್ತಿದ್ದು, ಕ್ರಿ. ಶ. 1758ನೇ ಅಬ್ದ ಬಂಗಾಳಕ್ಕೆ ಐದಿದನು; ಕ್ಲೈವನೆಂಬ ಪ್ರಭುವು ಅವನನ್ನು ಸಂತೋಷದಿಂದ ಅಂಗೀಕರಿಸಿದನು. ಮುಂಚೆ ಪಪ್ಪಕ ಮತದ ಪೊರ್ತುಗೀಸರೊಬ್ಬರೇ ಅಲ್ಲಿ ತಮ್ಮ ಕೆಲಸ ಗೈಯುತ್ತಾ ಬಂದಿದ್ದರು. ಕ್ರಿ. ಶ. 1759ನೇ ವರುಷ ಕೀರ್ನಂದೆರನು ಒಬ್ಬ ಐಶ್ವರ್ಯವುಳ್ಳ ಮುನಿಷಿಯಾದ ಬ್ರಾಹ್ಮಣನಿಗೆ ಕ್ರೈಸ್ತ ಸ್ನಾನ ಕೊಟ್ಟನು; ಇವನ ಹೆಸರು ಗಣೇಶದಾಸನೆಂತ. ಬಳಿಕ ಕೀರ್ನಂದೆರನಿಗೆ ಅತ್ತಲಾಗಿನ ಪಪ್ಪಕರಲ್ಲಿಯೂ ಚೀನಿ ಜನರಲ್ಲಿಯೂ ಯೆಹೂದ್ಯರಲ್ಲಿಯೂ ಹಿಂದು ಜನರಲ್ಲಿಯೂ ಇರುವ ಸೌವಾರ್ತಿಕ ವೃತ್ತಿಯಲ್ಲಿ ಬೆಂತೊ ಪಾದ್ರಿಯು ಅವನ ಸಹಾಯಕನಾದನು. ಇವನು ಮೊದಲು ಪಪ್ಪಕಮತಪ್ರಸಾರಕನಾಗಿದ್ದು, ಬಳಿಕ ಕೀರ್ನಂದೆರನ ಮೂಲಕ ಸೌವಾರ್ತಿಕ ಕ್ರೈಸ್ತನಾದಂಥವನು. ಕ್ರಿ. ಶ. 1761ನೇ ವರುಷ ಕೀರ್ನಂದೆರನು ಒಬ್ಬ ಧನಿಕಳಾದ ವಿಧವೆಯನ್ನು ಮದಿವೆ ಮಾಡಿ ಕೊಂಡದರಿಂದ ತನಗೆ ಪ್ರಾಪ್ತವಾದ ಬದುಕನ್ನು ಒಂದು ದೊಡ್ಡ ದೇವಾಲಯ ಕಟ್ಟಿ ಶಾಲೆಗಳನ್ನಿಡುವ ಮಾರ್ಗವಾಗಿ ತನ್ನ ಕ್ರಿಸ್ತಕರ್ತನ ಸೇವೆಯಲ್ಲಿ ವೆಚ್ಚ ಮಾಡಿದನು.—ಕ್ರಿ. ಶ. 1793ನೇ ವರುಷ ವಿಲ್ಲಿಯಮ್ ಕೇರಿ ಎಂಬವನು ಬಂಗಾಳಕ್ಕೆ ಬಂದನು. ಅವನು ಕ್ರಿ. ಶ. 1761ನೇದಕ್ಕೆ ಇಂಗ್ಲಂದಿನಲ್ಲಿ ಒಬ್ಬ ಬಡ ಪಂತೋಜಿಗೆ ಹುಟ್ಟಿ, ಮೊಚ್ಚೇ ಕೆಲಸದವನಾಗಿರುವಾಗ ತನಗೆ ಶಿಕ್ಕುವ ಯಾವತ್ತೂ ಗ್ರಂಥಗಳನ್ನು ಓದುತ್ತಾ, ತನ್ನಷ್ಟಕ್ಕೆ ಲತೀನ ಮತ್ತು ಗ್ರೇಕ ಭಾಷೆಗಳ ಸ್ವಲ್ಪಾಂಶವನ್ನು ಕಲಿಯುತ್ತಾ ಇದ್ದದ್ದಲ್ಲದೆ ಕ್ರಿಸ್ತನ ನಿಜ ಭಕ್ತನಾದನು. ಆತ್ಮರಕ್ಷಣಕ್ಕೆ ನೀರಡಿಸುವಂಥ ಬೇರೊಬ್ಬರಿಗಿಂತ ಹೆಚ್ಚು ಜ್ಞಾನವು ಅವನಲ್ಲಿ ಕಾಣುವ ಕಾರಣ ದಿಸ್ಸೆಂತೆರರದೊಂದು ಸಭೆಯು ಅವನನ್ನು, ತನ್ನ ಪ್ರಸಂಗಿಕನೆಂತ[1], ಆರಿಸಿ ಕೊಂಡಿತು. ಅವನು ಆಗ 18 ವರುಷದವನು ಮಾತ್ರ. ಕ್ರಿ. ಶ. 1783ನೇ ಅಬ್ದ ಅವನು ಬಪ್ತಿಸ್ತನಾಗಿ, ಎರವಿಗೆ ತೆಕ್ಕೊಂಡ ಗ್ರಂಥಗಳನ್ನು ಎಂದಿನಂತೆ ಜಾಗ್ರತೆಯಿಂದ ಅಭ್ಯಾಸಿಸುತ್ತಾ ಬರಲಾಗಿ, ಕೂಕನೆಂಬ ಪ್ರಸಿದ್ಧನಾದ ಇಂಗ್ಲಿಷ ನೌನಾಯಕನು ಆ ಕಾಲಕ್ಕೆ ಸ್ವಲ್ಪ ಮುಂಚೆ (ಕ್ರಿ. ಶ. 1768ನೇ ವರುಷಕ್ಕೂ 1779ನೇದಕ್ಕೂ ನಡುವೆ) 3 ಆವರ್ತಿ ಭೂಗೋಳ ಸುತ್ತಿ ಕಂಡ ಬೇರೆ ಬೇರೆ ದ್ವೀಪಗಳನ್ನು ವರ್ಣಿಸುವದೊಂದು ಗ್ರಂಥವನ್ನು ಸಹ ಓದಿ, ಅದರ ಮೇಲೆ ಆಯಾ ದ್ವೀಪಗಳಲ್ಲಿಯ ವಿಗ್ರಹಾರಾಧಕರ ಕೃಚ್ಛ್ರಸ್ಥಿತಿಯನ್ನು ತಿಳಿದು, ಬಹಳ ಮನನೊಂದನು. ಹೀಗಿರಲಾಗಿ ಅವನು ತನ್ನ ಮೊಚ್ಚೆಕೆಲಸದ ಕೋಣೆಯೊಳಗೆ ತೂಗ ಹಾಕಿರುವದೊಂದು ಭೂನಕ್ಷೇ ಪಟದಲ್ಲಿ ಅವನ ಕಣ್ಣುದೃಷ್ಟಿಯು ಬೀಳುವಂದಂದು ಒಮ್ಮೆ ಈ ಜನಾಂಗಕ್ಕೋಸ್ಕರ ಒಮ್ಮೆ ಆ ಜನಾಂಗಕ್ಕೋಸ್ಕರ ದೇವರಿ

1) 602ನೇ ಪಾನು ಸರಿ ನೋಡು.

ಗೆ ಪ್ರಾರ್ಥಿಸುವನು. ಕ್ರಿ. ಶ. 1789ನೇ ಅಬ್ದ ಅವನಿಗೆ ತಕ್ಕ ಲಾಭವುಳ್ಳದೊಂದು ಉದ್ಯೋಗ ಪ್ರಾಪಿಸಿದ ನಿಮಿತ್ತ ಅವನು ತನ್ನ ಕೈಕೆಲಸ ಬಿಟ್ಟು ಬಿಟ್ಟು, ಪಟ್ಣ ಊರುಗಳನ್ನು ತಿರುಗುತ್ತಾ ಸುವಾರ್ತೆ ಸಾರಲೆಸಗಿದನು. ಇಂಥಾ ಪ್ರಯಾಣಗಳಲ್ಲಿ ಜನರ ಮನಸ್ಸಿನೊಳಗೆ ಬಾಹ್ಯ ಸುವಾರ್ತಾಪ್ರಸಾರಣದ ಪ್ರೀತಿ ಹುಟ್ಟಿಸುವದೇ ಅವನ ಮುಖ್ಯ ಪ್ರಯತ್ನವು. ಕ್ರಿ. ಶ. 1792ನೇದರ ಮೇ ತಿಂಗಳಲ್ಲಿ ಅವನು ಬಪ್ತಿಸ್ತರಾದ ಸಭೋದ್ಯೋಗಿಗಳ ಮುಂದೆ ಒಂದು ವಾಗ್ನಿರೂಪಣ ಕೊಡುವಲ್ಲಿ ಪ್ರವಾದಿಯಾದ ಯೆಶಾಯನ ಗ್ರಂಥದ 54ನೇ ಸಂಧಿಯ 2 ಮೊದಲಾದ ವಚನಗಳನ್ನು ವಿಷಯ ಮಾಡಿ—ನಾವು ದೇವರಲ್ಲಿಂದ ಮಹತ್ಕಾರ್ಯಗಳ ದಾರಿ ನೋಡ ಬೇಕು, ಇದಲ್ಲದೆ ದೇವರಿಗಾಗಿ ಮಹತ್ಕಾರ್ಯಗಳನ್ನು ವಹಿಸಿ ಕೊಳ್ಳ ಬೇಕು ಎಂತ, ಹೇಳುವ ಈ ಎರಡು ತಾತ್ಪರ್ಯಗಳನ್ನು ಕೇಳುವವರ ಹೃದಯದೊಳಗೆ ಹೊಗಿಸ ಪ್ರಯತ್ನಿಸಿದನು. ಆ ಹೊತ್ತು ಸಕಲರಲ್ಲಿ ಹುಟ್ಟಿದ ಕುತೂಹಲದ ಮೂಲಕ ಅದೇ ವರುಷದ ಒಕ್ತೋಬರ್ ತಿಂಗಳಲ್ಲಿ ಬಪ್ತಿಸ್ತರ ಆ ಸುವಾರ್ತಾಪ್ರಸಾರಣಸಂಘವು[1] ಸ್ಥಾಪನೆಯಾಯಿತು. ಮರುವರುಷ ಕೇರಿಯು ಅದರ ಸಂಬಂಧಿಯಾದ ಪ್ರಥಮ ಸುವಾರ್ತಾಪ್ರಸಾರಕನಾಗಿ ಬಂಗಾಳಕ್ಕೆ ಗಮಿಸಿದನು. ಆರಂಭಕ್ಕೆ ಇಂಗ್ಲಂದಿನ ಕ್ರೈಸ್ತರು ಬಾಹ್ಯ ಸುವಾರ್ತಾಪ್ರಸಾರಣದ ತುಸಕ ಸ್ವಲ್ಪ ಹಣ ಮಾತ್ರ ಕೂಡಿಸಿ ಕಳುಹಿಸುವದರಿಂದ ಕೇರಿಯು ತನ್ನ ಕುಟುಂಬದ ರಕ್ಷಣಕ್ಕಾಗಿ ಹಲವು ಕಾಲ ನೀಲಿಯ ಗೈಮೆಯಾದರೂ ನಡಿಸ ಬೇಕಾಯಿತು. ಹೀಗೆ ಅವನು 5 ವರುಷ ಕಳೆಯುವಷ್ಟರಲ್ಲಿ ಬಂಗಾಳಿ ಭಾಷೆಯಿಂದ ಕ್ರಿಸ್ತನಲ್ಲಿಯ ಮೋಕ್ಷ ಸಾರುತ್ತಾ, ಹೊಸ ಒಡಂಬಡಿಕೆಯ ಭಾಷಾಂತರ ಮಾಡುತ್ತಾ ಇದ್ದನು. ಆ ತರುವಾಯ ಜೊಷೂವ ಮರ್ಷ್ಮನ ಮತ್ತು ವಿಲ್ಲಿಯಮ್ ವೊರ್ದ ಎಂಬವರಿಬ್ಬರು ಸಹಾಯಕರು ಇಂಗ್ಲಂದಿನಿಂದ ಬಂದರು. ಇವರಿಗೆ ಕುಂಪಣೀ ಅಧಿಕಾರಸ್ಥರ ಸ್ವಾಸ್ಥ್ಯಗಳಲ್ಲಿ ಉಳುಕೊಳ್ಳಲಿಕ್ಕೆ ಅಪ್ಪಣೆಯಾಗದ ಕಾರಣ ಅವರು ದೇನರಿಗೆ ಅಂದು ಕಲಿಕಾತೆಯ ಹತ್ತರ ಇರುವದೊಂದು ಸ್ವಾಸ್ಥ್ಯಸ್ಥಳವಾದ ಶ್ರೀರಾಮಪುರಕ್ಕೆ ಹೋದರು; ಕ್ರಿ. ಶ. 1800ನೇ ವರುಷ ಕೇರಿಯು ಸಹ ಅಲ್ಲಿಗೆ ಬಂದು, ಅವರನ್ನು ಶೇರಿ ಕೊಂಡನು. ಬಳಿಕ ಅವನು ಮುಂಚಿನಂತೆ ದೇವವಾಗ್ಭಾಷಾಂತರವನ್ನು ಮನಸ್ಸಿಟ್ಟು ಸಾಗಿಸುತ್ತಾ ಇರಲು, ಮರುವರುಷ ಹೊಸ ಒಡಂಬಡಿಕೆಯನ್ನು ಬಂಗಾಳಿಯಲ್ಲಿ ಛಾಪಿಸ ಕೂಡಿತು; ಬಹು ಕಾಲ ಕಳೆಯದೆ, ಆ ಭಾಷೆಯ ಹಳೇ ಒಡಂಬಡಿಕೆಯೂ ಮುಗಿಯಿತು. ತದನಂತರ ಕೇರಿಯು ಹೊಸ ಒಡಂಬಡಿಕೆಯ ಸಂಸ್ಕೃತ ಭಾಷಾಂತರವನ್ನು ಕೂಡ ಗೈದನು. ಅವನು ನಾನಾ ಭಾಷೆಗಳ ಪರಿಜ್ಞಾನದಿಂದ ಕೀರ್ತಿ ಗೊಂಡಿರಲಿಕ್ಕೆ, ವೆಲ್ಲೆಸ್ಲಿ

1) 647ನೇ ಪಾನು.

ಪ್ರಭುವು ಕ್ರಿ. ಶ. 1801ನೇ ವರುಷ ಅವನನ್ನು, ಫೋರ್ಟ್ ವಿಲ್ಲಿಯಮ್ ಎಂಬ ಕೋಟೆಯೊಳಗಿನ ವಿದ್ಯಾಶಾಲೆಯಲ್ಲಿ ಮಹಾ ಪಂಡಿತರಲ್ಲೊಬ್ಬನೆಂತ, ನೇಮಿಸಿದನು. ಈ ಶಾಲೆಯು ಯುರೋಪೀಯರಿಗಾಗಿ ಸ್ಥಾಪಿಸಿತ್ತು; ಅದರಲ್ಲಿ ಅವರು ಒಳ್ಳೇ ಉದ್ಯೋಗಿಗಳು ಆಗುವದಕ್ಕೋಸ್ಕರ ಹಿಂದು ದೇಶದ ಭಾಷೆ ಮೊದಲಾದ್ದನ್ನು ಕಲಿಯ ಬೇಕು. ಅಷ್ಟರಲ್ಲಿ ಮರ್ಷ್ಮನನು ಇಟ್ಟ ಯುರೋಪೀಯರ ಮಕ್ಕಳಿಗೆ ಪೋಷಣ ವಿದ್ಯೆಗಳೆರಡೂ ಆಗುತ್ತಿರುವ ಒಂದು ಶಾಲೆಯಿಂದ ಅನೇಕ ಲಾಭವಾಗುತ್ತಿತ್ತು; ವೊರ್ಡನು ಮೂವರಾದ ತಮಗಿರುವ ಮುದ್ರಾಶಾಲೆ ನೋಡುವವನಾಗಿರುವೆಡೆ ಸಹ ಧನಸಂಪತ್ತಿಗೆ ಕಡಿಮೆ ಬೀಳಲಿಲ್ಲ. ಹೀಗಾದರೂ ಆ ಮೂವರು ಸುವಾರ್ತಾಪ್ರಸಾರಕರು ತಮ್ಮ ಹೊಟ್ಟೆ ಬಾಯಿಗಳು ಕಟ್ಟಿ, ತಾವು ಘಳಿಸಿ ಕೊಳ್ಳುವದನ್ನು ದೇವವಾಕ್ಯ ಮುದ್ರಿಸಲಿಕ್ಕೂ ಶಾಲೆಗಳಿಗೂ ಉಪದೇಶಕರಿಗೂ ಆಧಾರ ಕೊಡಲಿಕ್ಕೂ ಉಪಯೋಗಿಸುತ್ತಿದ್ದರು. ಅವರು ದೇವನಾಗರೀ ಅಕ್ಷರಗಳ ಅಚ್ಚುಗಳನ್ನು ಕೆತ್ತಿಸಿ ಛಾಪಿಸಿದ ಹಿತೋಪದೇಶವೆಂಬದು ಹಿಂದು ದೇಶದಲ್ಲಿ ಮುದ್ರಿತವಾದ ಸಂಸ್ಕೃತ ಗ್ರಂಥಗಳೊಳಗೆ ಮೊದಲಿನದೇ. ಅವರು ಎಲ್ಲಾ ದಿಕ್ಕುಗಳಿಂದ ಆಯಾ ಸ್ಥಳಗಳಲ್ಲಿ ಹುಟ್ಟಿದ ಪಂಡಿತರನ್ನು ತರಿಸಿ, ಅವರ ಒತ್ತಾಸೆಯಿಂದ ಸುಮಾರು 20 ವರುಷಗಳೊಳಗೆ ಸಂಪೂರ್ಣ ದೇವವಾಕ್ಯದ ಓಡ್ರ ಸಂಸ್ಕೃತ ಹಿಂದುಸ್ಥಾನಿ ಮಹಾರಾಷ್ಟ್ರ ಪಂಜಾಬಿ ಬಂಗಾಳಿ ಎಂಬ ಈ 6 ದೇಶೀಯ ಭಾಷಾಂತರಗಳನ್ನೂ ಚೀನಿ ಭಾಷಾಂತರವನ್ನೂ ರಚಿಸಿ, ಛಾಪಿಸಿ, ಹೊಸ ಒಡಂಬಡಿಕೆಯನ್ನು 14 ಬೇರೆ ಬೇರೆ ದೇಶೀಯ ಭಾಷೆಗಳಲ್ಲಿ ಪ್ರಕಟಿಸಿದರು[1]. ಕ್ರಿ. ಶ. 1807ನೇ ವರುಷದಲ್ಲಾದರೂ ಕೇರಿಯು ಬರೆದದ್ದೇನಂದರೆ—ಈಗ ಸಂಪೂರ್ಣ ದೇವವಾಕ್ಯವೂ ಅದರ ವಿವಿಧ ಭಾಗಗಳೂ ದೇಶೀಯವಾದ 10 ಭಾಷೆಗಳಲ್ಲಿದೆ. ಲೋಕದ ಸಕಲ ಭಾಷೆಗಳನ್ನು ಕುರಿತಿರುವ ಈ ದೇವವಾಗ್ಭಾಷಾಂತರಮಹದ್ವ್ಯತ್ತಿಯು ತೀರುವದಕ್ಕಿಂತ ಮುಂಚೆ ದೇವರಾಜ್ಯವು ಭೂಮಿಯಲ್ಲೆಲ್ಲಿಯೂ ಸರ್ವಸಾಧಾರಣವಾದ ಆಳ್ತನಕ್ಕೆ ಬರಲಾರದು.—ಕ್ರಿ. ಶ. 1810ನೇ ವರುಷ ವೊರ್ಡನು ಹಿಂದು ಜನರ ಪೂರ್ವ ಚರಿತ್ರ ಗ್ರಂಥ ವಿದ್ಯೆ ದೇವತಾವಿಷಯ ಮುಂತಾದವುಗಳನ್ನು ವರ್ಣಿಸುವದೊಂದು ಪ್ರಸಿದ್ಧ ಕೃತಿಯನ್ನು ಮುಗಿಸಿ ಬಿಟ್ಟನು. ಕೇರಿಯೂ ಅವನ ಇಬ್ಬರು ಜೊತೆಗಾರರೂ ಬಂಗಾಳಿ ಜನರ ಹಿತಕ್ಕಾಗಿ ಸುಮಾರು 20 ಶಾಲೆಗಳನ್ನು ಸಹ ನೆಟ್ಟರು; ಆಗ ಗ್ರಾಮ ಗ್ರಾಮದವರು, ಅಂಥಾ ಶಾಲೆಗಳನ್ನು ತಮ್ಮ ತಮ್ಮಲ್ಲಿಯೂ ಊರಲಾಗುವ ಉದ್ದಿಶ್ಯ, ವಿದ್ಯಾಸಂಪನ್ನರಾಗುವ ಹಾಗೆ ಯೋಗ್ಯರಾದಂಥವರನ್ನು ಅದಕ್ಕದಕ್ಕೆ ಕಳುಹಿಸುವವರಾಗೋಣ, ಕಲಿಕಾತೆ ಪುರದ ಸುತ್ತ ಮುತ್ತಲೂ 10 ಹರದಾರಿಗಳೊಳಗೆ ಬಹ

1) 639ನೇ ಪಾನು ಸರಿ ನೋಡು.

ಳ ತಡವಿಲ್ಲದೆ 92 ಶಾಲೆಗಳು ಉದ್ಭವಿಸಿದವು. ಕ್ರಿ. ಶ. 1812ನೇ ವರುಷ ಆ ಮೂವರು ಸುವಾರ್ತಾಪ್ರಸಾರಕರ ಉತ್ಸಾಹದಿಂದ 12 ಕ್ರೈಸ್ತ ಸಭೆಗಳು ಉತ್ಪನ್ನವಾಗಿದ್ದವು; ಅದು ಹೊರ್ತಾಗಿ ಹಿಂದು ಜನರಲ್ಲಿ ಪ್ರಬಲವಾಗಿದ್ದ ಪತಿಸಹಗಮನ ಬಾಲಹತ್ಯಗಳೆರಡೂ ಅವರ ಮೂಲಕವೇ ನಿಂತು ಹೋದವು. ಕ್ರಿ. ಶ. 1819ನೇದಕ್ಕೆ ಅವರು ಶ್ರೀರಾಮಪುರದಲ್ಲಿ ಒಂದು ದೊಡ್ಡ ವಿದ್ಯಾಶಾಲೆ ಕಟ್ಟಿ, ಅದರಲ್ಲಿ ಇಂಗ್ಲಿಷ ಭಾಷೆಯನ್ನಲ್ಲದೆ ಸಂಸ್ಕೃತ ಅರಬಿ ಎಂಬಿವನ್ನು ಕೂಡ ಕಲಿಸ ಹತ್ತಿದರು. ಕೇರಿಯು ಕ್ರಿ. ಶ. 1834ನೇ ಅಬ್ದ ತನ್ನ 74ನೇ ವಯಸ್ಸಿನಲ್ಲಿ ಸತ್ತು, ತನ್ನ ಕರ್ತನೆಡೆಗೆ ಐದಿದನು.—ತನ್ಮಧ್ಯ ಕ್ರಿ. ಶ. 1798ನೇ ವರುಷ ಸುತ್ತ ಲೊಂದನಿನ ಸುವಾರ್ತಾಪ್ರಸಾರಣಸಂಘದವರ[1] ಪ್ರೇಷಿತರು ಸಹ ಬಂಗಾಳಕ್ಕೆ ಬರಲಿಕ್ಕೆ ತೊಡಗಿದ್ದರು.

ಅಷ್ಟರಲ್ಲಿ ಕುಂಪಣಿಯ ದಂಡುಠಾಣ್ಯಾಗಳಲ್ಲಿಯೂ ವರ್ತಕಶಾಲೆಗಳಲ್ಲಿಯೂ ಇರುವ ಇಂಗ್ಲಿಷರಾದ ಎಪಿಸ್ಕೊಪಾಲ ಪ್ರಸಂಗೋದ್ಯೋಗಿಗಳು ಕೂಡಿ ಸುವಾರ್ತಾಪ್ರಸಾರಣದಲ್ಲಿ ಮಂಗಳ ಪ್ರಯತ್ನ ಮಾಡುತ್ತಾ ಬಂದಿದ್ದರು. ಅವರಲ್ಲೊಬ್ಬನು ಆ ದೇವಿದ್‌ಬ್ರೌನನೆಂಬವನು[2]; ಅವನು ಕ್ರಿ. ಶ. 1784ನೇ ವರುಷ ಕಲಿಕಾತೆಗೆ ಬಂದನು. [illegible]

ನೆ ಕ್ರಿಸ್ತನ ಮಹಿಮೆಯನ್ನು ಘೋಷಿಸ ತೊಡಗಿದನು. ಮರ್ತಿನನು ಹೊಸ ಒಡಂಬಡಿಕೆಯ ಹಿಂದುಸ್ಥಾನಿ ಮತ್ತು ಪಾರ್ಶಿ ಭಾಷಾಂತರ ಗೈದದ್ದು ಅವನ ಕೀರ್ತಿಗೆ ಮುಖ್ಯ ಕಾರಣವು. ಕ್ರಿ. ಶ. 1810ನೇ ವರುಷ ಅವನು ಪಾರ್ಶಿ ಭಾಷೆಯನ್ನು ಇನ್ನೂ ಚನ್ನಾಗಿ ಕಲಿಯುವ ಉದ್ದಿಶ್ಯ ಪಾರ್ಶಿಸ್ಥಾನಕ್ಕೆ ಹೋಗಿ, ಪ್ರಾಪ್ತಕಾರ್ಯನಾಗಿ, ಇಂಗ್ಲಂದಿಗೆ ಗಮಿಸಲಿಕ್ಕಿರುವಾಗ ದಾರಿಯಲ್ಲಿ ತೀರಿದನು.—ಅಂಥ ಮತ್ತೊಬ್ಬನು ವೆಲ್ಲೆಸ್ಲಿ ಪ್ರಭುವಿನ ಪ್ರಸಂಗಿಕನಾದ ಆ ಕ್ಲಾದಿಯಸ್ ಬಕ್ಕನ್ನನನು[1]; ಇಂಗ್ಲಿಷ ಎಪಿಸ್ಕೊಪಾಲ ಸುವಾರ್ತಾಪ್ರಸಾರಣಸಂಘ[2] ಹುಟ್ಟಿಸಿದವರೊಳಗೆ ಅವನು ಒಬ್ಬನು. ಹಿಂದು ದೇಶದಲ್ಲಿ ಕ್ರೈಸ್ತತ್ವವೆಂಬ ಬಳ್ಳಿಯನ್ನು ಹಬ್ಬಿಸುವದಕ್ಕೋಸ್ಕರ ಅವನು ಅನೇಕ ಪ್ರಯಾಣ ಮಾಡುತ್ತಿದ್ದು, ಒಮ್ಮೆ ಓಡ್ರ ದೇಶದಲ್ಲಿ ಜಗನ್ನಾಥನ (ಕೃಷ್ಣನ) ದೇವಸ್ಥಾನಕ್ಕೆ ಹೋಗುವ ಮಾರ್ಗದಲ್ಲಿ, 50 ಮೈಲು ದೂರ ಹಿಡಿದು, ಸತ್ತ ಯಾತ್ರಿಕರ ಎಲುಬುಗಳು ಬಿದ್ದಿರುವದಲ್ಲದೆ ನಾಯಿ ನರಿ ಹದ್ದುಗಳು ಅವರ ಹೆಣಗಳನ್ನು ತಿನ್ನುತ್ತಾ, ಜನರು ತೇರುಗಾಲಿಗಳಡಿಗೆ ಬಿದ್ದು ನುಗ್ಗಾಗುತ್ತಾ ಇರುವದು ಸಹ ಅವನಿಗೆ ಗೋಚರಿಸಿತು; ಬಳಿಕ ಇಂಥಾ ಅಸಹ್ಯ ಕಾರ್ಯಗಳನ್ನು ಅಧಿಕಾರಸ್ಥರಿಗೆ ಮೊದಲು ತಿಳಿಸಿ ಅಡ್ಡಗಟ್ಟಿದವನು ಅವನೇ. ಅವನು ಸಹ ಸ್ಥಾಪಕನಾಗಿದ್ದ ಫೋರ್ತ್ ವಿಲ್ಲಿಯಮನ ವಿದ್ಯಾಶಾಲೆಯನ್ನು[3] ಕ್ರಿ. ಶ. 1803ನೇ ಅಬ್ದ ಕುಂಪಣಿಯವರು ಕೀಳಲು, ಅವನು ತಾನೇ ಅದರಂತೆ ಸಣ್ಣದೊಂದನ್ನು ನಿರ್ಮಿಸಿದನು. ಅದಕ್ಕೆ ಎರಡು ವರುಷ ಇತ್ತಕಡೆ ಅವನು ಮಲಯಾಳ ಶೀಮೆಯಲ್ಲಿಯ ಸುರಿಯಕ ಕ್ರೈಸ್ತರನ್ನು ನೋಡಲಿಕ್ಕೆ ಬಂದು, ಗುಡ್ಡಗಳೊಳಗಿನವರಲ್ಲಿ ಪೆಷಿತೊ ಎಂಬ ದೇವವಾಕ್ಯದ ಭಾಷಾಂತರದ್ದೊಂದು ಚಂದ ಪ್ರತಿ[4] ಕಂಡು, ಬಹು ಪ್ರಯತ್ನ ಪಟ್ಟು, ಅದನ್ನು ಬ್ರಿತಿಷ ಮತ್ತು ಪರದೇಶಿಕ ದೇವವಾಗ್ಗ್ರಂಥವಿಸ್ತಾರಕಸಂಘದವರ ಸಹಾಯದೊಡನೆ ಮುದ್ರಿಸ ಮಾಡಿ, ಅವರಿಗೆ ದೊರಕಿಸಿದನು.—ಅಂದೂ ಇನ್ನು ಮುಂದೆಯೂ, ಹಿಂದೆ ನಾವು ಸೂಚಿಸಿದಂತೆ, ಎಪಿಸ್ಕೊಪಾಲ ಇತರರಾದ ಬೇರೆ ಬೇರೆ ಪ್ರಸಂಗಿಕೋದ್ಯೋಗಿಗಳು ಅಂಥಾ ಆಶೀರ್ವಾದಕರ ವೃತ್ತಿಯಿಂದಲೊಪ್ಪುತ್ತಿದ್ದರು.

ಕ್ರಿ. ಶ. 1813ನೇ ವರುಷ ಇಂಗ್ಲಂದಿನ ಪಾರ್ಲಿಮೆಂತಿನವರು, ಇಂಗ್ಲಿಷ ಸಾಮ್ರಾಜ್ಯದ ಪ್ರಜೆಯವರೆಲ್ಲರೂ ಹಿಂದು ದೇಶದಲ್ಲಿ ಯಥೇಚ್ಛೆಯಾಗಿ ಉಪದೇಶಿಸಬಹುದೆಂದು, ಅಪ್ಪಣೆ[5] ಹೊರಡಿಸಿದಾಗ ಈ ದೇಶದಲ್ಲಿ ಎಪಿಸ್ಕೊಪಾಲ ಸಭಾಧ್ಯಕ್ಷರನ್ನಿಡುವದು ಕೂಡ ಸಂಭವಿಸಿತು. ಇವರು ಸಹ ಸುವಾರ್ತಾಪ್ರಸಾರಣಕ್ಕೆ ಬಹಳ ಇಂಬು ಕೊಡುವವರಾದರು. ಇವರಲ್ಲಿ ಕೆಲವರು ಯಾರಂದರೆ, ಹೆನ್ರಿ ಮರ್ತಿ

---

1) 445, 639ನೇ ಪಾನು. 2) 647ನೇ ಪಾನು. 3) 652ನೇ ಪಾನು. 4) 544ನೇ ಪಾನು. 5) ಈ ಅಪ್ಪಣೆಯಾಗುವ ಹಾಗೆ ವಿಲ್ಬೆರ್ಫೋರ್ಸನೆಂಬವನು ಸಹ ಬಹಳ ಪ್ರಯತ್ನ ಪಟ್ಟಿದ್ದನು.

ನನ ಮುಖದಿಂದ ಹೃತ್ಪರಿಣಾಮ ಪಟ್ಟ ಆ ಅಬ್ದುಲ್ ಮೆಸ್ಸಿಗೆ[1] ಉದ್ಯೋಗಪ್ರತಿಷ್ಠೆ ಗೊಳ್ಳಿಸಿದ ಹೀಬೆರನೆಂಬ ಕಲಿಕಾತೆಯವನೊಬ್ಬನು; ಸುರಿಯಕರ ಬಳಿಗೆ ಹೋಗಿ ಬಂದ ಆ ವಿಲ್ಸನನೆಂಬ[2] ಕಲಿಕಾತೆಯ ಮತ್ತೊಬ್ಬನು; ಹೆನ್ರಿ ಮರ್ತಿನನ ಪ್ರಾಣಮಿತ್ರನಾಗಿ ಚುನಾರು ಕಾನಪುರ ಅಗರ ವಾರಾಣಸಿ ಎಂಬ ಸ್ಥಳಗಳಲ್ಲಿ ಪ್ರಸಂಗೋದ್ಯೋಗಿಯಾಗಿದ್ದು ತರುವಾಯ ಕ್ರಿ. ಶ. 1833ನೇ ವರುಷದಿಂದ 1837ನೇದರ ತನಕ ಚನ್ನಪಟ್ಣದಲ್ಲಿ ಪ್ರಥಮ ಸಭಾಧ್ಯಕ್ಷನಾಗಿದ್ದ ದನಿಯೆಲ್ ಕೊರ್ರಿಯೆಂಬವನು ಇನ್ನೊಬ್ಬನು; ಇವರು ಪ್ರಭೃತಿಯಾದವರನೇಕರು.

ಎಪಿಸ್ಕೊಪಾಲ ರಾಜ್ಯಸಭೆಯದಾದ ಸುವಾರ್ತಾಪ್ರಸಾರಣಸಂಘದವರು ಕ್ರಿ. ಶ. 1816ನೇ ಅಬ್ದ ತಿರುವಾಂಕೋಡಿನಲ್ಲಿಯೂ ಕೊಚ್ಚಿಯಲ್ಲಿಯೂ ಸುರಿಯಕರೊಳಗೆ ತಮ್ಮ ಕೆಲಸವನ್ನಾರಂಭಿಸಿದರೆಂತ, ಹಿಂದೆ ಪಠಿಸಿದಿರಲ್ಲವೇ[3]? ಆ ಸಮಯ ಆ ಕಡೆಗೆ ಬಂದೊದಗಿದ ಮೂವರು ಸುವಾರ್ತಾಪ್ರಸಾರಕರು ಬೇಲಿ ಬೇಕೆರ ಫೆನ್ನ ಎಂಬವರು; ಫೆನ್ನನು ವಿದ್ಯಾವರ್ಧಕ ಶಾಖೆಯ ಪ್ರಧಾನನಾದನು, ಬೇಕೆರನು ಪ್ರಯಾಣಪ್ರಸಂಗಿಯಾದನು, ಬೇಲಿಯು ಭಾಷಾಂತರಕಾರನಾದನು. ಕ್ರಿ. ಶ. 1838ನೇ ಅಬ್ದ ಸುರಿಯಕರು ಮಿತ್ರಭೇದ ನಡಿಸಲು, ಆ ಸುವಾರ್ತಾಪ್ರಸಾರಕರು ಇನ್ನೂ ಹೆಚ್ಚು ಕಡಿಮೆ ಮಾಡದೆ, ಒಂದೇ ಪ್ರಕಾರ ಅವರಿಗೂ ವಿಗ್ರಹಾರಾಧಕರಿಗೂ ಉಪದೇಶಿಸ ತೊಡಗಿದರು; ನಮ್ಮ ಕಾಲಕ್ಕೆ ಆ ಸಂಘದವರ ಮುಖಾಂತರ ಅಲ್ಲಿ 12,000 ಮಂದಿಯಾದ ಸಕಲಕುಲಜನರೂ ಕ್ರೈಸ್ತರಾಗಿದ್ಧಾರೆ.—ಕ್ರಿ. ಶ. 1822ನೇ ವರುಷ ಲೊಂದನಿನ ಸಂಘದ ಸುವಾರ್ತಾಪ್ರಸಾರಕರು ಸಹ ತಿರುವಾಂಕೋಡಿನ ಮಲಯಾಳರೊಳಗೆ ಶೇರಿದ್ದರು. ಅದಕ್ಕೆ ಮುಂಚೆ ಕ್ರಿ. ಶ. 1806ನೇ ವರುಷಕ್ಕಾದರೂ ಆ ಸಂಘದ ಪ್ರೇಷಿತರು ತಿರುವಾಂಕೋಡು ರಾಜ್ಯದ ದಕ್ಷಿಣ ಭಾಗದಲ್ಲಿ ತಮಿಳರೊಳಗೆ ಕ್ರಿಸ್ತನ ಹೆಸರನ್ನು ಪ್ರಸಂಗಿಸಲೆಸಗಿದ್ದರು; ಇವರಲ್ಲಿ ಪ್ರಥಮನಾದವನೊಬ್ಬನು ಪ್ರುಸ್ಸಿಯ ದೇಶದ ರಿಂಗೆಲ್ತಾಬೆ ಎಂಬವನು. ಈ ಲೊಂದನಿನ ಸಂಘದವರ ಜೋಕೆಯಲ್ಲಿ ಆ ಕಡೆ ಈಗ ಸುಮಾರು 30,000 ತಮಿಳ ಕ್ರೈಸ್ತರು ಇದ್ಧಾರೆ. ಕ್ರಿ. ಶ. 1805ನೇ ವರುಷ ಲೊಂದನಿನ ಸಂಘದವರು ತೆಲುಗು ದೇಶದ ವಿಶಾಖಪಟ್ಣದಲ್ಲಿ ಸುವಾರ್ತಾಪ್ರಸಾರಣವನ್ನು ನಡಿಸುವವರಾಗಿ, 17 ವರುಷದಿತ್ತ ಕಡಪೆಯೆಂಬಲ್ಲಿ ತಮ್ಮದೊಂದು ಕ್ಷೇತ್ರವನ್ನಿಟ್ಟರು. ಕನ್ನಡ ದೇಶದಲ್ಲಿಯ ಮೊದಲಿನ ಸುವಾರ್ತಾಪ್ರಸಾರಣಕ್ಷೇತ್ರವು ಬಳ್ಳಾರಿಯೆಂಬದು; ಕ್ರಿ. ಶ. 1810ನೇ ಅಬ್ದ ಲೊಂದನಿನ ಸಂಘದವರು ಅದನ್ನು ನಿರ್ಮಿಸಿದರು. 10 ಅಬ್ದಕ್ಕೀಚೆ ಅದೇ ಸಂಘದವರಿಂದ ಬೆಂಗಳೂರಿನ ಕ್ಷೇತ್ರವೂ ದಕ್ಷಿಣ ಮಹರಾಷ್ಟ್ರದಲ್ಲಿ ಬೆಳಗಾವಿನದೂ ಸ್ಥಾಪಿತವಾದವು.

1) 652ನೇ ಪಾನು. 2) 546ನೇ ಪಾನು. 3) 545ನೇ ಪಾನು.

ಕ್ರಿ. ಶ. 1833ನೇ ವರುಷ ಇಂಗ್ಲಿಷ ಪಾರ್ಲಿಮೆಂತಿನವರು ಸಕಲ ಜನಾಂಗದವರಿಗೂ ಹಿಂದು ದೇಶದಲ್ಲಿ ಉಪದೇಶಸ್ವಾತಂತ್ರ್ಯ ಕೊಡಲು, ಸ್ವಿಕ್ಸೆರ್ಲಂದಿನ ಬಾಸೆಲು ಪಟ್ಣದ[1] ಸುವಾರ್ತಾಪ್ರಸಾರಣಸಂಘದವರೂ ಅಮೆರಿಕದ ಕ್ರೈಸ್ತರೂ, ತಾವು ಸುವಾರ್ತಾಪ್ರಸಾರಕರನ್ನು ಹಿಂದು ದೇಶಕ್ಕೆ ಕಳುಹಿಸುವ ಸರ್ತಿಯು ಸಹ ಬಂದದೆಂದು, ತಿಳು ಕೊಂಡು, ಹಾಗೆ ಗೈದರು. ಕ್ರಿ. ಶ. ಆ 1815ನೇ ವರುಷ[2] ಉತ್ಪನ್ನವಾಗಿದ್ದ ಆ ಬಾಸೆಲಿನ ಸಂಘದವರು 1834ನೇದರ ಒಕ್ಟೋಬರ್ ತಿಂಗಳಲ್ಲಿ ತುಳು ಶೀಮೆಯ ಮಂಗಳೂರಿಗೆ ಮೂವರು ಸುವಾರ್ತಾಪ್ರಸಾರಕರನ್ನು ಪ್ರೇಷಿಸಿದರು; ಇವರೊಳಗೆ ಈ ವರುಷ ಸತ್ತ ಹೇಬಿಖ ಎಂಬವನೊಬ್ಬನು. ಬಳಿಕ ಆ ಸಂಘದವರು ದಕ್ಷಿಣ ಮಹಾರಾಷ್ಟ್ರದ ಕನ್ನಡ ಜನರೊಳಗೆ ಧಾರವಾಡ ಎಂಬಲ್ಲಿ ಒಂದು ಕ್ಷೇತ್ರ ನೆಡುವಂದೇ ವೆಸ್ಲಿಯನರು[3] ಮೈಸೂರು ಪಟ್ಣದಲ್ಲಿ ತಮ್ಮದೊಂದನ್ನು ಊರಿದರು; ಬಾಸೆಲಿನ ಸಂಘವು ಹುಟ್ಟಿ, ಒಂದು ವರುಷ ಹೋದ ತರುವಾಯ ಆ ಮೆಥೊದಿಸ್ತರದು ಸ್ಥಾಪಿತವಾಗಿತ್ತು. ಆ ಮೇಲೆ ಕ್ರಿ. ಶ. 1839ನೇ ವರುಷ ಬಾಸೆಲಿನವರು ಮಲಯಾಳದೊಳಗೆ ತಲಚೇರಿ ಪಟ್ಣದಲ್ಲಿ ತಮ್ಮ ಪ್ರಥಮ ಕ್ಷೇತ್ರದ ಪಾಯವನ್ನಿಟ್ಟರು. ಬಾಸೆಲಿನ ಸಂಘದವರಿಗೆ ಹಿಂದು ದೇಶದಲ್ಲಿ ಈಗ ಒಟ್ಟಿಗೆ 18 ಕ್ಷೇತ್ರಗಳಿವೆ. ಯಾವವಂದರೆ, ತುಳು ಶೀಮೆಯಲ್ಲಿ ಮಂಗಳೂರು ಮೂಲ್ಕಿ ಉಡಪಿ ಹೊನ್ನಾವರ ಎಂಬ ಈ 4; ಕೊಡಗು ಶೀಮೆಯಲ್ಲಿ ಆನಂದಪುರ ಮಡಿಕೇರಿ ಎಂಬೀ 2; ದಕ್ಷಿಣ ಮಹಾರಾಷ್ಟ್ರದಲ್ಲಿ ಧಾರವಾಡ ಹುಬ್ಬಳ್ಳಿ ಬೆಟ್ಟಗೇರಿ ಗುಳೆದಗುಡ್ಡ ಎಂಬೀ 4; ಮಲಯಾಳದಲ್ಲಿ ಕಣ್ಣನೂರು ತಲಚೇರಿ ಚಂಬಾಳ ಕೋೞಿಕೋಡು ಕೊಡಕಲ್ಲು ಪಾಲೆಕಾಡು ಎಂಬೀ 6; ನೀಲಗಿರಿಯಲ್ಲಿ ಕೇತಿ ಕೋತಗೇರಿ ಎಂಬೀ 2. ಆಯಾ ಕ್ಷೇತ್ರಗಳಲ್ಲಿ 33 ವರುಷದೊಳಗೆ ಕ್ರೈಸ್ತರಾದ ಹಿಂದುಜರು ಸುಮಾರು 3,600 ಜನರು[4].

ಕ್ರಿ. ಶ. 1829ನೇದರ ವರೆಗೆ ಸುವಾರ್ತಾಪ್ರಸಾರಕರು ಹಿಂದು ದೇಶದಲ್ಲಿಯ ವಿಗ್ರಹಾರಾಧಕರಿಗೂ ಮೊಹಮ್ಮದಿಯರಿಗೂ ಕ್ರೈಸ್ತರಿಗೂ ವಿಶೇಷವಾಗಿ ದೇಶೀಯ ಭಾಷೆಗಳಿಂದ ತಕ್ಕಷ್ಟು ಸುಶಿಕ್ಷೆ ಗೈದು ಕೊಡಲಿಕ್ಕೆ ಪ್ರಯತ್ನ ಮಾಡುತ್ತಾ ಇದ್ದು, ಸುವಾರ್ತಾಪ್ರಸಾರಣಕ್ಕೋಸ್ಕರ ಪಟ್ಣ ಊರು ಹಳ್ಳಿಗಳಲ್ಲಿಯ ಬೀದಿ ಬೈಲುಗಳಲ್ಲೆಲ್ಲಿಯೂ ಸುವಾರ್ತೆ ಘೋಷಿಸುವ ರೀತಿಯನ್ನು ಹೆಚ್ಚಾಗಿ ಕೈಗೊಂಡಿದ್ದರು. ಆಗ ಸ್ಕೋತ್ಲಂದಿನ ಪ್ರೆಸ್ಬುತೆರಿಯಾಲ ಸರ್ವಸಾಧಾರಣ ಸಭಾಸಂಘದವರು[5] ಅಲೆಗ್ಜಂದರ್ ದಫ್ಫನೆಂಬ ಪ್ರಸಂಗೋದ್ಯೋಗಿಯನ್ನು ಕಲಿಕಾತೆಗೆ ಕಳುಹಿಸಲಾಗಿ, ಅವ

---

1) 551ನೇ ಪಾನು. 2) 632ನೇ ಪಾನು. 3) 647ನೇ ಪಾನು. 4) ಈ 1869ನೇದರಲ್ಲಿ ಅವರ ಲೆಖ್ಖವು ಸುಮಾರು 4000 ಜನರೆಂಬದಾಯಿತು. 5) 492ನೇ ಪಾನು.

ನು ಇಂಗ್ಲಿಷ ವಿದ್ಯೆ ಜ್ಞಾನಗಳ ಸಂಪೂರ್ಣತೆಯನ್ನು ಇಂಗ್ಲಿಷ ಭಾಷೆಯಿಂದಲೇ ತಿಳಿಸುವ ಮಾರ್ಗವನ್ನು ಹಿಂದು ದೇಶಸ್ಥರ ಹಿತಕ್ಕಾಗಿ ಹಿಡಿದು, ಇದರ ವಿಷಯ ಒಮ್ಮೆ ಹಿಂದು ಯೌವನಸ್ಥರದೊಂದು ಸಮಾಗಮದಲ್ಲಿ ನುಡಿದದ್ದೇನೆಂದರೆ—ಪ್ರಿಯಗೆಳೆಯರೇ, ನನಗಿರುವ ಕಾವ್ಯ ವಿದ್ಯೆ ಆತ್ಮವಿಚಾರಗಳಾದ ಸಕಲ ಯುರೋಪೀಯ ಅನುಭವವನ್ನು ನಿಮಗೆ ದೊರಕಿಸಿ ಕೊಡ ಬೇಕೆಂಬದು ಇಲ್ಲಿಗೆ ನಾನು ಬಂದ ಕಾರಣಗಳಲ್ಲಿ ಮುಖ್ಯವಾದ್ದೊಂದಾಗಿದೆ. ಈ ದೇಶಜವಾದ ಒಂದು ತರದ ವಿದ್ಯಾಜ್ಞಾನಸಂಪತ್ತು ಒಟ್ಟಿರುವ ಮಹಾ ಉಗ್ರಾಣಗಳು ಸಹ ನಿಮಗೆ ಅವೆ. ಆ ಸಂಪತ್ತು ಎಷ್ಟಕ್ಕೆ ಸರಿಯೆಂದರೆ, ನಮ್ಮ ಹಿರಿಯರು ನಿಮ್ಮ ಬಂಗಾಳಿ ಹುಲಿಗಳೋಪಾದಿ ಕಾಡುಗಳನ್ನು ತಿರುಗುತ್ತಾ, ನಿಮ್ಮ ಹಿಮಾಲಯಿ ಕರಡಿಗಳೋಪಾದಿ ಗುಡ್ಡಗಳಲ್ಲಿ ಸುತ್ತ್ಯಾಡುತ್ತಾ, ವಿದ್ಯಾಹೀನ ವರ್ವರರೋಪಾದಿ ಮೈಗೆ ಬಣ್ಣ ಹೂಸುತ್ತಾ ಇರುವಂಥಾ ಸ್ಥಿತಿಯಲ್ಲಿ ಉಳಿದಿರುವ ಕಾಲ ನಿಮ್ಮ ಹಿರಿಯರು ಒಂದು ವಿಧದಿಂದ ವಿದ್ವಾಂಸರೂ ನಾಗರಿಕರೂ ಆಗಿದ್ದರು; ಆ ಕಾಲವನ್ನಾಲೋಚಿಸುವಾಗ ನನಗೆ ನಾಚಿಕೆ ಬರುವಂತಾಗುತ್ತದೆ. ಆದರೆ ಕಾಲಕ್ರಮೇಣ ಬದಲಾಯಿತು; ಅಂಥಾ ಹಿರಿಯರ ಮಕ್ಕಳಾದ ನಾವು ಈಗ ನಾಗರಿಕರಾಗಿ, ಅನ್ಯರಿಗೆ ತಿಳಿಸ ತಕ್ಕ ವಿದ್ಯಾಸಂಪತ್ತಿನ ಮಹಾ ನಿಕ್ಷೇಪಗಳುಳ್ಳವರಾಗಿದ್ದೇವೆ. ನೀವು, ನಿಮಗೆ ಸಕಲ ಪರಮಜ್ಞಾನದ ಶೆಲೆ ಎಂತ, ಎಣಿಸುವ ವೇದವೆಂಬ ಗ್ರಂಥವಿರುವಲ್ಲಿ ನಾವು, ನಮಗೆ ಸಕಲ ಪರಮಜ್ಞಾನದ ಶೆಲೆ ಎಂತ, ನಂಬುವ ಪರಿಶುದ್ಧ ಬರಹವೆಂಬ ಗ್ರಂಥವಿದೆ. ಇವೆರಡನ್ನು ನೀವು ಸರಿ ತೂಗಿ, ನೋಡಿ, ಯಾವದು ಒಳ್ಳೇದೆಂದು, ನಿಶ್ಚಯಿಸಿ ಕೊಳ್ಳ ಯೋಗ್ಯವು.—ಅವನು ಸ್ಥಾಪಿಸಿದ ವಿದ್ಯಾಶಾಲೆಗೆ, ಬಹಳ ತಡವಾಗದೆ, 800 ಮಂದಿ ಯೌವನಸ್ಥರು ಬರುವವರಾದರು. ಮಹಾ ಪಂಡಿತನೆಂಬ ಹೆಸರು ಪಡೆದ ದಫ್ಫನು 35 ವರುಷ ಬಂಗಾಳದಲ್ಲಿ ತಾನು ತೊಡಗಿಸಿದ ಆಶೀರ್ವಾದಕರ ವೃತ್ತಿಯಲ್ಲುಳಿದು, ಸ್ಕೋತ್ಲಂದಿಗೆ ಹೋಗಿ, ಈಗ ಎದಿನ್ಬರ್ಗಿನಲ್ಲಿ[1] ಸ್ಕೋತಿಕ ಸುವಾರ್ತಾಪ್ರಸಾರಣದ ಪ್ರಧಾನನಾಯಕನಾಗಿದ್ದಾನೆ.—ಈಗ ಮುಂಬಯಿಯಲ್ಲಿರುವ ವಿಲ್ಸನನೆಂಬ ಮಹಾ ಪಂಡಿತನು ಸಹ ಸ್ಕೋತ್ಲಂದಿನ ಸಭೆಯ ಸಂಬಂಧದವನು; ಕ್ರಿ. ಶ. 1829ನೇ ವರುಷ ಅವನು ಅಲ್ಲಿಗೆ ಆಗಮಿಸಿದನು. ಅವನು ಸಹ ತನ್ನ ತ್ರಾಣದಲ್ಲಿ ದೊಡ್ಡ ಅಂಶವನ್ನು ವಿದ್ಯಾವರ್ಧಕ ಶಾಖೆಗೆ ತಾಗಿಸಿದ್ದರೂ ವಿಶೇಷವಾಗಿ ದೇಶೀಯ ಮೊದಲಾದ ಭಾಷೆಯ ಗ್ರಂಥಕರ್ತನಾಗಿ ಮೆರೆಯುತ್ತಿದ್ದು, ಹಿಂದು ಮತ್ತು ಪಾರ್ಶಿ ಜನರ ಕುದರ್ಶನಗಳನ್ನು ತನ್ನ ಗ್ರಂಥಗಳಿಂದ ಖಂಡಿಸುವ ಪ್ರಯತ್ನದಿಂದ ಕೀರ್ತಿಗೊಂಡಿದ್ದಾನೆ; ಕ್ರಿ. ಶ. 1840ನೇ ವರುಷ ಪಾರ್ಶಿ ಜನರಲ್ಲಿ ಮೊದಲು ಕ್ರೈಸ್ತರಾದ

1) 491, 492, 494ನೇ ಪಾನು.

ವರಿಗೆ ಪರಿಶುದ್ಧ ಸ್ನಾನ ಕೊಟ್ಟವನು ಅವನೇ.—ಕ್ರಿ. ಶ. 1836ನೇ ಅಬ್ದ ಸ್ಕೋತ್ಲಂದಿನ ಸರ್ವಸಾಧಾರಣ ಸಭಾಸಂಘದವರು ಅಂದರ್ಸನನೆಂಬ ಪ್ರಸಂಗೋದ್ಯೋಗಿಯನ್ನು ಚನ್ನಪಟ್ಣಕ್ಕೆ ಕಳುಹಿಸಿದರು. ಅವನು ಮುಖ್ಯವಾಗಿ ಮೇಲ್ತರದ ಹಿಂದುಜರಿಗಾಗಿ ಒಂದು ಇಂಗ್ಲಿಷ ವಿದ್ಯಾಶಾಲೆಯ ಮೂಲಕನಾದನು; ಅದರಲ್ಲಿ ಒಂದು ವೇಳೆ ಕ್ರಿಸ್ತನ ಭಕ್ತರಾಗುವ ಯೌವನಸ್ಥರು ಸಹ ಒಳ್ಳೇ ಸುವಾರ್ತಾಪ್ರಸಂಗಿಕರೂ ಉಪದೇಶಕರೂ ಆಗುವ ಹಾಗೆ ಅದರಲ್ಲೇ ವಿಶೇಷ ಶಿಕ್ಷೆ ಹೊಂದ ಬೇಕೆಂಬದು ಅವನಿಗೆ ತನ್ನ ಮೇಲಿನವರಿಂದ ನಿಯಮಿತವಾಗಿದ್ದ ಉದ್ದಿಶ್ಯಾರ್ಥವು. ಎರಡು ವರುಷದಿತ್ತ ಇಬ್ಬರು ಪರಿಯರು (ಹೊಲಿಯರು) ಸಹ ಶಾಲೆಯಲ್ಲಿ ಸೇರಲಿಕ್ಕೆ ಅಪ್ಪಣೆ ಕೇಳಲು, ಅವನು ಅಪ್ಪಣೆ ಕೊಟ್ಟ ಕ್ಷಣವೇ ಉಳಿದ ಹುಡುಗರು ಇನ್ನು ಬಾರದೆ, ಶಾಲೆಯು ಬರಿದಾಯಿತು. ಆದಾಗ್ಯೂ ಅಂದರ್ಸನನು ಬ್ರಾಹ್ಮಣರಿಗೆ ಬೊಗ್ಗದೆ, ಕಾದು ಕೊಳ್ಳಲು, ಬಹಳ ದಿವಸ ಹೋಗದ್ದಕ್ಕಿಂತ ಮುಂಚೆ ಬ್ರಾಹ್ಮಣರೂ ಪರಿಯರೂ ಬಂದು, ಒಂದೇ ಕಾಲುಮಣೆಯಲ್ಲಿ ಕೂಡಿ ಕೂತು ಕೊಳ್ಳುವಂತಾಗುವಲ್ಲಿ ಶಾಲೆಯು ಮುಂಚಿಗಿಂತ ಚನ್ನಾಗಿ ಅರಳಿತು. ಬಳಿಕ ಕ್ರಿ. ಶ. 1841ನೇ ಅಬ್ದ ಮೂವರು ಬ್ರಾಹ್ಮಣರಾದ ಯೌವನಸ್ಥರು ಕ್ರಿಸ್ತನವರಾದಾಗ ಶಾಲೆಯು ಸ್ವಲ್ಪ ಕಾಲಕ್ಕೆ ತಿರಿಗಿ ಖಾಲಿಯಾಯಿತು; ಆದರೂ ಮರುವರುಷ ಮೊದಲಿನಂತೆಯೇ ಮರಳಿ ತುಂಬಿತು. ಪರಂತು ಆ ಮೂವರು ಕಾಲಕ್ರಮೇಣ ಪ್ರಸಂಗೋದ್ಯೋಗಿಗಳಾದರು. ಅಂದರ್ಸನನ ಮತ್ತೆ ಅವನ ಹೆಂಡತಿಯ ಸುಪರಾಂಬರಿಕೆಯೊಳಗೆ ಕುಲೀನರಾದ ಹುಡುಗಿಯರ ಒಂದು ಶಾಲೆ ಸಹ ಶುಭಗತಿಗೆ ಬಂತು. ಕ್ರಿ. ಶ. 1855ನೇ ವರುಷ ಅಂದರ್ಸನನು ಕ್ರಿಸ್ತನ ಮೇಲಣ ದೃಢ ಭಕ್ತಿಯೊಡನೆ ಸಾಯುವಾಗ ಅವನ ಶಾಲೆಗಳಲ್ಲಿ 1,681 ಹುಡುಗರೂ 700 ಹುಡುಗಿಯರೂ ಇದ್ದರು.

ಕ್ರಿ. ಶ. 1812ನೇ ವರುಷ ಬಂಗಾಳದ ಶ್ರೀರಾಮಪುರದಲ್ಲಿಯ ಸುವಾರ್ತಾಪ್ರಸಾರಕರು[1] ಅರ್ಮಿನಿವಂಶಜನಾದ ಒಬ್ಬ ಕ್ರೈಸ್ತನನ್ನು ಮುಂಬಯಿಗೆ ಕಳುಹಿಸಿ, ಅವನಿಂದ ಅಲ್ಲಿ ಸುವಾರ್ತಾಪ್ರಸಾರಣದ ಆರಂಭ ಮಾಡಿಸಿದರು. ಅಮೆರಿಕದಲ್ಲಿ ಕ್ರಿ. ಶ. 1810ನೇ ವರುಷಕ್ಕೆ ಹುಟ್ಟಿದ್ದ ಆ ಬೊಸ್ತನು ಪಟ್ಣದ[2] ಸಂಘದ ಪ್ರೇಷಿತರು ಕಲಿಕಾತೆಗೆ ಬಂದು, ತಮಗೆ ಅಲ್ಲಿ ಇರಲಿಕ್ಕೆ ಅಪ್ಪಣೆಯಾಗದ ಕಾರಣ ಹೊರಟು, ಕ್ರಿ. ಶ. 1813ನೇದಕ್ಕೆ ಮುಂಬಯಿಯಲ್ಲಿ ಪ್ರವೇಶಿಸಲು, ಅಲ್ಲಿಯ ಭಕ್ತಿಯುಕ್ತ ಅಧಿಪತಿಯು ಸೌಜನ್ಯದಿಂದ ಅವರಿಗೆ ಸೇರಿಕೆ ಇತ್ತನು. ಮರುವರುಷ ಲೊಂದನಿನ ಸಂಘದವರು, ಕ್ರಿ. ಶ. 1820ನೇ ವರುಷ ಇಂಗ್ಲಂದಿನ ಎಪಿಸ್ಕೊಪಾಲ, ತರುವಾಯ ಸ್ಕೋತ್ಲಂದಿನ ಪ್ರೆಸ್ಬುತೆರಿಯಾಲ ಸಂಘಗಳವರು ಸಹ ಅಲ್ಲಿಗೆ ಆಗತರಾದರು; ಆ

1) 639, 650—652ನೇ ಪಾನು. 2) 579ನೇ ಪಾನು.

ಮೇಲೆ ಇತರರು ಕೂಡ ಬಂದರು. ಈಗ ಮುಂಬಯಿಯಲ್ಲಿರುವ ಬೋವೆನನೆಂಬ ಅಮೆರಿಕಜನಾದ ಸುವಾರ್ತಾಪ್ರಸಾರಕನನ್ನು ನೆನಸದಿರ ತಕ್ಕದಲ್ಲ; ಅವನು ಅನೇಕ ವರುಷದಿಂದ ರಚಿಸಿ ಪ್ರಕಟಿಸುತ್ತಿರುವ ಮುಂಬಯಿಯ ಗಾರ್ದಿಯನ್ ಎಂಬ ಇಂಗ್ಲಿಷ ಭಾಷೆಯದೊಂದು ಪತ್ರದಿಂದ ಮಿಗು ಸುಫಲ ಹುಟ್ಟಿಸುತ್ತಾ ಬಂದಿದ್ದಾನೆ. ಮುಂಬಯಿಯಲ್ಲಿ ಪ್ರವರ್ತಿಸುವ ಸಂಘಗಳವರಿಗೆ ನಾಸಿಕೆ ಅಹ್ಮದ್ನಗರ ಪುಣೆ ಕೊಲ್ಲಾಪುರಿ ಜಾಲ್ನಾ ಮುಂತಾದ ಸ್ಥಳಗಳಲ್ಲಿಯೂ ಕ್ಷೇತ್ರಗಳವೆ. ಗುಜರಾತಿನಲ್ಲಿ ಮುಖ್ಯವಾಗಿ ಐರ್ಲಂದಿನ ಪ್ರೆಸ್ಬುತೆರಿಯಾಲ ಸಭ್ಯರಾದ ಸುವಾರ್ತಾಪ್ರಸಾರಕರ ಕೆಲಸ ನಡೆಯುತ್ತದೆ; ರಾಜಪುತಾನದಲ್ಲಿ ಸ್ಕೋತ್ಲಂದಿನ ಪ್ರೆಸ್ಬುತೆರಿಯಾಲರು ಇದ್ದಾರೆ; ಪಂಜಾಬಿನಲ್ಲಿ ಅಮೆರಿಕದವರೂ ಇಂಗ್ಲಂದಿನ ಎಪಿಸ್ಕೊಪಾಲ ಸಭೆಯವರೂ ಮೆರೆಯುತ್ತಾರೆ. ಹಿಮಾಲಯದಲ್ಲಿಯೂ ಅಸ್ಸಾಮು ಶೀಮೆಯಲ್ಲಿಯೂ ಕೂಡ ಬೇರೆ ಬೇರೆ ಸಂಘಗಳ ಸುವಾರ್ತಾಪ್ರಸಾರಕರ ಮುಖದಿಂದ ಕ್ರಿಸ್ತನ ಸುವರ್ತಮಾನವು ಪ್ರಸಂಗವಾಗುತ್ತದೆ.

ಆದರೆ ಈ ಗ್ರಂಥದ್ದೊಂದು ಸಂಣ ಸಂಧಿಯ ಮೂಲಕ ಬೇರೆ ಬೇರೆ ಸುವಾರ್ತಾಪ್ರಸಾರಣಸಂಘಗಳವರು ಹಿಂದು ದೇಶವೊಂದರಲ್ಲೇ ನಡಿಸುತ್ತಿರುವ ಮಂಗಳ ಪ್ರಯತ್ನಗಳನ್ನಾದರೂ ಬಹು ಸಂಕ್ಷೇಪಿಸಿದಾಗ್ಯೂ ಹೇಳಿ ತೀರಿಸಲಳವಲ್ಲ. ವಾರಾಣಸಿ ಅಗರ ಪತ್ತನ ವಿಹಾರ ಗಯೆ ಲಕ್ಷ್ಮಣಾವತಿ ಡಿಲ್ಲಿ (ಎಂದರೆ ಹಸ್ತಿನಾವತಿ) ಎಂಬ ಪ್ರಸಿದ್ಧ ಪಟ್ಣಗಳಲ್ಲಿ ಸಹ ಸುವಾರ್ತಾಪ್ರಸಾರಣಕ್ಷೇತ್ರಗಳವೆ ಎಂತ, ಸೂಚಿಸುತ್ತೇವಷ್ಟೇ. ಛೋಟಾನಾಗಪುರದ ಬೆಟ್ಟಗಳಲ್ಲಿಯ ಕೋಲರೆಂಬವರೊಳಗೆ ಸಾಗುತ್ತಿರುವ ಸುವಾರ್ತಾಪ್ರಸಾರಣವನ್ನು ಒಂದೆರಡು ಮಾತಿನಿಂದ ಇನ್ನು ನೆನಸ ತಕ್ಕದ್ದು; ಅಲ್ಲಿಯ ಪ್ರಧಾನ ಪಟ್ಣವು ರಾನ್ಸಿಯೆಂತ; ಅಲ್ಲಿಗೆ ಬೆರ್ಲೀನು ಪಟ್ಣದಲ್ಲಿ ಆ ಯೇನಿಕೆಯ ಉತ್ತರೋದ್ಯೋಗಿಯಾದ ಗೊಸ್ನೆರನೆಂಬವನು[1] ಕ್ರಿ. ಶ. 1845ನೇ ವರುಷ ಮೊದಲ್ಗೊಂಡು ಸುವಾರ್ತಾಪ್ರಸಾರಕರನ್ನು ಪ್ರೇಷಿಸುವವನಾದನು; ಅಂಥವರ ಪರಿಮುಖವಾಗಿ ಈಗ ಅಲ್ಲಿ 11,000 ಮಂದಿ ಕೋಲರು ಕ್ರಿಸ್ತನ ರಾಜ್ಯದಲ್ಲಿ ಶೇರಿದ್ದಾರೆ.

ಹಿಂದು ದೇಶದ ಸುವಾರ್ತಾಪ್ರಸಾರಣದ ಸಂಬಂಧದಲ್ಲಿ ದೇಶೀಯಭಾಷಾಮೂಲಕಕ್ರೈಸ್ತಶಿಕ್ಷಾದಾಯಕ ಸಂಘವೆಂಬದುಂಟು; ಸಕಲ ಹಿಂದು ಭಾಷೆಗಳಲ್ಲಿ ಶಾಲೋಪಯೋಗಕ್ಕೂ ಗೃಹೋಪಯೋಗಕ್ಕೂ ಕ್ರೈಸ್ತ ಜ್ಞಾನ ಸಹ ಬೆರೆತಂಥ ಗ್ರಂಥಗಳನ್ನು ರಚನೆ ಮಾಡಿಸಿ ದೇಶೀಯ ಭಾಷೆಗಳ ಮುಖದಿಂದ ಸದ್ವಿದ್ಯೆ ಕಲಿಸುವಂ

1) 634, 648ನೇ ಪಾನು.

ಥ ಪಂತೋಜಿಗಳನ್ನು ಶಿಕ್ಷಿಸುವದೇ ಅದರ ದೊಡ್ಡ ತಾತ್ಪರ್ಯವು; ಕ್ರಿ. ಶ. 1858ನೇ ಅಬ್ದ ಆ ಸಂಘವು ಉದ್ಭವಿಸಿತು.

ಕ್ರಿ. ಶ. 1813ನೇ ವರುಷ ಜಡ್ಸನನೆಂಬ ಬಪ್ತಿಸ್ತನಾದ ಸುವಾರ್ತಾಪ್ರಸಾರಕನು ಅಮೆರಿಕದಿಂದ ಬ್ರಹ್ಮಿ ದೇಶದ ರಂಗೂನು ಪಟ್ಣಕ್ಕೆ ಬಂದು, ಬೌದ್ಧರಾದ ಬ್ರಹ್ಮಿಯರಲ್ಲೂ ಭೂತಪೂಜಕರಾದ ಕೇರೆನರಲ್ಲೂ ಸುವಾರ್ತೆಯ ಪ್ರಸಂಗವನ್ನೆಸಗಿ, ಈಗ ಸುಮಾರು 60,000 ಜನರು ಕ್ರಿಸ್ತನ ಭಕ್ತರಾಗಿರುವ ಆ ದೇಶದಲ್ಲಿಯ ಸುವಾರ್ತಾಪ್ರಸಾರಣಕ್ಕೆ ಮೂಲಸ್ಥನಾದನು.

ಕ್ರಿ. ಶ. 1862ನೇ ಅಬ್ದದ ಆರಂಭಕ್ಕೆ ಹಿಂದುದೇಶ ಲಂಕಾದ್ವೀಪ ಬ್ರಹ್ಮಿದೇಶ ಎಂಬೀ 3 ಸ್ಥಳಗಳಲ್ಲಿ 31 ಸೌವಾರ್ತಿಕ ಸಂಘಗಳ ಪ್ರೇಷಿತರು ಕ್ರಿಸ್ತನ ಹೆಸರು ಸಾರುತ್ತಿದ್ದರು; ಆ ಬೇರೆ ಬೇರೆ ಸಂಘಗಳು ಇಂಗ್ಲಂದಿನಲ್ಲಿಯೂ ಸ್ಕೋತ್ಲಂದಿನಲ್ಲಿಯೂ ಐರ್ಲಂದಿನಲ್ಲಿಯೂ ಸ್ವಿತ್ಸೆರ್ಲಂದಿನಲ್ಲಿಯೂ ಗೆರ್ಮಾನಿಯದಲ್ಲಿಯೂ ಉತ್ತರ ಅಮೆರಿಕದಲ್ಲಿಯೂ ಅವೆ; ಹೇಳಿದ ಆ 3 ಸ್ಥಳಗಳಲ್ಲಿ ಅವವುಗಳ ಸಂಬಂಧದಲ್ಲಿರುವ ಸುವಾರ್ತಾಪ್ರಸಾರಕರ ಒಟ್ಟುಸಂಖ್ಯೆಯು 724; ಇವರೊಳಗೆ ಉದ್ಯೋಗಪ್ರತಿಷ್ಠೆ ಹೊಂದಿದ ತತ್ತದ್ದೇಶಜರಾದ 183 ಮಂದಿ; ಉದ್ಯೋಗಪ್ರತಿಷ್ಠೆಯುಳ್ಳ ಆ 724 ಜನ ಸುವಾರ್ತಾಪ್ರಸಾರಕರಿಗೆ 1,776 ಮಂದಿ ದೇಶೀಯ ಪ್ರಸಂಗಿಕರು ಸಹಾಯ ಮಾಡುತ್ತಿದ್ದರು. ಬ್ರಿತಿಷ ಹಿಂದುರಾಜ್ಯದೊಳಗಿನ ಸೌವಾರ್ತಿಕ ಮತದ ಕ್ಷೇತ್ರಗಳಲ್ಲಿ ಅಂದು 2,13,000 ಮಂದಿ ದೇಶೀಯರಾದ ಕ್ರೈಸ್ತರಿದ್ದರು[1]; ಆದರೆ ತಮ್ಮ ವೃತ್ತಿಯ ಪತ್ರಗಳನ್ನು ಪ್ರಕಟಿಸದಂಥ ಸುವಾರ್ತಾಪ್ರಸಾರಕರ ಮುಖದಿಂದ ಕ್ರಿಸ್ತನವರಾದ ಅನೇಕರ ಲೆಖ್ಖವು ಆ ಸಂಖ್ಯೆಯಲ್ಲಿ ಕೂಡಲಿಲ್ಲ. ಕ್ರಿ. ಶ. 1851ನೇ ವರುಷದಿಂದ 1861ನೇದರ ವರೆಗಿರುವ 10 ವರುಷಗಳೊಳಗೆ ಹಿಂದು ದೇಶವೊಂದರಲ್ಲೇ ದೇಶೀಯರಾದ ಸೌವಾರ್ತಿಕ ಕ್ರೈಸ್ತರ ಸಂಖ್ಯೆಯು ಮುಂಚಿಗಿಂತ 41,000 ಹೆಚ್ಚಾಯಿತು; ಅವರು 1862ನೇ ವರುಷದಿಂದ ಈ 1868ನೇದರ ತನಕ ಅದೇ ಸರಾಸರಿಯಿಂದ ಹಿಂದು ದೇಶದಲ್ಲಿ ಮಾತ್ರವಲ್ಲದೆ ಲಂಕೆಯಲ್ಲಿಯೂ ಬ್ರಹ್ಮಿ ದೇಶದಲ್ಲಿಯೂ ಸಹ ಸಂಖ್ಯೆಯಲ್ಲಿ ಅಭಿವೃದ್ಧಿ ಹೊಂದಿದ್ದಾರೆಂತ, ಊಹಿಸಲಿಕ್ಕೆ ಅಭ್ಯಂತರ ಕಾಣುವದಿಲ್ಲ.

ಯುರೋಪೀಯ ಸುವಾರ್ತಾಪ್ರಸಾರಕರ ಸಂಗಡ ಕ್ರಿಸ್ತನಾಥನ ಕಾರ್ಯನಡಿಸುತ್ತಾ ಬಂದ ಉದ್ಯೋಗಪ್ರತಿಷ್ಠೆಯ ಮತ್ತು ಉದ್ಯೋಗಾಪ್ರತಿಷ್ಠೆಯ ಸಕಲ ದೇಶೀಯ ಕ್ರೈಸ್ತರನ್ನು ದೇವರು ತನ್ನ ಹಸ್ತದಲ್ಲಿ ಬರೆದಿದ್ದಾನೆ, ನಿಶ್ಚಯ; ಅವರೆಲ್ಲರೂ ಕೂಡ ತನ್ನ ಕಾಲಕ್ಕೆ ಪೂರ್ಣ ಸಿದ್ಧಿಯನ್ನೈದುವ ದೇವರ ರಾಜ್ಯದಲ್ಲಿ ಸೂರ್ಯನೋಪಾದಿಯ ಜ್ಯೋತಿಯಿಂದ ಪ್ರಕಾಶಿಸುವರು. ಆದರೆ ಅವರ ಹೆಸರುಗಳನ್ನೂ

1) ಹಿಂದುಸ್ಥಾನದಲ್ಲಿ 1,38,545; ಲಂಕಾದ್ವೀಪದಲ್ಲಿ 15,273, 644ನೇ ಪಾನು; ಬ್ರಹ್ಮಿಯಲ್ಲಿ 59,366.

ಅನೇಕಾನೇಕ ಯುರೋಪೀಯ ಸುವಾರ್ತಾಪ್ರಸಾರಕರವುಗಳನ್ನೂ ಈ ಗ್ರಂಥದಲ್ಲಿ ಹೇಳ ಕೂಡದಿದ್ದದು ಸಹಜವೇ.

ಸುವಾರ್ತಾಪ್ರಸಾರಣವು ಹಿಂದು ದೇಶದಲ್ಲೂ ತಂದು ಕೊಡುವ ಆಮುಷ್ಮಿಕ ಮತ್ತು ಐಹಿಕ ಆಶೀರ್ವಾದವನ್ನು ತಿರುನೆಲ್ವೇಲಿಯ ದಕ್ಷಿಣ ಭಾಗದಲ್ಲಿ ಆದದೊಂದು ದೃಷ್ಟಾಂತದಿಂದ ಸ್ವಲ್ಪ ತೋರಿಸೋಣ. ಹಿಂದು ದೇಶದ ದಕ್ಷಿಣಪಥದಲ್ಲಿ ಇಂಗ್ಲಂದಿನ ಎಪಿಸ್ಕೊಪಾಲ ಸುವಾರ್ತಾಪ್ರಸಾರಣಸಂಘದ ಸಹವಾಸದೊಳು ಈಗ 38,619 ಮಂದಿ ಸ್ನಾತರಾದ ಕ್ರೈಸ್ತರಿದ್ದಾರೆ; ಆದರೆ ಕ್ರೈಸ್ತ ಉಪದೇಶ ಪಡೆಯುತ್ತಾ ಇರುವವರೆಲ್ಲರ ಒಟ್ಟುಸಂಖ್ಯೆಯು 52,536. ಇಷ್ಟರವರಲ್ಲಿ 3ನೇ 2 ಅಂಶದವರು ತಿರುನೆಲ್ವೇಲಿಯ ನಾಡಿನಲ್ಲಿ ಇದ್ದಾರು. ಇದರ ತೆಂಕಣ ಭಾಗದಲ್ಲಿ ಈಗ ಮೆಯ್ಞಾಪುರವೆಂಬ ಊರದೆ; ಅದು ತೂತ್ತುಕುಡಿಯ ದಕ್ಷಿಣದಲ್ಲಿ ಬ್ರಾಹ್ಮಣರಿರುವ ಪ್ರಸಿದ್ಧ ಪಟ್ಣವಾದ ತಿರುಚೆನ್ನೂರಿಗೆ ಸಮೀಪ. ಇಂದಿಗೆ 28 ವರುಷಗಳ ಹಿಂದೆ ಅದು ಒಂದು ಚಿಕ್ಕ ಹಳ್ಳಿಯಾಗಿತ್ತು; ಆಗ ಅದರಲ್ಲಿದ್ದ ಗಂಡಸರು ಹೆಂಗಸರು ಮಕ್ಕಳು ಒಟ್ಟಿಗೆ 338 ಜನ; ಇಷ್ಟು ಜನರಲ್ಲಿ 140 ಮಂದಿ ಮಾತ್ರ ಭೂತಗಳ ಸೇವೆ ಬಿಟ್ಟು, ನಿಜ ದೇವರ ಪಾದಕ್ಕೆ ಬಂದು, ಪರಿಶುದ್ಧ ಸ್ನಾನ ಹೊಂದಿದ್ದರು; ಕರ್ಲ ರೇನಿಯನೆಂಬ ಆ ಪ್ರಸಂಗೋದ್ಯೋಗಿಯು[1] ಅಲ್ಲಿ ಪ್ರವರ್ತಿಸಿದ್ದನು. ಆ ಹಳ್ಳಿಯು ಮಹಾ ಉಸುಬಿನ ಕಾಡೊಳಿತ್ತು; ಅಲ್ಲಲ್ಲಿ ಕೆಲವು ತಾಳೇ ಮರಗಳು, ಔಡ್ಲ ಗಿಡಗಳು, ಕೆಲವು ಮುಳ್ಳುಪೊದೆಗಳು ಇದ್ದವಷ್ಟೇ. ಬೇಸಿಗೆಗಾಲದ ಬಿಸುಘಾಳಿಯು ಬೀಸಿ, ಬೆಂದು, ಎಲ್ಲಾನ್ನು ಬೆಂಡಾಗ ಗೈದದಲ್ಲದೆ ಉಸುಬು ಧೂಳುಗಳನ್ನೆಬ್ಬಿಸಿ, ಆ ಹಳ್ಳಿಯನ್ನು ಮುಚ್ಚುತ್ತಿರುವದು; ಅದರ ಮನೆಗಳು ಬರೇ ಗುಡಿಸಲುಗಳು; ಅವು ತಾಳೇ ಮಡಲಿನಲ್ಲಿ ಕಟ್ಟಿದ್ದವಷ್ಟೇ. ತರುವಾಯ ಕೆಲವು ವರ್ಷಕ್ಕೆ ಈಚೆ ಒಬ್ಬ ಸುವಾರ್ತಾಪ್ರಸಾರಕನು ಅಲ್ಲಿ ಒಂದು ಬಂಗಲೆ ಕಟ್ಟಿದ ಮೇಲೆ ಕ್ರಿ. ಶ. 1844ನೇದಕ್ಕೆ ದೇಶೀಯಬಾಲಿಕಾಪೋಷಣಶಾಲೆ ಎಂಬದೊಂದು ದೊಡ್ಡ ಚಲೋ ಮನೆ ಏರಿಸೋಣವಾಯಿತು. 3 ವರುಷದಿತ್ತ ಅತಿ ಸುಂದರವಾದ ಕ್ರೈಸ್ತ ದೇವಾಲಯವು ಜನೋಪಯೋಗಕ್ಕಾಗಿ ತೀರಿ, ಸಿದ್ಧವಾಗಿತ್ತು; ಅದು 2,000 ಜನರನ್ನು ಹಿಡಿಯುವಂಥಾದ್ದು; ಈಗ ಆದಿತ್ಯವಾರಂಪ್ರತಿ ಅದರ ಘಂಟೆಯ ಶಬ್ದವು ಕೇಳಿಸುವಾಗ ಸಕಲ ದಿಕ್ಕಿನಿಂದ ತಪ್ಪದೆ ಸುಮಾರು 1,300 ಜನರು ಅದರೊಳಗಿನ ದೇವಾರಾಧನಕ್ಕೆ ಕೂಡಿ ಬರುತ್ತಿರುವರು. ತನ್ಮಧ್ಯ ಕ್ರಿ. ಶ. 1845ನೇ ಅಬ್ದ ಒಂದು ದೊಡ್ಡ ಸುಂಟರಘಾಳಿಯು ಹಳ್ಳಿಯವರ ಗುಡಿಸಲುಗಳನ್ನೆಲ್ಲಾ ಹಾಳು ಮಾಡಿದಾಗ ಹಳ್ಳಿಯಿದ್ದಲ್ಲಿ ಒಳ್ಳೇ ಊರನ್ನು ಕಟ್ಟಿದರು; ಅದರ ಮನೆಗಳು ಸರಿಯಾದ ಸಾಲು ಸಾಲು

1) 648ನೇ ಪಾನು.

ಗಳಾಗಿವೆ; ಬೀದಿಗಳಲ್ಲಿ ಇತ್ತತ್ತ ತೆಂಗು ಮೊದಲಾದ ಫಲವೃಕ್ಷಾವಳಿಗಳು; ಇವುಗಳಿಗೆ ನೀರು ಬಿಡುವದಕ್ಕೋಸ್ಕರ ಬಹಳ ಭಾವಿಗಳನ್ನು ತೋಡಿದ್ಧಾರೆ. ಆ ಊರೊಳಗೆ ನಮ್ಮ ಸಮಯಕ್ಕೆ 800 ಮಂದಿ ಕ್ರೈಸ್ತರಾದ ಚಾಣಾರು ಇದ್ಧಾರೆ; ಇವರಲ್ಲಿ ಕೆಲವರು ಭೂಮಿ, ಕೆಲವರು ವ್ಯಾಪಾರ, ಕೆಲವರು ತಾಳೇ ಬೆಲ್ಲ ಮಾಡುತ್ತಿರುವರು. ಈಗಿರುವ 2 ಶಾಲೆಗಳಿಗೆ ಹೆಚ್ಚು ಕಡಿಮೆ 100 ಗಂಡು ಹೆಣ್ಣು ಮಕ್ಕಳು ಬರುತ್ತಿರುವರು; ಅವುಗಳಲ್ಲಿಯ ಗಂಡು ಹೆಣ್ಣು ಉಪಾಧ್ಯಾಯರು ಚನ್ನಾಗಿ ಸುಶಿಕ್ಷಿತರಾದ ಕ್ರೈಸ್ತರು; ಅವರೊಳಗೈವರು ಸರಕಾರದಲ್ಲಿ ಪರೀಕ್ಷೆ ಕೊಟ್ಟು, ಅದರ ಶಾಲೆಯ ಇನಾಮು ಪಡೆಯುತ್ತಿದ್ಧಾರೆ. ಕಡೆಯ ವರುಷ ಆ ಊರವರು ಕೂಡಿ ಸುವಾರ್ತಾಪ್ರಸಾರಣದ ಸರ್ವಸಾಧಾರಣ ಭಂಡಕ್ಕೆ 325 ರೂಪಾಯಿ ಹಾಕಿದ್ದಲ್ಲದೆ ವಿಧವಿಧದ ಧರ್ಮಕಾರ್ಯಗಳಿಗೆ ಸಹ ಬಹಳ ಹಣ ವಿನಿಯೋಗಿಸ ಶಕ್ತರಾದರು. ಮುಂಚೆ ಬರೇ ಒಣ ಉಸುಬಿನ ಅರಣ್ಯವಿದ್ದಲ್ಲಿ ಈಗ ಕ್ರೈಸ್ತರು ಕಾರ್ಯಶೀಲತ್ವದಿಂದೊಪ್ಪಿ, ಆ ಭಾವಿಗಳ ನೀರಿನಿಂದ ಚಂದ ತೋಟಗಳನ್ನು ಸಹ ನೆಟ್ಟದ್ಧಾರೆ; ಅವುಗಳಲ್ಲಿ ಹೂವಿನ ಗಿಡ ಕಾಯಿಪಲ್ಯ ನಾನಾ ತರದ ಹಣ್ಣುಗಳು ಆಗುತ್ತಿರುವವು; ಇದನ್ನೋದುವವರಾದ ನಿಮ್ಮಲ್ಲಿ ಒಬ್ಬನು ಅಲ್ಲಿಗೆ ಹೋಗಿ, ಗುಲಾಬಿ ಮಲ್ಲಿಗೆ ಮೊದಲಾದ ಪುಷ್ಪಗಳ ಪರಿಮಳವನ್ನಾಸ್ವಾದಿಸಿ, ಫಾಳಿಗಗಲಾಡುವ ತೆಂಗಿನ ಹೆಡೆಗಳನ್ನು ನೋಡಿ, ಪರಿಪಕ್ವವಾದ ಬಾಳೆ ದ್ರಾಕ್ಷೆ ನೆಲಹಲಸು ಪ್ರಭೃತಿಯಾದ ಹಣ್ಣುಗಳನ್ನು ತಿನ್ನ ಬಹುದು. ಕಾಡು ಇದ್ದದ್ದು ಕ್ರೈಸ್ತತ್ವದಿಂದ ಊರಾಯಿತೆಂಬದಕ್ಕೆ ಸಂದೇಹವೇನೂ ಇಲ್ಲ. ಅದರಲ್ಲಿರುವ ಕ್ರೈಸ್ತರು ಆಮುಷ್ಮಿಕ ಐಹಿಕ ಆಶೀರ್ವಾದಗಳನ್ನನುಭವಿಸುವದೇ ತರ್ಕಾತೀತವಾದ್ದು. ಉಳಿದ ತಿರುನೆಲ್ವೇಲಿ ನಾಡಿನಲ್ಲಿ ಕ್ರೈಸ್ತರಿರುವೆಡೆ ಸಹ ಅದೇ ಪ್ರಕಾರವಾಯಿತೆಂತ, ಹೇಳಿದರೆ ಕ್ರೈಸ್ತತ್ವದ ಮೇಲೆ ಇನ್ನಷ್ಟು ಬಯಕೆ ಹುಟ್ಟುವದಿಲ್ಲವೋ?

ದಕ್ಷಿಣ ತಿರುನೆಲ್ವೇಲಿ ನಾಡಿನ ಮೂಡಣ ಭಾಗದಲ್ಲಿ ಎಪಿಸ್ಕೊಪಾಲ ಸಂಘದವರಿಗೆ ಇರುವದೊಂದು ಸುವಾರ್ತಾಪ್ರಸಾರಣದ ಕ್ಷೇತ್ರವು ಇಡಿಯಂಗುಡಿಯೆಂಬದು; ಇದರಲ್ಲಿಯವನೊಬ್ಬ ಸುವಾರ್ತಾಪ್ರಸಾರಕನು ಕ್ರಿ. ಶ. 1867ನೇ ವರುಷ ಅಲ್ಲಿ ನಡೆದದನ್ನು ಕುರಿತು ಹೀಗೆ ಸಹ ಬರೆದನು, ಏನಂದರೆ—ಈ ವರುಷ ಈ ಕ್ಷೇತ್ರದೊಳಗೆ ಸುವಾರ್ತಾಪ್ರಸಾರಣಕ್ಕೋಸ್ಕರ ದೇಶೀಯ ಕ್ರೈಸ್ತರಿಂದ ಕೂಡಿ ಬಂದ ಹಣವು 1,572 ರೂಪಾಯಿ; ತಲೆತಲೆಗೆ ಅದು 8½ ಅಣೆ. ತಲೆಯೊಂದಕ್ಕೆ ಬಿದ್ದ ಈ ಸರಾಸರಿಯಿಂದ ಆ ಜನರಿಗೆ ಕೀರ್ತಿ ಬರ ತಕ್ಕದ್ದು; ಅವರ ಐಶ್ವರ್ಯಹೀನತೆಯನ್ನೂ ಹಳ್ಳಿಯ ವಾಸವನ್ನೂ ಆಲೋಚಿಸಿದರೆ ಅವರು ಕೂಡಿಸಿದ ಹಣವು ಇನ್ನೂ ಕಣ್ಣಿಗೆ ಬೀಳುತ್ತದೆ.—ದಕ್ಷಿಣ ತಿರುನೆಲ್ವೇಲಿಯ ಸಮಸ್ತ ನಾಡಿನಲ್ಲಿ ದೇಶೀಯರಾ

ದ ಸೌವಾರ್ತಿಕ ಕ್ರೈಸ್ತರು ದೇವರಾಜ್ಯದ ಹಿತಕ್ಕಾಗಿ ವರುಷಂಪ್ರತಿ ಸುಮಾರು 14,000 ರೂಪಾಯಿ ಸಲ್ಲಿಸುತ್ತಿರುವರು.

ಹಿಂದುದೇಶ ಲಂಕಾದ್ವೀಪ ಎಂಬಿವೆರಡು ಸ್ಥಳಗಳಲ್ಲಿ ಮಾತ್ರ ಸುವಾರ್ತಾಪ್ರಸಾರಣದ ತುಸಕ ವರುಷ ವರುಷಕ್ಕೆ ಸುಮಾರು ಹೆಚ್ಚು ಕಡಿಮೆ 29 ಲಕ್ಷ ರೂಪಾಯಿಗಳ ಖರ್ಚು ಉಂಟು. ಆಯಾ ಸ್ಥಳಗಳಲ್ಲಿರುವ ಯುರೋಪೀಯ ಕ್ರೈಸ್ತರು ಇದರ 4ನೇ ಅಂಶ ಒಟ್ಟೈಸಿ ಕೊಡುವರು, ಉಳಿದ ದೊಡ್ಡ ಅಂಶವು ಯುರೋಪದಲ್ಲಿಯೂ ಅಮೆರಿಕದಲ್ಲಿಯೂ ಇರುವ ಕ್ರೈಸ್ತರಿಂದ ಬರುವದು; ಅದಲ್ಲದೆ, ಹಿಂದೆ ಸೂಚಿಸಿದಂತೆ, ದೇಶೀಯ ಕ್ರೈಸ್ತರು ಸಹ ಹಿಂದೆಗೆಯದೆ, ಕ್ರೈಸ್ತತ್ವದ ಬೆಳವಣಿಗೆಗಾಗಿ ತಮ್ಮ ತಮ್ಮ ಅಂಶವನ್ನೀಯುವವರಾಗಿದ್ಧಾರೆ. ಸೌವಾರ್ತಿಕ ಸಭೆಯವರು ಸಕಲ ಭೂಮಿಯಲ್ಲಿ ನಡಿಸುತ್ತಿರುವ ಸುವಾರ್ತಾಪ್ರಸಾರಣವು ಹ್ಯಾಗೂ ರಾಜಕಾರ್ಯವಲ್ಲ, ಭಕ್ತಕಾರ್ಯವೇ! ಎಂತ, ಇಲ್ಲಿ ಹೇಳಲವಶ್ಯವಾಯಿತು; ಅದಕ್ಕೆ ಕೂಡಿ ಬರುವ ಹಣವೆಲ್ಲವೂ ಬಡ ದೊಡ್ಡವರೂ ಹಿರಿ ಕಿರಿಯರೂ ತಮ್ಮ ರಕ್ಷಕನಾದ ಕ್ರಿಸ್ತನ ಮೇಲಿನ ಪ್ರೀತಿಯಿಂದ, ಯಾವದೊಂದೂ ಬಲಾತ್ಕಾರವಿಲ್ಲದೆ, ತಾವಾಗಿ ಕೊಡುವಂಥಾ ದಾನವೇ. ಇದಕ್ಕಾಗಿ ಒಂದು ಸಣ್ಣ ನಿದರ್ಶನ ಹೇಳುವ! ಏನಂದರೆ, ವಿಲಾಯತಿಯಲ್ಲಿ ಒಂದಾನೊಂದು ದಿನ ಒಬ್ಬ ಚಿಕ್ಕ ಕುರುಡಿಯು ಒಬ್ಬ ಪ್ರಸಂಗೋದ್ಯೋಗಿಯ ಬಳಿಗೆ ಬಂದು, ಸುವಾರ್ತಾಪ್ರಸಾರಣಕ್ಕೋಸ್ಕರವೆಂತ, ಅವನ ಕೈಯಲ್ಲಿ 18 ರೂಪಾಯಿ ಕೊಟ್ಟಳು. ಆ ಉದ್ಯೋಗಿಯು ಅವಳ ಸ್ಥಿತಿಗತಿ ಇದ್ದಂತೆ ಬಲ್ಲವನಾಗಿದ್ದು, ಅಷ್ಟು ಬಹಳ ಹಣಕ್ಕೆ ವಿಸ್ಮಯ ಪಟ್ಟು—ನೀನು ಬಡ ಕುರುಡಿಯೇ; 18 ರೂಪಾಯಿಗಳ ಕೊಡಲಿಕ್ಕೆ ನಿನಗಳವಲ್ಲ! ಎಂತ, ಹೇಳಲು, ಅವಳು ದುಃಖ ಗೊಂಡು, ಸಮ್ಮತಿಸಲೊಲ್ಲದೆ, ಉತ್ತರ ಕೊಟ್ಟದ್ದೇನು—ನಾನು ಕುರುಡಿಯೇ ಸರಿ; ಆದರೆ ನೀವು ನೆನಸುವಷ್ಟು ತೀರಾ ಬಡವಳಲ್ಲವಲ್ಲದೆ ಕಣ್ಣಿರುವ ಹುಡುಗಿಯರಿಗಿಂತ ಇಷ್ಟನ್ನು ಕೊಡುವದು ನನಗೆ ಸುಲಭ. ನಾನು ಬುಟ್ಟಿ ಹೆಣೆಯುವವಳು, ಮತ್ತೆ ನಾನು ಕುರುಡಿಯಾದ ಕಾರಣ ಈ ಕೆಲಸವನ್ನು ಬೆಳಕಿಲ್ಲದೆ ಚನ್ನಾಗಿ ಮಾಡ ಬಲ್ಲೆನು; ಆದರೆ ಬುಟ್ಟಿ ಹೆಣೆಯುವ ಬೇರೆ ಹೆಣ್ಣುಮಕ್ಕಳಲ್ಲೊಬ್ಬಳು ತನ್ನ ಕೆಲಸ ನಡಿಸುವಲ್ಲಿ ಹಿಮಗಾಲದ ದೀರ್ಘ ರಾತ್ರಿಗಳಲ್ಲಿ ಮಾತ್ರ ಎಣ್ಣೆ ಕೊಂಡು ಕೊಳ್ಳುವದಕ್ಕೆ 18 ರೂಪಾಯಿಗಳಿಗಿಂತ ಹೆಚ್ಚು ವೆಚ್ಚ ಮಾಡ ಬೇಕಾಗುವದೇ ನಿಶ್ಚಯ. ಹಾಗಾದರೆ ಇಷ್ಟು ಹಣ ಕೂಡಿಸಿ ಕೊಡುವದು ನನಗೆ ಕಷ್ಟವಲ್ಲವೈಯ್ಯ! ಅದೆಲ್ಲವನ್ನೂ ಸುವಾರ್ತಾಪ್ರಸಾರಣಕ್ಕೆ ತಕ್ಕೊಳ್ಳಿರೆಂತ, ನಿಮ್ಮನ್ನು ಬೇಡಿ ಕೊಳ್ಳುತ್ತೇನೆ.—ಯುರೋಪೀಯ ಮತ್ತು ಅಮೆರಿಕೀಯ ಕ್ರೈಸ್ತರಲ್ಲಿ ಹಲವರು ತಮ್ಮ ಪ್ರಾಪ್ತಿಯ ಹತ್ತನೇ ಪಾಲನ್ನು ಸುವಾರ್ತಾಪ್ರಸಾರಣಕ್ಕೆ ಕೊಡುತ್ತಿದ್ಧಾರೆ; ಬೇರೊಬ್ಬರು ತಮ್ಮ ಬೆಳ್ಳಿ ಭಂಗಾರಗಳ ಆಭರಣಗಳನ್ನು

ಮಾರಿ, ಬಂದದ್ದನ್ನು ಅದಕ್ಕಿತ್ತರು; ಮತ್ತೊಬ್ಬರು ತಮ್ಮ ಮನೆಗಳಲ್ಲಿ ಒಂದೊಂದು ಡಬ್ಬಿ ತೂಗ ಹಾಕಿ, ಒಂದು ಕ್ರಮದಿಂದ ಅದಕ್ಕೆ ಹಣ ಹಾಕಿ, ಬೆಳದು ಬಂದದ್ದನ್ನು ಸುವಾರ್ತಾಕಾರ್ಯಕ್ಕೆ ಒಪ್ಪಿಸುತ್ತಿದ್ದಾರೆ; ಮಗುಳೊಬ್ಬರು ತಮ್ಮ ದೇಶದ ಸಕಲ ದೊಡ್ಡ ಸ್ಥಳಗಳಲ್ಲಿ ಆಗುತ್ತಿರುವ ಸುವಾರ್ತಾಪ್ರಸಾರಣಹಬ್ಬಗಳಿಗೆ ಹೋಗಿ, ಅಲ್ಲಿಯ ಡಬ್ಬಿಗಳಲ್ಲಿ ತಮ್ಮ ಧರ್ಮಾಂಶವನ್ನು ಇಡುತ್ತಿದ್ದಾರೆ; ಇನ್ನೊಬ್ಬರು ಹೆಣಿದು ಹೊಲಿದು ನೇಯ್ದು ಮಾಡಿದ್ದನ್ನು ಸುವಾರ್ತಾಕಾರ್ಯಕ್ಕೆ ಬಳಿಸುತ್ತಿದ್ದಾರೆ; ಏನೂ ಕೊಡ ಕೂಡದಂಥವರು ಹ್ಯಾಗೂ ಅದಕ್ಕಾಗಿ ದೇವರಿಗೆ ಪ್ರಾರ್ಥಿಸುತ್ತಿದ್ದಾರೆ. ದುಡ್ಡುಸಂಗ್ರಹಸಮಾಜಗಳು ಸಹ ಅವೆ; ಅವುಗಳವರು ಅನೇಕ ಸದ್ಭಕ್ತರ ಹೆಸರನ್ನು ಒಂದು ಪುಸ್ತಕದಲ್ಲಿ ಬರೆದು, ಇದನ್ನು ತಕ್ಕೊಂಡು ಹೋಗಿ, ಊರು ಸುತ್ತಿ, ಆಯಾ ಭಕ್ತರಿಂದ ಎರಡೆರಡು ದುಡ್ಡಿನ ಪ್ರಕಾರವೇ ಅವರ ಕೈಯೊಪ್ಪಿತ ಸಮೇತ ಸಂಗ್ರಹಿಸಿ, ಸುವಾರ್ತಾಪ್ರಸಾರಣಸಮಾಜದವರಿಗೆ ಕಳುಹಿಸಿ ಕೊಡುವರು. ಬಾಹ್ಯ ಸುವಾರ್ತಾಪ್ರಸಾರಣವು ಕೃಚ್ಚ್ರಸ್ಥಿತಿಯುಳ್ಳ ವಿಗ್ರಹಾರಾಧಕಾದಿ ಜನಗಳಿಗೆ ಕ್ರಿಸ್ತನಲ್ಲಿಯ ನಿತ್ಯ ಜೀವವನ್ನು ದೊರಕಿಸುತ್ತಿರುವ ಕರುಣಾಕಟಾಕ್ಷವುಳ್ಳ ವೃತ್ತಿಯೇ.

ಹಿಂದೆ ಬ್ರಿತಿಷ ಹಿಂದುರಾಜ್ಯವನ್ನು ಕುರಿತು ಬಹಳ ಹೇಳಿದ್ದರೂ ಇನ್ನೊಂದು ನೆನಸುವದು ಅವಶ್ಯ; ಆ ರಾಜ್ಯದಲ್ಲಿ ಸೌವಾರ್ತಿಕರಾದ ಸತ್ಸಾಕ್ಷಿಗಳೂ ರಕ್ತಸಾಕ್ಷಿಗಳೂ[1] ಸಹ ಇದ್ದರೆಂಬದೇ. ಅಂಥವನೊಬ್ಬ ಸತ್ಸಾಕ್ಷಿಯ ವೃತ್ತಾಂತವೇನೆಂದರೆ, ಕ್ರಿ. ಶ. 1857ನೇ ವರುಷ ಹಿಂದುಸ್ಥಾನದಲ್ಲಿ ಶಿಪಾಯಿಗಳ ಕಾಟಕಾಯಿಯಾಗಿ, ಕಾಟಕಾಯಿಗಾರರು ಯುರೋಪೀಯರನ್ನಲ್ಲದೆ ಹಿಂದು ಕ್ರೈಸ್ತರನ್ನು ಕೂಡ ಕೊಲ್ಲ ಹುಡುಕಲು, ಭಕ್ತ್ಯಾನಂದದಿಂದ ಅವರ ಪೆಟ್ಟುಗಳಿಗೊಳಗಾಗಿ ಮರಣವನ್ನಾದರೂ ತಾಳಿದ ದೇಶೀಯ ಕ್ರೈಸ್ತರು ಸ್ವಲ್ಪ ಜನರಲ್ಲ; ಆದರೆ ವಿಶ್ವಾಸದೃಢರಾಗದಿದ್ದು ತಮ್ಮ ಇಹಜೀವರಕ್ಷಣಕ್ಕೋಸ್ಕರ ಕ್ರಿಸ್ತನನ್ನಲ್ಲಗಳೆದವರು ಸ್ವಲ್ಪ ಜನರೇ. ಆ ಕಾಟಕಾಯಿಯ ಸಮಯ ಫತ್ತೇಘಡವೆಂಬಲ್ಲಿಂದ ಗೋಪೀನಾಥನಂದಿ ಎಂಬವನು ಅಕಸ್ಮಾತ್ತಾಗಿ ಅಲ್ಲಹಾಬಾದಿಗೆ ಬಂದಿದ್ದನು. ಅವನು ಕ್ರೈಸ್ತನು, ಕ್ರಿ. ಶ. 1832ನೇ ವರುಷ ದಫ್ಫನೆಂಬ ಆ ಮಹಾ ಪಂಡಿತನು[2] ಅವನಿಗೆ ಪರಿಶುದ್ಧ ಸ್ನಾನ ಕೊಟ್ಟಿದ್ದನು; ತರುವಾಯ ಅವನು ಉದ್ಯೋಗಪ್ರತಿಷ್ಠೆ ಹೊಂದಿ, ಆ ಫತ್ತೇಘಡದಲ್ಲಿ ಸುವಾರ್ತಾಪ್ರಸಾರಕನಾಗಿ, ತನ್ನ ವಿದ್ಯಾಸಂಪತ್ತಿನಿಂದಲೂ ಸುವೃತ್ತಿಯಿಂದಲೂ ಯುರೋಪೀಯರಲ್ಲಿಯೂ ದೇಶೀಯರಲ್ಲಿಯೂ ಹೆಸರು ಗೊಂಡಿದ್ದನು. ಅವನು ಅಂದು ಅಲ್ಲಹಾಬಾದಿಗೆ ಬಂದಿರಲು, ಕಾಟಕಾಯಿಗಾರರಿಗೋಸ್ಕರ ಪಲಾಯನ ತೆಗೆದು, ಅ

1 )104ನೇ ಪಾನು. 2) 654, 656ನೇ ಪಾನು.

ದನ್ನು ಬಿಟ್ಟು ಬಿಡಲಿಕ್ಕೆ ಪ್ರಯತ್ನಿಸುವವನಾಗಿ, ದಾರಿಯಲ್ಲಿ ಹಲವು ಸಾರಿ ರೋಷಯುಕ್ತ ಜನರ ಸಮೂಹಗಳನ್ನು ದಾಟುವಲ್ಲಲ್ಲಿ ಭಯವಿಲ್ಲದೆ ಕ್ರಿಸ್ತನ ಹೆಸರನ್ನು ನಿವೇದಿಸಿದರೂ ಪಾರಾಗಿ, ಕಡೆಯಲ್ಲಿ ಇನ್ನೂ ತಪ್ಪಿಸಿ ಕೊಳ್ಳುವ ಅನು ಗಾಣದೆ, ಅಲ್ಲಹಾಬಾದಿಗೆ ಹಿಂದಿರುಗಿದ ಮೇಲೆ ಕಾಟಕಾಯಿಯವರು ಅವನನ್ನು ಹಿಡಿದು, ಅಲ್ಲಿಯ ಒಡೆತನವನ್ನಾಕ್ರಮಿಸಿ ಕೊಂಡಿದ್ದ ಒಬ್ಬ ಮುಲ್ಲನ ಬಳಿಗೊಯಿದರು; ಗೋಪೀನಾಥನ ಹೆಂಡತಿ ಮಕ್ಕಳು ಅವನ ಸಂಗಡಲೇ ಇದ್ದರು. ಆ ಮುಲ್ಲನು, ನೀನು ಕ್ರೈಸ್ತನೋ? ಎಂದು, ಕೇಳಲು, ಅವನು ಅಂಜದೆ, ಹೌದೆಂದನು. ನೀನು ಎಷ್ಟು ಮಂದಿ ಮೊಹಮ್ಮದಿಯರನ್ನು ಮೋಸದಿಂದ ನಿನ್ನ ಮತಕ್ಕೆಳೆದು ಶೇರಿಸಿದಿ? ಎಂಬ ಪ್ರಶ್ನೆಗೆ ಅವನು—ನಾನೊಬ್ಬನಿಗೂ ಮೋಸ ಮಾಡಲಿಲ್ಲ; ಆದರೆ ದೇವಕೃಪೆಯ ಪ್ರೇರಣೆಯಿಂದ ಸುಮಾರು 12 ಮಂದಿ ಮೊಹಮ್ಮದಿಯರು ಅಂಧಕಾರಕ್ಕೆ ಬೆನ್ನು ಹಾಕಿ, ಸುವಾರ್ತೆಯ ಆಶ್ಚರ್ಯವಾದ ಬೆಳಕಿಗೆ ತಿರಿಗಿ ಕೊಂಡಿದ್ಧಾರೆ ಎಂದು, ಉತ್ತರವಿತ್ತನು. ಆ ಮುಲ್ಲನು ಅದು ಕೇಳಿ, ಅತಿ ಕುಪಿತನಾಗಿ, ಬೈದು—ನೀನು ವಿಶೇಷದಿಂದ ಕ್ರೂರವಾದಂಥ ಮರಣ ಪಡ ಬೇಕು; ನಿನ್ನ ಮೂಗು ಕಿವಿ ಕೈಗಳನ್ನು ಕೊಯ್ಯ ಬೇಕು; ಆದರೆ, ನಿನ್ನ ವೇದನೆಯು ಹೆಚ್ಚಾಗುವಂತೆ, ಒಂದೇ ಹೊತ್ತಿಗಲ್ಲ, ಬೇರೆ ಬೇರೆ ಹೊತ್ತಿನಲ್ಲೇ; ನಿನ್ನ ಹೆಂಡತಿಗೆ ಅದೇ ಗತಿಯನ್ನೈದಿಸುವೆನು; ನಿನ್ನ ಮಕ್ಕಳನ್ನು ಮಾರಿ, ದಾಸರಾಗ ಮಾಡುವೆನೆಂದು, ಒದರಿದನು. ಆದಾಗ್ಯೂ ಗೋಪೀನಾಥನು ತಾನಲ್ಲದೆ ಅವನ ಸತಿಯು ಸಹ ನಿರ್ಭಯದಿಂದೊಪ್ಪಲು, ಮುಲ್ಲನು ಬೆರಗು ಗೊಂಡು, ಸ್ವಲ್ಪ ಶಾಂತನಾಗಿ—ನಿನಗೂ ನಿನ್ನ ಕುಟುಂಬಕ್ಕೂ ಕನಿಕರ ಪಡುತ್ತೇನೆ; ಮೊಹಮ್ಮದಿಯರಾಗಿರಿ, ಆಗ ನಿಮ್ಮ ಜೀವವು ಉಳಿಯುವ ಹೊರ್ತು ದೊಡ್ಡ ಹುದ್ದೆಗಳನ್ನು ಪಡೆಯುವಿರೆಂದು, ನುಡಿಯುವಲ್ಲಿ ಆ ಕ್ರೈಸ್ತನು—ಏನೊಂದೂ ಕಾರಣದಿಂದ ಕ್ರಿಸ್ತಕರ್ತನನ್ನು ಅತಿಗಳೆಯುವದಕ್ಕಿಂತ ಸಾಯುವದೇ ನನಗೆ ಲೇಸು! ಲೋಕದ ನಿಜ ರಕ್ಷಕನು ಅವನೇ! ಎಂದು, ಹೇಳುವದಕ್ಕೆ ಅವನ ಹೆಂಡತಿಯು ಮಾತಿನಿಂದ ಒಡಂಬಟ್ಟಳು. ಅಂದು ಆ ಮುಲ್ಲನು ಅವರೆಲ್ಲರನ್ನು ಶೆರೆಮನೆಗೆ ಹಾಕಿಸಿದನು; ಅವರನ್ನಲ್ಲಿ ಕಾಯುವವರು ನಿತ್ಯ ಅವರ ಮೇಲೆ ಕತ್ತಿಗಳನ್ನು ಝಳಪಿಸುತ್ತಿರುವರು; ಆದರೂ ದೇವರ ವಾಕ್ಯದಿಂದ ಅವರಿಗೆ ಬಹಳ ಆದರವಾಯಿತು. ತರುವಾಯ ಅವರು ಅದೇ ಶೆರೆಮನೆಯಲ್ಲಿ ಇತರ ಹಿಂದು ಕ್ರೈಸ್ತರನ್ನೂ ಯುರೋಪೀಯರನ್ನೂ ನೋಡಲು, ಗೋಪೀನಾಥನು ಅವರನ್ನು ಕೂಡ ಕರೆದು, ಅವರೊಂದಿಗೆ ದೇವರಿಗಡ್ಡ ಬಿದ್ದು, ಪ್ರಾರ್ಥಿಸಿದನು; ಕಾವಲಿಯ ಮುಖ್ಯಸ್ಥನು ಅದನ್ನು ಕಂಡು, ಬಂದು, ಅದು ಆಗ ಬಾರದೆಂದು, ಗೋಪೀನಾಥನಿಗೆ ತನ್ನ ಕಾಲಿನಿಂದ ಒದ್ದಿ, ಅವನನ್ನು ತನ್ನವರನ್ನಗಲಿಸುವ ಹಾಗೆ ನೋಡಲಿಕ್ಕೆ, ಇವರು ಅವನನ್ನು ಘಟ್ಟಿಯಾಗಿ ಹಿಡು ಕೊಂಡು

ನಿಲ್ಲಲಿಕ್ಕೆ, ಕಾಟಕಾಯಿಯವರದೊಂದು ಗುಂಪು ಅವರ ಮೇಲೆ ಬಿದ್ದು, ಅವರನ್ನು ಬೇರೆ ಬೇರೆ ಮಾಡಿ, ಗೋಪೀನಾಥನನ್ನು ಹೊರಗೆಳೆದೊಯಿದು, ಅವನ ಕಾಲನ್ನು ಕೋಳದೊಳಿಟ್ಟು, ಅವನ ಹೆಂಡತಿಯ ತುರುಬನ್ನು ಹಿಡಿದು, ದೊಡ್ಡ ಘಾಯವಾಗುವಂತೆ ಅವಳ ತಲೆಯನ್ನು ಒಂದು ಕಲ್ಲಿಗೆ ಬಡಿದು, ಅವಳನ್ನು ಒಳಗೆ ಮುಚ್ಚಿಬಿಟ್ಟರು. ಗೋಪೀನಾಥನು 5 ದಿವಸವೇ ಆ ಪ್ರಕಾರ ಮಹಾ ಬಿಸಿಲಿನಲ್ಲಿ ಮಲಗುತ್ತಿದ್ದನಂತರ 6ನೇದಕ್ಕೆ ಮುಲ್ಲನು ಅವನೆಡೆಗೆ ಬಂದು, ಮೊಹಮ್ಮದಿಯನಾಗೆಂತ, ಅವನಿಗೆ ತಿರಿಗಿ ಬೋಧಿಸಿದನು. ಆ ಮಾತು ತಿರಿಗಿ ನಿರರ್ಥಕವಾಗಲು, ಅವನು ಕೋಪಿಷ್ಠನಾಗಿ, ಭಯ ತೋರಿಸುವ ಮಾತುಗಳನ್ನಾಡಿ, ಹಿಂದಕ್ಕೆ ಹೋದನು. ಆದರೆ ಅದೇ ದಿನದಲ್ಲಿ ಇಂಗ್ಲಿಷರು ಆಗಮಿಸಿ, ಕಾಟಕಾಯಿಯವರನ್ನು ಗೆದ್ದು, ಗೋಪೀನಾಥನನ್ನೂ ಅವನ ಕುಟುಂಬದವರನ್ನೂ ಬಿಡಿಸಿ, ರಕ್ಷಿಸಿದರು.—ಅಲ್ಲಹಾಬಾದಿನಲ್ಲಿ ಗೋಪೀನಾಥನು ಹ್ಯಾಗೋ, ಹಾಗೆಯೇ ಬೇರೆ ಸ್ಥಳಗಳಲ್ಲಿ ಸಹ ಸತ್ಸಾಕ್ಷಿಗಳು ಪರಿಶೋಭಿಸುತ್ತಿದ್ದರು; ಆದರೆ ಅದೇ ಕಾಲದಲ್ಲಿ ಡಿಲ್ಲಿ ಬರೇಲಿ ಫತ್ತೇಘಡ ಎಂಬಲ್ಲಿ ಅನೇಕ ಜನ ದೇಶೀಯರಾದ ಕ್ರೈಸ್ತ ರಕ್ತಸಾಕ್ಷಿಗಳು ಕೂಡ ಮೆರೆಯದಿರಲಿಲ್ಲ. ಹಿಂದು ದೇಶಜರಲ್ಲಿ ಸಹ ನಿಜ ಹೃತ್ಪರಿಣಾಮ ಪಟ್ಟಂಥ ಕ್ರೈಸ್ತರಿದ್ದಾರೆಂಬದಕ್ಕೆ[1] ಅತರ್ಕ್ಯವಾದ ಸಾಕ್ಷಿಯು ಅದೇ!

ಹಿಂದು ದೇಶದ ಹೊರಗೆ ನಡೆಯುವ ಸುವಾರ್ತಾಪ್ರಸಾರಣದಲ್ಲಿ ಲೊಂದನಿನ ಸಂಘ ಮೊದಲಾದ ಸಂಘಗಳ ಪ್ರೇಷಿತರು ಪೊಲುನೇಸಿಯವೆಂಬ ಆ ಪಾಕಿಫಿಕ ದ್ವೀಪಗಳಲ್ಲಿ[2] ನಡಿಸುತ್ತಿರುವದನ್ನು ವಿಶೇಷವಾಗಿ ನೆನಸ ತಕ್ಕದ್ದು. ಕ್ರಿ. ಶ. 1795ನೇ ವರುಷ 4 ಸೌವಾರ್ತಿಕ ಶಾಖೆಗಳ ಪ್ರಸಂಗೋದ್ಯೋಗಿಗಳು ಅಂದರೆ ಪ್ರೆಸ್ಬುತೆರಿಯಾಲರಾದ ಏಳ್ವರು, ಇಂದೆಪೆಂದೆಂತರಾದ ಹದಿನೆಂಟು ಜನರು, ಎಪಿಸ್ಕೊಪಾಲರಾದ ಮೂವರು, ಮೆಥೊದಿಸ್ತರಾದ ಮೂವರು, ಲೊಂದನಿನ ಸುವಾರ್ತಾಪ್ರಸಾರಣಸಂಘವನ್ನು[3] ನಿರ್ಮಿಸಿದಾಗ ಸಕಲ ಸೌವಾರ್ತಿಕ ಶಾಖೆಗಳ 200 ಜನ ಸಭೋದ್ಯೋಗಿಗಳು ನೆರೆದ ಮೊದಲಿನ ಸಮಾಗಮದ ಸಮಯದಲ್ಲಿ ತಮ್ಮ ಕಡೆಯ ಪ್ರೇಷಿತರು ಹಿಂದು ದೇಶ ಆಫ್ರಿಕ ಖಂಡ ಮುಂತಾದ ಹಲವು ಭೂಭಾಗಗಳಿಗೆ ಹೋಗಿ ಸುವಾರ್ತೆ ಸಾರುವದಕ್ಕೆ ಒಳ್ಳೇ ಅನುಕೂಲ ಕಾಣದಿರಲು, ಅವರು, ಪಾಕಿಫಿಕ ದ್ವೀಪಗಳಿಗೆ ಶೇರಿದ ಸಖ್ಯದ್ವೀಪಗಳೆಂಬವುಗಳದೊಂದು ಗಡ್ಡೆಯಾದ ತಹಿತಿ ಎಂಬಲ್ಲಿ ಸುವಾರ್ತಾಪ್ರಸಾರಣವನ್ನಾರಂಭಿಸ ಬೇಕೆಂದು, ನಿಶ್ಚಯಿಸಿ, ಅಲ್ಲಿಗೆ ನಿಮ್ಮಿಂದ ನಮ್ಮನ್ನು ಕಳುಹಿಸಿ ಕೊಳ್ಳುವೆವೆಂದು, ಹೇಳುವ ಅನೇಕರಲ್ಲಿ 30 ಜನರನ್ನು ಆರಿಸಿ, ಇವರನ್ನು ತೆಕ್ಕೊಂಡು ಹೋಗುವದಕ್ಕೆ ಒಂದು ಸ್ವಂತ ಹಡಗ ಸಿದ್ಧ ಮಾಡಿದ ಮೇಲೆ ವಿಲ್ಸನ

1) 535ನೇ ಪಾನು ಸರಿ ನೋಡು. 2) 638ನೇ ಪಾನು. 3) 647ನೇ ಪಾನು.

ನೆಂಬ ಒಬ್ಬ ಭಕ್ತಿಯುಳ್ಳ ನೌನಾಯಕನು, ಸಂಬಳವಿಲ್ಲದೆ ಅವರನ್ನು ಅಲ್ಲಿಗೊಯ್ಯುವೆನೆಂದು, ತನ್ನ ಸೇವೆ ತೋರಿಸಿದನು. ಹೀಗಿರಲಾಗಿ ಮರುವರುಷ ಆ ಸುವಾರ್ತಾಪ್ರಸಾರಕರಿಗೆ 8,000ಕ್ಕಿಂತ ಹೆಚ್ಚು ಮಂದಿ ಕೂಡಿರುವಲ್ಲಿ ಉದ್ಯೋಗಪ್ರತಿಷ್ಠೆಯಾಗಲು, ಆ ಸುವಾರ್ತಾಪ್ರಸಾರಕರು ವೋಣಗಾಲೂರಿದೆಡೆ ಒಬ್ಬ ಪ್ರಸಂಗೋದ್ಯೋಗಿಯು ಅವರಲ್ಲೊಬ್ಬೊಬ್ಬನಿಗೆ—ನಮ್ಮ ಪ್ರಿಯ ಸಹೋದರನೇ, ಈ ಪರಿಶುದ್ಧ ಬರಹಕ್ಕನುಗುಣವಾಗಿ ಹೊರಟು ಹೋಗಿ, ನಿನ್ನ ಉದ್ಯೋಗದ ಮತ್ತು ನಿನ್ನ ಆತ್ಮವರಗಳ ಮತ್ತು ನಿನ್ನ ಶಕ್ತಿಯ ಮೇರೆಗೆ ವಿಗ್ರಹಾರಾಧಕರಿಗೆ ಸುವಾರ್ತೆ ಸಾರೆಂದು, ಒಂದೊಂದು ದೇವವಾಗ್ಗ್ರಂಥ ಕೊಡುವಂದಂದು ಆಯಾ ಸುವಾರ್ತಾಪ್ರಸಾರಕನು, ದೇವರ ಸಹಾಯದಿಂದ ಹಾಗಾಗಲಿ! ಎಂದು, ಉತ್ತರ ಹೇಳಿದನು. ಅದಕ್ಕೆ ಕೆಲವು ವಾರ ಈಚೆ ವಿಲ್ಸನನ ಪರಿಪಾಲನೆಯೊಳಗೆ ಹೊರಡೋಣವಾಯಿತು. ತಹಿತಿಯವರು ಅವರನ್ನು ಸಲುಗೆಯಿಂದ ತಮ್ಮಲ್ಲಿ ಶೇರಿಸಿದರೂ, ಪೂರಾಗಿ ನೀತಿಗೆಟ್ಟವರೆಂತ, ಬೇಗ ಕಾಣಿಸಿ ಕೊಂಡರು. ಆದಾಗ್ಯೂ ಸರ್ವತ್ರಾಣಿಯಾದ ದೇವರು ಆ ದ್ವೀಪದಲ್ಲಿಯೂ ಆ ಕಡೆಯ ಬೇರೆ ಹೇರಳ ದ್ವೀಪಗಳಲ್ಲಿಯೂ ಆಗಿನ ಸುವಾರ್ತಾಪ್ರಸಾರಕರ ಮೂಲಕವೂ ಇತ್ತಣವರ ಮೂಲಕವೂ ಹೃತ್ಪರಿಣಾಮದ ಮಹಾದ್ಭುತಗಳಾಗ ಗೊಟ್ಟನು. ಆ ಲೊಂದನಿನವರಲ್ಲಿ ಕ್ರಿ. ಶ. 1816ನೇ ವರುಷ ಸುತ್ತ ಜೊನ್ ವಿಲ್ಲಿಯಮ್ಸನೆಂಬವನು ಬಹು ಪ್ರಖ್ಯಾತಿ ಗೊಂಡನು. ಲೊಂದನಿನವರ ಅತ್ಲಾಗಿನ ಕ್ಷೇತ್ರಗಳಲ್ಲಿ ಈಗ 52 ಸಾವಿರಕ್ಕಿಂತ ಹೆಚ್ಚು ಮಂದಿ ದೇಶೀಯ ಕ್ರೈಸ್ತರಿದ್ದಾರೆ.—ಪಾಕಿಫಿಕ ದ್ವೀಪಗಳಲ್ಲೊಂದಾದ ನ್ಯೂಸೀಲಂದೆಂಬದರಲ್ಲಿ ಕ್ರಿ. ಶ. 1809ನೇ ವರುಷ ಸಮ್ಯುವೆಲ್ ಮಾರ್ಸ್ದೆನನೆಂಬ ಎಪಿಸ್ಕೊಪಾಲ ಪ್ರಸಂಗೋದ್ಯೋಗಿಯು ಇಂಗ್ಲಂದಿನ ಎಪಿಸ್ಕೊಪಾಲ ಸಭೆಯ ಸಂಘದವರ ಒತ್ತಾಸೆಯಿಂದ ಸುವಾರ್ತಾಪ್ರಸಾರಣವನ್ನೆಸಗಿದನು; ಬಳಿಕ ಕ್ರಿ. ಶ. 1822ನೇ ವರುಷದಾರಭ್ಯ ಮೆಥೊದಿಸ್ತರೂ ಆ ಗೊಸ್ನೆರನೆಂಬವನ[1] ಪ್ರೇಷಿತರಾದ ಗೆರ್ಮಾನರೂ ಕೂಡ ಅಲ್ಲಿ ಪ್ರವೇಶಿಸಿ, ದೇವರ ರಾಜ್ಯವನ್ನು ವಿಸ್ತರಿಸುವದರಲ್ಲಿ ಸಹಾಯಕರಾದರು; ಈಗ ಅಲ್ಲಿರುವ ಕ್ರೈಸ್ತರ ಸಂಖ್ಯೆಯು 30 ಸಾವಿರಕ್ಕೆ ಮಿಾರುತ್ತದೆ.—ಆ ಪಾಕಿಫಿಕ ದ್ವೀಪಗಳಲ್ಲಿ ಸಂದ್ವಿತ್ಸ್ನಗಡ್ಡೆಗಳೆಂಬವು ಸಹ ಇರುತ್ತವೆ; ಇವುಗಳಲ್ಲೊಂದಾದ ಓವೈಹಿಯಲ್ಲಿ ಕೂಕನೆಂಬ ಆ ಪ್ರಸಿದ್ಧ ನೌನಾಯಕನು[1] ತನ್ನ 3ನೇ ಭೂಪರಿಯಾತ್ರೆಯಲ್ಲಿ ಕ್ರೂರ ವಿಗ್ರಹಾರಾಧಕರಿಂದ ಹತನಾಗಿದ್ದನು; ಈ ಗಡ್ಡೆಗಳಿಗೆ ಕ್ರಿ. ಶ. 1820ನೇ ವರುಷ ಮೊದಲು ಬಂದ ಸುವಾರ್ತಾಪ್ರಸಾರಕರು ಅಮೆರಿಕದವರೇ; ಕ್ರಿ. ಶ. 1838ನೇ ವರುಷದಾರಭ್ಯ ಅವು ಕ್ರೈಸ್ತ ಗಡ್ಡೆಗಳೇ ಎನ್ನಿಸುತ್ತವೆ; ಅವುಗಳಲ್ಲಿರುವ ದೇಶೀಯ ಕ್ರೈಸ್ತರು ಸುಮಾರು

1) 634, 658ನೇ ಪಾನು.

1,20,000 ಮಂದಿ. ಆ ದಿಶೆಯಲ್ಲಿ ಸಹ ಇರುವ ಪ್ರೀತಿಗಡ್ಡೆಗಳಲ್ಲಿಯೂ ಫೀಜಿಗಡ್ಡೆಗಳಲ್ಲಿಯೂ ಕ್ರಿ. ಶ. 1822ನೇ ವರುಷ ಹಿಡಿದು ಮೆಥೊದಿಸ್ತರು ಶುಭ ಗತಿಯೊಡನೆ ಕ್ರೈಸ್ತತ್ವ ಹುಟ್ಟಿಸುತ್ತ ಬಂದಿದ್ದಾರೆ; ಈಗ ಅವೆರಡರ ನಿವಾಸಿಗಳಲ್ಲಿ 3ನೇ ಅಂಶದವರು ಕ್ರಿಸ್ತನವರೇ. ಆ ಫೀಜಿಗಡ್ಡೆಗಳನ್ನು ಕುರಿತ ಸ್ವಲ್ಪ ವಿವರವೇನೆಂದರೆ, ಅವಲ್ಲಿಯ ವಿಗ್ರಹಾರಾಧಕರು ಪುರುಷಾದರು ಅಂದರೆ ಮನುಷ್ಯಮಾಂಸ ಸಹ ಭಕ್ಷಿಸುವಂಥವರು. ನಿದರ್ಶನಕ್ಕಾಗಿ ಇಂದಿಗೆ ಕೆಲವು ವರುಷ ಮಾತ್ರ ಹಿಂದೆ ಬೇಕೆರನೆಂಬ ಒಬ್ಬ ಸುವಾರ್ತಾಪ್ರಸಾರಕನು ತನ್ನ ಪ್ರಯಾಣಗಳಲ್ಲಿ ಗುಡ್ಡದ ಮೇಲಿನ ಒಂದು ಪಟ್ಟಣಕ್ಕೆ ಬಂದನು; ಅದರ ಒಡೆಯನು ಮನುಷ್ಯಮಾಂಸಾಶನದಿಂದ ಹೆಸರು ಹೋದವನು. ಅವನು ಅತಿಥಿಯಾಗಿ ತನ್ನ ಗೃಹಕ್ಕೆ ಬಂದ ಬೇಕೆರನ ಸಂಗಡ ಒಂದು ದೊಡ್ಡ ಕಿತ್ತಳೇ ಮರದಡಿಗೆ ಕೂತು ಕೊಂಡಿರುವಾಗ ತಾನು ಅದರ ಟೊಂಗಿಗಳಲ್ಲಿ ಒಟ್ಟಿಟ್ಟ ಮನುಷ್ಯರ ಎಲುಬುಗಳ ಮಹಾ ರಾಶಿಯ ಕಡೆಗೆ ಬೆರಳು ತೋರಿಸಿ— ನಾನು ತಿಂದವರೆಲ್ಲರ ನೆನಪಿಗಾಗಿ ಅವೇ ನನಗಿರುತ್ತವೆ; ನಾನು ತಿಂದ ಒಬ್ಬೊಬ್ಬನ ಎಲುಬುಗಳಲ್ಲಿ ಹ್ಯಾಗಾದರೂ ಒಂದೊಂದು ಅಲ್ಲಿ ಉಳಿದದೆ; ಬೇರೆ ಎಂಥಾ ಸವಿಯೂಟಗಳಿದ್ದರೂ ಮನುಷ್ಯಮಾಂಸಕ್ಕೆ ಒಂದಾದರೂ ಸರಿ ಬಾರದು ಎಂದು, ನುಡಿದನು. ಆ ಕಾಡನು ಹೆಚ್ಚು ಎಲುಬುಗಳನ್ನು ಒಳಗಿದ್ದ ಮಜ್ಜಕ್ಕಾಗಿ ಹಲ್ಲಿನಿಂದಲೇ ಕಡಿದು ಒಕ್ಕೊಟ್ಟಿದ್ದರೂ ಇನ್ನು ಆ ಮರದಲ್ಲಿ ಇಷ್ಟು ಭಯಂಕರವಾದ ರಾಶಿಯನ್ನು ಕೂಡಿಸಲಿಕ್ಕಸುವಾಗಿತ್ತು. ಅದೆಲ್ಲವಾದರೂ ಆ ಮನುಷ್ಯನು—ಆ ಎಲುಬುಗಳನ್ನು ಹುಗಿದು, ಮನುಷ್ಯಾಶನವನ್ನು ಬಿಟ್ಟು, ಕ್ರೈಸ್ತನಾಗುವೆನೆಂದು, ಅಂದು ಮಾತು ಕೊಟ್ಟನು. ಮೆಥೊದಿಸ್ತರ ಸಾಹಸದಿಂದ ಫೀಜಿಯ ರಾಜನೂ ರಾಣಿಯೂ ಸಹ ಕ್ರೈಸ್ತರಾಗಿದ್ದಾರೆ; ಅವರ ಪ್ರಜೆಯಲ್ಲಿ 90,000 ಜನರು ದೇವವಾಕ್ಪ್ರೀತಿಯಿಂದ ಮೆರೆಯುತ್ತಾರೆ.—ಪೊಲುನೇಸಿಯದಲ್ಲಿ[1] ಸೌವಾರ್ತಿಕರಾದ ದೇಶೀಯ ಕ್ರೈಸ್ತರ ಒಟ್ಟುಸಂಖ್ಯೆಯು ಸುಮಾರು 2,80,000.

ಆಫ್ರಿಕ ಖಂಡದಲ್ಲಿ ಸಾಗುತ್ತಿರುವ ಸುವಾರ್ತಾಪ್ರಸಾರಣದ ಮೇಲೆ ಈಗ ದೃಷ್ಟಿ ಇಡೋಣ. ಅದರ ತೀರದಲ್ಲೆಲ್ಲಿಯೂ ಬೇರೆ ಬೇರೆ ಸಂಘಗಳವರು[2], ಪರೀಸು ಪಟ್ಟಣದ ಒಂದು ಸೌವಾರ್ತಿಕ ಸಂಘದವರು ಮತ್ತು ಬಾಸೆಲು ಪಟ್ಟಣದ್ದರವರು ಸಹ, ಸುವಾರ್ತೆ ಸಾರುತ್ತಿದ್ದಾರೆ; ಮುಖ್ಯವಾಗಿ ಅದರ ದಕ್ಷಿಣ ತುದಿಯಲ್ಲಿ ವಿಸ್ತಾರವಾದ ಸುವಾರ್ತಾಪ್ರಸಾರಣವೃತ್ತಿಯು ಅದೆ. ಅದರ ಪಶ್ಚಿಮ ತೀರದ್ದೊಂದು ಭಾಗದ ಹೆಸರು ಸಿಯೆರ್ರ ಲೆಯೋನವೆಂಬದು; ಅದರ ಪ್ರಧಾನ ಪಟ್ಟಣವು ಫ್ರೀತೌನೆಂತ. ಅಲ್ಲಿ ದಾಸತ್ವದಿಂದ ಬಿಡಿಸಿದ ನೀಗ್ರೋರನ್ನು ನೆಲಸ ಮಾಡಿ ಕ್ರೈಸ್ತ ಬೋಧಕರ

1) 638ನೇ ಪಾನು. 2) 577, 582, 638,(642)ನೇ ಪಾನು ಸರಿ ನೋಡು.

ಜೋಕೆಯಲ್ಲಿಡುವ ಪ್ರೀತಿವರ್ತನವು ನಡೆಯುತ್ತದೆ. ಹ್ಯಾಗಂದರೆ, ದಾಸವ್ಯಾಪಾರ ವೆಂಬ ಆ ಮಹಾ ಪಾತಕವುಳ್ಳ ಕೆಲಸವು ಹುಟ್ಟಿ[1], ಸ್ವಲ್ಪ ಕಾಲ ಮಾತ್ರವಾದ ಮೇ ಲೆ ಅದು ಸಕಲ ಸತ್ಕ್ರೈಸ್ತರ ಕಣ್ಣಿಗೆ ಒಂದು ಮುಳ್ಳು ನಟ್ಟಂತಾಯಿತು. ಕ್ರಿ. ಶ. 1790ನೇ ವರುಷ ಪೆನ್ಸಿಲ್ವಾನಿಯದ ಅಧಿಪತಿಯಾಗಿದ್ದು ಸತ್ತ ಆ ಬೆಂಜಮಿನ್ ಫ್ರಂ ಕ್ಲಿನನಾದರೂ[2] ದಾಸವಿಕ್ರಯದ ನಿವರ್ತನಕ್ಕೋಸ್ಕರ ಒಂದು ಸಮಾಜವನ್ನುಸ್ಥಾ ದಿಸಿದನು. ಅದಲ್ಲದೆ ಉತ್ತರ ಅಮೆರಿಕದ ಸ್ವಾತಂತ್ರ್ಯಸಂಸ್ಥಾನದ ಪ್ರಥಮ ಅಗ್ರಸ್ಥ ನಾದ ವೊಷಿಂಗ್ಟನನೆಂಬವನು ಕ್ರಿ. ಶ. 1799ನೇ ವರುಷ ಸಾಯುವ ಸಮಯ ತ ನ್ನ ಸ್ವಭೂಮಿಯಲ್ಲಿರುವ 400 ಜನರಾದ ನೀಗ್ರೋರಿಗೆ ಬಿಡುಗಡೆ ಕೊಟ್ಟನು. ಇವ ರಿಬ್ಬರು ಮುಖ್ಯವಾಗಿ ವೆಸ್ಲಿಯ ವಾಗ್ನಿರೂಪಣಗಳಿಂದ ದಾಸವಿಕ್ರಯಕ್ಕೆ ಅಸಮ್ಮ ತಿ ಗೊಂಡವರಾಗಿದ್ದರು; ಬೈಲಿನಲ್ಲಿ ಅದಕ್ಕೆದುರಾಗಿ ಮಾತಾಡಿದವರಲ್ಲಿ ವೆಸ್ಲಿಯು ಪ್ರಥಮನೇ. ಇಂಗ್ಲಂದಿನಲ್ಲಿ ವಿಲ್ಬೆರ್ಫೋರ್ಸನೆಂಬ ಯಶಸ್ಸುಳ್ಳ ಕ್ರೈಸ್ತನು[3] ಸಹ ಮೆ ಥೊದಿಸ್ತರಿಂದ ಪ್ರೇರಿತನಾಗಿ, ಕ್ರಿ. ಶ. 1789ನೇ ವರುಷ ಮೊದಲಿನ ಸಾರಿ ಇಂಗ್ಲಿಷ ಪಾರ್ಲಿಮೆಂತಿನಲ್ಲಿ ದಾಸವ್ಯಾಪಾರದ ಪ್ರತಿಕೂಲವಾದಿಯಾಗಿ, ಕ್ರಿ. ಶ. 1807ನೇ ವ ರುಷ ಪಾರ್ಲಿಮೆಂತಿನವರ ನಿರ್ಣಯದ ಮೇಲೆ ಅದು ಇಂಗ್ಲಿಷರಲ್ಲಿ ಸಮುದ್ರಚೌ ರ್ಯವೆನ್ನಿಸುವ ಪರ್ಯಂತ ಬಿಡಲೇ ಇಲ್ಲ. ಬಳಿಕ ಕ್ರಿ. ಶ. 1814ನೇ ಅಬ್ದದಾರಭ್ಯ ಇಂಗ್ಲಂದಿನವರು ಅದನ್ನು ಬಲಾತ್ಕಾರದಿಂದ ಅಣಗಿಸುವದಕ್ಕೆ ಹತ್ತಿದರು; ಅವರ ಹಡಗಗಳು ಆಫ್ರಿಕಕ್ಕೂ ಅಮೆರಿಕಕ್ಕೂ ನಡುವೆ ಉಳಿದು, ದಾಸರನ್ನೊಯ್ಯುವ ಹ ಡಗಗಳಿಗೆ ಹೊಂಚುತ್ತಿರುವಲ್ಲಿ ಆ ಹಡಗದವರು ಅಂಥಾ ಕಳ್ಳಹಡಗಗಳನ್ನು ಹಿಡಿ ದು, ದಾಸರನ್ನು ಬಿಡಿಸಿ, ಹೆಚ್ಚು ಜನರನ್ನು ಆ ಸಿಯೆರ್ರ ಲೆಯೋನಕ್ಕೆ ಕಳುಹಿಸು ವವರಾದರು. ಅಲ್ಲಿ ಈಗ ನೀಗ್ರೋರ ಸುಮಾರು 200 ಗೋತ್ರಗಳಿಂದ ಕೂಡಿ ಬಂ ದ 45,000 ಜನರು ಇದ್ದಾರೆ; ಇವರಲ್ಲಿ ಹೆಚ್ಚು ಮಂದಿಯು ತಮ್ಮ ಇಷ್ಟದ ಪ್ರಕಾ ರ ಮುಖ್ಯವಾಗಿ ಇಂಗ್ಲಂದಿನ ಎಪಿಸ್ಕೊಪಾಲ ಸುವಾರ್ತಾಪ್ರಸಾರಕರಿಂದ ಕ್ರೈಸ್ತ ಸುಶಿಕ್ಷೆ ಪಡಕೊಳ್ಳುವಂಥವರು. ಅದರೋಪಾದಿಯಲ್ಲಿ ಕ್ರಿ. ಶ. 1817ನೇ ವರುಷ ಸುತ್ತ ಆ ಕಡೆಯ ಪಿಪ್ಪಿಲಿ ತೀರದಲ್ಲಿ ವಿಶೇಷವಾಗಿ ಅಮೆರಿಕೀಯ ಕ್ವೇಕೆರರ ಪ್ರಯ ತ್ನದಿಂದ ಒಂದು ನೆಲೆಯು ಉದ್ಭವಿಸಿ ಅದೆ; ಅದರ ಹೆಸರು ಲೀಬೆರಿಯವೆಂಬದು. ವಿಲ್ಬೆರ್ಫೋರ್ಸನು ಸಾಯುವದಕ್ಕೆ 3 ತಿಂಗಳು ಮುಂಚೆ ಕ್ರಿ. ಶ. 1833ನೇದಕ್ಕೆ ಯು ರೋಪೀಯ ಸಕಲ ಮಂದಿ ದೊಡ್ಡ ರಾಜರು, ದಾಸವ್ಯಾಪಾರವು ಇನ್ನೂ ನಡೆಯ ಬಾರದೆಂದು, ಆಜ್ಞಾಪಿಸಿದರು; ಮರುವರುಷ ಮೊದಲ್ಗೊಂಡು ಇಂಗ್ಲಿಷರು ತಮ್ಮ ಪರದೇಶಿಕವಾದ ನೆಲೆಗಳಲ್ಲಿರುವ ನೀಗ್ರೋರನ್ನು ದಾಸತ್ವದಿಂದ ವಿಮೋಚಿಸಲಿಕ್ಕೆ

1) 542, 575ನೇ ಪಾನು. 2) 579, 598ನೇ ಪಾನು. 3) 653ನೇ ಪಾನು ಸರಿ ನೋಡು.

ಹತ್ತಿದರು. ಅಮೆರಿಕದ ದಕ್ಷಿಣ ಭಾಗದಲ್ಲಿ ಗಿಯಾನವೆಂಬ ದೇಶವದೆ; ಇದರದೊಂದು ಪಾಲು ನೀದೆರ್ಲಂದಿನವರದು. ಹೆನ್ರೂಥಿತಿನ ಸಹೋದರಸಭ್ಯರು[1] ಇದರಲ್ಲಿಯ ದಾಸರಾದ ನೀಗ್ರೋರೊಳಗೆ ಕ್ರಿಸ್ತನ ಹೆಸರು ಸಾರುವವರಾದ್ದರಿಂದ ಕ್ರಿ. ಶ. 1850ನೇ ವರುಷಕ್ಕೆ ಹೆಚ್ಚು ಕಡಿಮೆ 20,000 ಜನರು ಕ್ರೈಸ್ತರಾಗಿ, ವಿಗ್ರಹಾರಾಧಕತ್ವದಲ್ಲುಳಿದವರಲ್ಲಿ ನೀತಿಚರ್ಯೆ ವಿದ್ಯೆ ಮುಂತಾದ್ದರಿಂದ ಪರಿಶೋಭಿಸುತ್ತಿದ್ದದಲ್ಲದೆ ತಮ್ಮ ಧನಿಗಳಿಗೆ ಬಹು ನಂಬಿಕೆಯಿಂದ ಸೇವೆ ಮಾಡುತ್ತಿರಲು, ಕ್ರಿ. ಶ. 1863ನೇ ಅಬ್ದ ಹೊಲ್ಲಂದಿನ ಅಧಿಕಾರಸ್ಥರು ಅಲ್ಲಿಯ ಸಕಲ ನೀಗ್ರೋರಿಗೆ ಬಿಡುಗಡೆ ಪಾಲಿಸಿದರು. ಕ್ರಿ. ಶ. 1865ನೇ ಅಬ್ದ ಉತ್ತರ ಅಮೆರಿಕದ ಸುಮಾರು 40 ಲಕ್ಷ ಜನರಾದ ನೀಗ್ರೋ ದಾಸರಿಗೆ ಸ್ವಾತಂತ್ರ್ಯವು ಪ್ರಾಪಿಸಿತು; ಇವರಲ್ಲಿ ಸಹ ಕ್ರಿಸ್ತನ ಭಕ್ತರು ಅನೇಕರಿದ್ಧಾರೆ.

ಆಫ್ರಿಕಕ್ಕೆ ಶೇರಿದ ಮದಗಸ್ಕರೆಂಬ ದೊಡ್ಡ ದ್ವೀಪದಲ್ಲಿ ಕ್ರಿ. ಶ. 1819ನೇ ವರುಷದಿಂದ 1829ನೇದರ ತನಕ ಲೊಂದನಿನ ಸಂಘದ ಸುವಾರ್ತಾಪ್ರಸಾರಕರು ಮಿಗಿಲಾಶೀರ್ವಾದದೊಡನೆ ಪ್ರವರ್ತಿಸುತ್ತಿದ್ದನಂತರ ಅಲ್ಲಿಯ ರಾಜನು ಸತ್ತು, ಅವನ ಹೆಂಡರಲ್ಲೊಬ್ಬಳು ಪಟ್ಟಕ್ಕೆ ಬಂದಳು. 1ನೇ ರನವಲೋನ ಎಂಬ ಇವಳು ತನ್ನ ಪ್ರಜೆಯಲ್ಲಿ ಕ್ರೈಸ್ತರಾದವರನ್ನು ಭಾಷಾತೀತ ಕ್ರೌರ್ಯದಿಂದ ಹಿಂಸಿಸಲೆಸಗಿದಾಗ ಇವರಲ್ಲಿ ಬಹಳ ಸಾವಿರ ಜನರು ರಕ್ತಸಾಕ್ಷಿಗಳಾಗಿ, ಕ್ರಿಸ್ತನಾಥನ ಮಹಿಮೆಯ ಪದವಿಯನ್ನೈದಿದರು. ಆದಾಗ್ಯೂ ದೇಶೀಯ ಕ್ರೈಸ್ತರ ಲೆಖ್ಖವು ಕಡಿಮೆಯಾಗದ್ದಲ್ಲದೆ ಏರುತ್ತಲಿತ್ತು. ಆ ರಾಣಿಯ ಮರಣದ ಈಚೆ ಕ್ರಿ. ಶ. 1861ನೇ ವರುಷದಾರಭ್ಯ ಸುವಾರ್ತಾಪ್ರಸಾರಣವು ಮುಂಚಿನಂತೆ ಶಾಂತಗತಿ ಹೊಂದಿ, ಪ್ರಶಸ್ತ ರೀತಿಯಿಂದ ಸಣ್ಣ ದೊಡ್ಡವರಲ್ಲಿ ಮುನ್ನಡೆಯುತ್ತಾ ಅದೆ[2].

ಉತ್ತರ ಅಮೆರಿಕದ ಜನರಾದ ಎಸ್ಕಿಮೊರಲ್ಲಿಯೂ[3] ಇಂದಿಯಾನರಲ್ಲಿಯೂ[4] ವೆಸ್ತ್ ಇಂದಿಯದ ನೀಗ್ರೋರಲ್ಲಿಯೂ[5] ಸುವಾರ್ತಾಪ್ರಸಾರಣವು ಆರಂಭಿಸಿದ ರೀತಿಯು ಹಿಂದೆ ಗೊತ್ತಾಯಿತಲ್ಲ? ವೆಸ್ತ್ ಇಂದಿಯದಲ್ಲಿ ಈಗ ಸುಮಾರು 3 ಲಕ್ಷ ಮಂದಿ ನೀಗ್ರೋರು ಸೌವಾರ್ತಿಕ ಬೋಧಕರ ಉಪದೇಶ ಪಡೆಯುತ್ತಾರೆ.

ಸುವಾರ್ತಾಪ್ರಸಾರಣದ ವಿವರಣವನ್ನು ಇಷ್ಟರಲ್ಲಿ ಮುಗಿಸಿದರೆ ಪಾಠಕರು, ಎಲ್ಲವನ್ನು ಸೂಚಿಸಲಾಯಿತೆಂತ, ನೆನಸಲಾಗದು; ಮುಖ್ಯವಾದ್ದೆಲ್ಲವಾದರೂ ಸೂ

---

1) 582ನೇ ಪಾನು. 2) ಕ್ರಿ. ಶ. 1869ನೇ ವರುಷ ಆ ದ್ವೀಪದ ಈಗಿನ ರಾಣಿಯು ಸೌವಾರ್ತಿಕ ಕ್ರೈಸ್ತರ ನಿಜ ಮಿತ್ರಸ್ಥಳಾದ ಹಿಂದೆ ಆಕೆಯ ದೊಡ್ಡ ಉದ್ಯೋಗಿಗಳಲ್ಲನೇಕರು ಕೂಡ ಪರಿಶುದ್ಧ ಸ್ನಾನ ಪಡಕೊಳ್ಳಲಿಕ್ಕೆ ಅಪೇಕ್ಷೈಯುಳ್ಳವರಾಗಿದ್ಧಾರೆ; ಅವಳ ಹೆಸರು 2ನೇ ರನವಲೋನ ಎಂತ. 3) 576ನೇ ಪಾನು. 4) 568, 579, 580, 591, 631, 643ನೇ ಪಾನು. 5) 574, 577ನೇ ಪಾನು.

ಚಿಸಲಳವೇ? ಈಗ ಸಲ್ಲುವ ಕ್ರಿಸ್ತಶತಮಾನದೊಳಗೆ ಸುವಾರ್ತಾಪ್ರಸಾರಕರು ಸೇರದಿದ್ದ ಒಂದು ದ್ವೀಪವಾದರೂ ಒಂದು ತೀರವಾದರೂ ಗಮ್ಯವಾದ್ದೊಂದೂ ದೇಶವಾದರೂ ಇಲ್ಲ; ಹಿಂದು ದೇಶದ ಗಂಗೆ ಎಂಬ ನದಿಯಲ್ಲಿ ಹ್ಯಾಗೋ, ಹಾಗೆಯೇ ಅಮೆರಿಕದ ಮಿಸ್ಸೂರಿ ಮತ್ತು ಆಫ್ರಿಕದ ನೀಲ ಎಂಬವುಗಳಲ್ಲಿ ಸಹ ಅವರ ಪ್ರವರ್ತನವು ನಡೆಯುತ್ತದೆ; ಅಮೆರಿಕದ ಗ್ರೋಯಿನ್ಲಂದು ಲಬ್ರದೋರು ಸೀಮೆಗಳ ಅತಿಶೀತವಾದ ಹಿಮಾರಣ್ಯಗಳಲ್ಲಿ ಹ್ಯಾಗೋ, ಹಾಗೆಯೇ ಆಫ್ರಿಕದ ಅತ್ಯುಷ್ಣವಾದ ಉಸುಬರಣ್ಯಗಳಲ್ಲಿ ಸಹ ಸಂಚರಿಸುತ್ತಾರೆ; ಉತ್ತರ ಅಮೆರಿಕದ ಪ್ರಸ್ತರಮಯ ಪರ್ವತಾವಳಿಗಳನ್ನು ಹ್ಯಾಗೋ, ಹಾಗೆಯೇ ಹಿಮಾಲಯದ ಹಿಮಸಂಹತಿಮಯ ಮಹಾದ್ರಿಗಳನ್ನು ದಾಟಿ ಹೋಗುತ್ತಾರೆ; ವೆಸ್ಟ್ ಇಂದಿಯದ ದ್ವೀಪಗಳಲ್ಲಿ ಕಪ್ಪುಬಣ್ಣದ ನೀಗ್ರೋರನ್ನು ಹ್ಯಾಗೋ, ಹಾಗೆಯೇ ಪಾಕಿಫಿಕ ದ್ವೀಪಗಳಲ್ಲಿ ನಿಂಬೇಬಣ್ಣದ ನಿವಾಸಿಗಳನ್ನು ದೇವರಾಜ್ಯಕ್ಕೆ ಕರೆಯುತ್ತಾರೆ; ಎಸ್ಕಿಮೊರಂತೆ ಕುಕ್ಕುಟುತ್ತಾ, ಆಫ್ರಿಕದ ಹೊತ್ತೆಂತೊತ್ತರಂತೆ ಕೆಕ್ಕರೆಯುತ್ತಾ, ಚೀನಿಯರಂತೆ ಹಾಡುತ್ತಾ, ಈ ಪ್ರಕಾರ ಸಕಲ ಭೂಜನರ ಭಾಷೆಯ ಅಂದಗಳನ್ನಾದರೂ ಕಲಿತು, ಮಾತಾಡುತ್ತಾರೆ; ವ್ಯಾಘ್ರಗಳ ಸ್ವಭಾವವಿದ್ದ ಕೆಂಪು ಕಪಿಶ ಕಪ್ಪು ಅರಶಿಣ ಮುಂತಾದ ಬಣ್ಣಗಳವರು ಅವರ ಪ್ರಸಂಗದಿಂದ ಕ್ರಿಸ್ತ ಕರ್ತನ ಪಾದಕ್ಕೆ ಬೊಗ್ಗಿ, ಕುರಿಮರಿಗಳ ಸ್ವಭಾವದವರಾಗುತ್ತಾರೆ; ಅದಲ್ಲದೆ ಬುದ್ಧಿಯಲ್ಲಿಯೂ ವೃತ್ತಿಯಲ್ಲಿಯೂ ಮಂದರಾಗಿರುವವರು ಅದರಿಂದಲೇ ದೇವರ ಜಾಗರೂಕ ಸೇವಕರಾಗಿ, ಒಳ್ಳೇ ಕಾರ್ಯಶೀಲತ್ವದಿಂದೊಪ್ಪಲಿಕ್ಕೂ ಹತ್ತುತ್ತಾರೆ. ಕ್ರಿಸ್ತನ ಸುವಾರ್ತೆಯು ಸಕಲ ನಿರ್ಮಾಣಕ್ಕೆ ಪ್ರಸಂಗವಾಗ ಬೇಕೆಂಬದೇ[1] ಮಹತ್ವದಿಂದ ಒದಗುತ್ತಲಿದೆ.

ಕ್ರಿ. ಶ. 1868ನೇ ಈ ವರುಷ ಯುರೋಪ ಅಮೆರಿಕ ಎಂಬಿವೆರಡು ಖಂಡಗಳಲ್ಲಿಯ ಸೌವಾರ್ತಿಕ ಸಭೆಗಳಲ್ಲಿ 50 ಸುವಾರ್ತಾಪ್ರಸಾರಣಸಂಘಗಳವೆ; ಯೆಹೂದ್ಯರೊಳಗೂ[2] ಮೊಹಮ್ಮದಿಯರೊಳಗೂ ವಿಗ್ರಹಾರಾಧಕರೊಳಗೂ ಅವುಗಳ ಸಂಬಂಧದಲ್ಲಿ ಕ್ರೈಸ್ತತ್ವವನ್ನು ಹಬ್ಬಿಸುವ ಸುವಾರ್ತಾಪ್ರಸಾರಕರು ಒಂದು ಲೆಖ್ಖದ ಪ್ರಕಾರ 2,000 (?) ಜನರು[3]. ಆಯಾ ಮತದವರು ಕ್ರೈಸ್ತರಾಗುವಂತೆ ಆಯಾ ಸಂಘಗಳವರಿಂದ ಈ ವರುಷ ವೆಚ್ಚವಾದ ದಾನಧರ್ಮವು ಒಟ್ಟಿಗೆ 1 ಕೋಟಿ ರೂಪಾಯಿ. ಆ 2,000 ಮಂದಿ ಸುವಾರ್ತಾಪ್ರಸಾರಕರಿಗೆ 3000 ಕ್ಷೇತ್ರಗಳು; 15,000 ಜನ ದೇಶೀಯರಾದ ಪ್ರಸಂಗೋದ್ಯೋಗಿಗಳೂ ಉಪದೇಶಕರೂ ಅವರಿಗೆ ಸಹಾಯ

1) ಮತ್ತಾ. 24, 14; ಮರ್ಕ. 16, 15; 26, 641ನೇ ಪಾನು. 2) 78ನೇ ಸಂಧಿ. 3) N. E. Kirchenz.; ಈ ಮುಂತಾದ ಲೆಖ್ಖವು ಬಹು ಕಡಿಮೆಯಾಗಿ ಹಿಡಿದದೆ. A. D. 1869 there were (according to the Bulletin du monde chrétien) 48 Protestant Mission-Societies with 9415 Missionaries.

ಮಾಡುತ್ತಾರೆ. ಈ 19ನೇ ಕ್ರಿಸ್ತಶತಮಾನವೊಂದರಲ್ಲೇ ಬಾಹ್ಯ ಸುವಾರ್ತಾಪ್ರಸಾರಣದಿಂದ ಹೆಚ್ಚು ಕಡಿಮೆ 5 ಲಕ್ಷ ಜನರು ಸೌವಾರ್ತಿಕ ಕ್ರೈಸ್ತರಾಗಿದ್ದಾರೆ.—ಆದಾಗ್ಯೂ ವಿಶ್ವದ ಹೃತ್ಪರಿಣಾಮಕ್ಕೆ ಇನ್ನೆಷ್ಟೋ ಧಾವತಿ ಬೇಕು! ಯಾಕಂದರೆ ಭೂಮಿಯಲ್ಲಿರುವ 100 ಕೋಟಿ ಜನರೊಳಗೆ ಮೂರರಲ್ಲೊಂದಂಶದವರು ಮಾತ್ರ ಕ್ರೈಸ್ತರೆನ್ನಿಸುತ್ತಾರೆ.

ಕರ್ತನೇ, ನಿನ್ನವರಲ್ಲಿ ಸುವಾರ್ತಾಪ್ರಸಾರಣಕುತೂಹಲವನ್ನು ಆರ ಗೊಡದಿರೆಂತ, ಪ್ರಾರ್ಥಿಸುತ್ತಿರುವದು ಅತ್ಯವಶ್ಯವಾಗಿದೆ.



## 77. ಅಂತರ್ಯ ಸುವಾರ್ತಾಪ್ರಸಾರಣವು.

ಸ್ಪೇನೆರ ಫ್ರಂಕೆ ತ್ಸಿಂತ್ಸೆಂದೊರ್ಫ ವೆಸ್ಲಿ ಮೊದಲಾದ ಮಾನನೀಯ ಭಕ್ತರ ಮೂಲಕ ಕ್ರೈಸ್ತ ಸಜ್ಜೀವನದ ವೃತ್ತಿಯು ಮಿಗೆ ಅರಳಿ, ಅಂತರ್ಯವಾದ ಅಂದರೆ ಕ್ರೈಸ್ತತ್ವ ಶೇರಿರುವ ದೇಶಗಳೊಳಗಾದ ಸುವಾರ್ತಾಪ್ರಸಾರಣದಲ್ಲೂ ಬಾಹ್ಯವಾದ್ದರಲ್ಲೂ ಗೋಚರವಾಯಿತು, ಸರಿ. ಆದರೆ ಮುಖ್ಯವಾಗಿ 19ನೇ ಕ್ರಿಸ್ತಶತಮಾನದ ಆರಂಭದ ಸುತ್ತ[1] ಸಾಧಾರಣರಾದ ಅನೇಕ ಕ್ರೈಸ್ತ ಸಭ್ಯರು—ದರಿದ್ರಪೋಷಣ ರೋಗಿಪೋಷಣ ಕೃಚ್ಛ್ರಪೋಷಣ ಸಭ್ಯಾತ್ಮಪಾಲನ ಮುಂತಾದ ಸಭಾಕಾರ್ಯವಾದ[2] ಪ್ರೀತಿಯ ಊಳಿಗವನ್ನು[3] ರಾಜಾಜ್ಞೆಯೊಳಗಿನ[4] ಸಭೋದ್ಯೋಗಿಗಳು ಮಾತ್ರ ಗೈಯುವದು ಸಮವಲ್ಲ, ಸಾಕಲ್ಲ; ತಾವು ಸಹ ತಮ್ಮ ತಮ್ಮ ಸ್ಥಳಗಳಲ್ಲಿ ಅದನ್ನು ಸ್ವಕೀಯ ಕ್ರಮವಾಗಿ ಗೈಯುವ ಋಣದಲ್ಲಿದ್ದೇವೆಂದು, ತಿಳಿದು, ಬಾಹ್ಯ ಸುವಾರ್ತಾಪ್ರಸಾರಣದೊಂದಿಗೆ ಅಂತರ್ಯ ಸುವಾರ್ತಾಪ್ರಸಾರಣದ ನಾನಾ ಧರ್ಮದ ಕ್ರಿಯೆಗಳನ್ನು ಸಹ ಬಹು ಕುತೂಹಲದಿಂದ ತೊಡಗಿಸಿದರು. ಕಾಡಿನ ಪಾಲಾಗುವ ಬಡ ಬಾಲಕರ ಶಿಕ್ಷೆಗೋಸ್ಕರ ಅವರು ನಿರ್ಮಿಸಿದ ಬಾಲಕರಕ್ಷಾಗೃಹಗಳು ಅಂಥಾ ಹೊಸ ಪ್ರಯತ್ನದ ಮೊದಲಿನ ಸುಫಲವು; ಈ ಪ್ರಕಾರದ ಗೃಹಗಳಲ್ಲಿ ಕ್ರಿ. ಶ. 1816ನೇ ವರುಷ ಗೆರ್ಮಾನಿಯದ ಬಾದೆನು ಶೀಮೆಯ ಬೆಯುಗೆನೆಂಬ ಸ್ಥಳದಲ್ಲಿ ತ್ಸೆಲ್ಲೆರನೆಂಬ ಭಕ್ತನಿಂದ ಸ್ಥಾಪಿತವಾದ್ದೊಂದು ಬಹು ಕೀರ್ತಿಗೊಂಡದೆ; ಅದರೊಳಗೆ ಶಿಕ್ಷಿತರಾದವರಲ್ಲಿ ಯೋಗ್ಯರಾದವರು ಶಾಲೋಪಾಧ್ಯಾಯರು ಆಗುವದು ರೂಢಿ. ಬ

1) 632, 655ನೇ ಪಾನು. 2) ಸಭಾಕಾರ್ಯವಾದ್ದು ಗೃಹಕಾರ್ಯವಾದ್ದಲ್ಲ; ಸಭಾಕಾರ್ಯವನ್ನು ಒಬ್ಬನೇ ಮಾತ್ರವಲ್ಲ ಸಭ್ಯರು ಕೂಡಿ ನಡಿಸುವಂಥಾದ್ದು. 3) ಮತ್ತಾ. 25, 35. 36. 4) 432, 479, 481ನೇ ಪಾನು.

ಳಿಕ ಕ್ರಿ. ಶ. 1836ನೇ ವರ್ಷ, ಸಕಲ ದಿಕ್ಕಿನ ರೋಗಿಗಳನ್ನು ಪರಾಮ್ಮರಿಸಲಿಕ್ಕೆ ಸಿದ್ಧರಾಗ ತಕ್ಕ ಹೆಣ್ಣು ಮಕ್ಕಳನ್ನು (ಅಂದರೆ ಹೆಣ್ಣು ದಿಯಾಕೊನರನ್ನು[1]) ಶಿಕ್ಷಿಸುವ ನಿಮಿತ್ತ, ಪ್ರುಸ್ಸಿಯದ ರೈನು ನದೀ ತೀರದಲ್ಲಿರುವ ಕೈಸರ್ಸ್ವೇರ್ಥ್ರ್ ಪಟ್ಣದಲ್ಲಿ ಫ್ಲೀದ್ನೆರನೆಂಬವನು ಒಂದು ರೋಗಿಸೇವಕೀಗೃಹವನ್ನೂರಿದನು[2]. ಅಷ್ಟರೊಳಗೆ ದರಿದ್ರಪೋಷಕಸಮಾಜಗಳು ಸಹ ಉದ್ಭವಿಸಿದ್ದವು; ಇವುಗಳಲ್ಲಿ ಅಂದಿಗೆ ಬಹು ಪ್ರಖ್ಯಾತವಾದ್ದು ಒಂದು ಕ್ರಿ. ಶ. 1832ನೇ ವರುಷ ಗೆರ್ಮಾನಿಯದ ಹಂಬುರ್ಗ್ರ ಪಟ್ಣದಲ್ಲಿ[3] ಅಮಾಲಿಯೆ ಸೀವೆಕಿಂಗೆಂಬವಳ ಮೂಲಕ ನಿರ್ಮಿತವಾಯಿತು. ತದನಂತರ ಮರುವರುಷ ಅದೇ ಪಟ್ಣದ ಸಮೀಪ ಹೊರ್ನೆಂಬಲ್ಲಿ ವಿಖೆರ್ನನೆಂಬವನು ರೌಹೆಸ್ ಹೌಸ್ ಎಂಬ ಗೃಹ ಕಟ್ಟಿ, ಸುಶಿಕ್ಷೆಯಿಲ್ಲದ ಬಾಲಯುವಸ್ಥಿತಿಯವರನ್ನು ಅದರಲ್ಲಿಟ್ಟು, ತಿದ್ದುವವನಾಗಿ, ಹೀಗೆ ಯೌವನಸ್ಥರ ದುರ್ಮಾರ್ಗತನಕ್ಕೆ ಅಡ್ಡಗಟ್ಟ ನೋಡಿದನು; ಆ ಗೃಹದಲ್ಲಿ ಬಾಲರೂ ಯುವರೂ ತಕ್ಕ ಕ್ರೈಸ್ತ ಉಪದೇಶ ಪಡೆಯುವದಲ್ಲದೆ ತರತರದ ಕೈಕೆಲಸ ಕಲಿಯುತ್ತಿರುವರು; ಕಾಲಗತಿಯಿಂದ ಮೂಲಗೃಹಕ್ಕೆ ಕೂಡಿಸ ಬೇಕಾದ ಬೇರೆ ಬೇರೆ ಮನೆಗಳನ್ನು ಕಟ್ಟಿದವರು ಅವರೇ; ಅಲ್ಲಲ್ಲಿ ಅಂತರ್ಯ ಸುವಾರ್ತಾಪ್ರಸಾರಣದ ವಿವಿಧ ಕ್ರಿಯೆಗಳು ನಡೆಯುವಂಥ ಗೃಹಗಳ ಮುಖ್ಯಸ್ಥರಾಗಲಿಕ್ಕೆ ಬಲ್ಲವರಾಗುವ ಹಾಗೆ ಯೋಗ್ಯ ಪ್ರಾಯದವರನ್ನು ಸಿದ್ಧ ಪಡಿಸಲಿಕ್ಕಾಗಿ ಸಹ ಒಂದು ಶಾಲೆಯು ಅದರ ಸಮ್ಮಂಧದಲ್ಲಿದೆ. ಅದಲ್ಲದೆ ಅನಾಥಪೋಷಣಗೃಹಗಳು ಸರ್ವತ್ರ ವಿಕಸಿತವಾಗಲಾರಂಭಿಸಿದವು. ಇಂಗ್ಲಂದಿನಲ್ಲಿ ಉತ್ಪನ್ನವಾಗಿರುವಂಥವುಗಳಲ್ಲಿ ಆ ಬ್ರಿಸ್ತಲೆಂಬ[4] ಪಟ್ಣದೊಳಗಿನವು ದೊಡ್ಡವು; ಇವುಗಳ ಮೂಲಕನು ಜೊರ್ಜ್ ಮುಯಿಲ್ಲೆರನೆಂಬವನು. ಅವನು ಕ್ರಿ. ಶ. 1805ನೇ ವರುಷ ಪ್ರುಸ್ಸಿಯದ ಹಲ್ಬೆರ್ಸ್ತ್ರತ್ತೆಂಬ ಪಟ್ಣದಲ್ಲಿ ಹುಟ್ಟಿದನು. ಅವನ ತಂದೆಯು ಸುಂಕವೆತ್ತುವ ಉದ್ಯೋಗದವನು. ಜೊರ್ಜ್ ಮುಯಿಲ್ಲೆರನು ತನ್ನ ಯೌವನಕಾಲದಲ್ಲಿ ಕ್ರಿಸ್ತನ ಭಕ್ತಿ ಪಡೆಯದೆ, ತಾನು ತನ್ನ ಜೀವಿತಚರಿತ್ರದಲ್ಲಿ ವಿವರವಾಗಿ ನಿವೇದಿಸುವಂತೆ, ಬಹು ತರದ ದುರ್ವ್ಯಸನ ದುಷ್ಕರ್ಮಗಳಲ್ಲಿ, ಬೇಕೆಂತ, ಹೊರಳಾಡುತ್ತಿದ್ದು, ಕ್ರಿ. ಶ. 1825ನೇ ವರುಷ ಹಲ್ಲೆ ಪಟ್ಣದ ಮಹಾ ವಿದ್ಯಾಶಾಲೆ[5] ಶೇರಿದಂದು ಇನ್ನಾದರೂ ಅದೇ ಕುಭಾವದವನಾಗಿದ್ದನು. ಕ್ರೈಸ್ತ ಸಭೆಯಲ್ಲಿ ಪ್ರಸಂಗಿಕೋದ್ಯೋಗಿಯಾಗುವೆನೆಂಬದು ಅವನ ಮನಸ್ಸಿನಲ್ಲಿತ್ತು; ಆದರೆ ಅಂಥ ಉದ್ಯೋಗದ ಸಂಬಂಧದಲ್ಲಿ

---

1) 93ನೇ ಪಾನು. 2) ಬೇರೆ ಬೇರೆ ದೇಶಗಳಲ್ಲಿ ಈಗ ಸೌವಾರ್ತಿಕ ಸಭೆಯ ಸಂಬಂಧದಲ್ಲಿ 42 ಮಾತೃಗೃಹಗಳೆನ್ನಿಸುವ ದೊಡ್ಡ ರೋಗಿಸೇವಕೀಗೃಹಗಳಿವೆ; ಇವುಗಳ ಅಪ್ಪಣೆಯೊಳಗೆ 526 ರೋಗಿಸೇವಕೀಕ್ಷೇತ್ರಗಳಿವೆ; ರೋಗಿಸೇವಕಿಗಳ ಲೆಖ್ಖವು 2106. 3) 322, 560ನೇ ಪಾನು.
4) 597ನೇ ಪಾನು. 5) 556ನೇ ಪಾನು.

ರುವ ಸಂಬಳದ ಮೇಲೆ ಮಾತ್ರ ಅವನ ಅಪೇಕ್ಷೆಯಿರುವದು. ಹೀಗಿರಲಾಗಿ ಅವನು ಪರಮಾರ್ಥಜ್ಞಾನದ ಅಭ್ಯಾಸ ಮಾಡದೆ, ಲೌಕಿಕ ವಿಷಯಗಳಲ್ಲಿ ತನ್ನ ಸುಖ ಹುಡುಕಿದದಕ್ಕೆ ಆಶ್ಚರ್ಯವೇನು? ತನ್ನ ನೀಚತನವು ತನಗೆ ಸಹ ತೋರಿ ಅಸಹ್ಯವಾಗುವಾಗಿಂದಾಗ ಅವನು ಸುಶೀಲ ಹಿಡುಕೊಳ್ಳುವ ಪ್ರಯತ್ನ ಗೈವನು; ಆದರೂ ಕ್ರಿಸ್ತನ ಮೇಲಿನ ವಿಶ್ವಾಸವಿಲ್ಲದೆ ಅದು ಸಫಲವಾಗಲಿಲ್ಲ. ಅವನು ಆತ್ಮನಾಶವಾಗುವ ವಿಘ್ನವುಳ್ಳಂಥಾ ಗತಿಯಿಂದಿರಲು, ಇನ್ನು ಆ 1825ನೇ ವರುಷದಲ್ಲೇ ಒಂದಾನೊಂದು ಉತ್ತರಾಹ್ನಕ್ಕೆ ಒಬ್ಬ ಜೊತೆವಿದ್ಯಾರ್ಥಿಯು ಅವನನ್ನು ಕರಕೊಂಡು, ವಾಗ್ನೆರನೆಂಬವನೊಬ್ಬ ಭಕ್ತನ ಮನೆಗೆ ಹೋದಾಗ ಅಲ್ಲಿ ಪಿಯೆತಿಸ್ತರೆಂಬವರ[1] ಒಂದು ಪ್ರಾರ್ಥನಾಸಮಾಜ ಕೂಡಿತು. ಅದರ ಅಗ್ರಸ್ಥನು ಕೈಸರನೆಂಬವನೊಬ್ಬನು; ಇವನು ಲೊಂದನಿನ ಬಾಹ್ಯ ಸುವಾರ್ತಾಪ್ರಸಾರಕಸಂಘದವರ[2] ಸಂಬಂಧದಲ್ಲಿ ಆಫ್ರಿಕದಲ್ಲಿ ನೀಗ್ರೋರಿಗೆ ಕ್ರಿಸ್ತನ ಹೆಸರು ಸಾರಿ, ಕೀರ್ತಿ ಗೊಂಡವನು. ಆ ಹೊತ್ತು ನಡೆದ ಅದ್ಭುತವೇನಂದರೆ, ಆಗಿನ ಮಟ್ಟಿಗೆ ದೇವರ ಮತ್ತು ಅವನ ವಾಕ್ಯದ ಕಿಂಚಿತ್ತೂ ಲಕ್ಷ್ಯವಿಲ್ಲದಿದ್ದ ಮುಯಿಲ್ಲೆರನು ದೇವವಾಕ್ಯದ ಅಧ್ಯಯನವನ್ನೂ ಒಂದು ಭಕ್ತಿಯುಕ್ತ ಪ್ರಸಂಗದ ಅಧ್ಯಯನವನ್ನೂ ಕೆಲವರ ಹೃತ್ಪ್ರಾರ್ಥನೆಗಳನ್ನೂ ಕೇಳುವಲ್ಲಿ ಎಂದಾದರೂ ಅನುಭವಿಸದಿದ್ದ ಅಪಾರ ಸಂತೋಷ ಗೊಂಡನು. ಆ ಪರಿಯ ಅನುಭವವೇ ಅವನಲ್ಲಿ ನಿಜ ಮಾನಸಾಂತರದ ಬೇರು ಆಯಿತು. ಆ ಹೊತ್ತಿನಿಂದಲೇ ಅವನು ದೇವವಾಕ್ಯ ಓದಲಿಕ್ಕೂ ಅಭ್ಯಾಸಿಸಲಿಕ್ಕೂ ಹತ್ತಿ, ಅನೇಕಾವರ್ತಿ ದೇವಪ್ರಾರ್ಥನೆ ಮಾಡುವವನಾಗಿ, ದೇವಾಲಯಕ್ಕೆ ಸತ್ಕಾಂಕ್ಷೆಯೊಡನೆ ನಿತ್ಯ ಹೋಗುವವನಾಗಿ, ಕ್ರಿಸ್ತನ ಸಹಾಯದಿಂದ ಚೊಕ್ಕ ಗುಣ ನಡತೆಗಳೆರಡನ್ನೂ ಹೊಂದಿದನು; ಅದಲ್ಲದೆ ತನ್ನ ಪ್ರಸಂಗಿಕೋದ್ಯೋಗಕ್ಕೆ ಅವಶ್ಯವಾದ ಎಬ್ರೀಯ ಭಾಷೆ ಮೊದಲಾದ ವಿದ್ಯೆಯನ್ನು ಮನಗೊಟ್ಟು ಸಂಪಾದಿಸಿ ಕೊಳ್ಳುವವನಾದನು. ಸ್ವಲ್ಪ ಕಾಲದ ಈಚೆ ಅವನಿಗೆ ಯೆಹೂದ್ಯರಲ್ಲಾಗಲಿ ವಿಗ್ರಹಾರಾಧಕರಲ್ಲಾಗಲಿ ಸುವಾರ್ತಾಪ್ರಸಾರಕನಾಗ ಬೇಕೆಂಬ ಅಭಿಲಾಷೆ ಹಿಡಿಯಿತು; ಅದು ಹೊರ್ತಾಗಿ ತನ್ನ ಸಹವಾಸಿಗಳಲ್ಲಿ ಹೃತ್ಪರಿಣಾಮ ಹುಟ್ಟಿಸುವದಕ್ಕೆ ತೊಡಗಿದನು. ಆ ಸಮಯ ಅವನು ಬಡ ವಿದ್ಯಾರ್ಥಿಯೆನ್ನಿಸಿ, ಫ್ರಂಕೆಯೆಂಬ ಭಕ್ತನಿಂದ ಸ್ಥಾಪಿತವಾಗಿದ್ದ ಅನಾಥಗೃಹಕ್ಕೆ ಶೇರಿದ ದರಿದ್ರವಿದ್ಯಾರ್ಥ್ಯಾಶ್ರಮದಲ್ಲಿ[3] ಕೆಲವು ತಿಂಗಳು ಕಳೆದದರಿಂದ ಅವನಿಗೆ ಆ ವಿಶ್ವಾಸಶಾಲಿಯಾದ ಫ್ರಂಕೆಯ ಜ್ಞಾಪಕದ ಮೂಲಕ ಅಂದಿಗೆ ಮಾತ್ರವಲ್ಲದೆ ತನ್ನ ಮುಂದಿನ ಜೀವಿಕೆಯ ಪೂರ್ತಿಗೂ ಮಹಾಶೀರ್ವಾದ ಪ್ರಾಪಿಸಿತು. ತನ್ನ ವಿದ್ಯಾಭ್ಯಾಸ ತೀರಿಸಿದ ಬಳಿಕ ಕ್ರಿ. ಶ. 1829ನೇ ಅಬ್ದ ಅವನು ಲೊಂ

1) 627, 629ನೇ ಪಾನು. 2) 665ನೇ ಪಾನು. 3) 569ನೇ ಪಾನು.

ದನಿನ ಸುವಾರ್ತಾಪ್ರಸಾರಕಸಂಘದವರ ಪರಿಪಾಲನದೊಳಗೆ ಯೆಹೂದ್ಯರಲ್ಲಿ ಯೇಸು ಮೆಸ್ಸೀಯನಲ್ಲಿಯ[1] ರಕ್ಷಣಾರ್ಥ ಸಾರುವವನಾಗುವದಕ್ಕೋಸ್ಕರ ಇಂಗ್ಲಂದಿಗೆ ಹೋದನು; ಆದರೆ ಕಾಲಗತಿಯಲ್ಲಿ ಆ ಅಭಿಪ್ರಾಯ ಬಿಟ್ಟು ಬಿಟ್ಟು, ಇಂಗ್ಲಂದಿನಲ್ಲಿ ಸ್ವಾಧೀನತೆಯ ಮೇಲೆ ಪ್ರಯಾಣಪ್ರಸಂಗಿಕನಾಗಿ, ತಿರಿಗ್ಯಾಡಿ, ಆರಂಭಕ್ಕೆ ವಿಶೇಷವಾಗಿ ನೊರ್ಥಂಬರ್ಲಂದಿನ ತೆನ್ಮೊಥೆಂಬ ಪಟ್ಣದಲ್ಲಿ, ಕ್ರಿ. ಶ. 1832ನೇ ಅಬ್ದ ಸುತ್ತ ಬ್ರಿಸ್ತ್ಲು ಪಟ್ಣದಲ್ಲಿ ಪ್ರಸಂಗಿಸುತ್ತಿದ್ದನು. ತನ್ಮಧ್ಯ ಅವನು ತಾನೇನೂ ಸಂಪತ್ತಿಲ್ಲದವನಾಗಿದ್ದರೂ ಸಂಬಳ ತೆಗೆಯದೆ, ತನ್ನನ್ನು ರಕ್ಷಿಸುವವನು ದೇವರೇ! ಎಂದು, ನಂಬಿ ಕೊಂಡಿರುವಲ್ಲಿ ಇವನು ರಹಸ್ಯವಾಗಿ ತನ್ನ ಭಕ್ತರನ್ನು ಪ್ರೇರಿಸಿ, ಇವರಿಂದ ಅವನಿಗೆ ದಿನಾಲು ಬೇಕಾದ ಅನ್ನ ವಸ್ತ್ರ ಕೊಡಿಸುತ್ತಿದ್ದನು; ಇಷ್ಟು ಮಾತ್ರವಲ್ಲದೆ ದೇವರು ಅವನಿಗೆ ಶಾಲೆಗಳನ್ನು ಹಾಕುವದಕ್ಕೂ ಪರಿಶುದ್ಧ ಬರಹದ ಪ್ರತಿಗಳನ್ನು ಹಂಚುವದಕ್ಕೂ ವಿಗ್ರಹಾರಾಧಕರಲ್ಲಿಯ ಸುವಾರ್ತಾಪ್ರಸಾರಕರಿಗೆ ಒತ್ತಾಸೆ ಗೈಯುವದಕ್ಕೂ ಕೂಡ ತನ್ನ ಭಕ್ತರಿಂದ ಹಣ ಮುಟ್ಟಿಸುತ್ತಿದ್ದನು. ಅಂದು ಮುಯಿಲ್ಲೆರನ ಹೃದಿಸ್ಪೃಶಾದ ಸಂಭಾಷಣೆ ಪ್ರಸಂಗಗಳಿಂದ ಸನ್ಮಾರ್ಗಕ್ಕೆ ತಿರುಗುವಂಥವರು ಅನೇಕರು. ಕ್ರಿ. ಶ. 1835ನೇ ವರುಷ ಅವನು ಅನಾಥರಾದ ಬಾಲ ಬಾಲೆಯರ ಮೇಲೆ ಮಮತಾಲೋಚನೆಯುಳ್ಳವನಾಗಿ, ಮರುವರುಷ ಆ ಪ್ರಸಿದ್ಧ ಫ್ರಂಕೆಯಂತೆ—ದೇವರು ಭಕ್ತರ ಪ್ರಾರ್ಥನೆಗಳನ್ನು ಕೇಳಿ ಕೊಳ್ಳುವಂಥವನು, ಅವನು ಎಂದೂ ಇದ್ದಂತೆಯೇ ಅವರ ಸಂಗಡ ಇರುವಂಥವನೆಂದು, ಹೇಳಿ, ಆ ಬ್ರಿಸ್ತ್ಲು ಪಟ್ಣದಲ್ಲಿ ಒಂದು ಮನೆಯನ್ನು ಬಾಡಿಗೆ ಕಟ್ಟಿ ಕೊಂಡು, 30 ಮಂದಿ ಅಂಥವರನ್ನು ಒಳಗಿಟ್ಟು, ತದನಂತರ ಬೇರೆ ಎರಡು ಬಾಡಿಗೇ ಮನೆಗಳಲ್ಲಿ ಬೇರೆ ಅನೇಕರನ್ನು ಶೇರಿಸಿ, ತನ್ಮಧ್ಯ ಅನುಭವಿಸುತ್ತಿದ್ದ ದೇವರ ಸಹಾಯದಿಂದ ಅಧಿಕ ಧೈರ್ಯವುಳ್ಳವನಾಗಿ, ಕಾಲಗತಿಯಲ್ಲಿ ಆ ಬಾಡಿಗೇ ಮನೆಗಳನ್ನು ಬಿಟ್ಟು, 5 ವಿಶಾಲವಾದ ಅನಾಥಗೃಹಗಳನ್ನೇ ವರ್ಷಕ್ರಮೇಣ ಒಂದರ ಹಿಂದೆ ಒಂದಾಗಿ ಏರಿಸಿದನು. ಅವೆಲ್ಲವುಗಳಲ್ಲಿ 2,100 ಮಂದಿ ಅನಾಥರಿಗೆ ಸ್ಥಳವದೆ; ಈಗ ಸಲ್ಲುವ ವರುಷ ಅವಲ್ಲಿ 1,200 ಮಂದಿ ಇರುತ್ತಾರೆ. ಈ ಮಹತ್ಕಾರ್ಯದ ಸಿದ್ಧಿಗಾಗಿ ಅವನು ತನ್ನ ಜೊತೆಕ್ರೈಸ್ತರ ಒತ್ತಾಸೆ ಬೇಡದಿದ್ದರೂ ದಿನಂಪ್ರತಿ ಅವರಿಂದ ತರತರದ ದೊಡ್ಡ ಸಣ್ಣ ಸ್ವೇಚ್ಛಾದಾನಗಳು ಪ್ರಾಪಿಸುತ್ತಾ ಬಂದವು; ಯಾವ ಯಾವಾಗ ಕೊರತೆ ಬೀಳುವ ಹಾಗೆ ಇರುತ್ತಿತ್ತೋ, ಆವಾವಾಗ ಅವನು ದೇವರಿಗೆ ಪ್ರಾರ್ಥಿಸಿ, ತಿರಿತಿರಿಗಿ ಬೇಕಾದ್ದನ್ನು ಹೊಂದುತ್ತಿದ್ದನು. ಹೋದ ವರುಷದ ಮಟ್ಟಿಗೆ ತನ್ನ ಅನಾಥಗೃಹಗಳಿಗೋಸ್ಕರ ಅವನಿಂದಾದ ಒಟ್ಟುಜಮಾಖರ್ಚು 55 ಲಕ್ಷ ರೂಪಾಯಿಗೆ ಏರಿತು. ಆದರೆ ಇ

1) 20ನೇ ಪಾನು.

ಷ್ಟನ್ನೂ ಆ ಗೃಹಗಳಿಗೆ ಮಾತ್ರ ಬಳಿಸಿದ್ದಲ್ಲದೆ ಮುಯಿಲ್ಲೆರನು ಫುಂಕೆಯಂತೆ ಅಂತರ್ಯವೂ ಬಾಹ್ಯವೂ ಆದ ಇತರ ಸುವಾರ್ತಾಪ್ರಸಾರಣದ ವೃತ್ತಿಗೆ ಸಹ ಮಿಗು ಸಹಾಯ ಗೈಯುತ್ತಿರಲನುವಾಯಿತು. ವಿವಾಹದಲ್ಲಿ ಜನಿಸಿ ಹೆತ್ತವರು ಸತ್ತು ಬಡತನದಿಂದಿರುವಂಥ ಯಾವತ್ತೂ ಹೆಣ್ಣು ಗಂಡು ಮಕ್ಕಳಿಗೆ ಅವನ ಗೃಹಗಳಲ್ಲಿ ಅಂಗೀಕಾರವಾಗುವದು; ಗೃಹಗಳೊಳಗಿನ ಮಕ್ಕಳು ತಕ್ಕ ವಯಸ್ಸಿಗೆ ಬಂದ ಮೇಲೆ ಅವರನ್ನು ಚಾಕರಿ ಪಂಚಾಳತ್ವ ಮುಂತಾದ ಪ್ರಜೋಪಕಾರವುಳ್ಳ ಕೆಲಸಕ್ಕೆ ಹಚ್ಚುವದು ನಡೆಯುತ್ತದೆ. ಮುಯಿಲ್ಲೆರನು ಪ್ಲಿಮೊಥಿನ ಸಹೋದರರಲ್ಲಿ[1] ಒಬ್ಬನು.— ಶೆರೆಮನೆಗಳೊಳಗಿರುವ ಜನರನ್ನೂ ಅವುಗಳೊಳಗಿಂದ ಬಿಡುಗಡೆ ಹೊಂದಿ ಬಂದವರನ್ನೂ ತಿದ್ದುಪಾಟು ಗೈಯಲಿಕ್ಕೆ ಪ್ರಯತ್ನಿಸುವ ಅಂತರ್ಯ ಸುವಾರ್ತಾಪ್ರಸಾರಣದ ಶಾಖೆಯು ವಿಶೇಷವಾಗಿ ಇಲಿಜಬೆಥ್ ಫ್ರೈ ಎಂಬವಳಿಂದ ಹುಟ್ಟಿತು. ಅವಳು ಕ್ರಿ. ಶ. 1780ನೇ ವರುಷ ಲೊಂದನಿನ ಉತ್ತರಪೂರ್ವದಲ್ಲಿರುವ ನೊರ್‍ರಿಚ್ಚು ಪಟ್ಟದಲ್ಲಿ ಕ್ವೇಕೆರರಾದ[2] ಒಳ್ಳೇ ತಂದೆ ತಾಯಿಗಳಿಗೆ ಜನಿಸಿ, ತನ್ನ ಯೌವನಕಾಲದ ಆರಂಭಕ್ಕೆ ಭಕ್ತಿಮಾರ್ಗವನ್ನರಿಯಲೊಲ್ಲದೆ, ಬಳಿಕ ಕ್ರಿ. ಶ. 1798ನೇ ವರುಷ ಕ್ವೇಕೆರರಲ್ಲೊಬ್ಬ ಸದ್ಭಕ್ತನಾದಂಥ ಪ್ರಸಂಗಿಕನ ವಾಗ್ನಿರೂಪಣಗಳಿಂದ ಹೃತ್ಪರಿಣತಳಾಗಿ, ಅಂದಿನಿಂದ ತನ್ನ ವಯಸ್ಸಿನ 36ನೇ ವರುಷದ ವರೆಗೆ ತನ್ನ ಗಂಡನ ಮತ್ತು 11 ಮಂದಿ ಮಕ್ಕಳ ಪರಾಂಬರಿಕೆ ಗೈಯುವ ಗೃಹ್ಯ ಪುಣ್ಯದಿಂದ ಹೆಚ್ಚಾಗಿ ರಾಜಿಸುತ್ತಿದ್ದರೂ ಸ್ವಗೃಹದ ಹೊರಗೆ ಸ್ವಂತ ಹಣದಿಂದ ಸಣ್ಣ ವಿದ್ಯಾಶಾಲೆಗಳನ್ನು ಹಾಕದೆ, ನೂರಾರು ಮಂದಿ ಬಡವರಿಗೆ ಅನ್ನ ವಸ್ತ್ರ ಕೊಡದೆ, ಇರಲಿಲ್ಲ. ಕ್ರಿ. ಶ. 1816ನೇ ಅಬ್ದ ಸುತ್ತ ಅವಳ ಚಿಂತೆಯು ಶೆರೆಯವರ ಮೇಲೆ ಹೋಯಿತು; ಯಾಕಂದರೆ ಅಂಥವರ ಪಶುತ್ವಭಾವವನ್ನೂ ಅಪಭ್ರಷ್ಟ ಗತಿಯನ್ನೂ ಪರಿಹರಿಸಲಿಕ್ಕೆ ನೋಡುವವರು ಆವಾಗ ಯಾರೂ ಇಲ್ಲ[3]. ಮೊದಲು ಅವಳು ಲೊಂದನಿನಲ್ಲಿಯ ದೊಡ್ಡ ಬಂದಿಖಾನೆಯಾದ ನ್ಯೂಗೇತೆಂಬದರೊಳಗೆ ಹೋಗಿ, ಅದರೊಳಗೆ ಶೆರೆಯಾಗಿರುವ ನೀಚ ಸ್ತ್ರೀಯರಲ್ಲಿ ಒಂದು ಶಾಲೆ ನಿರ್ಮಿಸಿದಳು. ತರುವಾಯ ಮರುವರುಷ ನ್ಯೂಗೇತಿನೊಳಗಣ ಸ್ತ್ರೀಯರನ್ನು ತಿದ್ದುವ ನಿಮಿತ್ತಕ್ಕೆ ಅವಳ ಪೇಚಾಟದಿಂದ ಒಂದು ಸಮಾಜವು ಉದ್ಭವಿಸಿತು; ಅಂಥವರಿಗೆ ಉಡಿಗೆ ವಿದ್ಯೆ ಕೈಕೆಲಸ ದೊರಕುವಂತೆ ಗವನ ಕೊಟ್ಟು, ಅವರಲ್ಲಿ ಪರಿಶುದ್ಧ ಬರಹದ ಜ್ಞಾನ ನೆಟ್ಟು, ಶುಚಿಯನ್ನೂ ಸುಕ್ರಮಾಪೇಕ್ಷೆಯನ್ನೂ ಸಂಭಾವಿತತ್ವವನ್ನೂ ಕಾರ್ಯಶೀಲತ್ವವನ್ನೂ ಹುಟ್ಟಿಸ ಬೇಕೆಂಬದೇ ಆ ಸಮಾಜದವರ ಉದ್ದೇಶ್ಯವು. ಇಂಗ್ಲಿಷ ಪಾರ್ಲಿಮೆಂತಿನವರು ಇಲಿಜಬೆಥಳ ಆ

1) 603ನೇ ಪಾನು. 1869ನೇ ಅಬ್ದ ಅವನು ತನ್ನ ಗೃಹಗಳಲ್ಲಿ 2000 ಅನಾಥರನ್ನು ಪೋಷಿಸುವದಕ್ಕೆ ತಕ್ಕ ಸ್ಥಳ ಮಾಡಿದನು. 2) 587ನೇ ಪಾನು. 3) 594ನೇ ಪಾನು ಸರಿ ನೋಡು.

ವಿಧದ ಪ್ರೇಮೋತ್ಸಾಹ ಕಂಡು, ಮೆಚ್ಚಿಗೆ ತೋರಿಸಿದರು. ದಿನಗತಿಯಲ್ಲಿ ಅವಳು ಬಂಧವಿಮುಕ್ತರಾದ ಹೆಣ್ಣು ಮಕ್ಕಳನ್ನು ಸಹ ತನ್ನ ಜೋಕೆಯಲ್ಲಿಟ್ಟು, ಹೆಚ್ಚಾಗಿ ದೇಶನಿರ್ವಾಸಾಜ್ಞೆ ಬಂದಂಥ ಸ್ತ್ರೀಯರ ಆತ್ಮೀಯ ಮತ್ತು ಶಾರೀರ ರಕ್ಷಣದ ಮೇಲೆ ಮನಸು ಹೋದವಳಾದಳು. ಕ್ರಿ. ಶ. 1818ನೇ ವರುಷ ಮೊದಲ್ಗೊಂಡು ಅವಳು ಇಂಗ್ಲಂದು ಸ್ಕೋತ್ಲಂದು ಐರ್ಲಂದು ಎಂಬ ಶೀಮೆಗಳಲ್ಲಿ ಪ್ರಯಾಣ ಮಾಡುವವಳಾಗಿ, ಅಲ್ಲಲ್ಲಿ ಶೆರೆಯವರ ಐಹಿಕ ಆಮುಷ್ಮಿಕ ಶುಭಗತಿ ಸಾಗುವ ಹಾಗೆ ಪ್ರಯತ್ನಿಸುತ್ತಿದ್ದಳು. ಬಳಿಕ ಅನ್ಯ ದೇಶಗಳಲ್ಲಿ ತನ್ನ ಮಿತ್ರರಾದವರ ಅಭಿಲಾಷೆಯ ಮೇರೆಗೆ ಅವಳು ಕ್ರಿ. ಶ. 1837ನೇ ವರುಷಕ್ಕೂ 1843ನೇದಕ್ಕೂ ನಡುವೆ ಇರುವ ಕಾಲದೊಳಗೆ 5 ಸಾರಿ ತಿರಿತಿರಿಗಿ ಫ್ರಂಚಿಗೂ ಬೆಲ್ಗಿಯೆನಿಗೂ ಹೊಲ್ಲಂದಿಗೂ ಗೆರ್ಮಾನಿಯಕ್ಕೂ ಹೋಗಿ ಬರುತ್ತಿರುವಷ್ಟರಲ್ಲಿ ಕೈಸರ್ಸ್ವೇರ್ಥಿನ ಆ ರೋಗಿಸೇವಕೀ ಗೃಹವನ್ನು[1] ಸಹ ಕಂಡು, ಪರೀಕ್ಷಿಸಿ, ಅದರ ಅಭಿಪ್ರಾಯವುಳ್ಳದ್ದೊಂದು ಸಮಾಜವನ್ನು ಇಂಗ್ಲಂದಿನಲ್ಲಿ ಉತ್ಪಾದಿಸಿದಳು. ಹಂಬುರ್ಗಿನಲ್ಲಿ ಮುಖ್ಯವಾಗಿ ಆ ಅಮಾಲಿಯೆ ಸೀವೆಕಿಂಗೆಂಬವಳ ಸುವೃತ್ತಿಯು[2] ಅವಳ ಕಣ್ಣಿಗೆ ಬಿತ್ತು. ಅವಳು ಹೋದಲ್ಲೆಲ್ಲಿಯೂ ಅವಳ ಪ್ರೇರಣೆಯಿಂದ ಆಯಾ ಬಂದಿಖಾನೆಗಳ ಕಟ್ಟಲೆಗಳು ತಿದ್ದುಪಾಟಿಗೆ ಬಂದವು. ಶೆರೆಯಲ್ಲಿರಲಾಗಿ ನನ್ನ ಬಳಿಗೆ ಬಂದಿರಿ ಎಂಬ ಮಾತಿನಿಂದ[3] ಅವಳ ಮಂಗಳ ಕ್ರಿಯೆಗಳನ್ನು ಕೊಂಡಾಡಿದ ಕ್ರಿಸ್ತನಾಥನು ಕ್ರಿ. ಶ. 1845ನೇ ಅಬ್ದ ಅವಳನ್ನು ತನ್ನ ಸ್ವರ್ಗರಾಜ್ಯದಲ್ಲಿ ಶೇರಿಸಿದನು. ಆದರೆ ಸ್ವದೇಶದಲ್ಲಿಯೂ ಪರದೇಶಗಳಲ್ಲಿಯೂ ರಾಜರೊಳಗೆ ಸಹ ಅವಳಿಗಿದ್ದ ಬಹು ಮಂದಿ ಮಿತ್ರರು ಅವಳ ಹೆಸರಿನ ನೆನಪು ಉಳಿಸುವದಕ್ಕಾಗಿ ಲೊಂದನಿನಲ್ಲಿ ಇಲಿಜಬೆಥ್ ಫ್ರೈಯ ಆಶ್ರಯ ಗೃಹವೆಂಬದನ್ನು ನಿರ್ಮಿಸಿದರು; ಶೆರೆಯಿಂದ ಬಿಡುಗಡೆಯಾಗಿ ನಿರ್ಭಾಗ್ಯರಾದ ಹೆಣ್ಣು ಮಕ್ಕಳಿಗೆ ಅದರಲ್ಲಿ ನಿಲುಗಡೆಯೂ ಊಟವೂ ಶಿಕ್ಕುವವು.

ಹಿಂದೆ ವಿವರಿಸಿದ ಕ್ರೈಸ್ತ ಧರ್ಮಕ್ರಿಯೆಗಳು ಮಾತ್ರವಲ್ಲದೆ ಇನ್ನೂ ಅನೇಕ ಬೇರೆಯವುಗಳು ಸಹ ಅಂತರ್ಯ ಸುವಾರ್ತಾಪ್ರಸಾರಣದ ಮೂಲಕ ಉದಯಿಸಿ, ನಡೆಯುತ್ತವೆ. ಮಾನಭಂಗ ಪಟ್ಟ ಹೆಣ್ಣು ಮಕ್ಕಳ ಆತ್ಮರಕ್ಷಣಕ್ಕೋಸ್ಕರ ಹೊಲ್ಲಂದು ಗೆರ್ಮಾನಿಯ ಇಂಗ್ಲಂದು ಪ್ರಭೃತಿಯಾದ ದೇಶಗಳ ದೊಡ್ಡ ಪಟ್ಣಗಳಲ್ಲಿ ಮಗ್ದಲೇನೆಯವರ ಆಶ್ರಯಗಳೆಂಬ[4] ಗೃಹಗಳಾಗಿವೆ; ಪಂಚಾಳವಿದ್ಯಾಸುಸಂಪಾದನೆಗೋಸ್ಕರ ನಾನಾ ಶೀಮೆಗಳನ್ನು ತಿರುಗಿ ಕಲಿಯ ಬೇಕಾದ ಯೌವನಸ್ಥರ ಹಿತಕ್ಕೂ ಇತರ ಯೌವನಸ್ಥರ ಹಿತಕ್ಕೂ ಯುವಸಮಾಜಗಳು ಸ್ಥಾಪಿತವಾಗಿ ಅವೆ;

---

1) 672ನೇ ಪಾನು. 2) 672ನೇ ಪಾನು. 3) ಮತ್ತಾ. 25, 36. 4) ಲೂಕ. 7, 37 ಆದ; ಯೋಹಾ. 11, 2; ಮತ್ತಾ. 26. 6. 7; 27, 56.

ಮೂಗ ಕಿವುಡರ ಆತ್ಮಶಿಕ್ಷೆಯು ಪ್ರತ್ಯೇಕ ಗೃಹಗಳಲ್ಲಿ ಆಗುತ್ತದೆ; ಮಹಾಯಂತ್ರ ಶಾಲೆಗಳೊಳಗಣ ಸಂಬಳ ಕೂಲಿಗಳವರ ಮತ್ತು ಲೋಹಮಾರ್ಗಗಳಲ್ಲಿಯ ಸಂಬಳ ಕೂಲಿಗಳವರ ವಿಚಿತ್ರ ಸಮೂಹದವರನ್ನೂ ಹಡಗಗಳ ಆಳುಗಳನ್ನೂ ಗೃಹಗಳ ಸೇವಕ ಸೇವಕಿಯರನ್ನೂ ಸನ್ಮಾರ್ಗದಲ್ಲಿ ಊರುವ ಸಮಾಜಗಳು ಶೋಭಿಸುತ್ತವೆ; ಆದಿತ್ಯವಾರದ ಪರಿಶುದ್ಧಾಚರಣದ ತುಸಕವೂ ಮದ್ಯಪಾನ ಜೂಜಾಟಗಳ ನಿವೃತ್ತಿಯ ತುಸಕವೂ ಬೇರೆ ಸಮಾಜಗಳು ಧಾವತಿ ಪಡುತ್ತವೆ; ಇತರ ಸಮಾಜಗಳವರು ಹೊಲೆ ಅರ್ಥವುಳ್ಳ ಗ್ರಂಥಗಳ ಹಬ್ಬುವಿಕೆಗೆ ಅಡ್ಡಗಟ್ಟುವಂತೆ ಕ್ರೈಸ್ತ ಅರ್ಥವುಳ್ಳಂಥವುಗಳನ್ನು ರಚಿಸಿ, ಛಾಪಿಸಿ, ಸ್ವಲ್ಪ ಕ್ರಯಕ್ಕೆ ಮಾರುತ್ತಾರಲ್ಲದೆ ಬೇಕಾದರೆ ಉಚಿತವಾಗಿ ಕೊಡುತ್ತಾರೆ; ಇನ್ನು ಬೇರೆ ಸಮಾಜಗಳವರು ಊರೂರು ಪಟ್ಣಪಟ್ಣಗಳಲ್ಲಿ ನಿಜವಾದ ಹಿತೋಪದೇಶವುಳ್ಳ ಗ್ರಂಥಗಳ ಸಂಗ್ರಹಶಾಲೆಗಳನ್ನಿಟ್ಟು, ಹೀಗೆ ಜನರನ್ನು ಆತ್ಮವಿಷವುಳ್ಳ ಗ್ರಂಥಗಳ ಅಧ್ಯಯನದಲ್ಲಿಂದ ಆತ್ಮಕ್ಷೀರವುಳ್ಳವುಗಳದಕ್ಕೆ ಎಳೆಯುತ್ತಾರೆ; ಯುದ್ಧಕಾಲಕ್ಕೆ ರಣರಂಗದಲ್ಲಿ ಘಾಯ ತಾಗುವ ದಂಡುಗಾರರನ್ನೊಯಿದು ಪರಾಂಬರಿಸುವದಕ್ಕೆ ಕೂಡ ಸಮಾಜಗಳು ಜನಿಸಿ ಅವೆ;—ಒಟ್ಟಿಗೆ, ಸತ್ಯವಾದವುಗಳು ಯಾವವೋ, ಪ್ರಿಯಕರವಾದವುಗಳು ಯಾವವೋ, ಸುಕೀರ್ತಿಯುಳ್ಳವುಗಳು ಯಾವವೋ, ಸದ್ಗುಣವಾಗಲಿ ಸ್ತೋತ್ರವಾಗಲಿ ಯಾವದೋ, ಅಂಥವುಗಳನ್ನೇ ಆಲೋಚಿಸಿರಿ! ಎಂಬ ದೇವವಾಕ್ಯದ[1] ಮಹತ್ತಾತ್ಪರ್ಯವನ್ನೇ ಅಂತರ್ಯ ಸುವಾರ್ತಾಪ್ರಸಾರಣದವರು ಈಡೇರಿಸುತ್ತಾರೆ.

ಇಂಗ್ಲಂದು ರಾಜ್ಯದಲ್ಲಿ ನಡೆಯುತ್ತಿರುವ ಹಲವು ಸುವಾರ್ತಾಪ್ರಸಾರಣಕ್ರಿಯೆಗಳನ್ನು ಕುರಿತು ಸ್ವಲ್ಪ ಹೆಚ್ಚು ವಿವರ ಹೇಳೋಣ. ಅಲ್ಲಿಯ ಅಂತರ್ಯ ಸುವಾರ್ತಾಪ್ರಸಾರಕರಲ್ಲಿ ಅಂದ್ರೂ ರೀದನೆಂಬ ಮಹಾ ಪಂಡಿತನು ಕೀರ್ತಿ ಗೊಂಡಂಥವನು. ಅವನು ಕ್ರಿ. ಶ. 1787ನೇ ಅಬ್ದ ಲೊಂದನಿನಲ್ಲಿ ದೇವಭಕ್ತಿಯುಳ್ಳ ತಂದೆ ತಾಯಿಗಳಿಗೆ ಹುಟ್ಟಿ, 1813ನೇದಕ್ಕೆ ಕ್ರೈಸ್ತ ಸಭ್ಯರ ಸಹಾಯ ಪಡೆದು, ಲೊಂದನಿನ ಅನಾಥಾಶ್ರಯಗೃಹ ಸ್ಥಾಪಿಸಿ, ಏಳು ವರುಷದವರೂ ಏಳನೇ ವರುಷ ದಾಟಿದವರೂ ಆದ ದಿಕ್ಕಿಲ್ಲದವರನ್ನು ಅದರಲ್ಲಿ ಶೇರಿಸುವವನಾಗಿ, ಬಳಿಕ ಏಳನೇ ವರುಷ ಇನ್ನು ಬಾರದಂಥವರಿಗೋಸ್ಕರ ಸಹ ಒಂದು ಬಾಲಾನಾಥಾಶ್ರಯಗೃಹದ ಮೂಲಕನಾಗಿ, ತರುವಾಯ ಕ್ರಿ. ಶ. 1858ನೇ ಅಬ್ದ ಪಿತರಿಲ್ಲದ ಮಕ್ಕಳಾಶ್ರಯವೆಂಬ ಮತ್ತೊಂದು ಅನಾಥಗೃಹ ನಿರ್ಮಿಸಿ, ಇಷ್ಟು ಸಾಕೆನ್ನದೆ, ಹುಚ್ಚರ ಜೋಕೆಗೋಸ್ಕರ ಒಂದು ಉನ್ಮತ್ತಾಶ್ರಯಗೃಹ ಕಟ್ಟಿ, ಬೇರೆ ಔಷಧದಾಯಕಗೃಹಗಳವರು, ಎಂದೂ ಸ್ವಸ್ಥರಾಗುವಂಥವರಲ್ಲವೆಂತ, ಕಳುಹಿಸಿ ಬಿಟ್ಟ ರೋಗಿಗಳ ಅಂಗೀಕಾರಕ್ಕಾಗಿ ಅ

1) ಫಿಲಿಪ್ಪಿ. 4, 8.

ಪ್ರಾಪ್ತಕ್ಷೇಮೌಷಧದಾಯಕಗೃಹವೆಂಬದೂ ನೆಟ್ಟು, ಕ್ರಿ. ಶ. 1862ನೇ ಅಬ್ದ ಪರಂಧಾಮವನ್ನೈದಿದನು.—ಮತ್ತೊಬ್ಬ ಪ್ರಸಿದ್ಧ ಸುವಾರ್ತಾಪ್ರಸಾರಕನ ಹೆಸರು ದೇವಿದ್ ನಸ್ಮಿಥನೆಂತ. ಅವನು ಕ್ರಿ. ಶ. 1799ನೇ ಅಬ್ದ ಸ್ಕೋತ್ಲಂದಿನ ಗ್ಲಸ್ಗೋವೆಂಬ ಪಟ್ಣದಲ್ಲಿ ಜನ್ಮವೆತ್ತಿ, ತನ್ನ 14ನೇ ವಯಸ್ಸಿನಲ್ಲಿಯಾದರೂ ಬಡವರಿಗೆ ದೇವವಾಗ್ಗ್ರಂಥಗಳನ್ನು ದೊರಕಿಸುವ ಉದ್ದಿಶ್ಯ ಇತರರಾದ ಭಕ್ತಿಯುಕ್ತ ಯೌವನಸ್ಥರ ಸಂಗಡ ಒಂದು ಸಮಾಜವನ್ನುತ್ಪಾದಿಸಿ, ತನ್ನ ಜೀವನಕ್ಕೋಸ್ಕರ ವ್ಯಾಪಾರ ಗೈಯುತ್ತಿರಲು, ಈ ವ್ಯಾಪಾರದಲ್ಲಿ ಆರು ದಿವಸ ಕಳೆದು ಬರುವ ಆದಿತ್ಯವಾರಂಪ್ರತಿ 200 ಮಂದಿ ಬಾಲರನ್ನು ಕೂಡಿಸಿ, ಅವರಿಗೆ ಕ್ರೈಸ್ತ ಉಪದೇಶ ಕೊಡುತ್ತಾ, ಒಳ್ಳೇ ತರದ ಪುಸ್ತಕಗಳನ್ನು ಪ್ರಾಪಿಸ ಮಾಡುತ್ತಾ ಇದ್ದನು. ದಿನ ಹೋಗುತ್ತಿರಲು, ಅವನು 600 ಮಂದಿ ಬಾಲಕರು ನೆರೆಯುವದೊಂದು ಆದಿತ್ಯವಾರಶಾಲೆಯಲ್ಲಿ ಬೋಧಕನಾಗಿ, ಅಕ್ಷರವರಿಯದ ಪ್ರಾಯಸ್ಥರಿಗೂ ಕಲಿಸಲಿಕ್ಕೆ ಹತ್ತಿ, ಶೆರೆಯವರ ಬಳಿಗೆ ಸಹ ಗಮಿಸಿ, ಸುಶಿಕ್ಷಿಸುತ್ತಿರುವದರಿಂದೊಪ್ಪಿದನು. ಕ್ರಿ. ಶ. 1820ನೇ ಅಬ್ದ ಹಲವು ಕ್ರೈಸ್ತ ಸಮಾಜಗಳವರು ಅವನನ್ನು, ತಮ್ಮ ಲೇಖಕನೆಂತ, ಆರಿಸಿಟ್ಟು, ಸಣ್ಣ ಸಂಬಳ ಕೊಡುವಾಗ ಅವನು, ತನ್ನ ಉದರಪೋಷಣಕ್ಕೆ ಅಷ್ಟಾದರೂ ಸಾಕೆಂದು, ಹೇಳಿ, ಲೌಕಿಕ ವ್ಯಾಪಾರವೃತ್ತಿ ಬಿಟ್ಟು ಬಿಟ್ಟು, ಪಾರಮಾರ್ಥಿಕವಾದ್ದೊಂದನ್ನೇ ಹಿಡಿದು, ನಮ್ಮ ದೇಶದ ಯೌವನಸ್ಥರೆಲ್ಲರೂ ಯೆಹೋವನ ಭಯಭಕ್ತಿಯಲ್ಲಿ ಶಿಕ್ಷಿತರಾಗಬೇಕೆಂದು, ಯುವಸಮಾಜಗಳನ್ನು ಕಟ್ಟಿ, ಅನೇಕ ಯುವರು ಸತ್ಕ್ರೈಸ್ತರಾಗುವದಕ್ಕೆ ಕಾರಣನಾದನು; ಅವನ ಪ್ರಯತ್ನದಿಂದ ಉದ್ಭವಿಸಿದ ಯುವಸಮಾಜಗಳು ಎಪ್ಪತ್ತೇ. ತರುವಾಯ ಅವನು, ತನ್ನ ಜನ್ಮಪಟ್ಣದ ದೇವಾಲಯಗಳಲ್ಲಿ ಭಕ್ತಿವರ್ಧಕವಾದ ಪ್ರಸಂಗಗಳು ಆಗುತ್ತಿದ್ದರೂ ಅನೇಕ ಜನರು ಬುದ್ಧಿಮಂದತನದಿಂದಾಗಲಿ ತಕ್ಕ ವಸ್ತ್ರಗಳಿಲ್ಲದ್ದರಿಂದಾಗಲಿ ಅಸ್ವಸ್ಥದಿಂದಾಗಲಿ ಅವನ್ನು ಕೇಳಲಿಕ್ಕೆ ಬರುವದಿಲ್ಲವೆಂದು, ಪರ್ಯಾಲೋಚಿಸಿ, ಆಯಾ ಅಭ್ಯಂತರಗಳನ್ನು ದಾಟಿಸುವದಕ್ಕೆ ದೇವಾಲಯಗಳಲ್ಲದ ಸ್ಥಳಗಳಲ್ಲಿ ಸಕಲ ತರದ ಕೃಚ್ಛ್ರದವರಿಗಾಗಿ ದೇವಾರಾಧನೆ ನಡಿಸುವವನಾಗಿ, ಬೋಧಕೋದ್ಯೋಗಿಗಳಲ್ಲದ ಸಭ್ಯರು ಸಹ ಬಡವರ ಮನೆಗಳಿಗೆ ಹೋಗಿ ಅವರಿಗೆ ಬೋಧಿಸುವ ಹಾಗೆ ಮಾಡಲನುವಾಯಿತು. ಈ ವಿಧದಿಂದ ಕ್ರಿ. ಶ. 1826ನೇ ವರುಷ ಗ್ಲಸ್ಗೋವಿನ ಪುರಸುವಾರ್ತಾಪ್ರಸಾರಣವು ಅವನ ಮೂಲಕ ಆರಂಭಿಸಿತು. ಅಂದಿಗೆ 3 ವರುಷ ಈಚೆ 18 ಮಂದಿ ಸಾಧಾರಣಸಭ್ಯರಾದ ಸುವಾರ್ತಾಪ್ರಸಾರಕರಾದರೂ ಆ ಪಟ್ಣದ ಚಿಕ್ಕ ದೊಡ್ಡ ಬೀದಿಗಳಲ್ಲಿಯ ಮನೆಮನೆಗಳೊಳ ಹೊಕ್ಕು, ಅಪಭ್ರಷ್ಟರಾದಂಥ ಬಡವರೆಡೆಯಲ್ಲಿರುವ ಮಲ ದುರ್ಗಂಧ ದುರ್ಮರ್ಯಾದೆಗಳನ್ನು ಚಿಂತಿಸದೆ, ಅವರಲ್ಲಿ ಕೂತು ಕೊಂಡು, ಪ್ರೀತಿಯಿಂದ ಅವ

ರಿಗೆ ಸನ್ಮಾರ್ಗ ತೋರಿಸುತ್ತಾ, ಅಮಲುಗಾರರನ್ನು ತಿದ್ದುತ್ತಾ, ಜಗಳಗಳನ್ನು ತೀರಿಸುತ್ತಾ, ಕೂಲೀ ಕೆಲಸ ದೊರಕಿಸುತ್ತಾ, ಸತ್ಯದ್ವೇಷಿಗಳನ್ನು ಮೃದು ನುಡಿಗಳಿಂದ ದೇವವಾಗಂಗೀಕಾರಕ್ಕೆ ಒಡಂಬಡಿಸುತ್ತಾ, ರೋಗಿಗಳಿಗೆ ಉಪಶಮಿಸಿ ಸಹಾಯ ಮಾಡುತ್ತಾ, ಮರಣದ ಸಂಕಟದಲ್ಲಿಯುವರಿಗೆ ಕ್ರಿಸ್ತರಕ್ಷಕನನ್ನು ತೋರಿಸುತ್ತಾ, ಹುಡುಗ ಹುಡಿಗಿಯರನ್ನು ವಿಶೇಷವಾಗಿ ಆದಿತ್ಯವಾರಶಾಲೆಗಳಲ್ಲಿ ಶೇರಿಸುತ್ತಾ, ಹಿತಕರ ಗ್ರಂಥಗಳನ್ನು ಹಂಚುತ್ತಾ, ಸಕಲ ಬಡ ಜನರನ್ನೂ ರಾತ್ರಿಯಲ್ಲಿ ಆಗುವ ಪ್ರಾರ್ಥನಾಸಮಾಗಮುಗಳಿಗೆ ಕರೆಯುತ್ತಾ ಇರುವಂಥವರಾಗಿದ್ದರು; ಆ ಪ್ರಾರ್ಥನಾಸಮಾಗಮುಗಳಿಗೆ ರಗಟಿ ಹೊಲಸು ಮಾತ್ರ ಶರೀರದಲ್ಲಿ ಕಾಣುವ ಕೃಚ್ಛ್ರಗಳೂ ಸಮೂಹ ಸಮೂಹವಾಗಿ ಬರುತ್ತಿರುವರು. ಭಕ್ತಿಯಿಂದ ಯಶಸ್ಸುಗೊಂಡ ಸಭೋದ್ಯೋಗಿಗಳು ಆ ಸುವಾರ್ತಾಪ್ರಸಾರಕರ ಮೇಲ್ವಿಚಾರಕರಾಗಿರುತ್ತಿದ್ದರು. ಆ ಪ್ರಕಾರದ ಮಹಾಶೀರ್ವಾದದಾಯಕವಾದ ವೃತ್ತಿಯು ಕೆಲವು ವರುಷ ಅಲ್ಲಿ ನಡೆದನಂತರ ಏನಾಯಿತಂದರೆ, ಮುಂಚೆ ಯಾವ್ಯಾವ ಓಣಿಗಳಲ್ಲಿ ಅಲ್ಲಲ್ಲಿ ಪ್ರಬಲವಾದ ದುರ್ಮಾರ್ಗತನಕ್ಕೋಸ್ಕರ ಮಾನಸ್ಥರು ಪ್ರವೇಶಿಸಲಿಕ್ಕೆ ಅಂಜಿದ್ದರೋ, ಆಯಾ ಓಣಿಗಳೇ ತಮ್ಮ ತಮ್ಮಲ್ಲಿ ಉದ್ಭವಿಸಿದ ಸದ್ಭಕ್ತರ ಸುಮಾರ್ಗತನದಿಂದ ಪರಿಶೋಭಿಸಲೆಸಗಿದವು. ಆದರೆ ದೇವಿದ್ ನಸ್ಮಿಥನು ಗ್ಲಸ್ಗೋವಿನಲ್ಲಿ ಆರಂಭವಾದ್ದನ್ನು ಬೇರೆ ಕಡೆಯಲ್ಲಿ ಸಹ ಸ್ಥಾಪಿಸ ನೋಡಿ, ಮೊದಲು ಐರ್ಲಂದಿಗೆ ಹೋಗಿ, ಮುಖ್ಯವಾಗಿ ದಬ್ಲಿನೆಂಬ ರಾಜಧಾನಿಯಲ್ಲಿ ಪಪ್ಪಕ ಸಭ್ಯರೊಳಗೂ ಸೌವಾರ್ತಿಕ ಸಭ್ಯರೊಳಗೂ ಸುವಾರ್ತಾಪ್ರಸಾರಣ ತೊಡಗಿಸಿದನು. ಅವನು ಅಂದು ಅಲ್ಲಿ ಹಾಕಿದ ಚಿಕ್ಕ ಬೀಜದಿಂದ ಕಾಲಕ್ರಮೇಣ ಒಂದು ದೊಡ್ಡ ವೃಕ್ಷವು ಹುಟ್ಟಿತು; ಐರ್ಲಂದಿನಲ್ಲಿ ಈಗ ಸುಮಾರು 1000 ಮಂದಿ ಸುವಾರ್ತಾಪ್ರಸಾರಕರಿದ್ದು, ಪಪ್ಪಕತ್ವದಲ್ಲಿ ಕೆಟ್ಟವರೊಳಗೂ ಶಾಲೆಗಳನ್ನೂರುತ್ತಾ, ಉಪದೇಶಾದಿಗಳನ್ನು ನಡಿಸುತ್ತಾ ಇದ್ದಾರೆ; 50,000 ಮಂದಿಗಿಂತ ಹೆಚ್ಚು ಪಪ್ಪಕರು ಅವರ ಬೋಧನೆಯಿಂದ ಹೃತ್ಪರಿಣತರಾಗಿ, ಸೌವಾರ್ತಿಕ ಸಭೆ ಶೇರಿ ಕೊಂಡಿದ್ದಾರೆ. ನಸ್ಮಿಥನು ಎರಡು ವರುಷ ಐರ್ಲಂದಿನಲ್ಲಿ ಪ್ರವರ್ತಿಸಿದ ಮೇಲೆ ಕ್ರಿ. ಶ. 1830ನೇದರಲ್ಲಿ ಅಮೆರಿಕಕ್ಕೆ ಹೊರಟು ಹೋಗಿ, ನ್ಯೂಯೊರ್ಕ್ ಮೊದಲಾದ ದೊಡ್ಡ ಪಟ್ಣಗಳಲ್ಲಿ ಅಂತರ್ಯ ಸುವಾರ್ತಾಪ್ರಸಾರಣದ ಸ್ಥಾಪಕನಾಗಿ, ಬಳಿಕ ಮರುವರುಷ ಗ್ಲಸ್ಗೋವಿನ ಮೇಲೆ ಫ್ರಂಚಿನ ಪರೀಸು ಪಟ್ಣಕ್ಕೆ ಗಮಿಸಿ, ಅಲ್ಲಿಯ ಇಂಗ್ಲಿಷರೊಳಗೆ ತನ್ನ ಮಂಗಳಾಭಿಪ್ರಾಯವನ್ನು ಸಾಗಿಸಿ, 1835ನೇದಕ್ಕೆ ಲೊಂದನಿಗೈದಿ, ಅದೇ ವರುಷ ಅಲ್ಲಿ ಲೊಂದನಿನ ಪುರಸುವಾರ್ತಾಪ್ರಸಾರಣವೆಂಬದನ್ನು ನಿರ್ಮಿಸಿ, 2 ವರುಷದಿತ್ತ ಕಡೆ ಬ್ರಿತಿಷ ಮತ್ತು ಪರದೇಶಿಕ ಪುರಸುವಾರ್ತಾಪ್ರಸಾರಣಸಮಾಜಕ್ಕೆ ಮೂಲಸ್ಥನಾಗಿ, ತರುವಾಯ ಬಹಳ ಮಹಾಯಂತ್ರ

ಶಾಲೆಗಳಿರುವ ಬರ್ಮಿಂಗ್ಹಮು ಮಂಶ್ಚೆಸ್ತರು ಲೀದ್ಸು ಮೊದಲಾದ ಪಟ್ಟಗಳನ್ನು ತಿರುಗುತ್ತಾ, ಅಂಥವುಗಳೊಳಗೆ ವಿಶೇಷವಾಗಿ ಮುತ್ತಿ ಮುತ್ತಿ ಕಾಣುವ ದರಿದ್ರ ಕೃಚ್ಛ್ರಗಳ ಮೇಲೆ ಪಟ್ಣವಾಸಿಗಳಲ್ಲಿ ಪ್ರೇಮ ಹುಟ್ಟಿಸುತ್ತಾ ಬಂದು, ಕ್ರಿ. ಶ. 1839ನೇ ವರುಷ ತನ್ನ 41ನೇ ವಯಸ್ಸಿನೊಳು, ಯೇಸು ಕ್ರಿಸ್ತನಲ್ಲಿ ಸಂಪೂರ್ಣಾನಂದನಾಗಿದ್ಧೇನೆಂದು, ತೀರಿದನು. ಆದರೆ ಲೊಂದನಿನ ಪುರಸುವಾರ್ತಾಪ್ರಸಾರಣವು ಚಂದದಿಂದ ಅರಳಿ ಅದೆ; ಅದರ ಸಂಬಂಧದಲ್ಲಿರುವ ಸುಮಾರು 250 ಮಂದಿ ಸುವಾರ್ತಾಪ್ರಸಾರಕರು ಮನೆಗಳ ಒಳಗೂ ಹೊರಗೂ ಒಂದೇ ವರುಷಕ್ಕೆ 50,000 ಪ್ರಸಂಗಗಳನ್ನಾದರೂ ಮಾಡಿದ್ದುಂಟು; ಕ್ರಿ. ಶ. 1864ನೇ ವರುಷವೊಂದರಲ್ಲೇ ಅವರ ಪೇಚಾಟದಿಂದ 1,128 ಜನ ಅಮಲುಖೋರರು ಮಾನಸಾಂತರ ಪಟ್ಟು, ಕ್ರಿಸ್ತನ ಕಡೆಗೆ ತಿರುಗಿ ಕೊಂಡರು.

ಇಂಗ್ಲಂದು ರಾಜ್ಯದ ಪ್ರೀತಿಕಾರ್ಯಗಳಲ್ಲಿ ನಾವು ನೆನಸ ತಕ್ಕವುಗಳು ಇನ್ನು ಯಾವವಂದರೆ— ಎಪಿಸ್ಕೊಪಾಲನವದೇವಾಲಯನಿರ್ಮಾಣಸಮಾಜ, ಎಪಿಸ್ಕೊಪಾಲಸಭೋದ್ಯೋಗಿಸಹಾಯಸಮಾಜ, ಸೈನಿಕಮಿತ್ರಸಮಾಜ, ಮಧ್ಯರಾತ್ರಿಸಮಾಗಮಗಳು, ಅಂಗಹೀನಾಶ್ರಯಗೃಹಗಳು, ಆದಿತ್ಯವಾರಶಾಲಾನ್ಯೋನ್ಯಸಮಾಜ, ಛಿದ್ರವಸ್ತ್ರಶಾಲಾನ್ಯೋನ್ಯಸಮಾಜ ಎಂಬವುಗಳೇ.—ಕ್ರಿ. ಶ. 1712ನೇ ವರುಷಕ್ಕಾದರೂ, ಲೊಂದನು ಪಟ್ಣದ ಎಪಿಸ್ಕೊಪಾಲ ದೇವಾಲಯಗಳು ಸಕಲ ಪಟ್ಣವಾಸಿಗಳಿಗೆ ಸಾಕಾಗವೆಂತ, ಸ್ಪಷ್ಟ ತಿಳಿದು ಬಂತು; ಆ ವೇಳೆ ಒಂದೊಂದು ಆದಿತ್ಯವಾರ 2 ಲಕ್ಷ ಜನರೂ ದೇವಾಲಯಗಳಲ್ಲಿ ತಮಗೆ ಸ್ಥಳ ಕಾಣಲರಿಯದೆ, ಪ್ರಸಂಗಗಳ ಆಶೀರ್ವಾದವಿಲ್ಲದಿರ ಬೇಕಾಯಿತು; ಇತರ ಪಟ್ಣಗಳಲ್ಲಿ ಅದೇ ಹಾಡಾಗಿತ್ತು. ಆದರೂ ಸುಮಾರು ಒಂದು ಶತಮಾನದ ಕಾಲ ಅಂಥ ದುಃಸ್ಥಿತಿಯನ್ನು ಪರಿಹರಿಸುವ ಪ್ರಯತ್ನಗಳು ನಡೆಯದ್ದಲ್ಲದೆ ಜನಸಂಖ್ಯೆಯು ಮಹಾ ರೀತಿಯಿಂದ ಹೆಚ್ಚಿತು. ಬಳಿಕ ಕ್ರಿ. ಶ. 1818ನೇ ಅಬ್ದ ಪಾರ್ಲಿಮೆಂತಿನವರು ಹೊಸ ದೇವಾಲಯಗಳನ್ನು ಕಟ್ಟುವದಕ್ಕಾಗಿ ಹಣ ನೇಮಿಸಿದ ಹೊರ್ತು ಆ ನವದೇವಾಲಯನಿರ್ಮಾಣಸಮಾಜವೆಂಬದು ಹುಟ್ಟಿತು. ಈ ಸಮಾಜದವರು ಸ್ವೇಚ್ಛಾಮಿಲಿತ ಧರ್ಮಹಣದಿಂದ ಅಲ್ಲಲ್ಲಿ ಚಂದವಾದ ಅನೇಕಾನೇಕ ದೇವಾಲಯಗಳನ್ನೇರಿಸಿದ್ಧಾರೆ.—ಉದ್ಯೋಗಪ್ರತಿಷ್ಠಿತರಿಂದಾಗಲಿ ಸಾಧಾರಣ ಸಭ್ಯರಿಂದಾಗಲಿ ಎಪಿಸ್ಕೊಪಾಲ ಸಭೋದ್ಯೋಗಿಗಳಿಗೆ ಸಭ್ಯಾತ್ಮಪರಿಪಾಲನದಲ್ಲಿ ಸಹಾಯ ಮಾಡಿಸುವದೇ ಆ ಸಭೋದ್ಯೋಗಿಸಹಾಯಸಮಾಜದವರ ತಾತ್ಪರ್ಯವು.—ಆ ಸೈನಿಕಮಿತ್ರಸಮಾಜದವರು ದಂಡುಗಾರರಲ್ಲಿ ವಿಶೇಷ ದೃಷ್ಟಿ ಇಟ್ಟು, ರಾಜನಿಯಮದ ಮೇಲೆ ಇವರಲ್ಲಿ ಪ್ರಸಂಗೋದ್ಯೋಗಿಗಳಾಗಿರುವವರ ಪ್ರವರ್ತನ ಸಾಲದೆಂದು, ಅವರ ಹತ್ತರ ತಕ್ಕ ಸಾಧಾರಣಸಭ್ಯರನ್ನು ಕಳುಹಿಸಿ, ಇವರಿಂದ ಅವರ ಮುಂದೆ ದೇವವಾಕ್ಯವನ್ನೋದಿಸುತ್ತಾರೆ.—ಆ ಮಧ್ಯರಾತ್ರಿಸಮಾ

ಗಮುಗಳು ಸಾಕೆಂತಾಗಲಿ ಬೇಕೆಂತಾಗಲಿ ನೀತಿಚರ್ಯೆಗೆಟ್ಟ ಹೆಣ್ಣು ಮಕ್ಕಳ ಹಿತಾರ್ಥವಾಗಿ ನಡೆಯುತ್ತವೆ; ಅವನ್ನು ನಡಿಸುವ ಭಕ್ತರು ಮಧ್ಯರಾತ್ರಿಗೆ ಅಂಥವರನ್ನು ತಕ್ಕದೊಂದು ಗೃಹದಲ್ಲಿ ಕೂಡಿ ಬರ ಮಾಡಿ, ಅವರಿಗೆ ಕ್ರೈಸ್ತ ಜ್ಞಾನ ಹೇಳಿ, ಹೀಗೆ ನಾಶನದ ಮಾರ್ಗದಲ್ಲಿಂದ ಸಂಭಾವಿತತ್ವಕ್ಕೆಳೆಯ ನೋಡಿ, ತಮ್ಮ ದಯಾಪ್ರಯತ್ನ ಕೈಗೂಡಿದರೆ ಅವರನ್ನು ಅವರ ಕುಟುಂಬದವರಿಗೆ ತಿರಿಗಿ ಒಪ್ಪಿಸುತ್ತಾರೆ, ಅಥವಾ ಕ್ರೈಸ್ತ ಮನೆತನದವರಲ್ಲಿ ಅವರಿಗೆ ಚಾಕರಿ ಸಂಪಾದಿಸಿ ಕೊಡುತ್ತಾರೆ. ಅದಲ್ಲದೆ ಪಶ್ಚಾತ್ತಾಪಪಟ್ಟಂಥ ಹೆಣ್ಣು ಮಕ್ಕಳಿಗೆ ಸ್ವಾತ್ರ್ಯಶ್ರಯಗೃಹಗಳು[1] ಸಹ ಅವೆ; ಇವುಗಳಲ್ಲಿ ಶೇರಿದವರು ಅಗಸಗಿತ್ತಿಯರ ಕೆಲಸ ಮುಂತಾದ ಪ್ರಯೋಜನಕರವಾದ ಕೆಲಸಗಳನ್ನು ಮಾಡ ಬೇಕು. ಕೈ ಕಾಲು ಬಾರದ ಕಾರಣ ಸ್ವಾತ್ರ್ಯಶ್ರಯಗೃಹಗಳ ಕೆಲಸಕ್ಕೆ ಅಸಮರ್ಥರಾದಂಥ ಹೆಣ್ಣು ಮಕ್ಕಳ ಸಂರಕ್ಷಣಕ್ಕೋಸ್ಕರ ಆ ಅಂಗಹೀನಾಶ್ರಯಗಳು ಸ್ಥಾಪಿತವಾಗಿವೆ.—ಆ ಆದಿತ್ಯವಾರಶಾಲಾನ್ಯೋನ್ಯಸಮಾಜದವರು ಹಳ್ಳಿ ಊರು ಪಟ್ಟಗಳಲ್ಲಿ ಯಾವತ್ತೂ ವಯಸ್ಸಿನವರಿಗೆ ಆದಿತ್ಯವಾರಂಪ್ರತಿ ಸುಬೋಧನೆ ಹೇಳುತ್ತಾರೆ; ಸಕಲ ಸ್ಥಿತಿಯವರ ಸುಮಾರು 2 ಲಕ್ಷ ಜನರಾದ ಅವರು ಸ್ವಾಪೇಕ್ಷೆಯಿಂದ ಆ ಪ್ರೇಮವೃತ್ತಿ ನಡಿಸುವಂಥವರು; 4 ವರುಷಗಳ ಹಿಂದೆ ಅವರ ಪರಿಪಾಲನದೊಳಗೆ 3,284 ಶಾಲೆಗಳಿದ್ದವು, ಇವುಗಳಲ್ಲಿ ಸುಶಿಕ್ಷೆ ಹೊಂದುವವರು 6,35,654 ಮಂದಿಯು. ಆ ಸಮಾಜದವರು ಅಂದು ಸಂಘ ನೆರೆದ ವಾರ್ಷಿಕ ಹಬ್ಬದಲ್ಲಿ ಒಬ್ಬನು ಹೇಳಿದ ವರ್ತಮಾನವೇನಂದರೆ—ಪಾರ್ಲಿಮೆಂತಿನ ಕೆಳವರ್ಗದವರಲ್ಲೊಬ್ಬನಾಗಿದ್ದು[2] ಸ್ವಲ್ಪ ದಿವಸಗಳ ಮುಂಚೆ ಸತ್ತ ಜೇಂಸ ಕೆರ್ಷಾವೆಂಬವನ ಗೊತ್ತು ನಿಮ್ಮೆಲ್ಲರಿಗೆ ಅದೆಯಲ್ಲ? ಅವನ ಶುಭಗತಿಯು ಆದಿತ್ಯವಾರಶಾಲೆಗಳಿಂದ ಹೊರ್ತು ಇನ್ಯಾತರಿಂದಲೂ ಹುಟ್ಟಿದ್ದಲ್ಲ. ಅವನು 10 ವರುಷದ ಹುಡುಗನಾಗಿರುವಾಗ ಮಂಶ್ಚೆಸ್ತರು ಪಟ್ಣದ್ದೊಂದು ಅಂಥಾ ಶಾಲೆಗೆ ಬರುತ್ತಿದ್ದನು; ಅಂದು ಅವನು ಕಡು ತಂಟೆಗಾರನು; ಆದ್ದರಿಂದ ಅವನ ಉಪಾಧ್ಯಾಯನು ಶಾಲೆಯ ಮುಖ್ಯಸ್ಥನ ಬಳಿಗೆ ಹೋಗಿ, ಈ ಜೇಂಸನನ್ನು ಯಾವದೊಂದು ಕೆಲಸಕ್ಕೂ ಬರಿಸುವದು ನನ್ನಿಂದ ಕೂಡದೆಂತ, ಹೇಳಲು, ಆ ಮುಖ್ಯಸ್ಥನು—ಆ ಬಾಲಕನ ಅಂತರ್ಯದಲ್ಲಿ ಒಂದು ಒಳ್ಳೇ ಬೀಜವಿರುತ್ತದೆಂಬದು ನನಗೆ ನಿಶ್ಚಯ; ಇದನ್ನು ಮೊಳಿಸುವ ಪರಿ ಏನೆಂತ, ಮಾತ್ರ ತಿಳಿಯ ಬೇಕೆಂದು, ಉಪಾಧ್ಯಾಯನನ್ನು ಸಂತೈಸಿದನು. ತದನಂತರ ಜೇಂಸನು ಅದೇ ಪ್ರಕಾರ ತಿರಿತಿರಿಗಿ ಬರೇ ಉಪದ್ರವ ಕೊಡುತ್ತಾ, ಉಪಾಧ್ಯಾಯನು ಅದೇ ಪ್ರಕಾರ ತಿರಿತಿರಿಗಿ ಮುಖ್ಯಸ್ಥನ ಮುಂದೆ ಅವನ ಹೆಸರು ತೆಗೆಯುತ್ತಾ ಇರಲು, ಮುಖ್ಯಸ್ಥನು ದುಃಖ ಗೊಂಡರೂ ದಯಾಲೋಚನೆ ಬಿಡದೆ, ಪುನಃ ಪುನಃ ಜೇಂಸನಿಗೆ ಮ

1) 676ನೇ ಪಾನು. 2) 481ನೇ ಪಾನು.

ನ್ನಿಸುವಂತೆ ಉಪಾಧ್ಯಾಯನನ್ನೊಡಂಬಡಿಸುತ್ತಿದ್ದನು. ಆದಾಗ್ಯೂ ಕಡೆಯಲ್ಲಿ ಆ ಹುಡುಗನು ಕುದುರೆಗಳ ಓಡ್ಯಾಟದ ರಂಗಕ್ಕೆ ಹೋದ್ದರಿಂದ ತಾನು ಶಾಲೆ ಬಿಡ ಬೇಕಾದ ತಪ್ಪು ಮಾಡಿದನು. ಹಾಗಾದರೆ ಮರುರವಿವಾರದಲ್ಲಿ ಕುದುರೆಗಳ ಜೂಜಾಟ ನೋಡಲಿಕ್ಕೆ ಹೋದವರು ಯಾರೆಂಬಂತೆ ವರ್ಗವರ್ಗದವರಲ್ಲಿ ವಿಚಾರ ಹತ್ತಲು, ಜೇಂಸನೊಬ್ಬನ ಮೇಲೆ ಮಾತ್ರ ಆ ಅಪರಾಧ ಬಂತು. ಅದಕ್ಕೆ ಉಪಾಧ್ಯಾಯನು—ಸರಿ! ಆ ಹುಡುಗನನ್ನು ಕಳುಹಿಸಿ ಬಿಡಲವಶ್ಯವಲ್ಲವೇ? ಹಿಂಡಿನಲ್ಲಿರುವ ಒಂದೇ ತಿಂಡೀ ಕುರಿಯ ದೆಸೆಯಿಂದ ಹಿಂಡಿಗೆಲ್ಲಾ ತಿಂಡಿ ಹಿಡಿಯುವದೆಂಬಂತೆ ಈ ಒಬ್ಬ ದುಷ್ಟ ಹುಡುಗನ ಸಹವಾಸದಿಂದ ಶಾಲೆಯವರೆಲ್ಲರೂ ಬುದ್ಧಿಗೆಟ್ಟು ಹೋದಾರೆಂತ, ಹೇಳಲಾಗಿ, ಮುಖ್ಯಸ್ಥನು—ನೀವು ಹೇಳಿದ್ದು ಖರೆ; ಆದರೂ ಆ ಹುಡುಗನನ್ನು ಹೊರಗೆ ದೂಡುವದಕ್ಕೆ ನಮಗೆ ಪಶ್ಚಾತ್ತಾಪವಾದೀತು; ಅವನನ್ನು ಶಾಲೆಯವರ ಮುಂದೆ ನಿಲ್ಲಿಸಿ, ಪರೀಕ್ಷಿಸೋಣವೆಂದು, ಜೇಂಸನನ್ನು ಮುಂದಕ್ಕೆ ಕರೆದಿಟ್ಟು—ಎಲೇ, ಬಾಲಕನೇ, ಆ ಜೂಜಾಟ ನೋಡ ಹೋದದರಿಂದ ನಿನಗೆ ಮನೋವ್ಯಥೆಯಾಯಿತೋ? ಹೌದೆನ್ನು! ಎಂದು, ನುಡಿಯಲು, ಇವನು ತನ್ನ ಇಂಗಿತವನ್ನು ಮರೆಮಾಡದೆ, ನಿಷ್ಕಪಟನಾಗಿ, ಅದರಿಂದ ನನಗೇನೂ ಮನೋದುಃಖವು ಹುಟ್ಟಲಿಲ್ಲವೆಂದು, ಹೇಳಿ ಬಿಟ್ಟನು. ಆಗಲಾದರೂ ಮುಖ್ಯಸ್ಥನು ಪ್ರಸನ್ನತೆ ಕಳೆಯದೆ, ಪ್ರೀತಿಯ ಸ್ವಾದು ವಾಕ್ಯಗಳಿಂದ ಅವನ ಹೃತ್ತು ಕರಗಿಸಿ, ಬಳಿಕ ಬೇರೆ ಹುಡುಗರ ನೋಡಿ—ಎಲೇ, ನನ್ನ ಮಕ್ಕಳೇ, ನಾವು ಜೇಂಸನನ್ನು ಶಾಲೆಯೊಳಗಿಂದ ಹೊರಗೆ ಹಾಕಿದರೆ ಕಾಡಿನ ಪಾಲಾಗಿ, ಪೂರಾ ಕೆಡುವನು; ಅವನು ಹೋಗಲಿಯೋ? ಎಂದು, ಕೇಳಿದ್ದಕ್ಕೆ 300 ಮಂದಿಯಾದ ಅವರೆಲ್ಲರೂ ಒಂದೇ ಬಾಯಿಯಿಂದೆಂಬಂತೆ—ಹೋಗ ಬೇಡ, ಬೇಡ, ಬೇಡ! ಎಂದು, ಕೂಗಿದರು. ತತ್ಕ್ಷಣವೇ ಜೇಂಸನು ಅಂಥಾ ಪ್ರೇಮಕ್ಕೆ ಮನ ಸೋತು, ಕಣ್ಣೀರಿಟ್ಟು, ನಿಜ ಹೃತ್ಪರಿಣಾಮ ಪಟ್ಟು, ಕಾಲಗತಿಯಲ್ಲಿ ಎಷ್ಟು ಪ್ರತಿಷ್ಠೆ ಗೊಂಡನೆಂತ, ಇಲ್ಲಿರುವ ಮಂತ್ಶೆಸ್ತರಿನ ಗೃಹಸ್ಥರು ನನಗಿಂತ ಚನ್ನಾಗಿ ಬಲ್ಲರು. ಆದರೆ ಅವನು ಪಾರ್ಲಿಮೆಂತಿನವರಲ್ಲೊಬ್ಬನಾಗಿ, ಕ್ರೈಸ್ತ ಸಭೆಯಲ್ಲಿ ಹಿರಿಯತನದ ಉದ್ಯೋಗ ಹೊಂದಿ, ವರ್ಷ ವರ್ಷಕ್ಕೆ ಲೊಂದನಿನ ಬಾಹ್ಯ ಸುವಾರ್ತಾಪ್ರಸಾರಣಸಂಘಕ್ಕೆ 1,000 ರೂಪಾಯಿಯನ್ನೂ ಮಂತ್ಶೆಸ್ತರಿನ ಪುರಸುವಾರ್ತಾಪ್ರಸಾರಣದ್ದಕ್ಕೆ 600 ರೂಪಾಯಿಯನ್ನೂ ಕೊಡುತ್ತಿದ್ದ ಹೊರ್ತು, ನೀನು ಧರ್ಮ ಮಾಡುವಾಗ ನಿನ್ನ ಧರ್ಮವು ಅಂತರಂಗವಾಗಿರುವ ಹಾಗೆ ನಿನ್ನ ಬಲಗೈ ಮಾಡುವದು ನಿನ್ನ ಎಡಗೈಗೆ ತಿಳಿಯದಿರಲಿ! ಎಂತ, ಹೇಳುವ[1] ದೇವವಾಕ್ಯಕ್ಕನುಗುಣವಾಗಿ ಇತರವಾದ ವೆಗ್ಗಳ ದಾನಧರ್ಮದಿಂದ ಸಹ ರಹಸ್ಯ

1) ಮತ್ತಾ. 6, 3.

ದಲ್ಲಿ ಪರಿಶೋಭಿಸುತ್ತಿದ್ದನೆಂತ, ಅವನಿಗೂ ನನಗೂ ಇದ್ದ ಬಿಗು ಸ್ನೇಹದ ಮೇಲೆ ನಾ ಬಲ್ಲೆನು. ಆದಿತ್ಯವಾರಶಾಲೆಗಳಿಂದ ಪರಿಪಕ್ವವಾದ ಶ್ರೇಷ್ಠ ಹಣ್ಣುಗಳಲ್ಲೊಂದು ಅವನೇ!—ಈಗ ಆ ಛಿದ್ರವಸ್ತ್ರಶಾಲಾನ್ಯೋನ್ಯಸಮಾಜವನ್ನು ಕುರಿತು ಕೆಲವು ಮಾತಾಡುವದು ಉಳಿದದೆ. ಹ್ಯಾಗಂದರೆ, ಬೇರೆ ದೇಶಗಳಲ್ಲಿಯ ಹಾಗೆ ಬ್ರಿತನ್ನಿಯದ ಮಹಾ ದೊಡ್ಡ ಪಟ್ಣಗಳ ಬೀದಿಗಳಲ್ಲಿ ಸಹ ಮೈಯ ಮೇಲೆ ಬರೇ ರಗಟೆ ವಸ್ತ್ರಗಳಿರುವ ಅನೇಕಾನೇಕ ಮಂದಿ ಬಡ ಹುಡುಗ ಹುಡುಗಿಯರು ತಿರುಗ್ಯಾಡುತ್ತಿದ್ದು, ಯಾರ ಜೋಪಾನವೂ ಯಾರ ಶಿಕ್ಷೆಯೂ ಇಲ್ಲದೆ, ಕಳ್ಳತನ ಮುಂತಾದ ನೀಚ ಕರ್ಮಗಳನ್ನು ಕೂಡ ಗೈಯುತ್ತಿರುವರು; ಹೀಗಿರಲಾಗಿ, ಕ್ರಿ. ಶ. 1844ನೇ ವರುಷ ಕ್ರೈಸ್ತ ಸದ್ಭಕ್ತರು ಅಂಥವರ ರಕ್ಷಣಾರ್ಥವಾಗಿ ಹಿಂದೆ ಹೇಳಿದ ಆ ಸಮಾಜ ಸ್ಥಾಪಿಸಿದರು. ಸ್ಕೋತ್ಲಂದಿನ ಎದಿನ್ಬರ್ಗಿನಲ್ಲಿ 21 ವರುಷಗಳ ಹಿಂದೆ ಗಥ್ರಿ ಎಂಬ ಮಹಾ ಪಂಡಿತನು ಆರಂಭಿಸಿದ್ದು ದೃಷ್ಟಾಂತವಾಗಿರಲಿ. ಮೊದಲು ಹುಡುಗರದೊಂದು ಶಾಲೆಯು ಅವನಿಂದಾಯಿತು; ಇದರಲ್ಲಿ ಹಗಲುಹೊತ್ತು ಸುಮಾರು 400 ಮಂದಿ ಕಾಡಿನ ಗತಿಯನ್ನೈದಿದ ಹುಡುಗರು ಇದ್ದು, ಶರೀರ ಆತ್ಮಗಳ ಪರಿಪೋಷಣ ಪಡೆಯುತ್ತಿರುವರು; ಒಂದು ಪಾಲಿನವರು ಬೈಗಿನ ವೇಳೆ ಮನೆಗೆ ಹೋಗಿ, ಮತ್ತೊಂದು ಪಾಲಿನವರು ದುಷ್ಟ ಹೆತ್ತವರ ಸಹವಾಸದಿಂದ ದುರ್ಗುಣಿಗಳಾಗದಂತೆ ಅಲ್ಲಿಯೇ ಉಳು ಕೊಂಡಿರುವರು. ಪ್ರಾತಃಕಾಲ ಮನೆಯಿಂದ ಹಿಂದಿರುಗಿದಂಥವರು ಶಾಲೆಯಲ್ಲಿ ಶೇರುವ ಮುಂಚೆ ಇದಕ್ಕೆ ಹೊಂದಿರುವದೊಂದು ಕೋಣೆಯೊಳಗೆ ಮೈ ತೊಳ ಕೊಂಡು, ತಮ್ಮ ಮಲಿನವಾದ ಹರಕುಬಟ್ಟೆಗಳನ್ನು ತೆಗೆದು, ಕ್ರಮವಾಗಿ ತೂಗ ಹಾಕಿ, ಶಾಲೆಗೆ ಯೋಗ್ಯವಾದ ಉಚಿತಮಡಿಗಳನ್ನು ತೊಟ್ಟು ಕೊಂಡು, ಪಾಠಕ್ಕೆ ಬರುವರು; ಅವರು ವಿದ್ಯೆ ಕಲಿಯುವದಲ್ಲದೆ ದಿವಸಕ್ಕೆ ನಾಲ್ಕೈದು ತಾಸು ಬಡಿಗೀ ಕೆಲಸ ಹೊಲಿಗೇ ಕೆಲಸ ಮೊಚ್ಚೆ ಮಾಡುವ ಕೆಲಸ ಕಾಗದಚೀಲ ಮಾಡುವ ಕೆಲಸ ಕೃಷೀ ಕೆಲಸ ವಾದ್ಯಗಳನ್ನು ನುಡಿಸುವ ಕೆಲಸ ಮೊದಲಾದ್ದನ್ನು ಸಹ ಗೈಯುವರು; ಆಯಾ ಕೆಲಸಗಳೊಳಗೆ ಯಾವದರಲ್ಲಿ ಒಬ್ಬನು ಜಾಣತನ ತೋರಿಸುತ್ತಾನೋ, ಅದೇ ತಕ್ಕ ಕಾಲಕ್ಕೆ ಅವನಿಗೆ, ನಿನ್ನ ಜೀವನವೃತ್ತಿ ಎಂತ, ನೇಮಿತವಾಗುವದು. ಈ ತರದ್ದೇ ಆದ ಮತ್ತೊಂದು ಶಾಲೆಯು ಬೀದಿತಿರುಕರಾದ ಹುಡುಗಿಯರ ಪ್ರಯೋಜನಾರ್ಥವಾಗಿ ಗಥ್ರಿಯ ಕೆಳಗದೆ. ಅವೆರಡು ಶಾಲೆಗಳು ಹೊರ್ತಾಗಿ ಅವನು ಶಿಶುಶಾಲೆ ಎಂಬದೊಂದನ್ನು ನಡಿಸುತ್ತಾನೆ; ಇದರಲ್ಲಿ ಅವನು ತಮ್ಮ ಎಳೇ ವಯಸ್ಸಿನ ದೆಸೆಯಿಂದ ದುರ್ಮಾರ್ಗತನವನ್ನು ಇನ್ನು ಅರಿಯದಂಥ ಬಡ ಶಿಶುಗಳನ್ನು ಶೇರಿಸಿ, ಸಾಕುತ್ತಾ, ಶಿಕ್ಷಿಸುತ್ತಾ ಇರುವನು.—ಹಿಂದೆ ಸೂಚಿಸಿದ ಆದಿತ್ಯವಾರಶಾಲೆ ಮೊದಲಾದ ವಿವಿಧ ಶಾಲೆಗಳ ಮೂಲಕ ಬ್ರಿತ

ನ್ನಿಯದಲ್ಲಿ ಕೂಡ ಸಾವಿರಾರು ಜನರಾದ ಬಾಲ ಯುವರು ದುಷ್ಕರ್ಮಮಯವಾದ ನಡತೆಗೆ ತಪ್ಪಿಸಿ ಕೊಂಡು, ಉತ್ತಮ ಪ್ರಜೆಯವರೂ ಸತ್ಕ್ರೈಸ್ತರೂ ಆದರು; ಆ ಪರಿಯ ಧರ್ಮಶಾಲೆಗಳಿಗೆ ಬಾಲ ಯುವರು ಎಲ್ಲಿ ಹಿಂಡು ಹಿಂಡಾಗಿ ಬರುತ್ತಾರೋ, ಅಲ್ಲಿ ಶೆರೆಮನೆಗಳಿಗೆ ಹೋಗ ಬೇಕಾದ ಅಂಥ ವಯಸ್ಸಿನವರು ತೀರ ಕೊಂಚ ಮಂದಿ ಮಾತ್ರ.

## 78. ಕ್ರೈಸ್ತ ಅನ್ಯೋನ್ಯವು.

ನೀವು ಹಿಂದೆ ಓದಿದಂತೆ ಪುನಃಸ್ಥಾಪನಾಕಾಲದಲ್ಲಿ ಸೌವಾರ್ತಿಕ ಸಭೆಯ ಲುಥರಿಕರು ಕಲ್ವೀನಕರು ಎಂಬ ಎರಡು ದೊಡ್ಡ ಶಾಖೆಯವರು ಹುಟ್ಟಿದರು; ತರುವಾಯ ಈ ಉಭಯ ಶಾಖೆಗಳಲ್ಲಿ ಮುಖ್ಯವಾಗಿ ಸಭಾಪರಿಪಾಲನಕ್ರಮದ ವಿಧಿಗೋಸ್ಕರವೂ ದೇವಾರಾಧನಕ್ರಮದ (ದೇವಾಲಯಕ್ರಮದ) ವಿಧಿಗೋಸ್ಕರವೂ ಎಪಿಸ್ಕೊಪಾಲರು ಕೊನ್ಸಿಸ್ತೋರಿಯಾಲರು ಪ್ರೆಸ್ಬುತೆರಿಯಾಲರು ಇಂದೆಪೆಂದೆಂತರು ಸಹೋದರಸಭ್ಯರು ಕ್ವೇಕೆರರು ಮೆಥೊದಿಸ್ತರು ಬಪ್ತಿಸ್ತರು ಮೊದಲಾದ ಕೆಲವು ಉಪಶಾಖೆಗಳಾದವು. ವಿಚಿತ್ರವಾದ ಶಾಖೋಪಶಾಖೆಗಳ ಈ ಪ್ರಚುರತೆಯು ಕ್ರಿಸ್ತನ ಸಭೆಯ ಸಜ್ಜೀವನಾಭಿವೃದ್ಧಿಗೆ ಬಹು ಹಿತವಾಯಿತೆಂಬದಕ್ಕೆ ಸಭಾಚರಿತ್ರವೇ ಸಾಕ್ಷಾತ್ಪ್ರಮಾಣವು. ಅದು ವಿನಹ ಶಾಖಾಪ್ರಚುರತೆಯು ದೇವವಾಕ್ಯಕ್ಕನುಕೂಲವೇ; ಯಾಕಂದರೆ ಕ್ರೈಸ್ತ ಸಭೆಯು ಪರಲೋಕರಾಜ್ಯವಾಗಿದ್ದ ಮೇಲೆ[1] ಅದರಲ್ಲಿ ವಿಚಿತ್ರ ಮಂಡಲಗಳು ಕಾಣಿಸ ತಕ್ಕದ್ದು; ಅದು ಕ್ರಿಸ್ತನ ಶರೀರವಾಗಿದ್ದ ಮೇಲೆ[2] ಅದರಲ್ಲಿ ವಿಚಿತ್ರ ಅವಯವಗಳು ಇರ ತಕ್ಕದು; ಅದು ಕ್ರಿಸ್ತನ ಮಂದಿರವಾಗಿದ್ದ ಮೇಲೆ[3] ಅದರಲ್ಲಿ ವಿಚಿತ್ರ ಕೋಣೆಗಳಿರ ತಕ್ಕದು; ಅದರವರು ಕ್ರಿಸ್ತನೆಂಬ ದ್ರಾಕ್ಷೆಬಳ್ಳಿಯಲ್ಲಿ ಕುಡಿಗಳಾಗಿದ್ದ ಮೇಲೆ[4] ವೈಚಿತ್ರ್ಯದಿಂದೆಸೆಯ ತಕ್ಕದು. ಒಂದು ವಜ್ರವು ನಾನಾ ಬಣ್ಣದಿಂದ ಹೊಳೆಯುವದಲ್ಲವೇ? ಮುಖ್ಯ ಅಪೊಸ್ತಲರ ಭಾವವನ್ನಾದರೂ ಪರಿಶೋಧಿಸಿ ನೋಡಿದರೆ ಕ್ರೈಸ್ತತ್ವವೆಂಬ ಜ್ಯೋತಿಯ ವಿಚಿತ್ರ ಕಿರಣಗಳಲ್ಲಿ ಇದಾಗಲಿ ಅದಾಗಲಿ ಅವರೊಳೊಬ್ಬೊಬ್ಬನಲ್ಲಿ ವಿಶೇಷವಾಗಿ ಗೋಚರಿಸುತ್ತದಲ್ಲ?

ಪುನಃಸ್ಥಾಪನೆಗೆ ಮುಂಚೆಯೂ ಕ್ರೈಸ್ತ ಸಭೆಯು ವಿವಿಧದ ಕೊಂಬೆಗಳನ್ನು ಬಿಡದಿರಲಿಲ್ಲ; ಸರ್ವಸಾಧಾರಣ ಯಾಜಕತ್ವದ ದೃಢಾಪೇಕ್ಷಕರಾದ ಮೊಂತಾನಿಯಾ

1) ಮತ್ತಾ. 3, 2; 4, 17. 2) 1 ಕೊರಿ. 12, 20; ಎಫೆ. 1, 23; ಕೊಲೊ. 1, 18. 3) ಲೂಕ. 14, 23; 1 ತಿಮೊ. 3, 15; 1 ಪೇತ್ರು. 2, 5. 4) ಯೋಹಾ. 15, 5.

ನರು[1], ಪ್ರೆಸ್ಬುತೆರಿಯಾಲರಾದ ಫೇಲೀಕಿಸ್ಸಿಮಿಯರು[2], ಸಭಾಪರಿಶುದ್ಧ್ಯಪೇಕ್ಷಕ
ರಾದ ನೊವಾತಿಯಾನಕರು[3], ರಾಜ್ಯಸಭಾಪ್ರತಿಕೂಲಿಗಳಾದ ದೋನಾತಿಸ್ತರು[4],
ಎಪಿಸ್ಕೊಪಾಲ ಭಾವದವರು[5] ಎಂಬ ಐದು ಶಾಖೆಗಳವರ ನೆನಪು ನಿಮಗಿರುತ್ತದ
ಲ್ಲವೋ? ಅವು ಅಂದಂದು ಹುಟ್ಟಿ, ತಮ್ಮ ತಮ್ಮ ಆಶೀರ್ವಾದವೀಯದಿರಲಿಲ್ಲ. ಆ
ದಾಗ್ಯೂ ಆಯಾ ಕಾಲದಲ್ಲಿಯಾದರೂ ಸಭಾಧ್ಯಕ್ಷರ ಆಜ್ಞಾರ್ಥಕ್ಕೆ ಗೌಣ ವಿಷ
ಯಗಳಲ್ಲಿ ಸಮ್ಮತಿಸದಂಥ ಸಚ್ಛಾಖೆಗಳಿಗೂ ತಾಳ್ಮೆ ಪಡುವ ಭಾವವು ಕಡಿಮೆ ಬಿ
ದ್ದು, ಬಳಿಕ ಕ್ರೈಸ್ತ ಸಭೆಯು ರಾಜ್ಯಮತಸ್ಥಿತಿಯನ್ನೈದಿ[6], ಬಹಿರಕ್ಕೆ ಕೊಂಬೆಗಳಡಗಿದ
ಒಂದೇ ಮಹಾ ಮರಗೊಡ್ಡಿಯಂತೆ ತೋರಲೆಸಗಿ, ಅಂತರ್ಯದ ತಿರುಳು ಸಹ ಒ
ಣಗಿ ಹೋಗುವ ಕಂಟಕ ಒದಗಿದಂತೆ ಆಯಿತು; ತರ ತರ ಶುಷ್ಕ ಆಚಾರಗಳುದ್ಭ
ವಿಸಿದ್ದು ಆ ಸಮಯವೇ[7]. ತ್ಯುತೊನರಲ್ಲಿ ಮಾತ್ರ ಬೇರು ಸಹಜ ರೀತಿಯಾಗಿ ಚಿ
ಗಿಯುವಂತೆ ಗೋಚರಿಸಿತು[8]. ಕಾಲಗತಿಯಿಂದ ಆ ಜಡ ಮರಗೊಡ್ಡಿಯು ಪಪ್ಪಕ
ಗ್ರೇಕ ಪಕ್ಷಕರೆಂಬ ಎರಡು ಶೀಳುಗಳಾದ ಮೇಲೆ[9] ಸೌವಾರ್ತಿಕ ಸಭೆಯು ತಿರಿಗಿ
ಬಲುಮೆಯೊಡನೆ ಬೇರೂರಿ ಕೊಂಡು[10], ಬೆಳೆದು, ಬಲಿತು, ದಿಕ್ಕು ದಿಕ್ಕಿನಲ್ಲಿ ವಿ
ಚಿತ್ರ ಶಾಖೆಗಳನ್ನು ಬಿಟ್ಟದೆ.

ಶಾಖೋತ್ಪತ್ತಿಯು ಕ್ರೈಸ್ತ ಸಭೆಯಲ್ಲಿ ಸಹ ಜೀವದ ಕುರುಹಾಗಿದ್ದರೂ ಆ ನಾ
ನಾಕಾರವುಳ್ಳ ಶಾಖೆಗಳವರಲ್ಲೊಬ್ಬನೂ ಪಾಪರಹಿತನಲ್ಲದ ಕಾರಣ ಅವರವರಲ್ಲಿ
ಮಿತ್ರಭೇದೋತ್ಪತ್ತಿಯು ಕಾಲಕಾಲಕ್ಕೆ ತೋರದಿರಲಿಲ್ಲ. ಇದು ಮಹಾ ಪಾತಕದ
ಸಂಗತಿಯು. ಆರಂಭಕ್ಕೆ ಚಿಕ್ಕ ಸಾಸಿವೇ ಕಾಳಿನೋಪಾದಿಯಾಗಿದ್ದ ಕ್ರೈಸ್ತತ್ವದಲ್ಲಿ
ದಿನಗತಿಯಿಂದ ಜನಿಸಿದ ಆಯಾ ಸಚ್ಛಾಖೋಪಶಾಖೆಗಳವರು ತಮ್ಮ ತಮ್ಮಲ್ಲಿಯ
ಬಹಿರಾಕಾರದ ಮತ್ತು ನರಬುದ್ಧಿಗೆ ಮೀರುವಂಥ ದೇವವಾಗ್ರಹಸ್ಯಾರ್ಥದ ಟೀ
ಕೆಯ ವ್ಯತ್ಯಾಸ ಕಂಡು, ಮಾನುಷ ಅಂಧತ್ವದ ದೆಸೆಯಿಂದಾಗಲಿ ವಿಷಮ ಸ್ವಾರ್ಥ
ದ ದೆಸೆಯಿಂದಾಗಲಿ ಪ್ರೇರಿತರಾಗಿ, ತಾವು ತಾವಲ್ಲದ ಕೊಂಬೆಗಳವರಿಗೆ ಯೇಸು
ಕ್ರಿಸ್ತನೂ[11] ದೇವವಾಕ್ಯವೂ ಅಲ್ಲದ ಬೇರೊಂದು ಅಸ್ತಿವಾರವಿರುತ್ತದೆಂದು, ಎಣಿ
ಸ ಬಾರದು; ಅವರವರೊಳಗೆ—ಅಲ್ಲಿ ಅಲ್ಲ! ಇಗೋ, ಇಲ್ಲಿ ಮಾತ್ರ ಕ್ರಿಸ್ತನು! ಎಂ
ತ್ರ[12], ಹೇಳುವ ಕುವಾದವು ನಡೆಯ ಬಾರದು. ಬಹಿರಾಕಾರ ಟೀಕೆಗಳ ವೈಚಿತ್ರ್ಯ
ವಿರುವಲ್ಲಿಯೂ ಸಕಲ ಸತ್‌ಕ್ರೈಸ್ತರಿಗೆ ಒಂದೇ ಆತ್ಮ, ಒಂದೇ ಪ್ರತೀಕ್ಷೆ, ಒಬ್ಬನೇ

---

1) 147ನೇ ಪಾನು. 2) 161ನೇ ಪಾನು. 3) 162, 163ನೇ ಪಾನು. 4) 242, 243ನೇ ಪಾನು. 5) 168ನೇ ಪಾನು. 6) 284ನೇ ಪಾನು. 7) 36ನೇ ಸಂಧಿ; 349ನೇ ಪಾನು. 8) 299ನೇ ಪಾನು; 38ನೇ ಸಂಧಿ. 9) 281, 282, 342ನೇ ಪಾನು. 10) 48ನೇ ಸಂಧಿ. 11) 1 ಕೊರಿ. 3, 11; ಎಫೆ. 2, 20. 12) ಮತ್ತಾ. 24, 23.

ಪತಿ, ಒಂದೇ ರಕ್ಷಾವಿಶ್ವಾಸಪ್ರಮಾಣ, ಒಂದೇ ಸ್ನಾನ, ಒಂದೇ ರಾತ್ರಿಭೋಜನ, ಒಬ್ಬನೇ ದೇವರು, ಒಬ್ಬನೇ ತಂದೆ ಇರುವದಲ್ಲವೋ? ಹಾಗಾದರೆ ಪ್ರೀತಿ ಸಮಾಧಾನಗಳ ಬಂಧದಿಂದ ಅವರೆಲ್ಲರೂ ಬಿಗಿಯಾಗಿ ಕೂಡಿ, ಒಂದೇ ಶರೀರವಾಗಿರ ಬೇಕು[1]. ಪೂರ್ವದಲ್ಲಿ ವಿಗ್ರಹಾರಾಧಕರು ಕ್ರೈಸ್ತರ ಪರಸ್ಪರ ಪ್ರೀತಿ ನೋಡಿ—ಅಗೋ, ತಮ್ಮ ತಮ್ಮೊಳಗೆಷ್ಟೋ ಪ್ರೀತಿ ಮಾಡುತ್ತಾರೆ! ಅಗೋ, ಕ್ರೈಸ್ತರಲ್ಲಿ ಒಬ್ಬನು ಒಬ್ಬನಿಗಾಗಿ ಸಂತೋಷದಿಂದ ಸಾಯಲಿಕ್ಕೂ ಸಿದ್ಧನಾಗಿದ್ದಾನೆ! ಎಂದು[2], ವಿಸ್ಮಯ ಪಟ್ಟಂತೆ ಈಗಿನ ಕಾಲದಲ್ಲಿ ಸಹ ಕ್ರೈಸ್ತರಲ್ಲದವರು ಶಾಖೋಪಶಾಖೆಗಳ ಕ್ರೈಸ್ತರನ್ನು ಕುರಿತು ಅನುಭವಿಸುತ್ತಿರ ಬೇಕು.

ಪುನಃಸ್ಥಾಪನೆಗೀಚೆ ಶಾಖೆಗಳ ಅನ್ಯೋನ್ಯವನ್ನು ಬಿಗಿಸುವದಕ್ಕೋಸ್ಕರ ಕ್ರಿಸ್ತನಾಥನು ಮೊದಲು ಪಿಯೆತಿಸ್ತರೆಂಬ[3] ಸದ್ಭಕ್ತರನ್ನೆಬ್ಬಿಸಿದನು; ಇವರು ದೇವವಾಕ್ಯದ ಮೇಲೆ[4] ಪ್ರೀತಿಕೃತ್ಯಾದ ಕ್ರೈಸ್ತತ್ವವೇ ಮುಖ್ಯವೆಂದು, ಸಾರಿ, ಸಿದ್ಧಿಸಿ, ಜ್ಞಾನವನ್ನೆಂತೂ ಉಪೇಕ್ಷಿಸದಿದ್ದರೂ ಜ್ಞಾನಕ್ಕೆ ಬದಲಾಗಿ ಪ್ರೀತಿಯನ್ನೇ, ಸಭೆಗಳೈಕ್ಯದ ನಿಜ ಮೂಲವೆಂದು, ತಿರಿಗಿ ನೆಲೆಗೊಳ್ಳಿಸಿದರು; ಕ್ರಿಸ್ತನನ್ನೆಲ್ಲಿ ನೋಡುತ್ತೇವೋ, ಅಲ್ಲಿಯೇ ಸಭೆಯನ್ನು ಸಹ ನೋಡುತ್ತೇವೆಂದು, ಹಿಪ್ಪೋವಿನ ಆ ಪ್ರಶಸ್ತ ಔಗುಸ್ತೀನನು ಬರೆದ ಸ್ವಾದು ವಚನದ ನಿಜಾರ್ಥವು ಅಂದು ತಿರಿಗಿ ತಕ್ಕ ಮಾನಕ್ಕೆ ಬಂತು. ಅಂಥ ಪಿಯೆತಿಸ್ತರು ಗೆರ್ಮಾನಿಯದ ಫ಼ುಂಕೆ ಸ್ಪೇನೆರ ಪ್ರಭೃತಿಯಾದವರು ಮಾತ್ರವಲ್ಲ, ಸಕಲ ಶಾಖೆಗಳ ಸಜ್ಜೀವನಪ್ರವರ್ಧಕರೇ. ಬಳಿಕ ಆಯಾ ಶಾಖೆಗಳವರು ಪಾಷಂಡ ನಾಸ್ತಿಕತ್ವ ಬುದ್ಧಿಪ್ರಮಾಣಿಕತ್ವಗಳೆಂಬ ಆ ಶತ್ರುಬಲ ಕಂಡು, ಸಮಸ್ತರೂ, ತಮ್ಮ ಋಣವೆಂತ, ತಿಳಿದು, ಒಬ್ಬನೇ ಮಹಾ ಶೂರನೆಂಬಂತೆ ಅದಕ್ಕೆದುರಾಗಿ, ಗೆಲ್ಲಲು[5], ಅವರ ಅನ್ಯೋನ್ಯವು ಬಹು ಹೆಚ್ಚಿತು. ಆ ಮೇಲೆ ಬಾಹ್ಯ ಮತ್ತು ಅಂತರ್ಯ ಸುವಾರ್ತಾಪ್ರಸಾರಣದ ಪ್ರಯತ್ನಗಳೂ ದೇವವಾಗ್ಗ್ರಂಥವಿಸ್ತಾರಣದ ಪ್ರಯತ್ನಗಳೂ ಕೂಡ ಸೌವಾರ್ತಿಕ ಸಭ್ಯರ ಸಹೋದರಪ್ರೀತಿಯನ್ನು ಚನ್ನಾಗಿ ಬೆಳಿಸುವದಾಯಿತು. ಆ ನಪೊಲೆಯೋನನ ಮೂಲಕ ಹುಟ್ಟಿದ ಭೀಕರ ಯುದ್ಧದಲ್ಲಿಯ ಸರ್ವಸಾಧಾರಣ ಸಂಕಷ್ಟವು ಸಹ ಭಕ್ತರನ್ನು ಒಂದಾಗಿ ಜೋಡಿಸುವದಕ್ಕೆ ಬಂತು[6].

ಹೀಗಿರಲಾಗಿ, ಕ್ರಿ. ಶ. 1797ನೇ ಅಬ್ದ ಪ್ರುಸ್ಸಿಯದಲ್ಲಿ 3ನೇ ಪ್ರಿದೆರೀಕ ವಿಲ್ಹೆಲ್ಮನೆಂಬವನು ಸಿಂಹಾಸನಾರೂಢನಾಗಿದ್ದನು; ಅವನು ಸದ್ಭಕ್ತನು; ನನ್ನ ಕಾಲವು

1) ಯೋಹಾ. 13, 34; 17,20—23; ಮತ್ತಾ. 12, 25—26; ಎಫೆ. 4, 3—6; ಕೊಲೊ. 3, 14.
2) Tertul. Apologet. C. 39; 102, 150ನೇ ಪಾನು ಸರಿ ನೋಡು. 3) 554, 593ನೇ ಪಾನು.
4) 1 ಕೊರಿ. 13. 5) 613, 614, 626, 627ನೇ ಪಾನು. 6) 626, 632ನೇ ಪಾನು.

ಉಪದ್ರವದಲ್ಲಿ, ನನ್ನ ಪ್ರತೀಕ್ಷೆಯು ದೇವರಲ್ಲಿ! ಎಂಬದೇ ಅವನ ಜೀವಿಕೆಯ ಪ್ರಮಾಣಗಾಥೆಯು. ಆ ರಾಜನು—ಸದ್ಯಕ್ಕೆ ಅಂತರ್ಭಾವದ ಮಟ್ಟಿಗೆ ಅನ್ಯೋನ್ಯಸ್ಥರಾದ ಲುಥರಿಕರನ್ನೂ ಕಲ್ವೀನಕರನ್ನೂ ಬಹಿರಂಗದಲ್ಲಿ ಸಹ ಐಕ್ಯದಲ್ಲಿಡ ತಕ್ಕದು; ಇದಕ್ಕೋಸ್ಕರ ಉಭಯತರೊಳಗೆ ಪರಿಶುದ್ಧರಾತ್ರಿಭೋಜನಸಂಪರ್ಕವನ್ನು ನಿರ್ಮಿಸಿ, ದೇವಾರಾಧನೆಗೂ ಎರಡು ಪರಿಶುದ್ಧ ಸಂಸ್ಕಾರಗಳಿಗೂ ಯೋಗ್ಯವಾದ ಪ್ರಾರ್ಥನೆಗಳಿರುವ ಒಂದೇ ಅಗೆಂದೆಯೆಂಬ ಪ್ರಾರ್ಥನಾಗ್ರಂಥವನ್ನು ಮಾಡಿಸಿಕೊಡ ಬೇಕೆಂತ, ಅಪೇಕ್ಷಿಸಿ, ಅದರಂತೆ ನಡೆಯ ತೊಡಗುವಾಗ ಪ್ರುಸ್ಸಿಯವಲ್ಲದುಳಿದ ಗೆರ್ಮಾನಿಯದ ರಾಜರು ಕಂಡೊಲಿದು, ತತ್ಸಮಾನವಾದ ಪ್ರಯತ್ನಗಳನ್ನು ಗೈಯುವವರಾದರು. 3ನೇ ಫ್ರೀದೆರೀಕ ವಿಲ್ಹೆಲ್ಮನು ಇನ್ನು ಆಳುತ್ತಿರುವಾಗ ಕ್ರಿ. ಶ. 1830ನೇ ಅಬ್ದ ಆ ಉಭಯ ಶಾಖೆಗಳ ಉಪಯೋಗಾರ್ಥವಾಗಿ ಸುಮಾರು ಸಮಸ್ತ ಪ್ರುಸ್ಸಿಯದಲ್ಲಿ ಒಂದು ಹೊಸ ಅಗೆಂದೆ ಎಂಬದನ್ನು ಪ್ರಕಟಿಸಿ ಶೇರಿಸಲನುಕೂಲವಾಯಿತು; ಆದ್ದರಿಂದ ಅಲ್ಲಿ ಶಾಖೆಗಳ ಬಹಿರನ್ಯೋನ್ಯವು ಸಹ ಒಂದು ಪ್ರಕಾರ ಸ್ಥಾಪಿತವಾಗಿರುತ್ತದೆ. ಚಿಕ್ಕವಾದ ಬೇರೆ ಕೆಲವು ಗೆರ್ಮಾನ ರಾಷ್ಟ್ರಗಳಲ್ಲಿಯೂ ಅದೇ ಕಾರ್ಯವು ಸಿದ್ಧಿಗೆ ಬಂದದೆ. ಆದಾಗ್ಯೂ ಹಿಂದೆ ಹೇಳಿದ ಆಯಾ ಕಡೆಯಲ್ಲಾದರೂ ಎಲ್ಲರೂ ರಾಜರ ಬಹಿರನ್ಯೋನ್ಯಸ್ಥಾಪನೆಗೆ ಅನುಸರಿಸದ ನಿಮಿತ್ತ ಶಾಖೆಗಳ ಬಹಿರಾಕಾರದ ವಿಷಯಕ್ಕೋಸ್ಕರ ಈಗಲಾದರೂ ಇನ್ನೂ ತರ್ಕ ಹುಟ್ಟುವ ವಿಘ್ನವು ಪರಿಹಾರವಾಗಲಿಲ್ಲ.

ಆದರೆ ರಾಜರ ಅಪೇಕ್ಷೆ ಆಜ್ಞೆಗಳೆರಡರಿಂದ ಉದ್ಭವಿಸಿದ ಆ ಬಹಿರನ್ಯೋನ್ಯಕ್ಕಿಂತ ಸೌವಾರ್ತಿಕ ಶಾಖೆಗಳವರ ಹೃದಭಿಲಾಷೆಯಿಂದಾದ ಮತ್ತೊಂದು ಅತಿಶಯವಾದದು; ಗುಸ್ತವ ಆದೊಲ್ಫನೆಂಬ ಆ ಕೀರ್ತ್ಯ ರಾಜನ[1] ಜ್ಞಾಪಕದಲ್ಲಿ ಸ್ವೇಚ್ಛಾಮಿಲಿತವಾದ ಭಂಡದ ಸಮಾಜವೆಂಬದೇ. ಹ್ಯಾಗಂದರೆ, ಕ್ರಿ. ಶ. 1832ನೇ ಅಬ್ದ ಆ ರಾಜನು ಲುಯಿತ್ಸೆನಿನಲ್ಲಿ ಸತ್ತು ಸರಿಯಾಗಿ 200 ವರುಷ ಕಳೆದು ಹೋಗಿರುತ್ತವೆಂಬ ಅಭಿಪ್ರಾಯದಿಂದ ಗೆರ್ಮಾನಿಯದಲ್ಲಿ ಒಂದು ಉತ್ಸವವಾಗಿ, ಅವನದೊಂದು ಚಂದ ಜ್ಞಾಪಕಸ್ತಂಭ ನೆಡಲಾಗಲು, ಆ ಸ್ತಂಭದ ನಿರ್ಮಾಣಕ್ಕೆ ಕೂಡಿಬಂದಿದ್ದ ಹಣದ ದೊಡ್ಡ ಮಿಗಿಲನ್ನು, ಮುಖ್ಯವಾಗಿ ಪಪ್ಪಕ ಧರ್ಮದ ರಾಜ್ಯಗಳಲ್ಲಿಯ ಬಡ ಸೌವಾರ್ತಿಕರ ಸಹಾಯಾಂಶವೆಂದು, ಹೇಳಿ, ಮೂಲಹಣವೆಂತ, ಇಟ್ಟು ಕೊಂಡು, 10 ಅಬ್ದ ಕಳೆದ ತರುವಾಯ ಸಕಲ ಸೌವಾರ್ತಿಕ ಶಾಖೆಗಳವರ ಅನೇಕ ಮಂದಿ ಪ್ರೇಷಿತರು ಮೈನೆಂಬ ನದೀ ತೀರದ ಫ್ರಂಕ್ಫೊರ್ತೆಂಬ ಆ ಪಟ್ಣದಲ್ಲಿ[2]

1) 525ನೇ ಪಾನು; ಸಂಕ್ಷೇಪವಾಗಿ ಗುಸ್ತವ ಆದೊಲ್ಫನ ಸಮಾಜವೆನ್ನುವರು. 2) 552, 553, 555ನೇ ಪಾನು.

ಸಂಘ ನೆರೆದು, ಹಿಂದೆ ಸೂಚಿಸಿದ ಆ ಸಮಾಜವನ್ನೂರಿ, ಅದಕ್ಕೆ ತಕ್ಕ ಕಟ್ಟಳೆಗಳನ್ನು ಸಹ ಕಟ್ಟಿಟ್ಟರು. ಸುವಾರ್ತಾಪ್ರಸಾರಣಸಂಘಗಳ ಭಂಡಕ್ಕೆ ಹ್ಯಾಗೋ, ಹಾಗೆಯೇ ಯಾವತ್ತೂ ಶಾಖೆಗಳವರು ಆ ಸಮಾಜದ್ದಕ್ಕೆ, ಹೀನಾವಸ್ಥೆಯಲ್ಲಿರುವ ತಮ್ಮ ಕ್ರೈಸ್ತ ಸಹೋದರರ ಉದ್ಧಾರಕ್ಕೆಂದು, ಈ ವರೆಗೂ ಹಣ ಕಳುಹಿಸುತ್ತಾ ಬಂದಿದ್ದಾರೆ. ಕ್ರಿ. ಶ. 1863ನೇ ವರುಷವೊಂದರಲ್ಲೇ ಆ ಸಮಾಜದವರಿಂದ ಸುಮಾರು 3 ಲಕ್ಷ ರೂಪಾಯಿ ದಾನಧರ್ಮವಾಗಿ ವೆಚ್ಚವಾದವು; ಕ್ರಿ. ಶ. 1842ನೇದರಿಂದ ಅಂದಿನ ತನಕ ಅವರು 158 ಬಡ ಸಭೆಗಳಲ್ಲಿ ದೇವಾಲಯಗಳನ್ನೂ ಶಾಲೆಗಳನ್ನೂ ಕಟ್ಟಿಸಿದ್ದರು.

ಇಂಗ್ಲಂದಿನ ಮತ್ತು ಪ್ರುಸ್ಸಿಯದ ಕ್ರೈಸ್ತರು ಕೂಡಿ ಪಲೇಸ್ತೀನದ ಯೆರೂಸಲೇಮಿನಲ್ಲಿ ಒಂದು ಸೌವಾರ್ತಿಕ ಅಧ್ಯಕ್ಷತಾಸ್ಥಳವನ್ನು ನಿರ್ಮಿಸಿದ್ದರಿಂದಲೂ ಸೌವಾರ್ತಿಕರ ಅನ್ಯೋನ್ಯಭಾವವು ಉದಯಿಸಿ ಕಾಣಿಸುತ್ತದೆ. ಯೆರೂಸಲೇಮು ಪಟ್ಟಣವು ಕ್ರಿ. ಶ. 1187ನೇ ಅಬ್ದದಲ್ಲಿ ತುರ್ಕರಿಗೆ ವಶವಾಯಿತೆಂತ, ಹಿಂದೆ ಪಠಿಸಿದಿರಲ್ಲ?[1] ಆ ಕಾಲದಾರಭ್ಯ ಅಲ್ಲಿ ಕ್ರೈಸ್ತರಿಗೆ ತಿರಿಗಿ ಬಹಳ ಉಪದ್ರವ ಒದಗುತ್ತಾ ಇತ್ತು. ದಿನಗತಿಯಿಂದ ಪಪ್ಪಕ ಮತ್ತು ಗ್ರೀಕ ಮತಗಳವರು ಕೊನ್ಸ್ತಂತೀನೊಪೊಲಿಯ ಸುಲ್ತಾನನ ಸಂಗಡ ತಮಗೆ ಹಿತವಾದ ಒಪ್ಪಂದಗಳನ್ನು ಕಟ್ಟಿ ಕೊಂಡು, ಅನೇಕ ವರುಷಗಳ ಹಿಂದೆ ಪಲೇಸ್ತೀನದಲ್ಲಿ ತಕ್ಕ ಸುಖಸ್ಥಿತಿಯನ್ನೈದಿದರು; ಆದರೆ ಸೌವಾರ್ತಿಕರು ಇಂದಿಗೆ 27 ವರುಷ ಮುಂಚೆ ಇನ್ನಾದರೂ ಅಲ್ಲಿ ನಿರಾಶ್ರಯರಾಗಿದ್ದರು. ಆಗ ಇಂಗ್ಲಂದಿನ ವಿಕ್ತೋರಿಯ ರಾಣಿಯವರು ಪ್ರುಸ್ಸಿಯದ 4ನೇ ಪ್ರೀದೆರೀಕ ವಿಲ್ಹೆಲ್ಮ ರಾಜನು[2] ಇವರಿಬ್ಬರು ತಾವು ಸಹ ಅಪಾರ ಹಣ ಖರ್ಚು ಮಾಡಿ, ಸೌವಾರ್ತಿಕ ಕ್ರೈಸ್ತರ ಭದ್ರಾರ್ಥವಾಗಿ ಆ ಅಧ್ಯಕ್ಷತಾಸ್ಥಳದ ಮೂಲಕರಾದರು. ಒಮ್ಮೆ ಇಂಗ್ಲಂದಿನವರು ಮತ್ತೊಮ್ಮೆ ಪ್ರುಸ್ಸಿಯದವರು ಎಂಬೀ ಸರ್ತಿಯ ಮೇಲೆ ಅಧ್ಯಕ್ಷನನ್ನಾರಿಸಿ ಇಡಲಾಗುವದು. ಇಂಗ್ಲಂದಿನ ರಾಣಿಯವರು ಆ ಸ್ಥಳಕ್ಕೆ ನೇಮಿಸಿದ ಮೊದಲಿನ ಅಧ್ಯಕ್ಷನು ಮುಂಚೆ ಯೆಹೂದ್ಯಮತಸ್ಥನಾಗಿದ್ದ ಅಲೆಕ್ಸಂದರ ವೊಲ್ಫನೆಂಬವನೊಬ್ಬ ಕ್ರೈಸ್ತನು. ಕ್ರಿ. ಶ. 1846ನೇ ವರುಷ ಸಮುವೇಲ ಗೋಬನೆಂಬವನು ಅವನ ಉತ್ತರೋದ್ಯೋಗಿಯಾಗಿ, ಇನ್ನೂ ಇದ್ದಾನೆ. ಅವನು ಬಾಸೆಲಿನ ಸುವಾರ್ತಾಪ್ರಸಾರಣಶಾಲೆಯಲ್ಲಿ ಶಿಕ್ಷಿತನಾಗಿ, ಹಬೆಸಿ ದೇಶದವರಿಗೆ ಸುವಾರ್ತೆ ಸಾರಿ, ತದನಂತರ ಆ ಅಧ್ಯಕ್ಷತೆ ಹೊಂದಿದನು. ಕ್ರಿ. ಶ. 1849ನೇ ವರುಷ ಅವನ ಕೆಳಗಿನದೊಂದು ದೇವಾಲಯವಾದ ಕ್ರಿಸ್ತದೇವಾಲಯವೆಂಬದನ್ನು ಚಿಯೋನುಕೋಟೇ ಬೆಟ್ಟದಲ್ಲಿ[3] ಕಟ್ಟಿ ತೀರಿಸಿದರು. ಪಲೇಸ್ತೀನದ ಇಂಗ್ಲಿಷ ಮತ್ತು

---

1) 347ನೇ ಪಾನು. 2) 627ನೇ ಪಾನು. 3) 257ನೇ ಪಾನು.

ಗೆರ್ಮಾನ ಸೌವಾರ್ತಿಕರ ಸಭೆಗಳೂ ಸೌವಾರ್ತಿಕ ಕ್ರೈಸ್ತರಾದ ಅರಬಿಯರ ಮತ್ತು ಯೆಹೂದ್ಯರವುಗಳೂ ಗೋಬನ ಅಧ್ಯಕ್ಷತೆಯೊಳಗೆ ಈಗ ಅವೆ. ಅದು ಹೊರ್ತಾಗಿ ಅದರ ಸಹಾಯದಲ್ಲಿ ಹಲವು ಕ್ರೈಸ್ತ ಧರ್ಮಕಾರ್ಯಗಳು ನಡೆಯುತ್ತವೆ; ಹ್ಯಾಗಂದರೆ ಕೈಸರ್ಸ್ವೇರ್ಥ್ರ ಪಟ್ಣದ ಆ ಯಶಸ್ವಿಯಾದ ಫ್ಲೀದ್ನೆರನು[1] ಯೆರೂಸಲೇಮಿನಲ್ಲಿ ಒಂದು ದೊಡ್ಡ ಗೃಹ ನಿರ್ಮಿಸಿ, ಕ್ರೈಸ್ತರ ಮತ್ತು ಮುಸಲ್ಮಾನರ ರೋಗಿಗಳನ್ನೂ ಅನಾಥರನ್ನೂ ಕೃಚ್ಛ್ರಗಳನ್ನೂ ಅದರಲ್ಲಿ ಶೇರಿಸಿ, ಪರಾಂಬರಿಕೆ ಪೋಷಣೆ ಸುಶಿಕ್ಷೆ ಮಾಡಿಸುತ್ತಾನೆ; ಅದಲ್ಲದೆ ಯೆಹೂದ್ಯರಾದ ಹೆಣ್ಣು ಗಂಡು ಯೌವನಸ್ಥರು ಪ್ರಯೋಜನಕರವಾದ ಬೇರೆ ಬೇರೆ ಕೈಕೆಲಸ ಕಲಿಯುವದೊಂದು ಗೃಹವು ನೆಲಸಿರುತ್ತದೆ; ಪುನಃ ಬಾಸೆಲು ಪಟ್ಣದ ಸಮೀಪದಲ್ಲಿರುವ ಕ್ರಿಷೋನವೆಂಬ ಸ್ಥಳದ ಸುವಾರ್ತಾಪ್ರಸಾರಣಸಂಘದವರ ಪ್ರೇಷಿತರು ಅಲ್ಲಿಯ ಸುರಿಯಕ ಮುಂತಾದ ದೇಶೀಯ ಕ್ರೈಸ್ತರ ಹಿತಾರ್ಥವಾಗಿ ಒಂದು ಅನಾಥಗೃಹವನ್ನು ಸ್ಥಾಪಿಸಿದ್ಧಾರೆ; ಅದು ವಿನಹ ಸಕಲ ಮತದವರ ಹುಡುಗ ಹುಡಿಗಿಯರು ಹೋಗ ತಕ್ಕ ಶಾಲೆಗಳು ಹಾಕಿ ಅವೆ; ಇಷ್ಟು ಹೊರತಾರ್ಗಿ ಕುಷ್ಠರೋಗಿಗಳಿಗಾಗಿ ಒಂದು ಪ್ರತ್ಯೇಕ ಧರ್ಮಗೃಹ ಕಟ್ಟಿದೆ; ಇತ್ಯಾದಿ. ಯೆರೂಸಲೇಮಿನಲ್ಲಿ ನಮ್ಮ ಈ ಕಾಲಕ್ಕೆ 30,000 ಜನರು ಮಾತ್ರವಾಗಿರುವ ನಿವಾಸಿಗಳೊಳಗೆ ಸುಮಾರು 12,000 ಮಂದಿ ಮುಸಲ್ಮಾನರೂ 6000 ಮಂದಿ ಯೆಹೂದ್ಯರೂ ಇದ್ಧಾರೆ; ಮಿಕ್ಕಾದವರು ಗ್ರೀಕರಾಗಲಿ ಪಪ್ಪಕರಾಗಲಿ ಅರ್ಮಿನಿಯರಾಗಲಿ ಸುರಿಯಕರಾಗಲಿ ಸೌವಾರ್ತಿಕರಾಗಲಿ ಇರುವ ಕ್ರೈಸ್ತರು. ಪ್ರಾಚೀನದಲ್ಲಾದಂತೆ[2] ವರುಷ ವರುಷಕ್ಕೆ ಹೆಚ್ಚು ಕಡಿಮೆ 15,000 ಮಂದಿ ಯೆಹೂದ್ಯರು ಸಮಸ್ತ ದಿಕ್ಕಿನಿಂದ ಯೆರೂಸಲೇಮಿನಲ್ಲಿ ಒಂದು ನೆರೆದು, ತಮ್ಮ ಪಿತೃಗಳಿಗಿದ್ದ ಮಹಿಮೆ ನೆನಸಿ, ಬೊಬ್ಬಿಟ್ಟು, ಗೋಳಾಡುವರು. ಇಸ್ರಯೇಲ್ಯರೆಂಬ ಆ ಯೆಹೂದ್ಯರು ಈಗಲಾದರೂ ಇನ್ನು ಸಮಸ್ತ ಭೂಲೋಕದಲ್ಲಿ ಚದರಿದ್ಧಾರೆ[3]; ನಿದರ್ಶನಕ್ಕಾಗಿ ಮಲಯಾಳದ ತಿರುವಾಂಕೋಡು ಕೊಚ್ಚಿ ಎಂಬಿವೆರಡು ಶೀಮೆಗಳಲ್ಲಿ 1,400 ಜನರಾಗಿದ್ದಾರು[4]; ಹಿಂದು ದೇಶದಲ್ಲಿರುವವರೆಲ್ಲರೂ ಸುಮಾರು 1 ಲಕ್ಷ ಸಂಖ್ಯೆಯವರು. ಭೂಮಿಯ ಆಯಾ ದಿಕ್ಕಿನ ಅವರಲ್ಲಿ ಹೇರಳರು ವಿಷಯಲಂಪಟರಾಗಿದ್ಧಾರೆ; ಹಲವರು, ದೃಷ್ಟಾಂತಕ್ಕಾಗಿ ಗೆರ್ಮಾನಿಯದಲ್ಲಿ ಸುಮಾರು 6000 ಮಂದಿಯು, ಯೇಸು ಕ್ರಿಸ್ತನೇ ತಮ್ಮ ಮೆಸ್ಸೀಯನೆಂದು, ತಿಳಿದನುಭವಿಸಿ, ಅವನ ಶಿಷ್ಯರಾಗಿದ್ಧಾರೆ; ಅನೇಕರು, ಮೆಸ್ಸೀಯನು ಬರಲಿಲ್ಲವೆಂದು, ಬೇರೊಬ್ಬನ ದಾರಿಯನ್ನು ನೋಡುತ್ತಿದ್ಧಾರೆ. ಇಂಗ್ಲಿಷ ಗೆರ್ಮಾನ ಅಮೆರಿಕೀಯ ಸುವಾರ್ತಾಪ್ರಸಾ

1) 672, 689ನೇ ಪಾನು. 2) 258ನೇ ಪಾನು. 3) 260ನೇ ಪಾನು. 4) The Memorandum mentioned p. 81 states that there are 1,391; cf. 30ನೇ ಪಾನು.

ರಣಸಂಘದವರು ಪಲೇಸ್ತೀನದಲ್ಲಿ ಹ್ಯಾಗೋ, ಹಾಗೆಯೇ ಸರ್ವತ್ರ ಯೆಹೂದ್ಯರಿಗೆ ಕನಿಕರಿಸುವವರಾಗಿ, ಕ್ರೂಜಿತನಾದ ಯೇಸು ಕ್ರಿಸ್ತನನ್ನು ಪ್ರಸಂಗ ಗ್ರಂಥಗಳೆರಡರಿಂದ ಅವರ ಕಣ್ಣಿನೆದುರಿಗೆ ಬರೆದಿಡುವ[1] ಧಾವತಿ ಗೈಯುತ್ತಿದ್ದಾರೆ.

ಆದರೆ ಈ ಸಂಧಿಯಲ್ಲಿ ವಿವರಣವಾದ ಸೌವಾರ್ತಿಕ ಶಾಖೆಗಳ ಎಲ್ಲಾ ಅನ್ಯೋನ್ಯರೂಪಗಳಿಗಿಂತಲೂ ಇನ್ನೊಂದು ಮುಖ್ಯವಾದದು; ಅದೇನಂದರೆ, ಕ್ರಿ. ಶ. 1845ನೇ ಅಬ್ದ ಇಂಗ್ಲಂದಿನಲ್ಲಿ ಹುಟ್ಟಿದ ಸೌವಾರ್ತಿಕ ಒಡಂಬಡಿಕೆ ಎಂಬದು[2]. ಎಂತೆಂದರೆ, ಆ ವರುಷ ಸ್ಕೋತ್ಲಂದಿನ ಸಭೋದ್ಯೋಗಿಗಳು ಇಂಗ್ಲಂದಿನಲ್ಲಿಯೂ ವೇಲ್ಜಿನಲ್ಲಿಯೂ ಐರ್ಲಂದಿನಲ್ಲಿಯೂ ಇರುವ ಸೌವಾರ್ತಿಕರನ್ನು ಒಂದು ಸಭಾಸಂಘಕ್ಕೆ ಕೂಡ ಕರೆಯಲು, ಅಲ್ಲಲ್ಲಿಂದ 216 ಮಂದಿ ಸಭೋದ್ಯೋಗಿಗಳೂ ಸಭ್ಯರೂ ಇಂಗ್ಲಂದಿನ ಲಿವರ್ಪೂಲು ಪಟ್ಣದಲ್ಲಿ ನೆರೆದು, ದೇವವಾಕ್ಯದಲ್ಲೂ ಸೌವಾರ್ತಿಕವಾದ ಸಕಲ ಸಚ್ಛಾಖೆಗಳಲ್ಲೂ ಸಾಧರ್ಮ್ಯವಾದ ಅಸ್ತಿವಾರಬೋಧನೆಗಳನ್ನು[3] ಸಂಕ್ಷೇಪವಾಗಿ ಬರೆದು, ಒಂದೇ ಮನಸ್ಸಾಗಿ ಅವಕ್ಕೊಡಂಬಟ್ಟು, ಅಂಗೀಕರಿಸಿದಾಗ ಆ ಕ್ರೈಸ್ತ ಸಹೋದರರಲ್ಲೊಬ್ಬನು, ಕರ್ತನಿಗೆ ಸ್ತೋತ್ರವಾಗಲಿ! ಎಂದು, ಕೂಗುತ್ತಲೇ ಸಂಘದವರೆಲ್ಲರೂ ಎದ್ದು, ಪಿತನಿಗೂ ಪುತ್ರನಿಗೂ ಪರಿಶುದ್ಧ ಆತ್ಮಕ್ಕೂ ಮಹಿಮೆಯಾಗಲಿ! ಎಂದು, ಬಲದೊಡನೆ ಹಾಡಿ, ತಮ್ಮ ಆನಂದ ತೋರಿಸಿದರು. ಬಳಿಕ ಪೂರ್ವದಲ್ಲಿ ನೀಕೇಯ ಪಟ್ಣದಲ್ಲಿ ಆದ ಹಾಗೆ[4] ಕ್ರಿ. ಶ. 1847ನೇ ಅಬ್ದ ಸೌವಾರ್ತಿಕ ಕ್ರೈಸ್ತರ ಸರ್ವಸಭಾಸಂಘವು ಲೊಂದನಿನಲ್ಲಿ ಕೂಡಿತು; ಅಷ್ಟ ದಿಶೆಗಳಿಂದ 600 ಜನ ಸೌವಾರ್ತಿಕರು ಬಂದು, 13 ದಿವಸವೇ ಸ್ವದೇಶಿಕ ಪರದೇಶಿಕ ಸಭೆಯ ಶುಭಗತಿಯನ್ನು ಕುರಿತು ಪರ್ಯಾಲೋಚಿಸಿದರು. ತದನಂತರ ಅಂಥ ಸರ್ವಸಭಾಸಂಘಗಳು ಪರೀಸು ಬೆರ್ಲೀನು ಗೆನ್ಫು ಮುಂತಾದ ಪಟ್ಣಗಳಲ್ಲಿ ಸಹ ಆದವು. ನಿತ್ಯದಲ್ಲಿ ಕಾಲ ಕಾಲಕ್ಕೆ ನೆರೆಯುತ್ತಿರುವ ಅಂಥ ಸಂಘಗಳ ಮೂಲಕ ಆಶೀರ್ವಾದ ಪಡೆಯುವದಕ್ಕೂ ಈಯುವದಕ್ಕೂ ಬ್ರಿತನ್ನರು ಗೆರ್ಮಾನರು ಸ್ವಿತ್ಸರು ಹೊಲ್ಲಂದರು ಫ್ರಂಚರು ಬೆಲ್ಗಿಯರು ದೇನರು ಸ್ವೇದರು ಅಮೆರಿಕಾನರು ಪ್ರಭೃತಿಯಾದವರು ಸ್ವಾಪೇಕ್ಷೆಯಿಂದ ಪ್ರೇರಿತರಾಗಿ, ನೂರಾರು ಮೈಲಿನ ದೂರದಲ್ಲಿಂದ ಸ್ವಂತ ಖರ್ಚಿನ ಮೇಲೆ ಆಗತರಾಗಿ, ದೇಶ ಜನಾಂಗ ಶಾಖೆಗಳ ಭೇದವರಿಯದೆ, ಎಲ್ಲರೂ ಕ್ರಿಸ್ತ ಯೇಸುವಿನಲ್ಲಿ ಒಬ್ಬನೇ ಆಗಿದ್ದು[5], ಪ್ರೀತ್ಯುಪಚಾರಗಳಿಂದಲೂ ಸ್ವಸ್ತಿವಾಚನಮಯ ವಾಗ್ನಿರೂಪಣಗಳಿಂದಲೂ ಕ್ರಿಸ್ತ ನಾಥನ ಸ್ತೋತ್ರಗಳಿಂದಲೂ ಸ್ವಾರ್ಥಪರಾರ್ಥಪ್ರಾರ್ಥನೆಗಳಿಂದಲೂ ಮೆರೆದು, ಕ್ರೈಸ್ತ ಸಜ್ಜೀವನವನ್ನೆಲ್ಲಿಯೂ ಬೆಳಿಸಲಿಕ್ಕೂ

1) ಗಲ. 3, 1. 2) 608ನೇ ಪಾನು. 3) 440, 443, 444, 445, 483ನೇ ಪಾನು.
4) 22ನೇ ಸಂಧಿ. 5) ಗಲ. 3, 28.

ಕ್ರೈಸ್ತ ವಿಶ್ವಾಸಕ್ಕೋಸ್ಕರ ಉಪದ್ರವ ಪಡುವವರನ್ನು ಉದ್ಧರಿಸಲಿಕ್ಕೂ ನೋಡುವರು. ಆದರೆ ಸೌವಾರ್ತಿಕ ಒಡಂಬಡಿಕೆ ಎಂಬ ವೃಕ್ಷದಲ್ಲಿ ಹುಟ್ಟಿದ ಶ್ರೇಷ್ಠ ಫಲವು ಸಾರ್ವಭೌಮವಾದ ವಾರ್ಷಿಕ ಪ್ರಾರ್ಥನೆಯೇ; ಇದು ಪ್ರತಿ ವರುಷ ಮೊದಲಿನ ವಾರದ ಒಂದೊಂದು ದಿನದಲ್ಲಿ ಸಕಲ ಸೌವಾರ್ತಿಕ ಕ್ರೈಸ್ತರಿಂದ ಆಗುತ್ತದೆ; ಒಡಂಬಡಿಕೆಯ ಪಾರುಪತ್ಯಗಾರರು ಪತ್ರಪರಿಮುಖ ಮುಂಚಿತವಾಗಿ ತಿಳಿಸುವ ಮಹಾ ವಿಷಯಗಳನ್ನು ಆ ಸಮಯ ಭೂಚಕ್ರದ ಭಕ್ತರೆಲ್ಲರೂ ಸರ್ವತ್ರನಾದ ದೇವರ ಸಮಕ್ಷಕ್ಕೆ ತಂದು, ಬೇಡಲು, ಪ್ರೇಮಸಾಗರನಾದ ಆತನು ಕೇಳದೆ ವಿಶೇಷ ಆಶೀರ್ವಾದವನ್ನೂ ಶ್ರೇಯಸ್ಸನ್ನೂ ಕೊಡದೆ ಇರುವದುಂಟೇ? ಅದಲ್ಲದೆ, ಒಬ್ಬನೇ ಪಾಲಕನೂ ಒಂದೇ ವ್ರಜವೂ ಎಂಬಂತೆ ಆಗುವದೆಂಬ[1] ದೇವವಾಕ್ಯವು ಆ ಪ್ರಕಾರ ಹೆಚ್ಚು ಹೆಚ್ಚಿಗೆ ಒದಗುವದಲ್ಲವೇ? ತಥಾಸ್ತು! ತಥಾಸ್ತು!

## ಸಮಾಪ್ತಿಕ ವಾಕ್ಯಗಳು.

ಕ್ರಿಸ್ತಕರ್ತನ ದೃಶ್ಯಾದೃಶ್ಯ ಸಭೆಯ[2] ಚರಿತ್ರ ಹಿಂದೆ ಸಂಕ್ಷೇಪವಾಗಿ ಹೇಳಿ ಮುಗಿಯಿತು. ದೃಶ್ಯ ಸಭೆಯ ಸಮಾಚಾರವ ಸಹ ತಿಳಿಸಿದ್ದರಿಂದ ಭಕ್ತ ಅಭಕ್ತ ಎಂಬೆರಡು ತರದವರನ್ನು ಪಾಠಕರ ಕಣ್ಣಿಗೆ ತೋರಿಸಲಾಯಿತು. ಸದ್ಭಕ್ತರಿಗೆ ಹೃತ್ತಿನೊಳೂ ಗೃಹದೊಳೂ ಇರುವ ಪರಮಾನಂದವನ್ನು ಕೂಡ ಆದಷ್ಟರ ಮಟ್ಟಿಗೆ ವರ್ಣಿಸಿದ್ದರೂ ಸ್ವಲ್ಪ ಸೂಚಿಸಿದ ಹಾಗಾಯಿತಷ್ಟೇ; ಇದರ ಮಹದ್ಭಾವವನ್ನು ಪ್ರತ್ಯೇಕ ಗ್ರಂಥಕೃತಿಗಳಿಂದ ವಿವರಿಸ ಬೇಕಾಗುತ್ತದೆ.

ಅದೃಶ್ಯವಾದ ಸತ್ಸಭೆಯ ಅವಯವಗಳೆಂಬವರು ಸಕಲ ಸಚ್ಛಾಖೆಗಳಲ್ಲಿದ್ದು ಕಾಣಿಸಿ ಕೊಂಡರಲ್ಲ? ಅಂಥವರು ಪಪ್ಪಕ ಮತ್ತು ಗ್ರೀಕ ಪಕ್ಷಸಭೆಗಳಲ್ಲಿಯೂ ಈ ವರೆಗೂ ಇರುತ್ತಿದ್ದರೆಂತ, ಅಲ್ಲಲ್ಲಿ ಸೂಚಿಸೋಣವಾಯಿತು[3]. ಅಂಥ ನಿಜ ಭಕ್ತರು ತಮ ತಮಗೆ ಜನ್ಮಸ್ಥಳ ಬಾಲೋಪದೇಶಗಳೆರಡರ ವ್ಯತ್ಯಾಸದ ಮೂಲಕ ಹುಟ್ಟಿದ ಗೌಣ ಆಚಾರ ಟೀಕೆಗಳ ವ್ಯತ್ಯಾಸಾರ್ಥವನ್ನು ನೋಡಿ ತಿಳಿದರೂ ಕ್ರಿಸ್ತನಾಥನಿಗೂ ಅವನ ವಾಕ್ಯಕ್ಕೂ ಮಾಡುವ ಅದೇ ದೊಡ್ಡ ಪ್ರೇಮದ ದೆಸೆಯಿಂದ ತಮ ತಮಗೂ ಪ್ರಾಣಮಿತ್ರತ್ವವುಳ್ಳವರಾಗಿದ್ದಾರೆ.

ಸೌವಾರ್ತಿಕ ಕ್ರೈಸ್ತರು ವಿಗ್ರಹಾರಾಧಕರಿಂದಲೂ ಪಪ್ಪಕರಿಂದಲೂ ನಾನಾ

1) ಯೋಹಾ. 10, 16. 2) 1ನೇ ಪಾನು. 3) 363, 369, 410—412, 572, 609, 610, 634, 635ನೇ ಪಾನುಗಳನ್ನೂ 632, 633ನೇವನ್ನೂ ಸರಿ ನೋಡಿರಿ.

ಪರಿಯ ಹಿಂಸೆ ಪಟ್ಟಿದ್ದಾಗ್ಯೂ ಕ್ರಿಸ್ತನಾಥನು ತನ್ನನ್ನು ಕ್ರೂಜಿಗೆ ಹಾಕಿದವರನ್ನು ಕುರಿತು—ತಂದೆಯೇ, ಅವರಿಗೆ ಮನ್ನಿಸು! ಮಾಡುವದೇನೆಂದು, ಅರಿಯರೆಂತ, ಬೇಡಿದ್ದನ್ನು[1] ನೆನಸಿ, ಆಶೀರ್ವದಿಸುತ್ತಿದ್ಧಾರೆ; ಅದಲ್ಲದೆ ತಮ್ಮಿಂದ ಆದ ಯಾವದೊಂದು ಅನ್ಯಾಯಕೃತ್ಯಕ್ಕೂ ನಾಚಿ, ಪಶ್ಚಾತ್ತಾಪ ಗೊಂಡು—ಅನ್ಯಾಯವಾದವರೇ, ಕ್ರಿಸ್ತನ ಹೆಸರಿನಲ್ಲಿ ಮನ್ನಿಸಿರಿ! ಎಂತ, ಬಿನ್ನವಿಸುತ್ತಿರುವರು.

ಅದೃಶ್ಯ ಸಭೆಯವರಾದ ಸಕಲ ಕ್ರೈಸ್ತರು—ಅವರು ಎಂಥೆಂಥ ಬಹಿರಾಕಾರದವರಾದರೇನು?—ತಾವು ಯೇಸು ಕ್ರಿಸ್ತನೆಂಬ ಅದ್ವಿತೀಯ ಪಾಲಕನ ಕೈಯ ಕೆಳಗೆ ಒಂದೇ ಹಿಂಡಾಗಿರುವದು ಬಹಿರಕ್ಕೆ ಸಹ ಸಂಸಿದ್ಧಿಸಲೆಂತ, ಬಹಳ ಪ್ರತೀಕ್ಷಿಸುತ್ತಿದ್ಧಾರೆ; ಆದರೂ, ಗ್ರೀಕ ಪಪ್ಪಕ ಬಹಿಃಸಭೆಗಳು ಇಂದು ದೃಷ್ಟಿಗೆ ಕಾಣುವಂತೆ ಅಂಥ ಅನ್ಯೋನ್ಯಕ್ಕೆ ಈಗಲಿನ್ನೂ ಶೇರಲೊಲ್ಲವೆಂತ, ಗೋಚರಿಸುವದು[2] ಅಮಿತ ದುಃಖದ ಸಂಗತಿಯೇ.

ಮಹಾ ಪುನಃಸ್ಥಾಪನೆಗೆ ಈಚೆಯೂ ನಾಸ್ತಿಕರು[3] ಜ್ಞೋಸ್ತಿಕರೆಂಬ ಜ್ಞಾನಿಕರು[4] ಬುದ್ಧಿಪ್ರಮಾಣಿಕರು[5] ತ್ರ್ಯೇಕತ್ವದ್ವೇಷಿಗಳು[6] ಅದ್ವೈತವಾದಿಗಳು[7] ನೀಕೊಲಾಯಿತಭಾವಿಗಳು[8] ಎಂಬಿವರು ಪರಿಶುದ್ಧ ಬರಹದ ಅರ್ಥವನ್ನು ಸೊಟ್ಟಗೆ ಮಾಡಲಿಕ್ಕಾಗಲಿ ಕುಂದಿಸಲಿಕ್ಕಾಗಲಿ ಅಳಿಸಲಿಕ್ಕಾಗಲಿ ಪೇಚಾಡುತ್ತಾ ಬಂದಿದ್ಧಾರೆಂತ, ಹೇಳಿ ಅದೆ. ಇದೇನೂ ಹೊಸದಲ್ಲ. ಕ್ರೈಸ್ತ ಸಭೆಯು, ಅಪೊಸ್ತೊಲಿಕ ಕಾಲವೇ ಹಿಡಿದು[9], ನಿತ್ಯದಲ್ಲಿ ಅಂಥ ಶತ್ರುಗಳೊಡನೆ ಹೋರಾಡುತ್ತಿದ್ದು, ಜಯಿಸಿ,

---

1) ಲೂಕ. 23, 34. 2) 618, 620, 636, 637ನೇ ಪಾನು; 608ನೇದು. ಕ್ರಿ. ಶ. 1869ನೇ ವರುಷದ ಎಪ್ರಿಲ್ ತಿಂಗಳಿನೊಳು 9ನೇ ಪಿಯ ಪಪ್ಪನು, ತನ್ನೊಳಗಿನ ಸಭೋದ್ಯೋಗಿಗಳ ದೊಡ್ಡ ಸಂಘ ರೋಮದಲ್ಲಿ ಕೂಡ ಬೇಕೆಂತ, ಅಪ್ಪಣೆ ಕೊಟ್ಟು, ಇದರ ಬಳಿಕ ಪ್ರಕಟಿಸಿದ ಪಾಪಕ್ಷಮಾಪತ್ರದಲ್ಲಿರುವದೇನಂದರೆ—ನಮ್ಮ ರೋಮಪುರದಲ್ಲಿರುವ ಸ್ತ್ರೀ ಪುರುಷರಾದ ಸಕಲ ಕ್ರೈಸ್ತರಾಗಲಿ ಅದಕ್ಕೆ ಬರುವವರಾಗಲಿ ಜೂನ್ ತಿಂಗಳಿನ 1ನೇ ದಿನ ಹಿಡಿದು ನಮ್ಮ ಸರ್ವಸಭಾಸಂಘ ತೀರುವ ದಿನದ ತನಕ ಲತೆರಾನ (ಎಂಬ ನಮ್ಮ ಅರಮನೆಯು) ಹತ್ತರದ ಸಂತ ಯೋಹಾನನ ದೇವಾಲಯಕ್ಕೆ ಮತ್ತು ಅಪೊಸ್ತಲಾಧಿಪನಾದ ಸಂತ ಪೆತ್ರನದಕ್ಕೆ ಮತ್ತು ಮರಿಯ ಮಾಡ್ಜೊರಳ(ಅಂದರೆ ಹೆಚ್ಚು ದೊಡ್ಡವಳಾದ ಮರಿಯಳ) ಅದಕ್ಕೆ ಅಥವಾ ಇವು ಮೂರವುಗಳಲ್ಲಿ ಒಂದಕ್ಕೆ ಎರಡಾವರ್ತಿ ಹೋಗಿ, (ಪಪ್ಪಕರಲ್ಲದವರಾದ) ಅಬದ್ಧವಿಶ್ವಾಸಿಗಳ ಮಾನಸಾಂತರಕ್ಕೋಸ್ಕರವೂ (ಪಪ್ಪಕವೆಂಬ) ಪರಿಶುದ್ಧ ವಿಶ್ವಾಸದವಿಸ್ತರಣೆಕ್ಕೋಸ್ಕರವೂ (ಪಪ್ಪಕವೆಂಬ) ಕಥೊಲಿಕ ಸಭೆಯ ಸಮಾಧಾನ ಶಾಂತಿ ಜಯಗಳಿಗೋಸ್ಕರವೂ ಮನಗೊಟ್ಟು ಪ್ರಾರ್ಥಿಸುವದಾದರೆ ಈ ಪತ್ರಕಾರರು ಕರ್ತನಲ್ಲಿ ಅಂತಃಕರಣದವರಾಗಿ, ಅವರ ಸಮಸ್ತ ಪಾಪಗಳ ಸಂಪೂರ್ಣ ವಿಮೋಚನೆಯನ್ನೂ ಕ್ಷಮೆಯನ್ನೂ ಕೊಡುತ್ತಾರೆ.—ಈಗ ನಡೆಯುವ ಆ ಸಂಘದ ಫಲವೇನಾಗುವದೋ? ದೇವರೇ ಅದನ್ನಾಳಲಿ! 3) 612—616, 626ನೇ ಪಾನು. 4) 613ನೇ ಪಾನು. 5) 625—628ನೇ ಪಾನು. 6) 620—623ನೇ ಪಾನು. 7) 627, 629ನೇ ಪಾನು. 8) 624, 627ನೇ ಪಾನು. 9) 10, 11, 65, 69, 148, 158, 168—171, 174, 183, 184, 186, 244, 342ನೇ ಪಾನು.

ಉಂಟು. ಅಂಥವರ ಬೋಧನೆಯಿಂದಲೂ ರಾಜ್ಯಾದಿಪರಿವರ್ತನಚಿಂತಕರಾದ[1] ಸಖ್ಯಶಾಲಿ ಮುಂತಾದವರ ಪ್ರಜೋದ್ಬಂಧಕ ಪ್ರಯತ್ನದಿಂದಲೂ ಇನ್ನು ಮುಂದೆ ಸಹ ಕಾಲ ಕಾಲಕ್ಕೆ ಕ್ರೈಸ್ತ ಸಭೆಗೆದುರಾಗಿ ಕಡು ಬಿರುಘಾಳಿ ಏಳುವಂತಾಗುವದೇ ನಿಶ್ಚಯ; ಆದರೆ ಚಿಂತೆ ಇಲ್ಲ! ಎಂದಿನಂತೆ ಕ್ರಿಸ್ತಪತಿಯು ತನ್ನ ಹಡಗದಲ್ಲಿ ತನ್ನವರ ಸಂಗಡ ಇದ್ದು, ಘಾಳಿ ಥೆರೆಗಳೆರಡಕ್ಕೆ ಗದರಿಸಿ, ಮಹಾ ಶಾಂತಿ ಹುಟ್ಟಿಸುತ್ತಿರುವನು[2].

ಬಾಹ್ಯ ಮತ್ತು ಅಂತರ್ಯ ಸುವಾರ್ತಾಪ್ರಸಾರಣಗಳ[3] ಸಂಗತಿಗಳನ್ನು ಓದಿ ಧ್ಯಾನಿಸುವವರಿಗೆ ಗೊತ್ತಾಗುವದೇನಂದರೆ—ಹೆಸರಿನ ಮೇಲೆ ಮಾತ್ರ ಕ್ರೈಸ್ತರಾದಂಥ ಅನೇಕರಿರುವ ದೇಶಗಳಲ್ಲೂ ವಿಗ್ರಹಾರಾಧಕರು ಮೊದಲಾದ ಕ್ರೈಸ್ತರಲ್ಲದವರಿರುವ ದೇಶಗಳಲ್ಲೂ ಅತಿಭೀಕರ ರೂಪ ಗೊಂಡಿರುವ ಪಾಪಕ್ಕೂ ಇದರ ಇಹಪರದ ದುಷ್ಫಲಗಳಿಗೂ ವಿರೋಧಿಸುವದಕ್ಕೆ ನಿಜವಾದ ಕ್ರೈಸ್ತ ಸಭೆಯು ಕ್ರಿಸ್ತನ ಸಹಾಯದಿಂದ ಇನ್ನು ಮುಂದೆಯೂ ಆಯಾಸ ಪಡದಲೇ ಮಹೋದ್ಯಮ ನಡಿಸಬೇಕು.—ಪಾಪಿಗಳನ್ನು ಕ್ಷೇಮ ಹೊಂದಿಸಿ ರಕ್ಷಿಸಲಿಕ್ಕೆ ಕ್ರೈಸ್ತತ್ವವೊಂದೇ ಮಾತ್ರ ತಕ್ಕ ಔಷಧ ಕೊಡುವಂಥಾದ್ದು; ಹಾಗಾದರೆ, ಜೊತೆಕ್ರೈಸ್ತರೇ, ನಮ್ಮ ಯೇಸು ಕ್ರಿಸ್ತನು ನುಡಿದೊಂದು ವಾಕ್ಯವನ್ನು ಹೊಸ್ತಾಗಿ ಮನಸ್ಸಿಗೆ ತಂದು, ಈಡೇರಿಸೋಣ, ಏನಂದರೆ[4]—ಮನುಷ್ಯರು ನಿಮ್ಮ ಸತ್ಕ್ರಿಯೆಗಳನ್ನು ನೋಡಿ, ಪರಲೋಕದಲ್ಲಿರುವ ನಿಮ್ಮ ತಂದೆಯನ್ನು ಮಹಿಮೆ ಪಡಿಸುವ ಹಾಗೆ ಅವರ ಮುಂದೆ ನಿಮ್ಮ ಬೆಳಕು ಪ್ರಕಾಶಿಸಲಿ!—ಆಮೆನ್!

---

1) 517, 615, 627, 629ನೇ ಪಾನು ಸರಿ ನೋಡು. 2) ಮತ್ತಾ. 8, 23—27. 3) 76, 77ನೇ ಸಂಧಿ. 4) ಮತ್ತಾ. 6, 16.

ಇನ್ನು ಅನ್ಯರೂ ಪರವಾಸಿಗಳೂ ಅಲ್ಲ, ಪರಿಶುದ್ಧರ ಸಂಗಡ ಪಟ್ಣವಾಸಿಗಳೂ ದೇವರ ಮನೆತನದವರೂ ಆಗಿ, ಅಪೊಸ್ತಲರ ಮತ್ತು ಪ್ರವಾದಿಗಳ ಅಸ್ತಿವಾರದ ಮೇಲೆ ಕಟ್ಟಲ್ಪಟ್ಟವರಾಗಿದ್ಧೀರಿ; ಯೇಸು ಕ್ರಿಸ್ತನು ತಾನೇ ಮೂಲೇಕಲ್ಲಾಗಿದ್ಧಾನೆ. ಅವನಲ್ಲಿ ಕಟ್ಟುವಿಕೆಯೆಲ್ಲಾ ಚನ್ನಾಗಿ ಜೋಡಿಸಲ್ಪಟ್ಟು, ಕರ್ತನಲ್ಲಿ ಪರಿಶುದ್ಧ ಮಂದಿರವಾಗ ಬೆಳೆಯುತ್ತದೆ. ಅವನಲ್ಲಿ ನೀವೂ, ದೇವರಿಗೆ ಆತ್ಮದಿಂದ ವಾಸಸ್ಥಾನವಾಗುವ ಹಾಗೆ, ಕೂಡ ಕಟ್ಟಲ್ಪಟ್ಟಿದ್ಧೀರಿ.

ಎಫೆ. 2, 19—22.

